# ಪ್ರಕಾಶಕರ ಬಿನ್ನಹ

ಶ್ರೀಶಂಕರಾಚಾರ್ಯರವರ ಅಮೋಘವಾದ ಕೃತಿಗಳನ್ನೆಲ್ಲ ಕನ್ನಡಿಸಿ ಮಹಾಜನರ ಮುಂದೆ ಇಡುವ ಸುಯೋಗವು ಕಾರ್ಯಾಲಯಕ್ಕೆ ಇದೀಗ ಲಭಿಸಿರುತ್ತದೆ ನಮ್ಮನ್ನಾಳುವ ಶ್ರೀಮತ್ಕರ್ಣಾಟಕಸಿಂಹಾಸನಾಧೀಶ್ವರರಾದ ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್ ಜಿ ಸಿ ಬಿ , ಜಿ ಸಿ ಎಸ್ ಐ ರವರು ಜಗತ್ಪ್ರಸಿದ್ಧರಾದ ಆಚಾರ್ಯರವರ ಗ್ರಂಥಗಳೆಲ್ಲವನ್ನೂ ಸಂಶೋಧಿಸಿ ಸಮೂಲವಾಗಿ ಕನ್ನಡಿಸಿ ಪ್ರಕಟಿಸಬೇಕೆಂದು ಕೊಡಿಸಿರುವ ಉದಾರಾಜ್ಞೆಯನ್ನು ಶಿರಸಾವಹಿಸಿ ಈ ಮಹಾಕಾರ್ಯವನ್ನು ನಾವು ಕೈಗೊಂಡಿರುತ್ತೇವೆ.

ಇದುವರೆಗೆ ನಾವು ಪ್ರಕಟಿಸಿದ್ದ ಕೆಲವು ಗ್ರಂಥಗಳನ್ನು ಈ ಸಲ ಸಂಪೂರ್ಣವಾಗಿ ಪರಿಷ್ಕರಿಸಿ ಭಾಷ್ಯದ ಸಂಸ್ಕೃತಮೂಲ, ಕನ್ನಡ ಅನುವಾದ, ಮುಖ್ಯವಿಷಯಗಳನ್ನು ವಿಶದೀಕರಿಸುವ ಟಿಪ್ಪಣಿಗಳು, ಆಚಾರ್ಯರ ಮಿಕ್ಕ ಗ್ರಂಥಗಳಲ್ಲಿರುವ ವಿಷಯವಿವೇಚನೆಯ ಹೋಲಿಕೆಯನ್ನು ಸುಲಭಗೊಳಿಸುವ ಗ್ರಂಥಪರಾಮರ್ಶಿಕೆಗಳು, ಆಯಾ ಗ್ರಂಥದ ಸಾರ, ಮಂತ್ರಗಳ ಅಥವಾ ಶ್ಲೋಕಗಳ ಅಕ್ಷರಾನುಕ್ರಮಣಿಕೆ, ಶಬ್ದಾನುಕ್ರಮಣಿಕೆ ಇಷ್ಟನ್ನೂ ಸೇರಿಸಿ ಪರಿಪೂರ್ತಿಗೊಳಿಸಿರುತ್ತದೆ ಉಳಿದ ಗ್ರಂಥಗಳನ್ನು ಮೊದಲನೆಯ ಸಲಕ್ಕೆ ಕನ್ನಡಿಸಿ ಇದೇ ರೀತಿಯ ಸಲಕರಣೆಗಳೊಡನೆ ಹೊರಕ್ಕೆ ತರಲಾಗಿದೆ ಗ್ರಂಥದ ಪೀಠಿಕೆಯಲ್ಲಿ ಕಾಣುವ ವಿಷಯವಿವೇಚನೆಯು ವಿಚಾರಪ್ರಚೋದಕವಾಗಿರುವಂತೆ ನಿರ್ವಹಿಸಲಾಗಿದೆ ಮೂಲಭಾಷ್ಯವನ್ನು ತಕ್ಕಂತೆ ಪ್ರಘಟ್ಟಗಳಾಗಿ ವಿಂಗಡಿಸಿ ತಲೆಬರಹಗಳನ್ನು ಸೇರಿಸಿರುವದು , ಮುಖ್ಯವಾದಭೇದಗಳನ್ನು ಸೂಚಿಸಿರುವದು , ಪ್ರಮಾಣವಚನಗಳ ಸ್ಥಾನವನ್ನು ಅಲ್ಲಲ್ಲಿಯೇ ತೋರಿಸಿರುವದು , ಭಾಷ್ಯ, ಅನುವಾದ, ಟಿಪ್ಪಣಿಗಳು ಮುಂತಾದವುಗಳು ವಿಂಗಡವಾಗಿ ಕಾಣುವಂತೆ ಬೇರೆಬೇರೆಯ ತರದ ಅಚ್ಚಿನ ಅಕ್ಷರಗಳನ್ನು ಆರಿಸಿಕೊಂಡಿರುವದು ಇವಿಷ್ಟೂ ಈ ಗ್ರಂಥರತ್ನಮಾಲೆಯ ವಿಶೇಷಗಳು

ಈ ಗ್ರಂಥಾವಳಿಯ ಪ್ರಯೋಜನವು ಕನ್ನಡನಾಡಿನ ಮಹಾಜನಗಳಿಗೆ ಸತತವಾಗಿ ಲಭಿಸುವಂತೆಯೂ, ಇದಕ್ಕೆ ಉದಾರಹಸ್ತಾವಲಂಬನವನ್ನಿತ್ತು ಅಧ್ಯಾತ್ಮಪ್ರಕಾಶಕಾರ್ಯಾಲಯಕ್ಕೆ ಪರಿಪಾಲಕರಾಗಿರುವ ಮಹಾಪ್ರಭುಗಳವರಿಗ ಇತೋಽಪ್ಯತಿಶಯವಾದ ಆಯುರಾರೋಗ್ಯೈಶ್ವರ್ಯವಿಜಯಕೀರ್ತಿವಂಶಾಭಿವೃದ್ಧ್ಯಾದಿಗಳನ್ನು ಸುರಿಮಳೆಗರೆಯುವಂತೆಯೂ, ಅನುಗ್ರಹಿಸಬೇಕೆಂದು ಅಖಿಲಾತ್ಮನೂ ಲೋಕಶಂಕರನೂ ಆದ ಭಗವಂತನನ್ನು ಭಕ್ತಿಪೂರ್ವಕವಾಗಿ ಪ್ರಾರ್ಥಿಸುತ್ತೇವೆ.

ಶ್ರೀಜಯಚಾಮರಾಜೇಂದ್ರಗ್ರಂಥರತ್ನಮಾಲಾ

ಸಂಖ್ಯೆ ೫೬

ಶ್ರೀಶಾಂಕರಭಾಷ್ಯಸಮೇತ

# ಬೃಹದಾರಣ್ಯಕೋಪನಿಷತ್ತು

## ಎರಡನೆಯ ಭಾಗ

(ಯಾಜ್ಞವಲ್ಕೀಯಖಿಲಕಾಂಡಗಳನ್ನೊಳಗೊಂಡ
ಕೊನೆಯ ನಾಲ್ಕು ಅಧ್ಯಾಯಗಳು)

ಉಪನಿಷತ್ತಿನ ಮತ್ತು ಭಾಷ್ಯದ ಸಂಸ್ಕೃತಮೂಲ, ಅನುವಾದ, ಟಿಪ್ಪಣಿ, ಸಾರ-
ಮುಂತಾದವುಗಳೊಡನೆ

ಬರೆದವರು :
ಶ್ರೀಸಚ್ಚಿದಾನಂದಸರಸ್ವತೀಸ್ವಾಮಿಗಳವರು

ಅಧ್ಯಾತ್ಮಗ್ರಂಥಾವಳಿಯ ಕ್ರಮಾಂಕ ೧೧

ಅಧ್ಯಾತ್ಮಪ್ರಕಾಶಕಾರ್ಯಾಲಯ
ಹೊಳೆನರಸೀಪುರ
೧೯೫೪

# ಮೊದಲ ಮಾತು

ಈ ಉಪನಿಷತ್ತಿನ ಮೊದಲನೆಯ ಸಂಪುಟದಲ್ಲಿ ಬರೆದಿರುವ ಮೊದಲ ಮಾತು ಈ ಸಂಪುಟಕ್ಕೂ ಅನ್ವಯಿಸುತ್ತದೆ. ಈ ಸಂಪುಟವನ್ನು ಮುಗಿಸಿದ ಬಳಿಕ ಬ್ರಹ್ಮಸೂತ್ರಭಾಷ್ಯಕ್ಕೆ ಕೊಟ್ಟಿರುವಂತೆಯೇ ವಿಸ್ತಾರವಾಗಿ ವಿಷಯಗಳ ಶಬ್ದಾನುಕ್ರಮಣಿಕೆಯನ್ನು ಜೋಡಿಸಬೇಕೆಂಬ ಅಭಿಲಾಷೆಯು ನನಗೆ ಇದ್ದಿತಾದರೂ ಶರೀರದ ಅಸ್ವಾಸ್ಥ್ಯವೇ ಮುಂತಾದ ಹಲವು ಕಾರಣಗಳಿಂದ ಆ ಸಂಕಲ್ಪವನ್ನು ನೆರವೇರಿಸುವದು ಆಗಲಿಲ್ಲ, ಆದ್ದರಿಂದ ಬರಿಯ ಶಬ್ದಾನುಕ್ರಮಣಿಕೆಯನ್ನೇ ಕೊಟ್ಟು ಈ ಸಂಪುಟವನ್ನು ಸಮಾಪ್ತಿಗೆ ತಂದಿರುತ್ತೇನೆ. ಇದರಂತೆ ಪೀಠಿಕೆಯಲ್ಲಿ ವಿವೇಚಿಸಬೇಕಾಗಿದ್ದ ಹಲವು ವಿಷಯಗಳನ್ನು ಇಲ್ಲಿ ವಿಚಾರಕ್ಕೆ ತೆಗೆದುಕೊಳ್ಳುವದೂ ಆಗಲಿಲ್ಲ.

ಈ ಸಂಪುಟವನ್ನು ಅಚ್ಚಿಗೆ ಸಿದ್ಧಪಡಿಸುವದರಲ್ಲಿಯೂ ಹೊಳೆನರಸೀಪುರದ **ಶ್ರೀಯುತ ಪ್ಲೀಡರ್ ಪಿ. ಎನ್. ನರಸಿಂಹಯ್ಯನವರಿಂದ** ಎಂದಿನಂತೆ ಸಹಾಯವಾಗಿರುತ್ತದೆ. ಅನುವಾದದ ಪುನರವಲೋಕನ, ಪ್ರೂಫುಗಳನ್ನು ತಿದ್ದುವದು, ಕಾಣ್ವಮಾಧ್ಯಂದಿನಪಾಠಭೇದಗಳನ್ನು ಗೊತ್ತುಪಡಿಸುವದು– ಈ ಭಾಗಗಳಲ್ಲಿ ಅಧ್ಯಾತ್ಮವಿದ್ಯಾಲಯದ ಪಂಡಿತರಾದ ಅಧ್ಯಾತ್ಮವಿದ್ಯಾಪ್ರವೀಣ **ಬ್ರ॥ ಶ್ರೀ॥ ಹೆಚ್. ಎಸ್. ಲಕ್ಷ್ಮೀನರಸಿಂಹಮೂರ್ತಿಶಾಸ್ತ್ರಿಗಳವರಿಂದ** ಹೆಚ್ಚಿನ ಸಹಾಯವಾಗಿರುತ್ತದೆ. ಮೈಸೂರಿನಲ್ಲಿ ಅಚ್ಚಾಗಿರುವಷ್ಟು ಭಾಗಕ್ಕೆ ವೇದಾಂತಶಿರೋಮಣೀತ್ಯಾದಿಬಿರುದಾಂಕಿತರಾದ ಆಸ್ಥಾನವಿದ್ವಾನ್ ಬ್ರ॥ಶ್ರೀ॥ **ಎಸ್. ವಿಠ್ಠಲಶಾಸ್ತ್ರಿಗಳವರಿಂದ** ಸಹಾಯವು ದೊರೆತಿದೆ. ಈ ಮಹಾಶಯರುಗಳಿಗೆಲ್ಲ ನಾನು ಈ ಮೂಲಕ ನಾರಾಯಣಸ್ಮರಣವನ್ನು ತಿಳಿಸುತ್ತೇನೆ.

ಅಧ್ಯಾತ್ಮಪ್ರಕಾಶಕಾರ್ಯಾಲಯ,
ಜಯ ಸಂ॥ ಜ್ಯೇಷ್ಠ ಬಹುಳ ೩

ಅನುವಾದಕ

# ಪೀಠಿಕೆ



## ಈ ಸಂಪುಟದ ಪೀಠಿಕೆಯಲ್ಲಿ ನಿರೂಪಿಸಲಾಗುವ ವಿಷಯಗಳು

ಒಂದನೆಯ ಸಂಪುಟದಲ್ಲಿ ಭಾಷ್ಯದ ಹೊರಮೈಯನ್ನು ಪರೀಕ್ಷಿಸಿ, ಗ್ರಂಥದ ಸ್ಥಾನ, ಕರ್ತೃ, ಅಲ್ಲಿ ಪರಾಮೃಷ್ಟವಾಗಿರುವ ಹಿಂದಿನ ಆಚಾರ್ಯರುಗಳು– ಮುಂತಾದ ವಿಷಯಗಳನ್ನು ಮಾತ್ರ ಚರ್ಚಿಸಲಾಗಿತ್ತು. ಈಗ ಭಾಷ್ಯದ ಅಂತರಂಗಪರೀಕ್ಷೆಯನ್ನು ಮಾಡುವದಕ್ಕೆ ಸಮಯವಾಗಿದೆ. ಉಪನಿಷದ್ಭಾಷ್ಯಗಳಲ್ಲೆಲ್ಲ ಅಗ್ರಸ್ಥಾನವನ್ನು ಪಡೆದಿರುವ ಈ ಗ್ರಂಥವನ್ನು ಎಷ್ಟು ಒಳಹೊಕ್ಕು ಪರೀಕ್ಷಿಸಿದರೆ ಅಷ್ಟು ಪ್ರಯೋಜನವುಂಟು. ನಮಗಿರುವ ಸ್ಥಲಸಂಕೋಚಶಕ್ತಿಸಂಕೋಚಗಳಿಂದ ಅತ್ಯಂತಮುಖ್ಯವೆಂದು ತೋರುವ ವಿಷಯಗಳನ್ನು ಮಾತ್ರ ಇಲ್ಲಿ ನಿರೂಪಿಸುವೆವು.

## ಕರ್ಮಕಾಂಡಜ್ಞಾನಕಾಂಡಗಳ ಸಂಬಂಧ

ವೇದವು ವರ್ಣಾಶ್ರಮಗಳಿಗೆ ವಿಹಿತವಾಗಿರುವ ಕರ್ಮಗಳನ್ನು ಪ್ರಧಾನವಾಗಿ ತಿಳಿಸುವ ಕರ್ಮಕಾಂಡವೆಂದೂ ಉಪಾಸನೆಯನ್ನೂ, ವಸ್ತುತಂತ್ರವಾದ ಜ್ಞಾನವನ್ನೂ ಪ್ರಧಾನವಾಗಿ ತಿಳಿಸುವ ಜ್ಞಾನಕಾಂಡವೆಂದೂ ಎರಡು ಮುಖ್ಯವಿಭಾಗಗಳಾಗಿ ಒಡೆದುಕೊಂಡಿರುತ್ತದೆಯಷ್ಟೆ. ಇವೆರಡಕ್ಕೂ ಇರುವ ಸಂಬಂಧವನ್ನು ಈ ಭಾಷ್ಯದಲ್ಲಿ ಹೀಗೆಂದು ವರ್ಣಿಸಿರುತ್ತದೆ : ದೇಹಾಂತರಸಂಬಂಧಿಯಾದ ಆತ್ಮನೊಬ್ಬನು ಇದಾನೆಂದೂ ಅವನಿಗೆ ಪ್ರತ್ಯಕ್ಷಾನುಮಾನಗಳಿಂದ ಅರಿಯಲಾಗದಿರುವ ಇಷ್ಟಾನಿಷ್ಟಪ್ರಾಪ್ತಿಪರಿಹಾರಗಳಿಗೆ ಉಪಾಯವು ಇಂಥದ್ದೆಂದೂ ತಿಳಿಸಿಕೊಡುವದೇ ಕರ್ಮಕಾಂಡದ ಉದ್ದೇಶವು (೧-೩).[1] ಸಂಸಾರದಲ್ಲಿ ವಿರಕ್ತರಾದವರಿಗೆ ಬ್ರಹ್ಮಾತ್ಮವಿದ್ಯೆಯನ್ನು ತಿಳಿಸಿಕೊಡುವ ಮೂಲಕ ಇಷ್ಟಾನಿಷ್ಟಪ್ರಾಪ್ತಿಪರಿಹಾರಕ್ಕೆ ಕಾರಣವಾಗಿರುವ ಅಜ್ಞಾನವನ್ನು ತೊಲಗಿಸಿ ಕೃತಕೃತ್ಯನನ್ನಾಗಿ ಮಾಡಿಸುವದು ಜ್ಞಾನಕಾಂಡದ ಉದ್ದೇಶವು (೧-೫).

---

1. ೧-೩ ಎಂದರೆ ಒಂದನೆಯ ಸಂಪುಟದ ಭಾಷ್ಯಭಾಗ, ಭಾ. ಭಾ. ಎಂದಿಷ್ಟೇ ಇದ್ದರೆ ಎರಡನೆಯ ಸಂಪುಟದ ಭಾಷ್ಯಭಾಗವೆಂದು ತಿಳಿಯಬೇಕು. ಈ ಪೀಠಿಕೆಯಲ್ಲಿ ಸಂಕ್ಷೇಪಾಕ್ಷರವಿಲ್ಲದೆ ಮೂರು ಸಂಖ್ಯೆಗಳನ್ನು ಕೊಟ್ಟಿದ್ದರೆ ಅವು ಈ ಉಪನಿಷತ್ತಿನ ಅಧ್ಯಾಯ, ಬ್ರಾಹ್ಮಣ, ಮತ್ತು ಕಂಡಿಕೆಯನ್ನು ಸೂಚಿಸುವವು.

ದೇಹಾಂತರಸಂಬಂಧಿಯಾದ ಆತ್ಮನು ಪ್ರತ್ಯಕ್ಷಾನುಮಾನಗಳಿಗೆ ಗೋಚರನಲ್ಲ; ಅವನಿಗೆ ಧರ್ಮಾಧರ್ಮಗಳಿಂದಾಗುವ ದೇಹಪರಂಪರೆಯ ಪ್ರಾಪ್ತಿಯಾಗಲಿ ಕರ್ಮಗಳಿಂದ ಅವನಿಗೆ ಆಗುವ ಗತ್ಯಾಗತಿಗಳಾಗಲಿ ಲೌಕಿಕ ಪ್ರಮಾಣಗಳಿಗೆ ಗೋಚರವಲ್ಲ. ಶಾಸ್ತ್ರವು ದೇಹವ್ಯತಿರಿಕ್ತನಾದ ಆತ್ಮನು ಇದಾನೆಂಬುದನ್ನೂ ಲೌಕಿಕಕರ್ಮಜ್ಞಾನಗಳಿಂದಲೂ ಕರ್ಮೋಪಾಸನೆಗಳಿಂದಲೂ ಅವನು ಬ್ರಹ್ಮಾದಿಸ್ಥಾವರಾಂತಗತಿಯನ್ನು ಪಡೆದು ಸಂಸಾರದಲ್ಲಿ ತೊಳಲುತ್ತಿರುವ ಪರಿಯನ್ನೂ ತಿಳಿಸಿಕೊಡುತ್ತದೆ; ಬ್ರಹ್ಮವಿದ್ಯೆಯಿಂದ ಕ್ರಿಯಾಕಾರಕಫಲಾತ್ಮಕವಾಗಿರುವ ವ್ಯಾಕೃತಾವ್ಯಾಕೃತರೂಪವಾದ ಸಂಸಾರವನ್ನು ಮೀರುವ ಪರಿಯನ್ನು ತಿಳಿಸಿಕೊಡುತ್ತದೆ (೧-೩ರಿಂದ ೭).

ಆತ್ಮಸ್ವರೂಪವು ಪ್ರತ್ಯಕ್ಷಾದಿಗಮ್ಯವೇ ಎಂದು ಲೋಕಾಯತಿಕರು, ಬೌದ್ಧರು, ಮೀಮಾಂಸಕರು, ತಾರ್ಕಿಕರು– ಮುಂತಾದವರು ಅಭಿಪ್ರಾಯಪಟ್ಟಿದ್ದರೂ ಶಾಸ್ತ್ರದಿಂದ ಮಾತ್ರವೇ ಆತ್ಮಸಿದ್ಧಿಯಾಗಬೇಕಾಗಿರುತ್ತದೆ (೧-೪). ದೇಹವನ್ನು ಬಿಟ್ಟ ಬಳಿಕ ಪಡೆಯುವ ಫಲಕ್ಕಾಗಿ ಇಂಥಿಂಥ ಕರ್ಮವನ್ನು ಮಾಡಬೇಕೆಂದು ವಿಧಿಸಿರುವದರ ಬಲದಿಂದ ಕರ್ಮಕಾಂಡದ ಪ್ರಾಮಾಣ್ಯದಿಂದ ಸಾಮಾನ್ಯವಾಗಿ ಆತ್ಮಸಿದ್ಧಿಯಾದರೂ ಆತ್ಮನು ಸ್ವಯಂಪ್ರಕಾಶನಾಗಿ ಸರ್ವವ್ಯವಹಾರಗಳಿಗೂ ಆಧಾರವಾಗಿರುತ್ತಾನೆಂಬುದನ್ನು ಅನುಭವಕ್ಕೆ ಬರುವಂತೆ ತಿಳಿಸಿರುವದು ಜ್ಞಾನಕಾಂಡದಲ್ಲಿಯೇ. ಈ ಉಪನಿಷತ್ತಿನಲ್ಲಿ ಜನಕಯಾಜ್ಞವಲ್ಕ್ಯಸಂವಾದದಲ್ಲಿ ಆತ್ಮಸ್ವರೂಪವನ್ನು ನಿರ್ಧರಿಸುವದಕ್ಕೆ ಹೊರಟಿರುವ ಪ್ರಕರಣದಲ್ಲಿ ಆತ್ಮನು ಸ್ವಯಂಜ್ಯೋತಿಯೆಂಬುದನ್ನು ತಿಳಿಸಿದೆ. ಪ್ರತ್ಯಕ್ಷಾದಿ ಪ್ರಮಾಣಗಳ ಬಲದಿಂದ ಇಂಥ ಆತ್ಮನು ಇಲ್ಲವೆಂದು ವಾದಿಸುವ ಚಾರ್ವಾಕ ಬೌದ್ಧಾದಿಗಳ ಮತವನ್ನು ಆಚಾರ್ಯರು ವಿಸ್ತಾರವಾಗಿ ಖಂಡಿಸಿ ಸ್ವಯಂಸಿದ್ಧವಾದ ಆತ್ಮಸ್ವರೂಪವನ್ನು ತಿಳಿಸಿಕೊಟ್ಟಿರುವ ಭಾಷ್ಯಭಾಗವು (ಭಾ. ಭಾ. ೧೬೭ರಿಂದ ೧೮೨ ಪೂರ) ಆತ್ಮಸಿದ್ಧಿಗೇ ಅಲ್ಲದೆ ಆತ್ಮನ ಪರಮಾರ್ಥಸ್ವರೂಪ ನಿರ್ಧಾರಣೆಗೂ ಸಾಧಕವಾಗಿರುತ್ತದೆ.

## ಕರ್ಮೋಪಾಸನಾಜ್ಞಾನಗಳ ಫಲ

ವೇದೋಕ್ತವಾದ ಕರ್ಮವನ್ನು ಮಾಡಿದವರಿಗೆ ಪಿತೃಲೋಕಾದಿಪ್ರಾಪ್ತಿಯಾಗುವದು; ಉಪಾಸನಾಯುಕ್ತವಾಗಿ ಕರ್ಮವನ್ನು ಮಾಡಿದವರಿಗೆ ಬ್ರಹ್ಮಲೋಕಾಂತವಾದ ದೇವಲೋಕಪ್ರಾಪ್ತಿಯಾಗುತ್ತದೆ ಎಂಬುದು ಸಾಮಾನ್ಯ ನಿಯಮವು (೧-೫, ೧-೨೩೧). ಫಲಾಭಿಸಂಧಿಯಿಂದ ಅಶ್ವಮೇಧಾದಿನಿತ್ಯ ಕರ್ಮವನ್ನು ಮಾಡುವವರು (ಭಾ. ಭಾ. ೩೭,೪೨,೪೩), ಪಂಚಾಗ್ನಿವಿದ್ಯೆಯನ್ನು

ಬಲ್ಲ ಗೃಹಸ್ಥರು (ಭಾ. ಭಾ. ೪೪೭), ಪ್ರಾಣೋಪಾಸನಾಸಹಿತವಾದ ಜ್ಯೋತಿ ಷ್ಟೋಮವನ್ನು ಮಾಡುವವರು (೧-೯೫, ೯೬), ಅಶ್ವಮೇಧಸಂಪಾದನಾರೂಪ ವಾದ ಕೇವಲೋಪಾಸನೆಮಾಡುವವರು (೧-೬), ನೈಷ್ಠಿಕಬ್ರಹ್ಮಚಾರಿಗಳು, ಅರಣ್ಯದಲ್ಲಿದ್ದುಕೊಂಡು ಹಿರಣ್ಯಗರ್ಭೋಪಾಸನೆಯನ್ನು ಮಾಡುವ ವಾನ ಪ್ರಸ್ಥರು, ಮತ್ತು ತ್ರಿದಂಡಿಪರಿವ್ರಾಜಕರು (ಭಾ. ಭಾ. ೪೪೭), ಈ ಉಪನಿಷತ್ತಿ ನಲ್ಲಿ ಹೇಳಿರುವ ಹಲವು ಸೋಪಾಧಿಕಬ್ರಹ್ಮೋಪಾಸನೆಗಳನ್ನು ಮಾಡಿದವರು (ಭಾ. ಭಾ. ೩೮೧)- ಇವರಿಗೆಲ್ಲ ಬ್ರಹ್ಮಲೋಕಪ್ರಾಪ್ತಿಯಾಗುತ್ತದೆ. ಶಾಸ್ತ್ರವನ್ನು ಲೆಕ್ಕಿಸದೆ ಸ್ವಾಭಾವಿಕಜ್ಞಾನಕರ್ಮಗಳನ್ನು ಅವಲಂಬಿಸುವವರಿಗೆ ದುಷ್ಕೃತ ತಾರತಮ್ಯದಿಂದ ಸ್ಥಾವರಜಂಗಮಜನ್ಮಗಳು ಆಗುವವು (೧-೫, ಭಾ. ಭಾ. ೩೦, ೩೭, ೪೫೩). ಆದರೆ ಈ ಯಾವ ಫಲಗಳೂ ನಿತ್ಯವಲ್ಲ. ಏಕೆಂದರೆ ಕಾಯಿಕ ವಾಚಿಕಮಾನಸಿಕರೂಪವಾದ ಯಾವ ಕರ್ಮಕ್ಕೂ ನಿತ್ಯಫಲವನ್ನು ಕೊಡುವ ಸಾಮರ್ಥ್ಯವಿರುವದಿಲ್ಲ. ಉತ್ಪಾದ್ಯ, ವಿಕಾರ್ಯ, ಸಂಸ್ಕಾರ್ಯ, ಆಪ್ಯ- ಎಂಬೀ ನಾಲ್ಕೇ ಕರ್ಮದ ಕಾರ್ಯಗಳು (ಭಾ. ಭಾ. ೩೧) ; ಈ ನಾಲ್ಕೂ ಅನಿತ್ಯ ವಾಗಿರುವವೇ ಹೊರತು ನಿತ್ಯವಾಗಿರುವದಿಲ್ಲ. ನಿತ್ಯಕರ್ಮಗಳಿಂದ ಅಥವಾ ಉಪಾಸನಾಸಹಿತವಾದ ನಿತ್ಯಕರ್ಮದಿಂದ ನಿತ್ಯಫಲವೂ ದೊರಕಬಹುದೆಂದು ಕೆಲವರು ಶಂಕಿಸಿರುತ್ತಾರೆ ; ಆದರೆ ಕಾರ್ಯವಾದದ್ದು ಅನಿತ್ಯವೆಂಬ ಅನುಭವ ಸಮ್ಮತವಾದ ಯುಕ್ತಿಗೆ ಇದು ವಿರುದ್ಧ(ಭಾ. ಭಾ. ೩೧-೩೫)ವಾಗಿದೆ. ಶಾಸ್ತ್ರೋಕ್ತಕರ್ಮಗಳನ್ನು ಮಾಡಿದವರು ಧೂಮಾದಿಕ್ರಮದಿಂದ, ದಕ್ಷಿಣ (ಅಥವಾ ಪಿತೃಯಾಣ)ಮಾರ್ಗದಿಂದ ಪಿತೃಲೋಕಕ್ಕೆ ಹೋದವರು ಕರ್ಮ ತಾರತಮ್ಯದಿಂದ ಆಯಾ ಫಲಗಳನ್ನು ಪಡೆದುಕೊಳ್ಳುತ್ತಾ ದೇವತೆಗಳಿಗೆ ಉಪ ಭೋಗ್ಯರಾಗಿದ್ದುಕೊಂಡು (ಭಾ. ಭಾ. ೪೫೧) ಕರ್ಮವು ಕ್ಷಯವಾಗಲು ಮತ್ತೆ ಈ ಲೋಕಕ್ಕೆ ಬಂದು (ಭಾ. ಭಾ. ೪೫೨) ಮತ್ತೂ ಕರ್ಮಗಳನ್ನು ಮಾಡಿ ಫಲಭೋಗಕ್ಕಾಗಿ ಪಿತೃಲೋಕಕ್ಕೆ ಹೋಗುತ್ತಾ (ಭಾ. ಭಾ. ೪೪೮) ಸಂಸಾರದಲ್ಲಿ ತೊಳಲುತ್ತಿರುವರು. ಉಪಾಸಕರು ಅರ್ಚಿರಾದಿಕ್ರಮದಿಂದ ಉತ್ತರ (ಅಥವಾ ದೇವಯಾನ)ಮಾರ್ಗದಿಂದ ಬ್ರಹ್ಮಲೋಕಕ್ಕೆ ಹೋದ ಮೇಲೂ ಆತ್ಮಜ್ಞಾನವನ್ನು ಸಂಪಾದಿಸಿಕೊಳ್ಳದಿದ್ದರೆ ಬ್ರಹ್ಮನ ಆಯಾ ಕಲ್ಪವಾದ ಬಳಿಕ ಮತ್ತೆ ಸಂಸಾರಕ್ಕೆ ಹಿಂತಿರಳುವರು (ಭಾ. ಭಾ. ೪೫೦). ಅಶಾಸ್ತ್ರೀಯ ವಾದ ಸ್ವಾಭಾವಿಕಜ್ಞಾನಕರ್ಮಗಳನ್ನನುಸರಿಸುವವರಂತೂ ಕ್ಷುದ್ರಯೋನಿಗಳಲ್ಲಿ ಮತ್ತೆಮತ್ತೆ ಹುಟ್ಟಿ ಸಾಯುತ್ತಿರುವರು (ಭಾ. ಭಾ. ೪೫೩).

ಹೀಗೆ ಕರ್ಮಗಳು ಅನಿತ್ಯಫಲವನ್ನೇ ಕೊಡುವವಾದರೂ ಅವನ್ನೇ ಪ್ರಕಾರಾಂತರದಿಂದ ಮಾಡಿದರೆ, ಎಂದರೆ ಫಲಾಭಿಸಂಧಿಯಿಲ್ಲದೆ ಆತ್ಮಸಂಸ್ಕಾ

ರ್ಥವಾಗಿ ಮಾಡಿದರೆ, ಜ್ಞಾನೋತ್ಪತ್ತಿಯ ಮೂಲಕವಾಗಿ ಮೋಕ್ಷಕ್ಕೆ ಕಾರಣವಾಗುವವು (ಭಾ. ಭಾ. ೩೬, ೩೭, ೩೦೭). ಆದ್ದರಿಂದಲೇ ಶ್ರುತಿಯಲ್ಲಿ ವೇದಾಧ್ಯಯನ, ಯಜ್ಞ, ದಾನ, ತಪಸ್ಸುಗಳು ಚಿತ್ತಶುದ್ಧಿಯ ಮೂಲಕವಾಗಿ ಆತ್ಮಜ್ಞಾನಕ್ಕೆ ಕಾರಣವಾಗಿರುವವೆಂದು (೪-೪-೨೨, ಭಾ. ಭಾ. ೩೦೬) ಶ್ರುತಿಯಲ್ಲಿ ಹೇಳಿರುತ್ತದೆ. ಮೋಕ್ಷವು ಜ್ಞಾನದ ಕಾರ್ಯವೆಂದು ಹೇಳುವದೂ ಉಪಚಾರಕ್ಕೆಂದು ತಿಳಿಯಬೇಕು. ಏಕೆಂದರೆ ಮೋಕ್ಷವು ನಿತ್ಯವಾಗಿರುತ್ತದೆ; ಸಾಧಕನಾದವನ ಸ್ವರೂಪವೇ ಆಗಿರುತ್ತದೆ (ಭಾ. ಭಾ. ೩೨). ಜ್ಞಾನವು ಅಜ್ಞಾನವೆಂಬ ವ್ಯವಧಾನವನ್ನು ಬಾಧಿಸುತ್ತದೆಯೇ ಹೊರತು ಇದ್ದದ್ದನ್ನು ಕಳೆಯುವದಿಲ್ಲ, ಇಲ್ಲದ್ದನ್ನುಂಟುಮಾಡುವದೂ ಇಲ್ಲ (೧-೧೫೦, ೧೫೬).

ಹೀಗೆ ಕರ್ಮಕಾಂಡದಲ್ಲಿ ಹೇಳಿರುವ ಕರ್ಮಗಳ ಫಲವೆಲ್ಲ ನಾಮರೂಪ ಕರ್ಮಾಶ್ರಯವಾಗಿದ್ದುಕೊಂಡು ಅನಿತ್ಯವಾಗಿರುತ್ತದೆ, ಸಾಧ್ಯಸಾಧನರೂಪವಾಗಿರುತ್ತದೆ. ವ್ಯಾಕೃತಾವ್ಯಾಕೃತರೂಪವಾಗಿರುವ ಈ ಸಂಸಾರವು ಅವಿದ್ಯಾಕೃತವೆಂದು ವರ್ಣಿಸಿ ಇದರಲ್ಲಿ ವಿರಕ್ತರಾದವರಿಗಾಗಿಯೇ ಬ್ರಹ್ಮವಿದ್ಯೆಯನ್ನು ಈ ಉಪನಿಷತ್ತಿನಲ್ಲಿ ಉಪದೇಶಿಸಿದೆ (ಭಾ. ಭಾ. ೧-೭). ವೇದಕ್ಕೆಲ್ಲ ಇದರಲ್ಲಿಯೇ ಪರಮತಾತ್ಪರ್ಯವಿದೆ (ಭಾ. ಭಾ. ೩೦೪) -ಎಂಬುದು ಆಚಾರ್ಯರ ಮತವು (೧-೫, ೧-೭, ೧-೯೭, ೧-೧೧೭).

## ಆತ್ಮಜ್ಞಾನಕ್ಕೆ ಆಗಮೋಪಪತ್ತಿಗಳು

ಈ ಉಪನಿಷತ್ತು ಆಗಮಪ್ರಧಾನವಾದ **ಮಧುಕಾಂಡ**ವೆಂದೂ ಉಪಪತ್ತಿಪ್ರಧಾನವಾದ **ಯಾಜ್ಞವಲ್ಕೀಯ ಅಥವಾ ಮುನಿಕಾಂಡ**ವೆಂದೂ ಮುಖ್ಯವಾಗಿ ಎರಡು ವಿಭಾಗಗಳಾಗಿ ವಿಂಗಡವಾಗಿದೆ. ಈ ಎರಡು ಕಾಂಡಗಳಲ್ಲಿ ಅನುಕ್ತವಾಗಿರುವ ವಿಷಯಗಳನ್ನು ಸಂಗ್ರಹಿಸಿರುವ **ಖಿಲಕಾಂಡ**ದಲ್ಲಿ ಆಗಮೋಪಪತ್ತಿಗಳೆರಡೂ ಇರುತ್ತವೆ. ಆಚಾರ್ಯರು ಆಗಮೋಪಪತ್ತಿಗಳೆಂಬ ಶಬ್ದಗಳನ್ನು ತಮ್ಮ ಭಾಷ್ಯಗಳಲ್ಲೆಲ್ಲ ಮತ್ತೆಮತ್ತೆ ಪ್ರಯೋಗಿಸಿರುವದರಿಂದ ಇವುಗಳ ಅರ್ಥವನ್ನು ವಿಚಾರಿಸುವದರಿಂದ ಲಾಭವುಂಟು.

ಪ್ರತ್ಯಕ್ಷಾನುಮಾನಗಳಿಂದ ತಿಳಿಯುವದಕ್ಕಾಗದೆ ಇರುವ ವಿಷಯವನ್ನು ಶಾಸ್ತ್ರದಿಂದಲೇ ತಿಳಿಯಬೇಕಾಗಿರುವದರಿಂದ ಶಾಸ್ತ್ರ, ಆಗಮ- ಎಂಬ ಶಬ್ದಗಳನ್ನು ಪರ್ಯಾಯಗಳೆಂದು ಗ್ರಹಿಸಿದರೆ ತಪ್ಪಾಗುವದಿಲ್ಲ. ಕರ್ಮೋಪಾಸನಾದಿಸಾಧನಗಳು ಮತ್ತು ಅವುಗಳಿಂದಾಗುವ ಅದೃಷ್ಟಫಲಗಳು- ಇವುಗಳ ವಿಷಯದಲ್ಲಿ ಈ ಅರ್ಥವಿವರಣೆಯೇ ಸಾಕಾಗಿರುತ್ತದೆ. ಏಕೆಂದರೆ ಶ್ರುತಿಯಲ್ಲಿ

ಇಂಥ ಸಂದರ್ಭಗಳಲ್ಲಿ 'ಆಹುಃ', 'ವ್ಯಾಚಚಕ್ಷಿರೇ', 'ಶುಶ್ರುಮ' ಎಂದುಮುಂತಾ ಗಿರುವ ರೂಪದ ಶಬ್ದಗಳನ್ನು ಸೂಚಿಸಿರುವಾಗ ಆಚಾರ್ಯರು ಆಗಮವೆಂಬ ಮಾತನ್ನು ಪ್ರಯೋಗಿಸಿರುತ್ತಾರೆ. ಆದರೆ ಶ್ರದ್ಧಾಮಾತ್ರಗವ್ಯವಾಗಿರುವ ಕರ್ಮೋಪಾಸನಾದಿಗಳ ವಿಷಯವನ್ನೇ ಅಲ್ಲದೆ ನಮ್ಮ ಸ್ವರೂಪವೇ ಆಗಿರುವ ಸ್ವಯಂಸಿದ್ಧನಾದ ಪರಮಾತ್ಮನ ವಿಷಯದಲ್ಲಿಯೂ ಆಚಾರ್ಯರು ಆಗಮ-ಶಬ್ದ ವನ್ನು ಉಪಯೋಗಿಸಿರುತ್ತಾರೆ. ಆದ್ದರಿಂದ ಆತ್ಮನದಲ್ಲದ ಸ್ವರೂಪವನ್ನು ಅಲ್ಲ ಗಳೆದು ಸಾರ್ವತ್ರಿಕಾನುಭವದ ಆಧಾರವನ್ನಿಟ್ಟುಕೊಂಡು ಮಾಡಿರುವ ಉಪ ದೇಶವೇ ಆಗಮವೆಂದು ಹಿಡಿಯುವದು ಈ ಸಂದರ್ಭಕ್ಕೆ ಹೆಚ್ಚು ಒಪ್ಪುತ್ತದೆ. ಕೇನೋಪನಿಷದ್ಭಾಷ್ಯ (ಭಾ. ಭಾ. ೨೬, ೪೪, ೪೬), ಕಠೋಪನಿಷದ್ಭಾಷ್ಯ (ಭಾ.ಭಾ.೫೭, ೫೯), ಐತರೇಯಭಾಷ್ಯ (ಭಾ.ಭಾ ೭೧)-ಮುಂತಾದವುಗಳನ್ನು ಸಮಾಲೋಚನೆಮಾಡುವವರಿಗೆ ಅಲ್ಲಿ ಆಗಮಶಬ್ದಕ್ಕೆ ಈ ವಿಶೇಷಾರ್ಥವಿದೆ ಎಂಬುದು ಮನದಟ್ಟಾಗುವದು. ಶಾಸ್ತ್ರಾಚಾರ್ಯರ ಉಪದೇಶದಿಂದ ಮಾತ್ರವೇ ತಿಳಿಯಬರುವ ಆತ್ಮಸ್ವರೂಪವೂ ಪ್ರತ್ಯಕ್ಷಾನುಮಾನಗಳಿಗೆ ಅವಿಷಯವೇ ಆಗಿರುವದರಿಂದ ಕರ್ಮಕಾಂಡದಲ್ಲಿರುವ ಆಗಮಗಮ್ಯಪದಾರ್ಥಗಳ ಜೊತೆಗೆ ಇದನ್ನೂ ಸೇರಿಸುನದರಲ್ಲಿ ಯಾವ ವಿರೋಧವೂ ಇರುವದಿಲ್ಲ. ಆಗಮಶಬ್ದಕ್ಕೆ ಈ ಅರ್ಥವನ್ನು ಅಂಗೀಕರಿಸಿದರೇ ಮಧುಕಾಂಡದಲ್ಲಿ ಉಪಾಸನಾವಿಚಾರಗಳ ಜೊತೆಗೆ ಅನುಭವಗಮ್ಯವಾದ ಆತ್ಮಾದಿವಿಚಾರಗಳನ್ನೂ ಸೇರಿಸಿರುವದೂ ಉಪಪತ್ತಿಪ್ರಧಾನವಾದ ಮುನಿಕಾಂಡದಲ್ಲಿ ಲಿಂಗಾತ್ಮಕನಾದ ಸೂತ್ರಾತ್ಮನನ್ನೂ ಸಾಕ್ಷಿರೂಪನಾಗಿರುವ ಅಂತರ್ಯಾಮಿಯನ್ನೂ ಆಗಮಗಮ್ಯನೆಂದಿರುವದೂ (ಭಾ.ಭಾ. ೬೭, ೬೮) ಸಮಂಜಸವಾಗುತ್ತದೆ. ಹೀಗಾದರೇ ಆತ್ಮಸ್ವರೂಪವನ್ನು ಯಥಾರ್ಥವಾಗಿ ತಿಳಿಸಿಕೊಡುವದಕ್ಕೆ ನೇತಿನೇತಿರೂಪವಾದ ಉಪದೇಶಕ್ರಮ ಕ್ಕಿಂತ ಮತ್ತೊಂದು ಬಗೆಯಿಲ್ಲ ಎಂದು ಶ್ರುತಿಯಲ್ಲಿಯೂ ಭಾಷ್ಯಗಳಲ್ಲಿಯೂ ಹೇಳಿರುವದಕ್ಕೆ (೨-೩-೬, ಭಾ.ಭಾ. ೩೪೮, ೩೫೦) ಕಾರಣವು ಸಿಕ್ಕುತ್ತದೆ.

ಆತ್ಮತತ್ತ್ವವು ಸ್ವಯಂಸಿದ್ಧವಾಗಿದ್ದು ಹೀಗೆ ಆಗಮಮಾತ್ರಸಮಧಿ ಗಮ್ಯವಾಗಿರುವಲ್ಲಿ ಅದನ್ನು ಉಪಪತ್ತಿಯಿಂದ ತಿಳಿಯಿಸಬೇಕಾದದ್ದೇನು ?- ಎಂಬ ಪ್ರಶ್ನೆಗೂ ಈಗ ಉತ್ತರವು ಸುಲಭವಾಗುತ್ತದೆ. ಏಕೆಂದರೆ **ಉಪಪತ್ತಿ** ಎಂದರೆ ಸಾಂಖ್ಯಾದಿಗಳು ಒಪ್ಪಿರುವಂತೆ ದೃಷ್ಟಾಂತಬಲದಿಂದ ಮಾಡುವ ಅನು ಮಾನರೂಪವಾದ ತರ್ಕಮಾತ್ರವಲ್ಲ; ಮತ್ತೇನೆಂದರೆ ಯಾರು ಆಗಮಮಾತ್ರ ದಿಂದ ನೇರಾಗಿ ಅನುಭವವನ್ನು ಪಡೆದುಕೊಳ್ಳುವಷ್ಟು ಸಂಸ್ಕೃತವಾದ ಬುದ್ಧಿ ಯಿಲ್ಲದವರೋ ಅವರಿಗಾಗಿ ಅದೇ ಅನುಭವವನ್ನು ತಂದುಕೊಡುವದಕ್ಕಾಗಿ ಉಪ ಯೋಗಿಸುವ ಅವಾಂತರಾನುಭವಗಳ ಯೋಜನೆಯೇ ಈ ಉಪಪತ್ತಿಯು. ಆದ್ದ

ರಿಂದಲೇ ಆಚಾರ್ಯರು ಕುತಾರ್ಕಿಕರನ್ನೂ ಆಗಮವನ್ನರಿಯದ ವೇದಾಂತಿಗಳನ್ನೂ 'ಆಗಮಾರ್ಥವಿಚ್ಛಿನ್ನಸಂಪ್ರದಾಯಬುದ್ಧಯಃ' (೧-೩-೨೫), 'ಶಾಸ್ತ್ರಗುರು-ಪ್ರಸಾದರಹಿತಾಃ' (೧-೩-೨೭), "ತಮೇತಮರ್ಥಮಜಾನನ್ತಸ್ತಾರ್ಕಿಕಾಃ ಕೇಚಿತ್ಪಣ್ಡಿತಂಮನ್ಯಾಶ್ಚಾಗಮವಿದಃ" (೧-೩-೪೯)- ಎಂದು ಹಳಿದಿದ್ದರೂ ಈ ಭಾಷ್ಯದಲ್ಲಿ ಉಪಪತ್ತಿರೂಪವಾದ ಆಗಮಸಮ್ಮತತರ್ಕವನ್ನು ಧಾರಾಳವಾಗಿ ಉಪಯೋಗಿಸಿರುತ್ತಾರೆ."ಆಗಮೋಪಪತ್ತಿಗಳು ಆತ್ಮೈಕತ್ವವನ್ನು ತಿಳಿಸಿಕೊಡುವದಕ್ಕೆ ಹೊರಟಾಗ ಅದನ್ನು ಅಂಗೈಯಲ್ಲಿರುವ ಬಿಲ್ವದಂತೆ ತಿಳಿಸಿಕೊಡಬಲ್ಲವು" (ಭಾ. ಭಾ. ೧) ಎಂಬ ಭಾಷ್ಯವಚನವೂ ಅವಸ್ಥಾತ್ರಯಪರೀಕ್ಷಾಪ್ರಕ್ರಿಯೆಯನ್ನು ಆಗಮಗಮ್ಯವೆಂದೂ ಮಹಾತರ್ಕಗಮ್ಯವೆಂದೂ (ಭಾ. ಭಾ. ೧೫೭) ಕರೆದಿರುವ ಭಾಷ್ಯವಚನವೂ ಆಗಮೋಪಪತ್ತಿಶಬ್ದಗಳಿಗೆ ಮೇಲೆ ನಾವು ಹೇಳಿರುವ ಅರ್ಥವನ್ನು ಇಟ್ಟುಕೊಂಡರೇ ಅವಿರುದ್ಧವಾಗುತ್ತವೆ

## ಪರಮಾರ್ಥತತ್ತ್ವದ ಉಪದೇಶ

ಈ ಉಪನಿಷತ್ತಿನಲ್ಲಿ 'ನೇತಿ ನೇತ್ಯಾತ್ಮಾ' ಎಂಬ ವಾಕ್ಯದಿಂದ ಯಾವ ವಿಶೇಷಗಳೂ ಇಲ್ಲದ್ದೇ ಆತ್ಮನು ಎಂದೇ ವರ್ಣಿಸಿದೆ. ಆದರೂ ಹಾಗೆ ವಿಶೇಷಗಳನ್ನು ಅಲ್ಲಗಳೆಯುವ ಮುಂಚೆ ಆತ್ಮನಲ್ಲಿ ಕಲ್ಪಿತವಾಗಿರುವ ವಿಶೇಷಗಳನ್ನು ಅಧ್ಯಾರೋಪದೃಷ್ಟಿಯಿಂದ ಇಟ್ಟುಕೊಂಡೇ ಪ್ರತಿಪಾದಿಸಿರುತ್ತದೆ. ಉದಾಹರಣೆಗೆ ಜಗತ್ತು ಮೊದಲು ಅವ್ಯಾಕೃತವಾಗಿದ್ದು ನಾಮರೂಪಗಳಾಗಿ ವ್ಯಾಕೃತವಾಯಿತು; ಅವ್ಯಾಕೃತಾವಸ್ಥೆಯಲ್ಲಿದ್ದ ಆತ್ಮನು ಇದರಲ್ಲಿ ಒಳಹೊಕ್ಕು ಪ್ರಾಣನು, ದ್ರಷ್ಟೃ, ಶ್ರೋತೃ, ಮುಂತಾದ ಕರ್ಮನಾಮಗಳನ್ನು ಪಡೆದಿರುತ್ತಾನೆ, ಈ ಅಕೃತ್ಸ್ನರೂಪಗಳನ್ನೆಲ್ಲ ವ್ಯಾಪಿಸಿಕೊಂಡಿರುವ ಆತ್ಮರೂಪವೇ ಕೃತ್ಸ್ನವು (೧-೪-೭, ಭಾ. ಭಾ. ೧೩೨, ೧೩೩) ಎಂದು ಒಂದು ಕಡೆಯಲ್ಲಿ ಉಪದೇಶಿಸಿದೆ. ಮೊದಲು ಬ್ರಹ್ಮವೊಂದೇ ಇತ್ತು; ಅದು 'ನಾನು ಬ್ರಹ್ಮವಾಗಿರುವೆನು' ಎಂದು ತನ್ನನ್ನೇ ಅರಿತುಕೊಂಡಿತು, ಅದರಿಂದ **ಸರ್ವ**ವಾಯಿತು (೧-೪-೧೦, ಭಾ. ಭಾ. ೧೬೩, ೨-೫-೧೫, ಭಾ. ಭಾ. ೩೯೭) ಎಂದು ಇನ್ನೊಂದು ಕಡೆಯಲ್ಲಿ ಉಪದೇಶಿಸಿದೆ. ಸುಷುಪ್ತಿಯಲ್ಲಿ ಕ್ರಿಯಾಕಾರಕಫಲಭೇದಗಳಿಲ್ಲದೆ ಇರುವ ಆತ್ಮನೊಬ್ಬನೇ ಇರುತ್ತಾನೆ; ಅವನಿಂದಲೇ ಜೇಡರಹುಳುವಿನಿಂದ ನೂಲುಂಟಾಗುವಂತೆಯೂ ಬೆಂಕಿಯಿಂದ ಕಿಡಿಗಳು ಸಿಡಿದುಬರುವಂತೆಯೂ ಎಲ್ಲಾ ಪ್ರಾಣಗಳೂ ಎಲ್ಲಾ ಲೋಕಗಳೂ ಎಲ್ಲಾ ದೇವತೆಗಳೂ ಎಲ್ಲಾ ಭೂತಗಳೂ ಹೊರಟುಬರುತ್ತವೆ (೨-೧-೨೦, ಭಾ. ಭಾ. ೩೦೩). ಬ್ರಹ್ಮಕ್ಕೆ ಮೂರ್ತ, ಅಮೂರ್ತ- ಎಂಬ ಎರಡು ರೂಪಗಳಿವೆ; ಇವು ಸತ್ (ಇರುವದು), ತ್ಯತ್ (ಪರೋಕ್ಷವಾದದ್ದು

–ಎಂದು ಕರೆಯಿಸಿಕೊಳ್ಳುವ ಪಂಚಭೂತಗಳಿಂದಾಗಿವೆ. ಈ ರೂಪಗಳೂ ಇವುಗಳ ವಾಸನೆಗಳೂ ಅಧಿದೈವತರೂಪದಿಂದಲೂ ಅಧ್ಯಾತ್ಮರೂಪದಿಂದಲೂ ತೋರಿಕೊಳ್ಳುತ್ತಿರುವವು. ಈ ರೂಪಗಳನ್ನು 'ಸತ್ಯ' ಎಂದು ಕರೆದರೆ ಬ್ರಹ್ಮವು 'ಸತ್ಯದ ಸತ್ಯವು' ಎನಿಸುವದು (೨–೩–೫ರಿಂದ ೬), ಈ ಬ್ರಹ್ಮದ ಪರಮಾರ್ಥಸ್ವರೂಪವೇ 'ನೇತಿ ನೇತಿ' (೨-೩-೬, ಭಾ.ಭಾ ೩೪೮). ಇದಿಷ್ಟು ಮಧುಕಾಂಡದಲ್ಲಿ ಪ್ರತಿಪಾದಿಸಿರುವದು ಇದನ್ನೇ ಮುಂದೆ ಮುನಿಕಾಂಡದಲ್ಲಿ ತರ್ಕದಿಂದ ಉಪಪಾದನೆಮಾಡಿದೆ. ಖಿಲಕಾಂಡದ ಆದಿಯಲ್ಲಿ ಇದನ್ನೆಲ್ಲ ಹೀಗೆಂದು ಉಪಸಂಹಾರಮಾಡಿದೆ: ಬ್ರಹ್ಮವು ತನ್ನ ಸ್ವ ರೂ ಪ ದಿ ಂ ದ ಪೂರ್ಣವೇ; ಅದು ಸೋಪಾಧಿಕರೂಪದಿಂದ ತೋರುವಾಗಲೂ ಪೂರ್ಣವೇ. ಅದರ ನಿಜವಾದ ಪೂರ್ಣಸ್ವರೂಪವನ್ನು ಗ್ರಹಿಸಿದಾಗ ಅದು ಸರ್ವದಾ ಪೂರ್ಣವೇ ಎಂಬುದು ಮನದಟ್ಟಾಗುವದು. ಹೀಗೆ ಆತ್ಮ, ಕೃತ್ಸ್ನ, ಬ್ರಹ್ಮ, ಸರ್ವ, ಪೂರ್ಣ– ಎಂಬ ಬೇರೆಬೇರೆಯ ಹೆಸರುಗಳಿಂದ ನೇತಿ ನೇತಿ ಎಂದು ವರ್ಣಿಸಿರುವ ಅನಂತವಾದ ಪರಮಾರ್ಥತತ್ತ್ವವನ್ನೇ ಇಲ್ಲಿ ಉಪದೇಶಿಸಿರುತ್ತದೆ.

## ನೇತಿ ನೇತ್ಯಾತ್ಮಾ

ಸ್ವತಃ ನಿರ್ವಿಶೇಷವಾಗಿರುವ ಪರಮಾತ್ಮನಲ್ಲಿ ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕ – ಎಂದು ವಿಂಗಡಿಸಿಕೊಂಡಿರುವ ವ್ಯಾಕೃತಾವ್ಯಾಕೃತರೂಪವಾದ ಜಗತ್ತು ಸರ್ವಥಾ ಇಲ್ಲದಿದ್ದರೂ ವ್ಯವಹಾರದಲ್ಲಿ ಅವಿದ್ಯಾಕಲ್ಪಿತವಾಗಿ ತೋರುತ್ತಿರುವದರಿಂದ ಅದನ್ನು ಅಲ್ಲಗಳೆದೇ ತತ್ತ್ವವನ್ನು ತಿಳಿಸುವದು ಈ ಉಪನಿಷತ್ತಿನಲ್ಲಿ ಒಂದು ಮುಖ್ಯವಾದ ಉಪದೇಶಪ್ರಕಾರವಾಗಿರುತ್ತದೆ. ಮೂರ್ತಾಮೂರ್ತಬ್ರಾಹ್ಮಣದಲ್ಲಿ **'ಅಥಾತ ಆದೇಶೋ ನೇತಿನೇತಿ'** ಎಂದು ನಾಮರೂಪಾತ್ಮಕವಾದ ಸತ್ಯಶಬ್ದವಾಚ್ಯವಾದ ಪಂಚಭೂತಗಳೂ ಅವುಗಳ ವಾಸನೆಯೂ ಇಲ್ಲವೆಂದು ತಿಳಿಸಿದೆಯೆಂದು ಆಗಲೇ ಹೇಳಿದ್ದಾಗಿದೆ. ಶಾಕಲ್ಯಬ್ರಾಹ್ಮಣದಲ್ಲಿ ನಾಮರೂಪಕರ್ಮಾತ್ಮಕವಾದ ಸರ್ವವನ್ನೂ ಹೃದಯದಲ್ಲಿ ಉಪಸಂಹಾರಮಾಡಿ (೩–೯–೨೪, ಭಾ ಭಾ. ೧೨೦) ಕಾರ್ಯಕರಣಗಳಿಗೆ ಆಶ್ರಯವಾಗಿರುವ (ಭಾ.ಭಾ.೧೨೨) ನಿರುಪಾಧಿಕಾತ್ಮನನ್ನು **'ಸ ಏಷ ನೇತಿನೇತ್ಯಾತ್ಮಾ'**(೩-೯-೨೬, ಭಾ ಭಾ.೧೨೩) ಎಂದು ತಿಳಿಸಿದೆ. ಜನಕಯಾಜ್ಞವಲ್ಕ್ಯಸಂವಾದದಲ್ಲಿ ಅವಸ್ಥಾತ್ರಯಪರೀಕ್ಷೆಯನ್ನು ಮಾಡಿ ಆತ್ಮನಲ್ಲಿ ಯಾವ ಅವಸ್ಥಾಸಂಬಂಧವೂ ಇಲ್ಲವೆಂದು **'ಸ ಏಷ ನೇತಿನೇತ್ಯಾತ್ಮಾ'**(೪-೨-೪, ಭಾ. ಭಾ. ೧೫೬) ಎಂದೇ ತಿಳಿಸಿದೆ. ಅವಸ್ಥಾತ್ರಯಸಂಚಾರಕ್ಕೆ ದಾರ್ಷ್ಟಾಂತಿಕವಾದ ಸಂಸಾರವರ್ಣನೆಯನ್ನೂ ಮೋಕ್ಷವರ್ಣನೆಯನ್ನೂ ಮಾಡಿದಬಳಿಕ ಈ ನಿರ್ವಿಶೇಷಾತ್ಮನನ್ನು ಪಡೆದುಕೊಂ

ಡವನಿಗೆ ಪುಣ್ಯಪಾಪಗಳಿಲ್ಲ ಎಂದು ತಿಳಿಸುವಾಗ **'ಸ ಏಷ ನೇತಿನೇತ್ಯಾತ್ಮಾ'** (೪-೪-೨೨, ಭಾ. ಭಾ. ೩೧೨) ಎಂದೇ ತಿಳಿಸಿದೆ. ಕಟ್ಟಕಡೆಗೆ ಸರ್ವಕರ್ಮ ಸಂನ್ಯಾಸವೇ ಅಮೃತತ್ವಕ್ಕೆ ಸಾಧನವು ಎಂದು ತಿಳಿಸುವದಕ್ಕಾಗಿ **'ಸ ಏಷ ನೇತಿ ನೇತ್ಯಾತ್ಮಾ'** (೪-೫-೧೫) ಎಂದೇ ಉಪಸಂಹಾರಮಾಡಿರುತ್ತದೆ. ಹೀಗೆ ನಾಲ್ಕು ಪ್ರಪಾಠಕಗಳಲ್ಲಿಯೂ ಆತ್ಮನು ನಿರ್ವಿಶೇಷನೇ ಎಂಬುದನ್ನು ಬೇರೆ ಬೇರೆಯ ಉಪಾಯಗಳಿಂದ ತಿಳಿಸಿ ಕೊನೆಯಲ್ಲಿ 'ನೇತಿನೇತಿ' ಎಂದು ವಿಶೇಷ ವನ್ನು ಅಲ್ಲಗಳೆದೇ ತಿಳಿಸಿದೆಯಾದ್ದರಿಂದ ಇದರಲ್ಲಿಯೇ ಉಪನಿಷತ್ತಿಗೆ ಪರಮ ತಾತ್ಪರ್ಯವೆಂದು (ಭಾ. ಭಾ. ೩೩೨, ೩೩೩) ಆಚಾರ್ಯರು ಭಾಷ್ಯಾರ್ಥವನ್ನು ಉಪಸಂಹಾರಮಾಡಿರುತ್ತಾರೆ. ಆತ್ಮಸ್ವರೂಪದಲ್ಲಿ ಜಾತಿಗುಣಾದಿಗಳು ಯಾವವೂ ಇಲ್ಲದ್ದರಿಂದ ಅದನ್ನು ಯಾವ ಶಬ್ದದಿಂದಲೂ ಹೇಳುವದಕ್ಕೆ ಬರು ವದಿಲ್ಲವೆಂಬುದೇ (೧-೩೪೮) ಯುಕ್ತವಾಗಿದೆ.

ಮೇಲಿನ ವಿಚಾರಸರಣಿಯನ್ನು ಮನದಂಡುಕೊಂಡವರಿಗೆ ಅನಂತಗುಣ ಗಳಿರುವ ಬ್ರಹ್ಮವನ್ನು ಎಷ್ಟು ವರ್ಣಿಸಿದರೂ ಪೂರ್ಣವಾಗುವದಿಲ್ಲ ಎಂಬ ಭಿಪ್ರಾಯದಿಂದ 'ನೇತಿನೇತಿ' ಎಂದು ಶ್ರುತಿ ಹೇಳುತ್ತದೆ ಎಂಬವರ ಮತವು ನಿರಾಧಾರವೆಂಬುದು ಸ್ಪಷ್ಟವಾಗುತ್ತದೆ. ಆಚಾರ್ಯರು ತಿಳಿಸಿರುವ ಅಧ್ಯಾ ರೋಪಾಪವಾದನ್ಯಾಯವನ್ನೇ (ಭಾ. ಭಾ. ೩೨೦, ೩೨೧) ಇಲ್ಲಿ ಸ್ವೀಕರಿಸಿದೆ ಯೆಂಬುದೂ ಮನವರಿಕೆಯಾಗುತ್ತದೆ.

## ಅವಸ್ಥಾತ್ರಯವಿಚಾರ

ಭಾಷ್ಯಕಾರರ ಮತದಲ್ಲಿ ಬೃಹದಾರಣ್ಯಕದಲ್ಲಿ ಅವಸ್ಥಾತ್ರಯವಿಚಾರಕ್ಕೆ ಬಹಳ ಹೆಚ್ಚಿನ ಸ್ಥಾನವಿರುತ್ತದೆ. ಆಗಮಪ್ರಧಾನವಾದ ಮಧುಕಾಂಡದಲ್ಲಿ ಕಾರ್ಯಕರಣದೇವತಾವ್ಯತಿರಿಕ್ತನೂ ಅದ್ವಿತೀಯನೂ ಆದ ನಿರ್ವಿಶೇಷಾತ್ಮ ನೊಬ್ಬನಿದಾನೆಂಬುದನ್ನು (೨-೧-೧೫ರಿಂದ ೨೦ರವರೆಗೆ) ಅವಸ್ಥಾತ್ರಯಪರೀಕ್ಷೆ ಯಿಂದಲೇ ತಿಳಿಸಿಕೊಟ್ಟಿರುತ್ತದೆ. ಉಪಪತ್ತಿಪ್ರಧಾನವಾದ ಯಾಜ್ಞವಲ್ಕೀಯ ಕಾಂಡದಲ್ಲಿಯೂ ಸರ್ವೋಪಾಸನೆಗಳಿಗೂ ಪರಮಲಕ್ಷ್ಯವು ಪರಮಾತ್ಮನೇ ಎಂಬಿದನ್ನು (೪-೨) ಅವಸ್ಥಾತ್ರಯಪರಾಮರ್ಶದಿಂದಲೇ ಉಪದೇಶಿಸಿದೆ. ಆತ್ಮನು ಕಾರ್ಯಕರಣವ್ಯತಿರಿಕ್ತನು, ಶುದ್ಧನು, ಸ್ವಯಂಜ್ಯೋತಿಯು, ಅಲುಪ್ತ ಶಕ್ತಿಗಳುಳ್ಳವನು, ನಿರತಿಶಯಾನಂದಸ್ವಭಾವನು, ಅದ್ವೈತನು- ಎಂಬುದನ್ನೆಲ್ಲ (೪-೩-೧ರಿಂದ ೩೩ರವರೆಗೆ) ವಿಸ್ತಾರವಾಗಿ ಅವಸ್ಥಾತ್ರಯನಿರೂಪಣದಿಂದಲೇ ತೋರಿಸಿಕೊಟ್ಟಿದೆ. ಇದನ್ನು ಮಹಾತರ್ಕವೆಂದು ಆಚಾರ್ಯರು (ಭಾ. ಭಾ. ೧೫೭) ಕರೆದಿರುವದನ್ನು ವಾಚಕರು ಲಕ್ಷ್ಯದಲ್ಲಿಡಬೇಕು.

ಆಚಾರ್ಯರು ಈ ಉಪನಿಷತ್ತಿನ ಭಾಷ್ಯದಲ್ಲಿ ಮುಖ್ಯವಾಗಿ **ಸುಷುಪ್ತಿಯ ಆಧಾರದಿಂದಲೇ** ತಮ್ಮ ಸಿದ್ಧಾಂತದ ಮುಖ್ಯಾಂಶಗಳನ್ನು ಜಿಜ್ಞಾಸುಗಳಿಗೆ ತಿಳಿಯಹೇಳಲು ಪ್ರಯತ್ನಿಸಿರುತ್ತಾರೆಂಬುವದನ್ನು ಈ ಸಂದರ್ಭದಲ್ಲಿ ಓದುಗರು ಮನದಂದುಕೊಳ್ಳಬೇಕು. ಸುಷುಪ್ತ್ಯವಸ್ಥೆಯಲ್ಲಿ ಆತ್ಮನು ಅವಿದ್ಯಾಕಾಮಕರ್ಮಗಳಿಲ್ಲದ, ಸರ್ವಸಂಸಾರಧರ್ಮಸಂಬಂಧರಹಿತವಾದ, ಅದ್ವಿತೀಯ ಪರಮಾತ್ಮರೂಪದಿಂದ ಇದ್ದುಕೊಂಡಿರುತ್ತಾನೆ ಎಂದು (೧-೨೮೯, ೧-೨೯೯, ೧-೩೦೦, ೧-೩೦೧, ೧-೩೦೨, ೧-೩೦೩; ಭಾ.ಭಾ. ೨೧೩, ೨೧೫, ೨೧೬, ೨೧೭, ೨೧೮, ೨೨೬, ೨೩೩, ೨೪೨) ಸ್ಪಷ್ಟವಾಗಿ ಹೇಳಿರುತ್ತಾರೆ **ಅವಿದ್ಯೆ** ಎಂದರೆ ಮಿಥ್ಯಾವಸ್ತುವನ್ನು ಆತ್ಮನಿಗೆ ಎರಡನೆಯದಾಗಿರುವಂತೆ ತೋರಿಸಿ, ಆತ್ಮನಲ್ಲಿ ಪರಿಚ್ಛಿನ್ನತ್ವಭ್ರಾಂತಿಯನ್ನುಂಟುಮಾಡಿ, ಮಿಥ್ಯಾವಿಷಯದ ಕಾಮವನ್ನುಂಟುಮಾಡುವ ಮೂಲಕ ಸಂಸಾರಕ್ಕೆ ಕಾರಣವಾಗುವ ತಪ್ಪುತಿಳಿವಳಿಕೆ ಎಂದೂ (ಭಾ. ಭಾ. ೨೧೧) ವಿಶದೀಕರಿಸಿರುತ್ತಾರೆ. ಸುಷುಪ್ತಿಯಲ್ಲಿ ವಿಶೇಷವಿಜ್ಞಾನವು ಆಗದೆ ಇರುವದಕ್ಕೆ ಜೀವನು ಪರಮಾತ್ಮನಲ್ಲಿ ಒಂದಾಗಿರುವದೂ, ಅವಿದ್ಯೆಯಿಂದ ಬೇರೆಯಾಗಿ ಕರಣಗಳೂ ವಿಷಯಗಳೂ ಈಗ ವಿಂಗಡವಾಗಿದ್ದುಕೊಂಡಿಲ್ಲದೆ ಇರುವದೂ ಕಾರಣವೇ ಹೊರತು (ಭಾ. ಭಾ. ೨೧೪, ೨೨೬) ಆತ್ಮನ ಅರಿವು ನಾಶವಾಗಿರುವದಲ್ಲ (ಭಾ.ಭಾ. ೨೨೪) ಎಂದೂ ಸ್ಫುಟಗೊಳಿಸಿರುತ್ತಾರೆ.

ಹೀಗಿದ್ದರೂ ವ್ಯಾಖ್ಯಾನಪ್ರಸ್ಥಾನದಲ್ಲಿ ಆತ್ಮಾಶ್ರಯವೂ ಆತ್ಮವಿಷಯಕವೂ ಆದ ಭಾವರೂಪಾವಿದ್ಯೆಯೊಂದು ಸುಷುಪ್ತಿಯಲ್ಲಿರುತ್ತದೆಯೆಂದೂ ಕಾರ್ಯರೂಪವಾದ ಅಧ್ಯಾಸಾವಿದ್ಯೆಯು ಮಾತ್ರ ಅಲ್ಲಿಲ್ಲವೆಂದೂ ಈ ಮೂಲಾವಿದ್ಯೆಯ ಆವರಣವೇ ಅಲ್ಲಿ ವಿಶೇಷಾನುಭವಾಭಾವಕ್ಕೆ ಕಾರಣವೆಂದೂ ಶ್ರುತ್ಯನುಭವವಿರುದ್ಧವಾದ ವಾದವೊಂದನ್ನು ಅಂಗೀಕರಿಸಿದೆ. ವೇದಾಂತಸಿದ್ಧಾಂತಕ್ಕೇ ಕುಠಾರಪ್ರಾಯವಾಗಿರುವ ಈ **ಮೂಲಾವಿದ್ಯಾವಾದಕ್ಕೆ** ಪ್ರಸ್ಥಾನತ್ರಯಭಾಷ್ಯದಲ್ಲಿ ಎಲ್ಲಿಯೂ ಆಧಾರವಿರುವದಿಲ್ಲ. ಆದ್ದರಿಂದ ಈ ಉಪನಿಷತ್ತಿನ ಭಾಷ್ಯಕ್ಕೆ ನಾವು ಬರೆದಿರುವ ಟಿಪ್ಪಣಿಗಳಲ್ಲಿ ಅಲ್ಲಲ್ಲಿ ಈ ವಾದವು ಭಾಷ್ಯವಿರುದ್ಧವೆಂಬದನ್ನು ಓದುಗರ ಲಕ್ಷ್ಯಕ್ಕೆ ತಂದಿರುತ್ತೇವೆ.

## ಸುಷುಪ್ತಿಸಮಾಧಿಮೋಕ್ಷಗಳು

ಸುಷುಪ್ತಿಯಲ್ಲಿ ಅವಿದ್ಯೆಯಿರುತ್ತದೆ; ಆದರೆ ನಿರ್ವಿಕಲ್ಪಕಸಮಾಧಿಯಲ್ಲಿ ಅದು ಪೂರ್ಣವಾಗಿ ತೊಲಗುತ್ತದೆ. ಆದ್ದರಿಂದ ವೇದಾಂತಾಭ್ಯಾಸವನ್ನು ಮಾಡಿ ಪರೋಕ್ಷಜ್ಞಾನವನ್ನು ಸಂಪಾದಿಸಿಕೊಂಡ ಬಳಿಕ ಪಾತಂಜಲಯೋಗವನ್ನು

ಅಭ್ಯಾಸಮಾಡಿ ನಿರ್ವಿಕಲ್ಪಕಸಮಾಧಿಯಿಂದ ಅವಿದ್ಯೆಯನ್ನು ಕಳೆದುಕೊಂಡು ಅಪರೋಕ್ಷಾನುಭವವನ್ನು ಪಡೆದುಕೊಳ್ಳಬೇಕು-ಎಂಬುದು ಕೆಲವರು ಮೂಲಾವಿದ್ಯಾವಾದಿಗಳ ವಾದವು. ಅವಸ್ಥಾತ್ರಯವಿಚಾರವು ಬಂಧಮೋಕ್ಷಗಳಿಗೆ ದೃಷ್ಟಾಂತಮಾತ್ರವಾಗಿರುತ್ತದೆ- ಎಂದು ಭಾಷ್ಯಕಾರರು (ಭಾ. ಭಾ. ೨೪೨) ಹೇಳಿರುತ್ತಾರಾದ್ದರಿಂದ ಸುಷುಪ್ತಿಯಲ್ಲಿಯೂ ಅವಿದ್ಯೆಯಿದೆ ಎಂದಾಯಿತು ಎಂಬುದೂ ಅವರ ವಾದವು.

ಆದರೆ ನಿರ್ವಿಕಲ್ಪಕಸಮಾಧಿಯು ಅವಿದ್ಯೆಯ ನಾಶಕ್ಕೆ ಬೇಕೆಂದಾಗಲಿ ಪಾತಂಜಲಯೋಗದಲ್ಲಿ ಹೇಳಿರುವ ಚಿತ್ತವೃತ್ತಿನಿರೋಧವು ಅದಕ್ಕೆ ಸಾಧನವೆಂದಾಗಲಿ ಭಾಷ್ಯದಲ್ಲಿ ಎಲ್ಲಿಯೂ ಕಂಡುಬಂದಿರುವದಿಲ್ಲ. ಚಿತ್ತವೃತ್ತಿನಿರೋಧವನ್ನು ಮಾಡಿಯೇ ಪರಮಪುರುಷಾರ್ಥವನ್ನು ಪಡೆದುಕೊಳ್ಳಬೇಕಾಗಿದೆ ಎಂಬವರ ಮತವನ್ನು ಈ ಉಪನಿಷತ್ತಿನ ಭಾಷ್ಯದಲ್ಲಿ (೧-೧೪) ಕಂಠರವದಿಂದ ಖಂಡಿಸಿಯೂ ಇದೆ. ಅನುಭವಾನುಸಾರವಾಗಿ ನೋಡಿದರೆ ಸುಷುಪ್ತಿಸಮಾಧಿಗಳೆರಡರಲ್ಲಿಯೂ ದ್ವಿತೀಯವಸ್ತುವಿನ ಜ್ಞಾನವಿರುವದಿಲ್ಲ; ಈ ಎರಡು ಅವಸ್ಥೆಗಳನ್ನೂ ಸಮಾನವಾಗಿಯೇ ಎಣಿಸಿರುವದೂ ಸೂತ್ರಭಾಷ್ಯಾದಿಗಳಲ್ಲಿ (ಸೂ. ಭಾ. ೨-೧-೯, ಭಾ. ಭಾ. ೪೨೫) ಕಂಡುಬರುತ್ತದೆ. ಆದ್ದರಿಂದ ಶ್ರುತಿಭಾಷ್ಯವಿರುದ್ಧವಾಗಿ ಸುಷುಪ್ತಿಸಮಾಧಿಗಳಿಗೆ ಅವಿದ್ಯೆಯ ವಿಷಯದಲ್ಲಿ ತಾರತಮ್ಯವನ್ನು ಕಲ್ಪಿಸುವದಕ್ಕೆ ಯಾವ ನ್ಯಾಯವೂ ಇರುವದಿಲ್ಲ.

ಇನ್ನು ಬಂಧಮೋಕ್ಷಗಳಿಗೆ ಅವಸ್ಥಾತ್ರಯವನ್ನು ದೃಷ್ಟಾಂತವಾಗಿ ಕೊಟ್ಟಿರುವದನ್ನು ವಿಚಾರಮಾಡೋಣ. ಈ ಸಂದರ್ಭದಲ್ಲಿ ಆಚಾರ್ಯರು ಬರೆದಿರುವ ಅವತರಣಿಕೆಯು (ಭಾ. ಭಾ. ೨೪೨) ಮನನೀಯವಾಗಿರುತ್ತದೆ. ಏಕೆಂದರೆ ಅಲ್ಲಿ ಅವಿದ್ಯೆ ಎಂದರೆ ಅತದ್ಧರ್ಮಾರೋಪಣರೂಪವು, ಆತ್ಮನದಲ್ಲದ ಧರ್ಮವನ್ನು ಅವನಲ್ಲಿ ಆರೋಪಿಸುವ ರೂಪದ್ದು- ಎಂದೂ ಅದು ಆತ್ಮಧರ್ಮವಲ್ಲ ಎಂದೂ ಬರೆದಿದೆ. ಅಧ್ಯಾರೋಪರೂಪಾವಿದ್ಯೆಗಿಂತ ಬೇರೆಯಾದ ಮೂಲಾವಿದ್ಯೆಯೊಂದಿದೆ, ಅದು ಆತ್ಮಾಶ್ರಯವಾಗಿದೆ ಎಂಬ ವಾದಕ್ಕೆ ಇದು ಅತ್ಯಂತ ವಿರುದ್ಧವಾಗಿರುತ್ತದೆ. ಆತ್ಮನಿಗೆ ಸರ್ವಾತ್ಮಭಾವವು ಸ್ವಭಾವವು; ಅವಿದ್ಯಾಕಾಮಕರ್ಮಾದಿಸರ್ವಸಂಸಾರಧರ್ಮಾತೀತವಾದ ಇವನ ರೂಪವು ನೇರಾಗಿ ಸುಷುಪ್ತಿಯಲ್ಲಿ ತಿಳಿಯಬರುತ್ತದೆಯೆಂದೂ ಆತ್ಮನು ಸ್ವಯಂಜ್ಯೋತಿಯು, ಪರಮಾನಂದನು, ಈ ಸುಷುಪ್ತಸುಖವೇ ಸುಖದ ಕೊನೆಯ ಹಂತವು- ಎಂದೂ ಅಲ್ಲಿ ಅನುವಾದಮಾಡಿಕೊಂಡಿದೆ. ಇದೂ ಮೂಲಾವಿದ್ಯಾವಾದಕ್ಕೆ ಹೊಂದುವದಿಲ್ಲ. ಏಕೆಂದರೆ ಸುಷುಪ್ತಿಯಲ್ಲಿ ಆತ್ಮನು ಜೀವಭಾವದಿಂದ ಇರುತ್ತಾನೆಂದೂ ಇಲ್ಲಿ ಸುಖಾಕಾರವಾದ ಅವಿದ್ಯಾವೃತ್ತಿಯಿರುವದೆಂದೂ ಆ ವಾದಿಗಳು ಹೇಳ

ತ್ತಿದಾರೆ. ಸುಷುಪ್ತಿಯಲ್ಲಿ ವಿಶೇಷಜ್ಞಾನವಿಲ್ಲದಿರುವದಕ್ಕೆ ಏಕತ್ವವೇ ಹೇತ ವೆಂದೇ (ಭಾ. ಭಾ. ೨೧೪) ಆಚಾರ್ಯರು ಬರೆದಿರುತ್ತಾರೆಯೋ ಹೊರತು ಮೂಲಾವಿದ್ಯೆಯು ನಿಮಿತ್ತದಿಂದ ಜ್ಞಾನವಿಲ್ಲವೆಂದೇನೂ ಬರೆದಿಲ್ಲವೆಂಬುದನ್ನು ಆಗಲೇ ತಿಳಿಸಿದ್ದಾಗಿದೆ. ಅವಿದ್ಯೆಯಿಂದ ಬಂಧವೂ ವಿದ್ಯೆಯಿಂದ ಮೋಕ್ಷವೂ ಆಗುವವೆಂಬುದಕ್ಕೆ ಸುಷುಪ್ತಿಯಲ್ಲಿ ಅವಿದ್ಯಾಕಾಮಕರ್ಮಗಳಿಲ್ಲದಿರುವದನ್ನೇ ಹೇತುವಾಗಿ ಭಾಷ್ಯದಲ್ಲಿ ಬರೆದುಕೊಂಡಿದೆ (ಭಾ. ಭಾ. ೨೧೨, ೨೧೩). ವಿದ್ಯೆಯು ಇಲ್ಲದ್ದನ್ನುಂಟುಮಾಡಲಾರದು, ಇದ್ದದ್ದನ್ನು ಕಳೆಯಲಾರದು –ಎಂದು (೧–೧೫೧, ೧–೩೧೫ ; ಭಾ. ಭಾ. ೧೩೭, ೨೨೫) ಮತ್ತೆಮತ್ತೆ ಅನುಭವಾನುಸಾರಿಯಾದ ಯುಕ್ತಿಯನ್ನು ಅನುಸರಿಸಿರುವ ಆಚಾರ್ಯರು, ಎಲ್ಲಾ ಅವಸ್ಥೆಗಳಲ್ಲಿಯೂ ಇರುವ ಅವಿದ್ಯೆಯು ವಿದ್ಯೆಯಿಂದ ನಿವೃತ್ತವಾಗುವದೆಂದು ಹೇಳಿಯಾರೆಂದು ಯಾರೂ ನಿರೀಕ್ಷಿಸುವದಕ್ಕೆ ಬರುವದಿಲ್ಲ. ಅವಿದ್ಯೆಯು ಆತ್ಮನ ಸ್ವಭಾವವೇ ಅಲ್ಲವೆಂಬುದನ್ನು ತಿಳಿಸುವದಕ್ಕೆ ಸುಷುಪ್ತಿಯನ್ನು ಉದಾಹರಿಸಿರುವ (ಭಾ. ೨೧೨. ೨೧೩) ಭಾಷ್ಯದಲ್ಲಿಯೇ ಸುಷುಪ್ತಿಯಲ್ಲಿ ಅವಿದ್ಯೆಯಿದೆ ಎಂಬ ವ್ಯಾಹತಾಭಿಪ್ರಾಯವನ್ನು ಕಲ್ಪಿಸುವದು ಹೇಗೆತಾನೆ ಸಮಂಜಸವಾದೀತು ?

ಇನ್ನು ದೃಷ್ಟಾಂತದಾರ್ಷ್ಟಾಂತಿಕಗಳ ವಿಚಾರಕ್ಕೆ ದೃಷ್ಟಿಯನ್ನು ಹೊರಳಿಸೋಣ. ಜೀವನು ಎಚ್ಚರಕನಸುಗಳನ್ನು ಮತ್ತೆ ಮತ್ತೆ ಹೊಂದುತ್ತಿರುವಂತೆಯೇ ದೇಹಾಂತರಕ್ಕೆ ಹೋಗುತ್ತಿರುವನು (ಭಾ. ಭಾ ೨೪೮). ಕನಸಿನಲ್ಲಿ ಹೇಗೆ ದೇಹಾಂತರವನ್ನು ನಿರ್ಮಿಸಿಕೊಳ್ಳುವನೋ ಹಾಗೆಯೇ ಸಂಸಾರದಲ್ಲಿಯೂ ನಿರ್ಮಿಸಿಕೊಳ್ಳುತ್ತಿರುವನು (ಭಾ. ಭಾ. ೨೬೨) ; ಸುಷುಪ್ತಾವಸ್ಥೆಯಲ್ಲಿರುವಂತೆ ನಿರ್ವಿಶೇಷನೂ ಅದ್ವೈತನೂ ಅಲುಪ್ತಚಿದ್ರೂಪಜ್ಯೋತಿಃಸ್ವಭಾವನೂ ಆಗಿರುವೆನೆಂದು ಯಾವನು ಅರಿತುಕೊಳ್ಳುವನೋ ಅವನಿಗೆ ಕಾಮವಿಲ್ಲದ್ದರಿಂದ ವಾಗಾದಿಪ್ರಾಣಗಳು ಉತ್ಕ್ರಾಂತವಾಗುವದಿಲ್ಲ, ಇಲ್ಲಿಯೇ ಬ್ರಹ್ಮವಾಗಿದ್ದುಕೊಂಡು ಬ್ರಹ್ಮದಲ್ಲಿ ಸೇರಿಹೋಗುತ್ತಾನೆ (ಭಾ. ಭಾ. ೨೭೦) ಎಂದು ಆಚಾರ್ಯರು ದೃಷ್ಟಾಂತದಾರ್ಷ್ಟಾಂತಿಕಗಳನ್ನು ಜೋಡಿಸಿ ತಿಳಿಸಿರುತ್ತಾರೆ. ಆತ್ಮನು ಜಾಗ್ರತ್ಸ್ವಪ್ನಗಳಲ್ಲಿ ಕಾರ್ಯಕರಣಗಳೊಡನೆ ಇದ್ದು ಅವಿದ್ಯಾಕಾಮಕರ್ಮಸಮೇತನಾಗಿಯೂ ಸುಷುಪ್ತಿಯಲ್ಲಿ ತದ್ರಹಿತನಾಗಿಯೂ ತಿಳಿಯಬರುವಂತೆಯೇ ಬಂಧದಶೆಯಲ್ಲಿ ಕಾರ್ಯಕರಣಾದಿಸಹಿತನಾಗಿಯೂ ಮೋಕ್ಷದಶೆಯಲ್ಲಿ ತದ್ರಹಿತನಾಗಿಯೂ ತೋರಿಬರುತ್ತಾನೆ. ಸರಿಯಾಗಿ ನೋಡಿದರೆ ಸುಷುಪ್ತಿಯಲ್ಲಿ ಕಾಣಬರುವ ನಿತ್ಯಶುದ್ಧಬುದ್ಧಮುಕ್ತಸ್ವರೂಪವೇ ಅವನ ಸ್ವಭಾವವಾಗಿದೆಯೆಂದು ಮನದಟ್ಟಾಗುವದು ಎಂದು ತಿಳಿಸುವದೇ ಈ ಗ್ರಂಥ

ಭಾಗದ ಉದ್ದೇಶವೆಂಬುದು ಯಾರಿಗಾದರೂ ಇಲ್ಲಿ ಸ್ಫುಟವಾಗಿ ತೋರುತ್ತದೆ. ಹೀಗಿರುವಲ್ಲಿ ಸುಷುಪ್ತಿಯಲ್ಲಿ ಅವಿದ್ಯೆಯಿದೆ ಎಂಬವರಿಗೆ ಇಲ್ಲಿ ಯಾವ ಬೆಂಬಲವು ಸಿಕ್ಕೀತು ?

ಇನ್ನೂ ಒಂದು ಮಾತು. ಅವಸ್ಥಾತ್ರಯರೂಪವಾದ ಅನಾತ್ಮವು ಆತ್ಮನನ್ನು ಬಿಟ್ಟು ಸ್ವತಂತ್ರವಾಗಿರುವದೆಂದು ತಿಳಿಸುವದೇನೂ ಶ್ರುತಿಯ ಉದ್ದೇಶವಲ್ಲ. ಅವಸ್ಥೆಗಳು ಆತ್ಮನಿಗಿಂತ ಬೇರೆಯಾಗಿರುವದೇ ಇಲ್ಲ; ಆದ್ದರಿಂದ ಆತ್ಮನು ನಿತ್ಯಶುದ್ಧಬುದ್ಧಮುಕ್ತಸ್ವಭಾವನಾಗಿರುತ್ತಾನೆ ಎಂದು ತಿಳಿಸುವದೇ ಅವಸ್ಥಾತ್ರಯಪರೀಕ್ಷೆಗೆ ಗುರಿಯು. ಅವಸ್ಥಾತ್ರಯವನ್ನು ಅಧ್ಯಾರೋಪದೃಷ್ಟಿಯಿಂದ ಮಾತ್ರವೇ ಇಟ್ಟುಕೊಂಡು ಈ ವಿಚಾರವನ್ನು ಮಾಡಿರುತ್ತದೆ ಎಂದು ನಾವು ಆಗಲೆ ಹೇಳಿರುತ್ತೇವೆ. ಆದ್ದರಿಂದಲೇ ಆಚಾರ್ಯರು '**ಶಬ್ದಸಾಮಾನ್ಯವನ್ನು ಬಿಟ್ಟು ಅದರ ವಿಷಯಗಳನ್ನೇ ಹೇಗೆ ಬೇರ್ಪಡಿಸಿಕೊಂಡು ಅರಿಯುವದಕ್ಕಾಗುವದಿಲ್ಲವೋ ಹಾಗೆಯೇ ಪ್ರಜ್ಞಾನವನ್ನೂ ಬಿಟ್ಟು ಸ್ವಪ್ನಜಾಗರಿತಗಳಲ್ಲಿ ಯಾವದೊಂದು ವಿಶೇಷವನ್ನೂ ಗ್ರಹಿಸುವದಕ್ಕಾಗುವದಿಲ್ಲ**' (೧-೩೬೧) ಎಂದು ಬರೆದಿರುತ್ತಾರೆ. **ಜಾಗ್ರತ್ಸ್ವಪ್ನಗಳೆರಡೂ ಸ್ವಪ್ನಗಳೇ** ಎಂದು ಅವರು ಅಲ್ಲಲ್ಲಿ ಹೇಳಿರುತ್ತಾರೆ. 'ಆದ್ದರಿಂದ ಸ್ವಪ್ನದಲ್ಲಿ ಕಾರ್ಯಕರಣಾದಿಲೋಕಗಳು ಇಲ್ಲದಿದ್ದರೂ ಅವೇ ತಾನೆಂದು ಸುಳ್ಳುಸುಳ್ಳಾಗಿಯೇ ಅಧ್ಯಾರೋಪಿಸಿಕೊಂಡಿರುತ್ತಾನೆ; ಎಚ್ಚರದಲ್ಲಿಯೂ ಹಾಗೆಯೇ ಎಂದು ತಿಳಿಯಬೇಕು' (೧-೨೯೫). 'ಎಚ್ಚರದಲ್ಲಿ ಏನೇನೋ ಕಾಣುತ್ತಾನಷ್ಟೆ, ಅದು ಸ್ವಪ್ನವೆಂದೇ ಶ್ರುತಿಯ ಮತವಾಗಿದೆ; ಆದ್ದರಿಂದ ಎಲ್ಲಿ ಯಾವದನ್ನೂ ಕಾಣುವದಿಲ್ಲವೋ ಅದು ಸುಷುಪ್ತವು ಎಂದಿರುತ್ತದೆ. ಆದ್ದರಿಂದಲೇ ಶ್ರುತ್ಯಂತರದಲ್ಲಿ ಅವನಿಗೆ ಮೂರು ಅವಸಥಗಳು, ಮೂರು ಸ್ವಪ್ನಗಳು -ಎಂದಿರುತ್ತದೆ' (ಭಾ. ಭಾ. ೨೦೮). ಈ ದೃಷ್ಟಿಯಿಂದ ನೋಡಿದಾಗ ಅವಸ್ಥಾತ್ರಯವೆಂಬುದೇ ಅವಿದ್ಯೆಯಿಂದ ಕಾಣುತ್ತಿರುವ ಹುಸಿತೋರಿಕೆಯಾಗಿರುವದರಿಂದ ಸುಷುಪ್ತಿಯಲ್ಲಿ ಅವಿದ್ಯೆಯಿದೆ ಎಂಬ ವಾದವು ತೀರ ಹಾಸ್ಯಾಸ್ಪದವಾಗುವದು. ಅವಸ್ಥಾತ್ರಯಪ್ರಕ್ರಿಯೆ ಎಂಬುದು 'ನೇತಿ ನೇತಿ'.ಎಂದು ತಿಳಿಸಿಕೊಟ್ಟಿರುವ ಆತ್ಮಸ್ವರೂಪವನ್ನು ಮನಗಾಣಿಸಿಕೊಡುವದಕ್ಕೆಂದು ಶ್ರುತಿಯು ಅಧ್ಯಾರೋಪದೃಷ್ಟಿಯಿಂದ ಕಲ್ಪಿಸಿರುವ ಉಪಾಯಮಾತ್ರವೆಂಬುದೂ ಸ್ಫುಟವಾಗುವದು.

## ವಿದ್ವತ್ಸಂನ್ಯಾಸವಿಚಾರ

ಕ್ರಿಯಾಕಾರಕಫಲರಹಿತವಾದ ಅದ್ವೈತಾತ್ಮತತ್ತ್ವವನ್ನು ಕಂಡುಕೊಳ್ಳುವವನಿಗೆ ಕರ್ತವ್ಯತ್ವಬುದ್ಧಿಯು ಇರುವದೇ ಇಲ್ಲವಾದ್ದರಿಂದ ಯಾವ ಕರ್ತವ್ಯವೂ

ಇಲ್ಲವೆಂಬುದು ತಾನೇ ಸಿದ್ಧವಾಗುತ್ತವೆ ಆದ್ದರಿಂದಲೇ ಆಚಾರ್ಯರು ವೇದಾಂತವಾಕ್ಯದಿಂದ ಆತ್ಮಜ್ಞಾನವುಂಟಾದಮೇಲೆ ಕೃತಕೃತ್ಯತೆಗಾಗಿ ಮಾಡಬೇಕಾದ ಉಪಾಸನೆಯಿದೆಯೆಂದು, ಸಂಪಾದಿಸಿಕೊಳ್ಳತಕ್ಕ ಸಾಕ್ಷಾತ್ಕಾರವೊಂದಿದೆಯೆಂದು, ಅಥವಾ ಜ್ಞಾನಸ್ಮೃತಿಸಂತಾನದ ಅಭ್ಯಾಸವನ್ನು ಮಾಡುತ್ತಿರಬೇಕೆಂದು ಹೇಳುತ್ತಿದ್ದವರ ಮತಗಳನ್ನು ಖಂಡಿಸಿರುವದಲ್ಲದೆ ಪಾತಂಜಲಯೋಗದ ಅಭ್ಯಾಸದಿಂದ ಚಿತ್ತವೃತ್ತಿನಿರೋಧವನ್ನು ಮಾಡಿಕೊಂಡರೇ ಪರಮಪುರುಷಾರ್ಥವು ದೊರಕುವವೆಂಬವರ ಪಕ್ಷವನ್ನೂ ತಳ್ಳಿಹಾಕಿರುತ್ತಾರೆ (೧–೧೩೭ರಿಂದ ೧೩೯). ಆತ್ಮಜ್ಞಾನಿಯು ಕೇವಲ ಮುನಿಯು, ಕರ್ಮಿಯಲ್ಲ (ಭಾ. ಭಾ. ೩೦೮), ಆತ್ಮನು ಕರ್ಮಫಲಸಾಧನಗಳಿಗೆ ಸಂಬದ್ಧನಲ್ಲವೆಂದೂ ಸರ್ವಸಂಸಾರಧರ್ಮವಿಲಕ್ಷಣನೆಂದೂ ಅರಿತುಕೊಂಡಿರುವವನಿಗೆ ಮಾಡತಕ್ಕ ಯಾವ ಕರ್ಮವೂ ಇರುವದಿಲ್ಲ (ಭಾ. ಭಾ. ೩೧೨), ಜ್ಞಾನದಿಂದ ಕರ್ಮಗಳಿಗೆ ಕಾರಣವಾಗಿರುವ ಭೇದಬುದ್ಧಿಯು ಉಪಮರ್ದವಾಗುತ್ತದೆ (ಭಾ. ಭಾ. ೩೩೮), ವಾಕ್ಯಜ್ಞಾನದಿಂದ ಅವಿದ್ಯಾಶೋಕಮೋಹಭಯಾದಿದೋಷಗಳು ತೊಲಗುವದು ಅನುಭವಸಿದ್ಧ (೧–೧೪೧, ೧೭೨)– ಎಂದೂ ಆತ್ಮಜ್ಞಾನದೊಡನೆ ಕರ್ಮವು ಇರುವಂತಿಲ್ಲವಾದ್ದರಿಂದ ಜ್ಞಾನಿಗಂತೂ ವಿಧಿವಚನದ ಅಪೇಕ್ಷೆಯಿಲ್ಲದೆಯೇ ಪಾರಿವ್ರಾಜ್ಯವು ಬಂದೊದಗುತ್ತದೆ (ಭಾ. ಭಾ. ೩೪೧), ಜ್ಞಾನವುಂಟಾದ ಬಳಿಕ ಪ್ರತಿಪತ್ತಿಕರ್ಮದಂತೆ ಅದು ತನಗೆತಾನೇ ಬಂದೊದಗುತ್ತದೆ (ಭಾ. ಭಾ. ೨೮೧) ಎಂದೂ ಆತ್ಮಜ್ಞಾನಿಗೆ ಏಷಣಾತ್ರಯತ್ಯಾಗರೂಪವಾದ ಪರಮಹಂಸಪಾರಿವ್ರಾಜ್ಯವು ತಾನೇ ಬಂದೊದಗುತ್ತದೆ ಎಂಬುದನ್ನು ಸ್ಪಷ್ಟಪಡಿಸಿರುತ್ತಾರೆ.

ಆದರೆ ಭಾಷ್ಯಕಾರರಿಂದೀಚಿನ ಅದ್ವೈತಿವೇದಾಂತಿಗಳಲ್ಲಿ ಜ್ಞಾನಿಗೂ ಕರ್ತವ್ಯವುಂಟೆಂಬ ಅಭಿಪ್ರಾಯವು ಹೇಗೋ ಬಂದು ನೆಲಸಿಬಿಟ್ಟಿರುತ್ತದೆ. ವಾಕ್ಯಜ್ಞಾನದ ದೃಢಪ್ರತಿಪತ್ತಿಗಾಗಿಯೋ ಅಥವಾ ತತ್ತ್ವಸಾಕ್ಷಾತ್ಕಾರಕ್ಕಾಗಿಯೋ ಮಾಡತಕ್ಕ ಸಾಧನವೊಂದು ಉಳಿದುಕೊಂಡಿರುತ್ತದೆ ಎಂದು ಹಲವರು ಅಭಿಪ್ರಾಯಪಡುತ್ತಿದಾರೆ. ವಾಕ್ಯದಿಂದ ಅಪರೋಕ್ಷಜ್ಞಾನವಾಗುವದೆಂದು ಒಪ್ಪುವವರುಕೂಡ ಲೋಕವ್ಯವಹಾರದಿಂದ ವಿಕ್ಷಿಪ್ತಚಿತ್ತನಾಗಿರುವ ಜ್ಞಾನಿಯು ವಿಧ್ಯುಕ್ತರೀತಿಯಿಂದ ವಿದ್ವತ್ಸಂನ್ಯಾಸವನ್ನು ಮಾಡಿ ಮನೋನಾಶವಾಸನಾಕ್ಷಯಗಳ ಮೂಲಕ ಮನೋವಿಶ್ರಾಂತಿಯನ್ನು ಪಡೆಯುವದು ಅವಶ್ಯವಾಗಬಹುದು. ಪಾತಂಜಲಯೋಗದ ಅಭ್ಯಾಸದಿಂದ ಈ ವಿಶ್ರಾಂತಿಯನ್ನು ಪಡೆದುಕೊಂಡವನೇ ಜೀವನ್ಮುಕ್ತನೆನಿಸುತ್ತಾನೆ ಎಂದು ಅವರು ಹೇಳುತ್ತಿದಾರೆ. ಆತ್ಮನಲ್ಲಿ ಅಧ್ಯಾರೋಪಿತವಾಗಿದ್ದ ಕರ್ತೃತ್ವವು ವಾಕ್ಯಜ್ಞಾನದಿಂದಲೇ ಹೋಗಿರುವದಾದರೂ ಅಂತಃಕರಣೋಪಾಧಿಯಲ್ಲಿ ಸ್ವತಃಸಿದ್ಧವಾಗಿರುವ ಕರ್ತೃತ್ವವು

ಉಳಿದುಕೊಂಡಿರುತ್ತದೆಯಾದ್ದರಿಂದ ಶ್ರುತಿಯು ಜ್ಞಾನಿಗೆ ಸಂನ್ಯಾಸವನ್ನು ವಿಧಿಸಿದೆ ಎಂಬುದು ವ್ಯಾಹತೋಕ್ತಿಯಾಗುವದಿಲ್ಲ; ಜ್ಞಾನಿಯು ಮಾಡುವ ಈ ಸಂನ್ಯಾಸವೂ ಯೋಗವೂ ಚಿತ್ತವಿಶ್ರಾಂತಿಗೆ ಇರುವ ಪ್ರತಿಬಂಧವನ್ನು ಕಳೆಯುವದರಲ್ಲಿಯೇ ಪರ್ಯವಸಾನವಾಗುವದರಿಂದ ವಿಧಿವಶದಿಂದ ಮಾಡಿದ ಕ್ರಿಯೆಯ ಅಪೂರ್ವವು ದೇಹಾಂತರವನ್ನು ಕೊಡಬಹುದೆಂದು ಶಂಕಿಸುವದಕ್ಕೂ ಬರುವದಿಲ್ಲ. ಮನೋನಾಶಾದಿಗಳಿಲ್ಲದ ಜ್ಞಾನಿಗೆ ಕರ್ತೃತ್ವಭೋಕ್ತೃತ್ವ ಸುಖದುಃಖಾದಿರೂಪವಾದ ಚಿತ್ತಧರ್ಮದಿಂದ ಬಿಡುಗಡೆಯನ್ನು ಹೊಂದುವ ದೆಂಬ ಜೀವನ್ಮುಕ್ತಿಯು ದಕ್ಕಲಾರದು. ಜೀವನ್ಮುಕ್ತಿಯಿಂದ ಜ್ಞಾನರಕ್ಷಣೆಯೇ ಮುಂತಾದ ಫಲವುಂಟಾಗುವದು. ಹೀಗೆಂದು ಜೀವನ್ಮುಕ್ತಿವಿವೇಕವೇ ಮುಂತಾದ ಗ್ರಂಥಗಳಲ್ಲಿ ಬರೆದಿರುತ್ತದೆ.

ಜೀವನ್ಮುಕ್ತಿವಿವೇಕವು ವಿದ್ಯಾರಣ್ಯಕೃತವೆಂದು ಪ್ರಸಿದ್ಧವಾಗಿರುತ್ತದೆ. ಇದು ಎಷ್ಟರಮಟ್ಟಿಗೆ ನಿಜವೆಂಬುದನ್ನು ಐತಿಹಾಸಕರೇ ನಿರ್ಣಯಿಸಬೇಕಾ ಗಿದೆ. ಇದು ಹೇಗೇ ಇರಲಿ, ಅಪರೋಕ್ಷಜ್ಞಾನಿಯ ಸ್ವರೂಪಕ್ಕೆ ವ್ಯತಿರಿಕ್ತ ವಾಗಿ ಅಂತಃಕರಣವೊಂದು ಇದೆ ಎಂದೂ ಅದರಲ್ಲಿ ನಿಸರ್ಗಸಿದ್ಧವಾದ ಕರ್ತೃ ತ್ವಾದಿಗಳಿರುವವೆಂದೂ ಹೇಳುವದು ಸಾಂಖ್ಯಸಿದ್ಧಾಂತವಾದೀತೇ ಹೊರತು ಆಚಾರ್ಯರಿಗೆ ಸಮ್ಮತವಾದ ವೇದಾಂತಸಿದ್ಧಾಂತವಾಗಲಾರದೆಂಬುದು ನಿರ್ವಿವಾದವು. ಶ್ರುತಿಯುಕ್ತಿಭಾಷ್ಯವಿರುದ್ಧವಾಗಿ ಜ್ಞಾನಕ್ಕೆ ಅನಿಶ್ಚಿತವಾದ ಫಲ ವನ್ನು ಹೇಳುವದೂ ಯಾಜ್ಞವಲ್ಕ್ಯರಂಥ ಅಪರೋಕ್ಷಜ್ಞಾನಿಗಳಿಗೂ ಯೋಗಾ ಭ್ಯಾಸಾದಿಕರ್ತವ್ಯವು ಉಳಿದಿರುವದೆಂದು ಕಲ್ಪಿಸುವದೂ ಸಾಹಸವೇ ಸರಿ. ಜೀವನ್ಮುಕ್ತಿ, ವಿದೇಹಮುಕ್ತಿ- ಎಂಬ ವಿಭಾಗವನ್ನು ಮುಕ್ತಿಯಲ್ಲಿ ಈಗಿನವರು ಮಾಡಿಕೊಂಡಿರುವದಕ್ಕೆ ಭಾಷ್ಯದಲ್ಲಿಯೂ ಒಂದಿಷ್ಟು ಆಧಾರವಿದೆ (ಭಾ. ಭಾ. ೩೭೭,೩೮೧) ಎಂದು ಒಪ್ಪಬಹುದು. ಆದರೆ ಜೀವನ್ಮುಕ್ತಿಯು ಗೌಣವೆಂದೂ ವಿದೇಹಮುಕ್ತಿಯೇ ಮುಖ್ಯವೆಂದೂ ಹೇಳುವದೂ ಜೀವನ್ಮುಕ್ತನಲ್ಲಿ ಅವಿದ್ಯೆಯ ಸಂಸ್ಕಾರರೂಪವಾದ, ಅಥವಾ ಆಕಾರವಿಶೇಷವಾದ, ಅಥವಾ ಅದರ ಸೂಕ್ಷ್ಮಾ ವಸ್ಥೆಯ ರೂಪದ ಅವಿದ್ಯಾಲೇಶವು ಇದ್ದುಕೊಂಡಿರುವದೆಂದೂ ದೇಹಪಾತ ವಾಗುವಕಾಲಕ್ಕೆ ಇರುವ ಚರಮವೃತ್ತಿಯಿಂದಲೇ ಅದು ಸಂಪೂರ್ಣವಾಗಿ ನಾಶವಾಗುವದೆಂದೂ ಕಲ್ಪಿಸಿರುವದೂ ಸರ್ವಥಾ ಭಾಷ್ಯಬಹಿರ್ಭೂತವಾಗಿದೆ ಎಂದು ಹೇಳದೆ ಗತ್ಯಂತರವಿಲ್ಲ. ಏಕೆಂದರೆ ಪ್ರಕೃತವಾದ ಬೃಹದಾರಣ್ಯಕೋಪನಿ ಷತ್ತಿನ ಭಾಷ್ಯದಲ್ಲಿಯೇ ಜ್ಞಾನಮಾತ್ರದಿಂದ ಸರ್ವಭಾವಾಪತ್ತಿ (೧-೧೬೩, ೧೬೭) ಯಾಗುವದೆಂದು ಬಾಯಿಬಿಟ್ಟು ಹೇಳಿದೆ. ವಿಪರೀತಜ್ಞಾನವನ್ನು ಕಳೆಯುವದಕ್ಕೇ ಜ್ಞಾನವು ಬೇಕಾಗಿದೆ (೧-೧೪೫), ಜ್ಞಾನಸಮಕಾಲದಲ್ಲಿಯೇ

ಅಜ್ಞಾನವು ತೊಲಗುತ್ತದೆ (೧-೧೭೦), ಜ್ಞಾನದಿಂದ ಅವಿದ್ಯಾದಿಗಳು ಹೋಗು ವದು ಪ್ರತ್ಯಕ್ಷವಾಗಿದೆ (೧-೧೪೦,೧೪೧), ಪ್ರಾರಬ್ಧಕರ್ಮವು ಉಳಿದಿರುವಷ್ಟು ಮಟ್ಟಿಗೆ ವಿಪರೀತಪ್ರತ್ಯಯರೂಪವಾದ ಅವಿದ್ಯಾಲೇಶವು ಇರುತ್ತದೆಯೆಂದು ಒಪ್ಪಿದರೂ ಅದು ವಿಪರೀತಪ್ರತ್ಯಯಾಭಾಸವೇ ಹೊರತು ನಿಜವಾದ ವಿಪರೀತ ಪ್ರತ್ಯಯವಲ್ಲ (೧-೧೭೩), ಜ್ಞಾನಿಗೆ ತಾನು ಕೃತಕೃತ್ಯನೆಂಬ ಅನುಭವವು ಇಲ್ಲಿಯೇ ಆಗುತ್ತದೆ (ಭಾ.ಭಾ. ೨೮೨) -ಎಂದು ಆಚಾರ್ಯರು ಮತ್ತೆಮತ್ತೆ ಸಾರಿರುತ್ತಾರೆ. ಹೀಗಿರುವದರಿಂದ ಭಾಷ್ಯಕಾರರು ತಳ್ಳಿಹಾಕಿರುವ ಚಿತ್ತವೃತ್ತಿ ನಿರೋಧರೂಪವಾದ ಪಾತಂಜಲಯೋಗವು ಜ್ಞಾನಿಗೂ ಜೀವನ್ಮುಕ್ತತ್ವಕ್ಕೆ ಬೇಕೆಂದೂ ಆ ಜೀವನ್ಮುಕ್ತಿಯಿಂದ ಜ್ಞಾನರಕ್ಷೆಯೇ ಮುಂತಾದ ಫಲವು ದೊರ ಕುವದೆಂದೂ ಕಲ್ಪಿಸಿರುವದು ಅತ್ಯಂತಹಾಸ್ಯಾಸ್ಪದವಾಗಿರುತ್ತದೆ. ಜ್ಞಾನಿಯು ಸತ್ತಮೇಲೆ ಭಾವಾಂತರವನ್ನು ಹೊಂದುತ್ತಾನೆಂಬುದು ಸರಿಯಲ್ಲವೆಂದೂ (ಭಾ.ಭಾ. ೨೭೧), ಈ ದೇಹವು ಹೋದಬಳಿಕ ದೇಹಾಂತರಪ್ರಾಪ್ತಿಯಿಲ್ಲವೆಂದು ತಿಳಿಸುವದಕ್ಕೆ ಮಾತ್ರವೇ ಉಪಚಾರಕ್ಕಾಗಿ ಅವನು 'ಬ್ರಹ್ಮದಲ್ಲಿ ಸೇರಿಹೋಗು ತ್ತಾನೆ' ಎಂದು ಶ್ರುತಿಯಲ್ಲಿ ಹೇಳಿದೆ ಎಂದೂ (ಭಾ.ಭಾ. ೨೭೫) ಭಾಷ್ಯಕಾರರು ಕಂಠೋಕ್ತವಾಗಿ ಬರೆದಿರುವದಕ್ಕೆ ವಿದೇಹಮುಕ್ತಿಯೇ ಮುಖ್ಯಮುಕ್ತಿ ಎಂಬ ವಾದವು ತೀರವಿರುದ್ಧವಾಗಿದೆ ಎಂದು ಯಾರಾದರೂ ಒಪ್ಪಬೇಕಾಗುತ್ತದೆ.

ಈ ಎಲ್ಲಾ ಕಾರಣಗಳಿಂದ ವಿದ್ವತ್ಸಂನ್ಯಾಸವೆಂಬುದು ಒಂದಾನೊಂದು ವಿಹಿತಕರ್ಮವಲ್ಲವೆಂದೂ ಜ್ಞಾನದಿಂದ ಅರ್ಥಪ್ರಾಪ್ತವಾಗಿರುವ ಏಷಣಾತ್ಯಾಗ ವೆಂದೂ ನಾವು ಅಭಿಪ್ರಾಯಪಡುತ್ತೇವೆ.

## ವಿವಿದಿಷಾಸಂನ್ಯಾಸವೂ ಜ್ಞಾನಸಾಧನಗಳೂ

'ಆತ್ಮಲೋಕವನ್ನು ಇಚ್ಛಿಸುವವರು ಪ್ರವ್ರಜನಮಾಡಬೇಕು' (೪-೪-೨೨) ಎಂದು ವಿವಿದಿಷುಗಳಿಗೂ ಪಾರಿವ್ರಾಜ್ಯವನ್ನು ಶ್ರುತಿಯಲ್ಲಿ ವಿಧಿಸಿರುತ್ತದೆ (ಭಾ. ಭಾ. ೩೪೧). ಯಾವಜ್ಜೀವವೂ ಅಗ್ನಿಹೋತ್ರವನ್ನು ಮಾಡಬೇಕು ಎಂದು ಮುಂತಾಗಿ ಯಜ್ಞದಾನತಪಸ್ಸುಗಳು ಕಾಮಿಗಳಾದ ಅಜ್ಞಾನಿಗಳಿಗೇ ವಿಹಿತವಾಗಿರುತ್ತವೆ (ಭಾ.ಭಾ. ೩೩೯) ಯಾದರೂ ಆತ್ಮಸಂಸ್ಕಾರದ್ವಾರದಿಂದ ಅವು ಆತ್ಮಜ್ಞಾನಕ್ಕೂ ಸಾಧನವಾಗಿರುತ್ತವೆ (ಭಾ.ಭಾ. ೩೪೨). ಹಿಂಸಾದಿ ಬಹುಲವಾಗಿರುವ ಆ ಕರ್ಮಗಳಿಗಿಂತಲೂ ಪಾರಿವ್ರಾಜ್ಯವನ್ನು ಸ್ವೀಕರಿಸಿ ಯಮ ಪ್ರಧಾನವಾಗಿರುವ ಅಮಾನಿತ್ವಾದಿಗಳನ್ನೂ ಧ್ಯಾನಜ್ಞಾನವೈರಾಗ್ಯಗಳನ್ನೂ ಅಭ್ಯಾಸಮಾಡುವದೇ ಮುಮುಕ್ಷುಗಳಿಗೆ ಜ್ಞಾನಕ್ಕೆ ಅಂತರಂಗಸಾಧನವು (ಭಾ.ಭಾ. ೩೪೩) ಎಂದು ತೀರ್ಮಾನಿಸಿ ವಿರಕ್ತನಾದ ಮುಮುಕ್ಷುವಿಗೆ ಜ್ಞಾನ

ವುಂಟಾಗದಿದ್ದರೂ ಬ್ರಹ್ಮಚರ್ಯದಿಂದಲೇ ಪಾರಿವ್ರಾಜ್ಯವನ್ನು ಪಡೆಯುವದೇ ಶ್ರೇಯಸ್ಕರವು (ಭಾ. ಭಾ. ೩೪೩) ಎಂದು ಭಾಷ್ಯಕಾರರು ಹೇಳಿರುತ್ತಾರೆ. ಕುಂಟರು, ಕುರುಡರು- ಮುಂತಾದ ಅನಧಿಕಾರಿಗಳಿಗೆ ಹೇಳಿರುವ ಪಾರಿವ್ರಾಜ್ಯವೂ ಬೇರೆ ಇದೆಯಾದ್ದರಿಂದ ಮುಮುಕ್ಷುಗಳಿಗೆ ಪರಮಹಂಸಪಾರಿವ್ರಾಜ್ಯವು ವಿಹಿತವೆಂಬ ಪಕ್ಷಕ್ಕೆ ಅದರಿಂದ ಅಡ್ಡಿಯಾಗುವದಿಲ್ಲ; ಗಾರ್ಹಸ್ಥ್ಯವೊಂದೇ ಮುಖ್ಯವಾದ ಆಶ್ರಮವು ಎಂಬಿದು ಕ್ಷತ್ರಿಯವೈಶ್ಯರಿಗಾದ್ದರಿಂದ ಮಿಕ್ಕ ಆಶ್ರಮಗಳು ಅಧಿಕಾರಿಗಳಿಗೂ ಉಂಟು (ಭಾ. ಭಾ. ೩೪೪) ಎಂದು ಆಚಾರ್ಯರು ವ್ಯವಸ್ಥೆಯನ್ನು ಮಾಡಿರುತ್ತಾರೆ.

ವಿದ್ವತ್ಸಂನ್ಯಾಸದಂತೆ ವಿವಿದಿಷಾಸಂನ್ಯಾಸದ ವಿಷಯಕ್ಕೂ ಈಗ್ಗೆ ಕೆಲವು ವಿಚಿತ್ರವಾದ ಅಭಿಪ್ರಾಯಗಳು ಈಚಿನ ವೇದಾಂತಿಗಳ ಅಂತಃಕರಣದಲ್ಲಿ ತೂರಿಕೊಂಡಿರುತ್ತವೆ. ಶ್ರವಣಾದ್ಯನುಷ್ಠಾನಕ್ಕಾಗಿ ವಿವಿದಿಷಾಸಂನ್ಯಾಸವನ್ನು ಗ್ರಹಿಸಿದವರು ಶಿಖಾಯಜ್ಞೋಪವೀತಾದಿಗಳನ್ನು ತ್ಯಜಿಸಿದರೂ ದಂಡಕಮಂಡಲ್ವಾದಿ ಪರಿಗ್ರಹಭಿಕ್ಷಾಶನಋತುಕ್ಷೌರತ್ರಿಕಾಲಸ್ನಾನಭಸ್ಮತ್ರಿಪುಂಡ್ರಚಾತುರ್ಮಾಸ್ಯಾನುಷ್ಠಾನಾದಿಗಳನ್ನು ಕಡ್ಡಾಯವಾಗಿ ಮಾಡಬೇಕು ; ಏಕೆಂದರೆ ಇವು ಜ್ಞಾನಕ್ಕೆ ಉಪಕಾರಕವಾಗಿರುತ್ತವೆ. ಈ ಸಹಕಾರಿಸಾಧನಗಳನ್ನು ಬಿಟ್ಟವರು ಪತಿತರು. ಪಾತಂಜಲಯೋಗವನ್ನು ಅಭ್ಯಾಸಮಾಡುವದಕ್ಕೆ ವಿದ್ವತ್ಸಂನ್ಯಾಸವನ್ನು ಸ್ವೀಕರಿಸುವವರಿಗೆ ಮಾತ್ರ ಅನುಜ್ಞಾತವಾಗಿರುವ ದಂಡತ್ಯಾಗಾದಿಗಳನ್ನು ಇವರು ಅನುಷ್ಠಿಸಬಾರದು – ಎಂದು ಈ ವಾದಿಗಳು ಹೇಳುತ್ತಿದಾರೆ.

ಈ ವಿಲಕ್ಷಣಾಭಿಪ್ರಾಯಕ್ಕೆ ಯಾವ ಆಧಾರವಿದೆಯೋ ನಮಗೆ ತಿಳಿಯದು. ಏಕೆಂದರೆ ಜ್ಞಾನಿಗಳಿಗೆ ಸ್ವತಃ ಪ್ರಾಪ್ತವಾಗುವ ಏಷಣಾತ್ರಯತ್ಯಾಗರೂಪವಾದ ಪಾರಿವ್ರಾಜ್ಯವನ್ನೇ ವಿವಿದಿಷಾಸಂನ್ಯಾಸಿಗಳಿಗೂ ಶ್ರುತಿಯಲ್ಲಿ ವಿಧಿಸಿರುತ್ತದೆ (೩-೫-೧, ೪-೪-೨೨) ; ಲೋಕತ್ರಯಕ್ಕೆ ಸಾಧನವಾಗಿರುವ ಗೃಹಸ್ಥಾಶ್ರಮಿಗೆ ವಿಧಿಸಿರುವ ರೂಪದ ಕರ್ಮಗಳು ಆತ್ಮಪ್ರಾಪ್ತಿಗೆ ಸಾಧನವಾಗಲಾರವು ; ಏಕೆಂದರೆ ಒಂದಕ್ಕೆ ಸಾಧನವಾಗಿರುವದನ್ನು ಮತ್ತೊಂದು ಫಲಕ್ಕೆ ಉಪಯೋಗಿಸಿದರೆ ಪ್ರತಿಕೂಲವೇ ಆಗುತ್ತದೆ (೧-೩೫೧)- ಎಂದು ಆಚಾರ್ಯರು ವಿವಿದಿಷಾಸಂನ್ಯಾಸವನ್ನು ಮಾಡಿದವರಿಗೆ ಗೃಹಸ್ಥರಿಗೆ ವಿಹಿತವಾಗಿರುವಂಥ ಕರ್ಮಗಳು ಬೇಕಿಲ್ಲವೆಂದು ಸೂಚಿಸಿಯೂ ಇರುತ್ತಾರೆ. ಹೀಗಿರುವಲ್ಲಿ ನಿಯತವಾಗಿ ದಂಡಧಾರಣ, ದಂಡದಲ್ಲಿ ನಾಗಮುದ್ರಾದಿಸ್ಥಾಪನ, ದಂಡಸ್ನಾನ, ದಂಡತರ್ಪಣ, ಮಹಾವಾಕ್ಯಜಪ- ಮುಂತಾದ ಯಾವ ಶ್ರುತಿಸ್ಮೃತಿಗಳಲ್ಲಿಯೂ ಕಾಣಬರದ ಕರ್ಮಗಳ ಆಚಾರಣೆಯನ್ನು ಈ ವಾದಿಗಳು ಏತಕ್ಕೆ ಪರಮಹಂಸರಮೇಲೂ ಒತ್ತಾಯದಿಂದ ಹೇರುತ್ತಿದಾರೋ ತಿಳಿಯದು. ಕೃತಾರ್ಥರಾದ ಜ್ಞಾನಿಗಳಿಗೆ ಲಕ್ಷಣವೆಂದು ಹೇಳಿರುವದನ್ನೇ ಮುಮುಕ್ಷುಗಳಾದ ಜಿಜ್ಞಾಸುಗಳಿಗೆ ಸಾಧನ

ವೆಂದು ಅಧ್ಯಾತ್ಮಶಾಸ್ತ್ರದಲ್ಲಿ ಉಪದೇಶಮಾಡಿರುತ್ತದೆ ಎಂದು ಗೀತಾಭಾಷ್ಯದಲ್ಲಿ (ಗೀ. ೨-೫೫ ಭಾ. ಭಾ. ೧೦೨) ಆಚಾರ್ಯರು ಹೇಳಿರುತ್ತಾರೆ. ವಿದ್ವತ್ಸಂನ್ಯಾಸಿಗಳಿಗೆ ಇಲ್ಲದ ಆಶ್ರಮಚಿಹ್ನಗಳು ವಿವಿದಿಷುಗಳಿಗೆ ನಿರ್ಬಂಧದಿಂದ ಇರಬೇಕೆನ್ನುವದಕ್ಕೆ ಕಾರಣವಾದರೂ ಏನಿದ್ದೀತು ? ಪರಮಹಂಸಪಾರಿವ್ರಾಜ್ಯಕ್ಕೆ ಯಾವ ಲಿಂಗ (ಆಶ್ರಮಚಿಹ್ನ)ವೂ ಇಲ್ಲವೆಂದೂ ಯಜ್ಞೋಪವೀತಾದಿಸಾಧನಗಳನ್ನೂ ಆಶ್ರಮಚಿಹ್ನವನ್ನೂ ವಿಧಿಸಿರುವದು ಬ್ರಹ್ಮಲೋಕಪ್ರಾಪ್ತಿಗೆ ಸಾಧನವಾಗಿರುವ, ಸ್ಮೃತಿವಿಹಿತವಾದ, ಆಶ್ರಮರೂಪವಾದ, ಅವಿದ್ವತ್ಪಾರಿವ್ರಾಜ್ಯಕ್ಕೆ ಸಂಬಂಧಪಟ್ಟದ್ದೆಂದೂ (ಭಾ. ಭಾ. ೫೬, ೫೮, ೬೦, ೬೧) ಎಂದು ಈ ಉಪನಿಷತ್ತಿನ ಭಾಷ್ಯದಲ್ಲಿದೆ. ವಿವಿದಿಷಾಸಂನ್ಯಾಸಕ್ಕೂ ಆಶ್ರಮಚಿಹ್ನಗಳು ಅತ್ಯವಶ್ಯವಾಗಿದ್ದರೆ ಭಾಷ್ಯಕಾರರು ಅವನ್ನು ಅಜ್ಞರಾದ ಸ್ಮಾರ್ತಸಂನ್ಯಾಸಿಗಳ ವಿಷಯವೆಂದು (ಭಾ. ಭಾ. ೫೬, ೬೧) ಹೇಳುತ್ತಿರಲಿಲ್ಲ.

ಇದಲ್ಲದೆ ಈ ಚಿಹ್ನಗಳು ಜ್ಞಾನಕ್ಕೆ ಸಹಕಾರಿಗಳಾಗಿದ್ದರೆ ಯಾವದಾದರೂ ಶ್ರುತಿಯಲ್ಲಿ ಅಥವಾ ಸ್ಮೃತಿಯಲ್ಲಿ ಹಾಗೆಂದು ಹೇಳಬೇಕಾಗಿತ್ತು ; ಭಾಷ್ಯಕಾರರೂ ಅವಶ್ಯವಾಗಿ ಹಾಗೆಂದು ತಿಳಿಸಬೇಕಾಗಿತ್ತು. ಆದರೆ ಹಾಗೆಂದು ಎಲ್ಲಿಯೂ ಹೇಳಿರುವದಿಲ್ಲ. ಒಂದುವೇಳೆ ಹಾಗೆಂದು ಅವರು ಹೇಳಿದ್ದರೆ, 'ಪಾರಿವ್ರಾಜ್ಯವನ್ನು ಶ್ರುತಿಯಲ್ಲಿ ವಿಧಿಸಿರುವದರಿಂದ ಆತ್ಮಲೋಕಕ್ಕೆ ಕರ್ಮಸಂಬಂಧವಿಲ್ಲ' (೧-೧೮೬), 'ಕರ್ಮದಿಂದ ಅಮೃತತ್ವವು ಸಿಕ್ಕುವದಿಲ್ಲವೆಂದಿರುವದರಿಂದ ಪಾರಿವ್ರಾಜ್ಯವು ಜ್ಞಾನಾಂಗವೆಂದು ವಿಧಿಸುವದಕ್ಕೇ ಮೈತ್ರೇಯಿಬ್ರಾಹ್ಮಣವು ಬಂದಿದೆ' (೧-೩೫೩) ಎಂದು ಅವರು ಬರೆದಿರುವದು ಹೊಂದುಗಡೆಯಾಗುತ್ತಿರಲಿಲ್ಲ ; ಎಲ್ಲಾ ಆಶ್ರಮದವರಿಗೂ ಜ್ಞಾನಕರ್ಮಸಮುಚ್ಚಯಾನುಷ್ಠಾನದಿಂದಲೇ ಮೋಕ್ಷವಾಗುವದು ಎಂದು ವಾದಿಸುವ ಸಮುಚ್ಚಯವಾದಿಗಳ ಪೂರ್ವಪಕ್ಷಕ್ಕೆ ಯಾವ ಸದುತ್ತರವೂ ಆಚಾರ್ಯರ ಸಿದ್ಧಾಂತದಲ್ಲಿ ಉಳಿಯುತ್ತಿರಲಿಲ್ಲ. ಹೀಗಿರುವದರಿಂದಲೇ 'ಪರಮಾತ್ಮನ ಯಾಥಾತ್ಮ್ಯದ ವಿಜ್ಞಾನವುಳ್ಳವನಿಗೆ ಶಮೋಪಾಯವೊಂದು ಹೊರತಾಗಿ ಮತ್ತೆ ಯಾವ ಕರ್ಮವೂ ವಿಹಿತವಾಗಿರುವದು ಕಂಡುಬರುವದಿಲ್ಲ' (೧-೫೬) ಎಂದು ಈ ಉಪನಿಷದ್ಭಾಷ್ಯದಲ್ಲಿ ಹೇಳಿರುವದೂ 'ಪರಿವ್ರಾಜಕನಿಗೆ ಶಮದಮಾದಿಗಳ ಸಹಿತವಾಗಿ ಬ್ರಹ್ಮನಿಷ್ಠನಾಗಿರುವದೇ ಆಶ್ರಮವಿಹಿತಕರ್ಮವು, ಅದನ್ನು ಮೀರಿದರೆ ಮಾತ್ರ ಅವನಿಗೆ ಪ್ರತ್ಯವಾಯವು' ( ಸೂ. ಭಾ. ೩-೪-೨೦, ಭಾ. ಭಾ. ೪೬೦ ) ಎಂದು ಸೂತ್ರಭಾಷ್ಯದಲ್ಲಿ ಬರೆದಿರುವದೂ 'ಧ್ಯಾನಯೋಗಾರೂಢನಾಗಿರುವ ಅವನಿಗೇ ಶಮವು ಎಂದರೆ ಶಾಂತಿಯು, ಸರ್ವಕರ್ಮಗಳನ್ನೂ ಬಿಡುವದು, ಕಾರಣವು, ಎಂದರೆ ಸಾಧನವು' (ಗೀ. ಭಾ. ೬-೩, ಭಾ. ಭಾ. ೩೭೮) –ಎಂದು ಗೀತಾಭಾಷ್ಯದಲ್ಲಿ ಬರೆದಿರುವದೂ ಸಮಂಜಸವಾಗುತ್ತದೆ.

ವಿದ್ವತ್ಸಂನ್ಯಾಸಿಗಳಿಗೆ ಪಾತಂಜಲಯೋಗವು ವಿಹಿತವೆಂಬುದು ಭಾಷ್ಯ ವಿರುದ್ಧವೆಂಬುದನ್ನು ಆಗಲೆ ತಿಳಿಸಿದ್ದಾಗಿದೆ. ಜ್ಞಾನಕ್ಕೆ ಅಂತರಂಗವಾಗಿರುವ ಯೋಗವೆಂದು ಶ್ರುತಿಯಲ್ಲಿಯೂ ಗೀತೆಯಲ್ಲಿಯೂ ವಿಹಿತವಾಗಿರುವದು ಧ್ಯಾನ ಯೋಗವೆಂಬ ಹೆಸರಿನಿಂದ ಪ್ರಸಿದ್ಧವಾಗಿರುವ ನಿದಿಧ್ಯಾಸನವೇ ಆಗಿದೆ. ಅದು ವಿವಿದಿಷುಗಳಿಗೇ ವಿಹಿತವಾಗಿದೆ ಎಂಬುದು ನಿಃಸಂಶಯವಾಗಿದೆ. ಹೀಗಿದ್ದರೂ ಯೋಗಿಗಳಾದ ಪರಮಹಂಸರಿಗೆ ದಂಡಗ್ರಹಣಾದಿಗಳು ವಿಕಲ್ಪಿತವೆಂದು ಹೇಳುವ ಕೆಲವು ಬಿಡಿಉಪನಿಷದ್ವಚನಗಳ ಬಲದಿಂದ ಈಗಿನವರು ಯೋಗಿಗಳೆಂದರೆ ಪಾತಂಜಲಯೋಗವನ್ನು ಅಭ್ಯಾಸಮಾಡುವ ವಿದ್ವತ್ಸಂನ್ಯಾಸಿಗಳು ಎಂದೇ ಹರ ದಿಂದ ಅರ್ಥಮಾಡುತ್ತಿರುತ್ತಾರೆ. ಇದಕ್ಕೆ ಕಾರಣವನ್ನು ಅವರೇ ಹೇಳಬೇಕು.

ಧ್ಯಾನಯೋಗದಲ್ಲಿ ನಿರತನಾದ ಮುಮುಕ್ಷುವಿಗೆ ಧ್ಯಾನಕ್ಕಿಂತ ಬೇರೆಯಾದ ಮಂತ್ರಜಪಾದಿಕರ್ತವ್ಯವುಕೂಡ ಇಲ್ಲವೆಂದು ಗೀತಾಭಾಷ್ಯದಲ್ಲಿ (ಗೀ. ಭಾ. ೧೮–೫೩, ಭಾ. ಭಾ. ೫೬೧) ಹೇಳಿರುವ ಆಚಾರ್ಯರು ದಂಡಸ್ನಾನಾದಿಗಳನ್ನೂ ಮಹಾವಾಕ್ಯಜಪಾದಿಗಳನ್ನೂ ಜ್ಞಾನೋಪಕಾರಕವೆಂದು ಒಪ್ಪಿರುತ್ತಾರೆಂಬುದು ಹಾಸ್ಯಾಸ್ಪದವಾದ ಮಾತೆಂದು ನಮಗೆ ತೋರುತ್ತದೆ. ಜ್ಞಾನಕ್ಕೆ ಅಂಗವೆಂದೂ (೧–೩೫೧, ೩೫೩), ಜ್ಞಾನಪರಿಪಾಕಕ್ಕೆ ಹೇತುವೆಂದೂ (ಭಾ. ಭಾ. ೨೮೧) ವಿಧಿಸಿರುವ ಈ ವಿವಿದಿಷಾಸಂನ್ಯಾಸಕ್ಕೆ ಶ್ರುತಿಸ್ಮೃತಿಗಳಲ್ಲಿ ವಿಧಿಸಿರುವ ಶಾಂತಿ ದಾಂತ್ಯಾದಿಗಳು, ಅಮಾನಿತ್ವಾದಿಗಳು, ಪಾಂಡಿತ್ಯಬಾಲ್ಯಾದಿಗಳು (ಭಾ. ಭಾ. ೬೨) –ಇಂಥ ಯಮಪ್ರಧಾನವಾದ (ಭಾ. ಭಾ. ೩೪೩) ಸಾಧನಗಳಲ್ಲದೆ ಚಿತ್ತವಿಕ್ಷೇಪ ಕರವಾದ ಯಾವ ನಿಯಮಗಳಾದರೂ ವಿಹಿತವಾಗಿದ್ದಾವೆ? ಇದನ್ನು ವೇದಾಂತ ದಲ್ಲಿಯೂ ಜ್ಞಾನಸಾಧನಗಳಲ್ಲಿಯೂ ಪೂಜ್ಯಬುದ್ಧಿಯಿರುವ ವಿದ್ವಾಂಸರು ಆಲೋಚಿಸಿ ನಮ್ಮ ಹೇಳಿಕೆಯ ಯುಕ್ತಾಯುಕ್ತತೆಯನ್ನು ಪರೀಕ್ಷಿಸಬೇಕೆಂದು ಪ್ರಾರ್ಥಿಸುತ್ತೇವೆ.

## ಭರ್ತೃಪ್ರಪಂಚರ ಅಭಿಪ್ರಾಯಗಳ ಪರಾಮರ್ಶೆ

ಈ ಭಾಷ್ಯದಲ್ಲಿ ಪೂರ್ವಪಕ್ಷವಾಗಿ ಆಚಾರ್ಯರು ಪರಾಮರ್ಶಿಸಿರುವ ಮತಗಳಲ್ಲಿ ಭರ್ತೃಪ್ರಪಂಚರ ಮತವು ಮುಖ್ಯವೆಂದು ಈ ಉಪನಿಷದ್ಭಾಷ್ಯದ ಒಂದನೆಯ ಸಂಪುಟದಲ್ಲಿ ಹೇಳಿಟ್ಟಿರುತ್ತೇವಷ್ಟೆ. ಈ ಭರ್ತೃಪ್ರಪಂಚರ ಅಭಿಪ್ರಾಯಗಳನ್ನು ಭಾಷ್ಯಕಾರರು ಮತ್ತೆಮತ್ತೆ ಖಂಡನೆಗೆ ತೆಗೆದುಕೊಂಡಿರು ವದು ಕಾಣಬರುತ್ತದೆ. ಭಾಷ್ಯದಲ್ಲಿ ಭರ್ತೃಪ್ರಪಂಚರೆಂಬ ಹೆಸರು ಎಲ್ಲಿಯೂ ಇರುವದಿಲ್ಲವಾದರೂ ವಾರ್ತಿಕಕಾರರೂ ಟೀಕಾಕಾರರೂ ಅಲ್ಲಲ್ಲಿ ಅವರ ಹೆಸರನ್ನು ಉಲ್ಲೇಖಿಸಿ ಅವರ ಭಾಷ್ಯವಾಕ್ಯಗಳನ್ನೂ ಉದಾಹರಿಸಿಕೊಂಡಿರುತ್ತಾರೆ. ಇಷ್ಟೊಂದು ಸಲ ಪರಾಮರ್ಶಿಸಿರುವ ಈ ಭಾಷ್ಯದ ಪ್ರಭಾವವು ಆಗ್ಗೆ ಹೆಚ್ಚಿನ

ಪ್ರಮಾಣದಲ್ಲಿತ್ತೆಂದು ನಾವು ನಂಬಬಹುದಾಗಿದೆ. ವಾರ್ತಿಕಕಾರರಂತೂ ಭಾಷ್ಯದಲ್ಲಿ ನಿರ್ದೇಶಿಸದೆ ಇರುವ ಅನೇಕ ಅಭಿಪ್ರಾಯಗಳನ್ನು 'ಶ್ರೀಮದ್ಭರ್ತೃಪ್ರಪಂಚರ' ಮತವೆಂದು ಪರಾಮರ್ಶಿಸಿ ಅವುಗಳಲ್ಲಿ ಕೆಲವನ್ನು ಅಂಗೀಕರಿಸಿಯೂ ಇರುತ್ತಾರೆ; ಹಲವನ್ನು ಖಂಡಿಸಿರುತ್ತಾರೆ. ಹೀಗೆ ವಾರ್ತಿಕಕಾರರ ಕಾಲದಲ್ಲಿಯೇ ಅಲ್ಲದೆ ಟೀಕಾಕಾರರಾದ ಆನಂದಗಿರಿಗಳ ಕಾಲದಲ್ಲಿಯೂ ಭರ್ತೃಪ್ರಪಂಚವೃತ್ತಿಯು ಉಪಲಬ್ಧವಾಗಿತ್ತೆಂದು ಗೊತ್ತಾಗಿರುವದರಿಂದ ಈಗಲೂ ಪ್ರಾಚೀನಪುಸ್ತಕಸಂಗ್ರಹಾಲಯಗಳಲ್ಲಿ ಶೋಧಿಸಿದರೆ ಆ ಗ್ರಂಥವು ಸಿಕ್ಕುವ ನಿರೀಕ್ಷಣೆಯನ್ನು ಮಾಡಬಹುದಾಗಿದೆ. ಅದು ಪೂರ್ಣವಾಗಿ ದೊರೆಯದಿರುವ ಈ ಕಾಲಕ್ಕೆ ಉಪಲಬ್ಧವಾಗಿರುವಷ್ಟು ವಾಕ್ಯಗಳಿಂದಾದರೂ ಭರ್ತೃಪ್ರಪಂಚರ ಪ್ರಕ್ರಿಯೆಯ ರೂಪರೇಖೆಯನ್ನು ನಿರ್ಧರಿಸುವದು ಆಚಾರ್ಯರ ಹಿಂದಿನ ವೇದಾಂತವಿಚಾರದ ಇತಿಹಾಸರಚನೆಗೆ ಹೆಚ್ಚಿನ ಸಹಾಯವನ್ನು ಮಾಡುವದರಲ್ಲಿ ಸಂಶಯವಿಲ್ಲ. ಅಂಥ ರೂಪರೇಖೆಯೊಂದನ್ನು ಈ ಭಾಷ್ಯಸಂಪುಟಕ್ಕೆ ಪರಿಶಿಷ್ಟವಾಗಿ ಜೋಡಿಸಬೇಕೆಂಬ ಆಶೆಯು ನಮಗೆ ಬಲವಾಗಿದ್ದಿತು. ಆದರೆ ಸ್ಥಲಸಂಕೋಚದಿಂದಲೂ ಕಾಲಸಂಕೋಚದಿಂದಲೂ ಅದು ಆಗಲಿಲ್ಲ.[1] ಆದ್ದರಿಂದ ಸದ್ಯಕ್ಕೆ ಭಾಷ್ಯದಲ್ಲಿ ಪರಾಮೃಷ್ಟವಾಗಿರುವ ಮುಖ್ಯಪ್ರಕ್ರಿಯಾಂಶಗಳನ್ನು ಮಾತ್ರ ಇಲ್ಲಿ ಉದಾಹರಿಸಿ ಆಚಾರ್ಯರು ತಮ್ಮ ಸಿದ್ಧಾಂತದ ಯಾವ ಭಾಗವನ್ನು ಸ್ಫುಟಗೊಳಿಸುವದಕ್ಕಾಗಿ ಅದನ್ನು ನಿಮಿತ್ತವಾಗಿ ಮಾಡಿಕೊಂಡಿರುತ್ತಾರೆಂಬುದನ್ನು ದಿಗ್ದರ್ಶನಮಾಡುವದರಿಂದಲೇ ತೃಪ್ತರಾಗಬೇಕಾಗಿದೆ.

## (೧) ದ್ವೈತಾದ್ವೈತಬ್ರಹ್ಮವಾದ

ಭರ್ತೃಪ್ರಪಂಚರು **ಭೇದಾಭೇದವಾದಿಗಳು.** ದ್ವೈತವೂ ಅದ್ವೈತವೂ ಎರಡೂ ಪರಮಾರ್ಥವೇ. ಸಮುದ್ರವೂ ಅದರ ತೆರೆನೊರೆಗುಳ್ಳೆ ಮುಂತಾದವುಗಳೂ ಸತ್ಯವಾಗಿರುವಂತೆಯೇ ಇದು. ದ್ವೈತವು ತೆರೆನೊರೆ ಮುಂತಾದವು

1. ವಾರ್ತಿಕಟೀಕಾಕಾರರೂ ಭಾಷ್ಯಟೀಕಾಕಾರರೂ ಒಬ್ಬರೊ, ಬೇರೆಬೇರೆ ಇಬ್ಬರೊ? – ಎಂಬ ಪ್ರಶ್ನೆಯೊಂದು ಉತ್ತರವನ್ನು ಕಾದುಕೊಂಡಿತ್ತು. ಅವರು ಇಬ್ಬರಾದರೆ ಭರ್ತೃಪ್ರಪಂಚರ ವಾಕ್ಯಗಳನ್ನು ಇಬ್ಬರು ಸಂಗ್ರಹಿಸಿದ್ದರೆಂದು ಸಿದ್ಧವಾಗುತ್ತದೆ. ಆದರೆ ಈ ಪ್ರಶ್ನೆಯನ್ನು ಬಿಚ್ಚುವದೂ ನಮಗೆ ಇಲ್ಲಿ ಆಗಿರುವದಿಲ್ಲ. ವಾರ್ತಿಕಕಾರರ ಮತಭೇದಗಳನ್ನು ಅಲ್ಲಲ್ಲಿ ಟಿಪ್ಪಣಿಯಲ್ಲಿ ಸೂಚಿಸಿರುತ್ತೇವಾದರೂ ಭಾಷ್ಯಕಾರರ ಮತವನ್ನೂ ವಾರ್ತಿಕಕಾರರ ಪ್ರಕ್ರಿಯೆಯನ್ನೂ ಇಲ್ಲಿಯೇ ಹೋಲಿಸಿ ತಾರತಮ್ಯವನ್ನು ನಿರ್ಧರಿಸುವದು ಸರಿಯೆಂತ ನಮಗೆ ತೋರಲಿಲ್ಲ. ವಾರ್ತಿಕವನ್ನು ಯಾವಾಗಲಾದರೂ ಅನುವಾದಿಸುವ ಸಂಧಿ ದೊರಕಿದರೆ ಆಗ ಆ ಕೆಲಸವನ್ನು ಮಾಡಬಹುದು. ಭರ್ತೃಪ್ರಪಂಚರ ಪ್ರಕ್ರಿಯೆಯ ರೂಪರೇಖೆಯು ಆ ಸಂದರ್ಭದಲ್ಲಿಯೋ ಅಥವಾ ಸ್ವತಂತ್ರವಾಗಿಯೋ ಒಂದು ಹೊತ್ತಗೆಯ ರೂಪದಲ್ಲಿಯೋ ಬೆಳಕನ್ನು ಕಾಣಬೇಕಾಗಿದೆ.

ಗಳಂತೆ ; ಪರಬ್ರಹ್ಮವು ಸಮುದ್ರದ ನೀರಿನಂತೆ. ಕಾರ್ಯಕಾರಣಗಳೆರಡೂ ಸತ್ಯವೆಂದು ಹೇಳದಿದ್ದರೆ ದ್ವೈತವು ಅವಿದ್ಯಾಕೃತವೆಂದಾಗಿ ಕರ್ಮಕಾಂಡವು ಅಪ್ರಮಾಣವಾದೀತು; ಅದ್ವೈತವನ್ನು ಪ್ರತಿಪಾದಿಸುವ ಉಪನಿಷತ್ತೊಂದೇ ಪ್ರಮಾಣವೆನಿಸೀತು. ಆದ್ದರಿಂದ ಈ ವಿರೋಧಪರಿಹಾರಕ್ಕಾಗಿ 'ಪೂರ್ಣಮದಃ ಪೂರ್ಣಮಿದಮ್' ಎಂಬ ಶ್ರುತಿಯು ಕಾರ್ಯಕಾರಣಗಳೆರಡೂ ಸತ್ಯವೆಂದು ಹೇಳಿದೆ ಎಂಬುದು ಭರ್ತೃಪ್ರಪಂಚರ ಮುಖ್ಯಪ್ರಕ್ರಿಯೆ (ಭಾ. ಭಾ. ೩೪೯). ಬ್ರಹ್ಮವು ಏಕವೂ ಅನೇಕವೂ ಆಗಿದೆ ಎಂಬ ಈ ಮತವನ್ನು ಸೂತ್ರಭಾಷ್ಯ ದಲ್ಲಿಯೂ (೨-೧-೧೪, ಭಾ. ಭಾ. ೪೩೫) ವೃಕ್ಷಸಮುದ್ರಾದಿಗಳ ದೃಷ್ಟಾಂತ ದಿಂದ ವರ್ಣಿಸಿ ಖಂಡಿಸಿದೆ.

ಮೇಲೆ ವೇದೈಕದೇಶಾಪ್ರಾಮಾಣ್ಯವೆಂಬ ದೋಷವನ್ನು ಅದ್ವೈತದ ಮೇಲೆ ಆರೋಪಿಸಿದೆಯಷ್ಟೆ ? ಇದರಿಂದ ಭರ್ತೃಪ್ರಪಂಚರಿಗಿಂತ ಮೊದಲೇ ಶಂಕರಾಚಾರ್ಯಸಮ್ಮತವಾದ ಅದ್ವೈತವೇದಾಂತಸಂಪ್ರದಾಯವೂ ಇದ್ದಿ ತೆಂದೂ[1] ಅದನ್ನು ಅವರು ಖಂಡಿಸಿದ್ದಕ್ಕೆ ಪ್ರತ್ಯುತ್ತರವಾಗಿ ಆಚಾರ್ಯರು ಬೃಹದಾರಣ್ಯಕಭಾಷ್ಯವನ್ನು ಬರೆದರೆಂದೂ ವ್ಯಕ್ತವಾಗುತ್ತದೆ. ಆಚಾರ್ಯರು ಭ. ಪ್ರ. ರ[2] ಆಕ್ಷೇಪಕ್ಕೆ ಹೇಳಿರುವ ಪರಿಹಾರದ ಸಾರವಿದು: ವಸ್ತುವಿನಲ್ಲಿ ಕ್ರಿಯೆಯಲ್ಲಿರುವಂತೆ ಉತ್ಸರ್ಗಾಪವಾದಗಳಾಗಲಿ ವಿಕಲ್ಪವಾಗಲಿ ಇರುವದು ಸಾಧ್ಯವಲ್ಲ. ಆದ್ದರಿಂದ ಬ್ರಹ್ಮವು ಅದ್ವೈತವು ಎಂದು ಸಾಮಾನ್ಯವಾಗಿ ಒಪ್ಪಿ ಅದರ ಒಂದು ಭಾಗದಲ್ಲಿ ಅದ್ವೈತತತ್ತ್ವವಿಲ್ಲವೆಂಬುದಾಗಲಿ, ತತ್ತ್ವವು ದ್ವೈತವೋ ಅದ್ವೈತವೋ ಆಗಿರಬೇಕೆಂದು ವಿಕಲ್ಪಿಸುವದಾಗಲಿ, ಅಥವಾ ಒಂದೇ ತತ್ತ್ವವು ದ್ವೈತವೂ ಅದ್ವೈತವೂ ಆಗಿದೆ ಎಂದು ವಿರುದ್ಧವಾಗಿ ಹೇಳುವದಾಗಲಿ, ಆಗಲಾರದು. ಶ್ರುತಿಯಲ್ಲಿ ಬ್ರಹ್ಮವು ಉಪ್ಪಿನಹರಳಿನಂತೆ

---

1. ಅರವಿಂದರು ಭಾಗವತಜೀವನ (Life Divine) ಎಂಬ ತಮ್ಮ ಗ್ರಂಥದಲ್ಲಿ ಭೇದಾಭೇದವೇ ಪ್ರಾಚೀನವೇದಾಂತವೆಂದು ಬರೆದುಕೊಂಡಿರುತ್ತಾರೆ. ಆದಕ್ಕೆ ಭರ್ತೃ ಪ್ರಪಂಚರ ಮತವೇ ಆಧಾರವಾಗಿರಬಹುದು. ಆದರೆ ಅದ್ವೈತವು ಅದಕ್ಕಿಂತಲೂ ಪ್ರಾಚೀನ ವಾಗಿದ್ದಿತೆಂದೂ ದ್ರವಿಡಾಚಾರ್ಯರೇ ಮುಂತಾದ ಸಂಪ್ರದಾಯಜ್ಞರು ಆ ಸಿದ್ಧಾಂತ ಕ್ಕನುಗುಣವಾಗಿ ಗ್ರಂಥರಚನೆಯನ್ನು ಮಾಡಿದ್ದರೆಂದೂ ನಾವು ಈ ಉಪನಿಷದ್ಭಾಷ್ಯದ ಒಂದನೆಯ ಭಾಗದ ಪೀಠಿಕೆಯಲ್ಲಿ ಆಗಲೆ ತಿಳಿಸಿರುತ್ತೇವೆ. ಆದ್ದರಿಂದ ಅದ್ವೈತ, ದ್ವೈತಾದ್ವೈತ-ಈ ಸಂಪ್ರದಾಯಗಳಲ್ಲಿ ಯಾವದು ಪ್ರಾಚೀನತರವೆಂಬುದು ಸದ್ಯಕ್ಕೆ ಇತ್ಯರ್ಥವಾಗಿಲ್ಲವೆಂದೇ ಇಟ್ಟುಕೊಳ್ಳಬೇಕಾಗಿದೆ.

2. ಭ. ಪ್ರ. ಎಂಬ ಸಂಕ್ಷೇಪವನ್ನು ಭರ್ತೃಪ್ರಪಂಚ ಎಂಬ ಹೆಸರಿನ ಬದಲು ಈ ಪೀಠಿಕೆಯಲ್ಲಿ ಉಪಯೋಗಿಸಲಾಗಿದೆ.

ಚೈತನ್ಯೈಕರಸವಾಗಿರುವದೆಂದು ಹೇಳಿದೆ; ದ್ವೈತವನ್ನು ನಿಂದಿಸಿಯೂ ಇದೆ; ಅನೇಕಾತ್ಮಕವಾದದ್ದು ಅನಿತ್ಯವಾಗಿರುವದೆಂಬ ಯುಕ್ತಿಯೂ ಇದೆ. ಆದ್ದರಿಂದ ಈ ಸಿದ್ಧಾಂತವು ಶ್ರುತಿಯುಕ್ತಿವಿರುದ್ಧ (ಭಾ. ಭಾ. ೩೫೧, ೩೫೨) ಎಂಬುದು ಆಚಾರ್ಯರ ಮತ.

ಅದ್ವೈತಪ್ರಕ್ರಿಯೆಯಲ್ಲಿ ಶಾಸ್ತ್ರಕ್ಕೆ ಅಪ್ರಾಮಾಣ್ಯವಿಲ್ಲ. ಏಕೆಂದರೆ ಕರ್ಮಕಾಂಡವು ಅಜ್ಞರಿಗೆ ಆಯಾ ಫಲಕ್ಕಾಗಿ ಕರ್ಮವನ್ನು ವಿಧಿಸುತ್ತದೆ; ಜ್ಞಾನಕಾಂಡವು ಮೋಕ್ಷಾರ್ಥಿಗಳಿಗೆ ಆತ್ಮೈಕತ್ವವನ್ನು ಉಪದೇಶಿಸುತ್ತದೆ. ಹೀಗೆ ಇಲ್ಲಿ ಶಾಸ್ತ್ರಾಪ್ರಾಮಾಣ್ಯದೋಷವಿಲ್ಲ. ಬ್ರಹ್ಮವು ದ್ವೈತಾದ್ವೈತರೂಪ ವೆಂದು ಒಪ್ಪಿದರೆ ಆ ಬ್ರಹ್ಮಕ್ಕೆ ವ್ಯತಿರಿಕ್ತವಾಗಿ ಉಪದೇಶವಾಗಲಿ ಉಪದೇಶಕ ನಾಗಲಿ ಇರುವಂತಿಲ್ಲವಾದ್ದರಿಂದ ದ್ವೈತಾದ್ವೈತಪ್ರಕ್ರಿಯೆಯಲ್ಲಿಯೇ ಶಾಸ್ತ್ರ ಪ್ರಾಮಾಣ್ಯವು ಬಂದೊದಗುತ್ತದೆ – ಎಂದು (ಭಾ. ಭಾ. ೩೫೩, ೩೫೪) ಆಚಾ ರ್ಯರು ತಿಳಿಸಿರುತ್ತಾರೆ. ಶಾಸ್ತ್ರವು ಅದ್ವೈತಪರವಾದರೆ ಪ್ರತ್ಯಕ್ಷಾದಿಗಳಿಗೂ ಕರ್ಮಕಾಂಡಕ್ಕೂ ಪ್ರಾಮಾಣ್ಯವು ತಪ್ಪುವದಲ್ಲದೆ ಉಪನಿಷತ್ತು ಸ್ವಾರ್ಥವಿ ಘಾತಕವಾಗುವದು; ಆತ್ಮೈಕತ್ವವು ಪರಮಾರ್ಥವಾದರೆ ಉಪದೇಶಾನರ್ಥಕ್ಯವೂ ಬರುವದು– ಎಂದು ಆಕ್ಷೇಪಿಸಿಕೊಂಡು ಆಚಾರ್ಯರು ಪ್ರಮಾಣಗಳಿಗೆ ಪರಸ್ಪರ ವಿರೋಧವಿಲ್ಲವೆಂದೂ ಅದ್ವೈತಸಿದ್ಧಾಂತವು ನಿರ್ದುಷ್ಟವೆಂದೂ (೧–೩೨೧ರಿಂದ ೩೨೦ರವರೆಗೆ) ವಿಸ್ತಾರವಾಗಿ ಪ್ರತಿಪಾದಿಸಿರುವದೂ ಭ. ಪ್ರ. ರಿಗೆ ಉತ್ತರ.

## (೨) ಬ್ರಹ್ಮದ ಅವಸ್ಥೆಗಳು

ಮಹಾಸಮುದ್ರದಂತೆ ಅಲುಗಾಡದ ಅವಸ್ಥೆಯು ಅಕ್ಷರವು, ಸ್ವಲ್ಪಮಟ್ಟಿಗೆ ಅಲುಗಾಡಿದ ಅವಸ್ಥೆಯು ಅಂತರ್ಯಾಮಿ, ತೀರ ಅಲುಗಾಡಿದ ಅವಸ್ಥೆಯು ಕ್ಷೇತ್ರಜ್ಞನು –ಎಂದು ಮುಂತಾಗಿ ಬ್ರಹ್ಮಕ್ಕೆ ಎಂಟು ಅವಸ್ಥೆಗಳುಂಟೆಂಬುದನ್ನು ಸಮುದ್ರ ಮತ್ತು ತೆರೆನೊರೆಗುಳ್ಳೆಗಳ ದೃಷ್ಟಾಂತದಿಂದ ಭರ್ತೃಪ್ರಪಂಚರು (ಭಾ. ಭಾ. ೯೩) ಪ್ರತಿಪಾದಿಸಿರುತ್ತಾರೆ.

ಇಲ್ಲಿಯೂ ಆಚಾರ್ಯರು ಒಂದೇ ವಸ್ತುವಿಗೆ ವಿರುದ್ಧವಾದ ಅನೇಕಾವಸ್ಥೆ ಗಳಿರಲಾರವು ಎಂಬ ದೋಷವನ್ನು ಈ ಮತದಲ್ಲಿ ಹೇಳಿದ್ದಾರೆ. ಅಂತರ್ಯಾ ಮ್ಯಾದಿಗಳಿಗೆ ಉಪಾಧಿಕೃತವಾದ ಭೇದವಲ್ಲದೆ ಮತ್ತೆಯಾವ ಭೇದವೂ ಇಲ್ಲ (ಭಾ. ಭಾ. ೯೩, ೯೪) ಎಂಬ ತಮ್ಮ ಸಿದ್ಧಾಂತವನ್ನು ವಿವರಿಸಿದ್ದಾರೆ. ಈ ಸಿದ್ಧಾಂತವನ್ನು ಅವಲಂಬಿಸಿದರೆ ಹಿರಣ್ಯಗರ್ಭಾದಿಗಳನ್ನು ಈಶ್ವರನೆಂದು ಕೆಲವು ಶ್ರುತಿಗಳೂ, ಜೀವರೆಂದು ಮತ್ತೆ ಬೇರೆಯ ಶ್ರುತಿಗಳೂ ಹೇಳಿರುವದೂ ಜೀವರುಗಳನ್ನು ಬ್ರಹ್ಮಸ್ವರೂಪರೆಂದು ಉಪದೇಶಿಸಿರುವದೂ (೧–೧೧೩) ಪರ

ಮಾತ್ಮನಿಗೆ ವಿರುದ್ಧಧರ್ಮಗಳನ್ನು ಹೇಳಿರುವದೂ (೧-೩೯೮) ಅವಿರುದ್ಧವಾಗುತ್ತದೆ ಎಂಬುದು ಆಚಾರ್ಯರ ಅಭಿಪ್ರಾಯವು.

## (೩) ಜೀವಸ್ವರೂಪದ ವರ್ಣನೆ

ಪರಮಾತ್ಮನು ಜಗತ್ತನ್ನು ಸೃಷ್ಟಿಸಿ ಅದರೊಳಗೆ ಹೊಕ್ಕಿರುತ್ತಾನೆ ಎಂಬಲ್ಲಿ ಪರಮಾತ್ಮನಿಗೇ ಸಂಸಾರಿತ್ವ ಬಂದೊದಗದೆ ಇರುವದಕ್ಕಾಗಿ ಅವನು **ವಿಜ್ಞಾನಾತ್ಮನೆಂಬ ವಿಕಾರ**ರೂಪವನ್ನು ಪಡೆದು ಒಳಹೊಕ್ಕಿರುತ್ತಾನೆಂದೂ ಅವನು ಪರಮಾತ್ಮನಿಗಿಂತ ಭಿನ್ನಾಭಿನ್ನನೆಂದೂ (೧-೧೨೨, ೧-೩೧೩) ಭರ್ತೃಪ್ರಪಂಚರು ವರ್ಣಿಸಿರುತ್ತಾರೆ. ಕ್ಷೇತ್ರಜ್ಞಸ್ವರೂಪವು ಪರಮಾತ್ಮನ ಅತ್ಯಂತ ಪ್ರಚಲಿತಾವಸ್ಥೆ ಎಂಬ (ಭಾ.ಭಾ. ೯೩) ಅವರ ಮತವನ್ನು ಆಗಲೆ ತಿಳಿಸಿದ್ದಾಗಿದೆ. ಅಲ್ಲಿ ವಿಜ್ಞಾನಾತ್ಮದ್ವಾರದಿಂದ ಪರಮಾತ್ಮನು ವಿಕಾರವಾಗುತ್ತಾನೆಂದೂ ಅವರು ಹೇಳಿರುತ್ತಾರೆ (ಭಾ. ಭಾ. ೩೪೫). ಜೀವ, ವಿಜ್ಞಾನಮಯಾತ್ಮ, ವಿಜ್ಞಾನಾತ್ಮ, ಕ್ಷೇತ್ರಜ್ಞ – ಇವೆಲ್ಲ ಅವರ ಮತದಲ್ಲಿಯೂ ಪರ್ಯಾಯಗಳೇ ಆಗಿವೆ. ವಿಜ್ಞಾನಮಯನು ಎಂದರೆ ಪರಮಾತ್ಮವಿಜ್ಞಪ್ತಿವಿಕಾರವು ಎಂಬುದು (ಭಾ. ಭಾ. ೧೭೧) ಅವರ ಮತ. ಪ್ರವೇಶಶ್ರುತಿಯು ಪ್ರವೇಶಪರವಲ್ಲ; ಸೃಷ್ಟಿಗೆ ಮೊದಲು ತಿಳಿಯಬರದೆ ಇರುವ ಆತ್ಮನು ಸೃಷ್ಟಿಯಾದ ಬಳಿಕ ವ್ಯಾಕೃತಬುದ್ಧಿಯೊಳಗೆ ಕಾಣಬರುತ್ತಾನೆಂಬುದರಮೇಲೆ ಪ್ರವಿಷ್ಟನಾದಂತೆ ತೋರುತ್ತಾನೆ ಎಂಬರ್ಥದಲ್ಲಿ ಈ ಶ್ರುತಿಯನ್ನು ತಿಳಿದುಕೊಳ್ಳಬೇಕು. ಸೃಷ್ಟ್ಯಾದಿ ಶ್ರುತಿಗಳು ಸೃಷ್ಟ್ಯಾದಿಪರವಲ್ಲ, ಆತ್ಮೈಕತ್ವವನ್ನು ತಿಳಿಸುವದಕ್ಕಾಗಿಯೇ ಈ ಸೃಷ್ಟಿಪ್ರವೇಶಗಳನ್ನು ಹೇಳಿದೆ (೧-೧೨೭, ೧-೧೨೮). ಆದ್ದರಿಂದ ವಿಜ್ಞಾನಮಯನು ಪರಮಾತ್ಮಸ್ವರೂಪನೇ, ಏಕೆಂದರೆ ಪರಮಾತ್ಮನ ವಿಜ್ಞಾನದ ವಿಕಾರವೆಂಬುದು ಅಪ್ರಸಿದ್ಧವಾಗಿದೆ (೧-೨೮೭) ಎಂಬುದು ಆಚಾರ್ಯರ ಸಿದ್ಧಾಂತ.

ಮೂರ್ತಾಮೂರ್ತಬ್ರಾಹ್ಮಣದಲ್ಲಿ ಅಮೂರ್ತವೆಂದರೆ ವಾಯ್ವಂತರಿಕ್ಷಗಳು, ಮೂರ್ತವೆಂದರೆ ಮಿಕ್ಕ ಮೂರು ಭೂತಗಳು; ಈ ಎರಡು ರೂಪಗಳಿಗೆ ಕಾರಣವಾದದ್ದು ಇವುಗಳ ರಸವೆನಿಸುವದು. ಬ್ರಹ್ಮಸ್ವರೂಪದಲ್ಲಿ ಮೂರ್ತಾಮೂರ್ತಗಳಾಗಲಿ ಇವುಗಳ ರಸವಾಗಲಿ ಇರುವದಿಲ್ಲ ಎಂದು ಹೇಳಿರುತ್ತದೆಯಷ್ಟೆ? ಆ ಸಂದರ್ಭದಲ್ಲಿ ಅಮೂರ್ತಕ್ಕೆ ಕಾರಣವಾಗಿರುವ **ಹಿರಣ್ಯಗರ್ಭನೆಂಬ ಚೇತನರೂಪನಾದ ವಿಜ್ಞಾನಾತ್ಮನನ್ನೇ ಅಮೂರ್ತರಸವೆಂದಿದೆ– ಎಂಬುದು** (೧-೩೩೯) **ಭ. ಪ್ರ.ರ ಮತ.** ಈ ಭೂತದ್ವಯವು ಅವ್ಯಾಕೃತದಿಂದ ಹುಟ್ಟಿ ಹಿರಣ್ಯಗರ್ಭನ ಲಿಂಗಶರೀರಕ್ಕೆ ಕಾರಣವಾಗಿದೆ (೧-೩೩೮)

ಯಾದ್ದರಿಂದ ಅದು ಅಮೂರ್ತರಸವು ಎಂಬುದು ಭಾಷ್ಯಕಾರರ ಮತವು. ಇದೇ ಸಂದರ್ಭದಲ್ಲಿ ಆಧಿದೈವಿಕಾಧ್ಯಾತ್ಮಿಕವಾಗಿ ಮೂರ್ತಾಮೂರ್ತತದ್ರಸಗಳನ್ನು ತಿಳಿಸಿಕೊಟ್ಟು ಬಳಿಕ 'ಈ ಪುರುಷನ ರೂಪವನ್ನು ತಿಳಿಸಲಾಗುವದು' ಎಂದು ಶ್ರುತಿಯು (೨-೩-೬) 'ಯಥಾ ಮಾಹಾರಜನಂ ವಾಸಃ' ಎಂದು ಮುಂತಾಗಿ ವರ್ಣಿಸಿದೆ. ಇಲ್ಲಿ ಮೂರ್ತಾಮೂರ್ತಗಳಿಗಿಂತ ವಿವಿಕ್ತವಾದ ವಿಜ್ಞಾನಾತ್ಮನ ರೂಪವನ್ನೇ ಹೇಳಿದೆ ಎಂಬುದು ಭ. ಪ್ರ.ರ ಮತವು. ಮೂರ್ತಾಮೂರ್ತ ರಾಶಿಯು ಪ್ರಯೋಜ್ಯ (ಕಾರ್ಯ); ವಿಜ್ಞಾನಮಯಸಹಿತವಿದ್ಯಾಕರ್ಮ ಪೂರ್ವಪ್ರಜ್ಞಾಸಮುದಾಯರಾಶಿಯು ಪ್ರಯೋಜಕವು (ಕಾರಣವು); ಪರಮಾತ್ಮರಾಶಿಯು ಉತ್ತಮವಾದದ್ದು. ಪ್ರಯೋಜಕವಾದ ಕರ್ಮರಾಶಿಯು ನಿಜವಾಗಿ ಲಿಂಗಾಶ್ರಯವಾದರೂ ಹೂವನ್ನು ಬಿಟ್ಟು ಹೂವಿನ ವಾಸನೆಯು ಪುಟತೈಲಾಶ್ರಿತವಾಗಿರುವಂತೆ- ಲಿಂಗವನ್ನು ಬಿಟ್ಟು **ಪರಮಾತ್ಮನ ಏಕ ದೇಶವಾದ ವಿಜ್ಞಾನಾತ್ಮನನ್ನು** ಆಶ್ರಯಿಸಿಕೊಂಡಿರುತ್ತದೆ. ಹೀಗೆ ಲಿಂಗ ದಿಂದ ಬಂದ ಈ ಗುಣದಿಂದ ನಿಜವಾಗಿ ನಿರ್ಗುಣನೇ ಆಗಿರುವ ವಿಜ್ಞಾನಾತ್ಮನು ಸಗುಣನೂ ಕರ್ತೃಭೋಕ್ತೃವೂ ಆಗಿರುತ್ತಾನೆ (೧-೩೪೩) ಎಂದು ಭ. ಪ್ರ.ರು ವರ್ಣಿಸಿರುತ್ತಾರೆ. ವಿಜ್ಞಾನಮಯಶಬ್ದಕ್ಕೆ ಪರಮಾತ್ಮವಿಜ್ಞಪ್ತಿವಿಕಾರವು (ಭಾ. ಭಾ. ೧೭೧) ಎಂದೂ ಅವರು ನಿರ್ವಚನಮಾಡಿರುವದರಿಂದ ಪರಮಾತ್ಮನ ವಿಜ್ಞಾನವು ವಿಜ್ಞಾನಮಯನೆಂಬ ರೂಪಾಂತರವನ್ನು ತಾಳಿರುತ್ತದೆಯಾದರೂ ಪರಮಾತ್ಮನು ತನ್ನ ರೂಪದಿಂದ ಶುದ್ಧನೂ ನಿರ್ಗುಣನೂ ಆಗಿದ್ದು ವಿಜ್ಞಾನಾತ್ಮ ನೆಂಬ ಏಕದೇಶದಲ್ಲಿ ಅಶುದ್ಧನೂ ಸಗುಣನೂ ಆಗಿರುತ್ತಾನೆ ಎಂಬ **ಪರಿಣಾಮ ವಾದವು** ಅವರದೇ ಎನ್ನಬೇಕಾಗುತ್ತದೆ. ಹೀಗೆ ವಿಜ್ಞಾನಾತ್ಮಪರಮಾತ್ಮರು ಗಳಿಗೆ ಭೇದಾಭೇದವನ್ನು ಒಪ್ಪಿರುವದರಿಂದಲೇ ಭ.ಪ್ರ. ರು ಉಷಸ್ತಪ್ರಶ್ನೆಯಲ್ಲಿ ಪ್ರಾಣನಾದಿಲಿಂಗಗಳುಳ್ಳ ವಿಜ್ಞಾನಾತ್ಮನ ವಿಚಾರವಿದೆ, ಅವನನ್ನು ಪರಮಾತ್ಮ ನಲ್ಲಿ ಲಯಗೊಳಿಸುವದಕ್ಕಾಗಿ ಕಹೋಲಪ್ರಶ್ನೆಯಲ್ಲಿ ಪರಮಾತ್ಮಸ್ವರೂಪವನ್ನು ಕುರಿತ ವಿಚಾರವನ್ನು ತಂದಿದೆ (ಭಾ. ಭಾ. ೫೨) -ಎಂದು **ಕ್ಷೇತ್ರಜ್ಞಪರ ಮಾತ್ಮಭೇದವನ್ನು** ಹೇಳಿರುವದು ಹೊಂದುತ್ತದೆ.

ಆಚಾರ್ಯರ ಮತದಲ್ಲಿ ಪರಮಾತ್ಮನಿಗೂ ವಿಜ್ಞಾನಾತ್ಮನಿಗೂ ಯಾವ ಭೇದವೂ ಇರುವದಿಲ್ಲ. ಪರಮಾತ್ಮನೇ ಅವಿದ್ಯೆಯಿಂದ ವಿಜ್ಞಾನಾತ್ಮನೆಂದು ತೋರುತ್ತಾನೆಂಬುದೇ ಅವರ ಮತ. ಆತ್ಮನು ಪರಬ್ರಹ್ಮವೇ ಎಂದು ತಿಳಿಸುವದೇ ಶ್ರುತಿಯ ಉದ್ದೇಶವಾದ್ದರಿಂದ ಭ.ಪ್ರ.ರ ಮತವು ಶ್ರುತಿಯುಕ್ತಿಬಾಹ್ಯವು ಎಂದು (ಭಾ.೧-೩೪೪,೩೪೫) ತೋರಿಸಿಕೊಟ್ಟಿರುತ್ತಾರೆ. ಉಷಸ್ತಪ್ರಶ್ನೆಯಲ್ಲಿ ಬದ್ಧನಾದ ಆತ್ಮನ ಅಸ್ತಿತ್ವವನ್ನು ಹೇಳಿ ಅವನೇ ಪರಮಾರ್ಥವಾಗಿ ಅಸಂಸಾರಿಯಾದ

ಪರಮಾತ್ಮನು ಎಂಬುದನ್ನು ಕಹೋಲಪ್ರಶ್ನದಲ್ಲಿ ವಿವರಿಸಿದೆ ಎಂಬುದು ಅವರ ಮತವು (ಭಾ ಭಾ. ೫೩-೫೪).

**ಸುಷುಪ್ತಾತ್ಮನಿಗೆ ದೃಷ್ಟಿಶ್ರುತಿಮತ್ಯಾದಿಗಳು ಅಲುಪ್ತಸ್ವಭಾವದವಾಗಿರುತ್ತವೆ** ಎಂದು ಶ್ರುತಿಯಲ್ಲಿ ಹೇಳಿದೆ. ಅವು ಆತ್ಮನ ಬೇರೆಬೇರೆಯ ಧರ್ಮಗಳೊ, ಅಥವಾ ಒಂದೇ ಧರ್ಮವು ಔಪಾಧಿಕವಾಗಿ ಬೇರೆಬೇರೆಯಾಗಿ ಕಾಣುತ್ತಿರುವ ರೂಪಭೇದಗಳೊ ?- ಎಂಬ ಸಂಶಯವನ್ನು ಆಚಾರ್ಯರು ತೆಗೆದು ಆತ್ಮನಲ್ಲಿ ಏಕತ್ವವೂ ನಾನಾತ್ವವೂ ಇರುವದರಿಂದ ಆ ಧರ್ಮಗಳು ಪರಸ್ಪರ ಭಿನ್ನವಾಗಿಯೂ ಆತ್ಮರೂಪದಿಂದ ಏಕವಾಗಿಯೂ ಇರುತ್ತವೆ (ಭಾ ಭಾ. ೨೨೮) ಎಂಬ ಭ ಪ್ರ.ರ ಪೂರ್ವಪಕ್ಷವನ್ನು ಒಡ್ಡಿರುತ್ತಾರೆ. ಭೇದಾಭೇದವಾದಪ್ರಕ್ರಿಯೆಗೆ ಇದು ಅನುಗುಣವಾದರೂ ವಸ್ತುವು ದ್ವೈತಾದ್ವೈತವಾಗಿರುವದು ಯುಕ್ತಿಸಮ್ಮತವಲ್ಲ, ಶ್ರುತಿಯು ಇವುಗಳ ಭೇದವನ್ನು ಪ್ರತಿಪಾದಿಸುವದಕ್ಕೆ ಬಂದಿಲ್ಲ; ಶ್ರುತಿಯಲ್ಲಿ ಆತ್ಮನು ಪ್ರಜ್ಞಾನೈಕರಸರೂಪನೆಂದು ಹೇಳಿಯೂ ಇದೆ ; ಆತ್ಮನು ಚಿನ್ಮಾತ್ರನೆಂಬುದಕ್ಕೆ ಯುಕ್ತಿಯೂ ಇದೆ- ಎಂದು ವಿಸ್ತಾರವಾಗಿ ಪರಮತನಿರಸನಪೂರ್ವಕವಾಗಿ (ಭಾ. ಭಾ. ೨೯ರಿಂದ ೩೧) ಆತ್ಮನು ಅಖಂಡಚಿದೈಕರಸನೆಂಬ ಸ್ವಮತವನ್ನು ಉಪಪಾದನಮಾಡಿರುತ್ತಾರೆ. ನಿರ್ವಿಕಾರನೂ ಚಿನ್ಮಾತ್ರನೂ ಆದ ಆತ್ಮನಲ್ಲಿ ದೃಷ್ಟ್ಯಾದಿಕರ್ತೃತ್ವವಾಗಲಿ (ಭಾ. ಭಾ. ೪೭, ೪೮) ಚಕ್ಷೂರೂಪಾದಿಗಳಾಗಿ ಪರಿಣಮಿಸುವ ಸ್ವಭಾವವಾಗಲಿ ಇರುವದಿಲ್ಲ (ಭಾ ಭಾ. ೩೧) ಎಂದು ತೋರಿಸಿಕೊಟ್ಟಿರುತ್ತಾರೆ.

**ಅವಿದ್ಯಾಕಾಮಕರ್ಮಗಳು** ಲಿಂಗದ ಧರ್ಮಗಳಾದರೂ ಆತ್ಮನಿಗೆ ನಿಜವಾಗಿ ಅಂಟಿಕೊಂಡಿರುತ್ತವೆ ಎಂದು ತಿಳಿಸುವದು ಭ.ಪ್ರ.ರ ಪ್ರಕ್ರಿಯೆಯ ಅಸಾಧಾರಣರೂಪವು. ಹೊಲದ ಒಂದು ಭಾಗದಲ್ಲಿ ಎದ್ದುತೋರಿಕೊಳ್ಳುವ ಚೌಳುಭಾಗದಂತೆ **ಅವಿದ್ಯೆಯು** ಪರಮಾತ್ಮನಿಂದಲೇ ಉಂಟಾಗಿ ಅವನ ಒಂದು ಭಾಗವಾದ ಆತ್ಮನಲ್ಲಿ ತೋರಿಕೊಳ್ಳುತ್ತದೆ (೧-೩೪೩), ಕಾಮವು ಪುಷ್ಪಪುಟತೈಲನ್ಯಾಯದಿಂದ ಆತ್ಮನನ್ನು ಆಶ್ರಯಿಸಿಕೊಂಡಿರುತ್ತದೆ (ಭಾ. ಭಾ. ೨೨೦), ವಿದ್ಯಾಕರ್ಮಪೂರ್ವಪ್ರಜ್ಞೆಗಳು ಹೀಗೆಯೇ ಆತ್ಮನನ್ನು ಆಶ್ರಯಿಸಿಕೊಂಡಿವೆ (೧-೩೪೩) -ಎಂಬಿದು ಆ ವೃತ್ತಿಕಾರರ ಪ್ರಕ್ರಿಯೆಯು. ಆದರೆ ಕರ್ತೃತ್ವಭೋಕ್ತೃತ್ವವಾಗಲಿ, ಕಾಮವಾಗಲಿ, ಅವಿದ್ಯೆಯಾಗಲಿ ಆತ್ಮನಿಗೆ ಅಂಟಿಕೊಂಡಿಲ್ಲ ; ಆತ್ಮನು ಕಾರ್ಯಕರಣವ್ಯತಿರಿಕ್ತನೆಂಬುದು ಜಾಗ್ರತ್ಸ್ವಪ್ನಗಳ ಸಂಚಾರದಿಂದ ಸಿದ್ಧವಾಗುತ್ತದೆ; ಅವಿದ್ಯಾಕಾಮಕರ್ಮಗಳ ಸಂಬಂಧವನ್ನು ಮೀರಿರುವ ಸ್ವರೂಪವು ಅವನದೆಂಬುದು ಸುಷುಪ್ತಿಯಲ್ಲಿ ನೇರಾಗಿ ಕಾಣಬರುತ್ತದೆ- ಎಂಬುದನ್ನು ತಿಳಿಸುವದಕ್ಕಾಗಿಯೇ ಶ್ರುತಿಯಲ್ಲಿ **ಅವಸ್ಥಾತ್ರಯಪರೀಕ್ಷೆಯು** ಬಂದಿದೆ

(ಭಾ. ಭಾ. ೨೪೨) ಎಂದು ಆಚಾರ್ಯರು ತಮ್ಮ ಭಾಷ್ಯದಲ್ಲಿ ಮತ್ತೆ ಮತ್ತೆ ಸ್ಪಷ್ಟಗೊಳಿಸಿರುವದು ಭ.ಪ್ರ.ರ ಮತದ ಅಸಾರತೆಯನ್ನು ಹೊರಗೆಡಹುವದಕ್ಕೇ ಅಲ್ಲ, ಶ್ರೌತಪ್ರಕ್ರಿಯೆಯು ಅನುಭವಾರೂಢವೆಂಬುದನ್ನು ತಿಳಿಸುವದಕ್ಕೂ ಉಪ ಯುಕ್ತವಾಗಿದೆ. ಕಾಮಾದಿಗಳು ಹೃದಯಾಶ್ರಿತವೇ, ಆತ್ಮಾಶ್ರಿತವಲ್ಲ- ಎಂಬ ಸ್ವಪಕ್ಷವನ್ನು ಅವರು ಭ.ಪ್ರ.ರ ಪಕ್ಷವನ್ನು ಖಂಡಿಸಿ (ಭಾ. ೨೨೦.೨೨೧,೨೨೨) ಸುಷುಪ್ತಾತ್ಮನು ಹೃದಯದ ಕಾಮಗಳೆಲ್ಲವನ್ನೂ ಮೀರಿರುತ್ತಾನೆ ಎಂಬ ಶ್ರುತಿಯ ಆಧಾರದಿಂದ (ಭಾ.ಭಾ. ೨೧೮) ಸ್ಥಾಪಿಸಿರುತ್ತಾರೆ.

## (೪) ಮೋಕ್ಷಸಾಧನಗಳ ವಿಚಾರ

ಭ. ಪ್ರ. ರು ಸಿದ್ಧಾಂತದಲ್ಲಿ ದ್ವೈತಾದ್ವೈತಿಗಳಾಗಿರುವಂತೆ ಸಾಧನವಿಚಾರ ದಲ್ಲಿ **ಜ್ಞಾನಕರ್ಮಸಮುಚ್ಚಯವಾದಿಗಳಾಗಿದ್ದರು.** ಆದ್ದರಿಂದ ಜ್ಞಾನ ಮಾತ್ರದಿಂದ ಮೋಕ್ಷವೆಂಬ ಆಚಾರ್ಯರ ಸಂಪ್ರದಾಯದ ಸಿದ್ಧಾಂತಕ್ಕೆ ಅವರ ಮತವು ವಿರುದ್ಧವಾಗಿದ್ದಿತು. ಹೀಗಿರುವದರಿಂದ ಕರ್ಮವು ನೇರಾಗಿ ಮೋಕ್ಷಸಾಧನವೆಂಬ ಅಭಿಪ್ರಾಯವನ್ನು ಭ. ಪ್ರ.ರು ಕೊಟ್ಟಿರುವ ಕಡೆಯಲ್ಲೆಲ್ಲ ಅದು ಅವಿದ್ಯಾತ್ಮಕವೆಂಬುದನ್ನು ಆಚಾರ್ಯರು ಮತ್ತೆಮತ್ತೆ ನೆನಪಿಗೆ ಕೊಟ್ಟಿರುತ್ತಾರೆ. ಹೇಗೆಂದರೆ :

(೧) ಅಗ್ನಿಬ್ರಾಹ್ಮಣದ್ವಾರದಿಂದ ಪರಮಾತ್ಮಲೋಕಪ್ರಾಪ್ತಿಯಾಗು ವದು (೧-೧೮೭) ಎಂದು 'ಅಗ್ನಾವೇವ ದೇವೇಷು ಲೋಕಮಿಚ್ಛನ್ತೇ ಬ್ರಾಹ್ಮ ಣೇ ಮನುಷ್ಯೇಷು' (೧-೪-೧೫) ಎಂಬ ಶ್ರುತಿಗೆ ಭ. ಪ್ರ. ರು ಮಾಡಿರುವ ಅರ್ಥವು ಕರ್ಮಕ್ಕೆ ಅಧಿಕಾರವನ್ನು ತಿಳಿಸುವ ವರ್ಣವಿಭಾಗವನ್ನು ಹೇಳುವ ಅವಿದ್ಯಾಪ್ರಕರಣಕ್ಕೆ ಹೊಂದುವದಿಲ್ಲವೆಂದೂ ಮುಂದೆ 'ಸ್ವಂ ಲೋಕಮ್' ಎಂದು ವಾಕ್ಯಶೇಷದಲ್ಲಿ ಹೇಳಿರುವದರಿಂದ ಇದು ಆತ್ಮಲೋಕವಾಗಲಾರದೆಂದೂ ಆಚಾರ್ಯರು ತಿಳಿಸಿರುತ್ತಾರೆ.

(೨) ಕರ್ಮದಿಂದ ಪಿತೃಲೋಕವನ್ನೂ ವಿದ್ಯೆಯಿಂದ ದೇವಲೋಕವನ್ನೂ ಗೆದ್ದುಕೊಳ್ಳಬಹುದೆಂಬ ಶ್ರುತಿಗೆ (೧-೫-೧೬) ಪುತ್ರಕರ್ಮಾಪರವಿದ್ಯೆಗಳ ಸಮುಚ್ಚಯವನ್ನು ಅನುಷ್ಠಾನಮಾಡಿದವನು ಮನುಷ್ಯಪಿತೃದೇವಲೋಕಗಳನ್ನು ಬಿಟ್ಟು ವಿರಕ್ತನಾಗಿ ಪರಮಾತ್ಮವಿಜ್ಞಾನದಿಂದ ಮೋಕ್ಷವನ್ನು ಪಡೆಯುತ್ತಾನೆ. ಎಂಬರ್ಥವನ್ನು ಭ. ಪ್ರ.ರು ಮಾಡಿದ್ದರು. ಇದಕ್ಕೆ ನಾಮರೂಪಕರ್ಮಾತ್ಮಕ ವಾದ ತ್ರ್ಯನ್ನಾತ್ಮಕಫಲವನ್ನು ಹೇಳಿರುವದರಿಂದಲೂ ಅದು ಕ್ಷಯವಾಗುವ ಸಂಭವವುಂಟೆಂದು ಹೇಳಿರುವದರಿಂದಲೂ ಇದು ಮೋಕ್ಷಾರ್ಥಸಾಧನವೆಂಬುದು

ಸರಿಯಲ್ಲ (೧-೨-೩೮) ಎಂದು ಆಚಾರ್ಯರು ಹೇಳಿದ್ದಾರೆ. ಕರ್ಮಸಂಬದ್ಧವಾದ **ಲೋಕವನ್ನು** ಅವ್ಯಾಕೃತಾವಸ್ಥೆಯ ಕಾರಣರೂಪವನ್ನಾಗಿ ಮಾಡಿಕೊಂಡು ಉಪಾಸನೆಮಾಡುವ **ಅಪರಿಚ್ಛಿನ್ನಕರ್ಮಾತ್ಮದರ್ಶಿಯ ಕರ್ಮವು ಕ್ಷಯವಾಗುವದಿಲ್ಲ** (೧-೯೦)- ಎಂಬ ಭ. ಪ್ರ.ರ ಪಕ್ಷಕ್ಕೆ ಶ್ರುತಿಯ ಆಧಾರವಿಲ್ಲ; ಅವರು ನಂಬಿರುವ ಶ್ರುತಿಯು ಆತ್ಮಜ್ಞಾನದ ಫಲವು ನಿತ್ಯವೆಂದು ಹೇಳುತ್ತಿದೆ (೧-೯೧) ಎಂದು ವಿವೇಚಿಸಿರುತ್ತಾರೆ. ಜ್ಞಾನಕರ್ಮಸಮುಚ್ಚಯವನ್ನು ನಿರಭಿಸಂಧಿಯಾಗಿ ಮಾಡಿದರೂ ಮೋಕ್ಷವು ಲಭಿಸಲಾರದು, ಏಕೆಂದರೆ ಮೋಕ್ಷವು ಕಾರ್ಯವಲ್ಲ (ಭಾ. ಭಾ. ೩೧). ಆತ್ಮಯಾಜಿಗೆ, ಎಂದರೆ ನಿಷ್ಕಾಮನಾದ ಸಮುಚ್ಚಯಾನುಷ್ಠಾನವಂತನಿಗೆ, ಕಾರ್ಯಕರಣಸಂಸ್ಕಾರವಾಗಿ ಕ್ರಮಕ್ರಮವಾಗಿ ಆತ್ಮಜ್ಞಾನವು ಉತ್ಪತ್ತಿಯಾಗುವದೆಂಬ ಫಲಾಂತರವುಂಟೆಂಬುದು (ಭಾ. ಭಾ. ೩೬) ಅವರ ಆಶಯ. ಸರ್ವಥಾ ಈ ಉಪನಿಷತ್ತಿನಲ್ಲಿ ಹೇಳಿರುವ ಆತ್ಮಸ್ವರೂಪವು ಕರ್ಮಕ್ಕೆ ಸಂಬಂಧಿಸುವಹಾಗಿಲ್ಲವಾದ್ದರಿಂದ ಅದರ ಪ್ರಾಪ್ತಿಗೆಂದು ಯಾರೂ ಯಾವ ಕರ್ಮವನ್ನೂ ಕೈಗೊಳ್ಳುವ ಸಂಭವವೇ ಇಲ್ಲ; ಸರ್ವಕರ್ಮಫಲಗಳೂ ಜ್ಞಾನಫಲದಲ್ಲಿಯೇ ಅಡಕವಾಗಿಯೂ ಇವೆ (ಭಾ. ಭಾ. ೩೧೨) ಎಂಬಿದು ಆಚಾರ್ಯರ ಮತವು.

(೩) ಬ್ರಹ್ಮಜ್ಞಾನಿಗೂ ಏಷಣಾಸಂಬಂಧವಿರಬಹುದು (೧-೩೫೨), ಮಿಕ್ಕ ಏಷಣೆಗಳನ್ನು ಬಿಟ್ಟರೂ ಅಪರಬ್ರಹ್ಮೋಪಾಸನೆಯ ಬಲದಿಂದಲೇ ಬಿಡಬೇಕಾಗಿರುವದರಿಂದ ದೈವವಿತ್ತವನ್ನು ಬಿಟ್ಟು ಮಾಡುವ ಸಂನ್ಯಾಸವೇ ಇಲ್ಲ (ಭಾ ಭಾ. ೫೬), ಪುತ್ರಾದ್ಯೇಷಣೆಗಳನ್ನು ಬಿಟ್ಟರೂ ಎಲ್ಲಾ ಕರ್ಮಗಳನ್ನೂ ಬಿಡತಕ್ಕದ್ದಲ್ಲ (ಭಾ. ಭಾ. ೫೭), ಪಾರಿವ್ರಾಜ್ಯದಲ್ಲಿಯೂ ಅಧ್ಯಯನಾದಿಕರ್ಮಗಳಿರುವದರಿಂದ ಯಜ್ಞೋಪವೀತಾದಿಗಳನ್ನು ತ್ಯಜಿಸಬಾರದು (ಭಾ. ಭಾ. ೫೭), ಆತ್ಮಜ್ಞಾನಿಯು ಕರ್ಮಗಳನ್ನು ಬಿಟ್ಟರೆ ಅವನಿಗೂ ಪ್ರತ್ಯವಾಯವುಂಟು (ಭಾ. ಭಾ. ೨೬೯) –ಎಂಬ ಭ. ಪ್ರ.ರ ಅಭಿಪ್ರಾಯವನ್ನು ತಿರಸ್ಕರಿಸಿ ಜ್ಞಾನಿಗೆ ಏಷಣಾಸಂಬಂಧವಿದೆ ಎಂಬುದು ಏಷಣಾಸಂಬಂಧವನ್ನು ಅವಿದ್ವಾಂಸರಿಗೂ ಅವುಗಳ ಅಸಂಬಂಧವನ್ನು ಜ್ಞಾನಿಗಳಿಗೂ ಹೇಳುವ ಶ್ರುತಿಗೂ ಕ್ರಿಯಾಕಾರಕಫಲಗಳನ್ನು ಬಾಧಿಸುವ ಆ ಜ್ಞಾನದೊಡನೆ ಅಜ್ಞಾನವು ಇರಲಾರದೆಂಬ ನ್ಯಾಯಕ್ಕೂ ವಿರುದ್ಧವು (೧-೩೫೨)- ಅಪರಬ್ರಹ್ಮವು ಈ ಪರಬ್ರಹ್ಮಾತ್ಮನಿಗಿಂತ ವ್ಯತಿರಿಕ್ತವಾದದ್ದೆಂದು ತಿಳಿಯುವದು ಸರಿಯಲ್ಲವೆಂದು ಶ್ರುತಿಯಲ್ಲಿರುವದರಿಂದ ಆತ್ಮದರ್ಶನವೇ ಏಷಣಾತ್ಯಾಗಕ್ಕೆ ಪ್ರಯೋಜಕವು (ಭಾ. ಭಾ. ೩೧೦). ಸಂನ್ಯಾಸಿಯು ಯಜ್ಞೋಪವೀತವೇ ಮುಂತಾದದ್ದೆಲ್ಲವನ್ನೂ ತ್ಯಾಗಮಾಡಬೇಕೆಂದು ಶ್ರುತಿಯಲ್ಲಿದೆ. ಸಾಧನಫಲರೂಪನಲ್ಲದ ಆತ್ಮನಿಗಿಂತ ಬೇರೆಯ

ವಿಷಯವಾದದ್ದು ಅಜ್ಞಾನದ ವಿಷಯವಾದ ಏಷಣೆಯೇ; ಆದ್ದರಿಂದಲೂ ಯಜ್ಞೋಪವೀತಾದಿಗಳನ್ನು ಸಂನ್ಯಾಸಿಯು ಬಿಟ್ಟುಬಿಡಬೇಕು (ಭಾ. ಭಾ. ೫೮, ೫೯); ಯಜ್ಞೋಪವೀತಾದಿಗಳನ್ನೂ ಆಶ್ರಮಚಿಹ್ನವನ್ನೂ ಧರಿಸಿರಬೇಕೆಂಬುದು ಅಜ್ಞಪರಿವ್ರಾಜಕರಾದ ತ್ರಿದಂಡಿಸಂನ್ಯಾಸಿಗಳ ವಿಷಯವಾದ್ದರಿಂದ ಜ್ಞಾನಿಯು ಸರ್ವಸಾಧನಗಳನ್ನೂ ಆಶ್ರಮಲಿಂಗವನ್ನೂ ಬಿಟ್ಟು ಪಾರಮಹಂಸ್ಯವನ್ನೇ ಸ್ವೀಕರಿಸಬೇಕು (ಭಾ. ಭಾ. ೬೦). ಸರ್ವಾತ್ಮದರ್ಶಿಯಾದವನಿಗೆ ಅನ್ಯವಾದ ಕರ್ಮವಾಗಲಿ ಪ್ರತ್ಯವಾಯವಾಗಲಿ ಇರುವ ಸಂಭವವೇ ಇಲ್ಲ (ಭಾ. ಭಾ. ೨೬೯)- ಎಂದು ಆಚಾರ್ಯರು ತಮ್ಮ ಸಿದ್ಧಾಂತವನ್ನು ಸ್ಪಷ್ಟಪಡಿಸಿರುತ್ತಾರೆ.

ಮುಖ್ಯವಾಗಿ ಅನುಷ್ಠೇಯರೂಪವಾದ ಉಪಾಸನೆಯೇ ಭ ಪ್ರ.ರಿಗೆ **ಜ್ಞಾನಶಬ್ದವಾಚ್ಯವಾದದ್ದು**. ಶಾಸ್ತ್ರದಿಂದ ಪರೋಕ್ಷಜ್ಞಾನವಾಗಬೇಕು, ಭಾವನಾಜ್ಞಾನಸಂತಾನದಿಂದ ಸಾಕ್ಷಾತ್ಕಾರವಾಗಬೇಕು (ಭಾ. ಭಾ. ೩೦೦ ಟಿಪ್ಪಣಿ) ಎಂಬಿದು ಅವರ ಮತ. ಆಚಾರ್ಯರು ಉಪಾಸನಾರೂಪವಾದ ಜ್ಞಾನವನ್ನೂ ಅಂಗೀಕರಿಸಿದ್ದರೂ ಅದು ಮೋಕ್ಷಕ್ಕೆ ಕಾರಣವೆಂದು ಒಪ್ಪಿಲ್ಲ. ಜ್ಞಾನಕರ್ಮಸಮುಚ್ಚಯದಿಂದ ಏಕಾನೇಕಾತ್ಮಕನಾದ (೧-೨೬೦) ಪ್ರಾಣ (ಅಥವಾ ಹಿರಣ್ಯಗರ್ಭ)ನ ಸಾಯುಜ್ಯವು ಮಾತ್ರ ದೊರೆಯುತ್ತದೆ (೧-೯೫, ೧-೯೭, ಭಾ. ಭಾ. ೩೭, ೩೯). ಅವಿದ್ಯಾನಾಶಕವಾದ ವಸ್ತುತಂತ್ರಜ್ಞಾನವು ಬೇರೆಯಿದೆ (೧-೯೭), ವಸ್ತುಬೋಧಕವಾಕ್ಯಗಳಿಗೂ ಪ್ರಾಮಾಣ್ಯವುಂಟು (೧-೫೨, ೫೪), ಬ್ರಹ್ಮಜ್ಞಾನದಿಂದ ಅವಿದ್ಯಾದಿಗಳು ತೊಲಗುವದು ಅನುಭವದಲ್ಲಿಯೂ ಇದೆ (೧-೫೩) ಎಂಬುದೇ ಅವರ ವೇದಾಂತದ ಅಸಾಧಾರಣೋಪದೇಶವು.

## (೫) ಮೋಕ್ಷವಿಚಾರ

(೧) 'ಇದು ಮೊದಲು ಬ್ರಹ್ಮವೇ ಆಗಿತ್ತು; ಅದು ತನ್ನನ್ನೇ ಬ್ರಹ್ಮವಾಗಿರುವೆನೆಂದು ಅರಿತುಕೊಂಡಿತು; ಅದರಿಂದ ಸರ್ವವೂ ಆಯಿತು' ಎಂಬ (೧-೪-೧೦) ಶ್ರುತಿಯಲ್ಲಿ ಬ್ರಹ್ಮವು ಎಂದರೆ ಬ್ರಹ್ಮವಾಗಿರುವ ಪುರುಷನು; ಕರ್ಮಸಮುಚ್ಚಿತವಾದ ಅಪರಬ್ರಹ್ಮವಿದ್ಯೆಯಿಂದ ಅಪರಬ್ರಹ್ಮವಾಗಿರುವವನು, ಭೋಜ್ಯಕ್ಕಿಂತ ಬೇರೆಯಾಗಿ ಕಾಮಕರ್ಮಗಳಿಂದ ಮುಕ್ತನಾಗಿರುವವನು. ಅವನಿಗೆ ಬ್ರಹ್ಮವಿದ್ಯೆಯಿಂದ ಸರ್ವಭಾವವುಂಟಾಗುತ್ತದೆ ಎಂಬುದು ಭ. ಪ್ರ.ರ ಶ್ರುತಿವ್ಯಾಖ್ಯಾನ (೧-೧೫೦).

ಸರ್ವಭಾವಾಪತ್ತಿಯು ಸಾಧನಕೃತವೆಂದಾದರೆ ಅನಿತ್ಯವಾಗುತ್ತದೆ. ಆದ್ದರಿಂದ ಇದು ಬ್ರಹ್ಮವೇ ಆಗಿತ್ತು ಎಂದರೆ ಈ ಶರೀರಸ್ಥಾನದ ಆತ್ಮನು ಜ್ಞಾನಪ್ರಾಪ್ತಿಗಿಂತ ಮೊದಲು ಬ್ರಹ್ಮವೇ ಆಗಿದ್ದನು, ಅವನು ತಾನು ಬ್ರಹ್ಮವೆಂದು

ಅವಿದ್ಯೆಯಿಂದ ಭಾವಿಸಿಕೊಂಡಿದ್ದವನು. ಅವನಿಗೆ ವಿದ್ಯೆಯಿಂದ ಅವಿದ್ಯೆಯು ತೊಲಗಲು ಸರ್ವಾತ್ಮತ್ವವುಂಟಾಯಿತು ಎಂದೇ ಅರ್ಥ (೧-೧೫೦) ಎಂದು ಆಚಾರ್ಯರು ಪ್ರತಿಪಾದಿಸಿರುತ್ತಾರೆ.

(೨) ಗ್ರಹಾತಿಗ್ರಹಗಳಿಂದ ಮುಕ್ತನಾದರೂ ಆತ್ಯಂತಿಕವಾಗಿ ಮುಕ್ತನಾಗುವದಿಲ್ಲ. ಪರಮಾತ್ಮನಿಂದಲೇ ಹುಟ್ಟಿರುವ- ಹೊಲದಲ್ಲಿರುವ ಚೌಳುಭಾಗದಂತಿರುವ ಅವಿದ್ಯೆಯಿಂದ ಪರಮಾತ್ಮನಿಗಿಂತ ಬೇರೆಯಾಗಿರುತ್ತಾನೆ; ಭೋಜ್ಯವಾದ ಜಗತ್ತಿಗಿಂತಲೂ ಬೇರೆಯಾಗಿರುತ್ತಾನೆ, ಕಾಮುಕರ್ಮಗಳು ಹೋಗಿ ಜಗತ್ತಿಗೂ ಪರಮಾತ್ಮನಿಗೂ ನಡುವೆ ಇರುವ ಅಪವರ್ಗವೆಂಬ ಅವಸ್ಥೆಯಲ್ಲಿರುತ್ತಾನೆ. ಅವನಿಗೆ ಪರಮಾತ್ಮೈಕತ್ವದರ್ಶನದಿಂದ ದ್ವೈತದರ್ಶನವು ತೊಲಗಬೇಕಾಗಿರುತ್ತದೆ (ಭಾ. ಭಾ. ೨೫) ಎಂಬುದು ಭ. ಪ್ರ. ರ ಅಂತರಾಲ ಮುಕ್ತಿವಾದ.

ಅಪವರ್ಗವು ಸತ್ತಮೇಲೆ ಸಿಕ್ಕುವ ಸ್ಥಿತಿಯಾದರೆ ಹಿರಣ್ಯಗರ್ಭನಿಗೇ ಪರಮಾತ್ಮೈಕ್ಯೋಪದೇಶವೇ ಹೊರತು ನಮ್ಮಗಳಿಗಿಲ್ಲವೆಂದಾಗುತ್ತದೆ. ಇದಲ್ಲದೆ ಹಿರಣ್ಯಗರ್ಭಪ್ರಾಪ್ತಿಗೆ ಸಾಧನವಾದದ್ದು ಅದರಿಂದ ವಿರಕ್ತನಾಗುವದಕ್ಕೂ ಸಾಧನವಾಗಲಾರದು, ಭೋಜ್ಯದಿಂದ ವಿರಕ್ತನಾಗುವದಕ್ಕೆ ಸಾಧನವಾದದ್ದು ಹಿರಣ್ಯಗರ್ಭಪ್ರಾಪ್ತಿಗೂ ಸಾಧನವಾಗಲಾರದು ; ಪ್ರವೃತ್ತಿಗೆ ಸಾಧನವಾದದ್ದು ನಿವೃತ್ತಿಗೆ ಹೇಗೆ ಸಾಧನವಾದೀತು ? (ಭಾ. ೨೬) ಅಪವರ್ಗರೂಪವಾದ ಅಂತರಾಲಾವಸ್ಥೆಯಿರುವದಕ್ಕೆ ಪ್ರಮಾಣವೂ ಇಲ್ಲ (ಭಾ. ಭಾ. ೧೭) -ಎಂದು ಈ ಮತವನ್ನು ಆಚಾರ್ಯರು ಖಂಡಿಸಿರುತ್ತಾರೆ. ಸುಷುಪ್ತಾವಸ್ಥೆಯಲ್ಲಿರುವಂತೆ ಅವಿದ್ಯಾಕಾಮುಕರ್ಮರಹಿತನಾದ ನಿರ್ವಿಶೇಷನೆಂದು ಆತ್ಮನನ್ನು ವಿದ್ಯೆಯಿಂದ ಅರಿತುಕೊಳ್ಳಲು ಅವಿದ್ಯೆಯು ಅತ್ಯಂತವಾಗಿ ಹೋಗಿ ಕೂಡಲೆ ಮುಕ್ತಿಯಾಗುವದು ಎಂಬುದೇ ಅವರ ಮತವು (ಭಾ. ಭಾ. ೨೬೮, ೨೭೦, ೨೭೭). ಬ್ರಹ್ಮವು ನಿತ್ಯದೃಗ್ರೂಪವಾದ ಆತ್ಮನೇ ಆಗಿರುವದರಿಂದ ಬ್ರಹ್ಮವಿದ್ಯೆಯಿಂದ ಅದನ್ನು ವಿಷಯೀಕರಿಸಿ ತಿಳಿದುಕೊಳ್ಳಬೇಕಾದದ್ದೇನೂ ಇರುವದಿಲ್ಲ; ಅವಿದ್ಯಾಧ್ಯಾರೋಪಣೆಯ ನಿವೃತ್ತಿಯನ್ನೇ ಬ್ರಹ್ಮವಿದ್ಯೆ ಎಂದು ಕರೆಯುತ್ತೇವೆ (೧-೧೬೨) ಎಂದು ಅವರು ವಿದ್ಯಾಸ್ವರೂಪವನ್ನು ವಿಶದೀಕರಿಸಿರುತ್ತಾರೆ. ಮುಕ್ತಿಯ ಸ್ವರೂಪವನ್ನೂ ಅದು ಅವಿದ್ಯಾನಿವೃತ್ತಿಯಿಂದಮಾತ್ರವೇ ದೊರಕುವದೆಂಬುದನ್ನೂ (ಭಾ. ಭಾ. ೨೭೧ರಿಂದ ೨೮೯) ಅವರು ವಿಸ್ತಾರವಾಗಿ ಪ್ರತಿಪಾದಿಸಿರುತ್ತಾರೆ. ಅವಿದ್ಯೆಯೆಂಬುದು ಅತದ್ಧರ್ಮಾರೋಪಣರೂಪವಾದ ತಪ್ಪುತಿಳಿವಳಿಕೆ, ಅದು ಆತ್ಮನಿಂದ ಉಂಟಾಗಿರುವದಿಲ್ಲ, ಆತ್ಮನಲ್ಲಿರುವದೂ ಇಲ್ಲ. ಆದ್ದರಿಂದ ಅವಿದ್ಯಾದೃಷ್ಟಿಯಿಂದಲೇ ಅದು ಬ್ರಹ್ಮವನ್ನು ಆಶ್ರಯಿಸಿಕೊಂಡಿರುತ್ತದೆ, ಬ್ರಹ

ವನ್ನು ವಿಷಯೀಕರಿಸಿಕೊಂಡಿರುತ್ತದೆ (೧-೧೫೨, ೧೫೩) ಎಂದು ವ್ಯವಹರಿಸು ವೆವು ; ನಿಜವಾಗಿ ಅವಿದ್ಯೆಯು ಆತ್ಮನಲ್ಲಿಲ್ಲವೇ ಇಲ್ಲವಾದ್ದರಿಂದ ಅವಿದ್ಯಾಕೃತ ವಿಶೇಷವೂ ಆತ್ಮನಲ್ಲಿಲ್ಲ (ಭಾ. ಭಾ. ೨೭೪). ಅವಿದ್ಯಾನಿವೃತ್ತಿಗಾಗಿಯೇ ಶಾಸ್ತ್ರೋಪದೇಶವು ಬೇಕಾಗಿರುವದರಿಂದ ಈ ಪಕ್ಷದಲ್ಲಿ ಉಪದೇಶವು ವ್ಯರ್ಥ ವೆಂಬುದೂ ಹೊಂದುವದಿಲ್ಲ (೧-೧೫೪ ; ಭಾ. ಭಾ. ೨೭೪) ಎಂಬುದು ಆಚಾ ರ್ಯರ ನಿರ್ವಿಶೇಷಾತ್ಮವಾದವು.

(೩) ಮೋಕ್ಷದಲ್ಲಿ ಜೀವನ್ಮುಕ್ತಿ, ವಿದೇಹಮುಕ್ತಿ -ಎಂಬ ವಿಭಾಗವನ್ನು ಒಪ್ಪಿರುವ ಪಕ್ಷವೂ ಮೋಕ್ಷಾವಸ್ಥೆಯಲ್ಲಿ ಹೊಸ ವಿಜ್ಞಾನಾನಂದಗಳು ಅಭಿವ್ಯಕ್ತ ವಾಗುವವೆಂದೂ (ಭಾ. ಭಾ. ೨೭೩) ಆಗ ಬ್ರಹ್ಮದಲ್ಲಿರುವ ಆನಂದವು ಸಂವೇದ್ಯ ವಾಗಿರುತ್ತದೆಯೆಂದೂ (ಭಾ. ಭಾ. ೧೩೮) ಕೆಲವರು ಹೇಳುತ್ತಾರೆಂದು ಆಚಾ ರ್ಯರು ಅನುವಾದಮಾಡಿಕೊಂಡಿರುವ ಪೂರ್ವಪಕ್ಷಗಳು, ಭ.ಪ್ರ. ರವೇ ಎಂದು ಊಹಿಸುವದಕ್ಕೆಡೆಯಿದೆ. ಈ ವಾದಗಳನ್ನು ತಳ್ಳಿಹಾಕಿ ಜ್ಞಾನಿಗೆ ಬದುಕಿ ದ್ದಾಗಿನ ಸ್ವರೂಪಕ್ಕಿಂತ ಸತ್ತಬಳಿಕ ಬೇರೊಂದಾಗುತ್ತದೆ ಎಂದು ಕಲ್ಪಿಸುವದು ಅನ್ಯಾಯವಾದದ್ದು: ಬ್ರಹ್ಮದಲ್ಲಿ ವಿಜ್ಞಾನಾನಂದಗಳು ನಿತ್ಯಾಭಿವ್ಯಕ್ತ ವಾಗಿರುವವಾದ್ದರಿಂದ ಮುಕ್ತಾಮುಕ್ತಾವಸ್ಥೆಯನ್ನು ಪಡೆಯುವ ಆತ್ಮನು ಅದಕ್ಕಿಂತ ವ್ಯತಿರಿಕ್ತನೆಂದಾಗುವದೆಂಬ ಅನಿಷ್ಟಾಪತ್ತಿಯನ್ನು ಪೂರ್ವ ಪಕ್ಷಿಗಳಿಗೆ ತೋರಿಸಿ ಅವಿದ್ಯಾನಿವೃತ್ತಿಯೇ ಮುಕ್ತಿಯು (ಭಾ. ಭಾ. ೨೭೨), ಮುಕ್ತಿಯೆಂಬುದು ಒಂದು ವಿಶೇಷಾವಸ್ಥೆಯಲ್ಲ - ಎಂದು ಸಿದ್ಧಾಂತವನ್ನು ಹೇಳಿರುತ್ತಾರೆ. ವಿಜ್ಞಾನಕ್ಕೆ ಆನಂದವು ವಿಷಯವಾದರೆ ಬ್ರಹ್ಮಾದ್ವೈತವಾದಕ್ಕೆ ವಿರೋಧವಾಗುತ್ತದೆಯಾದ್ದರಿಂದ ಬ್ರಹ್ಮದ ವಿಜ್ಞಾನಾನಂದಗಳು ಬೇರೆಬೇರೆ ಯಲ್ಲ; ಬ್ರಹ್ಮವು ವಿಜ್ಞಾನಾನಂದಸ್ವರೂಪವೇ ಆಗಿದೆ (ಭಾ. ಭಾ. ೧೩೮) ಎಂದು ಎಲ್ಲರೂ ಒಪ್ಪಬೇಕೆಂದು ಆಚಾರ್ಯರು ತೀರ್ಮಾನಿಸಿರುತ್ತಾರೆ.

## ಉಪಸಂಹಾರ

ಈ ಪೀಠಿಕೆಯಲ್ಲಿ ನಾವು ಚರ್ಚಿಸುವದಕ್ಕೆ ಅವಕಾಶವಿಲ್ಲದ್ದರಿಂದ ಬಿಟ್ಟಿ ರುವ ವಿಷಯಗಳು ಹಲವು ಇವೆ. ಆಚಾರ್ಯರ ಕಾಲಕ್ಕೆ ಇದ್ದ ಅದ್ವೈತಿಗಳ ವಾದಗಳ ಒಳಪಂಗಡಗಳ ವಿವೇಚನೆಯನ್ನು ಇಲ್ಲಿ ಮಾಡಿಲ್ಲ ; ಆಚಾರ್ಯರು ಉಪಾಸನೆಗಳ ವಿಷಯದಲ್ಲಿ ಖಿಲಕಾಂಡದಲ್ಲಿ ಪ್ರಕಟಿಸಿರುವ ಅಭಿಪ್ರಾಯಗಳ ನ್ನಾಗಲಿ ಉಪಾಸ್ಯಜ್ಞೇಯಬ್ರಹ್ಮವಿವೇಚನೆಯನ್ನಾಗಲಿ ಸಮಾಲೋಚನೆ ಮಾಡಿಲ್ಲ. ಈಗಿನ ಹೊಸ ವೇದಾಂತಪ್ರಕ್ರಿಯೆಗಳ ವಿಷಯದಲ್ಲಿ ಈ ಭಾಷ್ಯ ದೃಷ್ಟಿಯಿಂದ ಜಿಜ್ಞಾಸುಗಳಲ್ಲಿ ಯಾವ ಪ್ರತಿಕ್ರಿಯೆಯುಂಟಾಗಬಹುದೆಂಬು

ದನ್ನು ತಿಳಿಸುವದೂ ಆಗಿಲ್ಲ. ಆದರೂ ಇಲ್ಲಿ ನಾವು ಮಾಡಿರುವ ಭರ್ತೃ ಪ್ರಪಂಚರ ಮತದ ಸಂಕ್ಷಿಪ್ತವಾದ ತುಲನಾತ್ಮಕವಿಮರ್ಶೆಯಿಂದ ವಿಚಕ್ಷಣರಾದ ಓದುಗರಿಗೆ ಈ ವಿಷಯದಲ್ಲಿ ಹಲವು ಸೂಚನೆಗಳು ಹೊಳೆಯಬಹುದೆಂದು ನಮ್ಮ ನಂಬಿಕೆ. ಆಚಾರ್ಯರ ವೇದಾಂತಪ್ರಕ್ರಿಯೆಯ ಅಸಾಧಾರಣಸ್ವರೂಪದ ಕಲ್ಪನೆಯು ಈ ಭಾಷ್ಯಾನುವಾದದಿಂದ ತಕ್ಕಮಟ್ಟಿಗಾದರೂ ವಾಚಕರಿಗೆ ದೊರೆತರೆ ನಾವು ಧನ್ಯರು.

ಅಧ್ಯಾತ್ಮಪ್ರಕಾಶಕಾರ್ಯಾಲಯ,
ಜಯ ಸಂ॥ ಜ್ಯೇಷ್ಠ ಬಹುಳ ತೃತೀಯಾ } ಅನುವಾದಕ

# ವಿಷಯಾನುಕ್ರಮಣಿಕೆ

## ಮುನಿಕಾಂಡ - ಮೂರನೆಯ ಅಧ್ಯಾಯ

**ವಿಶೇಷ:** ಇಲ್ಲಿ ಭಾಷ್ಯದ ಚರ್ಚಾಭಾಗಗಳನ್ನು ಸೇರಿಸಿಲ್ಲ. ಕಂಸದಲ್ಲಿರುವ ಸಂಖ್ಯೆಗಳು ಭಾಷ್ಯಭಾಗಗಳನ್ನು ಸೂಚಿಸುತ್ತವೆ.

### ಒಂದನೆಯ ಬ್ರಾಹ್ಮಣ



### ಎರಡನೆಯ ಬ್ರಾಹ್ಮಣ



### ಮೂರನೆಯ ಬ್ರಾಹ್ಮಣ

## ನಾಲ್ಕನೆಯ ಬ್ರಾಹ್ಮಣ



## ಐದನೆಯ ಬ್ರಾಹ್ಮಣ



## ಆರನೆಯ ಬ್ರಾಹ್ಮಣ



## ಏಳನೆಯ ಬ್ರಾಹ್ಮಣ



## ಎಂಟನೆಯ ಬ್ರಾಹ್ಮಣ

ಗಾರ್ಗಿಯ ಪ್ರತಿಜ್ಞೆ (೭೭)– ಹಿಂದಿನ ಪ್ರಶ್ನೆಯ ಅನುವಾದ (೭೮)– ಯಾಜ್ಞವಲ್ಕ್ಯನ ಉತ್ತರದ ಅನುವಾದವೂ ಹೊಸ ಪ್ರಶ್ನೆಯೂ (೭೯)– ಅವ್ಯಾಕೃತವು ಅಕ್ಷರದಲ್ಲಿ ಓತಪ್ರೋತ (೮೦)– ಸೂರ್ಯಚಂದ್ರರ ಪ್ರವೃತ್ತಿಯಿಂದ ಅಕ್ಷರಾನುಮಾನ (೮೧)– ದ್ಯಾವಾಪೃಥಿವಿಗಳಿಂದ ಅಕ್ಷರಾನುಮಾನ (೮೨)– ಕಾಲಾವಯವಗಳಿಂದ ಅಕ್ಷರಾನುಮಾನ (೮೩)– ನದಿಗಳಿಂದ ಅಕ್ಷರಾನುಮಾನ (೮೪)– ದಾತೃಗಳ ಪ್ರಶಂಸೆಯಿಂದ ಅಕ್ಷರಾನುಮಾನ (೮೫)– ದೇವಾದಿಗಳ ವೃತ್ತಿಯಿಂದ ಅಕ್ಷರಾನುಮಾನ (೮೬)– ಅಕ್ಷರಜ್ಞಾನದ ಫಲದಿಂದ ಅಕ್ಷರಾನುಮಾನ (೮೭)–ಅಕ್ಷರದ ಪ್ರಶಾಸ್ತೃತ್ವವು ಚೈತನ್ಯಸ್ವರೂಪಮಾತ್ರ (೮೮)– ಅಕ್ಷರವು ಪ್ರಧಾನವೂ ಅಲ್ಲ, ಮತ್ತೊಂದೂ ಅಲ್ಲ (೮೯)– ಗಾರ್ಗಿಪ್ರಶ್ನೆಯ ಉತ್ತರದ ಉಪಸಂಹಾರ (೯೦)– ಗಾರ್ಗಿಯು ಯಾಜ್ಞವಲ್ಕ್ಯನನ್ನು ಕೊಂಡಾಡಿದ್ದು (೯೧).

ಪುಟ ೧೮೦–೨೧೧

**ಎಂಟನೆಯ ಬ್ರಾಹ್ಮಣದ ಸಾರ** ಪುಟ ೨೧೨–೨೧೩

## ಒಂಬತ್ತನೆಯ ಬ್ರಾಹ್ಮಣ

ಬ್ರಾಹ್ಮಣದ ಸಂಬಂಧ (೯೫)– ವಿದಗ್ಧನ ಪ್ರಶ್ನೆ: ದೇವತೆಗಳು ಎಷ್ಟು ? (೯೬)– ಮೂವತ್ತುಮೂರು ದೇವತೆಗಳ ವಿವರ (೯೭)– ವಸುಗಳ ವಿವರ (೯೮)– ರುದ್ರರ ವಿವರ (೯೯)– ಆದಿತ್ಯರ ವಿವರ (೧೦೦)– ಇಂದ್ರಪ್ರಜಾಪತಿಗಳ ವಿವರ (೧೦೧)– ಆರು ದೇವತೆಗಳ ವಿವರ (೧೦೨)– ಮೂರು ಮುಂತಾದ ದೇವತೆಗಳ ವಿವರ (೧೦೩)– ಒಬ್ಬನೇ ದೇವನು ಪ್ರಾಣನು (೧೦೪)– ಪ್ರಾಣಭೇದಗಳನ್ನು ಕುರಿತ ಪ್ರಶ್ನೋತ್ತರಗಳು: ಪೃಥಿವ್ಯಭಿಮಾನದೇವತೆ (೧೦೫)– ಕಾಮಾಭಿಮಾನಿದೇವತೆ (೧೦೬)– ರೂಪಾಭಿಮಾನಿದೇವತೆ (೧೦೭)– ಆಕಾಶಾಭಿಮಾನಿದೇವತೆ (೧೦೮)– ತಮೋಽಭಿಮಾನಿದೇವತೆ (೧೦೯)– ಪ್ರಕಾಶಕರೂಪಾಭಿಮಾನಿದೇವತೆ (೧೧೦)– ಅಬಭಿಮಾನದೇವತೆ(೧೧೧)– ರೇತೋಽಭಿಮಾನಿದೇವತೆ (೧೧೨)–ಮುಂದಿನ ಗ್ರಂಥದ ಸಂಬಂಧ (೧೧೩)– ದಿಗ್ದೇವತೆಗಳ ವಿಜ್ಞಾನ· ಪೂರ್ವದಿಗ್ದೇವತೆಗೆ ಹೃದಯವೇ ಪ್ರತಿಷ್ಠೆ (೧೧೫)– ದಕ್ಷಿಣದಿಗ್ದೇವತೆಗೆ ಹೃದಯವೇ ಪ್ರತಿಷ್ಠೆ (೧೧೬)– ಪಶ್ಚಿಮದಿಗ್ದೇವತೆಗೆ ಹೃದಯವೇ ಪ್ರತಿಷ್ಠೆ (೧೧೭)– ಉತ್ತರದಿಗ್ದೇವತೆಗೆ ಹೃದಯವೇ ಪ್ರತಿಷ್ಠೆ (೧೧೮)– ಊರ್ಧ್ವದಿಗ್ದೇವತೆಗೆ ಹೃದಯವೇ ಪ್ರತಿಷ್ಠೆ (೧೧೯)– ಹೃದಯಕ್ಕೆ ಪ್ರತಿಷ್ಠೆ ಯಾವದು ? (೧೨೦)– ಹೃದಯಶರೀರಗಳಿಗೆ ಅನ್ಯೋನ್ಯಪ್ರತಿಷ್ಠೆ (೧೨೧)– ಶರೀರಹೃದಯವಾಯುಗಳು ವಿಜ್ಞಾನಮಯಾರ್ಥ (೧೨೨)– ಸರ್ವಕ್ಕೂ ಪ್ರತಿಷ್ಠೆಯಾದ ನಿರುಪಾಧಿಕಾತ್ಮ (೧೨೩)– ಯಾಜ್ಞವಲ್ಕ್ಯನ ಪ್ರಶ್ನೆ : ಔಪನಿಷದಪುರುಷನು ಯಾರು ? (೧೨೪)– ಬ್ರಹ್ಮಜ್ಞಾನಿಯೊಡನೆ ಚರ್ಚಿಸಿದ ದುಷ್ಪರಿಣಾಮ (೧೨೫)– ಮುಂದಿನ ಗ್ರಂಥದ ಸಂಬಂಧ (೧೨೬)– ಯಾಜ್ಞವಲ್ಕ್ಯನು ಬ್ರಾಹ್ಮಣರನ್ನು ವಾದಕ್ಕೆ ಕರೆದದ್ದು (೧೨೭)– ಮನುಷ್ಯನು ವೃಕ್ಷದಂತೆ (೧೨೮ರಿಂದ ೧೩೦)– ಸತ್ತ ಪುರುಷನು ಯಾವ ಮೂಲದಿಂದ ಹುಟ್ಟುವನು ? (೧೩೧ರಿಂದ ೧೩೪)– ಜಗನ್ಮೂಲದ ಸ್ವರೂಪ (೧೩೫).

ಪುಟ ೨೧೪–೨೨೬

**ಒಂಬತ್ತನೆಯ ಬ್ರಾಹ್ಮಣದ ಸಾರ** ಪುಟ ೨೨೭–೨೨೮

# ಮುನಿಕಾಂಡ - ನಾಲ್ಕನೆಯ ಅಧ್ಯಾಯ

## ಒಂದನೆಯ ಬ್ರಾಹ್ಮಣ



## ಎರಡನೆಯ ಬ್ರಾಹ್ಮಣ



## ಮೂರನೆಯ ಬ್ರಾಹ್ಮಣ

ಫಲಭೋಗಕ್ಕಾಗಿ ಸಿದ್ಧವಾಗಿರುತ್ತದೆ (೨೪೮)- ಸಂಸಾರಿಯನ್ನು ಭೋಗಸಾಮಗ್ರಿಗಳು ನಿರೀಕ್ಷಿಸುವದಕ್ಕೆ ದೃಷ್ಟಾಂತ (೨೪೯)- ಕಂಡಿಕೆಯ ಸಂಬಂಧ : ಪ್ರಾಣಗಳು ಜೀವನನ್ನು ಮರಣಕಾಲದಲ್ಲಿ ಹಿಂಬಾಲಿಸುವವು (೨೫೦).

ಪುಟ ೩೧೭–೫೦೫

## ಮೂರನೆಯ ಬ್ರಾಹ್ಮಣದ ಸಾರ ಪುಟ ೫೦೬–೫೧೯

## ನಾಲ್ಕನೆಯ ಬ್ರಾಹ್ಮಣ

ಮುಂದಿನ ಗ್ರಂಥದ ಸಂಬಂಧ (೨೫೧)- ಉತ್ಕ್ರಾಂತಿಕಾಲಕ್ಕೆ ಜೀವನು ಅಂಗಗಳನ್ನು ಬಿಟ್ಟುಕೊಳ್ಳುವನು (೨೫೨)- ಪ್ರಾಣಗಳು ಆತ್ಮನ ಬಳಿಗೆ ಬರುವ ಪ್ರಕಾರ (೨೫೩)- ಕರಣಗಳನ್ನು ಲಿಂಗಾತ್ಮನು ತೆಗೆದುಕೊಳ್ಳುವದು (೨೫೪)- ಕರಣಗಳ ವ್ಯಾಪಾರವು ನಿಂತುಹೋಗುವಿಕೆ (೨೫೫)- ಹೃದಯಾಗ್ರದ ಬೆಳಕಿನಿಂದ ಜೀವನು ಹೊರಡುತ್ತಾನೆ (೨೫೬)- ಜೀವನ ನಿಷ್ಕ್ರಮಣಮಾರ್ಗಗಳು (೨೫೭)- ಜೀವನೊಡನೆ ಪ್ರಾಣಕರಣಗಳೂ ಹೊರಡುತ್ತವೆ (೨೫೮)- ಉತ್ಕ್ರಾಂತಿಕಾಲದಲ್ಲುಂಟಾಗುವ ವಿಜ್ಞಾನ (೨೫೯)- ಉತ್ಕ್ರಾಂತನಿಗೆ ವಿದ್ಯಾಕರ್ಮಪೂರ್ವಪ್ರಜ್ಞೆಗಳೆಂಬ ಸಂಭಾರ (೨೬೦)- ಪೂರ್ವಪ್ರಜ್ಞೆಯಿಂದ ದೇಹಾಂತರಕ್ಕೆ ಹೋಗುವದಕ್ಕೆ ದೃಷ್ಟಾಂತ (೨೬೨)- ಎಂದಿನ ಪಂಚಭೂತಗಳಿಂದಲೇ ಹೊಸದೇಹ (೨೬೩)- ಬಂಧಕವಾದ ಉಪಾಧಿಗಳು (೨೬೪)- ಪುಣ್ಯಾಪುಣ್ಯಗಳೇ ಸಂಸಾರಕ್ಕೆ ಹೇತುವೆಂಬ ಪಕ್ಷ (೨೬೫)- ಪರಮಸಿದ್ಧಾಂತ : ಕಾಮವೇ ಸಂಸಾರಿತ್ವಕ್ಕೆ ಮುಖ್ಯಕಾರಣ (೨೬೬)- ಕಾಮಿಯ ಸಂಸಾರ (೨೬೭)- ಅಕಾಮಿಗೆ ಮುಕ್ತಿ (೨೬೮)- ಅಕಾಮಿಯ ಪ್ರಾಣಗಳು ಉತ್ಕ್ರಾಂತವಾಗುವದಿಲ್ಲ (೨೭೦)- ಮುಂದಿನ ಗ್ರಂಥದ ಸಂಬಂಧ : ಬಂಧಮೋಕ್ಷಕಾರಣಗಳನ್ನು ದೃಢೀಕರಿಸುವದಕ್ಕೆ ಮಂತ್ರ (೨೭೬)- ಕಾಮಗಳೆಲ್ಲವೂ ಹೋದರೆ ಇಲ್ಲಿಯೇ ಅಮೃತತ್ವಪ್ರಾಪ್ತಿ (೨೭೭)- ಜ್ಞಾನಿಗೆ ದೇಹಾಂತರಗ್ರಹಣವಿಲ್ಲವೆಂಬುದಕ್ಕೆ ದೃಷ್ಟಾಂತ (೨೭೮)- ಮೋಕ್ಷಾರ್ಥನಿರ್ಣಯಕ್ಕಾಗಿ ಗೋಸಹಸ್ರದಾನ (೨೭೯)- ಬ್ರಹ್ಮವಿದ್ಯಾಫಲವು ತನಗೇ ಅನುಭವಕ್ಕೆ ಬರುತ್ತದೆ (೨೮೨)- ಮೋಕ್ಷಮಾರ್ಗದ ವಿಷಯಕ್ಕೆ ಉಪಾಸಕರ ಮತಭೇದ (೨೮೩)- ಜ್ಞಾನಮಾರ್ಗದಿಂದಲೇ ಮೋಕ್ಷ (೨೮೪)- ಪುಣ್ಯವನ್ನು ಮಾಡಿದವನೆಂದರೇನು ? (೨೮೫)- ಪುಣ್ಯಕೃತ್ ಎಂಬುದಕ್ಕೆ ವ್ಯಾಖ್ಯಾಂತರ (೨೮೬)- ಕರ್ಮವೇದವಿದ್ಯೆಗಳ ನಿಂದೆಯಿಂದ ಮೋಕ್ಷಸ್ತುತಿ (೨೮೭)- ಅವಿದ್ಯೆಯಿಂದ ಪರಮಾನಂದವು ದೊರಕದು (೨೮೮)- ಆತ್ಮವಿಜ್ಞಾನದಿಂದ ಸರ್ವದುಃಖನಾಶ (೨೮೯)- ಅದ್ವಿತೀಯಪರಮಾತ್ಮನೇ ನಾನು ಎಂದು ಅನುಸಂಧಾನಮಾಡಬೇಕು (೨೯೦)- ಜ್ಞಾನವನ್ನು ಇಲ್ಲಿಯೇ ಸಂಪಾದಿಸಿಕೊಳ್ಳಬೇಕು (೨೯೧)- ಆತ್ಮಾನುದರ್ಶನದ ಫಲ (೨೯೨)- ದೇವತೆಗಳೂ ಬ್ರಹ್ಮವನ್ನು ಆಯುಸ್ಸೆಂದು ಉಪಾಸನೆಮಾಡುವರು (೨೯೩)- ಅಜ್ಞಾನವು ಹೋದರೆ ಆತ್ಮನೇ ಅಮೃತಬ್ರಹ್ಮ (೨೯೪)- ಪ್ರಾಣಾದಿದ್ವಾರದಿಂದ ಆತ್ಮನನ್ನು ಅರಿಯಬೇಕು (೨೯೫)- ಮನಸ್ಸಿನಿಂದಲೇ ಅದ್ವೈತಬ್ರಹ್ಮವನ್ನು ಅರಿತುಕೊಳ್ಳಬೇಕು (೨೯೬)- ಬ್ರಹ್ಮವನ್ನು ಏಕರಸವಾಗಿಯೇ ಅರಿಯಬೇಕು (೨೯೭)- ಬ್ರಹ್ಮವು ಅಪ್ರಮೇಯವಾದರೂ

ಜ್ಞೇಯವೆಂಬುದು ಹೇಗೆ ? (೨೯೮)– ಆತ್ಮಸ್ವರೂಪ (೨೯೯)– ಜ್ಞಾನಸಾಧನವನ್ನೇ ಅನುಷ್ಠಾನಮಾಡಬೇಕು (೩೦೦)– ಕಂಡಿಕೆಯ ಸಂಬಂಧ: ವೇದಕ್ಕೆಲ್ಲ ಆತ್ಮದಲ್ಲಿಯೇ ವಿನಿಯೋಗ (೩೦೧)– ಇದುವರೆಗೆ ಹೇಳಿದ ಜ್ಞಾನ (೩೦೨)– ಆತ್ಮಜ್ಞಾನದ ಫಲ (೩೦೩)– ವೇದಕ್ಕೆ ಬ್ರಹ್ಮವಿದ್ಯೆಯಲ್ಲಿಯೇ ಪರಮತಾತ್ಪರ್ಯ (೩೦೪)– ಯಜ್ಞದಾನತಪಸ್ಸುಗಳಿಂದ ಜ್ಞಾನೋತ್ಪತ್ತಿ (೩೦೬)– ಆತ್ಮಜ್ಞಾನದಿಂದ ಕೇವಲ ಮುನಿತ್ವ (೩೦೮)– ಆತ್ಮಜ್ಞಾನೇಚ್ಛೆಯಿದ್ದವರೇ ಪರಿವ್ರಾಜಕರಾಗಬೇಕು (೩೦೯)– ಪಾರಿವ್ರಾಜ್ಯವಿಧಿಗೆ ಶೇಷವಾದ ಅರ್ಥವಾದ (೩೧೦)– ಪ್ರವ್ರಜನ್ತಿ ಎಂಬುದು ವಿಧಿಯೇ (೩೧೧)– ಆತ್ಮನು ಕರ್ಮಪ್ರಾಪ್ಯನಲ್ಲ (೩೧೨)– ಬ್ರಹ್ಮಜ್ಞಾನಿಗೆ ಕರ್ಮಸಂಬಂಧವಿರುವದಿಲ್ಲ (೩೧೩)– ಬ್ರಾಹ್ಮಣಾರ್ಥವನ್ನು ತಿಳಿಸುವ ಮಂತ್ರ : ಬ್ರಹ್ಮಜ್ಞಾನಿಯು ಸರ್ವಥಾ ಕರ್ಮಾಸಂಬದ್ಧನು (೩೧೪)– ಶಾಂತ್ಯಾದಿಸಾಧನಗಳೂ ಸರ್ವಾತ್ಮಭಾವವೂ (೩೧೫)– ಸಾಧನಗಳಿಂದ ಸಿದ್ಧವಾದ ಜ್ಞಾನದ ಪ್ರಶಂಸೆ (೩೧೬)– ಜನಕನು ಸರ್ವಸ್ವವನ್ನೂ ಯಾಜ್ಞವಲ್ಕ್ಯನಿಗೆ ಒಪ್ಪಿಸಿದ್ದು (೩೧೭)– ಬ್ರಹ್ಮವಿದ್ಯೋಪಸಂಹಾರ (೩೧೮)– ಬ್ರಹ್ಮಜ್ಞಾನದ ಮತ್ತು ಉಪಾಸನೆಯ ಫಲಗಳು (೩೧೯)– ಆರಣ್ಯಕದ ಅರ್ಥಸಂಗ್ರಹ (೩೨೦)– ಉಪನಿಷತ್ತಿನಲ್ಲಿ ತತ್ತ್ವವನ್ನು ತಿಳಿಸಿರುವ ಕ್ರಮ (೩೨೧).

ಪುಟ ೫೧೦–೬೪೬

## ನಾಲ್ಕನೆಯ ಬ್ರಾಹ್ಮಣದ ಸಾರ ಪುಟ ೬೪೭–೬೫೦

## ಐದನೆಯ ಬ್ರಾಹ್ಮಣ

ಈ ಬ್ರಾಹ್ಮಣದ ಸಂಬಂಧ: ಕಾಂಡದ್ವಯಾರ್ಥದ ಉಪಸಂಹಾರ, ಮಧುಕಾಂಡದರ್ಥಕ್ಕೆ ತರ್ಕ (೩೨೨) ; ಯಾಜ್ಞವಲ್ಕ್ಯನು ಪಾರಿವ್ರಾಜ್ಯಕ್ಕೆ ಅನುವಾದದ್ದು. (೩೨೩)– ಮೈತ್ರೇಯಿಗೂ ಕಾತ್ಯಾಯನಿಗೂ ಪಾಲುಮಾಡಲೆಳಸಿದ್ದು (೩೨೪)– ವಿತ್ತವು ಮೋಕ್ಷಕ್ಕೆ ಸಾಧನವಲ್ಲ (೩೨೫)– ಯಾಜ್ಞವಲ್ಕ್ಯನ ಸಂತೋಷಕ್ಕೆ ಮೈತ್ರೇಯಿಯ ವಿದ್ಯಾಧಿಕಾರವೇ ಕಾರಣ (೩೨೬)– ಆತ್ಮದರ್ಶನದಿಂದ ಎಲ್ಲವೂ ಜ್ಞಾತವಾಗುವದು (೩೨೭)– ಆತ್ಮವ್ಯತಿರಿಕ್ತವೆಂದು ಯಾವದೊಂದನ್ನು ನೋಡಿದರೂ ಬಾಧವೇ (೩೨೮)– ಕೊನೆಯ ಮೈತ್ರೇಯೀಬ್ರಾಹ್ಮಣದಲ್ಲಿ ಉತ್ಪತ್ತಿಶ್ರುತಿಯಲ್ಲಿ ಇಷ್ಟಾದಿಗಳನ್ನು ಸೇರಿಸಿರುವದಕ್ಕೆ ಕಾರಣ (೩೨೯)– ಜ್ಞಾನಾವಸ್ಥೆಯಲ್ಲಿ ವಿಶೇಷವಿಜ್ಞಾನವಿರುವದಿಲ್ಲ (೩೩೦)– ಆತ್ಮಜ್ಞಾನಸ್ವರೂಪಕ್ಕೆ ನಾಶವಿಲ್ಲ (೩೩೧)– ಸ ಏಷ ನೇತಿ ನೇತಿ ಎಂಬ ಉಪಸಂಹಾರವಾಕ್ಯದ ತಾತ್ಪರ್ಯ (೩೩೨)– ಅಮೃತತ್ವಕ್ಕೆ ಸಸಂನ್ಯಾಸಾತ್ಮಜ್ಞಾನವೇ ಸಾಧನ (೩೩೩)– ಭಾಷ್ಯಾರ್ಥದ ಉಪಸಂಹಾರ (೩೩೪).

ಪುಟ ೬೫೧–೬೯೬

## ಐದನೆಯ ಬ್ರಾಹ್ಮಣದ ಸಾರ ಪುಟ ೬೯೬–೬೯೭

## ಆರನೆಯ ಬ್ರಾಹ್ಮಣ

ಯಾಜ್ಞವಲ್ಕೀಯ ಕಾಂಡದ ವಂಶರ್ಷಿಗಳು (೩೪೫)–. ಪುಟ ೬೯೮–೭೦೧

# ಖಿಲಕಾಂಡ-ಐದನೆಯ ಅಧ್ಯಾಯ

## ಒಂದನೆಯ ಬ್ರಾಹ್ಮಣ



## ಎರಡನೆಯ ಬ್ರಾಹ್ಮಣ



## ಮೂರನೆಯ ಬ್ರಾಹ್ಮಣ



## ನಾಲ್ಕನೆಯ ಬ್ರಾಹ್ಮಣ



## ಐದನೆಯ ಬ್ರಾಹ್ಮಣ

## ಆರನೆಯ ಬ್ರಾಹ್ಮಣ



## ಏಳನೆಯ ಬ್ರಾಹ್ಮಣ



## ಎಂಟನೆಯ ಬ್ರಾಹ್ಮಣ



## ಒಂಬತ್ತನೆಯ ಬ್ರಾಹ್ಮಣ



## ಹತ್ತನೆಯ ಬ್ರಾಹ್ಮಣ



## ಹನ್ನೊಂದನೆಯ ಬ್ರಾಹ್ಮಣ



## ಹನ್ನೆರಡನೆಯ ಬ್ರಾಹ್ಮಣ



## ಹದಿಮೂರನೆಯ ಬ್ರಾಹ್ಮಣ

## ಹದಿನಾಲ್ಕನೆಯ ಬ್ರಾಹ್ಮಣ

ಗಾಯತ್ರಿಯ ಹೆಚ್ಚುಗಾರಿಕೆ (೩೮೯)- ಗಾಯತ್ರಿಯ ಪ್ರಥಮಪಾದವು ತ್ರಿಲೋಕಾತ್ಮಕ (೩೯೦)- ಗಾಯತ್ರಿಯ ದ್ವಿತೀಯಪಾದವು ತ್ರಯೀವಿದ್ಯಾತ್ಮಕ (೩೯೧)- ಗಾಯತ್ರಿಯ ಮೂರನೆಯ ಪಾದವು ಪ್ರಾಣಾಪಾನವ್ಯಾನಾತ್ಮಕ (೩೯೨)- ಗಾಯತ್ರಿಯ ನಾಲ್ಕನೆಯ ಪಾದವು ಆದಿತ್ಯಪುರುಷ (೩೯೩)- ಗಾಯತ್ರಿಯು ಅಧ್ಯಾತ್ಮವಾಗಿ ಪ್ರಾಣನಲ್ಲಿ ಪ್ರತಿಷ್ಠಿತ (೩೯೪)- ಗಾಯತ್ರಿಯು ಜಗತ್ತಿಗೆ ಆತ್ಮ (೩೯೫)- ವಟುವಿಗೆ ಉಪದೇಶಿಸುವ ಸಾವಿತ್ರಿಯೇ ಗಾಯತ್ರಿಯು (೩೯೬)- ಇದು ಅನುಷ್ಟುಪ್ಛಂದಸ್ಕವಲ್ಲ, ಗಾಯತ್ರೀಚ್ಛಂದಸ್ಕವೇ (೩೯೭)- ಗಾಯತ್ರ್ಯುಪಾಸಕನಿಗೆ ಪ್ರತಿಗ್ರಹದೋಷವಿಲ್ಲ (೩೯೮)- ಗಾಯತ್ರಿಯ ಉಪಸ್ಥಾನವೂ ಅದರ ಫಲವೂ (೩೯೯)- ಗಾಯತ್ರೀಮುಖವಿಧಿಗೆ ಅರ್ಥವಾದ (೪೦೦)- ಅಗ್ನಿಯೇ ಗಾಯತ್ರಿಯ ಮುಖವು (೪೦೧).

ಪುಟ ೭೯೩-೮೧೬

**ಹದಿನಾಲ್ಕನೆಯ ಬ್ರಾಹ್ಮಣದ ಸಾರ** ಪುಟ ೮೧೭-೮೧೮

## ಹದಿನೈದನೆಯ ಬ್ರಾಹ್ಮಣ

ಕಂಡಿಕೆಯ ಸಂಬಂಧ, ಸಮುಚ್ಚಯಕಾರಿಯ ಪ್ರಾರ್ಥನೆ (೪೦೨)- ಆದಿತ್ಯನ ಪ್ರಾರ್ಥನೆ (೪೦೩-೪೦೬).

ಪುಟ ೮೧೫-೮೨೫

**ಹದಿನೈದನೆಯ ಬ್ರಾಹ್ಮಣದ ಸಾರ** ಪುಟ ೮೨೬

# ಖಿಲಕಾಂಡ-ಆರನೆಯ ಅಧ್ಯಾಯ

## ಒಂದನೆಯ ಬ್ರಾಹ್ಮಣ

ಗ್ರಂಥಸಂಬಂಧ, ಪ್ರಾಣೋಪಾಸನೆ (೪೦೭)- ಪ್ರಾಣವೇ ಜ್ಯೇಷ್ಠ, ಶ್ರೇಷ್ಠ (೪೦೮)- ಜ್ಯೇಷ್ಠಶ್ರೇಷ್ಠನೆಂಬ ಉಪಾಸನೆಗೆ ಫಲ (೪೦೯)- ವಾಕ್ಕು ವಸಿಷ್ಠವೆಂದು ಉಪಾಸನೆ, ಅದರ ಫಲ (೪೧೦)- ಚಕ್ಷುಸ್ಸು ಪ್ರತಿಷ್ಠೆ ಎಂಬ ಉಪಾಸನೆ, ಅದರ ಫಲ (೪೧೧)- ಶ್ರೋತ್ರವು ಸಂಪತ್ತೆಂಬ ಉಪಾಸನೆ, ಅದರ ಫಲ (೪೧೨)- ಮನಸ್ಸು ಆಯತನವೆಂಬ ಉಪಾಸನೆ, ಅದರ ಫಲ (೪೧೩)- ರೇತಸ್ಸು ಪ್ರಜಾತಿಯೆಂಬ ಉಪಾಸನೆ, ಅದರ ಫಲ (೪೧೪)- ಪ್ರಾಣಸಂವಾದ, ಪ್ರಾಣಗಳಿಗೆ ವಿವಾದ (೪೧೫)- ವಾಕ್ಕಿಲ್ಲದೆ ಮಿಕ್ಕ ಪ್ರಾಣಗಳು ಬದುಕಿದ್ದದ್ದು (೪೧೬)- ಚಕ್ಷುರಾದಿಗಳಿಲ್ಲದೆಯೂ ಮಿಕ್ಕ ಪ್ರಾಣಗಳು ಬದುಕಿದ್ದದ್ದು (೪೧೭)- ಮುಖ್ಯಪ್ರಾಣವು ಉತ್ಕ್ರಾಂತವಾಗಲಿರಲು ಮಿಕ್ಕ ಪ್ರಾಣಗಳು ಅದನ್ನು ನಿಲ್ಲಿಸಿಕೊಂಡದ್ದು (೪೧೮)- ಪ್ರಾಣಸಂವಾದದ ತಾತ್ಪರ್ಯ (೪೧೯)- ವಾಗಾದಿಗಳು ಕಾಣಿಕೆಯನ್ನೊಪ್ಪಿಸಿದ್ದು (೪೨೦)- ಪ್ರಾಣನ

## ಎರಡನೆಯ ಬ್ರಾಹ್ಮಣ



## ಮೂರನೆಯ ಬ್ರಾಹ್ಮಣ

## ನಾಲ್ಕನೆಯ ಬ್ರಾಹ್ಮಣ



## ಐದನೆಯ ಬ್ರಾಹ್ಮಣ



## ಪರಿಶಿಷ್ಟ



---

# ಮುನಿಖಿಲಕಾಂಡಗಳಲ್ಲಿ ಬಂದಿರುವ

# ಭಾಷ್ಯಚರ್ಚೆಗಳ ಅನುಕ್ರಮಣಿಕೆ

## ೫. ಉಷಸ್ತಕಹೋಲಪ್ರಶ್ನೆಗಳಿಗೆ ವಿಷಯವು ಒಂದೇಯೊ, ಬೇರೆಬೇರೆಯೊ ?



## ೬. ಕರ್ಮತ್ಯಾಗದ ವಿಷಯಕ್ಕೆ ಚರ್ಚೆ



## ೭. ಅಕ್ಷರ, ಅಂತರ್ಯಾಮಿ, ಜೀವರು– ಇವರುಗಳಿಗೆ ಭೇದವೇನು ?



## ೮. ಬ್ರಹ್ಮಾನಂದವು ಸಂವೇದ್ಯವೆ ?



## ೯. ಆತ್ಮಜ್ಯೋತಿಯ ವಿಷಯದಲ್ಲಿ ಆಕ್ಷೇಪಸಮಾಧಾನಗಳು



## ೧೦. ಬುದ್ಧಿವ್ಯತಿರಿಕ್ತಾತ್ಮನ ವಿಷಯಕ್ಕೆ ಚರ್ಚೆ

## ೧೧. ಕಾಮವು ಆತ್ಮಾಶ್ರಿತವೆಂಬ ಭರ್ತೃಪ್ರಪಂಚರ ಮತ

**ಭರ್ತೃಪ್ರಪಂಚರ ಮತವು ಶ್ರುತಿವಿರುದ್ಧ (೨೨೦)– ವೈಶೇಷಿಕಾದಿಗಳ ತರ್ಕವು ತರ್ಕಾಭಾಸ (೨೨೧)– ಭರ್ತೃಪ್ರಪಂಚರ ಮತವು ಶಾಸ್ತ್ರಾರ್ಥಕ್ಕೇ ವಿರುದ್ಧ (೨೨೨).**

**ಪುಟ ೪೫೦–೪೫೬**

## ೧೨. ಆತ್ಮನ ದೃಷ್ಟಿಯು ಅವಿನಾಶಿ ಎಂಬ ಬಗ್ಗೆ ಆಕ್ಷೇಪಸಮಾಧಾನಗಳು

**ಪುಟ ೪೫೯–೪೬೨**

## ೧೩. ಆತ್ಮನ ದೃಷ್ಟ್ಯಾದಿಗಳು ಪರಸ್ಪರಭಿನ್ನವೊ, ಅಭಿನ್ನವೊ?

**ಭರ್ತೃಪ್ರಪಂಚರ ಮತ : ದೃಷ್ಟ್ಯಾದಿಗಳು ಬೇರೆಬೇರೆ, ಆತ್ಮನಲ್ಲಿ ಒಂದೇ (೨೨೮)– ಈ ಮತವು ಶ್ರುತಿವಿರುದ್ಧ (೨೨೯)– ಆತ್ಮನು ಚಿನ್ಮಾತ್ರನೆಂಬುದಕ್ಕೆ ಯುಕ್ತಿ (೨೩೦)– ಆತ್ಮನು ಅನೇಕಾತ್ಮಕನೆಂಬುದು ಯುಕ್ತಿವಿರುದ್ಧ (೨೩೧).**

**ಪುಟ ೪೬೬–೪೭೩**

## ೧೪. ಚರ್ಚೆ : ಪ್ರಾಣಗಳು ಅನಂತವೊ, ಪರಿಚ್ಛಿನ್ನವೊ ?

**ಪುಟ ೫೨೬**

## ೧೫. ಪ್ರತ್ಯವಾಯಪರಿಹಾರಕ್ಕಾಗಿ ಜ್ಞಾನಿಯು ಕರ್ಮವನ್ನು ಮಾಡಬೇಕೆಂಬ ಪಕ್ಷದ ಖಂಡನೆ

**ಪುಟ ೫೪೫**

## ೧೬. ಬ್ರಹ್ಮಾಪ್ಯೇತಿ ಎಂಬುದರ ಅಭಿಪ್ರಾಯವೇನು ?

**ಜ್ಞಾನಿಗೆ ಸತ್ತಬಳಿಕ ಬೇರೊಂದು ಸ್ವಭಾವವುಂಟಾಗುವದಿಲ್ಲ (೨೭೧)– ಮೋಕ್ಷವು ಅಭಾವಸ್ವರೂಪವಲ್ಲ (೨೭೨)– ಮೋಕ್ಷದಲ್ಲಿ ಹೊಸ ವಿಜ್ಞಾನಾನಂದಗಳು ತೋರಿಕೊಳ್ಳಲಾರವು (೨೭೩)– ಆತ್ಮನಲ್ಲಿ ಮುಕ್ತಾಮುಕ್ತತ್ವಾದಿವಿಶೇಷವಿಲ್ಲ (೨೭೪)–ಬ್ರಹ್ಮಾಪ್ಯೇತಿ ಎಂಬುದು ಶರೀರಾಂತರಾಗ್ರಹಣವೆಂಬರ್ಥದಲ್ಲಿ ಉಪಚಾರಕ್ಕೆ ಹೇಳಿದ್ದು (೨೭೫).**

**ಪುಟ ೫೪೭–೫೯**

## ೧೭. ಚರ್ಚೆ: ಮೋಕ್ಷವನ್ನು ಹೇಳಿದಾಗಲೇ ಜನಕನು ಸರ್ವಸ್ವವನ್ನೂ ಕೊಡಲಿಲ್ಲವೇಕೆ ?

**ಕೆಲವರ ಅಭಿಪ್ರಾಯ: ಜನಕನಿಗೆ ಇನ್ನೂ ಶ್ರವಣೇಚ್ಛೆಯಿದೆ (೨೮೦)– ಸಿದ್ಧಾಂತ: ಆತ್ಮಜ್ಞಾನಾಂಗವಾದ ಸಂನ್ಯಾಸವನ್ನು ಹೇಳತಕ್ಕದ್ದಿದೆ (೨೮೧).**

**ಪುಟ ೫೬೮ರಿಂದ ೫೭೧**

---

# ಸಂಕೇತಗಳ ವಿವರ

ಬೃಹದಾರಣ್ಯಕದ ಎರಡು ಸಂಪುಟಗಳಲ್ಲಿ ಉಪಯೋಗಿಸಿರುವ ಕೆಲವು ಸಂಕೇತಗಳನ್ನು ಮಾತ್ರ ವಿವರಿಸಿದೆ. ಈ ಗ್ರಂಥರತ್ನಮಾಲೆಯಲ್ಲಿ ಉಪಯೋಗಿಸಿರುವ ಇತರ ಸಂಕೇತಗಳೂ ಇಲ್ಲಿ ಕಾಣಬರುತ್ತವೆ.

| ಸಂಕೇತ | ವಿವರ |
|---|---|
| ಅ॥ಪಾಠ | ಅಷ್ಟೇಕರ್ ಮುದ್ರಿತಪುಸ್ತಕದ ಪಾಠ |
| ಅಶ್ವ. | ಅಶ್ವಮೇಧಪರ್ವ |
| ಆ.ಧ., ಆ.ಧ.ಸೂ. | ಆಪಸ್ತಂಬಧರ್ಮಸೂತ್ರ |
| ಆ.ಟೀ., ಆ.ಗಿ. | ಆನಂದಗಿರಿಯ ಟೀಕೆ |
| ಆ॥ ಪಾಠ | ಆನಂದಾಶ್ರಮ ಮುದ್ರಿತಪುಸ್ತಕದ ಪಾಠ |
| ಉ.ಸಾ.ಪ. | ಉಪದೇಶಸಾಹಸ್ರೀ ಪದ್ಯ |
| ಕ.ಠ. | ಕಠರುದ್ರೋಪನಿಷತ್ತು |
| ಜೈ.ಸೂ.ಭಾ. | ಜೈಮಿನೀಯಸೂತ್ರಭಾಷ್ಯ |
| ತೈ.ಆ. | ತೈತ್ತಿರೀಯಾರಣ್ಯಕ |
| ತೈ.ತೈ.ಸಂ. | ತೈತ್ತಿರೀಯಸಂಹಿತೆ |
| ತೈ.ನಾ. | ತೈತ್ತಿರೀಯೋಪನಿಷತ್ತು, ನಾರಾಯಣ |
| ತಂ.ವಾ. | ತಂತ್ರವಾರ್ತಿಕ |
| ಪಾ., ಪಾ.ಸೂ. | ಪಾಣಿನೀಯಸೂತ್ರ |
| ಯೋ.ಸೂ., ಯೋಗಸೂ. | ಯೋಗಸೂತ್ರ |
| ವ. | ವಸಿಷ್ಠಸ್ಮೃತಿ |

|| ಓಂ ||

ಶಾಂಕರಭಾಷ್ಯಸಮೇತವಾದ

# ಬೃಹದಾರಣ್ಯಕೋಪನಿಷತ್ತು



## ಮುನಿಕಾಂಡ

## ಮೂರನೆಯ ಅಧ್ಯಾಯ-ಒಂದನೆಯ ಬ್ರಾಹ್ಮಣ

(ಅಶ್ವಲಪ್ರಶ್ನೆ: ಮೃತ್ಯುವಿನಿಂದ ಬಿಡುಗಡ ಹೇಗೆ?)

### ಮುನಿಕಾಂಡದ ಸಂಬಂಧ

(ಭಾಷ್ಯ)

೧. "ಜನಕೋ ಹ ವೈದೇಹಃ" ಇತ್ಯಾದಿ ಯಾಜ್ಞವಲ್ಕೀಯಂ ಕಾಣ್ಡಮ್ ಆರಭ್ಯತೇ| ಉಪಪತ್ತಿಪ್ರಧಾನತ್ವಾತ್ ಅತಿಕ್ರಾನ್ತೇನ ಮಧುಕಾಣ್ಡೇನ ಸಮಾನಾರ್ಥತ್ವೇಽಪಿ ಸತಿ ನ ಪುನರುಕ್ತತಾ| ಮಧುಕಾಣ್ಡಂ ಹಿ ಆಗಮಪ್ರಧಾನಮ್| ಆಗಮೋಪಪತ್ತೀ ಹಿ ಆತ್ಮೈಕತ್ವಪ್ರಕಾಶನಾಯ ಪ್ರವೃತ್ತೇ ಶಕ್ನುತಃ ಕರತಲಗತ ಬಿಲ್ವಮಿವ ದರ್ಶಯಿತುಮ್| "ಶ್ರೋತವ್ಯೋ ಮನ್ತವ್ಯಃ" (೨-೪-೫) ಇತಿ ಹಿ ಉಕ್ತಮ್| ತಸ್ಮಾತ್ ಆಗಮಾರ್ಥಸ್ಯೈವ ಪರೀಕ್ಷಾಪೂರ್ವಕಂ ನಿರ್ಧಾರಣಾಯ ಯಾಜ್ಞವಲ್ಕೀಯಂ ಕಾಣ್ಡಮ್ ಉಪಪತ್ತಿಪ್ರಧಾನಮ್ ಆರಭ್ಯತೇ ||

(ಭಾಷ್ಯಾರ್ಥ)

'ಜನಕೋ ಹ ವೈದೇಹಃ' (೩-೧-೧) ಎಂದು ಮೊದಲಾಗಿರುವ ಯಾಜ್ಞವಲ್ಕೀಯಕಾಂಡವನ್ನು (ಈಗ) ಆರಂಭಿಸಿರುತ್ತದೆ. (ಇದು) ಉಪಪತ್ತಿಪ್ರಧಾನವಾಗಿರುವದರಿಂದ[1] ಹಿಂದೆ ಆಗಿಹೋಗಿರುವ ಮಧುಕಾಂಡದ ಅರ್ಥವೇ (ಇದಕ್ಕೂ) ಸಮಾನವಾಗಿದ್ದರೂ ಪುನರುಕ್ತಿ(ದೋಷ)ವಾಗುವದಿಲ್ಲ, ಏಕೆಂದರೆ ಮಧುಕಾಂಡವು ಆಗಮಪ್ರಧಾನವು.[2] **ಆಗಮೋಪಪತ್ತಿಗಳೆರಡೂ ಆತ್ಮೈಕತ್ವವನ್ನು**

---

1. **ಉಪಪತ್ತಿ ಅಂದರೆ ಆಗಮದಿಂದ ತಿಳಿದದ್ದನ್ನು ಗಟ್ಟಿಗೊಳಿಸುವ ಯುಕ್ತಿ.**

2. **ಆಗಮವೆಂದರೆ ಉಪದೇಶವು, ಮಧುಕಾಂಡದಲ್ಲಿಯೂ ಯುಕ್ತಿಯಿದೆಯಾದರೂ ಅದು ಆಗಮಕ್ಕೆ ಎರಡನೆಯದಾಗಿದೆಯಾದ್ದರಿಂದ ಆಗಮವೇ ಅಲ್ಲಿ ಮುಖ್ಯ.**

**ತೋರಿಸಿಕೊಡುವದಕ್ಕೆ ಪ್ರವೃತ್ತವಾದರೆ (ಅದನ್ನು) ಅಂಗೈಯಲ್ಲಿರುವ ಬಿಲ್ವದಂತೆ ತಿಳಿಸಿಕೊಡುವದಕ್ಕೆ ಸಮರ್ಥವಾಗುತ್ತವೆ.** "(ಆತ್ಮನನ್ನು) ಶ್ರವಣಮಾಡಬೇಕು, ಮನನಮಾಡಬೇಕು" (೨-೪-೫) ಎಂದಲ್ಲವೆ, ಹಿಂದೆ ಹೇಳಿದೆ ?[1] ಆದ್ದರಿಂದ **ಆಗಮಾರ್ಥವನ್ನೇ ಪರೀಕ್ಷಾಪೂರ್ವಕವಾಗಿ ಗೊತ್ತು ಪಡಿಸುವದಕ್ಕಾಗಿ**[2] **ಉಪಪತ್ತಿಪ್ರಧಾನವಾದ (ಈ)ಯಾಜ್ಞವಲ್ಕೀಯಕಾಂಡ ವನ್ನು ಆರಂಭಿಸಿರುತ್ತದೆ.**

## ಆಖ್ಯಾಯಿಕೆಯ ತಾತ್ಪರ್ಯ

(ಭಾಷ್ಯ)

೨. ಆಖ್ಯಾಯಿಕಾ ತು ವಿಜ್ಞಾನಸ್ತುತ್ಯರ್ಥಾ ಉಪಾಯವಿಧಿಪರಾ ವಾ। ಪ್ರಸಿದ್ಧೋ ಹಿ ಉಪಾಯೋ ವಿದ್ವದ್ಭಿಃ ಶಾಸ್ತ್ರೇಷು ಚ ದೃಷ್ಟೋ ದಾನಮ್। ದಾನೇನ ಹಿ ಉಪನಮನ್ತೇ ಪ್ರಾಣಿನಃ। ಪ್ರಭೂತಂ ಹಿರಣ್ಯಂ ಗೋಸಹಸ್ರದಾನಂ ಚ ಇಹ ಉಪಲಭ್ಯತೇ। ತಸ್ಮಾತ್ ಅನ್ಯಪರೇಣಾಪಿ ಶಾಸ್ತ್ರೇಣ ವಿದ್ಯಾಪ್ರಾಪ್ತ್ಯು ಪಾಯದಾನಪ್ರದರ್ಶನಾರ್ಥಾ ಆಖ್ಯಾಯಿಕಾ ಆರಬ್ಧಾ। ಅಪಿ ಚ ತದ್ವಿದ್ಯ ಸಂಯೋಗಃ ತೈಶ್ಚ ಸಹ ವಾದಕರಣಂ ವಿದ್ಯಾಪ್ರಾಪ್ತ್ಯುಪಾಯೋ ನ್ಯಾಯ ವಿದ್ಯಾಯಾಂ ದೃಷ್ಟಃ। ತಚ್ಚ ಅಸ್ಮಿನ್ ಅಧ್ಯಾಯೇ ಪ್ರಾಬಲ್ಯೇನ ಪ್ರದರ್ಶ್ಯತೇ। ಪ್ರತ್ಯಕ್ಷಾ ಚ ವಿದ್ವತ್ಸಂಯೋಗೇ ಪ್ರಜ್ಞಾವೃದ್ಧಿಃ। ತಸ್ಮಾತ್ ವಿದ್ಯಾಪ್ರಾಪ್ತ್ಯು ಪಾಯಪ್ರದರ್ಶನಾರ್ಥೈವ ಆಖ್ಯಾಯಿಕಾ ॥

(ಭಾಷ್ಯಾರ್ಥ)

(ಇಲ್ಲಿರುವ) ಕಥೆಯಾದರೋ (ಆತ್ಮ)ವಿಜ್ಞಾನವನ್ನು ಹೊಗಳುವದಕ್ಕಾಗಿ (ಬಂದಿದೆ).[3] ಅಥವಾ (ಜ್ಞಾನಪ್ರಾಪ್ತಿಗೆ) ಉಪಾಯವನ್ನು ವಿಧಿಸುವದಕ್ಕಾಗಿ

---

1. ವಸ್ತುಜ್ಞಾನವು ಶ್ರವಣಮಾತ್ರದಿಂದ ಆಗದಿರುವಾಗ ಮನನವೂ ಬೇಕೆಂಬುದು ಸ್ವಾಭಾವಿಕ.

2. ಆಗಮೋಪಪತ್ತಿಗಳೆರಡೂ ಎಂದದ್ದರಿಂದ ಅವು ಸಮಪ್ರಧಾನವೆಂದು ಭಾವಿಸ ಲಾಗದು; ಉಪಪತ್ತಿಯು ಇಲ್ಲಿ ಪ್ರಧಾನವಾಗಿದ್ದರೂ ಆಗಮಕ್ಕೆ ಸ್ವಾತಂತ್ರ್ಯವು ತಪ್ಪುವದಿಲ್ಲ. ಆತ್ಮ ಯಾಥಾತ್ಮ್ಯವು ಪ್ರತ್ಯಕ್ಷಾದಿಗಳಿಗೆ ಗೋಚರವಲ್ಲವಾದ್ದರಿಂದ ಇಲ್ಲಿ ತರ್ಕಕ್ಕೆ ಸ್ವಾತಂತ್ರ್ಯವಿರುವದಿಲ್ಲ. ಆಗಮಪ್ರಮಾಣಕ್ಕೆ ಶೇಷವಾಗಿಯೇ ಇಲ್ಲಿ ಯುಕ್ತಿಗಳನ್ನು ಹೇಳಿದೆ ಎಂದು ಅಭಿಪ್ರಾಯ. ಉಪಪತ್ತಿ ಎಂದರೆ ಸ್ವತಂತ್ರವಾದ ಅನುಮಾನಪ್ರಮಾಣವಲ್ಲ, ಆಗಮಪ್ರಮಾಣದಿಂದ ತಿಳಿದ ದ್ದನ್ನು ಶೋಧಿಸಿ ತಿಳಿಯುವ ಯುಕ್ತಿಮಾತ್ರವು. ತರ್ಕಶುದ್ಧವಾದ ಅರ್ಥವೇ ಪ್ರಮಾಣದಿಂದ ತಿಳಿಯತಕ್ಕದ್ದು ಎಂಬುದಕ್ಕೆ ನ್ಯಾ. ಭಾ. ೧-೧-೧, ೧-೧-೪೦ ಇವುಗಳಲ್ಲಿರುವ ತರ್ಕವಿಚಾರ ವನ್ನು ನೋಡಿರಿ. ಈ ಯುಕ್ತಿಯು ಪದಾರ್ಥಗಳ ಜ್ಞಾನಕ್ಕೆ ಸಂಬಂಧಪಟ್ಟದ್ದು, ವಾಕ್ಯಾ ರ್ಥವು ಆಗಮದಿಂದಲೇ ತಿಳಿಯಬರತಕ್ಕದ್ದು.

3. ಜ್ಞಾನಿಗಳನ್ನು ಇಲ್ಲಿ ಬಹಳವಾಗಿ ಗೌರವಿಸಿದೆಯಾದ್ದರಿಂದ ಜ್ಞಾನವನ್ನು ಹೊಗಳಿ ದಂತೆ ಆಯಿತು.

(ಬಂದಿದೆ-ಎಂದೂ ಹೇಳಬಹುದು) **ದಾನವೆಂಬುದು (ಜ್ಞಾನಪ್ರಾಪ್ತಿಗೆ) ಉಪಾಯವೆಂಬುದು** ಪ್ರಸಿದ್ಧವಾಗಿರುತ್ತದೆ, ಇದನ್ನು ಬಲ್ಲವರೂ ತಿಳಿಸಿರುತ್ತಾರೆ,[1] ಶಾಸ್ತ್ರಗಳಲ್ಲಿಯೂ (ಹಾಗೆಂದು) ಕಂಡುಬರುತ್ತದೆ[2] ದಾನದಿಂದ ಜನರು ನಮ್ಮವರಾಗುತ್ತಾರಲ್ಲವೆ ? ಹೆಚ್ಚಿನ (ಪರಿಮಾಣದ) ಬಂಗಾರವನ್ನೂ ಸಾವಿರ ಗೋಗಳನ್ನೂ ದಾನಮಾಡಿರುವದು ಇಲ್ಲಿ ಕಂಡುಬರುತ್ತದೆ. ಆದ್ದರಿಂದ ಶಾಸ್ತ್ರವು ಬೇರೊಂದರಲ್ಲಿ ತಾತ್ಪರ್ಯವುಳ್ಳದ್ದಾದರೂ[3] ಜ್ಞಾನಪ್ರಾಪ್ತಿಗೆ ಉಪಾಯವಾಗಿರುವ ದಾನವನ್ನು ತಿಳಿಸುವದಕ್ಕಾಗಿ[4] ಆಖ್ಯಾಯಿಕೆಯನ್ನು (ಇಲ್ಲಿ) ಪ್ರಾರಂಭಿಸಿರುತ್ತದೆ. ಇದಲ್ಲದೆ, **ಆ ವಿದ್ಯೆಯುಳ್ಳ (ಬಲ್ಲವರೊಡನೆ) ಸೇರುವದೂ ಅವರೊಡನೆ ವಾದವನ್ನು ಮಾಡುವದೂ ಜ್ಞಾನಪ್ರಾಪ್ತಿಗೆ ಉಪಾಯವೆಂಬುದು ನ್ಯಾಯವಿದ್ಯೆಯಲ್ಲಿ ಕಂಡುಬಂದಿದೆ**[5] ಮತ್ತು ಆ (ವಾದವನ್ನು) ಈ ಅಧ್ಯಾಯದಲ್ಲಿ ಬಹಳವಾಗಿ ತಿಳಿಸಿರುತ್ತದೆ ತಿಳಿದವರ ಸಂಬಂಧದಿಂದ ಪ್ರಜ್ಞೆಯು ಬೆಳೆಯುವದು ಪ್ರತ್ಯಕ್ಷವಾಗಿಯೂ ಇರುತ್ತದೆ. ಆದ್ದರಿಂದ ಜ್ಞಾನಪ್ರಾಪ್ತಿಗೆ ಉಪಾಯವನ್ನು ತಿಳಿಸುವದಕ್ಕಾಗಿಯೇ (ಈ) ಆಖ್ಯಾಯಿಕೆಯು (ಬಂದಿರುತ್ತದೆ)[6]

## ಜನಕನು ಬ್ರಹ್ಮಿಷ್ಠಪಣವನ್ನು ಒಡ್ಡಿದ್ದು

(ಉಪನಿಷತ್ತು)

**ಜನಕೋ ಹ ವೈದೇಹೋ ಬಹುದಕ್ಷಿಣೇನ ಯಜ್ಞೇನೇಜೇ ತತ್ರ ಕುರುಪಞ್ಚಾಲಾನಾಂ ಬ್ರಾಹ್ಮಣಾ ಅಭಿಸಮೇತಾ ಬಭೂವುಸ್ತಸ್ಯ ಹ ಜನಕಸ್ಯ ವೈದೇಹಸ್ಯ ವಿಜಿಜ್ಞಾಸಾ ಬಭೂವ ಕಃಸ್ವಿದೇಷಾಂ ಬ್ರಾಹ್ಮಣಾನಾಮನೂಚಾನತಮ ಇತಿ ಸ ಹ ಗವಾಗ್ಂ ಸಹಸ್ರಮವ**

---

1. ಸ್ಮೃತಿಕಾರರು ಹಾಗೆಂದು ಹೇಳಿರುತ್ತಾರೆ.

2. ಉದಾಹರಣೆಗೆ ತೈ. ನಾ ೭೯ ನ್ನು ನೋಡಿರಿ.

3. ಹಿಂದಿನ ಕಾಂಡದ ಅರ್ಥವನ್ನೇ ತರ್ಕದಿಂದ ಸಮರ್ಥಿಸುವದರಲ್ಲಿ ಪರಮತಾತ್ಪರ್ಯವುಳ್ಳದ್ದಾಗಿದ್ದರೂ ಎಂದರ್ಥ.

4. ಜ್ಞಾನಪ್ರಾಪ್ತಿಸಾಧನವನ್ನು ತಿಳಿಸುವದರಲ್ಲಿ ಶಾಸ್ತ್ರಕ್ಕೆ ಅವಾಂತರತಾತ್ಪರ್ಯವಿದೆ ಎಂದು ಭಾವ.

5. ವೀತರಾಗರಾದವರು ಮಾಡಿದ ಚರ್ಚೆಗೆ ತತ್ತ್ವಜ್ಞಾನವು ಫಲವೆಂದು ನೈಯಾಯಿಕರು ಹೇಳುವರು.

6. ಬರಿಯ ಜ್ಞಾನಸ್ತುತಿಗೋಸ್ಕರ ಕಥೆಯು ಬಂದಿಲ್ಲ, ದಾನ, ತದ್ವಿದ್ಯರೊಡನೆ ಸಂವಾದ- ಎಂಬ ಜ್ಞಾನಪ್ರಾಪ್ತ್ಯುಪಾಯಗಳನ್ನು ತಿಳಿಸಿಕೊಡುವದಕ್ಕೆ ಮುಖ್ಯವಾಗಿ ಬಂದಿದೆ ಎಂದು ಅಭಿಪ್ರಾಯ; ಉಪನಿಷತ್ತುಗಳಲ್ಲಿರುವ ಇಂಥ ಕಥೆಗಳು ಕರ್ಮಾಂಗವೆಂದು ಭಾವಿಸಬಾರದೆಂಬುದಕ್ಕೆ ಸೂ. ಭಾ. ೩-೪-೨೩, ೨೪(ಭಾ. ಭಾ. ೪೬೫,೪೬೭) ಇವನ್ನು ನೋಡಿ.

**ರುರೋಧ ದಶ ದಶ ಪಾದಾ ಏಕೈಕಸ್ಯಾಃ ಶೃಙ್ಗಯೋರಾಬದ್ಧಾ ಬಭೂವುಃ || ೧ ||**

೧. ಜನಕವೈದೇಹನು ಬಹುದಕ್ಷಿಣಯಜ್ಞವನ್ನು ಮಾಡಿದನು. ಅಲ್ಲಿ ಕುರುಪಂಚಾಲಗಳ ಬ್ರಾಹ್ಮಣರು ಒಟ್ಟುಗೂಡಿದವರಾಗಿದ್ದರು. ಆ ಜನಕವೈದೇಹನಿಗೆ ಈ ಬ್ರಾಹ್ಮಣರಲ್ಲಿ ಅನೂಚಾನತಮನು ಯಾರು? ಎಂಬ ವಿಜಿಜ್ಞಾಸೆಯುಂಟಾಯಿತು, ಅವನು ಗೋಗಳ ಸಹಸ್ರವನ್ನು ಕಟ್ಟಿಸಿದನು; ಒಂದೊಂದರ ಕೋಡುಗಳಲ್ಲಿ ಹತ್ತು ಹತ್ತು ಪಾದಗಳು ಸೆಕ್ಕಿಸಿದ್ದವು.

(ಭಾಷ್ಯ)

೨ ಜನಕೋ ನಾಮ ಹ ಕಿಲ ಸಮ್ರಾಡ್ರಾಜಾ ಬಭೂವ ವಿದೇಹಾನಾಮ್| ತತ್ರ ಭವೋ ವೈದೇಹಃ| ಸ ಚ ಬಹುದಕ್ಷಿಣೇನ ಯಜ್ಞೇನ–ಶಾಖಾನ್ತರಪ್ರಸಿದ್ಧೋ ವಾ ಬಹುದಕ್ಷಿಣೋ ನಾಮ ಯಜ್ಞಃ ಅಶ್ವಮೇಧೋ ವಾ ದಕ್ಷಿಣಾಬಾಹುಲ್ಯಾತ್ ಬಹುದಕ್ಷಿಣ ಇಹೋಚ್ಯತೇ– ತೇನ ಈಜೇ ಅಯಜತ್| ತತ್ರ ತಸ್ಮಿನ್ ಯಜ್ಞೇ ನಿಮನ್ತ್ರಿತಾ ದರ್ಶನಕಾಮಾ ವಾ ಕುರೂಣಾಂ ದೇಶಾನಾಂ ಪಞ್ಚಾಲಾನಾಂ ಚ ಬ್ರಾಹ್ಮಣಾಃ| ತೇಷು ಹಿ ವಿದುಷಾಂ ಬಾಹುಲ್ಯಂ ಪ್ರಸಿದ್ಧಮ್| ಅಭಿಸಮೇತಾ ಅಭಿಸಂಗತಾ ಬಭೂವುಃ| ತತ್ರ ಮಹಾನ್ತಂ ವಿದ್ವತ್ಸಮುದಾಯಂ ದೃಷ್ಟ್ವಾ ತಸ್ಯ ಹ ಕಿಲ ಜನಕಸ್ಯ ವೈದೇಹಸ್ಯ ಯಜಮಾನಸ್ಯ ಕೋ ನು ಖಲು ಅತ್ರ ಬ್ರಹ್ಮಿಷ್ಠಃ? ಇತಿ ವಿಶೇಷೇಣ ಜ್ಞಾತುಮ್ ಇಚ್ಛಾ ಜಿಜ್ಞಾಸಾ ಬಭೂವ| ಕಥಮ್? ಕಃಸ್ವಿತ್ ಕೋ ನು ಖಲು ಏಷಾಂ ಬ್ರಾಹ್ಮಣಾನಾಮ್ ಅನೂಚಾನತಮಃ? ಸರ್ವ ಇಮೇ ಅನೂಚಾನಾಃ| ಕಃಸ್ವಿತ್ ಏಷಾಮ್ ಅತಿಶಯೇನ ಅನೂಚಾನಃ? ಇತಿ| ಸ ಹ ಅನೂಚಾನತಮವಿಷಯೋತ್ಪನ್ನಜಿಜ್ಞಾಸಃ ಸನ್ ತದ್ವಿಜ್ಞಾನೋಪಾಯಾರ್ಥಂ ಗವಾಂ ಸಹಸ್ರಂ ಪ್ರಥಮವಯಸಾಮ್ ಅವರುರೋಧ ಗೋಷ್ಠೇ ಅವರೋಧಂ ಕಾರಯಾಮಾಸ| ಕಿಂವಿಶಿಷ್ಟಾಸ್ತಾ ಗಾವೋಽವರುದ್ಧಾ ಇತಿ? ಉಚ್ಯತೇ| ಪಲಚತುರ್ಥಭಾಗಃ ಪಾದಃ ಸುವರ್ಣಸ್ಯ| ದಶ ದಶ ಪಾದಾ ಏಕೈಕಸ್ಯಾಃ ಗೋಃ ಶೃಙ್ಗಯೋಃ ಆಬದ್ಧಾ ಬಭೂವುಃ| ಪಞ್ಚ ಪಞ್ಚ ಪಾದಾ ಏಕೈಕಸ್ಮಿನ್ ಶೃಙ್ಗೇ||

(ಭಾಷ್ಯಾರ್ಥ)

ಜನಕನೆಂಬ ವಿದೇಹದೇಶದ ಸಮ್ರಾಜರಾಜನಿದ್ದನು. (ಹ = ಕಿಲ ಎಂದರೆ) ಅಂತೆ.[1] ಆ (ವಿದೇಹದ)ಲ್ಲಿದ್ದವನಾದ್ದರಿಂದ (ಅವನು) ವೈದೇಹನು, ಆ (ವೈದೇ

1. ಹ ಎಂಬುದು ಭೂತಕಾಲದ ವಿಷಯವೆಂಬುದನ್ನು ನೆನಪಿಗೆ ಕೊಡುವ ನಿಪಾತವು. ಇದನ್ನು ಬಹಳ ಕಡೆಗಳಲ್ಲಿ ನಾವು ಕನ್ನಡಿಸಿಲ್ಲ.

ಹನು) ಬಹುದಕ್ಷಿಣಯಜ್ಞವನ್ನು—ಶಾಖಾಂತರದಲ್ಲಿ ಪ್ರಸಿದ್ಧವಾಗಿರುವ (ಒಂದಾನೊಂದು) ಯಜ್ಞಕ್ಕೆ ಬಹುದಕ್ಷಿಣ(ಯಜ್ಞ)ವೆಂದು ಹೆಸರು.[1] ಅಥವಾ ಅಶ್ವಮೇಧ(ದಲ್ಲಿ) ಬಹಳ ದಕ್ಷಿಣೆಯಿರುವದರಿಂದ[2] (ಅದನ್ನೇ) ಇಲ್ಲಿ ಬಹುದಕ್ಷಿಣ (ಯಜ್ಞ)ವೆಂದಿದೆ ಎಂದಾದರೂ (ಇಟ್ಟುಕೊಳ್ಳಬಹುದು). ಆ (ಯಜ್ಞವನ್ನು)—ಮಾಡಿದನು, ಯಾಗಮಾಡಿದನು. ಅಲ್ಲಿ ಆ ಯಜ್ಞದಲ್ಲಿ ನಿಮಂತ್ರಿತರಾಗಿ ಅಥವಾ (ಅದನ್ನು) ನೋಡಬೇಕೆಂಬ ಇಚ್ಛೆಯಿಂದ ಕುರುದೇಶದ ಮತ್ತು ಪಂಚಾಲದೇಶದ ಬ್ರಾಹ್ಮಣರು– ಆ ದೇಶಗಳಲ್ಲಲ್ಲವೆ, ವಿದ್ವಾಂಸರು ಬಹಳವಾಗಿರುವರುವರೆಂದು ಪ್ರಸಿದ್ಧ(ವಾಗಿರುವದು)?–ಒಟ್ಟುಗೂಡಿದವರಾಗಿದ್ದರು ಬಂದು ಸೇರಿದ (ವರಾಗಿದ್ದರು)

ಅಲ್ಲಿ ದೊಡ್ಡ ವಿದ್ವತ್ಸಮುದಾಯವನ್ನು ಕಂಡು ಆ ಯಜಮಾನನಾದ ಜನಕ ವೈದೇಹನಿಗೆ ಇಲ್ಲಿ ಬ್ರಹ್ಮಿಷ್ಠನು ಯಾರೊ! ಎಂದು ವಿಜಿಜ್ಞಾಸೆಯು ವಿಶೇಷವಾಗಿ ಅರಿತುಕೊಳ್ಳುವ ಇಚ್ಛೆಯು ಉಂಟಾಯಿತಂತೆ ಹೇಗೆ? (ಕಃಸ್ವಿತ್=ಕೋ ನು ಖಲು) ಈ ಬ್ರಾಹ್ಮಣರಲ್ಲಿ ಅನೂಚಾನತಮನು ಯಾವನೊ! ಇವರೆಲ್ಲರೂ ಅನೂಚಾನರೇ[3], (ಆದರೆ) ಇವರೊಳಗೆ ಬಹು ಹೆಚ್ಚಿನ ಅನೂಚಾನನು ಯಾವನೊ? ಎಂದು (ವಿಜಿಜ್ಞಾಸೆಯುಂಟಾಯಿತು)

(ಹೀಗೆ) ಅನೂಚಾನತಮನ ವಿಷಯದಲ್ಲಿ ಜಿಜ್ಞಾಸೆಯುಂಟಾಗಿ ಅವನು ಅದನ್ನು ಅರಿತುಕೊಳ್ಳುವದಕ್ಕೆ ಸಾಧನವಾಗಿ ಕಿರಿಯ ವಯಸ್ಸಿನ ಸಾವಿರ ಗೋಗಳನ್ನು ಕಟ್ಟಿಸಿದನು, (ದನದ) ಕೊಟ್ಟಿಗೆಯಲ್ಲಿ ಕಟ್ಟಿಹಾಕಿಸಿದನು ಆ ಕಟ್ಟಿಸಿದ್ದ ಗೋಗಳು ಎಂಥವುಗಳು ಎಂದರೆ (ಶ್ರುತಿ) ಹೇಳುತ್ತದೆ. (ಒಂದು) ಪಲ ಚಿನ್ನದ ನಾಲ್ಕನೆಯ ಭಾಗಕ್ಕೆ ಪಾದ(ವೆಂದು ಹೆಸರು) ಒಂದೊಂದು ಗೋವಿನ ಕೋಡುಗಳಲ್ಲಿ ಹತ್ತು ಹತ್ತು ಪಾದಗಳು ಸೆಕ್ಕಿಸಿದ್ದವು, ಒಂದೊಂದು ಕೋಡಿನಲ್ಲಿ ಐವೈದು ಪಾದಗಳು (ಇದ್ದವು)

## ಯಾಜ್ಞವಲ್ಕ್ಯನು ಪಣವನ್ನು ಸ್ವೀಕರಿಸಿದ್ದು

(ಉಪನಿಷತ್ತು)

**ತಾನ್ ಹೋವಾಚ ಬ್ರಾಹ್ಮಣಾ ಭಗವನ್ತೋ ಯೋ ವೋ ಬ್ರಹ್ಮಿಷ್ಠಃ ಸ ಏತಾ ಗಾ ಉದಜತಾಮಿತಿ। ತೇ ಹ ಬ್ರಾಹ್ಮಣಾ ನ ದಧೃಷುಃ**

---

1. ಬಹುದಕ್ಷಿಣವೆಂಬ ಯಾಗವು ಯಾವ ಶಾಖೆಯಲ್ಲಿ ವಿಹಿತವಾಗಿದೆಯೋ ತಿಳಿಯದು.
2. ಅಶ್ವಮೇಧಪ್ರಕರಣದಲ್ಲಿ ಈ ಯಾಗಕ್ಕೆ ಬಹಳ ದಕ್ಷಿಣೆಯನ್ನು ಹೇಳಿದೆ.
3. ಅನೂಚಾನನೆಂದರೆ ವೇದಾರ್ಥವನ್ನು ಅನುವಚನಮಾಡುವ ಸಾಮರ್ಥ್ಯವುಳ್ಳವನು.

**ರಥ ಹ ಯಾಜ್ಞವಲ್ಕ್ಯಃ ಸ್ವಮೇವ ಬ್ರಹ್ಮಚಾರಿಣಮುವಾಚೈತಾಃ ಸೋಮ್ಯೋದಜ ಸಾಮಶ್ರವಾ ಇತಿ ತಾ ಹೋದಾಚಕಾರ ತೇ ಹ ಬ್ರಾಹ್ಮಣಾಶ್ಚುಕ್ರುಧುಃ ಕಥಂ ನೋ ಬ್ರಹ್ಮಿಷ್ಠೋ ಬ್ರುವೀತೇತ್ಯಥ ಹ ಜನಕಸ್ಯ ವೈದೇಹಸ್ಯ ಹೋತಾಽಶ್ವಲೋ ಬಭೂವ ಸ ಹೈನಂ ಪಪ್ರಚ್ಛ ತ್ವಂ ನು ಖಲು ನೋ ಯಾಜ್ಞವಲ್ಕ್ಯ ಬ್ರಹ್ಮಿಷ್ಠೋಽಸೀ ಇತಿ ಸ ಹೋವಾಚ ನಮೋ ವಯಂ ಬ್ರಹ್ಮಿಷ್ಠಾಯ ಕುರ್ಮೋ ಗೋಕಾಮಾ ಏವ ವಯಗ್ಂ ಸ್ಮ ಇತಿ ತಗ್ಂ ಹ ತತ ಏವ ಪ್ರಷ್ಟುಂ ದಧ್ರೇ ಹೋತಾಽಶ್ವಲಃ ||೨||**

೨. ಅವರನ್ನು (ಕುರಿತು) "ಪೂಜ್ಯರಾದ ಬ್ರಾಹ್ಮಣರುಗಳಿರಾ, ನಿಮ್ಮಲ್ಲಿ ಯಾವನು ಬ್ರಹ್ಮಿಷ್ಠನೋ ಅವನು ಈ ಗೋಗಳನ್ನು ಹೊಡೆದು ಕೊಂಡು ಹೋಗಲಿ!" ಎಂದು ನುಡಿದನು. ಆ ಬ್ರಾಹ್ಮಣರು ಎದೆಗಾರ ರಾಗಲಿಲ್ಲ. ಆಗ ಯಾಜ್ಞವಲ್ಕ್ಯನು ತನ್ನವನೇ ಆದ ಬ್ರಹ್ಮಚಾರಿಯನ್ನು (ಕುರಿತು) "ಸೋಮ್ಯ ಸಾಮಶ್ರವನೆ, ಇವುಗಳನ್ನು (ಮನೆಗೆ) ಹೊಡೆದು ಕೊಂಡು ಹೋಗು!" ಎಂದನು. (ಅವನು) ಅವುಗಳನ್ನು ಹೊಡದು ಕೊಂಡು ಹೋದನು. "ನಮ್ಮಗಳಲ್ಲಿ (ತಾನೇ) ಬ್ರಹ್ಮಿಷ್ಠನೆಂದು ಹೇಗೆ ತಾನೆ ಹೇಳಿಕೊಂಡನು?" ಎಂದು ಬ್ರಾಹ್ಮಣರು ಕ್ರುದ್ಧರಾದರು. ಆಗ ಜನಕವೈದೇಹನ ಹೋತೃವಾದ ಅಶ್ವಲನೆಂಬುವನು (ಅಲ್ಲಿ)ದ್ದನು. ಅವನು "ಯಾಜ್ಞವಲ್ಕ್ಯ, ನೀನೇ ಅಲ್ಲವೆ, ನಮ್ಮೊಳಗೆ ಬ್ರಹ್ಮಿಷ್ಠನಾಗಿರುವೆ?" ಎಂದು ಇವನನ್ನು ಕೇಳಿದನು. ಆ (ಯಾಜ್ಞವಲ್ಕ್ಯನು) "ನಾವು ಬ್ರಹ್ಮಿಷ್ಠ ನಿಗೆ ನಮಸ್ಕಾರವನ್ನು ಮಾಡುತ್ತೇವೆ; ನಾವು ಗೋಕಾಮರೇ ಆಗಿರು ತ್ತೇವೆ" ಎಂದನು. ಅದರಿಂದಲೇ ಹೋತೃ ಅಶ್ವಲನು ಅವನನ್ನು ಪ್ರಶ್ನಿಸು ವದಕ್ಕೆ ನಿಶ್ಚಯಿಸಿದನು.

(ಭಾಷ್ಯ)

೪. ಗಾಃ ಏವಮ್ ಅವರುಧ್ಯ ಬ್ರಾಹ್ಮಣಾನ್ ತಾನ್ ಹೋವಾಚ 'ಹೇ ಬ್ರಾಹ್ಮಣಾ ಭಗವನ್ತಃ' ಇತ್ಯಾಮನ್ತ್ರ್ಯ । ಯೋ ವೋ ಯುಷ್ಮಾಕಂ ಬ್ರಹ್ಮಿಷ್ಠಃ ಸರ್ವೇ ಯೂಯಂ ಬ್ರಹ್ಮಾಣಃ । ಅತಿಶಯೇನ ಯುಷ್ಮಾಕಂ ಬ್ರಹ್ಮಾ ಯಃ ಸ ಏತಾ ಗಾ ಉದಜತಾಮ್ ಉತ್ಕಾಲಯತು ಸ್ವಗೃಹಂ ಪ್ರತಿ । ತೇ ಹ ಬ್ರಾಹ್ಮಣಾ ನ ದಧೃಷುಃ ಹ ಕಿಲ । ಏವಮುಕ್ತಾಃ ಬ್ರಾಹ್ಮಣಾಃ ಬ್ರಹ್ಮಿಷ್ಠತಾಮ್ ಆತ್ಮನಃ ಪ್ರತಿ ಜ್ಞಾತುಂ ನ ದಧೃಷುಃ ನ ಪ್ರಗಲ್ಭಾಃ ಸಂವೃತ್ತಾಃ । ಅಪ್ರಗಲ್ಭಭೂತೇಷು

ಬ್ರಾಹ್ಮಣೇಷು ಅಥ ಹ ಯಾಜ್ಞವಲ್ಕ್ಯಃ ಸ್ವಮ್ ಆತ್ಮೀಯಮೇವ ಬ್ರಹ್ಮಚಾರಿಣಮ್ ಅನ್ತೇವಾಸಿನಮ್ ಉವಾಚ। ಏತಾ ಗಾಃ ಹೇ ಸೋಮ್ಯ ಉದಜ ಉದ್ಗಮಯ ಅಸ್ಮದ್ಗೃಹಾನ್ ಪ್ರತಿ ಹೇ ಸಾಮಶ್ರವಃ।ಸಾಮವಿಧಿಂ ಹಿ ಶೃಣೋತಿ। ಅತೋಽರ್ಥಾತ್ ಚತುರ್ವೇದೋ ಯಾಜ್ಞವಲ್ಕ್ಯಃ। ತಾ ಗಾಃ ಹ ಉದಾಚಕಾರ ಉತ್ಕಾಲಿತವಾನ್ ಆಚಾರ್ಯಗೃಹಂ ಪ್ರತಿ। ಯಾಜ್ಞವಲ್ಕ್ಯೇನ ಬ್ರಹ್ಮಿಷ್ಠಪಣಸ್ವೀಕರಣೇನ ಆತ್ಮನೋ ಬ್ರಹ್ಮಿಷ್ಠತಾ ಪ್ರತಿಜ್ಞಾತಾ ಇತಿ ತೇ ಹ ಚುಕ್ರುಧುಃ ಕ್ರುದ್ಧವನ್ತೋ ಬ್ರಾಹ್ಮಣಾಃ। ತೇಷಾಂ ಕ್ರೋಧಾಭಿಪ್ರಾಯಂ ವ್ಯಾಚಷ್ಟೇ "ಕಥಂ ನೋಽಸ್ಮಾಕಮ್ ಏಕೈಕಪ್ರಧಾನಾನಾಂ ಬ್ರಹ್ಮಿಷ್ಠೋಽಸ್ಮಿ ಇತಿ ಬ್ರುವೀತ?" ಇತಿ। ಅಥ ಹೈವಂ ಕ್ರುದ್ಧೇಷು ಬ್ರಾಹ್ಮಣೇಷು ಜನಕಸ್ಯ ಯಜಮಾನಸ್ಯ ಹೋತಾ ಋತ್ವಿಕ್ ಅಶ್ವಲೋ ನಾಮ ಬಭೂವ ಆಸೀತ್। ಸ ಏನಂ ಯಾಜ್ಞವಲ್ಕ್ಯಂ ಬ್ರಹ್ಮಿಷ್ಠಾಭಿಮಾನೀ ರಾಜಾಶ್ರಯತ್ವಾಚ್ಚ ಧೃಷ್ಟೋ ಯಾಜ್ಞವಲ್ಕ್ಯಂ ಪಪ್ರಚ್ಛ ಪೃಷ್ಟವಾನ್। ಕಥಮ್? 'ತ್ವಂ ನು ಖಲು ನೋ ಯಾಜ್ಞವಲ್ಕ್ಯ ಬ್ರಹ್ಮಿಷ್ಠೋಽಸೀತಿ' ಇತಿ। ಪ್ಲುತಿಃ ಭರ್ತ್ಸನಾರ್ಥಾ। ಸ ಹೋವಾಚ ಯಾಜ್ಞವಲ್ಕ್ಯಃ। 'ನಮಸ್ಕುರ್ಮೋ ವಯಂ ಬ್ರಹ್ಮಿಷ್ಠಾಯ। ಇದಾನೀಂ ತು ಗೋಕಾಮಾಃ ಸ್ಮೋ ವಯಮ್' ಇತಿ। ತಂ ಬ್ರಹ್ಮಿಷ್ಠಪ್ರತಿಜ್ಞಂ ಸನ್ತಂ ತತ ಏವ ಬ್ರಹ್ಮಿಷ್ಠಪಣಸ್ವೀಕರಣಾತ್ ಪ್ರಷ್ಟುಂ ದಧ್ರೇ ಧೃತವಾನ್ ಮನಃ ಹೋತಾ ಅಶ್ವಲಃ॥

(ಭಾಷ್ಯಾರ್ಥ)

ಗೋವುಗಳನ್ನು ಹೀಗೆ ಕಟ್ಟಿಹಾಕಿಸಿ ಆ ಬ್ರಾಹ್ಮಣರನ್ನು ಕುರಿತು ಎಲೈ, 'ಪೂಜ್ಯರಾದ ಬ್ರಾಹ್ಮಣರೆ'[1] ಎಂದು ಸಂಬೋಧಿಸಿ ಇಂತೆಂದನು: (ವಃ=ಯುಷ್ಮಾಕಮ್) "ನಿಮ್ಮಗಳಲ್ಲಿ ಯಾವನು ಬ್ರಹ್ಮಿಷ್ಠನೋ-ನೀವೆಲ್ಲರೂ ಬ್ರಹ್ಮರೇ, ನಿಮ್ಮಗಳೊಳಗೆ ಯಾವನು ಹೆಚ್ಚಿನ ಬ್ರಹ್ಮನೋ-ಅವನು ಈ ಗೋಗಳನ್ನು ಹೊಡೆದುಕೊಂಡು ಹೋಗಲಿ, ಅಟ್ಟಿಕೊಂಡು ಹೋಗಲಿ." ಆ ಬ್ರಾಹ್ಮಣರು ಎದೆಗಾರರಾಗಲಿಲ್ಲ; (ಹ=ಕಿಲ). ಹೀಗೆನ್ನಲು (ಆ)ಬ್ರಾಹ್ಮಣರು ತಾವು ಬ್ರಹ್ಮಿಷ್ಠರೆಂದು ಹೇಳುವದಕ್ಕೆ ಎದೆಗಾರರಾಗಲಿಲ್ಲ, ಎದೆಯುಳ್ಳವರಾಗಲಿಲ್ಲ. ಬ್ರಾಹ್ಮಣರು ಹೀಗೆ ಅಪ್ರಗಲ್ಭರಾಗಲು ಆಗ ಯಾಜ್ಞವಲ್ಕ್ಯನು ತನ್ನ, ತನ್ನವನೇ ಆದ ಬ್ರಹ್ಮಚಾರಿಯನ್ನು ಶಿಷ್ಯನನ್ನು (ಕುರಿತು) 'ಈ ಗೋಗಳನ್ನು ಎಲೈ ಸೋಮ್ಯನೆ, ಹೊಡೆದುಕೊಂಡು ಹೋಗು, ನಮ್ಮ ಮನೆಯ ಕಡೆಗೆ ಅಟ್ಟಿಕೊಂಡು ಹೋಗು' ಎಂದನು. 'ಎಲೈ ಸಾಮಶ್ರವನೆ' (ಎಂದಿರುವದು) ಏಕೆಂದರೆ (ಅವನು ಯಾಜ್ಞವಲ್ಕ್ಯನಲ್ಲಿ) ಸಾಮವಿಧಿಯನ್ನು ಶ್ರವಣಮಾಡುತ್ತಿದ್ದಾನೆ. ಆದ್ದರಿಂದ ಯಾಜ್ಞವಲ್ಕ್ಯನು ಚತು

1. 'ಬ್ರಾಹ್ಮಣರೆ' ಎಂದರೆ ವೇದಾರ್ಥನಿಷ್ಠರೆ- ಎಂದರ್ಥ.

ವೇದ(ವನ್ನೂ ಬಲ್ಲವನೆಂದು) ಅರ್ಥ(ವಶ)ದಿಂದ (ಏರ್ಪಡುತ್ತದೆ).[1] ಆ ಗೋಗಳನ್ನು (ಆ ಶಿಷ್ಯನು) ಆಚಾರ್ಯನ ಮನೆಯ ಕಡೆಗೆ ಹೊಡೆದುಕೊಂಡು ಹೋದನು, ಅಟ್ಟಿಕೊಂಡು ಹೋದನು.

ಯಾಜ್ಞವಲ್ಕ್ಯನು ಬ್ರಹ್ಮಿಷ್ಠಪಣವನ್ನು ತೆಗೆದುಕೊಂಡದ್ದರಿಂದ ತಾನು ಬ್ರಹ್ಮಿಷ್ಠನೆಂದು ಹೇಳಿಕೊಂಡಂತೆ ಆಯಿತು , ಆದ್ದರಿಂದ ಆ ಬ್ರಾಹ್ಮಣರು ಕ್ರುದ್ಧರಾದರು. ಅವರ ಕ್ರೋಧದ ಅಭಿಪ್ರಾಯವನ್ನು (ಶ್ರುತಿಯು) ಹೇಳುತ್ತಿದೆ. (ನಃ= ಅಸ್ಮಾಕಮ್) ಒಬ್ಬೊಬ್ಬರೇ ಪ್ರಧಾನರಾಗಿರುವ ನಮ್ಮೊಳಗೆ ಹೇಗೆ ತಾನೆ (ತಾನು) ಬ್ರಹ್ಮಿಷ್ಠನಾಗಿರುವೆನು ಎಂದು ಹೇಳಿಕೊಂಡನು? ಎಂದು (ಕ್ರುದ್ಧರಾದರು). ಇನ್ನು ಹೀಗೆ ಬ್ರಾಹ್ಮಣರು ಕ್ರುದ್ಧರಾಗಲು, ಯಾಗಮಾಡುತ್ತಿದ್ದ ಜನಕನ ಹೋತೃವಾದ ಅಶ್ವಲನೆಂಬ ಋತ್ವಿಜನು ಇದ್ದನು, (ಅಲ್ಲಿ)ದ್ದನು ; ಅವನು (ತಾನೇ) ಬ್ರಹ್ಮಿಷ್ಠನೆಂಬ ಅಭಿಮಾನವುಳ್ಳವನೂ ರಾಜಾಶ್ರಯದಿಂದ ದಿಟ್ಟನೂ (ಆಗಿದ್ದದ್ದರಿಂದ) ಈ ಯಾಜ್ಞವಲ್ಕ್ಯನನ್ನು ಪ್ರಶ್ನಿಸಿದನು (ಹೀಗೆಂದು) ಕೇಳಿದನು. ಹೇಗೆಂದರೆ," ಯಾಜ್ಞವಲ್ಕ್ಯನೆ, ನೀನೇ ಅಲ್ಲವೆ, ನಮ್ಮೊಳಗೆ ಬ್ರಹ್ಮಿಷ್ಠನಾಗಿರುವೆ ?" (ಎಂದು ಮೂಲದಲ್ಲಿ ಪ್ಲುತವನ್ನು ಪ್ರಯೋಗಿಸಿರುವದು) ಗದರಿಸುವದಕ್ಕಾಗಿ. ಆ ಯಾಜ್ಞವಲ್ಕ್ಯನು ಇಂತೆಂದನು, "ನಾವು ಬ್ರಹ್ಮಿಷ್ಠನಿಗೆ ನಮಸ್ಕಾರವನ್ನು ಮಾಡುತ್ತೇವೆ. ಈಗಲಾದರೋ ನಾವು ಗೋಕಾಮರಾಗಿದ್ದೇವೆ[2]" (ತಾನು) ಬ್ರಹ್ಮಿಷ್ಠನೆಂದು ಪ್ರತಿಜ್ಞೆಮಾಡಿದ ಅವನನ್ನು ಅದರಿಂದಲೇ ಎಂದರೆ ಬ್ರಹ್ಮಿಷ್ಠಪಣವನ್ನು ಸ್ವೀಕರಿಸಿದ್ದರಿಂದಲೇ ಹೋತೃವಾದ ಅಶ್ವಲನು ಪ್ರಶ್ನಿಸುವದಕ್ಕೆ ನಿಶ್ಚಯಿಸಿದನು, ಮನಸ್ಸುಮಾಡಿದನು.

## ಕರ್ಮಮೃತ್ಯುವಿನಿಂದ ಬಿಡುಗಡೆ

**ಯಾಜ್ಞವಲ್ಕ್ಯೇತಿ ಹೋವಾಚ ಯದಿದಂ ಸರ್ವಂ ಮೃತ್ಯುನಾಪ್ತಗ್ಂ ಸರ್ವಂ ಮೃತ್ಯುನಾಭಿಪನ್ನಂ ಕೇನ ಯಜಮಾನೋ ಮೃತ್ಯೋರಾಪ್ತಿಮತಿಮುಚ್ಯತ ಇತಿ ಹೋತ್ರರ್ತ್ವಿಜಾಗ್ನಿನಾ ವಾಚಾ ವಾಗ್ವೈ ಯಜ್ಞಸ್ಯ**

---

1. ಯಾಜ್ಞವಲ್ಕ್ಯನು ಯಜುರ್ವೇದಿಯು ; ಶಿಷ್ಯನು ಅವನಿಂದ ಸಾಮವಿಧಿಯನ್ನು ಶ್ರವಣಮಾಡುತ್ತಿದ್ದಾನೆ. ಸಾಮವನ್ನು ಗಾನಮಾಡುವದು ಋಕ್ಕುಗಳ ಆಧಾರದಿಂದ, ಅಥರ್ವವೇದವು ಈ ಮೂರರಲ್ಲಿಯೇ ಅಡಕವಾಗಿರುತ್ತದೆ. ಆದ್ದರಿಂದ ಯಜುರ್ವೇದವಿದನಿಂದ ಶಿಷ್ಯನು ಸಾಮವಿಧಿಯನ್ನು ಶ್ರವಣಮಾಡುತ್ತಾನೆಂದದ್ದರಿಂದಲೇ ಯಾಜ್ಞವಲ್ಕ್ಯನು ನಾಲ್ಕುವೇದಗಳನ್ನೂ ಬಲ್ಲವನೆಂದಾಯಿತು ಎಂದು ಅಭಿಪ್ರಾಯ.

2. ಬ್ರಹ್ಮಜ್ಞಾನಿಗೆ ಅನೌದ್ಧತ್ಯವು ಲಕ್ಷಣವೆಂಬುದನ್ನು ಈ ವಾಕ್ಯವು ಸೂಚಿಸುತ್ತವೆ.

**ಹೋತಾ ತದ್ಯೇಯಂ ವಾಕ್ ಸೋಽಯಮಗ್ನಿಃ ಸ ಹೋತಾ ಸ ಮುಕ್ತಿಃ ಸಾತಿಮುಕ್ತಿಃ ॥ ೩ ॥**

೩. ಅವನು ಹೇಳಿದನೇನೆಂದರೆ: "ಯಾಜ್ಞವಲ್ಕ್ಯನೆ, ಇದೆಲ್ಲವೂ ಮೃತ್ಯುವಿನಿಂದ ಆಪ್ತವಾಗಿದೆಯಷ್ಟೆ, ಎಲ್ಲವೂ ಮೃತ್ಯುವಿನಿಂದ ಅಭಿಪನ್ನವಾಗಿರುವದಷ್ಟೆ; ಯಜಮಾನನು ಮೃತ್ಯುವಿನ ಆಪ್ತಿಯನ್ನು ಏತರಿಂದ ದಾಟಿ ಮುಕ್ತನಾಗುವನು?" "ಹೋತೃವೆಂಬ ಋತ್ವಿಜನಿಂದ, ಅಗ್ನಿಯಾದ ವಾಕ್ಕಿನಿಂದ. ವಾಕ್ಕೇ ಹೋತೃ, ಇಲ್ಲಿ ಈ ವಾಕ್ಕೆಂಬುದಿದೆಯಲ್ಲ, ಅದೇ ಈ ಅಗ್ನಿ; ಅವನೇ ಹೋತೃ, ಅವನೇ ಮುಕ್ತಿ ಅದೇ ಅತಿಮುಕ್ತಿ.

(ಭಾಷ್ಯ)

೫. ಯಾಜ್ಞವಲ್ಕ್ಯೇತಿ ಹೋವಾಚ। ತತ್ರ ಮಧುಕಾಣ್ಡೇ ಪಾಙ್ಕ್ತೇನ ಕರ್ಮಣಾ ದರ್ಶನಸಮುಚ್ಚಿತೇನ ಯಜಮಾನಸ್ಯ ಮೃತ್ಯೋರತ್ಯಯೋ ವ್ಯಾಖ್ಯಾತ ಉದ್ಗೀಥಪ್ರಕರಣೇ ಸಂಕ್ಷೇಪತಃ। ತಸ್ಯೈವ ಪರೀಕ್ಷಾವಿಷಯೋಽಯಮ್ ಇತಿ ತದ್ಗತದರ್ಶನವಿಶೇಷಾರ್ಥೋಽಯಂ ವಿಸ್ತರ ಆರಭ್ಯತೇ। ಯದಿದಂ (ಸರ್ವಂ) ಸಾಧನಜಾತಮ್ ಅಸ್ಯ ಕರ್ಮಣಃ ಋತ್ವಿಗಗ್ನ್ಯಾದಿ ಮೃತ್ಯುನಾ ಕರ್ಮಲಕ್ಷಣೇನ ಸ್ವಾಭಾವಿಕಾಸಙ್ಗಸಹಿತೇನ ಆಪ್ತಂ ವ್ಯಾಪ್ತಮ್। ನ ಕೇವಲಂ ವ್ಯಾಪ್ತಮ್ ಅಭಿಪನ್ನಂ ಚ ಮೃತ್ಯುನಾ ವಶೀಕೃತಂ ಚ। ಕೇನ ದರ್ಶನಲಕ್ಷಣೇನ ಸಾಧನೇನ ಯಜಮಾನಃ ಮೃತ್ಯೋರಾಪ್ತಿಮ್, ಅತಿಮೃತ್ಯುಗೋಚರತ್ವಮ್ ಅತಿಕ್ರಮ್ಯ ಮುಚ್ಯತೇ। ಸ್ವತನ್ತ್ರೋ ಮೃತ್ಯೋರವಶೋ ಭವತಿ ಇತ್ಯರ್ಥಃ। ನನು ಉದ್ಗೀಥ ಏವ ಅಭಿಹಿತಂ ಯೇನಾತಿಮುಚ್ಯತೇ, ಮುಖ್ಯಪ್ರಾಣಾತ್ಮದರ್ಶನೇನ ಇತಿ। ಬಾಢಮ್ ಉಕ್ತಮ್। ಯೋಽನುಕ್ತೋ ವಿಶೇಷಸ್ತತ್ರ ತದರ್ಥೋಽಯಮ್ ಆರಮ್ಭಃ ಇತ್ಯದೋಷಃ ॥

(ಭಾಷ್ಯಾರ್ಥ)

'ಯಾಜ್ಞವಲ್ಕ್ಯೇತಿ ಹೋವಾಚ (ಯಾಜ್ಞವಲ್ಕ್ಯನೆ, .... ಎಂದು ಹೇಳಿದನು ಎಂಬ ಕಂಡಿಕೆಯ ಅಭಿಪ್ರಾಯವೇನೆಂದರೆ), ಇಲ್ಲಿ ಮಧುಕಾಂಡದಲ್ಲಿ ಉದ್ಗೀಥಪ್ರಕರಣದಲ್ಲಿ (೧-೩) ಉಪಾಸನಾಸಮುಚ್ಚಿತವಾದ ಪಾಙ್ಕ್ತಕರ್ಮದಿಂದ, ಯಜಮಾನನಿಗೆ ಮೃತ್ಯುವಿನ ಅತಿತರಣವಾಗುವದೆಂದು ಸಂಕ್ಷೇಪವಾಗಿ ಹೇಳಿರುತ್ತದೆ (ಯಷ್ಟೆ). ಅದನ್ನೇ ಪರೀಕ್ಷೆಮಾಡಿ (ನೋಡುವದು) ಇದರ ವಿಷಯವಾದ್ದರಿಂದ[1]

---

1. ಹೀಗೆಯೇ ಮಧುಕಾಂಡದಲ್ಲಿರುವ ಬೇರೆಬೇರೆಯ ವಿಷಯಗಳನ್ನು ಈ ಕಾಂಡದಲ್ಲಿ ಪರೀಕ್ಷಾಪೂರ್ವಕವಾಗಿ ದೃಢಪಡಿಸಿರುತ್ತದೆ.

ಅದರಲ್ಲಿರುವ ದರ್ಶನವನ್ನು[1] ವಿಶೇಷವಾಗಿ (ತಿಳಿಸುವ)ದಕ್ಕಾಗಿ ಈ ವಿವರಣವನ್ನು ಆರಂಭಿಸಿರುತ್ತದೆ.[2]

(ಯಾಜ್ಞವಲ್ಕ್ಯನೆ), ಇದೆಲ್ಲವೂ ಈ ಕರ್ಮದ ಋತ್ವಿಜರು, ಅಗ್ನಿ–ಮುಂತಾದ ಸಾಧನಸಮೂಹವು, ಸ್ವಾಭಾವಿಕವಾದ ಆಸಂಗಸಹಿತವಾದ ಕರ್ಮರೂಪವಾದ ಮೃತ್ಯುವಿನಿಂದ ಆಪ್ತವಾಗಿರುವದಷ್ಟೆ, ವ್ಯಾಪ್ತವಾಗಿರುವದಷ್ಟೆ; ವ್ಯಾಪ್ತವಾಗಿರುವದು ಮಾತ್ರವೇ ಅಲ್ಲ, ಮೃತ್ಯುವಿನಿಂದ ಅಭಿಪನ್ನವೂ ವಶಕ್ಕೆ ತೆಗೆದುಕೊಳ್ಳಲ್ಪಟ್ಟೂ (ಇರುವದಷ್ಟೆ). ಯಾವ ಯಾವ ಉಪಾಸನಾರೂಪವಾದ ಸಾಧನದಿಂದ ಯಜಮಾನನು (ಈ) ಮೃತ್ಯುವಿನ ವ್ಯಾಪ್ತಿಯನ್ನು ದಾಟಿ, ಮೃತ್ಯುವಿಷಯತ್ವವನ್ನು ಮೀರಿ ಮುಕ್ತನಾಗುವನು ? ಸ್ವತಂತ್ರನಾಗಿ ಮೃತ್ಯುವಿಗೆ ವಶವಾಗದೆ ಇರುವನು ?–ಎಂದರ್ಥ

(ಆಕ್ಷೇಪ):– ಯಾವದರಿಂದ ಅತಿಮುಕ್ತನಾಗುವನೆಂಬುದನ್ನು, ಉದ್ಗೀಥದಲ್ಲಿಯೇ ಮುಖ್ಯಪ್ರಾಣಾತ್ಮದರ್ಶನದಿಂದ (ಮುಕ್ತನಾಗುವನು) ಎಂದು ಹೇಳಿದ್ದಾಗಿದೆಯಲ್ಲ !

(ಪರಿಹಾರ)·– ನಿಜ, ಹೇಳಿದ್ದಾಗಿದೆ. ಅಲ್ಲಿ ಹೇಳದೆ ಇರುವ ವಿಶೇಷವಿರುವದಲ್ಲ, ಅದನ್ನು[3] (ತಿಳಿಸು)ವದಕ್ಕಾಗಿ ಈ ಪ್ರಶ್ನೋತ್ತರ)ವನ್ನು ಆರಂಭಿಸಿರುತ್ತದೆ. ಆದ್ದರಿಂದ (ಯಾವ)ದೋಷವೂ ಇಲ್ಲ

(ಭಾಷ್ಯ)

೬. ಹೋತ್ರಾ ಋತ್ವಿಜಾ ಅಗ್ನಿನಾ ವಾಚಾ ಇತ್ಯಾಹ ಯಾಜ್ಞವಲ್ಕ್ಯಃ। ಏತಸ್ಯಾರ್ಥಂ ವ್ಯಾಚಷ್ಟೇ। ಕಃ ಪುನರ್ಹೋತಾ ಯೇನ ಮೃತ್ಯುಮ್ ಅತಿಕ್ರಾಮತಿ

---

1. ಉದ್ಗೀಥೋಪಾಸನೆಯನ್ನು,

2. ಈ ವಿಚಾರವು ಜಲ್ಪಕಥಾರೂಪವಾಗಿರುತ್ತದೆ ಎಂದರೆ ಒಬ್ಬನನ್ನು ಚರ್ಚೆಯಲ್ಲಿ ಮತ್ತೊಬ್ಬನು ಸೋಲಿಸುವ ರೂಪದ ಕಥಾವಿಶೇಷವಾಗಿರುತ್ತದೆ. ಆದರೂ ಒಬ್ಬರನ್ನೊಬ್ಬರು ಮೋಸದಿಂದ ಜಯಿಸುವ ಸಂಭವವೇನೂ ಇಲ್ಲಿಲ್ಲ. ಯಾಜ್ಞವಲ್ಕ್ಯನೆಂಬ ಬ್ರಹ್ಮಿಷ್ಠನು ಹೇಳುವವನು ಅಶ್ವಲಾದಿವಿದ್ವಾಂಸರು ಕೇಳುವವರು, ರಾಜನೂ ಅವನ ಸಭೆಯವರೂ ಈ ಚರ್ಚೆಯನ್ನು ನೋಡುತ್ತಿರುವವರು. ಈ ಮಹಾವಿಚಾರಕ್ಕೆ ತತ್ತ್ವನಿರ್ಣಯವೇ ಫಲವು. ತತ್ತ್ವನಿಶ್ಚಯವನ್ನು ಸಂರಕ್ಷಣೆಮಾಡುವದಕ್ಕಾಗಿಯೇ ಜಲ್ಪ, ವಿತಂಡಾ- ಎಂಬ ರೂಪದ ಚರ್ಚೆಗಳನ್ನು ಉಪಯೋಗಿಸುವದು ; ಬೀಜವು ಅಂಕುರಿಸುವವರೆಗೆ ಸಂರಕ್ಷಣೆಮಾಡುವದಕ್ಕಾಗಿ ಮುಳ್ಳಿನ ಬೇಲಿಯನ್ನು ಹಾಕುವಂತೆ ಈ ಚರ್ಚೆಗಳು ಉಪಯುಕ್ತವಾಗಿರುತ್ತವೆ ಎಂದು ನೈಯಾಯಿಕರು ಹೇಳುತ್ತಾರೆ.

1. ವಾಗಾದಿಗಳನ್ನು ಅಗ್ನ್ಯಾದಿಸ್ವರೂಪವೆಂದು ಉಪಾಸನೆಮಾಡಬೇಕೆಂಬ ವಿಶೇಷವನ್ನು ಎಂದರ್ಥ.

ಇತಿ ? ಉಚ್ಯತೇ। ವಾಗ್ವೈ ಯಜ್ಞಸ್ಯ ಯಜಮಾನಸ್ಯ। "ಯಜ್ಞೋ ವೈ ಯಜಮಾನಃ" (ಶತ. ಬ್ರಾ. ೧೪-೨-೨-೨೪) ಇತಿ ಶ್ರುತೇಃ। ಯಜ್ಞಸ್ಯ ಯಜಮಾನಸ್ಯ ಯಾ (ಅಧ್ಯಾತ್ಮಂ) ವಾಕ್ ಸೈವ ಹೋತಾ ಅಧಿಯಜ್ಞೇ। ಕಥಮ್ ? ತತ್ ತತ್ರ ಯೋಽಯಂ ವಾಕ್ ಯಜ್ಞಸ್ಯ ಯಜಮಾನಸ್ಯ ಸೋಽಯಂ ಪ್ರಸಿದ್ಧಃ ಅಗ್ನಿರಧಿದೈವತಮ್। ತದೇತತ್ ತ್ರ್ಯನ್ನಪ್ರಕರಣೇ (೧-೫ ೧೧) ವ್ಯಾಖ್ಯಾತಮ್। ಸ ಚಾಗ್ನಿ ಹೋತಾ। "ಅಗ್ನಿರ್ವೈ ಹೋತಾ" (ಶತ ಬ್ರಾ. ೪-೨-೬) ಇತಿ ಶ್ರುತೇಃ ಯದೇತತ್ ಯಜ್ಞಸ್ಯ ಸಾಧನದ್ವಯಂ ಹೋತಾ ಚರ್ತ್ವಿಕ್ ಅಧಿಯಜ್ಞಮ್, ಅಧ್ಯಾತ್ಮಂ ಚ ವಾಕ್, ಏತದುಭಯಂ ಸಾಧನದ್ವಯಂ ಪರಿಚ್ಛಿನ್ನಂ ಮೃತ್ಯುನಾ ಆಸ್ತಂ ಸ್ವಾಭಾವಿಕಾಜ್ಞಾನಾಸಙ್ಗಪ್ರಯುಕ್ತೇನ ಕರ್ಮಣಾ ಮೃತ್ಯುನಾ ಪ್ರತಿಕ್ಷಣಮ್ ಅನ್ಯಥಾತ್ವಮಾಪದ್ಯಮಾನಂ ವಶೀಕೃತಮ್, ತತ್ ಅನೇನ ಅಧಿದೈವತರೂಪೇಣ ಅಗ್ನಿನಾ ದೃಶ್ಯಮಾನಂ ಯಜಮಾನಸ್ಯ ಯಜ್ಞಸ್ಯ ಮೃತ್ಯೋರತಿಮುಕ್ತಯೇ ಭವತಿ। ತದೇತದಾಹ 'ಸ ಮುಕ್ತಿಃ'। ಸ ಹೋತಾ ಅಗ್ನಿಃ, ಮುಕ್ತಿಃ ಅಗ್ನಿಸ್ವರೂಪದರ್ಶನಮೇವ ಮುಕ್ತಿಃ। ಯದೈವ ಸಾಧನದ್ವಯಮ್ ಅಗ್ನಿರೂಪೇಣ ಪಶ್ಯತಿ ತದಾನೀಮೇವ ಹಿ ಸ್ವಾಭಾವಿಕಾತ್ ಆಸಙ್ಗಾತ್ ಮೃತ್ಯೋರ್ವಿಮುಚ್ಯತೇ ಆಧ್ಯಾತ್ಮಿಕಾತ್ ಪರಿಚ್ಛಿನ್ನರೂಪಾತ್ ಆಧಿಭೌತಿಕಾಚ್ಚ। ತಸ್ಮಾತ್ ಸ ಹೋತಾ ಅಗ್ನಿರೂಪೇಣ ದೃಷ್ಟೋ ಮುಕ್ತಿಃ ಮುಕ್ತಿಸಾಧನಂ ಯಜಮಾನಸ್ಯ ||

(ಭಾಷ್ಯಾರ್ಥ)

ಹೋತೃವೆಂಬ ಋತ್ವಿಜನಾದ, ಅಗ್ನಿಯಾದ ವಾಕ್ಕಿನಿಂದ ಎಂದು ಯಾಜ್ಞವಲ್ಕ್ಯನು ನುಡಿದನು ಇದರ ಅರ್ಥವನ್ನು ವಿವರಿಸುತ್ತಾನೆ ಯಾವ (ಹೋತೃ) ವಿನಿಂದ ಮೃತ್ಯುವನ್ನು ಅತಿಕ್ರಮಿಸುವನೋ (ಆ) ಹೋತೃ, ಯಾರು ? ಎಂದರೆ ಹೇಳುತ್ತೇವೆ. ಯಜ್ಞದ ಎಂದರೆ ಯಜಮಾನನ (ಎಂದರ್ಥ), ಏಕೆಂದರೆ ಯಜ್ಞವೇ ಯಜಮಾನನು (ಶತ ಬ್ರಾ ೧೪ ೨-೨-೨೪) ಎಂದು ಶ್ರುತಿ(ಯಿದೆ ಅವನ) ವಾಕ್ಕೇ (ಹೋತೃ) ಯಜ್ಞದ ಎಂದರ ಯಜಮಾನನ ವಾಕ್ಕಿದೆಯಲ್ಲ, ಅದೇ ಅಧಿಯಜ್ಞದಲ್ಲಿ ಹೋತೃ. ಹೇಗೆಂದರೆ, (ತತ್ = ತತ್ರ) ಇಲ್ಲಿ ಯಜಮಾನನೆಂಬ ಯಜ್ಞದ ವಾಕ್ಕಿದೆಯಲ್ಲ, ಅದು ಅಧಿದೈವತವಾಗಿ ಈ ಪ್ರಸಿದ್ಧವಾಗಿರುವ ಅಗ್ನಿಯು, ಆ ಇದನ್ನು ತ್ರ್ಯನ್ನಪ್ರಕರಣದಲ್ಲಿ (೧-೫-೧೧) ವಿವರಿಸಿರುತ್ತದೆ. ಆ ಅಗ್ನಿಯು ಹೋತೃ, ಏಕೆಂದರೆ 'ಅಗ್ನಿಯೇ ಹೋತೃ' (ಶತ ಬ್ರಾ ೧೪ ೨-೨-೨೪) ಎಂದು ಶ್ರುತಿ(ಯಿದೆ) ಅಧಿಯಜ್ಞವಾಗಿರುವ ಹೋತೃವೆಂಬ ಋತ್ವಿಜನು, ಅಧ್ಯಾತ್ಮವಾಗಿರುವ ವಾಕ್ಕು–ಎಂಬೀ ಯಜ್ಞದ ಎರಡು ಸಾಧನವಿದೆಯಲ್ಲ, ಆ ಎರಡು ಸಾಧನವೂ ಪರಿಚ್ಛಿನ್ನ(ವಾಗಿರುವದರಿಂದ) ಮೃತ್ಯುವಿನಿಂದ ವ್ಯಾಪ್ತವಾಗಿರುತ್ತದೆ, ಸ್ವಾಭಾವಿಕವಾದ ಅಜ್ಞಾನ(ರೂಪ) ಆಸಂಗದಿಂದ ಪ್ರೇರಿತವಾದ ಕರ್ಮ

ವೆಂಬ ಮೃತ್ಯುವಿನಿಂದ ಪ್ರತಿಕ್ಷಣವೂ ಬೇರೆಬೇರೆಯಾಗಿ ಮಾಡಲ್ಪಡುತ್ತಿದೆಯಾದ್ದರಿಂದ ವಶಗೊಳಿಸಲ್ಪಟ್ಟಿರುತ್ತದೆಯಷ್ಟೆ ; ಅದು ಈ ಅಧಿದೈವತರೂಪವಾಗಿರುವ ಅಗ್ನಿರೂಪದಿಂದ ಉಪಾಸನೆಮಾಡಲ್ಪಟ್ಟರೆ ಯಜಮಾನನೆಂಬ ಯಜ್ಞಕ್ಕೆ ಮೃತ್ಯುವಿನಿಂದ ಅತಿಮುಕ್ತವಾಗುವದಕ್ಕೆ (ಕಾರಣ)ವಾಗುತ್ತದೆ. ಆ ಇದನ್ನು (ಈಗ) ಹೇಳುತ್ತಾನೆ, 'ಅವನೇ ಮುಕ್ತಿಯು,' ಆ ಹೋತೃವಾದ ಅಗ್ನಿಯೇ ಮುಕ್ತಿಯು, ಎಂದರೆ ಅಗ್ನಿಸ್ವರೂಪದಿಂದ ಉಪಾಸನೆಮಾಡುವದೇ ಮುಕ್ತಿ(ಹೇತು). ಯಾವಾಗ (ಈ) ಎರಡು ಸಾಧನಗಳನ್ನೂ ಅಗ್ನಿರೂಪದಿಂದ ಕಾಣುವನೋ ಆಗಲೇ ಸ್ವಾಭಾವಿಕವಾದ ಆಸಂಗವೆಂಬ ಮೃತ್ಯುವಿನಿಂದಲೂ ಆಧ್ಯಾತ್ಮಿಕ ಮತ್ತು ಆಧಿಭೌತಿಕ(ವಾದ) ಪರಿಚ್ಛಿನ್ನರೂಪದಿಂದಲೂ ವಿಮುಕ್ತನಾಗುತ್ತಾನಲ್ಲವೆ ? ಆದ್ದರಿಂದ ಆ ಹೋತೃವನ್ನು ಅಗ್ನಿರೂಪದಿಂದ ಕಂಡರೆ ಮುಕ್ತಿಯು, ಎಂದರೆ ಯಜಮಾನನಿಗೆ ಮುಕ್ತಿಸಾಧನ(ವಾಗುವದು).

(ಭಾಷ್ಯ)

೭. ಸಾ ಅತಿಮುಕ್ತಿಃ। ಯೈವ ಚ ಮುಕ್ತಿಃ ಸಾ ಅತಿಮುಕ್ತಿಃ ಅತಿಮುಕ್ತಿಸಾಧನಮ್ ಇತ್ಯರ್ಥಃ। ಸಾಧನದ್ವಯಸ್ಯ ಪರಿಚ್ಛಿನ್ನಸ್ಯ ಯಾ ಅಧಿದೇವತಾರೂಪೇಣ ಅಪರಿಚ್ಛಿನ್ನೇನ ಅಗ್ನಿರೂಪೇಣ ದೃಷ್ಟಿಃ ಸಾ ಮುಕ್ತಿಃ। ಯಾಽಸೌ ಮುಕ್ತಿಃ ಅಧಿದೇವತಾದೃಷ್ಟಿಃ, ಸೈವ ಅಧ್ಯಾತ್ಮಾಧಿಭೂತಪರಿಚ್ಛೇದವಿಷಯಾಸಙ್ಗಾಸ್ಪದಂ ಮೃತ್ಯುಮ್ ಅತಿಕ್ರಮ್ಯ ಅಧಿದೇವತಾತ್ಮಸ್ಯ ಅಗ್ನಿಭಾವಸ್ಯ ಪ್ರಾಪ್ತಿಃ। ಯಾ ಫಲಭೂತಾ ಸಾ ಅತಿಮುಕ್ತಿಃ ಇತ್ಯುಚ್ಯತೇ। ತಸ್ಯಾ ಅತಿಮುಕ್ತೇಃ ಮುಕ್ತಿರೇವ ಸಾಧನಮ್ ಇತಿ ಕೃತ್ವಾ 'ಸಾ ಅತಿಮುಕ್ತಿಃ' ಇತ್ಯಾಹ। ಯಜಮಾನಸ್ಯ ಹಿ ಅತಿಮುಕ್ತಿರ್ವಾಗಾದೀನಾಮ್ ಅಗ್ನ್ಯಾದಿಭಾವಃ ಇತಿ ಉದ್ಗೀಥಪ್ರಕರಣೇ ವ್ಯಾಖ್ಯಾತಮ್। ತತ್ರ ಸಾಮಾನ್ಯಂ[1] ಮುಖ್ಯಪ್ರಾಣದರ್ಶನಮಾತ್ರಂ ಮುಕ್ತಿಸಾಧನಮ್ ಉಕ್ತಮ್, ನ ತದ್ವಿಶೇಷೋ ವಾಗಾದೀನಾಮ್ ಅಗ್ನ್ಯಾದಿದರ್ಶನಮ್ ಇಹ ವಿಶೇಷೋ ವರ್ಣ್ಯತೇ। ಮೃತ್ಯುಪ್ರಾಪ್ತ್ಯತಿಮುಕ್ತಿಸ್ತು ಸೈವ ಫಲಭೂತಾ ಯಾ ಉದ್ಗೀಥಬ್ರಾಹ್ಮಣೇನ ವ್ಯಾಖ್ಯಾತಾ "ಮೃತ್ಯುಮತಿಕ್ರಾನ್ತೋ ದೀಪ್ಯತೇ" (೧-೩-೧೨, ೧೩, ೧೪, ೧೫, ೧೬) ಇತ್ಯಾದ್ಯಾ ||

(ಭಾಷ್ಯಾರ್ಥ)

'ಅದೇ ಅತಿಮುಕ್ತಿ' ಯಾವದು ಮುಕ್ತಿಯೋ ಅದೇ ಅತಿಮುಕ್ತಿಯು, ಅಂದರೆ ಅತಿಮುಕ್ತಿಸಾಧನವು ಎಂದರ್ಥ. ಪರಿಚ್ಛಿನ್ನವಾದ (ಈ) ಎರಡು ಸಾಧನಗಳನ್ನು ಅಧಿದೇವತಾರೂಪದಿಂದ, ಪರಿಚ್ಛಿನ್ನವಲ್ಲದ ಅಗ್ನಿರೂಪದಿಂದ ಕಾಣುವದಿದೆಯಲ್ಲ, ಅದು ಮುಕ್ತಿಯು. ಅಧಿದೇವತಾದೃಷ್ಟಿಯೆಂಬ ಈ ಮುಕ್ತಿಯಿದೆಯಲ್ಲ,

---

1. 'ಸಾಮಾನ್ಯೇನ' ಎಂಬುದಕ್ಕಿಂತ ಈ ಪಾಠವೇ ಮೇಲು.

ಅದೇ ಅಧ್ಯಾತ್ಮ, ಅಧಿಭೂತ- ಎಂಬ ಪರಿಚ್ಛೇದವಿಷಯಕವಾದ ಆಸಂಗಕ್ಕೆ ಆಶ್ರಯವಾದ ಮೃತ್ಯುವನ್ನು ಮೀರಿ ಅಧಿದೇವತಾತ್ವವಾದ ಅಗ್ನಿಭಾವವನ್ನು ಪಡೆಯುವದು ಯಾವದು ಫಲವಾಗಿರುವದೋ ಅದನ್ನು 'ಅತಿಮುಕ್ತಿಯೆಂದು' (ಇಲ್ಲಿ) ಹೇಳಿದೆ[1] ಆ ಅತಿಮುಕ್ತಿಗೆ ಮುಕ್ತಿಯೇ ಸಾಧನವು ಎಂದಿಟ್ಟುಕೊಂಡು ಅದೇ ಅತಿಮುಕ್ತಿಯು ಎಂದು ಹೇಳಿರುತ್ತಾನೆ[2]. ಯಜಮಾನನಿಗೆ ಅತಿಮುಕ್ತಿ ಎಂದರೆ ವಾಗಾದಿಗಳು ಅಗ್ನ್ಯಾದಿಗಳಾಗುವದು ಎಂದು ಉದ್ಗೀಥಪ್ರಕರಣದಲ್ಲಿ ವಿವರಿಸಿತ್ತು. ಅಲ್ಲಿ ಸಾಮಾನ್ಯವಾದ ಮುಖ್ಯಪ್ರಾಣದರ್ಶನವನ್ನು ಮಾತ್ರ ಮುಕ್ತಿಸಾಧನವೆಂದು ಹೇಳಿತ್ತು, ವಾಗಾದಿಗಳನ್ನು ಅಗ್ನ್ಯಾದಿಗಳೆಂದು ಕಾಣುವ ಅದರ ವಿಶೇಷ(ವನ್ನು ಹೇಳಿರ)ಲಿಲ್ಲ. ಇಲ್ಲಿ (ಆ) ವಿಶೇಷವನ್ನು ಹೇಳಿರುತ್ತವೆ. ಮೃತ್ಯುಪ್ರಾಪ್ತಿ(ರೂಪವಾದ) ಅತಿಮುಕ್ತಿಯಾದರೋ, ಉದ್ಗೀಥಬ್ರಾಹ್ಮಣದಲ್ಲಿ "ಮೃತ್ಯುವನ್ನು ದಾಟಿ ಹೊಳೆಯುತ್ತಿದಾನೆ" (೧-೩-೧೨ ರಿಂದ ೧೬) ಎಂದು ಮುಂತಾಗಿ ವಿವರಿಸಿತ್ತಲ್ಲ, ಅದೇ (ಇಲ್ಲಿ) ಫಲವೆಂದು (ಹೇಳಿದೆ)

## ಅಹೋರಾತ್ರ್ಯಾದಿಕಾಲದಿಂದ ಬಿಡುಗಡೆ

(ಉಪನಿಷತ್ತು)

**ಯಾಜ್ಞವಲ್ಕ್ಯೇತಿ ಹೋವಾಚ ಯದಿದಗ್ಂ ಸರ್ವಮಹೋರಾತ್ರಾಭ್ಯಾಮಾಪ್ತಂ ಸರ್ವಮಹೋರಾತ್ರಾಭ್ಯಾಮಭಿಪನ್ನಂ ಕೇನ ಯಜಮಾನೋಽಹೋರಾತ್ರಯೋರಾಪ್ತಿಮತಿಮುಚ್ಯತ ಇತ್ಯಧ್ವರ್ಯುಣರ್ತ್ವಿಜಾ ಚಕ್ಷುಷಾಽಽದಿತ್ಯೇನ ಚಕ್ಷುರ್ವೈ ಯಜ್ಞಸ್ಯಾಧ್ವರ್ಯುಸ್ತದಿದಂ ಚಕ್ಷುಃ ಸೋಽಸಾವಾದಿತ್ಯಃ ಸೋಽಧ್ವರ್ಯುಃ ಸ ಮುಕ್ತಿಃ ಸಾತಿಮುಕ್ತಿಃ ||೪||**

೪. (ಆತನು) ಹೇಳಿದನೆಂದರೆ. "ಯಾಜ್ಞವಲ್ಕ್ಯನೆ, ಇದೆಲ್ಲವೂ ಅಹೋರಾತ್ರಿಗಳಿಂದ ಆಪ್ತವಾಗಿದೆಯಷ್ಟೆ, ಎಲ್ಲವೂ ಅಹೋರಾತ್ರಿಗಳಿಂದ ಅಭಿಪನ್ನವಾಗಿರುವದಷ್ಟೆ; ಯಜಮಾನನು ಅಹೋರಾತ್ರಿಗಳ ಆಪ್ತಿ

---

1. ಆಸುರಸಾಧನವನ್ನು ಬಿಟ್ಟು ದೈವಸಾಧನವನ್ನು ಪಡೆಯುವದು ಮುಕ್ತಿಯೆಂದೂ ಆಸುರಸಾಧ್ಯವನ್ನು ಬಿಟ್ಟು ದೈವಸಾಧ್ಯವನ್ನು ಪಡೆದುಕೊಳ್ಳುವದು ಅತಿಮುಕ್ತಿಯೆಂದೂ ವಾರ್ತಿಕ (೩-೧-೨೫)ದಲ್ಲಿದೆ. ಇಲ್ಲಿ ಅತಿಮುಕ್ತಿಯೆಂದರೆ ಸಾಕ್ಷಾನ್ಮುಕ್ತಿಯೇ ಆಗುವದೆಂಬುದು ಸರಿಯಲ್ಲ, ಏಕೆಂದರೆ ಆ ಪಕ್ಷದಲ್ಲಿ ಇಲ್ಲಿ ಹೇಳಿರುವ ಬ್ರಹ್ಮವಿದ್ಯೆಯು ನಿಷ್ಫಲವಾಗುವದು ಎಂದು ವಾರ್ತಿಕಕಾರರು ಸ್ಪಷ್ಟಪಡಿಸಿರುತ್ತಾರೆ.

2. ಆದ್ದರಿಂದ ಅದೇ ಅತಿಮುಕ್ತಿಯು ಎಂದರೆ ಅತಿಮುಕ್ತಿಗೆ ಸಾಧನವು ಎಂದು ಅಭಿಪ್ರಾಯ.

ಯನ್ನು ಏತರಿಂದ ದಾಟಿ ಮುಕ್ತನಾಗುವನು?'' "[1]ಅಧ್ವರ್ಯುವೆಂಬ ಋತ್ವಿಜನಿಂದ, ಆದಿತ್ಯನಾದ ಚಕ್ಷುಸ್ಸಿನಿಂದ. ಚಕ್ಷುಸ್ಸೇ ಯಜ್ಞದ ಅಧ್ವರ್ಯು; ಈ ಚಕ್ಷುಸ್ಸಂಬುದಿದೆಯಲ್ಲ, ಅದೇ ಆ ಆದಿತ್ಯನು, ಅವನೇ ಅಧ್ವರ್ಯು; ಅವನೇ ಮುಕ್ತಿ, ಅದೇ ಅತಿಮುಕ್ತಿ.

(ಭಾಷ್ಯ)

೮. ಯಾಜ್ಞವಲ್ಕ್ಯೇತಿ ಹೋವಾಚ। ಸ್ವಾಭಾವಿಕಾತ್ ಅಜ್ಞಾನಾಸಙ್ಗ-ಪ್ರಯುಕ್ತಾತ್ ಕರ್ಮಲಕ್ಷಣಾತ್ ಮೃತ್ಯೋಃ ಅತಿಮುಕ್ತಿರ್ವ್ಯಾಖ್ಯಾತಾ। ತಸ್ಯ ಕರ್ಮಣಃ ಸಾಸಙ್ಗಸ್ಯ ಮೃತ್ಯೋಃ ಆಶ್ರಯಭೂತಾನಾಂ ದರ್ಶಪೂರ್ಣಮಾಸಾದಿ ಕರ್ಮಸಾಧನಾನಾಂ ಯೋ ವಿಪರಿಣಾಮಹೇತುಃ ಕಾಲಃ ತಸ್ಮಾತ್ ಕಾಲಾತ್ ಪೃಥಕ್ ಅತಿಮುಕ್ತಿರ್ವಕ್ತವ್ಯಾ ಇತಿ ಇದಮಾರಭ್ಯತೇ। ಕ್ರಿಯಾನುಷ್ಠಾನವ್ಯತಿರೇಕೇಣಾಪಿ ಪ್ರಾಕ್ ಊರ್ಧ್ವಂ ಚ ಕ್ರಿಯಾಯಾಃ ಸಾಧನವಿಪರಿಣಾಮಹೇತುತ್ವೇನ ವ್ಯಾಪಾರದರ್ಶನಾತ್ ಕಾಲಸ್ಯ। ತಸ್ಮಾತ್ ಪೃಥಕ್ ಕಾಲಾತ್ ಅತಿಮುಕ್ತಿರ್ವಕ್ತವ್ಯಾ ಇತ್ಯತ ಆಹ। ಯದಿದಂ ಸರ್ವಮ್ ಅಹೋರಾತ್ರಾಭ್ಯಾಮ್ ಆಪ್ತಮ್। ಸ ಚ ಕಾಲೋ ದ್ವಿರೂಪಃ ಅಹೋರಾತ್ರಾದಿಲಕ್ಷಣಃ, ತಿಥ್ಯಾದಿಲಕ್ಷಣಶ್ಚ। ತತ್ರ ಅಹೋರಾತ್ರಾದಿಲಕ್ಷಣಾತ್ ತಾವತ್ ಅತಿಮುಕ್ತಿಮ್ ಆಹ। ಅಹೋರಾತ್ರಾಭ್ಯಾಂ ಹಿ ಸರ್ವಂ ಜಾಯತೇ ವರ್ಧತೇ ವಿನಶ್ಯತಿ ಚ। ತಥಾ ಯಜ್ಞಸಾಧನಂ ಚ। ಯಜ್ಞಸ್ಯ ಯಜಮಾನಸ್ಯ ಚಕ್ಷುಃ ಅಧ್ವರ್ಯುಶ್ಚ। ಶಿಷ್ಟಾನಿ ಅಕ್ಷರಾಣಿ ಪೂರ್ವವತ್ ನೇಯಾನಿ। ಯಜಮಾನಸ್ಯ ಚಕ್ಷುಃ ಅಧ್ವರ್ಯುಶ್ಚ ಸಾಧನದ್ವಯಮ್ ಅಧ್ಯಾತ್ಮಾಧಿಭೂತಪರಿಚ್ಛೇದಂ ಹಿತ್ವಾ ಅಧಿದೈವತಾತ್ಮನಾ ದೃಷ್ಟಂ ಯತ್। ಸ ಮುಕ್ತಿಃ ಸೋಽಧ್ವರ್ಯುಃ ಆದಿತ್ಯಭಾವೇನ ದೃಷ್ಟೋ ಮುಕ್ತಿಃ। ಸೈವ ಮುಕ್ತಿರೇವ ಅತಿಮುಕ್ತಿಃ ಇತಿ ಪೂರ್ವವತ್। ಆದಿತ್ಯಾತ್ಮಭಾವಮಾಪನ್ನಸ್ಯ ಹಿ ನಾಹೋರಾತ್ರೇ ಸಂಭವತಃ॥

(ಭಾಷ್ಯಾರ್ಥ)

'ಯಾಜ್ಞವಲ್ಕ್ಯೇತಿ' ಹೋವಾಚ (ಎಂಬ ಈ ನಾಲ್ಕನೆಯ ಕಂಡಿಕೆಯ ಅಭಿಪ್ರಾಯವೇನೆಂದರೆ), ಸ್ವಾಭಾವಿಕವಾಗಿರುವ ಅಜ್ಞಾನ(ರೂಪ) ಆಸಂಗದಿಂದ ಪ್ರೇರಿತವಾದ ಕರ್ಮಲಕ್ಷಣವಾದ ಮೃತ್ಯುವಿನಿಂದ ಅತಿಮುಕ್ತಿಯನ್ನು ವಿವರಿಸಿದ್ದಾಯಿತು. ಆಸಂಗಸಹಿತವಾದ ಆ ಕರ್ಮವೆಂಬ ಮೃತ್ಯುವಿಗೆ ಆಶ್ರಯವಾಗಿರುವ ದರ್ಶಪೂರ್ಣಮಾಸವೇ ಮುಂತಾದ ಕರ್ಮಗಳ ಸಾಧನಗಳು ವಿಪರಿಣಾಮವಾಗು

1. ಅಜ್ಞಾನದಿಂದ ಕಾಮವೂ ಕಾಮದಿಂದ ಕರ್ಮವೂ ಉಂಟಾಗುವವು.

ವದಕ್ಕೆ[1] ಹೇತುವಾಗಿರುವ ಕಾಲವಿದೆಯಷ್ಟೆ, ಆ ಕಾಲದಿಂದ ಅತಿಮುಕ್ತಿಯಾಗುವ (ರೀತಿಯನ್ನು) ಬೇರೆಯಾಗಿ ಹೇಳಬೇಕಾಗಿರುವದರಿಂದ ಈ (ಗ್ರಂಥಭಾಗ)ವನ್ನು ಆರಂಭಿಸಿರುತ್ತದೆ. ಏಕೆಂದರೆ ಕರ್ಮಾನುಷ್ಠಾನಕ್ಕಿಂತ ಬೇರೆಯಾಗಿಯೂ (ಅದರ) ಮುಂಚೆಯೂ ಆಮೇಲೂ ಕ್ರಿಯೆಯ ಸಾಧನಗಳನ್ನು ವಿಪರಿಣಾಮ(ಗೊಳಿಸುವದಕ್ಕೆ) ಹೇತುವಾಗಿ ಕಾಲವು ವ್ಯಾಪಾರಮಾಡುವದೂ ಕಂಡುಬಂದಿರುತ್ತದೆ[2] ಆದ್ದರಿಂದ (ಕರ್ಮದಿಂದ ಅತಿಮುಕ್ತಿಯನ್ನು ಹೇಳಿ ಅದಕ್ಕಿಂತ) ಬೇರೆಯಾಗಿ ಕಾಲದಿಂದಲೂ ಅತಿಮುಕ್ತಿಯನ್ನು ಹೇಳಬೇಕಾಗಿರುವದರಿಂದ (ಶ್ರುತಿ) ಹೇಳುತ್ತಲಿದೆ.

ಇದೆಲ್ಲವೂ ಅಹೋರಾತ್ರಗಳಿಂದ ಆಪ್ತವಾಗಿದೆಯಷ್ಟೆ. ಆ ಕಾಲವೆಂಬುದು ಅಹೋರಾತ್ರಾದಿರೂಪವೆಂದೂ ತಿಥ್ಯಾದಿರೂಪವೆಂದೂ ಎರಡು ರೂಪವಾಗಿರುತ್ತದೆ. ಅವುಗಳಲ್ಲಿ ಅಹೋರಾತ್ರಾದಿರೂಪವಾದ (ಕಾಲ)ದಿಂದ ಮೊದಲು ಅತಿಮುಕ್ತಿಯನ್ನು (ಶ್ರುತಿ) ಹೇಳುತ್ತಿದೆ. ಅಹೋರಾತ್ರಗಳಿಂದಲ್ಲವೆ, ಎಲ್ಲವೂ ಹುಟ್ಟುತ್ತದೆ, ಬೆಳೆಯುತ್ತದೆ ಮತ್ತು ನಾಶವಾಗುತ್ತದೆ? ಯಜ್ಞಸಾಧನವೂ ಹಾಗೆಯೇ. (ಉತ್ತರದಲ್ಲಿ) ಯಜ್ಞದ ಎಂದರೆ ಯಜಮಾನನ ಚಕ್ಷುವೂ ಅಧ್ವರ್ಯುವೂ (ಎಂದು ಅರ್ಥಮಾಡಬೇಕು) ಉಳಿದ ಮಾತುಗಳನ್ನು ಹಿಂದಿನ) ಕಂಡಿಕೆಯಂತೆಯೇ)ನಯಿಸಬೇಕು ಯಜಮಾನನ ಚಕ್ಷುಸ್ಸೂ ಅಧ್ವರ್ಯುವೂ ಎಂಬ ಎರಡು ಸಾಧನಗಳನ್ನೂ ಅಧ್ಯಾತ್ಮ, ಅಧಿಭೌತಿಕ–ಎಂಬ ಪರಿಚ್ಛೇದವನ್ನು ಬಿಟ್ಟು ಅಧಿದೈವತರೂಪದಿಂದ ಕಂಡರೆ (ಅದರಿಂದ ಅತಿಮುಕ್ತನಾಗುತ್ತಾನೆ). ಆ (ಆದಿತ್ಯನೇ) ಮುಕ್ತಿಯು, ಎಂದರ ಆ ಅಧ್ವರ್ಯುವನ್ನು ಆದಿತ್ಯಭಾವದಿಂದ ಕಂಡರೆ (ಅವನು) ಮುಕ್ತಿ(ಸಾಧನವು). ಅದೇ ಮುಕ್ತಿಯೇ, ಅತಿಮುಕ್ತಿಯು ಎಂಬುದನ್ನು ಹಿಂದಿನ (ಕಂಡಿಕೆಯಂತೆ ವಿವರಿಸಬೇಕು, ಆದಿತ್ಯಭಾವವನ್ನು ಪಡೆದುಕೊಂಡವನಿಗೆ ಅಹೋರಾತ್ರಗಳಿರುವ ಹಾಗಿಲ್ಲವಷ್ಟೆ?[3]

## ತಿಥ್ಯಾದಿಕಾಲದಿಂದ ಬಿಡುಗಡೆ

(ಉಪನಿಷತ್ತು)

**ಯಾಜ್ಞವಲ್ಕ್ಯೇತಿ ಹೋವಾಚ ಯದಿದಗ್ಂ ಸರ್ವಂ ಪೂರ್ವಪಕ್ಷಾಪರಪಕ್ಷಾಭ್ಯಾಮಾಪ್ತಗ್ಂ ಸರ್ವಂ ಪೂರ್ವಪಕ್ಷಾಪರಪಕ್ಷಾಭ್ಯಾಮ**

---

1. ಮತ್ತೆಮತ್ತೆ ಮಾರ್ಪಡುತ್ತಲೇ ಇರುವವದಕ್ಕೆ.

2. ಆದ್ದರಿಂದ ಕರ್ಮವೆಂಬ ಮೃತ್ಯುವಲ್ಲದೆ ಕಾಲವೆಂಬ ಮೃತ್ಯುವು ಬೇರೆ ಇದೆ ಎಂದಾಯಿತು.

3. ಏಕೆಂದರೆ ಆದಿತ್ಯನಿಗೆ ಅಹೋರಾತ್ರಗಳೇ ಇಲ್ಲ; ಆದ್ದರಿಂದ ಆದಿತ್ಯದೃಷ್ಟಿಯು ಕಾಲರೂಪಮೃತ್ಯುವಿನಿಂದ ಅತಿಮುಕ್ತಿಯನ್ನು ಪಡೆಯುವದಕ್ಕೆ ಸಾಧನವು.

**ಭಿಪನ್ನಂ ಕೇನ ಯಜಮಾನಃ ಪೂರ್ವಪಕ್ಷಾಪರಪಕ್ಷಯೋರಾಪ್ತಿಮತಿ ಮುಚ್ಯತ ಇತಿ ಇತ್ಯುದ್ಗಾತ್ರರ್ತ್ವಿಜಾ ವಾಯುನಾ ಪ್ರಾಣೇನ ಪ್ರಾಣೋ ವೈ ಯಜ್ಞಸ್ಯೋದ್ಗಾತಾ ತದ್ ಯೋಽಯಂ ಪ್ರಾಣಃ ಸ ವಾಯುಃ ಸ ಉದ್ಗಾತಾ ಸ ಮುಕ್ತಿಃ ಸಾಽತಿಮುಕ್ತಿಃ || ೫ ||**

೫. (ಅವನು) ಹೇಳಿದನೇನೆಂದರೆ "ಯಾಜ್ಞವಲ್ಕ್ಯನೆ, ಇದೆಲ್ಲವೂ ಪೂರ್ವಪಕ್ಷಾಪರಪಕ್ಷಗಳಿಂದ ಆಪ್ತವಾಗಿದೆಯಷ್ಟೆ, ಪೂರ್ವಪಕ್ಷಾಪರ ಪಕ್ಷಗಳಿಂದ ಅಭಿಪನ್ನವಾಗಿದೆಯಷ್ಟೆ; ಯಜಮಾನನು ಪೂರ್ವಪಕ್ಷಾಪರ ಪಕ್ಷಗಳ ಆಪ್ತಿಯನ್ನು ಏತರಿಂದ ದಾಟಿ ಮುಕ್ತನಾಗುವನು?" "ಉದ್ಗಾತೃ ವೆಂಬ ಋತ್ವಿಜನಿಂದ, ವಾಯುವಾದ ಪ್ರಾಣದಿಂದ, ಪ್ರಾಣವೇ ಯಜ್ಞದ ಉದ್ಗಾತೃ, ಇಲ್ಲಿ ಈ ಪ್ರಾಣವೆಂಬುದಿದೆಯಲ್ಲ, ಅದೇ ವಾಯು, ಅವನೇ ಉದ್ಗಾತೃವು, ಅವನೇ ಮುಕ್ತಿ, ಅದೇ ಅತಿಮುಕ್ತಿ.

(ಭಾಷ್ಯ)

೯. ಇದಾನೀಂ ತಿಥ್ಯಾದಿಲಕ್ಷಣಾತ್ ಅತಿಮುಕ್ತಿರುಚ್ಯತೇ| ಯದಿದಂ ಸರ್ವಮ್| ಅಹೋರಾತ್ರಯೋಃ ಅವಿಶಿಷ್ಟಯೋಃ ಆದಿತ್ಯಃ ಕರ್ತಾ, ನ ಪ್ರತಿಪದಾದೀನಾಂ ತಿಥೀನಾಮ್| ತಾಸಾಂ ತು ವೃದ್ಧಿಕ್ಷಯೋಪಗಮನೇನ ಪ್ರತಿಪತ್ಪ್ರಭೃತೀನಾಂ ಚನ್ದ್ರಮಾಃ ಕರ್ತಾ| ಅತಸ್ತದಾಪತ್ತ್ಯಾ ಪೂರ್ವ ಪಕ್ಷಾಪರಪಕ್ಷಾತ್ಯಯಃ| ಆದಿತ್ಯಾಪತ್ತ್ಯಾ ಅಹೋರಾತ್ರಾತ್ಯಯವತ್| ತತ್ರ ಯಜಮಾನಸ್ಯ ಪ್ರಾಣೋ ವಾಯುಃ ಸ ಏವ ಉದ್ಗಾತಾ ಇತಿ ಉದ್ಗೀಥಬ್ರಾಹ್ಮಣೇ ಅವಗತಮ್| "ವಾಚಾ ಚ ಹ್ಯೇವ ಸ ಪ್ರಾಣೇನ ಚೋದಗಾಯತ್" (೧-೩-೨೪) ಇತಿ ಚ ನಿರ್ಧಾರಿತಮ್| "ಅಥೈತಸ್ಯ ಪ್ರಾಣಸ್ಯಾಽಽಪಃ ಶರೀರಂ ಜ್ಯೋತೀರೂಪ ಮಸೌ ಚನ್ದ್ರಃ" (೧-೫-೧೩) ಇತಿ ಚ| ಪ್ರಾಣವಾಯುಚನ್ದ್ರಮಸಾಮ್ ಏಕ ತ್ವಾತ್ ಚನ್ದ್ರಮಸಾ ವಾಯುನಾ ಚ ಉಪಸಂಹಾರೇ ನ ಕಶ್ಚಿತ್ ವಿಶೇಷಃ| ಏವಂ ಮನ್ಯಮಾನಾ ಶ್ರುತಿರ್ವಾಯುನಾ ಅಧಿದೈವತರೂಪೇಣ ಉಪಸಂಹರತಿ| ಅಪಿ ಚ ವಾಯುನಿಮಿತ್ತೌ ಹಿ ವೃದ್ಧಿಕ್ಷಯೌ ಚನ್ದ್ರಮಸಃ| ತೇನ ತಿಥ್ಯಾದಿಲಕ್ಷಣ ಸ್ಯ ಕಾಲಸ್ಯ ಕರ್ತುರಪಿ ಕಾರಯಿತಾ ವಾಯುಃ| ಅತೋ ವಾಯುರೂಪಾಪನ್ನಃ ತಿಥ್ಯಾದಿಕಾಲಾತ್ ಅತೀತೋ ಭವತಿ ಇತ್ಯುಪಪನ್ನತರಂ ಭವತಿ| ತೇನ ಶ್ರುತ್ಯ ನ್ತರೇ ಚನ್ದ್ರರೂಪೇಣ ದೃಷ್ಟಿರ್ಮುಕ್ತಿಃ ಅತಿಮುಕ್ತಿಶ್ಚ| ಇಹ ತು ಕಾಣ್ವಾನಾಂ ಸಾಧನದ್ವಯಸ್ಯ ತತ್ಕಾರಣರೂಪೇಣ ವಾಯ್ವಾತ್ಮನಾ ದೃಷ್ಟಿರ್ಮುಕ್ತಿಃ ಅತಿ ಮುಕ್ತಿಶ್ಚ ಇತಿ ನ ಶ್ರುತ್ಯೋರ್ವಿರೋಧಃ||

(ಭಾಷ್ಯಾರ್ಥ)

ಈಗ ತಿಥ್ಯಾದಿರೂಪವಾದ (ಕಾಲ)ದಿಂದ ಅತಿಮುಕ್ತಿಯನ್ನು ಹೇಳಲಾಗುತ್ತದೆ. 'ಇದೆಲ್ಲವೂ' (ಮುಂತಾದ ಗ್ರಂಥದ ತಾತ್ಪರ್ಯವೇನೆಂದರೆ) (ಯಾವ) ವಿಶೇಷವೂ ಇಲ್ಲದ[1] ಅಹೋರಾತ್ರಗಳಿಗೇ ಆದಿತ್ಯನು ಕರ್ತೃವೇ ಹೊರತು ಪಾಡ್ಯವೇ ಮುಂತಾದ ತಿಥಿಗಳಿಗೆ (ಅವನು) ಕರ್ತೃವಲ್ಲ. ವೃದ್ಧಿಕ್ಷಯಪ್ರಾಪ್ತಿಯಿರುವದರಿಂದ ಆ ಪಾಡ್ಯವೇ ಮುಂತಾದ(ತಿಥಿಗಳಿ)ಗಾದರೋ ಚಂದ್ರನು ಕರ್ತೃ ಆದ್ದರಿಂದ ಆ (ಚಂದ್ರನ) ಭಾವವನ್ನು ಪಡೆದುಕೊಳ್ಳುವದರಿಂದ ಪೂರ್ವಪಕ್ಷಾಪರಪಕ್ಷಗಳನ್ನು —ಆದಿತ್ಯಭಾವವನ್ನು ಪಡೆಯುವದರಿಂದ ಅಹೋರಾತ್ರಗಳನ್ನು ಮೀರುವಂತೆ— ಮೀರಬೇಕು.

ಇಲ್ಲಿ ಯಾಜಮಾನನ 'ಪ್ರಾಣವೇ ವಾಯು, ಅವನೇ ಉದ್ಗಾತೃ' ಎಂದು ಉದ್ಗೀಥಬ್ರಾಹ್ಮಣದಲ್ಲಿ ತಿಳಿಯಬಂದಿರುತ್ತದೆ "ಅವನು ವಾಕ್ಕಿನಿಂದಲೇ ಮತ್ತು ಪ್ರಾಣದಿಂದಲೇ ಉದ್ಗಾನಮಾಡಿದನು" (೧-೩-೨೪) ಎಂದೂ "ಇನ್ನು ಈ ಪ್ರಾಣನಿಗೆ ಅಪ್ಪು ಶರೀರವು, ಈ ಚಂದ್ರನು ಜ್ಯೋತೀರೂಪವು" (೧-೫-೧೩) ಎಂದೂ ನಿರ್ಧರಿಸಲಾಗಿತ್ತು (ಹೀಗೆ) ಪ್ರಾಣವಾಯುಚಂದ್ರರು ಒಂದೇ ಆಗಿರುವದರಿಂದ ಚಂದ್ರನಿಂದಾಗಲಿ ವಾಯುವಿನಿಂದಾಗಲಿ ಉಪಸಂಹಾರಮಾಡುವದರಲ್ಲಿ (ಯಾವ) ವಿಶೇಷವೂ ಆಗುವದಿಲ್ಲ. ಹೀಗೆಂಬ ಅಭಿಪ್ರಾಯದಿಂದ ಶ್ರುತಿಯು ಅಧಿದೈವತರೂಪವಾದ ವಾಯುವಿನಿಂದಲೇ (ಇಲ್ಲಿ) ಉಪಸಂಹಾರಮಾಡಿರುತ್ತದೆ. ಇದಲ್ಲದೆ ವಾಯುನಿಮಿತ್ತವಾಗಿಯಲ್ಲವೆ, ಚಂದ್ರನಿಗೆ ವೃದ್ಧಿಕ್ಷಯಗಳಾಗುವವು ?[2] ಆದ್ದರಿಂದ ತಿಥ್ಯಾದಿಲಕ್ಷಣಕಾಲವನ್ನು ಉಂಟುಮಾಡುವ (ಚಂದ್ರನಿಗೂ) ವಾಯುವೇ ಕಾರಯಿತೃ(ವಾಗಿರುತ್ತಾನೆ) ಆದ್ದರಿಂದ ವಾಯುರೂಪವನ್ನು ಪಡೆದುಕೊಂಡವನು ತಿಥ್ಯಾದಿಕಾಲವನ್ನು ಮೀರಿದವನಾಗುತ್ತಾನೆ ಎಂಬುದು ಹೆಚ್ಚು ಉಪಪನ್ನವಾಗಿರುತ್ತದೆ ಆದ್ದರಿಂದ ಮತ್ತೊಂದು ಶ್ರುತಿಯಲ್ಲಿ ಚಂದ್ರರೂಪದಿಂದ ಕಾಣುವದು ಮುಕ್ತಿಯೂ ಅತಿಮುಕ್ತಿಯೂ (ಎಂದು ಹೇಳಿರುತ್ತದೆ), [3]ಇಲ್ಲಿ ಯಾದರೆ ಕಾಣ್ವರ(ಶಾಖೆಯಲ್ಲಿ)ಎರಡು ಸಾಧನಗಳನ್ನೂ ಆ(ಚಂದ್ರನಿಗೆ) ಕಾರಣವಾಗಿರುವ ವಾಯುರೂಪದಿಂದ ಕಾಣುವದು ಮುಕ್ತಿಯೂ ಅತಿಮುಕ್ತಿಯೂ ಎಂದು

1. ವೃದ್ಧಿಕ್ಷಯಗಳಿಲ್ಲದ.

2. ಕ್ರಿಯಾಶಕ್ತಿಯುಳ್ಳ ವಾಯುವೇ ಚಂದ್ರನಲ್ಲಿ ಚಲನವನ್ನೂ ಮಾರ್ಪಾಟುಗಳನ್ನೂ ಮಾಡುವವನು.

3. ತದ್ವಿದಂ ಮೀವ ಸೋಽಸೌ ಚನ್ದ್ರಃ ಸ ಬ್ರಹ್ಮಾ ಎಂದು ಮಾ ||

ಹೇಳಿರುತ್ತದೆ. ಹೀಗೆ (ಈ) ಎರಡು ಶ್ರುತಿಗಳಿಗೂ (ಯಾವ) ವಿರೋಧವೂ ಇರುವದಿಲ್ಲ.[1]

## ಅತಿಮುಕ್ತಿಗಳಿಗೆ ಬೇಕಾದ ಆಶ್ರಯ

(ಉಪನಿಷತ್ತು)

**ಯಾಜ್ಞವಲ್ಕ್ಯೇತಿ ಹೋವಾಚ ಯದಿದಮನ್ತರಿಕ್ಷಮನಾರಮ್ಬಣಮಿವ ಕೇನಾಕ್ರಮೇಣ ಯಜಮಾನಃ ಸ್ವರ್ಗಂ ಲೋಕಮಾಕ್ರಮತ ಇತಿ ಬ್ರಹ್ಮಣರ್ತ್ವಿಜಾ ಮನಸಾ ಚನ್ದ್ರೇಣ ಮನೋ ವೈ ಯಜ್ಞಸ್ಯ ಬ್ರಹ್ಮಾ ತದ್ಯದಿದಂ ಮನಃ ಸೋಽಸೌ ಚನ್ದ್ರಃ ಸ ಬ್ರಹ್ಮಾ ಸ ಮುಕ್ತಿಃ ಸಾತಿಮುಕ್ತಿರಿತ್ಯತಿಮೋಕ್ಷಾ ಅಥ ಸಂಪದಃ ॥ ೬ ॥**

೬. (ಅವನು) ಹೇಳಿದನೇನೆಂದರೆ "ಯಾಜ್ಞವಲ್ಕ್ಯನೆ, ಈ ಅಂತರಿಕ್ಷವು ಅನಾರಂಬಣವಾಗಿರುವಂತೆ ತೋರುತ್ತಿದೆಯಷ್ಟೆ; ಯಾವ ಆಕ್ರಮದಿಂದ ಯಜಮಾನನು ಸ್ವರ್ಗಲೋಕವನ್ನು ಆಕ್ರಮಿಸುತ್ತಾನೆ?" "ಬ್ರಹ್ಮನೆಂಬ ಋತ್ವಿಜನಿಂದ, ಚಂದ್ರನಾದ ಮನಸ್ಸಿನಿಂದ. ಮನಸ್ಸೇ ಯಜ್ಞದ ಬ್ರಹ್ಮವು. ಇಲ್ಲಿ ಈ ಮನಸ್ಸೆಂಬುದಿದೆಯಲ್ಲ, ಅದೇ ಆ ಚಂದ್ರನು, ಅವನೇ ಬ್ರಹ್ಮನು. ಅವನೇ ಮುಕ್ತಿ, ಅದೇ ಅತಿಮುಕ್ತಿ. ಇವು ಅತಿಮೋಕ್ಷಗಳು, ಇನ್ನು ಸಂಪತ್ತುಗಳು.

(ಭಾಷ್ಯ)

೧೦. ಮೃತ್ಯೋಃ ಕಾಲಾತ್ ಅತಿಮುಕ್ತಿರ್ವ್ಯಾಖ್ಯಾತಾ ಯಜಮಾನಸ್ಯ। ಸೋಽತಿಮುಚ್ಯಮಾನಃ ಕೇನ ಅವಷ್ಟಮ್ಭೇನ ಪರಿಚ್ಛೇದವಿಷಯಂ ಮೃತ್ಯುಮ್ ಅತೀತ್ಯ ಫಲಂ ಪ್ರಾಪ್ನೋತಿ ಅತಿಮುಚ್ಯತ ಇತಿ? ಉಚ್ಯತೇ। ಯದಿದಂ ಪ್ರಸಿದ್ಧಮ್ ಅನ್ತರಿಕ್ಷಮ್ ಆಕಾಶಃ ಅನಾರಮ್ಬಣಮ್ ಅನಾಲಮ್ಬನಮ್। ಇವ ಶಬ್ದಾತ್ ಅಸ್ತ್ಯೇವ ತತ್ರ ಆಲಂಬನಮ್ ತತ್ತು ನ ಜ್ಞಾಯತೇ ಇತ್ಯಭಿಪ್ರಾಯಃ। ಯತ್ತು ತದಜ್ಞಾಯಮಾನಮ್ ಆಲಮ್ಬನಂ ತತ್ ಸರ್ವನಾಮ್ನಾ ಕೇನೇತಿ ಪೃಚ್ಛ್ಯತೇ। ಅನ್ಯಥಾ ಫಲಪ್ರಾಪ್ತೇರಸಂಭವಾತ್। ಯೇನ ಅವಷ್ಟಮ್ಭೇನ ಆಕ್ರಮೇಣ ಯಜಮಾನಃ ಕರ್ಮಫಲಂ ಪ್ರತಿಪದ್ಯಮಾನಃ ಅತಿಮುಚ್ಯತೇ ಕಿಂ ತತ್? ಇತಿ ಪ್ರಶ್ನವಿಷಯಃ। ಕೇನ ಆಕ್ರಮೇಣ ಯಜಮಾನಃ ಸ್ವರ್ಗಂ ಲೋಕಮ್ ಆಕ್ರ

---

1. "ಬ್ರಹ್ಮಣರ್ತ್ವಿಜಾ ಮನಸಾ ಚನ್ದ್ರೇಣ" ಎಂಬ ಮಾಧ್ಯಂದಿನಶ್ರುತಿಯಲ್ಲಿ ನೇರಾಗಿ ಚಂದ್ರನನ್ನೂ ಈ ಶ್ರುತಿಯಲ್ಲಿ ಕಾರಣರೂಪನಾದ ವಾಯುವನ್ನೂ ಹೇಳಿರುವದು ಪರಸ್ಪರ ವಿರುದ್ಧವಲ್ಲ.

ಮತೇ ಇತಿ | ಸ್ವರ್ಗಂ ಲೋಕಂ ಫಲಂ ಪ್ರಾಪ್ನೋತಿ ಅತಿಮುಚ್ಯತೇ ಇತ್ಯರ್ಥಃ | ಬ್ರಹ್ಮಣಾ ಋತ್ವಿಜಾ ಮನಸಾ ಚನ್ದ್ರೇಣ ಇತಿ ಅಕ್ಷರನ್ಯಾಸಃ ಪೂರ್ವವತ್ | ತತ್ರ ಅಧ್ಯಾತ್ಮಂ ಯಜ್ಞಸ್ಯ ಯಜಮಾನಸ್ಯ ಯದಿದಂ ಪ್ರಸಿದ್ಧಂ ಮನಃ ಸೋಽಸೌ ಚನ್ದ್ರೋಽಧಿದೈವಮ್ | ಮನೋಽಧ್ಯಾತ್ಮಂ ಚನ್ದ್ರಮಾ ಅಧಿದೈವತಮ್ ಇತಿ ಹಿ ಪ್ರಸಿದ್ಧಮ್ | ಸ ಏವ ಚನ್ದ್ರಮಾ ಬ್ರಹ್ಮಾ ಋತ್ವಿಕ್ | ತೇನ ಅಧಿಭೂತಂ ಬ್ರಹ್ಮಣಃ ಪರಿಚ್ಛಿನ್ನಂ ರೂಪಮ್, ಅಧ್ಯಾತ್ಮಂ ಚ ಮನಸಃ ಏತದ್ದ್ವಯಮ್ ಅಪರಿಚ್ಛಿನ್ನೇನ ಚನ್ದ್ರಮಸೋ ರೂಪೇಣ ಪಶ್ಯತಿ | ತೇನ ಚನ್ದ್ರಮಸಾ ಮನಸಾ ಅವಲಮ್ಬನೇನ ಕರ್ಮಫಲಂ ಸ್ವರ್ಗಂ ಲೋಕಂ ಪ್ರಾಪ್ನೋತಿ ಅತಿಮುಚ್ಯತೇ ಇತ್ಯಭಿಪ್ರಾಯಃ | ಇತಿ ಇತ್ಯುಪಸಂಹಾರಾರ್ಥಂ ವಚನಮ್ | ಇತಿ ಏವಂ ಪ್ರಕಾರಾ ಮೃತ್ಯೋರತಿಮೋಕ್ಷಾಃ | ಸರ್ವಾಣಿ ಹಿ ದರ್ಶನಪ್ರಕಾರಾಣಿ ಯಜ್ಞಾಙ್ಗವಿಷಯಾಣಿ ಅಸ್ಮಿನ್ ಅವಸರೇ ಉಕ್ತಾನಿ ಇತಿ ಕೃತ್ವಾ ಉಪಸಂಹಾರಃ ಇತ್ಯತಿಮೋಕ್ಷಾಃ | ಏವಂಪ್ರಕಾರಾ ಅತಿಮೋಕ್ಷಾ ಇತ್ಯರ್ಥಃ ||

(ಭಾಷ್ಯಾರ್ಥ)

ಯಜಮಾನನಿಗೆ ಮೃತ್ಯುವಾದ ಕಾಲದಿಂದ ಅತಿಮುಕ್ತಿ(ಯಾಗುವದು ಹೇಗೆಂಬುದನ್ನು) ವಿವರಿಸಿದ್ದಾಯಿತು ಅವನು ಅತಿಮುಕ್ತನಾಗುವಾಗ ಯಾವ ಆಶ್ರಯದಿಂದ ಪರಿಚ್ಛೇದವಿಷಯವಾದ ಮೃತ್ಯುವನ್ನು ಮೀರಿ ಫಲವನ್ನು ಪಡೆಯುತ್ತಾನೆ, ಅತಿಮುಕ್ತನಾಗುತ್ತಾನೆ ?–ಎಂಬುದನ್ನು (ಶ್ರುತಿ) ತಿಳಿಸುತ್ತದೆ.

ಈ ಪ್ರಸಿದ್ಧವಾದ ಅಂತರಿಕ್ಷವು, ಆಕಾಶವು, ಅನಾರಂಬಣವಾಗಿ, ಎಂದರೆ ಆಲಂಬನವಿಲ್ಲದೆ (ಎಂದರ್ಥ). ಇವ (ಅಂತೆ) ಎಂಬ ಶಬ್ದ(ವನ್ನು ಪ್ರಯೋಗಿಸಿರು)ವದರಿಂದ ಇಲ್ಲಿ ಆಲಂಬನವು ಇದ್ದೇ ಇದೆ, ಆದರೆ ಅದು (ಯಾವದೆಂಬುದು) ತಿಳಿಯುವದಿಲ್ಲ-ಎಂದು ಅಭಿಪ್ರಾಯ. ಆ ತಿಳಿಯದಂತಿರುವ ಆಲಂಬನವಿದೆಯಲ್ಲ, ಅದನ್ನು 'ಯಾವದರಿಂದ ?' ಎಂಬ ಸರ್ವನಾಮದಿಂದ ಕೇಳಿರುತ್ತದೆ. ಏಕೆಂದರೆ ಅದಿಲ್ಲದಿದ್ದರೆ ಫಲಪ್ರಾಪ್ತಿ(ಯಾಗುವ) ಸಂಭವವಿರುವದಿಲ್ಲ. ಯಾವ ಆಕ್ರಮದಿಂದ ಆಶ್ರಯದಿಂದ[1] ಯಜಮಾನನು ಕರ್ಮಫಲವನ್ನು ಪಡೆದು ಅತಿಮುಕ್ತನಾಗುವನೋ ಅದು ಯಾವದು ? ಎಂಬುದು ಪ್ರಶ್ನೆಯ ವಿಷಯವು. ಯಾವ ಆಕ್ರಮದಿಂದ, ಯಜಮಾನನು ಸ್ವರ್ಗಲೋಕವನ್ನು ಆಕ್ರಮಿಸುತ್ತಾನೆ ?–ಎಂದರೆ ಸ್ವರ್ಗಲೋಕವೆಂಬ ಫಲವನ್ನು ಪಡೆಯುತ್ತಾನೆ, ಅತಿಮುಕ್ತನಾಗುತ್ತಾನೆ ? ಎಂದರ್ಥ.

---

1. ಆಕ್ರಮದಿಂದ ಎಂದರೆ ಸ್ವರ್ಗಲೋಕಕ್ಕೆ ಹೋಗುವದಕ್ಕೆ ಸಾಧನವಾಗಿರುವ ಆಶ್ರಯದಿಂದ ಎಂದರ್ಥ. **ಭರ್ತೃಪ್ರಪಂಚರು** ಯಾವ ದೇಹದಿಂದ ಎಂದು ಅರ್ಥಮಾಡಿದ್ದರು ; ಗಂತೃವೊಬ್ಬನಿದ್ದರೆ ಅವನಿಗೆ ದೇಹವೂ ಇರಲೇಬೇಕಾಗುವದರಿಂದ ಇದು ದೇಹವಿಷಯದ ಪ್ರಶ್ನೆಯಾಗಲಾರದು ಎಂದು **ವಾರ್ತಿಕದಲ್ಲಿ** ಅವರ ವ್ಯಾಖ್ಯಾನವನ್ನು ಖಂಡಿಸಿದೆ.

'ಬ್ರಹ್ಮನೆಂಬ ಋತ್ವಿಜನಿಂದ ಚಂದ್ರನಾದ ಮನಸ್ಸಿನಿಂದ' ಎಂಬಲ್ಲಿ ಮಾತುಗಳ ಯೋಜನೆಯು ಹಿಂದಿನ (ಕಂಡಿಕೆ)ಯಂತೆಯೇ.

ಇಲ್ಲಿ ಯಜ್ಞದ ಎಂದರೆ ಯಜಮಾನನ ಅಧ್ಯಾತ್ಮವಾಗಿ ಈ ಪ್ರಸಿದ್ಧವಾದ ಮನಸ್ಸಿದೆಯಲ್ಲ, ಅದು ಅಧಿದೈವವಾಗಿ ಆ ಚಂದ್ರನು. ಮನಸ್ಸು ಅಧ್ಯಾತ್ಮವೆಂದೂ ಚಂದ್ರನು ಅಧಿದೈವತವೆಂದೂ ಪ್ರಸಿದ್ಧವಲ್ಲವೆ? ಆ ಚಂದ್ರನೇ ಬ್ರಹ್ಮನು. ಆದ್ದರಿಂದ ಅಧಿಭೂತವಾಗಿರುವ ಬ್ರಹ್ಮನ ಪರಿಚ್ಛಿನ್ನರೂಪವನ್ನೂ ಅಧ್ಯಾತ್ಮವಾಗಿರುವ ಮನಸ್ಸಿನ (ರೂಪವನ್ನೂ), ಈ ಎರಡನ್ನೂ ಅಪರಿಚ್ಛಿನ್ನವಾದ ಚಂದ್ರನ ರೂಪದಿಂದ ಕಾಣುತ್ತಾನೆ. ಹೀಗೆ ಚಂದ್ರನಾದ ಮನಸ್ಸೆಂಬ ಅವಲಂಬನದಿಂದ ಕರ್ಮಫಲವಾದ ಸ್ವರ್ಗಲೋಕವನ್ನು ಪಡೆದುಕೊಳ್ಳುತ್ತಾನೆ, ಅತಿಮುಕ್ತನಾಗುತ್ತಾನೆ ಎಂದು ಅಭಿಪ್ರಾಯ.[1]

'ಇತಿ' ಎಂಬ ಮಾತು ಉಪಸಂಹಾರಕ್ಕಾಗಿ (ಹೇಳಿದ್ದು). ಇತಿ ಎಂದರೆ ಮೃತ್ಯುವಿನಿಂದ ಅತಿಮೋಕ್ಷಗಳು ಈ ಪ್ರಕಾರಗಳಾಗಿರುತ್ತವೆ (ಎಂದರ್ಥ). ಯಜ್ಞಾಂಗಗಳ ವಿಷಯವಾದ ಈ ದರ್ಶನಪ್ರಕಾರಗಳನ್ನೆಲ್ಲ ಈ ಸಂದರ್ಭದಲ್ಲಿ ಹೇಳಿರುತ್ತದೆ ಎಂದಿಟ್ಟುಕೊಂಡು[2] ಹೀಗೆ 'ಅತಿಮೋಕ್ಷಗಳು' ಎಂದು ಉಪಸಂಹರಿಸಿದೆ; ಅತಿಮೋಕ್ಷಗಳು ಇಷ್ಟು ಪ್ರಕಾರಗಳಾಗಿವೆ ಎಂದು ಅರ್ಥ.[3]

(ಭಾಷ್ಯ)

೧೧. ಅಥ ಸಂಪದಃ। ಅಥ ಅಧುನಾ ಸಂಪದಃ ಉಚ್ಯನ್ತೇ। ಸಂಪನ್ನಾಮ ಕೇನಚಿತ್ ಸಾಮಾನ್ಯೇನ ಅಗ್ನಿಹೋತ್ರಾದೀನಾಂ ಕರ್ಮಣಾಂ ಫಲವತಾಂ ತತ್ಫಲಾಯ ಸಂಪಾದನಂ ಸಂಪತ್। ಫಲಸ್ಯೈವ ವಾ। ಸರ್ವೋತ್ಸಾಹೇನ ಫಲಸಾಧನಾನುಷ್ಠಾನೇ ಪ್ರಯತಮಾನಾನಾಂ ಕೇನಚಿತ್ ವೈಗುಣ್ಯೇನ ಅಸಂಭವಃ। ತದಿದಾನೀಮ್ ಆಹಿತಾಗ್ನಿಃ ಸನ್ ಯತ್ಕಿಂಚಿತ್ ಕರ್ಮ ಅಗ್ನಿಹೋತ್ರಾದೀನಾಂ ಯಥಾ

---

1. "ಉದ್ಗಾತ್ರರ್ತ್ವಿಜಾ ವಾಯುನಾ ಪ್ರಾಣೇನ" ಎಂಬ ಮಾಧ್ಯಂದಿನಪಾಠದಲ್ಲಿ ಅಧ್ಯಾತ್ಮವಾಗಿ ಯಜಮಾನನ ಪ್ರಾಣವಿದೆಯಲ್ಲ, ಅದು ಅಧಿಯಜ್ಞವಾಗಿ ಉದ್ಗಾತೃವು; ಅದೇ ವಾಯು ಎಂದು ಅರಿತುಕೊಂಡರೆ ಅತಿಮುಕ್ತಿಯಾಗುವದು ಎಂದು ವ್ಯಾಖ್ಯಾನಮಾಡಿಕೊಳ್ಳಬೇಕು ಎಂದು **ವಾರ್ತಿಕ.**

2. ವಾಗಾದಿಗಳನ್ನು ಅಗ್ನ್ಯಾದಿಗಳೆಂದು ಉಪಾಸನೆಮಾಡುವದನ್ನು ಇಲ್ಲಿ ಹೇಳಿದೆಯಷ್ಟೆ; ತ್ವಗಾದಿಗಳನ್ನು ವಾಯ್ವಾದಿಗಳೆಂದು ಉಪಾಸನೆಮಾಡಬೇಕೆಂದೂ ಇಲ್ಲಿ ಹೇಳಿದಂತೆ ಆಯಿತು ಎಂದು ಭಾವ.

3. ಇಲ್ಲಿ ಹೇಳಿರುವ ಉಪಾಸನೆಯೂ ಋತ್ವಿಕ್ಕರ್ಮವೇ; ಜಪವು ಮಾತ್ರ ಯಜಮಾನನದು ಎಂದು ಉದ್ಗೀಥಬ್ರಾಹ್ಮಣದಂತೆಯೇ ತಿಳಿಯಬೇಕು ಎಂಬುದು **ವಾರ್ತಿಕಕಾರರ ಮತ** (೩-೧-೪೩).

ಸಂಭವಮ್ ಆದಾಯ ಆಲಮ್ಬನೀಕೃತ್ಯ ಕರ್ಮಫಲವಿದ್ವತ್ತಾಯಾಂ ಸತ್ಯಾಂ ಯತ್ಕರ್ಮಫಲಕಾಮೋ ಭವತಿ ತದೇವ ಸಂಪಾದಯತಿ। ಅನ್ಯಥಾ ರಾಜಸೂಯಾಶ್ವಮೇಧಪುರುಷಮೇಧಸರ್ವಮೇಧಲಕ್ಷಣಾನಾಮ್ ಅನಧಿಕೃತಾನಾಂ [1]ತ್ರೈವರ್ಣಿಕಾನಾಮಪಿ ಅಸಂಭವಃ। ತೇಷಾಂ ತತ್ಪಾಠಃ ಸ್ವಾಧ್ಯಾಯಾರ್ಥ ಏವ ಕೇವಲಃ ಸ್ಯಾತ್। ಯದಿ ತತ್ಫಲಪ್ರಾಪ್ತ್ಯುಪಾಯಃ ಕಶ್ಚನ ನ ಸ್ಯಾತ್। ತಸ್ಮಾತ್ ತೇಷಾಂ ಸಂಪದೈವ ತತ್ಫಲಪ್ರಾಪ್ತಿಃ। ತಸ್ಮಾತ್ ಸಂಪದಾಮಪಿ ಫಲವತ್ತ್ವಮ್। ಅತಃ ಸಂಪದ ಆರಭ್ಯನ್ತೇ ||

(ಭಾಷ್ಯಾರ್ಥ)

ಇನ್ನು ಸಂಪತ್ತುಗಳು, ಇನ್ನು ಈಗ ಸಂಪತ್ತುಗಳನ್ನು ಹೇಳಲಾಗುತ್ತದೆ. ಸಂಪತ್ತು ಎಂದರೆ ಯಾವದಾದರೊಂದು ಹೋಲಿಕೆಯಿಂದ ಫಲವುಳ್ಳ ಅಗ್ನಿಹೋತ್ರವೇ ಮುಂತಾದ ಕರ್ಮಗಳಿಗೆ ಆ ಫಲವಾಗುವದಕ್ಕಾಗಿ ಸಂಪಾದನೆಮಾಡುವದೇ ಸಂಪತ್ತು, ಅಥವಾ ಫಲವನ್ನೇ[2] ಸಂಪಾದನೆಮಾಡುವದೇ (ಸಂಪತ್ತು). ಎಷ್ಟೇ ಉತ್ಸಾಹದಿಂದ ಫಲವನ್ನು ಸಾಧಿಸಿಕೊಳ್ಳುವದಕ್ಕೆ ಅನುಷ್ಠಾನದಲ್ಲಿ ಪ್ರಯತ್ನಪಟ್ಟರೂ ಯಾವದೋ ಒಂದು ವೈಗುಣ್ಯದಿಂದ (ಅದನ್ನು ಮಾಡುವದು) ಆಗುವದಿಲ್ಲ. ಆದ್ದರಿಂದ ಈಗ ಅಗ್ನಿಯನ್ನು ಆಧಾನಮಾಡಿದವನು ಅಗ್ನಿಹೋತ್ರಾದಿಗಳಲ್ಲಿ ಯಾವದಾದರೊಂದು ಕರ್ಮವನ್ನು ಯಥಾಸಂಭವವಾಗಿ ತೆಗೆದುಕೊಂಡು (ಯಾವದಾದರೊಂದನ್ನು) ಆಶ್ರಯಿಸಿಕೊಂಡು ಕರ್ಮಫಲವನ್ನು ಅರಿತುಕೊಂಡವನಾಗಿ, (ತಾನು) ಯಾವ ಕರ್ಮಫಲದ ಕಾಮವುಳ್ಳವನಾಗಿರುವನೋ ಅದನ್ನೇ ಸಂಪಾದಿಸುತ್ತಾನೆ[3]. ಹೀಗಲ್ಲದಿದ್ದರೆ[4] ರಾಜಸೂಯ, ಅಶ್ವಮೇಧ, ಪುರುಷಮೇಧ, ಸರ್ವಮೇಧ– ಎಂಬ (ಕರ್ಮಗಳು ಅವುಗಳಲ್ಲಿ) ಅಧಿಕಾರಿಗಳಲ್ಲದ[5] ತ್ರೈವರ್ಣಿಕ

---

1. ಅಧಿಕೃತಾನಾಮ್ ಎಂಬುದನ್ನು ಹೀಗೆ ತಿದ್ದಿಕೊಂಡಿದೆ; ಅನುವಾದದ ಟಿಪ್ಪಣಿಯನ್ನು ನೋಡಿ.

2. ಈ ವಿವರಣೆಯ ಅಭಿಪ್ರಾಯವು ಮುಂದಿನ ವಿಶೇಷವಚನಗಳಿಂದ ಸ್ಪಷ್ಟವಾಗುವದು.

3. ಆ ಫಲದ ದೃಷ್ಟಿಯಿಂದ ಉಪಾಸನೆಮಾಡಬೇಕು

4. ಸಂಪಾದನೆಯಿಂದಲೇ ಫಲವಾಗಲಾರದು ಎಂಬುದಾಗಿದ್ದರೆ

5. ಅಧಿಕೃತಾನಾಮ್ ಎಂಬ ಪಾಠಕ್ಕೆ ಕರ್ಮದಲ್ಲಿ ಅಧಿಕೃತರಾದವರಿಗೂ ಎಂದು ಅರ್ಥವನ್ನು ಮಾಡಿಕೊಳ್ಳಬೇಕಾಗುವದು ಆಗ ಯಾವ ಕರ್ಮಕ್ಕೂ ಸಂಪತ್ತಿಲ್ಲದೆ ಫಲವಾಗುವದಿಲ್ಲ ಎಂಬ ಅನಿಷ್ಟವಾದ ಅರ್ಥವು ಹೊರಡುತ್ತದೆ. ಆದ್ದರಿಂದ ಅಶ್ವಮೇಧಾದಿಗಳನ್ನು ಮೂರು ವರ್ಣದವರೂ ಮಾಡುವದಕ್ಕೆ ಅಧಿಕಾರವಿಲ್ಲದ್ದರಿಂದ ಹಾಗೆ ಅಧಿಕಾರವಿಲ್ಲದವರಿಗೆ ಅಶ್ವಮೇಧಾದಿಗಳ ಗ್ರಂಥದ ಅಧ್ಯಯನವು ಬರಿಯ ಅಧ್ಯಯನಕ್ಕಾಗಿಯೇ ಎಂದು ಆಗುವದು, ಅದು ನ್ಯಾಯವಲ್ಲ ಎಂಬ ಅಭಿಪ್ರಾಯವು ಬರುವದಕ್ಕಾಗಿ ಅನಧಿಕೃತಾನಾಮ್ ಎಂದು ತಿದ್ದಿಕೊಂಡಿದೆ.

ರಿಗೂ ಸಂಭವಿಸುವದಿಲ್ಲ; ಅವುಗಳ ಫಲವನ್ನು ಪಡೆಯುವದಕ್ಕೆ ಯಾವ ಉಪಾಯವೂ ಇಲ್ಲವಾದರೆ ಅವರು ಅವುಗಳನ್ನು ಪಠಿಸುವದು ಬರಿಯ ಅಧ್ಯಯನಕ್ಕಾಗಿಯೇ ಎಂದಾಗುವದು. ಆದ್ದರಿಂದ ಅವರಿಗೆ[1] ಅವುಗಳ ಫಲವು ದೊರಕುವದು ಸಂಪತ್ತಿನಿಂದಲೇ[2] (ಎನ್ನಬೇಕು). ಆದ್ದರಿಂದ ಸಂಪತ್ತುಗಳಿಗೂ ಫಲವುಂಟು. ಆದಕಾರಣ (ಇಲ್ಲಿ) ಸಂಪತ್ತುಗಳನ್ನು (ಹೇಳ)ಲಾರಂಭಿಸಿದೆ.

## ಹೋತೃವಿಗೆ ಸಂಪತ್ತಿನಿಂದಾಗುವ ಫಲ

(ಉಪನಿಷತ್ತು)

**ಯಾಜ್ಞವಲ್ಕ್ಯೇತಿ ಹೋವಾಚ ಕತಿಭಿರಯಮದ್ಯರ್ಗ್ಭಿರ್ಹೋತಾಽಸ್ಮಿನ್ ಯಜ್ಞೇ ಕರಿಷ್ಯತೀತಿ? ತಿಸೃಭಿರಿತಿ ಕತಮಾಸ್ತಾಸ್ತಿಸ್ರ ಇತಿ ಪುರೋಽನುವಾಕ್ಯಾ ಚ ಯಾಜ್ಯಾ ಚ ಶಸ್ಯೈವ ತೃತೀಯಾ ಕಿಂ ತಾಭಿರ್ಜಯತೀತಿ ಯತ್ಕಿಂಚೇದಂ ಪ್ರಾಣಭೃದಿತಿ ॥ ೭ ॥**

೭. 'ಯಾಜ್ಞವಲ್ಕ್ಯನೆ', ಎಂದನು. 'ಈಗ ಈ ಹೋತೃವು ಎಷ್ಟು ಋಕ್ಕುಗಳಿಂದ ಈ ಯಜ್ಞದಲ್ಲಿ ಮಾಡುವನು?' ಮೂರು (ಋಕ್ಕು)ಗಳಿಂದ. 'ಆ ಮೂರು ಯಾವವು?' ಪುರೋನುವಾಕ್ಯಾ ಮತ್ತು ಯಾಜ್ಯಾ; ಶಸ್ಯಾ ಎಂಬುದೇ ಮೂರನೆಯದು. 'ಅವುಗಳಿಂದ (ಅವನು) ಏನನ್ನು ಗೆದ್ದುಕೊಳ್ಳುವನು?' ಈ ಪ್ರಾಣಭೃತ್ತು ಯಾವಯಾವದುಂಟೋ (ಅದೆಲ್ಲವನ್ನೂ).

(ಭಾಷ್ಯ)

೧೨. ಯಾಜ್ಞವಲ್ಕ್ಯೇತಿ ಹೋವಾಚ ಅಭಿಮುಖೀಕರಣಾಯ। ಕತಿಭಿರಯಮದ್ಯ ಋಗ್ಭಿರ್ಹೋತಾ ಅಸ್ಮಿನ್ ಯಜ್ಞೇ ಕತಿಭಿಃ ಕತಿಸಂಖ್ಯಾಭಿಃ ಋಗ್ಭಿಃ

---

1. ಅಶ್ವಮೇಧಾದಿಗಳಲ್ಲಿ ಅಧಿಕಾರವಿಲ್ಲದ, ತ್ರೈವರ್ಣಿಕರಿಗೆ ಎಂದರ್ಥ. ಅಶ್ವಮೇಧೋಪಾಸನೆಯ ವಿಷಯದಲ್ಲಿ ಉಪನಿಷತ್ತಿನ ಆರಂಭದಲ್ಲಿ (ಭಾ. ಭಾ. ೬) ಭಾಷ್ಯಕಾರರು ಬರೆದಿರುವದನ್ನು ನೋಡಿ.

2. ಸಂಪನ್ಮಾತ್ರದಿಂದಲೇ ಕರ್ಮಫಲವು ದೊರಕುವದಾದರೆ ಮಹಾಯಾಸರೂಪವಾದ ಕರ್ಮವನ್ನು ವೇದವು ಏತಕ್ಕೆ ವಿಧಿಸಿದೆ?-ಎಂದು ಕರ್ಮಮೀಮಾಂಸಕರು ಶಂಕಿಸುವದುಂಟು. ತಂ. ವಾ. ೧-೩-೮ (ಪು. ೨೮೭) ನೋಡಿ. ಆದರೆ ಶಾಸ್ತ್ರವು ತಾತ್ಪರ್ಯದಿಂದ ಹಾಗೆಂದು ಹೇಳುವದರಿಂದ ಅಶ್ವಮೇಧಾದಿಗಳಲ್ಲಿ ಅಧಿಕಾರಿಗಳಲ್ಲದ ತ್ರೈವರ್ಣಿಕರಿಗೆ ಸಂಪತ್ತಿನಿಂದಲೇ ಫಲವಾಗುವದು ಎಂದು ಕಲ್ಪಿಸುವದರಲ್ಲಿ ದೋಷವಿಲ್ಲ ಎಂದು **ವಾರ್ತಿಕಕಾರರು** ಅಭಿಪ್ರಾಯಪಟ್ಟಿರುತ್ತಾರೆ. ೩-೧-೫೦

ಋಗ್ಜಾತಿಭಿಃ ಅಯಂ ಹೋತಾ ಋತ್ವಿಕ್ ಅಸ್ಮಿನ್ ಯಜ್ಞೇ ಕರಿಷ್ಯತಿ ಶಸ್ತ್ರಂ-ಶಂಸತಿ? ಆಹ ಇತರಃ ತಿಸೃಭಿರ್ಋಗ್ಜಾತಿಭಿಃ | ಇತ್ಯುಕ್ತವನ್ತಂ ಪ್ರತ್ಯಾಹ ಇತರಃ | ಕತಮಾಸ್ತಾಸ್ತಿಸ್ರ ಇತಿ ? ಸಂಖ್ಯೇಯವಿಷಯೋಽಯಂ ಪ್ರಶ್ನಃ ಪೂರ್ವಸ್ತು ಸಂಖ್ಯಾವಿಷಯಃ। ಪುರೋಽನುವಾಕ್ಯಾ ಚ ಪ್ರಾಕ್ ಯಾಗಕಾಲಾತ್ ಯಾಃ ಪ್ರಯುಜ್ಯನ್ತೇ ಋಚಃ ಸಾ ಋಗ್ಜಾತಿಃ ಪುರೋಽನುವಾಕ್ಯಾ ಇತ್ಯುಚ್ಯತೇ | ಯಾಗಾರ್ಥಂ ಯಾಃ ಪ್ರಯುಜ್ಯನ್ತೇ | ಋಚಃ, ಸಾ ಋಗ್ಜಾತಿಃ ಯಾಜ್ಯಾ | ಶಸ್ತ್ರಾರ್ಥಂ ಯಾಃ ಪ್ರಯುಜ್ಯನ್ತೇ ಋಚಃ ಸಾ ಋಗ್ಜಾತಿಃ ಶಸ್ಯಾ| ಸರ್ವಾಸ್ತು ಯಾಃ ಕಾಶ್ಚನ ಋಚಃ ತಾಃ ಸ್ತೋತ್ರಿಯಾ ವಾ ಅನ್ಯಾ ವಾ ಸರ್ವಾ ಏತಾಸ್ವೇವ ತಿಸೃಷು ಋಗ್ಜಾತಿಷು ಅನ್ತರ್ಭವನ್ತಿ ಕಿಂ ತಾಭಿಃ ಜಯತೀತಿ ? ಯತ್ಕಿಂಚೇದಂ ಪ್ರಾಣಭೃದಿತಿ | ಅತಶ್ಚ ಸಂಖ್ಯಾಸಾಮಾನ್ಯಾತ್ ಯತ್ಕಿಂಚಿತ್ ಪ್ರಾಣಭೃಜ್ಜಾತಂ ತತ್ಸರ್ವಂ ಜಯತಿ | ತತ್ಸರ್ವಂ ಫಲಜಾತಂ ಸಂಪಾದಯತಿ ಸಂಖ್ಯಾದಿಸಾಮಾನ್ಯೇನ ||

(ಭಾಷ್ಯಾರ್ಥ)

'ಯಾಜ್ಞವಲ್ಕನೆ,' ಎಂದು ತನ್ನ ಕಡೆಗೆ ತಿರುಗಿಸಿಕೊಳ್ಳುವದಕ್ಕಾಗಿ ಕರೆದನು. 'ಕತಿಭಿರಯಮದ್ಯರ್ಗ್ಭಿರ್ಹೋತಾಽಸ್ಮಿನ್ ಯಜ್ಞೇ' (ಎಂಬಲ್ಲಿ) ಎಷ್ಟು ಎಂದರೆ ಎಷ್ಟು ಸಂಖ್ಯೆಯ,(ಋಕ್ಕುಗಳಿಂದ ಎಂದರೆ)ಋಗ್ಜಾತಿಗಳಿಂದ, ಹೋತೃವೆಂಬ ಋತ್ವಿಜನು ಈ ಯಜ್ಞದಲ್ಲಿ ಮಾಡುವನು, ಎಂದರೆ ಶಸ್ತ್ರವನ್ನು ಶಂಸನ ಮಾಡುತ್ತಾನೆ? ಇನ್ನೊಬ್ಬನಾದ (ಯಾಜ್ಞವಲ್ಕ್ಯನು ಇದಕ್ಕೆ) ಹೇಳಿದನೇನೆಂದರೆ ಮೂರು ಋಗ್ಜಾತಿಗಳಿಂದ ಎಂದನು. ಹೀಗೆಂದ(ಯಾಜ್ಞವಲ್ಕ್ಯನಿಗೆ)ಆ ಇನ್ನೊಬ್ಬ (ನಾದ ಅಶ್ವಲನು) ಆ ಮೂರು ಯಾವವು ? ಎಂದು ಕೇಳಿದನು ಇದು ಸಂಖ್ಯೇಯ (ಋಕ್ಕುಗಳ) ವಿಷಯವಾದ ಪ್ರಶ್ನೆ, ಹಿಂದಿನ (ಪ್ರಶ್ನೆಯು) ಸಂಖ್ಯೆಯ ವಿಷಯ(ವಾದದ್ದು).

ಪುರೋಽನುವಾಕ್ಯಾ ಮತ್ತು ಯಾಗಕಾಲಕ್ಕಿಂತ ಮುಂಚೆ ಯಾವ ಋಕ್ಕುಗಳನ್ನು ಪ್ರಯೋಗಿಸುವರೋ ಆ ಋಗ್ಜಾತಿಯು 'ಪುರೋಽನುವಾಕ್ಯಾ' ಎನಿಸುವದು. ಯಾಗಕ್ಕಾಗಿ ಯಾವ ಋಕ್ಕುಗಳನ್ನು ಪ್ರಯೋಗಮಾಡುವರೋ ಆ ಋಗ್ಜಾತಿಯು 'ಯಾಜ್ಯಾ'. ಶಂಸನಮಾಡುವವಕ್ಕಾಗಿ ಯಾವ ಋಕ್ಕಗಳನು ಪ್ರಯೋಗಮಾಡುವರೋ ಆ ಋಗ್ಜಾತಿಯು ಶಸ್ಯಾ. ಅಂತೂ ಯಾವ ಋಕ್ಕುಗಳೇ ಆಗಲಿ, ಸ್ತೋತ್ರಿಯಗಳಾಗಲಿ ಮಿಕ್ಕವುಗಳಾಗಲಿ, ಅವುಗಳೆಲ್ಲ ಈ ಮೂರು ಋಗ್ಜಾತಿಗಳಲ್ಲಿಯೇ ಅಂತರ್ಭೂತವಾಗಿರುತ್ತವೆ.

'ಅವುಗಳಿಂದ ಏನನ್ನು ಗೆದ್ದುಕೊಳ್ಳುತ್ತಾನೆ?' ಎಂದರೆ ಈ ಪ್ರಾಣಧಾರಿಯಾದದ್ದು ಏನೇನೆನಿರುವದೋ ಅದನ್ನು (ಗೆದ್ದುಕೊಳ್ಳುತ್ತಾನೆ)- ಆದ್ದರಿಂದ

ಸಂಖ್ಯಾಸಾಮಾನ್ಯದಿಂದ[1] ಪ್ರಾಣಿಜಾತವು ಯಾವಯಾವದು ಇರುವದೋ ಅದೆಲ್ಲವನ್ನೂ ಗೆದ್ದುಕೊಳ್ಳುತ್ತಾನೆ; ಅದೆಲ್ಲ ಸಂಖ್ಯೆಯೇ ಮುಂತಾದ[2] ಹೋಲಿಕೆಯಿಂದ ಅದೆಲ್ಲವನ್ನೂ ಸಂಪಾದನೆಮಾಡಿಕೊಳ್ಳಬೇಕು.[3]

## ಅಧ್ವರ್ಯುವಿಗೆ ಸಂಪತ್ತಿನಿಂದಾಗುವ ಫಲ

(ಉಪನಿಷತ್ತು)

**ಯಾಜ್ಞವಲ್ಕ್ಯೇತಿ ಹೋವಾಚ ಕತ್ಯಯಮದ್ಯಾಧ್ವರ್ಯುರಸ್ಮಿನ್ ಯಜ್ಞ ಆಹುತೀರ್ಹೋಷ್ಯತೀತಿ ತಿಸ್ರ ಇತಿ ಕತಮಾಸ್ತಾಸ್ತಿಸ್ರ ಇತಿ ಯಾ ಹುತಾ ಉಜ್ಜ್ವಲನ್ತಿ ಯಾ ಹುತಾ ಅತಿನೇದನ್ತೇ ಯಾ ಹುತಾ ಅಧಿಶೇರತೇ ಕಿಂ ತಾಭಿರ್ಜಯತೀತಿ ಯಾ ಹುತಾ ಉಜ್ಜ್ವಲನ್ತಿ ದೇವ ಲೋಕಮೇವ ತಾಭಿರ್ಜಯತಿ ದೀಪ್ಯತ ಇವ ಹಿ ದೇವಲೋಕೋ ಯಾ ಹುತಾ ಅತಿನೇದನ್ತೇ ಪಿತೃಲೋಕಮೇವ ತಾಭಿರ್ಜಯತ್ಯತೀವ ಹಿ ಪಿತೃಲೋಕೋ ಯಾ ಹುತಾ ಅಧಿಶೇರತೇ ಮನುಷ್ಯಲೋಕ ಮೇವ ತಾಭಿರ್ಜಯತ್ಯಧ ಇವ ಹಿ ಮನುಷ್ಯಲೋಕಃ ॥ ೮ ॥**

೮. 'ಯಾಜ್ಞವಲ್ಕ್ಯನೆ' ಎಂದನು, 'ಈಗ ಈ ಅಧ್ವರ್ಯುವು ಈ ಯಜ್ಞದಲ್ಲಿ ಎಷ್ಟು ಆಹುತಿಗಳನ್ನು ಹೋಮಮಾಡುವನು?' ಮೂರು. 'ಆ ಮೂರು ಯಾವವು?' ಹುತವಾದಾಗ ಮೇಲಕ್ಕೆದ್ದು ಉರಿಯುವವಲ್ಲ, ಅವು; ಹುತವಾದಾಗ ಹೆಚ್ಚಿನ, ಧ್ವನಿಯನ್ನು ಮಾಡುವವಲ್ಲ ಅವು; ಹುತ ವಾದಾಗ ಕೆಳಕ್ಕಿಳಿಯುವವಲ್ಲ ಅವು. 'ಅವುಗಳಿಂದ ಏನನ್ನು ಗೆದ್ದುಕೊಳ್ಳು ತ್ತಾನೆ?' ಹುತವಾದಾಗ ಮೇಲಕ್ಕೆದ್ದು ಉರಿಯುವವಲ್ಲ, ಅವುಗಳಿಂದ ದೇವಲೋಕವನ್ನೇ ಗೆದ್ದುಕೊಳ್ಳುತ್ತಾನೆ, ಏಕೆಂದರೆ ದೇವಲೋಕವು ಉರಿ ಯುವಂತೆ ಇರುತ್ತದೆ. ಹುತವಾದಾಗ ಹೆಚ್ಚಿನ ಧ್ವನಿಯನ್ನು ಮಾಡುವವಲ್ಲ, ಅವುಗಳಿಂದ ಪಿತೃಲೋಕವನ್ನೇ ಗೆದ್ದುಕೊಳ್ಳುತ್ತಾನೆ, ಏಕೆಂದರ ಪಿತೃ

---

1. ಭೂರಾದಿಲೋಕಗಳೂ ಮೂರು, ಪುರೋನುವಾಕ್ಯಾದಿಗಳೂ ಮೂರು- ಎಂಬ ಹೋಲಿಕೆಯಿಂದ.

2. ಮುಂತಾದ ಎಂದದ್ದರಿಂದ ಉಜ್ಜ್ವಲತ್ವವೇ ಮುಂತಾದ ಹೋಲಿಕೆಯಿಂದ ದೇವ ಲೋಕಾದಿಗಳನ್ನು ಗೆದ್ದುಕೊಳ್ಳುತ್ತಾನೆ ಎಂದು ತಿಳಿಯಬೇಕು.

3. ಸರ್ವಪ್ರಾಣಿಗಳೂ ಮೂರು ಲೋಕದಲ್ಲಿ ಅಂತರ್ಗತವಾಗಿರುವದರಿಂದ ಅವುಗಳೆಲ್ಲ ವನ್ನೂ ಗೆದ್ದುಕೊಂಡಂತೆ ಆಗುವದು. ಆದ್ದರಿಂದ ಹಾಗೆಂದು ಸಂಪಾದನೆಮಾಡಿಕೊಳ್ಳಬೇಕು- ಎಂದು ಅಭಿಪ್ರಾಯ. ಇವು ಫಲಸಂಪತ್ತುಗಳೇ, ಕರ್ಮಸಂಪತ್ತುಗಳಲ್ಲ.

ಲೋಕವು ಬಹಳ(ಶಬ್ದದಿಂದ ಕೂಡಿ)ರುತ್ತದೆ. ಹುತವಾದಾಗ ಕೆಳಕ್ಕಿಳಿಯುವವಲ್ಲ ಅವುಗಳಿಂದ ಮನುಷ್ಯಲೋಕವನ್ನೇ ಗೆದ್ದುಕೊಳ್ಳುತ್ತಾನೆ, ಏಕೆಂದರೆ ಮನುಷ್ಯಲೋಕವು ಕೆಳಗೇ ಇರುತ್ತದೆ.

(ಭಾಷ್ಯ)

೧೩. 'ಯಾಜ್ಞವಲ್ಕ್ಯೇತಿ ಹೋವಾಚ' ಇತಿ ಪೂರ್ವವತ್ । ಕತ್ಯಯಮದ್ಯಾಧ್ವರ್ಯುರಸ್ಮಿನ್ ಯಜ್ಞೇ ಆಹುತೀಃ ಹೋಷ್ಯತೀತಿ ಕತ್ಯಾಹುತಿಪ್ರಕಾರಾಃ । ತಿಸ್ರ ಇತಿ । ಕತಮಾಸ್ತಾಸ್ತಿಸ್ರ ಇತಿ ಪೂರ್ವವತ್ । ಇತರ ಆಹ ಯಾ ಹುತಾ ಉಜ್ಜ್ವಲನ್ತಿ ಸಮಿದಾಜ್ಯಾಹುತಯಃ । ಯಾ ಹುತಾ ಅತಿನೇದನ್ತೇ ಅತೀವ ಶಬ್ದಂ ಕುರ್ವನ್ತಿ ಮಾಂಸಾದ್ಯಾಹುತಯಃ । ಯಾ ಹುತಾ ಅಧಿಶೇರತೇ ಅಧಿ ಅಧೋ ಗತ್ವಾ ಭೂಮೇರಧಿಶೇರತೇ ಪಯಃಸೋಮಾಹುತಯಃ ಃ ಕಿಂ ತಾಭಿರ್ಜಯತೀತಿ ತಾಭಿರೇವಂ ನಿರ್ವರ್ತಿತಾಭಿರಾಹುತಿಭಿಃ ಕಿಂ ಭವತೀತಿ ? ಯಾ ಆಹುತಯೋ ಹುತಾ ಉಜ್ಜ್ವಲನ್ತಿ ಉಜ್ಜ್ವಲನಯುಕ್ತಾಃ ಆಹುತಯೋ ನಿರ್ವರ್ತಿತಾಃ ಫಲಂ ಚ ದೇವಲೋಕಾಖ್ಯಮ್ ಉಜ್ಜ್ವಲಮೇವ । ತೇನ ಸಾಮಾನ್ಯೇನ ಯಾ ಮಯೈತಾ ಉಜ್ಜ್ವಲನ್ತ್ಯಃ ಆಹುತಯೋ ನಿರ್ವರ್ತ್ಯಮಾನಾಃ ತಾ ಏತಾಃ ಸಾಕ್ಷಾದ್ದೇವಲೋಕಸ್ಯ ಕರ್ಮಫಲಸ್ಯ ರೂಪಂ ದೇವಲೋಕಾಖ್ಯಂ ಫಲಮೇವ ಮಯಾ ನಿರ್ವರ್ತ್ಯತೇ ಇತ್ಯೇವಂ ಸಂಪಾದಯತಿ । ಯಾ ಹುತಾ ಅತಿನೇದನ್ತೇ ಆಹುತಯಃ ಪಿತೃಲೋಕಮೇವ ತಾಭಿರ್ಜಯತಿ । ಕುತ್ಸಿತಶಬ್ದಕರ್ತೃತ್ವಸಾಮಾನ್ಯೇನ । ಪಿತೃಲೋಕಸಂಬದ್ಧಾಯಾಂ ಹಿ ಸಂಯಮಿನ್ಯಾಂ ಪುರ್ಯಾಂ ವೈವಸ್ವತೇನ ಯಾತ್ಯಮಾನಾನಾಂ 'ಹಾ ಹತಾಃ ಸ್ಮಃ ಮುಞ್ಚ ಮುಞ್ಚ' ಇತಿ ಶಬ್ದೋ ಭವತಿ। ತಥಾ ಅವದಾನಾಹುತಯಃ। ತೇನ ಪಿತೃಲೋಕಸಾಮಾನ್ಯಾತ್ ಪಿತೃಲೋಕ ಏವ ಮಯಾ ನಿರ್ವರ್ತ್ಯತೇ ಇತಿ ಸಂಪಾದಯತಿ । ಯಾ ಹುತಾ ಅಧಿಶೇರತೇ ಮನುಷ್ಯಲೋಕಮೇವ ತಾಭಿರ್ಜಯತಿ । ಭೂಮ್ಯುಪರಿಸಂಬನ್ಧಸಾಮಾನ್ಯಾತ್ ಅಧ ಇವ ಹಿ ಅಧ ಏವ ಹಿ ಮನುಷ್ಯಲೋಕಃ ಉಪರಿತನಾನ್ ಸಾಧ್ಯಾನ್ ಲೋಕಾನ್ ಅಪೇಕ್ಷ್ಯ । ಅಥವಾ ಅಧೋಗಮನಮಪೇಕ್ಷ್ಯ । ಅತೋ ಮನುಷ್ಯಲೋಕ ಏವ ಮಯಾ ನಿರ್ವರ್ತ್ಯತೇ ಇತಿ ಸಂಪಾದಯತಿ ಪಯಃಸೋಮಾಹುತಿನಿರ್ವರ್ತನಕಾಲೇ ॥

(ಭಾಷ್ಯಾರ್ಥ)

'ಯಾಜ್ಞವಲ್ಕ್ಯನೆ' ಎಂದನು- ಎಂಬುದಕ್ಕೆ ಹಿಂದಿನಂತೆ (ವ್ಯಾಖ್ಯಾನ). ಈಗ ಈ ಅಧ್ವರ್ಯುವು ಈ ಯಜ್ಞದಲ್ಲಿ ಎಷ್ಟು ಆಹುತಿಗಳನ್ನು ಹೋಮಮಾಡುವನು ? ಎಂಬಲ್ಲಿ ಎಷ್ಟು ಆಹುತಿಪ್ರಕಾರಗಳು (ಎಂದು ಅಭಿಪ್ರಾಯ), (ಅವು) ಮೂರು- ಆ ಮೂರು ಯಾವವು ಎಂಬುದೂ ಹಿಂದಿನಂತೆ (ವ್ಯಾಖ್ಯಾನಮಾಡ

ತಕ್ಕದ್ದು).[1] ಇನ್ನೊಬ್ಬನಾದ (ಯಾಜ್ಞವಲ್ಕ್ಯನು) ಹೇಳುತ್ತಾನೆ :–ಹುತವಾದಾಗ ಯಾವವು, ಸಮಿತ್ತು ಆಜ್ಯ ಇವುಗಳ ಆಹುತಿಗಳು, ಮೇಲಕ್ಕೆದ್ದು ಉರಿಯುವವೋ ; ಯಾವವು, ಮಾಂಸವೇ ಮುಂತಾದ ಆಹುತಿಗಳು, ಹುತವಾದಾಗ ಹೆಚ್ಚು ಧ್ವನಿಯನ್ನು ಮಾಡುವವೋ ; (ಮತ್ತು) ಹುತವಾದಾಗ ಯಾವವು, ಸೋಮ ಹಾಲು, ಇವುಗಳ ಆಹುತಿಗಳು, ಕೆಳಕ್ಕೆ ಇಳಿಯುವವೋ, ಕೆಳಕ್ಕೆ ಹೋಗಿ ಭೂಮಿಯಮೇಲೆ ನಿಂತಿರುವವೋ (ಅವು). ಅವುಗಳಿಂದ ಏನನ್ನು ಗೆದ್ದುಕೊಳ್ಳುತ್ತಾನೆ ? ಹೀಗೆ ಮಾಡಿದ ಆ (ಆಹುತಿ)ಗಳಿಂದ ಏನನ್ನು ಗೆದ್ದುಕೊಳ್ಳುತ್ತಾನೆ ? ಹುತವಾದಾಗ ಮೇಲಕ್ಕೆದ್ದು ಉರಿಯುವವಲ್ಲ, (ಅವುಗಳಿಂದ ದೇವಲೋಕವನ್ನು ಗೆದ್ದುಕೊಳ್ಳುತ್ತಾನೆ). ಮಾಡಿದ ಆಹುತಿಗಳು ಉಜ್ಜ್ವಲನದಿಂದ ಕೂಡಿರುತ್ತವೆ, ದೇವಲೋಕವೆಂಬ ಫಲವೂ ಉಜ್ಜ್ವಲವಾಗಿಯೇ (ಇರುತ್ತದೆ). ಆ ಹೋಲಿಕೆಯಿಂದ 'ಈ ನಾನು ಮಾಡುತ್ತಿರುವ ಉಜ್ಜ್ವಲಿಸುವ ಆಹುತಿಗಳಿವೆಯಲ್ಲ, ಆ ಇವು ಸಾಕ್ಷಾದ್ದೇವಲೋಕವೆಂಬ ಕರ್ಮಫಲದ ರೂಪವು, ದೇವಲೋಕವೆಂಬ ಫಲವೇ ನಾನು ಉಂಟುಮಾಡುತ್ತಿರುವದು' ಎಂದು ಸಂಪಾದನೆಮಾಡಬೇಕು. ಹುತವಾದಾಗ ಹೆಚ್ಚಿನ ಧ್ವನಿಯನ್ನು ಮಾಡುವವಲ್ಲ, (ಅವು) ಕುತ್ಸಿತವಾದ ಶಬ್ದವನ್ನುಂಟುಮಾಡುತ್ತವೆ ಎಂಬ ಹೋಲಿಕೆಯಿಂದ ಪಿತೃಲೋಕವನ್ನೇ ಅವುಗಳಿಂದ ಗೆದ್ದುಕೊಳ್ಳುತ್ತಾನೆ. ಪಿತೃಲೋಕಕ್ಕೆ ಸಂಬಂಧಪಟ್ಟ ಸಂಯಮನೀಪುರಿಯಲ್ಲಿ ವೈವಸ್ವತ(ಯಮ)ನಿಂದ ಯಾತನೆಗೆ ಗುರಿಮಾಡಲ್ಪಟ್ಟವರು "ಅಯ್ಯೋ ಕೆಟ್ಟೆವು, ಬಿಡು, ಬಿಡು !" ಎಂಬ ಶಬ್ದವು ಆಗುತ್ತಿರುವದಲ್ಲವೆ ? ಅವದಾನದ ಆಹುತಿಗಳೂ ಹಾಗೆಯೇ (ಶಬ್ದವನ್ನು ಮಾಡುತ್ತಿರುವವು). ಆದ್ದರಿಂದ (ಹೀಗೆ) ಪಿತೃಲೋಕದ ಹೋಲಿಕೆಯಿರುವದರಿಂದ 'ಪಿತೃಲೋಕವನ್ನೇ ನಾನು ಉಂಟುಮಾಡುತ್ತಿರುವೆನು' ಎಂದು ಸಂಪಾದನೆಮಾಡುತ್ತಾನೆ. ಹುತವಾದಾಗ ಕೆಳಕ್ಕೆ ಇಳಿಯುವವಲ್ಲ, ಅವುಗಳಿಂದ ಮನುಷ್ಯಲೋಕವನ್ನೇ ಗೆದ್ದುಕೊಳ್ಳುತ್ತಾನೆ. ಏಕೆಂದರೆ ಭೂಮಿಯ ಮೇಲೆ ಇರುವದೆಂಬ ಸಂಬಂಧವು ಸಮಾನವಾಗಿರುತ್ತದೆ. ಮನುಷ್ಯಲೋಕವು ಮೇಲಿರುವ (ಸಾಧನ)ಸಾಧ್ಯವಾದ ಲೋಕಗಳಿಗಿಂತ (ಅಧ ಇವ ಹಿ=ಅಧ ಏವ ಹಿ) ಕೆಳಗೇ ಅಲ್ಲವೆ ? ಅಥವಾ ಕೆಳಕ್ಕೆ ಇಳಿಯುವದೆಂಬ ಹೋಲಿಕೆಯ ಅಪೇಕ್ಷೆಯಿಂದಲಾದರೂ (ಹೀಗೆಂದು ಹೇಳಿದೆ ಎಂದು ತಿಳಿಯಬೇಕು)[2] ಆದ್ದರಿಂದ ಪಯಃಸೋಮಗಳ ಆಹುತಿಯನ್ನು ಕೊಡುವ

1. ಮೊದಲಿನ ಪ್ರಶ್ನೆಯು ಸಂಖ್ಯೆಯ ವಿಷಯ, ಇದು ಸಂಖ್ಯೇಯದ ವಿಷಯ ಎಂದು ವ್ಯಾಖ್ಯಾನಮಾಡತಕ್ಕದ್ದು.

2. ಮನುಷ್ಯಲೋಕದಲ್ಲಿ ಪಾಪವು ಹೆಚ್ಚಾಗಿರುವದರಿಂದ ಅಲ್ಲಿಯವರಿಗೆ ಅಧೋಗತಿಯಾಗುವದು ಸ್ವಾಭಾವಿಕ, ಆದ್ದರಿಂದ ಈ ಹೋಲಿಕೆಯನ್ನು ಇಟ್ಟುಕೊಂಡಿದೆ ಎಂದು ಭಾವ.

ಕಾಲದಲ್ಲಿ 'ಮನುಷ್ಯಲೋಕವನ್ನೇ ನಾನು ಉಂಟುಮಾಡಿಕೊಳುತ್ತಿರುವೆನು' ಎಂದು ಸಂಪಾದನೆಮಾಡುತ್ತಾನೆ.

## ಬ್ರಹ್ಮನಿಗೆ ಸಂಪತ್ತಿನಿಂದ ಆಗುವ ಫಲ

(ಉಪನಿಷತ್ತು)

**ಯಾಜ್ಞವಲ್ಕ್ಯೇತಿ ಹೋವಾಚ ಕತಿಭಿರಯಮದ್ಯ ಬ್ರಹ್ಮಾ ಯಜ್ಞಂ ದಕ್ಷಿಣತೋ ದೇವತಾಭಿರ್ಗೋಪಾಯತೀತ್ಯೇಕಯೇತಿ ಕತಮಾ ಸೈಕೇತಿ ಮನ ಏವೇತ್ಯನನ್ತಂ ವೈ ಮನೋಽನನ್ತಾ ವಿಶ್ವೇದೇವಾ ಅನನ್ತಮೇವ ಸ ತೇನ ಲೋಕಂ ಜಯತಿ ॥ ೯ ॥**

೯. 'ಯಾಜ್ಞವಲ್ಕ್ಯನೆ' ಎಂದನು. ಈಗ ಈ ಬ್ರಹ್ಮನು ಬಲಗಡೆ ಯಿಂದ ಎಷ್ಟು ದೇವತೆಗಳಿಂದ ಯಜ್ಞವನ್ನು ಕಾಪಾಡುತ್ತಿರುವನು? ಒಂದು (ದೇವತೆ)ಯಿಂದ. 'ಆವ್ರೊಂದು ಯಾವದು?' ಮನಸ್ಸೇ. ಮನಸ್ಸು ಅನಂತವೇ, ವಿಶ್ವೇದೇವರೂ ಅನಂತರು. ಆದರಿಂದ ಅವನು ಅನಂತ ಲೋಕವನ್ನೇ ಗೆದ್ದುಕೊಳ್ಳುತ್ತಾನೆ.

(ಭಾಷ್ಯ)

೧೪. 'ಯಾಜ್ಞವಲ್ಕ್ಯೇತಿ ಹೋವಾಚ' ಇತಿ ಪೂರ್ವವತ್। ಅಯಮ್ ಋತ್ವಿಕ್ ಬ್ರಹ್ಮಾ ದಕ್ಷಿಣತೋ ಬ್ರಹ್ಮಾಸನೇ ಸ್ಥಿತ್ವಾ ಯಜ್ಞಂ ಗೋಪಾಯತಿ। ಕತಿಭಿರ್ದೇವತಾಭಿರ್ಗೋಪಾಯತಿ? ಇತಿ ಪ್ರಾಸಙ್ಗಿಕಮೇತದ್ ಬಹುವಚನಮ್। ಏತಯಾ ಹಿ ದೇವತಯಾ ಗೋಪಾಯತ್ಯಸೌ। ಏವಂ ಜ್ಞಾತೇ ಬಹುವಚನೇನ ಪ್ರಶ್ನೋ ನೋಪಪದ್ಯತೇ ಸ್ವಯಂ ಜಾನತಃ। ತಸ್ಮಾತ್ ಪೂರ್ವಯೋಃ ಕಣ್ಡಿಕಯೋಃ ಪ್ರಶ್ನಪ್ರತಿವಚನೇಷು 'ಕತಿಭಿಃ?' 'ಕತಿ?' 'ತಿಸೃಭಿಃ' 'ತಿಸ್ರಃ'-ಇತಿ ಪ್ರಸಙ್ಗಂ ದೃಷ್ಟ್ವಾ ಇಹಾಪಿ ಬಹುವಚನೇನೈವ ಪ್ರಶ್ನೋಪಕ್ರಮಃ ಕ್ರಿಯತೇ। ಅಥವಾ ಪ್ರತಿವಾದಿವ್ಯಾಮೋಹಾರ್ಥಂ ಬಹುವಚನಮ್। ಇತರ ಆಹ 'ಏಕಯಾ' ಇತಿ। ಏಕಾ ಸಾ ದೇವತಾ ಯಯಾ ದಕ್ಷಿಣತಃ ಸ್ಥಿತ್ವಾ ಬ್ರಹ್ಮಾ ಆಸನೇ ಯಜ್ಞಂ ಗೋಪಾಯತಿ। ಕತಮಾ ಸೈಕಾ ಇತಿ। ಮನ ಏವೇತಿ। ಮನಃ ಸಾ ದೇವತಾ, ಮನಸಾ ಹಿ ಬ್ರಹ್ಮಾ ವ್ಯಾಪ್ರಿಯತೇ ಧ್ಯಾನೇನೈವ। "ತಸ್ಯ ಯಜ್ಞಸ್ಯ[1] ಮನಶ್ಚ ವಾಕ್ಚ ವರ್ತನೀ ತಯೋರನ್ಯತರಾಂ ಮನಸಾ ಸಂಸ್ಕರೋತಿ ಬ್ರಹ್ಮಾ" (ಛಾಂ. ೪-೧೬-೧,೨) ಇತಿ ಶ್ರುತ್ಯನ್ತರಾತ್। ತೇನ ಮನ ಏವ ದೇವತಾ। ತಯಾ ಮನಸಾ ಹಿ ಗೋಪಾಯತಿ ಬ್ರಹ್ಮಾ ಯಜ್ಞಮ್। ತಚ್ಚ ಮನೋ ವೃತ್ತಿಭೇದೇನ ಅನ

1. ಈ ಮಾತು ಉಪನಿಷತ್ತಿನಲ್ಲಿಲ್ಲವಾದರೂ ಅರ್ಥಕ್ಕಾಗಿ ಸೇರಿಸಿಕೊಂಡಿದೆ.

ನ್ತ್ಯಮ್। ವೈಶಬ್ದಃ ಪ್ರಸಿದ್ಧಾವದ್ಯೋತನಾರ್ಥಃ। ಪ್ರಸಿದ್ಧಂ ಮನಸಃ ಆನನ್ತ್ಯಮ್। ತದಾನನ್ತ್ಯಾಭಿಮಾನಿನೋ ದೇವಾಃ ಅನನ್ತಾ ವೈ ವಿಶ್ವೇದೇವಾಃ। "ಸರ್ವೇ ದೇವಾ ಯತ್ರೈಕಂ ಭವನ್ತಿ"( ? ) ಇತ್ಯಾದಿ ಶ್ರುತ್ಯನ್ತರಾತ್। ತೇನ ಆನನ್ತ್ಯಸಾಮಾನ್ಯಾತ್ ಅನನ್ತಮೇವ ಸ ತೇನ ಲೋಕಂ ಜಯತಿ ||

(ಭಾಷ್ಯಾರ್ಥ)

'ಯಾಜ್ಞವಲ್ಕ್ಯನೆ' ಎಂದನು–ಎಂಬುದಕ್ಕೆ ಹಿಂದಿನಂತೆ ವ್ಯಾಖ್ಯಾನ. ಈ ಋತ್ವಿಜನಾದ ಬ್ರಹ್ಮನು ಬಲಗಡೆಯಲ್ಲಿ[1] ಬ್ರಹ್ಮಾಸನದಲ್ಲಿ ಕುಳಿತು ಯಜ್ಞವನ್ನು ಕಾಪಾಡುತ್ತಾನೆ. '(ಅವನು) ಎಷ್ಟು ದೇವತೆಗಳಿಂದ (ಅದನ್ನು) ಕಾಪಾಡುತ್ತಿರುತ್ತಾನೆ?' ಎಂಬೀ ಬಹುವಚನವು ಪ್ರಾಸಂಗಿಕವು. ಏಕೆಂದರೆ ಅವನು ಒಂದೇ ದೇವತೆಯಿಂದ ಕಾಪಾಡುತ್ತಿರುತ್ತಾನೆ. ಹೀಗೆ ತಿಳಿದಿರುವಲ್ಲಿ ತಾನು ತಿಳಿದೇ ಬಹುವಚನದಿಂದ ಪ್ರಶ್ನೆ(ಯನ್ನು) ಮಾಡುವದು ಯುಕ್ತವಾಗುವದಿಲ್ಲ ಆದ್ದರಿಂದ ಹಿಂದಿನ ಎರಡು ಕಂಡಿಕೆಗಳಲ್ಲಿರುವ ಪ್ರಶ್ನಪ್ರತಿವಚನಗಳಲ್ಲಿ 'ಎಷ್ಟರಿಂದ?' 'ಎಷ್ಟು?' 'ಮೂರರಿಂದ', 'ಮೂರು' ಎಂದು ಪ್ರಸಕ್ತವಾಗಿರುವದನ್ನು ಕಂಡು ಇಲ್ಲಿಯೂ ಬಹುವಚನದಿಂದಲೇ ಪ್ರಶ್ನೆಯನ್ನು ಪ್ರಾರಂಭಮಾಡಿರುತ್ತದೆ[2] ಅಥವಾ ಪ್ರತಿವಾದಿಯಾದ (ಯಾಜ್ಞವಲ್ಕ್ಯನನ್ನು) ವ್ಯಾಮೋಹಗೊಳಿಸುವದಕ್ಕಾಗಿ (ಈ) ಬಹುವಚನವನ್ನು (ಪ್ರಯೋಗಿಸಿದೆ ಎಂದೂ ಹೇಳಬಹುದು)[3] ಇನ್ನೊಬ್ಬನಾದ (ಯಾಜ್ಞವಲ್ಕ್ಯನು) ಹೇಳುತ್ತಾನೆ ಒಂದು (ದೇವತೆ)ಯಿಂದ (ಕಾಪಾಡುತ್ತಾನೆ). ಒಂದೇ ಆ ದೇವತೆಯು; ಆ (ದೇವತೆ)ಯಿಂದಲೇ ಬಲಗಡೆಯಲ್ಲಿ ಬ್ರಹ್ಮನು ಆಸನದಲ್ಲಿದ್ದುಕೊಂಡು ಯಜ್ಞವನ್ನು ಕಾಪಾಡುತ್ತಿರುತ್ತಾನೆ. 'ಆವೊಂದು ಯಾವದು?' ಮನಸ್ಸೇ, ಆ ದೇವತೆಯು ಮನಸ್ಸಿನಿಂದಲೇ ಅಲ್ಲವೆ, ಬ್ರಹ್ಮನು ಧ್ಯಾನಮಾಡುವದರಿಂದಲೇ[4] ಕೆಲಸಮಾಡುತ್ತಾನೆ? " ಆ (ಯಜ್ಞಕ್ಕೆ) ಮನಸ್ಸೊ

---

1. ಆಹವನೀಯಾಗ್ನಿಯ ಬಲಗಡೆಯಲ್ಲಿ ಎಂದರ್ಥ.

2. ಬಹುವಚನದಿಂದಲೇ ಪ್ರಶ್ನೆಗಳೂ ಉತ್ತರಗಳೂ ಬಂದಿರುವದರಿಂದ ಇಲ್ಲಿಯೂ ಬಹುವಚನದಿಂದ ಪ್ರಶ್ನೆಯನ್ನು ಕೇಳಿದೆ; ಅನೇಕ ದೇವತೆಗಳು ಇದಾರೆಂಬ ಅಭಿಪ್ರಾಯದಿಂದಲ್ಲ ಎಂದರ್ಥ.

3. ಇದು ಜಲ್ಪಕಥೆ; ಆದ್ದರಿಂದ ಒಬ್ಬರನ್ನೊಬ್ಬರು ಸೋಲಿಸುವದೇ ಈ ಚರ್ಚೆಗೆ ಮುಖ್ಯ. ಆದ್ದರಿಂದ ಎಷ್ಟು ದೇವತೆಗಳಿಂದ? ಎಂದು ಪ್ರಶ್ನೆಯನ್ನು ಮಾಡಿದರೆ ಯಾಜ್ಞವಲ್ಕ್ಯರಿಗೆ ಆಗ ಸಂಖ್ಯೆಯು ತಿಳಿಯುವದೋ ಇಲ್ಲವೋ ಗೊತ್ತಾಗುವದು. ನಾನೇ ಒಂದೆಂದು ಏತಕ್ಕೆ ತಿಳಿಯಿಸಿಕೊಡಲಿ?'– ಎಂಬ ಅಭಿಪ್ರಾಯದಿಂದ ಅಶ್ವಲನು ಪ್ರಶ್ನೆಯಲ್ಲಿ ಬಹುವಚನವನ್ನು ಪ್ರಯೋಗಿಸಿರುತ್ತಾನೆ.

4. ಮೌನವಾಗಿದ್ದು ಮನಸ್ಸಿನಿಂದಲೇ ಎಲ್ಲವನ್ನೂ ಆಲೋಚಿಸುತ್ತಿರುವದರಿಂದಲೇ.

ವಾಕ್ಕೋ ಮಾರ್ಗಗಳು ; ಅವುಗಳಲ್ಲೊಂದನ್ನು ಮನಸ್ಸಿನಿಂದ ಸಂಸ್ಕಾರಗೊಳಿಸು ತ್ತಾನೆ"[1] (ಛಾಂ. ೪-೧೬-೧,೨) ಎಂಬ ಬೇರೊಂದು ಶ್ರುತಿಯಿಂದ (ಇದು ಸಿದ್ಧ ವಾಗಿರುತ್ತದೆ). ಆದ್ದರಿಂದ ಮನಸ್ಸೇ ದೇವತೆಯು, ಆ ಮನಸ್ಸೆಂಬ (ದೇವತೆ) ಯಿಂದಲೇ ಅಲ್ಲವೆ, ಬ್ರಹ್ಮನು ಯಜ್ಞವನ್ನು ಕಾಪಾಡುತ್ತಾನೆ? ಆ ಮನಸ್ಸು ವೃತ್ತಿಗಳ ಭೇದದಿಂದ ಅನಂತವಾಗಿರುತ್ತದೆ (ಮೂಲದಲ್ಲಿರುವ) ವೈಶಬ್ದವು ಪ್ರಸಿದ್ಧವಾದದ್ದನ್ನೇ ತಿಳಿಸುತ್ತದೆ, ಮನಸ್ಸು ಅನಂತವೆಂಬುದು ಪ್ರಸಿದ್ಧವಾಗಿರು ತ್ತದೆ. ಅದರ ಆನಂತ್ಯಕ್ಕೆ ಅಭಿಮಾನಿಯಾದ ದೇವತೆಗಳು, ವಿಶ್ವೇದೇವರೂ ಅನಂತ ರಷ್ಟೆ "ಎಲ್ಲಿ ಎಲ್ಲಾ ದೇವತೆಗಳೂ ಒಂದಾಗಿರುವರೋ" ( ? ) ಎಂಬ ಶ್ರುತ್ಯಂತರದಿಂದ[2] (ಇದು ಸಿದ್ಧವಾಗಿರುತ್ತದೆ). ಆದ್ದರಿಂದ ಆನಂತ್ಯವೆಂಬ ಹೋಲಿಕೆಯಿಂದ ಅನಂತವಾದ ಲೋಕವನ್ನೇ ಅವನು ಅದರಿಂದ[3] ಗೆದ್ದುಕೊಳ್ಳು ತ್ತಾನೆ.

## ಉದ್ಗಾತೃವಿಗೆ ಸಂಪತ್ತಿನಿಂದ ಆಗುವ ಫಲ

(ಉಪನಿಷತ್ತು)

**ಯಾಜ್ಞವಲ್ಕ್ಯೇತಿ ಹೋವಾಚ ಕತ್ಯಯಮದ್ಯೋದ್ಗಾತಾಸ್ಮಿನ್ ಯಜ್ಞೇ ಸ್ತೋತ್ರಿಯಾಃ ಸ್ತೋಷ್ಯತೀತಿ ತಿಸ್ರ ಇತಿ ಕತಮಾಸ್ತಾಸ್ತಿಸ್ರ ಇತಿ ಪುರೋಽನುವಾಕ್ಯಾ ಚ ಯಾಜ್ಯಾ ಚ ಶಸ್ಯೈವ ತೃತೀಯಾ ಕತಮಾಸ್ತಾ ಯಾ ಅಧ್ಯಾತ್ಮಮಿತಿ ಪ್ರಾಣ ಏವ ಪುರೋಽನುವಾಕ್ಯಾಽ ಪಾನೋ ಯಾಜ್ಯಾ ವ್ಯಾನಃ ಶಸ್ಯಾ ಕಿಂ ತಾಭಿರ್ಜಯತೀತಿ ಪೃಥಿವೀ ಲೋಕಮೇವ ಪುರೋಽನುವಾಕ್ಯಯಾ ಜಯತ್ಯನ್ತರಿಕ್ಷಲೋಕಂ ಯಾಜ್ಯಯಾ ದ್ಯುಲೋಕಗ್ಂ ಶಸ್ಯಯಾ ತತೋ ಹ ಹೋತಾಽಶ್ವಲ ಉಪರರಾಮ ॥ ೧೦ ॥**

---

1. ಅವುಗಳಲ್ಲೊಂದನ್ನು ಎಂದರೆ ಮನಸ್ಸನ್ನು ಎಂದರ್ಥ ; ಏಕೆಂದರೆ ಪ್ರಕರಣದಲ್ಲಿ ಬ್ರಹ್ಮನಿಗೆ ಮೌನವನ್ನು ವಿಧಿಸಿದೆ. ಐ. ಬ್ರಾ. ೨೫-೮-೩೩ ರಲ್ಲಿ ಇದೇ ಅಭಿಪ್ರಾಯವಿದೆ. ವ್ಯಾಖ್ಯಾನದಲ್ಲಿ ಅವುಗಳಲ್ಲೊಂದನ್ನು ಎಂದರೆ ವಾಕ್ಕನ್ನು ಎಂದರ್ಥ ಎಂದು ಬರೆದಿರುವದು ಸರಿಯಲ್ಲ, ಭಾಷ್ಯವನ್ನು ನೋಡಿ.

2. ಇದು ಯಾವ ಶ್ರುತಿ ಎಂಬುದು ತಿಳಿಯಲಿಲ್ಲ. 'ದೇವತೆಗಳೆಲ್ಲರೂ ಯಾವ ಮನಸ್ಸಿನಲ್ಲಿ ಒಂದಾಗುತ್ತಾರೋ ಅದರಲ್ಲಿ ವಿಶ್ವದೇವದೃಷ್ಟಿಯಿಂದ ಅನಂತಲೋಕಪ್ರಾಪ್ತಿಯಾಗು ವದು ಎಂದು ಆ ಶ್ರುತಿಯ ಅರ್ಥ' ಎಂದು ವ್ಯಾಖ್ಯಾನದಲ್ಲಿದೆ.

3. ವಿಶ್ವೇದೇವತೆಗಳೆಂದು ಉಪಾಸನೆಮಾಡಿದ್ದರಿಂದ.

೧೦. 'ಯಾಜ್ಞವಲ್ಕ್ಯನೆ' ಎಂದನು. 'ಈಗ ಈ ಉದ್ಗಾತೃವು ಈ ಯಜ್ಞದಲ್ಲಿ ಎಷ್ಟು ಸ್ತೋತ್ರಿಯಗಳನ್ನು ಸ್ತುತಿಮಾಡುವನು'? ಮೂರನ್ನು. 'ಆ ಮೂರು ಯಾವವು?' ಪುರೋನುವಾಕ್ಯಾ, ಯಾಜ್ಯಾ, ಶಸ್ಯಾ. ಎಂಬುದೇ ಮೂರನೆಯದು' "(ಇವುಗಳಲ್ಲಿ)ಅಧ್ಯಾತ್ಮವಾಗಿರುವವಲ್ಲ ಅವು ಯಾವವು?' ಪ್ರಾಣವೇ ಪುರೋನುವಾಕ್ಯಾ, ಅಪಾನವು ಯಾಜ್ಯಾ, ವ್ಯಾನವು ಶಸ್ಯಾ. 'ಅವುಗಳಿಂದ ಏನನ್ನು ಗೆದ್ದುಕೊಳ್ಳುತ್ತಾನೆ' ಪುರೋನು ವಾಕ್ಯದಿಂದ ಪೃಥಿವೀಲೋಕಗಳನ್ನೇ ಗೆದ್ದುಕೊಳ್ಳುತ್ತಾನೆ?' ಯಾಜ್ಯ ದಿಂದ ಅಂತರಿಕ್ಷಲೋಕವನ್ನು, ಶಸ್ಯದಿಂದ ದ್ಯುಲೋಕವನ್ನು. ಆಗ ಹೋತೃವಾದ ಅಶ್ವಲನು ಸುಮ್ಮನಾದನು.

(ಭಾಷ್ಯ)

೧೫. 'ಯಾಜ್ಞವಲ್ಕ್ಯೇತಿ ಹೋವಾಚ' ಇತಿ ಪೂರ್ವವತ್ | ಕತಿ ಸ್ತೋತ್ರಿಯಾಃ ಸ್ತೋಷ್ಯತೀತಿ ಅಯಮುದ್ಗಾತಾ | ಸ್ತೋತ್ರಿಯಾ ನಾಮ ಋಕ್ಸಾಮಸಮುದಾಯಃ ಕತಿಪಯಾನಾಮ್ ಋಚಾಮ್ | ಸ್ತೋತ್ರಿಯಾ ವಾ ಶಸ್ಯಾ ವಾ ಯಾಃ ಕಾಶ್ಚನ ಋಚಃ, ತಾಃ ಸರ್ವಾಸ್ತಿಸ್ರ ಏವ ಇತ್ಯಾಹ | ತಾಶ್ಚ ವ್ಯಾಖ್ಯಾತಾಃ ಪುರೋಽನುವಾಕ್ಯಾ ಚ ಯಾಜ್ಯಾ ಚ ಶಸ್ಯೈವ ತೃತೀಯೇತಿ | ತತ್ರ ಪೂರ್ವಮುಕ್ತಂ ಯತ್ಕಿಂಚೇದಂ ಪ್ರಾಣಭೃತ್ ತತ್ ಸರ್ವಂ ಜಯತೀತಿ ತತ್ಕೇನ ಸಾಮಾನ್ಯೇನೇತ್ಯುಚ್ಯತೇ | ಕತಮಾಸ್ತಾಸ್ತಿಸ್ರ ಋಚೋ ಯಾ ಅಧ್ಯಾತ್ಮಂ ಭವನ್ತೀತಿ | ಪ್ರಾಣ ಏವ ಪುರೋಽನುವಾಕ್ಯಾ | ಪಶಬ್ದಸಾಮಾನ್ಯಾತ್ | ಅಪಾನೋ ಯಾಜ್ಯಾ | ಆನನ್ತರ್ಯಾತ್ | ಅಪಾನೇನ ಹಿ ಪ್ರತ್ತಂ ಹವಿರ್ದೇವಾ ಗ್ರಸನ್ತಿ | ಯಾಗಶ್ಚ ಪ್ರದಾನಮ್ | ವ್ಯಾನಃ ಶಸ್ಯಾ | "ಅಪ್ರಾಣನ್ನನಪಾನನ್ನೃಚಮಭಿ ವ್ಯಾಹರತಿ" (ಛಾಂ.೧-೩-೪) ಇತಿ ಶ್ರುತ್ಯನ್ತರಾತ್ | ಕಿಂ ತಾಭಿರ್ಜಯತೀತಿ? ವ್ಯಾಖ್ಯಾತಮ್ | ತತ್ರ ವಿಶೇಷಸಂಬಂಧಸಾಮಾನ್ಯಮ್ ಅನುಕ್ತಮ್ ಇಹೋಚ್ಯತೇ | ಸರ್ವಮನ್ಯದ್ ವ್ಯಾಖ್ಯಾತಮ್ | ಲೋಕಸಂಬನ್ಧಸಾಮಾನ್ಯೇನ ಪೃಥಿವೀಲೋಕ ಮೇವ ಪುರೋಽನುವಾಕ್ಯಯಾ ಜಯತಿ | ಅನ್ತರಿಕ್ಷಲೋಕಂ ಯಾಜ್ಯಯಾ ಮಧ್ಯಮತ್ವಸಾಮಾನ್ಯಾತ್ | ದ್ಯುಲೋಕಂ ಶಸ್ಯಯಾ | ಊರ್ಧ್ವತ್ವಸಾಮಾ ನ್ಯಾತ್ | ತತೋ ಹ ತಸ್ಮಾತ್ ಆತ್ಮನಃ ಪ್ರಶ್ನನಿರ್ಣಯಾತ್ ಅಸೌ ಹೋತಾ ಅಶ್ವಲಃ ಉಪರರಾಮ ನಾಯಮ್ ಅಸ್ಮದ್ಗೋಚರಃ ಇತಿ ||

(ಭಾಷ್ಯಾರ್ಥ)

'ಯಾಜ್ಞವಲ್ಕ್ಯನೆ' ಎಂದನು ಎಂಬುದಕ್ಕೆ ಹಿಂದಿನಂತೆ (ವ್ಯಾಖ್ಯಾನ). ಈ ಉದ್ಗಾತೃವು ಎಷ್ಟು (ಬಗೆಯ) ಸ್ತೋತ್ರಿಯಗಳನ್ನು ಸ್ತುತಿಮಾಡುವನು?

ಸ್ತೋತ್ರಿಯಗಳು ಎಂದರೆ ಕೆಲವು ಋಕ್ಕುಗಳು ಋಕ್ಸಾಮಸಮುದಾಯವು.[1] ಸ್ತೋತ್ರಿಯವಾಗಿರಲಿ ಶಸ್ಯವಾಗಿರಲಿ[2] ಯಾವ ಋಕ್ಕುಗಳೇ ಆಗಲಿ ಅವೆಲ್ಲ ಮೂರೇ (ಜಾತಿ)ಯವು ಎಂದು (ಯಾಜ್ಞವಲ್ಕ್ಯನು) ಹೇಳಿರುತ್ತಾನೆ. ಅವುಗಳನ್ನು ಪುರೋನುವಾಕ್ಯಾ, ಯಾಜ್ಯಾ, ಶಸ್ಯವೇ ಮೂರನೆಯದು ಎಂದು ತಿಳಿಸಿಕೊಟ್ಟದ್ದಾಯಿತು. ಇಲ್ಲಿ ಪ್ರಾಣಭೃತ್ತು ಎಷ್ಟಿದೆಯೋ ಅದೆಲ್ಲವನ್ನೂ ಗೆದ್ದುಕೊಳ್ಳುತ್ತಾನೆ. ಎಂದು ಹಿಂದೆ (೭ನೆಯ ಕಂಡಿಕೆಯಲ್ಲಿ) ಹೇಳಿದ್ದಾಗಿದೆ(ಯಷ್ಟೆ). ಅದು ಯಾವ ಹೋಲಿಕೆಯಿಂದ ? ಎಂದರೆ (ಈಗ) ಹೇಳುತ್ತಾನೆ : '(ಇವುಗಳಲ್ಲಿ) ಅಧ್ಯಾತ್ಮವಾಗಿರುವವಲ್ಲ, ಆ ಮೂರು ಋಕ್ಕುಗಳು ಯಾವವು ?, ಪ್ರಾಣವೇ ಪುರೋನುವಾಕ್ಯಾ; ಏಕೆಂದರೆ ಪಶಬ್ದವು (ಎರಡಕ್ಕೂ) ಸಮಾನವಾಗಿದೆ.[3] ಅಪಾನವು ಯಾಜ್ಯಾ ; ಏಕೆಂದರೆ (ಇವು) ಆಮೇಲೆ ಬರುತ್ತವೆ.[4] ಅಪಾನದಿಂದಲಲ್ಲವೆ, ಕೊಟ್ಟ ಹವಿಸ್ಸನ್ನು ದೇವತೆಗಳು ನುಂಗುತ್ತಾರೆ ? ಯಾಗವೆಂದರೆ (ಒಂದು) ಪ್ರದಾನವು[5] ವ್ಯಾನವು ಶಸ್ಯಾ ; ಏಕೆಂದರೆ "ಪ್ರಾಣನಮಾಡದೆ ಅಪಾನನಮಾಡದೆ ಋಕ್ಕನ್ನು ಹೇಳುತ್ತಾನೆ" (ಛಾಂ. ೧-೩-೪) ಎಂದು ಶ್ರುತ್ಯಂತರವಿದೆ.[6]

'(ಅವುಗಳಿಂದ ಏನನ್ನು ಗೆದ್ದುಕೊಳ್ಳುತ್ತಾನೆ ?' ಎಂಬುದನ್ನು ವ್ಯಾಖ್ಯಾನಮಾಡಿದ್ದಾಗಿದೆ. ಅಲ್ಲಿ ಹೇಳದೆ ಇದ್ದ ವಿಶೇಷವಾದ ಸಂಬಂಧಗಳ ಸಾಮಾನ್ಯವನ್ನು ಇಲ್ಲಿ ಹೇಳಿರುತ್ತದೆ. ಮಿಕ್ಕೆಲ್ಲವನ್ನೂ[7] ಹಿಂದೆಯೇ ವ್ಯಾಖ್ಯಾನಮಾಡಿರುತ್ತದೆ. ಲೋಕಸಂಬಂಧವೆಂಬ ಸಾಮಾನ್ಯದಿಂದ ಪೃಥಿವೀಲೋಕವನ್ನೇ ಪುರೋನುವಾಕ್ಯದಿಂದ ಗೆದ್ದುಕೊಳ್ಳುತ್ತಾನೆ.[8] ಯಾಜ್ಯದಿಂದ ಅಂತರಿಕ್ಷಲೋಕವನ್ನೇ (ಗೆದ್ದುಕೊಳ್ಳುತ್ತಾನೆ), ಏಕೆಂದರೆ ನಡುವೆ ಇರುವದು (ಎರಡಕ್ಕೂ) ಸಮಾನವಾಗಿರು

---

1. ಋಕ್ಕುಗಳೇ ಗಾನಮಾಡಿದಾಗ ಸಾಮವಾಗುತ್ತವೆ.

2. ಗಾನಮಾಡಿದ ಋಕ್ಕುಗಳು ಸ್ತೋತ್ರಿಯಗಳು, ಹಾಗೆಯೇ ಹೇಳಿದವು ಶಸ್ಯಗಳು.

3. ಪ್ರಾಣ, ಪುರೋನುವಾಕ್ಯಾ– ಎರಡರಲ್ಲಿಯೂ ಪಕಾರವು ಆದಿಯಲ್ಲಿದೆ.

4. ಪ್ರಾಣವಾದಮೇಲೆ ಅಪಾನವೂ, ಪುರೋನುವಾಕ್ಯವಾದಮೇಲೆ ಯಾಜ್ಯವೂ ಪಾಠಕ್ರಮದಲ್ಲಿವೆ.

5. ಆದ್ದರಿಂದಲೂ ಅಪಾನವು ಯಾಜ್ಯಾ ಎಂದು ತಿಳಿಯಬೇಕು.

6. ವ್ಯಾನದಿಂದಲೇ ಹೇಳುತ್ತಾನೆ ಎಂದರ್ಥ.

7. ಸಂಖ್ಯಾಸಾಮಾನ್ಯವೇ ಮುಂತಾದವನ್ನು.

8. ಪುರೋನುವಾಕ್ಯವು ಒಂದನೆಯದು, ಪೃಥಿವಿಯು ಒಂದನೆಯದು–ಎಂಬ ಸಂಬಂಧಸಾಮಾನ್ಯವು ಎರಡಕ್ಕೂ ಇದೆ, ಆದ್ದರಿಂದ ಪುರೋನುವಾಕ್ಯದಿಂದ ಪೃಥಿವಿಯನ್ನೇ ಗೆದ್ದುಕೊಳ್ಳುತ್ತಾನೆ ಎಂದರ್ಥ.

ತ್ತದೆ. ಶಸ್ಯದಿಂದ ದ್ಯುಲೋಕವನ್ನು (ಗೆದ್ದುಕೊಳ್ಳುತ್ತಾನೆ); ಏಕೆಂದರೆ ಮೇಲುಗಡೆ ಇರುವದು (ಎರಡಕ್ಕೂ) ಸಮಾನವಾಗಿದೆ.

ಆಗ ತನ್ನ ಪ್ರಶ್ನೆಯು ನಿರ್ಣಯವಾಯಿತಲ್ಲ, ಅದರಿಂದ ಹೋತೃವಾದ ಅಶ್ವಲನು, ಇವನು ನನಗೆ ಗೋಚರನಲ್ಲ[1] ಎಂದು ಸುಮ್ಮನಾದನು.



1. ಇವನು ನನಗಿಂತಲೂ ಹೆಚ್ಚಿನ ಬ್ರಹ್ಮಿಷ್ಠನು ಎಂದುಕೊಂಡು.

# ಒಂದನೆಯ ಬ್ರಾಹ್ಮಣದ ಸಾರ

**ವಿ. ಸೂ.**—ಇಲ್ಲಿರುವ ಸಂಖ್ಯೆಗಳು ಬ್ರಾಹ್ಮಣದ ಕಂಡಿಕೆಗಳನ್ನು ಸೂಚಿಸುವವು

೧-೨. ಜನಕವೈದೇಹನು ಬಹುದಕ್ಷಿಣಾಕವಾದ ಯಜ್ಞವನ್ನು ಮಾಡಿದನು ಅಲ್ಲಿ ಕುರುಪಾಂಚಾಲದೇಶಗಳ ಬ್ರಾಹ್ಮಣರು ಒಟ್ಟುಗೂಡಿದ್ದರು. ಆ ಜನಕನಿಗೆ ಅವರಲ್ಲೆಲ್ಲ ಬ್ರಹ್ಮಿಷ್ಠನು ಯಾವನೋ ತಿಳಿಯಬೇಕೆಂಬ ಕುತೂಹಲವುಂಟಾಯಿತು. ಅವನು ಒಂದೊಂದು ಗೋವಿನ ಕೋಡಿಗೆ ಹತ್ತುಹತ್ತು ಪಾದಗಳಂತೆ ಚಿನ್ನವನ್ನು ಕಟ್ಟಿಸಿ ಸಾವಿರ ಗೋಗಳನ್ನು ಗೋಷ್ಠದಲ್ಲಿ ನಿಲ್ಲಿಸಿ "ಪೂಜ್ಯರೆ, ತಮ್ಮಲ್ಲಿ ಬ್ರಹ್ಮಿಷ್ಠರಾದವರು ಈ ಗೋಗಳನ್ನು ಹೊಡೆದುಕೊಂಡು ಹೋಗಬಹುದು ' " ಎಂದನು ಯಾವ ಬ್ರಾಹ್ಮಣರೂ ಅವನ್ನು ಮುಟ್ಟುವಷ್ಟು ಎದೆಗಾರರಾಗಲಿಲ್ಲ ಯಾಜ್ಞವಲ್ಕ್ಯನು ಮಾತ್ರ ತನ್ನ ಶಿಷ್ಯನ ಮೂಲಕ ಅವುಗಳನ್ನು ಮನೆಗೆ ಅಟ್ಟಿಸಿದನು. ಆಗ ಬ್ರಾಹ್ಮಣರು ಅವನನ್ನು ಒಬ್ಬೊಬ್ಬರಾಗಿ ವಾದವಲ್ಲಿ ಜಯಿಸುವದಕ್ಕೆಂದು ಪ್ರಶ್ನಿಸಿದರು. ಮೊದಲು ಹೋತೃವಾದ ಅಶ್ವಲನು ಕೇಳಿದ ಪ್ರಶ್ನೆಗೆ ಕೊಟ್ಟ ಉತ್ತರಗಳು ಈ ಬ್ರಾಹ್ಮಣದಲ್ಲಿವೆ.

೩. ಕರ್ಮದ ಸಾಧನಜಾತವೆಲ್ಲ ಮೃತ್ಯುವಿನಿಂದ-ಸ್ವಾಭಾವಿಕವಾದ ಆಸಂಗಸಹಿತವಾದ ಕರ್ಮಲಕ್ಷಣವಾದ ಮೃತ್ಯುವಿನಿಂದ-ವ್ಯಾಪ್ತವಾಗಿ ವಶೀಕೃತವಾಗಿದೆಯಲ್ಲ, ಇದನ್ನು ಯಾವ ಉಪಾಸನೆಯಿಂದ ಯಜಮಾನನು ಗೆದ್ದುಕೊಳ್ಳಬಹುದು? ಎಂಬುದು ಒಂದು ಪ್ರಶ್ನೆ. ಅದಕ್ಕೆ ಉತ್ತರವೇನೆಂದರೆ, ಯಜಮಾನನ ವಾಕ್ಕೇ, ಹೋತೃವೇ, ಅಧಿದೈವವಾಗಿ ಅಗ್ನಿಯು. ಆದ್ದರಿಂದ ಅವನ್ನು ಅಗ್ನಿಸ್ವರೂಪದಿಂದ ಕಾಣುವದೇ ಪರಿಚ್ಛಿನ್ನರೂಪವನ್ನು ಬಿಟ್ಟು ಆಗುವ ಮುಕ್ತಿಗೆ ಸಾಧನವು. ಈ ಅಧಿದೈವಿಕದೃಷ್ಟಿರೂಪವಾದ ಮುಕ್ತಿಸಾಧನವೇ ಅತಿಮುಕ್ತಿಗೆ ಎಂದರೆ ಅಗ್ನಿಭಾವವನ್ನು ಪಡೆಯುವದಕ್ಕೆ ಸಾಧನವು.

೪. ಅಹೋರಾತ್ರರೂಪವಾದ ಕಾಲಲಕ್ಷಣಮೃತ್ಯುವಿನಿಂದಲೂ ಕರ್ಮಸಾಧನವು ವ್ಯಾಪ್ತವಾಗಿ ವಶೀಕೃತವಾಗಿರುತ್ತದೆ. ಅದನ್ನು ಮೀರಿ ಮುಕ್ತನಾಗುವದು ಹೇಗೆ ?—ಎಂಬುದು ಎರಡನೆಯ ಪ್ರಶ್ನೆ. ಅದಕ್ಕೆ ಉತ್ತರವಿದು : ಯಜಮಾನನ ಚಕ್ಷುಸ್ಸೇ, ಅಧ್ವರ್ಯುವೇ, ಅಧಿದೈವವಾಗಿ ಆದಿತ್ಯನು. ಅವೆರಡು ಸಾಧನಗಳನ್ನೂ ಅಧಿದೈವತವಾದ ಆದಿತ್ಯರೂಪದಿಂದ ಉಪಾಸನೆಮಾಡುವದೇ ಮುಕ್ತಿಗೂ ಅತಿಮುಕ್ತಿಗೂ ಸಾಧನವು.

೫. ಇನ್ನು ತಿಥ್ಯಾದಿರೂಪವಾದ ಕಾಲಲಕ್ಷಣಮೃತ್ಯುವಿನಿಂದ ಅತಿಮುಕ್ತಿ ಹೇಗೆ ? ಎಂಬುದು ಮೂರನೆಯ ಪ್ರಶ್ನೆ. ಯಜಮಾನನ ಪ್ರಾಣವೂ ಉದ್ಗಾತೃವೂ ನಿಜವಾಗಿ ಅಧಿದೈವತವಾಗಿ ವಾಯುವೇ. ಅವೆರಡನ್ನೂ ವಾಯುದೃಷ್ಟಿಯಿಂದ ಉಪಾಸನೆಮಾಡುವದೇ ಮುಕ್ತಿಗೂ ಅತಿಮುಕ್ತಿಗೂ ಸಾಧನವು ಎಂಬುದು ಉತ್ತರ.

೬. ಹಿಂದೆ ಹೇಳಿದಂತೆ ಅತಿಮುಕ್ತಿಯಾಗುವದಕ್ಕೆ ಆಶ್ರಯವೇನು? ಎಂಬುದು ನಾಲ್ಕನೆಯ ಪ್ರಶ್ನೆ. ಯಜಮಾನನ ಮನಸ್ಸೂ, ಬ್ರಹ್ಮನೆಂಬ ಋತ್ವಿಜನೂ ಅಧಿದೈವತವಾಗಿ ಅಪರಿಚ್ಛಿನ್ನವಾದ ಚಂದ್ರನೇ. ಆ ಚಂದ್ರನೆಂಬ ದೃಷ್ಟಿಯಿಂದ ಎರಡನ್ನೂ ಉಪಾಸನೆಮಾಡುವದೇ ಅವುಗಳಿಂದ ಮುಕ್ತಿಯಾಗುವದಕ್ಕೂ ಅವುಗಳನ್ನು ಮೀರುವ ಅತಿಮುಕ್ತಿಗೂ ಸಾಧನವು ಎಂಬುದು ಉತ್ತರವು.

೭. ಇಲ್ಲಿಂದ ಮುಂದಕ್ಕೆ ಸಂಪತ್ತುಗಳು. ಇವುಗಳಲ್ಲಿ ಫಲವನ್ನೇ ಸಾಧನಗಳಲ್ಲಿ ಉಪಾಸನೆಯಿಂದ ಸಂಪಾದಿಸಬೇಕಾಗುತ್ತದೆ. ಹೋತೃವು ಶಸ್ತ್ರಗಳನ್ನು ಶಂಸನಮಾಡುವ ಋಗ್ಜಾತಿಗಳೆಷ್ಟು? ಎಂದರೆ ಪುರೋನುವಾಕ್ಯಾ, ಯಾಜ್ಯಾ, ಶಸ್ಯಾ—ಎಂದು ಮೂರು ಜಾತಿಗಳು. ಅವುಗಳಿಂದ ಗೆದ್ದುಕೊಳ್ಳಬೇಕಾದದ್ದೇನು? ಎಲ್ಲಾ ಪ್ರಾಣಿಗಳನ್ನು ಗೆದ್ದುಕೊಳ್ಳುತ್ತಾನೆ; ಆದ್ದರಿಂದ ಹಾಗೆ ಈ ಫಲವನ್ನು ನಾನು ಹೊಂದುತ್ತಿದ್ದೇನೆ- ಎಂದು ಹೋತೃವು ಸಂಪಾದನೆಮಾಡಬೇಕು.

೮. ಅಧ್ವರ್ಯುವು ಎಷ್ಟು ಆಹುತಿಗಳನ್ನು ಕೊಡುತ್ತಾನೆ? ಅವನು ಅವುಗಳಿಂದ ಗೆದ್ದುಕೊಳ್ಳಬೇಕಾದದ್ದೇನು? ಎಂಬುದು ಆರನೆಯ ಪ್ರಶ್ನೆ. ಹುತವಾದಾಗ ಎದ್ದುರಿಯುವವು ಒಂದು ಜಾತಿ; ಅವುಗಳಿಂದ ಉಜ್ಜ್ವಲವಾದ ದೇವಲೋಕವನ್ನೇ ಗೆದ್ದುಕೊಳ್ಳುವನು. ಹುತವಾದಾಗ ಅತಿಯಾಗಿ ಶಬ್ದಮಾಡುವವು ಎರಡನೆಯ ಜಾತಿ, ಅವುಗಳಿಂದ ಪಿತೃಲೋಕವನ್ನೇ ಗೆದ್ದುಕೊಳ್ಳುವನು. ಹುತವಾದಾಗ ಕೆಳಕ್ಕೆ ಇಳಿಯುವವು ಮೂರನೆಯ ಜಾತಿ, ಅವುಗಳಿಂದ ಮನುಷ್ಯಲೋಕವನ್ನೇ ಗೆದ್ದುಕೊಳ್ಳುವನು. ಉಜ್ಜ್ವಲವಾಗಿರುವದೆಂಬ ಹೋಲಿಕೆ, ಶಬ್ದನಾಗುವದೆಂಬ ಹೋಲಿಕೆ ಕೆಳಕ್ಕೆ ಹೋಗುವವೆಂಬ ಹೋಲಿಕೆ ಆಹುತಿ, ಲೋಕ— ಎರಡಕ್ಕೂ ಇರುವದರಿಂದ ಆಯಾ ಆಹುತಿಗಳಿಂದ ಆಯಾ ಲೋಕವನ್ನು ಗೆದ್ದುಕೊಳ್ಳುತ್ತಿದೇನೆಂದು ಸಂಪಾದನೆಮಾಡಬೇಕು ಎಂಬುದು ಉತ್ತರ.

೯. ಬ್ರಹ್ಮನೆಂಬ ಋತ್ವಿಜನು ಯಾವ ದೇವತೆಯಿಂದ ಯಜ್ಞವನ್ನು ಕಾಪಾಡುತ್ತಾನೆ? ಅದರಿಂದ ಗೆದ್ದುಕೊಳ್ಳಬೇಕಾದದ್ದೇನು? ಎಂಬುದು ಏಳನೆಯ ಪ್ರಶ್ನೆ. ಬ್ರಹ್ಮನು ಮನಸ್ಸೆಂಬ ಒಂದೇ ದೇವತೆಯಿಂದ ಯಜ್ಞವನ್ನು ಕಾಪಾಡುತ್ತಾನೆ. ಮನಸ್ಸೂ ವೃತ್ತಿವಿಶೇಷಗಳಿಂದ ಅನಂತವಾಗಿದೆ, ಅಭಿಮಾನಿದೇವತೆಗಳಿಂದ ವಿಶ್ವೇದೇವರೂ ಅನಂತವಾಗಿರುತ್ತಾರೆ. ಆದ್ದರಿಂದ ವಿಶ್ವೇದೇವತೆಗಳೆಂಬ ದೃಷ್ಟಿಯಿಂದ ಉಪಾಸನೆಮಾಡಿದರೆ ಅನಂತವಾದ ಲೋಕವನ್ನೇ ಗೆದ್ದುಕೊಳ್ಳುತ್ತಾನೆ. ಆದ್ದರಿಂದ ಹಾಗೆಂದು ಸಂಪಾದನೆಮಾಡಬೇಕು ಎಂಬುದು ಉತ್ತರ.

೧೦. ಉದ್ಗಾತೃವು ಎಷ್ಟು ಸ್ತೋತ್ರಿಯಗಳಿಂದ ಸ್ತುತಿಮಾಡುವನು? ಅಧ್ಯಾತ್ಮವಾಗಿ ಅವುಗಳು ಯಾವವು? ಹಾಗೆಂದು ಉಪಾಸನೆಮಾಡಿದರೆ ದೊರಕುವ ಫಲವೇನು? ಎಂಬುದು ಕೊನೆಯ ಪ್ರಶ್ನೆ. ಋಗ್ಜಾತಿಗಳಿಗೆ ಅನುಗುಣವಾಗಿ ಪುರೋನುವಾಕ್ಯಾ, ಯಾಜ್ಯಾ, ಶಸ್ಯಾ— ಎಂದು ಮೂರು ಸ್ತೋತ್ರಿಯಗಳಿರುವವು. ಅಧ್ಯಾತ್ಮವಾಗಿ ಪ್ರಾಣವೇ ಪುರೋನುವಾಕ್ಯವೆಂದು

ಸಂಪಾದನೆಮಾಡಿದರೆ ಪೃಥಿವೀಲೋಕವನ್ನೂ, ಅಪಾನವೇ ಯಾಜ್ಯಾ ಎಂದು ಸಂಪಾದನೆಮಾಡಿದರೆ ಅಂತರಿಕ್ಷಲೋಕವನ್ನೂ, ವ್ಯಾನವೇ ಶಸ್ಯವೆಂದು ಸಂಪಾದನೆಮಾಡಿದರೆ ದ್ಯುಲೋಕವನ್ನೂ ಗೆದ್ದು ಕೊಳ್ಳುವನು– ಎಂಬುದು ಉತ್ತರ.

ಹೀಗೆ ತನ್ನ ಎಲ್ಲಾ ಪ್ರಶ್ನೆಗಳಿಗೂ ಉತ್ತರವು ಬಂದದ್ದರಿಂದ ಅಶ್ವಲನು ಸುಮ್ಮನಾದನು.

---

# ಮೂರನೆಯ ಅಧ್ಯಾಯ-ಎರಡನೆಯ ಬ್ರಾಹ್ಮಣ

## (ಆರ್ತಭಾಗಪ್ರಶ್ನೆ : ಗ್ರಹಾತಿಗ್ರಹಮೃತ್ಯುವಿನ ಸ್ವರೂಪವೇನು ?)

## ಬ್ರಾಹ್ಮಣದ ಸಂಬಂಧ

(ಭಾಷ್ಯ)

೧೬. ಆಖ್ಯಾಯಿಕಾಸಂಬನ್ಧಃ ಪ್ರಸಿದ್ಧ ಏವ । ಮೃತ್ಯೋರತಿಮುಕ್ತಿ ರ್ವ್ಯಾಖ್ಯಾತಾ ಕಾಲಲಕ್ಷಣಾತ್ ಕರ್ಮಲಕ್ಷಣಾಚ್ಚ । ಕಃ ಪುನರಸೌ ಮೃತ್ಯುಃ ಯಸ್ಮಾತ್ ಅತಿಮುಕ್ತಿರ್ವ್ಯಾಖ್ಯಾತಾ ? ಸ ಚ ಸ್ವಾಭಾವಿಕಾಜ್ಞಾನಾಸಙ್ಗಾಸ್ಪದಃ ಅಧ್ಯಾತ್ಮಾಧಿಭೂತವಿಷಯಪರಿಚ್ಛಿನ್ನಃ ಗ್ರಹಾತಿಗ್ರಹಲಕ್ಷಣೋ ಮೃತ್ಯುಃ । ತಸ್ಮಾತ್ ಪರಿಚ್ಛಿನ್ನರೂಪಾತ್ ಮೃತ್ಯೋರತಿಮುಕ್ತಸ್ಯ ರೂಪಾಣಿ ಅಗ್ನ್ಯಾದಿ ತ್ಯಾದೀನಿ ಉದ್ಗೀಥಪ್ರಕರಣೇ ವ್ಯಾಖ್ಯಾತಾನಿ । ಅಶ್ವಲಪ್ರಶ್ನೇ ಚ ತದ್ಗತೋ ವಿಶೇಷಃ ಕಶ್ಚಿತ್ । ತಚ್ಚೈತತ್ ಕರ್ಮಣಾಂ ಜ್ಞಾನಸಹಿತಾನಾಂ ಫಲಮ್ । ಏತಸ್ಮಾತ್ ಸಾಧ್ಯಸಾಧನರೂಪಾತ್ ಸಂಸಾರಾತ್ ಮೋಕ್ಷಃ ಕರ್ತವ್ಯಃ ಇತ್ಯತೋ ಬನ್ಧನರೂಪಸ್ಯ ಮೃತ್ಯೋಃ ಸ್ವರೂಪಮ್ ಉಚ್ಯತೇ । ಬದ್ಧಸ್ಯ ಹಿ ಮೋಕ್ಷಃ ಕರ್ತವ್ಯಃ । ಯದಪಿ ಅತಿಮುಕ್ತಸ್ಯ ಸ್ವರೂಪಮುಕ್ತಮ್, ತತ್ರಾಪಿ ಗ್ರಹಾತಿ ಗ್ರಹಾಭ್ಯಾಮ್ ಅವಿನಿರ್ಮುಕ್ತ ಏವ ಮೃತ್ಯುರೂಪಾಭ್ಯಾಮ್। ತಥಾ ಚೋಕ್ತಮ್ "ಅಶನಾಯಾ ಹಿ ಮೃತ್ಯುಃ" (೧-೨-೧), "ಏಷ ಏವ ಮೃತ್ಯುಃ" (ಶ.ಬ್ರಾ. ೧೦-೫-೨-೩) ಇತಿ ಆದಿತ್ಯಸ್ಥಂ ಪುರುಷಮ್ ಅಙ್ಗೀಕೃತ್ಯಾಹ "ಏಕೋ ಮೃತ್ಯು ರ್ಬಹವಾ ೩" (ಶ. ಬ್ರಾ. ೧೦-೫-೨-೧೬) ಇತಿ ಚ । ತದಾತ್ಮಭಾವಾಪನ್ನೋ ಹಿ ಮೃತ್ಯೋರಾಪ್ತಿಮ್ ಅತಿಮುಚ್ಯತೇ ಇತ್ಯುಚ್ಯತೇ । ನ ಚ ತತ್ರ ಗ್ರಹಾತಿಗ್ರಹೌ ಮೃತ್ಯುರೂಪೌ ನ ಸ್ತಃ । "ಅಥೈತಸ್ಯ ಮನಸೋ ದ್ಯೌಃ ಶರೀರಂ ಜ್ಯೋತೀರೂಪ ಮಸಾವಾದಿತ್ಯಃ" (೧-೫-೧೨) । "ಮನಶ್ಚ ಗ್ರಹಃ ಸ ಕಾಮೇನಾತಿಗ್ರಾಹೇಣ ಗೃಹೀತಃ" (೩-೨-೭) ಇತಿ ವಕ್ಷ್ಯತಿ । ಪ್ರಾಣೋ ವೈ ಗ್ರಹಃ ಸೋಽಪಾನೇನಾತಿ ಗ್ರಾಹೇಣ "(೩-೨-೨) ಇತಿ। "ವಾಗ್ವೈ ಗ್ರಹಃ ಸ ನಾಮ್ನಾಽತಿಗ್ರಾಹೇಣ"(೩-೨-೩) ಇತಿ ಚ । ತಥಾ ಚ[1] ತ್ರ್ಯನ್ನವಿಭಾಗೇ ವ್ಯಾಖ್ಯಾತಮಸ್ಮಾಭಿಃ । ಸುವಿಚಾರಿತಂ ಚೈತತ್ ಯದೇವ ಪ್ರವೃತ್ತಿಕಾರಣಂ ತದೇವ ನಿವೃತ್ತಿಕಾರಣಂ ನ ಭವತಿ ಇತಿ ॥

---

1. ತಥಾ ಎಂಬುದನ್ನು ಹೀಗೆ ತಿದ್ದಿಕೊಂಡಿದೆ.

(ಭಾಷ್ಯಾರ್ಥ)

ಆಖ್ಯಾಯಿಕೆಯ ಸಂಬಂಧವು ಪ್ರಸಿದ್ಧವೇ[1] ಆಗಿರುತ್ತದೆ. ಮೃತ್ಯುವಿನಿಂದ ಕಾಲಲಕ್ಷಣವಾದ ಮತ್ತು ಕರ್ಮಲಕ್ಷಣವಾದ (ಮೃತ್ಯುವಿನಿಂದ) - ಅತಿಮುಕ್ತಿ (ಹೇಗೆಂಬುದನ್ನು) ವಿವರಿಸಿದ್ದಾಯಿತು ಯಾವದರಿಂದ ಅತಿಮುಕ್ತಿಯಾಗುವ ದೆಂದು ಹಿಂದೆ ಹೇಳಿದ್ದಾಯಿತೋ ಆ ಮೃತ್ಯು ಯಾವದು ?[2] ಅದು ಸ್ವಾಭಾವಿಕ ವಾದ ಅಜ್ಞಾನಾಸಂಗಕ್ಕೆ[3] ಆಶ್ರಯವಾಗಿರುವ ಅಧ್ಯಾತ್ಮ, ಅಧಿಭೂತ, ವಿಷಯ–ಇವುಗಳಿಂದ ಪರಿಚ್ಛಿನ್ನವಾಗಿರುವ ಗ್ರಹಾತಿಗ್ರಹರೂಪವಾದ[4] ಮೃತ್ಯುವೇ. ಆ ಪರಿಚ್ಛಿನ್ನರೂಪವಾದ ಮೃತ್ಯುವಿನಿಂದ ಅತಿಮುಕ್ತನಾದವನಿಗೆ ಅಗ್ನಿ, ಆದಿತ್ಯ–ಮುಂತಾದವುಗಳೇ ರೂಪಗಳೆಂದು ಉದ್ಗೀಥಪ್ರಕರಣದಲ್ಲಿ ವಿವರಿಸಿದ್ದಾಗಿದೆ. ಮತ್ತು ಅಶ್ವಲಪ್ರಶ್ನದಲ್ಲಿ ಅದರಲ್ಲಿರುವ ಒಂದಾನೊಂದು ವಿಶೇಷವನ್ನೂ (ವಿವರಿಸಿದ್ದಾಗಿದೆ).[5] ಆ ಇದು[6] ಜ್ಞಾನಸಹಿತವಾದ ಕರ್ಮಗಳ ಫಲವು. ಈ ಸಾಧ್ಯಸಾಧನ ರೂಪವಾದ ಸಂಸಾರದಿಂದ[7] ಬಿಡುಗಡೆಯನ್ನು ಮಾಡಿಕೊಳ್ಳಬೇಕಾದ್ದರಿಂದ ಬಂಧನ ರೂಪವಾದ ಮೃತ್ಯುವಿನ ಸ್ವರೂಪವನ್ನು(ಇಲ್ಲಿ)ಹೇಳಲಾಗುತ್ತದೆ ಬದ್ಧನಾಗಿರುವ ವನಿಗಲ್ಲವೆ, ಮೋಕ್ಷವು ಕರ್ತವ್ಯವಾಗುವದು ?

(ಇನ್ನು) ಅತಿಮುಕ್ತನ ಸ್ವರೂಪವನ್ನು (ಹಿಂದೆ) ಹೇಳಿದೆಯಲ್ಲ, ಅಲ್ಲಿಯೂ ಮೃತ್ಯುರೂಪವಾಗಿರುವ ಗ್ರಹಾತಿಗ್ರಹಗಳಿಂದ ವಿನಿರ್ಮುಕ್ತನಾಗಿರುವದೇ ಇಲ್ಲ. ಆದ್ದರಿಂದಲೇ "ಹಸಿವೇ ಅಲ್ಲವೆ, ಮೃತ್ಯು ?"(೧-೨-೧), "ಇವನೇ ಮೃತ್ಯು" (ಶತ. ಬ್ರಾ ೧೦ ೫-೨-೩)- ಎಂದು ಆದಿತ್ಯನಲ್ಲಿರುವ ಪುರುಷನನ್ನು(ಮೃತ್ಯುವೆಂದು)ಒಪ್ಪಿ "ಮೃತ್ಯುವು ಒಬ್ಬನೊ ಬಹುಮಂದಿಯೊ ?"[8] (ಶತ. ಬ್ರಾ ೧೦-೧-೨-೧೬)

---

1. ಜ್ಞಾನದ ಸ್ತುತಿಗಾಗಿಯೇ ಎಂದರ್ಥ.

2. ಕಾಲಕರ್ಮಗಳಿಂದ ಕಟ್ಟುವಡೆದಿರುವದಕ್ಕೆ ಕಾರಣವಾಗಿರುವ ಬಂಧಹೇತು ಯಾವದು ?

3 ಶಾಸ್ತ್ರಜ್ಞಾನವಿಲ್ಲದಿರುವವರಿಗೆ ಇರುವ ಅವಿದ್ಯಾಕಾಮಗಳಿಗೆ.

4 ಇಂದ್ರಿಯವಿಷಯರೂಪವಾದ.

5. ಅಧ್ಯಾತ್ಮವಾಗಿಯೂ ಅಧಿಯಜ್ಞವಾಗಿಯೂ ಪರಿಚ್ಛಿನ್ನನಾಗಿರುವದೆಂಬ ಮೃತ್ಯುವಿನಿಂದ ಬಿಡುಗಡೆಯಾಗುವದಕ್ಕೆ ಬೇಕಾದ ಉಪಾಸನೆಯನ್ನು ಹೇಳಲಾಗಿದೆ.

6. ಅಗ್ನ್ಯಾದಿತ್ಯಾದಿಪ್ರಾಪ್ತಿಯು.

7. ಈ ವಿಷಯಕ್ಕೆ ಉಪನಿಷತ್ತಿನ ಅವತರಣಿಕೆ (ಭಾ. ಭಾ. ೫) ನ್ನು ನೋಡಿ. ೧-೪-೧ (ಭಾ. ಭಾ. ೯೭) ನ್ನೂ ನೋಡಿ.

8. ಒಬ್ಬನೂ ಬಹುಮಂದಿಯೂ ಆಗಿರುತ್ತಾನೆ ಎಂಬ ಉತ್ತರವು ಇದರ ಮುಂದಿನ ವಾಕ್ಯ.

ಎಂದೂ ಹೇಳಿರುತ್ತದೆ. (ಪುರುಷನ) ಸ್ವರೂಪವನ್ನು ಹೊಂದಿದವನಲ್ಲವೆ, ಮೃತ್ಯುವಿನ ವ್ಯಾಪ್ತಿಯನ್ನು ಮೀರಿ ಮುಕ್ತನಾಗಿರುತ್ತಾನೆ ಎಂದು ಹೇಳಿರುವದು ?[1] ಅಲ್ಲಿ ಗ್ರಹಾತಿಗ್ರಹಗಳೆಂಬ ಮೃತ್ಯುರೂಪಗಳು ಇಲ್ಲದೆ ಇಲ್ಲ. " ಇನ್ನು ಈ ಮನಸ್ಸಿಗೆ ದ್ಯು(ಲೋಕ)ವು ಶರೀರವು, ಈ ಆದಿತ್ಯನು ಜ್ಯೋತೀರೂಪವು''[2](೧-೫-೧೨)ಎಂದು ಹೇಳಿದೆಯಷ್ಟೆ ? "ಮನಸ್ಸು ಗ್ರಹವು, ಅದು ಕಾಮವೆಂಬ ಅತಿ ಗ್ರಹದಿಂದ ಗೃಹೀತವಾಗಿರುತ್ತದೆ''(೩-೨-೭) ಎಂದೂ " ಪ್ರಾಣವೇ ಗ್ರಹವು , ಅದು ಅಪಾನವೆಂಬ ಅತಿಗ್ರಹದಿಂದ ಗೃಹೀತವಾಗಿರುತ್ತದೆ''(೩-೨-೨)ಎಂದೂ "ವಾಕ್ಕೇ ಗ್ರಹವು, ಅದು ನಾಮವೆಂಬ ಅತಿಗ್ರಹದಿಂದ ಗೃಹೀತವಾಗಿರುತ್ತದೆ'' (೩ ೨ ೩) ಎಂದೂ ಮುಂದೆ ಹೇಳಲಾಗುವದು[3] ಹೀಗೆಯೇ ತ್ರ್ಯನ್ನವಿಭಾಗದ(ಗ್ರಂಥದ ಭಾಷ್ಯ)ದಲ್ಲಿ ನಾವು ವ್ಯಾಖ್ಯಾನಮಾಡಿರುತ್ತೇವೆ. ಯಾವದು ಪ್ರವೃತ್ತಿಕಾರಣವೋ ಅದೇ ನಿವೃತ್ತಿಕಾರಣವಾಗಲಾರದೆಂಬುದನ್ನು ಚೆನ್ನಾಗಿ ವಿಚಾರಮಾಡಿದ್ದೂ ಆಗಿದೆ[4]

## ಕರ್ಮವೂ ನಿವೃತ್ತಿಕಾರಣವೇ ಎಂಬವರ ಮತದ ಖಂಡನೆ

(ಭಾಷ್ಯ)

೧೭. ಕೇಚಿತ್ತು ಸರ್ವಮೇವ ನಿವೃತ್ತಿಕಾರಣಂ ಮನ್ಯನ್ತೇ| ಅತಃ ಕಾರಣಾತ್ ಪೂರ್ವಸ್ಮಾತ್ ಪೂರ್ವಸ್ಮಾತ್ ಮೃತ್ಯೋರ್ಮುಚ್ಯತೇ ಉತ್ತರಮುತ್ತರಂ ಪ್ರತಿಪದ್ಯಮಾನೋ ವ್ಯಾವೃತ್ತ್ಯರ್ಥಮೇವ ಪ್ರತಿಪದ್ಯತೇ ನ ತು ತಾದರ್ಥ್ಯಮ್ ಇತ್ಯತಃ ಆ ದ್ವೈತಕ್ಷಯಾತ್ ಸರ್ವಂ ಮೃತ್ಯುಃ| ದ್ವೈತಕ್ಷಯೇ ತು ಪರಮಾರ್ಥತೋ ಮೃತ್ಯೋರಾಪ್ತಿಮ್ ಅತಿಮುಚ್ಯತೇ | ಅತಶ್ಚ ಆಪೇಕ್ಷಿಕೀ ಗೌಣೀ ಮುಕ್ತಿರನ್ತರಾಲೇ | ಸರ್ವಮೇತತ್[5] ಅಬಾರ್ಹದಾರಣ್ಯಕಮ್ | ನನು ಸರ್ವೈಕತ್ವಂ ಮೋಕ್ಷಃ " ತಸ್ಮಾತ್

---

1. ಹಿರಣ್ಯಗರ್ಭನು ಅಗ್ನ್ಯಾದಿಸರ್ವದೇವತಾತ್ಮನು. ಆ ಅಗ್ನ್ಯಾದಿಗಳಿಗೂ ಸಂಸಾರವುಂಟು–ಎಂಬುದನ್ನು ಒಬ್ಬ ಪುರುಷನೇ ಅನೇಕ ರೂಪದಲ್ಲಿರುತ್ತಾನೆ ಎಂಬ ಶ್ರುತಿಯು ತಿಳಿಸುತ್ತದೆ ಎಂದು ಭಾವ.

2. ಮನಸ್ಸಿನಲ್ಲಿ ಕಾರ್ಯಕರಣರೂಪದಿಂದ ದ್ಯುಲೋಕವೂ ಆದಿತ್ಯನೂ ಸೇರಿರುತ್ತಾರೆ ಎಂದರ್ಥ.

3. ಆದ್ದರಿಂದ ಕರಣಾತ್ಮನಾದ ಹಿರಣ್ಯಗರ್ಭನೂ ಮೃತ್ಯುಗ್ರಸ್ತನೇ ಎಂದು ಅಭಿಪ್ರಾಯ.

4. ಕರ್ಮೋಪಾಸನೆಗಳು ಪ್ರವೃತ್ತಿಗೇ ಕಾರಣವಾಗಿರುವದರಿಂದ ಅವುಗಳ ಫಲದಲ್ಲಿ ವಿರಕ್ತರಾದವರಿಗೆ ಆತ್ಮಜ್ಞಾನದಿಂದಲೇ ಮೋಕ್ಷವು ಎಂಬುದನ್ನು ವಿಚಾರಪೂರ್ವಕವಾಗಿ ತಿಳಿಸಿದೆ.

5. ಇದರ ಮುಂದಿರುವ 'ಏವಂ' ಬೇಕಿಲ್ಲ.

ತತ್ ಸರ್ವಮಭವತ್" (೧-೪ ೧೦) ಇತಿ ಶ್ರುತೇಃ | ಬಾಧಮ್, ಭವತ್ಯೇತದಪಿ | ನ ತು "ಗ್ರಾಮಕಾಮೋ ಯಜೇತ" (ತೈ. ಆ. ೧೨-೧೦-೪) "ಪಶುಕಾಮೋ ಯಜೇತ" (ತೈ ಆ. ೧೬-೧೨೮) ಇತ್ಯಾದಿಶ್ರುತೀನಾಂ ತಾದರ್ಥ್ಯಮ್ | ಯದಿ ಹಿ ಅದ್ವೈತಾರ್ಥತ್ವಮೇವ ಆಸಾಂ ಗ್ರಾಮಪಶುಸ್ವರ್ಗಾದ್ಯರ್ಥತ್ವಂ ನಾಸ್ತೀತಿ ಗ್ರಾಮಪಶುಸ್ವರ್ಗಾದಯೋ ನ ಗೃಹ್ಯೇರನ್ | ಗೃಹ್ಯನ್ತೇ ತು ಕರ್ಮಫಲವೈಚಿತ್ರ್ಯವಿಶೇಷಾಃ | ಯದಿ ಚ ವೈದಿಕಾನಾಂ ಕರ್ಮಣಾಂ ತಾದರ್ಥ್ಯಮೇವ ಸಂಸಾರ ಏವ ನಾಭವಿಷ್ಯತ್ | ಅಥ ತಾದರ್ಥ್ಯೇಽಪಿ ಅನುನಿಷ್ಪಾದಿತಪದಾರ್ಥಸ್ವಭಾವಃ ಸಂಸಾರಃ ಇತಿ ಚೇತ್ | ಯಥಾ[1] ರೂಪದರ್ಶನಾರ್ಥೇ ಆಲೋಕೇ ಸರ್ವೋಽಪಿ ತತ್ರಸ್ಥಃ ಪ್ರಕಾಶ್ಯತ ಏವ | ನ ಪ್ರಮಾಣಾನುಪಪತ್ತೇಃ | ಅದ್ವೈತಾರ್ಥತ್ವೇ ವೈದಿಕಾನಾಂ ಕರ್ಮಣಾಂ ವಿದ್ಯಾಸಹಿತಾನಾಮ್ ಅನ್ಯಸ್ಯ ಅನುನಿಷ್ಪಾದಿತತ್ವೇ ಪ್ರಮಾಣಾನುಪಪತ್ತಿಃ | ನ ಪ್ರತ್ಯಕ್ಷಮ್, ನಾನುಮಾನಮ್, ಅತ ಏವ ಚ ನಾಗಮಃ | ಉಭಯಮ್ ಏಕೇನ ವಾಕ್ಯೇನ ಪ್ರದರ್ಶ್ಯತ ಇತಿ ಚೇತ್ ಕುಲ್ಯಾಪ್ರಣಯನಾಲೋಕಾದಿವತ್ | ತನ್ನ | ಏವಂ ವಾಕ್ಯಧರ್ಮಾನುಪಪತ್ತೇಃ | ನ ಚ ಏಕವಾಕ್ಯಗತಸ್ಯ ಅರ್ಥಸ್ಯ ಪ್ರವೃತ್ತಿನಿವೃತ್ತಿಸಾಧನತ್ವಮ್ ಅವಗನ್ತುಂ ಶಕ್ಯತೇ | ಕುಲ್ಯಾಪ್ರಣಯನಾಲೋಕಾದೌ ಅರ್ಥಸ್ಯ ಪ್ರತ್ಯಕ್ಷತ್ವಾತ್ ಅದೋಷಃ | ಯದಪ್ಯುಚ್ಯತೇ ಮನ್ತ್ರಾ ಅಸ್ಮಿನ್ ಅರ್ಥೇ ದೃಷ್ಟಾಃ ಇತಿ | ಅಯಮೇವ ತು ತಾವದರ್ಥಃ ಪ್ರಮಾಣಗಮ್ಯಃ[2] | ಮನ್ತ್ರಾಃ ಪುನಃ ಕಿಮಸ್ಮಿನ್ನರ್ಥೇ ಆಹೋಸ್ವಿತ್ ಅನ್ಯಸ್ಮಿನ್ನರ್ಥೇ ಇತಿ ಮೃಗ್ಯಮೇತತ್ | ತಸ್ಮಾತ್ ಗ್ರಹಾತಿಗ್ರಹಲಕ್ಷಣೋ ಮೃತ್ಯುರ್ಬನ್ಧಃ, ತನ್ಮಾನ್ಮೋಕ್ಷೋ ವಕ್ತವ್ಯಃ ಇತ್ಯತ ಇದಮಾರಭ್ಯತೇ | ನ ಚ ಜಾನೀಮೋ ವಿಷಯಸಂಧಾವಿವ ಅನ್ತರಾಲೇಽವಸ್ಥಾನಮ್ ಅರ್ಧಜರತೀಯಂ ಕೌಶಲಮ್ | ಯತ್ತು ಮೃತ್ಯೋರತಿಮುಚ್ಯತೇ ಇತ್ಯುಕ್ತ್ವಾ ಗ್ರಹಾತಿಗ್ರಹಾ ಪೃಚ್ಛ್ಯೇತೇ | ತತ್ತು ಅರ್ಥಸಂಬನ್ಧಾತ್ | ಸರ್ವೋಽಯಂ ಸಾಧ್ಯಸಾಧನಲಕ್ಷಣೋ ಬನ್ಧಃ | ಗ್ರಹಾತಿಗ್ರಹಾವಿನಿರ್ಮೋಕಾತ್ | ನಿಗಡೇ ಹಿ ನಿಜ್ಞಾತೇ ನಿಗಡಿತಸ್ಯ ಮೋಕ್ಷಾಯ ಯತ್ನಃ ಕರ್ತವ್ಯೋ ಭವತಿ | ತಸ್ಮಾತ್ ತಾದರ್ಥ್ಯೇನ ಆರಮ್ಭಃ ||

(ಭಾಷ್ಯಾರ್ಥ)

ಆದರೆ **ಕೆಲವರು** [3]ʻಎಲ್ಲವನ್ನೂ ನಿವೃತ್ತಿಕಾರಣವೇ[4] ಎಂದು ಅಭಿಪ್ರಾಯಪಟ್ಟ

---

1. ಇದರ ಮುಂದೆ ಅಚ್ಚಿನ ಪುಸ್ತಕದಲ್ಲಿರುವ ಚಶಬ್ದವು ಬೇಕಿಲ್ಲವೆಂದು ಬಿಟ್ಟಿದೆ.
2. ಪ್ರಮಾಣಾಗಮ್ಯಃ ಎಂಬುದಕ್ಕಿಂತ ಈ ಪಾಠವು ಮೇಲು.
3. ಇವರು ಯಾರೆಂಬುದು ತಿಳಿಯಲಿಲ್ಲ, ವ್ಯಾಖ್ಯಾನದಲ್ಲಿ ಸ್ಪಷ್ಟಪಡಿಸಿಯೂ ಇಲ್ಲ.
4. ಸ್ವರ್ಗಕಾಮವಾಕ್ಯದಲ್ಲಿ ದೇಹಾತ್ಮತ್ವದಿಂದ ಬಿಡುಗಡೆ, ಗೋದೋಹನವಾಕ್ಯದಲ್ಲಿ ಸ್ವತಂತ್ರಾಧಿಕಾರದಿಂದ ಬಿಡುಗಡೆ ನಿತ್ಯನೈಮಿತ್ತಿಕವಿಧಿಗಳಲ್ಲಿ ಸ್ವಾಭಾವಿಕವಾದ ಪ್ರವೃತ್ತಿಗಳಿಂದ ಬಿಡುಗಡೆ ಹೀಗೆ ಹಿಂದುಹಿಂದಿನ ಪ್ರವೃತ್ತಿಯಿಂದ ಬಿಡುಗಡೆಯೇ ವಿವಕ್ಷಿತ ಎಂದು ಭಾವ, **ಆ|| ಟೀ||**

ರುತ್ತಾರೆ. ಈ ಕಾರಣದಿಂದ ಮುಂದು ಮುಂದಿನದನ್ನು ಪಡೆಯುವವನು ಹಿಂದು ಹಿಂದಿನ ಮೃತ್ಯುವಿನಿಂದ ಬಿಡುಗಡೆಯಾಗುತ್ತಾನೆ. (ಹಾಗೆ ಪಡೆಯುವದು)ಅದನ್ನು ಬಿಡುವದಕ್ಕಾಗಿಯೇ ಹೊರತು ಅದಕ್ಕಾಗಿ ಹೇಳಿಲ್ಲ[1] ಆದ್ದರಿಂದ ದ್ವೈತಕ್ಷಯವಾಗುವವರೆಗೂ ಎಲ್ಲವೂ ಮೃತ್ಯುವೇ, ದ್ವೈತಕ್ಷಯವಾದ ಮೇಲಾದರೆ ನಿಜವಾಗಿ ಮೃತ್ಯುವಿನ ವ್ಯಾಪ್ತಿಯನ್ನು ಮೀರಿ ಮುಕ್ತನಾಗುತ್ತಾನೆ[2] ಆದ್ದರಿಂದ ನಡುವೆ ಆಗುವದು ಆಪೇಕ್ಷಿಕವಾದ ಗೌಣಮುಕ್ತಿಯಾಗಿರುತ್ತದೆ[3] (ಎಂದು ಅವರ ಅಭಿಪ್ರಾಯ).

ಇದೆಲ್ಲ ಬೃಹದಾರಣ್ಯಕಕ್ಕೆ ಹೊರಚ್ಚಾದದ್ದು.

(ಆಕ್ಷೇಪ).—ಸರ್ವೈಕತ್ವವೇ ಮೋಕ್ಷವಲ್ಲವೆ ? "ಅದರಿಂದ ಅದು ಎಲ್ಲವೂ ಆಯಿತು" (೧ ೪-೧೦) ಎಂದು ಶ್ರುತಿಯಿದೆಯಲ್ಲ !

(ಪರಿಹಾರ):—ನಿಜ, ಇದೂ ಉಂಟು. ಆದರೆ "ಗ್ರಾಮಕಾಮನಾದವನು ಯಾಗಮಾಡಬೇಕು" (ತೈ. ಆ. ೧೨-೧೦-೪), "ಪಶುಕಾಮನಾದವನು ಯಾಗ ಮಾಡಬೇಕು"(ತೈ.ಆ. ೧೬-೧೨-೮) ಮುಂತಾದ ಶ್ರುತಿಗಳು ಆ (ಅದ್ವೈತ)ಕ್ಕಾಗಿ (ಬಂದಿರು)ವದಿಲ್ಲ. ಈ (ಶ್ರುತಿಗಳು) ಅದ್ವೈತ(ವನ್ನು ತಿಳಿಸು) ವದಕ್ಕಾಗಿಯೇ (ಬಂದಿರು)ವದಾಗಿದ್ದರೆ (ಅವು)ಗ್ರಾಮ, ಪಶು, ಸ್ವರ್ಗ- ಮುಂತಾದವುಗಳನ್ನು ಪಡೆಯುವ ಕರ್ಮವನ್ನು ತಿಳಿಸು)ವದಕ್ಕಾಗಿ (ಬಂದಿಲ್ಲ)ವಾಗಿ ಗ್ರಾಮ, ಪಶು, ಸ್ವರ್ಗ- ಮುಂತಾದವುಗಳನ್ನು (ಶ್ರುತಿಯಲ್ಲಿ) ಗ್ರಹಣಮಾಡಬಾರದಾಗಿತ್ತು; ಆದರೆ ಕರ್ಮಫಲದಲ್ಲಿ ವೈಚಿತ್ರ್ಯವನ್ನು (ತಿಳಿಸುವ) ಆಯಾ (ಪದಾರ್ಥಗಳನ್ನು) ಗ್ರಹಣಮಾಡಿರುತ್ತದೆ.[4] ಮತ್ತು ವೈದಿಕಕರ್ಮಗಳು ಆ (ಅದ್ವೈತಪ್ರಾಪ್ತಿ) ಗಾಗಿಯೇ

---

1. ಆಯಾ ಫಲವನ್ನು ಪಡೆಯುವದಕ್ಕೆಂದೇ ತಾತ್ಪರ್ಯದಿಂದ ಹೇಳಿಲ್ಲ.

2. "ಮೃತ್ಯುವಿನ ವ್ಯಾಪ್ತಿಯನ್ನು ಮೀರಿ ಅತಿಮುಕ್ತಿಯನ್ನು ಪಡೆಯುತ್ತಾನೆ" ಎಂದು ಅಗ್ನ್ಯಾದಿಭಾವಕ್ಕಾಗಿ ಶ್ರುತಿಯಲ್ಲಿ ಹೇಳಿದ್ದರೂ ಅದು ಆಪೇಕ್ಷಿಕಮುಕ್ತಿ, ನಿಜವಾದ ಅತಿಮುಕ್ತಿಯಲ್ಲ.

3. ಅಂತರಾಲದಲ್ಲಿ ಆಗುವದು ಗೌಣಮುಕ್ತಿ- ಎಂದು ಹೇಳಿರುವದು ಗ್ರಹಾತಿಗ್ರಹಗಳಿಂದ ಮುಕ್ತನಾದರೂ ಅಪವರ್ಗವೆಂಬ ಅಂತರಾಲಮುಕ್ತಿಯನ್ನೇ ಪಡೆಯುತ್ತಾನೆ, ಪರಮಾರ್ಥಮುಕ್ತಿಯನ್ನಲ್ಲ ಎಂದು ಮುಂದೆ ೧೩ನೆಯ ಕಂಡಿಕೆಯ ಭಾಷ್ಯದಲ್ಲಿ ವರ್ಣಿಸಿರುವ **ಭರ್ತೃಪ್ರಪಂಚಮತಕ್ಕೆ** ಅನುಗುಣವಾಗಿದೆ. ಆದ್ದರಿಂದ ಇದೂ ಅವರ ಮತವಾಗಿರಬಹುದೆ ? —ಎಂಬುದನ್ನು ವಿದ್ವಾಂಸರು ನಿರ್ಣಯಿಸಬೇಕಾಗಿದೆ.

4. ಗ್ರಾಮಕಾಮನು ಈ ಯಾಗವನ್ನು, ಪಶುಕಾಮನು ಈ ಯಾಗವನ್ನು ಮಾಡಬೇಕು ಎಂದು ಮುಂತಾಗಿ ಬೇರೆಬೇರೆಯ ಫಲಗಳನ್ನು ಉದ್ದೇಶಿಸಿ ವಿಧಿಸಿರುವದೇ ಈ ಕರ್ಮಗಳು ಅದ್ವೈತಪ್ರಾಪ್ತಿಗಲ್ಲವೆಂಬುದನ್ನು ತಿಳಿಸುತ್ತದೆ ಎಂದರ್ಥ.

(ವಿಧಿಸಿದವುಗಳು) ಎಂದಾಗಿದ್ದರೆ ಸಂಸಾರವೇ ಇರುತ್ತಿರಲಿಲ್ಲ.[1]

ಇನ್ನು (ಕರ್ಮಗಳು) ಆ (ಮೋಕ್ಷ)ಕ್ಕಾಗಿಯೇ (ವಿಹಿತವಾಗಿವೆ)ಯಾದರೂ ಸಂಸಾರವೆಂಬುದು ಅನುನಿಷ್ಪಾದಿತವಾದ ಪದಾರ್ಥದ ಸ್ವಭಾವದ್ದು.[2] ಹೇಗೆ[3] ರೂಪದರ್ಶನಕ್ಕಾಗಿ ಬೆಳಕು (ಇದ್ದರೂ) ಅಲ್ಲಿರುವ ಎಲ್ಲಾ(ಪದಾರ್ಥವೂ) ಕಂಡೇ ಕಾಣುತ್ತದೆಯೋ (ಹಾಗೆ) ಎಂದರೆ ಅದು ಸರಿಯಲ್ಲ ಏಕೆಂದರೆ ಪ್ರಮಾಣವು ಹೊಂದುವದಿಲ್ಲ ಉಪಾಸನಾಸಹಿತವಾದ ವೈದಿಕಕರ್ಮಗಳು ಅದ್ವೈತಕ್ಕಾಗಿ (ವಿಹಿತವಾಗಿರುವಲ್ಲಿ) ಮತ್ತೊಂದು (ಪದಾರ್ಥವು)[4] ಅನುನಿಷ್ಪಾದಿತವಾಗಿದೆ ಎಂಬುದಕ್ಕೆ ಪ್ರಮಾಣವು ಹೊಂದುವದಿಲ್ಲ, (ಇದಕ್ಕೆ) ಪ್ರತ್ಯಕ್ಷ(ಪ್ರಮಾಣ)ವಿಲ್ಲ, ಅನುಮಾನವಿಲ್ಲ, ಆದ್ದರಿಂದಲೇ ಆಗಮವೂ ಇಲ್ಲ[5]

(ಆಕ್ಷೇಪ)–ಎರಡೂ ಒಂದೇ ವಾಕ್ಯದಿಂದ ತಿಳಿಸಲ್ಪಟ್ಟಿವೆ ಕಾಲುವೆಯನ್ನು ಹೊಡೆಯುವದು, ಬೆಳಕು– ಮುಂತಾದವುಗಳಂತೆ (ಎರಡಕ್ಕೂ ಆಗಬಹುದು) ಎಂದರೊ ?

(ಪರಿಹಾರ)·—ಅದು ಸರಿಯಲ್ಲ. ಏಕೆಂದರೆ ಹೀಗೆ ವಾಕ್ಯಧರ್ಮವಿರುವದೆಂಬುದು ಯುಕ್ತವಾಗುವದಿಲ್ಲ[6] ಒಂದೇ ವಾಕ್ಯದಲ್ಲಿರುವ ಅರ್ಥವು[7] ಪ್ರವೃತ್ತಿ, ನಿವೃತ್ತಿ–ಎರಡಕ್ಕೂ ಸಾಧನ ಎಂದು ನಿಶ್ಚಯಿಸುವದಕ್ಕೂ ಆಗಲಾರದು[8] ಕಾಲುವೆ

---

1. ಏಕೆಂದರೆ ಸಂಸಾರಕ್ಕೆ ಕಾರಣವೆಂಬುದೇ ಆಗ ಇರುತ್ತಿರಲಿಲ್ಲ, ಧರ್ಮಾಧರ್ಮಗಳನ್ನು ಮಾಡುವದರಿಂದಲ್ಲವೆ, ಸಂಸಾರವುಂಟಾಗುವದು ?

2. ಕರ್ಮಗಳು ಮೋಕ್ಷಕ್ಕಾಗಿಯೇ ವಿಹಿತವಾಗಿವೆ, ಮೋಕ್ಷವೇ ಅವಕ್ಕೆ ಮುಖ್ಯಫಲ; ನಡುವೆ ಸಂಸಾರವೆಂಬ ಫಲವೂ ಅವಕ್ಕೆ ಆಗಿರುತ್ತದೆ ಎಂದು ಅಭಿಪ್ರಾಯ.

3. 'ಯಥಾ ಚ' ಎಂಬ ಮೂಲವು ಇದರ ಹಿಂದೆ ಮತ್ತೊಂದು ದೃಷ್ಟಾಂತವಿತ್ತೋ ಏನೋ ಎಂಬ ಶಂಕೆಯನ್ನುಂಟುಮಾಡುತ್ತಿದೆ. ನಾವು ಚಶಬ್ದವನ್ನು ಕನ್ನಡಿಸಿಲ್ಲ.

4. ಸಂಸಾರವು.

5. ಪ್ರತ್ಯಕ್ಷದಿಂದ ಕರ್ಮಕ್ಕೆ ಅದ್ವೈತವು ಫಲವೆಂದು ತಿಳಿದುಬರುವದಿಲ್ಲ, ಅನುಮಾನದಿಂದಲೂ ಹಾಗೆಂದು ತಿಳಿದುಬರುವದಿಲ್ಲ, ಪ್ರತ್ಯಕ್ಷಾನುಮಾನಗಳಿಗೆ ವಿರುದ್ಧವಾಗಿ ಆಗಮವೂ ಹಾಗೆಂದು ತಿಳಿಸಲಾರದು.

6. ಒಂದೇ ವಾಕ್ಯವು ಕರ್ಮಗಳಿಗೆ ಅದ್ವೈತಾರ್ಥತ್ವವನ್ನೂ ಸಂಸಾರಾರ್ಥತ್ವವನ್ನೂ ತಿಳಿಸಲಾರದು; ಏಕೆಂದರೆ ಆಗ ವಾಕ್ಯಭೇದವಾದೀತು.

7. ಕರ್ಮವು.

8. ಏಕೆಂದರೆ ಅದು ದೃಷ್ಟವಿರುದ್ಧ.

ಯನ್ನು ಹೊಡೆಯುವದು, ಬೆಳಕು– ಮುಂತಾದವುಗಳಲ್ಲಿ ಅರ್ಥವು ಪ್ರತ್ಯಕ್ಷವಾಗಿ (ಕಂಡುಬಂದಿ)ರುವದರಿಂದ[1] ದೋಷವಿಲ್ಲ.

ಇನ್ನು ಈ ಅರ್ಥಕ್ಕೆ ಮಂತ್ರಗಳಿರುವದು ಕಂಡಿದೆಯಲ್ಲ ಎನ್ನುವಿರಷ್ಟೆ, ಇದನ್ನೇ ಮೊದಲು ಪ್ರಮಾಣದಿಂದ ನಿಶ್ಚಯಿಸಬೇಕಾಗಿರುತ್ತದೆ. ಮಂತ್ರಗಳು ಈ ಅರ್ಥವನ್ನು (ತಿಳಿಸುವದಕ್ಕೆ ಬಂದಿವೆ)ಯೊ, ಅಥವಾ ಇನ್ನೊಂದು ಅರ್ಥವನ್ನು (ತಿಳಿಸುವದಕ್ಕೆ ಬಂದಿವೆ)ಯೊ, ಇದನ್ನು ಹುಡುಕಿ (ತಿಳಿಯ)ಬೇಕಾಗಿರುತ್ತದೆ.[2] ಆದ್ದರಿಂದ ಗ್ರಹಾತಿಗ್ರಹಸ್ವರೂಪದ ಮೃತ್ಯುವೇ ಬಂಧವು, ಅದರಿಂದ ಬಿಡುಗಡೆ (ಹೇಗೆಂಬುದನ್ನು) ತಿಳಿಸಬೇಕೆಂದು ಈ (ಬ್ರಾಹ್ಮಣ)ವನ್ನು ಆರಂಭಿಸಿರುತ್ತದೆ (ಎಂಬುದೇ ಸರಿ). ವಿಷಯಸಂಧಿಯಲ್ಲಿ ಹೇಗೋ ಹಾಗೆ ನಡುವೆ ಇರುವದೆಂಬ ಅರ್ಧಜರತೀಯಕೌಶಲವೂ[3] ನಮಗೆ ತಿಳಿಯದು.[4] ಮೃತ್ಯುವಿನಿಂದ ಅತಿಮುಕ್ತನಾಗುತ್ತಾನೆ ಎಂದು ಹೇಳಿದ ಬಳಿಕ ಗ್ರಹಾತಿಗ್ರಹಗಳನ್ನು ಹೇಳಿರುವದು ಅರ್ಥಸಂಬಂಧದಿಂದ, ಈ ಸಾಧ್ಯಸಾಧನರೂಪವಾದದ್ದೆಲ್ಲವೂ ಬಂಧವೇ.[5] ಏಕೆಂದರೆ (ಇಲ್ಲಿ) ಗ್ರಹಾತಿಗ್ರಹಗಳಿಂದ ಬಿಡುಗಡೆಯಾಗಿರುವದಿಲ್ಲ. ಬೇಡಿಯನ್ನು ತಿಳಿದು

---

1. ಕಾಲುವೆಯು ಗದ್ದೆಗೆ ಹಾಯಿಸುವದಕ್ಕೆ ಬರುತ್ತದೆ, ನೀರುಕುಡಿಯುವದಕ್ಕೂ ಆಗುತ್ತದೆ. ಹೀಗೆಯೇ ಬೆಳಕು ಇಷ್ಟವಾದ ಪದಾರ್ಥವನ್ನೇ ಅಲ್ಲದೆ ಮಿಕ್ಕವನ್ನೂ ತೋರಿಸುತ್ತದೆ. ಇವೆರಡೂ ಪ್ರತ್ಯಕ್ಷವಾಗಿರುವದರಿಂದ ಒಪ್ಪಬೇಕು ಆದರೆ ಕರ್ಮಗಳು ಪ್ರವೃತ್ತಿನಿವೃತ್ತಿಗಳೆರಡಕ್ಕೂ ಸಾಧನವೆಂಬುವಕ್ಕೆ ಪ್ರಮಾಣವಿಲ್ಲ.

2. ಮಂತ್ರಗಳು ಈ ಅರ್ಥವನ್ನು ಹೇಳುತ್ತವೆ ಎಂದರೆ ಪ್ರಾಮಾಣ್ಯವು ಬರುವದಿಲ್ಲ; ಆದ್ದರಿಂದ ಹಾಗೆಂದು ಹೇಳುವದು ಸರಿಯಲ್ಲ.

೩. ವಿಷಯಸಂಧಿ ಎಂದರೇನೆಂಬುದು ಸರಿಯಾಗಿ ತಿಳಿಯಲಿಲ್ಲ, ಒಂದು ವಿಷಯವನ್ನರಿತು ಮತ್ತೊಂದನ್ನರಿಯುವ ಮುಂಚೆ ಸುಮ್ಮನೆ ಏನನ್ನೂ ಅರಿಯದಿರುವಂತೆ ಎಂದೂ ಅರ್ಥಮಾಡಬಹುದು. ಎಚ್ಚತ್ತೂ ಇಲ್ಲ, ನಿದ್ರಿಸುತ್ತಲೂ ಇಲ್ಲ ಎಂಬುದು ಹೇಗೆ ಹೊಂದುವದಿಲ್ಲವೋ ಹಾಗೆ ಎಂದು ವ್ಯಾಖ್ಯಾನದಲ್ಲಿ ಅರ್ಥವನ್ನು ಮಾಡಿದೆ.

4. ಕೋಳಿಯ ಮೊಟ್ಟೆಯಲ್ಲಿ ಅರ್ಧವನ್ನು ಅಡಿಗೆಗೆ ಉಪಯೋಗಿಸಿ ಉಳಿದರ್ಧವನ್ನು ಮರಿಮಾಡುವದಕ್ಕೆ ಇಟ್ಟುಕೊಳ್ಳುವ ಜಾಣತನವು ಅರ್ಧಜರತೀಯಕೌಶಲವು. ಬಂಧಮುಕ್ತಿಗಳಿಗೆ ನಡುವೆ ಅಂತರಾಲಾವಸ್ಥೆಯನ್ನು ಕಲ್ಪಿಸುವದು ಇಂಥ ದಡ್ಡತನವೆಂದು ಭಾವ.

5. ಅತಿಮುಕ್ತಿಯನ್ನು ಹೇಳಿದ ಬಳಿಕ ಗ್ರಹಾತಿಗ್ರಹಗಳನ್ನು ಹೇಳಿರುವದರಿಂದ ಇದು ಬಂಧವಾಗಲಾರದು ಎಂದು ತಿಳಿಯಬಾರದು. ಏಕೆಂದರೆ ಮೃತ್ಯುವೆಂಬ ಅರ್ಥದ ಸಂಬಂಧವು ಇದಕ್ಕೂ ಇದೆ. ಆದ್ದರಿಂದ ಸಾಧನದಂತೆ ಸಾಧ್ಯವೂ ಬಂಧವೇ ಎಂದು ಅಭಿಪ್ರಾಯ.

ಕೊಂಡಮೇಲಲ್ಲವೆ? ಜೇಡಿಬಿದ್ದವನಿಗೆ (ಅದರಿಂದ) ಬಿಡುಗಡೆಯಾಗುವದಕ್ಕಾಗಿ ಯತ್ನವನ್ನು ಮಾಡಬಹುದಾಗುವದು? ಆದ್ದರಿಂದ ಅದಕ್ಕಾಗಿ (ಬ್ರಾಹ್ಮಣವು) ಆರಂಭ(ವಾಗಿರುತ್ತದೆ)

## ಗ್ರಹಾತಿಗ್ರಹಗಳು ಎಂಟು

(ಉಪನಿಷತ್ತು)

**ಅಥ ಹೈನಂ ಜಾರತ್ಕಾರವ ಆರ್ತಭಾಗಃ ಪಪ್ರಚ್ಛ ಯಾಜ್ಞವಲ್ಕ್ಯೇತಿ ಹೋವಾಚ ಕತಿ ಗ್ರಹಾಃ ಕತ್ಯತಿಗ್ರಹಾ ಇತಿ। ಅಷ್ಟೌ ಗ್ರಹಾ ಅಷ್ಟಾವತಿಗ್ರಹಾ ಇತಿ। ಯೇ ತೇಽಷ್ಟೌ ಗ್ರಹಾ ಅಷ್ಟಾವತಿಗ್ರಹಾಃ ಕತಮೇ ತ ಇತಿ ॥ ೧ ॥**

೧. ಆಗ ಇವನನ್ನು ಜಾರತ್ಕಾರವ ಆರ್ತಭಾಗನು ಕೇಳಿದನು. 'ಯಾಜ್ಞವಲ್ಕ್ಯನೆ' ಎಂದನು 'ಗ್ರಹಗಳು ಎಷ್ಟು, ಅತಿಗ್ರಹಗಳು ಎಷ್ಟು?' ಗ್ರಹಗಳು ಎಂಟು, ಅತಿಗ್ರಹಗಳು ಎಂಟು. 'ಎಂಟು ಗ್ರಹಗಳು, ಎಂಟು ಅತಿಗ್ರಹಗಳು (ಎಂದೆ)ಯಲ್ಲ, ಅವು ಯಾವವು?'

(ಭಾಷ್ಯ)

೧೮ ಅಥ ಹೈನಮ್। ಹಶಬ್ದಃ ಐತಿಹ್ಯಾರ್ಥಃ। ಅಥ ಅನನ್ತರಮ್ ಅಶ್ವಲೇ ಉಪರತೇ (ಏನಂ)[1] ಪ್ರಕೃತಂ ಯಾಜ್ಞವಲ್ಕ್ಯಂ ಜರತ್ಕಾರುಗೋತ್ರೋ ಜಾರತ್ಕಾರವಃ ಋತಭಾಗಸ್ಯ ಅಪತ್ಯಮ್ ಆರ್ತಭಾಗಃ ಪಪ್ರಚ್ಛ। ಯಾಜ್ಞವಲ್ಕ್ಯೇತಿ ಹೋವಾಚ ಇತಿ ಅಭಿಮುಖೀಕರಣಾಯ। ಪೂರ್ವವತ್ ಪ್ರಶ್ನಃ। ಕತಿ ಗ್ರಹಾಃ ಕತ್ಯತಿಗ್ರಹಾಃ ಇತಿ। ಇತಿಶಬ್ದೋ ವಾಕ್ಯಪರಿಸಮಾಪ್ತ್ಯರ್ಥಃ। ತತ್ರ ನಿರ್ಜ್ಞಾತೇಷು ವಾ ಗ್ರಹಾತಿಗ್ರಹೇಷು ಪ್ರಶ್ನಃ ಸ್ಯಾತ್ ಅನಿರ್ಜ್ಞಾತೇಷು ವಾ? ಯದಿ ತಾವತ್ ಗ್ರಹಾ ಅತಿಗ್ರಹಾಶ್ಚ ನಿರ್ಜ್ಞಾತಾಃ, ತದಾ ತದ್ಗತಸ್ಯಾಪಿ ಗುಣಸ್ಯ ಸಂಖ್ಯಾಯಾ ನಿರ್ಜ್ಞಾತತ್ವಾತ್ ಕತಿ ಗ್ರಹಾಃ ಕತಿ ಅತಿಗ್ರಹಾಃ ಇತಿ ಸಂಖ್ಯಾವಿಷಯಃ ಪ್ರಶ್ನೋ ನೋಪಪದ್ಯತೇ। ಅಥ ಅನಿರ್ಜ್ಞಾತಾಃ ತದಾ ಸಂಖ್ಯೇಯವಿಷಯಃ ಪ್ರಶ್ನಃ ಇತಿ ಕೇ ಗ್ರಹಾಃ ಕೇಽತಿಗ್ರಹಾಃ ಇತಿ ಪ್ರಷ್ಟವ್ಯಮ್, ನ ತು ಕತಿ ಗ್ರಹಾಃ ಕತ್ಯತಿಗ್ರಹಾಃ ಇತಿ ಪ್ರಶ್ನಃ। ಅಪಿ ಚ ನಿರ್ಜ್ಞಾತಸಾಮಾನ್ಯೇಷು ವಿಶೇಷವಿಜ್ಞಾನಾಯ ಪ್ರಶ್ನೋ ಭವತಿ। ಯಥಾ ಕತಮೇಽತ್ರ ಕಠಾಃ, ಕತಮೇಽತ್ರ ಕಾಲಾಪಾಃ ಇತಿ। ನ ಚಾತ್ರ ಗ್ರಹಾತಿಗ್ರಹಾ ನಾಮ ಪದಾರ್ಥಾಃ ಕೇಚನ ಲೋಕೇ ಪ್ರಸಿದ್ಧಾಃ। ಯೇನ ವಿಶೇಷಾರ್ಥಃ ಪ್ರಶ್ನಃ ಸ್ಯಾತ್। ನನು ಚ "ಅತಿಮುಚ್ಯತೇ"

---

1. ಈ ಮಾತು ಇಲ್ಲಿ ಬಿಟ್ಟುಹೋಗಿರುತ್ತದೆ.

(೩-೧-೩ ೪, ೫) ಇತ್ಯುಕ್ತಮ್ । ಗ್ರಹಗೃಹೀತಸ್ಯ ಹಿ ಮೋಕ್ಷಃ । "ಸ ಮುಕ್ತಿಃ ಸಾತಿಮುಕ್ತಿಃ" (೩, ೧, ೩, ೪, ೫, ೬,) ಇತಿ ಹಿ ದ್ವಿರುಕ್ತಮ್ । ತಸ್ಮಾತ್ ಪ್ರಾಪ್ತಾ ಗ್ರಹಾಃ ಅತಿಗ್ರಹಾಶ್ಚ । ನನು ತತ್ರಾಪಿ ಚತ್ವಾರೋ ಗ್ರಹಾಃ ಅತಿಗ್ರಹಾಶ್ಚ ನಿರ್ಜ್ಞಾತಾ ವಾಕ್ಚಕ್ಷುಃಪ್ರಾಣಮನಾಂಸಿ । ತತ್ರ ಕತೀತಿ ಪ್ರಶ್ನೋ ನೋಪಪದ್ಯತೇ ನಿರ್ಜ್ಞಾತತ್ವಾತ್ । ನ । ಅನವಧಾರಣಾರ್ಥತ್ವಾತ್ । ನ ಹಿ ಚತುಷ್ಟ್ವಂ ತತ್ರ ವಿವಕ್ಷಿತಮ್ । ಇಹ ತು ಗ್ರಹಾತಿಗ್ರಹದರ್ಶನೇ ಅಷ್ಟತ್ವಗುಣವಿವಕ್ಷಯಾ ಕತಿ ? ಇತಿ ಪ್ರಶ್ನಃ ಉಪಪದ್ಯತ ಏವ । 'ತಸ್ಮಾತ್ ಸ ಮುಕ್ತಿಃ ಸಾಽತಿಮುಕ್ತಿಃ ಇತಿ ಮುಕ್ತ್ಯತಿಮುಕ್ತೀ ದ್ವಿರುಕ್ತೇ ಗ್ರಹಾತಿಗ್ರಹಾ ಅಪಿ ಸಿದ್ಧಾಃ। ಅತಃ ಕತಿಸಂಖ್ಯಾಕಾ ಗ್ರಹಾಃ, ಕತಿ ವಾ ಅತಿಗ್ರಹಾಃ ಇತಿ ಪೃಚ್ಛತಿ । ಇತರ ಆಹ । ಅಷ್ಟೌ ಗ್ರಹಾಃ ಅಷ್ಟೌ ಅತಿಗ್ರಹಾಃ ಇತಿ । ಯೇ ತೇಽಷ್ಟೌ ಗ್ರಹಾಃ ಅಭಿಹಿತಾಃ ಕತಮೇ ತೇ ನಿಯಮೇನ ಗ್ರಹೀತವ್ಯಾ ಇತಿ ॥

(ಭಾಷ್ಯಾರ್ಥ)

'ಅಥ ಹೈನಮ್' (ಎಂಬ ಕಂಡಿಕೆಯ ಅರ್ಥವೇನೆಂದರೆ), ಹಶಬ್ದವು ಹಿಂದೆ ನಡೆಯಿತೆಂಬ ಅರ್ಥ(ವನ್ನು ತಿಳಿಸುತ್ತದೆ). ಆಗ ಅಶ್ವಲನು ಸುಮ್ಮನಾದ ಬಳಿಕ ಇವನನ್ನು, ಪ್ರಕೃತನಾದ ಯಾಜ್ಞವಲ್ಕ್ಯನನ್ನು, ಜರತ್ಕಾರುಗೋತ್ರದವ ನಾದ ಜಾರತ್ಕಾರವನು, ಋತಭಾಗನ ಮಗನಾದ ಆರ್ತಭಾಗನು ಕೇಳಿದನು.

'ಯಾಜ್ಞವಲ್ಕ್ಯನೆ' ಎಂದನು (ಎಂಬಲ್ಲಿ ಸಂಬೋಧನವು ಯಾಜ್ಞವಲ್ಕ್ಯ ನನ್ನು) ತನ್ನ ಕಡೆಗೆ ತಿರುಗಿಸಿಕೊಳ್ಳುವದಕ್ಕೆ ಹಿಂದಿನಂತೆ[1] ಪ್ರಶ್ನೆ. 'ಗ್ರಹಗಳು ಎಷ್ಟು, ಅತಿಗ್ರಹಗಳು ಎಷ್ಟು" (ಮೂಲದಲ್ಲಿ) ಇತಿಶಬ್ದವು ವಾಕ್ಯವು ಮುಗಿಯಿ ತೆಂಬರ್ಥದ್ದು.

(ಆಕ್ಷೇಪ) :—ಗ್ರಹಾತಿಗ್ರಹಗಳು ತಿಳಿದಿರುವಲ್ಲಿ (ಈ) ಪ್ರಶ್ನೆಯೊ, ಅಥವಾ (ಇವು) ತಿಳಿಯದೆ ಇರುವಲ್ಲಿ (ಪ್ರಶ್ನೆ)ಯಾಗಿರಬಹುದೊ? ಮೊದಲನೆಯದಾಗಿ ಗ್ರಹಗಳೂ ಅತಿಗ್ರಹಗಳೂ ಗೊತ್ತಾಗಿರುವವಾದರೆ, ಆಗ ಅವುಗಳಲ್ಲಿರುವ ಸಂಖ್ಯೆ ಎಂಬ ಗುಣವೂ ಗೊತ್ತಾಗಿಬಿಟ್ಟಿರುವದರಿಂದ "ಗ್ರಹಗಳು ಎಷ್ಟು, ಅತಿಗ್ರಹಗಳು ಎಷ್ಟು ?" ಎಂದು ಸಂಖ್ಯೆಯ ವಿಷಯದ ಪ್ರಶ್ನೆಯು ಹೊಂದುವದಿಲ್ಲ. ಇನ್ನು (ಅವು) ಗೊತ್ತಿಲ್ಲ ಎನ್ನುವದಾದರೆ ಆಗ ಪ್ರಶ್ನೆಯು ಸಂಖ್ಯೇಯವಿಷಯವಾಗಿರು

1. ಪೂರ್ವವತ್ ಎಂಬ ಮಾತನ್ನು ಮಧ್ಯಮಣಿನ್ಯಾಯದಿಂದ ಹಿಂದಕ್ಕೂ ಮುಂದಕ್ಕೂ ಅನ್ವಯಿಸಿಕೊಳ್ಳುವದಕ್ಕೆ ಬರುತ್ತದೆ. ಹಿಂದಕ್ಕೆ ಅನ್ವಯಿಸಿದರೆ ಮೊದಲಿನಂತೆ ವ್ಯಾಖ್ಯಾನಮಾಡ ಬೇಕು ಎಂದರ್ಥ; ಮುಂದಕ್ಕೆ ಅನ್ವಯಿಸಿದರೆ ಮೊದಲಿನಂತೆ ಒಂದು ಸಂಖ್ಯೇಯವಿಷಯದ ಪ್ರಶ್ನೆ, ಇನ್ನೊಂದು ಸಂಖ್ಯೆಯ ವಿಷಯದ ಪ್ರಶ್ನೆ ಎಂದರ್ಥ.

ತ್ತದೆಯಾದ್ದರಿಂದ "ಗ್ರಹಗಳು ಯಾವವು, ಅತಿಗ್ರಹಗಳು ಯಾವವು ?" ಎಂದು ಕೇಳಬೇಕೇ ಹೊರತು "ಗ್ರಹಗಳು ಎಷ್ಟು, ಅತಿಗ್ರಹಗಳು ಎಷ್ಟು ?" ಎಂದು ಪ್ರಶ್ನೆ(ಯಾಗ)ಬಾರದಲ್ಲ ! ಇದಲ್ಲದೆ ಸಾಮಾನ್ಯವನ್ನು ತಿಳಿದಿದ್ದು ವಿಶೇಷವನ್ನು ಅರಿಯದೆ ಇರುವಲ್ಲಿ (ಇಂಥ) ಪ್ರಶ್ನೆಯಾಗುತ್ತದೆ. ಉದಾಹರಣೆಗೆ "ಇಲ್ಲಿ ಕಠರು ಯಾರು ? ಇಲ್ಲಿ ಕಾಲಾಪರು ಯಾರು ?" ಎಂಬ (ಪ್ರಶ್ನೆಯಾಗಬಹುದು). ಆದರೆ ಇಲ್ಲಿ ಗ್ರಹಾತಿಗ್ರಹಗಳೆಂಬ ಪದಾರ್ಥಗಳು ಯಾವವೂ ಲೋಕದಲ್ಲಿ ಪ್ರಸಿದ್ಧವಾಗಿರುವದಿಲ್ಲ, ಹಾಗಿದ್ದರೆ (ಅವುಗಳ) ವಿಶೇಷವನ್ನು (ತಿಳಿದುಕೊಳ್ಳು)ವದಕ್ಕಾಗಿ ಪ್ರಶ್ನೆಯಾಗಬಹುದಿತ್ತು (ಅಲ್ಲವೆ)?

(ಸಮಾಧಾನ) —"ಅತಿಮುಕ್ತನಾಗುತ್ತಾನೆ" (೩-೧-೩, ೪, ೫) ಎಂದು ಹಿಂದೆ ಹೇಳಿದೆ ಗ್ರಹಗಳಿಂದ ಗೃಹೀತನಾಗಿರುವವನಿಗಲ್ಲವೆ, ಮೋಕ್ಷವು ? "ಅದು ಮುಕ್ತಿಯು, ಅದು ಅತಿಮುಕ್ತಿಯು" (೩ ೧ ೩, ೪, ೫, ೬) ಎಂದಲ್ಲವೆ, ಎರಡು ಸಲ ಹೇಳಿದೆ ? ಆದ್ದರಿಂದ ಗ್ರಹಗಳೂ ಅತಿಗ್ರಹಗಳೂ ಗೊತ್ತಾಗಿವೆಯೆಂದಾಯಿತಲ್ಲ !

(ಆಕ್ಷೇಪ) —ಅಲ್ಲಿಯೂ ಗ್ರಹಗಳೂ ಅತಿಗ್ರಹಗಳೂ ವಾಕ್ಕು, ಚಕ್ಷುಸ್ಸು ಪ್ರಾಣ, ಮನಸ್ಸು-ಎಂದು ನಾಲ್ಕೆಂದು ಗೊತ್ತಾಗಿದೆ ಹೀಗಿರುವಲ್ಲಿ ಎಷ್ಟು ? ಎಂಬ ಪ್ರಶ್ನೆಯು ಹೊಂದುವದಿಲ್ಲ, ಏಕೆಂದರೆ (ಅವು) ಗೊತ್ತಾಗಿಬಿಟ್ಟವೆ. (ಅಲ್ಲವೆ)?

(ಪರಿಹಾರ) —ಹಾಗಲ್ಲ. ಏಕೆಂದರೆ (ಅದು) ಅವಧಾರಣಾರ್ಥವಾಗಿ ಹೇಳಿದ್ದಲ್ಲ. (ಇದರ ವಿವರ) ಅಲ್ಲಿ ನಾಲ್ಕೇ ಎಂಬುದು ವಿವಕ್ಷಿತವಲ್ಲ, ಇಲ್ಲಿಯಾದರೋ ಗ್ರಹಾತಿಗ್ರಹದರ್ಶನವನ್ನು (ಹೇಳು)ವಲ್ಲಿ ಎಂಟು ಎಂಬ ಗುಣವನ್ನು ಹೇಳಬೇಕೆಂಬ ಇಚ್ಛೆಯಿಂದ 'ಎಷ್ಟು ?' ಎಂಬ ಪ್ರಶ್ನೆಯು ಹೊಂದಿಯೇಹೊಂದುತ್ತದೆ[1] ಆದ್ದರಿಂದ "ಅದು ಮುಕ್ತಿ, ಅದು ಅತಿಮುಕ್ತಿ" ಎಂದು ಮುಕ್ತ್ಯತಿಮುಕ್ತಿಗಳನ್ನು ಎರಡು ಸಲ ಹೇಳಿದೆಯಾಗಿ ಗ್ರಹಾತಿಗ್ರಹಗಳೂ ಸಿದ್ಧವಾಗಿರುತ್ತವೆ. ಆದ್ದರಿಂದ "ಗ್ರಹಗಳು ಎಷ್ಟು ಸಂಖ್ಯೆಯವು, ಅತಿಗ್ರಹಗಳಾದರೂ ಎಷ್ಟು ?" ಎಂದು ಕೇಳುತ್ತಿದಾನೆ.

ಇನ್ನೊಬ್ಬನಾದ (ಯಾಜ್ಞವಲ್ಕ್ಯನು) ಹೇಳುತ್ತಾನೆ. 'ಎಂಟು ಗ್ರಹಗಳು, ಎಂಟು ಅತಿಗ್ರಹಗಳು". "ಎಂಟೆಂದು ಗ್ರಹಗಳನ್ನು[2] ಹೇಳಿದೆಯಲ್ಲ, ಅವು ಯಾವವೆಂದು ಗೊತ್ತಾಗಿ ತಿಳಿಯಬೇಕು ?" ಎಂದು (ಪ್ರಶ್ನೆ).

---

1. ಪ್ರತಿವಾದಿವ್ಯಾಮೋಹಾರ್ಥವಾಗಿ ಎಷ್ಟು ? ಎಂದು ಕೇಳಿರುತ್ತಾನೆ– ಎಂದೂ ಉತ್ತರವನ್ನು ಹೇಳಬಹುದಾಗಿತ್ತು. ಆದರೂ ಹಿಂದಿನ ಬ್ರಾಹ್ಮಣದಲ್ಲಿ ಹೇಳಿದ ನಾಲ್ಕು ಎಂಬ ಸಂಖ್ಯೆ ವಿವಕ್ಷಿತವಲ್ಲ, ಎಂಟೇ ವಿವಕ್ಷಿತ– ಎಂಬುದನ್ನು ಈ ಉತ್ತರದಿಂದ ತಿಳಿಸಿರುತ್ತದೆ.

2. ಇದು ಉಪಲಕ್ಷಣ. ಅತಿಗ್ರಹಗಳನ್ನೂ ಸೇರಿಸಿಕೊಳ್ಳಬೇಕು.

## ಗ್ರಹಾತಿಗ್ರಹಗಳ ವಿವರ

(ಉಪನಿಷತ್ತು)

**ಪ್ರಾಣೋ ವೈ ಗ್ರಹಃ ಸೋಽಪಾನೇನಾತಿಗ್ರಾಹೇಣ ಗೃಹೀತೋಽಪಾನೇನ ಹಿ ಗನ್ಧಾಞ್ಜಿಘ್ರತಿ || ೨ ||**

೨. ಪ್ರಾಣವೇ ಗ್ರಹವು, ಅದು ಅಪಾನವೆಂಬ ಅತಿಗ್ರಹದಿಂದ ಗೃಹೀತ(ವಾಗಿದೆ); ಅಪಾನದಿಂದಲೇ ಅಲ್ಲವೆ, ಗಂಧವನ್ನು ಮೂಸುತ್ತಾನೆ?

(ಭಾಷ್ಯ)

೧೯. ತತ್ರಾಹ। ಪ್ರಾಣೋ ವೈ ಗ್ರಹಃ। ಪ್ರಾಣಃ ಇತಿ ಘ್ರಾಣಮುಚ್ಯತೇ। ಪ್ರಕರಣಾತ್। ವಾಯುಸಹಿತಃ ಸಃ। ಅಪಾನೇನೇತಿ ಗನ್ಧೇನ ಇತ್ಯೇತತ್। ಅಪಾನ ಸಚಿವತ್ವಾತ್ ಅಪಾನೋ ಗನ್ಧ ಉಚ್ಯತೇ। ಅಪಾನೋಪಹೃತಂ ಹಿ ಗನ್ಧಂ ಘ್ರಾಣೇನ ಸರ್ವೋ ಲೋಕೋ ಜಿಘ್ರತಿ। ತದೇತದುಚ್ಯತೇ 'ಅಪಾನೇನ ಹಿ ಗನ್ಧಾಞ್ಜಿಘ್ರತಿ' ಇತಿ ||

(ಭಾಷ್ಯಾರ್ಥ)

ಇದಕ್ಕೆ (ಯಾಜ್ಞವಲ್ಕ್ಯನು) ಹೇಳುತ್ತಾನೇನೆಂದರೆ. ಪ್ರಾಣವೇ ಗ್ರಹವು. ಪ್ರಾಣವೆಂದು (ಇಲ್ಲಿ) ಘ್ರಾಣವನ್ನು ಹೇಳಿದೆ, ಏಕೆಂದರೆ (ಇದು ಇಂದ್ರಿಯಗಳ) ಪ್ರಕರಣವಾಗಿರುತ್ತದೆ. ಆ (ಘ್ರಾಣವು) ವಾಯುಸಹಿತವಾಗಿರುತ್ತದೆ. ಅಪಾನದಿಂದ ಎಂದರೆ ಗಂಧದಿಂದ ಎಂದು ಅಭಿಪ್ರಾಯ. ಗಂಧವು ಅಪಾನದಿಂದ ಕೂಡಿರುವದರಿಂದ (ಅದನ್ನು) ಅಪಾನವೆಂದಿದೆ. ಪ್ರತಿಯೊಬ್ಬನೂ ಅಪಾನದಿಂದ ಎಳೆದುಕೊಂಡಲ್ಲವೆ, ಗಂಧವನ್ನು ಘ್ರಾಣದಿಂದ ಮೂಸುತ್ತಾನೆ? ಇದನ್ನೇ (ಶ್ರುತಿಯಲ್ಲಿ) "ಅಪಾನದಿಂದಲೇ ಅಲ್ಲವೆ, ಗಂಧವನ್ನು ಮೂಸುತ್ತಾನೆ?" ಎಂದಿದೆ.

(ಉಪನಿಷತ್ತು)

**ವಾಗ್ವೈ ಗ್ರಹಃ ಸ ನಾಮ್ನಾತಿಗ್ರಾಹೇಣ ಗೃಹೀತೋ ವಾಚಾ ಹಿ ನಾಮಾನ್ಯಭಿವದತಿ || ೩ ||**

**ಜಿಹ್ವಾ ವೈ ಗ್ರಹಃ ಸ ರಸೇನಾಽತಿಗ್ರಾಹೇಣ ಗೃಹೀತೋ ಜಿಹ್ವಯಾ ಹಿ ರಸಾನ್ ವಿಜಾನಾತಿ || ೪ ||**

**ಚಕ್ಷುರ್ವೈ ಗ್ರಹಃ ಸ ರೂಪೇಣಾತಿಗ್ರಾಹೇಣ ಗೃಹೀತಶ್ಚಕ್ಷುಷಾ ಹಿ ರೂಪಾಣಿ ಪಶ್ಯತಿ || ೫ ||**

**ಶ್ರೋತ್ರಂ ವೈ ಗ್ರಹಃ ಸ ಶಬ್ದೇನಾತಿಗ್ರಾಹೇಣ ಗೃಹೀತಃ ಶ್ರೋತ್ರೇಣ ಹಿ ಶಬ್ದಾಞ್ಶೃಣೋತಿ || ೬ ||**

**ಮನೋ ವೈ ಗ್ರಹಃ ಸ ಕಾಮೇನಾತಿಗ್ರಾಹೇಣ ಗೃಹೀತೋ ಮನಸಾ ಹಿ ಕಾಮಾನ್ ಕಾಮಯತೇ ‖ ೭ ‖**
**ಹಸ್ತೌ ವೈ ಗ್ರಹಃ ಸ ಕರ್ಮಣಾಽತಿಗ್ರಾಹೇಣ ಗೃಹೀತೋ ಹಸ್ತಾಭ್ಯಾಗ್ಂ ಹಿ ಕರ್ಮ ಕರೋತಿ ‖ ೮ ‖**
**ತ್ವಗ್ವೈ ಗ್ರಹಃ ಸ ಸ್ಪರ್ಶೇನಾತಿಗ್ರಾಹೇಣ ಗೃಹೀತಸ್ತ್ವಚಾ ಹಿ ಸ್ಪರ್ಶಾನ್ ವೇದಯತ ಇತ್ಯೇತೇಽಷ್ಟೌ ಗ್ರಹಾ ಅಷ್ಟಾವತಿಗ್ರಹಾಃ ‖ ೯ ‖**

೩-೯. ವಾಕ್ಕೇ ಗ್ರಹವು, ಅದು ನಾಮವೆಂಬ ಅತಿಗ್ರಾಹದಿಂದ ಗೃಹೀತ(ವಾಗಿದೆ); ವಾಕ್ಕಿನಿಂದಲೇ ಅಲ್ಲವೆ, ನಾಮಗಳನ್ನು ಹೇಳುತ್ತಾನೆ? ಜಿಹ್ವೆಯೇ ಗ್ರಹವು, ಅದು ರಸವೆಂಬ ಅತಿಗ್ರಾಹದಿಂದ ಗೃಹೀತ(ವಾಗಿದೆ). ಜಿಹ್ವೆಯಿಂದಲೇ ಅಲ್ಲವೆ, ರಸಗಳನ್ನು ಅರಿಯುತ್ತಾನೆ? ಚಕ್ಷುಸ್ಸೇ ಗ್ರಹವು, ಅದು ರೂಪವೆಂಬ ಅತಿಗ್ರಾಹದಿಂದ ಗೃಹೀತ(ವಾಗಿದೆ). ಚಕ್ಷುಸ್ಸಿನಿಂದಲೇ ಅಲ್ಲವೆ, ರೂಪಗಳನ್ನು ಕಾಣುತ್ತಾನೆ? ಶ್ರೋತ್ರವೇ ಗ್ರಹವು, ಅದು ಶಬ್ದವೆಂಬ ಅತಿಗ್ರಾಹದಿಂದ ಗೃಹೀತ(ವಾಗಿದೆ). ಶ್ರೋತ್ರದಿಂದಲೇ ಅಲ್ಲವೆ ಶಬ್ದಗಳನ್ನು ಕೇಳುತ್ತಾನೆ? ಮನಸ್ಸೇ ಗ್ರಹವು, ಅದು ಕಾಮವೆಂಬ ಅತಿಗ್ರಾಹದಿಂದ ಗೃಹೀತ(ವಾಗಿದೆ), ಮನಸ್ಸಿನಿಂದಲೇ ಅಲ್ಲವೆ, ಕಾಮಗಳನ್ನು ಕಾಮಿಸುತ್ತಾನೆ? ಹಸ್ತವೇ ಗ್ರಹವು, ಅದು ಕರ್ಮವೆಂಬ ಅತಿಗ್ರಾಹದಿಂದ ಗೃಹೀತ(ವಾಗಿದೆ). ಹಸ್ತಗಳಿಂದಲೇ ಅಲ್ಲವೆ, ಕರ್ಮವನ್ನು ಮಾಡುತ್ತಾನೆ? ತ್ವಕ್ಕೇ ಗ್ರಹವು, ಅದು ಸ್ಪರ್ಶವೆಂಬ ಅತಿಗ್ರಾಹದಿಂದ ಗೃಹೀತ(ವಾಗಿರುತ್ತದೆ). ತ್ವಕ್ಕಿನಿಂದಲೇ ಅಲ್ಲವೆ, ಸ್ಪರ್ಶಗಳನ್ನು ಅರಿತುಕೊಳ್ಳುತ್ತಾನೆ? ಇವೇ ಎಂಟು ಗ್ರಹಗಳು, ಎಂಟು ಅತಿಗ್ರಹಗಳು.

(ಭಾಷ್ಯ)

೨೦. ವಾಗ್ವೈ ಗ್ರಹಃ। ವಾಚಾ ಹಿ ಅಧ್ಯಾತ್ಮಪರಿಚ್ಛಿನ್ನಯಾ ಆಸಜ್ಗವಿಷಯಾಸ್ಪದಯಾ ಅಸತ್ಯಾನೃತಾಸಭ್ಯಬೀಭತ್ಸಾದಿವಚನೇಷು ವ್ಯಾಪೃತಯಾ ಗೃಹೀತೋ ಲೋಕಃ, ಅಪಹೃತಃ। ತೇನ ವಾಗ್ಗ್ರಹಃ। ಸ ನಾಮ್ನಾ ವಕ್ತವ್ಯೇನ ವಿಷಯೇಣ[1] ಅತಿಗ್ರಾಹೇಣ ಗೃಹೀತಃ। ಸ ವಾಗಾಖ್ಯೋ ಗ್ರಹಃ ನಾಮ್ನಾ ವ್ಯಕ್ತವ್ಯೇನ ವಿಷಯೇಣ ಅತಿಗ್ರಾಹೇಣ। ಅತಿಗ್ರಾಹೇಣ ಇತಿ ದೈರ್ಘ್ಯಂ ಛಾನ್ದಸಮ್। ವಕ್ತವ್ಯಾರ್ಥಾ[2] ಹಿ ವಾಕ್ ತೇನ ವ್ಯಕ್ತವ್ಯೇನ ಅರ್ಥೇನ ತಾದರ್ಥ್ಯೇನ ಪ್ರಯುಕ್ತಾ

1. ಇದು ಕೆಲವು ಪಾಠಗಳಲ್ಲಿಲ್ಲ.
2. ಇದರ ಹಿಂದಿನ 'ನಾಮ' ಬೇಕಿಲ್ಲ.

ವಾಕ್ ತೇನ ವಶೀಕೃತಾ ತೇನ ತತ್ಕಾರ್ಯಮ್ ಅಕೃತ್ವಾ ನೈವ ತಸ್ಯಾ ಮೋಕ್ಷಃ। ಅತೋ 'ನಾಮ್ನಾ ಅತಿಗ್ರಾಹೇಣ ಗೃಹೀತಾ ವಾಕ್' ಇತ್ಯುಚ್ಯತೇ। ವಕ್ತವ್ಯಾಸಙ್ಗೇನ ಹಿ ಪ್ರವೃತ್ತಾ ಸರ್ವಾನರ್ಥೈರ್ಯುಜ್ಯತೇ। ಸಮಾನಮನ್ಯತ್। ಇತ್ಯೇತೇ ತ್ವಕ್ಪರ್ಯನ್ತಾ ಅಷ್ಟೌ ಗ್ರಹಾಃ। ಸ್ಪರ್ಶಪರ್ಯನ್ತಾಶ್ಚೈತೇ ಅಷ್ಟಾವತಿಗ್ರಹಾ ಇತಿ ॥

(ಭಾಷ್ಯಾರ್ಥ)

'ವಾಗ್ವೈ ಗ್ರಹಃ' (ಮುಂತಾದ ಕಂಡಿಕೆಗಳ ಅರ್ಥವೇನೆಂದರೆ) · ವಾಕ್ಕಿನಿಂದಲೇ ಅಧ್ಯಾತ್ಮಪರಿಚ್ಛಿನ್ನವಾಗಿ ಆಸಂಗಕ್ಕೆ ವಿಷಯವಾದ (ವಸ್ತು)ವೆಂಬ ಆಧಾರವುಳ್ಳದ್ದಾಗಿ, ಸತ್ಯವಲ್ಲದ್ದು, ಸುಳ್ಳು, ಅಸಭ್ಯವಾದದ್ದು, ಅಸಹ್ಯವಾದದ್ದು–ಮುಂತಾದವುಗಳನ್ನು ಆಡುವದರಲ್ಲಿ ವ್ಯಾಪಾರವುಳ್ಳ (ವಾಕ್ಕಿನಿಂದಲೇ) ಜನವು ಗೃಹೀತವಾಗಿ ಅಪಹೃತವಾಗಿದೆಯಲ್ಲವೆ ? ಆದ್ದರಿಂದ ವಾಕ್ಕೇ ಗ್ರಹವು. ಅದು ಹೇಳತಕ್ಕ ವಿಷಯವಾದ ನಾಮವೆಂಬ ಅತಿಗ್ರಾಹದಿಂದ ಗೃಹೀತವಾಗಿರುತ್ತದೆ, ಅದು ಎಂದರೆ ವಾಕ್ಕೆಂಬ ಗ್ರಹವು ನಾಮದಿಂದ ವಕ್ತವ್ಯವಾದ ವಿಷಯವೆಂಬ ಅತಿಗ್ರಹದಿಂದ ಅತಿಗ್ರಾಹೇಣ ಎಂದು ದೀರ್ಘವನ್ನು(ಪ್ರಯೋಗಿಸಿರುವದು)ವೈದಿಕವು. (ಗೃಹೀತವಾಗಿರುತ್ತದೆ.) ವಕ್ತವ್ಯವೆಂಬ ಅರ್ಥವುಳ್ಳದ್ದಲ್ಲವೆ, ವಾಕ್ಕು ? ಆ ವಕ್ತವ್ಯವಾದ ಅರ್ಥದಿಂದ ಅದಕ್ಕಾಗಿ ಪ್ರಯುಕ್ತವಾದ ವಾಕ್ಕು ಅದರಿಂದ ವಶೀಕೃತ(ವಾಗಿರುತ್ತದೆ) ಆದ್ದರಿಂದ ಆ ಕಾರ್ಯವನ್ನು ಮಾಡದಿದ್ದರೆ ಅದಕ್ಕೆ ಬಿಡುಗಡೆಯೇ ಇರುವದಿಲ್ಲ. ಆದ್ದರಿಂದ ನಾಮವೆಂಬ ಅತಿಗ್ರಾಹದಿಂದ ವಾಕ್ಕು ಗೃಹೀತ(ವಾಗಿರುತ್ತದೆ) ಎಂದು ಹೇಳಿದೆ. ವಕ್ತವ್ಯದ ಆಸಂಗದಿಂದ ಪ್ರವೃತ್ತವಾಗುವದರಿಂದಲ್ಲವೆ, (ಅದು) ಎಲ್ಲಾ ಅನರ್ಥಗಳಿಂದಲೂ ಸಂಬದ್ಧವಾಗುತ್ತದೆ.

ಮಿಕ್ಕದ್ದು (ಹಿಂದಿನ ಗ್ರಂಥಕ್ಕೆ) ಸಮಾನವು. ಇವೇ ತ್ವಕ್ಪರ್ಯಂತವಾಗಿರುವ ಎಂಟು ಗ್ರಹಗಳು, ಸ್ಪರ್ಶಪರ್ಯಂತವಾಗಿರುವ ಇವೇ ಎಂಟು ಅತಿಗ್ರಹಗಳು.

## ಮೃತ್ಯುವನ್ನೂ ತಿನ್ನುವ ದೇವತೆ ಇದೆ

(ಉಪನಿಷತ್ತು)

**ಯಾಜ್ಞವಲ್ಕ್ಯೇತಿ ಹೋವಾಚ ಯದಿದಗ್ಂ ಸರ್ವಂ ಮೃತ್ಯೋರನ್ನಂ ಕಾ ಸ್ವಿತ್ ಸಾ ದೇವತಾ ಯಸ್ಯಾ ಮೃತ್ಯುರನ್ನಮಿತ್ಯಗ್ನಿರ್ವೈ ಮೃತ್ಯುಃ ಸೋಽಪಾಮನ್ನಮುಪಪುನರ್ಮೃತ್ಯುಂ ಜಯತಿ ॥ ೧೦ ॥**

೧೦. 'ಯಾಜ್ಞವಲ್ಕ್ಯನೆ', ಎಂದನು. 'ಇದೆಲ್ಲವೂ ಮೃತ್ಯುವಿನ ಅನ್ನವಾಗಿರುತ್ತದೆಯಷ್ಟೆ; ಯಾವದಕ್ಕೆ ಮೃತ್ಯುವು ಅನ್ನವಾಗಿರುತ್ತದೆಯೋ

ಆ ದೇವತೆ ಯಾವದು?' ಬೆಂಕಿಯೇ ಮೃತ್ಯುವು, ಅದು ನೀರಿಗೆ ಅನ್ನ ವಾಗಿರುತ್ತದೆ. (ಅವನು) ಪುನರ್ಮೃತ್ಯುವನ್ನು ಜಯಿಸುತ್ತಾನೆ.

(ಭಾಷ್ಯ)

೨೧ ಉಪಸಂಹೃತೇಷು ಗ್ರಹಾತಿಗ್ರಹೇಷು ಆಹ ಪುನಃ। ಯಾಜ್ಞವಲ್ಕ್ಯೇತಿ ಹೋವಾಚ। ಯದಿದಂ ಸರ್ವಂ ಮೃತ್ಯೋರನ್ನಂ, ಯದಿದಂ ವ್ಯಾಕೃತಂ ಸರ್ವಂ ಮೃತ್ಯೋರನ್ನಮ್। ಸರ್ವಂ ಜಾಯತೇ ವಿಪದ್ಯತೇ ಚ ಗ್ರಹಾತಿಗ್ರಹಲಕ್ಷಣೇನ ಮೃತ್ಯುನಾ ಗ್ರಸ್ತಮ್। ಕಾ ಸ್ವಿತ್ ಕಾ ನು ಸ್ಯಾತ್ ಸಾ ದೇವತಾ ಯಸ್ಯಾ ದೇವತಾಯಾ ಮೃತ್ಯುರಪಿ ಅನ್ನಂ ಭವೇತ್? "ಮೃತ್ಯುರ್ಯಸ್ಯೋಪಸೇಚನಮ್" (ಕ ೧-೨-೨೫) ಇತಿ ಶ್ರುತ್ಯನ್ತರಾತ್। ಅಯಮಭಿಪ್ರಾಯಃ ಪ್ರಷ್ಟುಃ। ಯದಿ ಮೃತ್ಯೋರ್ಮೃತ್ಯುಂ ವಕ್ಷ್ಯತಿ, ಅನವಸ್ಥಾ ಸ್ಯಾತ್। ಅಥ ನ ವಕ್ಷ್ಯತಿ, ಅಸ್ಮಾತ್ ಗ್ರಹಾತಿಗ್ರಹಲಕ್ಷಣಾತ್ ಮೃತ್ಯೋರ್ಮೋಕ್ಷೋ ನೋಪಪದ್ಯತೇ। ಗ್ರಹಾತಿಗ್ರಹಮೃತ್ಯುವಿನಾಶೇ ಹಿ ಮೋಕ್ಷಃ ಸ್ಯಾತ್। ಸ ಯದಿ ಮೃತ್ಯೋರಪಿ ಮೃತ್ಯುಃ ಸ್ಯಾತ್, ಭವೇತ್ ಗ್ರಹಾತಿಗ್ರಹಲಕ್ಷಣಸ್ಯ ಮೃತ್ಯೋರ್ವಿನಾಶಃ। ಅತೋ ದುರ್ವಚನಂ ಪ್ರಶ್ನಂ ಮನ್ವಾನಃ ಪೃಚ್ಛತಿ ಕಾ ಸ್ವಿತ್ ಸಾ ದೇವತಾ? ಇತಿ। ಅಸ್ತಿ ತಾವನ್ಮೃತ್ಯೋರ್ಮೃತ್ಯುಃ। ನನ್ವನವಸ್ಥಾ ಸ್ಯಾತ್। ತಸ್ಯಾಪಿ ಅನ್ಯೋ ಮೃತ್ಯುರಿತಿ। ನಾನವಸ್ಥಾ। ಸರ್ವಮೃತ್ಯೋರ್ಮೃತ್ಯ್ವನ್ತರಾನುಪಪತ್ತೇಃ। ಕಥಂ ಪುನರವಗಮ್ಯತೇ ಅಸ್ತಿ ಮೃತ್ಯೋರ್ಮೃತ್ಯುರಿತಿ? ದೃಷ್ಟತ್ವಾತ್। ಅಗ್ನಿಸ್ತಾವತ್ ಸರ್ವಸ್ಯ ದೃಷ್ಟೋ ಮೃತ್ಯುಃ। ವಿನಾಶಕತ್ವಾತ್। ಸೋಽದ್ಭಿರ್ಭಕ್ಷ್ಯತೇ ಸೋಽಗ್ನಿರಪಾಮ್ ಅನ್ನಮ್। ಗೃಹಾಣಾ ತರ್ಹಿ ಅಸ್ತಿ ಮೃತ್ಯೋರ್ಮೃತ್ಯುರಿತಿ। ತೇನ ಸರ್ವಂ ಗ್ರಹಾತಿಗ್ರಹಜಾತಂ ಭಕ್ಷ್ಯತೇ ಮೃತ್ಯೋರ್ಮೃತ್ಯುನಾ। ತಸ್ಮಿನ್ ಬನ್ಧನೇ ನಾಶಿತೇ ಮೃತ್ಯುನಾ ಭಕ್ಷಿತೇ ಸಂಸಾರಾತ್ ಮೋಕ್ಷಃ ಉಪಪನ್ನೋ ಭವತಿ। ಬನ್ಧನಂ ಹಿ ಗ್ರಹಾತಿಗ್ರಹಲಕ್ಷಣಮುಕ್ತಮ್। ತಸ್ಮಾಚ್ಚ ಮೋಕ್ಷ ಉಪಪದ್ಯತೇ ಇತ್ಯೇತತ್ ಪ್ರಸಾಧಿತಮ್। ಅತೋ ಬನ್ಧಮೋಕ್ಷಾಯ ಪುರುಷಪ್ರಯಾಸಃ ಸಫಲೋ ಭವತಿ। ಅತೋಽಪಜಯತಿ ಪುನರ್ಮೃತ್ಯುಮ್ ॥

(ಭಾಷ್ಯಾರ್ಥ)

ಗ್ರಹಾತಿಗ್ರಹಗಳನ್ನು ಉಪಸಂಹಾರಮಾಡಲು (ಆರ್ತಭಾಗನು) ಮತ್ತೆ ಹೇಳುತ್ತಾನೆ. 'ಯಾಜ್ಞವಲ್ಕ್ಯನೆ' ಎಂದನು (ಎಂಬುದಕ್ಕೆ ಹಿಂದಿನಂತೆ ವ್ಯಾಖ್ಯಾನ). ಇದೆಲ್ಲವೂ ಮೃತ್ಯುವಿನ ಅನ್ನವಾಗಿರುತ್ತದೆಯಷ್ಟೆ, ಈ ವ್ಯಾಕೃತವೆಲ್ಲವೂ ಮೃತ್ಯುವಿನ ಅನ್ನವಷ್ಟೆ–ಎಲ್ಲವೂ ಗ್ರಹಾತಿಗ್ರಹರೂಪವಾದ ಮೃತ್ಯುವಿನಿಂದ ಗ್ರಸ್ತವಾಗಿಯೇ ಹುಟ್ಟುತ್ತದೆ ಮತ್ತು ನಾಶವಾಗುತ್ತದೆ(ಯಷ್ಟೆ)– ಆ ದೇವತೆಯು ಯಾವದು,

ಯಾವದಾದೀತು? ಯಾವ ದೇವತೆಗೆ ಮೃತ್ಯುವೂ ಅನ್ನವಾಗಿರುವದೋ (ಆ ದೇವತೆ ಯಾವದು ?) "ಮೃತ್ಯುವು ಯಾವನಿಗೆ ಉಪ್ಪಿನಕಾಯಿಯೊ" (ಕ. ೧-೨-೨೫) ಎಂಬ ಶ್ರುತ್ಯಂತರದಿಂದ (ಹೀಗೆಂದು ಏರ್ಪಡುತ್ತದೆ). ಪ್ರಶ್ನೆಮಾಡಿದವನಿಗೆ ಇದು ಅಭಿಪ್ರಾಯ : ಮೃತ್ಯುವಿಗೂ ಮೃತ್ಯುವನ್ನು (ಇವನು) ಹೇಳುವನಾದರೆ ಅನವಸ್ಥೆ ಯಾಗುವದು ; ಇನ್ನು ಹೇಳುವದಿಲ್ಲವಾದರೆ ಈ ಗ್ರಹಾತಿಗ್ರಹಲಕ್ಷಣವಾದ ಮೃತ್ಯು ವಿನಿಂದ ಮೋಕ್ಷ(ವುಂಟೆಂಬಿದು) ಹೊಂದುವದಿಲ್ಲ. ಗ್ರಹಾತಿಗ್ರಹಗಳ ಮೃತ್ಯುವು ವಿನಾಶವಾದರಲ್ಲವೆ, ಮೋಕ್ಷವಾಗುವದು ? ಆ ಮೃತ್ಯುವಿಗೂ ಮೃತ್ಯುವು ಇದ್ದರೆ, ಗ್ರಹಾತಿಗ್ರಹಲಕ್ಷಣವಾದ ಮೃತ್ಯುವಿಗೆ ವಿನಾಶವಾದೀತು. ಆದ್ದರಿಂದ (ಈ) ಪ್ರಶ್ನೆಗೆ (ಉತ್ತರವನ್ನು) ಹೇಳುವದು ಕಷ್ಟ ಎಂದು ಬಗೆದು 'ಆ ದೇವತೆ ಯಾವದು ?' ಎಂದು ಕೇಳಿರುತ್ತಾನೆ.

ಮೊದಲನೆಯದಾಗಿ ಮೃತ್ಯುವಿಗೂ ಮೃತ್ಯುವಿದೆ.

(ಆಕ್ಷೇಪ):-(ಹಾಗಾದರೆ) ಅದಕ್ಕೂ ಮತ್ತೊಂದು ಮೃತ್ಯು(ವಿದೆ) ಎಂದಾಗಿ ಅನವಸ್ಥೆಯಾಗುವದಲ್ಲ !

(ಪರಿಹಾರ):-ಅನವಸ್ಥೆಯಿಲ್ಲ. ಏಕೆಂದರೆ ಸರ್ವಮೃತ್ಯುವಿಗೆ ಮತ್ತೊಂದು ಮೃತ್ಯುವಿರುವಹಾಗಿಲ್ಲ.

(ಪ್ರಶ್ನೆ).-ಮೃತ್ಯುವಿಗೂ ಮೃತ್ಯುವಿದೆ ಎಂಬುದು ಹೇಗೆ ಗೊತ್ತಾಗುತ್ತದೆ ?

(ಉತ್ತರ):-ಕಂಡಿರುವದರಿಂದ. ಮೊದಲನೆಯದಾಗಿ ಬೆಂಕಿಯು ಎಲ್ಲಕ್ಕೂ ಮೃತ್ಯುವೆಂಬುದು ಕಂಡಿರುತ್ತದೆ. ಏಕೆಂದರೆ ಅದು (ಎಲ್ಲಕ್ಕೂ) ವಿನಾಶಕವಾಗಿದೆ. ಅದು ನೀರಿನಿಂದ ಭಕ್ಷಿತವಾಗುತ್ತದೆ, ಆ ಬೆಂಕಿಯು ನೀರಿಗೆ ಅನ್ನವು.[1] ಹೀಗಾದ್ದರಿಂದ ಮೃತ್ಯುವಿಗೂ ಮೃತ್ಯುವಿದೆಯೆಂದು ತಿಳಿ. ಈ ಮೃತ್ಯುಮೃತ್ಯುವಿನಿಂದ ಗ್ರಹಾತಿಗ್ರಹಜಾತವೆಲ್ಲವೂ ಭಕ್ಷಿತವಾಗುತ್ತದೆ. ಆ ಬಂಧನವು ನಾಶಿತವಾದರೆ, ಮೃತ್ಯುವಿನಿಂದ ಭಕ್ಷಿತವಾದರೆ,[2] ಸಂಸಾರದಿಂದ ಬಿಡುಗಡೆಯಾಗಬಹುದಾಗಿದೆ. ಗ್ರಹಾತಿಗ್ರಹಲಕ್ಷಣವಾದದ್ದು ಬಂಧವೆಂದಲ್ಲವೆ, ಹೇಳಿದೆ ? ಆ (ಬಂಧ)ದಿಂದ ಬಿಡುಗಡೆಯಾಗಬಹುದು ಎಂದು ಸಾಧಿಸಲಾಯಿತು. ಆದ್ದರಿಂದ ಬಂಧದಿಂದ ಬಿಡುಗಡೆಯಾಗುವದಕ್ಕಾಗಿ ಮನುಷ್ಯನು ಪ್ರಯತ್ನಿಸುವದು ಸಫಲವಾಗುತ್ತದೆ. ಅದರಿಂದ ಪುನರ್ಮೃತ್ಯುವನ್ನು ಜಯಿಸುತ್ತಾನೆ.[3]

---

1. ಇದು ಶ್ರುತಿಯ ಅಕ್ಷರಾರ್ಥವನ್ನು ಇಟ್ಟುಕೊಂಡು ಹೇಳಿದ್ದು. ಅಗ್ನಿ ಎಂದರೆ ಹಿರಣ್ಯಗರ್ಭನು, ಅಪ್ಪೆಂದರೆ ಅವ್ಯಾಕೃತವು; ಹಿರಣ್ಯಗರ್ಭನು ಕಾರ್ಯವಾದ್ದರಿಂದ ಅವನಿಗೆ ಕಾರಣವಾದ ಅವ್ಯಾಕೃತವು ಮೃತ್ಯು. ಹೀಗೆಯೇ ಅಜ್ಞಾನರೂಪವಾದ ಸಂಸಾರಕ್ಕೆ ಆತ್ಮಜ್ಞಾನವು ಮೃತ್ಯು ಎಂಬ ತಾತ್ಪರ್ಯವನ್ನು **ವಾರ್ತಿಕ** (೧-೨-೧೮, ೧೯)ರಲ್ಲಿ ಹೇಳಿದೆ.

2. ಜ್ಞಾನದಿಂದ ನಷ್ಟವಾದರೆ.

3. ಜ್ಞಾನದಿಂದ ಅಮೃತತ್ವವನ್ನು ಪಡೆದುಕೊಳ್ಳುತ್ತಾನೆ ಎಂದರ್ಥ.

## ಆತ್ಮನಿಗೆ ಪ್ರಾಣೋತ್ಕ್ರಮಣವಿಲ್ಲ

(ಉಪನಿಷತ್ತು)

**ಯಾಜ್ಞವಲ್ಕ್ಯೇತಿ ಹೋವಾಚ ಯತ್ರಾಯಂ ಪುರುಷೋ ಮ್ರಿಯತ ಉದಸ್ಮಾತ್ ಪ್ರಾಣಾಃ ಕ್ರಾಮನ್ತ್ಯಾ ಹೋಇ ನೇತಿ ನೇತಿ ಹೋವಾಚ ಯಾಜ್ಞವಲ್ಕ್ಯೋಽತ್ರೈವ ಸಮವನೀಯನ್ತೇ ಸ ಉಚ್ಛ್ವಯತ್ಯಾಧ್ಮಾಯತ್ಯಾಧ್ಮಾತೋ ಮೃತಃ ಶೇತೇ ॥ ೧೧ ॥**

೧೧. 'ಯಾಜ್ಞವಲ್ಕ್ಯನೆ' ಎಂದನು. 'ಈ ಪುರುಷನು ಎಲ್ಲಿ ಮೃತನಾಗುವನೋ (ಆಗ) ಅವನಿಂದ ಪ್ರಾಣಗಳು ಉತ್ಕ್ರಮಿಸುತ್ತವೆಯೋ, ಇಲ್ಲವೊ?' ಯಾಜ್ಞವಲ್ಕ್ಯನಿಂತೆಂದನು: 'ಇಲ್ಲ, ಇಲ್ಲಿಯೇ ಸೇರಿಕೊಳ್ಳುವುವು. ಅವನು ಉಬ್ಬಿಕೊಳ್ಳುವನು, ತುಂಬಿಕೊಳ್ಳುವನು, ತುಂಬಿಕೊಂಡು ಮೃತನಾಗಿ ಮಲಗಿರುವನು.'

(ಭಾಷ್ಯ)

೨೨. ಪರೇಣ ಮೃತ್ಯುನಾ ಮೃತ್ಯೌ ಭಕ್ಷಿತೇ ಪರಮಾತ್ಮದರ್ಶನೇನ ಯೋಽಸೌ ಮುಕ್ತೋ ವಿದ್ವಾನ್ ಸೋಽಯಂ ಪುರುಷೋ ಯತ್ರ ಯಸ್ಮಿನ್ ಕಾಲೇ ಮ್ರಿಯತೇ ಉತ್ ಊರ್ಧ್ವಂ ಅಸ್ಮಾತ್ ಬ್ರಹ್ಮವಿದಃ ಮ್ರಿಯಮಾಣಾತ್ ಪ್ರಾಣಾ ವಾಗಾದಯೋ ಗ್ರಹಾಃ ನಾಮಾದಯಶ್ಚ ಅತಿಗ್ರಹಾಃ ವಾಸನಾರೂಪಾಃ ಅನ್ತಸ್ಥಾಃ ಪ್ರಯೋಜಕಾಃ ಕ್ರಾಮನ್ತಿ ಊರ್ಧ್ವಮ್ ಉತ್ಕ್ರಾಮನ್ತಿ ಆಹೋಸ್ವಿನ್ನ ಇತಿ। ನೇತಿ ಹೋವಾಚ ಯಾಜ್ಞವಲ್ಕ್ಯಃ। ನೋತ್ಕ್ರಾಮನ್ತಿ ಅತ್ರೈವ ಅಸ್ಮಿನ್ನೇವ ಪರೇಣಾತ್ಮನಾ ಅವಿಭಾಗಂ ಗಚ್ಛನ್ತಿ। ವಿದುಷಿ ಕಾರ್ಯಾಣಿ ಕರಣಾನಿ ಚ ಸ್ವಯೋನೌ ಪರಬ್ರಹ್ಮಸತತ್ತ್ವೇ ಸಮವನೀಯನ್ತೇ ಏಕೀಭಾವೇನ ಸಮವಸೃಜ್ಯನ್ತೇ। ಪ್ರಲೀಯನ್ತೇ ಇತ್ಯರ್ಥಃ। ಊರ್ಮಯ ಇವ ಸಮುದ್ರೇ। ತಥಾ ಚ ಶ್ರುತ್ಯನ್ತರಂ ಕಲಾಶಬ್ದವಾಚ್ಯಾನಾಂ ಪ್ರಾಣಾನಾಂ ಪರಸ್ಮಿನ್ ಆತ್ಮನಿ ಪ್ರಲಯಂ ದರ್ಶಯತಿ "ಏವಮೇವಾಸ್ಯ ಪರಿದ್ರಷ್ಟುರಿಮಾಃ ಷೋಡಶಕಲಾಃ ಪುರುಷಾಯಣಾಃ ಪುರುಷಂ ಪ್ರಾಪ್ಯಾಸ್ತಂ ಗಚ್ಛನ್ತಿ"(ಪ್ರ ೬-೫) ಇತಿ। ಇತಿ ಪರೇಣಾತ್ಮನಾ ಅವಿಭಾಗಂ ಗಚ್ಛನ್ತಿ ಇತಿ ದರ್ಶಿತಮ್। ನ ತರ್ಹಿ ಮೃತಃ। ನ ಹಿ। ಮೃತಶ್ಚಾಯಮ್। ಯಸ್ಮಾತ್ ಸ ಉಚ್ಛ್ವಯತಿ ಉಚ್ಛೂನತಾಂ ಪ್ರತಿಪದ್ಯತೇ। ಆಧ್ಮಾಯತಿ ಬಾಹ್ಯೇನ ವಾಯುನಾ ಪೂರ್ಯತೇ ದೃತಿವತ್। ಆಧ್ಮಾತೋ ಮೃತಃ ಶೇತೇ ನಿಶ್ಚೇಷ್ಟಃ। ಬನ್ಧನನಾಶೇ ಮುಕ್ತಸ್ಯ ನ ಕ್ವಚಿದ್ಗಮನಮ್ ಇತಿ ವಾಕ್ಯಾರ್ಥಃ ॥

(ಭಾಷ್ಯಾರ್ಥ)

ಹೆಚ್ಚಿನ ಮೃತ್ಯುವಾದ ಪರಮಾತ್ಮದರ್ಶನದಿಂದ ಮೃತ್ಯುವು ಭಕ್ಷಿತವಾಗಲು, ಈ ಮುಕ್ತನಾದ ಜ್ಞಾನಿಯಿರುವನಲ್ಲ, ಆ ಈ ಪುರುಷನು ಎಲ್ಲಿ ಎಂದರೆ ಯಾವ ಕಾಲ

ದಲ್ಲಿ ಸಾಯುವನೋ, ಈ ಸಾಯುವ ಬ್ರಹ್ಮಜ್ಞಾನಿಯಿಂದ[1] ಪ್ರಾಣಗಳು, ವಾಗಾದಿ ಗ್ರಹಗಳೂ, ಒಳಗಿದ್ದು (ಅವುಗಳಿಗೆ) ಪ್ರಯೋಜಕವಾಗಿರುವ ವಾಸನಾರೂಪವಾದ ನಾಮಾದಿ ಅತಿಗ್ರಹಗಳು ಮೇಲಕ್ಕೆ ಹೋಗುವವೋ ಉತ್ಕ್ರಮಣವಾಗುವವೊ ಅಥವಾ ಇಲ್ಲವೊ ?

ಯಾಜ್ಞವಲ್ಕ್ಯನು 'ಇಲ್ಲ' ಎಂದನು. ಉತ್ಕ್ರಮಣವಾಗುವದಿಲ್ಲ. ಇಲ್ಲಿಯೇ ಇವನಲ್ಲಿಯೇ, ಈ ಪರಮಾತ್ಮನೊಡನೆ ಅವಿಭಾಗವನ್ನು ಹೊಂದುತ್ತವೆ. ಜ್ಞಾನಿಯಲ್ಲಿ ಕಾರ್ಯಗಳೂ ಕರಣಗಳೂ ತಮಗೆ ಕಾರಣವಾಗಿರುವ ಪರಬ್ರಹ್ಮತತ್ತ್ವದಲ್ಲಿ ಸೇರಿಕೊಳ್ಳುವವು, ಒಂದಾಗಿ ಹೊಂದಿಕೊಳ್ಳುವವು, ಅಲೆಗಳು ಸಮುದ್ರದಲ್ಲಿ (ಅಡಗುವಂತೆ) ಅಡಗಿಕೊಳ್ಳುವವು ಎಂದರ್ಥ. ಆದ್ದರಿಂದಲೇ ಮತ್ತೊಂದು ಶ್ರುತಿಯು "ಹೀಗೆಯೇ ಈ ಪರಿದ್ರಷ್ಟೃವಿನ ಈ ಹದಿನಾರು ಕಲೆಗಳು ಪುರುಷನ ಕಡೆಗೆ ಹೋಗಿ ಪುರುಷನನ್ನು ಸೇರಿ ಅಸ್ತವನ್ನು ಹೊಂದುವವು" (ಪ್ರ. ೬-೫) ಎಂದು ಕಲಾಶಬ್ದವಾಚ್ಯವಾಗಿರುವ ಪ್ರಾಣಗಳು ಪರಮಾತ್ಮನಲ್ಲಿ ಪ್ರಲಯವಾಗುತ್ತವೆ ಎಂದು ತಿಳಿಸುತ್ತದೆ.[2] ಹೀಗೆ (ಪ್ರಾಣಗಳು) ಪರಮಾತ್ಮನಲ್ಲಿ ಅವಿಭಾಗವನ್ನು ಹೊಂದುತ್ತವೆ ಎಂದು ತಿಳಿಸಿದ್ದಾಯಿತು.

ಹಾಗಾದರೆ (ಅವನು) ಸಾಯಲಿಲ್ಲ! ಎಂದರೆ ಹಾಗಲ್ಲ. ಅವನು ಸತ್ತು (ಇರುತ್ತಾನೆ). ಏಕೆಂದರೆ ಅವನು ಉಬ್ಬಿಕೊಳ್ಳುವನು, ದಪ್ಪನಾಗುತ್ತಾನೆ, ತುಂಬಿಕೊಳ್ಳುತ್ತಾನೆ, ತಿದಿಯಹಾಗೆ ಹೊರಗಿನ ವಾಯುವಿನಿಂದ ತುಂಬಿಕೊಳ್ಳುತ್ತಾನೆ; ತುಂಬಿಕೊಂಡು ಯಾವ ವ್ಯಾಪಾರವೂ ಇಲ್ಲದೆ ಸತ್ತು ಮಲಗಿರುತ್ತಾನೆ.[3] ಬಂಧನವು ನಾಶವಾದರೆ ಮುಕ್ತನು ಎಲ್ಲಿಗೂ ಹೋಗುವದಿಲ್ಲ ಎಂಬುದು (ಒಟ್ಟು)ವಾಕ್ಯದ ಅರ್ಥವು.

---

1. ಇಲ್ಲಿ ಶರೀರಪ್ರಧಾನವಾಗಿಯೇ ಜ್ಞಾನಿಯನ್ನು ಹೇಳಿರುತ್ತದೆ. ಶರೀರವನ್ನು ಬಿಟ್ಟು ಹೋಗುವವೊ, ಇಲ್ಲವೊ ? ಎಂದು ಪ್ರಶ್ನೆ.

2. ಮುಂಡಕದಲ್ಲಿ ಕಲೆಗಳು ಬೇರೆ ಕಡೆಗೆ ಹೋಗುವವು ಎಂದು ಹೇಳಿರುವದು ವ್ಯವಹಾರದೃಷ್ಟಿಯಿಂದ, ಪ್ರಶ್ನದಲ್ಲಿ ಹೇಳಿರುವದು ಜ್ಞಾನಿಯ ದೃಷ್ಟಿಯಿಂದ. ಸೂ. ಭಾ. ೪-೨-೧೫. ಇದು ಆತ್ಯಂತಿಕಪ್ರಲಯವೆಂಬುದಕ್ಕೆ ಸೂ. ಭಾ. ೪-೨-೧೬ನ್ನು ನೋಡಿ.

3. ಇಲ್ಲಿ ಹೇಳಿರುವವೆಲ್ಲ ದೇಹಧರ್ಮಗಳಾದ್ದರಿಂದ ದೇಹದಿಂದ ಪ್ರಾಣಗಳು ಹೊರಟು ಹೋಗುವದಿಲ್ಲವೆಂದೇ ಅರ್ಥ. ಆದ್ದರಿಂದ ಮುಂದೆ ೪-೬-೬ರಲ್ಲಿ 'ಅವನ ಪ್ರಾಣಗಳು ಹೋಗುವದಿಲ್ಲ' ಎಂಬ ವಾಕ್ಯಕ್ಕೂ ದೇಹವನ್ನು ಬಿಟ್ಟು ಹೋಗುವದಿಲ್ಲ ಎಂದೇ ಅರ್ಥಮಾಡಬೇಕು. ಸೂ. ಭಾ. ೪-೨-೧೪.

# ಮುಕ್ತನಿಗೆ ಎಲ್ಲವೂ ಆತ್ಮನಲ್ಲಿ ಸೇರಿಹೋಗುತ್ತದೆ

(ಉಪನಿಷತ್ತು)

**ಯಾಜ್ಞವಲ್ಕ್ಯೇತಿ ಹೋವಾಚ ಯತ್ರಾಯಂ ಪುರುಷೋ ಮ್ರಿಯತೇ ಕಿಮೇನಂ ನ ಜಹಾತೀತಿ ನಾಮೇತ್ಯನನ್ತಂ ವೈ ನಾಮಾನನ್ತಾ ವಿಶ್ವೇ ದೇವಾ ಅನನ್ತಮೇವ ಸ ತೇನ ಲೋಕಂ ಜಯತಿ ॥ ೧೨ ॥**

೧೨. 'ಯಾಜ್ಞವಲ್ಕ್ಯನೆ, ಎಂದನು. 'ಈ ಪುರುಷನು ಎಲ್ಲಿ ಸಾಯುತ್ತಾನೋ ಇವನನ್ನು ಯಾವದು ಬಿಡುವದಿಲ್ಲ?' 'ನಾಮವು. ನಾಮವು ಅನಂತವಷ್ಟೆ, ವಿಶ್ವೇದೇವರೂ ಅನಂತರು; ಅವನು ಅದರಿಂದ ಅನಂತವಾದ ಲೋಕವನ್ನೇ ಗೆದ್ದುಕೊಳ್ಳುತ್ತಾನೆ.'

(ಭಾಷ್ಯ)

೨೩. ಮುಕ್ತಸ್ಯ ಕಿಂ ಪ್ರಾಣಾ ಏವ ಸಮವನೀಯನ್ತೇ ಆಹೋಸ್ವಿತ್ ತತ್ಪ್ರಯೋಜಕಮಪಿ ಸರ್ವಮ್, ಅಥ[1] ಪ್ರಾಣಾ ಏವ ನ ತತ್ಪ್ರಯೋಜಕಂ ಸರ್ವಮ್ ಪ್ರಯೋಜಕೇ ವಿದ್ಯಮಾನೇ ಪುನಃ ಪ್ರಾಣಾನಾಂ ಪ್ರಸಙ್ಗಃ। ಅಥ ಸರ್ವಮೇವ ಕಾಮಕರ್ಮಾದಿ, ತತೋ ಮೋಕ್ಷ ಉಪಪದ್ಯತೇ ಇತ್ಯೇವಮರ್ಥ ಉತ್ತರಃ ಪ್ರಶ್ನಃ। ಯಾಜ್ಞವಲ್ಕ್ಯೇತಿ ಹೋವಾಚ। ಯತ್ರಾಯಂ ಪುರುಷೋ ಮ್ರಿಯತೇ ಕಿಮೇನಂ ನ ಜಹಾತೀತಿ? ಆಹೇತರಃ ನಾಮೇತಿ। ಸರ್ವಂ ಸಮವನೀಯತೇ ಇತ್ಯರ್ಥಃ। ನಾಮಮಾತ್ರಂ ತು ನ ಲೀಯತೇ। ಆಕೃತಿ ಸಂಬನ್ಧಾತ್। ನಿತ್ಯಂ ಹಿ ನಾಮ। ಅನನ್ತಂ ವೈ ನಾಮ। ನಿತ್ಯತ್ವಮೇವ ಆನನ್ತ್ಯಂ ನಾಮ್ನಃ। ತದಾನನ್ತ್ಯಾಧಿಕೃತಾ ಅನನ್ತಾ ವೈ ವಿಶ್ವೇದೇವಾಃ। ಅನನ್ತಮೇವ ಸ ತೇನ ಲೋಕಂ ಜಯತಿ। ತನ್ನಾಮಾನನ್ತ್ಯಾಧಿ ಕೃತಾನ್ ವಿಶ್ವಾನ್ ದೇವಾನ್ ಆತ್ಮತ್ವೇನ ಉಪೇತ್ಯ ತೇನ ಆನನ್ತ್ಯದರ್ಶನೇನ ಅನನ್ತಮೇವ ಲೋಕಂ ಜಯತಿ ॥

(ಭಾಷ್ಯಾರ್ಥ)

ಮುಕ್ತನ ಪ್ರಾಣಗಳು ಮಾತ್ರ (ಪರಮಾತ್ಮನಲ್ಲಿ) ಸೇರಿಹೋಗುವವೋ ಅಥವಾ ಅವಕ್ಕೆ ಪ್ರೇರಕವಾಗಿರುವದೆಲ್ಲವೂ (ಸೇರಿಹೋಗುವದೊ)? ಪ್ರಾಣಗಳು ಮಾತ್ರವೇ (ಸೇರಿಹೋಗುತ್ತವೆ). ಅದಕ್ಕೆ ಪ್ರೇರಕವಾಗಿರುವದೆಲ್ಲ (ಸೇರಿಹೋಗುವದಿಲ್ಲ ಎನ್ನುವದಾದರೆ (ಆ) ಪ್ರೇರಕವು ಇದ್ದರೆ ಮತ್ತೆ ಪ್ರಾಣಗಳು (ತೋರಿಕೊಳ್ಳುವ) ಪ್ರಸಂಗವು ಬರುವದು. ಹಾಗಿಲ್ಲದೆ ಕಾಮ ಕರ್ಮ- ಮುಂತಾದ

---

1. ಇದು 'ಯದಿ' ಎಂದಿದ್ದರೆ ಚೆನ್ನಾಗಿತ್ತೆಂದು ತೋರುವದು. ಅಚ್ಚಿನ ಪಾಠವೇನೋ ಹೀಗೆಯೇ ಇದೆ.

ದ್ದೆಲ್ಲವೂ[1] (ಸೇರಿಹೋಗುತ್ತದೆ) ಎಂದರೆ ಆಗ ಮೋಕ್ಷವಾಗುವದು ಯುಕ್ತವಾಗುತ್ತದೆ ಎಂಬೀ ಕಾರಣದಿಂದ ಮುಂದಿನ ಪ್ರಶ್ನೆ( ಯನ್ನು ಮಾಡಿರುತ್ತದೆ).

'ಯಾಜ್ಞವಲ್ಕ್ಯನೆ' ಎಂದನು. ಎಲ್ಲಿ ಈ ಪುರುಷನು ಸಾಯುವನೋ (ಆಗ) ಇವನನ್ನು ಏನು ಬಿಟ್ಟುಹೋಗದೆ ಇರುವದು ? (ಇದಕ್ಕೆ) ಇನ್ನೊಬ್ಬನಾದ (ಯಾಜ್ಞವಲ್ಕ್ಯನು) ಹೇಳುತ್ತಾನೇನೆಂದರೆ, ನಾಮವು (ಬಿಟ್ಟುಹೋಗದೆ ಇರುತ್ತದೆ). ಎಲ್ಲವೂ ಸೇರಿಹೋಗುತ್ತದೆ ಎಂದರ್ಥ. ನಾಮವೊಂದು ಮಾತ್ರ ಅಡಗದೆ ಇರುತ್ತದೆ.[2] ಆಕೃತಿಗೆ ಸಂಬಂಧಿಸಿರುವದರಿಂದ[3] ನಾಮವು ನಿತ್ಯವಲ್ಲವೆ ? "ನಾಮವು ಅನಂತವಷ್ಟೆ" (ಎಂಬಲ್ಲಿ) ನಾಮವು ಅನಂತವಾಗಿರುವದೆಂದರೆ ನಿತ್ಯವಾಗಿರುವದು. ಆ ಆನಂತ್ಯಕ್ಕೆ ಅಭಿಮಾನಿಗಳಾದ ವಿಶ್ವೇದೇವರೂ ಅನಂತರಾಗಿರುತ್ತಾರೆ. ಅವನು ಅದರಿಂದ ಅನಂತವಾದ ಲೋಕವನ್ನೇ ಗೆದ್ದುಕೊಳ್ಳುತ್ತಾನೆ ; ಆ ನಾಮಾನಂತ್ಯಕ್ಕೆ ಅಭಿಮಾನಿಗಳಾದ ವಿಶ್ವೇದೇವರುಗಳನ್ನು ತಾನೇ ಎಂದಿಟ್ಟುಕೊಂಡರೆ ಆ ಆನಂತ್ಯೋಪಾಸನೆಯಿಂದ (ಉಪಾಸಕನು) ಅನಂತಲೋಕವನ್ನೇ ಗೆದ್ದುಕೊಳ್ಳುತ್ತಾನೆ.[4]

## ಗ್ರಹಾತಿಗ್ರಹಕ್ಕೆ ಕರ್ಮವೇ ಪ್ರಯೋಜಕ

(ಉಪನಿಷತ್ತು)

**ಯಾಜ್ಞವಲ್ಕ್ಯೇತಿ ಹೋವಾಚ ಯತ್ರಾಸ್ಯ ಪುರುಷಸ್ಯ ಮೃತಸ್ಯಾಗ್ನಿಂ ವಾಗಪ್ಯೇತಿ ವಾತಂ ಪ್ರಾಣಶ್ಚಕ್ಷುರಾದಿತ್ಯಂ ಮನಶ್ಚಂದ್ರಂ ದಿಶಃ**

---

1. ಇದೆಲ್ಲ ಪ್ರಾಣಿಗಳಿಗೆ ಪ್ರಯೋಜಕವು ; ಕಾಮುಕರ್ಮಾದಿಗಳಿಂದಲೇ ಅವು ವ್ಯಾಪಾರ ಮಾಡುವವು.

2. ಇದು ವ್ಯವಹಾರದೃಷ್ಟಿಯಿಂದ, ಜ್ಞಾನಿಯ ದೃಷ್ಟಿಯಿಂದ ಎಲ್ಲವೂ ಬ್ರಹ್ಮವೇ ಆಗಿರುವದರಿಂದ ನಾಮವೂ ಉಳಿಯುವದಿಲ್ಲ. ಮುಂದೆ ಹೇಳಿರುವ ನಾಮನಿತ್ಯತ್ವಕ್ಕೆ ಅದು ಅಸತ್ಯವೆಂಬುದು ವಿರುದ್ಧವಲ್ಲ.

3. ವ್ಯಕ್ತಿಗೆ ಸಂಬಂಧಪಟ್ಟಿದ್ದಲ್ಲ, ಜಾತಿಯನ್ನೇ ಹೇಳುತ್ತದೆ ; ಆದ್ದರಿಂದ.

4. ಬ್ರಹ್ಮವಾಗಿರುವೆನು ಎಂಬ ದರ್ಶನದಿಂದ ವಿಶ್ವೇದೇವರನ್ನು ತಾನೆಂದು ಸಾಕ್ಷಾತ್ಕಾರ ಮಾಡಿಕೊಂಡು ಅನಂತವಾದ ಲೋಕವನ್ನು ಪಡೆದುಕೊಳ್ಳುವನು ಎಂದು ಜ್ಞಾನವನ್ನು ಹೊಗಳಿದೆ ಎಂದು ಆ|| ಟೀ||. ನಾಮಾನಂತ್ಯಕ್ಕೆ ಅನಂತರಾದ ವಿಶ್ವೇದೇವರು ಅಭಿಮಾನಿಗಳಾದ್ದರಿಂದ ಅದನ್ನು ವಿಶ್ವೇದೇವರೆಂದು ಉಪಾಸನೆಮಾಡಿದವನಿಗೆ ಈ ಫಲವೆಂಬುದು ಅವಾಂತರಫಲವು. ನಾಮವು ಅನಂತವಾದ್ದರಿಂದ ಅದೊಂದು ಉಳಿಯುವದೇ ಹೊರತು ಮತ್ತೇನೂ ಉಳಿಯುವದಿಲ್ಲ ಎಂಬುದರಲ್ಲಿ ವಾಕ್ಯಕ್ಕೆ ಪರಮತಾತ್ಪರ್ಯ ಎಂದು ವರ್ಣಿಸುವದು ಅದಕ್ಕಿಂತ ಉತ್ತಮವೆಂದು ತೋರುತ್ತದೆ.

**ಶ್ರೋತ್ರಂ ಪೃಥಿವೀಗ್ಂ ಶರೀರವಾಕಾಶವಾತ್ಮೌಷಧೀರ್ಲೋಮಾನಿ ವನಸ್ಪತೀನ್ ಕೇಶಾ ಅಪ್ಸು ಲೋಹಿತಂ ಚ ರೇತಶ್ಚ ನಿಧೀಯತೇ ಕ್ವಾಯಂ ತದಾ ಪುರುಷೋ ಭವತೀತ್ಯಾಹರ ಸೋಮ್ಯ ಹಸ್ತಮಾರ್ತಭಾಗಾಽಽವಾಮೇವೈತಸ್ಯ ವೇದಿಷ್ಯಾವೋ ನ ನಾವೇತತ್ಸಜನ ಇತಿ। ತೌ ಹೋತ್ಕ್ರಮ್ಯ ಮನ್ತ್ರಯಾಂಚಕ್ರಾತೇ ತೌ ಹ ಯದೂಚತುಃ ಕರ್ಮ ಹೈವ ತದೂಚತುರಥ ಯತ್ ಪ್ರಶಶಗ್ಂಸತುಃ ಕರ್ಮ ಹೈವ ತತ್ಪ್ರಶಶಗ್ಂಸತುಃ ಪುಣ್ಯೋ ವೈ ಪುಣ್ಯೇನ ಕರ್ಮಣಾ ಭವತಿ ಪಾಪಃ ಪಾಪೇನೇತಿ ತತೋ ಹ ಜಾರತ್ಕಾರವ ಆರ್ತಭಾಗ ಉಪರರಾಮ ॥ ೧೩ ॥**

೧೩. 'ಯಾಜ್ಞವಲ್ಕ್ಯನೆ' ಎಂದನು. "ಎಲ್ಲಿ ಈ ಪುರುಷನು ಮೃತವಾದಾಗ ವಾಕ್ಕು ಅಗ್ನಿಯಲ್ಲಿಯೂ ಪ್ರಾಣವು ವಾಯುವಿನಲ್ಲಿಯೂ ಚಕ್ಷುಸ್ಸು ಆದಿತ್ಯನಲ್ಲಿಯೂ ಮನಸ್ಸು ಚಂದ್ರನಲ್ಲಿಯೂ ಶ್ರೋತ್ರವು ದಿಕ್ಕುಗಳಲ್ಲಿಯೂ ಶರೀರವು ಪೃಥಿವಿಯಲ್ಲಿಯೂ ಆತ್ಮವು ಆಕಾಶದಲ್ಲಿಯೂ ಲೋಮಗಳು ಓಷಧಿಗಳಲ್ಲಿಯೂ ಕೇಶಗಳು ವನಸ್ಪತಿಗಳಲ್ಲಿಯೂ ರಕ್ತವೂ ರೇತಸ್ಸೂ ಅಪ್ಪಿನಲ್ಲಿಯೂ ಸೇರಿಕೊಳ್ಳುವವೋ, ಆಗ ಪುರುಷನು ಎಲ್ಲಿರುತ್ತಾನೆ ?" ಸೋಮ್ಯನಾದ ಆರ್ತಭಾಗನೆ, ಕೈಯನ್ನು ಕೊಡು, ನಾವೇ ಇದನ್ನು ಗೊತ್ತುಪಡಿಸೋಣ., ನಾವು ಈ ಜನರ ನಡುವೆ (ಗೊತ್ತುಪಡಿಸಲಾರೆವು." ಅವರು ಹೊರಗೆ ಹೋಗಿ ಆಲೋಚನೆಮಾಡಿದರು. ಅವರು ಹೇಳಿದರಲ್ಲ, ಕರ್ಮವನ್ನೇ ಅವರು ಹೇಳಿದ್ದು ; ಮತ್ತು ಅವರು ಹೊಗಳಿದರಲ್ಲ, ಕರ್ಮವನ್ನೇ ಅವರು ಹೊಗಳಿದ್ದು. ಪುಣ್ಯಕರ್ಮದಿಂದ ಪುಣ್ಯವೇ ಆಗುತ್ತದೆ. ಪಾಪದಿಂದ ಪಾಪವೇ (ಆಗುತ್ತದೆ). ಆ ಬಳಿಕ ಜಾರತ್ಕಾರವ ಆರ್ತಭಾಗನು ಸುಮ್ಮನಾದನು.

## ಮುಂದಿನ ಕಂಡಿಕೆಯ ಸಂಬಂಧ

(ಭಾಷ್ಯ)

೨೪. ಗ್ರಹಾತಿಗ್ರಹರೂಪಂ ಬನ್ಧನಮುಕ್ತಂ ಮೃತ್ಯುರೂಪಮ್ । ತಸ್ಯ ಚ ಮೃತ್ಯೋರ್ಮೃತ್ಯುಸದ್ಭಾವಾತ್ ಮೋಕ್ಷಶ್ಚ ಉಪಪದ್ಯತೇ। ಸ ಚ ಮೋಕ್ಷಃ ಗ್ರಹಾತಿಗ್ರಹರೂಪಾಣಾಮ್ ಇಹೈವ ಪ್ರಲಯಃ ಪ್ರದೀಪನಿರ್ವಾಣವತ್। ಯತ್ತದ್ ಗ್ರಹಾತಿಗ್ರಹಾಖ್ಯಂ ಬನ್ಧನಂ ಮೃತ್ಯುರೂಪಮ್, ತಸ್ಯ ಯತ್ ಪ್ರಯೋ

ಜಕಮ್, ತತ್ಸ್ವರೂಪನಿರ್ಧಾರಣಾರ್ಥಮ್ ಇದಮಾರಭ್ಯತೇ । ಯಾಜ್ಞವಲ್ಕ್ಯೇತಿ ಹೋವಾಚ ॥

(ಭಾಷ್ಯಾರ್ಥ)

ಗ್ರಹಾತಿಗ್ರಹಗಳ ರೂಪವಾದ ಬಂಧನವಾದ ಮೃತ್ಯುಸ್ವರೂಪವನ್ನು ಹೇಳಿದ್ದಾಯಿತು. ಆ ಮೃತ್ಯುವಿಗೆ ಮೃತ್ಯುವು ಇರುವದರಿಂದ ಮೋಕ್ಷವೂ ಆಗಬಹುದಾಗುತ್ತದೆ. ಆ ಮೋಕ್ಷವೆಂದರೆ ಗ್ರಹಾತಿಗ್ರಹಗಳು ಇಲ್ಲಿಯೇ, ಪ್ರದೀಪವು ಆರಿಹೋಗುವಂತೆ,[1] ಪ್ರಲಯವಾಗುವದು ಆ ಗ್ರಹಾತಿಗ್ರಹಗಳೆಂಬ, ಬಂಧನ ರೂಪವಾದ ಮೃತ್ಯುರೂಪವುಂಟಲ್ಲ, ಅದಕ್ಕೆ ಯಾವದು ಪ್ರಯೋಜಕವೋ ಅದರ ಸ್ವರೂಪವನ್ನು ಗೊತ್ತುಪಡಿಸುವದಕ್ಕಾಗಿ ಈ ಗ್ರಂಥವನ್ನು ಪ್ರಾರಂಭಿಸಿರುತ್ತದೆ 'ಯಾಜ್ಞವಲ್ಕ್ಯನೆ' ಎಂದನು (ಎಂದು ಮುಂತಾಗಿ).

## ಭರ್ತೃಪ್ರಪಂಚರ ಮತದಲ್ಲಿ ಗ್ರಂಥಸಂಬಂಧ

(ಭಾಷ್ಯ)

೨೫. ಅತ್ರ ಕೇಚಿತ್ ವರ್ಣಯನ್ತಿ । ಗ್ರಹಾತಿಗ್ರಹಸ್ಯ ಸಪ್ರಯೋಜಕಸ್ಯ ವಿನಾಶೇಽಪಿ ಕಿಲ ನ ಮುಚ್ಯತೇ । ನಾಮಾವಶಿಷ್ಟಃ ಅವಿದ್ಯಯಾ ಊಷರಸ್ಥಾನೀಯಯಾ ಸ್ವಾತ್ಮಪ್ರಭವಯಾ ಪರಮಾತ್ಮನಃ ಪರಿಚ್ಛಿನ್ನಃ, ಭೋಜ್ಯಾಚ್ಚ ಜಗತೋ ವ್ಯಾವೃತ್ತಃ ಉಚ್ಛಿನ್ನಕಾಮಕರ್ಮಾ ಅನ್ತರಾಲೇ ವ್ಯವತಿಷ್ಠತೇ । ತಸ್ಯ ಪರಮಾತ್ಮೈಕತ್ವದರ್ಶನೇನ ದ್ವೈತದರ್ಶನಮ್ ಅಪನೇತವ್ಯಮ್ ಇತ್ಯತಃ ಪರಂ ಪರಮಾತ್ಮದರ್ಶನಮ್ ಆರಬ್ಧವ್ಯಮ್ ಇತ್ಯೇವಮ್ ಅಪವರ್ಗಾಖ್ಯಾಮ್ ಅನ್ತರಾಲಾವಸ್ಥಾಂ ಪರಿಕಲ್ಪ್ಯ ಉತ್ತರಗ್ರನ್ಥಸಂಬನ್ಧಂ ಕುರ್ವನ್ತಿ ॥

(ಭಾಷ್ಯಾರ್ಥ)

ಇಲ್ಲಿ ಕೆಲವರು (ಸಂಬಂಧವನ್ನು) ವರ್ಣಿಸಿರುವದು (ಹೇಗೆಂದರೆ): ಪ್ರಯೋಜಕಸಹಿತವಾದ ಗ್ರಹಾತಿಗ್ರಹವು ವಿನಾಶವಾದರೂ ಮುಕ್ತಿಯಾಗುವದಿಲ್ಲವಂತೆ! ನಾಮಾವಶಿಷ್ಟನಾಗಿ (ಹೊಲದಲ್ಲಿ) ಚೌಳುನೆಲದಂತಿರುವ ತನ್ನ ಆತ್ಮನಿಂದ ಉಂಟಾಗಿರುವ ಅವಿದ್ಯೆಯಿಂದ ಪರಮಾತ್ಮನಿಗಿಂತ ಬೇರ್ಪಟ್ಟವನಾಗಿ, ಭೋಜ್ಯವಾದ ಜಗತ್ತಿಗಿಂತಲೂ ಬೇರೆಯಾಗಿ ಕಾಮಕರ್ಮಗಳು ನಾಶವಾದವನಾಗಿ ನಡುವೆ ಇದ್ದುಕೊಂಡಿರುತ್ತಾನೆ. ಅವನಿಗೆ ಪರಮಾತ್ಮೈಕತ್ವದೃಜ್ಞಾನದಿಂದ ದ್ವೈತದರ್ಶನ

---

1. ಆರಿಹೋದ ದೀಪವು ಮತ್ತೆಲ್ಲಿಗೂ ಹೋಗದೆ ಇದ್ದಲ್ಲಿಯೇ ಅವ್ಯಕ್ತವಾಗುವಂತೆ ಬ್ರಹ್ಮದಲ್ಲಿ ಅಡಕವಾಗುವದೇ ಮುಕ್ತಿ ಎಂಬುವದನ್ನು ಮುಂ. ೩-೨-೬ (ಭಾ. ಭಾ. ೧೧೮), ಐ. ಭಾ. ೨-೧-೬ (ಭಾ. ಭಾ. ೮೧) ಇವುಗಳಲ್ಲಿಯೂ ಕಾಣಬಹುದು.

ವನ್ನು ಕಳೆಯಬೇಕಾಗಿರುತ್ತದೆ. ಆದ್ದರಿಂದ ಪರಮಾತ್ಮದರ್ಶನವನ್ನು ಪ್ರಾರಂಭಿಸ ಬೇಕಾಗಿದೆ. ಹೀಗೆಂದು ಅಪವರ್ಗವೆಂಬ ನಡುವಿನ ಅವಸ್ಥೆಯನ್ನು ಕಲ್ಪಿಸಿ ಮುಂದಿನ ಗ್ರಂಥದ ಸಂಬಂಧವನ್ನು ಮಾಡಿಕೊಂಡಿರುತ್ತಾರೆ.[1]

## ಗ್ರಹಾತಿಗ್ರಹಗಳು ನಾಶವಾದರೆ ಜ್ಞಾನಕ್ಕೆ ಸಾಧನವಿರಲಾರದು

(ಭಾಷ್ಯ)

೨೬. ತತ್ರ ವಕ್ತವ್ಯಮ್ ವಿಶೀರ್ಣೇಷು ಕರಣೇಷು ವಿದೇಹಸ್ಯ ಪರಮಾತ್ಮ ದರ್ಶನಶ್ರವಣಮನನನಿದಿಧ್ಯಾಸನಾನಿ ಕಥಮಿತಿ? ಸಮವನೀತಪ್ರಾಣಸ್ಯ ಹಿ ನಾಮಮಾತ್ರಾವಶಿಷ್ಟಸ್ಯ ಇತಿ ತ್ವೈರುಚ್ಯತೇ। "ಮೃತಃ ಶೇತೇ" (೩-೨-೧೧) ಇತಿ ಹಿ ಉಕ್ತಮ್। ನ ಮನೋರಥೇನಾಪಿ ಏತತ್ ಉಪಪಾದಯಿತುಂ ಶಕ್ಯತೇ। ಅಥ ಜೀವನ್ನೇವ ಅವಿದ್ಯಾಮಾತ್ರಾವಶಿಷ್ಟೋ ಭೋಜ್ಯಾತ್ ಅಪಾವೃತ್ತಃ ಇತಿ ಪರಿ ಕಲ್ಪ್ಯತೇ ತತ್ತು ಕಿಂನಿಮಿತ್ತಮ್ ಇತಿ ವಕ್ತವ್ಯಮ್। ಸಮುಸ್ತದ್ವೈತೈಕತ್ವಾತ್ಮ ಪ್ರಾಪ್ತಿನಿಮಿತ್ತಮ್ ಇತಿ ಯದ್ಯುಚ್ಯೇತ ತತ್ ಪೂರ್ವಮೇವ ನಿರಾಕೃತಮ್। ಕರ್ಮಸಹಿತೇನ ದ್ವೈತೈಕತ್ವಾತ್ಮದರ್ಶನೇನ ಸಂಪನ್ನೋ ವಿದ್ವಾನ್ ಮೃತಃ ಸಮವನೀತಪ್ರಾಣಃ ಜಗದಾತ್ಮತ್ವಂ ಹಿರಣಗರ್ಭಸ್ವರೂಪಂ ವಾ ಪ್ರಾಪ್ನುಯಾತ್ ಅಸಮವನೀತಪ್ರಾಣಃ ಭೋಜ್ಯಾತ್ ಜೀವನ್ನೇವ ವಾ ವ್ಯಾವೃತ್ತೋ ವಿರಕ್ತಃ ಪರ ಮಾತ್ಮದರ್ಶನಾಭಿಮುಖಃ ಸ್ಯಾತ್। ನ ಚ ಉಭಯಮ್ ಏಕಪ್ರಯತ್ನನಿಷ್ಪಾ ದ್ಯೇನ ಸಾಧನೇನ ಲಭ್ಯಮ್। ಹಿರಣ್ಯಗರ್ಭಪ್ರಾಪ್ತಿಸಾಧನಂ ಚೇತ್ ನ ತತೋ ವ್ಯಾವೃತ್ತಿಸಾಧನಮ್। ಪರಮಾತ್ಮಾಭಿಮುಖೀಕರಣಸ್ಯ ಭೋಜ್ಯಾದ್ ವ್ಯಾವೃತ್ತೇಃ

---

1. ಈ ಪಕ್ಷವನ್ನು **ವಾರ್ತಿಕ**ದಲ್ಲಿ ವಿಸ್ತಾರವಾಗಿ ಅನುವಾದಮಾಡಿ ಖಂಡಿಸುತ್ತದೆ. ಸಮುಚ್ಚಯಾನುಷ್ಠಾನದಿಂದ ಎರಡು ದೇಹಗಳೂ ನಾಶವಾಗಿರುತ್ತವೆಯಾದರೂ ಅಷ್ಟರಿಂದ ಮುಕ್ತಿ ಯಿಲ್ಲ; ಏಕೆಂದರೆ ಅದರಿಂದ ಕಾಮಕರ್ಮಗಳು ಮಾತ್ರ ನಿವೃತ್ತವಾಗಿರುತ್ತವೆ. ಪುರುಷನನ್ನು ವಿಕಾರಗೊಳಿಸುವದಕ್ಕೆ ಕಾಮಕರ್ಮಗಳು ಕಾರಣ; ಅವಿದ್ಯೆಯು ಜೀವನನ್ನು ಬೇರ್ಪಡಿಸುವದಕ್ಕೆ ಕಾರಣವು. ಆ ಅವಿದ್ಯೆಯನ್ನು ಪ್ರಲಯಮಾಡಿಕೊಂಡಲ್ಲದೆ ಜೀವನು ಬ್ರಹ್ಮದಲ್ಲಿ ಲಯವಾಗು ವದಿಲ್ಲ. ಆದ್ದರಿಂದ ಅವಿದ್ಯೆಯನ್ನು ನಾಶಗೊಳಿಸುವದಕ್ಕಾಗಿ ಅದ್ವೈತದರ್ಶನವು ಬೇಕು. ಅಲ್ಲಿಯ ವರೆಗೆ ಅಂತರಾಲಾವಸ್ಥೆಯಲ್ಲಿರುತ್ತಾನೆ ಎಂಬುದು ಭರ್ತೃಪ್ರಪಂಚರ ಮತ. ಜ್ಞಾನದಿಂದ ಕರ್ಮವು ನಾಶವಾಗುವದು ಶ್ರುತಿಯುಕ್ತಿಸಿದ್ಧ, ಹಿರಣ್ಯಗರ್ಭಪ್ರಾಪ್ತಿಯಿಂದ ಅದು ಆಗಲಾರದು; ಅವಿದ್ಯೆಯು ಆಚ್ಛಾದಕವೇ ಹೊರತು ಎಂದಿಗೂ ಪರಿಚ್ಛೇದಕವಲ್ಲ. ಬ್ರಹ್ಮದಿಂದಲೇ ಅವಿದ್ಯೆಯುಂಟಾಗಿದೆ ಎಂದರೆ ಬ್ರಹ್ಮವಿರುವಲ್ಲಿ ಅದು ನಾಶವಾಗಲಾರದು; ಕಾಮಕರ್ಮಗಳಿದ್ದರೆ ಅವಿದ್ಯೆಯುಂಟಾಗುವ ದೆಂಬುದೂ ಸಲ್ಲದು ಎಂದು ಮುಂತಾಗಿ ಈ ಮತವನ್ನು **ವಾರ್ತಿಕ**ದಲ್ಲಿ ಖಂಡಿಸಿದೆ.

ಸಾಧನಂ ಚೇತ್ ನ ಹಿರಣ್ಯಗರ್ಭಪ್ರಾಪ್ತಿಸಾಧನಮ್। ನ ಹಿ ಯದ್ ಗತಿಸಾಧನಂ ತದ್ ಗತಿನಿವೃತ್ತೇರಪಿ। ಅಥ ಮೃತ್ವಾ ಹಿರಣ್ಯಗರ್ಭಂ ಪ್ರಾಪ್ಯ ತತಃ ಸಮುಪನೀತ ಪ್ರಾಣೋ ನಾಮಮಾತ್ರಾವಶಿಷ್ಟಃ ಪರಮಾತ್ಮಜ್ಞಾನೇ ಅಧಿಕ್ರಿಯತೇ। ತತಃ ಅಸ್ಮದಾದ್ಯರ್ಥಂ ಪರಮಾತ್ಮಜ್ಞಾನೋಪದೇಶೋಽನರ್ಥಕಃ ಸ್ಯಾತ್। ಸರ್ವೇಷಾಂ ಹಿ ಬ್ರಹ್ಮವಿದ್ಯಾ ಪುರುಷಾರ್ಥಾಯ ಉಪದಿಶ್ಯತೇ "ತದ್ಯೋ ಯೋ ದೇವಾನಾಮ್" (೧-೪-೧೦) ಇತ್ಯಾದ್ಯಯಾ ಶ್ರುತ್ಯಾ। ತಸ್ಮಾತ್ ಅತ್ಯನ್ತನಿಕೃಷ್ಟಾ ಶಾಸ್ತ್ರಬಾಹ್ಯೈವ ಇಯಂ ಕಲ್ಪನಾ ॥

(ಭಾಷ್ಯಾರ್ಥ)

ಕರಣಗಳು ನಾಶವಾಗಿರುವಲ್ಲಿ ದೇಹವಿಲ್ಲದವನಿಗೆ ಪರಮಾತ್ಮನ ದರ್ಶನ, ಶ್ರವಣ, ಮನನ, ನಿದಿಧ್ಯಾಸನ– ಇವುಗಳು ಹೇಗೆ (ಆಗಬೇಕೆಂಬುದನ್ನು) ಇಲ್ಲಿ (ಇವರು) ಹೇಳಬೇಕಾಗುತ್ತದೆ. ಪ್ರಾಣಗಳು ಸೇರಿಹೋಗಿ ನಾಮಮಾತ್ರವು ಉಳಿದಿರುವವನಿಗೆ (ಅದ್ವೈತದರ್ಶನವಾಗಬೇಕು)–ಎಂದಲ್ಲವೆ, ಅವರು ಹೇಳುತ್ತಾರೆ? "ಸತ್ತು ಮಲಗಿರುತ್ತಾನೆ" (೩–೨-೧೧) ಎಂದಲ್ಲವೆ (ಶ್ರುತಿಯಲ್ಲಿ) ಹೇಳಿದೆ? ಮನೋರಥದಿಂದಲೂ ಇದನ್ನು ಸರಿಹೊಂದಿಸುವದು ಆಗಲಾರದು.

ಇನ್ನು ಬದುಕಿರುವಾಗಲೇ ಅವಿದ್ಯಾಮಾತ್ರವು ಉಳಿದುಕೊಂಡು ಭೋಜ್ಯದಿಂದ ಬೇರ್ಪಟ್ಟಿರುತ್ತಾನೆ ಎಂದು ಕಲ್ಪಿಸುತ್ತಾರಾದರೆ, ಅದು ಯಾವ ನಿಮಿತ್ತದಿಂದ (ಪ್ರಾಪ್ತವಾಗುತ್ತದೆ) ಎಂಬುದನ್ನು (ಅವರು) ಹೇಳಬೇಕಾಗುವದು. ಸಮಸ್ತ ದ್ವೈತೈಕತ್ವದ ಆತ್ಮಪ್ರಾಪ್ತಿಯೆಂಬ ನಿಮಿತ್ತದಿಂದ (ಪ್ರಾಪ್ತವಾಗುತ್ತದೆ) ಎನ್ನುವದಾದರೆ, ಅದನ್ನು ಹಿಂದೆಯೇ ನಿರಾಕರಿಸಿರುತ್ತೇವೆ.[1] ಕರ್ಮಸಹಿತವಾದ ದ್ವೈತೈಕತ್ವದ ಆತ್ಮದರ್ಶನದಿಂದ ಕೂಡಿರುವ ಜ್ಞಾನಿಯು ಸತ್ತು ಪ್ರಾಣಗಳೆಲ್ಲ (ಬ್ರಹ್ಮದಲ್ಲಿ) ಸೇರಿಹೋದವನಾಗಿ ಜಗದಾತ್ಮತ್ವವೆಂಬ ಹಿರಣ್ಯಗರ್ಭಸ್ವರೂಪವನ್ನಾದರೂ ಪಡೆಯಬೇಕು, ಅಥವಾ (ಬ್ರಹ್ಮದಲ್ಲಿ) ಪ್ರಾಣಗಳು ಸೇರದೆ ಬದುಕಿರುವಾಗಲೇ ಭೋಜ್ಯ(ಜಗತ್ತಿನಿಂದ) ಹಿಂತಿರುಗಿ ವಿರಕ್ತನಾಗಿ ಪರಮಾತ್ಮದರ್ಶನಕ್ಕೆ ತಿರುಗಿದವನಾದರೂ ಆಗಬೇಕು. (ಈ) ಎರಡೂ ಒಂದೇ ಪ್ರಯತ್ನದಿಂದುಂಟಾಗುವ ಸಾಧನದಿಂದ ಸಿಕ್ಕಲಾರದು. ಹಿರಣ್ಯಗರ್ಭಪ್ರಾಪ್ತಿಗೆ ಸಾಧನವಾದರೆ ಆ (ಹಿರಣ್ಯಗರ್ಭನಿಂದ) ಹಿಂತಿರುಗುವದಕ್ಕೆ ಸಾಧನವಲ್ಲ; ಭೋಜ್ಯದಿಂದ ಹಿಂತಿರುಗಿ ಪರಮಾತ್ಮನ ಕಡೆಗೆ ತಿರುಗಿಸುವದಕ್ಕೆ ಸಾಧನವಾದರೆ ಹಿರಣ್ಯಗರ್ಭಪ್ರಾಪ್ತಿಗೆ ಸಾಧನವಿಲ್ಲ. ಯಾವದು ಗಮನಕ್ಕೆ ಸಾಧನವೋ ಅದೇ ಗಮನವು ತೊಲಗುವದಕ್ಕೂ ಸಾಧನವಾಗಲಾರದಷ್ಟೆ?

1. ಭಾ. ಭಾ. ೧೬ರಲ್ಲಿ

ಹೀಗಲ್ಲದೆ ಸತ್ತು ಹಿರಣ್ಯಗರ್ಭನನ್ನು ಪಡೆದುಕೊಂಡು ಆಮೇಲೆ ಪ್ರಾಣಗಳೆಲ್ಲ ಸೇರಿಹೋಗಿ ನಾಮಮಾತ್ರ ಉಳಿದವನು ಪರಮಾತ್ಮಜ್ಞಾನಕ್ಕೆ ಅಧಿಕಾರಿಯು ಎನ್ನುವದಾದರೆ ಆಗ ನಮ್ಮಂಥವರಿಗೆ ಪರಮಾತ್ಮಜ್ಞಾನವನ್ನು ಉಪದೇಶಿಸುವದು ವ್ಯರ್ಥವಾಗುವದು. "ಅಲ್ಲಿ ದೇವತೆಗಳೊಳಗೆ ಯಾವಯಾವನು" (೧-೪-೧೦) ಎಂದು ಮುಂತಾಗಿರುವ ಶ್ರುತಿಯಿಂದ ಎಲ್ಲರಿಗೂ ಬ್ರಹ್ಮವಿದ್ಯೆಯನ್ನು ಪುರುಷಾರ್ಥಕ್ಕಾಗಿ ಉಪದೇಶಮಾಡಿರುತ್ತದೆಯಷ್ಟೆ?[1] ಆದ್ದರಿಂದ ಈ(ವಾದಿಗಳ) ಕಲ್ಪನೆಯು ಅತ್ಯಂತನಿಕೃಷ್ಟವಾದದ್ದು, ಶಾಸ್ತ್ರಕ್ಕೆ ಹೊರಚ್ಚಾದದ್ದೇ.

## ಶ್ರುತಿಯ ವ್ಯಾಖ್ಯಾನ

(ಭಾಷ್ಯ)

೨೭. ಪ್ರಕೃತಂ ತು ವರ್ತಯಿಷ್ಯಾಮಃ । ತತ್ರ ಕೇನ ಪ್ರಯುಕ್ತಂ ಗ್ರಹಾತಿಗ್ರಹಲಕ್ಷಣಂ ಬನ್ಧನಮ್ ಇತ್ಯೇತತ್ ನಿರ್ದಿಧಾರಯಿಷಯಾ ಆಹ- ಯತ್ರಾಸ್ಯ ಪುರುಷಸ್ಯ ಅಸಮ್ಯಗ್ದರ್ಶಿನಃ ಶಿರಃಪಾಣ್ಯಾದಿಮತಃ ಮೃತಸ್ಯ ವಾಕ್ ಅಗ್ನಿಮ್ ಅಪ್ಯೇತಿ, ವಾತಂ ಪ್ರಾಣಮ್ ಅಪ್ಯೇತಿ, ಚಕ್ಷುಃ ಆದಿತ್ಯಮ್ ಅಪ್ಯೇತಿ ಇತಿ ಸರ್ವತ್ರ ಸಂಬಧ್ಯತೇ । ಮನಶ್ಚನ್ದ್ರಮ್, ದಿಶಃ ಶ್ರೋತ್ರಮ್, ಪೃಥಿವೀಂ ಶರೀರಮ್, ಆಕಾಶಮ್ ಆತ್ಮಾ ಇತ್ಯತ್ರ ಆತ್ಮಾಧಿಷ್ಠಾನಂ ಹೃದಯಾಕಾಶಮ್ ಉಚ್ಯತೇ । ಸ ಆಕಾಶಮ್ ಅಪ್ಯೇತಿ । ಓಷಧೀರಪಿಯನ್ತಿ ಲೋಮಾನಿ । ವನಸ್ಪತೀನ್ ಅಪಿಯನ್ತಿ ಕೇಶಾಃ । ಅಪ್ಸು ಲೋಹಿತಂ ಚ ರೇತಶ್ಚ ನಿಧೀಯತೇ ಇತಿ ಪುನರಾದಾನಲಿಙ್ಗಮ್ । ಸರ್ವತ್ರ ಹಿ ವಾಗಾದಿಶಬ್ದೇನ ದೇವತಾಃ ಪರಿಗೃಹ್ಯನ್ತೇ ನ ತು ಕರಣಾನ್ಯೇವ ಅಪಕ್ರಾಮನ್ತಿ ಪ್ರಾಙ್ಮೋಕ್ಷಾತ್ । ತತ್ರ ದೇವತಾಭಿಃ ಅನಧಿಷ್ಠಿತಾನಿ ಕರಣಾನಿ ನ್ಯಸ್ತದಾತ್ರಾದ್ಯುಪಮಾನಾನಿ ವಿದೇಹಶ್ಚ ಕರ್ತಾ ಪುರುಷೋಽಸ್ವತನ್ತ್ರಃ ಕಿಮಾಶ್ರಿತೋ ಭವತಿ? ಇತಿ ಪೃಚ್ಛ್ಯತೇ 'ಕ್ವಾಯಂ ತದಾ ಪುರುಷೋ ಭವತಿ' ಇತಿ । ಕಿಮಾಶ್ರಿತಸ್ತದಾ ಪುರುಷೋ ಭವತೀತಿ । ಯಮ್ ಆಶ್ರಯಮ್ ಆಶ್ರಿತ್ಯ ಪುನಃ ಕಾರ್ಯಕರಣಸಂಘಾತಮ್ ಉಪಾದತ್ತೇ, ಯೇನ ಗ್ರಹಾತಿಗ್ರಹಲಕ್ಷಣಂ ಬನ್ಧನಂ ಪ್ರಯುಜ್ಯತೇ ತತ್ ಕಿಮ್ ? ಇತಿ ಪ್ರಶ್ನಃ ॥

(ಭಾಷ್ಯಾರ್ಥ)

ಇನ್ನು ಪ್ರಕೃತವಾದದ್ದನ್ನು ಅನುಸರಿಸೋಣ. ಇಲ್ಲಿ ಗ್ರಹಾತಿಗ್ರಹಲಕ್ಷಣವಾದ ಬಂಧನವು ಏತರಿಂದ ಪ್ರೇರಿತವಾಗಿ (ಉಂಟಾಗುತ್ತದೆ) ಎಂಬಿದನ್ನು ಗೊತ್ತುಪಡಿಸುವದಕ್ಕಾಗಿ ಹೇಳುತ್ತಾನೆ ಎಲ್ಲಿ ಈ ಪುರುಷನ ಸಮ್ಯಗ್ದರ್ಶಿಯಲ್ಲದ ತಲೆ ಕೈ ಮುಂತಾದವುಗಳನ್ನುಳ್ಳವನಾಗಿ ಸತ್ತವನ- ವಾಕ್ಕು ಅಗ್ನಿ

1. ನಿಮ್ಮ ಪಕ್ಷದಲ್ಲಿ ಆ ಉಪದೇಶವು ವ್ಯರ್ಥ ಎಂದು ಅಭಿಪ್ರಾಯ.

ಯಲ್ಲಿ ಸೇರಿಕೊಳ್ಳುತ್ತದೆಯೋ, ಪ್ರಾಣವು (ಘ್ರಾಣವು) ವಾಯುವಿನಲ್ಲಿ ಸೇರಿಕೊಳ್ಳುತ್ತದೆಯೋ, ಚಕ್ಷುಸ್ಸು ಆದಿತ್ಯನಲ್ಲಿ ಸೇರಿಕೊಳ್ಳುತ್ತದೆಯೋ– ಎಂದು (ಅಪ್ಯೇತಿ ಎಂಬ ಮಾತನ್ನು) ಎಲ್ಲಾ ಕಡೆಯಲ್ಲಿಯೂ ಸಂಬಂಧಿಸಿಕೊಳ್ಳಬೇಕು. ಮನಸ್ಸು ಚಂದ್ರನಲ್ಲಿಯೂ, ಶ್ರೋತ್ರವು ದಿಕ್ಕುಗಳಲ್ಲಿಯೂ, ಶರೀರವು ಪೃಥಿವಿಯನ್ನೂ, ಆತ್ಮನು ಆಕಾಶವನ್ನೂ–ಇಲ್ಲಿ (ಆತ್ಮನೆಂದು) ಆತ್ಮನಿಗೆ ಅಧಿಷ್ಠಾನವಾಗಿರುವ ಹೃದಯಾಕಾಶವನ್ನು ಹೇಳಿದೆ. ಈ (ಆತ್ಮನು) ಆಕಾಶವನ್ನು–ಸೇರಿಕೊಳ್ಳುತ್ತಾನೋ, ಗಿಡಗಳಲ್ಲಿ ಮೈಗೂದಲುಗಳು ಸೇರಿಕೊಳ್ಳುತ್ತವೆಯೋ, ತಲೆಗೂದಲುಗಳು ಮರಗಳನ್ನು ಸೇರಿಕೊಳ್ಳುತ್ತವೆಯೋ, ಅಪ್ಪಿನಲ್ಲಿ ರಕ್ತವೂ ರೇತಸ್ಸೂ ಇಡಲ್ಪಟ್ಟಿರುತ್ತದೆಯೋ– (ಇಡಲ್ಪಟ್ಟಿರುತ್ತದೆ) ಎಂಬುದು ಮತ್ತೆ (ಇವನ್ನು ಜೀವನು) ತೆಗೆದುಕೊಳ್ಳುತ್ತಾನೆಂಬುದಕ್ಕೆ ಗುರುತು. (ಇಲ್ಲಿ) ಎಲ್ಲಾ ಕಡೆಯಲ್ಲಿಯೂ ವಾಕ್ಕೇ ಮುಂತಾದ ಶಬ್ದಗಳಿಂದ ದೇವತೆಗಳನ್ನೇ ತೆಗೆದುಕೊಳ್ಳಬೇಕು; ಅಷ್ಟೇ ಹೊರತು ಮೋಕ್ಷವಾಗುವದಕ್ಕಿಂತ ಮೊದಲು (ಆಯಾ) ಕರಣಗಳೇ[1] ಹೊರಟುಹೋಗುತ್ತವೆ (ಎನ್ನುವದ)ಕ್ಕಿಲ್ಲ. ಇಲ್ಲಿ ದೇವತೆಗಳು ಅಧಿಷ್ಠಾನಮಾಡದಿರುವ[2] ಕರಣಗಳು (ಒಂದು) ಕಡೆ ಇಟ್ಟ ಕುಡುಗೋಲು ಮುಂತಾದವುಗಳಂತೆ ಇರುವವು, ಕರ್ತೃವಾದ ಪುರುಷನೋ ದೇಹರಹಿತನಾಗಿರುವದರಿಂದ ಸ್ವತಂತ್ರನಾಗಿರುವದಿಲ್ಲ; (ಆದ್ದರಿಂದ ಇವನು) ಏನನ್ನು ಆಶ್ರಯಿಸಿಕೊಂಡಿರುತ್ತಾನೆ ಎಂದು 'ಈ ಪುರುಷನು ಆಗ ಎಲ್ಲಿರುತ್ತಾನೆ ?' ಎಂಬ ವಾಕ್ಯದಿಂದ ಕೇಳಿರುತ್ತದೆ. ಪುರುಷನು ಆಗ ಏನನ್ನು ಆಶ್ರಯಿಸಿಕೊಂಡಿರುತ್ತಾನೆ ? ಯಾವ ಆಶ್ರಯವನ್ನು ಆಶ್ರಯಿಸಿಕೊಂಡು ಮತ್ತೆ ಕಾರ್ಯಕರಣಸಂಘಾತವನ್ನು ತೆಗೆದುಕೊಳ್ಳುತ್ತಾನೋ, ಯಾವದರಿಂದ ಗ್ರಹಾತಿಗ್ರಹಲಕ್ಷಣವಾದ ಬಂಧನವು (ಮತ್ತೆ) ಪ್ರೇರಿತವಾಗುವದೋ ಅದು ಯಾವದು ?–ಎಂದು ಪ್ರಶ್ನೆ.

(ಭಾಷ್ಯ)

೨೮. ಅತ್ರೋಚ್ಯತೇ । ಸ್ವಭಾವಯದೃಚ್ಛಾಕಾಲಕರ್ಮದೈವವಿಜ್ಞಾನಮಾತ್ರಶೂನ್ಯಾನಿ ವಾದಿಭಿಃ ಪರಿಕಲ್ಪಿತಾನಿ। ಅತಃ ಅನೇಕವಿಪ್ರತಿಪತ್ತಿಸ್ಥಾನ

---

1. ಶರೀರಪ್ರಧಾನವಾಗಿರುವ ಜೀವನನ್ನೇ ಇಲ್ಲಿ ಪುರುಷನೆಂದಿದೆ; ಹಿಂದಿನ ಕಂಡಿಕೆಯಂತೆ ಅಶರೀರನಾದ ಮುಕ್ತಪುರುಷನನ್ನಲ್ಲ.

2. ಮೇಲಿದ್ದುಕೊಂಡು ಆಳದಿರುವ ಎಂದರ್ಥ. ವಾಗಾದ್ಯುಪಕಾರಿಗಳಾದ ಅಗ್ನ್ಯಾದಿಗಳು ಇನ್ನುಮೇಲೆ ವಾಗಾದಿಗಳಿಗೆ ಉಪಕಾರಮಾಡಿ ಕೆಲಸಮಾಡಿಸುವದಿಲ್ಲ ಎಂಬರ್ಥದಲ್ಲಿಯೇ ವಾಕ್ಕು ಅಗ್ನಿಯಲ್ಲಿ ಸೇರುತ್ತದೆ ಎಂದು ಮುಂತಾಗಿ ಹೇಳಿದೆ ಎಂದರ್ಥ. ಸೂ. ಭಾ. ೩-೧-೪ (ಭಾ. ಭಾ. ೨೧೭) ನ್ನು ನೋಡಿ; ಪ್ರಾಣಗಳು ಜೀವನೊಡನೆಯೆ ಹೋಗುತ್ತವೆ ಎಂದು ಮುಂದೆ ೪-೪-೨ರಲ್ಲಿ ಹೇಳಿಯೂ ಇದೆ.

ತ್ವಾತ್ ನೈವ ಜಲ್ಪನ್ಯಾಯೇನ ವಸ್ತುನಿರ್ಣಯಃ । ಅತ್ರ ವಸ್ತುನಿರ್ಣಯಂ ಚೇತ್ ಇಚ್ಛಸಿ ಆಹರ ಸೋಮ್ಯ ಹಸ್ತಮ್ ಆರ್ತಭಾಗ ಹೇ, ಆವಾಮೇವ ಏತಸ್ಯ ತ್ವತ್ಪೃಷ್ಟಸ್ಯ ವೇದಿತವ್ಯಂ ಯತ್ತತ್ ವೇದಿಷ್ಯಾವಃ ನಿರೂಪಯಿಷ್ಯಾವಃ ಕಸ್ಮಾತ್ ? ನ ನೌ ಅವಯೋಃ ಏತದ್ವಸ್ತು ಸಜನೇ ಜನಸಮುದಾಯೇ ನಿರ್ಣೇತುಂ ಶಕ್ಯತೇ । ಅತ ಏಕಾನ್ತಂ ಗಮಿಷ್ಯಾವೋ ವಿಚಾರಣಾಯ । ತೌ ಹ ಇತ್ಯಾದಿ ಶ್ರುತಿವಚನಮ್ । ತೌ ಯಾಜ್ಞವಲ್ಕ್ಯಾರ್ತಭಾಗೌ ಏಕಾನ್ತಂ ಗತ್ವಾ ಕಿಂ ಚಕ್ರತುರಿತಿ ? ಉಚ್ಯತೇ ತೌ ಹ ಉತ್ಕ್ರಮ್ಯ ಸಜನಾತ್ ದೇಶಾತ್ ಮನ್ತ್ರಯಾಂಚಕ್ರಾತೇ । ಆದೌ ಲೌಕಿಕವಾದಿಪಕ್ಷಾಣಾಮ್ ಏಕೈಕಂ ಪರಿಗೃಹ್ಯ ವಿಚಾರಿತವನ್ತೌ । ತೌ ಹ ವಿಚಾರ್ಯ ಯತ್ ಊಚತುಃ ಅಪೋಹ್ಯ ಪೂರ್ವಪಕ್ಷಾನ್ ಸರ್ವಾನೇವ ತತ್ ಶೃಣು। ಕರ್ಮ ಹೈವ ಆಶ್ರಯಂ ಪುನಃ ಪುನಃ ಕಾರ್ಯಕರಣೋಪಾದಾನ ಹೇತುಂ ತತ್ ತತ್ರ ಊಚತುಃ ಉಕ್ತವನ್ತೌ । ನ ಕೇವಲಂ ಕಾಲಕರ್ಮ ದೇವೇಶ್ವರೇಷು ಅಭ್ಯುಪಗತೇಷು ಹೇತುಷು ಯತ್ ಪ್ರಶಶಂಸತುಃ ತೌ ಕರ್ಮ ಹೈವ ತತ್ ಪ್ರಶ ಶಂಸತುಃ । ಯಸ್ಮಾತ್ ನಿರ್ಧಾರಿತಮೇತತ್ ಕರ್ಮಪ್ರಯುಕ್ತಂ ಗ್ರಹಾತಿಗ್ರಹಾದಿ ಕಾರ್ಯಕರಣೋಪಾದಾನಂ ಪುನಃ ಪುನಃ, ತಸ್ಮಾತ್ ಪುಣ್ಯೋ ವೈ ಶಾಸ್ತ್ರವಿಹಿ ತೇನ ಪುಣ್ಯೇನ ಕರ್ಮಣಾ ಭವತಿ ತದ್ವಿಪರೀತೇನ ವಿಪರೀತೋ ಭವತಿ ಪಾಪಃ ಪಾಪೇನ ಇತಿ । ಏವಂ ಯಾಜ್ಞವಲ್ಕ್ಯೇನ ಪ್ರಶ್ನೇಷು ನಿರ್ಣೀತೇಷು ತತಃ ಅಶಕ್ಯ ಪ್ರಕಮ್ಪ್ಯತ್ವಾತ್[1] ಯಾಜ್ಞವಲ್ಕ್ಯಸ್ಯ, ಹ ಜಾರತ್ಕಾರವ ಆರ್ತಭಾಗ ಉಪ ರರಾಮ ॥

(ಭಾಷ್ಯಾರ್ಥ)

ಇದಕ್ಕೆ (ಯಾಜ್ಞವಲ್ಕ್ಯನು) ಹೇಳುತ್ತಾನೆ ಸ್ವಭಾವ, ಯದೃಚ್ಛೆ, ಕಾಲ, ಕರ್ಮ, ದೈವ, ಬರಿಯ ವಿಜ್ಞಾನ, ಶೂನ್ಯ-(ಇವುಗಳೇ ಆಶ್ರಯ ಎಂದು) ವಾದಿಗಳು[2] ಕಲ್ಪಿಸಿರುತ್ತಾರೆ ಆದ್ದರಿಂದ ಅನೇಕರಿಗೆ ವಿರುದ್ಧಪ್ರತಿಪತ್ತಿಯುಂಟಾಗುವದರಿಂದ (ಈ) ವಸ್ತುವನ್ನು ಜಲ್ಪನ್ಯಾಯದಿಂದ ಗೊತ್ತುಪಡಿಸುವದು ಆಗುವದಿಲ್ಲ. ಇಲ್ಲಿ ವಸ್ತುವನ್ನು ನಿರ್ಣಯಿಸಬೇಕೆಂದು (ನೀನು) ಬಯಸುವೆಯಾದರೆ ಎಲೈ ಆರ್ತಭಾಗನೆ, ಕೈಯನ್ನು ತಾ; ನಾವಿಬ್ಬರೇ ನೀನು ಕೇಳುವ ಈ (ಪ್ರಶ್ನೆಗೆ) ತಿಳಿದುಕೊಳ್ಳಬೇಕಾದ (ಉತ್ತರವು) ಯಾವದೋ ಅದನ್ನು ತಿಳಿದುಕೊಳ್ಳೋಣ,

---

1. ಅಶಕ್ಯಪ್ರಕಮ್ಪ್ಯತ್ವಾತ್ ಎಂಬ ಆ॥ ಪಾಠಕ್ಕಿಂತ ಇದು ಮೇಲು.

2. ಸ್ವಭಾವವು ಕಾರಣವೆಂದೂ ಆಕಸ್ಮಾತ್ತಾಗಿ ಕಾರ್ಯವಾಗುವದೆಂದೂ ಚಾರ್ವಾಕರು ಕಾಲವು ಕಾರಣವೆಂದು ಜ್ಯೋತಿಷ್ಕರು, ದೈವವು ಕಾರಣವೆಂದು ಅದೃಷ್ಟವಾದಿಗಳು, ವಿಜ್ಞಾನ ಅಥವಾ ಶೂನ್ಯವು ಕಾರಣವೆಂದು ಸೌಗತರು.

ಗೊತ್ತುಪಡಿಸಿಕೊಳ್ಳೋಣ. ಏಕೆಂದರೆ (ನೌ=ಆವಯೋಃ) ನಮ್ಮ ಈ ವಸ್ತುವನ್ನು ಜನವಿರುವಲ್ಲಿ ಜನರ ಗುಂಪಿನಲ್ಲಿ ನಿರ್ಣಯಿಸುವದಕ್ಕೆ ಆಗಲಾರದು. ಆದ್ದರಿಂದ ವಿಚಾರಮಾಡುವದಕ್ಕಾಗಿ ಏಕಾಂತಕ್ಕೆ ಹೋಗೋಣ.

"ತೌ ಹ" ಮುಂತಾದ (ಗ್ರಂಥವು) ಶ್ರುತಿಯ ಮಾತು. ಆ ಯಾಜ್ಞವಲ್ಕ್ಯ, ಆರ್ತಭಾಗ–ಇವರು ಏಕಾಂತಕ್ಕೆ ಹೋಗಿ ಏನು ಮಾಡಿದರು? ಎಂದರೆ (ಶ್ರುತಿ) ಹೇಳುತ್ತದೆ. ಆ (ಇಬ್ಬರೂ) ಜನರಿದ್ದ ಸ್ಥಲದಿಂದ ಆಚೆಗೆ ಹೋಗಿ ಆಲೋಚನೆ ಮಾಡಿದರು. ಮೊದಲು ಲೌಕಿಕವಾದಿಗಳ ಪಕ್ಷಗಳಲ್ಲಿ ಒಂದೊಂದನ್ನು ತೆಗೆದು ಕೊಂಡು ವಿಚಾರಮಾಡಿದರು. ಅವರು ವಿಚಾರಮಾಡಿ ಎಲ್ಲಾ ಪೂರ್ವಪಕ್ಷಗಳನ್ನೂ ಅತ್ತ ತಳ್ಳಿ ಏನು ಹೇಳಿದರೆಂದರೆ, ಅದನ್ನು ಕೇಳು (ತತ್=ತತ್ರ) ಅಲ್ಲಿ ಕರ್ಮ ವನ್ನೇ ಆಶ್ರಯವೆಂದು ಮತ್ತೆ ಮತ್ತೆ ಕಾರ್ಯಕರಣ(ಸಂಘಾತ)ವನ್ನು ತೆಗೆದು ಕೊಳ್ಳುವದಕ್ಕೆ ಕಾರಣ ಎಂದು ಹೇಳಿದರು, ಹೇಳಿದವರಾದರೂ ಇಷ್ಟುಮಾತ್ರವಲ್ಲ ಕಾಲ, ಕರ್ಮ, ದೇವ, ಈಶ್ವರ–ಈ ಹೇತುಗಳನ್ನು ಒಪ್ಪಿ ಅವರು ಯಾವದನ್ನು ಹೊಗಳಿದರೆಂದರೆ ಕರ್ಮವನ್ನೇ (ಅವರು) ಹೊಗಳಿದರು.[1]

ಹೀಗೆ ಮತ್ತೆ ಮತ್ತೆ ಗ್ರಹಾತಿಗ್ರಹಾದಿಕಾರ್ಯಕರಣಗಳನ್ನು ಸ್ವೀಕರಿಸು ವದು ಕರ್ಮಪ್ರಯುಕ್ತವೆಂಬುದು ನಿಶ್ಚಿತವಾಯಿತಷ್ಟೆ. ಆದ್ದರಿಂದ ಶಾಸ್ತ್ರವಿಹಿತ ವಾದ ಪುಣ್ಯಕರ್ಮದಿಂದ ಪುಣ್ಯವಾಗುತ್ತದೆ, ಅದಕ್ಕೆ ವಿಪರೀತವಾದ್ದರಿಂದ ವಿಪ ರೀತವಾದದ್ದು ಅಂದರೆ ಪಾಪ(ಕರ್ಮ)ದಿಂದ ಅಪುಣ್ಯವೇ ಆಗುವದು.

ಹೀಗೆ ಯಾಜ್ಞವಲ್ಕ್ಯನು ಪ್ರಶ್ನೆಗಳನ್ನು ನಿರ್ಣಯಿಸಲಾಗಿ ಆ ಬಳಿಕ ಯಾಜ್ಞವಲ್ಕ್ಯನು ಅಲಗಾಡಿಸುವದಕ್ಕೆ ಆಗದವನಾದ್ದರಿಂದ ಜಾರತ್ಕಾರವ ಆರ್ತ ಭಾಗನು ಸುಮ್ಮನಾದನು

---

1. ಈ ಹೇತುಗಳಲ್ಲೆಲ್ಲ ಕರ್ಮವೇ ಮುಖ್ಯವೆಂದು ಹೇಳಿರುವರು; ಇದೇ ಶ್ರುತಿಸಮ್ಮತ ವಾದ ಪಕ್ಷ.

# ಎರಡನೆಯ ಬ್ರಾಹ್ಮಣದ ಸಾರ

೧–೯. ಆಗ ಈ ಯಾಜ್ಞವಲ್ಕ್ಯನನ್ನು ಜಾರತ್ಕಾರವಆರ್ತಭಾಗನು ಹೀಗೆಂದು ಕೇಳಿದನು: 'ಯಾಜ್ಞವಲ್ಕ್ಯನೆ, ಗ್ರಹಗಳು ಎಷ್ಟು? ಅತಿಗ್ರಹಗಳು ಎಷ್ಟು?' ಗ್ರಹಗಳು ಎಂಟು, ಅತಿಗ್ರಹಗಳು ಎಂಟು ಎಂದು ಯಾಜ್ಞವಲ್ಕ್ಯನು ಹೇಳಿದ್ದಕ್ಕೆ ಅವು ಯಾವವು ಎಂದು ಕೇಳಿದನು. ಯಾಜ್ಞವಲ್ಕ್ಯನು: ಘ್ರಾಣವೇ ಗ್ರಹವು, ಅದು ಗಂಧವೆಂಬ ಅತಿಗ್ರಹದಿಂದ ಹಿಡಿಯಲ್ಪಟ್ಟಿದೆ; ವಾಕ್ಕೇ ಗ್ರಹವು, ಅದು ನಾಮವೆಂಬ ಅತಿಗ್ರಹದಿಂದ ಹಿಡಿಯಲ್ಪಟ್ಟಿದೆ; ಜಿಹ್ವೆಯೇ ಗ್ರಹವು, ಅದು ರಸವೆಂಬ ಅತಿಗ್ರಹದಿಂದ ಹಿಡಿಯಲ್ಪಟ್ಟಿದೆ; ಚಕ್ಷುಸ್ಸೇ ಗ್ರಹವು, ಅದು ರೂಪವೆಂಬ ಅತಿಗ್ರಹದಿಂದ ಹಿಡಿಯಲ್ಪಟ್ಟಿದೆ, ಶ್ರೋತ್ರವೇ ಗ್ರಹವು, ಅದು ಶಬ್ದವೆಂಬ ಅತಿಗ್ರಹದಿಂದ ಹಿಡಿಯಲ್ಪಟ್ಟಿದೆ; ಮನಸ್ಸೇ ಗ್ರಹವು, ಅದು ಕಾಮವೆಂಬ ಅತಿಗ್ರಹದಿಂದ ಹಿಡಿಯಲ್ಪಟ್ಟಿದೆ, ತ್ವಕ್ಕೇ ಗ್ರಹವು ಅದು ಸ್ಪರ್ಶವೆಂಬ ಅತಿಗ್ರಹದಿಂದ ಹಿಡಿಯಲ್ಪಟ್ಟಿದೆ. ಹೀಗೆ ಎಂಟು ಗ್ರಹಗಳು, ಎಂಟು ಅತಿಗ್ರಹಗಳು— ಎಂದು.

೧೦. ಆರ್ತಭಾಗನು 'ಯಾಜ್ಞವಲ್ಕ್ಯನೆ, ಎಲ್ಲವೂ ಮೃತ್ಯುವಿಗೆ ಅನ್ನವಾಗಿದೆಯಷ್ಟೆ; ಈ ಮೃತ್ಯುವಿಗೂ ಮೃತ್ಯುವಾಗಿರುವುದು ಇದೆಯೋ?' ಎಂದನು. ಮೃತ್ಯುವಿಗೂ ಮೃತ್ಯುವಾದ ಸರ್ವಮೃತ್ಯುವುಂಟು, ಏಕೆಂದರೆ ಅಗ್ನಿ ಎಂಬ ಮೃತ್ಯುವಿಗೆ ಅಪ್ಪೆಂಬ ಮೃತ್ಯುವಿರುವದು ಲೋಕದಲ್ಲಿ ಕಂಡಿದೆ. ಇದರಂತೆ ಗ್ರಹಾತಿಗ್ರಹಗಳೆಂಬ ಮೃತ್ಯುವನ್ನು ಆತ್ಮಜ್ಞಾನವೆಂಬ ಮೃತ್ಯು ತಿಂದುಹಾಕುವದು— ಎಂದು ಯಾಜ್ಞವಲ್ಕ್ಯನು ಉತ್ತರವನ್ನು ಕೊಟ್ಟನು.

೧೧–೧೨. ಆರ್ತಭಾಗನು 'ಯಾಜ್ಞವಲ್ಕ್ಯನೆ, ಜ್ಞಾನಿಯು ಮೃತನಾದಾಗ ಇವನ ಶರೀರವನ್ನು ಬಿಟ್ಟು ಪ್ರಾಣಗಳು ಉತ್ಕ್ರಾಂತವಾಗುವವೋ ಇಲ್ಲವೊ ?'— ಎಂದು ಕೇಳಿದನು. ಯಾಜ್ಞವಲ್ಕ್ಯನು "ಇಲ್ಲ ಅವನ ಪ್ರಾಣಗಳು ಈ ಪರಮಾತ್ಮನಲ್ಲಿಯೇ ಸೇರಿ ಒಂದಾಗಿಬಿಡುವವು" ಎಂದನು. ಜ್ಞಾನಿಯು ಸತ್ತಾಗ ಏನು ಉಳಿದುಕೊಂಡಿರುತ್ತದೆ ?" ಎಂದು ಆರ್ತಭಾಗನು ಕೇಳಲು "ನಾಮವೊಂದು ವ್ಯವಹಾರದೃಷ್ಟಿಯಿಂದ ಉಳಿದುಕೊಂಡಿರುತ್ತದೆ; ಪರಮಾರ್ಥವಾಗಿ ಏನೇನೂ ಉಳಿಯುವದೇ ಇಲ್ಲ" ಎಂದು ಯಾಜ್ಞವಲ್ಕ್ಯನು ಉತ್ತರವನ್ನು ಕೊಟ್ಟನು.

೧೩. ಆರ್ತಭಾಗನು "ಯಾಜ್ಞವಲ್ಕ್ಯನೆ, ಅಜ್ಞನಾದ ಪುರುಷನ ವಾಕ್ಕಿನಲ್ಲಿ, ಘ್ರಾಣವು ವಾಯುವಿನಲ್ಲಿ, ಚಕ್ಷುಸ್ಸು ಆದಿತ್ಯನಲ್ಲಿ, ಮನಸ್ಸು ಚಂದ್ರನಲ್ಲಿ ಶ್ರೋತ್ರವು ದಿಕ್ಕುಗಳಲ್ಲಿ, ಶರೀರವು ಪೃಥಿವಿಯಲ್ಲಿ, ಹೃದಯಾಕಾಶವು ಆಕಾಶದಲ್ಲಿ, ಮೈಗೂದಲು ಗಿಡಗಳಲ್ಲಿ, ತಲೆಗೂದಲು ಮರಗಳಲ್ಲಿ, ರಕ್ತವೂ ರೇತಸ್ಸೂ ಅಪ್ಪಿನಲ್ಲಿ ಸೇರುತ್ತವೆಯಲ್ಲವೆ? ಆಗ ಇವನು ಏನನ್ನು ಆಶ್ರಯಿಸಿಕೊಂಡಿರುವನು ? ಏತರಿಂದ ಮತ್ತೆ ಇವನು ಶರೀರಗ್ರಹಣವನ್ನು ಮಾಡುವನು ?" ಎಂದು ಕೇಳಿದನು. ಯಾಜ್ಞವಲ್ಕ್ಯನು "ಇದು ಜನರ ಗುಂಪಿನಲ್ಲಿ ಜಲ್ಪದಿಂದ ನಿರ್ಣಯಿಸಬಹುದಾದ

ಪ್ರಶ್ನೆಯಲ್ಲ, ಏಕಾಂತದಲ್ಲಿ ಚರ್ಚಿಸೋಣ ಬಾ" ಎಂದು ಆರ್ತಭಾಗನನ್ನು ಕೈಹಿಡಿದು ಕರೆದುಕೊಂಡುಹೋದನು. ಅವರು ಏಕಾಂತದಲ್ಲಿ ಕರ್ಮವೊಂದೇ ಪುನರ್ಜನ್ಮಕ್ಕೆ ಮುಖ್ಯಹೇತುವೆಂದು ಹೇಳಿದರು; ಇತರ ಕಾರಣಗಳಿದ್ದರೂ ಕರ್ಮವೇ ಮುಖ್ಯಹೇತುವೆಂದು ಅದನ್ನೇ ಹೊಗಳಿದರು. ಈ ರೀತಿಯಲ್ಲಿ ತನ್ನ ಎಲ್ಲಾ ಪ್ರಶ್ನೆಗಳಿಗೂ ಯಾಜ್ಞವಲ್ಕ್ಯನು ಉತ್ತರವನ್ನು ಕೊಟ್ಟಿದ್ದರಿಂದ ಆರ್ತಭಾಗನು ಸುಮ್ಮನಾದನು.

---

# ಮೂರನೆಯ ಅಧ್ಯಾಯ—ಮೂರನೆಯ ಬ್ರಾಹ್ಮಣ

(ಭುಜ್ಯುಪ್ರಶ್ನೆ: ಕರ್ಮಫಲವೆಲ್ಲ ಸಂಸಾರವೇ)

## ಬ್ರಾಹ್ಮಣದ ಸಂಬಂಧ

### ಹಿಂದಿನ ಗ್ರಂಥದ ಸಾರ

(ಭಾಷ್ಯ)

೨೯. ಅಥ ಹೈನಂ ಭುಜ್ಯುರ್ಲಾಹ್ಯಾಯನಿಃ ಪ್ರಪಚ್ಛ | ಗ್ರಹಾತಿಗ್ರಹ ಲಕ್ಷಣಂ ಬನ್ಧನಮುಕ್ತಮ್ | ಯಸ್ಮಾತ್ ಸಪ್ರಯೋಜಕಾತ್ ಮುಕ್ತೋ ಮುಚ್ಯತೇ ಯೇನ ವಾ ಬದ್ಧಃ ಸಂಸರತಿ ಸ ಮೃತ್ಯುಃ | ತಸ್ಮಾಚ್ಚ ಮೋಕ್ಷ ಉಪ ಪದ್ಯತೇ | ಯಸ್ಮಾನ್ಮೃತ್ಯೋರ್ಮೃತ್ಯುರಸ್ತಿ | ಮುಕ್ತಸ್ಯ ಚ ನ ಗತಿಃ ಕ್ವಚಿತ್ | ಸರ್ವೋತ್ಸಾದೋ ನಾಮಮಾತ್ರಾವಶೇಷಃ ಪ್ರದೀಪನಿರ್ವಾಣವತ್ ಇತಿ ಚಾವ ಧೃತಮ್ | ತತ್ರ ಸಂಸರತಾಂ ಮುಚ್ಯಮಾನಾನಾಂ ಚ ಕಾರ್ಯಕರಣಾನಾಂ ಸ್ವಕಾರಣಸಂಸರ್ಗೇ ಸಮಾನೇ ಮುಕ್ತಾನಾಮ್ ಅತ್ಯನ್ತಮೇವ ಪುನರನುಪಾದಾ ನಮ್ | ಸಂಸರತಾಂ ತು ಪುನಃ ಪುನರುಪಾದಾನಂ ಯೇನ ಪ್ರಯುಕ್ತಾನಾಂ ಭವತಿ ತತ್ಕರ್ಮ ಇತ್ಯವಧಾರಿತಮ್ ವಿಚಾರಣಾಪೂರ್ವಕಮ್ | ತತ್ಕ್ಷಯೇ ಚ ನಾಮಾವಶೇಷೇಣ ಸರ್ವೋತ್ಸಾದೋ ಮೋಕ್ಷಃ | ತಚ್ಚ ಪುಣ್ಯಾಪಾಖ್ಯಂ ಕರ್ಮ | "ಪುಣ್ಯೋ ವೈ ಪುಣ್ಯೇನ ಕರ್ಮಣಾ ಭವತಿ ಪಾಪಃ ಪಾಪೇನ" (೩-೨-೧೩) ಇತ್ಯವಧಾರಿತತ್ವಾತ್ ಏತತ್ಕೃತಃ ಸಂಸಾರಃ ||

(ಭಾಷ್ಯಾರ್ಥ)

"ಅಥ ಹೈನಂ ಭುಜ್ಯುರ್ಲಾಹ್ಯಾಯನಿಃ ಪ್ರಪಚ್ಛ" (ಎಂಬ ಬ್ರಾಹ್ಮಣದ ಸಂಬಂಧವೇನೆಂದರೆ), ಗ್ರಹಾತಿಗ್ರಹಲಕ್ಷಣವಾದ ಬಂಧನವನ್ನು ಹೇಳಿದ್ದಾಗಿದೆ. ಸಪ್ರಯೋಜಕವಾದ ಆ(ಗ್ರಹಾತಿಗ್ರಹದಿಂದ) ಮುಕ್ತನಾದವನು ಬಿಡುಗಡೆಯನ್ನು ಹೊಂದುತ್ತಾನೆ. ಅಥವಾ ಅದರಿಂದ ಬದ್ಧನಾದರೆ ಸಂಸಾರವನ್ನು ಪಡೆಯುತ್ತಾನೆ. ಅದೇ ಮೃತ್ಯು. ಆ (ಮೃತ್ಯುವಿನಿಂದ) ಬಿಡುಗಡೆಯಾಗಬಹುದು; ಏಕೆಂದರೆ ಮೃತ್ಯುವಿಗೂ ಮೃತ್ಯುವಿದೆ. ಮುಕ್ತನಾದವನು ಎಲ್ಲಿಗೂ ಹೋಗುವದಿಲ್ಲ; (ಮತ್ತೇ ನೆಂದರೆ) ಎಲ್ಲವೂ ನಾಶವಾಗಿ ಪ್ರದೀಪವು ಆರಿಹೋಗುವಂತೆ ನಾಮಮಾತ್ರವು ಉಳಿದುಕೊಳ್ಳುವದು ಎಂದೂ ನಿಶ್ಚಯಿಸಿದ್ದಾಯಿತು. ಇಲ್ಲಿ ಸಂಸಾರದಲ್ಲಿ (ತೊಳಲು)ವವರಿಗೂ ಮುಕ್ತರಾಗುವವರಿಗೂ ಕಾರ್ಯಕರಣಗಳು ತಮ್ಮ ಕಾರಣ

ದಲ್ಲಿ ಸಂಬದ್ಧವಾಗಿರುವದೆಂಬುದು ಸಮಾನವಾದರೂ ಮುಕ್ತರಾದವರು (ಅವನ್ನು) ಅತ್ಯಂತವಾಗಿಯೇ ಮತ್ತೆ ಸ್ವೀಕರಿಸದೆ (ಇರುತ್ತಾರೆ); ಆದರೆ ಸಂಸಾರದಲ್ಲಿ (ತೊಳಲು)ವವರೋ ಎಂದರೆ ಮತ್ತೆಮತ್ತೆ (ಅವನ್ನು) ತೆಗೆದುಕೊಳ್ಳುತ್ತಾರಲ್ಲ, ಅದು ಏತರಿಂದ ಪ್ರೇರಿತರಾದವರಿಗೆ ಆಗುತ್ತದೆಯೋ ಅದು ಕರ್ಮವು ಎಂದು ವಿಚಾರಪೂರ್ವಕವಾಗಿ ನಿಶ್ಚಯಿಸಿದ್ದಾಯಿತು. ಆ (ಕರ್ಮವು) ಕ್ಷಯವಾದರೇ ನಾಮಮಾತ್ರವು ಉಳಿದುಕೊಳ್ಳುವ ಎಲ್ಲವೂ ನಾಶವಾಗುವ ಮೋಕ್ಷವು. ಆ ಕರ್ಮವು ಪುಣ್ಯಪಾಪ ಎಂಬ ಹೆಸರುಳ್ಳದ್ದು. "ಪುಣ್ಯಕರ್ಮದಿಂದ ಪುಣ್ಯವೇ ಆಗುತ್ತದೆ, ಪಾಪದಿಂದ ಪಾಪ(ವಾಗುತ್ತದೆ)" (೩-೨-೧೩) ಎಂದು ನಿಶ್ಚಯ ವಾಗಿರುವದರಿಂದ ಇದರಿಂದಲೇ ಸಂಸಾರವಾಗುತ್ತದೆ.

## ಮುಂದಿನ ಗ್ರಂಥದ ಸಂಬಂಧ

(ಭಾಷ್ಯ)

೩೦. ತತ್ರ ಅಪುಣ್ಯೇನ ಸ್ಥಾವರಜಙ್ಗಮೇಷು ಸ್ವಭಾವದುಃಖಬಹುಲೇಷು ನರಕತಿರ್ಯಕ್ಪ್ರೇತಾದಿಷು ಚ ದುಃಖಮ್ ಅನುಭವತಿ ಪುನಃಪುನರ್ಜಾಯಮಾನೋ ಮ್ರಿಯಮಾಣಶ್ಚ ಇತ್ಯೇತತ್ ರಾಜವರ್ತ್ಮವತ್ ಸರ್ವಲೋಕಪ್ರಸಿದ್ಧಮ್ । ಯತ್ತು ಶಾಸ್ತ್ರೀಯಂ "ಪುಣ್ಯೋ ವೈ ಪುಣ್ಯೇನ ಕರ್ಮಣಾ ಭವತಿ" (೩-೨-೧೦) ತತ್ರೈವ ಆದರಃ ಕ್ರಿಯತ ಇಹ ಶ್ರುತ್ಯಾ । ಪುಣ್ಯಮೇವ ಚ ಕರ್ಮ ಸರ್ವಪುರುಷಾರ್ಥಸಾಧನಮಿತಿ ಸರ್ವೇ ಶ್ರುತಿಸ್ಮೃತಿವಾದಾಃ । ಮೋಕ್ಷಸ್ಯಾಪಿ ಪುರುಷಾರ್ಥತ್ವಾತ್ ತತ್ಸಾಧ್ಯತಾ ಪ್ರಾಪ್ತಾ । ಯಾವತ್ ಯಾವತ್ ಪುಣ್ಯೋತ್ಕರ್ಷಃ, ತಾವತ್ ತಾವತ್ ಫಲೋತ್ಕರ್ಷಪ್ರಾಪ್ತಿಃ । ತಸ್ಮಾತ್ ಉತ್ತಮೇನ ಪುಣ್ಯೋತ್ಕರ್ಷೇಣ ಮೋಕ್ಷೋ ಭವಿಷ್ಯತಿ ಇತ್ಯಾಶಙ್ಕಾ ಸ್ಯಾತ್ । ಸಾ ನಿವರ್ತಯಿತವ್ಯಾ । ಜ್ಞಾನಸಹಿತಸ್ಯ ಚ ಪ್ರಕೃಷ್ಟಸ್ಯ ಕರ್ಮಣಃ ಏತಾವತೀ ಗತಿಃ । ವ್ಯಾಕೃತನಾಮರೂಪಾಸ್ಪದತ್ವಾತ್ ಕರ್ಮಣಃ ತತ್ಫಲಸ್ಯ ಚ । ನ ತು ಅಕಾರ್ಯೇ ನಿತ್ಯೇ ಅವ್ಯಾಕೃತಧರ್ಮಿಣಿ ಅನಾಮರೂಪಾತ್ಮಕೇ ಕ್ರಿಯಾಕಾರಕಫಲಸ್ವಭಾವವರ್ಜಿತೇ ಕರ್ಮಣೋ ವ್ಯಾಪಾರೋಽಸ್ತಿ । ಯತ್ರ ಚ ವ್ಯಾಪಾರಃ ಸಃ ಸಂಸಾರ ಏವೇತಿ । ಅಸ್ಯಾರ್ಥಸ್ಯ ಪ್ರದರ್ಶನಾಯ ಬ್ರಾಹ್ಮಣಮ್ ಆರಭ್ಯತೇ ॥

(ಭಾಷ್ಯಾರ್ಥ)

ಇಲ್ಲಿ ಅಪುಣ್ಯ(ಕರ್ಮ)ದಿಂದ ಸ್ಥಾವರಜಂಗಮಗಳಲ್ಲಿಯೂ ಸ್ವಭಾವದಿಂದಲೇ ದುಃಖಪ್ರಚುರವಾಗಿರುವ ನರಕ, ತಿರ್ಯಗ್ಜನ್ಮ, ಪ್ರೇತ-ಮುಂತಾದವುಗಳಲ್ಲಿಯೂ ಮತ್ತೆಮತ್ತೆ ಹುಟ್ಟುತ್ತಲೂ ಸಾಯುತ್ತಲೂ ದುಃಖವನ್ನು ಅನುಭವಿಸುತ್ತಾನೆ ಎಂಬಿದು ರಾಜಮಾರ್ಗದಂತೆ ಎಲ್ಲಾ ಜನರಿಗೂ ತಿಳಿದದ್ದಾಗಿರುತ್ತದೆ. ಆದರೆ

"ಪುಣ್ಯಕರ್ಮದಿಂದ ಪುಣ್ಯವೇ ಆಗುವದು" ಎಂಬ ಶಾಸ್ತ್ರೀಯ(ಕರ್ಮ)ವಿರುವದಲ್ಲ, ಆದರಲ್ಲಿಯೇ ಇಲ್ಲಿ ಶ್ರುತಿಯು ಆದರವನ್ನು ಮಾಡುತ್ತಿದೆ.[1] ಮತ್ತು ಪುಣ್ಯಕರ್ಮವೇ ಎಲ್ಲಾ ಪುರುಷಾರ್ಥಕ್ಕೂ[2] ಸಾಧನವೆಂದು ಶ್ರುತಿಸ್ಮೃತಿವಾದ(ಗಳಿವೆ). ಮೋಕ್ಷವೂ ಪುರುಷಾರ್ಥವೇ ಆಗಿರುವದರಿಂದ (ಅದನ್ನೂ) ಆ (ಪುಣ್ಯಕರ್ಮ)ದಿಂದ ಸಾಧಿಸಬಹುದೆಂದು ಒಂದೊದಗುತ್ತದೆ ಎಷ್ಟೆಷ್ಟು ಪುಣ್ಯದ ಹೆಚ್ಚಿಗೆ (ಯಾಗುವದೋ) ಅಷ್ಟಷ್ಟು ಫಲದ ಉತ್ಕರ್ಷವೂ ಪ್ರಾಪ್ತವಾಗುತ್ತದೆ ; ಆದ್ದರಿಂದ ಹೆಚ್ಚಿನ ಪುಣ್ಯೋತ್ಕರ್ಷದಿಂದ ಮೋಕ್ಷವು ಆಗಬಹುದು ಎಂದು ಆಶಂಕೆಯಾಗಬಹುದು. 'ಜ್ಞಾನಸಹಿತವಾದ ಹೆಚ್ಚಿನ ಕರ್ಮಕ್ಕೆ ಇಷ್ಟೇ ಗತಿಯು, ಏಕೆಂದರೆ ಕರ್ಮವೂ ಆದರ ಫಲವೂ ವ್ಯಾಕೃತವಾದ, ನಾಮರೂಪಕ್ಕೆ ಆಶ್ರಯವಾಗಿರುತ್ತವೆ. ಇಷ್ಟೇ ಹೊರತು ಕಾರ್ಯವಲ್ಲದ, ನಿತ್ಯವಾದ ವ್ಯಾಕೃತಧರ್ಮಿಯಲ್ಲದ, ನಾಮರೂಪಾತ್ಮಕವಲ್ಲದ ಕ್ರಿಯಾಕಾರಕಫಲಗಳ ಸ್ವಭಾವರಹಿತವಾಗಿರುವ(ಮೋಕ್ಷದಲ್ಲಿ) ಕರ್ಮದ ವ್ಯಾಪಾರವು ಇರುವದಿಲ್ಲ.[3] ಎಲ್ಲಿ (ಅದರ) ವ್ಯಾಪಾರವಿರುವದೋ ಅದು ಸಂಸಾರವೇ' ಎಂದು ಆ (ಆಶಂಕೆಯನ್ನು) ತೊಲಗಿಸಬೇಕಾಗಿದೆ. ಈ ಅರ್ಥವನ್ನು ತಿಳಿಸುವದಕ್ಕಾಗಿ (ಈ) ಬ್ರಾಹ್ಮಣವನ್ನು ಆರಂಭಿಸಿದೆ.

## ಉಪಾಸನಾಸಹಿತಕರ್ಮಕ್ಕೆ ಮೋಕ್ಷವು ಫಲವೆಂಬುದು ಸರಿಯಲ್ಲ

(ಭಾಷ್ಯ)

೩೧. ಯತ್ತು ಕೈಶ್ಚಿತ್ ಉಚ್ಯತೇ ವಿದ್ಯಾಸಹಿತಂ ಕರ್ಮ ನಿರಭಿಸಂಧಿ ವಿಷದಧ್ಯಾದಿವತ್ ಕಾರ್ಯಾನ್ತರಮ್ ಆರಭತ ಇತಿ | ತನ್ನ | ಅನಾರಭ್ಯತ್ವಾತ್ ಮೋಕ್ಷಸ್ಯ | ಬನ್ಧನನಾಶ ಏವ ಹಿ ಮೋಕ್ಷೋ ನ ಕಾರ್ಯಭೂತಃ | ಬನ್ಧನಂ ಚ ಅವಿದ್ಯಾ ಇತ್ಯವೋಚಾಮ | ಅವಿದ್ಯಾಯಾಶ್ಚ ನ ಕರ್ಮಣಾ ನಾಶ ಉಪಪದ್ಯತೇ | ದೃಷ್ಟವಿಷಯತ್ವಾಚ್ಚ ಕರ್ಮಸಾಮರ್ಥ್ಯಸ್ಯ | ಉತ್ಪತ್ತ್ಯಾಪ್ತಿವಿಕಾರಸಂಸ್ಕಾರಾ ಹಿ ಕರ್ಮಸಾಮರ್ಥ್ಯಸ್ಯ ವಿಷಯಾಃ | ಉತ್ಪಾದಯಿತುಂ ಪ್ರಾಪಯಿತುಂ ವಿಕರ್ತುಂ ಸಂಸ್ಕರ್ತುಂ ಚ ಸಾಮರ್ಥ್ಯಂ ಕರ್ಮಣಃ, ನಾತೋ ವ್ಯತಿರಿಕ್ತವಿಷಯೋಽಸ್ತಿ ಕರ್ಮಸಾಮರ್ಥ್ಯಸ್ಯ ಲೋಕೇಽ

---

1. ಏಕೆಂದರೆ ಪುಣ್ಯದ ಫಲವು ಕೇವಲ ಶಾಸ್ತ್ರಗಮ್ಯವಾಗಿರುತ್ತದೆ, ಪಾಪಫಲದಂತೆ ಪ್ರಸಿದ್ಧವಾಗಿರುವದಿಲ್ಲ.

2. ಧರ್ಮಾರ್ಥಕಾಮ ಗಳಿಗೆ.

3. ಮೋಕ್ಷವು ಧರ್ಮದ ಕಾರ್ಯವಲ್ಲವೆಂದು ತಿಳಿಸುವದಕ್ಕಾಗಿ ಧರ್ಮಾಧರ್ಮಗಳ ಫಲವನ್ನು ವಿಸ್ತಾರವಾಗಿ ವರ್ಣಿಸಿರುವದನ್ನು ಸೂ. ಭಾ. ೧-೧-೪ (ಭಾ. ಭಾ. ೪೨)ರಲ್ಲಿ ಕಾಣಬಹುದು.

ಪ್ರಸಿದ್ಧತ್ವಾತ್। ನ ಚ ಮೋಕ್ಷ ಏಷಾಂ ಪದಾರ್ಥಾನಾಮ್ ಅನ್ಯತಮಃ। ಅವಿದ್ಯಾಮಾತ್ರವ್ಯವಹಿತಃ ಇತ್ಯವೋಚಾಮ। ಬಾಢಮ್। ಭವತು ಕೇವಲಸ್ಯೈವ ಕರ್ಮಣಃ ಏವಂ ಸ್ವಭಾವತಾ। ವಿದ್ಯಾಸಂಯುಕ್ತಸ್ಯ ತು ನಿರಭಿಸಂಧೇರ್ಭವತ್ವನ್ಯಥಾಸ್ವಭಾವಃ। ದೃಷ್ಟಂ ಹಿ ಅನ್ಯಶಕ್ತಿತ್ವೇನ ನಿಜ್ಞಾತಾನಾಮಪಿ ಪದಾರ್ಥಾನಾಂ ವಿಷದಧ್ಯಾದೀನಾಂ ಮನ್ತ್ರ[1]ಶರ್ಕರಾದಿಸಂಯುಕ್ತಾನಾಮ್ ಅನ್ಯವಿಷಯೇ ಸಾಮರ್ಥ್ಯಮ್। ತಥಾ ಕರ್ಮಣೋಽಪ್ಯಸ್ತು ಇತಿ ಚೇತ್। ನ। ಪ್ರಮಾಣಾಭಾವಾತ್। ತತ್ರ ಹಿ ಕರ್ಮಣ ಉಕ್ತವಿಷಯವ್ಯತಿರೇಕೇಣ ವಿಷಯಾನ್ತರೇ ಸಾಮರ್ಥ್ಯಾಸ್ತಿತ್ವೇ ಪ್ರಮಾಣಂ ನ ಪ್ರತ್ಯಕ್ಷಮ್, ನಾನುಮಾನಮ್, ನೋಪಮಾನಮ್, ನಾರ್ಥಾಪತ್ತಿಃ, ನ ಶಬ್ದೋಽಸ್ತಿ। ನನು ಫಲಾನ್ತರಾಭಾವೇ ಚೋದನಾನ್ಯಥಾನುಪಪತ್ತಿಃ ಪ್ರಮಾಣಮಿತಿ[2]। ನ ಹಿ ನಿತ್ಯಾನಾಂ ಕರ್ಮಣಾಂ ವಿಶ್ವಜಿನ್ನ್ಯಾಯೇನ ಫಲಂ ಕಲ್ಪ್ಯತೇ। ನಾಪಿ ಶ್ರುತಂ ಫಲಮಸ್ತಿ। ಚೋದ್ಯನ್ತೇ ಚ ತಾನಿ। ಪಾರಿಶೇಷ್ಯಾತ್ ಮೋಕ್ಷಸ್ತೇಷಾಂ ಫಲಮಿತಿ ಗಮ್ಯತೇ। ಅನ್ಯಥಾ ಹಿ ಪುರುಷಾ ನ ಪ್ರವರ್ತೇರನ್। ನನು ವಿಶ್ವಜಿನ್ನ್ಯಾಯ ಏವ ಆಯಾತಃ। ಮೋಕ್ಷಸ್ಯ ಫಲಸ್ಯ ಕಲ್ಪಿತತ್ವಾತ್। ಮೋಕ್ಷೇ ವಾ ಅನ್ಯಸ್ಮಿನ್ ವಾ ಫಲೇ ಅಕಲ್ಪಿತೇ ಪುರುಷಾ ನ ಪ್ರವರ್ತೇರನ್ ಇತಿ ಮೋಕ್ಷಃ ಫಲಂ ಕಲ್ಪ್ಯತೇ ಶ್ರುತಾರ್ಥಾಪತ್ತ್ಯಾ ಯಥಾ ವಿಶ್ವಜಿತಿ। ನನ್ವೇವಂ ಸತಿ ಕಥಮುಚ್ಯತೇ ವಿಶ್ವಜಿನ್ನ್ಯಾಯೋ ನ ಭವತೀತಿ। ಫಲಂ ಚ ಕಲ್ಪ್ಯತೇ ವಿಶ್ವಜಿನ್ನ್ಯಾಯಶ್ಚ ನ ಭವತೀತಿ ವಿಪ್ರತಿಷಿದ್ಧಮ್ ಅಭಿಧೀಯತೇ। ಮೋಕ್ಷಃ ಫಲಮೇವ ನ ಭವತಿ ಇತಿ ಚೇತ್। ನ। ಪ್ರತಿಜ್ಞಾಹಾನಾತ್। ಕರ್ಮಕಾರ್ಯಾನ್ತರಂ ವಿಷದಧ್ಯಾದಿವತ್ ಆರಭತೇ ಇತಿ ಹಿ ಪ್ರತಿಜ್ಞಾತಮ್। ಸ ಚೇನ್ಮೋಕ್ಷಃ ಕರ್ಮಣಃ ಕಾರ್ಯಂ ಫಲಮೇವ ನ ಭವತಿ ಸಾ ಪ್ರತಿಜ್ಞಾ ಹೀಯೇತ। ಕರ್ಮಕಾರ್ಯತ್ವೇ ಚ ಮೋಕ್ಷಸ್ಯ ಸ್ವರ್ಗಾದಿಫಲೇಭ್ಯೋ ವಿಶೇಷೋ ವಕ್ತವ್ಯಃ। ಅಥ ಕರ್ಮಕಾರ್ಯಂ ನ ಭವತಿ ನಿತ್ಯಾನಾಂ ಕರ್ಮಣಾಂ ಫಲಂ ಮೋಕ್ಷಃ ಇತ್ಯಸ್ಯಾ ವಚನವ್ಯಕ್ತೇಃ ಕೋಽರ್ಥಃ ಇತಿ ವಕ್ತವ್ಯಮ್। ನ ಚ ಕಾರ್ಯಫಲಶಬ್ದಭೇದಮಾತ್ರೇಣ ವಿಶೇಷಃ ಶಕ್ಯಃ ಕಲ್ಪಯಿತುಮ್। ಅಫಲಂ ಚ ಮೋಕ್ಷೋ ನಿತ್ಯೈಶ್ಚ ಕರ್ಮಭಿಃ ಕ್ರಿಯತೇ ನಿತ್ಯಾನಾಂ ಕರ್ಮಣಾಂ ಫಲಂ ನ ಕಾರ್ಯಮಿತಿ ಚ ಏಷೋಽರ್ಥೋ ವಿಪ್ರತಿಷಿದ್ಧೋಽಭಿಧೀಯತೇ ಯಥಾಗ್ನಿಃ ಶೀತ ಇತಿ ॥

---

1. ಇಲ್ಲಿ 'ಮಂತ್ರ'ಶಬ್ದದ ಹಿಂದಿರುವ ವಿದ್ಯಾಶಬ್ದವು ಬೇಕಿಲ್ಲವೆಂದು ಬಿಟ್ಟಿದೆ; ಅನುವಾದದ ಟಿಪ್ಪಣಿಯನ್ನು ನೋಡಿ.

2. ಇಲ್ಲಿ 'ಇತಿ' ಇಲ್ಲದಿದ್ದರೂ ಸಾಗುತ್ತದೆ.

(ಭಾಷ್ಯಾರ್ಥ)

ಇನ್ನು ಕೆಲವರು[1] ವಿದ್ಯಾಸಹಿತವಾದ ಕರ್ಮವು (ಫಲಾಭಿ)ಸಂಧಿಯಿಲ್ಲದೆ (ಮಾಡಿದರೆ) ವಿಷ, ಮೊಸರು- ಮುಂತಾದವುಗಳಂತೆ ಮತ್ತೊಂದು ಕಾರ್ಯವನ್ನುಂಟುಮಾಡುತ್ತದೆ ಎನ್ನುವರಲ್ಲ, ಅದು ಸರಿಯಲ್ಲ. ಏಕೆಂದರೆ ಮೋಕ್ಷವು ಆರಭ್ಯವಲ್ಲ. (ಇದರ ವಿವರ): **ಮೋಕ್ಷವು ಬಂಧನದ ನಾಶವೇ ಹೊರತು ಕಾರ್ಯವಾದದ್ದಲ್ಲ. ಬಂಧನವೆಂದರೆ ಅವಿದ್ಯೆ ಎಂದೇ ಹೇಳಿರುತ್ತೇವೆ. ಅವಿದ್ಯೆಯು ನಾಶವು ಕರ್ಮದಿಂದ ಆಗಲಾರದು.** ಕರ್ಮದ ಸಾಮರ್ಥ್ಯವು ದೃಷ್ಟವಾದ (ಕೆಲವು) ವಿಷಯಗಳಲ್ಲಿ (ಮಾತ್ರ ಇರುತ್ತದೆಯಾದ್ದರಿಂದಲೂ ಹೀಗೆಂದು ಒಪ್ಪಬೇಕು. ಹೇಗೆಂದರೆ) **ಉತ್ಪತ್ತಿ, ಆಪ್ತಿ, ವಿಕಾರ, ಸಂಸ್ಕಾರ- ಇವುಗಳಲ್ಲವೆ, ಕರ್ಮದ ಸಾಮರ್ಥ್ಯಕ್ಕೆ ವಿಷಯಗಳು?**[2] ಹುಟ್ಟಿಸುವದಕ್ಕೂ, ಪಡೆಯಿಸುವದಕ್ಕೂ, ಮಾರ್ಪಡಿಸುವದಕ್ಕೂ ಸಂಸ್ಕಾರವನ್ನುಂಟುಮಾಡುವದಕ್ಕೂ ಕರ್ಮದ ಸಾಮರ್ಥ್ಯವಿರುತ್ತದೆ. ಕರ್ಮಸಾಮರ್ಥ್ಯಕ್ಕೆ ಇವುಗಳಿಗಿಂತ ಬೇರೆಯಾದ ವಿಷಯವೇ ಇರುವದಿಲ್ಲ. ಏಕೆಂದರೆ (ಇವುಗಳಿಂದ ಬೇರೆಯಾದ ಯಾವ ವಿಷಯವೂ) ಲೋಕದಲ್ಲಿ ಪ್ರಸಿದ್ಧವಾಗಿರುವದಿಲ್ಲ. ಆದರೆ ಮೋಕ್ಷವು ಈ ಪದಾರ್ಥಗಳಲ್ಲಿ ಒಂದೂ ಅಲ್ಲ[3], (ಅದು) ಅವಿದ್ಯೆ ಎಂಬುದೊಂದೇ ವ್ಯವಧಾನವುಳ್ಳದ್ದು ಎಂದು ಹೇಳಿರುತ್ತೇವೆ.[4]

(ಆಕ್ಷೇಪ)- ನಿಜ. ಬರಿಯ ಕರ್ಮಕ್ಕೆ ಇಂಥ ಸ್ವಭಾವವೇ ಇರುತ್ತದೆ ಎಂದಾಗಲಿ! ಆದರೆ ವಿದ್ಯಾಸಂಯುಕ್ತವಾದರೆ (ಫಲಾ)ಭಿಸಂಧಿಯಿಲ್ಲದವನಿಗೆ ಮತ್ತೊಂದು ಸ್ವಭಾವವಿರಬಹುದಾಗಿದೆ. ಏಕೆಂದರೆ ಒಂದು ಶಕ್ತಿಯುಳ್ಳವೆಂದು

---

1. ಈ ವೃತ್ತಿಕಾರರು ಯಾರು? ಇವರೂ **ಭರ್ತೃಪ್ರಪಂಚರೇ**? ಎಂಬುದು ವಿಚಾರಣೀಯವಾಗಿರುತ್ತದೆ. ಗೀತಾಭಾಷ್ಯದಲ್ಲಿಯೂ ಜ್ಞಾನಕರ್ಮಸಮುಚ್ಚಯವನ್ನು ಖಂಡಿಸಿದೆ, ವಿಷದಧ್ಯಾದಿದೃಷ್ಟಾಂತದ ಪೂರ್ವಪಕ್ಷವು ತೈ. ಭಾ. ೧-೧೧ (ಭಾ. ಭಾ. ೭೩), ಸೂ. ಭಾ. ೪-೧-೧೬ (ಭಾ. ಭಾ ೫೩೩)ರಲ್ಲಿಯೂ ಪರಾಮೃಷ್ಟವಾಗಿದೆ.

2. ಕರ್ಮಕ್ಕೆ ಉತ್ಪತ್ತ್ಯಾದಿಗಳೇ ಫಲವಾದ್ದರಿಂದ ಮೋಕ್ಷವು ಅದರ ಕಾರ್ಯವಲ್ಲವೆಂಬುದನ್ನು ಈ. ಭಾ. (ಭಾ. ಭಾ. ೧), ತೈ ಭಾ. ೧-೧೧ (ಭಾ. ಭಾ ೭೪), ಮುಂ. ಭಾ. ೧-೨-೧೨ (ಭಾ. ಭಾ. ೪೬)-ಇವುಗಳಲ್ಲಿಯೂ ಹೇಳಿರುತ್ತದೆ.

3. ಮೋಕ್ಷವು ಉತ್ಪಾದ್ಯಾದಿಗಳಲ್ಲವೆಂಬುದನ್ನು ಸೂ. ಭಾ. ೧-೧-೪ (ಭಾ. ಭಾ. ೪೮, ೪೯)ರಲ್ಲಿ ವಿಸ್ತಾರವಾಗಿ ತೋರಿಸಿಕೊಟ್ಟಿರುತ್ತದೆ.

4. ೧-೪-೭ (ಭಾ. ಭಾ. ೧೪೫)ರಲ್ಲಿ ಕೊಟ್ಟಿರುವ ಶುಕ್ತಿಕಾಗ್ರಹಣದೃಷ್ಟಾಂತದ ವಿಚಾರವನ್ನು ನೋಡಿರಿ,

ಗೊತ್ತಾಗಿರುವ ವಿಷ, ಮೊಸರು— ಮುಂತಾದ ಪದಾರ್ಥಗಳಿಗೂ (ಮಂತ್ರ[1], ಸಕ್ಕರೆ— ಮುಂತಾದವುಗಳಿಂದ ಕೂಡಿದರೆ ಮತ್ತೊಂದು ವಿಷಯದಲ್ಲಿ ಸಾಮರ್ಥ್ಯವುಂಟಾಗುವದು ಕಂಡುಬಂದಿದೆಯಲ್ಲವೆ ? ಹಾಗೆಯೇ ಕರ್ಮಕ್ಕೂ ಆಗಲಿ !

(ಪರಿಹಾರ):- ಹಾಗಲ್ಲ. ಏಕೆಂದರೆ ಪ್ರಮಾಣವಿಲ್ಲ. (ಇದರ ವಿವರ): ಇಲ್ಲಿ ಕರ್ಮಕ್ಕೆ (ನಾವು) ಹೇಳಿರುವ ವಿಷಯಗಳಲ್ಲದೆ ಮತ್ತೊಂದು ವಿಷಯದಲ್ಲಿಯೂ ಸಾಮರ್ಥ್ಯವಿದೆ ಎಂಬುದಕ್ಕೆ ಪ್ರಮಾಣ(ವಿಲ್ಲ). ಪ್ರತ್ಯಕ್ಷವಿಲ್ಲ, ಅನುಮಾನವಿಲ್ಲ, ಉಪಮಾನವಿಲ್ಲ, ಅರ್ಥಾಪತ್ತಿಯಿಲ್ಲ, ಶಬ್ದವೂ ಇಲ್ಲ.[2]

(ಆಕ್ಷೇಪ)·– ಫಲಾಂತರವಿಲ್ಲದಿರುವದರಿಂದ ವಿಧಿಸಿರುವದು ಮತ್ತೊಂದು ಬಗೆಯಿಂದ ಹೊಂದುವದಿಲ್ಲ ಎಂಬ (ಅರ್ಥಾಪತ್ತಿಯು) ಪ್ರಮಾಣವಲ್ಲವೆ ? (ಇದರ ವಿವರ): ನಿತ್ಯಕರ್ಮಗಳಿಗೆ ವಿಶ್ವಜಿನ್ನ್ಯಾಯದಿಂದ ಫಲವನ್ನು ಕಲ್ಪಿಸುವಹಾಗಿಲ್ಲ,[3] ಶ್ರುತವಾಗಿರುವ ಫಲವೂ ಇಲ್ಲ[4] ಆದರೆ ಅವುಗಳನ್ನು ವಿಧಿಸಿದೆ. (ಆದ್ದರಿಂದ) ಪರಿಶೇಷನ್ಯಾಯದಿಂದ ಅವಕ್ಕೆ ಮೋಕ್ಷವೇ ಫಲವೆಂದು ನಿಶ್ಚಯವಾಗುತ್ತದೆ. ಏಕೆಂದರೆ ಹೀಗಲ್ಲದಿದ್ದರೆ ಪುರುಷರು (ನಿತ್ಯಕರ್ಮಗಳಲ್ಲಿ) ತೊಡಗಲಾರರು.

(ಸಿದ್ಧಾಂತಿ):–(ಹೀಗಾದರೆ) ವಿಶ್ವಜಿನ್ನ್ಯಾಯವೇ, ಬಂತಲ್ಲ ! ಏಕೆಂದರೆ ಮೋಕ್ಷಕ್ಕೆ ಫಲವನ್ನು ಕಲ್ಪಿಸಲಾಗಿದೆ. ಮೋಕ್ಷವನ್ನಾಗಲಿ ಮತ್ತೊಂದು ಫಲವನ್ನಾಗಲಿ ಕಲ್ಪಿಸದಿದ್ದರೆ ಜನರು (ಅವುಗಳಲ್ಲಿ) ತೊಡಗಲಾರರು ಎಂದು ಮೋಕ್ಷವೇ (ಅವುಗಳ ಫಲವೆಂದು ಶ್ರುತಾರ್ಥಾಪತ್ತಿಯಿಂದ[5] ವಿಶ್ವಜಿತ್ತಿನಲ್ಲಿ(ಕಲ್ಪಿಸು

---

1. ಇಲ್ಲಿ ವಿದ್ಯಾ ಎಂಬ ಮಾತು ಬರೆದವರ ಕೈತಪ್ಪಿನಿಂದ ಬಿದ್ದಿರಬಹುದೆಂದು ಕಲ್ಪಿಸಲಾಗಿದೆ. ಹಿಂದಿನ ವಾಕ್ಯದಲ್ಲಿ ವಿದ್ಯಾಸಹಿತವಾದ ಕರ್ಮ ಎಂದಿರುವದರಿಂದ ಇಲ್ಲಿಯೂ 'ವಿದ್ಯಾ' ಎಂಬ ಮಾತು ಅನವಧಾನದಿಂದ ಬಿದ್ದಿರಬಹುದು. ಮಂತ್ರದಿಂದ ವಿಷವೂ ಸಕ್ಕರೆಯಿಂದ ಮೊಸರೂ ಕೆಟ್ಟ ಫಲವನ್ನು ಕೊಡದಿರುವಂತೆ ಎಂದು ಉಪಮಾನಕ್ಕೆ ಅರ್ಥ.

2. ಅನುಮಾನಾದಿಗಳು ಸಾಮಾನ್ಯವಾಗಿ ಪ್ರತ್ಯಕ್ಷವನ್ನೇ ಅವಲಂಬಿಸಿರುತ್ತವೆ; ಕರ್ಮಕ್ಕೆ ಮೇಲೆ ಹೇಳಿರುವ ನಾಲ್ಕೇ ಫಲವೆಂಬುದು ಪ್ರತ್ಯಕ್ಷವಾಗಿದೆ.

3. 'ವಿಶ್ವಜಿತಾ ಯಜೇತ' ಎಂಬ ವಾಕ್ಯದಲ್ಲಿ ಫಲವನ್ನು ಹೇಳದಿದ್ದರೂ ನಿಯೋಜ್ಯನಾದವನು ಸ್ವರ್ಗಕಾಮನೆಂದು ನಿರ್ಣಯಿಸಬೇಕು, ಏಕೆಂದರೆ ಸ್ವರ್ಗವು ಎಲ್ಲರಿಗೂ ಬೇಕಾದ ಫಲವಾಗಿದೆ ಎಂದು ಜೈ. ಸೂ (೪-೩-೧೫)ದಲ್ಲಿ ನಿರ್ಣಯಿಸಿದೆ. ಇದು ವಿಶ್ವಜಿನ್ನ್ಯಾಯ. ಬದುಕಿರುವವನು ಹೋಮಮಾಡಬೇಕು ಎಂದು ಜೀವನ ಎಂಬುದೇ ನಿಯೋಜ್ಯವಿಶೇಷಣವಾಗಿ ಶ್ರುತವಾಗಿರುವದರಿಂದ ನಿತ್ಯಕರ್ಮಕ್ಕೆ ಈ ನ್ಯಾಯವನ್ನು ಕಲ್ಪಿಸುವದಕ್ಕಾಗುವಂತಿಲ್ಲ.

4. ಕರ್ಮಕ್ಕೆ ಪಿತೃಲೋಕವು ಫಲವೆಂದು ಶ್ರುತಿಯಲ್ಲಿದ್ದರೂ ಇದು ನಿತ್ಯಕರ್ಮವಿಧಿ ಪ್ರಕರಣದಲ್ಲಿಲ್ಲ.

5. ವಿಧಿಸಿರುವದು ಬೇರೆ ರೀತಿಯಿಂದ ಉಪಪನ್ನವಾಗುವದಿಲ್ಲವಾದ್ದರಿಂದ ಎಂದು ಕಲ್ಪಿಸುವದೇ ಶ್ರುತಾರ್ಥಾಪತ್ತಿ.

ವಂತೆಯೇ) ಕಲ್ಪಿಸಿರುತ್ತದೆ. ಹೀಗಿರುವಲ್ಲಿ (ಇದು) ವಿಶ್ವಜಿನ್ನ್ಯಾಯವು ಆಗು ವದಿಲ್ಲ ಎಂದು ಹೇಳುವದು ಹೇಗೆ? ಫಲವನ್ನು ಕಲ್ಪಿಸಿಯೂ ಇದೆ, ವಿಶ್ವ ಜಿನ್ನ್ಯಾಯವೂ ಆಗುವದಿಲ್ಲ ಎಂದರೆ ವಿರುದ್ಧವಾಗಿ ಹೇಳಿದಂತಾಯಿತು.

(ಪೂರ್ವಪಕ್ಷಿ):-ಮೋಕ್ಷವು ಫಲವೇ ಆಗುವದಿಲ್ಲ !-ಎಂದರೊ ?

(ಸಿದ್ಧಾಂತಿ):-ಹಾಗಲ್ಲ. ಏಕೆಂದರೆ ಆಗ (ನಿಮ್ಮ) ಪ್ರತಿಜ್ಞೆಯನ್ನು ಕೈ ಬಿಟ್ಟಂತೆ ಆಗುವದು. ಕರ್ಮವು ವಿಷದಧ್ಯಾದಿಗಳಂತೆ ಕಾರ್ಯಾಂತರವನ್ನುಂಟು ಮಾಡುತ್ತದೆ ಎಂದಲ್ಲವೆ, ನೀವು ಪ್ರತಿಜ್ಞೆಮಾಡಿದ್ದು? ಕರ್ಮದ ಕಾರ್ಯವಾದ ಆ ಮೋಕ್ಷವು ಫಲವೇ ಆಗದಿದ್ದರೆ ಆ ಪ್ರತಿಜ್ಞೆಯನ್ನು ಬಿಟ್ಟಂತೆ ಆದೀತು. ಮೋಕ್ಷವು ಕರ್ಮದ ಕಾರ್ಯವು ಎನ್ನುವಾಗ ಸ್ವರ್ಗಾದಿಫಲಗಳಿಗಿಂತ (ಅದರಲ್ಲಿ ರುವ) ವಿಶೇಷವನ್ನು ಹೇಳಬೇಕಾಗುವದು. ಹೀಗಲ್ಲದೆ (ಅದು) ಕರ್ಮದ ಕಾರ್ಯವಾಗದಿದ್ದರೆ, ನಿತ್ಯಕರ್ಮಗಳಿಗೆ ಮೋಕ್ಷವು ಫಲ ಎಂಬೀ ವಚನವ್ಯಕ್ತಿಗೆ ಅರ್ಥವೇನು ? ಎಂಬುದನ್ನು ಹೇಳಬೇಕಾಗುವದು. ಕಾರ್ಯ, ಫಲ- ಎಂಬ ಶಬ್ದಗಳು ಬೇರೆ ಬೇರೆ ಎಂಬ ಮಾತ್ರದಿಂದ (ಮೋಕ್ಷದಲ್ಲಿ ಯಾವ) ವಿಶೇಷವನ್ನೂ ಕಲ್ಪಿಸುವದಕ್ಕೆ ಆಗಲಾರದು. ಮೋಕ್ಷವು ಫಲವಲ್ಲ, ಆದರೂ ನಿತ್ಯಕರ್ಮಗಳಿಂದ ಉಂಟಾಗುತ್ತದೆ, ನಿತ್ಯಕರ್ಮಗಳ ಫಲವಲ್ಲ, ಕಾರ್ಯ-ಎಂಬೀ ಅರ್ಥವು ಬೆಂಕಿಯು ತಣ್ಣಗಿದೆ ಎಂಬಂತೆ ವಿರುದ್ಧವಾಗಿ ಹೇಳಿದ್ದಾಗಿದೆ.

## ಜ್ಞಾನದ ಕಾರ್ಯವು ಮೋಕ್ಷ, ಎಂಬಂತೆ ಕರ್ಮದ ಕಾರ್ಯ ಎನ್ನಲಾಗದು

(ಭಾಷ್ಯ)

೩೨. ಜ್ಞಾನವತ್ ಇತಿ ಚೇತ್ | ಯಥಾ ಜ್ಞಾನಸ್ಯ ಕಾರ್ಯಂ ಮೋಕ್ಷಃ ಜ್ಞಾನೇನ ಅಕ್ರಿಯಮಾಣೋಽಪಿ ಉಚ್ಯತೇ ತದ್ವತ್ ಕರ್ಮಕಾರ್ಯತ್ವಮ್ ಇತಿ ಚೇತ್ | ನ | ಅಜ್ಞಾನನಿವರ್ತಕತ್ವಾತ್ ಜ್ಞಾನಸ್ಯ | ಅಜ್ಞಾನವ್ಯವಧಾನನಿವರ್ತಕ ತ್ವಾತ್ ಜ್ಞಾನಸ್ಯ ಮೋಕ್ಷೋ ಜ್ಞಾನಕಾರ್ಯಮ್ ಇತಿ ಉಪಚರ್ಯತೇ | ನ ತು ಕರ್ಮಣಾ ನಿವರ್ತಯಿತವ್ಯಮ್ ಅಜ್ಞಾನಮ್ | ನ ಚ ಅಜ್ಞಾನವ್ಯತಿರೇಕೇಣ ಮೋಕ್ಷಸ್ಯ ವ್ಯವಧಾನಾನ್ತರಂ ಕಲ್ಪಯಿತುಂ ಶಕ್ಯಮ್ | ನಿತ್ಯತ್ವಾತ್ ಮೋಕ್ಷಸ್ಯ, ಸಾಧಕಸ್ವರೂಪಾವ್ಯತಿರೇಕಾಚ್ಚ | ಯತ್ ಕರ್ಮಣಾ ನಿವರ್ತ್ಯೇತ | ಅಜ್ಞಾನ ಮೇವ ನಿವರ್ತಯತಿ ಇತಿ ಚೇತ್ | ನ | ವಿಲಕ್ಷಣತ್ವಾತ್ | ಅನಭಿವ್ಯಕ್ತಿರಜ್ಞಾನಮ್ ಅಭಿವ್ಯಕ್ತಿಲಕ್ಷಣೇನ ಜ್ಞಾನೇನ ವಿರುಧ್ಯತೇ | ಕರ್ಮ ತು ನಾಜ್ಞಾನೇನ ವಿರುಧ್ಯತೇ | ತೇನ ಜ್ಞಾನವಿಲಕ್ಷಣಂ ಕರ್ಮ | ಯದಿ ಜ್ಞಾನಾಭಾವಃ, ಯದಿ ಸಂಶಯ ಜ್ಞಾನಮ್, ಯದಿ ವಿಪರೀತಜ್ಞಾನಂ ವಾ ಉಚ್ಯತೇ, ಅಜ್ಞಾನಮಿತಿ, ಸರ್ವಂ ಹಿ

**ತತ್ ಜ್ಞಾನೇನೈವ ನಿವರ್ತ್ಯತೇ। ನ ತು ಕರ್ಮಣಾ ಅನ್ಯತಮೇನಾಪಿ| ವಿರೋಧಾಭಾವಾತ್| ಅಥ ಅದೃಷ್ಟಂ ಕರ್ಮಣಾಮ್ ಅಜ್ಞಾನನಿವರ್ತಕತ್ವಂ ಕಲ್ಪ್ಯಮ್ ಇತಿ ಚೇತ್| ನ| ಜ್ಞಾನೇನ ಅಜ್ಞಾನನಿವೃತ್ತೌ ಗಮ್ಯಮಾನಾಯಾಮ್ ಅದೃಷ್ಟ ನಿವೃತ್ತಿಕಲ್ಪನಾನುಪಪತ್ತೇಃ[1]| ಯಥಾ ಅವಘಾತೇನ ವ್ರೀಹೀಣಾಂ ತುಷನಿವೃತ್ತೌ ಗಮ್ಯಮಾನಾಯಾಮ್ ಅಗ್ನಿಹೋತ್ರಾದಿನಿತ್ಯಕರ್ಮಕಾರ್ಯಾ ಅದೃಷ್ಟಾ ನ ಕಲ್ಪ್ಯತೇ ತುಷನಿವೃತ್ತಿಃ| ತದ್ವದಜ್ಞಾನನಿವೃತ್ತಿರಪಿ ನಿತ್ಯಕರ್ಮಕಾರ್ಯಾಽದೃಷ್ಟಾ ನ ಕಲ್ಪ್ಯತೇ| ಜ್ಞಾನೇನ ವಿರುದ್ಧತ್ವಂ ಚ ಅಕೃಸತ್ ಕರ್ಮಣಾಮ್ ಅವೋಚಾಮ, ಯದವಿರುದ್ಧಂ ಜ್ಞಾನಂ ಕರ್ಮಭಿಃ, ತದ್ದೇವಲೋಕಪ್ರಾಪ್ತಿನಿಮಿತ್ತಮ್ ಇತ್ಯುಕ್ತಮ್| "ವಿದ್ಯಯಾ ದೇವಲೋಕಃ" (೧-೫-೧೬) ಇತಿ ಶ್ರುತೇಃ ||**

(ಭಾಷ್ಯಾರ್ಥ)

(ಆಕ್ಷೇಪ):—ಜ್ಞಾನದಂತೆಯೇ (ಆಗಬಹುದಲ್ಲ ! ಇದರ ವಿವರ) : ಹೇಗೆ ಜ್ಞಾನದಿಂದ ಉಂಟಾಗದೆ ಇದ್ದರೂ ಮೋಕ್ಷವು ಜ್ಞಾನದ ಕಾರ್ಯವು ಎನ್ನುವರೋ ಅದರಂತೆ (ಅದು) ಕರ್ಮಕಾರ್ಯವು ಎಂದರೊ ?

(ಪರಿಹಾರ):—ಹಾಗಲ್ಲ ಏಕೆಂದರೆ ಜ್ಞಾನವು ಅಜ್ಞಾನವನ್ನು ತೊಲಗಿಸುತ್ತದೆ. (ಇದರ ವಿವರ): ಅಜ್ಞಾನವೆಂಬ ವ್ಯವಧಾನವನ್ನು ಜ್ಞಾನವು ತೊಲಗಿಸುವದರಿಂದ ಮೋಕ್ಷವು ಜ್ಞಾನದ ಕಾರ್ಯವು ಎಂದು ಉಪಚಾರದಿಂದ ಹೇಳುತ್ತಾರೆ. ಆದರೆ ಅಜ್ಞಾನವು ಕರ್ಮದಿಂದ ತೊಲಗುವದಿಲ್ಲ. ಅಜ್ಞಾನವಲ್ಲದೆ ಮೋಕ್ಷಕ್ಕೆ ಮತ್ತೊಂದು ವ್ಯವಧಾನವನ್ನು ಕಲ್ಪಿಸವದಕ್ಕೂ ಆಗುವದಿಲ್ಲ ; ಏಕೆಂದರೆ ಮೋಕ್ಷವು ನಿತ್ಯವಾಗಿರುತ್ತದೆ. ಸಾಧಕನ ಸ್ವರೂಪಕ್ಕಿಂತ ಬೇರೆಯೂ ಅಲ್ಲ.[2] (ಹಾಗೆ ಮತ್ತೊಂದು ವ್ಯವಧಾನವಿದ್ದರೆ) ಅದು ಕರ್ಮದಿಂದ ತೊಲಗುತ್ತದೆ (ಎನ್ನ)ಬಹುದಾಗಿತ್ತು.

(ಆಕ್ಷೇಪ):—(ಕರ್ಮವು) ಅಜ್ಞಾನವನ್ನೇ ತೊಲಗಿಸುತ್ತದೆ ಎಂದರೊ ?

(ಪರಿಹಾರ):-ಹಾಗಲ್ಲ. ಏಕೆಂದರ ವಿಲಕ್ಷಣವಾಗಿರುತ್ತದೆ. (ಇದರ ವಿವರ): ಹೊರತೋರದೆ ಇರುವದೇ ಅಜ್ಞಾನ(ದ ಫಲವು. ಆ ಅಜ್ಞಾನವು) ಹೊರತೋರಿಕೊಳ್ಳುವ ಲಕ್ಷಣವಾದ ಜ್ಞಾನಕ್ಕೆ ವಿರುದ್ಧವಾಗಿರುತ್ತದೆ. ಕರ್ಮವಾದರೋ ಅಜ್ಞಾನಕ್ಕೆ ವಿರುದ್ಧವಾಗಿರುವದಿಲ್ಲ. ಆದ್ದರಿಂದ ಕರ್ಮವು ಜ್ಞಾನಕ್ಕಿಂತ ವಿಲಕ್ಷಣ

---

1. 'ಅನುವೃತ್ತಿಕಲ್ಪನಾ' ಎಂಬ ಹೆಚ್ಚು ಭಾಗವು ಅಚ್ಚಿನ ಪುಸ್ತಕದಲ್ಲಿದ್ದರೂ ತಪ್ಪಾಗಿ ಬಿದ್ದಿದೆ. .

2. ಬ್ರಹ್ಮವೇ ಮುಕ್ತಿಯು (ಸೂ. ಭಾ. ೩-೪-೫೨, ಭಾ. ಭಾ. ೪೯೯) ; ಅದು ನಿತ್ಯವೂ ಪ್ರತ್ಯಗಾತ್ಮಸ್ವರೂಪವೂ ಆಗಿರುತ್ತದೆ.

**ವಾದದ್ದು. ಜ್ಞಾನಾಭಾವವೇ ಆಗಲಿ, ಸಂಶಯಜ್ಞಾನವೇ ಆಗಲಿ, ವಿಪರೀತ ಜ್ಞಾನವೇ ಆಗಲಿ (ಇವುಗಳಲ್ಲಿ, ಯಾವದನ್ನು ಅಜ್ಞಾನವೆಂದು ಕರೆದರೂ ಅದೆಲ್ಲವೂ ಜ್ಞಾನದಿಂದಲೇ ತೊಲಗುತ್ತದೆಯೇ ಹೊರತು ಯಾವ ಕರ್ಮ ದಿಂದಲೂ ತೊಲಗುವದಿಲ್ಲ. ಏಕೆಂದರೆ (ಅದು) ಅಜ್ಞಾನಕ್ಕೆ ವಿರೋಧಿ ಯಲ್ಲ.**[1]

(ಆಕ್ಷೇಪ):—ಇನ್ನು ಕರ್ಮವು ಅಜ್ಞಾನನಿವರ್ತಕವೆಂದು ಅದೃಷ್ಟ(ಫಲ) ವನ್ನು ಕಲ್ಪಿಸಿದರೊ ?

(ಪರಿಹಾರ):—ಹಾಗಲ್ಲ. ಏಕೆಂದರೆ ಜ್ಞಾನದಿಂದ ಅಜ್ಞಾನವು ತೊಲಗುವ ದೆಂದು (ದೃಷ್ಟವಾಗಿ) ನಿಶ್ಚಯವಾಗಿರುವಲ್ಲಿ ಅದೃಷ್ಟನಿವೃತ್ತಿಯನ್ನು ಕಲ್ಪಿಸುವದು ಆಗಲಾರದು. ಕುಟ್ಟುವದರಿಂದ ಬತ್ತದ ಹೊಟ್ಟು ಹೋಗುವದು (ದೃಷ್ಟವಾಗಿ) ಕಾಣುತ್ತಿರುವಲ್ಲಿ (ಆ) ತುಷನಿವೃತ್ತಿಯು ಅಗ್ನಿಹೋತ್ರಾದಿನಿತ್ಯಕರ್ಮಗಳಿಂದ ಆಗುವ ಅದೃಷ್ಟ(ಫಲವು) ಎಂದು ಹೇಗೆ ಕಲ್ಪಿಸುವದಕ್ಕಾಗುವದಿಲ್ಲವೋ ಹಾಗೆ[2] ಅಜ್ಞಾನದ ನಿವೃತ್ತಿಯೂ ನಿತ್ಯಕರ್ಮಗಳ ಅದೃಷ್ಟಕಾರ್ಯವೆಂದು ಕಲ್ಪಿಸುವ ದಕ್ಕೂ ಆಗುವದಿಲ್ಲ. ಜ್ಞಾನಕ್ಕೆ ಕರ್ಮವು ವಿರುದ್ಧವಾಗಿರುತ್ತದೆ ಎಂದು ಅನೇಕ ಸಲ ಹೇಳಿರುತ್ತೇವೆ.[3] (ಆದರೆ) ಯಾವ ಜ್ಞಾನವು[4] ಕರ್ಮಗಳಿಗೆ ವಿರುದ್ಧವಲ್ಲವೋ ಅದು ದೇವಲೋಕಪ್ರಾಪ್ತಿಗೆ ನಿಮಿತ್ತವು, ಏಕೆಂದರೆ "ವಿದ್ಯೆಯಿಂದ ದೇವಲೋಕವು" (೧.೫-೧೬) ಎಂದು ಶ್ರುತಿಯಿದೆ ಎಂದು ಹೇಳಿರುತ್ತೇವೆ.[5]

---

1. ಅಜ್ಞಾನಶಬ್ದಕ್ಕೆ ವಿಷಯವಾದ ಮೂರು ಬಗೆಯ ಅವಿದ್ಯೆಯೂ ಜ್ಞಾನದಿಂದಲೇ ನಿವರ್ತ್ಯವಾಗಿದೆ, ಏಕೆಂದರೆ ಜ್ಞಾನವೇ ಅದಕ್ಕೆ ವಿರೋಧಿ, ಕರ್ಮವಲ್ಲ—ಎಂದರ್ಥ. ಇಲ್ಲಿ ಆಚಾರ್ಯರು ಅಜ್ಞಾನಶಬ್ದಕ್ಕೆ ಮೂರೇ ಅರ್ಥವೆಂದು ಲೆಕ್ಕಮಾಡಿ ಹೇಳಿರುವದನ್ನು ಲಕ್ಷ್ಯ ದಲ್ಲಿಡಬೇಕು, ಇದು **ಮೂಲಾವಿದ್ಯಾವಾದಕ್ಕೆ** ವಿರೋಧವಾದ ಭಾಷ್ಯ.

2. ದೃಷ್ಟವಾದ ಯಾವ ಕಾರಣದಿಂದಲೂ ಆಗದಿರುವ ಅದೃಷ್ಟಫಲವನ್ನು ಶಾಸ್ತ್ರ ಪ್ರಮಾಣದಿಂದ ಕಲ್ಪಿಸಬಹುದು. ಜ್ಞಾನದಿಂದ ಅಜ್ಞಾನವು ನಿವೃತ್ತವಾಗುವದೆಂದು ಕಂಡು ಬಂದಿರುವದರಿಂದ ಅದರ ನಿವೃತ್ತಿಯು ಕರ್ಮದ ಅದೃಷ್ಟಫಲವೆನ್ನುವದು ಆಗಲಾರದು.

3. ಆದ್ದರಿಂದ ಜ್ಞಾನ, ಕರ್ಮ—ಎರಡೂ ಸೇರಿ ಅಜ್ಞಾನವನ್ನು ತೊಲಗಿಸಲಿ ಎನ್ನುವದ ಕ್ಕಿಲ್ಲ.

4. ಉಪಾಸನೆಯು.

5. ಆದ್ದರಿಂದ ಆ ಜ್ಞಾನಸಮುಚ್ಚಿತಕರ್ಮವು ಅಜ್ಞಾನನಿವರ್ತಕವೆಂದು ಶಂಕಿಸು ವದಕ್ಕೇ ಕಾರಣವಿಲ್ಲ.

## ಮೋಕ್ಷವು ನಿತ್ಯಕರ್ಮಗಳ ಫಲವೆಂದು ಕಲ್ಪಿಸುವದಕ್ಕೆ ಆಗಲಾರದು

(ಭಾಷ್ಯ)

೩೩. ಕಿಂ ಚಾನ್ಯತ್। ಕಲ್ಪ್ಯೇ ಚ ಫಲೇ ನಿತ್ಯಾನಾಂ ಕರ್ಮಣಾಂ ಶ್ರುತಾನಾಂ ಯತ್ ಕರ್ಮಭಿರ್ವಿರುಧ್ಯತೇ, ದ್ರವ್ಯಗುಣಕರ್ಮಣಾಂ ಕಾರ್ಯಮೇವ ನ ಭವತಿ, ಕಿಂ ತತ್ ಕಲ್ಪ್ಯತಾಮ್, ಯಸ್ಮಿನ್ ಕರ್ಮಣಃ ಸಾಮರ್ಥ್ಯಮೇವ ನ ದೃಷ್ಟಮ್। ಕಿಂ ವಾ ಯಸ್ಮಿನ್ ದೃಷ್ಟಂ ಸಾಮರ್ಥ್ಯಂ ಯಚ್ಚ ಕರ್ಮಣಾಂ ಫಲಮ್ ಅವಿರುದ್ಧಂ ತತ್ಕಲ್ಪ್ಯತಾಮಿತಿ ? ಪುರುಷಪ್ರವೃತ್ತಿಜನನಾಯ ಅವಶ್ಯಂ ಚೇತ್ ಕರ್ಮಫಲಂ ಕಲ್ಪಯಿತವ್ಯಮ್, ಕರ್ಮಾವಿರುದ್ಧವಿಷಯ ಏವ ಶ್ರುತಾರ್ಥಾಪತ್ತೇಃ ಕ್ಷೀಣತ್ವಾತ್ ನಿತ್ಯೋ ಮೋಕ್ಷಃ ಫಲಂ ಕಲ್ಪಯಿತುಂ ನ ಶಕ್ಯಃ, ತದ್ವ್ಯವಧಾನಾಜ್ಞಾನನಿವೃತ್ತಿರ್ವಾ। ವಿರುದ್ಧತ್ವಾತ್,[1] ಅದೃಷ್ಟಸಾಮರ್ಥ್ಯವಿಷಯತ್ವಾಚ್ಚ ಇತಿ। ಪಾರಿಶೇಷ್ಯ ನ್ಯಾಯಾತ್ ಮೋಕ್ಷ ಏವ ಕಲ್ಪಯಿತವ್ಯ ಇತಿ ಚೇತ್। ಸರ್ವೇಷಾಂ ಹಿ ಕರ್ಮಣಾಂ ಸರ್ವಂ ಫಲಮ್। ನ ಚಾನ್ಯತ್ ಇತರಕರ್ಮಫಲವ್ಯತಿರೇಕೇಣ ಫಲಂ ಕಲ್ಪನಾಯೋಗ್ಯಮಸ್ತಿ। ಪರಿಶಿಷ್ಟಶ್ಚ ಮೋಕ್ಷಃ। ಸ ಚೇಷ್ಟೋ ವೇದವಿದಾಂ ಫಲಮ್। ತಸ್ಮಾತ್ ಸ ಏವ ಕಲ್ಪಯಿತವ್ಯಃ ಇತಿ ಚೇತ್। ನ। ಕರ್ಮಫಲವ್ಯಕ್ತೀನಾಮ್ ಆನನ್ತ್ಯಾತ್ ಪಾರಿಶೇಷ್ಯನ್ಯಾಯಾನುಪಪತ್ತೇಃ। ನ ಹಿ ಪುರುಷೇಚ್ಛಾವಿಷಯಾಣಾಂ ಕರ್ಮಫಲಾನಾಮ್ ಏತಾವತ್ತ್ವಂ ನಾಮ ಕೇನಚಿತ್ ಅಸರ್ವಜ್ಞೇನ ಅವಧೃತಂ ತತ್ಸಾಧನಾನಾಂ ವಾ ಪುರುಷೇಚ್ಛಾನಾಂ ಚಾ[2]ನಿಯತದೇಶಕಾಲನಿಮಿತ್ತತ್ವಾತ್, ಪುರುಷೇಚ್ಛಾವಿಷಯಸಾಧನಾನಾಂ ಚ ಪುರುಷೇಷ್ಟಫಲಪ್ರಯುಕ್ತತ್ವಾತ್। ಪ್ರತಿಪ್ರಾಣಿ ಚ ಇಚ್ಛಾವೈಚಿತ್ರ್ಯಾತ್, ಫಲಾನಾಂ ತತ್ಸಾಧನಾನಾಂ ಚ ಆನನ್ತ್ಯಸಿದ್ಧಿಃ ತದಾನನ್ತ್ಯಾಚ್ಚ ಅಶಕ್ಯಮ್ ಏತಾವತ್ತ್ವಂ ಪುರುಷೈರ್ಜ್ಞಾತುಮ್ ಅಜ್ಞಾತೇ ಚ ಸಾಧನಫಲೈತಾವತ್ತ್ವೇ ಕಥಂ ಮೋಕ್ಷಸ್ಯ, ಪರಿಶೇಷಸಿದ್ಧಿರಿತಿ[3] ಕರ್ಮಫಲಜಾತಿಪಾರಿಶೇಷ್ಯಮ್ ಇತಿ ಚೇತ್। ಸತ್ಯಪಿ ಇಚ್ಛಾವಿಷಯಾಣಾಂ ತತ್ಸಾಧನಾನಾಂ ಚಾನನ್ತ್ಯೇ ಕರ್ಮಫಲಜಾತಿತ್ವಂ ನಾಮ ಸರ್ವೇಷಾಂ ತುಲ್ಯಮ್, ಮೋಕ್ಷಸ್ತು ಅಕರ್ಮಫಲತ್ವಾತ್ ಪರಿಶಿಷ್ಟಃ ಸ್ಯಾತ್। ತಸ್ಮಾತ್ ಪರಿಶೇಷಾತ್ ಸ ಏವ ಯುಕ್ತಃ ಕಲ್ಪಯಿತುಮ್ ಇತಿ ಚೇತ್। ನ। ತಸ್ಯಾಪಿ ನಿತ್ಯ

---

1. ವಿರುದ್ಧತ್ವಾತ್ ಎಂಬುದೇ ಸರಿಯೆಂದು ಕಲ್ಪಿಸಿದೆ ; 'ಅದೃಷ್ಟ' ಎಂಬ ಪಾಠವನ್ನು ಒಪ್ಪಿದೆ. ಅನುವಾದವನ್ನು ನೋಡಿ.

2. 'ವಾ' ಎಂಬುದಕ್ಕಿಂತ ಈ ಪಾಠವು ಮೇಲು. 'ಪುರುಷೇಚ್ಛಾನಾಮನಿಯತ' ಎಂದಿದ್ದರೂ ಸಾಗುತ್ತದೆ.

3. 'ಪಾರಿಶೇಷ್ಯಸಿದ್ಧಿರಿತಿ' ಎಂದಿದ್ದರೆ ಚೆನ್ನಾಗಿತ್ತೆಂದು ತೋರುತ್ತದೆ.

ಕರ್ಮಫಲತ್ವಾಭ್ಯುಪಗಮೋ ಕರ್ಮಫಲಸಮಾನಜಾತೀಯತ್ವೋಪಪತ್ತೇಃ ಪರಿಶೇಷಾನುಪಪತ್ತಿಃ । ತಸ್ಮಾತ್ ಅನ್ಯಥಾಪ್ಯುಪಪತ್ತೇಃ ಕ್ಷೀಣಾ ಶ್ರುತಾರ್ಥಾಪತ್ತಿಃ । ಉತ್ಪತ್ತ್ಯಾಪ್ತಿವಿಕಾರಸಂಸ್ಕಾರಾಣಾಮನ್ಯತಮಮಪಿ ನಿತ್ಯಾನಾಂ ಕರ್ಮಣಾಂ ಫಲಮ್ ಉಪಪದ್ಯತೇ ಇತಿ ಕ್ಷೀಣಾ ಶ್ರುತಾರ್ಥಾಪತ್ತಿಃ ॥

(ಭಾಷ್ಯಾರ್ಥ)

ಇನ್ನೂ ಒಂದು (ಹೇತು)[1]. ಶ್ರುತವಾಗಿರುವ ನಿತ್ಯಕರ್ಮಗಳಿಗೆ ಫಲವನ್ನು ಕಲ್ಪಿಸಲೇಬೇಕಾದರೆ ಯಾವದು ಕರ್ಮಗಳಿಗೆ ವಿರುದ್ಧವಾಗಿರುತ್ತದೆಯೋ, ದ್ರವ್ಯ ಗುಣಕರ್ಮಗಳ ಕಾರ್ಯವೇ ಅಲ್ಲವೋ ಯಾವದರಲ್ಲಿ ಕರ್ಮಕ್ಕೆ ಸಾಮರ್ಥ್ಯ(ವಿರುವದೇ) ಕಂಡಿಲ್ಲವೋ, ಅದನ್ನು ಕಲ್ಪಿಸಬೇಕೊ, ಅಥವಾ ಯಾವದರಲ್ಲಿ ಸಾಮರ್ಥ್ಯವು ಕಂಡಿರುತ್ತದೆಯೋ, ಯಾವದು ಕರ್ಮಗಳಿಗೆ ವಿರುದ್ಧವಲ್ಲದ ಫಲವೋ ಅದನ್ನು ಕಲ್ಪಿಸಬೇಕೊ? ಪುರುಷರಿಗೆ (ಕರ್ಮಗಳಲ್ಲಿ) ಪ್ರವೃತ್ತಿಯನ್ನುಂಟುಮಾಡುವದಕ್ಕೆ ಕರ್ಮಫಲವನ್ನು ಅವಶ್ಯವಾಗಿ ಕಲ್ಪಿಸಬೇಕಾದರೆ, ಕರ್ಮಗಳಿಗೆ ಅವಿರುದ್ಧವಾದ ವಿಷಯದಲ್ಲಿಯೇ ಶ್ರುತಾರ್ಥಾಪತ್ತಿಯು ಕೊನೆಗಾಣುವದರಿಂದ[2] ನಿತ್ಯವಾದ ಮೋಕ್ಷವನ್ನಾಗಲಿ, ಅದಕ್ಕೆ ವ್ಯವಧಾನವಾಗಿರುವ ಅಜ್ಞಾನದ ನಿವೃತ್ತಿಯನ್ನಾಗಲಿ ಫಲವೆಂದು ಕಲ್ಪಿಸುವದು ಆಗಲಾರದು. ಏಕೆಂದರೆ (ಅದು ಕರ್ಮಕ್ಕೆ) ವಿರುದ್ಧವಾಗಿರುತ್ತದೆ.[3] (ಕರ್ಮ)ಸಾಮರ್ಥ್ಯಕ್ಕೆ ವಿಷಯವೆಂದು ಕಂಡೂ ಇರುವದಿಲ್ಲ.[4]

---

1. ಶ್ರುತಾರ್ಥಾಪತ್ತಿಯಿಂದ ಕರ್ಮಕ್ಕೆ ಮೋಕ್ಷವನ್ನುಂಟುಮಾಡುವ ಸಾಮರ್ಥ್ಯವನ್ನಾಗಲಿ ಅಜ್ಞಾನವನ್ನು ನಾಶಮಾಡುವ ಸಾಮರ್ಥ್ಯವನ್ನಾಗಲಿ ಕಲ್ಪಿಸತಕ್ಕದ್ದಲ್ಲ, ಏಕೆಂದರೆ ಜ್ಞಾನವು ಅಜ್ಞಾನನಿವೃತ್ತಿಯ ಮೂಲಕ ಮೋಕ್ಷವನ್ನು ಕೊಡುವದೆಂಬುದು ನಿಶ್ಚಿತವಾಗಿದೆ ಎಂದು ಹೇಳಿತ್ತಷ್ಟೆ. ಈಗ ನಿತ್ಯಕರ್ಮಕ್ಕೆ ಏನಾದರೂ ಫಲವನ್ನು ಕಲ್ಪಿಸಲೇಬೇಕಾದರೂ ಮೋಕ್ಷವನ್ನು ಕಲ್ಪಿಸತಕ್ಕದ್ದಲ್ಲ ಎಂಬುದನ್ನು ಪ್ರತಿಪಾದಿಸಲಾಗುತ್ತದೆ.

2. ಉತ್ಪತ್ತ್ಯಾದಿಫಲಗಳನ್ನುಂಟುಮಾಡುವದರಲ್ಲಿಯೇ ಅರ್ಥಾಪತ್ತಿಯು ಕೊನೆಗಾಣುತ್ತದೆ, ಅದನ್ನೇ ಕಲ್ಪಿಸೋಣ, ಅದಕ್ಕಾಗಿ ಅದೃಷ್ಟವಾದ ಕರ್ಮವಿರುದ್ಧವಾದ ಫಲವನ್ನು ಕಲ್ಪಿಸಬೇಕಾದದ್ದೇನು?

3. 'ಅವಿರುದ್ಧತ್ವಾತ್ ದೃಷ್ಟಸಾಮರ್ಥ್ಯವಿಷಯತ್ವಾಚ್ಚ' ಎಂಬ ಪಾಠವು ಉತ್ಪತ್ತ್ಯಾದಿಗಳಿಗೆ ಹೊಂದುತ್ತದೆಯಾದರೂ ವಾಕ್ಯದಲ್ಲಿ ಈ ಹೇತುವಿಗೆ ಸರಳವಾಗಿ ಅನ್ವಯವಾಗುವದಿಲ್ಲ.

4. ಅದ್ದರಿಂದ ಕರ್ಮಸಾಮರ್ಥ್ಯಕ್ಕೆ ವಿಷಯವೆಂದು ಕಂಡುಬರದೆ ಇರುವ ಮೋಕ್ಷವನ್ನು ಕರ್ಮಫಲವೆಂದು ಕಲ್ಪಿಸುವದು ಸರಿಯಲ್ಲ ಎಂದರ್ಥ. ವ್ಯಾಖ್ಯಾನಕಾರರು ದೃಷ್ಟಸಾಮರ್ಥ್ಯವಿಷಯತ್ವಾಚ್ಚ ಎಂಬ ಪಾಠವನ್ನಿಟ್ಟುಕೊಂಡು ಕರ್ಮದ ಫಲವು ಉತ್ಪತ್ತ್ಯಾದಿಗಳಲ್ಲಿದೆ ಎಂದು ಕಂಡುಬಂದಿರುವದರಿಂದ ಎಂಬರ್ಥವನ್ನು ತೆಗೆದಿದ್ದಾರೆ. ಇದು ವಾಕ್ಯದಲ್ಲಿ ಸರಿಯಾಗಿ ಅನ್ವಯವಾಗುವದಿಲ್ಲ.

(ಆಕ್ಷೇಪ):–ಪಾರಿಶೇಷ್ಯನ್ಯಾಯದಿಂದ ಮೋಕ್ಷವನ್ನೇ ಕಲ್ಪಿಸಬೇಕು. (ಇದರ ವಿವರ): ಎಲ್ಲಾ ಕರ್ಮಗಳಿಗೂ ಎಲ್ಲವೂ ಫಲ(ವಾಗಿಬಿಟ್ಟಿರುತ್ತದೆ).[1] ಮತ್ತೊಂದು ಕರ್ಮಕ್ಕೆ ಫಲವಾಗಿಲ್ಲದ (ನಿತ್ಯಕರ್ಮಕ್ಕೆ ಫಲವೆಂದು) ಕಲ್ಪಿಸುವದಕ್ಕೆ ಯೋಗ್ಯವಾದ ಬೇರೊಂದು ಫಲವೂ ಇರುವದಿಲ್ಲ. ಮೋಕ್ಷವೇನೋ ಉಳಿದಿದೆ.[2] ಅದು ವೇದವನ್ನು ಬಲ್ಲವರಿಗೆ ಇಷ್ಟವಾದ ಫಲವು. ಆದ್ದರಿಂದ ಅದನ್ನೇ ಕಲ್ಪಿಸಬೇಕು [3]

(ಪರಿಹಾರ):–ಹಾಗಲ್ಲ. ಏಕೆಂದರೆ ಕರ್ಮಫಲವ್ಯಕ್ತಿಗಳು ಅನಂತವಾಗಿರುವದರಿಂದ ಪಾರಿಶೇಷ್ಯನ್ಯಾಯವು (ಇಲ್ಲಿ) ಹೊಂದುವದಿಲ್ಲ.[4] (ಇದರ ವಿವರ): ಪುರುಷರ ಇಚ್ಛೆಗೆ ವಿಷಯವಾದ ಕರ್ಮಗಳ ಫಲಗಳು ಇಷ್ಟೇ ಎಂದು ಸರ್ವಜ್ಞನಲ್ಲದ ಯಾವನೊಬ್ಬನೂ ನಿಶ್ಚಯಿಸಿಲ್ಲವಷ್ಟೆ; ಅವುಗಳ ಸಾಧನಗಳೂ (ಇಂತಿಷ್ಟೇ ಎಂದು ನಿಶ್ಚಯಿಸಿಲ್ಲವಷ್ಟೆ).[5] ಮತ್ತು ಪುರುಷೇಚ್ಛೆಗಳಿಗೆ ದೇಶ, ಕಾಲ, ನಿಮಿತ್ತ– ಇವು ಯಾವವೂ ನಿಯತವಾಗಿಲ್ಲವಾದ್ದರಿಂದಲೂ[6] ಪುರುಷನ ಇಚ್ಛೆಗೆ ವಿಷಯವಾಗಿರುವ (ಫಲಗಳ) ಸಾಧನಗಳು ಪುರುಷನಿಗೆ ಇಷ್ಟವಾದ ಫಲದಿಂದ ಪ್ರಯುಕ್ತವಾಗುವದರಿಂದಲೂ[7] ಒಬ್ಬೊಬ್ಬ ಪ್ರಾಣಿಗೂ ಇಚ್ಛೆಗಳು ಬಗೆಬಗೆಯಾಗಿರುವದ

---

1. ಸ್ವರ್ಗ, ಪಶು, ಪುತ್ರ, ಗ್ರಾಮ– ಮುಂತಾದ ಒಂದೊಂದು ಫಲವು ಒಂದೊಂದು ಕರ್ಮಕ್ಕೆ ಗೊತ್ತಾಗಿದೆ.

2. ಏಕೆಂದರೆ ನಿತ್ಯವಲ್ಲದ ಮತ್ತೆ ಯಾವ ಕರ್ಮಕ್ಕೂ ಮೋಕ್ಷವು ಫಲವೆಂದು ಶ್ರುತವಾಗಿಲ್ಲ.

3. ನಿತ್ಯಕರ್ಮಕ್ಕೆ ಸ್ವರ್ಗದಂತೆ ಇಷ್ಟಫಲವನ್ನೇ ಕಲ್ಪಿಸಬೇಕು; ಮೋಕ್ಷವು ಇಷ್ಟಫಲವಾಗಿದ್ದು ಮತ್ತೊಂದು ಕರ್ಮದ ಫಲವೆಂದು ಗೊತ್ತಾಗದಿರುವದರಿಂದ ಅದನ್ನೇ ನಿತ್ಯಕರ್ಮದ ಫಲವೆಂದು ಕಲ್ಪಿಸಬಹುದು.

4. ಇಷ್ಟೇ ಎಂದ ಗೊತ್ತಾಗಿರುವವುಗಳಲ್ಲಿ ಮಿಕ್ಕೆಲ್ಲವೂ ಹೊಂದದಿದ್ದರೆ ಉಳಿದೊಂದನ್ನು ಇಟ್ಟುಕೊಳ್ಳುವಲ್ಲಿ ಮಾತ್ರ ಈ ನ್ಯಾಯವು ಹೊಂದುತ್ತದೆ.

5 ಇಂತಿಷ್ಟೆಂದ ಗೊತ್ತಾಗದಿರುವಾಗ ಎಲ್ಲವೂ ಮುಗಿದು ಮೋಕ್ಷವೇ ಉಳಿಯುವದು ಎಂದು ಕಲ್ಪಿಸುವದು ಹೇಗಾದೀತು ?

6. ಒಂದೊಂದು ದೇಶದಲ್ಲಿ ಒಂದೊಂದು ಬಗೆಯು, ಒಂದೊಂದು ಕಾಲದಲ್ಲಿ ಒಂದೊಂದು ಬಗೆಯು ಒಂದೊಂದು ನಿಮಿತ್ತದಿಂದ ಒಂದೊಂದು ಬಗೆಯು ಇಚ್ಛೆಯಾಗಬಹುದು.

7. ಇಚ್ಛೆಯೂ ಬದಲಾಯಿಸಿದಂತೆ ಫಲವೂ ಬದಲಾಯಿಸಬಹುದು; ಫಲವು ಬದಲಾಯಿಸಿದಂತೆ ಸಾಧನವೂ ಬದಲಾಯಿಸಬಹುದು. ಆದ್ದರಿಂದ ಇಚ್ಛೆಗೆ ವಿಷಯಗಳಾದ ಫಲಗಳು ಇಂತಿಷ್ಟೇ, ಅವುಗಳ ಸಾಧನಗಳು ಇಂತಿಷ್ಟೇ ಎಂದು ಯಾರಿಂದಲೂ ಗೊತ್ತುಮಾಡುವದಕ್ಕೆ ಬರಲಾರದು.

ರಿಂದಲೂ ಫಲಗಳೂ ಅವುಗಳ ಸಾಧನಗಳೂ ಅನಂತವಾಗಿರುವವೆಂದು ಸಿದ್ಧವಾಗುತ್ತದೆ. ಅವುಗಳು ಅನಂತವಾಗಿರುವದರಿಂದ (ಅವು) ಇಷ್ಟೇ ಎಂದು ಪುರುಷರು ಅರಿತುಕೊಳ್ಳುವದು ಶಕ್ಯವಲ್ಲ. ಸಾಧನಫಲಗಳು ಇಂತಿಷ್ಟೇ ಎಂದು ಗೊತ್ತಾಗದೆ ಇರುವಲ್ಲಿ ಮೋಕ್ಷವು ಪರಿಶಿಷ್ಟವಾಗುವದೆಂಬುದು ಹೇಗೆ ಸಿದ್ಧವಾದೀತು ?

(ಆಕ್ಷೇಪ):- ಕರ್ಮಫಲಜಾತಿಯ ಪಾರಿಶೇಷ್ಯವು (ಸಿದ್ಧವಾಗಬಹುದು. ಇದರ ವಿವರ) : ಇಚ್ಛೆಗಳ ವಿಷಯಗಳೂ ಅವುಗಳ ಸಾಧನಗಳೂ ಅನಂತವಾಗಿದ್ದರೂ ಎಲ್ಲವೂ ಕರ್ಮಫಲದ ಜಾತಿಯವೇ ಎಂಬುದು ಸಮಾನವಾಗಿರುತ್ತದೆ. ಮೋಕ್ಷವಾದರೋ ಕರ್ಮಫಲವಲ್ಲವಾದ್ದರಿಂದ ಉಳಿದುಕೊಳ್ಳಬಹುದಾಗಿದೆ. ಆದ್ದರಿಂದ (ಹೀಗೆ) ಉಳಿಯುವದರಿಂದ ಅದನ್ನೇ (ನಿತ್ಯಕರ್ಮಫಲವೆಂದು) ಕಲ್ಪಿಸುವದು ಯುಕ್ತವು.

(ಪರಿಹಾರ):-ಹಾಗಲ್ಲ. ಏಕೆಂದರೆ ಅದೂ ನಿತ್ಯಕರ್ಮಗಳ ಫಲವೆಂದು ಒಪ್ಪಿದರೆ ಕರ್ಮಫಲಗಳಿಗೆ ಸಮಾನವಾದ (ಅದೇ) ಜಾತಿಯದೆಂದಾಗಬಹುದಾದ್ದರಿಂದ ಪರಿಶೇಷವಾಗಲಾರದು, ಆದ್ದರಿಂದ ಶ್ರುತಾರ್ಥಾಪತ್ತಿಯು ಮತ್ತೊಂದು ಬಗೆಯಿಂದಲೂ ಕ್ಷಯವಾಗಬಹುದಾಗಿದೆ.[1] ಉತ್ಪತ್ತಿ, ಆಪ್ತಿ, ವಿಕಾರ, ಸಂಸ್ಕಾರ- ಇವುಗಳಲ್ಲಿ ಯಾವದಾದರೊಂದೂ ನಿತ್ಯಕರ್ಮಗಳ ಫಲವಾಗಬಹುದಾಗಿರುತ್ತದೆ[2] ಯಾಗಿ ಶ್ರುತಾರ್ಥಾಪತ್ತಿಯು (ಅಷ್ಟರಿಂದ) ಕ್ಷಯವಾಗುತ್ತದೆ.[3]

## ಮೋಕ್ಷವು ಉತ್ಪಾದ್ಯಾದಿಗಳಲ್ಲೊಂದು ಎಂಬುದೂ ಸರಿಯಲ್ಲ

(ಭಾಷ್ಯ)

೩೮. ಚತುರ್ಣಾಮನ್ಯತಮ ಏವ ಮೋಕ್ಷಃ ಇತಿ ಚೇತ್ | ನ | ನ ತಾವತ್ ಉತ್ಪಾದ್ಯಃ ನಿತ್ಯತ್ವಾತ್ | ಅತ ಏವ ಅವಿಕಾರ್ಯಃ | ಅಸಂಸ್ಕಾರ್ಯಶ್ಚ ಅತ ಏವ | ಅಸಾಧನದ್ರವ್ಯಾತ್ಮಕತ್ವಾಚ್ಚ | ಸಾಧನಾತ್ಮಕಂ ಹಿ ದ್ರವ್ಯಂ ಸಂಸ್ಕ್ರಿಯತೇ | ಯಥಾ ಪಾತ್ರ್ಯಾಜ್ಯಾದಿ ಪ್ರೋಕ್ಷಣಾದಿನಾ | ನ ಚ ಸಂಸ್ಕ್ರಿಯಮಾಣಃ ಸಂಸ್ಕಾರನಿರ್ವರ್ತ್ಯೋ ವಾ ಯೂಪಾದಿವತ್ | ಪಾರಿಶೇಷ್ಯಾತ್ ಆಪ್ಯಃ ಸ್ಯಾತ್ | ನಾಪ್ಯೋಽಪಿ | ಆತ್ಮಸ್ವಭಾವತ್ವಾತ್, ಏಕತ್ವಾಚ್ಚ ||

---

1. ಅರ್ಥಾಪತ್ತಿಗೆ ಅನ್ಯಥಾಪ್ಯುಪಪತ್ತಿ (ಮತ್ತೊಂದು ಬಗೆಯಿಂದಲೂ ಹೊಂದುವದು), ಅನ್ಯಥೈವೋಪಪತ್ತಿ (ಮತ್ತೊಂದು ಬಗೆಯಿಂದಲೇ ಹೊಂದುವದು), ನೈವೋಪಪತ್ತಿ (ಹೊಂದದೆಯೇ ಇರುವದು)- ಇವು ಮೂರೂ ದೂಷಣಗಳು. ಇಲ್ಲಿ ಬೇರೊಂದು ಬಗೆಯಿಂದಲೂ ಹೊಂದುವದರಿಂದ ಮೋಕ್ಷವನ್ನು ಕಲ್ಪಿಸಬೇಕಾದದ್ದಿಲ್ಲ ಎಂಬ ದೂಷಣವನ್ನು ಹೇಳಿದೆ.

2. ಬೇರೊಂದು ಬಗೆ ಎಂದರೆ ಉತ್ಪತ್ತಿಗಳಲ್ಲೊಂದಾಗಿರುವದೇ ಎಂದು ವಿವರಿಸಿದೆ.

3. ಆದ್ದರಿಂದ ಅದಕ್ಕಾಗಿ ಮೋಕ್ಷವನ್ನು ಕಲ್ಪಿಸಬೇಕಾದದ್ದಿಲ್ಲ.

(ಭಾಷ್ಯಾರ್ಥ)

(ಆಕ್ಷೇಪ):—ಮೋಕ್ಷವೇ (ಈ) ನಾಲ್ಕರಲ್ಲಿ ಒಂದೇ ಎಂದರೊ ?

(ಪರಿಹಾರ):—ಹಾಗಲ್ಲ. ಮೊದಲನೆಯದಾಗಿ (ಅದು) ಉತ್ಪಾದ್ಯವಲ್ಲ; ಏಕೆಂದರೆ ನಿತ್ಯವಾಗಿರುತ್ತದೆ.[1] ಆದ್ದರಿಂದಲೇ ವಿಕಾರ್ಯವಲ್ಲ.[2] ಆದ್ದರಿಂದಲೇ[3] (ಅದು) ಅದು ಸಾಧನದ್ರವ್ಯದ ಸ್ವರೂಪದ್ದಲ್ಲವಾದ್ದರಿಂದಲೂ (ಸಂಸ್ಕಾರ್ಯವಲ್ಲ). ಸಾಧನರೂಪದ ದ್ರವ್ಯಕ್ಕಲ್ಲವೆ, ಸಂಸ್ಕಾರವನ್ನು ಮಾಡಬಹುದು? ಉದಾಹರಣೆಗೆ ಪಾತ್ರಗಳು, ಆಜ್ಯ– ಮುಂತಾದವುಗಳನ್ನು ಪ್ರೋಕ್ಷಣವೇ ಮುಂತಾದವುಗಳಿಂದ (ಸಂಸ್ಕಾರಗೊಳಿಸಬಹುದು) ಯೂಪಾದಿಗಳಂತೆ (ಅದು) ಸಂಸ್ಕಾರಕ್ಕೆ ಯೋಗ್ಯವಾದದ್ದೂ ಅಲ್ಲ,[4] ಸಂಸ್ಕಾರದಿಂದ ಉಂಟಾಗತಕ್ಕದ್ದೂ ಅಲ್ಲ.[5] ಪಾರಿಶೇಷ್ಯ(ನ್ಯಾಯ)ದಿಂದ ಆಪ್ಯವಾಗಬಹುದು; (ಆದರೆ) ಆಪ್ಯವೂ ಅಲ್ಲ, ಏಕೆಂದರೆ ಆತ್ಮಸ್ವಭಾವದ್ದಾಗಿರುತ್ತದೆ, ಒಂದೇ ಆಗಿರುತ್ತದೆ.[6]

## ನಿತ್ಯಕರ್ಮಗಳ ವೈಲಕ್ಷಣ್ಯದಿಂದ ವಿಲಕ್ಷಣವಾದ ಮೋಕ್ಷವೂ ಫಲವೆಂದು ಸಿದ್ಧವಾಗದು

(ಭಾಷ್ಯ)

೩೫. ಇತರೈಃ ಕರ್ಮಭಿರ್ವೈಲಕ್ಷಣ್ಯಾತ್ ನಿತ್ಯಾನಾಂ ಕರ್ಮಣಾಮ್ ತತ್ಫಲೇನಾಪಿ ವಿಲಕ್ಷಣೇನ ಭವಿತವ್ಯಮ್ ಇತಿ ಚೇತ್। ನ। ಕರ್ಮತ್ವಸಾಲಕ್ಷಣ್ಯಾತ್ ಸಲಕ್ಷಣಂ ಕಸ್ಮಾತ್ ಫಲಂ ನ ಭವತಿ ಇತರಕರ್ಮಫಲೈಃ ? ನಿಮಿತ್ತವೈಲಕ್ಷಣ್ಯಾತ್ ಇತಿ ಚೇತ್। ನ। ಕ್ಷಾಮವತ್ಯಾದಿಭಿಃ ಸಮಾನತ್ವಾತ್। ಯಥಾ ಹಿ ಗೃಹದಾಹಾದೌ

---

1. ಉತ್ಪಾದ್ಯವಾದದ್ದು ಅನಿತ್ಯವಾಗಿರಬೇಕು.

2. ವಿಕಾರ್ಯವಾದರೂ ಅನಿತ್ಯವಾಗಿರಬೇಕು.

3. ನಿತ್ಯವಾದರೆ ಹೊಸ ಸಂಸ್ಕಾರವನ್ನು ಅದಕ್ಕೆ ಮಾಡುವದಕ್ಕೆ ಆಗಲಾರದು; ಆದರೆ ಅದು ವಿಕಾರ್ಯವಾಗಿಬಿಡುತ್ತದೆ.

4. ಯೂಪವನ್ನು ಎಂಟು ಮೂಲೆಗಳಾಗಿ ಮಾಡುವದು, ಎಣ್ಣೆ ಹಚ್ಚುವದು– ಮುಂತಾದ ಮಾರ್ಗಗಳಿಂದ ಸಂಸ್ಕಾರಮಾಡಬಹುದು; ಹಾಗೆ ಮೋಕ್ಷವನ್ನು ಮಾಡುವದಕ್ಕೆ ಬರುವದಿಲ್ಲ.

5. ಆಹವನೀಯಾಗ್ನಿಯು ಸಂಸ್ಕಾರದಿಂದ ಉಂಟಾಗತಕ್ಕದ್ದು; ಮೋಕ್ಷವು ಅಂಥದ್ದೂ ಅಲ್ಲ.

6. ತಾನೇ ತನ್ನನ್ನೂ ಪಡೆಯಬೇಕೆಂಬುದಕ್ಕೆ ಅರ್ಥವಿಲ್ಲ. ಭೇದವಿಲ್ಲದ ಕಡೆಯಲ್ಲಿ ಒಂದನ್ನು ಇನ್ನೊಬ್ಬನು ಪಡೆಯುತ್ತಾನೆ ಎಂಬ ವ್ಯವಹಾರವೂ ಇರುವಂತಿಲ್ಲ.

ನಿಮಿತ್ತೇ ಕ್ಷಾಮವತ್ಯಾದೀಷ್ಟಿಃ, ಯಥಾ ಭಿನ್ನೇ ಜುಹೋತಿ ಸ್ಕನ್ನೇ ಜುಹೋತಿ ಇತ್ಯೇವಮಾದೌ ನೈಮಿತ್ತಿಕೇಷು ಕರ್ಮಸು ನ ಮೋಕ್ಷಃ ಫಲಂ ಕಲ್ಪ್ಯತೇ ನೈಶ್ಚಾವಿಶೇಷಾತ್ ನೈಮಿತ್ತಿಕತ್ವೇನ | ಜೀವನಾದಿನಿಮಿತ್ತೇ ಚ ಶ್ರವಣಾತ್, ತಥಾ ನಿತ್ಯಾನಾಮಪಿ ನ ಮೋಕ್ಷಃ ಫಲಮ್ | ಆಲೋಕಸ್ಯ ಸರ್ವೇಷಾಂ ರೂಪ ದರ್ಶನಸಾಧನತ್ವೇ ಉಲೂಕಾದಯಃ ಆಲೋಕೇನ ರೂಪಂ ನ ಪಶ್ಯನ್ತೀತಿ ಉಲೂ ಕಾದಿಚಕ್ಷುಷೋ ವೈಲಕ್ಷಣ್ಯಾತ್ ಇತರಲೋಕಚಕ್ಷುರ್ಭಿಃ ನ ರಸಾದಿವಿಷಯತ್ವಂ ಪರಿಕಲ್ಪ್ಯತೇ | ರಸಾದಿವಿಷಯೇ ಸಾಮರ್ಥ್ಯಸ್ಯ ಅದೃಷ್ಟತ್ವಾತ್ | ಸುದೂರಮಪಿ ಗತ್ವಾ ಯದ್ವಿಷಯೇ ದೃಷ್ಟಂ ಸಾಮರ್ಥ್ಯಮ್ ತತ್ರೈವ ಕಶ್ಚಿತ್ ವಿಶೇಷಃ ಕಲ್ಪ ಯಿತವ್ಯಃ ||

(ಭಾಷ್ಯಾರ್ಥ)

(ಆಕ್ಷೇಪ):—ನಿತ್ಯಕರ್ಮಗಳಿಗಿಂತ ವಿಲಕ್ಷಣವಾಗಿರುವದರಿಂದ ಅವುಗಳ ಫಲಗಳೂ ವಿಲಕ್ಷಣವಾಗಿರಬೇಕು[1].

(ಪರಿಹಾರ):—ಹಾಗಲ್ಲ. ಕರ್ಮತ್ವವೆಂಬ ಸಾಲಕ್ಷಣ್ಯವಿರುವದರಿಂದ (ಅವಕ್ಕೆ) ಇತರ ಕರ್ಮಫಲಕ್ಕೆ ಸಮಾನವಾದ ಲಕ್ಷಣವುಳ್ಳ ಫಲವೇ ಏಕಾಗುವ ದಿಲ್ಲ ?

(ಆಕ್ಷೇಪ):- ನಿಮಿತ್ತವು ಬೇರೆಯಾಗಿರುವದರಿಂದ ಎಂದರೋ ?

(ಪರಿಹಾರ):-ಹಾಗಲ್ಲ ಏಕೆಂದರೆ ಕ್ಷಾಮವತೀ ಮುಂತಾದವುಗಳಿಗೆ (ಅವು) ಸಮಾನವಾಗಿದೆ. (ಇದರ ವಿವರ): ಹೇಗೆ ಮನೆಯು ಸುಡುವದೇ ಮುಂತಾದ ಕಾರಣದಿಂದ ಕ್ಷಾಮವತೀ ಎಂಬ ಇಷ್ಟಿಯೇ ಮುಂತಾದದ್ದು (ವಿಹಿತವಾಗಿದೆಯೋ), ಹೇಗೆ "ಪಾತ್ರೆಯು ಒಡೆದುಕೊಂಡರೆ ಹೋಮಮಾಡಬೇಕು", (?) "(ಪಾತ್ರೆಯ ಒಳಗಿನ ದ್ರವ್ಯವು) ಸುರಿದರೆ ಹೋಮಮಾಡಬೇಕು" (?) ಇವೇ ಮುಂತಾದ ನೈಮಿತ್ತಿಕಕರ್ಮಗಳಲ್ಲಿ ಮೋಕ್ಷವು ಫಲವೆಂದು ಕಲ್ಪಿಸುವದಿಲ್ಲವೋ[2] ಹಾಗೆಯೇ ನಿತ್ಯಕರ್ಮಗಳಿಗೂ ಮೋಕ್ಷವು ಫಲವಲ್ಲ, ಏಕೆಂದರೆ (ಅವು) ಆ (ಕ್ಷಾಮವತೀ)

---

1. ಇದು ಅನುಮಾನ. ಇದಕ್ಕೆ ಪ್ರತ್ಯನುಮಾನವನ್ನು ಸಿದ್ಧಾಂತಿ ಮುಂದೆ ಹೇಳಿರು ತ್ತಾನೆ.

2. ಆಹಿತಾಗ್ನಿಯಾದವನ ಮನೆಗೆ ಬೆಂಕಿ ಬಿದ್ದರೆ ಕ್ಷಾವ-ವಾನ್ ಅಗ್ನಿಗೆ ಪುರೋಡಾಶ ವನ್ನು ಕೊಡಬೇಕು ಎಂದು ಕ್ಷಾಮವತೀಷ್ಟಿಯನ್ನು ವಿಧಿಸಿದೆ. ಇದರಂತೆ ಯಾವನಿಗೆ ಎರಡು ಹವಿಸ್ಸೂ ನಾಶವಾಗುವದೋ ಅವನು ಪಂಚಶರಾವ ಓದನವನ್ನು ಇಂದ್ರನಿಗೆ ನಿರ್ವಾಪಮಾಡ ಬೇಕು ಎಂದು ವಿಧಿಸಿದೆ. ಹೀಗೆಯೇ ಪಾತ್ರೆಯು ಒಡೆದುಕೊಳ್ಳುವದೇ ಮುಂತಾದ ನಿಮಿತ್ತ ಗಳಿಂದ ಆಯಾ ಪ್ರಾಯಶ್ಚಿತ್ತವನ್ನು ವಿಧಿಸಿದೆ. ಇವುಗಳಿಗೆ ಮೋಕ್ಷವು ಫಲವೆಂದು ಯಾರೂ ಕಲ್ಪಿಸುವದಿಲ್ಲ.

ಮುಂತಾದವಕ್ಕೆ ನೈಮಿತ್ತಿಕವಾಗಿರುವದು ಸಮಾನವಾಗಿವೆ, ಏಕೆಂದರೆ ಜೀವನಾದಿ ನಿಮಿತ್ತದಿಂದಲೇ ಶ್ರುತವಾಗಿವೆ.[1] ಬೆಳಕು ಎಲ್ಲರಿಗೂ ರೂಪವನ್ನು ಕಾಣುವದಕ್ಕೆ ಸಾಧನವಾಗಿರುವಲ್ಲಿ ಗೂಬೆ ಮುಂತಾದವು ಬೆಳಕಿನಿಂದ ರೂಪವನ್ನು ಕಾಣುವದಿಲ್ಲ ವೆಂಬ ಕಾರಣದಿಂದ ಗೂಬೆಯೇ ಮುಂತಾದವುಗಳ ಕಣ್ಣು ಮಿಕ್ಕವರ ಕಣ್ಣುಗಳಿ ಗಿಂತ ವಿಲಕ್ಷಣವಾಗಿರುವದರಿಂದ (ಅದಕ್ಕೆ) ರುಚಿಯೇ ಮುಂತಾದದ್ದು ವಿಷಯ ವೆಂದೇನೂ ಕಲ್ಪಿಸುವದಿಲ್ಲ; ಏಕೆಂದರೆ ಅದಕ್ಕೆ ರುಚಿಯೇ ಮುಂತಾದ ವಿಷಯ ದಲ್ಲಿ ಸಾಮರ್ಥ್ಯವು ಕಂಡಿರುವದಿಲ್ಲ. ಬಲುದೂರನಾದರೂ ಹೋಗಿ (ಅದಕ್ಕೆ) ಯಾವ ವಿಷಯದಲ್ಲಿ ಸಾಮರ್ಥ್ಯವು (ಇದುವದು) ಕಂಡಿದೆಯೋ ಅದರಲ್ಲಿಯೇ ಯಾವದಾದರೊಂದು ವಿಷಯವನ್ನು ಕಲ್ಪಿಸಬೇಕು.[2]

## ವಿದ್ಯಾಸಂಯುಕ್ತಕರ್ಮಗಳಿಗೆ ಮುಕ್ತಿಯಲ್ಲದ ಕಾರ್ಯಾಂತರ ವಾಗಬಹುದು

(ಭಾಷ್ಯ)

೩೬. ಯತ್ಪುನರುಕ್ತಮ್ ಮನ್ತ್ರಶರ್ಕರಾದಿಸಂಯುಕ್ತವಿಷದಧ್ಯಾದಿವತ್ ನಿತ್ಯಾನಿ (ಕರ್ಮಾಣಿ) ಕಾರ್ಯಾನ್ತರಮಾರಭನ್ತ ಇತಿ| ಆರಭ್ಯತಾಂ ವಿಶಿಷ್ಟಂ ಕಾರ್ಯಮ್| ತದಿಷ್ಟತ್ವಾತ್ ಅವಿರೋಧಃ| ನಿರಭಿಸಂಧೇಃ ಕರ್ಮಣೋ ವಿದ್ಯಾ ಸಂಯುಕ್ತಸ್ಯ ವಿಶಿಷ್ಟಕಾರ್ಯಾನ್ತರಾರಮ್ಭೇ ನ ಕಶ್ಚಿತ್ ವಿರೋಧಃ| ದೇವ ಯಾಜ್ಯಾತ್ಮಯಾಜಿನೋಃ ಆತ್ಮಯಾಜಿನೋ ವಿಶೇಷಶ್ರವಣಾತ್ "ದೇವ ಯಾಜಿನಃ ಶ್ರೇಯಾನಾತ್ಮಯಾಜೀ" (ಶತ. ಬ್ರಾ. ೧೧-೨-೬-೧೩) ಇತ್ಯಾದೌ "ಯದೇವ ವಿದ್ಯಯಾ ಕರೋತಿ" (ಛಾಂ. ೧-೧-೧೦) ಇತ್ಯಾದೌ ಚ| ಯಸ್ತು ಪರಮಾತ್ಮದರ್ಶನವಿಷಯೇ ಮನುನೋಕ್ತಃ ಆತ್ಮಯಾಜಿಶಬ್ದಃ ಸಮಂ ಪಶ್ಯನ್ನಾ ತ್ಮಯಾಜೀ"(೧೨ ೯೧) ಇತ್ಯತ್ರ, ಸಮಂ ಪಶ್ಯನ್ ಆತ್ಮಯಾಜೀ ಭವತಿ ಇತ್ಯರ್ಥಃ| ಅಥವಾ ಭೂತಪೂರ್ವಗತ್ಯಾ| ಆತ್ಮಯಾಜೀ ಆತ್ಮಸಂಸ್ಕಾರಾರ್ಥಂ ನಿತ್ಯಾನಿ ಕರ್ಮಾಣಿ ಕರೋತಿ "ಇದಂ ಮೇಽನೇನಾಙ್ಗಂ ಸಂಸ್ಕ್ರಿಯತೇ" (ಶತ. ಬ್ರಾ. ೧೧-೨-೬-೧೩) ಇತಿ ಶ್ರುತೇಃ| ತಥಾ "ಗಾರ್ಭೈರ್ಹೋಮೈಃ" (೨-೨-೭) ಇತ್ಯಾದಿ

---

1. ಮನುಷ್ಯನು ಬದುಕಿರುವಾಗ ಹೋಮವೇ ಮುಂತಾದ ನಿತ್ಯಕರ್ಮಗಳನ್ನು ಮಾಡ ಬೇಕು ಎಂದು ಜೀವನನಿಮಿತ್ತವಾಗಿ ಅವುಗಳನ್ನು ವಿಧಿಸಿರುವದರಿಂದ ಅವಕ್ಕೂ ನೈಮಿತ್ತಿಕತ್ವವು ಸಮಾನವಾಗಿದೆ.

2. ಕತ್ತಲೆಯ ಸಹಾಯವಿಲ್ಲದೆಯೇ ಕಾಣುವ ಸಾಮರ್ಥ್ಯವಿದೆ, ಸೂಕ್ಷ್ಮವಸ್ತುಗಳನ್ನೂ ಕಾಣುವ ಸಾಮರ್ಥ್ಯವಿದೆ ಎಂದು ಮುಂತಾಗಿ ಕಲ್ಪಿಸಬೇಕು.

3. ಇಲ್ಲಿಯೂ 'ವಿದ್ಯಾಮನ್ತ್ರ' ಎಂದು ವಿದ್ಯಾಶಬ್ದವು ಅಚ್ಚಿನ ಪುಸ್ತಕದಲ್ಲಿ ಹೆಚ್ಚಾ ಗಿದೆ.

ಪ್ರಕರಣೇ ಕಾರ್ಯಕರಣಸಂಸ್ಕಾರಾರ್ಥತ್ವಂ ನಿತ್ಯಾನಾಂ ಕರ್ಮಣಾಂ ದರ್ಶಯತಿ ಸಂಸ್ಕೃತಶ್ಚ ಯ ಆತ್ಮಯಾಜೀ ತೈಃ ಕರ್ಮಭಿಃ ಸಮಂ ದ್ರಷ್ಟುಂ ಸಮರ್ಥೋ ಭವತಿ। ತಸ್ಯ ಇಹ ವಾ ಜನ್ಮಾನ್ತರೇ ವಾ ಸಮಮ್ ಆತ್ಮದರ್ಶನಮ್ ಉತ್ಪದ್ಯತೇ। ಸಮಂ ಪಶ್ಯನ್ ಸ್ವಾರಾಜ್ಯಮ್ ಅಧಿಗಚ್ಛತಿ ಇತ್ಯೇಷೋಽರ್ಥಃ। ಆತ್ಮಯಾಜಿಶಬ್ದಸ್ತು ಭೂತಪೂರ್ವಗತ್ಯಾ ಪ್ರಯುಜ್ಯತೇ ಜ್ಞಾನಯುಕ್ತಾನಾಂ ನಿತ್ಯಾನಾಂ ಕರ್ಮಣಾಂ ಜ್ಞಾನೋತ್ಪತ್ತಿಸಾಧನತ್ವಪ್ರದರ್ಶನಾರ್ಥಮ್ ॥

(ಭಾಷ್ಯಾರ್ಥ)

ಇನ್ನು ಮಂತ್ರ, ಸಕ್ಕರೆ– ಮುಂತಾದವುಗಳಿಂದೊಡಗೂಡಿದ ವಿಷ, ಮೊಸರು –ಮುಂತಾದವುಗಳಂತೆ ನಿತ್ಯ(ಕರ್ಮ)ಗಳು ಬೇರೊಂದು ಕಾರ್ಯವನ್ನುಂಟುಮಾಡಬಹುದು ಎಂದು ಹೇಳಿದಿರಷ್ಟೆ, (ಅದಕ್ಕೆ ನಮ್ಮ ಉತ್ತರವೇನೆಂದರೆ, ಅದು) ಅಸಾಧಾರಣವಾದ (ಬೇರೊಂದು) ಕಾರ್ಯವನ್ನುಂಟುಮಾಡಲಿ, ಅಲ್ಲಿ (ನಮಗೂ ಅದು) ಇಷ್ಟವಾಗಿರುವದರಿಂದ (ಯಾವ) ವಿರೋಧವೂ ಇರುವದಿಲ್ಲ (ಇದರ ವಿವರ)· (ಫಲದ) ಇಚ್ಛೆಯಿಲ್ಲದವನ ಕರ್ಮವು ವಿದ್ಯಾಸಂಯುಕ್ತವಾದರೆ ಅಸಾಧಾರಣವಾದ ಕಾರ್ಯವನ್ನುಂಟುಮಾಡಿದರೆ ಯಾವ ವಿರೋಧವೂ ಇಲ್ಲ[1], ಏಕೆಂದರೆ ದೇವಯಾಜಿ ಆತ್ಮಯಾಜಿ–(ಈ ಇಬ್ಬ)ರೊಳಗೆ "ದೇವಯಾಜಿಗಿಂತ ಆತ್ಮಯಾಜಿಯು ಉತ್ತಮ" (ಶತ ಬ್ರಾ. ೧೧-೨-೬-೧೩) ಎಂಬುದೇ ಮುಂತಾದ (ಶ್ರುತಿಯಲ್ಲಿಯೂ)[2] "ಯಾವದನ್ನು ವಿದ್ಯೆಯೊಡನೆ ಮಾಡುವನೋ (ಅದೇ ವೀರ್ಯವತ್ತರವಾಗುತ್ತದೆ)"(ಛಾಂ. ೧-೧-೧೦) ಎಂಬಿದೇ ಮುಂತಾದ (ಶ್ರುತಿಯಲ್ಲಿಯೂ) ಆತ್ಮಯಾಜಿಯಲ್ಲಿ ವಿಶೇಷವನ್ನು ಹೇಳಿರುತ್ತದೆ.

ಇನ್ನು ಪರಮಾತ್ಮದರ್ಶನದ ವಿಷಯದಲ್ಲಿ "ಸಮಂ ಪಶ್ಯನ್ ಆತ್ಮಯಾಜೀ"

---

1. ಪೂರ್ವಪಕ್ಷಿಗೆ ನಿತ್ಯಕರ್ಮಗಳು ಉಪಾಸನಾಯುಕ್ತವಾದರೆ ಮೋಕ್ಷವನ್ನು ಕೊಡಬಹುದು ಎಂಬ ಅಭಿಪ್ರಾಯವಿದೆ, ಅದು ಸಿದ್ಧಾಂತಿಗೆ ಒಪ್ಪಿಲ್ಲವಾದರೂ ಬರಿಯ ಕರ್ಮಕ್ಕಿಂತ ಉಪಾಸನಾಯುಕ್ತಕರ್ಮವು ಬೇರೊಂದು ಕಾರ್ಯವನ್ನು ಕೊಡಬಹುದು ಎಂಬುದು ಇಷ್ಟವಾಗಿದೆ. ಆ ಬೇರೊಂದು ಕಾರ್ಯವು ಯಾವದೆಂಬುದನ್ನು ಇಲ್ಲಿ ವಿವರಿಸುವದಕ್ಕಾಗಿ ಈ ಅರ್ಧಾಂಗೀಕಾರವನ್ನು ಹೇಳಿದೆ.

2. ಉಪಾಸನಾಸಹಿತವಾಗಿ ಕರ್ಮವನ್ನು ಮಾಡುವವನು ಆತ್ಮಯಾಜಿಯು, ಬರಿಯ ಕರ್ಮವನ್ನು ದೇವತೆಗಳ ಪ್ರೀತಿಗಾಗಿ ಮಾಡುವವನು ದೇವಯಾಜಿಯು. ಆತ್ಮಯಾಜಿಯು ಇವರಿಬ್ಬರಲ್ಲಿ ಹೆಚ್ಚಿನವನು ಎಂದರ್ಥ. ಇಲ್ಲಿರುವದು ಶ್ರುತಿಯ ಅರ್ಥಮಾತ್ರವೇ.

(ಮನು. ೧೨-೯೧)[1] ಎಂಬಲ್ಲಿ ಮನುವು ಹೇಳಿರುವ ಆತ್ಮಯಾಜಿಶಬ್ದವಿದೆಯಲ್ಲ, (ಅಲ್ಲಿ) ಸಮವನ್ನು ಕಾಣುವದರಿಂದ ಆತ್ಮಯಾಜಿಯಾಗುವನು ಎಂದು ಅರ್ಥ[2]. ಅಥವಾ ಭೂತಪೂರ್ವಗತಿಯಿಂದ (ಅಲ್ಲಿ ಆತ್ಮಯಾಜಿಶಬ್ದವನ್ನುಪಯೋಗಿಸಿದೆ ಎಂದಾದರೂ ಹೇಳಬಹುದು. ಹೇಗೆಂದರೆ): ಆತ್ಮಯಾಜಿಯು ಆತ್ಮಸಂಸ್ಕಾರಕ್ಕಾಗಿ ನಿತ್ಯಕರ್ಮಗಳನ್ನು ಮಾಡುತ್ತಾನೆ; ಏಕೆಂದರೆ "ಈ (ಕರ್ಮ)ದಿಂದ ಈ ನನ್ನ ಅಂಗವು ಸಂಸ್ಕೃತವಾಗುತ್ತಿದೆ" (ಶತ. ಬ್ರಾ. ೧೧-೨-೬-೧೩) ಎಂದು ಶ್ರುತಿಯಿದೆ. ಹೀಗೆಯೇ 'ಗಾರ್ಭೈರ್ಹೋಮೈಃ'[3] (ಮನು. ೨-೨೭) ಗರ್ಭಶುದ್ಧಿಗಾಗಿ ಮಾಡುವ ಹೋಮಗಳಿಂದಲೂ ಬೀಜಸಂಬಂಧವಾದ ಮತ್ತು ಗರ್ಭಸಂಬಂಧವಾದ ದೋಷವು ಹೋಗುತ್ತದೆ)ಮುಂತಾದ (ಸಂಸ್ಕಾರಗಳ) ಪ್ರಕರಣದಲ್ಲಿ ನಿತ್ಯಕರ್ಮಗಳು ಕಾರ್ಯ ಕರಣಸಂಸ್ಕಾರಕ್ಕಾಗಿ (ಮಾಡತಕ್ಕವು) ಎಂದು (ಮನು ತಿಳಿಸಿರುತ್ತಾನೆ). (ಹೀಗೆ) ಆ ಕರ್ಮಗಳಿಂದ ಸಂಸ್ಕೃತನಾದ ಆತ್ಮಯಾಜಿಯು ಸಮವಾಗಿ(ಆತ್ಮನನ್ನು) ಕಾಣಲು ಸಮರ್ಥನಾಗುತ್ತಾನೆ; ಅವನಿಗೆ ಇಲ್ಲಿ ಅಥವಾ ಜನ್ಮಾಂತರದಲ್ಲಿ[4] ಸಮ ವಾದ ಆತ್ಮದರ್ಶನವು ಉಂಟಾಗುತ್ತದೆ. (ಹಾಗೆ) ಸಮವನ್ನು ಕಂಡುಕೊಂಡವನು ಸ್ವಾರಾಜ್ಯವನ್ನು ಹೊಂದುತ್ತಾನೆ ಎಂಬುದು (ಶ್ಲೋಕದ) ಅರ್ಥವು. ಆತ್ಮಯಾಜಿ

---

1. ಸರ್ವಭೂತೇಷು ಚಾತ್ಮಾನಂ ಸರ್ವಭೂತಾನಿ ಚಾತ್ಮನಿ। ಸಮಂ ಪಶ್ಯನ್ನಾತ್ಮ ಯಾಜೀ ಸ್ವಾರಾಜ್ಯಮಧಿಗಚ್ಛತಿ ॥ (೧೨-೯೧) ಎಂದು ಅಚ್ಚಿನ ಪುಸ್ತಕದ ಪಾಠ. 'ಸಂಪಶ್ಯ ನ್ನಾತ್ಮಯಾಜೀ ವೈ' ಎಂದು ಟೀಕಾಸಮ್ಮತಪಾಠ. ಇಲ್ಲಿ ಅಚ್ಚಿನ ಪಾಠವೇ ಆಚಾರ್ಯರಿಗೆ ಸಮ್ಮತವೆಂದು ನಮ್ಮ ಅಭಿಪ್ರಾಯ.

2. ಪರಮಾತ್ಮನು ಎಲ್ಲರಲ್ಲಿಯೂ ಸಮನಾಗಿರುತ್ತಾನೆ, ಎಲ್ಲರೂ ಆತ್ಮನಲ್ಲಿಯೇ ಸಮ ವಾಗಿರುತ್ತಾರೆ-ಎಂದು ಕಂಡುಕೊಂಡವನು ನಿಜವಾಗಿ ಆತ್ಮಯಾಜಿಯು ಎಂದು ಆತ್ಮಜ್ಞಾನಿಯನ್ನು ಹೊಗಳಿದೆ ಎಂದು ಅಭಿಪ್ರಾಯ.

3. ಗಾರ್ಭೈರ್ಹೋಮೈರ್ಜಾತಕರ್ಮಚೌಡಮೌಂಜೀನಿಬನ್ಧನೈಃ ।
ಬೈಜಿಕಂ ಗಾರ್ಭಿಕಂ ಚೈನೋ ದ್ವಿಜಾನಾಮಪಮೃಜ್ಯತೇ ॥

ಎಂಬ ಶ್ಲೋಕದಲ್ಲಿ ಪಿತೃಬೀಜಸಂಬಂಧವಾದ ಮತ್ತು ಗರ್ಭಸಂಬಂಧವಾದ ದೋಷನಿವೃತ್ತಿ ಯನ್ನು ಹೇಳಿದೆ. ಮುಂದಿನ ಶ್ಲೋಕದಲ್ಲಿ ಮಹಾಯಜ್ಞಾದಿಗಳಿಂದ ಗುಣಾಧಾನವನ್ನು ಹೇಳಿದೆ.

4. ಸಾಧನವನ್ನು ಮಾಡಿದವನಿಗೆ ಪ್ರತಿಬಂಧವಿಲ್ಲದಿದ್ದರೆ ಈ ಜನ್ಮದಲ್ಲಿಯೇ ಜ್ಞಾನ ಉಂಟಾಗುತ್ತದೆ; ಪ್ರತಿಬಂಧವಿದ್ದರೆ ಮತ್ತೊಂದು ಜನ್ಮದಲ್ಲಿ ಉಂಟಾಗುತ್ತದೆ. (ಸೂ. ಭಾ. ೩-೪-೫೧, ಭಾ. ಭಾ. ೪೯೮).

ಶಬ್ದವಾದರೋ ಭೂತಪೂರ್ವಗತಿಯಿಂದ, ಜ್ಞಾನಯುಕ್ತವಾದ ನಿತ್ಯಕರ್ಮಗಳು ಜ್ಞಾನೋತ್ಪತ್ತಿಗೆ ಸಾಧನವಾಗಿರುತ್ತವೆ ಎಂದು ತಿಳಿಸುವದಕ್ಕಾಗಿ ಪ್ರಯುಕ್ತವಾಗಿರುತ್ತದೆ.[1]

## ನಿತ್ಯಕರ್ಮಗಳಿಗೆ ಎರಡು ಬಗೆಯ ಫಲ

(ಭಾಷ್ಯ)

೩೭. ಕಿಂ ಚಾನ್ಯತ್, "ಬ್ರಹ್ಮಾ ವಿಶ್ವಸೃಜೋ ಧರ್ಮೋ ಮಹಾನವ್ಯಕ್ತಮೇವ ಚ | ಉತ್ತಮಾಂ ಸಾತ್ತ್ವಿಕೀಮೇತಾಂ ಗತಿಮಾಹುರ್ಮನೀಷಿಣಃ" (ಮನು. ೧೨-೫೦) ಇತಿ ಚ | ದೇವನಾಷ್ಟಿರ್ವ್ಯತಿರೇಕೇಣ ಭೂತಾಪ್ಯಯಂ ದರ್ಶಯತಿ "ಭೂತಾನ್ಯಪ್ಯೇತಿ ಪಞ್ಚ ವೈ" (ಮನು. ೧೨-೯೦) | ಭೂತಾನ್ಯತ್ಯೇತಿ ಇತಿ ಯೇ ಪಾಠಂ ಕುರ್ವನ್ತಿ ತೇಷಾಂ ವೇದವಿಷಯೇ ಪರಿಚ್ಛಿನ್ನಬುದ್ಧಿತ್ವಾತ್ ಅದೋಷಃ | ನ ಚಾರ್ಥವಾದತ್ವಮ್ ಅಧ್ಯಾಯಸ್ಯ | ಬ್ರಹ್ಮಾನ್ತಕರ್ಮವಿಪಾಕಾರ್ಥಸ್ಯ ತದ್ವ್ಯತಿರಿಕ್ತಾತ್ಮಜ್ಞಾನಾರ್ಥಸ್ಯ ಚ ಕರ್ಮಕಾಣ್ಡೋಪನಿಷದ್ಭ್ಯಾಂ ತುಲ್ಯಾರ್ಥತ್ವದರ್ಶನಾತ್ | ವಿಹಿತಾಕರಣಪ್ರತಿಷಿದ್ಧಕರ್ಮಣಾಂ ಚ ಸ್ಥಾವರಶ್ವಸೂಕರಾದಿಫಲದರ್ಶನಾತ್ | ವಾನ್ತಾಶ್ಯಾದಿಪ್ರೇತದರ್ಶನಾಚ್ಚ | ನ ಚ ಶ್ರುತಿಸ್ಮೃತಿವಿಹಿತಪ್ರತಿಷಿದ್ಧವ್ಯತಿರೇಕೇಣ ವಿಹಿತಾನಿ ವಾ ಪ್ರತಿಷಿದ್ಧಾನಿ ವಾ ಕರ್ಮಾಣಿ ಕೇನಚಿತ್ ಅವಗನ್ತುಂ ಶಕ್ಯನ್ತೇ | ಯೇಷಾಮ್ ಅಕರಣಾತ್ ಅನುಷ್ಠಾನಾಚ್ಚ ಪ್ರೇತಶ್ವಸೂಕರಸ್ಥಾವರಾದೀನಿ ಕರ್ಮಫಲಾನಿ ಪ್ರತ್ಯಕ್ಷಾನುಮಾನಾಭ್ಯಾಮ್ ಉಪಲಭ್ಯನ್ತೇ | ನ ಚೈಷಾಮ್ ಅಕರ್ಮಫಲತ್ವಂ ಕೇನಚಿತ್ ಅಭ್ಯುಪಗಮ್ಯತೇ | ತಸ್ಮಾತ್ ವಿಹಿತಾಕರಣಪ್ರತಿಷಿದ್ಧಸೇವಾನಾಂ ಯಥೈತೇ ಕರ್ಮವಿಪಾಕಾಃ ಪ್ರೇತತಿರ್ಯಕ್ಸ್ಥಾವರಾದಯಃ, ತಥಾ ಉತ್ಕೃಷ್ಟೇಷ್ವಪಿ ಬ್ರಹ್ಮಾನ್ತೇಷು ಕರ್ಮವಿಪಾಕತ್ವಂ ವೇದಿತವ್ಯಮ್ | ತಸ್ಮಾತ್ "ಸ ಆತ್ಮನೋ ವಪಾಮುದಖಿದತ್" (ತೈ. ಸಂ. ೨-೧-೧-೪), "ಸೋಽರೋದೀತ್" (ತೈ. ಸಂ. ೧-೫-೧-೧) ಇತ್ಯಾದಿವತ್ ನಾಭೂತಾರ್ಥವಾದತ್ವಮ್ | ತತ್ರಾಪಿ

---

1. ಮೊದಲನೆಯ ವ್ಯಾಖ್ಯಾನದಲ್ಲಿ 'ಸಮದರ್ಶಿಯಾದ ನಿಜವಾದ ಆತ್ಮಯಾಜಿಯು ಸ್ವಾರಾಜ್ಯವನ್ನು ಹೊಂದುವನು' ಎಂದರ್ಥ. ಎರಡನೆಯ ವ್ಯಾಖ್ಯಾನದಲ್ಲಿ 'ಆತ್ಮಯಾಜಿಯು ಸಮದರ್ಶಿಯಾದ ಬಳಿಕ ಸ್ವಾರಾಜ್ಯವನ್ನು ಹೊಂದುವನು' ಎಂದರ್ಥ. ಮೊದಲನೆಯ ವ್ಯಾಖ್ಯಾನದಲ್ಲಿ ಆತ್ಮಯಾಜಿಶಬ್ದವನ್ನು ಜ್ಞಾನಸ್ತುತಿಗಾಗಿ ಉಪಯೋಗಿಸಿದೆ; ಎರಡನೆಯ ವ್ಯಾಖ್ಯಾನದಲ್ಲಿ ಉಪಾಸನಾಯುಕ್ತಕರ್ಮಾನುಷ್ಠಾನವನ್ನು ಮಾಡುವದು ಆತ್ಮಜ್ಞಾನಕ್ಕೆ ಕಾರಣವಾಗಿ ಮುಕ್ತಿಯನ್ನು ಕೊಡುತ್ತದೆ ಎಂದು ಹೇಳಿದೆ.

ಅಭೂತಾರ್ಥವಾದತ್ವಂ ಮಾ ಭೂತ್ ಇತಿ ಚೇತ್ । ಭವತ್ವೇವಮ್ । ನ ತ್ವೈತಾವತಾ ಅಸ್ಯ ನ್ಯಾಯಸ್ಯ ಬಾಧೋ ಭವತಿ । ನ ಚಾಸ್ಮತ್ಪಕ್ಷೋ ವಾ ದುಷ್ಯತಿ । ನ ಚ "ಬ್ರಹ್ಮಾ ವಿಶ್ವಸೃಜಃ" ಇತ್ಯಾದೀನಾಂ ಕಾಮ್ಯಕರ್ಮಫಲತ್ವಂ ಶಕ್ಯಂ ವಕ್ತುಮ್ । ತೇಷಾಂ ದೇವಸಾರ್ಷ್ಟಿತಾಯಾಃ ಫಲಸ್ಯ ಉಕ್ತತ್ವಾತ್। ತಸ್ಮಾತ್ ಸಾಭಿಸಂಧೀನಾಂ ನಿತ್ಯಾನಾಂ ಕರ್ಮಣಾಮ್ ಸರ್ವಮೇಧಾಶ್ವಮೇಧಾದೀನಾಂ ಚ ಬ್ರಹ್ಮತ್ವಾದೀನಿ ಫಲಾನಿ। ಯೇಷಾಂ ಪುನರ್ನಿತ್ಯಾನಿ ನಿರಭಿಸಂಧೀನಿ ಆತ್ಮಸಂಸ್ಕಾರಾರ್ಥಾನಿ ತೇಷಾಂ ಜ್ಞಾನೋತ್ಪತ್ತ್ಯರ್ಥಾನಿ ತಾನಿ । "ಬ್ರಾಹ್ಮೀಯಂ ಕ್ರಿಯತೇ ತನುಃ" (ಮನು. ೨-೨೮) ಇತಿ ಸ್ಮರಣಾತ್ । ತೇಷಾಮ್ ಆರಾದುಪಕಾರಕತ್ವಾತ್ ಮೋಕ್ಷಸಾಧನಾನ್ಯಪಿ ಕರ್ಮಾಣಿ ಭವನ್ತಿ ಇತಿ ನ ವಿರುಧ್ಯತೇ । ಯಥಾ ಚಾಯಮರ್ಥಃ ಷಷ್ಠೇ ಜನಕಾಖ್ಯಾಯಿಕಾಸಮಾಪ್ತೌ ವಕ್ಷ್ಯಾಮಃ। ಯತ್ತು ವಿಷದಧ್ಯಾದಿವತ್ ಇತ್ಯುಕ್ತಮ್, ತತ್ರ ಪ್ರತ್ಯಕ್ಷಾನುಮಾನವಿಷಯತ್ವಾತ್ ಅವಿರೋಧಃ । ಯಸ್ತು ಅತ್ಯನ್ತಶಬ್ದಗಮ್ಯೋಽರ್ಥಃ ತತ್ರ ವಾಕ್ಯಸ್ಯಾಭಾವೇ ತದರ್ಥಪ್ರತಿಪಾದಕಸ್ಯ ನ ಶಕ್ಯಂ ಕಲ್ಪಯಿತುಂ ವಿಷದಧ್ಯಾದಿಸಾಧರ್ಮ್ಯಮ್ ॥

(ಭಾಷ್ಯಾರ್ಥ)

ಇನ್ನೊಂದು ಮಾತು "ಬ್ರಹ್ಮನು, ವಿಶ್ವಸೃಜರು, ಧರ್ಮನು, ಮಹಾನ್ ಮತ್ತು ಅವ್ಯಕ್ತವು–ಈ ಗತಿಯು ಉತ್ತಮವಾದ ಸಾತ್ತ್ವಿಕ (ಗತಿ) ಎಂದು ಬಲ್ಲವರು ಹೇಳುತ್ತಾರೆ" (ಮನು ೧೨-೫೦) ಎಂದೂ[1] (ಹೇಳಿದೆ). ದೇವಸಾರ್ಷ್ಟಿವ್ಯತಿರಿಕ್ತವಾಗಿ ಭೂತಾಪ್ಯಯವನ್ನು "ಐದು ಭೂತಗಳನ್ನೂ ಸೇರಿಕೊಳ್ಳುತ್ತಾನೆ" (ಮನು. ೧೨-೯೦) ಎಂದೂ (ಹೇಳಿದೆ).[2] ಇಲ್ಲಿ ಭೂತಾನ್ಯತ್ಯೇತಿ (ಭೂತಗಳನ್ನು ಅತಿಕ್ರಮಿಸಿ ಮುಕ್ತರಾಗುತ್ತಾರೆ) ಎಂದು ಯಾರು ಪಾರವನ್ನು ಮಾಡಿಕೊಂಡಿರುತ್ತಾರೋ ಅವರಿಗೆ ವೇದವಿಷಯದಲ್ಲಿ ಪರಿಚ್ಛಿನ್ನವಾದ ಬುದ್ಧಿಯಿರುವದರಿಂದ (ಯಾವ) ದೋಷವೂ ಇಲ್ಲ. ಈ ಅಧ್ಯಾಯವು ಅರ್ಥವಾದವು ಎಂದು ಹೇಳುವ

---

1. ಇದು ನಿತ್ಯಕರ್ಮಗಳಿಗೆ ಆಗುವ ಫಲವು ಎಂದರ್ಥ. ವಿರಾಟ್‌ಪುರುಷನು, ಪ್ರಜಾಪತಿಗಳು, ಯಮಧರ್ಮ, ಹಿರಣ್ಯಗರ್ಭ, ಮತ್ತು ಅವ್ಯಕ್ತ–ಇವುಗಳು ಅವರವರ ಕರ್ಮದ ತಾರತಮ್ಯದಿಂದ ಆಗುವವು.

2. ಕಾಮ್ಯಕರ್ಮವು ಪ್ರವೃತ್ತವೆನಿಸುವದು. ಜ್ಞಾನಪೂರ್ವಕನಿಷ್ಕಾಮಕರ್ಮವು (ನಿತ್ಯಕರ್ಮವು) ನಿವೃತ್ತವೆನಿಸುತ್ತದೆ ಎಂದು ಹೇಳಿ ಕಾಮ್ಯಕರ್ಮಗಳಿಗೆ ದೇವಸಾರ್ಷ್ಟಿತೆ (ದೇವರುಗಳ ಸಮಾನತ್ವ) ಎಂಬ ಫಲವನ್ನು ಹೇಳಿದ ಬಳಿಕ ನಿವೃತ್ತಕರ್ಮಕ್ಕೆ ಹೀಗೆ ಬೇರೆ ಫಲವನ್ನು ಹೇಳಿದೆ. ಆದ್ದರಿಂದಲೂ ನಿತ್ಯಕರ್ಮಕ್ಕೆ ಮೋಕ್ಷಫಲವಿಲ್ಲ.

ದಕ್ಕೆ ಆಗುವದಿಲ್ಲ.[1] ಏಕೆಂದರೆ ಬ್ರಹ್ಮಾಂತವಾಗಿ ಆಗುವ (ದೆಂದು ಇಲ್ಲಿ ಹೇಳಿರುವದು) ಕರ್ಮವಿಪಾಕಾರ್ಥವೂ ಅದಕ್ಕಿಂತ ವ್ಯತಿರಿಕ್ತವಾಗಿ ಆತ್ಮಜ್ಞಾನಾರ್ಥವೂ[2] ಕರ್ಮಕಾಂಡ, ಉಪನಿಷತ್ತು-ಇವುಗಳಿಗೆ ಸಮಾನವಾದ ಅರ್ಥವುಳ್ಳದ್ದಾಗಿರುತ್ತದೆ. ವಿಹಿತ(ಕರ್ಮಗಳನ್ನು) ಮಾಡದಿರುವದರಿಂದಲೂ ಪ್ರತಿಷಿದ್ಧ(ಕರ್ಮ)ಗಳನ್ನು ಮಾಡುವದರಿಂದಲೂ ಸ್ಥಾವರ, ನಾಯಿ, ಹಂದಿ-ಮುಂತಾದ (ಜನ್ಮಗಳೆಂಬ)ಫಲವು ಕಂಡುಬರುವದರಿಂದಲೂ ವಮನವನ್ನು ತಿನ್ನುವ ಪ್ರೇತಗಳು ಕಂಡುಬರುವದರಿಂದಲೂ(ಹೀಗೆಂದು ತಿಳಿಯಬೇಕು)[3] ಶ್ರುತಿಸ್ಮೃತಿಗಳಲ್ಲಿ ವಿಹಿತವಾಗಿಯೂ ಪ್ರತಿಷಿದ್ಧವಾಗಿಯೂ(ಇರುವ ಕರ್ಮಗಳಿಗಿಂತ) ಬೇರೆಯಾಗಿ ವಿಹಿತವಾಗಿರುವ ಅಥವಾ ಪ್ರತಿಷಿದ್ಧವಾಗಿರುವ ಕರ್ಮಗಳು (ಇವೆಯೆಂದು) ನಿಶ್ಚಯಿಸುವದು ಯಾವನಿಂದಲೂ ಆಗಲಾರದು, ಹಾಗಿದ್ದರೆ (ಅವುಗಳನ್ನು) ಮಾಡದೆ ಇರುವದರಿಂದಲೂ ಮಾಡುವದರಿಂದಲೂ ಪ್ರೇತ, ನಾಯಿ, ಹಂದಿ, ಸ್ಥಾವರ(ಪ್ರಾಣಿ)-ಮುಂತಾದವುಗಳ(ರೂಪವಾದ)ಕರ್ಮಫಲಗಳು ಪ್ರತ್ಯಕ್ಷವಾಗಿಯೂ ಅನುಮಾನದಿಂದಲೂ ಕಂಡುಬರುತ್ತವೆ (ಎನ್ನಬಹುದಾಗಿತ್ತು), ಇವು ಕರ್ಮದ ಫಲವೇ ಅಲ್ಲವೆಂದೂ ಯಾರೂ ಒಪ್ಪಿರುವದಿಲ್ಲ.[4] ಆದ್ದರಿಂದ (ಶ್ರುತಿಸ್ಮೃತಿ)ವಿಹಿತ(ವಾದ ಕರ್ಮಗಳನ್ನು) ಮಾಡದೆ ಇರುವದರಿಂದಲೂ ಪ್ರತಿಷಿದ್ಧ(ವಾದ ಕರ್ಮಗಳನ್ನು) ಮಾಡುವದರಿಂದಲೂ ಈ ಪ್ರೇತ, ತಿರ್ಯಗ್ಜಂತು, ಸ್ಥಾವರತ್ವ.-ಮುಂತಾದವು ಹೇಗೆ ಈ ಕರ್ಮವಿಪಾಕಗಳೆಂದು (ನಿಶ್ಚಯವಾಗಿರುವದೋ) ಹಾಗೆಯೇ ಉತ್ಕೃಷ್ಟ

---

1. ಇಲ್ಲದ ವಿಷಯವನ್ನು ಹೇಳುವ ಅರ್ಥವಾದಗಳುಂಟು; 'ಆ ರುದ್ರನು ಅತ್ತನು' ಮುಂತಾದ ಅರ್ಥವಾದಗಳು ವೇದದಲ್ಲಿವೆ. ಇದೂ ಹಾಗಿರಬಹುದಲ್ಲವೆ?- ಎಂಬ ಆಕ್ಷೇಪಕ್ಕೆ ಪರಿಹಾರವಿದು.

2. ಕರ್ಮಗಳನ್ನು ಹೇಳಿದ ಬಳಿಕ "ಈ ಹೇಳಿದ ಕರ್ಮಗಳನ್ನು ಬಿಟ್ಟು ದ್ವಿಜೋತ್ತಮನಾದವನು ಆತ್ಮಜ್ಞಾನದಲ್ಲಿಯೂ ಶಮ ವೇದಾಭ್ಯಾಸ-ಇವುಗಳಲ್ಲಿಯೂ ಯತ್ನವಂತನಾಗಬೇಕು." ಎಂದು ೧೨-೯೨ರಲ್ಲಿ ಹೇಳಿದೆ.

3. ಮನುಸ್ಮೃತಿಯ ೧೨ನೆಯ ಅಧ್ಯಾಯದಲ್ಲಿ ೫೪ರಿಂದ ಹಿಡಿದು ಮುಂದಕ್ಕೆ ಇಂಥ ಕರ್ಮಫಲಗಳನ್ನು ಹೇಳಿವೆ, ೭೧ರಲ್ಲಿ ಬ್ರಾಹ್ಮಣನು ಕರ್ಮಭ್ರಷ್ಟನಾದರೆ ವಾಂತಾಶಿಯಾಗಿ ಹುಟ್ಟುತ್ತಾನೆಂದು ಹೇಳಿದೆ. ಇಂಥ ಕರ್ಮಫಲಗಳು ಪ್ರತ್ಯಕ್ಷವಾಗಿರುತ್ತವೆ.

4. ಶ್ರುತಿಸ್ಮೃತಿವಿಹಿತಪ್ರತಿಷಿದ್ಧಕರ್ಮಗಳಿಗಿಂತ ಬೇರೆ ಕರ್ಮಗಳೂ ಇಲ್ಲ. ಇವು ಕರ್ಮವಿಲ್ಲದೆ ತಾವೇ ಆಗಿರುವವೆಂದೂ ಯಾರೂ ಒಪ್ಪಿಲ್ಲ.

ವಾಗಿರುವ ಬ್ರಹ್ಮಾಂತವಾಗಿರುವವೂ ಕರ್ಮವಿಪಾಕವೇ ಎಂದು ತಿಳಿಯಬೇಕು.[1] ಆದ್ದರಿಂದ "ಅವನು ತನ್ನ ವಪೆಯನ್ನು ಕತ್ತರಿಸಿಹಾಕಿದನು"(ತೈ. ಸಂ. ೨-೧-೧-೪), "ಅವನು ಅತ್ತನು" (ತೈ. ಸಂ. ೧-೫-೧-೧) ಮುಂತಾದವುಗಳಂತೆ (ಈ ಅಧ್ಯಾಯದಲ್ಲಿ ಹೇಳಿರುವದು) ಅಭೂತಾರ್ಥವಾದವಲ್ಲ.[2]

(ಆಕ್ಷೇಪ):—ಅಲ್ಲಿಯೂ ಅಭೂತಾರ್ಥವೆನ್ನುವದು ಬೇಡ ![3]

(ಪರಿಹಾರ) :-ಹಾಗೇ ಆಗಲಿ ![4] ಆದರೆ ಇಷ್ಟುಮಾತ್ರದಿಂದ ಈ ನ್ಯಾಯಕ್ಕೆ ಬಾಧೆ ಬರುವದಿಲ್ಲ[5]; ನಮ್ಮ ಪಕ್ಷವು ದೋಷಯುಕ್ತವೆಂದೂ ಆಗುವದಿಲ್ಲ. ''ಬ್ರಹ್ಮನು, ವಿಶ್ವಸೃಜರು....'' (ಮನು.೧೨-೫೦) ಮುಂತಾದವುಗಳು ಕಾಮ್ಯಕರ್ಮಗಳಿಗೆ ಫಲವೆಂದೂ ಹೇಳುವದಕ್ಕಾಗುವಂತಿಲ್ಲ; ಏಕೆಂದರೆ ಆ (ಕಾಮ್ಯಕರ್ಮ)ಗಳಿಗೆ ದೇವಸಾರ್ಷ್ಟಿತ್ವವೆಂಬ ಫಲವನ್ನು (ಬೇರೆಯಾಗಿ) ಹೇಳಿದೆ. ಆದ್ದರಿಂದ (ಫಲದ) ಇಚ್ಛೆಯ ಪೂರ್ವಕವಾಗಿ (ಮಾಡುವ) ನಿತ್ಯಕರ್ಮಗಳಾದ ಸರ್ವಮೇಧ, ಅಶ್ವಮೇಧ—ಮುಂತಾದವುಗಳಿಗೇ (ಈ) ಬ್ರಹ್ಮತ್ವವೇ ಮುಂತಾದವು ಫಲಗಳು.

ಆದರೆ ಯಾರ ನಿತ್ಯಕರ್ಮಗಳು ಫಲಾಭಿಸಂಧಿಯಿಲ್ಲದೆ ಆತ್ಮಸಂಸ್ಕಾರಕ್ಕಾಗಿ (ಅನುಷ್ಠಿತವಾಗುತ್ತಿರುವವೋ), ಅವರಿಗೆ ಅವು ಜ್ಞಾನೋತ್ಪತ್ತಿಗೆ(ಕಾರಣ)ವಾಗುವವು. ಏಕೆಂದರೆ ''ಈ ತನುವು ಬ್ರಾಹ್ಮಿಯಾಗಿ ಮಾಡಲ್ಪಡುತ್ತದೆ''[6] (ಮನು.

---

1. ಕೆಟ್ಟ ಕರ್ಮವನ್ನು ಮಾಡಿದ್ದರಿಂದ ಸ್ಥಾವರಾಂತವಾದ ಫಲವಾದದ್ದು ಕಂಡು ಬರುವದರಿಂದ ಒಳ್ಳೆಯ ಕರ್ಮಕ್ಕೆ ಶಾಸ್ತ್ರದಲ್ಲಿ ಹೇಳಿರುವ ಬ್ರಹ್ಮಾಂತವಾದ ಫಲವೆಂದು ನಂಬಬಹುದಾಗುತ್ತದೆ.

2. ಅಧ್ಯಾಯದಲ್ಲಿ ಹೇಳಿರುವದು ಅರ್ಥವಾದವಾದರೂ ಪ್ರತ್ಯಕ್ಷಾದಿವಿರುದ್ಧವಲ್ಲದ್ದರಿಂದ ನಿಜವಾಗಿ ಅವು,ಸಾತ್ತ್ವಿಕಕರ್ಮಗಳಿಗೆ ಆಗುವ ಫಲಗಳೇ.

3. 'ಪ್ರಜಾಪತಿಯು ತನ್ನ ವಪೆಯನ್ನು ಕತ್ತರಿಸಿ ಹೋಮಮಾಡಿದನು' ಎಂದು ಮುಂತಾಗಿರುವ ವಾಕ್ಯಗಳನ್ನಾದರೂ ನೀವು ಏತಕ್ಕೆ ಅಭೂತಾರ್ಥವಾದವೆನ್ನುವಿರಿ? ಶಾಸ್ತ್ರವಾಕ್ಯವನ್ನೆಲ್ಲ ಪ್ರಮಾಣವೆನ್ನುವವರಲ್ಲವೆ, ನೀವು?—ಎಂದು ಭಾವ.

4. ಪ್ರತ್ಯಕ್ಷಾದಿಗಳಿಗೆ ವಿರುದ್ಧವಾದಾಗ ಅಭೂತಾರ್ಥವಾದವೆಂಬುದು ಮೀಮಾಂಸಕರ ಮತ. ಉಕ್ತವಾಕ್ಯಗಳಿಗೂ ಪ್ರತ್ಯಕ್ಷಾದಿಗಳಿಗೆ ವಿರೋಧವಾಗದಂತೆ ಅರ್ಥವನ್ನು ಹೇಳಬಹುದಾದರೆ ಹಾಗೇ ಹೇಳೋಣ ಎಂದರ್ಥ.

5. ಬ್ರಹ್ಮತ್ವಾದಿಗಳು ಶಾಸ್ತ್ರೋಕ್ತನಿತ್ಯಕರ್ಮಗಳಿಗೆ ಫಲವಾಗಿರಬೇಕು ಎಂದು ನಾವು ಪ್ರತಿಪಾದಿಸಿರುವಲ್ಲಿ ಅನುಸರಿಸಿರುವ ನ್ಯಾಯಕ್ಕೆ ನಿಮ್ಮ ಆಕ್ಷೇಪವೇನೂ ಅಡ್ಡಬರುವದಿಲ್ಲ.

6. ಬ್ರಹ್ಮಜ್ಞಾನಕ್ಕೆ ತಕ್ಕದ್ದಾಗುತ್ತದೆ.

೨-೨೮) ಎಂದು ಸ್ಮೃತಿಯಿದೆ. ಅವು ಪರಂಪರೆಯಿಂದ ಉಪಕಾರಕವಾಗಿರುವದರಿಂದ[1] (ಈ ನಿತ್ಯ)ಕರ್ಮಗಳು ಮೋಕ್ಷಸಾಧನಗಳೂ ಆಗುವವು ಎಂಬುದು(ಇದಕ್ಕೆ) ವಿರುದ್ಧವಲ್ಲ. ಈ ಅರ್ಥವು ಹೇಗೆಂಬುದನ್ನು ಆರನೆಯ ಅಧ್ಯಾಯದಲ್ಲಿ ಜನಕನ ಕಥೆಯ ಕೊನೆಯಲ್ಲಿ ಹೇಳುವೆವು.

ಇನ್ನು ವಿಷ, ಮೊಸರು– ಮುಂತಾದವುಗಳಂತೆ ಎಂದು (ನೀವು) ಹೇಳಿದಿರಲ್ಲ, ಅಲ್ಲಿ (ಅವು ಕಾರ್ಯಾಂತರವನ್ನುಂಟುಮಾಡುವವೆಂಬುದು) ಪ್ರತ್ಯಕ್ಷಾನುಮಾನಗಳಿಗೆ ವಿಷಯವಾಗಿರುವದರಿಂದ ಯಾವ ವಿರೋಧವೂ ಇರುವದಿಲ್ಲ. ಆದರೆ ಯಾವ ವಿಷಯವು ಅತ್ಯಂತವಾಗಿ ಶಬ್ದಗಮ್ಯವಾಗಿರುವದೋ[2] ಅಲ್ಲಿ ಅದನ್ನು ಹೇಳುವ ವಾಕ್ಯವು ಇಲ್ಲದಿರುವಲ್ಲಿ ವಿಷ, ಮೊಸರು– ಮುಂತಾದವುಗಳಂತೆ ಸಾಮರ್ಥ್ಯವಿರುತ್ತದೆ ಎಂದು ಕಲ್ಪಿಸುವದಕ್ಕೆ ಆಗುವದಿಲ್ಲ.[3]

## ವೇದವಾಕ್ಯಕ್ಕೆ ಪ್ರತ್ಯಕ್ಷಾನುಗುಣವಾಗಿ ಅರ್ಥವನ್ನು ಕಲ್ಪಿಸಲಾಗದು

(ಭಾಷ್ಯ)

೩೮. ನ ಚ ಪ್ರಮಾಣಾನ್ತರವಿರುದ್ಧಾರ್ಥವಿಷಯೇ ಶ್ರುತೇಃ ಪ್ರಾಮಾಣ್ಯಂ ಕಲ್ಪ್ಯತೇ, ಯಥಾ ಶೀತೋಽಗ್ನಿಃ ಕ್ಲೇದಯತೀತಿ। ಶ್ರುತೇ ತು ತಾದರ್ಥ್ಯೇ ವಾಕ್ಯಸ್ಯ ಪ್ರಮಾಣಾನ್ತರಸ್ಯ ಆಭಾಸತ್ವಮ್। ಯಥಾ ಖದ್ಯೋತೋಽಗ್ನಿರಿತಿ ತಲಮಲಿನಮನ್ತರಿಕ್ಷಮ್ ಇತಿ ಬಾಲಾನಾಂ ಯತ್ ಪ್ರತ್ಯಕ್ಷಮಪಿ ತದ್ವಿಷಯಪ್ರಮಾಣಾನ್ತರಸ್ಯ ಯಥಾರ್ಥತ್ವೇ ನಿಶ್ಚಿತೇ ನಿಶ್ಚಿತಾರ್ಥಮಪಿ ಬಾಲಪ್ರತ್ಯಕ್ಷಮ್ ಆಭಾಸೀಭವತಿ। ತಸ್ಮಾತ್ ವೇದಪ್ರಾಮಾಣ್ಯಸ್ಯ ಅವ್ಯಭಿಚಾರಾತ್ ತಾದರ್ಥ್ಯೇ ಸತಿ ವಾಕ್ಯಸ್ಯ ತಥಾತ್ವಂ ಸ್ಯಾತ್। ನ ತು ಪುರುಷಮತಿಕೌಶಲಾತ್[4] ।ನ ಹಿ ಪುರುಷಮತಿಕೌಶಲಾತ್ ಸವಿತಾ ರೂಪಂ ನ ಪ್ರಕಾಶಯತಿ। ತಥಾ ವೇದವಾಕ್ಯಾನ್ಯಪಿ

---

1. ನಿತ್ಯಕರ್ಮಗಳಿಂದ ಅಂತಃಕರಣಸಂಸ್ಕಾರ, ಜ್ಞಾನಕ್ಕೆ ತಕ್ಕ ಯೋಗ್ಯತೆ, ಶ್ರವಣಾದಿಗಳ ಅನುಷ್ಠಾನ– ಇವು ಒಂದೊಂದಾಗಿ ಉಂಟಾಗಿ ಜ್ಞಾನವಾಗುವದರಿಂದ ಮೋಕ್ಷವೂ ಆಗುವದು.

2. ಮೋಕ್ಷವು ಅತ್ಯಂತವಾಗಿ ಶಬ್ದಗಮ್ಯ, ಅದನ್ನು ಪ್ರತ್ಯಕ್ಷಾದಿಗಳಿಂದ ನಿಶ್ಚಯಿಸುವದಕ್ಕೆ ಬರುವದೇ ಇಲ್ಲ.

3. ವಿಷದಧ್ಯಾದಿಗಳಿಗೆ ಕಾರ್ಯಾಂತರಜನಕತ್ವವು ಇದ್ದಮಾತ್ರದಿಂದ ಕಾರ್ಯವಲ್ಲದ ಮೋಕ್ಷವೂ ಕರ್ಮದಿಂದಾಗಬಹುದೆಂದು ಬರಿಯ ಅನುಮಾನದಿಂದ ಕಲ್ಪಿಸುವದಕ್ಕೆ ಆಗಲಾರದು. ಏಕೆಂದರೆ ಮೋಕ್ಷವು ವಾಕ್ಯೈಕಗಮ್ಯ, ಅದು ಕರ್ಮಸಾಧ್ಯವೆಂಬುದಕ್ಕೆ ವೇದವಚನವೂ ಇಲ್ಲ.

4. 'ಕೌಶಲಮ್' ಎಂಬ ಅಚ್ಚಿನ ಪಾಠವನ್ನು ಹೀಗೆ ತಿದ್ದಿಕೊಂಡಿದೆ.

ನಾನ್ಯಾರ್ಥಾನಿ ಭವನ್ತಿ | ತಸ್ಮಾತ್ ನ ಮೋಕ್ಷಾರ್ಥಾನಿ ಕರ್ಮಾಣಿ ಇತಿ ಸಿದ್ಧಮ್| ಅತಃ ಕರ್ಮಫಲಾನಾಂ ಸಂಸಾರತ್ವಪ್ರದರ್ಶನಾಯೈವ ಬ್ರಾಹ್ಮಣಮ್ ಆರಭ್ಯತೇ ||

(ಭಾಷ್ಯಾರ್ಥ)

ಪ್ರಮಾಣಾಂತರಕ್ಕೆ ವಿರುದ್ಧವಾಗಿರುವ ಅರ್ಥದ ವಿಷಯದಲ್ಲಿ 'ಬೆಂಕಿಯು ತಣ್ಣಗಿದೆ, ತೋಯಿಸುತ್ತದೆ' ಎಂಬಂತೆ ಇರುವ ಶ್ರುತಿಯು ಪ್ರಮಾಣವೆಂದು ಕಲ್ಪಿಸುವದಕ್ಕೆ ಆಗುವದಿಲ್ಲ.[1] ಆದರೆ (ಒಂದು ವಿಷಯದಲ್ಲಿ) ವಾಕ್ಯವು ತತ್ಪರವೆಂದು ತಿಳಿದುಬಂದರೆ (ಪ್ರತ್ಯಕ್ಷವೇ ಮುಂತಾದ) ಮತ್ತೊಂದು ಪ್ರಮಾಣವು ಆಭಾಸವಾಗುತ್ತದೆ. ಹೇಗೆ ಮಿಂಚುಹುಳುವು ಬೆಂಕಿ ಎಂದೂ ಅಂತರಿಕ್ಷವು ತಲದಲ್ಲಿ ಮಲಿನವಾಗಿರುವದೆಂದೂ ತಿಳಿಯದವರಿಗೆ ಪ್ರತ್ಯಕ್ಷವೇ ಆಗಿದ್ದರೂ ಅದರ ವಿಷಯದಲ್ಲಿ ಮತ್ತೊಂದು ಪ್ರಮಾಣವು ಯಥಾರ್ಥವೆಂದು ನಿಶ್ಚಯವಾದರೆ ಅವಿವೇಕಿಗಳ ಆ ಪ್ರತ್ಯಕ್ಷವು ನಿಶ್ಚಿತವಾದ ಅರ್ಥವುಳ್ಳದ್ದಾಗಿದ್ದರೂ ಆಭಾಸವಾಗುವದೋ (ಹಾಗೆ)[2]. ಆದ್ದರಿಂದ ವೇದಪ್ರಾಮಾಣ್ಯವು ಮಾರ್ಪಡದೆ ಇರುವದರಿಂದ ವಾಕ್ಯವು ತತ್ಪರವಾಗಿದ್ದರೆ ನಿಜವೆಂದಾಗುವದೇ ಹೊರತು ಪುರುಷಮತಿಕೌಶಲದಿಂದಲ್ಲ.[3] ಪುರುಷರ ಬುದ್ಧಿಯ ಕೌಶಲದಿಂದ ಸೂರ್ಯನು ರೂಪವನ್ನು ಬೆಳಗುವದಿಲ್ಲ, (ಎಂದು ಮಾಡುವದಕ್ಕೆ) ಆಗಲಾರದಷ್ಟೆ[4]? ಹೀಗೆಯೇ ವೇದವಾಕ್ಯಗಳು ಬೇರೆಯ ಅರ್ಥವನ್ನು (ತಿಳಿಸುವ)ವಾಗಲಾರವು.[5] ಆದ್ದರಿಂದ (ನಿತ್ಯಕರ್ಮಗಳು) ಮೋಕ್ಷಫಲಕ್ಕಾಗಿ (ವಿಹಿತ)ವಾಗಿಲ್ಲ ಎಂದು ಸಿದ್ಧವಾಯಿತು. ಆದ್ದರಿಂದ ಕರ್ಮ

---

1. ನಿಶ್ಚಿತಪ್ರತ್ಯಕ್ಷಕ್ಕೆ ವಿರುದ್ಧವಾಗಿರುವದರಿಂದ ಅದಕ್ಕೆ ಬೇರೊಂದು ಅರ್ಥವನ್ನೇ ಕಲ್ಪಿಸಬೇಕು.

2. ವಾಕ್ಯವು ತತ್ಪರವೆಂದು ನಿಶ್ಚಿತವಾದಾಗ ಪ್ರತ್ಯಕ್ಷವೇ ದುರ್ಬಲವಾಗುವದು. ಆದ್ದರಿಂದ ಇಲ್ಲಿ ಕರ್ಮಕ್ಕೆ ಬೇರೆಯ ಫಲವನ್ನು ಹೇಳಿರುವದರಿಂದ ವಿಷದಧ್ಯಾದಿದೃಷ್ಟಾಂತವು ಒಪ್ಪದು.

3. ಬುದ್ಧಿಗೆ ತೋರಿದಂತೆ ವಾಕ್ಯಕ್ಕೆ ಅರ್ಥವನ್ನು ಮಾರ್ಪಡಿಸತಕ್ಕದ್ದಲ್ಲ.

4. ಏಕೆಂದರೆ ಸೂರ್ಯನು ರೂಪವನ್ನು ಬೆಳಗಿತೋರಿಸುತ್ತಾನೆಂಬುದು ನಿಶ್ಚಿತವಾಗಿದೆ.

5. ಏಕೆಂದರೆ ಅವು ತಾತ್ಪರ್ಯದಿಂದ ಹೇಳುವ ಅರ್ಥವೇ ಅವುಗಳ ಅರ್ಥವಾಗುತ್ತದೆ; ಆ ವಿಷಯಕ್ಕೆ ನಮ್ಮ ಬುದ್ಧಿಯು ಏತಕ್ಕೂ ಬರುವಹಾಗಿಲ್ಲ.

ಫಲಗಳು ಸಂಸಾರವೇ ಎಂದು ತಿಳಿಸುವದಕ್ಕಾಗಿಯೇ (ಈ) ಬ್ರಾಹ್ಮಣವನ್ನು ಆರಂಭಿಸಿರುತ್ತದೆ.

## ಭುಜ್ಯುವಿನ ಪ್ರಶ್ನೆ : ಅಶ್ವಮೇಧಯಾಜಿಗಳಿಗೆ ಗತಿ ಯಾವುದು?

(ಉಪನಿಷತ್ತು)

**ಅಥ ಹೈನಂ ಭುಜ್ಯುರ್ಲಾಹ್ಯಾಯನಿಃ ಪಪ್ರಚ್ಛ ಯಾಜ್ಞವಲ್ಕ್ಯೇತಿ ಹೋವಾಚ। ಮದ್ರೇಷು ಚರಕಾಃ ಪರ್ಯವ್ರಜಾಮ ತೇ ಪತಞ್ಚಲಸ್ಯ ಕಾಪ್ಯಸ್ಯ ಗೃಹಾನೈಮ ತಸ್ಯಾಸೀದ್ದುಹಿತಾ ಗನ್ಧರ್ವಗೃಹೀತಾ ತಮ ಪೃಚ್ಛಾಮ ಕೋಽಸೀತಿ ಸೋಽಬ್ರವೀತ್ಸುಧನ್ವಾಙ್ಗಿರಸ ಇತಿ ತಂ ಯದಾ ಲೋಕಾನಾಮನ್ತಾನಪೃಚ್ಛಾಮಾಥೈನಮಬ್ರೂಮ ಕ್ವ ಪಾರಿಕ್ಷಿತಾ ಅಭವನ್ನಿತಿ ಕ್ವ ಪಾರಿಕ್ಷಿತಾ ಅಭವನ್ ಸ ತ್ವಾ ಪೃಚ್ಛಾಮಿ ಯಾಜ್ಞವಲ್ಕ್ಯ ಕ್ವ ಪಾರಿಕ್ಷಿತಾ ಅಭವನ್ನಿತಿ ॥ ೧ ॥**

೧. ಆಗ ಭುಜ್ಯು ಲಾಹ್ಯಾಯನಿಯು ಇವನನ್ನು ಕೇಳಿದನು. "ಯಾಜ್ಞವಲ್ಕ್ಯನೆ" ಎಂದನು. ಮದ್ರ(ದೇಶ ದಲ್ಲಿ ಚರಕರಾಗಿ ಸಂಚರಿಸುತ್ತಿದ್ದೆವು. ಆ (ನಾವು) ಪತಂಜಲ ಕಾಪ್ಯನ ಮನೆಗೆ ಬಂದೆವು. ಅವನ ಮಗಳು ಗಂಧರ್ವಗೃಹೀತಳಾಗಿದ್ದಳು. ಅವನನ್ನು 'ಯಾರಾಗಿರುವೆ ?' ಎಂದು ಕೇಳಿದೆವು. ಅವನು 'ಆಂಗಿರಸ ಸುಧನ್ವನು' ಎಂದನು. ಅವನನ್ನು ಲೋಕಗಳ ಅಂತಗಳನ್ನು ಕೇಳುವಾಗ ಅವನನ್ನು ಕುರಿತು 'ಪಾರಿಕ್ಷಿತರು ಎಲ್ಲಿದ್ದರು ?' ಎಂದೆವು. 'ಪಾರಿಕ್ಷಿತರು ಎಲ್ಲಿದ್ದರು?' ಆ (ನಾನು) ನಿನ್ನನ್ನು ಕೇಳುತ್ತಿದ್ದೇನೆ. ಯಾಜ್ಞವಲ್ಕ್ಯನೆ, ಪಾರಿಕ್ಷಿತರು ಎಲ್ಲಿದ್ದರು ?

## ಪ್ರಶ್ನೆಯ ಸಂಬಂಧ

(ಭಾಷ್ಯ)

೩೯. ಅಥ ಅನನ್ತರಮ್ ಉಪರತೇ ಜಾರತ್ಕಾರವೇ ಭುಜ್ಯುರಿತಿ ನಾಮತಃ ಲಹ್ಯಸ್ಯಾಪತ್ಯಂ ಲಾಹ್ಯಃ, ತದಪತ್ಯಂ ಲಾಹ್ಯಾಯನಿಃ ಪಪ್ರಚ್ಛ| ಯಾಜ್ಞವಲ್ಕ್ಯೇತಿ ಹೋವಾಚ | ಆದಾವುಕ್ತಮ್ ಅಶ್ವಮೇಧದರ್ಶನಮ್ | ಸಮಷ್ಟಿವ್ಯಷ್ಟಿಫಲಶ್ಚ ಅಶ್ವಮೇಧಕ್ರತುಃ, ಜ್ಞಾನಸಮುಚ್ಚಿತೋ ವಾ ಕೇವಲಜ್ಞಾನಸಂಪಾದಿತೋ ವಾ ಸರ್ವಕರ್ಮಣಾಂ ಪರಾ ಕಾಷ್ಠಾ | "ಭ್ರೂಣಹತ್ಯಾಶ್ವಮೇಧಾಭ್ಯಾಂ ನ ಪರಂ ಪುಣ್ಯಪಾಪಯೋಃ"(?) ಇತಿ ಹಿ ಸ್ಮರನ್ತಿ| ತೇನ ಹಿ ಸಮಷ್ಟಿಂ ವ್ಯಷ್ಟೀಶ್ಚ ಪ್ರಾಪ್ನೋತಿ|

ತತ್ರ ವ್ಯಷ್ಟಯೋ ನಿರ್ಜ್ಞಾತಾ ಅನ್ತರಣ್ಡವಿಷಯಾ[1] ಅಶ್ವಮೇಧಯಾಗಫಲಭೂತಾಃ| "ಮೃತ್ಯುರಸ್ಯಾತ್ಮಾ ಭವತ್ಯೇತಾಸಾಂ ದೇವಾನಾಮೇಕೋ ಭವತಿ (೧-೨-೭)ಇತ್ಯುಕ್ತಮ್| ಮೃತ್ಯುಶ್ಚ ಅಶನಾಯಾಲಕ್ಷಣೋ ಬುದ್ಧ್ಯಾತ್ಮಾ ಸಮಷ್ಟಿಃ ಪ್ರಥಮಜೋ ವಾಯುಃ ಸೂತ್ರಂ ಸತ್ಯಂ ಹಿರಣ್ಯಗರ್ಭಃ| ತಸ್ಯ ವ್ಯಾಕೃತೋ ವಿಷಯಃ ಯದಾತ್ಮಕಂ ಸರ್ವಂ ದ್ವೈತೈಕತ್ವಂ ಯಃ ಸರ್ವಭೂತಾನ್ತರಾತ್ಮಾ, ಲಿಙ್ಗಮ್, ಅಮೂರ್ತರಸಃ, ಯದಾಶ್ರಿತಾನಿ ಸರ್ವಭೂತಕರ್ಮಾಣಿ, ಯಃ ಕರ್ಮಣಾಂ ಕರ್ಮಸಂಬದ್ಧಾನಾಂ ಚ ವಿಜ್ಞಾನಾನಾಂ ಪರಾ ಗತಿಃ ಪರಂ ಫಲಮ್ ತಸ್ಯ ಕಿಯಾನ್ ಗೋಚರಃ, ಕಿಯತೀ ವ್ಯಾಪ್ತಿಃ ಸರ್ವತಃ ಪರಿಮಣ್ಡಲೀಭೂತಾ ಸಾ ವಕ್ತವ್ಯಾ| ತಸ್ಯಾಮ್ ಉಕ್ತಾಯಾಂ ಸರ್ವಃ ಸಂಸಾರೋ ಬನ್ಧಗೋಚರ ಉಕ್ತೋ ಭವತಿ ||

(ಭಾಷ್ಯಾರ್ಥ)

ಜಾರತ್ಕಾರವನು ಸುಮ್ಮನಾಗಲು ಆಗ ಆ (ಬಳಿಕ), ಭುಜ್ಯು ಎಂಬ ಹೆಸರುಳ್ಳ- ಲಹ್ಯನ ಮಗನು ಲಾಹ್ಯನು, ಅವನ ಮಗನು ಲಾಹ್ಯಾಯನಿಯು- (ಆ ಲಾಹ್ಯಾಯನಿಯು) ಕೇಳಿದನು. 'ಯಾಜ್ಞವಲ್ಕ್ಯನೆ' ಎಂದನು. ಮೊದಲು ಅಶ್ವಮೇಧೋಪಾಸನೆಯನ್ನು ಹೇಳಿರುತ್ತದೆ. ಅಶ್ವಮೇಧಕ್ರತುವಿಗೆ ಸಮಷ್ಟಿವ್ಯಷ್ಟಿಗಳೇ ಫಲವು. (ಅದೇ) ಜ್ಞಾನಸಮುಚ್ಚಿತವಾಗಿ ಅಥವಾ ಬರಿಯ ಜ್ಞಾನದಿಂದ ಸಂಪಾದಿತವಾಗಿ ಕರ್ಮಗಳಿಗೆಲ್ಲ ಕೊನೆಯ ತುದಿ. 'ಭ್ರೂಣಹತ್ಯೆ, ಅಶ್ವಮೇಧ- ಇವುಗಳಿಗಿಂತ ಪಾಪಗಳಲ್ಲಿಯೂ ಪುಣ್ಯಗಳಲ್ಲಿಯೂ ಹೆಚ್ಚಿನದಿಲ್ಲ' (?) ಎಂದಲ್ಲವೆ, (ಸ್ಮೃತಿಕಾರರು) ಹೇಳುತ್ತಾರೆ? ಅದರಿಂದಲೇ ಅಲ್ಲವೆ, ಸಮಷ್ಟಿಯನ್ನೂ ವ್ಯಷ್ಟಿಗಳನ್ನೂ ಪಡೆದುಕೊಳ್ಳುತ್ತಾನೆ? ಇವುಗಳೊಳಗೆ ಅಶ್ವಮೇಧಯಾಗದ ಫಲವಾಗಿರುವ ಅಂಡದೊಳಗಿರುವ ವ್ಯಷ್ಟಿಗಳು (ಇಂಥವೆಂದು) ಗೊತ್ತಾಯಿತು[2] "ಮೃತ್ಯುವು ಇವನ ಆತ್ಮವಾಗುತ್ತಾನೆ, ಈ ದೇವತೆಗಳಲ್ಲಿ ಒಂದಾಗುತ್ತಾನೆ") ೧-೨-೭) ಎಂದು ಹೇಳಿದ್ದಾಯಿತು.[3]

ಮೃತ್ಯು ಎಂದರೆ ಹಸಿವಿನ ಸ್ವರೂಪದ ಬುದ್ಧ್ಯಾತ್ಮನು, ಸಮಷ್ಟಿಯು, ಪ್ರಥಮಜನು, ವಾಯು, ಸೂತ್ರವು, ಸತ್ಯವು, ಹಿರಣ್ಯಗರ್ಭನು (ಇವನು). ಆ (ಮೃತ್ಯು

---

1. 'ಅಣ್ಡಾನ್ತರ' ಎಂಬುದಕ್ಕಿಂತ ಈ ಪಾಠವು ಮೇಲು.
2. ಅಗ್ನಿ, ಆದಿತ್ಯ, ವಾಯು- ಮುಂತಾದ ಬೇರೆಬೇರೆಯ ದೇವತೆಗಳು ವ್ಯಷ್ಟಿಗಳು.
3. ಮೃತ್ಯುವೇ ಸಮಷ್ಟಿಯು.

ವಿಗೆ) ವ್ಯಾಕೃತವೇ ವಿಷಯವು.[1] ದ್ವೈತೈಕತ್ವವೆಲ್ಲವೂ[2] ಅವನ ಸ್ವರೂಪವಾಗಿ ರುತ್ತದೆ, ಅವನು ಸರ್ವಭೂತಗಳಿಗೂ ಅಂತರಾತ್ಮನಾದ[3] ಲಿಂಗವೂ, ಅಮೂರ್ತ ರಸವು.[4] ಸರ್ವಪ್ರಾಣಿಗಳ ಕರ್ಮಗಳೂ ಅವನನ್ನು ಆಶ್ರಯಿಸಿಕೊಂಡಿರುತ್ತವೆ. ಅವನು ಕರ್ಮಗಳಿಗೂ ಕರ್ಮಸಂಬದ್ಧವಾದ ಉಪಾಸನೆಗಳಿಗೂ ಪರಗತಿಯು ಅಂದರೆ ಕೊನೆಯ ಫಲವು. ಆ ಮೃತ್ಯುವಿಗೆ ವಿಷಯವು ಎಷ್ಟು? ಎಲ್ಲಾ ಕಡೆಯ ಲ್ಲಿಯೂ ಸುತ್ತಿಕೊಂಡಿರುವ ಅದರ ವ್ಯಾಪ್ತಿ ಎಷ್ಟು? ಎಂಬುದನ್ನು ಹೇಳಬೇಕು.[5] ಅದನ್ನು ಹೇಳಿದರೆ ಬಂಧಗೋಚರವಾದ ಸರ್ವಸಂಸಾರವನ್ನೂ ಹೇಳಿದಂತೆ ಆಯಿತು.

## ಭುಜ್ಯುವಿಗೆ ಗಂಧರ್ವನು ಹೇಳಿದ್ದು

(ಭಾಷ್ಯ)

೪೦. ತಸ್ಯ ಚ ಸಮಷ್ಟಿವ್ಯಷ್ಟ್ಯಾತ್ಮದರ್ಶನಸ್ಯ ಅಲೌಕಿಕತ್ವಪ್ರದರ್ಶ ನಾರ್ಥಮ್ ಆಖ್ಯಾಯಿಕಾಮ್ ಆತ್ಮನೋ ವೃತ್ತಾಂ ಪ್ರಕುರುತೇ| ತೇನ ಪ್ರತಿವಾದಿ ಬುದ್ಧಿಂ ವ್ಯಾಮೋಹಯಿಷ್ಯಾಮಿ ಇತಿ ಮನ್ಯತೇ| ಮದ್ರೇಷು ಮದ್ರಾ ನಾಮ ಜನ ಪದಾಃ ತೇಷು ಚರಕಾಃ ಅಧ್ಯಯನಾರ್ಥಂ ವ್ರತಚರಣಾತ್ ಚರಕಾಃ ಅಧ್ವರ್ಯ ವೋ ವಾ ಪರ್ಯವ್ರಜಾಮ ಪರ್ಯಟಿತವನ್ತಃ| ತೇ ಪತಞ್ಚಲಸ್ಯ ತೇ ವಯಂ ಪರ್ಯಟನ್ತಃ ಪತಞ್ಚಲಸ್ಯ ನಾಮತಃ ಕಾಪ್ಯಸ್ಯ ಕಪಿಗೋತ್ರಸ್ಯ ಗೃಹಾನ್ ಐಮ ಗತವನ್ತಃ| ತಸ್ಯ ಆಸೀತ್ ದುಹಿತಾ ಗನ್ಧರ್ವಗೃಹೀತಾ ಗನ್ಧರ್ವೇಣ ಅಮಾನುಷೇಣ ಸತ್ತ್ವೇನ ಕೇನಚಿತ್ ಆವಿಷ್ಟಾ| ಗನ್ಧ ರ್ವೋ ವಾ ಧಿಷ್ಣ್ಯೋಽಗ್ನಿಃ ಋತ್ವಿಕ್ ದೇವತಾ ವಿಶಿಷ್ಟವಿಜ್ಞಾನತ್ವಾತ್ ಅವ ಸೀಯತೇ| ನ ಹಿ ಸತ್ತ್ವಮಾತ್ರಸ್ಯ ಈದೃಶಂ ವಿಜ್ಞಾನಮ್ ಉಪಪದ್ಯತೇ| ತಂ

---

1. ಇಡಿಯ ವ್ಯಾಕೃತಪ್ರಪಂಚವನ್ನೆಲ್ಲ ಈ ಮೃತ್ಯು ವ್ಯಾಪಿಸಿಕೊಂಡಿರುತ್ತಾನೆ.

2. ಸಮಷ್ಟಿವ್ಯಷ್ಟಿರೂಪಗಳೆಲ್ಲ.

3. ಕರಣರೂಪದಿಂದ ಒಳಗಿದ್ದು ವ್ಯಾಪಿಸಿಕೊಂಡಿರುವ.

4. ವಿಜ್ಞಾನಾತ್ಮನಲ್ಲ ಎಂದು ಹಿಂದೆ ಹೇಳಿರುವದನ್ನು ನೆನಪುಕೊಡುವದಕ್ಕಾಗಿ ಇದನ್ನು ಹೇಳಿದೆ.

5. ಕರ್ಮವು ಪರಿಚ್ಛಿನ್ನವೆಂದೂ ಅಪರಿಚ್ಛಿನ್ನವೆಂದೂ ಎರಡು ಬಗೆ; ಬ್ರಹ್ಮಾಂಡ ದೊಳಗಿನ ಆದಿತ್ಯಾದಿಫಲವನ್ನು ಕೊಡುವದು ಪರಿಚ್ಛಿನ್ನವು. ಇದನ್ನು ಮೊದಲೇ ಹೇಳಿತ್ತು ಈಗ ಅಪರಿಚ್ಛಿನ್ನ ಕರ್ಮದ ಫಲವನ್ನು ಹೇಳಲಾಗುವದು. ಬೃ. ವಾ.

ಸರ್ವೇ ವಯಂ ಪರಿವಾರಿತಾಃ ಸನ್ತಃ ಅಪೃಚ್ಛಾಮ 'ಕೋಽಸಿ?' ಇತಿ, ಕಸ್ತ್ವಮಸಿ, ಕಿಂನಾಮಾ, ಕಿಂಸತತ್ತ್ವಃ? ಸೋಽಬ್ರವೀತ್ ಗನ್ಧರ್ವಃ ಸುಧನ್ವಾ ನಾಮತಃ ಆಙ್ಗಿರಸೋ ಗೋತ್ರತಃ | ತಂ ಯದಾ ಯಸ್ಮಿನ್‌ಕಾಲೇ ಲೋಕಾನಾಮ್ ಅನ್ತಾನ್ ಪರ್ಯವಸಾನಾನಿ ಅಪೃಚ್ಛಾಮ ಅಥ ಏನಂ ಗನ್ಧರ್ವಮ್ ಅಬ್ರೂಮ ಭುವನ ಕೋಶಪರಿಮಾಣಜ್ಞಾನಾಯ ಪ್ರವೃತ್ತೇಷು ಸರ್ವೇಷು ಆತ್ಮಾನಂ ಶ್ಲಾಘಯನ್ತಃ ಪೃಷ್ಟವನ್ತೋ ವಯಂ 'ಕ್ವ ಪಾರಿಕ್ಷಿತಾ ಅಭವನ್ ?' ಇತಿ | ಸ ಚ ಗನ್ಧರ್ವಃ ಸರ್ವಮ್ ಅಸ್ಮಭ್ಯಮ್ ಅಬ್ರವೀತ್ | ತೇನ ದಿವ್ಯೇಭ್ಯೋ ಮಯಾ ಲಬ್ಧಂ ಜ್ಞಾನಮ್ | ತತ್ ತವ ನಾಸ್ತಿ | ಅತೋ ನಿಗೃಹೀತೋಽಸಿ ಇತ್ಯಭಿಪ್ರಾಯಃ | ಸೋಽಹಂ ವಿದ್ಯಾಸಂಪನ್ನಃ ಲಬ್ಧಾಗಮಃ ಗನ್ಧರ್ವಾತ್ ತ್ವಾ ತ್ವಾಂ ಪೃಚ್ಛಾಮಿ ಯಾಜ್ಞವಲ್ಕ್ಯ ಕ್ವ ಪಾರಿಕ್ಷಿತಾಃ ಅಭವನ್ ? ತತ್ ತ್ವಂ ಕಿಂ ಜಾನಾಸಿ ? ಹೇ ಯಾಜ್ಞವಲ್ಕ್ಯ ಕಥಯ ಪೃಚ್ಛಾಮಿ ಕ್ವ ಪಾರಿಕ್ಷಿತಾ ಅಭವನ್ ಇತಿ ||

(ಭಾಷ್ಯಾರ್ಥ)

ಆ ಸಮಷ್ಟಿವ್ಯಷ್ಟಿರೂಪವಾಗಿರುವ ದರ್ಶನವು ಲೋಕಸಿದ್ಧವಲ್ಲವೆಂಬುದನ್ನು ತಿಳಿಸುವದಕ್ಕಾಗಿ ತನಗೆ ಹಿಂದೆ ಆದದ್ದರ ಕಥೆಯನ್ನು ಪ್ರಾರಂಭಿಸಿರುತ್ತಾನೆ ಅದ ರಿಂದ ಪ್ರತಿವಾದಿ(ಯಾದ ಯಾಜ್ಞವಲ್ಕ್ಯ)ನ ಬುದ್ಧಿಯನ್ನು ಮೋಹಗೊಳಿಸುವೆನು ಎಂದು ಭಾವಿಸಿಕೊಂಡಿರುತ್ತಾನೆ. ಮದ್ರದಲ್ಲಿ, ಮದ್ರವೆಂಬುದು ದೇಶವು, ಅದರಲ್ಲಿ ಚರಕರಾಗಿ– ಅಧ್ಯಯನಕ್ಕಾಗಿ ವ್ರತವನ್ನು ಆಚರಿಸುವದರಿಂದ ಚರಕರಾಗಿ, ಅಥವಾ ಅಧ್ವರ್ಯುಗಳಾಗಿ (ಎಂದರ್ಥ)-ಸಂಚರಿಸುತ್ತಿದ್ದೆವು, ಪ್ರಯಾಣಮಾಡು ತ್ತಿದ್ದೆವು. ತೇ ಪತಂಜಲಸ್ಯ (ಎಂಬಲ್ಲಿ ತೇ ಎಂದರೆ) ಆ ನಾವು ಪ್ರಯಾಣ ಮಾಡುತ್ತಾ ಪತಂಜಲನೆಂಬ ಹೆಸರಿನವನ, ಕಾಪ್ಯನ ಎಂದರೆ ಕಪಿಗೋತ್ರದವನ, ಮನೆಗೆ ಬಂದೆವು, ಬಂದುಸೇರಿದೆವು. ಅವನ ಮಗಳು ಗಂಧರ್ವಗೃಹೀತಳಾಗಿ ದ್ದಳು. ಗಂಧರ್ವನೆಂದರೆ ಅಮಾನುಷವಾದ ಸತ್ತ್ವವು ; (ಅಂಥ) ಒಂದಾನೊಂದು ಸತ್ತ್ವದಿಂದ ಆವಿಷ್ಟಳಾಗಿದ್ದಳು. ಅಥವಾ ಗಂಧರ್ವನು ಎಂದರೆ ಪೂಜ್ಯನಾದ ಅಗ್ನಿಯು, (ದೇವತೆಗಳಿಗೆ) ಋತ್ವಿಜನಾದ ದೇವತೆಯು ಎಂದು ಅಸಾಧಾರಣ ವಾದ(ಈ)ವಿಜ್ಞಾನದಿಂದ ನಿಶ್ಚಯಿಸಬಹುದು. ಏಕೆಂದರೆ ಸಾಮಾನ್ಯವಾದ ಸತ್ತ್ವಕ್ಕೆ ಇಂಥ ವಿಜ್ಞಾನವು ಇರುವಹಾಗಿಲ್ಲ. ಅವನನ್ನು ನಾವೆಲ್ಲರೂ ಸುತ್ತುಗಟ್ಟಿಕೊಂಡು 'ಯಾರಾಗಿರುವೆ? ನೀನು ಯಾರಾಗಿರುವೆ? ಯಾವ ಹೆಸರಿನವನು? ಯಾವ ಸ್ವರೂ ಪದವನು ?'-ಎಂದು ಕೇಳಿದೆವು. ಆ ಗಂಧರ್ವನು "ಸುಧನ್ವನೆಂಬ ಹೆಸರಿನವನು, ಆಂಗಿರಸನೆಂಬ ಗೋತ್ರದವನು" ಎಂದು ಉತ್ತರವನ್ನು ಕೊಟ್ಟನು. ಅವನನ್ನು ಯಾವಾಗ ಯಾವ ಕಾಲದಲ್ಲಿ ಲೋಕಗಳ ಅಂತಗಳನ್ನು ಕೊನೆಗಳನ್ನು (ಕುರಿತು) ಕೇಳಿದೆವೋ, ಆಗ ಈ ಗಂಧರ್ವನನ್ನು (ಕುರಿತು) ಇಂತೆಂದೆವು. ಭುವನಕೋಶದ

ಪರಿಮಾಣವನ್ನು ತಿಳಿದುಕೊಳ್ಳುವದಕ್ಕಾಗಿ ಎಲ್ಲರೂ ತೊಡಗಿದವರಾಗಿ ನಮ್ಮ ನಮ್ಮನ್ನು ಹೊಗಳಿಕೊಳ್ಳುತ್ತಾ[1] (ಹೀಗೆಂದು) ನಾವು ಕೇಳಿದೆವು. ಹೇಗೆ ? ಎಂದರೆ 'ಪಾರಿಕ್ಷಿತರು[2] ಎಲ್ಲಿದ್ದರು ?' ಆ ಗಂಧರ್ವನು ನಮಗೆ ಅದನ್ನು ಎಲ್ಲವನ್ನೂ ಹೇಳಿದನು. ಆದ್ದರಿಂದ ದ್ಯುಲೋಕದವರಿಂದ ನನಗೆ (ಈ) ಜ್ಞಾನವು ಲಭಿಸಿರುತ್ತದೆ, ಅದು ನಿನಗೆ ಇಲ್ಲ, ಆದ್ದರಿಂದ ನೀನು (ವಾದದಲ್ಲಿ) ಸೋತೆ-ಎಂದು ಅಭಿಪ್ರಾಯ. ಅಂಥ ನಾನು ವಿದ್ಯಾಸಂಪನ್ನನಾಗಿ, ಗಂಧರ್ವನಿಂದ ಆಗಮವನ್ನು ಪಡೆದುಕೊಂಡು (ತ್ವಾ = ತ್ವಾಮ್) ನಿನ್ನನ್ನು ಯಾಜ್ಞವಲ್ಕ್ಯನೆ, ಪಾರಿಕ್ಷಿತರು ಎಲ್ಲಿದ್ದರು ಎಂದು ಕೇಳುತ್ತಿದ್ದೇನೆ. ಅದನ್ನು ನೀನು ಅರಿತಿರುವೆಯೇನು ? ಎಲೈ ಯಾಜ್ಞವಲ್ಕ್ಯನೆ, ಪಾರಿಕ್ಷಿತರು ಎಲ್ಲಿದ್ದರು ಎಂದು ಕೇಳುತ್ತೇನೆ, ಹೇಳು !

## ಅಶ್ವಮೇಧಯಾಜಿಗಳು ವಾಯುವನ್ನು ಸೇರುತ್ತಾರೆ

(ಉಪನಿಷತ್ತು)

**ಸ ಹೋವಾಚೋವಾಚ ವೈ ಸೋಽಗಚ್ಛನ್ ವೈ ತೇ ತದ್ಯತ್ರಾಶ್ವಮೇಧಯಾಜಿನೋ ಗಚ್ಛನ್ತೀತಿ ಕ್ವ ನ್ವಶ್ವಮೇಧಯಾಜಿನೋ ಗಚ್ಛನ್ತೀತಿ ದ್ವಾತ್ರಿಗ್ಂಶತಂ ವೈ ದೇವರಥಾಹ್ನ್ಯಾನ್ಯಯಂ ಲೋಕಸ್ತಗ್ಂ ಸಮನ್ತಂ ಪೃಥಿವೀ ದ್ವಿಸ್ತಾವತ್ ಪರ್ಯೇತಿ ತಾಗ್ಂ ಸಮನ್ತಂ ಪೃಥಿವೀಂ ದ್ವಿಸ್ತಾವತ್ ಸಮುದ್ರಃ ಪರ್ಯೇತಿ ತದ್ಯಾವತೀ ಕ್ಷುರಸ್ಯ ಧಾರಾ ಯಾವದ್ವಾ ಮಕ್ಷಿಕಾಯಾಃ ಪತ್ರಂ ತಾವಾನನ್ತರೇಣಾಽಽಕಾಶಸ್ತಾನಿನ್ದ್ರಃ ಸುಪರ್ಣೋ ಭೂತ್ವಾ ವಾಯವೇ ಪ್ರಾಯಚ್ಛತ್ತಾನ್ವಾಯುರಾತ್ಮನಿ ಧಿತ್ವಾ ತತ್ರಾಗಮಯದ್ಯತ್ರಾಶ್ವಮೇಧಯಾಜಿನೋಽಭವನ್ನಿತ್ಯೇವಮಿವ ವೈ ಸ ವಾಯುಮೇವ ಪ್ರಶಶಗ್ಂಸ ತಸ್ಮಾದ್ ವಾಯುರೇವ ವ್ಯಷ್ಟಿರ್ವಾಯುಃ ಸಮಷ್ಟಿರಪ ಪುನರ್ಮೃತ್ಯುಂ ಜಯತಿ ಯ ಏವಂ ವೇದ ತತೋ ಹ ಭುಜ್ಯುರ್ಲಾಹ್ಯಾಯನಿರುಪರರಾಮ ॥ ೨ ॥**

೨. ಅವನು ಇಂತೆಂದನು: ಆ (ಗಂಧರ್ವನು) ಅವರು ಅಶ್ವಮೇಧಯಾಜಿಗಳು ಎಲ್ಲಿಗೆ ಹೋಗುವರೋ ಅಲ್ಲಿಗೆ ಹೋದರು ಎಂದು ಹೇಳಿ

---

1. ಇವರ ಅಭಿಪ್ರಾಯವು ತಿಳಿಯಲಿಲ್ಲ, ಗಂಧರ್ವನಿಂದ ಇಂಥ ವಿಷಯಕ್ಕೆ ಉತ್ತರವು ದೊರೆಯುವ ಸಂದರ್ಭವು ನಮಗೆ ಒದಗಿತಲ್ಲ ಎಂದು ಹಿಗ್ಗಿ-ಎಂದಿರಬಹುದು.

2. ಇವರುಗಳ ಹೆಸರುಗಳನ್ನು ಶತ. ಬ್ರಾ. ೧೩-೫-೪-೩ ರಲ್ಲಿ ಕೊಟ್ಟಿದೆ.

ರುತ್ತಾನೆ. ‘ಅಶ್ವಮೇಧಯಾಜಿಗಳು ಎಲ್ಲಿಗೆ ಹೋಗುವರು?’ ದೇವ ರಥಾಹ್ನ್ಯಗಳ ಮೂವತ್ತೆರಡರಷ್ಟು ಈ ಲೋಕವು. ಅದರ ಸುತ್ತಲೂ ಅದರ ಎರಡರಷ್ಟಾಗಿ ಪೃಥ್ವಿಯು ಸುತ್ತಿಕೊಂಡಿದೆ. ಆ ಪೃಥ್ವಿಯ ಸುತ್ತಲೂ ಅದರ ಎರಡರಷ್ಟಾಗಿ ಸಮುದ್ರವು ಸುತ್ತಿಕೊಂಡಿದೆ. ಅಲ್ಲಿ ಕ್ಷುರದ ಅಲುಗು ಎಷ್ಟಿದೆಯೋ, ಅಥವಾ ನೊಣದ ರೆಕ್ಕೆಯು ಎಷ್ಟಿದೆಯೋ, (ಅವುಗಳ) ನಡುವೆ ಅಷ್ಟು ಆಕಾಶ(ವಿರುತ್ತದೆ.) ಅವರನ್ನು ಇಂದ್ರನು ಸುಪರ್ಣನಾಗಿ ವಾಯುವಿಗೆ ಕೊಟ್ಟನು. ಅವರನ್ನು ವಾಯು ತನ್ನಲ್ಲಿಟ್ಟು ಕೊಂಡು ಎಲ್ಲಿ ಅಶ್ವಮೇಧಯಾಜಿಗಳು ಇದ್ದಾರೋ ಅಲ್ಲಿಗೆ ಒಯ್ದು ಸೇರಿ ಸಿದನು. ಹೀಗೆ ಅವನು ವಾಯುವನ್ನೇ ಹೊಗಳಿದನು. ಆದ್ದರಿಂದ ವಾಯುವೇ ವ್ಯಷ್ಟಿಯು, ವಾಯುವೇ ಸಮಷ್ಟಿಯು. ಯಾವನು ಹೀಗೆಂದು ಅರಿತುಕೊಳ್ಳುವನೋ ಅವನು ಪುನರ್ಮೃತ್ಯುವನ್ನು ಗೆದ್ದುಕೊಳ್ಳುವನು. ಆ ಬಳಿಕ ಭುಜ್ಯುಲಾಹ್ಯಾಯನಿಯು ಸುಮ್ಮನಾದನು.

## ಭುವನಕೋಶದ ಪರಿಮಾಣ

(ಭಾಷ್ಯ)

೪೧. ಸ ಹೋವಾಚ ಯಾಜ್ಞವಲ್ಕ್ಯ। ಉವಾಚ ವೈ ಸಃ। ವೈಶಬ್ದಃ ಸ್ಮರಣಾರ್ಥಃ[1]। ಉವಾಚ ವೈ ಸ ಗನ್ಧರ್ವಸ್ತುಭ್ಯಮ್। ಅಗಚ್ಛನ್ ವೈ ತೇ ಪಾರಿ ಕ್ಷಿತಾಃ ತತ್ ತತ್ರ ? ಕ್ವ ? ಯತ್ರ ಯಸ್ಮಿನ್ ಅಶ್ವಮೇಧಯಾಜಿನೋ ಗಚ್ಛನ್ತೀತಿ। ನಿರ್ಣೀತೇ ಪ್ರಶ್ನೇ ಆಹ। ಕ್ವ ನು ಕಸ್ಮಿನ್ ಅಶ್ವಮೇಧಯಾಜಿನೋ ಗಚ್ಛನ್ತೀತಿ। ತೇಷಾಂ ಗತಿವಿವಕ್ಷಯಾ ಭುವನಕೋಶಪರಿಮಾಣಮ್ ಆಹ। ದ್ವಾತ್ರಿಂಶತಂ ವೈ ದ್ವೇ ಅಧಿಕೇ ತ್ರಿಂಶತ್ ದ್ವಾತ್ರಿಂಶತಂ ವೈ ದೇವರಥಾಹ್ನ್ಯಾನಿ[2] ದೇವಃ ಆದಿತ್ಯಃ ತಸ್ಯ ರಥೋ ದೇವರಥಃ। ತಸ್ಯ ರಥಸ್ಯ ಗತ್ಯಾ ಅಹ್ನಾ ಯಾವತ್ ಪರಿಚ್ಛಿದ್ಯತೇ ದೇಶ ಪರಿಮಾಣಮ್, ತತ್[3] ದೇವರಥಾಹ್ನ್ಯಮ್। ತತ್ ದ್ವಾತ್ರಿಂಶದ್ಗುಣಿತಂ ದೇವ

---

1. ಇದು ‘ಸ್ಮಾರಣಾರ್ಥಃ’ ಎಂದಿದ್ದರೆ ಚೆನ್ನಾಗಿರುತ್ತಿತ್ತು.

2. ‘ದೇವರಥಾಹನ್ಯಾನಿ’ ಎಂದು ಆ॥ ಪಾಠ; ಆದರೆ ಮಿಕ್ಕ ಪುಸ್ತಕಗಳಲ್ಲೆಲ್ಲ ‘ದೇವರಥಾಹ್ನ್ಯಾನಿ’ ಎಂದೇ ಇದೆ. ಆ ಪಾಠವನ್ನೇ ನಾವೂ ಇಟ್ಟುಕೊಂಡಿದೇವೆ.

3. ತಾವತ್ ಎಂಬ ಪಾಠಕ್ಕಿಂತ ಇದು ಮೇಲು.

ರಥಾಹ್ನ್ಯಾನಿ ತಾವತ್ಪರಿಮಾಣೋಽಯಂ ಲೋಕಃ, ಲೋಕಾ ಲೋಕಗಿರಿಣಾ ಪರಿಕ್ಷಿಪ್ತಃ| ಯತ್ರ ವೈರಾಜಂ ಶರೀರಮ್, ಯತ್ರ ಚ ಕರ್ಮ ಫಲೋಪ ಭೋಗಃ ಪ್ರಾಣಿನಾಮ್ ಸ ಏಷ ಲೋಕಃ ಏತಾವಾನ್ ಲೋಕಃ| ಅತಃ ಪರಮ್ ಅಲೋಕಃ| ತಂ ಲೋಕಂ ಸಮನ್ತಂ ಸಮನ್ತತಃ ಲೋಕವಿಸ್ತಾರಾತ್ ದ್ವಿಗುಣಪರಿಮಾಣವಿಸ್ತಾರೇಣ ತಂ ಲೋಕಂ ಪರಿಕ್ಷಿಪ್ತಾ ಪರ್ಯೇತಿ ಪೃಥಿವೀ| ಪರಿಮಾಣೇನ ತಾಂ ಪೃಥಿವೀಂ ತಥೈವ ಸಮನ್ತಂ ದ್ವಿಸ್ತಾವತ್ ದ್ವಿಗುಣೇನ ಪರಿಮಾಣೇನ ಸಮುದ್ರಃ ಪರ್ಯೇತಿ| ಯಂ ಘನೋದಮಾಚಕ್ಷತೇ ಪೌರಾಣಿಕಾಃ||

(ಭಾಷ್ಯಾರ್ಥ)

ಆ ಯಾಜ್ಞವಲ್ಕ್ಯನು ಇಂತೆಂದನು 'ಉವಾಚ ವೈ ಸಃ' (ಎಂಬ ಮೂಲದಲ್ಲಿ) ವೈಶಬ್ದವು ನೆನಪಿಗೆ (ತರು)ವದಕ್ಕಾಗಿ ಹೇಳಿದ್ದು. ಆ ಗಂಧರ್ವನು ನಿನಗೆ ಹೀಗೆಂದು ಹೇಳಿದನಲ್ಲವೆ? ಆ ಪಾರಿಕ್ಷಿತರು[1] (ತದ್=ತತ್ರ) ಅಲ್ಲಿಗೆ ಹೋದರು ಎಲ್ಲಿಗೆ? ಎಲ್ಲಿಗೆ ಅಶ್ವಮೇಧಯಾಜಿಗಳು ಹೋಗುತ್ತಾರೋ (ಅಲ್ಲಿಗೆ).

(ಹೀಗೆ ತನ್ನ) ಪ್ರಶ್ನೆಯನ್ನು ನಿರ್ಣಯಿಸಲಾಗಿ (ಭುಜ್ಯು) ವಿಂತೆಂದನು: 'ಅಶ್ವಮೇಧಯಾಜಿಗಳು ಎಲ್ಲಿಗೆ ಹೋಗುವರು?' ಅವರ ಗತಿಯನ್ನು ಹೇಳೋಣವೆಂದು (ಯಾಜ್ಞವಲ್ಕ್ಯನು) ಭುವನಕೋಶದ ಪರಿಮಾಣವನ್ನು ಹೇಳುತ್ತಾನೆ. ಮೂವತ್ತೆರಡರಷ್ಟು, ಎರಡು ಹೆಚ್ಚಾಗಿ ಮೂವತ್ತು, ಮೂವತ್ತೆರಡು ದೇವರಥಾಹ್ನ್ಯಗಳು-ದೇವನು ಎಂದರೆ ಆದಿತ್ಯನು, ಅವನ ರಥವು ದೇವರಥವು. ಅದರ ಗತಿಯಿಂದ (ಒಂದು) ಹಗಲಿನಲ್ಲಿ ಎಷ್ಟು ದೇಶಪರಿಮಾಣವು ಮುಗಿಯುವದೋ ಅದು ದೇವರಥಾಹ್ನ್ಯವು, ಅದು ಮೂವತ್ತೆರಡರಷ್ಟಾಗುವ ದೇವರಥಾಹ್ನ್ಯಗಳು, ಅಷ್ಟು ಪರಿಮಾಣವುಳ್ಳದ್ದು- ಈ ಲೋಕವು. (ಇದು) ಲೋಕಾಲೋಕಗಿರಿಯಿಂದ ಸುತ್ತುವರಿಯಲ್ಪಟ್ಟಿರುತ್ತದೆ. ಎಲ್ಲಿ ವೈರಾಜಶರೀರವಿರುವದೋ[2], ಮತ್ತು ಎಲ್ಲಿ ಪ್ರಾಣಿಗಳಿಗೆ ಕರ್ಮಫಲಗಳ ಉಪಭೋಗವಾಗುತ್ತಿರುವದೋ ಆ ಇದು **ಲೋಕವು**, ಇದರಿಂದ ಮುಂದಕ್ಕೆ **ಅಲೋಕ** (ವೆನಿಸುವದು). ಆ ಲೋಕವನ್ನು ಸುತ್ತಲೂ ಎಲ್ಲಾ ಕಡೆಯಲ್ಲಿಯೂ ಲೋಕ

---

1. ಶತ. ಬ್ರಾ. ೧೩-೧-೪-೧ ರಿಂದ ೩
2. ವಿರಾಟ್ಪುರುಷನ ಶರೀರವೇ ಈ ಲೋಕವು ಎಂದರ್ಥವಿರಬೇಕು.

ವಿಸ್ತಾರದ ಎರಡರಷ್ಟು ಪರಿಮಾಣದ ವಿಸ್ತಾರವಾಗಿ ಆ ಲೋಕವನ್ನು[1] ಸುತ್ತಿಕೊಂಡು **ಪೃಥ್ವಿ**ಯು[2] ಹರಡಿಕೊಂಡಿರುತ್ತದೆ. ಆ ಪೃಥಿವಿಯನ್ನು ಹಾಗೆಯೇ ಸುತ್ತಲೂ ಅದರ ಎರಡರಷ್ಟು, ಎರಡರಷ್ಟು ಪರಿಮಾಣವಾಗಿ, **ಸಮುದ್ರ**ವು ಹರಡಿಕೊಂಡಿರುವದು ; ಅದನ್ನು **ಘನೋದ**[3] ಎಂದು ಪೌರಾಣಿಕರು ಕರೆಯುತ್ತಾರೆ,

## ಅಶ್ವಮೇಧಯಾಜಿಗಳು ಹೋಗುವ ಕ್ರಮ

(ಭಾಷ್ಯ)

೪೨. ತತ್ರ ಅಣ್ಡಕಪಾಲಯೋರ್ವಿವರಪರಿಮಾಣಮ್ ಉಚ್ಯತೇ | ಯೇನ ವಿವರೇಣ ಮಾರ್ಗೇಣ ಬಹಿರ್ನಿರ್ಗಚ್ಛನ್ತೋ ವ್ಯಾಪ್ನುವನ್ತಿ ಅಶ್ವಮೇಧಯಾಜಿನಃ | ತತ್ರ ಯಾವತೀ ಯಾವತ್ ಪರಿಮಾಣಾ ಕ್ಷುರಸ್ಯ ಧಾರಾ ಅಗ್ರಮ್ ಯಾವದ್ ವಾ ಸೌಕ್ಷ್ಮ್ಯೇಣ ಯುಕ್ತಂ ಮಕ್ಷಿಕಾಯಾಃ ಪತ್ರಮ್ ತಾವಾನ್ ತಾವತ್ಪರಿಮಾಣಃ ಅನ್ತರೇಣ ಮಧ್ಯೇ ಅಣ್ಡಕಪಾಲಯೋರಾಕಾಶಃ ಛಿದ್ರಮ್ | ತೇನ ಆಕಾಶೇನ ಇತ್ಯೇತತ್ | ತಾನ್ ಪಾರಿಕ್ಷಿತಾನ್ ಅಶ್ವಮೇಧಯಾಜಿನಃ ಪ್ರಾಪ್ತಾನ್ ಇನ್ದ್ರಃ ಪರಮೇಶ್ವರಃ ಯೋಽಶ್ವಮೇಧೇ ಅಗ್ನಿಶ್ಚಿತಃ ಸುಪರ್ಣಃ ಯದ್ವಿಷಯಂ ದರ್ಶನಮುಕ್ತಮ್ "ತಸ್ಯ ಪ್ರಾಚೀ ದಿಕ್ಶಿರಃ"(೧-೨ ೪)ಇತ್ಯಾದಿನಾ ಸುಪರ್ಣಃ ಪಕ್ಷೀ ಭೂತ್ವಾ ಪಕ್ಷಪುಚ್ಛಾದ್ಯಾತ್ಮಕಃ ಸುಪರ್ಣೋ ಭೂತ್ವಾ ವಾಯವೇ ಪ್ರಾಯಚ್ಛತ್| ಮೂರ್ತತ್ವಾತ್ ನಾಸ್ತ್ಯಾತ್ಮನೋ ಗತಿಸ್ತತ್ರ ಇತಿ|ತಾನ್ ಪಾರಿಕ್ಷಿತಾನ್ ವಾಯುಃ ಆತ್ಮನಿ ಧಿತ್ವಾ ಸ್ಥಾಪಯಿತ್ವಾ ಸ್ವಾತ್ಮಭೂತಾನ್ ಕೃತ್ವಾ ತತ್ರ ತಸ್ಮಿನ್ ಅಗಮಯತ್ । ಕ್ವ? ಯತ್ರ ಪೂರ್ವೇ ಅತಿಕ್ರಾನ್ತಾಃ ಪಾರಿಕ್ಷಿತಾಃ ಅಶ್ವಮೇಧಯಾಜಿನೋಽಭವನ್ ಇತಿ । ಏವಮಿವ ವೈ ಏವಮೇವ ಸ ಗನ್ಧರ್ವೋ ವಾಯುಮೇವ ಪ್ರಶಶಂಸ ಪಾರಿಕ್ಷಿತಾನಾಂ ಗತಿಮ್ ||

(ಭಾಷ್ಯಾರ್ಥ)

ಇಲ್ಲಿ ಅಂಡದ ಕಪಾಲಗಳ ವಿವರದ ಪರಿಮಾಣವನ್ನು ಹೇಳಲಾಗುತ್ತದೆ; ಆ ಸಂದಿನ ಮಾರ್ಗದಿಂದ ಹೊರಕ್ಕೆ ಹೊರಟುಹೋಗಿ ಅಶ್ವಮೇಧಯಾಜಿಗಳು ವ್ಯಾಪಿಸಿಕೊಳ್ಳುತ್ತಾರೆ. ಇಲ್ಲಿ ಕ್ಷೌರದಕತ್ತಿಯ ಧಾರೆಯು, ಅಲಗು ಎಷ್ಟೋ

1. ಆ ಲೋಕವನ್ನು ಎಂದು ಮತ್ತೆ ಹೇಳಿರುವದು ಅನ್ವಯಕ್ಕಾಗಿ.

2. ಸೂರ್ಯಚಂದ್ರರ ಕಿರಣಗಳ ವ್ಯಾಪ್ತಿಗೆ ಸೇರಿರುವ ಸಮುದ್ರನದೀಪರ್ವತಗಳಿಂದೊಡಗೂಡಿರುವ ಭಾಗವಿದೆಯಲ್ಲ, ಅದನ್ನು **ಪೃಥ್ವಿ** ಎನ್ನುವರು.

3. ಈ ಅಂಡದಸುತ್ತಲೂ ಅಮೃತಸಮುದ್ರವಿರುತ್ತದೆ; ಇದಕ್ಕೆ ಘನೋದ (ಗಟ್ಟಿಯಾದ ನೀರುಳ್ಳದ್ದು) ಎಂದು ಹೆಸರು.

ಎಷ್ಟು ಪರಿಮಾಣವುಳ್ಳದ್ದೋ, ಅಥವಾ ನೊಣದ ರೆಕ್ಕೆಯು ಎಷ್ಟು ಸೌಕ್ಷ್ಮ್ಯದಿಂದ ಕೂಡಿರುವದೋ ಅಷ್ಟು, ಅಷ್ಟು ಪರಿಮಾಣದ ಆಕಾಶವು, ರಂಧ್ರವು, ಅಂಡ ಕಪಾಲಗಳ ನಡುವೆ(ಯಿರುವದು), ಆ ಆಕಾಶದಿಂದ ಎಂದು ತಾತ್ಪರ್ಯ. ಆ ಪಾರಿಕ್ಷಿತರು, ಅಶ್ವಮೇಧಯಾಜಿಗಳು (ಅಲ್ಲಿಗೆ) ಬರಲು ಇಂದ್ರನು ಪರಮೇಶ್ವರನು ಅಶ್ವಮೇಧದಲ್ಲಿ ಚಿತನಾಗಿದ್ದ ಅಗ್ನಿಯು ಸುಪರ್ಣ(ನಾಗಿ)–ಯಾವನ ವಿಷಯದ ಉಪಾಸನೆಯನ್ನು "ಅವನಿಗೆ ಪೂರ್ವದಿಕ್ಕು ಶಿರಸ್ಸು" (೧-೨-೩) ಎಂದು ಮುಂತಾಗಿ ಹೇಳಿತ್ತೋ (ಆ) ಸುಪರ್ಣ(ನಾಗಿ)– ಪಕ್ಷಿಯಾಗಿ, ರೆಕ್ಕೆ, ಪುಕ್ಕ–ಮುಂತಾದವುಗಳುಳ್ಳ ಸುಪರ್ಣನಾಗಿ (ತಾನು) ಮೂರ್ತನಾಗಿರುವದರಿಂದ ತನಗೆ ಅಲ್ಲಿಯ(ವರೆಗೆ) ಗಮನವಾಗುವದಿಲ್ಲವೆಂದು ವಾಯುವಿಗೆ ಕೊಟ್ಟನು

(ಆ) ವಾಯುವು ಆ ಪಾರಿಕ್ಷಿತರನ್ನು ತನ್ನಲ್ಲಿಟ್ಟುಕೊಂಡು, ನಿಲ್ಲಿಸಿಕೊಂಡು ತನ್ನ ಸ್ವರೂಪರನ್ನೇ ಮಾಡಿಕೊಂಡು ಅಲ್ಲಿಗೆ ಆ (ಸ್ಥಲ)ಕ್ಕೆ ತಲುಪಿಸಿದನು. ಎಲ್ಲಿಗೆ ? ಎಂದರೆ ಎಲ್ಲಿ ಹಿಂದಿನ ಆಗಿಹೋಗಿರುವ ಪಾರಿಕ್ಷಿತರು, ಅಶ್ವಮೇಧಯಾಜಿಗಳು ಇದ್ದರೋ (ಅಲ್ಲಿಗೆ ತಲುಪಿಸಿದನು).

(ಏವಮಿವ ವೈ=ಏವಮೇವ) ಹೀಗೆಯೇ ಆ ಗಂಧರ್ವನು ವಾಯುವನ್ನೇ ಹೊಗಳಿದನು, ಪಾರಿಕ್ಷಿತರ ಗತಿ (ಎಂದು ಹೊಗಳಿದನು).

## ವಾಯುವಿನ ಮಹಿಮೆ

(ಭಾಷ್ಯ)

೪೩ ಸಮಾಪ್ತಾ ಆಖ್ಯಾಯಿಕಾ । ಆಖ್ಯಾಯಿಕಾನಿರ್ವೃತ್ತಂ ತು ಅರ್ಥಮ್ ಆಖ್ಯಾಯಿಕಾತೋಽಪಸೃತ್ಯ ಸ್ವೇನ ಶ್ರುತಿರೂಪೇಣೈವ ಆಚಷ್ಟೇ ಅಸ್ಮಭ್ಯಮ್ । ಯಸ್ಮಾದ್ ವಾಯುಃ ಸ್ಥಾವರಜಙ್ಗಮಾನಾಂ ಭೂತಾನಾಮ್ ಅನ್ತರಾತ್ಮಾ ಬಹಿಶ್ಚ ಸ ಏವ ತಸ್ಮಾತ್ ಅಧ್ಯಾತ್ಮಾಧಿಭೂತಾಧಿದೈವಭಾವೇನ ವಿವಿಧಾ ಯಾ ಅಷ್ಟಿಃ ವ್ಯಾಪ್ತಿಃ ಸ ವಾಯುರೇವ । ತಥಾ ಸಮಷ್ಟಿಃ ಕೇವಲೇನ ಸೂತ್ರಾತ್ಮನಾ ವಾಯುರೇವ । ಏವಂ ವಾಯುಮಾತ್ಮಾನಂ ಸಮಷ್ಟಿವ್ಯಷ್ಟಿರೂಪಾತ್ಮಕತ್ವೇನ ಉಪಗಚ್ಛತಿ ಯ ಏವಂ ವೇದ । ತಸ್ಯ ಕಿಂ ಫಲಮಿತಿ ಆಹ । ಅಪಪುನರ್ಮೃತ್ಯುಂ ಜಯತಿ ಸಕೃನ್ಮೃತ್ವಾ ಪುನರ್ನ ಮ್ರಿಯತೇ । ತತ ಆತ್ಮನಃ ಪ್ರಶ್ನನಿರ್ಣಯಾತ್ ಭುಜ್ಯುರ್ಲಾಹ್ಯಾಯನಿಃ ಉಪರರಾಮ ॥

(ಭಾಷ್ಯಾರ್ಥ)

ಕಥೆಯು ಮುಗಿಯಿತು. ಆದರೆ ಕಥೆಯಿಂದ ಸಿದ್ಧವಾದ ಅರ್ಥವನ್ನು (ಶ್ರುತಿಯು) ಕಥೆಯಿಂದ ಇತ್ತ ಸರಿದು ತನ್ನ ಶ್ರುತಿಯ ರೂಪದಿಂದಲೇ[1] ನಮ್ಮ

1. ಕಥೆಯಲ್ಲಿ ಭುಜ್ಯುಯಾಜ್ಞವಲ್ಕ್ಯರ ಸಂವಾದರೂಪದಿಂದ ವಿಷಯವನ್ನು ಪ್ರತಿಪಾದನೆಮಾಡಿದ ಶ್ರುತಿಯು ಈಗ ತನ್ನ ರೂಪದಿಂದಲೇ ಹೇಳುತ್ತಿದೆ.

ಗಳಿಗೆ ಹೇಳಿಕೊಡುತ್ತಿದೆ. (ಹೀಗೆ) ವಾಯುವು ಸ್ಥಾವರಜಂಗಮಪ್ರಾಣಿಗಳಿಗೆ ಒಳಗಿನ ಆತ್ಮನಾಗಿರುತ್ತಾನಷ್ಟೆ, ಹೊರಗೂ ಅವನೇ ಇರುತ್ತಾನಷ್ಟೆ, ಆದ್ದರಿಂದ ಅಧ್ಯಾತ್ಮ, ಅಧಿಭೂತ, ಅಧಿದೈವ– ಎಂಬ ರೂಪದಿಂದ ಬಗೆಬಗೆಯಾಗಿರುವ ಅಷ್ಟಿಯಿದೆಯಲ್ಲ, ವ್ಯಾಪ್ತಿಯಿದೆಯಲ್ಲ, ಅದು ವಾಯುವೇ, ಹಾಗೂ ಸಮಷ್ಟಿಯಾಗಿ ಬರಿಯ ಸೂತ್ರರೂಪದಿಂದಿರುವ ಸಮಷ್ಟಿಯೂ ವಾಯುವೇ; ಹೀಗೆ ವಾಯುವೇ ಸಮಷ್ಟಿವ್ಯಷ್ಟಿರೂಪನಾಗಿರುವ ಆತ್ಮನೆಂದು ಯಾವನು ಅರಿತುಕೊಳ್ಳುವನೋ ಉಪಾಸನೆಮಾಡುವನೋ ಅವನಿಗೆ ಯಾವ ಫಲವಾಗುವದು? ಎಂದರೆ (ಶ್ರುತಿ) ಹೇಳುತ್ತದೆ. ಪುನರ್ಮೃತ್ಯುವಿಗೆ ಅಪಜಯವನ್ನು ಮಾಡುತ್ತಾನೆ, ಒಂದು ಸಲ ಸತ್ತ ಮೇಲೆ ಮತ್ತೆ ಸಾಯುವದಿಲ್ಲ

ಆಗ ತನ್ನ ಪ್ರಶ್ನೆಯನ್ನು ನಿರ್ಣಯಿಸಿಕೊಟ್ಟದ್ದರಿಂದ, ಭುಜ್ಯುಲಾಹ್ಯಾಯನಿಯು ಸುಮ್ಮನಾದನು.



# ಮೂರನೆಯ ಬ್ರಾಹ್ಮಣದ ಸಾರ

೧. ಈ ಬ್ರಾಹ್ಮಣದಲ್ಲಿ ಕರ್ಮಗಳ ಪರಮಫಲವನ್ನು ಹೇಳಿರುತ್ತದೆ. ಆರ್ತಭಾಗನು ಸುಮ್ಮನಾಗಲು ಭುಜ್ಯುಲಾಹ್ಯಾಯನಿಯು ಯಾಜ್ಞವಲ್ಕ್ಯನನ್ನು ಹೀಗೆಂದು ಪ್ರಶ್ನೆಮಾಡಿದನು "ನಾವು ಹಿಂದೆ ಮದ್ರದೇಶದಲ್ಲಿ ಸಂಚರಿಸುತ್ತಿದ್ದಾಗ ಪತಂಜಲಕಾಪ್ಯನ ಮನೆಯಲ್ಲಿ ಒಮ್ಮೆ ಇಳಿದಿದ್ದೆವು. ಆತನ ಮಗಳನ್ನು ಸುಧನ್ವಆಂಗಿರಸನೆಂಬ ಗಂಧರ್ವನು ಹಿಡಿದಿದ್ದನು ಅವನನ್ನು ಲೋಕಗಳ ಎಲ್ಲೆಯನ್ನು ಕುರಿತು ಪ್ರಶ್ನೆಮಾಡಿದೆವು ಪಾರಿಕ್ಷಿತರೆಂಬ ಅಶ್ವಮೇಧಯಾಜಿಗಳು ಯಾವ ಗತಿಯನ್ನು ಹೊಂದಿದರು ? ಎಂದು ನಾವು ಕೇಳಿದ್ದಕ್ಕೆ ಅವನು ನಮಗೆ ಉತ್ತರವನ್ನು ಹೇಳಿರುತ್ತಾನೆ. ನಿನಗೆ ಈ ವಿಷಯದ ತಿಳಿವಳಿಕೆಯಿದೆಯೆ ? ಇಲ್ಲದಿದ್ದರೆ ನೀನು ವಾದದಲ್ಲಿ ಸೋತಂತೆ ಆಯಿತಲ್ಲವೆ ? "

೨. ಇದಕ್ಕೆ ಯಾಜ್ಞವಲ್ಕ್ಯನು ಉತ್ತರಕೊಟ್ಟಿದ್ದೇನೆಂದರೆ "ಗಂಧರ್ವನು ನಿಮಗೆ ಇದೇ ಉತ್ತರವನ್ನು ಕೊಟ್ಟಿರಬೇಕು. ಪಾರೀಕ್ಷಿತರು ಹಿಂದಿನ ಅಶ್ವಮೇಧಯಾಜಿಗಳು ಹೋದಲ್ಲಿಗೇ ಹೋದರು ಅಶ್ವಮೇಧಯಾಜಿಗಳಿಗೆ ಗತಿ ಯಾವದೆಂದರೆ, ಸೂರ್ಯರಥವು ಒಂದು ದಿನಕ್ಕೆ ಸಂಚರಿಸುವಷ್ಟರ ಮೂವತ್ತೆರಡರಷ್ಟನ್ನು ಆಕ್ರಮಿಸಿರುವ ಭಾಗವು **ಲೋಕ**ವೆನಿಸುವದು. ಅದರ ಸುತ್ತಲೂ ಅದರ ಎರಡರಷ್ಟು ಸ್ಥಲವನ್ನು ಪೃಥಿವಿಯು ಆಕ್ರಮಿಸಿರುವದು, ಅದರ ಸುತ್ತಲೂ ಅದರ ಎರಡರಷ್ಟು ಸ್ಥಲವನ್ನು ಘನೋದವೆಂಬ ಸಮುದ್ರವು ಆಕ್ರಮಿಸಿರುವದು. ಇನ್ನೂ ಮುಂದಕ್ಕೆ ಅಂಡಕಪಾಲಗಳ ಸಂದು ಇರುತ್ತದೆ. ಅದು ಕ್ಷುರಕತ್ತಿಯ ಅಲುಗಿನಷ್ಟು ಅಥವಾ ನೊಣದ ರೆಕ್ಕೆಯಷ್ಟು ಸೂಕ್ಷ್ಮವಾಗಿರುತ್ತದೆ. ಅದರ ಮೂಲಕವಾಗಿ ಅಶ್ವಮೇಧಾಗ್ನಿಯು ವಾಯುವಿಗೆ ಪಾರಿಕ್ಷಿತರನ್ನು ಸಮರ್ಪಿಸಿದನು. ಆ ವಾಯುವು ಅವರನ್ನು ತನ್ನ ಸ್ವರೂಪವನ್ನು ಹೊಂದಿಸಿದವನಾಗಿ ಹಿಂದಿನ ಅಶ್ವಮೇಧಯಾಜಿಗಳಿದ್ದ ಸ್ಥಾನಕ್ಕೆ ಒಪ್ಪಿಸಿದನು. ಹೀಗೆಂದು ಆ ಗಂಧರ್ವನು ವಾಯುವನ್ನೇ ಅವರಿಗೆ ಗತಿ ಎಂದು ಹೊಗಳಿದನು "

೩. ಹೀಗಿರುವದರಿಂದ ವಾಯುವೇ ವ್ಯಷ್ಟಿದೇವತೆಗಳು, ವಾಯುವೇ ಸಮಷ್ಟಿಯು ಯಾವನು ಹೀಗೆಂದು ವಾಯ್ವಾತ್ಮನನ್ನು ಉಪಾಸನೆಮಾಡಿ ಸಾಕ್ಷಾತ್ಕರಿಸಿಕೊಳ್ಳುವನೋ ಅವನು ಪುನರ್ಮೃತ್ಯುವನ್ನು ಗೆದ್ದುಕೊಳ್ಳುತ್ತಾನೆ. ತನ್ನ ಪ್ರಶ್ನೆಗೆ ಈ ಉತ್ತರವು ಬಂದ ಬಳಿಕ ಭುಜ್ಯುಲಾಹ್ಯಾಯನಿಯು ಸುಮ್ಮನಾದನು.

---

# ಮೂರನೆಯ ಅಧ್ಯಾಯ–ನಾಲ್ಕನೆಯ ಬ್ರಾಹ್ಮಣ

## (ಉಷಸ್ತಪ್ರಶ್ನೆ: ಆತ್ಮನ ನಿರುಪಾಧಿಕಸ್ವರೂಪ)

## ಬ್ರಾಹ್ಮಣದ ಸಂಬಂಧ

(ಭಾಷ್ಯ)

೪೪. 'ಅಥ ಹೈನಮುಷಸ್ತಶ್ಚಾಕ್ರಾಯಣಃ ಪಪ್ರಚ್ಛ' | ಪುಣ್ಯಾಪಾಪ ಪ್ರಯುಕ್ತೈಃ ಗ್ರಹಾತಿಗ್ರಹೈರ್ಗೃಹೀತಃ ಪುನಃಪುನರ್ಗ್ರಹಾತಿಗ್ರಹಾನ್ ತ್ಯಜನ್ ಉಪಾದದತ್ ಸಂಸರತಿ ಇತ್ಯುಕ್ತಮ್ | ಪುಣ್ಯಸ್ಯ ಚ ಪರ ಉತ್ಕರ್ಷೋ ವ್ಯಾಖ್ಯಾತೋ ವ್ಯಾಕೃತವಿಷಯಃ ಸಮಷ್ಟಿವ್ಯಷ್ಟಿರೂಪೋ ದ್ವೈತೈಕತ್ವಾತ್ಮಪ್ರಾಪ್ತಿಃ| ಯಸ್ತು ಗ್ರಹಾತಿಗ್ರಹೈರ್ಗ್ರಸ್ತಃ ಸಂಸರತಿ ಸೋಽಸ್ತಿ ವಾ ನಾಸ್ತಿ? ಅಸ್ತಿತ್ವೇ ಚ ಕಿಂಲಕ್ಷಣಃ?- ಇತ್ಯಾತ್ಮನ ಏವ ವಿವೇಕಾಧಿಗಮಾಯ ಉಷಸ್ತಪ್ರಶ್ನ ಆರಭ್ಯತೇ| ತಸ್ಯ ಚ ನಿರುಪಾಧಿಸ್ವರೂಪಸ್ಯ ಕ್ರಿಯಾಕಾರಕವಿನಿರ್ಮುಕ್ತಸ್ವಭಾವಸ್ಯ ಅಧಿಗಮಾತ್ ಯಥೋಕ್ತಾತ್ ಬನ್ಧನಾತ್ ವಿಮುಚ್ಯತೇ ಸಪ್ರಯೋಜಕಾತ್ | ಆಖ್ಯಾಯಿಕಾಸಂಬನ್ಧಸ್ತು ಪ್ರಸಿದ್ಧಃ ||

(ಭಾಷ್ಯಾರ್ಥ)

'ಅಥ ಹೈನಮುಷಸ್ತಶ್ಚಾಕ್ರಾಯಣಃ ಪಪ್ರಚ್ಛ'(ಎಂಬ ಬ್ರಾಹ್ಮಣದ ಸಂಬಂಧವೇನೆಂದರೆ) ಪುಣ್ಯಪಾಪ (ಕರ್ಮಗಳಿಂದ) ಪ್ರಯುಕ್ತವಾದ ಗ್ರಹಾತಿಗ್ರಹಗಳಿಂದ ಹಿಡಿಯಲ್ಪಟ್ಟು ಮತ್ತೆ ಮತ್ತೆ ಗ್ರಹಾತಿಗ್ರಹಗಳನ್ನು ಬಿಡುತ್ತಲೂ ತೆಗೆದುಕೊಳ್ಳುತ್ತಲೂ ಸಂಸಾರದಲ್ಲಿ ತೊಳಲುತ್ತಾನೆ ಎಂದು ಹೇಳಿದ್ದಾಯಿತು[1] ಮತ್ತು ಪುಣ್ಯದ ತೀರ ಹೆಚ್ಚಿನ (ಫಲವು) ವ್ಯಾಕೃತವಿಷಯವಾದ ಸಮಷ್ಟಿವ್ಯಷ್ಟಿರೂಪವಾದ ದ್ವೈತೈಕತ್ವಾತ್ಮಪ್ರಾಪ್ತಿಯೇ ಎಂದು ಹೇಳಿದ್ದಾಯಿತು.[2] ಆದರೆ ಗ್ರಹಾತಿಗ್ರಹಗಳ ಪಟ್ಟಿಗೆ ಸಿಕ್ಕಿರುವವನೆಂಬವನು ಇದಾನೆಯೊ, ಇಲ್ಲವೊ? ಇರುವದಾದರೆ ಅವನ ಸ್ವರೂಪವೇನು?- ಎಂದು ಆತ್ಮನನ್ನೇ ವಿಂಗಡಿಸಿ ಅರಿತುಕೊಳ್ಳುವದಕ್ಕಾಗಿ ಉಷಸ್ತಪ್ರಶ್ನೆಯನ್ನು ಆರಂಭಿಸಿರುತ್ತದೆ. ಆ (ಆತ್ಮನ) ಕ್ರಿಯಾಕಾರಕಗಳಿಲ್ಲದ ಸ್ವಭಾವವುಳ್ಳ ನಿರುಪಾಧಿಕಸ್ವರೂಪವನ್ನು ಅರಿತುಕೊಳ್ಳುವದರಿಂದ ಹಿಂದೆ ಹೇಳಿದ ಬಂಧನದಿಂದ

---

1. ಆರ್ತಭಾಗಪ್ರಶ್ನೆಯಲ್ಲಿ.
2. ಭುಜ್ಯುಪ್ರಶ್ನೆಯಲ್ಲಿ.

(ಅದರ) ಪ್ರಯೋಜಕ(ವಾದ ಕರ್ಮ)ದೊಡನೆ–ವಿಮುಕ್ತನಾಗುತ್ತಾನೆ. ಕಥೆಯ ಸಂಬಂಧವೇನೋ ಪ್ರಸಿದ್ಧವೇ ಆಗಿದೆ.[1]

## ಬ್ರಹ್ಮಾತ್ಮಸ್ವರೂಪದ ಪ್ರಶ್ನೆ

(ಉಪನಿಷತ್ತು)

**ಅಥ ಹೈನಮುಷಸ್ತಶ್ಚಾಕ್ರಾಯಣಃ ಪಪ್ರಚ್ಛ ಯಾಜ್ಞವಲ್ಕ್ಯೇತಿ ಹೋವಾಚ ಯತ್ಸಾಕ್ಷಾದಪರೋಕ್ಷಾದ್ ಬ್ರಹ್ಮ ಯ ಆತ್ಮಾ ಸರ್ವಾನ್ತರಸ್ತಂ ಮೇ ವ್ಯಾಚಕ್ಷ್ವೇತ್ಯೇಷ ತ ಆತ್ಮಾ ಸರ್ವಾನ್ತರಃ ಕತಮೋ ಯಾಜ್ಞವಲ್ಕ್ಯ ಸರ್ವಾನ್ತರೋ ಯಃ ಪ್ರಾಣೇನ ಪ್ರಾಣಿತಿ ಸ ತ ಆತ್ಮಾ ಸರ್ವಾನ್ತರೋ ಯೋಽಪಾನೇನಾಪಾನೀತಿ ಸ ತ ಆತ್ಮಾ ಸರ್ವಾನ್ತರೋ ಯೋ ವ್ಯಾನೇನ ವ್ಯಾನೀತಿ ಸ ತ ಆತ್ಮಾ ಸರ್ವಾನ್ತರೋ ಯ ಉದಾನೇನೋದಾನಿತಿ ಸ ತ ಆತ್ಮಾ ಸರ್ವಾನ್ತರ ಏಷ ತ ಆತ್ಮಾ ಸರ್ವಾನ್ತರಃ ॥ ೧ ॥**

೧. ಆಗ ಇವನನ್ನು ಉಷಸ್ತಚಾಕ್ರಾಯಣನು ಕೇಳಿದನು. 'ಯಾಜ್ಞವಲ್ಕ್ಯನೆ' ಎಂದನು. 'ಯಾವದು ಸಾಕ್ಷಾತ್ತಾಗಿ ಅಪರೋಕ್ಷವಾಗಿರುವ ಬ್ರಹ್ಮವೋ, ಯಾವನು ಸರ್ವಾಂತರನಾದ ಆತ್ಮನೋ, ಅವನನ್ನು ನನಗೆ ತೋರಿಸಿ ಹೇಳು? ಇವನೇ ನಿನ್ನ ಸರ್ವಾಂತರನಾದ ಆತ್ಮನು. 'ಯಾಜ್ಞವಲ್ಕ್ಯನೆ, (ಆ) ಸರ್ವಾಂತರನು ಯಾರು ?' ಯಾವನು ಪ್ರಾಣದಿಂದ ಪ್ರಾಣನವನ್ನು ಮಾಡುತ್ತಿರುವನೋ ಅವನೇ ನಿನ್ನ ಸರ್ವಾಂತರನಾದ ಆತ್ಮನು ; ಯಾವನು ಅಪಾನದಿಂದ ಅಪಾನನವನ್ನು ಮಾಡುತ್ತಿರುವನೋ ಅವನೇ ನಿನ್ನ ಸರ್ವಾಂತರನಾದ ಆತ್ಮನು ; ಯಾವನು ವ್ಯಾನದಿಂದ ವ್ಯಾನನವನ್ನು ಮಾಡುತ್ತಿರುವನೋ ಅವನೇ ನಿನ್ನ ಸರ್ವಾಂತರನಾದ ಆತ್ಮನು; ಯಾವನು ಉದಾನದಿಂದ ಉದಾನನವನ್ನು ಮಾಡುತ್ತಿರುವನೋ ಅವನೇ ನಿನ್ನ ಸರ್ವಾಂತರನಾದ ಆತ್ಮನು, ಇವನೇ ನಿನ್ನ ಸರ್ವಾಂತರನಾದ ಆತ್ಮನು.

---

1. ವಿದ್ಯಾಸ್ತುತಿ, ತದ್ವಿದ್ಯರೊಡನೆ ಸಂವಾದದಿಂದ ಜ್ಞಾನವೃದ್ಧಿ – ಇದೇ ಕಥೆಯಿಂದ ತಿಳಿಯಬೇಕಾದದ್ದು.

# ಪ್ರಾಣನಾದಿವ್ಯಾಪಾರಗಳನ್ನು ಮಾಡುವವನೇ ಆತ್ಮನು

(ಭಾಷ್ಯ)

೪೫. ಅಥ ಹೈನಂ ಪ್ರಕೃತಂ ಯಾಜ್ಞವಲ್ಕ್ಯಮ್ ಉಷಸ್ತೋ ನಾಮತಃ ಚಕ್ರಸ್ಯಾಪತ್ಯಂ ಚಾಕ್ರಾಯಣಃ ಪಪ್ರಚ್ಛ। ಯದ್ ಬ್ರಹ್ಮ ಸಾಕ್ಷಾತ್ ಅವ್ಯವಹಿತಂ ಕೇನಚಿತ್ ದ್ರಷ್ಟುಃ ಅಪರೋಕ್ಷಾತ್ ಅಗೌಣಮ್ ನ ಶ್ರೋತ್ರಬ್ರಹ್ಮಾದಿವತ್। ಕಿಂ ತತ್ ? ಯ ಆತ್ಮಾ। ಆತ್ಮಶಬ್ದೇನ ಪ್ರತ್ಯಗಾತ್ಮಾ ಉಚ್ಯತೇ। ತತ್ರ ಆತ್ಮ ಶಬ್ದಸ್ಯ ಪ್ರಸಿದ್ಧತ್ವಾತ್। ಸರ್ವಸ್ಯಾಭ್ಯನ್ತರಃ ಸರ್ವಾನ್ತರಃ। ಯದ್ಯಃಶಬ್ದಾಭ್ಯಾಂ ಪ್ರಸಿದ್ಧ ಆತ್ಮಾ ಬ್ರಹ್ಮೇತಿ। ತಮಾತ್ಮಾನಂ ಮೇ ಮಹ್ಯಂ ವ್ಯಾಚಕ್ಷ್ವ ಇತಿ। ವಿಸ್ಪಷ್ಟಂ ಶೃಙ್ಗೇ ಗೃಹೀತ್ವಾ ಯಥಾ ಗಾಂ ದರ್ಶಯತಿ ತಥಾ ಆಚಕ್ಷ್ವ ಸೋಽಯಮಿತ್ಯೇವಂ ಕಥಯಸ್ವ ಇತ್ಯರ್ಥಃ। ಏವಮುಕ್ತಃ ಪ್ರತ್ಯಾಹ ಯಾಜ್ಞ ವಲ್ಕ್ಯಃ। ಏಷ ತೇ ತವ ಆತ್ಮಾ ಸರ್ವಾನ್ತರಃ ಸರ್ವಸ್ಯಾಭ್ಯನ್ತರಃ। ಸರ್ವವಿಶೇ ಷಣೋಪಲಕ್ಷಣಾರ್ಥಂ ಸರ್ವಾನ್ತರಗ್ರಹಣಮ್। ಯತ್ ಸಾಕ್ಷಾದವ್ಯವಹಿತಮ್ ಅಪರೋಕ್ಷಾತ್ ಅಗೌಣಂ ಬ್ರಹ್ಮ ಬೃಹತ್ತಮಮ್ ಆತ್ಮಾ ಸರ್ವಸ್ಯ ಸರ್ವಸ್ಯಾ ಭ್ಯನ್ತರಃ ಏತೈರ್ಗುಣೈಃ ಸಮಸ್ತೈರುಕ್ತಃ ಏಷಃ। ಕೋಽಸೌ ? ತವ ಆತ್ಮಾ ಯೋಽಯಂ ಕಾರ್ಯಕರಣಸಂಘಾತಃ ತವ ಸ ಯೇನಾತ್ಮನಾ ಆತ್ಮವಾನ್ ಸ ಏಷ ತವ ಆತ್ಮಾ। ತವ ಕಾರ್ಯಕರಣಸಂಘಾತಸ್ಯ ಇತ್ಯರ್ಥಃ। ತತ್ರ ಪಿಣ್ಡಃ ತಸ್ಯಾ ಭ್ಯನ್ತರೇ ಲಿಙ್ಗಾತ್ಮಾ ಕರಣಸಂಘಾತಃ, ತೃತೀಯೋ ಯಶ್ಚ ಸಂದಿಹ್ಯಮಾನಃ। ತೇಷು ಕತಮೋ ಮಮ ಆತ್ಮಾ ಸರ್ವಾನ್ತರಸ್ತ್ವಯಾ ವಿವಕ್ಷಿತಃ ? ಇತ್ಯುಕ್ತ ಇತರ ಆಹ। ಯಃ ಪ್ರಾಣೇನ ಮುಖನಾಸಿಕಾಸಂಚಾರಿಣಾ ಪ್ರಾಣಿತಿ ಪ್ರಾಣ ಚೇಷ್ಟಾಂ ಕರೋತಿ। "ಯೇನಃ ಪ್ರಾಣಃ ಪ್ರಣೀಯತೇ" (ಕೇ. ೧-೮)ಇತ್ಯರ್ಥಃ। ಸ ತೇ ತವ ಕಾರ್ಯಕರಣಸಂಘಾತಸ್ಯ ಆತ್ಮಾ ವಿಜ್ಞಾನಮಯಃ ಸಮಾನಮನ್ಯತ್। 'ಯೋಽಪಾನೇನಾಪಾನೀತಿ, ಯೋ ವ್ಯಾನೇನ ವ್ಯಾನೀತಿ' ಇತಿ ಛಾನ್ದಸಂ ದೈರ್ಘ್ಯಮ್। ಸರ್ವಾಃ ಕಾರ್ಯಕರಣಸಂಘಾತಗತಾಃ ಪ್ರಾಣನಾದಿಚೇಷ್ಟಾಃ ದಾರುಯನ್ತ್ರಸ್ಯೇವ ಯೇನ ಕ್ರಿಯನ್ತೇ। ನ ಹಿ ಚೇತನಾವದನಧಿಷ್ಠಿತಸ್ಯ ದಾರು ಯನ್ತ್ರಸ್ಯೇವ ಪ್ರಾಣನಾದಿಚೇಷ್ಟಾಃ ವಿದ್ಯನ್ತೇ। ತಸ್ಮಾತ್ ವಿಜ್ಞಾನಮಯೇನ ಅಧಿಷ್ಠಿತಂ ವಿಲಕ್ಷಣೇನ ದಾರುಯನ್ತ್ರವತ್ ಪ್ರಾಣನಾದಿಚೇಷ್ಟಾಂ[1] ಪ್ರತಿಪದ್ಯತೇ। ತಸ್ಮಾತ್ ಸೋಽಸ್ತಿ ಕಾರ್ಯಕರಣಸಂಘಾತವಿಲಕ್ಷಣೋ ಯಶ್ಚೇಷ್ಟಯತಿ ॥

(ಭಾಷ್ಯಾರ್ಥ)

ಆ ಬಳಿಕ ಈ ಪ್ರಕೃತನಾದ ಯಾಜ್ಞವಲ್ಕ್ಯನನ್ನು ಉಷಸ್ತನೆಂಬ ಹೆಸರಿನ ಚಾಕ್ರಾಯಣನು ಚಕ್ರನ ಮಗನು (ಹೀಗೆಂದು) ಕೇಳಿದನು. ಯಾವ ಬ್ರಹ್ಮವು

---

1. ಏವ ಎಂದು ಪಾಠಾಂತರ.

ಸಾಕ್ಷಾತ್ತಾಗಿರುವದೋ, ದ್ರಷ್ಟೃವಿಗೆ ಏತರಿಂದಲೂ ವ್ಯವಹಿತವಾಗದೆ ಇರುವದೋ; ಅಪರೋಕ್ಷವಾಗಿರುವದೋ ಎಂದರೆ ಗೌಣವಲ್ಲದೆ ಇರುವದೋ, ಶ್ರೋತ್ರಬ್ರಹ್ಮಾದಿಗಳಂತೆ (ಗೌಣ)ವಲ್ಲವೋ; ಅದು ಯಾವದು? ಎಂದರೆ ಯಾವನು ಆತ್ಮನೋ-[1]ಆತ್ಮಶಬ್ದದಿಂದ ಪ್ರತ್ಯಗಾತ್ಮನನ್ನು ಹೇಳಿರುತ್ತದೆ. ಏಕೆಂದರೆ ಆ (ಪ್ರತ್ಯಗಾತ್ಮನಲ್ಲಿ) ಆತ್ಮಶಬ್ದವು ಪ್ರಸಿದ್ಧವಾಗಿರುತ್ತದೆ. ಎಲ್ಲಕ್ಕೂ ಒಳಗಿರುವ ಸರ್ವಾಂತರನೋ. ಇಲ್ಲಿ ಯತ್ (ಯಾವದು) ಯಃ (ಯಾವನು) ಎಂಬ ಶಬ್ದಗಳಿಂದ ಆತ್ಮನೇ ಬ್ರಹ್ಮನೆಂದು ಪ್ರಸಿದ್ಧನಾಗಿರುವನಲ್ಲ-, ಆ ಆತ್ಮನನ್ನು (ಮೇ=ಮಹ್ಯಮ್) ನನಗೆ (ವ್ಯಾಚಕ್ಷ್ವ) ವಿವರಿಸಿ ಹೇಳು, ವಿಸ್ಪಷ್ಟವಾಗಿ ಕೋಡನ್ನು ಹಿಡಿದು ಎತ್ತನ್ನು ತೋರಿಸುತ್ತಾರಲ್ಲ ಹಾಗೆ ಹೇಳು, ಅವನು ಇವನೇ ಎಂದು ಸ್ಪಷ್ಟವಾಗಿ ಹೇಳು- ಎಂದರ್ಥ

ಹೀಗೆನ್ನಲು ಯಾಜ್ಞವಲ್ಕ್ಯನು ಇಂತೆಂದನು. ಇವನೇ (ತೇ=ತವ) ನಿನ್ನ ಸರ್ವಾಂತರನಾದ ಎಲ್ಲಕ್ಕೂ ಒಳಗಿರುವವನಾದ ಆತ್ಮನು. ಇಲ್ಲಿ ಸರ್ವಾಂತರ ಎಂಬ (ವಿಶೇಷಣವನ್ನು) ತೆಗೆದುಕೊಂಡಿರುವದು (ಮಿಕ್ಕ) ಎಲ್ಲಾ ವಿಶೇಷಣಗಳಿಗೂ ಉಪಲಕ್ಷಣವಾಗಿ. ಯಾವದು ಸಾಕ್ಷಾತ್ತಾಗಿ ಅವ್ಯವಹಿತವಾಗಿ ಅಪರೋಕ್ಷವಾಗಿ ಅಗೌಣವಾಗಿರುವ ಬ್ರಹ್ಮವೋ ಎಂದರೆ ಅತ್ಯಂತ ದೊಡ್ಡದಾಗಿರುವದೋ, ಪ್ರತಿಯೊಬ್ಬನಿಗೂ ಆತ್ಮನೋ, ಎಲ್ಲಕ್ಕೂ ಒಳಗಿರುವವನೋ- ಈ ಎಲ್ಲಾ ಗುಣಗಳಿಂದ ಯುಕ್ತನಾಗಿರುವವನು ಇವನೇ 'ಅವನು ಯಾರು?' ನಿನ್ನ ಆತ್ಮನು ಈ ನಿನ್ನ ಕಾರ್ಯಕರಣಸಂಘಾತವಿರುವದಲ್ಲ, ಅದು ಯಾವ ಆತ್ಮನಿಂದ ಆತ್ಮವಂತವಾಗಿರುವದೋ ಇವನೇ ನಿನ್ನ, ಕಾರ್ಯಕರಣಸಂಘಾತದ, ಆತ್ಮನು ಎಂದರ್ಥ. ಇಲ್ಲಿ ಶರೀರ(ವೊಂದು), ಅದರೊಳಗೆ (ಇರುವ) ಲಿಂಗಾತ್ಮನೆಂಬ ಕರಣಸಂಘಾತ(ವೊಂದು), ಸಂವೇಪಕ್ಕೆ(ವಿಷಯ)ವಾಗಿರುವ ಮೂರನೆಯವ(ನೊಬ್ಬ) ಈ (ಮೂರರೊಳಗೆ) ಯಾಜ್ಞವಲ್ಕ್ಯನೆ, ಯಾವನು ನನ್ನ ಸರ್ವಾಂತರ ಆತ್ಮನೆಂದು ನಿನ್ನ ವವಿಕ್ಷೆ? ಎನ್ನಲು (ಆ) ಇನ್ನೊಬ್ಬನಾದ ಯಾಜ್ಞವಲ್ಕ್ಯನು ಹೇಳುತ್ತಾನೆ ಯಾವನು ಮುಖನಾಸಿಕೆಗಳಲ್ಲಿ ಸಂಚರಿಸುತ್ತಿರುವ ಪ್ರಾಣದಿಂದ ಪ್ರಾಣನಮಾಡುತ್ತಿರುವನೋ), ಪ್ರಾಣ(ವಾಯುವಿನ) ವ್ಯಾಪಾರವನ್ನು ಮಾಡುತ್ತಿರುವನೋ, 'ಯಾವನಿಂದ ಪ್ರಾಣವು ವ್ಯಾಪಾರಮಾಡಿಸಲ್ಪಡುತ್ತಿರುವನೋ' (ಕೇ. ೧-೯) ಎಂದರ್ಥ. ಅವನೇ (ತೇ=ತವ) ನಿನ್ನ ಕಾರ್ಯಕರಣಸಂಘಾತದ

1. ಬ್ರಹ್ಮವನ್ನು ಹೇಳು, ಆತ್ಮನನ್ನು ಹೇಳು-ಎಂದು ಇಬ್ಬರನ್ನು ಕುರಿತು ಕೇಳಿಲ್ಲ, ಬ್ರಹ್ಮ, ಆತ್ಮ ಎಂಬ ಎರಡೂ ಶಬ್ದಗಳಿಂದ ಒಂದೇ ತತ್ತ್ವವನ್ನು ಹೇಳಿವೆ. ಸರ್ವಾಂತರಾತ್ಮನಾಗಿರುವ ಬ್ರಹ್ಮವು ಯಾವದು? ಎಂದೇ ಪ್ರಶ್ನೆ.

ಆತ್ಮನಾದ ವಿಜ್ಞಾನಮಯನು.[1] ಮಿಕ್ಕದ್ದೆಲ್ಲವೂ (ಇದಕ್ಕೆ) ಸಮಾನವಾಗಿ (ವ್ಯಾಖ್ಯಾನಮಾಡಿಕೊಳ್ಳತಕ್ಕದ್ದು). 'ಯೋಽಪಾನೇನ ಅಪಾನೀತಿ, ಯೋ ವ್ಯಾನೇನ ವ್ಯಾನೀತಿ' (ಯಾವನು ಅಪಾನದಿಂದ ಅಪಾನಕ್ರಿಯೆಯನ್ನು ಮಾಡುತ್ತಿರುವನೋ)ವ್ಯಾನದಿಂದ ವ್ಯಾನಕ್ರಿಯೆಯನ್ನು ಮಾಡುತ್ತಿರುವನೋ ಎಂಬಲ್ಲಿರುವ ದೀರ್ಘವು ವೈದಿಕಪ್ರಯೋಗವು ಕಾರ್ಯಕರಣಸಂಘಾತದಲ್ಲಿರುವ ಪ್ರಾಣನಾದಿ ವ್ಯಾಪಾರಗಳೆಲ್ಲ ದಾರುಯಂತ್ರದ (ವ್ಯಾಪಾರಗಳಂತೆ) ಅವನಿಂದಲೇ ಮಾಡಲ್ಪಡುತ್ತಿರುವವು. ದಾರುಯಂತ್ರದಂತೆ ಚೇತನವುಳ್ಳದ್ದರಿಂದ ಅಧಿಷ್ಠಿತವಾಗದೆ ಇರುವ (ವಸ್ತುವಿಗೆ) ಪ್ರಾಣನವೇ ಮುಂತಾದ ವ್ಯಾಪಾರಗಳು ಇರುವದಿಲ್ಲವಷ್ಟೆ, ಆದ್ದರಿಂದ (ತನಗಿಂತ) ವಿಲಕ್ಷಣನಾದ ವಿಜ್ಞಾನಮಯನಿಂದ ಅಧಿಷ್ಠಿತವಾಗಿಯೇ (ಅದು) ದಾರುಯಂತ್ರದಂತೆ ಪ್ರಾಣನಾದಿವ್ಯಾಪಾರವನ್ನು ಪಡೆದಿರುತ್ತದೆ. ಆದ್ದರಿಂದ ಯಾವನು (ಕಾರ್ಯಕರಣಸಂಘಾತವನ್ನು) ಕೆಲಸಮಾಡಿಸುತ್ತಿರುವನೋ ಆ ಕಾರ್ಯಕರಣವಿಲಕ್ಷಣನಾದ (ಆತ್ಮನು) ಇರುತ್ತಾನೆ (ಎಂದಾಯಿತು).

## ಆತ್ಮನು ದೃಷ್ಟಿಗೂ ದ್ರಷ್ಟೃ

(ಉಪನಿಷತ್ತು)

**ಸ ಹೋವಾಚೋಷಸ್ತಶ್ಚಾಕ್ರಾಯಣೋ ಯಥಾ ವಿಬ್ರೂಯಾದಸೌ ಗೌರಸಾವಶ್ವ ಇತ್ಯೇವಮೇವೈತದ್ವ್ಯಪದಿಷ್ಟಂ ಭವತಿ ಯದೇವ ಸಾಕ್ಷಾದಪರೋಕ್ಷಾದ್ಬ್ರಹ್ಮ ಯ ಆತ್ಮಾ ಸರ್ವಾನ್ತರಸ್ತಂ ಮೇ ವ್ಯಾಚಕ್ಷ್ವೇತ್ಯೇಷ ತ ಆತ್ಮಾ ಸರ್ವಾನ್ತರಃ ಕತಮೋ ಯಾಜ್ಞವಲ್ಕ್ಯ ಸರ್ವಾನ್ತರಃ। ನ ದೃಷ್ಟೇರ್ದ್ರಷ್ಟಾರಂ ಪಶ್ಯೇರ್ನ ಶ್ರುತೇಃ ಶ್ರೋತಾರಗ್ಂ ಶೃಣುಯಾ ನ ಮತೇರ್ಮನ್ತಾರಂ ಮನ್ವೀಥಾ ನ ವಿಜ್ಞಾತೇರ್ವಿಜ್ಞಾತಾರಂ ವಿಜಾನೀಯಾಃ। ಏಷ ತ ಆತ್ಮಾ ಸರ್ವಾನ್ತರೋಽತೋಽನ್ಯದಾರ್ತಂ ತತೋ ಹೋಷಸ್ತಶ್ಚಾಕ್ರಾಯಣ ಉಪರರಾಮ ॥ ೨**

೨. ಆ ಉಷಸ್ತಚಾಕ್ರಾಯಣನಿಂತೆಂದನು: 'ಇದು ಎತ್ತು, ಇದು ಕುದುರೆ- ಎಂದು ಹೇಗೆ ಹೇಳುತ್ತಾನೋ ಹಾಗೆಯೇ ಇದನ್ನೂ ಹೇಳಿದಂತಾಯಿತು. ಯಾವದು ಸಾಕ್ಷಾತ್ತಾಗಿ ಅಪರೋಕ್ಷವಾಗಿ ಬ್ರಹ್ಮವಾಗಿರುವದೋ, ಯಾವನು ಸರ್ವಾಂತರನಾದ ಆತ್ಮನೋ, ಅವನನ್ನೇ ನನಗೆ ವಿಸ್ತರಿಸಿ ಹೇಳು.' ಇವನೇ ನಿನ್ನ ಸರ್ವಾಂತರ ಆತ್ಮನು. 'ಯಾಜ್ಞವಲ್ಕ್ಯನೆ,

---

1. ಚೈತನ್ಯಸ್ವರೂಪನು.

(ಆ) ಸರ್ವಾಂತರನು ಯಾರು ?' ದೃಷ್ಟಿಯ ದ್ರಷ್ಟೃವನ್ನು ಕಾಣಲಾರೆ, ಶ್ರುತಿಯ ಶ್ರೋತೃವನ್ನು ಕೇಳಲಾರೆ, ಮತಿಯ ಮಂತೃವನ್ನು ತಿಳಿಯ ಲಾರೆ, ವಿಜ್ಞಾತಿಯ ವಿಜ್ಞಾತೃವನ್ನು ಅರಿಯಲಾರೆ. ಇವನೇ ನಿನ್ನ ಸರ್ವಾಂತರ ಆತ್ಮನು. ಇದಕ್ಕಿಂತ ಬೇರೆಯಾದದ್ದು ಆರ್ತವು. ಆಗ ಉಷಸ್ತಚಾಕ್ರಾಯಣನು ಸುಮ್ಮನಾದನು.

(ಭಾಷ್ಯಾರ್ಥ)

೪೬. ಸ ಹೋವಾಚೋಷಸ್ತಶ್ಚಾಕ್ರಾಯಣಃ। ಯಥಾ ಕಶ್ಚಿತ್ ಅನ್ಯಥಾ ಪ್ರತಿಜ್ಞಾಯ ಪೂರ್ವಂ ಪುನರ್ವಿಪ್ರತಿಪನ್ನೋ ಬ್ರೂಯಾತ್ ಅನ್ಯಥಾ ಅಸೌ ಗೌಃ, ಅಸೌ ಅಶ್ವಃ ಯಶ್ಚಲತಿ ಧಾವತೀತಿ ವಾ, ಪೂರ್ವಂ ಪ್ರತ್ಯಕ್ಷಂ ದರ್ಶಯಾಮಿ ಇತಿ ಪ್ರತಿಜ್ಞಾಯ ಪಶ್ಚಾತ್ ಚಲನಾದಿಲಿಙ್ಗೈಃ ವ್ಯಪದಿಶತಿ, ಏವಮೇವ ಏತದ್ಬ್ರಹ್ಮ ಪ್ರಾಣನಾದಿಲಿಙ್ಗೈರ್ವ್ಯಪದಿಷ್ಟಂ ಭವತಿ ತ್ವಯಾ। ಕಿಂ ಬಹುನಾ? ತ್ಯಕ್ತ್ವಾ ಗೋತೃಷ್ಣಾನಿಮಿತ್ತಂ ವ್ಯಾಜಂ ಯದೇವ ಸಾಕ್ಷಾದಪರೋಕ್ಷಾದ್ ಬ್ರಹ್ಮ ಯ ಆತ್ಮಾ ಸರ್ವಾನ್ತರಃ ತಂ ಮೇ ವ್ಯಾಚಕ್ಷ್ವೇತಿ। ಇತರ ಆಹ– ಯಥಾ ಮಯಾ ಪ್ರಥಮಂ ಪ್ರತಿಜ್ಞಾತಃ ತವಾತ್ಮಾ ಏವಂಲಕ್ಷಣ ಇತಿ ತಾಂ ಪ್ರತಿಜ್ಞಾಮನುವರ್ತ ಏವ, ತತ್ ತಥೈವ ಯಥೋಕ್ತಂ ಮಯಾ। ಯತ್ಪುನರುಕ್ತಂ ತಮಾತ್ಮಾನಂ ಘಟಾದಿವತ್ ವಿಷಯೀಕುರು ಇತಿ, ತದಶಕ್ಯತ್ವಾತ್ ನ ಕ್ರಿಯತೇ। ಕಸ್ಮಾತ್ ಪುನಸ್ತದಶಕ್ಯಮಿತಿ ? ಆಹ। ವಸ್ತುಸ್ವಾಭಾವ್ಯಾತ್। ಕಿಂ ಪುನಸ್ತದ್ವಸ್ತುಸ್ವಾಭಾವ್ಯಮ್ ? ದೃಷ್ಟ್ಯಾದಿದ್ರಷ್ಟೃತ್ವಮ್। ದೃಷ್ಟೇರ್ದ್ರಷ್ಟಾ ಹಿ ಆತ್ಮಾ। ದೃಷ್ಟಿರಿತಿ ದ್ವಿವಿಧಾ ಭವತಿ, ಲೌಕಿಕೀ ಪಾರಮಾರ್ಥಿಕೀ ಚ। ತತ್ರ ಲೌಕಿಕೀ ಚಕ್ಷುಃ ಸಂಯುಕ್ತಾ ಅನ್ತಃಕರಣವೃತ್ತಿಃ। ಸಾ ಕ್ರಿಯತ ಇತಿ ಜಾಯತೇ ವಿನಶ್ಯತಿ ಚ। ಯಾ ತು ಆತ್ಮನೋ ದೃಷ್ಟಿಃ ಅಗ್ನ್ಯುಷ್ಣಪ್ರಕಾಶಾದಿವತ್ ಸಾ ಚ ದ್ರಷ್ಟುಃ ಸ್ವರೂಪತ್ವಾತ್ ನ ಜಾಯತೇ ನ ವಿನಶ್ಯತಿ ಚ ಸಾ ಕ್ರಿಯಮಾಣಯಾ ಉಪಾಧಿಭೂತಯಾ ಸಂಸೃಷ್ಟೇವ ಇತಿ ವ್ಯಪದಿಶ್ಯತೇ ದೃಷ್ಟೇತಿ। ಭೇದವಚ್ಚ ದ್ರಷ್ಟಾ ದೃಷ್ಟಿಃ ಇತಿ ಚ। ಯಾಸೌ ಲೌಕಿಕೀ ದೃಷ್ಟಿಶ್ಚಕ್ಷುರ್ದ್ವಾರಾ ರೂಪೋಪ ರಕ್ತಾ ಜಾಯಮಾನೈವ ನಿತ್ಯಯಾ ಆತ್ಮದೃಷ್ಟ್ಯಾ ಸಂಸೃಷ್ಟೇವ ತತ್ಪ್ರತಿಚ್ಛಾಯ ತಯಾ ವ್ಯಾಪ್ತೈವ ಜಾಯತೇ ತಥಾ ವಿನಶ್ಯತಿ ಚ। ತೇನ ಉಪಚರ್ಯತೇ ದ್ರಷ್ಟಾ ಸದಾ ಪಶ್ಯನ್ನಪಿ ಪಶ್ಯತಿ ನ ಪಶ್ಯತಿ ಚ ಇತಿ। ನ ತು ಪುನರ್ದ್ರಷ್ಟು ರ್ದೃಷ್ಟೇಃ ಕದಾಚಿದಪಿ ಅನ್ಯಥಾತ್ವಮ್। ತಥಾ ಚ ವಕ್ಷ್ಯತಿ ಷಷ್ಠೇ ''ಧ್ಯಾಯ ತೀವ ಲೇಲಾಯತೀವ'' (೪-೩-೭) ''ನ ಹಿ ದ್ರಷ್ಟುರ್ದೃಷ್ಟೇರ್ವಿಪರಿಲೋಪೋ ವಿದ್ಯತೇ'' (೪-೩-೨೩) ಇತಿ ಚ। ತಮಿಮಮ್ ಅರ್ಥಮ್ ಆಹ– ಲೌಕಿಕ್ಯಾ

ದೃಷ್ಟೇಃ ಕರ್ಮಭೂತಾಯಾಃ ದ್ರಷ್ಟಾರಂ ಸ್ವಕೀಯಯಾ ನಿತ್ಯಯಾ ದೃಷ್ಟ್ಯಾ ವ್ಯಾಪ್ತಾರಂ ನ ಪಶ್ಯೇಃ| ಯಾಸೌ ಲೌಕಿಕೀ ದೃಷ್ಟಿಃ ಕರ್ಮಭೂತಾ, ಸಾ ರೂಪೋಪರಕ್ತಾ ರೂಪಾಭಿವ್ಯಞ್ಜಿಕಾ ನಾತ್ಮಾನಂ ಸ್ವಾತ್ಮನೋ ವ್ಯಾಪ್ತಾರಂ ಪ್ರತ್ಯಞ್ಚಂ ವ್ಯಾಪ್ನೋತಿ| ತಸ್ಮಾತ್ ತಂ ಪ್ರತ್ಯಗಾತ್ಮಾನಂ ದೃಷ್ಟೇರ್ದ್ರಷ್ಟಾರಂ ನ ಪಶ್ಯೇಃ| ತಥಾ ಶ್ರುತೇಃ ಶ್ರೋತಾರಂ ನ ಶೃಣುಯಾಃ| ತಥಾ ಮತೇರ್ಮನೋವೃತ್ತೇಃ ಕೇವಲಾಯಾ ವ್ಯಾಪ್ತಾರಂ ನ ಮನ್ವೀಥಾಃ| ತಥಾ ವಿಜ್ಞಾತೇಃ ಕೇವಲಾಯಾ ಬುದ್ಧಿವೃತ್ತೇರ್ವ್ಯಾಪ್ತಾರಂ ನ ವಿಜಾನೀಯಾಃ| ಏಷ ವಸ್ತುನಃ ಸ್ವಭಾವಃ| ಅತೋ ನೈವ ದರ್ಶಯಿತುಂ ಶಕ್ಯತೇ ಗವಾದಿವತ್ ||

(ಭಾಷ್ಯಾರ್ಥ)

ಆ ಉಷಸ್ತಚಾಕ್ರಾಯಣನಿಂತೆಂದನು: ಹೇಗೆ ಯಾವನಾದರೊಬ್ಬನು ಒಂದು ಬಗೆಯಲ್ಲಿ ಮೊದಲು ಪ್ರತಿಜ್ಞೆಮಾಡಿ, ಆಮೇಲೆ ತಪ್ಪುತೀಳವಳಿಕೆಯಿಂದ ಬೇರೊಂದು ಬಗೆಯಲ್ಲಿ- ಯಾವದು ನಡೆಯುತ್ತಿರುವದೋ ಅದೇ ಎತ್ತು, ಅಥವಾ ಯಾವದು ಓಡುತ್ತಿದೆಯೋ ಅದೇ ಕುದುರೆ ಎಂದು-ಹೇಳುತ್ತಾನೋ, ಮೊದಲು ಪ್ರತ್ಯಕ್ಷವಾಗಿ ತೋರಿಸುತ್ತೇನೆ ಎಂದು ಪ್ರತಿಜ್ಞೆಮಾಡಿ ಆ ಬಳಿಕ ಚಲನವೇ ಮುಂತಾದ ಲಿಂಗಗಳಿಂದ (ಅದನ್ನು) ಹೇಳುತ್ತಾನೋ, ಹೀಗೆಯೇ ನೀನು ಈ ಬ್ರಹ್ಮವನ್ನು ಪ್ರಾಣನವೇ ಮುಂತಾದ ಲಿಂಗಗಳಿಂದ ಹೇಳಿದಂತಾಯಿತು ಹೆಚ್ಚೇಕೆ? ಗೋಗಳ ಬಯಕೆಯ ನಿಮಿತ್ತದಿಂದಾಗಿರುವ ಈ ಮೋಸವನ್ನು ಬಿಟ್ಟು, ಯಾವದು ಸಾಕ್ಷಾತ್ತಾಗಿ ಅಪರೋಕ್ಷವಾಗಿರುವ ಬ್ರಹ್ಮವೋ, ಯಾವನು ಸರ್ವಾಂತರನಾಗಿರುವ ಆತ್ಮನೋ, ಅವನನ್ನೇ ನನಗೆ ಹೇಳು!

(ಆ) ಇನ್ನೊಬ್ಬನಾದ (ಯಾಜ್ಞವಲ್ಕ್ಯ)ನಿಂತೆಂದನು ನಾನು ಹೇಗೆ ಮೊದಲು ನನ್ನ ಆತ್ಮನು ಇಂಥವನೆಂದು ಪ್ರತಿಜ್ಞೆಮಾಡಿದ್ದೆನೋ ಆ ಪ್ರತಿಜ್ಞೆಯನ್ನು ಅನುಸರಿಸಿಕೊಂಡೇ ಇರುತ್ತೇನೆ. ನಾನು ಹೇಗೆ ಹೇಳಿದೆನೋ ಅದು ಹಾಗೆಯೇ.[1] ಇನ್ನು ಆ ಆತ್ಮನನ್ನು ಘಟಾದಿಗಳಂತೆ ವಿಷಯೀಕರಿಸಿ (ತಿಳಿಸು) ಎಂದು ಹೇಳಿದೆಯಲ್ಲ, ಅದು ಅಶಕ್ಯವಾದ್ದರಿಂದ (ನಾನು) ಮಾಡುವದಿಲ್ಲ. ಅದು ಏತಕ್ಕೆ ಅಶಕ್ಯವು? ಎಂದರೆ ವಸ್ತುವಿನ ಸ್ವಭಾವವು (ಹಾಗಿರು)ವದರಿಂದ. ಆ ವಸುವಿನ ಸ್ವಭಾವವೆಂಬದು ಯಾವದು? ಎಂದರೆ ದೃಷ್ಟಿಯೇ ಮುಂತಾದವುಗಳಿಗೂ ದ್ರಷ್ಟೃವಾಗಿರುವದು. (ಇದರ ವಿವರ); ಆತ್ಮನು ದೃಷ್ಟಿಗೆ ದ್ರಷ್ಟೃ. ದೃಷ್ಟಿ ಎಂಬುದು ಲೌಕಿಕ(ದೃಷ್ಟಿ), ಪಾರಮಾರ್ಥಿಕ(ದೃಷ್ಟಿ) ಎಂದು ಎರಡು ವಿಧವಾಗಿರು

---

1. ಪ್ರಾಣಾದಿಗಳಿಂದ ಪ್ರಾಣನಾದಿವ್ಯಾಪಾರವನ್ನು ಮಾಡಿಸುತ್ತಿರುವವನೇ ಆತ್ಮನು.

ತ್ತದೆ.[1] ಅವುಗಳೊಳಗೆ ಚಕ್ಷುಃಸಂಯುಕ್ತವಾದ ಅಂತಃಕರಣವೃತ್ತಿಯೇ ಲೌಕಿಕ (ದೃಷ್ಟಿಯು). ಅದು ಮಾಡಲ್ಪಡತಕ್ಕದಾದ್ದರಿಂದ ಹುಟ್ಟುತ್ತದೆ, ನಾಶವೂ ಆಗುತ್ತದೆ. ಆದರೆ ಯಾವದು ಬೆಂಕಿಯ ಬಿಸಿ, ಬೆಳಕು- ಮುಂತಾದವುಗಳಂತೆ ಇರುವ (ಸ್ವಾಭಾವಿಕವಾದ) ಆತ್ಮನ ದೃಷ್ಟಿಯಿರುವದಲ್ಲ, ಅದು ದ್ರಷ್ಟೃವಾದ (ಆತ್ಮನ) ಸ್ವರೂಪವಾಗಿರುವದರಿಂದ ಹುಟ್ಟುವದೂ ಇಲ್ಲ, ನಾಶವಾಗುವದೂ ಇಲ್ಲ. ಅದು (ಹೊಸದಾಗಿ) ಉಂಟುಮಾಡಲ್ಪಡುತ್ತಿರುವ ಉಪಾಧಿಯಾದ (ದೃಷ್ಟಿಗೆ) ಸಂಬದ್ಧವಾಗಿರುವಂತೆ (ತೋರು)ವದರಿಂದ ದ್ರಷ್ಟೃವೆಂದೂ, ದ್ರಷ್ಟೃ, ದೃಷ್ಟಿ- ಎಂಬ ಭೇದವುಳ್ಳದ್ದೆಂದೂ ಹೇಳಲ್ಪಡುತ್ತದೆ.[2] ಚಕ್ಷುರಿಂದ್ರಿಯದ ದ್ವಾರದಿಂದ ರೂಪದಿಂದ ಸಂಬದ್ಧವಾಗಿರುವ ಈ ಲೌಕಿಕದೃಷ್ಟಿಯುಂಟಲ್ಲ, ಅದು ಹುಟ್ಟುವಾಗಲೇ ನಿತ್ಯವಾದ ಆತ್ಮದೃಷ್ಟಿಯಿಂದ ಸಂಬದ್ಧವಾಗಿರುವಂತೆ ಅದರ ಪಡಿನೆಳಲುಳ್ಳದ್ದಾಗಿ ಅದರಿಂದ ವ್ಯಾಪ್ತವಾಗಿಯೇ ಹುಟ್ಟುತ್ತದೆ, ಮತ್ತು ನಾಶವಾಗುತ್ತದೆ.[3] ಆದ್ದರಿಂದ ದ್ರಷ್ಟೃವು ಯಾವಾಗಲೂ ನೋಡುತ್ತಲೇ ಇದ್ದರೂ ನೋಡುತ್ತಾನೆ, ನೋಡುವದಿಲ್ಲ- ಎಂದು ಉಪಚಾರಕ್ಕಾಗಿ ಕರೆಯುತ್ತಾರೆ.[4] ಇಷ್ಟೇ ಹೊರತು ದ್ರಷ್ಟೃವಿನ ದೃಷ್ಟಿಯು ಎಂದಿಗೂ ಬೇರೆಯಾಗುವದಿಲ್ಲ.[5] ಆದ್ದರಿಂದಲೇ ಆರನೆಯ (ಅಧ್ಯಾಯದಲ್ಲಿ) "ಧ್ಯಾನಮಾಡುತ್ತಿರುವಂತೆಯೂ ಚಲಿಸುವಂತೆಯೂ ಇರುತ್ತದೆ"[6] (೪-೩-೭) ಎಂದೂ "ದ್ರಷ್ಟೃವಿನ ದೃಷ್ಟಿಗೆ ವಿಪರಿಲೋಪವಿಲ್ಲವೇ ಇಲ್ಲ" (೪-೩-೨೩) ಎಂದೂ ಹೇಳಲಾಗುವದು

---

1 ಐ ಭಾ. ೧-೩ (ಛಾ ಭಾ ೬೮)ರಲ್ಲಿಯೂ ಈ ದ್ವಿವಿಧದೃಷ್ಟ್ಯಾದಿಗಳ ಚರ್ಚೆಯಿದೆ. ೧-೪-೧೦ ರಲ್ಲಿ ಬ್ರಹ್ಮಶಬ್ದಾರ್ಥದ ವಿಚಾರದ ಚರ್ಚೆಯಲ್ಲಿಯೂ ಇದೆ.

2 ದ್ರಷ್ಟೃವಿಗಿಂತ ದೃಷ್ಟಿಯು ಭಿನ್ನವಲ್ಲದಿದ್ದರೂ ಸೂರ್ಯನ ಬೆಳಕು ಎಂಬಂತೆ ಭೇದವುಳ್ಳದ್ದರಂತೆ ವ್ಯಪದಿಷ್ಟವಾಗುವದಲ್ಲದೆ ಲೌಕಿಕದೃಷ್ಟಿಯು ಅದರ ಧರ್ಮವೆಂದು ಇಟ್ಟುಕೊಂಡೂ ಭೇದವ್ಯಪದೇಶವಾಗುವದು.

3 ಅಂತಃಕರಣದ ವೃತ್ತಿಯು ಹುಟ್ಟಿದಾಗಿನಿಂದ ನಾಶವಾಗುವವರೆಗೆ ಆತ್ಮಚೈತನ್ಯದ ಆಭಾಸವುಳ್ಳದ್ದಾಗಿ ಆತ್ಮಚೈತನ್ಯವ್ಯಾಪ್ತವಾಗಿಯೇ ಇರುತ್ತದೆ; ಹೀಗಲ್ಲದೆ ಅದಕ್ಕೆ ಸ್ವತಂತ್ರವಾದ ಇರವೂ ತೋರಿಕೆಯೂ ಇಲ್ಲ. ತೈ ಭಾ ೨-೧ (ಭಾ. ಭಾ. ೧೦೬ ನ್ನು ನೋಡಿ).

4. ವೃತ್ತಿಯಲ್ಲಿರುವ ಚಿದಾಭಾಸದಿಂದ ವಿಷಯವನ್ನು ನೋಡುತ್ತಾನೆಂದೂ ಆ ವೃತ್ತಿಯು ನಾಶವಾದರೆ ನೋಡುವದಿಲ್ಲವೆಂದೂ ಎನಿಸಿಕೊಳ್ಳುತ್ತಾನೆ. ಆದರೆ ತನ್ನ ಚೈತನ್ಯರೂಪದಿಂದ ಯಾವಾಗಲೂ ನೋಡುತ್ತಲೇ ಇರುತ್ತಾನೆ.

5. ಚೈತನ್ಯಸ್ವರೂಪವು ಚೈತನ್ಯಸ್ವರೂಪವಲ್ಲದೆ ಹೋಗುವದೇ ಇಲ್ಲ.

6. ಅಂತಃಕರಣವೃತ್ತಿಗಳಿಂದ ಆಯಾ ಜ್ಞಾನೇಂದ್ರಿಯಕರ್ಮೇಂದ್ರಿಯವ್ಯಾಪಾರಗಳನ್ನು ಮಾಡುವಂತೆ ಕಾಣುತ್ತಿರುತ್ತಾನೆ ಎಂದರ್ಥ.

ಆ ಈ ಅರ್ಥವನ್ನು ಹೇಳುತ್ತಿದಾನೆ. ವಿಷಯವಾಗಿರುವ ಲೌಕಿಕದೃಷ್ಟಿಯ ದ್ರಷ್ಟೃವನ್ನು, ಎಂದರೆ ತನ್ನದಾದ ನಿತ್ಯದೃಷ್ಟಿಯಿಂದ ವ್ಯಾಪಿಸಿಕೊಂಡಿರುವಾತನನ್ನು[1] ನೋಡಲಾರೆ. **ಈ ವಿಷಯವಾಗಿರುವ ಲೌಕಿಕದೃಷ್ಟಿಯಿದೆಯಲ್ಲ, ಅದು ರೂಪದಿಂದ ರಂಜಿತವಾಗಿ ರೂಪವನ್ನು ಅಭಿವ್ಯಕ್ತಿಗೊಳಿಸತಕ್ಕದ್ದು, ತನ್ನ ವ್ಯಾಪ್ತೃವಾದ ಪ್ರತ್ಯಗಾತ್ಮನನ್ನು ವ್ಯಾಪಿಸುವದಿಲ್ಲ; ಆದ್ದರಿಂದ ಆ ದೃಷ್ಟಿಯು ದ್ರಷ್ಟೃವಾದ ಪ್ರತ್ಯಗಾತ್ಮನನ್ನು ನೋಡಲಾರೆ.** ಹೀಗೆಯೇ ಶ್ರುತಿಯು ಶ್ರೋತೃವನ್ನು ಕೇಳಲಾರೆ; ಹೀಗೆಯೇ ಮತಿಯೆಂಬ ಕೇವಲಮನೋವೃತ್ತಿಯು ವ್ಯಾಪ್ತೃವನ್ನು ಮನನಮಾಡಲಾರೆ; ಹೀಗೆಯೇ ವಿಜ್ಞಾತಿಯೆಂಬ ಕೇವಲಮನೋವೃತ್ತಿಯು ವ್ಯಾಪ್ತೃವನ್ನು ಅರಿತುಕೊಳ್ಳಲಾರೆ. ಇದೇ (ಆತ್ಮ) ವಸ್ತುವಿನ ಸ್ವಭಾವವು[2]; ಆದ್ದರಿಂದ ಎತ್ತು ಮುಂತಾದವುಗಳಂತೆ (ಅದನ್ನು) ತೋರಿಸುವದಕ್ಕೆ ಆಗುವದೇ ಇಲ್ಲ.

## ದೃಷ್ಟೇರ್ದ್ರಷ್ಟಾರಂ ಎಂಬ ಶ್ರುತಿಗೆ ಭರ್ತೃಪ್ರಪಂಚರ ಅರ್ಥ

(ಭಾಷ್ಯ)

೪೭. ನ ದೃಷ್ಟೇರ್ದ್ರಷ್ಟಾರಮ್ ಇತ್ಯತ್ರ ಅಕ್ಷರಾಣಿ ಅನ್ಯಥಾ ವ್ಯಾಚಕ್ಷತೇ ಕೇಚಿತ್ | ನ ದೃಷ್ಟೇರ್ದ್ರಷ್ಟಾರಂ ದೃಷ್ಟೇಃ ಕರ್ತಾರಂ ದೃಷ್ಟಿಭೇದಮಕೃತ್ವಾ ದೃಷ್ಟಿಮಾತ್ರಸ್ಯ ಕರ್ತಾರಂ ನ ಪಶ್ಯೇಃ ಇತಿ | ದೃಷ್ಟೇರಿತಿ ಕರ್ಮಣಿ ಷಷ್ಠೀ | ಸಾ ದೃಷ್ಟಿಃ ಕ್ರಿಯಮಾಣಾ ಘಟವತ್ ಕರ್ಮ ಭವತಿ | ದ್ರಷ್ಟಾರಮ್ ಇತಿ ತೃಜಸ್ತೇನ ದ್ರಷ್ಟುರ್ದೃಷ್ಟಿಕರ್ತೃತ್ವಮ್ ಆಚಷ್ಟೇ | ತೇನಾಸೌ ದೃಷ್ಟೇರ್ದ್ರಷ್ಟಾ ದೃಷ್ಟೇಃ ಕರ್ತಾ ಇತಿ ವ್ಯಾಖ್ಯಾತೃಣಾಮ್ ಅಭಿಪ್ರಾಯಃ ||

(ಭಾಷ್ಯಾರ್ಥ)

'ನ ದೃಷ್ಟೇರ್ದ್ರಷ್ಟಾರಮ್' ಎಂಬಲ್ಲಿರುವ ಮಾತುಗಳನ್ನು ಕೆಲವರು ಮತ್ತೊಂದು ಬಗೆಯಲ್ಲಿ ವ್ಯಾಖ್ಯಾನಮಾಡಿರುತ್ತಾರೆ. ದೃಷ್ಟಿಯ ದ್ರಷ್ಟೃವನ್ನು ಎಂದರೆ ದೃಷ್ಟಿಯ ಕರ್ತೃವನ್ನು, ದೃಷ್ಟಿಯಲ್ಲಿ ಯಾವ ಭೇದವನ್ನೂ ಮಾಡಿಕೊಳ್ಳದೆ ದೃಷ್ಟಿಮಾತ್ರಕ್ಕೆ ಕರ್ತೃವಾಗಿರುವವನನ್ನು, ನೋಡಲಾರೆ ಎಂದು (ಅವರ ಅರ್ಥ). ದೃಷ್ಟೇಃ (ದೃಷ್ಟಿಯ) ಎಂಬುದು ಕರ್ಮವನ್ನು ತಿಳಿಸುವ ಷಷ್ಠೀ

---

1. ಆಭಾಸದಿಂದ ವೃತ್ತಿಯನ್ನು ಕೂಡಿಸಿ ವ್ಯಾಪಿಸಿಕೊಂಡಿರುವದೇ ಚೈತನ್ಯದೃಷ್ಟಿಯಿಂದ ನೋಡುವದೆಂಬುದು.

2. ಆತ್ಮವಸುವು ಅಂತಃಕರಣದ ದೃಷ್ಟಿ, ಶ್ರುತಿ, ಮತಿ, ವಿಜ್ಞಾತಿ-ಎಂಬ ವ್ಯಕ್ತಿಗಳನ್ನೆಲ್ಲ ವ್ಯಾಪಿಸಿಕೊಂಡು ಬೆಳಗುತ್ತಿರುತ್ತದೆ. ಅವುಗಳಿಂದ ಅದು ವ್ಯಾಪ್ತವಾಗುವದಿಲ್ಲವಾದ್ದರಿಂದ ಅದು ದೃಷ್ಟ್ಯಾದಿಗಳಿಗೆ ವಿಷಯವಲ್ಲ ಎಂಬುದು ಆತ್ಮವಸ್ತುವಿನ ಸ್ವಭಾವವು.

(ವಿಭಕ್ತಿಯು), ಆ ದೃಷ್ಟಿಯು ಮಾಡಲ್ಪಡುವದರಿಂದ ಗಡಿಗೆಯಂತೆ ಕರ್ಮ ವಾಗಿರುತ್ತದೆ. ದ್ರಷ್ಟಾರಮ್ (ದ್ರಷ್ಟೃವನ್ನು) ಎಂಬ ತೃಜನ್ತ(ಶಬ್ದ)ದಿಂದ ದ್ರಷ್ಟೃವು ದೃಷ್ಟಿಯ ಕರ್ತೃವೆಂಬುದನ್ನು ಹೇಳಿರುತ್ತದೆ ಆದ್ದರಿಂದ ಈ (ಆತ್ಮನು) ದೃಷ್ಟಿಯ ದ್ರಷ್ಟೃ, ಎಂದರೆ ದೃಷ್ಟಿಯ ಕರ್ತೃ ಎಂದು (ಆ) ವ್ಯಾಖ್ಯಾತೃಗಳ ಅಭಿಪ್ರಾಯ.

## ಭರ್ತೃಪ್ರಪಂಚರ ವ್ಯಾಖ್ಯಾನದಲ್ಲಿ ದೋಷ

(ಭಾಷ್ಯ)

೪೮. ತತ್ರ ದೃಷ್ಟೇಃ ಇತಿ ಷಷ್ಠ್ಯನ್ತೇನ ದೃಷ್ಟಿಗ್ರಹಣಂ ನಿರರ್ಥಕಮಿತಿ ದೋಷಂ ನ ಪಶ್ಯನ್ತಿ। ಪಶ್ಯತಾಂ ವಾ ಪುನರುಕ್ತಮಸಾರಃ ಪ್ರಮಾದಪಾಠಃ ಇತಿ ವಾ ನಾದರಃ। ಕಥಂ ಪುನರಾಧಿಕ್ಯಮ್ ತೃಜನ್ತೇನೈವ ದೃಷ್ಟಿಕರ್ತೃತ್ವಸ್ಯ ಸಿದ್ಧ ತ್ವಾತ್ ದೃಷ್ಟೇಃ ಇತಿ ನಿರರ್ಥಕಮ್ । ತದಾ 'ದ್ರಷ್ಟಾರಂ ನ ಪಶ್ಯೇಃ' ಇತ್ಯೇತಾವ ದೇವ ವಕ್ತವ್ಯಮ್ । ಯಸ್ಮಾತ್ ಧಾತೋಃ ಪರಸ್ತೃಚ್ ಶ್ರೂಯತೇ । ತದ್ಧಾತ್ವರ್ಥ ಕರ್ತರಿ ಹಿ ತೃಚ್ ಸ್ಮರ್ಯತೇ। ಗನ್ತಾರಂ ಛೇತ್ತಾರಂ ವಾ ನಯತಿ ಇತ್ಯೇತಾ ವಾನೇವ ಹಿ ಶಬ್ದಃ ಪ್ರಯುಜ್ಯತೇ, ನ ತು ಗತೇರ್ಗನ್ತಾರಂ ಛಿದೇರ್ಛೇತ್ತಾರಮಿತಿ ಅಸತ್ಯರ್ಥವಿಶೇಷೇ ಪ್ರಯೋಕ್ತವ್ಯಃ। ನ ಚಾರ್ಥವಾದತ್ವೇನ ಹಾತವ್ಯಂ ಸತ್ಯಾಂ ಗತೌ। ನ ಚ ಪ್ರಮಾದಪಾಠಃ। ಸರ್ವೇಷಾಮ್ ಅವಿಗಾನಾತ್। ತಸ್ಮಾತ್ ವ್ಯಾಖ್ಯಾತೄಣಾಮೇವ ಬುದ್ಧಿದೌರ್ಬಲ್ಯಂ ನಾಧ್ಯೇತೃಪ್ರಮಾದಃ। ಯಥಾ ತು ಅಸ್ಮಾಭಿರ್ವ್ಯಾಖ್ಯಾತಂ ಲೌಕಿಕದೃಷ್ಟೇರ್ವಿವಿಚ್ಯ ನಿತ್ಯದೃಷ್ಟಿವಿಶಿಷ್ಟ ಆತ್ಮಾ ಪ್ರದರ್ಶ ಯಿತವ್ಯಃ, ತಥಾ ಕರ್ತೃಕರ್ಮವಿಶೇಷಣತ್ವೇನ ದೃಷ್ಟಿಶಬ್ದಸ್ಯ ದ್ವಿಃ ಪ್ರಯೋಗ ಉಪಪದ್ಯತೇ ಆತ್ಮಸ್ವರೂಪನಿರ್ಧಾರಣಾಯ। "ನ ಹಿ ದ್ರಷ್ಟುರ್ದೃಷ್ಟೇಃ" (೪-೩-೨೩) ಇತಿ ಚ ಪ್ರದೇಶಾನ್ತರವಾಕ್ಯೇನೈವ ಏಕವಾಕ್ಯತಾ ಉಪಪನ್ನಾ ಭವತಿ। ತಥಾ ಚ "ಚಕ್ಷೂಂಷಿ ಪಶ್ಯತಿ" (ಕೇ ೧-೭), "ಶ್ರೋತ್ರಮಿದಂ ಶ್ರುತಮ್" (ಕೇ. ೧-೮) ಇತಿ ಶ್ರುತ್ಯನ್ತರೇಣ ಏಕವಾಕ್ಯತಾ ಉಪಪನ್ನಾ। ನ್ಯಾಯಾಚ್ಚ। ಏವ ಮೇವ ಹಿ ಆತ್ಮನೋ ನಿತ್ಯತ್ವಮ್ ಉಪಪದ್ಯತೇ ವಿಕ್ರಿಯಾಭಾವೇ। ವಿಕ್ರಿಯಾ ವಚ್ಚ ನಿತ್ಯಮ್ ಇತಿ ಚ ವಿಪ್ರತಿಷಿದ್ಧಮ್। "ಧ್ಯಾಯತೀವ ಲೇಲಾಯತೀವ" (೪-೩-೭), "ನ ಹಿ ದ್ರಷ್ಟುರ್ದೃಷ್ಟೇರ್ವಿಪರಿಲೋಪೋ ವಿದ್ಯತೇ" (೪-೩-೨೩), "ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ" (೪-೪-೨೩) ಇತಿ ಚ ಶ್ರುತ್ಯಕ್ಷರಾಣಿ ಅನ್ಯಥಾ ನ ಗಚ್ಛನ್ತಿ। ನನು ದ್ರಷ್ಟಾ ಶ್ರೋತಾ ಮನ್ತಾ ವಿಜ್ಞಾತಾ ಇತ್ಯೇವಮಾದೀನ್ಯಪಿ ಅಕ್ಷರಾಣಿ ಆತ್ಮನೋಽವಿಕ್ರಿಯತ್ವೇ ನ ಗಚ್ಛನ್ತೀತಿ। ನ। ಯಥಾಪ್ರಾಪ್ತಲೌಕಿಕ ವಾಕ್ಯಾನುವಾದಿತ್ವಾತ್ ತೇಷಾಮ್। ನಾತ್ಮತತ್ತ್ವನಿರ್ಧಾರಣಾರ್ಥಾನಿ ತಾನಿ। 'ನ ದೃಷ್ಟೇರ್ದ್ರಷ್ಟಾರಮ್' ಇತ್ಯೇವಮಾದೀನಾಮ್ ಅನ್ಯಾರ್ಥಾಸಂಭವಾತ್ ಯಥೋ

ಕ್ತಾರ್ಥಪರತ್ವಮ್ ಅವಗಮ್ಯತೇ । ತಸ್ಮಾತ್ ಅನವಬೋಧಾದೇವ ಹಿ ವಿಶೇಷಣಂ ಪರಿತ್ಯಕ್ತಂ ದೃಷ್ಟೇಃ ಇತಿ ॥

(ಭಾಷ್ಯಾರ್ಥ)

ಇಲ್ಲಿ 'ದೃಷ್ಟೇಃ'(ದೃಷ್ಟಿಯ) ಎಂದು ಷಷ್ಠ್ಯಂತ(ಶಬ್ದ)ದಿಂದ ದೃಷ್ಟಿಯನ್ನು ಗ್ರಹಿಸಿರುವದು ವ್ಯರ್ಥವು ಎಂಬ ದೋಷವು (ಅವರಿಗೆ) ಕಂಡುಬಂದಿಲ್ಲ. ಅಥವಾ ಕಂಡುಬಂದಿದ್ದರೂ (ಇದು) ಪುನರುಕ್ತಿ, ಅಸಾರ, ಅಥವಾ ಪ್ರಮಾದಪಾಠವು ಎಂದು (ಇದರ ವಿಷಯಕ್ಕೆ ಅವರು) ಅನಾದರ(ವನ್ನು ಮಾಡಿರಬೇಕು). (ದೃಷ್ಟೇಃ ಎಂಬುದು) ಹೆಚ್ಚಾಗುವದೆಂಬುದು ಹೇಗೆ? ಎಂದರೆ ತೃಚ್‌ಪ್ರತ್ಯಯಾಂತವಾದ (ದ್ರಷ್ಟೃಶಬ್ದ)ದಿಂದಲೇ ದೃಷ್ಟಿಕರ್ತೃತ್ವವು ಸಿದ್ಧವಾಗಿರುವದರಿಂದ 'ದೃಷ್ಟೇಃ' ಎಂಬ (ಷಷ್ಠಿಯು) ವ್ಯರ್ಥವು. ಆಗ 'ದ್ರಷ್ಟೃವನ್ನು ನೋಡಲಾರೆ' ಎಂದಿಷ್ಟನ್ನೇ ಹೇಳಬೇಕು. ಏಕೆಂದರೆ (ಇಲ್ಲಿ) ಧಾತುವಿಗೆ ಮುಂದೆ ತೃಚ್(ಪ್ರತ್ಯಯವು) ಶ್ರುತಿಯಲ್ಲಿದೆ. ಆಯಾ ಧಾತ್ವರ್ಥದ ಕರ್ತೃವನ್ನು ತಿಳಿಸುವದಕ್ಕಲ್ಲವೆ, ತೃಚ್ ಎಂಬ ಪ್ರತ್ಯಯವನ್ನು (ವ್ಯಾಕರಣಕಾರರು) ಹೇಳಿರುತ್ತಾರೆ[1]? 'ಗಂತೃವನ್ನು ಅಥವಾ ಭೇತ್ತೃವನ್ನು ಕರೆದುಕೊಂಡು ಹೋಗುತ್ತಾನೆ' ಎಂದಿಷ್ಟೇ ಅಲ್ಲವೆ, ಶಬ್ದವನ್ನು ಪ್ರಯೋಗಿಸುತ್ತಾರೆ? ಇಷ್ಟೇ ಹೊರತು 'ಗತಿಯ ಗಂತೃವನ್ನು' 'ಭೇದದ ಭೇತ್ತೃವನ್ನು' ಎಂದು ಅರ್ಥವಿಶೇಷವು ಇಲ್ಲದಿದ್ದರೆ ಪ್ರಯೋಗಿಸತಕ್ಕದ್ದಲ್ಲ. (ಇದಕ್ಕಿಂತ) ಗತ್ಯಂತರವಿರುವಲ್ಲಿ (ಸುಮ್ಮನೆ) ಅರ್ಥಪಾದವೆಂದು ಇದನ್ನು ಬಿಡತಕ್ಕದ್ದೂ ಅಲ್ಲ. (ಇದು) ಪ್ರಮಾದಪಾಠವೂ ಅಲ್ಲ, ಏಕೆಂದರೆ ಯಾವ (ಶಾಖೆಯವರಿಗೂ ಇಲ್ಲಿ) ವಿಗಾನವಿಲ್ಲ.[2] ಆದ್ದರಿಂದ ವ್ಯಾಖ್ಯಾತೃಗಳಿಗೇ ಬುದ್ಧಿದೌರ್ಬಲ್ಯವೇ ಹೊರತು ಅಧ್ಯೇತೃಗಳ ಪ್ರಮಾದ(ವೇನೂ) ಇಲ್ಲ.

ಆದರೆ ನಾವು ವ್ಯಾಖ್ಯಾನಮಾಡಿರುವ ಪ್ರಕಾರದಲ್ಲಿಯೋ ಎಂದರೆ ಲೌಕಿಕ ದೃಷ್ಟಿಯಿಂದ ಬೇರ್ಪಡಿಸಿ ನಿತ್ಯದೃಷ್ಟಿಯಿಂದ ಕೂಡಿದ ಆತ್ಮನನ್ನು ತಿಳಿಸಿಕೊಡಬೇಕಾಗಿದೆ, ಆದ್ದರಿಂದ ಆತ್ಮಸ್ವರೂಪವನ್ನು ವ್ಯಕ್ತಪಡಿಸುವದಕ್ಕಾಗಿ ಕರ್ತೃ, ಕರ್ಮ- (ಈ ಎರಡಕ್ಕೆ) ವಿಶೇಷಣವಾಗಿ ದೃಷ್ಟಿಶಬ್ದವನ್ನು ಎರಡು ಸಲ ಪ್ರಯೋಗಿಸಿರುವದು ಹೊಂದುತ್ತದೆ.[3] "ದ್ರಷ್ಟೃವಿನ ದೃಷ್ಟಿಗೆ..." (೪-೩-೨೩) ಎಂದು

---

1. ಪಾ. ೩-೧-೧೩೩.

2. ಕಾಣ್ವಮಾಧ್ಯಂದಿನಪಾಠಗಳೆರಡರಲ್ಲಿಯೂ ಹೀಗೆಯೇ ಪಾಠವಿದೆ.

3. ದೃಷ್ಟಿಯ ಎಂಬುದು ಲೌಕಿಕದೃಷ್ಟಿ ಎಂಬ ಕರ್ಮವನ್ನು ಹೇಳುವ ದೃಷ್ಟಿ, ದ್ರಷ್ಟೃ ಎಂಬಲ್ಲಿ ದ್ರಷ್ಟೃವೆಂಬ ಕರ್ತೃವಿಗೆ ವಿಶೇಷಣವಾಗಿರುವ ದೃಷ್ಟಿ– ಹೀಗೆ ಎರಡು ಸಲ ಹೇಳುವದು. ಎರಡು ಬಗೆಯ ದೃಷ್ಟಿಗಳಿವೆ ಎಂಬ ಪಕ್ಷದಲ್ಲಿಯೇ ಹೊಂದುಗಡೆಯಾಗುತ್ತದೆ.

ಮತ್ತೊಂದು ಸ್ಥಲದಲ್ಲಿರುವ ವಾಕ್ಯದೊಡನೆ (ಇದಕ್ಕೆ) ಏಕವಾಕ್ಯತೆಯೂ ಹೊಂದು ಗಡೆಯಾಗುತ್ತದೆ ಹೀಗೆಯೇ "ಚಕ್ಷುಸ್ಸುಗಳನ್ನು ನೋಡುತ್ತಾನೋ ..." (ಕೇ. ೧-೭), "ಈ ಶ್ರೋತ್ರವು ಶ್ರುತವಾಗುತ್ತದೆಯೋ" (ಕೇ ೧-೮) ಎಂಬ ಮತ್ತೊಂದು ಶ್ರುತಿಯೊಡನೆಯೂ (ಇದಕ್ಕೆ) ಏಕವಾಕ್ಯತಯು ಹೊಂದುತ್ತದೆ[1] ಯುಕ್ತಿ ಯಿಂದಲೂ (ಹೀಗೆಂದಾಗುತ್ತದೆ ಇದರ ವಿವರ) ಹೀಗಾದರೇ ಆತ್ಮನು ವಿಕಾರ ರಹಿತನಾಗಿರುವಲ್ಲಿ (ಅವನು) ನಿತ್ಯನು ಎಂಬುದು ಸರಿಯಾಗುತ್ತದೆ, ವಿಕಾರ ವುಳ್ಳದ್ದು, ನಿತ್ಯವೂ (ಆಗಿವೆ) ಎಂಬುದು (ಪರಸ್ಪರ)ವಿರುದ್ಧವಾದದ್ದು "ಧ್ಯಾನ ಮಾಡುತ್ತಿರುವಂತೆ, ಚಲಿಸುತ್ತಿರುವಂತೆ ಇರುತ್ತಾನೆ" (೪ ೩-೭) 'ದ್ರಷ್ಟೃವಿನ ದೃಷ್ಟಿಗೆ ವಿಪರಿಲೋಪವಿಲ್ಲವೇ ಇಲ್ಲ'' (೪ ೩-೨೩), ಮತ್ತು "ಇದು ಬ್ರಾಹ್ಮಣನ ನಿತ್ಯವಾದ ಮಹಿಮೆ''[2] (೪-೪ ೨೩) ಎಂಬ ಶ್ರುತಿಯು ಅಕ್ಷರಗಳು[3] ಮತ್ತೊಂದು ಬಗೆಯಿಂದ ಸಂಗತವಾಗುವದಿಲ್ಲ

(ಆಕ್ಷೇಪ) —ದ್ರಷ್ಟಾ ಶ್ರೋತಾ ಮನ್ತಾ ವಿಜ್ಞಾತಾ-ಮುಂತಾದ (ಶ್ರುತಿಯ) ಅಕ್ಷರಗಳೂ ಆತ್ಮನು ಅವಿಕ್ರಿಯನೆಂದಾದರ ಹೊಂದುವದಿಲ್ಲವಲ್ಲ !

(ಪರಿಹಾರ) —ಹಾಗಲ್ಲ ಏಕೆಂದರೆ ಅವುಗಳು ಸ್ವಭಾವಸಿದ್ಧವಾಗಿರುವ ಲೌಕಿಕವಾಕ್ಯಗಳನ್ನು ಅನುವಾದಮಾಡುವವುಗಳಾಗಿವೆ ಅವು ಆತ್ಮತತ್ತ್ವ ವನ್ನು ಗೊತ್ತುಪಡಿಸುವದಕ್ಕಾಗಿ (ಬಂದವು)ಗಳಲ್ಲ (ಆದರೆ) "ದೃಷ್ಟಿಯ ದ್ರಷ್ಟೃ ವನ್ನು (ನೋಡ)ಲಾರೆ" ಇವೇ ಮುಂತಾದವುಗಳಿಗೆ ಮತ್ತೊಂದು ಅರ್ಥವು ಸಂಭವಿ ಸುವಂತಿಲ್ಲವಾದ್ದರಿಂದ (ನಾವು) ಹೇಳಿದರ್ಥದಲ್ಲಿಯೇ (ಅವಕ್ಕೆ) ತಾತ್ಪರ್ಯವೆಂದು ನಿಶ್ಚಿತವಾಗುತ್ತದೆ[4] ಆದ್ದರಿಂದ 'ದೃಷ್ಟೇಃ' ಎಂಬ ವಿಶೇಷಣವನ್ನು ಅಜ್ಞಾನ ದಿಂದಲೇ (ಪೂರ್ವಪಕ್ಷಿಗಳು) ಬಿಟ್ಟಿರುತ್ತಾರೆ

## ಶ್ರುತಿಯ ಉಳಿದ ವಾಕ್ಯದ ಅರ್ಥ

(ಭಾಷ್ಯ)

೪೯ ಏಷ ತೇ ತವ ಆತ್ಮಾ ಸರ್ವೈರುಕ್ತೈರ್ವಿಶೇಷಣೈರ್ವಿಶಿಷ್ಟಃ | ಅತ ಏತಸ್ಮಾದಾತ್ಮನಃ ಅನ್ಯತ್ ಆರ್ತಮ್, ಕಾರ್ಯಂ ವಾ ಶರೀರಮ್ ಕರಣಾತ್ಮಕಂ

---

1. ಚಕ್ಷುರ್ವೃತ್ತಿ, ಶ್ರೋತ್ರವೃತ್ತಿ-ಇವುಗಳನ್ನು ವ್ಯಾಪಿಸಿಕೊಂಡಿರುವ ಚೈತನ್ಯರೂಪ ವಾದ ಮತ್ತೊಂದು ದೃಷ್ಟಿಯನ್ನು ಅಲ್ಲಿ ಹೇಳಿದೆ ಎಂದು ಅರ್ಥಮಾಡಿದರೆ ಎರಡು ಶ್ರುತಿಗಳಿಗೂ ಸಾಮರಸ್ಯವುಂಟಾಗುತ್ತದೆ.

2. ಬ್ರಹ್ಮಜ್ಞಾನಿಗೆ ಬರುವ ಬ್ರಹ್ಮಾತ್ಮತ್ವವು ಕೃತಕವಲ್ಲವು. ಚೈತನ್ಯರೂಪವೆಂದು ಆ ಶ್ರುತಿಯ ಅರ್ಥ.

3. ಮಾತುಗಳು.

4. ತತ್ಪರವಾಕ್ಯಗಳು ನಿರವಕಾಶವಾಗಿರುವದರಿಂದ ಅವಕ್ಕೆ ಅದೇ ಅರ್ಥವನ್ನು ಮಾಡ ಬೇಕು, ಅನುವಾದಕವಾಕ್ಯಗಳಿಗೆ ಈ ನಿರ್ಬಂಧವಿಲ್ಲ.

ವಾ ಲಿಙ್ಗಮ್ । ಏತದೇವೈಕಮ್ ಅನಾರ್ತಮ್ ಅವಿನಾಶಿ ಕೂಟಸ್ಥಮ್ । ತತೋ ಹ ಉಷಸ್ತಶ್ಚಾಕ್ರಾಯಣ ಉಪರರಾಮ ||

ಭಾಷ್ಯಾರ್ಥ

ಇವನು, ಮೇಲೆ ಹೇಳಿರುವ ಎಲ್ಲಾ ವಿಶೇಷಣಗಳಿಂದಲೂ ಕೂಡಿರುವಾತನು (ತೇ=ತವ) ನಿನ್ನ ಆತ್ಮನು. ಆದ್ದರಿಂದ ಈ ಆತ್ಮನಿಗಿಂತ ಬೇರೆಯಾದದ್ದು ಆರ್ತವು, ಕಾರ್ಯವಾದ ಶರೀರವೇ ಆಗಲಿ ಕರಣಾತ್ಮಕವಾದ ಲಿಂಗವೇ ಆಗಲಿ (ಎಲ್ಲವೂ ವಿನಾಶಿ). ಇದೊಂದೇ ಅನಾರ್ತವು, ವಿನಾಶವಿಲ್ಲದ್ದು, ಕೂಟಸ್ಥವು.

ಆಗ ಉಷಸ್ತಚಾಕ್ರಾಯಣನು ಸುಮ್ಮನಾದನು.

————

# ನಾಲ್ಕನೆಯ ಬ್ರಾಹ್ಮಣದ ಸಾರ

೧ ಭುಜ್ಯುವು ಸುಮ್ಮನಾಗಲು ಉಷಸ್ತಚಾಕ್ರಾಯಣನು "ಯಾಜ್ಞವಲ್ಕ್ಯನೆ, ಸಾಕ್ಷಾತ್ತಾಗಿ ಅಪರೋಕ್ಷವಾಗಿ ಸರ್ವಾಂತರನಾಗಿರುವ ಆತ್ಮನನ್ನು ವಿವರಿಸಿ ಹೇಳು' ಎಂದನು. ಯಾಜ್ಞವಲ್ಕ್ಯನು 'ಪ್ರಾಣ, ಅಪಾನ, ವ್ಯಾನ, ಉದಾನ- ಈ ವಾಯುಗಳ ವ್ಯಾಪಾರವನ್ನು ಮಾಡುವವನೇ, ಶರೀರೇಂದ್ರಿಯಗಳ ವ್ಯಾಪಾರವನ್ನೆಲ್ಲ ಮಾಡಿಸುವವನೇ, ನಿನ್ನ ಸರ್ವಾಂತರನಾದ ಆತ್ಮನು" ಎಂದನು.

೨. ಆಗ ಉಷಸ್ತಚಾಕ್ರಾಯಣನಿಂತೆಂದನು: "ಎತ್ತನ್ನಾಗಲಿ ಕುದುರೆಯನ್ನಾಗಲಿ ತೋರಿಸುವದಕ್ಕೆ ಹೊರಟವನು ಬರಿಯ ಚಲನಾದಿಲಿಂಗಗಳಿಂದ ಅದನ್ನು ತಿಳಿಸಿದಂತೆ ಆಯಿತು, ನಿನ್ನ ಉತ್ತರ. ಈ ಆತ್ಮನನ್ನು ನೇರಾಗಿ ತೋರಿಸಿ ಹೇಳು" ಎಂದನು. ಯಾಜ್ಞವಲ್ಕ್ಯನು "ನಾನು ಹೇಳಿದ್ದಕ್ಕಿಂತ ಆತ್ಮನನ್ನು ತಿಳಿಸುವದಕ್ಕೆ ಬೇರೆಯ ಮಾರ್ಗವಿಲ್ಲ. ಆತ್ಮನು ಪ್ರತ್ಯಕ್ಷವಿಷಯನಲ್ಲವಾದ್ದರಿಂದ ಅವನನ್ನು ನೇರಾಗಿ ತಿಳಿಸಿಕೊಡುವದು ಆಗಲಾರದು. ಅವನು ದೃಷ್ಟಿ, ಶ್ರುತಿ, ಮತಿ, ವಿಜ್ಞಾನ- ಮುಂತಾದ ಲೌಕಿಕವೃತ್ತಿಗಳನ್ನೆಲ್ಲ ಬೆಳಗುವವನು, ಅವನನ್ನು ಕಾಣುವದಾಗಲಿ, ಕೇಳುವದಾಗಲಿ, ಆಲೋಚಿಸುವದಾಗಲಿ, ಅರಿಯುವದಾಗಲಿ, ಆಗಲಾರದು. ಅವನೇ ಸರ್ವಾಂತರಾತ್ಮನು, ಅವನನ್ನು ಬಿಟ್ಟು ಉಳಿದದ್ದೆಲ್ಲ ವಿನಾಶಿ" ಎಂದನು. ಆ ಬಳಿಕ ಉಷಸ್ತಚಾಕ್ರಾಯಣನು ಸುಮ್ಮನಾದನು.

---

# ಮೂರನೆಯ ಅಧ್ಯಾಯ—ಐದನೆಯ ಬ್ರಾಹ್ಮಣ

(ಕಹೋಲಪ್ರಶ್ನೆ : ಮೋಕ್ಷಸಾಧನಸಹಿತವಾದ ಆತ್ಮಜ್ಞಾನ)

## ಬ್ರಾಹ್ಮಣದ ಸಂಬಂಧ

(ಭಾಷ್ಯ)

ಓಂ. ಬನ್ಧನಂ ಸಪ್ರಯೋಜಕಮುಕ್ತಮ್ । ಯಶ್ಚ ಬದ್ಧಃ ತಸ್ಯಾಪ್ಯಸ್ತಿತ್ವಮ್ ಅಧಿಗತಮ್, ವ್ಯತಿರಿಕ್ತತ್ವಂ ಚ । ತಸ್ಯ ಇದಾನೀಂ ಬನ್ಧಮೋಕ್ಷಸಾಧನಂ ಸಸಂನ್ಯಾಸಮ್ ಆತ್ಮಜ್ಞಾನಂ ವಕ್ತವ್ಯಮ್ ಇತಿ ಕಹೋಲಪ್ರಶ್ನಃ ಆರಭ್ಯತೇ ॥

(ಭಾಷ್ಯಾರ್ಥ)

ಪ್ರಯೋಜಕ(ವಾದ ಕರ್ಮ)ದಿಂದೊಡಗೂಡಿದ ಬಂಧವನ್ನು ಹೇಳಿದ್ದಾಯಿತು. ಯಾವನು (ಆದರಿಂದ) ಬದ್ಧನಾಗಿರುತ್ತಾನೆಯೋ ಅವನೂ ಇದಾನೆಂದೂ (ಅದಕ್ಕಿಂತ)[1] ವ್ಯತಿರಿಕ್ತ(ನಾಗಿದಾ)ನೆಂದೂ ಗೊತ್ತಾಯಿತು. ಆ (ಬದ್ಧ)ನಿಗೆ ಬಂಧ(ದಿಂದ) ಬಿಡುಗಡೆಯಾಗುವದಕ್ಕೆ ಸಾಧನವನ್ನೂ ಸಂನ್ಯಾಸಸಹಿತವಾಗಿರುವ ಆತ್ಮಜ್ಞಾನವನ್ನೂ ಈಗ ಹೇಳಬೇಕು ಎಂದು ಕಹೋಲಪ್ರಶ್ನೆಯನ್ನು ಆರಂಭಿಸಿರುತ್ತದೆ.

## ಜ್ಞಾನಸಾಧನವೂ ಜ್ಞಾನವೂ

(ಉಪನಿಷತ್ತು)

**ಅಥ ಹೈನಂ ಕಹೋಲಃ ಕೌಷೀತಕೇಯಃ ಪಪ್ರಚ್ಛ ಯಾಜ್ಞವಲ್ಕ್ಯೇತಿ ಹೋವಾಚ ಯದೇವ ಸಾಕ್ಷಾದಪರೋಕ್ಷಾದ್ಬ್ರಹ್ಮ ಯ ಆತ್ಮಾ ಸರ್ವಾನ್ತರಸ್ತಂ ಮೇ ವ್ಯಾಚಕ್ಷ್ವೇತ್ಯೇಷ ತ ಆತ್ಮಾ ಸರ್ವಾನ್ತರಃ । ಕತಮೋ ಯಾಜ್ಞವಲ್ಕ್ಯ ಸರ್ವಾನ್ತರೋ ಯೋಽಶನಾಯಾಪಿಪಾಸೇ ಶೋಕಂ ಮೋಹಂ ಜರಾಂ ಮೃತ್ಯುಮತ್ಯೇತಿ । ಏತಂ ವೈ ತಮಾತ್ಮಾನಂ ವಿದಿತ್ವಾ ಬ್ರಾಹ್ಮಣಾಃ ಪುತ್ರೈಷಣಾಯಾಶ್ಚ ವಿತ್ತೈಷಣಾಯಾಶ್ಚ ಲೋಕೈಷಣಾಯಾಶ್ಚ ವ್ಯುತ್ಥಾಯಾಥ ಭಿಕ್ಷಾಚರ್ಯಂ ಚರನ್ತಿ ಯಾ ಹ್ಯೇವ ಪುತ್ರೈಷಣಾ ಸಾ ವಿತ್ತೈಷಣಾ ಯಾ ವಿತ್ತೈಷಣಾ ಸಾ ಲೋಕೈಷಣೋಭೇ ಹ್ಯೇತೇ ಏಷಣೇ ಏವ ಭವತಃ । ತಸ್ಮಾದ್ ಬ್ರಾಹ್ಮಣಃ ಪಾಣ್ಡಿತ್ಯಂ ನಿರ್ವಿದ್ಯ ಬಾಲ್ಯೇನ ತಿಷ್ಠಾಸೇತ್ । ಬಾಲ್ಯಂ ಚ ಪಾಣ್ಡಿತ್ಯಂ ಚ ನಿರ್ವಿದ್ಯಾಥ ಮುನಿರಮೌನಂ ಚ ಮೌನಂ**

---

1. ಗ್ರಹಾತಿಗ್ರಹಕ್ಕಿಂತ.

**ಚ ನಿರ್ವಿದ್ಯಾಥ ಬ್ರಾಹ್ಮಣಃ ಸ ಬ್ರಾಹ್ಮಣಃ ಕೇನ ಸ್ಯಾದ್ಯೇನ ಸ್ಯಾತ್ ತೇನೇದೃಶ ಏವಾತೋಽನ್ಯದಾರ್ತಂ ತತೋ ಹ ಕಹೋಲಃ ಕೌಷೀತ ಕೇಯ ಉಪರರಾಮ ॥ ೧ ॥**

೧. ಆಗ ಕಹೋಲಕೌಷೀತಕೇಯನು (ಹೀಗೆಂದು) ಕೇಳಿದನು: 'ಯಾಜ್ಞವಲ್ಕ್ಯನೆ' ಎಂದನು. 'ಯಾವದೇ ಸಾಕ್ಷಾತ್ ಅಪರೋಕ್ಷವಾಗಿ ರುವ ಬ್ರಹ್ಮವೋ, ಯಾವನು ಸರ್ವಾಂತರನಾದ ಆತ್ಮನೋ, ಅವನನ್ನು ನನಗೆ ವಿವರಿಸಿ ಹೇಳು.' ಇವನೇ ನಿನ್ನ ಸರ್ವಾಂತರನಾದ ಆತ್ಮನು. 'ಯಾಜ್ಞ ವಲ್ಕ್ಯನೆ, ಸರ್ವಾಂತರನು ಯಾವನು? ಯಾವನು ಅಶನಾಯಾಪಿಪಾಸೆ ಗಳನ್ನೂ ಶೋಕವನ್ನೂ, ಮೋಹವನ್ನೂ, ಜರೆಯನ್ನೂ ಮೃತ್ಯುವನ್ನೂ ಅತಿ ಕ್ರಮಿಸಿರುವನೋ (ಅವನು). ಆ ಈ ಆತ್ಮನನ್ನೇ ಅರಿತುಕೊಂಡು ಬ್ರಾಹ್ಮಣರು ಪುತ್ರೈಷಣೆಯಿಂದಲೂ ವಿತ್ತೈಷಣೆಯಿಂದಲೂ ಲೋಕೈಷಣೆ ಯಿಂದಲೂ ಬಿಟ್ಟೆದ್ದು ಇನ್ನು ಭಿಕ್ಷಾಚರ್ಯೆಯನ್ನು ಮಾಡುತ್ತಿದ್ದರು. ಯಾವದು ಪುತ್ರೈಷಣೆಯೋ ಅದೇ ವಿತ್ತೈಷಣೆ; ಯಾವದು ವಿತ್ತೈ ಷಣೆಯೋ ಅದೇ ಲೋಕೈಷಣೆ; ಇವೆರಡೂ ಏಷಣೆಗಳೇ ಆಗಿರುತ್ತವೆ. ಆದ್ದರಿಂದ ಬ್ರಾಹ್ಮಣನು ಪಾಂಡಿತ್ಯವನ್ನು ಪೂರ ತಿಳಿದು ಬಾಲ್ಯದಿಂದ ನಿಲ್ಲಲೆಳಸಬೇಕು; ಬಾಲ್ಯವನ್ನೂ ಪಾಂಡಿತ್ಯವನ್ನೂ ಪೂರ ತಿಳಿದು ಇನ್ನು ಮುನಿ; ಅಮೌನವನ್ನೂ ಮೌನವನ್ನೂ ಪೂರ ತಿಳಿದು ಇನ್ನು ಬ್ರಾಹ್ಮಣನು. ಆ 'ಬ್ರಾಹ್ಮಣನು ಏತರಿಂದ (ಬ್ರಾಹ್ಮಣ)ನಾಗಿರುವನು?' ಯಾವದರಿಂದ ಇರುವನೋ, ಅದರಿಂದ ಇಂಥವನೇ. ಇದಕ್ಕಿಂತ ಬೇರೆಯಾದದ್ದು ಆರ್ತವು. ಆಗ ಕಹೋಲಕೌಷೀತಕೇಯನು ಸುಮ್ಮನಾದನು.

## ಕಹೋಲನ ಪ್ರಶ್ನೆ

(ಭಾಷ್ಯ)

೫೧ ಅಥ ಹೈನಂ ಕಹೋಲೋ ನಾಮತಃ, ಕುಷೀತಕಸ್ಯಾಪತ್ಯಂ ಕೌಷೀತಕೇಯಃ ಪಪ್ರಚ್ಛ। ಯಾಜ್ಞವಲ್ಕ್ಯೇತಿ ಹೋವಾಚ ಇತಿ ಪೂರ್ವವತ್। ಯದೇವ ಸಾಕ್ಷಾತ್ ಅಪರೋಕ್ಷಾದ್ ಬ್ರಹ್ಮ, ಯ ಆತ್ಮಾ ಸರ್ವಾನ್ತರಃ, ತಂ ಮೇ ವ್ಯಾಚಕ್ಷ್ವ ಇತಿ। ಯಂ ವಿದಿತ್ವಾ ಬನ್ಧನಾತ್ ಪ್ರಮುಚ್ಯತೇ। ಯಾಜ್ಞವಲ್ಕ್ಯ ಆಹ– ಏಷ ತೇ ತವ ಆತ್ಮಾ ॥

(ಭಾಷ್ಯಾರ್ಥ)

ಆಗ ಇವನನ್ನು ಕಹೋಲನೆಂಬ ಹೆಸರಿನ ಕೌಷೀತಕೇಯನು, ಕುಷೀತಕನ

ಮಗನು (ಹೀಗೆಂದು) ಕೇಳಿದನು. 'ಯಾಜ್ಞವಲ್ಕ್ಯನೆ' ಎಂದನು.–ಎಂಬುದನ್ನು ಹಿಂದಿನಂತೆ (ವ್ಯಾಖ್ಯಾನಮಾಡಿಕೊಳ್ಳಬೇಕು).[1] ಯಾವದು ಸಾಕ್ಷಾತ್ತಾಗಿ ಅಪರೋಕ್ಷವಾಗಿರುವ ಬ್ರಹ್ಮವೋ (ಅದನ್ನೇ), ಯಾವನು ಸರ್ವಾಂತರ ಆತ್ಮನೋ ಅವನನ್ನೇ ನನಗೆ ವಿವರಿಸಿ ಹೇಳು ! ಯಾವನನ್ನು ಅರಿತುಕೊಂಡರೆ ಬಂಧನದಿಂದ ಮುಕ್ತನಾಗುತ್ತಾನೋ (ಅವನನ್ನೇ ಹೇಳು ಎಂದರ್ಥ). ಯಾಜ್ಞವಲ್ಕ್ಯ ನಿಂತೆಂದನು. ಇವನೇ (ತೇ=ತವ) ನಿನ್ನ (ಸರ್ವಾಂತರನಾದ) ಆತ್ಮನು.

## ಚರ್ಚೆ: ಉಷಸ್ತಕಹೋಲಪ್ರಶ್ನೆಗಳು ಒಬ್ಬನೇ ಆತ್ಮನ ವಿಷಯವೆ ?

## ಭರ್ತೃಪ್ರಪಂಚರು: ಇವುಗಳಲ್ಲಿ ಕ್ಷೇತ್ರಜ್ಞ, ಪರಮಾತ್ಮ–ಇವರನ್ನು ಕುರಿತು ಕೇಳಿದೆ

(ಭಾಷ್ಯ)

೫೨. ಕಿಮುಷಸ್ತಕಹೋಲಾಭ್ಯಾಮ್ ಏಕ ಆತ್ಮಾ ಪೃಷ್ಟಃ, ಕಿಂ ವಾ ಭಿನ್ನಾವಾತ್ಮಾನೌ ತುಲ್ಯಲಕ್ಷಣಾವಿತಿ ? ಭಿನ್ನಾವಿತಿ ಯುಕ್ತಮ್ । ಪ್ರಶ್ನಯೋರಪುನರುಕ್ತತ್ವೋಪಪತ್ತೇಃ । ಯದಿ ಹಿ ಏಕ ಆತ್ಮಾ ಉಷಸ್ತಕಹೋಲಪ್ರಶ್ನಯೋರ್ವಿವಕ್ಷಿತಃ ತತ್ರ ಏಕೇನೈವ ಪ್ರಶ್ನೇನ ಅಧಿಗತತ್ವಾತ್ ತದ್ವಿಷಯೋ ದ್ವಿತೀಯಃ ಪ್ರಶ್ನೋಽನರ್ಥಕಃ ಸ್ಯಾತ್ । ನ ಚಾರ್ಥವಾದರೂಪತ್ವಂ ವಾಕ್ಯಸ್ಯ । ತಸ್ಮಾತ್ ಭಿನ್ನಾವೇತಾವಾತ್ಮಾನೌ ಕ್ಷೇತ್ರಜ್ಞಪರಮಾತ್ಮಾಖ್ಯೌ ಇತಿ ಕೇಚಿತ್ ವ್ಯಾಚಕ್ಷತೇ ॥

(ಭಾಷ್ಯಾರ್ಥ)

(ಪ್ರಶ್ನೆ)·—ಉಷಸ್ತ, ಕಹೋಲ–ಇವರು ಒಬ್ಬನೇ ಆತ್ಮನನ್ನು (ಕುರಿತು) ಪ್ರಶ್ನಿಸಿರುವರೆ, ಅಥವಾ ಸಮಾನಲಕ್ಷಣವುಳ್ಳ ಬೇರೆಬೇರೆಯ ಇಬ್ಬರು ಆತ್ಮರನ್ನು (ಕುರಿತು ಕೇಳಿರುತ್ತಾರೆಯೆ)?

ಬೇರೆಬೇರೆಯ (ಆತ್ಮರನ್ನು ಕುರಿತು ಕೇಳಿರುತ್ತಾರೆ) ಎಂಬುದೇ ಯುಕ್ತವು; ಏಕೆಂದರೆ (ಹಾಗಾದರೆ ಈ ಎರಡು) ಪ್ರಶ್ನೆಗಳಲ್ಲಿ ಪುನರುಕ್ತಿಯಿಲ್ಲವೆಂದಾಗುತ್ತದೆ. ಉಷಸ್ತಕಹೋಲಪ್ರಶ್ನೆಗಳಲ್ಲಿ ಒಬ್ಬನೇ ಆತ್ಮನನ್ನು ಹೇಳಬೇಕೆಂಬ ಇಚ್ಛೆಯಿದೆ ಎಂದಾದರೆ, ಆಗ ಒಂದೇ ಪ್ರಶ್ನೆಯಿಂದ (ಆ ಆತ್ಮನನ್ನು) ಅರಿತುಕೊಂಡಿರುವದರಿಂದ ಅವನ ವಿಷಯದಲ್ಲಿ ಎರಡನೆಯ ಪ್ರಶ್ನೆಯು ವ್ಯರ್ಥವಾಗುವದು. (ಈ) ವಾಕ್ಯವು ಅರ್ಥವಾದರೂಪವಾಗಿಯೂ ಇರುವದಿಲ್ಲ.[2] ಆದ್ದರಿಂದ ಈ (ಇಬ್ಬರು)

---

1. ೩–೪–೧ರ ಭಾಷ್ಯದಲ್ಲಿರುವಂತೆ ವ್ಯಾಖ್ಯಾನಮಾಡಿ ಹೇಳಬೇಕು.

2. ಏಕೆಂದರೆ ಇದು ಯಾವ ಅನುಷ್ಠಾನವನ್ನಾಗಲಿ ಜ್ಞಾನವನ್ನಾಗಲಿ ಸ್ತುತಿಸುವದಕ್ಕೆ ಬಂದಿಲ್ಲ; ಆತ್ಮತತ್ತ್ವವನ್ನೇ ಪ್ರತಿಪಾದಿಸುತ್ತದೆ.

ಆತ್ಮರೂ ಬೇರೆಬೇರೆ, ಕ್ಷೇತ್ರಜ್ಞ, ಪರಮಾತ್ಮ- ಎಂಬವ(ರಿವರು), ಎಂದು **ಕೆಲವರು**[1] ವ್ಯಾಖ್ಯಾನಮಾಡಿರುತ್ತಾರೆ.

## ಸಿದ್ಧಾಂತ: ಅದೇ ಆತ್ಮನನ್ನೇ ಇಲ್ಲಿ ಕೇಳಿರುತ್ತದೆ

(ಭಾಷ್ಯ)

೫೩. ತನ್ನ । ತೇ ಇತಿ ಪ್ರತಿಜ್ಞಾನಾತ್ । ಏಷ ತ ಆತ್ಮಾ ಇತಿ ಹಿ ಪ್ರತಿವಚನೇ ಪ್ರತಿಜ್ಞಾತಮ್ । ನ ಹ್ಯೇಕಸ್ಯ ಕಾರ್ಯಕರಣಸಂಘಾತಸ್ಯ ದ್ವೌ ಆತ್ಮಾನೌ ಉಪಪದ್ಯೇತೇ । ಏಕೋ ಹಿ ಕಾರ್ಯಕರಣಸಂಘಾತಃ ಏಕೇನ ಆತ್ಮನಾ ಆತ್ಮವಾನ್ । ನ ಚ ಉಷಸ್ತಸ್ಯ ಅನ್ಯಃ, ಕಹೋಲಸ್ಯ ಅನ್ಯೋ ಜಾತಿತೋ ಭಿನ್ನ ಆತ್ಮಾ ಭವತಿ । ದ್ವಯೋರಗೌಣತ್ವಾತ್ಮತ್ವಸರ್ವಾನ್ತರತ್ವಾನುಪಪತ್ತೇಃ । ಯದ್ಯೇಕಮ್ ಅಗೌಣಂ ಬ್ರಹ್ಮ ದ್ವಯೋಃ ಇತರೇಣ ಅವಶ್ಯಂ ಗೌಣೇನ ಭವಿತವ್ಯಮ್ । ತಥಾ ಆತ್ಮತ್ವಂ ಸರ್ವಾನ್ತರತ್ವಂ ಚ । ವಿರುದ್ಧತ್ವಾತ್ ಪದಾರ್ಥಾನಾಮ್ । ಯದ್ಯೇಕಂ ಸರ್ವಾನ್ತರಂ ಬ್ರಹ್ಮ ಆತ್ಮಾ ಮುಖ್ಯಃ, ಇತರೇಣ ಅಸರ್ವಾನ್ತರೇಣ ಅನಾತ್ಮನಾ ಅಮುಖ್ಯೇನ ಅವಶ್ಯಂ ಭವಿತವ್ಯಮ್ । ತಸ್ಮಾತ್ ಏಕಸ್ಯೈವ ದ್ವಿಃ ಶ್ರವಣಂ ವಿಶೇಷವಿವಕ್ಷಯಾ । ಯತ್ತು ಪೂರ್ವೋಕ್ತೇನ ಸಮಾನಂ ದ್ವಿತೀಯೇ ಪ್ರಶ್ನಾನ್ತರೇ ಉಕ್ತಮ್, ತಾವನ್ಮಾತ್ರಂ ಪೂರ್ವಸ್ಯೈವ ಅನುವಾದಃ, ತಸ್ಯೈವ ಅನುಕ್ತಃ ಕಶ್ಚಿತ್ ವಿಶೇಷೋ ವಕ್ತವ್ಯ ಇತಿ । ಕಃ ಪುನರಸೌ ವಿಶೇಷ ಇತಿ? ಉಚ್ಯತೇ । ಪೂರ್ವಸ್ಮಿನ್ ಪ್ರಶ್ನೇ ಅಸ್ತಿ ವ್ಯತಿರಿಕ್ತ ಆತ್ಮಾ ಯಸ್ಯಾಯಂ ಸಪ್ರಯೋಜಕೋ ಬನ್ಧ ಉಕ್ತಃ ಇತಿ । ದ್ವಿತೀಯೇ ತು ತಸ್ಯೈವ ಆತ್ಮನೋಽಶನಾಯಾದಿಸಂಸಾರಧರ್ಮಾತೀತತ್ವಂ ವಿಶೇಷ ಉಚ್ಯತೇ । ಯದ್ವಿಶೇಷಪರಿಜ್ಞಾನಾತ್ ಸಂನ್ಯಾಸಸಹಿತಾತ್ ಪೂರ್ವೋಕ್ತಾತ್ ಬನ್ಧನಾತ್ ವಿಮುಚ್ಯತೇ । ತಸ್ಮಾತ್ ಪ್ರಶ್ನಪ್ರತಿವಚನಯೋಃ ಏಷ ತ ಆತ್ಮಾ ಇತ್ಯೇವಮನ್ತಯೋಃ ತುಲ್ಯಾರ್ಥತೈವ ॥

(ಭಾಷ್ಯಾರ್ಥ)

ಅದು ಸರಿಯಲ್ಲ. ಏಕೆಂದರೆ 'ನಿನ್ನ' ಎಂದು ಪ್ರತಿಜ್ಞೆಮಾಡಿರುತ್ತದೆ. (ಇದರ ವಿವರ)· ''ಇವನೇ ನಿನ್ನ ಆತ್ಮನು'' ಎಂದಲ್ಲವೆ ಉತ್ತರದಲ್ಲಿ ಪ್ರತಿಜ್ಞೆ ಮಾಡಿರುತ್ತದೆ ? ಒಂದೇ ಕಾರ್ಯಕರಣಸಂಘಾತಕ್ಕೆ ಇಬ್ಬರು ಆತ್ಮರು (ಎಂಬುದು) ಹೊಂದುವದೂ ಇಲ್ಲ, ಒಂದು ಕಾರ್ಯಕರಣಸಂಘಾತಕ್ಕೆ ಒಬ್ಬ

---

1. **ಭರ್ತೃಪ್ರಪಂಚರು** ಮಾಧ್ಯಂದಿನಪಾಠದಂತೆ ಕಹೋಲಪ್ರಶ್ನೆಯು ಮೊದಲು, ಉಷಸ್ತಪ್ರಶ್ನೆಯು ಆಮೇಲೆ ಬಂದಿದೆ. ಇಲ್ಲಿ ವಿಜ್ಞಾನಾತ್ಮನ ವಿಷಯವನ್ನು ಕೇಳಿದೆ. ಇವನಿಗೆ ಪರಮಾತ್ಮನಲ್ಲಿ ಲಯವನ್ನು ಹೇಳಬೇಕಾಗಿದೆ ಎಂಬುದು ಅವರ ಮತ. ಬೃ. ವಾ. ಟೀ.

ಆತ್ಮ(ನಿರುವದರಿಂ)ದಲೇ(ಅದು)ಆತ್ಮವಂತ(ವೆನಿಸುತ್ತದೆ).[1] ಉಷಸ್ತನಿಗೆ ಒಬ್ಬನು (ಆತ್ಮನು), ಕಹೋಲನಿಗೆ ಮತ್ತೊಬ್ಬನು (ಹಿಂದಿನವನಿಗಿಂತ) ಜಾತಿಯಲ್ಲಿ ಭಿನ್ನನಾದವನು ಆತ್ಮನು ಎಂದೂ ಆಗುವದಿಲ್ಲ.[2] ಏಕೆಂದರೆ ಇಬ್ಬರೂ ಅಗೌಣರು, ಆತ್ಮರು, ಸರ್ವಾಂತರರು ಎಂದು (ಹೇಳುವದು) ಯುಕ್ತವಾಗಲಾರದು ಇವೆರಡರಲ್ಲಿ ಒಂದು ಅಗೌಣವಾದ ಬ್ರಹ್ಮವಾದರೆ, ಮತ್ತೊಂದು ಅವಶ್ಯವಾಗಿ ಗೌಣವಾಗಬೇಕು. ಹೀಗೆಯೇ ಆತ್ಮತ್ವವೂ ಸರ್ವಾಂತರತ್ವವೂ (ಒಂದರಲ್ಲಿ ಮುಖ್ಯವಾದರೆ ಇನ್ನೊಂದರಲ್ಲಿ ಗೌಣವಾಗಬೇಕು); ಏಕೆಂದರೆ (ಈ) ಪದಾರ್ಥಗಳು ವಿರುದ್ಧವಾಗಿರುತ್ತವೆ. ಒಂದು ಸರ್ವಾಂತರವಾಗಿ, ಆತ್ಮನಾಗಿ, ಮುಖ್ಯವಾಗಿ ಬ್ರಹ್ಮವಾಗಿ ಇರುವದೆಂದರೆ ಮತ್ತೊಂದು ಅವಶ್ಯವಾಗಿ ಅಸರ್ವಾಂತರವಾಗಿ ಅನಾತ್ಮನಾಗಿ, ಅಮುಖ್ಯವಾಗಿ ಇರಬೇಕು.[3] ಆದ್ದರಿಂದ ಒಬ್ಬ (ಆತ್ಮನನ್ನೇ) ಎರಡು ಸಾರಿ ಶ್ರುತಿಯಲ್ಲಿ ಹೇಳಿರುವದು ವಿಶೇಷವನ್ನು ಹೇಳಬೇಕೆಂಬ ಇಚ್ಛೆಯಿಂದ. ಎರಡನೆಯ ಪ್ರಶ್ನಾಂತರದಲ್ಲಿ ಹಿಂದೆ ಹೇಳಿದ ಪ್ರಶ್ನೆಗೆ ಸಮಾನವಾಗಿಯೇ ಇದೆಯಲ್ಲ, ಅದಾದರೋ ಹಿಂದೆ (ಹೇಳಿದ್ದ)ರದೇ ಅನುವಾದವು, ಅದೇ (ಆತ್ಮನಿಗೆ) ಯಾವದೋ ಒಂದು (ಹಿಂದೆ) ಹೇಳದೆ ಇರುವ ವಿಶೇಷವನ್ನು ಹೇಳೋಣ(ವೆಂದು ಅನುವಾದಿಸಿದ್ದು).

(ಪ್ರಶ್ನೆ):—ಹಾಗಾದರೆ ಈ ವಿಶೇಷವು ಯಾವದು ?

(ಉತ್ತರ):—ಹೇಳುತ್ತೇವೆ ಹಿಂದಿನ ಪ್ರಶ್ನೆಯಲ್ಲಿ ಯಾವನಿಗೆ ಪ್ರಯೋಜಕಸಹಿತವಾದ ಬಂಧವನ್ನು ಹೇಳಲಾಯಿತೋ ಆ(ಗ್ರಹಾತಿಗ್ರಹ)ವ್ಯತಿರಿಕ್ತನಾದ ಆತ್ಮನು ಇರುತ್ತಾನೆ[4] (ಎಂದು ಹೇಳಲಾಗಿದೆ). ಎರಡನೆಯ (ಪ್ರಶ್ನೆ)ಯಲ್ಲಾ

---

1. ನಿನ್ನ ಆತ್ಮನು ಎಂದೇ ಹೇಳಿರುವಲ್ಲಿ ಮತ್ತೊಬ್ಬ ಆತ್ಮನಿವನು ಎನ್ನುವದಕ್ಕೆ ಕಾರಣವಿಲ್ಲ; ಏಕೆಂದರೆ ಹಿಂದೆ ಹೇಳಿರುವ ಆತ್ಮನೇ ಸಾಕಾಗಿರುವಲ್ಲಿ ಮತ್ತೊಬ್ಬ ಆತ್ಮನನ್ನು ಕಲ್ಪಿಸುವದಕ್ಕೆ ಕಾರಣವಿಲ್ಲ.

2. ಉಷಸ್ತನಿಗೆ ಜೀವಾತ್ಮ, ಕಹೋಲನಿಗೆ ಪರಮಾತ್ಮ ಎಂದು ಹಂಚುವದಕ್ಕೆ ಬರುವದಿಲ್ಲ; ಎರಡು ಕಡೆಯಲ್ಲಿಯೂ ಆತ್ಮಶಬ್ದವೇ ಇದೆ.

3. ಆದ್ದರಿಂದಲೇ ಭರ್ತೃಪ್ರಪಂಚರೂ ಕಹೋಲಪ್ರಶ್ನೆಯಲ್ಲಿ ಹೇಳಿರುವ ಬ್ರಹ್ಮತ್ವಾದಿಗಳು ವಿಜ್ಞಾನಮಯನಾದ ಪರಮಾತ್ಮನಿಗೆ ಸಲ್ಲತಕ್ಕವು ಎಂದು ಭಾಷ್ಯವನ್ನು ಬರೆದಿರುತ್ತಾರೆ. ಆದ್ದರಿಂದ ವಿಜ್ಞಾನಮಯನಿಗೆ ಅವು ಗೌಣವೃತ್ತಿಯಿಂದಲೇ ಸಲ್ಲುತ್ತವೆ ಎಂದು ಅವರೂ ಹೇಳಿದಂತಾಯಿತು. ಆದರೆ ಮುಖ್ಯಾರ್ಥವು ಹೊಂದುವಲ್ಲಿ ಗೌಣವನ್ನು ಒಪ್ಪತಕ್ಕದ್ದು ಸರಿಯಲ್ಲ ಎಂದು ಭಾವ.

4. ಸಾಕ್ಷಿರೂಪದ ಆತ್ಮನ ಅಸ್ತಿತ್ವವನ್ನು ಉಷಸ್ತಪ್ರಶ್ನೆಯಲ್ಲಿ ನಿರ್ಣಯಿಸಿದೆ ಎಂದರ್ಥ.

ದರೋ ಅದೇ ಆತ್ಮನಿಗೆ ಹಸಿವು ಮುಂತಾದ ಸಂಸಾರಧರ್ಮಗಳನ್ನು ಮೀರಿರುವ ನೆಂಬ ವಿಶೇಷವನ್ನು ಹೇಳಿರುತ್ತದೆ. ಈ ವಿಶೇಷವನ್ನು ಸಂನ್ಯಾಸಸಹಿತವಾಗಿ ಅರಿತುಕೊಂಡರೇ ಹಿಂದೆ ಹೇಳಿರುವ ಬಂಧನದಿಂದ ಮುಕ್ತನಾಗುತ್ತಾನೆ. ಆದ್ದರಿಂದ "ಇವನೇ ನಿನ್ನ ಆತ್ಮನು" ಎನ್ನುವವರೆಗಿನ ಪ್ರಶ್ನೋತ್ತರಗಳಿಗೆ ಸಮಾನವಾದ ಅರ್ಥವೇ.

## ಒಬ್ಬ ಆತ್ಮನಿಗೇ ಹಸಿವು ಮುಂತಾದವುಗಳಿರುವದೂ ಇಲ್ಲದ್ದೂ ವಿರುದ್ಧವಲ್ಲ

(ಭಾಷ್ಯ)

೫೪. ನನು ಕಥಮೇಕಸ್ಯೈವ ಆತ್ಮನಃ ಅಶನಾಯಾದ್ಯತೀತತ್ವಂ ತದ್ವತ್ತ್ವಂ ಚ ಇತಿ ವಿರುದ್ಧಧರ್ಮಸಮವಾಯಿತ್ವಮ್ ಇತಿ ? ನ। ಪರಿಹೃತತ್ವಾತ್ । ನಾಮ ರೂಪವಿಕಾರಕಾರ್ಯಕರಣಲಕ್ಷಣಸಂಘಾತೋಪಾಧಿಭೇದಸಂಪರ್ಕಜ ನಿ ತ ಭ್ರಾನ್ತಿ ಮಾತ್ರಂ ಹಿ ಸಂಸಾರಿತ್ವಮ್ ಇತ್ಯಸಕೃತ್ ಅವೋಚಾಮ। ವಿರುದ್ಧಶ್ರುತಿ ವ್ಯಾಖ್ಯಾನಪ್ರಸಙ್ಗೇನ ಚ । ಯಥಾ ರಜ್ಜುಶುಕ್ತಿಕಾಗಗನಾದಯಃ ಸರ್ಪರಜತ ಮಲಿನಾ ಭವನ್ತಿ ಪರಾಧ್ಯಾರೋಪಿತಧರ್ಮವಿಶಿಷ್ಟಾಃ,[1] ಸ್ವತಃ ಕೇವಲಾ ಏವ ರಜ್ಜುಶುಕ್ತಿಕಾಗಗನಾದಯಃ। ನ ಚೈವಂ ವಿರುದ್ಧಧರ್ಮಸಮವಾಯಿತ್ವೇ ಪದಾ ರ್ಥಾನಾಂ ಕಶ್ಚನ ವಿರೋಧಃ। ನಾಮರೂಪೋಪಾಧ್ಯಸ್ತಿತ್ವೇ "ಏಕಮೇವಾದ್ವಿ ತೀಯಮ್" (ಛಾಂ ೬-೨-೧), "ನೇಹ ನಾನಾಸ್ತಿ ಕಿಂಚನ" (೪-೪-೧೯) ಇತಿ ಶ್ರುತಯೋ ವಿರುಧ್ಯೇರನ್ ಇತಿ ಚೇತ್ । ನ । ಸಲಿಲಫೇನದೃಷ್ಟಾನ್ತೇನ ಪರಿಹೃತ ತ್ವಾತ್ ಮೃದಾದಿದೃಷ್ಟಾನ್ತೈಶ್ಚ। ಯದಾ ತು ಪರಮಾರ್ಥದೃಷ್ಟ್ಯಾ ಪರಮಾತ್ಮ ತತ್ತ್ವಾಚ್ಛ್ರುತ್ಯನುಸಾರಿಭಿಃ ಅನ್ಯತ್ವೇನ ನಿರೂಪ್ಯಮಾಣೇ ನಾಮರೂಪೇ ಮೃದಾದಿ ವಿಕಾರವದ್ ವಸ್ತ್ವನ್ತರೇ ತತ್ತ್ವತೋ ನ ಸ್ತಃ, ಸಲಿಲಫೇನಘಟಾದಿವಿಕಾರ ವದೇವ ತದಾ ತದಪೇಕ್ಷ್ಯ "ಏಕಮೇವಾದ್ವಿತೀಯಮ್" (ಛಾಂ. ೬-೨-೧), "ನೇಹ ನಾನಾಸ್ತಿ ಕಿಂಚನ" (೪-೪-೧೯) ಇತ್ಯಾದಿಪರಮಾರ್ಥದರ್ಶನಗೋಚರತ್ವಂ ಪ್ರತಿ ಪದ್ಯತೇ। ಯದಾ ತು ಸ್ವಾಭಾವಿಕ್ಯಾ ಅವಿದ್ಯಯಾ ಬ್ರಹ್ಮಸ್ವರೂಪಂ ರಜ್ಜುಶುಕ್ತಿಕಾ ಗಗನಸ್ವರೂಪವದೇವ ಸ್ವೇನ ರೂಪೇಣ ವರ್ತಮಾನಂ ಕೇನಚಿತ್ ಅಸ್ಪೃಷ್ಟ ಸ್ವಭಾವಮಪಿ ಸತ್ ನಾಮರೂಪಕೃತಕಾರ್ಯಕರಣೋಪಾಧಿಭ್ಯೋ ವಿವೇಕೇನ ನಾವಧಾರ್ಯತೇ, ನಾಮರೂಪೋಪಾಧಿದೃಷ್ಟಿರೇವ ಚ ಭವತಿ ಸ್ವಾಭಾವಿಕೀ ತದಾ ಸರ್ವೋಽಯಂ ವಸ್ತ್ವನ್ತರಾಸ್ತಿತ್ವವ್ಯವಹಾರಃ। ಅಸ್ತಿ ಚಾಯಂ ಭೇದಕೃತೋ

---

1. 'ಧರ್ಮಾ ವಿಶಿಷ್ಟಾಃ' ಎಂಬ ಪಾಠವು ಸರಿಯಲ್ಲ.

ಮಿಥ್ಯಾವ್ಯವಹಾರೋ ಯೇಷಾಂ ಬ್ರಹ್ಮತತ್ತ್ವಾದನ್ಯತ್ವೇನ ವಸ್ತು ವಿದ್ಯತೇ ಯೇಷಾಂ ಚ ನಾಸ್ತಿ। ಪರಮಾರ್ಥವಾದಿಭಿಸ್ತು ಶ್ರುತ್ಯನುಸಾರೇಣ ನಿರೂಪ್ಯಮಾಣೇ ವಸ್ತುನಿ ಕಿಂ ತತ್ತ್ವತೋಽಸ್ತಿ ವಸ್ತು ಕಿಂ ವಾ ನಾಸ್ತೀತಿ ಬ್ರಹ್ಮ ಏಕಮೇವಾದ್ವಿತೀಯಂ ಸರ್ವಸಂವ್ಯವಹಾರಶೂನ್ಯಮ್ ಇತಿ ನಿರ್ಧಾರ್ಯತೇ। ತೇನ ನ ಕಶ್ಚಿದ್ ವಿರೋಧಃ। ನ ಹಿ ಪರಮಾರ್ಥಾವಧಾರಣನಿಷ್ಠಾಯಾಂ ವಸ್ತ್ವಂತರಾಸ್ತಿತ್ವಂ ಪ್ರತಿಪದ್ಯಾಮಹೇ, "ಏಕಮೇವಾದ್ವಿತೀಯಮ್" (ಛಾಂ. ೬-೨೧), "ಅನನ್ತರಮಬಾಹ್ಯಮ್" (೨-೫-೧೯, ೩-೮೮) ಇತಿ ಶ್ರುತೇಃ। ನ ಚ ನಾಮರೂಪವ್ಯವಹಾರಕಾಲೇ ತ್ವವಿವೇಕಿನಾಂ ಕ್ರಿಯಾಕಾರಕಫಲಾದಿಸಂವ್ಯವಹಾರೋ ನಾಸ್ತೀತಿ ಪ್ರತಿಷಿಧ್ಯತೇ। ತಸ್ಮಾತ್ ಜ್ಞಾನಾಜ್ಞಾನೇ ಅಪೇಕ್ಷ್ಯ ಸರ್ವಃ ಸಂವ್ಯವಹಾರಃ ಶಾಸ್ತ್ರೀಯೋ ಲೌಕಿಕಶ್ಚ। ಅತೋ ನ ಕಾಚನ ವಿರೋಧಶಙ್ಕಾ। ಸರ್ವವಾದಿನಾಮಪಿ ಅಪರಿಹಾರ್ಯಃ ಪರಮಾರ್ಥಸಂವ್ಯವಹಾರಕೃತೋ ವ್ಯವಹಾರಃ ॥

(ಭಾಷ್ಯಾರ್ಥ)

(ಆಕ್ಷೇಪ):—ಒಬ್ಬನೇ ಆತ್ಮನಿಗೆ ಹಸಿವು ಮುಂತಾದವುಗಳನ್ನು ಮೀರಿಯೂ ಇರುವದು, ಅವನ್ನುಳ್ಳವನೂ ಆಗಿರುವದು— ಎಂಬ ವಿರುದ್ಧ ಧರ್ಮಗಳ ಸಂಬಂಧವು ಹೇಗೆ (ಆಗಬೇಕು)?[1]

(ಪರಿಹಾರ):—ಹಾಗಲ್ಲ. ಏಕೆಂದರೆ (ಇದನ್ನು ಆಗಲೆ) ಪರಿಹರಿಸಿದ್ದಾಗಿರುತ್ತದೆ.[2] (ಇದರ ವಿವರ): **ಸಂಸಾರಿತ್ವವೆಂಬುದು ನಾಮರೂಪಗಳ ಕಾರ್ಯವಾದ ಕಾರ್ಯಕರಣರೂಪವಾದ ಸಂಘಾತವೆಂಬ ಉಪಾಧಿವಿಶೇಷದ ಸಂಪರ್ಕದಿಂದುಂಟಾದ ಭ್ರಾಂತಿಮಾತ್ರವೇ ಎಂದು ಅನೇಕ ಸಲ ಹೇಳಿರುತ್ತೇವೆ.** ವಿರುದ್ಧವಾದ ಶ್ರುತಿಗಳನ್ನು ವ್ಯಾಖ್ಯಾನಮಾಡುವ ಪ್ರಸಂಗದಿಂದಲೂ (ಹೇಳಿರುತ್ತೇವೆ)[3]. ಹಗ್ಗ, ಕಪ್ಪೆಯಚಿಪ್ಪು, ಆಕಾಶ- ಇವು ಹೇಗೆ ಮತ್ತೊಬ್ಬರು ಅಧ್ಯಾರೋಪಿಸಿದ ಧರ್ಮಗಳಿಂದೊಡಗೂಡಿ ಹಾವು, ಬೆಳ್ಳಿ, ಮಲಿನ (ಎಂದು) ಆಗುವವೋ, ತಾವುತಾವು ಬರಿಯ ಹಗ್ಗ, ಕಪ್ಪೆಯ ಚಿಪ್ಪು, ಆಕಾಶ- ಇವುಗಳೇ

---

1. ನಮ್ಮ ಮತದಲ್ಲಿ ವಿಜ್ಞಾನಾತ್ಮನು ಪರಮಾತ್ಮನ ಏಕದೇಶವಾಗಿರುವದರಿಂದ ಇಬ್ಬರಿಗೂ ಬೇರೆಬೇರೆ ಧರ್ಮಗಳು ಆಗಬಹುದು ಎಂದು ಭರ್ತೃಪ್ರಪಂಚರ ಅನುಯಾಯಿಯ ಭಾವ.

2. ೨-೧-೨೦ರಲ್ಲಿ ಆಕಾಶದೃಷ್ಟಾಂತವನ್ನು ನೋಡಿ.

3. ೨-೫-೧೫ರಲ್ಲಿ ಉದಾಹರಿಸಿರುವ ಶ್ರುತಿಗಳ ಪರಸ್ಪರವಿರೋಧಾಭಾಸದ ಪರಾಮರ್ಶವಿದು (ಭಾ. ಭಾ. ೩೯೯)

ಆಗಿರುವವೋ ಆದರೂ ಹೀಗೆ ಪದಾರ್ಥಗಳಿಗೆ ವಿರುದ್ಧಧರ್ಮಗಳ ಸಂಬಂಧವಿದ್ದದ್ದರಿಂದ (ಹೇಗೆ) ಯಾವ ವಿರೋಧವೂ ಇಲ್ಲವೋ (ಹಾಗೆಯೇ ಇದು).[1]

(ಆಕ್ಷೇಪ):—ನಾಮರೂಪಗಳೆಂಬ ಉಪಾಧಿಯು ಇದ್ದರೆ "ಎರಡನೆಯದಿಲ್ಲದ ಒಂದೇ" (ಛಾಂ ೬-೨-೧), "ಇಲ್ಲಿ ಒಂದಿಷ್ಟೂ ನಾನಾತ್ವವಿಲ್ಲ" (೪ ೪-೧೯) ಎಂಬ ಶ್ರುತಿಗಳು ವಿರುದ್ಧವಾಗುವವಲ್ಲ !

(ಪರಿಹಾರ):—ಹಾಗಲ್ಲ. ಏಕೆಂದರೆ ನೀರುನೊರೆಗಳ ದೃಷ್ಟಾಂತದಿಂದಲೂ ಮಣ್ಣು ಮುಂತಾದವುಗಳ ದೃಷ್ಟಾಂತಗಳಿಂದಲೂ (ಇದನ್ನು) ಪರಿಹಾರಮಾಡಿದ್ದಾಗಿದೆ.[2] (ಇದರ ವಿವರ): **ಯಾವಾಗ ಶ್ರುತ್ಯನುಸಾರಿಗಳಾದವರು–ಮಣ್ಣು ಮುಂತಾದವುಗಳ ಕಾರ್ಯಗಳನ್ನು ಪರೀಕ್ಷಿಸುವಂತೆ–ಪರಮಾರ್ಥದೃಷ್ಟಿಯಿಂದ ಪರಮಾತ್ಮತತ್ತ್ವಕ್ಕಿಂತಲೂ ಬೇರೆಯೆ (ಅಲ್ಲವೆ ಎಂದು) ಪರೀಕ್ಷಿಸುವಲ್ಲಿ–ನೀರಿನ ನೊರೆ, ಗಡಿಗೆ ಮುಂತಾದ ಕಾರ್ಯಗಳಂತೆಯೇ ನಾಮರೂಪಗಳು ನಿಜವಾಗಿ ವಸ್ತ್ವಂತರವಾಗಿರುವದಿಲ್ಲವೋ, ಆಗ ಅದರ ಅಪೇಕ್ಷೆಯಿಂದ "ಒಂದೇ, ಎರಡನೆಯದಿಲ್ಲದ್ದು" (ಛಾ. ೬-೨-೧), "ಇಲ್ಲಿ ಒಂದಿಷ್ಟೂ ನಾನಾತ್ವವಿಲ್ಲ" (೪-೪-೧೯)–ಮುಂತಾದ ಪರಮಾರ್ಥದರ್ಶನಕ್ಕೆ ವಿಷಯತ್ವವನ್ನು ಹೊಂದುತ್ತದೆ.**[3] **ಆದರೆ ಯಾವಾಗ (ಈ) ಬ್ರಹ್ಮಸ್ವರೂಪವು ಹಗ್ಗ, ಕಪ್ಪೆಯಚಿಪ್ಪು, ಆಕಾಶ–ಇವುಗಳ ಸ್ವರೂಪದಂತೆಯೇ ತನ್ನ ರೂಪದಲ್ಲಿಯೇ ಇದ್ದು ಏನೂ ಸೋಂಕದ ಸ್ವಭಾವದ್ದೇ ಆಗಿರುತ್ತಿದ್ದರೂ ಸ್ವಾಭಾವಿಕವಾದ ಅವಿದ್ಯೆಯಿಂದ ನಾಮರೂಪಕೃತಕಾರ್ಯಕರಣೋಪಾಧಿಗಳಿಗಿಂತ ಬೇರೆಯಾಗಿ ವಿವೇಚಿಸಿ ಗೊತ್ತುಪಡಿಸಲ್ಪಡದೆ ಇರುವದೋ ಸ್ವಾಭಾವಿಕವಾದ ನಾಮರೂಪೋಪಾಧಿಯ ದೃಷ್ಟಿಯೇ ಇದ್ದುಕೊಂಡಿರುವದೋ ಆಗಲೇ ವಸ್ತ್ವಂತರವು ಇದೆ ಎಂಬೀ ಎಲ್ಲಾ ವ್ಯವಹಾರವೂ (ಆಗುತ್ತದೆ).** ಯಾರ (ಮತದಲ್ಲಿ) ಬ್ರಹ್ಮತತ್ತ್ವಕ್ಕಿಂತ ಬೇರೆಯಾಗಿ ವಸ್ತುವಿರುವದೋ, ಮತ್ತು ಯಾರ (ಮತದಲ್ಲಿ) ಇಲ್ಲವೋ (ಅವರಿಬ್ಬರಿಗೂ) ಭೇದದಿಂದಾದ ಮಿಥ್ಯಾ

---

1. ಏಕೆಂದರೆ ಆರೋಪಿತಕ್ಕೂ ಆಧಾರವಾದ ಪರಮಾರ್ಥವಸ್ತುವಿಗೂ ಯಾವ ಸಂಬಂಧವೂ ಇರುವದಿಲ್ಲ, ಆತ್ಮನಲ್ಲಿ ಸಂಸಾರಿತ್ವವು ಆರೋಪಿತವಾಗಿರುತ್ತದೆ.

2. ೧-೪-೭ರಲ್ಲಿ(ಭಾ. ಭಾ. ೧೨೦)ಯೂ, ೨-೪-೧೦ (ಭಾ ಭಾ. ೩೬೫)ದಲ್ಲಿಯೂ ಈ ಸಲಿಲಫೇನದೃಷ್ಟಾಂತವನ್ನು ಉದಾಹರಿಸಿದೆ.

3. ಆ ದೃಷ್ಟಿಯಿಂದ ಅದ್ವಿತೀಯಪರಮಾರ್ಥವೊಂದೇ ಸತ್ಯವು ಎಂದಾಗುತ್ತದೆ.

ವ್ಯವಹಾರವುಂಟು.[1] ಆದರೆ ಪರಮಾರ್ಥವಾದಿಗಳು ವಸ್ತುವನ್ನು– ವಸ್ತು ನಿಜವಾಗಿ ಇದೆಯೊ, ಅಥವಾ ಇಲ್ಲವೊ? ಎಂದು–ಶ್ರುತ್ಯನುಸಾರವಾಗಿ ಪರೀಕ್ಷಿಸುವಲ್ಲಿ ಬ್ರಹ್ಮವೊಂದೇ ಅದ್ವಿತೀಯವಾದದ್ದು, ಯಾವ ವ್ಯವಹಾರವೂ ಇಲ್ಲದ್ದು–ಎಂದು ನಿಶ್ಚಯಿಸುತ್ತಾರೆ. ಆದ್ದರಿಂದ (ಇಲ್ಲಿ) ಯಾವ ವಿರೋಧವೂ ಇರುವದಿಲ್ಲ. ಪರಮಾರ್ಥವನ್ನು ನಿಶ್ಚಯಿಸುವ ಅವಸ್ಥೆಯಲ್ಲಿ ಬೇರೊಂದು ವಸ್ತು ಇದೆ ಎಂದೇನೂ (ನಾವು) ತಿಳಿಯುವದಿಲ್ಲ; ಏಕೆಂದರೆ "ಒಂದೇ ತನಗೆರಡನೆಯದಿಲ್ಲದ್ದು" (ಛಾಂ. ೬-೨-೧), "ಒಳಗಿಲ್ಲದ್ದು ಹೊರಗಿಲ್ಲದ್ದು" (೨-೫-೧೯, ೩-೮-೮) ಎಂಬ ಶ್ರುತಿಯಿಂದ (ಇದು ಸಿದ್ಧವಾಗುತ್ತದೆ). ನಾಮರೂಪಗಳ ವ್ಯವಹಾರದ ಕಾಲದಲ್ಲಿ ಅವಿವೇಕಿಗಳಿಗೆ ಕ್ರಿಯಾಕಾರಕಫಲಾದಿಸಂವ್ಯವಹಾರವು ಇಲ್ಲವೆಂದೇನೂ ಹೇಳುವದಿಲ್ಲ. ಆದ್ದರಿಂದ ಜ್ಞಾನಾಜ್ಞಾನಗಳ ಅಪೇಕ್ಷೆಯಿಂದ ಶಾಸ್ತ್ರೀಯವಾದ ಮತ್ತು ಲೌಕಿಕವಾದ ಎಲ್ಲಾ ಸಂವ್ಯವಹಾರವೂ (ಆಗುತ್ತದೆ). ಆದ್ದರಿಂದ ಯಾವ ವಿರೋಧದ ಶಂಕೆಯೂ ಇರುವದಿಲ್ಲ. ಪರಮಾರ್ಥ, ಸಂವ್ಯವಹಾರ–ಇವುಗಳಿಂದಾಗುವ ವ್ಯವಹಾರವನ್ನು ಯಾವ ವಾದಿಗಳೂ ತಪ್ಪಿಸಿಕೊಳ್ಳುವದಕ್ಕಾಗುವದಿಲ್ಲ.[2]

## ಆತ್ಮನು ಷಡೂರ್ಮಿಗಳನ್ನು ಮೀರಿರುತ್ತಾನೆ

(ಭಾಷ್ಯ)

೫೫ ತತ್ರ ಪರಮಾರ್ಥಾತ್ಮಸ್ವರೂಪಮಪೇಕ್ಷ್ಯ ಪ್ರಶ್ನಃ ಪುನಃ 'ಕತಮೋ ಯಾಜ್ಞವಲ್ಕ್ಯ ಸರ್ವಾನ್ತರಃ' ಇತಿ। ಪ್ರತ್ಯಾಹೇತರಃ। ಯೋಽಶನಾಯಾಪಿಪಾಸೇ। ಅಶಿತುಮಿಚ್ಛಾ ಅಶನಾಯಾ, ಪಾತುಮಿಚ್ಛಾ ಪಿಪಾಸಾ। ತೇ ಅಶನಾಯಾಪಿಪಾಸೇ ಯೋಽತ್ಯೇತೀತಿ ಇತಿ ವಕ್ಷ್ಯಮಾಣೇನ ಸಂಬನ್ಧಃ। ಅವಿವೇಕಿಭಿಃ ತಲಮಲವದಿವ ಗಗನಂ ಗಮ್ಯಮಾನಮೇವ ತಲಮಲೇ ಅತ್ಯೇತಿ। ಪರಮಾರ್ಥತಸ್ತಾಭ್ಯಾಮ್ ಅಸಂಸ್ಪೃಷ್ಟಸ್ವಭಾವತ್ವಾತ್। ತಥಾ ಮೂಢೈಃ ಅಶನಾಯಾಪಿಪಾಸಾದಿಮದ್ ಬ್ರಹ್ಮ ಗಮ್ಯಮಾನಮಪಿ 'ಕ್ಷುಧಿತೋಽಹಮ್', 'ಪಿಪಾಸಿತೋಽಹಮ್'

---

1. ದೇಹಾದಿಗಳನ್ನು ನಾನು ಎಂದು ವ್ಯವಹರಿಸುವಮಾತ್ರದಿಂದ ದೇಹಾದಿಗಳೇ ಆತ್ಮನು ಎಂದು ದೇಹಾತಿರಿಕ್ತಾತ್ಮವಾದಿಗಳೇನೂ ಒಪ್ಪುವದಿಲ್ಲ, ಇದರಂತೆ ಮಿಕ್ಕ ವಾದಿಗಳಿಗೂ ಮಿಥ್ಯಾವಸ್ತುವ್ಯವಹಾರವುಂಟು. ಪ್ರತೀತಿಯಿದ್ದಮಾತ್ರದಿಂದ ಅದು ನಿಜವಾಗಿ ಹಾಗೆಯೇ ಇದೆ ಎಂಬುದನ್ನು ಯಾರೂ ಒಪ್ಪುವದಿಲ್ಲ.

2. ಅದ್ವೈತಿಗಳಲ್ಲದ ವಾದಿಗಳೂ ದೇಹವನ್ನೇ ಆತ್ಮನೆಂದು ವ್ಯವಹರಿಸುವದು ಅವಿದ್ಯಾಕೃತವ್ಯವಹಾರವೆಂದೂ ದೇಹಾತಿರಿಕ್ತನಾದ ಆತ್ಮನನ್ನು ಆತ್ಮನೆಂದು ವ್ಯವಹರಿಸುವದು ಪರಮಾರ್ಥವ್ಯವಹಾರವೆಂದೂ ಹೇಳುತ್ತಾರೆ. ಹೀಗೆಯೇ ಮಿಕ್ಕ ವಾದಿಗಳೂ ಈ ವ್ಯವಹಾರದ್ವಯವನ್ನು ಕೆಲಕೆಲವಂಶದಲ್ಲಿ ಒಪ್ಪುತ್ತಾರೆ.

ಇತಿ ತೇ ಅತ್ಯೇತ್ಯೇವ | ಪರಮಾರ್ಥತಸ್ತಾಭ್ಯಾಮ್ ಅಸಂಸ್ಪೃಷ್ಟಸ್ವಭಾವತ್ವಾತ್ | "ನ ಲಿಪ್ಯತೇ ಲೋಕದುಃಖೇನ ಬಾಹ್ಯಃ" (ಕ. ೨-೨-೧೧) ಇತಿ ಶ್ರುತೇಃ | ಅವಿದ್ವಲ್ಲೋಕಾಧ್ಯಾರೋಪಿತದುಃಖೇನ ಇತ್ಯರ್ಥಃ | ಪ್ರಾಣೈಕಧರ್ಮತ್ವಾತ್ ಸಮಾಸಕರಣಮ್ ಅಶನಾಯಾಪಿಪಾಸಯೋಃ | ಶೋಕಂ ಮೋಹಮ್ ಶೋಕ ಇತಿ ಕಾಮಃ | ಇಷ್ಟಂ ವಸ್ತೂದ್ದಿಶ್ಯ ಚಿನ್ತಯತಃ ಯದರಮಣಂ ತತ್ ತೃಷ್ಣಾಭಿಭೂತಸ್ಯ ಕಾಮಬೀಜಮ್ | ತೇನ ಹಿ ಕಾಮೋ ದೀಪ್ಯತೇ | ಮೋಹಸ್ತು ವಿಪರೀತಪ್ರತ್ಯಯಪ್ರಭವೋಽವಿವೇಕೋ ಭ್ರಮಃ | ಸ ಚ ಅವಿದ್ಯಾ ಸರ್ವಸ್ಯಾನರ್ಥಸ್ಯ ಪ್ರಸವಬೀಜಮ್ | ಭಿನ್ನಕಾರ್ಯತ್ವಾತ್ ತಯೋಃ ಶೋಕಮೋಹಯೋಃ ಅಸಮಾಸಕರಣಮ್ | ತೌ ಮನೋಽಧಿಕರಣೌ | ತಥಾ ಶರೀರಾಧಿಕರಣೌ ಜರಾಂ ಮೃತ್ಯುಂ ಚ ಅತ್ಯೇತಿ | ಜರಾ ಇತಿ ಕಾರ್ಯಕರಣಸಂಘಾತವಿಪರಿಣಾಮಃ, ವಲೀಪಲಿತಾದಿಲಿಙ್ಗಃ | ಮೃತ್ಯುಃ ಇತಿ ತದ್ವಿಚ್ಛೇದಃ ವಿಪರಿಣಾಮಾವಸಾನಃ | ತೌ ಜರಾಮೃತ್ಯೂ ಶರೀರಾಧಿಕರಣೌ ಅತ್ಯೇತಿ | ಯೇ ತೇ ಅಶನಾಯಾದಯಃ ಪ್ರಾಣಮನಃಶರೀರಾಧಿಕರಣಾಃ ಪ್ರಾಣಿಷು ಅನವರತಂ ವರ್ತಮಾನಾಃ ಅಹೋರಾತ್ರಾದಿವತ್ ಸಮುದ್ರೋರ್ಮಿವಚ್ಚ ಪ್ರಾಣಿಷು ಸಂಸಾರ ಇತ್ಯುಚ್ಯನ್ತೇ ||

(ಭಾಷ್ಯಾರ್ಥ)

ಇಲ್ಲಿ ಪರಮಾರ್ಥವಾದ ಆತ್ಮಸ್ವರೂಪದ ಅಪೇಕ್ಷೆಯಿಂದ ಮತ್ತೆ ಪ್ರಶ್ನೆ (ಯನ್ನು ಕೇಳಿರುತ್ತದೆ) 'ಯಾಜ್ಞವಲ್ಕ್ಯನೆ, ಸರ್ವಾಂತರ(ನಾದ ಆತ್ಮನು) ಯಾರು '' (ಇದಕ್ಕೆ) ಇನ್ನೊಬ್ಬನಾದ (ಯಾಜ್ಞವಲ್ಕ್ಯನು) ಉತ್ತರವನ್ನು ಹೇಳುತ್ತಾನೆ ಯಾವನು ಅಶನಾಯಾಪಿಪಾಸೆಗಳನ್ನು– ತಿನ್ನಬೇಕೆಂಬ ಇಚ್ಛೆಯೇ **ಅಶನಾಯೆ** (ಹಸಿವು), ಕುಡಿಯಬೇಕೆಂಬ ಇಚ್ಛೆಯೇ **ಪಿಪಾಸೆ** (ನೀರಡಿಕೆ); ಆ ಅಶನಾಯಾಪಿಪಾಸೆಗಳನ್ನು ಯಾವನು 'ಅತಿಕ್ರಮಿಸುವನೋ' ಎಂದು ಮುಂದೆ ಹೇಳಿರುವ ಮಾತಿನೊಡನೆ (ಇದಕ್ಕೆ) ಸಂಬಂಧ(ವನ್ನು ಮಾಡಿಕೊಳ್ಳಬೇಕು) ಅವಿವೇಕಿಗಳು ತಲದಲ್ಲಿ ಮಲವುಳ್ಳದ್ದೆಂದು ತಿಳಿದುಕೊಂಡಿರುವಾಗಲೇ ಆಕಾಶವು (ಆ) ತಲಮಲಗಳನ್ನು ಅತಿಕ್ರಮಿಸಿರುತ್ತದೆ ಏಕೆಂದರೆ ಪರಮಾರ್ಥವಾಗಿ ಅವುಗಳೆರಡರಿಂದ ಸಂಬದ್ಧವಾಗದಿರುವದೇ (ಅದರ) ಸ್ವಭಾವವಾಗಿರುತ್ತದೆ. ಹಾಗೆಯೇ ಮೂಢರು ಹಸಿವುಬಾಯಾರಿಕೆಗಳುಳ್ಳದ್ದೆಂದು 'ನನಗೆ ಹಸಿವಾಗಿದೆ', 'ನನಗೆ ನೀರಡಿಕೆಯಾಗಿದೆ' ಎಂದು ತಿಳಿದುಕೊಂಡಿರುವರಾದರೂ(ಆಗಲೇ)ಬ್ರಹ್ಮವು ಅವುಗಳನ್ನು ಅತಿಕ್ರಮಿಸಿರುತ್ತದೆ, ಏಕೆಂದರೆ ಪರಮಾರ್ಥವಾಗಿ ಅವುಗಳೆರಡರಿಂದ ಸಂಬದ್ಧವಾಗದಿರುವದೇ (ಅದರ) ಸ್ವಭಾವವಾಗಿರುತ್ತದೆ. " ಹೊರಚಾಗಿರುವ (ಆತನು)ಲೋಕದುಃಖದಿಂದ ಲಿಪ್ತನಾಗಿರುವದಿಲ್ಲ'' (ಕ. ೨-೨-೧೦) ಎಂಬ ಶ್ರುತಿಯಿಂದ(ಇದು ಸಿದ್ಧವಾಗುತ್ತದೆ. ಇಲ್ಲಿ ಲೋಕದುಃಖದಿಂದ ಎಂದರೆ) ಅಜ್ಞಜನರು

ಅಧ್ಯಾರೋಪಿಸಿರುವ ದುಃಖದಿಂದ ಎಂದರ್ಥ. (ಈ ಎರಡೂ) ಪ್ರಾಣವೆಂಬ ಒಂದ ರದೇ ಧರ್ಮಗಳಾಗಿರುವದರಿಂದ ಅಶನಾಯಾಪಿಪಾಸೆಗಳನ್ನು ಸಮಾಸಮಾಡಿ ಹೇಳಿರುತ್ತದೆ.

'ಶೋಕವನ್ನೂ ಮೋಹವನ್ನೂ' (ಎಂಬಲ್ಲಿ) ಶೋಕವೆಂದರೆ ಕಾಮವು. ಇಷ್ಟ ವಾದ ವಸ್ತುವನ್ನು ಉದ್ದೇಶಿಸಿ (ಅದನ್ನೇ) ಚಿಂತಿಸುತ್ತಿರುವವನಿಗೆ ಅರತಿಯುಂಟಾ ಗುವದಷ್ಟೆ, ಅದು ತೃಷ್ಣೆಗೆ ಒಳಗಾದವನಿಗೆ ಕಾಮ(ವುಂಟಾಗುವದಕ್ಕೆ) ಕಾರಣವು. ಆದರಿಂದಲೇ ಅಲ್ಲವೆ, ಕಾಮವು ದೀಪ್ತವಾಗುತ್ತದೆ?[1] ಮೋಹವೆಂಬುದಾದರೋ ವಿಪರೀತಪ್ರತ್ಯಯದಿಂದುಂಟಾದ ಅವಿವೇಕವು, ಭ್ರಾಂತಿಯು[2], ಅದೇ ಸರ್ವಾನರ್ಥ ಗಳೂ ಉಂಟಾಗುವದಕ್ಕೆ ಕಾರಣವಾಗಿರುವ ಅವಿದ್ಯೆ. ಬೇರೆಬೇರೆಯ ಕಾರ್ಯ ವುಳ್ಳವಾದ್ದರಿಂದ[3] ಆ ಶೋಕಮೋಹಗಳನ್ನು ಸಮಾಸಮಾಡಿ ಹೇಳಿಲ್ಲ. ಅವು ಮನಸ್ಸೆಂಬ ಆಶ್ರಯವುಳ್ಳವುಗಳು[4] ಹಾಗೂ ಶರೀರವೆಂಬ ಆಶ್ರಯವುಳ್ಳ ಜರೆ ಯನ್ನೂ (ಮುಪ್ಪನ್ನೂ) ಮೃತ್ಯುವನ್ನೂ (ಸಾವನ್ನೂ) ಅತಿಕ್ರಮಿಸಿರುತ್ತಾನೆ. ಜರೆ ಎಂದರೆ ಕಾರ್ಯಕರಣಸಂಘಾತದಲ್ಲಾಗುವ ವಿಪರಿಣಾಮವು[5], ಸುಕ್ಕು, ನರೆ-ಮುಂತಾದವು ಅದರ ಚಿಹ್ನೆಗಳು ಮೃತ್ಯು ಎಂದರೆ ಅದರ ನಾಶವು, ವಿಪರಿ ಣಾಮದ ಕೊನೆಯು.[6] ಆ ಶರೀರಾಶ್ರಯವುಳ್ಳ ಜರಾಮೃತ್ಯುಗಳನ್ನು ಅತಿಕ್ರಮಿ ಸಿರುತ್ತಾನೆ.

ಈ ಪ್ರಾಣಮನಃಶರೀರಗಳೆಂಬ ಆಶ್ರಯವುಳ್ಳ ಅಶನಾಯಾದಿಗಳುಂಟಲ್ಲ,

---

1. ಆದ್ದರಿಂದ ಕಾಮಕ್ಕೆ ಕಾರಣವಾಗಿರುವ ಅರತಿರೂಪವಾದ ಶೋಕವನ್ನು ಕಾಮ ಎಂಬರ್ಥದಲ್ಲಿ ಇಲ್ಲಿ ಉಪಯೋಗಿಸಿರುತ್ತದೆ ಎಂದು ಅಭಿಪ್ರಾಯ.

2. ತಪ್ಪುತಿಳಿವಳಿಕೆಯು ಒಂದು ವಸ್ತುವನ್ನು ಇನ್ನೊಂದಾಗಿ ತಿಳಿಸುತ್ತದೆ; ಅದ ರಿಂದ ಅದೇ ಎಂಬ ಭ್ರಾಂತಿಯುಂಟಾಗುತ್ತದೆ ಎಂದು ವಿಪರೀತಪ್ರತ್ಯಯಕ್ಕೂ ಮೋಹಕ್ಕೂ ಸ್ವಲ್ಪ ತಾರತಮ್ಯವನ್ನು ಕಲ್ಪಿಸಬೇಕು.

3. ಅರತಿಯಿಂದ ಪ್ರವೃತ್ತಿಯುಂಟಾಗುತ್ತದೆ; ಮೋಹದಿಂದ ಅನರ್ಥಪರಂಪರೆ ಗಳುಂಟಾಗುತ್ತವೆ. ಇವೇ ಶೋಕಮೋಹಗಳ ಭಿನ್ನಕಾರ್ಯಗಳು. ಕಾಮಕ್ಕೆ ಶೋಕವು ಕಾರಣವು ಮೋಹವು ದುಃಖಕ್ಕೆ ಕಾರಣವು, ಎಂಬುದು ಭಿನ್ನಕಾರ್ಯಗಳೆಂಬ ಆ|| ಟೀಕೆ ಸರಿ ಯಲ್ಲ. ಮೋಹವು ಸರ್ವಾನರ್ಥಗಳಿಗೂ ನಿಮಿತ್ತಕಾರಣವು, ಮೂಲಾವಿದ್ಯೆಯು ಉಪಾ ದಾನಕಾರಣವು ಎಂಬ ಆ|| ವ್ಯಾಖ್ಯಾನಕ್ಕೂ ಯಾವ ಭಾಷ್ಯದ ಆಧಾರವೂ ಇಲ್ಲ.

4. ಮನಸ್ಸೇ ಅವಿದ್ಯೆಗೆ ಆಶ್ರಯವೆಂದಿರುವದನ್ನು ಲಕ್ಷಿಸಬೇಕು.

5. ವಿಕಾರವು.

6. ಏಕೆಂದರೆ ಮರಣವಾದಮೇಲೆ ವಿಕಾರಿಯೇ ಇರುವದಿಲ್ಲ.

(ಇವು) ಪ್ರಾಣಿಗಳಲ್ಲಿ ಹಗಲುರಾತ್ರಿಗಳೇ ಮುಂತಾದವುಗಳಂತೆಯೂ[1] ಸಮುದ್ರದ ಅಲೆಗಳಂತೆಯೂ[2] ಎಡೆಬಿಡದೆ ಇದ್ದುಕೊಂಡಿರುವದಾಗಿ **ಸಂಸಾರವೆನಿಸುತ್ತವೆ.**

## ಆತ್ಮತತ್ತ್ವವನ್ನು ತಿಳಿದವರಿಗೆ ಏಷಣಾತ್ರಯತ್ಯಾಗ

(ಭಾಷ್ಯ)

೫೬. ಯೋಽಸೌ ದೃಷ್ಟೇರ್ದ್ರಷ್ಟಾ ಇತ್ಯಾದಿಲಕ್ಷಣಃ ಸಾಕ್ಷಾತ್ ಅವ್ಯವಹಿತಃ, ಅಪರೋಕ್ಷಾತ್ ಅಗೌಣಃ, ಸರ್ವಾನ್ತರ ಆತ್ಮಾ ಬ್ರಹ್ಮಾದಿಸ್ತಮ್ಬಪರ್ಯನ್ತಾನಾಂ ಭೂತಾನಾಮ್ ಅಶನಾಯಾಪಿಪಾಸಾದಿಭಿಃ ಸಂಸಾರಧರ್ಮೈಃ ಸದಾ ನ ಸ್ಪೃಶ್ಯತೇ ಆಕಾಶ ಇವ ಘನಾದಿಮಲೈಃ | ತಮೇತಂ ವೈ ಆತ್ಮಾನಂ ಸ್ವಂ ತತ್ತ್ವಂ ವಿದಿತ್ವಾ ಜ್ಞಾತ್ವಾ, 'ಅಯಮಹಮಸ್ಮಿ ಪರಂ ಬ್ರಹ್ಮ ಸದಾ ಸರ್ವಸಂಸಾರವಿನಿರ್ಮುಕ್ತಂ ನಿತ್ಯತೃಪ್ತಮ್' ಇತಿ ಬ್ರಾಹ್ಮಣಾಃ–ಬ್ರಾಹ್ಮಣಾನಾಮೇವ ಅಧಿಕಾರೋ ವ್ಯುತ್ಥಾನೇ | ಅತೋ ಬ್ರಾಹ್ಮಣಗ್ರಹಣಮ್–ವ್ಯುತ್ಥಾಯ ವೈಪರೀತ್ಯೇನ ಉತ್ಥಾನಂ ಕೃತ್ವಾ | ಕುತ ಇತಿ ? ಆಹ-ಪುತ್ರೈಷಣಾಯಾಃ ಪುತ್ರಾರ್ಥೈಷಣಾ ಪುತ್ರೈಷಣಾ| ಪುತ್ರೇಣ ಇಮಂ ಲೋಕಂ ಜಯೇಯಮ್ ಇತಿ ಲೋಕಜಯಸಾಧನಂ ಪುತ್ರಂ ಪ್ರತಿ ಇಚ್ಛಾ ಏಷಣಾ ದಾರಸಂಗ್ರಹಃ | ದಾರಸಂಗ್ರಹಮ್ ಅಕೃತ್ವಾ ಇತ್ಯರ್ಥಃ | ವಿತ್ತೈಷಣಾಯಾಶ್ಚ | ಕರ್ಮಸಾಧನಸ್ಯ ಗವಾದೇಃ ಉಪಾದಾನಮ್, ಅನೇನ ಕರ್ಮ ಕೃತ್ವಾ ಪಿತೃಲೋಕಂ ಜೇಷ್ಯಾಮೀತಿ | ವಿದ್ಯಾಸಂಯುಕ್ತೇನ ವಾ ದೇವಲೋಕಮ್, ಕೇವಲಯಾ ವಾ ಹಿರಣ್ಯಗರ್ಭಾದಿವಿದ್ಯಯಾ ದೈವೇನ ವಿತ್ತೇನ ದೇವಲೋಕಮ್ | ದೈವಾದ್ ವಿತ್ತಾತ್ ವ್ಯುತ್ಥಾನಮೇವ ನಾಸ್ತೀತಿ ಕೇಚಿತ್ | ಯಸ್ಮಾತ್ ತದ್ಬಲೇನ ಹಿ ಕಿಲ ವ್ಯುತ್ಥಾನಮಿತಿ| ತದಸತ್ 'ಏತಾವಾನ್ ವೈ ಕಾಮಃ" (೧-೪-೧೭)ಇತಿ ಪಠಿತತ್ವಾತ್ ಏಷಣಾಮಧ್ಯೇ ದೈವಸ್ಯ ವಿತ್ತಸ್ಯ | ಹಿರಣ್ಯಗರ್ಭಾದಿದೇವತಾವಿಷಯೈವ ವಿದ್ಯಾ (ದೈವಂ)[3] ವಿತ್ತಮ್ ಇತ್ಯುಚ್ಯತೇ| ದೇವಲೋಕಹೇತುತ್ವಾತ್ | ನ ಹಿ ನಿರುಪಾಧಿಕಪ್ರಜ್ಞಾನಘನವಿಷಯಾ ಬ್ರಹ್ಮವಿದ್ಯಾ ದೇವಲೋಕಪ್ರಾಪ್ತಿಹೇತುಃ | "ತಸ್ಮಾತ್ ತತ್ಸರ್ವಮಭವತ್" (೧-೪-೧೦), "ಆತ್ಮಾ ಹ್ಯೇಷಾಂ ಸ ಭವತಿ'( -೪-೧), ಇತಿ ಶ್ರುತೇಃ | ತದ್ಬಲೇನ ಹಿ ವ್ಯುತ್ಥಾನಮ್| " ಏತಂ ವೈ

---

1. ಇಲ್ಲಿ ಮುಂತಾದವುಗಳೆಂಬ ಮಾತಿನಿಂದ ಮತ್ತೆಮತ್ತೆ ಬರುವ ಋತುಗಳೇ ಮುಂತಾದವುಗಳನ್ನು ಗ್ರಹಿಸಬಹುದು.

2. ಆದ್ದರಿಂದಲೇ ಇವಕ್ಕೆ ಊರ್ಮಿಷಟ್ಕವೆಂಬ ಹೆಸರನ್ನು ಈಚಿನ ವೇದಾಂತಿಗಳು ಕೊಟ್ಟಿರುತ್ತಾರೆ. ಇವುಗಳು ಶರೀರಪ್ರಾಣಮನಸ್ಸುಗಳ ಧರ್ಮಗಳೇ, ಆತ್ಮನ ಧರ್ಮವಲ್ಲ; ಆದ್ದರಿಂದ ಆತ್ಮನು ಪರಮಾರ್ಥವಾಗಿ ಅಸಂಸಾರಿ ಎಂದು ಭಾವ.

3. ಈ ಮಾತು ಮೂಲದಲ್ಲಿದ್ದು ಲೇಖಕರು ಕೈಬಿಟ್ಟಿರಬಹುದು.

ತಮಾತ್ಮಾನಂ ವಿದಿತ್ವಾ" (೩-೫-೧)ಇತಿ ವಿಶೇಷವಚನಾತ್। ತಸ್ಮಾತ್ ತ್ರಿಭ್ಯೋಽ ಪ್ಯೇಭ್ಯೋಽನಾತ್ಮಲೋಕಪ್ರಾಪ್ತಿಸಾಧನೇಭ್ಯ ಏಷಣಾವಿಷಯೇಭ್ಯೋ ವ್ಯುತ್ಥಾಯ। ಏಷಣಾ ಕಾಮಃ "ಏತಾವಾನ್ ವೈ ಕಾಮಃ'' (೧-೪.೧೭) ಇತಿ ಶ್ರುತೇಃ। ಏತಸ್ಮಿನ್ ತ್ರಿವಿಧೇ ಅನಾತ್ಮಲೋಕಪ್ರಾಪ್ತಿಸಾಧನೇ ತೃಷ್ಣಾಮ್ ಅಕೃತ್ವಾ ಇತ್ಯರ್ಥಃ। ಸರ್ವಾ ಹಿ ಸಾಧನೇಚ್ಛಾ ಫಲೇಚ್ಛೈವ। ಅತೋ ವ್ಯಾಚಷ್ಟೇ ಶ್ರುತಿರೇಕೈವ ಏಷಣೇತಿ। ಕಥಮ್ ? ಯಾ ಹ್ಯೇವ ಪುತ್ರೈಷಣಾ ಸಾ ವಿತ್ತೈಷಣಾ। ದೃಷ್ಟಫಲಸಾಧನತ್ವತುಲ್ಯತ್ವಾತ್। ಯಾ ವಿತ್ತೈಷಣಾ ಸಾ ಲೋಕೈಷಣಾ। ಫಲಾರ್ಥೈವ ಸಾ। ಸರ್ವಃ ಫಲಾರ್ಥಪ್ರಯುಕ್ತ ಏವ ಹಿ ಸರ್ವಂ ಸಾಧನಮ್ ಉಪಾದತ್ತೇ। ಅತ ಏಕೈವೈಷಣಾ ಯಾ ಲೋಕೈಷಣಾ। ಸಾ ಸಾಧನಮನ್ತರೇಣ ಸಂಪಾದಯಿತುಂ ನ ಶಕ್ಯತ ಇತಿ। ಸಾಧ್ಯಸಾಧನಭೇದೇನ ಉಭೇ ಹಿ ಯಸ್ಮಾತ್ ಏತೇ ಏಷಣೇ ಏವ ಭವತಃ। ತಸ್ಮಾತ್ ಬ್ರಹ್ಮವಿದೋ ನಾಸ್ತಿ ಕರ್ಮ ಕರ್ಮಸಾಧನಂ ವಾ। ಅತೋ ಯೇ ಅತಿಕ್ರಾನ್ತಾ ಬ್ರಾಹ್ಮಣಾಃ ಸರ್ವಂ ಕರ್ಮ ಕರ್ಮಸಾಧನಂ ಚ ಸರ್ವಂ ದೇವಪಿತೃಮಾನುಷನಿಮಿತ್ತಂ ಯಜ್ಞೋಪವೀತಾದಿ। ತೇನ ಹಿ ದೈವಂ ಪಿತ್ರ್ಯಂ ಮಾನುಷಂ ಚ ಕರ್ಮ ಕ್ರಿಯತೇ। ''ನಿವೀತಂ ಮನುಷ್ಯಾಣಾಮ್'' (ತೈ ಸಂ. ೨-೫ ೧೧-೧) ಇತ್ಯಾದಿಶ್ರುತೇಃ। ತಸ್ಮಾತ್ ಪೂರ್ವೇ ಬ್ರಾಹ್ಮಣಾಃ ಬ್ರಹ್ಮವಿದೋ ವ್ಯುತ್ಥಾಯ ಕರ್ಮಭ್ಯಃ ಕರ್ಮಸಾಧನೇಭ್ಯಶ್ಚ ಯಜ್ಞೋಪವೀತಾದಿಭ್ಯಃ ಪರಮಹಂಸಪಾರಿವ್ರಾಜ್ಯಂ ಪ್ರತಿಪದ್ಯ ಭಿಕ್ಷಾಚರ್ಯಂ ಚರನ್ತಿ। ಭಿಕ್ಷಾರ್ಥಂ ಚರಣಂ ಭಿಕ್ಷಾಚರ್ಯಂ ಚರನ್ತಿ ತ್ಯಕ್ತ್ವಾ ಸ್ಮಾರ್ತಂ ಲಿಙ್ಗಂ ಕೇವಲಮ್ ಆಶ್ರಮಮಾತ್ರಶರಣಾನಾಂ ಜೀವನಸಾಧನಂ ಪಾರಿವ್ರಾಜ್ಯವ್ಯಞ್ಜಕಮ್। "ವಿದ್ವಾಲ್ಲಿಙ್ಗವರ್ಜಿತಃ" ( ? ),[1] "ತಸ್ಮಾದಲಿಙ್ಗೋ ಧರ್ಮಜ್ಞಃ'' (ಅಶ್ವ ೪೬-೫೧)[2], "ಅವ್ಯಕ್ತಲಿಙ್ಗೋಽವ್ಯಕ್ತಾಚಾರಃ'' (ವ ೧೦-೧೨)[3], ಇತ್ಯಾದಿ

---

1. ಇದು ಯಾವ ಸ್ಮೃತಿ ಎಂಬುದು ತಿಳಿಯಲಿಲ್ಲ, ಇದನ್ನು ಮುಂದೆ ಭಾ. ಭಾ. ೬೧ರಲ್ಲಿಯೂ ಉದಾಹರಿಸಿದೆ.

2. "ಯತ್ರ ಜ್ಞಾನವತಾಂ ಪ್ರಾಪ್ತಿರಲಿಙ್ಗಗ್ರಹಣಾ ಸ್ಮೃತಾ। ತಸ್ಮಾದಲಿಙ್ಗಧರ್ಮಜ್ಞೋ ಧರ್ಮತತ್ತ್ವಮುಪಾಚರೇತ್" ಎಂದು ಅಚ್ಚಿನ ಭಾರತದ ಪಾಠ. ಭಾಷ್ಯದ ಅಚ್ಚಿನ ಪುಸ್ತಕಗಳಲ್ಲೆಲ್ಲಾ "ಅಲಿಙ್ಗೋ" ಎಂದೇ ಇದೆ.

3. ವಸಿಷ್ಠಸ್ಮೃತಿಯಲ್ಲಿ "ಅವ್ಯಕ್ತಲಿಙ್ಗೋಽವ್ಯಕ್ತಾಚಾರೋಽನುನ್ಮತ್ತ ಉನ್ಮತ್ತವೇಷಃ" ಎಂಬ ಪೂರ್ಣವಾಕ್ಯವಿದೆ. ಭಾಷ್ಯದಲ್ಲಿ ಉದಾಹರಿಸಿರುವದು ಅದೇ ಸ್ಮೃತಿಯಿಂದಲೋ ಅಲ್ಲವೋ, ತಿಳಿಯಲಿಲ್ಲ.

ಸ್ಮೃತಿಭ್ಯಃ| "ಅಥ ಪರಿವ್ರಾಡ್ವಿವರ್ಣವಾಸಾ ಮುಣ್ಡೋಽಪರಿಗ್ರಹಃ" (ಜಾ. ೫) ಇತ್ಯಾದಿ ಶ್ರುತೇಃ| "ಸಶಿಖಾನ್ ಕೇಶಾನ್ನಿಕೃತ್ಯ ವಿಸೃಜ್ಯ ಯಜ್ಞೋಪವೀತಮ್" (ಕ. ರು ೧)[1] ಇತಿ ಚ ||

(ಭಾಷ್ಯಾರ್ಥ)

ಈ 'ದೃಷ್ಟೇರ್ದ್ರಷ್ಟಾ' (೩-೪-೨) ಮುಂತಾದ ಸ್ವರೂಪದವನೂ ಸಾಕ್ಷಾತ್ತಾಗಿ (ಯಾವ) ವ್ಯವಧಾನವೂ ಇಲ್ಲದಿರುವವನೂ ಆದ, ಅಪರೋಕ್ಷವಾಗಿ ಗೌಣನಲ್ಲದಿರುವ, ಬ್ರಹ್ಮಾದಿಸ್ತಂಬಪರ್ಯಂತವಾಗಿರುವ ಪ್ರಾಣಿಗಳ ಸರ್ವಾಂತರನಾದ ಆತ್ಮನಾಗಿದ್ದು ಆಕಾಶವು ಮೋಡ ಮುಂತಾದವುಗಳ ಕೊಳಕಿನಿಂದ ಎಂದೆಂದಿಗೂ (ಸೋಂಕುವಡೆಯದೆ) ಇರುವಂತೆ ಹಸಿವುಬಾಯಾರಿಕೆ ಮುಂತಾದ ಸಂಸಾರ ಧರ್ಮಗಳಿಂದ ಸೋಂಕುವಡೆಯದೆ ಇರುವನಲ್ಲ, ಆ ಈ ಆತ್ಮನನ್ನು, ತನ್ನ ತತ್ತ್ವವನ್ನು, ಅರಿತುಕೊಂಡು, "ಇಗೋ ಈ ನಾನು ಎಂದೆಂದಿಗೂ ಸರ್ವಸಂಸಾರ ಧರ್ಮಗಳಿಂದಲೂ ವಿನಿರ್ಮುಕ್ತವಾಗಿರುವ ನಿತ್ಯತೃಪ್ತವಾದ ಪರಬ್ರಹ್ಮವೇ" ಎಂದು (ನೇರಾಗಿ) ಅರಿತುಕೊಂಡು,[2] ಬ್ರಾಹ್ಮಣರು-ಬ್ರಾಹ್ಮಣರಿಗೇ ವ್ಯುತ್ಥಾನದಲ್ಲಿ ಅಧಿಕಾರವಿರುತ್ತದೆ[3], ಆದ್ದರಿಂದ ಬ್ರಾಹ್ಮಣ ಎಂಬ (ಶಬ್ದ)ವನ್ನು (ಇಲ್ಲಿ) ಹಿಡಿದಿದೆ. (ವ್ಯುತ್ಥಾಯ) ಬಿಟ್ಟಿದ್ದು, ವಿರುದ್ಧವಾಗಿ ಎದ್ದು, ಏನನ್ನು (ಬಿಟ್ಟಿದ್ದು) ? ಎಂದು ಹೇಳುತ್ತಾನೆ ಪುತ್ರೈಷಣೆಯನ್ನು ಪುತ್ರಾರ್ಥವಾದ ಏಷಣೆಯೇ ಪುತ್ರೈಷಣೆ, ಮಗನಿಂದ ಈ ಲೋಕವನ್ನು ಗೆದ್ದುಕೊಳ್ಳುವೆನು ಎಂದು (ಈ) ಲೋಕವನ್ನು ಗೆದ್ದುಕೊಳ್ಳುವದಕ್ಕೆ ಸಾಧನವಾಗಿರುವ ಮಗನಿಗಾಗಿ (ಉಂಟಾಗುವ) ಇಚ್ಛೆಯು ಹೆಂಡತಿಯನ್ನು ಸಂಪಾದಿಸಿಕೊಳ್ಳುವದು (ಪುತ್ರನ) ಏಷಣೆಯು, (ಈ ಪುತ್ರೈಷಣೆಯನ್ನು ಬಿಟ್ಟಿದ್ದು ಎಂದರೆ) – ಹೆಂಡತಿಯನ್ನು ಸಂಪಾದಿಸಿಕೊಳ್ಳದೆ ಎಂದರ್ಥ.[4] ವಿತ್ತೈಷಣೆಯನ್ನು ಕರ್ಮಕ್ಕೆ ಸಾಧನವಾಗಿರುವ ಗೋವು ಮುಂತಾದ್ದನ್ನು, ಇದರಿಂದ ಕರ್ಮವನ್ನು ಮಾಡಿ ಪಿತೃಲೋಕವನ್ನು ಗೆದ್ದುಕೊಳ್ಳುವೆನು ಎಂದು, ಅಥವಾ ವಿದ್ಯೆಯಿಂದೊಡಗೂಡಿದ (ಕರ್ಮ)ದಿಂದ ದೇವಲೋಕವನ್ನು (ಗೆದ್ದು

---

1 ನಿರ್ಣಯಸಾಗರದಲ್ಲಿ ಮುದ್ರಿತವಾದ ಕಠರುದ್ರೋಪನಿಷತ್ತಿನಲ್ಲಿ ಮೂಲದಲ್ಲಿ ಕೇಶಾನ್ ನಿಕೃಷ್ಯ ಎಂದಿದೆ. ಆ ಉಪನಿಷತ್ತನ್ನು ಆಚಾರ್ಯರ ಭಾಷ್ಯದಲ್ಲಿ ಮತ್ತೆಲ್ಲಿಯೂ ಉದಾಹರಿಸಿಲ್ಲ.

2. ಬ್ರಹ್ಮಜ್ಞಾನವಾದ ಬಳಿಕ ಮಾಡುವ ವಿದ್ವತ್ಸಂನ್ಯಾಸದ ವಿಷಯವಿದು.

3. ವಾರ್ತಿಕದಲ್ಲಿ ಕ್ಷತ್ರಿಯಾದಿಗಳಿಗೂ ಇದಕ್ಕೆ ಈ ಅಧಿಕಾರವಿದೆ ಎಂದು ಬರೆದಿದೆ. ವ್ಯುತ್ಥಾನವೆಂದರೆ ಏಷಣೆಗಳನ್ನು ಬಿಟ್ಟೇಳುವದು, ಪರಿವ್ರಾಜಕನಾಗುವದು.

4. ಬ್ರಹ್ಮಚರ್ಯದಿಂದಲೇ ಸಂನ್ಯಾಸವನ್ನು ಮಾಡಬಹುದು, ಅಥವಾ ಗೃಹಸ್ಥನು ಪುತ್ರೋತ್ಪಾದನೆಯನ್ನು ಮಾಡದೆ ಸಂನ್ಯಾಸವನ್ನು ಮಾಡಬಹುದು ಎಂಬುದಕ್ಕೆ ಇದು ಸೂಚನೆ.

ಕೊಳ್ಳುವೆನು ಎಂದು), ಅಥವಾ ಬರಿಯ ಹಿರಣ್ಯಗರ್ಭಾದಿವಿದ್ಯೆಯೆಂಬ ದೈವವಿತ್ತದಿಂದ 'ದೇವಲೋಕವನ್ನು ಗೆದ್ದುಕೊಳ್ಳುವೆನು ಎಂದು'' (ಸಾಧನವನ್ನು) ಸ್ವೀಕರಿಸುವದು (ವಿತ್ತೈಷಣೆಯು; ಅದನ್ನೂ ಬಿಟ್ಟಿದ್ದು) ದೈವವಿತ್ತದಿಂದ ವ್ಯುತ್ಥಾನ (ಮಾಡುವರೇ) ಇಲ್ಲ ಎಂದು ಕೆಲವರು (ಅಭಿಪ್ರಾಯಪಟ್ಟಿರುತ್ತಾರೆ).[2] ಏಕೆಂದರೆ ಆ (ವಿತ್ತದ) ಬಲದಿಂದಲ್ಲವೆ, (ಈ) ವ್ಯುತ್ಥಾನವು? (ಎಂಬುದು ಅವರ ಆಶಯ). ಇದು ಸರಿಯಲ್ಲ. "ಏಕೆಂದರೆ ಇಷ್ಟೇ ಅಲ್ಲವೆ, ಕಾಮವು?" (೧-೪-೧೭) ಎಂದು ದೈವವಿತ್ತವನ್ನು ಏಷಣೆಗಳೊಳಗೆ (ಸೇರಿಸಿ ಶ್ರುತಿಯಲ್ಲಿ) ಪರಿಸಿರುತ್ತದೆ. (ಇಲ್ಲಿ) ಹಿರಣ್ಯಗರ್ಭಾದಿದೇವತೆಗಳ ವಿಷಯವಾದ (ಉಪಾಸನಾರೂಪ)ವಿದ್ಯೆಯನ್ನೇ ವಿತ್ತವೆಂದಿದೆ, ಏಕೆಂದರೆ (ಆ ವಿದ್ಯೆಯು) ದೇವಲೋಕಕ್ಕೆ ಕಾರಣವಾಗಿರುತ್ತದೆ.[3] ನಿರುಪಾಧಿಕವಾದ ಪ್ರಜ್ಞಾನಘನದ ವಿಷಯವಾದ ಬ್ರಹ್ಮವಿದ್ಯೆಯು ದೇವಲೋಕಪ್ರಾಪ್ತಿಗೆ ಕಾರಣವಲ್ಲವಷ್ಟೆ? ಏಕೆಂದರೆ "ಅದರಿಂದ ಅದು ಎಲ್ಲವೂ ಆಯಿತು" (೧-೪-೧೦), "ಅವನು ಈ (ದೇವಲೋಕಗಳಿಗೆ)ಆತ್ಮನೇ ಆಗಿಬಿಟ್ಟಿರುತ್ತಾನಲ್ಲವೆ?" (೧ ೪ ೧೦)– ಎಂದು ಶ್ರುತಿ (ಹೇಳುತ್ತದೆ)[4] ಅದರ ಬಲದಿಂದಲೇ (ಈ) ವ್ಯುತ್ಥಾನವು? ಏಕೆಂದರೆ "ಆ ಈ ಆತ್ಮನನ್ನು ಅರಿತುಕೊಂಡು'' (೩-೫-೧) ಎಂದು (ಇಲ್ಲಿ) ವಿಶೇಷವಚನವಿದೆ[5].

---

1. ಉಪಾಸನೆಯನ್ನು ಕರ್ಮಸಮುಚ್ಚಿತವಾಗಿಯೂ ಮಾಡಬಹುದು, ಬರಿಯ ಉಪಾಸನೆಯನ್ನೂ ಮಾಡಬಹುದು, ಬರಿಯ ಉಪಾಸನೆಗೂ ಫಲವುಂಟೆಂಬುವಕ್ಕೆ ೧-೩-೨೮ರ ಭಾಷ್ಯವನ್ನು ನೋಡಿ.

2. ಇವರು ಯಾರೆಂಬುದು ತಿಳಿಯಲಿಲ್ಲ, ವ್ಯಾಖ್ಯಾನದಲ್ಲಿಯೂ ತಿಳಿಸಿಲ್ಲ. ಜ್ಞಾನಕರ್ಮಸಮುಚ್ಚಯವಾದಿಗಳಾದ ಭರ್ತೃಪ್ರಪಂಚರೇ ಮುಂತಾದವರಿರಬಹುದು.

3. ಆದ್ದರಿಂದ ಅವೇ 'ದೈವವಿತ್ತ' ಎಂದು ಕರೆಯಿಸಿಕೊಳ್ಳುವದಕ್ಕೆ ತಕ್ಕದ್ದಾಗಿ, ಕರ್ಮಕ್ಕೆ ಬೇಕಾದ ಗವಾದಿವಿತ್ತದಂತೆ ದೇವಲೋಕಪ್ರಾಪ್ತಿಗೆ ಅದು ಬೇಕಾಗುತ್ತದೆ.

4. ಈ ಜ್ಞಾನವು ಆದ ಕೂಡಲೆ ಫಲವಾಗುವದರಿಂದ ಇದು ದೇವಲೋಕಪ್ರಾಪ್ತಿಗೆ ಸಾಧನವೆನ್ನುವದಾಗುವದಿಲ್ಲ

5. 'ವಿದಿತ್ವಾ ವ್ಯುತ್ಥಾಯ' ಎಂಬಲ್ಲಿ ಆತ್ಮವಿಜ್ಞಾನವೇ ಎಂದರ್ಥವಾದರೆ ವಿಧಿಯ ಅಪೇಕ್ಷೆಯೇ ಇರುವದಿಲ್ಲ; ಆದ್ದರಿಂದ ಶಬ್ದಜ್ಞಾನವಾದ ಮೇಲೆ ಸಂನ್ಯಾಸಮಾಡಿ ಎಂದು ಅರ್ಥವನ್ನು ಮಾಡಬೇಕು ಎಂದು ಅರ್ಥವನ್ನು ಮಾಡಬಹುದು ಅಥವಾ 'ವ್ಯುತ್ಥಾಯ ವಿದಿತ್ವಾ' ಎಂದು ಅನುಕ್ರಮವನ್ನು ಬದಲಾಯಿಸಿಕೊಂಡರೆ ಸಂನ್ಯಾಸವು ಜ್ಞಾನಕ್ಕಾಗಿ ವಿಹಿತ ಎಂದಾಗುತ್ತದೆ ಎಂದು ವಾರ್ತಿಕ(೧೦೪, ೧೦೫, ೧೦೬)ದಲ್ಲಿ ಹೇಳಿದೆ. ಭಾಷ್ಯಕಾರರೇನೋ ಇಲ್ಲಿ "ಆ ಈ ಆತ್ಮನನ್ನು" ಎಂಬ ಮಾತಿನಿಂದ ಬ್ರಾಹ್ಮಣದ್ವಯದಲ್ಲಿ ಹೇಳಿರುವ ವಿಶೇಷಣಗಳುಳ್ಳ ಪರಮಾತ್ಮನನ್ನು ಎಂಬರ್ಥವನ್ನೇ ಗ್ರಹಿಸಿರುತ್ತಾರೆ. ಸರ್ವಕರ್ಮಸಂನ್ಯಾಸವು ಅಸಂಸಾರ್ಯಾತ್ಮಜ್ಞಾನದ ಬಲದಿಂದಲೇ ಆಗುವದೆಂದು ಅವರ ಮತ.

ಆದ್ದರಿಂದ (ಬ್ರಾಹ್ಮಣರು) ಅನಾತ್ಮಲೋಕಗಳಿಗೆ ಸಾಧನವಾಗಿರುವ ಈ ಮೂರು ಏಷಣಾವಿಷಯಗಳನ್ನೂ ಬಿಟ್ಟಿದ್ದು-(ಇಲ್ಲಿ) ಏಷಣೆ ಎಂದರೆ ಕಾಮವೇ; ಏಕೆಂದರೆ "ಇಷ್ಟೇ ಅಲ್ಲವೆ, ಕಾಮವು ?" (೧-೪ ೧೭) ಎಂಬ ಶ್ರುತಿಯಿದೆ.—ಈ ಮೂರು ಬಗೆಯ ಅನಾತ್ಮಲೋಕಪ್ರಾಪ್ತಿಸಾಧನದಲ್ಲಿ ಹಂಬಲಿಕೆಯನ್ನು ಮಾಡಿಕೊಳ್ಳದೆ ಎಂದರ್ಥ. ಏಕೆಂದರೆ ಸಾಧನದ ಇಚ್ಛೆ ಎಂಬುದೆಲ್ಲ ಫಲೇಚ್ಛೆಯೇ[1]. ಆದ್ದರಿಂದ ಶ್ರುತಿಯು ಏಷಣೆಯು ಒಂದೇ ಎಂದು ವಿವರಿಸಿ ಹೇಳುತ್ತದೆ. (ಅದು) ಹೇಗೆ ? ಎಂದರೆ ಪುತ್ರೈಷಣೆ ಎಂಬುದು ಯಾವದೋ ಅದು ವಿತ್ತೈಷಣೆಯೇ; ಏಕೆಂದರೆ (ಇವೆರಡೂ) ದೃಷ್ಟಫಲಕ್ಕೆ ಸಾಧನ(ವಾಗಿವೆ ಎಂಬುದು ಇವೆರಡಕ್ಕೂ) ಸಮಾನವಾಗಿದೆ.[2] ವಿತ್ತೈಷಣೆ ಎಂಬುದು ಯಾವದೋ ಅದು ಲೋಕೈಷಣೆಯೇ, ಅದು ಫಲಕ್ಕಾಗಿಯೇ. ಪ್ರತಿಯೊಬ್ಬನೂ ಫಲಾರ್ಥದಿಂದ ಪ್ರೇರಿತನಾಗಿಯೇ ಅಲ್ಲವೆ, ಯಾವ ಸಾಧನವನ್ನಾದರೂ ಸ್ವೀಕರಿಸುವದು ? ಆದ್ದರಿಂದ ಲೋಕೈಷಣೆ ಎಂಬುದೊಂದೇ (ನಿಜವಾಗಿ) ಏಷಣೆಯು[3], ಅದನ್ನು ಸಾಧನವಿಲ್ಲದೆ ಸಂಪಾದಿಸಿಕೊಳ್ಳುವದಾಗಲಾರದ್ದರಿಂದ ಸಾಧ್ಯ, ಸಾಧನ- ಎಂಬ ಭೇದದಿಂದ ಈ ಎರಡೂ ಏಷಣೆಗಳೇ ಆಗಿವೆಯಷ್ಟೆ ? ಆದ್ದರಿಂದ ಬ್ರಹ್ಮಜ್ಞಾನಿಗೆ ಕರ್ಮವಾಗಲಿ ಕರ್ಮಸಾಧನವಾಗಲಿ ಇಲ್ಲ(ವೆಂದಾಯಿತು).[4]

ಆದ್ದರಿಂದ ಪೂರ್ವಕಾಲದ ಬ್ರಾಹ್ಮಣರು ಎಲ್ಲಾ ಕರ್ಮವನ್ನು, ಎಲ್ಲಾ ಕರ್ಮಸಾಧನವನ್ನು ಎಂದರೆ ದೇವಪಿತೃಮಾನುಷ(ನಿಮಿತ್ತವಾದ) ಯಜ್ಞೋಪವೀತವೇ ಮುಂತಾದದ್ದನ್ನು- ಅದರಿಂದಲೇ ಅಲ್ಲವೇ ದೈವ, ಪಿತ್ರ್ಯ, ಮತ್ತು ಮಾನುಷ ಎಂಬ ಕರ್ಮ(ತ್ರಯವನ್ನು) ಮಾಡುವದು ? ಏಕೆಂದರೆ "ಮನುಷ್ಯರಿಗೆ ನಿವೀತವು"[5] (ತೈ ೨-೫-೧೫-೧)- ಎಂದು ಮುಂತಾಗಿ ಶ್ರುತಿಯಿದೆ. ಆದ್ದರಿಂದ ಹಿಂದಿನ ಕಾಲದ ಬ್ರಾಹ್ಮಣರು, ಬ್ರಹ್ಮಜ್ಞಾನಿಗಳು ಕರ್ಮಗಳನ್ನೂ ಯಜ್ಞೋಪವೀತವೇ ಮುಂತಾದ ಕರ್ಮಸಾಧನಗಳನ್ನೂ ಬಿಟ್ಟು, **ಪರಮಹಂಸಪಾರಿವ್ರಾಜ್ಯವನ್ನು** ಹೊಂದಿ, ಭಿಕ್ಷಾಚರ್ಯೆಯನ್ನು

---

1. ಫಲೇಚ್ಛೆಯಲ್ಲಿಯೇ ಅಡಕವಾಗಿರುತ್ತದೆ.

2. ಪುತ್ರನು ಮನುಷ್ಯಲೋಕಜಯಕ್ಕೆ, ವಿತ್ತವು ಕರ್ಮಕ್ಕೆ- ಹೀಗೆ ದೃಷ್ಟಫಲಕ್ಕಾಗಿಯೇ. ಮದುವೆಯಾದವನೇ ಕರ್ಮಕ್ಕೆಂದು ವಿತ್ತವನ್ನು ಬಯಸುತ್ತಾನೆ, ಅವನೇ ಪುತ್ರನನ್ನು ಬಯಸುತ್ತಾನೆ, ಹಾಗೂ ಇವೆರಡೂ ಒಂದೇ ಎಂದು **ವಾರ್ತಿಕ**.

3. ಏಕೆಂದರೆ ಲೋಕತ್ರಯವೇ ಫಲವು ; ಅದಕ್ಕಾಗಿಯೇ ಸಾಧನಗಳು ಬೇಕು.

4. ಬ್ರಹ್ಮಜ್ಞಾನಿಗೆ ಸಾಧ್ಯಸಾಧನರೂಪದಲ್ಲಿರುವ ನಿತ್ಯಸಿದ್ಧವಾದ ಆತ್ಮಲೋಕವು ಪ್ರಾಪ್ತವಾಗಿರುತ್ತದೆ.

5. ಈ ಶ್ರುತಿಯಲ್ಲಿ ಮನುಷ್ಯರಿಗೆ ನಿವೀತ, ಪಿತೃಗಳಿಗೆ ಪ್ರಾಚೀನಾವೀತ, ದೇವತೆಗಳಿಗೆ ಉಪವೀತ- ಎಂದು ವಿಧಿಸಿದೆ, ಆದ್ದರಿಂದ ಜ್ಞಾನಿಗೆ ಈ ಸಾಧನಗಳು ಬೇಕಿಲ್ಲ.

ಮಾಡಿದರು, ಭಿಕ್ಷಾರ್ಥವಾಗಿ ಸಂಚರಿಸುವದು ಭಿಕ್ಷಾಚರ್ಯವು, (ಅದನ್ನು) ಮಾಡುತ್ತಿದ್ದರು. ಆಶ್ರಮಮಾತ್ರಶರಣರಾದವರಿಗೆ ಜೀವನಸಾಧನವಾದ ಪಾರಿವ್ರಾಜ್ಯಕ್ಕೆ ಗುರುತಾದ ಸ್ಮಾರ್ತಲಿಂಗವನ್ನು ಬಿಟ್ಟು (ಭಿಕ್ಷಾಚರ್ಯವನ್ನು ಮಾಡುತ್ತಿದ್ದರು).[1] "ಜ್ಞಾನಿಯು ಲಿಂಗರಹಿತನು"( ? ), "ಆದ್ದರಿಂದ ಅಲಿಂಗನಾದ ಧರ್ಮಜ್ಞನು." (ಅಶ್ವ. ೪೬ ೫೧)[2] "ಅವ್ಯಕ್ತಲಿಂಗನಾಗಿ, ಅವ್ಯಕ್ತಾಚಾರನಾಗಿ" (ವ. ೧೦-೧೨)- ಇವೇ ಮುಂತಾದ ಸ್ಮೃತಿಗಳಿಂದ (ಇದು ಸಿದ್ಧವಾಗುತ್ತದೆ)[3]. "ಇನ್ನು ಪರಿವ್ರಾಜಕನು, ವಿವರ್ಣವಾದ ಬಟ್ಟೆಯನ್ನು ಧರಿಸಿ, (ತಲೆಯನ್ನು) ಬೋಳಿಸಿಕೊಂಡವನಾಗಿ, (ಯಾವ) ಸ್ವತ್ತೂ ಇಲ್ಲದವನಾಗಿ" (ಜಾ. ೫) ಮುಂತಾದ ಶ್ರುತಿಯಿದಲೂ (ಸಿದ್ಧವಾಗುತ್ತದೆ). "ಶಿಖೆಯಿಂದ ಕೂಡಿದ ತಲೆಗೂದಲುಗಳನ್ನು ಕಿತ್ತುಹಾಕಿ, ಯಜ್ಞೋಪವೀತವನ್ನು ಬಿಟ್ಟು...." (ಕ. ರು. ೧) ಎಂಬ ಶ್ರುತಿಯಿಂದಲೂ (ಇದು ಸಿದ್ಧವಾಗುತ್ತದೆ)[4].

## ಕರ್ಮಸಾಧನಗಳ ತ್ಯಾಗದ ವಿಷಯಕ್ಕೆ ಚರ್ಚೆ

### ಪೂರ್ವಪಕ್ಷ: ಯಜ್ಞೋಪವೀತಾದಿಗಳನ್ನು ತ್ಯಜಿಸಬಾರದು

(ಭಾಷ್ಯ)

೫೭. ನನು "ವ್ಯುತ್ಥಾಯಾಥ ಭಿಕ್ಷಾಚರ್ಯಂ ಚರನ್ತಿ" ಇತಿ ವರ್ತಮಾನಾಪದೇಶಾತ್ ಅರ್ಥವಾದೋಽಯಂ ನ ವಿಧಾಯಕಃ ಪ್ರತ್ಯಯಃ ಕಶ್ಚಿತ್ ಶ್ರೂಯತೇ ಲಿಙ್ಲೋಟ್ತವ್ಯಾನಾಮನ್ಯತಮೋಽಪಿ। ತಸ್ಮಾತ್ ಅರ್ಥವಾದಮಾತ್ರೇಣ ಶ್ರುತಿಸ್ಮೃತಿವಿಹಿತಾನಾಂ ಯಜ್ಞೋಪವೀತಾದೀನಾಂ ಸಾಧನಾನಾಂ ನ ಶಕ್ಯತೇ ಪರಿತ್ಯಾಗಃ ಕಾರಯಿತುಮ್। "ಯಜ್ಞೋಪವೀತ್ಯೇವಾಧೀಯೀತ ಯಾಜಯೇದ್ಯಜೇತ ವಾ" (ತೈ. ಆ. ೨-೧-೧) ಪಾರಿವ್ರಾಜ್ಯೇ ತಾವದಧ್ಯಯನಂ ವಿಹಿತಮ್ "ವೇದ

---

1. 'ಭಿಕ್ಷಾಚರ್ಯಂ ಚರನ್ತಿ' ಎಂಬ ವಾಕ್ಯಕ್ಕೆ ಭಿಕ್ಷಾಚರ್ಯವನ್ನು ಮಾಡುತ್ತಾರೆ ಎಂದು ಅಕ್ಷರಾರ್ಥ. ಹಿಂದಿನ ಬ್ರಾಹ್ಮಣರು ಎಂದು ಭಾಷ್ಯದಲ್ಲಿರುವದಕ್ಕೆ ಅನುಗುಣವಾಗಿ ಮಾಡುತ್ತಿದ್ದರು ಎಂದು ಕನ್ನಡಿಸಿದೆ.

2. ಧರ್ಮತತ್ತ್ವವನ್ನು ಆಚರಿಸಬೇಕು ಎಂಬುದು ವಾಕ್ಯಶೇಷ.

3. ಸ್ಮಾರ್ತಸಂನ್ಯಾಸದ ವೇಷವನ್ನು ಬಿಡಬೇಕು ಎಂದು ಸಿದ್ಧವಾಗುತ್ತದೆ.

4. ಪ್ರತ್ಯಕ್ಷಶ್ರುತಿಯೇ ಇರುವದರಿಂದ ಸ್ಮೃತ್ಯುಕ್ತಲಿಂಗವನ್ನು ತ್ಯಾಗಮಾಡಬೇಕೆಂದು ಸಿದ್ಧವಾಗುತ್ತದೆ.

ಸಂನ್ಯಸನಾಚ್ಛೂದ್ರಸ್ತಸ್ಮಾದ್ವೇದಂ ನ ಸಂನ್ಯಸೇತ್'' (ವ. ೧೦-೫)[1], "ಸ್ವಾಧ್ಯಾಯ ಏವೋತ್ಸೃಜಮಾನೋ ವಾಚಮ್'' (ಆ. ಧ. ೨-೨೧-೧೦) ಇತಿ ಚಾಪಸ್ತಮ್ಬಃ | "ಬ್ರಹೋಜ್ಝಂ ವೇದನಿನ್ದಾ ಚ[2] ಕೌಟಸಾಕ್ಷ್ಯಂ ಸುಹೃದ್ವಧಃ | ಗರ್ಹಿತಾನ್ನಾದ್ಯ ಯೋರ್ಜಗ್ಧಿಃ[2] ಸುರಾಪಾನಸಮಾನಿ ಷಟ್ ||" (ಮನು. ೧೧-೫೬) ಇತಿ ವೇದ ಪರಿತ್ಯಾಗೇ ದೋಷಶ್ರವ(ಸ್ಮರ?)ಣಾತ್, ''ಉಪಾಸನೇ ಗುರೂಣಾಂ ವೃದ್ಧಾ ನಾಮತಿಥೀನಾಂ ಹೋಮೇ ಜಪ್ಯಕರ್ಮಣಿ ಭೋಜನ ಆಚಮನೇ ಸ್ವಾಧ್ಯಾ ಯೇ ಚ ಯಜ್ಞೋಪವೀತೀ ಸ್ಯಾತ್'' (ಆ.ಧ ೧-೧೫-೧)ಇತಿ(ಚ?)| ಪರಿ ವ್ರಾಜಕಧರ್ಮೇಷು ಚ ಗುರೂಪಾಸನಸ್ವಾಧ್ಯಾಯಭೋಜನಾಚಮನಾದೀನಾಂ ಕರ್ಮಣಾಂ ಶ್ರುತಿಸ್ಮೃತಿಷು ಕರ್ತವ್ಯತಯಾ ಚೋದಿತತ್ವಾತ್ ಗುರ್ವಾದ್ಯುಪಾ ಸನಾಙ್ಗತ್ವೇನ[2] ಯಜ್ಞೋಪವೀತಸ್ಯ ವಿಹಿತತ್ವಾತ್ ತತ್ಪರಿತ್ಯಾಗೋ ನೈವಾವ ಗನ್ತುಂ ಶಕ್ಯತೇ | ಯದ್ಯಪ್ಯೇಷಣಾಭ್ಯೋ ವ್ಯುತ್ಥಾನಂ ವಿಧೀಯತ ಏವ ತಥಾಪಿ ಪುತ್ರಾದ್ಯೇಷಣಾಭ್ಯಸ್ತಿಸೃಭ್ಯ ಏವ ವ್ಯುತ್ಥಾನಮ್ ನ ತು ಸರ್ವಸ್ಮಾತ್ ಕರ್ಮಣಃ| ಸರ್ವಪರಿತ್ಯಾಗೇ ಚ ಅಶ್ರುತಂ ಕೃತಂ ಸ್ಯಾತ್ ಶ್ರುತಂ ಚ ಯಜ್ಞೋಪವೀತಾದಿ ಹಾಪಿತಂ ಸ್ಯಾತ್ ತಥಾ ಚ ಮಹಾನ್ ಅಪರಾಧೋ ವಿಹಿತಾಕರಣಪ್ರತಿಷಿದ್ಧಾ ಚರಣನಿಮಿತ್ತಃ ಕೃತಃ ಸ್ಯಾತ್| ತಸ್ಮಾತ್ ಯಜ್ಞೋಪವೀತಾದಿಲಿಙ್ಗಪರಿತ್ಯಾಗೋಽ ನ್ಧಪರಮ್ಪರೈವ ||

(ಭಾಷ್ಯಾರ್ಥ)

"ಬಿಟ್ಟಿದ್ದು ಇನ್ನು ಭಿಕ್ಷಾಚರ್ಯೆಯನ್ನು ಮಾಡುತ್ತಾರೆ'' ಎಂಬುದು ವರ್ತಮಾನ(ವಿಷಯವನ್ನು) ಹೇಳುವ (ವಾಕ್ಯವಾದ್ದ)ರಿಂದ ಇದು ಅರ್ಥವಾದವು, (ಏಕೆಂದರೆ ಇಲ್ಲಿ) ಲಿಙ್, ಲೋಟ್, ತವ್ಯ-(ಈ)ಪ್ರತ್ಯಯಗಳಲ್ಲಿ(ಯಾವ) ಒಂದು ವಿಧಾಯಕಪ್ರತ್ಯಯವೂ ಇರುವದಿಲ್ಲ. ಆದ್ದರಿಂದ ಬರಿಯ ಅರ್ಥವಾದದಿಂದ ಶ್ರುತಿಸ್ಮೃತಿಗಳಲ್ಲಿ ವಿಹಿತವಾಗಿರುವ ಯಜ್ಞೋಪವೀತವೇ ಮುಂತಾದ ಸಾಧನಗಳನ್ನು ಪರಿತ್ಯಾಗಮಾಡಿಸುವದು ಆಗಲಾರದು.[3] "ಯಜ್ಞೋಪವೀತಿಯಾಗಿಯೇ ಅಧ್ಯಯನಮಾಡಬೇಕು, ಯಾಗಮಾಡಿಸಬೇಕು, ಅಥವಾ ಯಾಗಮಾಡಬೇಕು'' (ತೈ. ಆ. ೨-೧-೧). ಮೊದಲನೆಯದಾಗಿ ಪಾರಿವ್ರಾಜ್ಯದಲ್ಲಿ ಅಧ್ಯಯನವು ವಿಹಿತ

---

1. ವಸಿಷ್ಠಸ್ಮೃತಿಯಲ್ಲಿ ಉದಾಹೃತವಾಗಿರುವ ಶ್ಲೋಕವಿದು; ಮೂಲವು ಎಲ್ಲಿದೆಯೋ ತಿಳಿಯದು.

2. 'ಬ್ರಹ್ಮೋಜ್ಝತಾ ವೇದನಿನ್ದಾ' ಎಂದು ಮುದ್ರಿತ ಪಾ||

3. 'ಗುರೂಪಾಸನಾದ್ಯಙ್ಗತ್ವೇನ' ಎಂದು ಪಾಠವಿದ್ದರೆ ಚೆನ್ನಾಗಿರುವದು.

4. ಅರ್ಥವಾದಕ್ಕೆ ವಿಧ್ಯರ್ಥವನ್ನು ಹೊಗಳುವ ಶಕ್ತಿಯಿದೆ, ತಾನೇ ವಿಧಿಸುವ ಶಕ್ತಿಯಿಲ್ಲ.

ವಾಗಿರುತ್ತದೆ. ವೇದವನ್ನು ಸಂನ್ಯಾಸಮಾಡಿದರೆ ಶೂದ್ರನಾಗುತ್ತಾನೆ; ಆದ್ದರಿಂದ ವೇದವನ್ನು ಬಿಡಬಾರದು'' (ವ. ಸ್ಮೃ.೧೦-೫), "ಅಧ್ಯಯನ(ಕಾಲ)ದಲ್ಲಿ ಮಾತ್ರ ಮಾತನ್ನು ಹೊರಗೆ ಬಿಡುವವನಾಗಿ...."(ಆ. ೨–೨೧-೧೦)[1] ಎಂದು ಆಪಸ್ತಂಬನೂ ಹೇಳಿರುತ್ತಾನೆ. ಅಧ್ಯಯನವನ್ನು ಬಿಡುವದು, ವೇದನಿಂದೆ, ಸುಳ್ಳುಸಾಕ್ಷ್ಯ ಹೇಳುವದು, ಸ್ನೇಹಿತವನ್ನು ಕೊಲ್ಲುವದು, ನಿಷಿದ್ಧವಾದ ಮತ್ತು ತಿನ್ನಬಾರದ[2] (ಪದಾರ್ಥಗಳನ್ನು) ತಿನ್ನುವದು– ಇವು ಆರೂ ಸುರಾಪಾನಕ್ಕೆ ಸಮ''. (ಮನು. ೧೧-೫೬) ಎಂದು ವೇದವನ್ನು ಬಿಟ್ಟರೆ ದೋಷವನ್ನು ಹೇಳಿರುವದರಿಂದಲೂ "ಗುರುಗಳನ್ನೂ ಹಿರಿಯರನ್ನೂ ಅತಿಥಿಗಳನ್ನೂ ಉಪಾಸನೆಮಾಡುವಾಗಲೂ ಹೋಮ, ಜಪಕರ್ಮ, ಭೋಜನ, ಆಚಮನ, ಅಧ್ಯಯನ– ಇವುಗಳಲ್ಲಿ ಯಜ್ಞೋಪವೀತಿಯಾಗಿರಬೇಕು'' (ಆ. ಧ. ೧–೧೫-೧) ಎಂದು ಗುರೂಪಾಸನೆಯೇ ಮುಂತಾದ (ಕರ್ಮ)ಕ್ಕೆ ಅಂಗವಾಗಿ ಯಜ್ಞೋಪವೀತವನ್ನು ವಿಧಿಸಿರುವದರಿಂದಲೂ ಪರಿವ್ರಾಜಕನ ಧರ್ಮಗಳಲ್ಲಿ ಗುರೂಪಾಸನ, ಅಧ್ಯಯನ, ಭೋಜನ, ಆಚಮನ– ಮುಂತಾದವುಗಳನ್ನು ವಿಧಿಸಿರುವದರಿಂದಲೂ[3] ಅದನ್ನು ಪರಿತ್ಯಾಗ ಮಾಡಬೇಕೆಂದು ನಿಶ್ಚಯಿಸುವದು (ಎಂದಿಗೂ) ಆಗಲಾರದು.

ಇಲ್ಲಿ ಏಷಣೆಗಳನ್ನು ಬಿಟ್ಟೇಳಬೇಕೆಂಬುದು ವಿಹಿತವಾಗಿದೆ ಎಂದರೂ, ಆಗಲೂ ಪುತ್ರೈಷಣೆಯೇ ಮುಂತಾದ ಮೂರನ್ನೇ ಬಿಟ್ಟೇಳಬೇಕೆಂದು (ಅರ್ಥವೇ ಹೊರತು) ಎಲ್ಲಾ ಕರ್ಮಗಳನ್ನೂ ಕರ್ಮಸಾಧನಗಳನ್ನೂ ಬಿಟ್ಟೇಳಬೇಕೆಂದು

---

1. ವಸಿಷ್ಠಸ್ಮೃತಿಯಲ್ಲಿ ಓಂಕಾರವೇ ಹೆಚ್ಚಿನ ವೇದವೆಂದು ಮುಂದೆ ಹೇಳಿದೆ. ಆಪಸ್ತಂಬಸ್ಮೃತಿಯಲ್ಲಿ 'ಸ್ವಾಧ್ಯಾಯ'ಶಬ್ದವಿದ್ದರೂ ಅದು ಓಂಕಾರಜಪಪರವೆಂದು ಅರ್ಥ ಮಾಡುವದಕ್ಕೆ ಬರುತ್ತದೆ; ಏಕೆಂದರೆ ಮುಂದೆ ಸಂನ್ಯಾಸಿಯು ವೇದಗಳನ್ನು ತ್ಯಜಿಸಬೇಕೆಂದೇ ಹೇಳಿದೆ. ಆದರೂ ಪೂರ್ವಪಕ್ಷಿಯು ಈ ವಾಕ್ಯಗಳ ಅಕ್ಷರಾರ್ಥವನ್ನು ಹಿಡಿದು ವಾದಿಸುತ್ತಿದಾನೆ.

2. ಬೆಳ್ಳುಳ್ಳಿ ಮುಂತಾದವು ನಿಷಿದ್ಧಾಹಾರಗಳು; ಅಸಹ್ಯವಾದ ಪುರೀಷಾದಿಗಳು ಅನಾದ್ಯಗಳು- ಎಂದು ಕುಲ್ಲೂಕವ್ಯಾಖ್ಯಾನ ತಿನ್ನುವದಿಲ್ಲ ಎಂದು ಸಂಕಲ್ಪಿಸಿ ಬಿಟ್ಟಿರುವದು ಅನಾದ್ಯ ಎಂದು ಮೇಧಾತಿಥಿವ್ಯಾಖ್ಯಾನ. ಈ ಅಧ್ಯಾಯದಲ್ಲಿ ಪಾಪಗಳನ್ನೂ ಅವುಗಳಿಗೆ ಪ್ರಾಯಶ್ಚಿತ್ತವನ್ನೂ ಹೇಳಿದೆ.

3. ಗುರೂಪಾಸನೆಯೇ ಮುಂತಾದವುಗಳನ್ನು ಮಾಡುವಾಗ ಬ್ರಹ್ಮಚಾರಿಯೂ ಗೃಹಸ್ಥನೂ ಯಜ್ಞೋಪವೀತಿಯಾಗಿರಬೇಕು ಎಂದು ಸೂತ್ರಕ್ಕೆ ಅರ್ಥಮಾಡಬಹುದು. ಆದರೆ ಸಂನ್ಯಾಸಿಗೂ ಗುರೂಪಾಸನಾದಿಗಳು ವಿಹಿತವಾಗಿವೆಯಾದ್ದರಿಂದ ಅವನಿಗೂ ಯಜ್ಞೋಪವೀತವು ಬೇಕು ಎಂಬುದನ್ನು ಪೂರ್ವಪಕ್ಷಿ ಒತ್ತಿ ಹೇಳಿರುತ್ತಾನೆ.

(ಅರ್ಥ)ವಲ್ಲ.[1] ಎಲ್ಲವನ್ನೂ ಬಿಟ್ಟರೆ ಶ್ರುತಿಯಲ್ಲಿಲ್ಲದ್ದನ್ನು ಮಾಡಿದಂತೆ ಆದೀತು, ಶ್ರುತಿಯಲ್ಲಿ ಹೇಳಿರುವ ಯಜ್ಞೋಪವೀತಾದಿಗಳನ್ನು ಬಿಟ್ಟಂತೆಯೂ ಆದೀತು. ಹಾಗಾದರೆ ವಿಹಿತವನ್ನು ಮಾಡದೆ ಪ್ರತಿಷಿದ್ಧವನ್ನು ಆಚರಿಸಿದ ಕಾರಣದಿಂದ ದೊಡ್ಡ ಅಪರಾಧವನ್ನು ಮಾಡಿದಂತೆ ಆದೀತು.[2] ಆದ್ದರಿಂದ ಯಜ್ಞೋಪವೀತಾದಿಗಳನ್ನೂ ಲಿಂಗವನ್ನೂ[3] ಬಿಡುವದು ಅಂಧಪರಂಪರೆಯೇ ಸರಿ.

## ಸಿದ್ಧಾಂತ : ಸರ್ವಸಾಧನಸಂನ್ಯಾಸವು ಯತಿಗೆ ವಿಹಿತವಾಗಿದೆ

(ಭಾಷ್ಯ)

೫೮. ನ । "ಯಜ್ಞೋಪವೀತಂ ವೇದಾಂಶ್ಚ ಸರ್ವಂ ತದ್ ವರ್ಜಯೇದ್ಯತಿಃ" (ಕ.ರು. ೨) ಇತಿ ಶ್ರುತೇಃ । ಅಪಿ ಚ ಆತ್ಮಜ್ಞಾನಪರತ್ವಾತ್ ಸರ್ವಸ್ಯಾ ಉಪನಿಷದಃ । ಆತ್ಮಾ ದ್ರಷ್ಟವ್ಯಃ ಶ್ರೋತವ್ಯೋ ಮನ್ತವ್ಯಃ ಇತಿ ಹಿ ಪ್ರಸ್ತುತಮ್ । ಸ ಚಾತ್ಮೈವ ಸಾಕ್ಷಾತ್ ಅಪರೋಕ್ಷಾತ್ ಸರ್ವಾನ್ತರಃ, ಅಶನಾಯಾದಿಸಂಸಾರಧರ್ಮವರ್ಜಿತಃ ಇತ್ಯೇವಂ ವಿಜ್ಞೇಯಃ ಇತಿ ತಾವತ್ ಪ್ರಸಿದ್ಧಮ್ । ಸರ್ವಾ ಹೀಯಮುಪನಿಷತ್ ಏವಂಪರಾ ಇತಿ ವಿಧ್ಯನ್ತರಶೇಷತ್ವಂ ತಾವನ್ನಾಸ್ತಿ । ಅತೋ ನಾರ್ಥವಾದಃ । ಆತ್ಮಜ್ಞಾನಸ್ಯ ಕರ್ತವ್ಯತ್ವಾತ್ । ಆತ್ಮಾ ಚ ಅಶನಾಯಾದಿಧರ್ಮವಾನ್ನ ಭವತೀತಿ ಸಾಧನಫಲವಿಲಕ್ಷಣೋ ಜ್ಞಾತವ್ಯಃ । ಅತೋ ವ್ಯತಿರೇಕೇಣ[4] ಆತ್ಮನೋ ಜ್ಞಾನಮ್ ಅವಿದ್ಯಾ । "ಅನ್ಯೋಽಸಾವನ್ಯೋಽಹಮಸ್ಮೀತಿ ನ ಸ ವೇದ" (೧-೪-೧೦), "ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ" (೪-೪-೧೯), "ಏಕಧೈವಾನುದ್ರಷ್ಟವ್ಯಮ್" (೪-೪-೨೦), "ಏಕಮೇವಾದ್ವಿತೀಯಮ್" (ಛಾಂ. ೬-೨-೧), "ತತ್ತ್ವಮಸಿ" (ಛಾಂ ೬-೮-೭) ಇತ್ಯಾದಿಶ್ರುತಿಭ್ಯಃ । ಕ್ರಿಯಾ ಫಲಂ ಸಾಧನಂ ಚ ಅಶನಾಯಾದಿಸಂಸಾರಧರ್ಮಾತೀತಾತ್ ಆತ್ಮನೋಽನ್ಯತ್ ಅವಿದ್ಯಾವಿಷಯಮ್ । "ಯತ್ರ ಹಿ ದ್ವೈತಮಿವ ಭವತಿ" (೨-೪-೧೪), ಅನ್ಯೋಽಸಾವನ್ಯೋಽಹಮಸ್ಮೀತಿ ನ ಸ ವೇದ" (೧-೪ ೧೦), "ಅಥ ಯೇಽನ್ಯಥಾತೋ ವಿದುಃ" (ಛಾಂ ೭-೨೫-೨) ಇತ್ಯಾದಿವಾಕ್ಯಶತೇಭ್ಯಃ । ನ ಚ ವಿದ್ಯಾವಿದ್ಯೇ ಏಕಸ್ಯ ಪುರುಷಸ್ಯ ಸಹ ಭವತಃ । ವಿರೋಧಾತ್ ತಮಃಪ್ರಕಾಶಾವಿವ । ತಸ್ಮಾತ್ ಆತ್ಮವಿದೋಽವಿದ್ಯಾವಿಷಯೋಽಧಿಕಾರೋ ನ ದ್ರಷ್ಟವ್ಯಃ

---

1. ಸಂನ್ಯಾಸಿಯು ಮಾಡಬೇಕಾದ ಕರ್ಮಗಳನ್ನು ಮಾಡಲೇಬೇಕು ; ಅದಕ್ಕಾಗಿ ಯಜ್ಞೋಪವೀತವು ಬೇಕು.

2. ಅದರಿಂದ ಪಾತಿತ್ಯವು ಬರುತ್ತದೆ ಎಂದರ್ಥ. ಮನು. ೧೧-೪೪ರ ಸೂಚನೆ ಇದು.

3. ಯಜ್ಞೋಪವೀತಾದಿಸಾಧನಗಳನ್ನೂ ಯತಿಯ ಲಿಂಗವನ್ನೂ ಎಂದರ್ಥ.

4. 'ಅತೋಽವ್ಯತಿರೇಕೇಣ' ಎಂಬ ಅಚ್ಚಿನ ಪುಸ್ತಕದ ಪಾಠವು ಸರಿಯಲ್ಲ.

ಕ್ರಿಯಾಕಾರಕಫಲಭೇದರೂಪಃ। "ಮೃತ್ಯೋಃ ಸ ಮೃತ್ಯುಮಾಪ್ನೋತಿ" (೪-೪-೧೯) ಇತ್ಯಾದಿನಿನ್ದಿತತ್ವಾತ್। ಸರ್ವಕ್ರಿಯಾಸಾಧನಫಲಾನಾಂ ಚ ಅವಿದ್ಯಾವಿಷಯಾಣಾಂ ತದ್ವಿಪರೀತಾತ್ಮವಿದ್ಯಯಾ ಹಾತವ್ಯತ್ವೇನ ಇಷ್ಟತ್ವಾತ್। ಯಜ್ಞೋಪವೀತಾದಿಸಾಧನಾನಾಂ ತದ್ವಿಷಯತ್ವಾತ್। ತಸ್ಮಾತ್ ಅಸಾಧನಫಲ ಸ್ವಭಾವಾತ್ ಆತ್ಮನೋಽನ್ಯವಿಷಯಾ ವಿಲಕ್ಷಣಾ ಏಷಣಾ। ಉಭೇ ಹ್ಯೇತೇ ಸಾಧನ ಫಲೇ ಏಷಣೇ ಏವ ಭವತಃ। ಯಜ್ಞೋಪವೀತಾದೇಃ, ತತ್ಸಾಧ್ಯಕರ್ಮಣಾಂ ಚ ಸಾಧನತ್ವಾತ್ 'ಉಭೇ ಹ್ಯೇತೇ ಏಷಣೇ ಏವ' ಇತಿ ಹೇತುವಚನೇನ ಅವ ಧಾರಣಾತ್ ಯಜ್ಞೋಪವೀತಾದಿಸಾಧನಾತ್, ತತ್ಸಾಧ್ಯೇಭ್ಯಶ್ಚ ಕರ್ಮಭ್ಯೋಽ ವಿದ್ಯಾವಿಷಯತ್ವಾತ್, ಏಷಣಾರೂಪತ್ವಾಚ್ಚ ಜಿಹಾಸಿತವ್ಯರೂಪತ್ವಾಚ್ಚ ವ್ಯುತ್ಥಾನಂ ವಿಧಿತ್ಸಿತಮೇವ ॥

(ಭಾಷ್ಯಾರ್ಥ)

ಹಾಗಲ್ಲ. ಏಕೆಂದರೆ "ಯಜ್ಞೋಪವೀತವನ್ನೂ ವೇದಗಳನ್ನೂ-ಎಲ್ಲವನ್ನೂ ಯತಿಯು ಬಿಟ್ಟುಬಿಡಬೇಕು" (ಕ. ರು. ೨) ಎಂದು ಶ್ರುತಿಯಿದೆ[1] ಇದಲ್ಲದೆ (ಈ) ಉಪನಿಷತ್ತಿಗೆಲ್ಲ ಆತ್ಮಜ್ಞಾನದಲ್ಲಿಯೇ ತಾತ್ಪರ್ಯವಿರುವದರಿಂದ– (ಯಜ್ಞೋಪವೀತಾದಿತ್ಯಾಗವು ಇಲ್ಲಿ ವಿಹಿತವಾಗಿದೆ ಎಂದು ಏರ್ಪಡುತ್ತದೆ; ಹೇಗೆಂದರೆ, ಆತ್ಮನನ್ನು ಕಂಡುಕೊಳ್ಳಬೇಕು, ಶ್ರವಣಮಾಡಬೇಕು, ಮನನ ಮಾಡಬೇಕು-ಎಂದಲ್ಲವೆ, ಪ್ರಾರಂಭವಾಗಿದೆ? ಆ ಆತ್ಮನೇ ಸಾಕ್ಷಾತ್ತಾಗಿ ಅಪರೋಕ್ಷ ವಾಗಿರುವ ಸರ್ವಾಂತರನಾಗಿರುವವನು, ಹಸಿವು ಮುಂತಾದ ಸಂಸಾರಧರ್ಮಗಳಿಲ್ಲ ದವನು ಎಂದಿಂತು ತಿಳಿದುಕೊಳ್ಳಬೇಕೆಂದು ಮೊದಲನೆಯದಾಗಿ ಸಿದ್ಧವಾಗಿರುತ್ತದೆ. **ಈ ಉಪನಿಷತ್ತೆಲ್ಲವೂ ಈ (ಅರ್ಥದಲ್ಲಿ) ತಾತ್ಪರ್ಯವುಳ್ಳದ್ದಾಗಿರುವದರಿಂದ ಇದು ಮತ್ತೊಂದು ವಿಧಿಗೆ ಶೇಷವಲ್ಲ. ಆದ್ದರಿಂದ (ಇದು) ಅರ್ಥವಾದ ವಲ್ಲ; ಏಕೆಂದರೆ ಆತ್ಮಜ್ಞಾನವು ಕರ್ತವ್ಯವೆಂದು (ಉಪದಿಷ್ಟ)ವಾಗಿರುತ್ತದೆ,[1] ಆದರೆ (ಈ) ಆತ್ಮನು ಹಸಿವು ಮುಂತಾದ ಧರ್ಮಗಳುಳ್ಳವನಾಗಿರುವದಿಲ್ಲ ವಾದ್ದರಿಂದ ಸಾಧನಫಲಗಳಿಗೆ ವಿಲಕ್ಷಣನೆಂದೇ ಅರಿತುಕೊಳ್ಳಬೇಕಾಗಿದೆ**

---

1. ಈ ವಚನವು ಕಠರುದ್ರೋಪನಿಷತ್ತಿನಲ್ಲಿದೆ. ಆದರೆ ಆ ಉಪನಿಷತ್ತನ್ನು ಮತ್ತೆ ಲ್ಲಿಯೂ ಆಚಾರ್ಯರು ಉದಾಹರಿಸಿರುವದು ಕಂಡುಬಂದಿಲ್ಲ. ಇದಲ್ಲದೆ ನಿರ್ಣಯಸಾಗರದಲ್ಲಿ ಅಚ್ಚಾಗಿರುವ ಆ ಉಪನಿಷತ್ತಿನಲ್ಲಿ ಸೂತಸಂಹಿತೆಯ ಹಲವು ಶ್ಲೋಕಗಳು ಸೇರಿಕೊಂಡಿರುವದು ಕಂಡುಬರುತ್ತಿದೆ.

2. ತಾತ್ಪರ್ಯದಿಂದ ಶ್ರುತಿಯು ಹೇಳಿದ್ದು ಅರ್ಥವಾದವಾಗಲಾರದು; ಆದ್ದರಿಂದ ಆತ್ಮನು ಸಂಸಾರಧರ್ಮವರ್ಜಿತನೆಂಬುದು ಪರಮಾರ್ಥವೇ.

**ಇದಕ್ಕಿಂತ ಬೇರೆಯಾಗಿ ಆತ್ಮನನ್ನು ಅರಿತುಕೊಳ್ಳುವದು ಅವಿದ್ಯೆಯು.**[1] "ಈ (ದೇವತೆ) ಬೇರೆ, ನಾನು ಬೇರೆ ಎಂದು (ಯಾವನು ಉಪಾಸನೆಮಾಡುತ್ತಾನೋ) ಅವನು ಅರಿಯನು" (೧-೪-೧೦), "ಯಾವನು ಇಲ್ಲಿ ನಾನಾ ಇರುವಂತೆ ಕಾಣುತ್ತಾನೋ ಅವನು ಸಾವಿನಮೇಲೆ ಸಾವನ್ನು ಪಡೆಯುತ್ತಾನೆ" (೪-೪-೧೯), "ಒಂದೇ ಬಗೆಯಾಗಿ ಅನುದರ್ಶನಮಾಡಬೇಕು" (೪-೪-೨೦), "ಒಂದೇ, ಎರಡನೆಯದಿಲ್ಲದ್ದು" (ಛಾಂ. ೬-೨-೧), "ಅದು ನೀನಾಗಿರುವೆ"(ಛಾಂ. ೬-೮-೭) ಮುಂತಾದ ಶ್ರುತಿಗಳಿಂದ (ಇದು ಸಿದ್ಧವಾಗುತ್ತದೆ.) ಕ್ರಿಯೆ, ಫಲ ಮತ್ತು ಸಾಧನವು ಹಸಿವೇ ಮುಂತಾದ ಸಂಸಾರಧರ್ಮಗಳನ್ನು ಮೀರಿದ ಆತ್ಮನಿಗಿಂತ ಬೇರೆಯಾದ ಅವಿದ್ಯಾವಿಷಯವು. "ಎಲ್ಲಿ ದ್ವೈತದಂತೆ ಇರುವದೋ"(೨-೪-೧೪), "ಈ ದೇವತೆ ಬೇರೆ ನಾನು ಬೇರೆ- (ಎಂದು ಯಾವನು ಉಪಾಸನೆಮಾಡುತ್ತಾನೊ) ಅವನು ಅರಿಯನು" (೧ ೪-೧೦), "ಇನ್ನು ಇದಕ್ಕಿಂತ ಬೇರೆಯಾಗಿ ಯಾರು ಅರಿತುಕೊಂಡಿರುವರೋ(ಅವರ ಲೋಕವು ಕ್ಷಯವಾಗುವದು)" (ಛಾಂ ೮-೨೫-೨) ಮುಂತಾದ (ಶ್ರುತಿ)ವಾಕ್ಯಶತಗಳಿಂದ (ಇದು ಸಿದ್ಧವಾಗಿರುತ್ತದೆ)[2]. ವಿದ್ಯಾವಿದ್ಯೆಗಳು ಒಬ್ಬನೇ ಪುರುಷನಿಗೆ ಜೊತೆಯಲ್ಲಿರುವದಿಲ್ಲ, ಏಕೆಂದರೆ ಕತ್ತಲುಬೆಳಕುಗಳಂತೆ ಅವು(ಒಂದಕ್ಕೊಂದು)ವಿರುದ್ಧವಾಗಿವೆ ಆದ್ದರಿಂದ ಆತ್ಮಜ್ಞಾನಿಗೆ ಅವಿದ್ಯಾವಿಷಯವಾದ ಕ್ರಿಯಾಕಾರಕಫಲಗಳ ಭೇದ(ವನ್ನು ಕಾಣುವ ಕರ್ಮದಲ್ಲಿ) ಅಧಿಕಾರವೆಂದು ತಿಳಿಯಬಾರದು , ಏಕೆಂದರೆ "ಅವನು ಸಾವಿನ ಮೇಲೆ ಸಾವನ್ನು ಹೊಂದುವನು" (೪-೪-೧೯) ಎಂದು ಮುಂತಾಗಿ (ಆ ದೃಷ್ಟಿಯನ್ನು) ನಿಂದಿಸಿರುತ್ತದೆ ಎಲ್ಲಾ ಕ್ರಿಯಾಸಾಧನಫಲಗಳೂ ಅವಿದ್ಯಾವಿಷಯವಾಗಿರುವದರಿಂದ ಅದಕ್ಕೆ ವಿಪರೀತವಾದ ಆತ್ಮಜ್ಞಾನದಿಂದ ಬಿಡತಕ್ಕದ್ದು ಇಷ್ಟವಾಗಿರುತ್ತದೆ, ಯಜ್ಞೋಪವೀತಾದಿಸಾಧನಗಳೂ ಆ (ಅವಿದ್ಯಾ) ವಿಷಯವಾಗಿಯೇ ಇವೆ. ಆದ್ದರಿಂದ ಆತ್ಮನು ಸಾಧನಫಲಸ್ವಭಾವದವನಲ್ಲವಾಗಿ (ಅವನಿಗಿಂತ) ಬೇರೆಯ ವಿಷಯದಲ್ಲಿಯೇ (ಇದಕ್ಕಿಂತ) ವಿಲಕ್ಷಣವಾದ ಏಷಣೆ(ಯುಂಟಾಗುತ್ತದೆ ಎಂದಾಯಿತು)[3] ಈ ಸಾಧನಫಲಗಳೆರಡೂ ಏಷಣೆಗಳೇ ಆಗಿರುತ್ತವೆ.

---

1. ಆತ್ಮನು ಸಂಸಾರಧರ್ಮವುಳ್ಳವನು, ಸಾಧನಫಲಸ್ವರೂಪನು, ಅದ್ವಿತೀಯನೂ ಅಸಂಸಾರಿಯೂ ಅಲ್ಲ- ಎಂದು ತಿಳಿಯುವದು ಅವಿದ್ಯೆಯೆಂದೇ ಆಯಿತು, ಏಕೆಂದರೆ ಸಾಕ್ಷಾದಪರೋಕ್ಷಾತ್ಮಾಗಿ ಸರ್ವಾಂತರನಾಗಿರುವ ಅಶನಾಯಾದಿಧರ್ಮವರ್ಜಿತನಾದ ಪರಮಾತ್ಮನೇ ನಮ್ಮ ಆತ್ಮನು ಎಂಬುದೇ ಉಪನಿಷತ್ಸಮ್ಮತವಾದ ವಿದ್ಯೆಯಾಗಿದೆ.

2. ಉಪನಿಷತ್ತಿನಲ್ಲಿ ಹೇಳಿರುವ ಜ್ಞಾನಕ್ಕೆ ವಿಪರೀತವಾಗಿರುವದರಿಂದ ಇದನ್ನು ಅವಿದ್ಯೆ ಎನ್ನುತ್ತೇವೆ ಎಂಬುದು ಯುಕ್ತಿ ; ಇದಕ್ಕೆ ಶ್ರುತಿಯೂ ಇದೆ ಎಂದು ಅಭಿಪ್ರಾಯ.

3. ಸಾಧನಫಲಸ್ವರೂಪನು ನಾನು ಎಂದು ತಿಳಿದರೇ ಏಷಣೆಯುಂಟಾಗುತ್ತದೆ.

ಯಜ್ಞೋಪವೀತಾದಿಗಳೂ ಅವುಗಳಿಂದ ಸಾಧ್ಯವಾಗಿರುವ ಕರ್ಮಗಳೂ[1] ಸಾಧನವೇ ಆಗಿರುವದರಿಂದಲೂ, "ಇವೆರಡೂ ಏಷಣೆಗಳೇ" ಎಂದು ಹೇತುವನ್ನು ಹೇಳಿ ಒತ್ತಿ ತಿಳಿಸಿರುವದರಿಂದಲೂ ಯಜ್ಞೋಪವೀತಾದಿಸಾಧನವೂ ಅದಕ್ಕೆ ಸಾಧ್ಯವಾದ ಕರ್ಮಗಳೂ ಅವಿದ್ಯಾವಿಷಯವಾಗಿರುವದರಿಂದಲೂ ಏಷಣಾರೂಪವಾಗಿರುವದರಿಂದಲೂ ಬಿಡಬೇಕಾಗಿರುವದರಿಂದಲೂ ಅವನ್ನು ಬಿಟ್ಟೇಳುವ (ಸಂನ್ಯಾಸವು) ಇಲ್ಲಿ ವಿಧಿತ್ಸಿತವಾಗಿಯೇ ಇರುತ್ತದೆ.[2]

## ಆತ್ಮಜ್ಞಾನವಿಧಿಯಿಂದಲೇ ಪ್ರಾಪ್ತವಾದರೂ ಯಜ್ಞೋಪವೀತಾದಿತ್ಯಾಗವು ವಿಹಿತವೇ

(ಭಾಷ್ಯ)

೫೫. ನನು ಉಪನಿಷದ ಆತ್ಮಜ್ಞಾನಪರತ್ವಾತ್ ವ್ಯುತ್ಥಾನಶ್ರುತಿಸ್ತತ್ಸ್ತುತ್ಯರ್ಥಾ ನ ವಿಧಿಃ । ನ । ವಿಧಿತ್ಸಿತವಿಜ್ಞಾನೇನ ಸಮಾನಕರ್ತೃಕತ್ವಶ್ರವಣಾತ್ । ನ ಹಿ ಅಕರ್ತವ್ಯೇನ ಕರ್ತವ್ಯಸ್ಯ ಸಮಾನಕರ್ತೃಕತ್ವೇನ ವೇದೇ ಕದಾಚಿದಪಿ ಶ್ರವಣಂ ಸಂಭವತಿ। ಕರ್ತವ್ಯಾನಾಮೇವ ಹಿ ಅಭಿಷವಹೋಮಭಕ್ಷಣಾನಾಂ ಯಥಾ ಶ್ರವಣಮ್ "ಅಭಿಷುತ್ಯ ಹುತ್ವಾ ಭಕ್ಷಯನ್ತಿ" (ತೈ ಸಂ. ೬-೨-೧೨) ಇತಿ ತದ್ವತ್ ಆತ್ಮಜ್ಞಾನೈಷಣಾವ್ಯುತ್ಥಾನಭಿಕ್ಷಾಚರ್ಯಾಣಾಂ ಕರ್ತವ್ಯಾನಾಮೇವ ಸಮಾನಕರ್ತೃಕತ್ವಶ್ರವಣಂ ಭವೇತ್ । ಅವಿದ್ಯಾವಿಷಯತ್ವಾತ್ ಏಷಣಾತ್ವಾಚ್ಚ ಅರ್ಥಪ್ರಾಪ್ತಃ ಆತ್ಮಜ್ಞಾನವಿಧೇರೇವ ಯಜ್ಞೋಪವೀತಾದಿಪರಿತ್ಯಾಗಃ, ನ ತು ವಿಧಾತವ್ಯಃ ಇತಿ ಚೇತ್ । ನ। ಸುತರಾಮ್ ಆತ್ಮಜ್ಞಾನವಿಧಿನೈವ ವಿಹಿತಸ್ಯ ಸಮಾನಕರ್ತೃಕತ್ವಶ್ರವಣೇನ ದಾರ್ಢ್ಯೋಪಪತ್ತಿಃ। ತಥಾ ಭಿಕ್ಷಾಚರ್ಯಸ್ಯ ಚ । ಯತ್ಪುನರುಕ್ತಂ ವರ್ತಮಾನಾಪದೇಶಾತ್ ಅರ್ಥವಾದಮಾತ್ರಮ್ ಇತಿ । ನ। ಔದುಮ್ಬರಯೂಪಾದಿವಿಧಿಸಮಾನತ್ವಾತ್ ಅದೋಷಃ ॥

(ಭಾಷ್ಯಾರ್ಥ)

(ಆಕ್ಷೇಪ):— ಉಪನಿಷತ್ತಿಗೆ ಆತ್ಮಜ್ಞಾನದಲ್ಲಿ ತಾತ್ಪರ್ಯವಿರುವದರಿಂದ

---

1. ದೈವ, ಪಿತ್ರ್ಯ, ಮಾನುಷಕರ್ಮಗಳು.

2. ಯಜ್ಞೋಪವೀತಾದಿಗಳು ಕರ್ಮಗಳಿಗೆ, ಕರ್ಮಗಳು ಲೋಕಗಳಿಗೆ ಸಾಧನ, ಸಾಧನಸಾಧ್ಯಗಳು ಅವಿದ್ಯಾವಿಷಯ ; ಇವೆರಡೂ ಏಷಣೆಯಾಗಿರುವದರಿಂದಲೂ ಇದನ್ನು ಬಿಡಬೇಕಾಗಿದೆ. ಆದ್ದರಿಂದ ಯಜ್ಞೋಪವೀತಾದಿತ್ಯಾಗವು ಆತ್ಮಜ್ಞಾನವಿಧಾನದಿಂದ ತಾನೇ ಏರ್ಪಡುತ್ತದೆ ಎಂದು ಅಭಿಪ್ರಾಯ.

(ಏಷಣೆಗಳನ್ನು) ಬಿಟ್ಟೇಳುತ್ತಾರೆ ಎಂಬ ಶ್ರುತಿಯು ಆ (ಜ್ಞಾನ)ದ ಸ್ತುತಿಗಾಗಿ ಬಂದಿದೆ. (ಅದು) ವಿಧಿಯಲ್ಲವಲ್ಲ !

(ಪರಿಹಾರ):—ಹಾಗಲ್ಲ. ಏಕೆಂದರೆ ವಿಧಿಸಬೇಕಾಗಿರುವ ಜ್ಞಾನದೊಡನೆ (ಬ್ರಾಹ್ಮಣರು ಎಂಬ) ಒಂದೇ ಕರ್ತೃವಿಗೆ (ಅದನ್ನು) ಶ್ರುತಿಯಲ್ಲಿ ಹೇಳಿದೆ. **ವೇದದಲ್ಲಿ ಕರ್ತವ್ಯವಾದದ್ದನ್ನು ಕರ್ತವ್ಯವಲ್ಲದ್ದರೊಡನೆ ಎಂದಿಗೂ ಸಮಾನ ಕರ್ತೃಕವಾಗಿ ಹೇಳಿರುವದಿಲ್ಲವಷ್ಟೆ.** ಕರ್ತವ್ಯವೇ ಆಗಿರುವ ಅಭಿಷವ(ಸೋಮವನ್ನು ಹಿಂಡಿಕೊಳ್ಳುವದು) ಹೋಮ, ಭಕ್ಷಣ (ಉಳಿದ ಸೋಮವನ್ನು ಕುಡಿಯುವದು)—ಇವುಗಳನ್ನೆಲ್ಲ "ಹಿಂಡಿ ಹೋಮಮಾಡಿ ಕುಡಿಯುತ್ತಾರೆ" (ತೈ. ಸಂ. ೬-೨-೧೨) ಎಂದು ಹೇಗೆ (ಸಮಾನಕರ್ತೃಕವಾಗಿ) ಶ್ರುತಿಯಲ್ಲಿ ಹೇಳಿದೆಯೋ ಹಾಗೆಯೇ ಕರ್ತವ್ಯವೇ ಆಗಿರುವ ಆತ್ಮಜ್ಞಾನ, ಏಷಣಾವ್ಯುತ್ಥಾನ, ಭಿಕ್ಷಾಚರ್ಯೆ—ಇವುಗಳನ್ನೂ ಸಮಾನಕರ್ತೃಕವಾಗಿ ಶ್ರುತಿಯಲ್ಲಿ ಹೇಳಿರಬೇಕು.[1]

(ಆಕ್ಷೇಪ):—ಯಜ್ಞೋಪವೀತಾದಿಗಳನ್ನು ತ್ಯಜಿಸಬೇಕೆಂಬುದು (ಅವು) ಅವಿದ್ಯಾವಿಷಯವೇ ಆಗಿರುವದರಿಂದಲೂ, ಏಷಣೆಯೇ ಆಗಿರುವದರಿಂದಲೂ ಆತ್ಮಜ್ಞಾನವಿಧಿಯಿಂದಲೇ ಆರ್ಥಿಕವಾಗಿ (ತಾನೇ) ಬಂದೊದಗಿರುತ್ತದೆ(ಯೇ ಹೊರತು ಅದನ್ನು ಬೇರೆ) ವಿಧಾನಮಾಡಬೇಕಾದದ್ದಿಲ್ಲವಲ್ಲ ![2]

(ಪರಿಹಾರ).—ಹಾಗಲ್ಲ. ಏಕೆಂದರೆ ಆತ್ಮಜ್ಞಾನವಿಧಿಯಿಂದಲೇ ವಿಹಿತವಾಗಿರುವ (ಆ ತ್ಯಾಗಕ್ಕೆ) ಸಮಾನಕರ್ತೃಕತ್ವಶ್ರುತಿಯಿಂದ (ಇನ್ನಷ್ಟು) ದಾರ್ಢ್ಯವು

---

1. ವಿದಿತ್ವಾ (ಅರಿತು) ವ್ಯುತ್ಥಾಯ (ಬಿಟ್ಟೆದ್ದು) ಭಿಕ್ಷಾಚರ್ಯಂ ಚರನ್ತಿ (ಭಿಕ್ಷಾಚರ್ಯೆಯನ್ನು ಮಾಡುತ್ತಾರೆ)- ಎಂದು ಈ ಮೂರಕ್ಕೂ ಬ್ರಾಹ್ಮಣರೆಂಬ ಒಂದೇ ಕರ್ತೃವನ್ನು ಹೇಳಿದೆ. ಇಲ್ಲಿರುವ ಕೃದಂತಪ್ರತ್ಯಯಗಳು ಸಮಾನಕರ್ತೃಕತ್ವವನ್ನು ತಿಳಿಸುವವು; ಆದ್ದರಿಂದ ಜ್ಞಾನದಲ್ಲಿ ತಾತ್ಪರ್ಯವಿದ್ದರೆ, ಉಳಿದೆರಡರಲ್ಲಿಯೂ ತಾತ್ಪರ್ಯವಿದೆ ಎಂದು ಒಪ್ಪಬೇಕು- ಎಂದು ಅಭಿಪ್ರಾಯ. "ತಸ್ಮಾದ್ಧವಿರ್ಧಾನೇ ಚರ್ಮನ್ನಧಿಗ್ರಾವಭಿರಭಿಷುತ್ಯಾಹವನೀಯೇ ಹುತ್ವಾ ಪ್ರತ್ಯಞ್ಚಃ ಪರೇತ್ಯ ಸದಸಿ ಭಕ್ಷಯನ್ತಿ" ಎಂದು ತೈ. ಸಂ ಯ ಪೂರ್ಣವಾಕ್ಯ. ಈ ನ್ಯಾಯವನ್ನು ಜೈ. ಸೂ. ೩-೪-೩೨ರಲ್ಲಿ ಸೂಚಿಸಿದೆ. ಹೋಮಾಭಿಷವಕರ್ತೃಗಳಿಗೇ ಭಕ್ಷಣವನ್ನು ವಿಧಿಸಿದೆ ಎಂಬುದು ಅಲ್ಲಿ ಸಿದ್ಧಾಂತ.

2. ಜ್ಞಾನವುಂಟಾದರೆ ಅವಿದ್ಯೆಯು ತಾನೇ ಹೋಗುವದರಿಂದಲೂ ಏಷಣೆಗಳೂ ಇಲ್ಲವಾಗುವದರಿಂದ 'ಏಷಣೆಗಳನ್ನು ಬಿಡಬೇಕು' ಎಂದು ವಿಧಿಸುವದೇ ಬೇಕಿಲ್ಲವಲ್ಲ !

ಬರಬಹುದಾಗಿದೆ; ಹೀಗೆಯೇ ಭಿಕ್ಷಾಚರ್ಯೆಗೂ (ಬರಬಹುದಾಗಿದೆ)[1]. ಇನ್ನು ಭಿಕ್ಷಾಚರ್ಯೆಯನ್ನು ಮಾಡುತ್ತಾರೆ) ಎಂದು ವರ್ತಮಾನಾಪದೇಶವಿರುವದರಿಂದ ಇದು ಅರ್ಥವಾದವೇ, ಎಂದು (ಪೂರ್ವಪಕ್ಷ)ದಲ್ಲಿ ಹೇಳಿತ್ತಷ್ಟೆ; ಅದು ಸರಿಯಲ್ಲ. ಏಕೆಂದರೆ ಔದುಂಬರಯೂಪವೇ ಮುಂತಾದವುಗಳ ವಿಧಿಗಳಿಗೆ (ಇದು) ಸಮಾನವಾಗಿರುವದರಿಂದ (ಇದೇನೂ) ದೋಷವಲ್ಲ[2].

## ಯಜ್ಞೋಪವೀತಾದಿಗಳಿರುವ ಪಾರಿವ್ರಾಜ್ಯವು ಬೇರೆಯಿದೆ

(ಭಾಷ್ಯ)

೬೦. "ವ್ಯುತ್ಥಾಯ ಭಿಕ್ಷಾಚರ್ಯಂ ಚರನ್ತಿ" ಇತ್ಯನೇನ ಪಾರಿವ್ರಾಜ್ಯಂ ವಿಧೀಯತೇ। ಪಾರಿವ್ರಾಜ್ಯಾಶ್ರಮೇ ಚ ಯಜ್ಞೋಪವೀತಾದಿಸಾಧನಾನಿ ವಿಹಿತಾನಿ ಲಿಙ್ಗಂ ಚ ಶ್ರುತಿಭಿಃ ಸ್ಮೃತಿಭಿಶ್ಚ। ಅತಃ ತದ್ವರ್ಜಯಿತ್ವಾ ಅನ್ಯಸ್ಮಾತ್ ವ್ಯುತ್ಥಾನಮ್ ಏಷಣಾತ್ವೇಽಪಿ ಇತಿ ಚೇತ್। ನ। ವಿಜ್ಞಾನಸಮಾನಕರ್ತೃಕಾತ್ ಪಾರಿವ್ರಾಜ್ಯಾತ್ ಏಷಣಾವ್ಯುತ್ಥಾನಲಕ್ಷಣಾತ್ ಪಾರಿವ್ರಾಜ್ಯಾನ್ತರೋಪಪತ್ತೇಃ। ಯದ್ಧಿ ತದೇಷಣಾಭ್ಯೋ ವ್ಯುತ್ಥಾನಲಕ್ಷಣಂ ಪಾರಿವ್ರಾಜ್ಯಂ ತತ್ ಆತ್ಮಜ್ಞಾನಾಙ್ಗಮ್। ಆತ್ಮಜ್ಞಾನವಿರೋಧ್ಯೇಷಣಾಪರಿತ್ಯಾಗರೂಪತ್ವಾತ್। ಅವಿದ್ಯಾವಿಷಯತ್ವಾಚ್ಚೈಷಣಾಯಾಃ। ತದ್ವ್ಯತಿರೇಕೇಣ ಚಾಸ್ತಿ ಆಶ್ರಮರೂಪಂ ಪಾರಿವ್ರಾಜ್ಯಂ ಬ್ರಹ್ಮಲೋಕಾದಿಫಲಪ್ರಾಪ್ತಿಸಾಧನಮ್। ಯದ್ವಿಷಯಂ ಯಜ್ಞೋಪವೀತಾದಿಸಾಧನವಿಧಾನಂ ಲಿಙ್ಗವಿಧಾನಂ ಚ॥

(ಭಾಷ್ಯಾರ್ಥ)

(ಆಕ್ಷೇಪ):–"ಬಿಟ್ಟಿದ್ದು ಭಿಕ್ಷಾಚರ್ಯೆಯನ್ನು ಮಾಡುತ್ತಾರೆ" ಎಂಬುದ

---

1. ಆತ್ಮಜ್ಞಾನದಿಂದ ಅರ್ಥಿಕವಾಗಿ ಬಂದೊದಗಿದ್ದರೂ ಶ್ರುತಿಗೆ ಅವುಗಳಲ್ಲಿ ಆದರವಿರುವದರಿಂದ ಅವನ್ನು ವಿಧಿಸಬಹುದಾಗಿದೆ. ಜ್ಞಾನಿಗೆ ಏಷಣೆಗಳಿರುವದಿಲ್ಲ, ಭಿಕ್ಷಾಚರ್ಯೆಯು ಅರ್ಥಪ್ರಾಪ್ತ ; ಆದ್ದರಿಂದ ಅಜ್ಞಮುಮುಕ್ಷುಗಳೂ ಇವನ್ನು ಮಾಡಿ ಜ್ಞಾನವನ್ನು ಸಂಪಾದಿಸಿಕೊಳ್ಳಬೇಕು ಎಂಬುದು ಶ್ರುತಿಯ ಅಭಿಪ್ರಾಯ.

2. ಔದುಂಬರೋ ಯೂಪೋ ಭವತಿ ಮುಂತಾದ ವಾಕ್ಯಗಳು ವರ್ತಮಾನಾಪದೇಶವಾದರೂ ವಿಧಿಯಾಗಿವೆ ಎಂಬುದನ್ನು ಮೀಮಾಂಸಕರು ಒಪ್ಪಿದಾರೆ.

ರಿಂದ ಪಾರಿವ್ರಾಜ್ಯವನ್ನು ವಿಧಿಸಿದೆ.[1] ಪಾರಿವ್ರಾಜ್ಯಾಶ್ರಮದಲ್ಲಿ ಯಜ್ಞೋಪವೀತವೇ ಮುಂತಾದ ಸಾಧನಗಳು ವಿಹಿತವಾಗಿವೆ. ಲಿಂಗವೂ ಶ್ರುತಿಸ್ಮೃತಿಗಳಿಂದ ವಿಹಿತವಾಗಿದೆ.[2] ಆದ್ದರಿಂದ (ಅದು) ಏಷಣೆಯಾದರೂ ಅದನ್ನು ಬಿಟ್ಟು ವಿುಕ್ಕ (ಏಷಣೆಗಳನ್ನು ಬಿಡಬೇಕೆಂದು ಇಲ್ಲಿ) ವ್ಯುತ್ಥಾನವನ್ನು ವಿಧಿಸಿದೆ ಎಂದು ಕಲ್ಪಿಸ ಬಹುದಲ್ಲ !

(ಪರಿಹಾರ):– ಹಾಗಲ್ಲ. ಏಕೆಂದರೆ ವಿಜ್ಞಾನಕ್ಕೂ (ತನಗೂ) ಸಮಾನ ಕರ್ತೃವುಳ್ಳ ಏಷಣಾವ್ಯುತ್ಥಾನರೂಪವಾದ ಪಾರಿವ್ರಾಜ್ಯಕ್ಕಿಂತಲೂ ಬೇರೆಯಾದ ಮತ್ತೊಂದು ಪಾರಿವ್ರಾಜ್ಯವು ಇರಬಹುದಾಗಿದೆ. (ಇದರ ವಿವರ) **ಏಷಣೆಗಳನ್ನು ಬಿಟ್ಟೇಳುವ ರೂಪದ ಪಾರಿವ್ರಾಜ್ಯವಿದೆಯಲ್ಲ, ಅದು ಆತ್ಮಜ್ಞಾನಾಂಗವು[3]; ಏಕೆಂದರೆ(ಅದು)ಆತ್ಮಜ್ಞಾನಕ್ಕೆ ವಿರುದ್ಧವಾಗಿರುವ ಏಷಣೆಯನ್ನು ಪರಿತ್ಯಾಗ ಮಾಡುವ ಸ್ವರೂಪದ್ದಾಗಿದೆ,[4] ಮತ್ತು ಏಷಣೆಯು ಅವಿದ್ಯಾವಿಷಯಕ ವಾಗಿರುತ್ತದೆ ಅದಕ್ಕಿಂತಲೂ ಬೇರೆಯಾಗಿ ಆಶ್ರಮರೂಪವಾಗಿರುವ ಬ್ರಹ್ಮ ಲೋಕವೇ ಮುಂತಾದ ಫಲವನ್ನು ಪಡೆಯುವದಕ್ಕೆ ಸಾಧನವಾಗಿರುವ ಪಾರಿವ್ರಾಜ್ಯವೂ ಇದೆ.[5] ಅದರ ವಿಷಯದಲ್ಲಿಯೇ (ಸ್ಮೃತಿಗಳಲ್ಲಿ)**

---

1. ವರ್ತಮಾನಾಪದೇಶವಾದರೂ ವಿಧಿಯಾಗಬಹುದೆಂದು ಒಪ್ಪಿ ಈಗ ಪೂರ್ವಪಕ್ಷಿ ವಾದಿಸುತ್ತಿದಾನೆ

2. ಯಜ್ಞೋಪವೀತವು ಗುರೂಪಾಸನೆಯೇ ಮುಂತಾದವುಗಳಲ್ಲಿರಬೇಕೆಂದು ಸ್ಮೃತಿ ವಿಹಿತವಾಗಿದೆ, ಶ್ರುತಿಯಲ್ಲಿಯೂ ಯಜ್ಞೋಪವೀತವು ಕರ್ಮಕ್ಕೆ ಅಂಗವಾಗಿ ವಿಹಿತವಾಗಿದೆ. ಲಿಂಗವು ಎಂದರೆ ತ್ರಿದಂಡ, ಕಮಂಡಲು- ಮುಂತಾದ ಸಂನ್ಯಾಸಿಯ ಚಿಹ್ನದ ವೇಷವು ಸ್ಮೃತಿ ಗಳಲ್ಲಿ ವಿಹಿತವಾಗಿವೆ, ಕೆಲವು ಶ್ರುತಿಗಳಲ್ಲಿಯೂ ಕಾಣಬರುತ್ತದೆ ಆದ್ದರಿಂದ ಪರಮಹಂಸನಿಗೂ ಅವು ಶ್ರುತಿಸ್ಮೃತಿವಿಹಿತವಾಗಿವೆ ಎಂಬು ಪೂರ್ವಪಕ್ಷಿಯ ಭಾವ, ವೇದದಲ್ಲಿ ಸರ್ವೇಷಣಾತ್ಯಾಗ ರೂಪವಾದ ಪಾರಮಹಂಸ್ಯಪಾರಿವ್ರಾಜ್ಯವೊಂದೇ ವಿಹಿತವಾಗಿದೆ ಎಂಬುದು ಭಾಷ್ಯಕಾರರ ಮತ, ಛಾಂ. ಭಾ ೨.೨೩-೧ನ್ನು ನೋಡಿ. ಇದನ್ನು ಸ್ಪಷ್ಟಗೊಳಿಸುವದಕ್ಕಾಗಿಯೇ ಇಲ್ಲಿ ಈ ಪೂರ್ವಪಕ್ಷಸಮಾಧಾನಗಳನ್ನು ಉದಾಹರಿಸಿದೆ.

3. ಆತ್ಮಜ್ಞಾನದೊಡನೆ ಏಷಣಾತ್ಯಾಗವು ಇದ್ದೇ ಇರುವದರಿಂದ ಆತ್ಮಜ್ಞಾನವಾಗಿ ಯತ್ನಿಸುವವನು ಅವಶ್ಯವಾಗಿ ಏಷಣಾತ್ಯಾಗವನ್ನು ಮಾಡತಕ್ಕದ್ದು.

4. ಜ್ಞಾನಸಾಧನಕ್ಕೆ ವಿರುದ್ಧವಾದದ್ದನ್ನು ಇಟ್ಟುಕೊಂಡರೆ ಜ್ಞಾನಪ್ರಾಪ್ತಿಗೆ ಅಡ್ಡಿ ಯಾಗುವದು ಎಂದು ಭಾವ.

5 ಇದೇ ತ್ರಿದಂಡಿಸಂನ್ಯಾಸವು ; ಅದನ್ನೇ ಸ್ಮೃತಿಗಳಲ್ಲಿ ವಿಧಿಸಿರುವದು. ಆಚಾ ರ್ಯರು ಇಲ್ಲಿ ಸ್ಪಷ್ಟವಾಗಿ ಈ ಸಂನ್ಯಾಸವನ್ನು ಒಪ್ಪಿದ್ದರೂ ಈಗಿನ ಸ್ಮಾರ್ತಬ್ರಾಹ್ಮಣರು ಅದೇಕೋ ಅದನ್ನು ಆಚರಣೆಯಲ್ಲಿಟ್ಟಿಲ್ಲ. **ಪೀಠಿಕೆಯನ್ನು ನೋಡಿ.**

**ಯಜ್ಞೋಪವೀತವೇ ಮುಂತಾದ ಸಾಧನಗಳನ್ನು ವಿಧಿಸಿದೆ; ಲಿಂಗವನ್ನೂ ವಿಧಿಸಿದೆ.**

## ಆತ್ಮಜ್ಞಾನಿಗೆ ಪರಮಹಂಸಪಾರಿವ್ರಾಜ್ಯವೇ ತಕ್ಕದ್ದು

(ಭಾಷ್ಯ)

೬೧. ನ ಚ ಏಷಣಾರೂಪಸಾಧನೋಪಾದಾನಸ್ಯ ಆಶ್ರಮಧರ್ಮಮಾತ್ರೇಣ ಪಾರಿವ್ರಾಜ್ಯಾನ್ತರೇ ವಿಷಯೇ ಸಂಭವತಿ ಸತಿ ಸರ್ವೋಪನಿಷದ್ವಿಹಿತಸ್ಯ ಆತ್ಮಜ್ಞಾನಸ್ಯ ಬಾಧನಂ ಯುಕ್ತಮ್ | ಯಜ್ಞೋಪವೀತಾದ್ಯವಿದ್ಯಾವಿಷಯೈಷಣಾರೂಪಸಾಧನೋಪಾದಿತ್ಸಾಯಾಂ ಚಾವಶ್ಯಮಸಾಧನಫಲರೂಪಸ್ಯ ಅಶನಾಯಾದಿ ಸಂಸಾರಧರ್ಮವರ್ಜಿತಸ್ಯ 'ಅಹಂ ಬ್ರಹ್ಮಾಸ್ಮಿ' ಇತಿ ವಿಜ್ಞಾನಂ ಬಾಧ್ಯತೇ |ನ ಚ ತದ್ಬಾಧನಂ ಯುಕ್ತಮ್ | ಸರ್ವೋಪನಿಷದಾಂ ತದರ್ಥಪರತ್ವಾತ್ | ಭಿಕ್ಷಾಚರ್ಯಂ ಚರನ್ತೀತ್ಯೇಷಣಾಂ ಗ್ರಾಹಯನ್ತೀ ಶ್ರುತಿಃ ಸ್ವಯಮೇವ ಬಾಧತೇ ಇತಿ ಚೇತ್ | ಅಥಾಪಿ ಸ್ಯಾತ್ ಏಷಣಾಭ್ಯೋ ವ್ಯುತ್ಥಾನಂ ವಿಧಾಯ ಪುನರೇಷಣೈಕದೇಶಂ ಭಿಕ್ಷಾಚರ್ಯಂ ಗ್ರಾಹಯನ್ತೀ ತತ್ಸಂಬದ್ಧಮ್ ಅನ್ಯದಪಿ ಗ್ರಾಹಯತಿ ಇತಿ ಚೇತ್ | ನ | ಭಿಕ್ಷಾಚರ್ಯಸ್ಯ ಅಪ್ರಯೋಜಕತ್ವಾತ್ ಹುತ್ವೋತ್ತರಕಾಲಭಕ್ಷಣವತ್ | ಶೇಷಪ್ರತಿಪತ್ತಿಕರ್ಮತ್ವಾತ್ ಅಪ್ರಯೋಜಕಂ ಹಿ ತತ್ | ಅಸಂಸ್ಕಾರಕತ್ವಾಚ್ಚ | ಭಕ್ಷಣಂ ಪುರುಷಸಂಸ್ಕಾರಕಮಪಿ ಸ್ಯಾತ್ | ನ ತು ಭಿಕ್ಷಾಚರ್ಯಮ್ | ನಿಯಮಾದೃಷ್ಟಸ್ಯಾಪಿ ಬ್ರಹ್ಮವಿದೋಽನಿಷ್ಟತ್ವಾತ್ | ನಿಯಮಾದೃಷ್ಟಸ್ಯ ಅನಿಷ್ಟತ್ವೇ ಕಿಂ ಭಿಕ್ಷಾಚರ್ಯೇಣ ಇತಿ ಚೇತ್ | ನ ಅನ್ಯಸಾಧನಾತ್ ವ್ಯುತ್ಥಾನಸ್ಯ ವಿಹಿತತ್ವಾತ್ | ತಥಾಪಿ ಕಿಂ ತೇನ ಇತಿ ಚೇತ್ | ಯದಿ (ನ)[1] ಸ್ಯಾತ್ ಬಾಢಮ್ ಅಭ್ಯುಪಗಮ್ಯತೇ ಹಿ ತತ್ | ಯಾನಿ ಪಾರಿವ್ರಾಜ್ಯೇ ಅಭಿಹಿತಾನಿ ವಚನಾನಿ "ಯಜ್ಞೋಪವೀತ್ಯೇವಾಧೀಯೀತ" (ತೈ. ಆ. ೨-೧-೧) ಇತ್ಯಾದೀನಿ ತಾನಿ ಅವಿದ್ವತ್ಪಾರಿವ್ರಾಜ್ಯಮಾತ್ರವಿಷಯಾಣೀತಿ ಪರಿಹೃತಾನಿ | ಇತರಥಾ ಆತ್ಮಜ್ಞಾನಬಾಧಃ ಸ್ಯಾದಿತಿ ಹಿ ಉಕ್ತಮ್ | "ನಿರಾಶಿಷಮನಾರಮ್ಭಂ ನಿರ್ನಮಸ್ಕಾರಮಸ್ತುತಿಮ್ | ಅಕ್ಷೀಣಂ ಕ್ಷೀಣಕರ್ಮಾಣಂ ತಂ ದೇವಾ ಬ್ರಾಹ್ಮಣಂ ವಿದುಃ" || (ಮೋ. ಧ. ೨೬೩-೩೪)[2] ಇತಿ ಸರ್ವಕರ್ಮಾಭಾವಂ ದರ್ಶಯತಿ

---

1. ಯದಿ ನ ಸ್ಯಾತ್ ಎಂದಿರಬೇಕೆಂದು ಕಲ್ಪಿಸಿದೆ. ಅನುವಾದದ ಟಿಪ್ಪಣಿಯನ್ನು ನೋಡಿ.

2. ಈ ವಾಕ್ಯವು ಮೋ. ಧ. ೨೪೫-೨೪ರಲ್ಲಿಯೂ ಇದೆ ; ಆದರೆ ಅಲ್ಲಿ "ನಿರ್ಮುಕ್ತಂ ಬನ್ಧನೈಃ ಸರ್ವೈಃ" ಎಂದು ಮೂರನೆಯ ಪಾದ.

ಸ್ಮೃತಿಪರ್ವದುಷಃ । " ವಿದ್ವಾಲ್ಲಿಙ್ಗವರ್ಜಿತಃ" ( ? )[1] | 'ತಸ್ಮಾದಲಿಙ್ಗೋ ಧರ್ಮಜ್ಞಃ' (ಅಶ್ವ. ೪೬-೫೧) ಇತಿ ಚ[2] | ತಸ್ಮಾತ್ ಪರಮಹಂಸಪಾರಿವ್ರಾಜ್ಯ ಮೇವ ವ್ಯುತ್ಥಾನಲಕ್ಷಣಂ ಪ್ರತಿಪದ್ಯೇನ ಆತ್ಮವಿತ್ ಸರ್ವಕರ್ಮಸಾಧನಪರಿ ತ್ಯಾಗರೂಪಮಿತಿ ||

(ಭಾಷ್ಯಾರ್ಥ)

**ಏಷಣಾರೂಪವಾದ ಸಾಧನಗಳನ್ನು[3] ಸ್ವೀಕರಿಸುವದು ಆಶ್ರಮಧರ್ಮ ಮಾತ್ರವಾಗಿದ್ದು ಮತ್ತೊಂದು ಪಾರಿವ್ರಾಜ್ಯವು (ಅದಕ್ಕೆ) ವಿಷಯವಾಗಿ ಸಂಭವಿಸುತ್ತಿದ್ದರೂ ಎಲ್ಲಾ ಉಪನಿಷತ್ತುಗಳಲ್ಲಿಯೂ ವಿಹಿತವಾಗಿರುವ ಆತ್ಮ ಜ್ಞಾನವನ್ನು ಬಾಧಿಸುವದು ಯುಕ್ತವಲ್ಲ.**[4] (ಆದರಿಂದ) ಯಜ್ಞೋಪವೀತವೇ ಮುಂತಾದ ಅವಿದ್ಯಾವಿಷಯದ ಏಷಣೆಗಳ ರೂಪವಾಗಿರುವ ಸಾಧನಗಳನ್ನು ಸ್ವೀಕ ರಿಸುವದಕ್ಕೆ ಹೋದರೆ ಸಾಧನಫಲರೂಪವಲ್ಲದ ಹಸಿವು ಮುಂತಾದ ಸಂಸಾರಧರ್ಮ ವರ್ಜಿತನಾಗಿರುವ(ಆತ್ಮನ ವಿಷಯಕವಾದ) "ನಾನು ಬ್ರಹ್ಮವಾಗಿರುವೆನು" ಎಂಬ ವಿಜ್ಞಾನವು ಅವಶ್ಯವಾಗಿ ಬಾಧಿತವಾಗುತ್ತದೆ. ಆದರೆ ಅದನ್ನು ಬಾಧಿಸುವದು ಯುಕ್ತವಲ್ಲ; ಏಕೆಂದರೆ ಎಲ್ಲಾ ಉಪನಿಷತ್ತುಗಳೂ ಆ ಅರ್ಥದಲ್ಲಿಯೇ ತಾತ್ಪರ್ಯ ವುಳ್ಳವಾಗಿರುತ್ತವೆ.

(ಆಕ್ಷೇಪ):—" ಭಿಕ್ಷಾಚರ್ಯೆಯನ್ನು ಮಾಡುತ್ತಾರೆ" ಎಂದು ಏಷಣೆ ಯನ್ನು ಗ್ರಹಣಮಾಡಿಸುವದರಿಂದ ಶ್ರುತಿಯು ತಾನೇ (ಆ ಜ್ಞಾನವನ್ನು) ಬಾಧಿಸುತ್ತಿದೆಯಲ್ಲ ! (ಇದರ ವಿವರ : ಪೂರ್ವಪಕ್ಷಿಯ ಮತವು) ಹೀಗೂ ಇರ ಬಹುದು : ಏಷಣೆಗಳನ್ನು ಬಿಟ್ಟೇಳಬೇಕೆಂದು ವಿಧಿಸಿ ಮತ್ತೆ ಏಷಣೆಗಳಲ್ಲಿ ಒಂದು ಭಾಗವಾಗಿರುವ ಭಿಕ್ಷಾಚರ್ಯೆಯನ್ನು ಗ್ರಹಿಸುವಂತೆ ಮಾಡುವದರಿಂದ,

---

1. ಇದು ಯಾವ ಸ್ಮೃತಿಯೆಂಬುದು ತಿಳಿಯಲಿಲ್ಲ ; ಹಿಂದೆ ೫೬ರಲ್ಲಿಯೂ ಬಂದಿದೆ. ವಿವರ್ಜಿತಃ ಎಂಬ ಅ॥ ಪಾಠವು ಅಚ್ಚಿನ ತಪ್ಪಿರಬಹುದು.

2. ಹಿಂದೆ ಭಾ. ಭಾ. ೫೬ ರಲ್ಲಿ ಉದಾಹರಿಸಿರುವ ಈ ವಾಕ್ಯದ ಟಿಪ್ಪಣಿಯನು ನೋಡಿ.

3. ಯಜ್ಞೋಪವೀತ, ಕರ್ಮ, ಆಶ್ರಮಲಿಂಗವಾದ ತ್ರಿದಂಡಾದಿಗಳು ಇವನ್ನು ಎಂದರ್ಥ. ಸಾಧನಸಾಧ್ಯಗಳೆರಡನ್ನೂ ಮಿಕ್ಕ ಸಂನ್ಯಾಸಿಗಳು ಇಟ್ಟುಕೊಂಡಿರುತ್ತಾರೆ ಎಂಬು ದನ್ನು ಇದು ಸೂಚಿಸುತ್ತದೆ.

4. ಆತ್ಮಜ್ಞಾನಕ್ಕೆ ಏಷಣೆಯನ್ನು ಗಂಟುಹಾಕುವದಕ್ಕೆ ಕಾರಣವಿಲ್ಲದಿದ್ದರೂ ಗಂಟು ಹಾಕಿ, ಆತ್ಮಜ್ಞಾನವೇ ಇಲ್ಲ ಎಂದು ಮಾಡುವದು ಸರಿಯಲ್ಲ.

(ಶ್ರುತಿಯು) ಅದಕ್ಕೆ ಸಂಬಂಧಪಟ್ಟ ಮತ್ತೊಂದನ್ನೂ ಗ್ರಹಿಸುವಂತೆ ಮಾಡಿಸುತ್ತದೆ[1] (ಎನ್ನಬೇಕಲ್ಲವೆ)?

(ಪರಿಹಾರ):—ಹಾಗಲ್ಲ. ಏಕೆಂದರೆ ಭಿಕ್ಷಾಚರ್ಯೆಯು ಮತ್ತೇನನ್ನೂ ಬಯಸುವದಲ್ಲ. ಹೋಮಮಾಡಿದಮೇಲಿನ ಕಾಲದಲ್ಲಿ ಮಾಡುವ ಭಕ್ಷಣವು ಹೇಗೋ ಹಾಗೆಯೇ ಇದು. ಉಳಿದದ್ದರ ಪ್ರತಿಪತ್ತಿಕರ್ಮವಾಗಿರುವದರಿಂದ[2] (ಅದು ಮತ್ತೇತಕ್ಕೂ) ಪ್ರಯೋಜಕವಲ್ಲವಷ್ಟೆ[3]. ಸಂಸ್ಕಾರಕವಲ್ಲದ್ದರಿಂದಲೂ (ಹೀಗೆ. ಇದರ ವಿವರ): (ಅ) ಭಕ್ಷಣವು ಪುರುಷನಿಗೆ ಸಂಸ್ಕಾರಕವಾಗಿಯಾದರೂ ಆದೀತು,[4] ಆದರೆ ಭಿಕ್ಷಾಚರ್ಯವು (ಅದನ್ನು ಮಾಡ)ಲಾರದು; ಏಕೆಂದರೆ ನಿಯಮಾದೃಷ್ಟವೂ ಬ್ರಹ್ಮಜ್ಞಾನಿಯ ವಿಷಯಕ್ಕೆ ಇಷ್ಟವಲ್ಲ[5]

(ಆಕ್ಷೇಪ):—ನಿಯಮಾದೃಷ್ಟವು ಇಷ್ಟವಲ್ಲದಿದ್ದರೆ, ಭಿಕ್ಷಾಚರ್ಯೆಯನ್ನು (ವಿಧಿಸುವದರಿಂದ) ಆಗಬೇಕಾದದ್ದೇನು ?[6]

(ಪರಿಹಾರ) :—ಹಾಗಲ್ಲ. ಮತ್ತೊಂದು ಸಾಧನವನ್ನು ಬಿಟ್ಟೇಳಬೇಕು ಎಂಬುದನ್ನು (ಇಲ್ಲಿ) ವಿಧಿಸಿರುತ್ತದೆ.[7]

---

1. ಭಿಕ್ಷಾಚರ್ಯೆಯೂ ಏಷಣೆಯೇ, ಅದನ್ನು ಗ್ರಹಿಸಬೇಕೆಂದು ಶ್ರುತಿ ಹೇಳಿದ್ದರಿಂದ ಮಿಕ್ಕ ಯಜ್ಞೋಪವೀತಕರ್ಮಾದಿಗಳನ್ನೂ ಗ್ರಹಿಸಬೇಕೆಂದೇ ಆಯಿತು. ಆದ್ದರಿಂದ ಸಾಧನಲಿಂಗತ್ಯಾಗವನ್ನು ಬಿಟ್ಟು ಮಿಕ್ಕ ಏಷಣೆಗಳನ್ನೇ ತ್ಯಾಗಮಾಡಬೇಕೆಂದು ಶ್ರುತ್ಯರ್ಥವನ್ನು ಕಲ್ಪಿಸಬೇಕು ಎಂದು ಪೂರ್ವಪಕ್ಷಿಯ ಭಾವ.

2. ಹೋಮಮಾಡಿ ಉಳಿದ ಸೋಮವನ್ನು ಪಾನಮಾಡಬೇಕು ಎಂಬಲ್ಲಿ ಸ್ವಲ್ಪ ಉಳಿದರೆ ಅದಕ್ಕೇನು ವಿನಿಯೋಗ ?- ಎಂಬಿಷ್ಟನ್ನೇ ಹೇಳುತ್ತದೆ; ಅದೂ ಒಂದು ಸ್ವತಂತ್ರಕರ್ಮವಲ್ಲ.

3. ಆದ್ದರಿಂದ ಅದಕ್ಕೆ ಮತ್ತೇತರ ಅಪೇಕ್ಷೆಯೂ ಇಲ್ಲ.

4. ಏಕೆಂದರೆ ಶ್ರುತಿಚೋದಿತವಾಗಿರುತ್ತದೆ.

5. ಭಿಕ್ಷೆಯನ್ನೇ ಮಾಡಬೇಕು, ಹೀಗೆಯೇ ಭಿಕ್ಷೆಯನ್ನು ಮಾಡಬೇಕು- ಮುಂತಾದ ನಿಯಮಗಳಿಂದ ಅದೃಷ್ಟವಾದ ಫಲವೇನೂ ಪ್ರಾಪ್ತವಾಗುವದಿಲ್ಲ. ವಿವಿದಿಷಾಸಂನ್ಯಾಸಿಗೆ ಅವು ಶ್ರವಣಾದಿಗಳಿಗೆ ಅನುಗುಣವಾಗಿರುತ್ತವೆ.

6. ಜ್ಞಾನಿಗೇ ಭಿಕ್ಷಾಚರ್ಯೆಯನ್ನು ಶ್ರುತಿಯು ವಿಧಿಸಿದೆ ಎಂದು ಪೂರ್ವಪಕ್ಷಿ ಭ್ರಮಿಸಿರುತ್ತಾನೆ. ಇಲ್ಲದಿದ್ದರೆ ವಿಧಿಯೇ ವ್ಯರ್ಥವಾಯಿತಲ್ಲ ! ಎಂದು ಅವನ ಆಕ್ಷೇಪ.

7. ಶರೀರಧಾರಣೆಗಾಗಿ ಗೃಹಸ್ಥನಂತೆ ಪ್ರತಿಗ್ರಹಾದಿಗಳನ್ನು ಮಾಡಬಾರದು- ಎಂಬುದೇ ಇಲ್ಲಿ ವಿವಕ್ಷಿತ ; ಈ ನಿಯಮವೂ ಜ್ಞಾನಿಗಲ್ಲ, ಏಕೆಂದರೆ ಅವನು ಏಷಣಾತ್ಯಾಗವನ್ನು ಮಾಡಿಯೇ ಇರುತ್ತಾನೆ ವಿವಿದಿಷುವಾದವನಿಗೆ ಹಸಿವನ್ನಡಗಿಸಿಕೊಂಡು ಶ್ರವಣಾದಿಗಳನ್ನುಮಾಡುವ ಮಟ್ಟಿಗೆ ಇವು ಉಪಯುಕ್ತವಾಗಿರುತ್ತವೆ, ಅಷ್ಟೆ; ಪ್ರತಿಗ್ರಹಾದಿಗಳು ಜ್ಞಾನಕ್ಕೆ ವಿರೋಧಿಗಳಾದ್ದರಿಂದ ಅವನ್ನು ಮಾಡಬಾರದು ಎಂದು ವಿಧಿಸಿದೆ ಎಂದು ಭಾವ.

(ಆಕ್ಷೇಪ):—ಹಾಗಾದರೂ ಆ (ಭಿಕ್ಷಾಚರ್ಯೆಯಿಂದ ಆಗಬೇಕಾಗಿರುವ) ದೇನು ?[1]

(ಪರಿಹಾರ):—(ಏನೂ) ಆಗದಿದ್ದರೆ, ಹಾಗೇ ಆಗಲಿ. ಅದನ್ನು ಒಪ್ಪಿರುತ್ತೇವಲ್ಲ ![2]

ಪಾರಿವ್ರಾಜ್ಯದಲ್ಲಿ ಹೇಳಿರುವ "ಯಜ್ಞೋಪವೀತಿಯಾಗಿಯೇ ಅಧ್ಯಯನ ಮಾಡಬೇಕು...." (ತೈ. ಆ. ೨-೧-೧) ಮುಂತಾದ ವಚನಗಳಿವೆಯಲ್ಲ, ಅವು ಅಜ್ಞರು (ಮಾಡುವ) ಪಾರಿವ್ರಾಜ್ಯಮಾತ್ರದ ವಿಷಯ[3] ಎಂದು ಪರಿಹರಿಸಿದ್ದಾಗಿದೆ. ಏಕೆಂದರೆ ಹಾಗೆನ್ನದಿದ್ದರೆ ಆತ್ಮಜ್ಞಾನವೇ ಬಾಧಿತವಾಗುವದು ಎಂದು ಹೇಳಿದೇವೆ. "ಯಾವ ಆಶೆಯೂ ಇಲ್ಲದೆ, ಯಾವ ಕರ್ಮವೂ ಇಲ್ಲದೆ, ನಮಸ್ಕಾರವಿಲ್ಲದೆ, ಸ್ತುತಿಯಿಲ್ಲದೆ, (ತಾನು) ಅಪಕ್ಷಯವಾಗದೆ ಇದ್ದು, ಕರ್ಮಗಳನ್ನೆಲ್ಲ ಕ್ಷಯಗೊಳಿಸಿಕೊಂಡಿರುವನು (ಯಾವನೋ) ಅವನನ್ನು ದೇವತೆಗಳು ಬ್ರಾಹ್ಮಣನೆಂದು ಭಾವಿಸುತ್ತಾರೆ" (ಮೋ. ಧ, ೨೬೩-೩೪) ಎಂದು ಸ್ಮೃತಿಯು ಜ್ಞಾನಿಗೆ ಯಾವ ಕರ್ಮವೂ ಇಲ್ಲವೆಂದು ತಿಳಿಸುತ್ತದೆ. "ಜ್ಞಾನಿಯು ಲಿಂಗರಹಿತನು" ( ? ), "ಆದ್ದರಿಂದ ಅಲಿಂಗನಂದ ಧರ್ಮಜ್ಞನು" (ಅಶ್ವ. ೪೬-೪೧) ಎಂದೂ (ತಿಳಿಸುತ್ತಿದೆ). ಆದ್ದರಿಂದ (ಏಷಣೆಗಳನ್ನು) ಬಿಟ್ಟೇಳುವ ಸ್ವರೂಪದ ಪರಮಹಂಸಪಾರಿವ್ರಾಜ್ಯವನ್ನೇ, ಸರ್ವಕರ್ಮಗಳನ್ನೂ ಸಾಧನಗಳನ್ನೂ ಪರಿತ್ಯಜಿಸುವ (ಪಾರಿವ್ರಾಜ್ಯವನ್ನೇ) ಆತ್ಮಜ್ಞಾನಿಯು ಸ್ವೀಕರಿಸಬೇಕು.[4]

---

1. ಶಾಸ್ತ್ರವು ಅದನ್ನು ಹೇಳಬೇಕಾದದ್ದೇನು ?

2. ಮತ್ತೇನೂ ಮಾಡಬಾರದು ಎಂದು ವಿವಿದಿಷುವಿಗೆ ನೆನಪುಕೊಡುವದಕ್ಕಿಂತ ಮತ್ತೆ ಬೇರೆ ಪ್ರಯೋಜನವೇನೂ ಅವಕ್ಕಿಲ್ಲ ಎಂಬುದೇ ನಮ್ಮ ಮತ. ಭಿಕ್ಷಾಚರ್ಯೆ ಎಂಬುದನ್ನು ಒಂದು ಕರ್ಮವಾಗಿಯೇನೂ ಶ್ರುತಿ ವಿಧಿಸಿಲ್ಲ. ಇಲ್ಲಿ ಮೂಲದಲ್ಲಿ ಯದಿ ಸ್ಯಾತ್ ಎಂಬ ಪಾಠವಿದ್ದರೆ ಆಗುವದಾದರೆ ಎಂದರ್ಥವಾಗುತ್ತದೆ ; ಪೂರ್ವಪಕ್ಷಿಯು ಏನೂ ಆಗುವದಿಲ್ಲ ಎಂದೇ ಹೇಳುತ್ತಾನಾದ್ದರಿಂದ ಯದಿ ನ ಸ್ಯಾತ್ ಎಂಬ ಪಾಠವನ್ನಿಟ್ಟುಕೊಳ್ಳುವದೇ ಉತ್ತಮವೆಂಬುದು ಸ್ಪಷ್ಟ.

3. ತ್ರಿದಂಡಿಸಂನ್ಯಾಸದ ವಿಷಯ.

4. ಆತ್ಮಜ್ಞಾನಿಗೆ ವಿಧಿ ಬೇಕಿಲ್ಲವಾದ್ದರಿಂದ ಅವನು ಪರಮಹಂಸಪಾರಿವ್ರಾಜ್ಯವನ್ನೇ ಸ್ವೀಕರಿಸುತ್ತಾನೆ; ಆದ್ದರಿಂದ ಮುಮುಕ್ಷುವಾದವನೂ ಅದನ್ನೇ ಸ್ವೀಕರಿಸಬೇಕು ಎಂದು ಅಭಿಪ್ರಾಯ. ಏಕೆಂದರೆ ಕೃತಾರ್ಥನಾದ ಜ್ಞಾನಿಯ ಲಕ್ಷಣವೇ ಜಿಜ್ಞಾಸುಗಳಿಗೆ ಸಾಧನವಾಗಿರುತ್ತದೆ.

# ಬ್ರಹ್ಮನಿಷ್ಠೆಗೆ ಬೇಕಾದ ಸಾಧನಗಳು

(ಭಾಷ್ಯ)

೬೨. ಯಸ್ಮಾತ್ ಪೂರ್ವೇ ಬ್ರಾಹ್ಮಣಾಃ ಏತಮಾತ್ಮಾನಮ್ ಅಸಾಧನ ಫಲಸ್ವಭಾವಂ ವಿದಿತ್ವಾ ಸರ್ವಸ್ಮಾತ್ ಸಾಧನಫಲಸ್ವರೂಪಾತ್ ಏಷಣಾಲಕ್ಷಣಾತ್ ವ್ಯುತ್ಥಾಯ ಭಿಕ್ಷಾಚರ್ಯಂ ಚರನ್ತಿ ಸ್ಮ ದೃಷ್ಟಾದೃಷ್ಟಾರ್ಥಕರ್ಮ ತತ್ಸಾಧನಂ ಚ ಹಿತ್ವಾ। ತಸ್ಮಾತ್ ಅದ್ಯತ್ವೇಽಪಿ ಬ್ರಾಹ್ಮಣೋ ಬ್ರಹ್ಮವಿತ್ ಪಾಣ್ಡಿತ್ಯಂ ಪಣ್ಡಿತ ಭಾವಮ್ ಏತದಾತ್ಮವಿಜ್ಞಾನಮ್ ಪಾಣ್ಡಿತ್ಯಂ ನಿರ್ವಿದ್ಯ ನಿಃಶೇಷಂ ವಿದಿತ್ವಾ ಆತ್ಮ ವಿಜ್ಞಾನಂ ನಿರವಶೇಷಂ ಕೃತ್ವಾ ಇತ್ಯರ್ಥಃ, ಆಚಾರ್ಯತಃ ಆಗಮತಶ್ಚ। ಏಷ ಣಾಭ್ಯೋ ವ್ಯುತ್ಥಾಯ। ಏಷಣಾವ್ಯುತ್ಥಾನಾವಸಾನಮೇವ ಹಿ ತತ್ ಪಾಣ್ಡಿತ್ಯಮ್। ಏಷಣಾತಿರಸ್ಕಾರೋದ್ಭವತ್ವಾತ್, ಏಷಣಾವಿರುದ್ಧತ್ವಾತ್। ಏಷಣಾಮ್ ಅತಿರಸ್ಕೃತ್ಯ ನ ಹಿ ಆತ್ಮವಿಷಯಸ್ಯ ಪಾಣ್ಡಿತ್ಯಸ್ಯ ಉದ್ಭವಃ ಇತಿ ಆತ್ಮಜ್ಞಾನೇನೈವ ವಿಹಿತಮ್ ಏಷಣಾವ್ಯುತ್ಥಾನಮ್। ಆತ್ಮಜ್ಞಾನಸಮಾನಕರ್ತೃಕತ್ವಾಪ್ರತ್ಯಯೋಪಾದಾನ ಲಿಙ್ಗಶ್ರುತ್ಯಾ ದೃಢೀಕೃತಮ್। ತಸ್ಮಾತ್ ಏಷಣಾಭ್ಯೋ ವ್ಯುತ್ಥಾಯ ಜ್ಞಾನಬಲ ಭಾವೇನ ಬಾಲ್ಯೇನ ತಿಷ್ಠಾಸೇತ್ ಸ್ಥಾತುಮಿಚ್ಛೇತ್। ಸಾಧನಫಲಾಶ್ರಯಣಂ ಹಿ ಬಲಮ್ ಇತರೇಷಾಮ್ ಅನಾತ್ಮವಿದಾಮ್। ತದ್ಬಲಂ ಹಿತ್ವಾ ವಿದ್ವಾನ್ ಅಸಾಧನಫಲಸ್ವರೂಪಾತ್ಮವಿಜ್ಞಾನಮೇವ ಬಲಂ ತದ್ಭಾವಮೇವ ಕೇವಲಮ್ ಆಶ್ರಯೇತ್। ತದಾಶ್ರಯಣೇ ಹಿ ಕರಣಾನಿ ಏಷಣಾ ವಿಷಯೇ ಏನಂ ಹೃತ್ವಾ ಸ್ಥಾಪಯಿತುಂ[1] ನೋತ್ಸಹನ್ತೇ। ಜ್ಞಾನಬಲಹೀನಂ ಹಿ ಮೂಢಂ ದೃಷ್ಟಾದೃಷ್ಟ ವಿಷಯಾಯಾಮ್ ಏಷಣಾಯಾಮೇವ[2] ಏನಂ ಕರಣಾನಿ ನಿಯೋಜಯನ್ತಿ। ಬಲಂ ನಾಮ ಆತ್ಮವಿದ್ಯಯಾ ಅಶೇಷವಿಷಯದೃಷ್ಟಿತಿರಸ್ಕರಣಮ್। ಅತಃ ತದ್ಭಾವೇನ ತಿಷ್ಠಾಸೇತ್। (ತಥಾ)[3] "ಆತ್ಮನಾ ವಿನ್ದತೇ ವೀರ್ಯಮ್" (ಕೇ. ೨-೪) ಇತಿ ಶ್ರುತ್ಯನ್ತರಾತ್। "ನಾಯಮಾತ್ಮಾ ಬಲಹೀನೇನ ಲಭ್ಯಃ" (ಮುಂ. ೩-೨ ೪) ಇತಿ ಚ। ಬಾಲ್ಯಂ ಚ ಪಾಣ್ಡಿತ್ಯಂ ಚ ನಿರ್ವಿದ್ಯ ನಿಃಶೇಷಃ ಕೃತ್ವಾ। ಅಥ ಮನನಾತ್ ಮುನಿರ್ಯೋಗೀ ಭವತಿ। ಏತಾವದ್ಧಿ ಬ್ರಾಹ್ಮಣೇನ ಕರ್ತವ್ಯಮ್ ಯದುತ ಸರ್ವಾನಾತ್ಮಪ್ರತ್ಯಯತಿರಸ್ಕರಣಮ್ ಏತತ್ಕೃತ್ವಾ ಕೃತ ಕೃತ್ಯೋ ಯೋಗೀ ಭವತಿ ॥

---

1. 'ಸ್ಥಾಪಯಿತುಮ್' ಎಂಬ ಪಾಠಕ್ಕಿಂತ ಇದೇ ಉತ್ತಮ.
2. ಇದರ ಮುಂದಿರುವ 'ಏನಂ' ಬೇಕಿಲ್ಲವೆಂದು ಬಿಟ್ಟಿದೆ.
3. ಈ ಮಾತು ಅವಶ್ಯವಿಲ್ಲ. ನಾವು ಕನ್ನಡಿಸಿಲ್ಲ.

(ಭಾಷ್ಯಾರ್ಥ)

(ಹೀಗೆ) ಹಿಂದಿನ ಬ್ರಾಹ್ಮಣರು ಈ ಆತ್ಮನನ್ನು ಸಾಧನಫಲಸ್ವಭಾವದವನಲ್ಲವೆಂದರಿತುಕೊಂಡು ಸಾಧನಫಲಸ್ವರೂಪವಾದ ಏಷಣಾಲಕ್ಷಣವಾಗಿರುವ ಎಲ್ಲವನ್ನೂ ಬಿಟ್ಟಿದ್ದು ಭಿಕ್ಷಾಚರ್ಯೆಯನ್ನು ಮಾಡುತ್ತಿದ್ದರಲ್ಲ, ದೃಷ್ಟಾರ್ಥವಾದ ಮತ್ತು ಅದೃಷ್ಟಾರ್ಥವಾದ ಕರ್ಮವನ್ನೂ ಅದರ ಸಾಧನವನ್ನೂ ಬಿಟ್ಟು (ಭಿಕ್ಷಾಚರ್ಯೆಯನ್ನು ಮಾಡುತ್ತಿದ್ದರಲ್ಲ), ಆ ಕಾರಣದಿಂದ ಈಗಲೂ ಬ್ರಾಹ್ಮಣನು, ಬ್ರಹ್ಮವನ್ನು ಬಲ್ಲಾತನು[1] ಪಾಂಡಿತ್ಯವನ್ನು ಪಂಡಿತಭಾವವನ್ನು, ಈ ಆತ್ಮಜ್ಞಾನವೆಂಬ ಪಾಂಡಿತ್ಯವನ್ನು ಪೂರ ತಿಳಿದುಕೊಂಡು ಸ್ವಲ್ಪವೂ ಉಳಿಯದಂತೆ ತಿಳಿದುಕೊಂಡು, ಆಚಾರ್ಯನಿಂದಲೂ ಆಗಮದಿಂದಲೂ ಆತ್ಮಜ್ಞಾನವನ್ನು ಸ್ವಲ್ಪವೂ ಉಳಿಯದಂತೆ ಮಾಡಿಕೊಂಡು ಎಂದರ್ಥ. ಏಷಣೆಗಳನ್ನು ಬಿಟ್ಟಿದ್ದು–ಏಷಣೆಗಳನ್ನು ಬಿಟ್ಟೇಳುವದರಲ್ಲಿಯೇ ಮುಗಿಯುವದಲ್ಲವೆ, ಆ ಪಾಂಡಿತ್ಯವು? ಏಕೆಂದರೆ (ಅದು) ಏಷಣೆಗಳನ್ನು ಮರೆಮಾಡಿಯೇ (ತಾನು) ಉಂಟಾಗುತ್ತದೆ, ಏಷಣೆಗಳಿಗೆ ವಿರುದ್ಧವಾಗಿರುತ್ತದೆ. **ಏಷಣೆಯನ್ನು ಮರೆಗೈಯದೆ ಆತ್ಮವಿಷಯದ ಪಾಂಡಿತ್ಯವು ಉಂಟಾಗುವದಿಲ್ಲವಾದ್ದರಿಂದ ಆತ್ಮಜ್ಞಾನದಿಂದಲೇ ಏಷಣೆಗಳನ್ನು ಬಿಟ್ಟೇಳುವದೆಂಬುದನ್ನು ವಿಧಿಸಿದಂತಾಯಿತು; ಆತ್ಮಜ್ಞಾನಕ್ಕೆ ಸಮಾನಕರ್ತೃಕವಾದ (ಅರ್ಥವನ್ನು ತಿಳಿಸುವ ಕ್ತ್ವಾಪ್ರತ್ಯಯವನ್ನು ಸ್ವೀಕರಿಸಿರುವ ಲಿಂಗವುಳ್ಳ ಶ್ರುತಿಯಿಂದ (ಇದನ್ನು) ದೃಢಗೊಳಿಸಿದಂತೆಯೂ ಆಯಿತು.**[2]

ಆದ್ದರಿಂದ (ಹೀಗೆ) ಏಷಣೆಗಳನ್ನು ಬಿಟ್ಟಿದ್ದು ಬಾಲ್ಯವನ್ನು ಎಂದರೆ ಜ್ಞಾನಬಲಭಾವದಿಂದ ನಿಲ್ಲಲೆಳಸಬೇಕು, ನಿಲ್ಲುವ ಇಚ್ಛೆಯನ್ನು ಮಾಡಬೇಕು. **ಸಾಧನಫಲಗಳನ್ನು ಆಶ್ರಯಿಸುವದಲ್ಲವೆ, ಉಳಿದವರಾದ ಅನಾತ್ಮಜ್ಞರಿಗೆ ಬಲವು? ಆ ಬಲವನ್ನು ಬಿಟ್ಟು ಜ್ಞಾನಿಯು ಅಸಾಧನಫಲಸ್ವರೂಪವಾದ ಆತ್ಮವಿಜ್ಞಾನವೆಂಬ ಬಲವಿದೆಯಲ್ಲ, ಆ ಬಲದ ಭಾವವೊಂದನ್ನೇ ಆಶ್ರಯಿಸ**

---

. ಬ್ರಹ್ಮವನ್ನು ಸಾಮಾನ್ಯರೂಪದಿಂದ ತಿಳಿದುಕೊಂಡಿರುವ ಸಂನ್ಯಾಸಿಯು ಎಂದರ್ಥ. ಸೂ. ಭಾ. ೩-೪-೪೭ (ಭಾ. ಭಾ. ೪೯೩ ನ್ನು) ನೋಡಿ.

2. ಪೂರ್ಣಪಾಂಡಿತ್ಯದಿಂದ ನಿಲ್ಲಲೆಳಸಬೇಕು, ಬಾಲ್ಯದಿಂದ ನಿಲ್ಲಲೆಳಸಬೇಕು, ಮೌನದಿಂದ ನಿಲ್ಲಲೆಳಸಬೇಕು– ಎಂದು ಎಲ್ಲಾ ಕಡೆಯಲ್ಲಿಯೂ ವಿಧಿಯನ್ನು ಕಲ್ಪಿಸಿಕೊಳ್ಳಬೇಕು (೩–೧೭೭); ಇಲ್ಲಿ ವಿಧಿಯು ಪ್ರತ್ಯಕ್ಷವಾಗಿ ಶ್ರುತವಾಗಿರುವಲ್ಲಿ 'ಭಿಕ್ಷಾಚರ್ಯಂ ಚರನ್ತಿ' ಎಂಬಲ್ಲಿ ಕಲ್ಪಿಸುವದಕ್ಕೆ ಯತ್ನಿಸುವದು ವ್ಯರ್ಥ (೩–೧೬೫) ಎಂದು **ವಾರ್ತಿಕ**. ಆದರೆ ಜ್ಞಾನದಲ್ಲಿ ಹೇಗೆ ಶ್ರುತಿಗೆ ತಾತ್ಪರ್ಯವೋ ಭಿಕ್ಷಾಚರ್ಯೆಯಲ್ಲಿಯೂ ಹಾಗೆಯೇ ತಾತ್ಪರ್ಯ; ಏಷಣಾತ್ಯಾಗವು ಸಂಪೂರ್ಣವಾಗಿ ಇಲ್ಲಿ ವಿವಕ್ಷಿತವಾಗಿದೆ ಎಂಬುದಿಷ್ಟೇ ಭಾಷ್ಯಕಾರರ ಮತ.

**ಬೇಕು.**[1] ಅದನ್ನು ಆಶ್ರಯಿಸಿದರಲ್ಲವೆ, ಕರಣಗಳು ಇವನನ್ನು ಒಯ್ದು ಏಷಣಾ ವಿಷಯದಲ್ಲಿ ನಿಲ್ಲಿಸಲಾರದೆ ಹೋಗುವವು ? ಜ್ಞಾನಬಲವಿಲ್ಲದ ಮೂಢನನ್ನಲ್ಲವೆ, ದೃಷ್ಟಾದೃಷ್ಟವಿಷಯವಾದ ಏಷಣೆಯಲ್ಲಿಯೇ ಕರಣಗಳು (ಪ್ರವರ್ತಿಸುವಂತೆ) ಕಟ್ಟುಮಾಡುತ್ತಿರುವವು ? (ಇಲ್ಲಿ) ಬಲವು ಎಂದರೆ ಆತ್ಮವಿದ್ಯೆಯಿಂದ ಎಲ್ಲಾ ವಿಷಯಗಳ ದೃಷ್ಟಿಯನ್ನೂ ಮರೆಗೈಯುವದು. ಆದ್ದರಿಂದ ಆ (ಬಲ)ಭಾವವಾದ ಬಾಲ್ಯದಿಂದ ನಿಲ್ಲಲೆಳಸಬೇಕು. ಏಕೆಂದರೆ "ಆತ್ಮನಿಂದ ವೀರ್ಯವನ್ನು ಪಡೆಯುತ್ತಾನೆ," (ಕೇ. ೨-೪) ಎಂದೂ "ಈ ಆತ್ಮನು ಬಲಹೀನನಿಗೆ ದೊರಕುವದಿಲ್ಲ" (ಮುಂ. ೩-೨-೪) ಎಂದೂ ಶ್ರುತ್ಯಂತರವಿದೆ.

ಬಾಲ್ಯವನ್ನೂ ಪಾಂಡಿತ್ಯವನ್ನೂ ಪೂರ ತಿಳಿದುಕೊಂಡು ಸ್ವಲ್ಪವೂ ಉಳಿಯದಂತೆ ಮಾಡಿಕೊಂಡು, ಆ ಬಳಿಕ ಮನನದಿಂದ ಮುನಿಯು ಎಂದರೆ ಯೋಗಿಯು ಆಗುತ್ತಾನೆ.[2] ಎಲ್ಲಾ ಅನಾತ್ಮಪ್ರತ್ಯಯವನ್ನೂ ಮರೆಮಾಡಿಕೊಳ್ಳುವದೆಂಬುದಿಷ್ಟೇ ಅಲ್ಲವೆ, ಬ್ರಾಹ್ಮಣನಾದವನು ಮಾಡತಕ್ಕದ್ದು ? ಇದನ್ನು ಮಾಡಿದರೆ ಕೃತಕೃತ್ಯನೂ ಯೋಗಿಯೂ ಆಗುತ್ತಾನೆ.

## ಬ್ರಹ್ಮನಿಷ್ಠನು ಕೃತಕೃತ್ಯನು
(ಭಾಷ್ಯ)

೬೩. ಅಮೌನಂ ಚ | ಆತ್ಮಜ್ಞಾನಾನಾತ್ಮಪ್ರತ್ಯಯತಿರಸ್ಕಾರೌ ಪಾಂಡಿತ್ಯ ಬಾಲ್ಯಸಂಜ್ಞಕೌ ನಿಃಶೇಷಂ ಕೃತ್ವಾ | ಮೌನಂ ನಾಮ ಅನಾತ್ಮಪ್ರತ್ಯಯತಿರಸ್ಕರಣಸ್ಯ ಪರ್ಯವಸಾನಂ ಫಲಮ್ | ತಚ್ಚ ನಿರ್ವಿದ್ಯ ಅಥ ಬ್ರಾಹ್ಮಣಃ ಕೃತಕೃತ್ಯೋ ಭವತಿ | "ಬ್ರಹ್ಮೈವ ಸರ್ವಮ್" ಇತಿ ಪ್ರತ್ಯಯ ಉಪಜಾಯತೇ | ಸ ಬ್ರಾಹ್ಮಣಃ ಕೃತಕೃತ್ಯೋಽತೋ ಬ್ರಾಹ್ಮಣಃ | ನಿರುಪಚರಿತಂ ಹಿ ತಸ್ಯ ಬ್ರಾಹ್ಮಣ್ಯಂ ಪ್ರಾಪ್ತಮ್ | ಅತ ಆಹ | ಸ ಬ್ರಾಹ್ಮಣಃ ಕೇನ ಸ್ಯಾತ್, ಕೇನ ಚರಣೇನ ಭವೇತ್? ಯೇನ ಸ್ಯಾತ್, ಯೇನ ಚರಣೇನ ಭವೇತ್, ತೇನ ಈದೃಶ ಏವಾಯಮ್ |

---

1. ಬಾಲ್ಯವೆಂದರೆ ಹುಡುಗನಂತೆ ತನ್ನ ಜ್ಞಾನವನ್ನು ಪ್ರಕಟಿಸದಿರುವದು- ಎಂಬ ಮತ್ತೊಂದು ಅರ್ಥವನ್ನು ಸೂ. ಭಾ. ೩-೪-೫೦ (ಭಾ. ಭಾ. ४९६)ರಲ್ಲಿ ಕೊಟ್ಟಿದೆ. ಅದನ್ನೇಕೆ ಇಲ್ಲಿ ಪರಾಮರ್ಶಿಸಿಲ್ಲವೆಂಬುದು ವಿಚಾರಣೀಯವಾಗಿದೆ.

2. ಮೌನವನ್ನು ವಿಧಿಸಿದೆ; ಆದರೆ ಭೇದದರ್ಶನಪ್ರಾಬಲ್ಯವಿರುವ ಪಕ್ಷದಲ್ಲಿ ಮಾತ್ರ ಅದನ್ನೇ ಮಾಡಬೇಕೆಂದು ನಿಯಮಿಸಿದೆ ಎಂದು ಸೂ. ಭಾ. ೩-೪-೪೭ (ಭಾ. ಭಾ ६९೨) ರಲ್ಲಿ ಸ್ಥಾಪಿಸಿದೆ; ಇಲ್ಲಿ ' ಮುನಿಯಾಗುತ್ತಾನೆ ' ಎಂದಿಷ್ಟೇ ಹೇಳಿದೆ.

ಯೇನ ಕೇನಚಿಚ್ಚರಣೇನ ಸ್ಯಾತ್ ತೇನ ಈದೃಶ ಏವ ಉಕ್ತಲಕ್ಷಣ ಏವ ಬ್ರಾಹ್ಮಣೋ ಭವತಿ | 'ಯೇನ ಕೇನಚಿತ್ ಚರಣೇನ' ಇತಿ ಸ್ತುತ್ಯರ್ಥಮ್ ಯೇಯಂ ಬ್ರಾಹ್ಮಣ್ಯಾವಸ್ಥಾ ಸೇಯಂ ಸ್ತೂಯತೇ | ನ ತು ಚರಣೇಽನಾದರಃ| ಅತಃ ಏತಸ್ಮಾತ್ ಬ್ರಾಹ್ಮಣ್ಯಾವಸ್ಥಾನಾತ್ ಅಶನಾಯಾದ್ಯತೀತಾತ್ಮಸ್ವರೂಪಾತ್ ನಿತ್ಯತೃಪ್ತಾತ್ ಅನ್ಯತ್ ಅವಿದ್ಯಾವಿಷಯಮ್ ಏಷಣಾಲಕ್ಷಣಂ ವಸ್ತ್ವನ್ತರಮ್ ಆರ್ತಮ್ ವಿನಾಶಿ, ಆರ್ತಿಪರಿಗೃಹೀತಮ್, ಸ್ವಪ್ನಮಾಯಾಮರೀಚ್ಯುದಕ ಸಮಮ್ ಅಸಾರಮ್ | ಆತ್ಮೈವೈಕಃ ಕೇವಲೋ ನಿತ್ಯಮುಕ್ತ ಇತಿ | ತತೋ ಹ ಕಹೋಲಃ ಕೌಷೀತಕೇಯಃ ಉಪರರಾಮ ||

(ಭಾಷ್ಯಾರ್ಥ)

ಅಮೌನವನ್ನು ಎಂದರೆ ಆತ್ಮಜ್ಞಾನ, ಅನಾತ್ಮಪ್ರತ್ಯಯವನ್ನು ಕಾಣದಂತೆ ಮಾಡಿಕೊಳ್ಳುವದು ಎಂಬ ಪಾಂಡಿತ್ಯ ಬಾಲ್ಯ ಎಂಬ ಹೆಸರಿನ (ಸಾಧನಗಳನ್ನು), ನಿಶ್ಶೇಷವಾಗಿ ಮಾಡಿಕೊಂಡು ಮೌನವನ್ನು-(ಮೌನವೆಂದರೆ) ಅನಾತ್ಮಪ್ರತ್ಯಯ ವನ್ನು ಕಾಣದಂತೆ ಮಾಡಿಕೊಂಡದ್ದರ ಫಲವು, ಅದನ್ನೂ ಪೂರ ತಿಳಿದುಕೊಂಡು[1] ಆಗ ಬ್ರಾಹ್ಮಣನು, ಕೃತಕೃತ್ಯನಾಗುವನು. 'ಬ್ರಹ್ಮವೇ ಎಲ್ಲವೂ' ಎಂಬ ಪ್ರತ್ಯ ಯವು (ಅವನಿಗೆ) ಉಂಟಾಗುವದು. ಅವನೇ ಬ್ರಾಹ್ಮಣನು, ಕೃತಕೃತ್ಯನಾದ್ದ ರಿಂದ ಬ್ರಾಹ್ಮಣನು ; ಆಗ ಅವನಿಗೆ ನಿರುಪಚರಿತವಾದ ಬ್ರಾಹ್ಮಣ್ಯವು ದೊರಕಿ ತಲ್ಲವೆ ?[2]

ಆದ್ದರಿಂದ ಹೇಳುತ್ತಾನೆ : ಆ ಬ್ರಾಹ್ಮಣನು ಏತರಿಂದ (ಬ್ರಾಹ್ಮಣನಾಗಿ) ಇರುವನು, ಯಾವ ಆಚಾರದಿಂದ (ಬ್ರಾಹ್ಮಣನಾಗಿ) ಇರುವನು[3] ? ಯಾವದರಿಂದ ಇರುವನೋ, ಯಾವ ಆಚಾರದಿಂದ ಇರುವನೋ ಅದರಿಂದ ಇವನು ಇಂಥವನೇ; ಯಾವ ಆಚಾರದಿಂದಿರಲಿ, ಅದರಿಂದ ಇಂಥವನೇ ಮೇಲೆ ಹೇಳಿದ ಲಕ್ಷಣಗಳುಳ್ಳ ವನೇ ಬ್ರಾಹ್ಮಣನೆನಿಸುವನು.[4] ಯಾವ ಆಚಾರದಿಂದಲೂ (ಬ್ರಾಹ್ಮಣನೇ)

---

1. ಮೌನವನ್ನು ಪೂರ ತಿಳಿದುಕೊಂಡು ಬ್ರಾಹ್ಮಣನಾಗುವನು— ಎಂದದ್ದರಿಂದ ಮೌನ ವೆಂಬ ಸಾಧನವನ್ನ ವಿಧಿಸಿದೆ ಎಂದು ಸೂ. ಭಾ. ೩-೪-೪೭ (ಭಾ. ಭಾ.೪೯೩)ರಲ್ಲಿ ಹೇಳಿದೆ. ಹಿಂದಿನ ಎರಡು ಸಾಧನಗಳ ಫಲವು ಮೌನವು ಎಂದಿಷ್ಟೇ ಇಲ್ಲಿ ವರ್ಣಿಸಿದೆ.

2. ಮೊದಲು ಬ್ರಾಹ್ಮಣನಾಗಿದ್ದದ್ದು ಗೌಣ ; ಈ ಬ್ರಾಹ್ಮಣ್ಯಕ್ಕೆ ತಕ್ಕವನಾಗಿರುವದು ಎಂಬರ್ಥದ ಬ್ರಾಹ್ಮಣ್ಯವದು.

3. ಯಾವ ಕರ್ಮದಿಂದ ಬ್ರಾಹ್ಮಣನೆನಿಸಿಕೊಂಡಿರುವನು ?.

4. ಪಾಂಡಿತ್ಯಬಾಲ್ಯಮೌನಗಳನ್ನು ನಿಶ್ಶೇಷಗೊಳಿಸಿಕೊಂಡಿರುವ ಬ್ರಹ್ಮನಿಷ್ಠನೆ ಬ್ರಾಹ್ಮಣನು ; ಅವನು ಇಂಥ ಕರ್ಮಾಚರಣೆಯಿಂದ ಬ್ರಾಹ್ಮಣನು ಎಂಬುದಿಲ್ಲ

ಎಂಬುದು ಸ್ತುತಿಗಾಗಿ ಹೇಳಿದ್ದು; ಈ ಬ್ರಾಹ್ಮಣಾವಸ್ಥೆಯುಂಟಲ್ಲ, ಇದನ್ನು (ಹಾಗೆಂದು) ಹೊಗಳಿರುತ್ತದೆಯೇ ಹೊರತು (ಕರ್ಮವನ್ನು) ಆಚರಿಸುವದರಲ್ಲಿ ಅನಾದರವೇನೂ ಇಲ್ಲ.[1]

ಇದಕ್ಕಿಂತ ಈ ಬ್ರಹ್ಮನಿಷ್ಠೆಗಿಂತ, ಹಸಿವು ಮುಂತಾದವುಗಳನ್ನು ಮೀರಿರುವ ನಿತ್ಯತೃಪ್ತವಾದ ಆತ್ಮಸ್ವರೂಪಕ್ಕಿಂತ ಮಿಕ್ಕದ್ದು, ಅವಿದ್ಯಾವಿಷಯವಾಗಿರುವ ಏಷಣಾರೂಪವಾದ ಮತ್ತೊಂದು ವಸ್ತುವು ಆರ್ತವು ವಿನಾಶವಾಗತಕ್ಕದ್ದು, ಸಂಕಟದಿಂದೊಡಗೂಡಿದ್ದು; ಸ್ವಪ್ನ, ಮಾಯೆ, ಬಿಸಿಲುಕುದುರೆಯ ನೀರು- ಇವುಗಳಿಗೆ ಸಮವಾದದ್ದು, ಅಸಾರವು.[2] ಆತ್ಮನೊಬ್ಬನೇ ಕೇವಲನು,[3] ನಿತ್ಯಮುಕ್ತನು.

ಆ ಬಳಿಕ ಕಹೋಲ ಕೌಷೀತಕೇಯನು ಸುಮ್ಮನಾದನು.

---

1. ಜ್ಞಾನಿಯು ಯಥೇಷ್ಟಾಚರಣವುಳ್ಳವನಾಗಿರುವನೆಂದೇನೂ ಅಭಿಪ್ರಾಯವಲ್ಲ; ಅವನು ಕರ್ಮದಿಂದ ಬ್ರಾಹ್ಮಣನೆನಿಸಿಕೊಂಡಿರುವದಿಲ್ಲ ಎಂದಿಷ್ಟೇ ಇಲ್ಲಿ ಅಭಿಪ್ರೇತವಾಗಿದೆ ಎಂದರ್ಥ.
2. ನಾಶವಾಗತಕ್ಕದ್ದು ಎಂದು ಹೇಳಿರುವದು ಅದು ಅಸತ್ಯವೆಂದು ತಿಳಿಸುವದಕ್ಕೆ.
3. ಅದ್ವಿತೀಯನು.

# ಐದನೆಯ ಬ್ರಾಹ್ಮಣದ ಸಾರ

ಇಲ್ಲಿ ಆತ್ಮನಿಗೆ ಮೋಕ್ಷಸಾಧನವಾದ ಸಂನ್ಯಾಸಸಹಿತವಾದ ಆತ್ಮಜ್ಞಾನವನ್ನು ಹೇಳಿದೆ.

ಉಷಸ್ತನು ಸುಮ್ಮನಾಗಲು ಕಹೋಲಕೌಷೀತಕೇಯನು ಯಾಜ್ಞವಲ್ಕ್ಯನನ್ನು ಹೀಗೆಂದು ಕೇಳಿದನು: " ಸಾಕ್ಷಾತ್ತಾಗಿ ಅಪರೋಕ್ಷವಾಗಿರುವ ಬ್ರಹ್ಮವೂ, ಸರ್ವಾಂತರ ಆತ್ಮನೂ ಆಗಿರುವನಲ್ಲ, ಅವನನ್ನು ನನಗೆ ವಿವರಿಸಿ ಹೇಳು ".

ಇದಕ್ಕೆ ಯಾಜ್ಞವಲ್ಕ್ಯನು " ಯಾವನು ಹಸಿವುಬಾಯಾರಿಕೆಗಳನ್ನೂ, ಶೋಕವನ್ನೂ ಮೋಹವನ್ನೂ, ಮುಪ್ಪನ್ನೂ ಸಾವನ್ನೂ ಮೀರಿರುವವನೋ ಸಾಕ್ಷಾದಪರೋಕ್ಷಾದ್ಬ್ರಹ್ಮನೋ ಅವನೇ ನನ್ನ ಸರ್ವಾಂತರಾತ್ಮನು.

"ಈ ಆತ್ಮನನ್ನು ಅರಿತುಕೊಂಡ ಪೂರ್ವಕಾಲದ ಬ್ರಾಹ್ಮಣರು ಪುತ್ರೈಷಣೆ, ವಿತ್ತೈಷಣೆ, ಲೋಕೈಷಣೆ ಎಂಬ ಬಯಕೆಗಳನ್ನು ಬಿಟ್ಟು ಪರಮಹಂಸರಾಗಿ ಭಿಕ್ಷಾಚರ್ಯೆಯನ್ನು ಮಾಡುತ್ತಿದ್ದರು. ಸಾಧ್ಯಸಾಧನವೆಲ್ಲ ಏಷಣೆಯೇ ಆಗಿರುವದರಿಂದ ಬ್ರಾಹ್ಮಣನಾದವನು ಅವನ್ನು ಬಿಟ್ಟು ಆತ್ಮಜ್ಞಾನವೆಂಬ ಪಾಂಡಿತ್ಯವನ್ನೂ ಅನಾತ್ಮಪ್ರತ್ಯಯನಿರಾಸವೆಂಬ ಬಾಲ್ಯವನ್ನೂ ಪರಮಾರ್ಥ ಚಿಂತನವೆಂಬ ಮೌನವನ್ನೂ ಪೂರ್ಣವಾಗಿ ಅಳವಡಿಸಿಕೊಂಡರೆ ಕೃತಕೃತ್ಯನಾಗಿ ಮುಖ್ಯಾರ್ಥದಲ್ಲಿ ಬ್ರಾಹ್ಮಣನೆನಿಸುವನು. ಅವನು ಯಾವದಾದರೊಂದು ಕರ್ಮಾಚರಣೆಯ ನಿಮಿತ್ತದಿಂದ ಬ್ರಾಹ್ಮಣನೆನಿಸಿರುವದಿಲ್ಲ, ಈ ಬ್ರಹ್ಮನಿಷ್ಠೆಯಿಂದಲೇ ಬ್ರಾಹ್ಮಣನೆನಿಸಿರುತ್ತಾನೆ. ಈ ಬ್ರಹ್ಮನಿಷ್ಠೆಗಿಂತ ಮಿಕ್ಕದ್ದೆಲ್ಲವೂ ಅನಿತ್ಯವು, ಹುಸಿ; ಇದೊಂದೇ ನಿತ್ಯವಾದ ಪರಮಾರ್ಥವು. "

ಹೀಗೆನ್ನಲು ಕಹೋಲನು ಸುಮ್ಮನಾದನು.

---

# ಮೂರನೆಯ ಅಧ್ಯಾಯ–ಆರನೆಯ ಬ್ರಾಹ್ಮಣ

(ಗಾರ್ಗಿಯ ಪ್ರಶ್ನೆ : ಬಾಹ್ಯನಿರಾಕರಣಪೂರ್ವಕ ಬ್ರಹ್ಮಜ್ಞಾನ)

## ಇದೆಲ್ಲವೂ ಏತರಲ್ಲಿ ಓತಪ್ರೋತವಾಗಿದೆ?

(ಉಪನಿಷತ್ತು)

**ಅಥ ಹೈನಂ ಗಾರ್ಗೀ ವಾಚಕ್ನವೀ ಪಪ್ರಚ್ಛ ಯಾಜ್ಞವಲ್ಕ್ಯೇತಿ ಹೋವಾಚ ಯದಿದಗ್ಂ ಸರ್ವಮಪ್ಸ್ವೋತಂ ಚ ಪ್ರೋತಂ ಚ ಕಸ್ಮಿನ್ನು ಖಲ್ವಾಪ ಓತಾಶ್ಚ ಪ್ರೋತಾಶ್ಚೇತಿ ವಾಯೌ ಗಾರ್ಗೀತಿ ಕಸ್ಮಿನ್ನು ಖಲು ವಾಯುರೋತಶ್ಚ ಪ್ರೋತಶ್ಚೇತ್ಯನ್ತರಿಕ್ಷಲೋಕೇಷು ಗಾರ್ಗೀತಿ ಕಸ್ಮಿನ್ನು ಖಲ್ವನ್ತರಿಕ್ಷಲೋಕಾ ಓತಾಶ್ಚ ಪ್ರೋತಾಶ್ಚೇತಿ ಗನ್ಧರ್ವಲೋಕೇಷು ಗಾರ್ಗೀತಿ ಕಸ್ಮಿನ್ನು ಖಲು ಗನ್ಧರ್ವಲೋಕಾ ಓತಾಶ್ಚ ಪ್ರೋತಾಶ್ಚೇತ್ಯಾದಿತ್ಯಲೋಕೇಷು ಗಾರ್ಗೀತಿ ಕಸ್ಮಿನ್ನು ಖಲ್ವಾದಿತ್ಯಲೋಕಾ ಓತಾಶ್ಚ ಪ್ರೋತಾಶ್ಚೇತಿ ಚನ್ದ್ರಲೋಕೇಷು ಗಾರ್ಗೀತಿ ಕಸ್ಮಿನ್ನು ಖಲು ಚನ್ದ್ರಲೋಕಾ ಓತಾಶ್ಚ ಪ್ರೋತಾಶ್ಚೇತಿ ನಕ್ಷತ್ರಲೋಕೇಷು ಗಾರ್ಗೀತಿ ಕಸ್ಮಿನ್ನು ಖಲು ನಕ್ಷತ್ರಲೋಕಾ ಓತಾಶ್ಚ ಪ್ರೋತಾಶ್ಚೇತಿ ದೇವಲೋಕೇಷು ಗಾರ್ಗೀತಿ ಕಸ್ಮಿನ್ನು ಖಲು ದೇವಲೋಕಾ ಓತಾಶ್ಚ ಪ್ರೋತಾಶ್ಚೇತೀನ್ದ್ರಲೋಕೇಷು ಗಾರ್ಗೀತಿ ಕಸ್ಮಿನ್ನು ಖಲ್ವಿನ್ದ್ರಲೋಕಾ. ಓತಾಶ್ಚ ಪ್ರೋತಾಶ್ಚೇತಿ ಪ್ರಜಾಪತಿಲೋಕೇಷು ಗಾರ್ಗೀತಿ ಕಸ್ಮಿನ್ನು ಖಲು ಪ್ರಜಾಪತಿಲೋಕಾ ಓತಾಶ್ಚ ಪ್ರೋತಾಶ್ಚೇತಿ ಸ ಹೋವಾಚ ಗಾರ್ಗಿ ಮಾತಿಪ್ರಾಕ್ಷೀರ್ಮಾ ತೇ ಮೂರ್ಧಾ ವ್ಯಪ್ತದನತಿಪ್ರಶ್ನ್ಯಾಂ ವೈ ದೇವತಾಮತಿ ಪೃಚ್ಛಸಿ ಗಾರ್ಗಿ ಮಾತಿಪ್ರಾಕ್ಷೀರಿತಿ ತತೋ ಹ ಗಾರ್ಗೀ ವಾಚಕ್ನವ್ಯುಪರರಾಮ ॥ ೧ ॥**

೧. ಆಗ ಇವನನ್ನು ಗಾರ್ಗಿವಾಚಕ್ನವಿಯು ಕೇಳಿದಳು. "ಯಾಜ್ಞವಲ್ಕ್ಯನೆ," ಎಂದಳು. "ಈ ಸರ್ವವೂ ಅಪ್ಪಿನಲ್ಲಿ ಓತವೂ ಪ್ರೋತವೂ ಆಗಿದೆಯಷ್ಟೆ, ಈ ಅಪ್ಪು ಏತರಲ್ಲಿ ಓತವೂ ಪ್ರೋತವೂ ಆಗಿದೆಯೋ (ಅದನ್ನು ಹೇಳು)" ಎಂದಳು. ಗಾರ್ಗಿಯೆ, ವಾಯುವಿನಲ್ಲಿ. "ವಾಯು ಏತರಲ್ಲಿ ಓತವೂ ಪ್ರೋತವೂ ಆಗಿದೆಯೊ!" ಗಾರ್ಗಿಯೆ, ಅಂತರಿಕ್ಷ

ಲೋಕದಲ್ಲಿ. "ಅಂತರಿಕ್ಷಲೋಕಗಳು ಏತರಲ್ಲಿ ಓತವೂ ಪ್ರೋತವೂ ಆಗಿವೆಯೊ !'' ಗಾರ್ಗಿಯೆ, ಗಂಧರ್ವಲೋಕದಲ್ಲಿ. "ಗಂಧರ್ವಲೋಕಗಳು ಏತರಲ್ಲಿ ಓತವೂ ಪ್ರೋತವೂ ಆಗಿವೆಯೊ !" ಗಾರ್ಗಿಯೆ, ಆದಿತ್ಯಲೋಕಗಳಲ್ಲಿ. "ಆದಿತ್ಯಲೋಕಗಳು ಏತರಲ್ಲಿ ಓತವೂ ಪ್ರೋತವೂ ಆಗಿವೆಯೊ !'' ಗಾರ್ಗಿಯೆ, ಚಂದ್ರಲೋಕಗಳಲ್ಲಿ "ಚಂದ್ರಲೋಕಗಳು ಏತರಲ್ಲಿ ಓತವೂ ಪ್ರೋತವೂ ಆಗಿವೆಯೊ !'' ಗಾರ್ಗಿಯೆ, ನಕ್ಷತ್ರಲೋಕಗಳಲ್ಲಿ. "ನಕ್ಷತ್ರಲೋಕಗಳು ಏತರಲ್ಲಿ ಓತವೂ ಪ್ರೋತವೂ ಆಗಿವೆಯೊ !'' ಗಾರ್ಗಿಯೆ, ದೇವಲೋಕಗಳಲ್ಲಿ. "ದೇವಲೋಕಗಳು ಏತರಲ್ಲಿ ಓತವೂ ಪ್ರೋತವೂ ಆಗಿವೆಯೊ !" ಗಾರ್ಗಿಯೆ, ಇಂದ್ರಲೋಕಗಳಲ್ಲಿ. "ಇಂದ್ರಲೋಕಗಳು ಏತರಲ್ಲಿ ಓತವೂ ಪ್ರೋತವೂ ಆಗಿವೆಯೊ !" ಗಾರ್ಗಿಯೆ, ಪ್ರಜಾಪತಿಲೋಕಗಳಲ್ಲಿ. "ಪ್ರಜಾಪತಿಲೋಕಗಳು ಏತರಲ್ಲಿ ಓತವೂ ಪ್ರೋತವೂ ಆಗಿವೆಯೊ!" ಗಾರ್ಗಿಯೆ, ಬ್ರಹ್ಮಲೋಕಗಳಲ್ಲಿ. "ಬ್ರಹ್ಮಲೋಕಗಳು ಏತರಲ್ಲಿ ಓತವೂ ಪ್ರೋತವೂ ಆಗಿವೆಯೊ! ' ಆತನಿಂತೆಂದನು : ಗಾರ್ಗಿಯೆ, ಅತಿಪ್ರಶ್ನೆಮಾಡಬೇಡ. ನಿನ್ನ ತಲೆ ಬಿದ್ದುಹೋಗದಿರಲಿ ! ಅನತಿಪ್ರಶ್ನ್ಯನಾದ ದೇವತೆಯನ್ನೇ ಕುರಿತು ಅತಿಪ್ರಶ್ನೆಮಾಡುತ್ತಿರುವೆ. ಗಾರ್ಗಿಯೆ, ಅತಿಪ್ರಶ್ನಮಾಡಬೇಡ ! ಆಗ ಗಾರ್ಗಿವಾಚಕ್ನವಿಯು ಸುಮ್ಮನಾದಳು.

## ಮುಂದಿನ ಗ್ರಂಥದ ಸಂಬಂಧ

(ಭಾಷ್ಯ)

೭೪. ಯತ್ಸಾಕ್ಷಾದಪರೋಕ್ಷಾದ್ ಬ್ರಹ್ಮ ಸರ್ವಾನ್ತರ ಆತ್ಮಾ ಇತ್ಯುಕ್ತಮ್ ತಸ್ಯ ಸರ್ವಾನ್ತರಸ್ಯ ಸ್ವರೂಪಾಧಿಗಮಾಯ ಆಶಾಕಲ್ಯಬ್ರಾಹ್ಮಣಾತ್ ಗ್ರನ್ಥ ಆರಭ್ಯತೇ। ಪೃಥಿವ್ಯಾದೀನಿ ಹಿ ಆಕಾಶಾನ್ತಾನಿ ಭೂತಾನಿ ಅನ್ತರ್ಬಹಿರ್ಭಾವೇನ ವ್ಯವಸ್ಥಿತಾನಿ ತೇಷಾಂ ಯದ್ ಬಾಹ್ಯಂ ಬಾಹ್ಯಮಧಿಗಮ್ಯಾಧಿಗಮ್ಯ ನಿರಾಕುರ್ವನ್ ದ್ರಷ್ಟುಃ ಸಾಕ್ಷಾತ್ ಸರ್ವಾನ್ತರೋಽಗೌಣಃ ಆತ್ಮಾ ಸರ್ವಸಂಸಾರಧರ್ಮವಿನಿರ್ಮುಕ್ತೋ ದರ್ಶಯಿತವ್ಯಃ ಇತ್ಯಾರಮ್ಭಃ ||

(ಭಾಷ್ಯಾರ್ಥ)

ಯಾವ ಸಾಕ್ಷಾದಪರೋಕ್ಷಾದ್ಬ್ರಹ್ಮವನ್ನು ಸರ್ವಾಂತರನಾದ ಆತ್ಮನು ಎಂದು ಹೇಳಲಾಯಿತೊ, ಆ ಸರ್ವಾಂತರನ ಸ್ವರೂಪವನ್ನು ತಿಳಿಯುವದಕ್ಕಾಗಿ (ಒಂಬತ್ತನೆಯ) ಶಾಕಲ್ಯಬ್ರಾಹ್ಮಣದವರೆಗೆ ಇರುವ ಗ್ರಂಥವನ್ನು ಆರಂಭಿಸಿದೆ. ಪೃಥಿವಿಯೇ ಮುಂತಾದ ಆಕಾಶದವರೆಗಿನ ಭೂತಗಳು ಅಂತರ್ಬಹಿರ್ಭಾವದಿಂದ

ಇದ್ದುಕೊಂಡಿರುವವಷ್ಟೆ; ಅವುಗಳಲ್ಲಿ ಯಾವ(ಯಾವದು) ಹೊರಗಿನದೋ(ಅದನ್ನು) ತಿಳಿದು ತಿಳಿದು ನಿರಾಕರಿಸಿ ನೋಡುತ್ತಿರುವವನ ಸಾಕ್ಷಾತ್ಸರ್ವಾಂತರನಾದ, ಅಗೌಣನಾದ, ಯಾವ ಸಂಸಾರಧರ್ಮಗಳೂ ಇಲ್ಲದ ಆತ್ಮನನ್ನು ತಿಳಿಸಬೇಕು-ಎಂದು (ಈ ಬ್ರಾಹ್ಮಣವನ್ನು) ಆರಂಭಿಸಿದೆ.

## ಬ್ರಹ್ಮಲೋಕಗಳವರೆಗೆ ಭೂತಗಳ ಅಂತರ್ಬಹಿರ್ಭಾವ

(ಭಾಷ್ಯ)

೬೫. ಅಥ ಹೈನಂ ಗಾರ್ಗೀ ನಾಮತಃ ವಾಚಕ್ನವೀ ವಚಕ್ನೋರ್ದುಹಿತಾ ಪಪ್ರಚ್ಛ। ಯಾಜ್ಞವಲ್ಕ್ಯೇತಿ ಹೋವಾಚ। ಯದಿದಂ ಸರ್ವಂ ಪಾರ್ಥಿವಂ ಧಾತು ಜಾತಮ್ ಅಪ್ಸು ಉದಕೇ ಓತಂ ಚ ಪ್ರೋತಂ ಚ– ಓತಂ ದೀರ್ಘಪಟತನ್ತುವತ್ ಪ್ರೋತಂ ತಿರ್ಯಕ್ತನ್ತುವತ್। ವಿಪರೀತಂ ವಾ। ಅದ್ಭಿಃ ಸರ್ವತೋಽನ್ತರ್ಬಹಿರ್ಭೂತಾಭಿರ್ವ್ಯಾಪ್ತಮ್ ಇತ್ಯರ್ಥಃ। ಅನ್ಯಥಾ ಸಕ್ತುಮುಷ್ಟಿವತ್ ವಿದೀರ್ಯೇತ। ಇದಂ ತಾವತ್ ಅನುಮಾನಮುಪನ್ಯಸ್ತಮ್। ಯತ್ಕಾರ್ಯಂ ಪರಿಚ್ಛಿನ್ನಂ ಸ್ಥೂಲಂ ಕಾರಣೇನ ಅಪರಿಚ್ಛಿನ್ನೇನ ಸೂಕ್ಷ್ಮೇಣ ವ್ಯಾಪ್ತಮಿತಿ ದೃಷ್ಟಮ್। ಯಥಾ ಪೃಥಿವೀ ಅದ್ಭಿಃ ತಥಾ ಪೂರ್ವಂ ಪೂರ್ವಮ್ ಉತ್ತರೇಣೋತ್ತರೇಣ ವ್ಯಾಪಿನಾ ಭವಿತವ್ಯಮ್ ಇತ್ಯೇಷ ಆ ಸರ್ವಾನ್ತರಾದಾತ್ಮನಃ ಪ್ರಶ್ನಾರ್ಥಃ। ತತ್ರ ಭೂತಾನಿ ಪಞ್ಚ ಸಂಹತಾನ್ಯೇವ ಉತ್ತರಮುತ್ತರಮ್ ಸೂಕ್ಷ್ಮಭಾವೇನ ವ್ಯಾಪಕೇನ ಕಾರಣರೂಪೇಣ ಚ ವ್ಯವತಿಷ್ಠನ್ತೇ। ನ ಚ ಪರಮಾತ್ಮನೋಽರ್ವಾಕ್ ತದ್ವ್ಯತಿರೇಕೇಣ ವಸ್ತ್ವನ್ತರಮ್ ಅಸ್ತಿ ಸತ್ಯಸ್ಯ "ಸತ್ಯಮ್(೨-೩-೬) ಇತಿ ಶ್ರುತೇಃ। ಸತ್ಯಂ ಚ ಭೂತಪಞ್ಚಕಮ್। ಸತ್ಯಸ್ಯ ಸತ್ಯಂ ಚ ಪರ ಆತ್ಮಾ। ಕಸ್ಮಿನ್ನು ಖಲ್ವಾಪ ಓತಾಶ್ಚ ಪ್ರೋತಾಶ್ಚೇತಿ। ತಾಸಾಮಪಿ ಕಾರ್ಯತ್ವಾದ್ ಸ್ಥೂಲತ್ವಾತ್ ಪರಿಚ್ಛಿನ್ನತ್ವಾಚ್ಚ ಕ್ವಚಿದ್ ಹಿ ಓತಪ್ರೋತಭಾವೇನ ಭವಿತವ್ಯಮ್। ಕ್ವ ತಾಸಾಮ್ ಓತಪ್ರೋತಭಾವಃ? ಇತ್ಯೇವಮುತ್ತರೋತ್ತರಪ್ರಶ್ನಪ್ರಸಙ್ಗೋ ಯೋಜಯಿತವ್ಯಃ। ವಾಯೌ ಗಾರ್ಗೀತಿ। ನನು ಅಗ್ನಾವಿತಿ ವಕ್ತವ್ಯಮ್। ನೈಷ ದೋಷಃ। ಅಗ್ನೇಃ ಪಾರ್ಥಿವಂ ವಾ ಆಪ್ಯಂ ವಾ ಧಾತುಮ್ ಅನಾಶ್ರಿತ್ಯ ಇತರಭೂತವತ್ ಸ್ವಾತನ್ತ್ರ್ಯೇಣ ಆತ್ಮಲಾಭೋ ನಾಸ್ತಿ ಇತಿ ತಸ್ಮಿನ್ ಓತಪ್ರೋತಭಾವೋ ನೋಪದಿಶ್ಯತೇ। ಕಸ್ಮಿನ್ನು ಖಲು ವಾಯುರೋತಶ್ಚ ಪ್ರೋತಶ್ಚೇತಿ? ಅನ್ತರಿಕ್ಷಲೋಕೇಷು ಗಾರ್ಗೀತಿ। ತಾನ್ಯೇವ ಭೂತಾನಿ ಸಂಹತಾನಿ ಅನ್ತರಿಕ್ಷಲೋಕಾಃ। ತಾನ್ಯಪಿ ಗನ್ಧರ್ವಲೋಕೇಷು। ಗನ್ಧರ್ವಲೋಕಾ ಆದಿತ್ಯಲೋಕೇಷು, ಆದಿತ್ಯಲೋಕಾಶ್ಚನ್ದ್ರಲೋಕೇಷು। ಚನ್ದ್ರಲೋಕಾ ನಕ್ಷತ್ರಲೋಕೇಷು। ನಕ್ಷತ್ರಲೋಕಾ ದೇವಲೋಕೇಷು। ದೇವಲೋಕಾ ಇನ್ದ್ರಲೋಕೇಷು। ಇನ್ದ್ರಲೋಕಾ ವಿರಾಟ್ಶರೀರಾರಮ್ಭಕೇಷು ಭೂತೇಷು ಪ್ರಜಾಪತಿಲೋಕೇಷು। ಪ್ರಜಾಪತಿಲೋಕಾ ಬ್ರಹ್ಮ

ಲೋಕೇಷು। ಬ್ರಹ್ಮಲೋಕಾ ನಾಮ ಅಣ್ಡಾರಮ್ಭಕಾಣಿ ಭೂತಾನಿ। ಸರ್ವತ್ರ ಹಿ ಸೂಕ್ಷ್ಮತಾರತಮ್ಯಕ್ರಮೇಣ ಪ್ರಾಣ್ಯುಪಭೋಗಾಶ್ರಯಾಕಾರಪರಿಣತಾನಿ ಭೂತಾನಿ ಸಂಹತಾನಿ ತಾನ್ಯೇವ ಪಞ್ಚ ಇತಿ ಬಹುವಚನ ಭಾಞ್ಜಿ ॥

(ಭಾಷ್ಯಾರ್ಥ)

ಆ ಈ (ಯಾಜ್ಞವಲ್ಕ್ಯ)ನನ್ನು ಗಾರ್ಗಿ ಎಂಬ ಹೆಸರಿನ ವಾಚಕ್ನವಿಯು, ವಚಕ್ನುವಿನ ಮಗಳು ಕೇಳಿದಳು. 'ಯಾಜ್ಞವಲ್ಕ್ಯನೆ', ಎಂದು (ಹೀಗೆ ಕೇಳಿದ)ಳು. ಈ ಪೃಥಿವಿಯು ಸಂಬಂಧವಾದ ಧಾತುಜಾತವೆಲ್ಲ ಅಪ್ಪಿನಲ್ಲಿ ನೀರಿನಲ್ಲಿ ಓತವೂ ಪ್ರೋತವೂ (ಆಗಿದೆ)ಯಷ್ಟೆ– ಓತವೆಂದರೆ ಬಟ್ಟೆಯ ಉದ್ದನೆಯ ನೂಲುಗಳಂತೆ (ಹಾಸಾಗಿ)ರುವದು, ಪ್ರೋತವೆಂದರೆ ಅಡ್ಡನೂಲುಗಳಂತೆ (ಹೊಕ್ಕಾಗಿ)ರುವದು. ಅಥವಾ (ಹೊಕ್ಕುಹಾಸಾಗಿರುವದು ಎಂದು) ಇದಕ್ಕೆ ವಿಪರೀತವಾಗಿಯಾದರೂ ಇಟ್ಟುಕೊಳ್ಳಬಹುದು– ಅಪ್ಪಿನಿಂದ ಒಳಗೆ ಹೊರಗೆ ಎಲ್ಲೆಲ್ಲಿಯೂ ವ್ಯಾಪ್ತವಾಗಿರುವದಷ್ಟೆ ! ಎಂದರ್ಥ. ಹೀಗಲ್ಲದಿದ್ದರೆ ಹಿಟ್ಟಿನ ಹಿಡಿಯಂತೆ ಒಡೆದು ಚಲ್ಲಿಬಿಟ್ಟೀತು (ಎಂದರ್ಥ)[1]. ಮೊದಲನೆಯದಾಗಿ (ಇಲ್ಲಿ) ಈ ಅನುಮಾನವನ್ನು ಮುಂದಿಟ್ಟದೆ : ಯಾವದು ಕಾರ್ಯವೂ ಪರಿಚ್ಛಿನ್ನವೂ ಸ್ಥೂಲವೂ ಆಗಿದೆಯೋ (ಅದು) ಕಾರಣವೂ ಅಪರಿಚ್ಛಿನ್ನವೂ ಸೂಕ್ಷ್ಮವೂ ಆಗಿರುವದರಿಂದ ವ್ಯಾಪ್ತವಾಗಿದೆ ಎಂದು ಕಂಡುಬರುತ್ತದೆ. ಉದಾಹರಣೆಗೆ ಪೃಥಿವಿಯು (ಹೀಗೆ) ಅಪ್ಪಿನಿಂದ(ವ್ಯಾಪ್ತವಾಗಿರುತ್ತದೆ). ಹೀಗೆಯೇ ಹಿಂದು ಹಿಂದಿನದು ಮುಂದುಮುಂದಿನ ವ್ಯಾಪ್ತಿಯಿಂದ (ವ್ಯಾಪ್ತ)ವಾಗಿರಬೇಕು ಎಂದಿಂತು ಸರ್ವಾಂತರನಾದ ಆತ್ಮನವರೆಗೂ (ಇರುವ) ಪ್ರಶ್ನೆಗಳ. ಅರ್ಥವು ಇಲ್ಲಿ ಪಂಚಭೂತಗಳು ಸಂಹತವಾಗಿಯೇ ಮುಂದೆಮುಂದೆ ಸೂಕ್ಷ್ಮಭಾವದಿಂದಲೂ ವ್ಯಾಪಕ(ರೂಪ)ದಿಂದಲೂ ಕಾರಣರೂಪದಿಂದಲೂ ಇದ್ದುಕೊಂಡಿರುತ್ತವೆ. ಪರಮಾತ್ಮನಿಂದೀಚೆಗೆ ಅವುಗಳಿಗಿಂತ ಬೇರೊಂದು ವಸ್ತುವಿರುವದಿಲ್ಲ. ಏಕೆಂದರೆ "ಸತ್ಯದ ಸತ್ಯವು" (೨-೩-೬) ಎಂದು ಶ್ರುತಿಯಿದೆ. ಸತ್ಯವೆಂದರೆ ಭೂತಪಂಚಕವು, ಸತ್ಯದ ಸತ್ಯವೆಂದರೆ ಪರಮಾತ್ಮನು.[2]

'ಅಪ್ಪು ಏತರಲ್ಲಿ ಓತವೂ ಪ್ರೋತವೂ ಆಗಿದೆಯೊ !' ಅದೂ ಕಾರ್ಯವಾಗಿರುವದರಿಂದಲೂ ಸ್ಥೂಲವಾಗಿರುವದರಿಂದಲೂ ಪರಿಚ್ಛಿನ್ನವಾಗಿರುವದರಿಂದಲೂ ಏತರಲ್ಲಿಯೋ[3] ಓತಪ್ರೋತಭಾವದಿಂದ ಇರಬೇಕಷ್ಟೆ. ಅದಕ್ಕೆ ಓತಪ್ರೋತಭಾವ

---

1. ಹಿಟ್ಟಿಗೆ ನೀರು ಹಾಕಿ ಕಲಸಿದರೆ ಮಾತ್ರ ಅದು ಒಂದುಂಡೆಯಾಗಿರುತ್ತದೆ ; ಹಾಗೆಯೇ ಪೃಥ್ವಿಯು ಅಪ್ಪಿನಿಂದ ವ್ಯಾಪ್ತವಾಗಿರುವದರಿಂದಲೇ ಹುಡಿಯಾಗಿ ಚದರದೆ ಇದೆ.

2. ಆದ್ದರಿಂದ ಪರಮಾತ್ಮನನ್ನು ಬಿಟ್ಟರೆ ಮಿಕ್ಕದ್ದೆಲ್ಲ ಭೂತಪಂಚಕವೇ ಆಗಿರಬೇಕು.

3. ತನಗಿಂತ ಸೂಕ್ಷ್ಮವೂ ಅಪರಿಚ್ಛಿನ್ನವೂ ಆಗಿರುವ ಕಾರಣದಲ್ಲಿ.

ವೆಲ್ಲಿ? ಎಂದು (ಪ್ರಶ್ನೆ). ಹೀಗೆಯೇ ಮುಂದುಮುಂದಿನ ಪ್ರಶ್ನೆಯ ಪ್ರಸಂಗವನ್ನೂ ಹೊಂದಿಸಿಕೊಳ್ಳಬೇಕು.[1]

'(ಅಪ್ಪು) ವಾಯುವಿನಲ್ಲಿ (ಓತವೂ ಪ್ರೋತವೂ ಆಗಿದೆ) ಗಾರ್ಗಿಯೆ,' ಎಂದನು.

(ಆಕ್ಷೇಪ):—'ಅಗ್ನಿಯಲ್ಲಿ' ಎಂದಲ್ಲವೆ, ಹೇಳಬೇಕು ?

(ಪರಿಹಾರ):—ಇದೇನೂ ತಪ್ಪಲ್ಲ. (ಏಕೆಂದರೆ) ಅಗ್ನಿಯು ಪಾರ್ಥಿವವಾದ ಅಥವಾ ಅಪ್ಪಿನದಾದ ಧಾತುವನ್ನು ಆಶ್ರಯಿಸಿಕೊಳ್ಳದೆ ಮಿಕ್ಕ ಭೂತಗಳಂತೆ ಸ್ವತಂತ್ರವಾಗಿ (ತಾನೇ) ತೋರಿಕೊಳ್ಳುವದು ಇಲ್ಲವಾದ್ದರಿಂದ ಅದರಲ್ಲಿ ಓತಪ್ರೋತ ಭಾವವನ್ನು ಉಪದೇಶಿಸಿಲ್ಲ.

'ವಾಯುವು ಏತರಲ್ಲಿ ಓತವೂ ಪ್ರೋತವೂ ಆಗಿದೆಯೊ !' ಗಾರ್ಗಿಯೆ, ಅಂತರಿಕ್ಷಲೋಕಗಳಲ್ಲಿ ಅದೇ ಭೂತಗಳೇ ಸಂಹತವಾಗಿ[2] ಅಂತರಿಕ್ಷಲೋಕಗಳೆನಿಸುತ್ತವೆ. ಅವುಗಳೂ ಗಂಧರ್ವಲೋಕಗಳಲ್ಲಿ, ಗಂಧರ್ವಲೋಕಗಳು ಆದಿತ್ಯಲೋಕಗಳಲ್ಲಿ, ಆದಿತ್ಯಲೋಕಗಳು ಚಂದ್ರಲೋಕಗಳಲ್ಲಿ, ಚಂದ್ರಲೋಕಗಳು ನಕ್ಷತ್ರಲೋಕಗಳಲ್ಲಿ, ನಕ್ಷತ್ರಲೋಕಗಳು ದೇವಲೋಕಗಳಲ್ಲಿ, ದೇವಲೋಕಗಳು ಇಂದ್ರಲೋಕಗಳಲ್ಲಿ, ಇಂದ್ರಲೋಕಗಳು ಪ್ರಜಾಪತಿಲೋಕಗಳಲ್ಲಿ ಅಂದರೆ ವಿರಾಜನ ಶರೀರಕ್ಕೆ ಕಾರಣವಾಗಿರುವ ಭೂತಗಳಲ್ಲಿ, ಪ್ರಜಾಪತಿಲೋಕಗಳು ಬ್ರಹ್ಮಲೋಕಗಳಲ್ಲಿ ಬ್ರಹ್ಮಲೋಕಗಳು ಎಂದರೆ ಅಂಡವನ್ನುಂಟುಮಾಡುವ ಭೂತಗಳು **ಎಲ್ಲೆಲ್ಲಿಯೂ ಸೂಕ್ಷ್ಮತಾರತಮ್ಯದ ಕ್ರಮದಿಂದ ಪ್ರಾಣಿಗಳ ಉಪಭೋಗಕ್ಕೆ ಆಶ್ರಯವಾಗಿರುವ ಆಕಾರದಿಂದ ಪರಿಣಾಮವಾಗಿರುವವು ಸಂಹತವಾಗಿರುವ ಅದೇ ಪಂಚಭೂತಗಳು ; ಆದ್ದರಿಂದ (ಲೋಕಗಳು ಎಂದು) ಬಹುವಚನವನ್ನು ಪಡೆದಿರುತ್ತವೆ**[3]

---

1. ಅದು ಏತರಿಂದ ವ್ಯಾಪ್ತವಾಗಿದೆ, ಅದು ಏತರಿಂದ ?- ಎಂದು ಪ್ರಶ್ನೆಯನ್ನು ಇದೇ ಹೇತುವಿಗೆ ಹೊಂದಿಸಿಕೊಂಡು ಅರ್ಥಮಾಡಿಕೊಳ್ಳಬೇಕು ಎಂದರ್ಥ.

2. ಬೇರೆಯ ಸೂಕ್ಷ್ಮತರವಾದ ವ್ಯಾಪಕವಾದ ಕಾರಣರೂಪದಿಂದ ಒಂದಕ್ಕೊಂದು ಸೇರಿಕೊಂಡು.

3. ಅಂತರಿಕ್ಷಲೋಕಗಳು ಎಂಬಲ್ಲಿಂದ ಹಿಡಿದು ಬ್ರಹ್ಮಲೋಕಗಳು ಎಂಬವರೆಗಿನ ಒಂದೊಂದು ಲೋಕವೂ ಪಂಚಭೂತಗಳಿಂದಾಗಿರುವ ಭೋಗಭೂಮಿಯೇ ಅದು ಎಂದು ತಿಳಿಸಿಕೊಡುವದಕ್ಕಾಗಿ ' ಲೋಕಗಳು ' ಎಂದು ಕರೆದಿದೆ ಎಂದು ಅಭಿಪ್ರಾಯ.

# ಪಂಚಭೂತಗಳ ಕಾರಣಕ್ಕೆ ಅನುಮಾನವು ಸಾಲದು

(ಭಾಷ್ಯ)

೬೬. ಕಸ್ಮಿನ್ನು ಖಲು ಬ್ರಹ್ಮಲೋಕಾ ಓತಾಶ್ಚ ಪ್ರೋತಾಶ್ಚೇತಿ। ಸ ಹೋವಾಚ ಯಾಜ್ಞವಲ್ಕ್ಯಃ। ಹೇ ಗಾರ್ಗಿ, ಮಾತಿಪ್ರಾಕ್ಷೀಃ। ಸ್ವಂ ಪ್ರಶ್ನಂ ನ್ಯಾಯಪ್ರಕಾರಮ್ ಅತೀತ್ಯ ಆಗಮೇನ ಪ್ರಷ್ಟವ್ಯಾಂ ದೇವತಾಮ್ ಅನುಮಾನೇನ ಮಾ ಪ್ರಾಕ್ಷೀಃ ಇತ್ಯರ್ಥಃ। ಪೃಚ್ಛನ್ತ್ಯಾಶ್ಚ ಮಾ ತೇ ತವ ಮೂರ್ಧಾ ಶಿರಃ ವ್ಯಪಪ್ತತ್, ವಿಸ್ಪಷ್ಟಂ ಪತೇತ್। ದೇವತಾಯಾಃ ಸ್ವಪ್ರಶ್ನಃ ಆಗಮವಿಷಯಃ। ತಂ ಪ್ರಶ್ನವಿಷಯಮ್ ಅತಿಕ್ರಾನ್ತೋ ಗಾರ್ಗ್ಯಾಃ ಪ್ರಶ್ನಃ ಆನುಮಾನಿಕತ್ವಾತ್। ಸ ಯಸ್ಯಾ ದೇವತಾಯಾಃ ಪ್ರಶ್ನಃ ಸಾ ಅತಿಪ್ರಶ್ನ್ಯಾ। ನಾತಿಪ್ರಶ್ನ್ಯಾ ಅನತಿ ಪ್ರಶ್ನ್ಯಾ। ಸ್ವಪ್ರಶ್ನವಿಷಯೈವ ಕೇವಲಾಗಮಗಮ್ಯಾ ಇತ್ಯರ್ಥಃ। ತಾಮ್ ಅನತಿಪ್ರಶ್ನ್ಯಾಂ ವೈ ದೇವತಾಮ್ ಅತಿಪೃಚ್ಛಸಿ। ಅತೋ ಗಾರ್ಗಿ ಮಾತಿಪ್ರಾಕ್ಷೀಃ। ಮರ್ತುಂ ಚೇತ್ ನೇಚ್ಛಸಿ। ತತೋ ಹ ಗಾರ್ಗೀ ವಾಚಕ್ನವೀ ಉಪರರಾಮ॥

(ಭಾಷ್ಯಾರ್ಥ)

"ಬ್ರಹ್ಮಲೋಕಗಳು ಏತರಲ್ಲಿ ಓತವೂ ಪ್ರೋತವೂ ಆಗಿವೆಯೊ !" ಎನ್ನಲು ಆ ಯಾಜ್ಞವಲ್ಕ್ಯನಿಂತೆಂದನು : ಎಲೌ ಗಾರ್ಗಿಯೆ, ಅತಿಪ್ರಶ್ನೆಮಾಡಬೇಡ, ಯುಕ್ತಿಪ್ರಕಾರವಾದ ನಿನ್ನ ಪ್ರಶ್ನೆಯನ್ನು ಮೀರಿ,[1] ಆಗಮದಿಂದ ಕೇಳಬೇಕಾದ ದೇವತೆಯನ್ನು ಅನುಮಾನದಿಂದ ಕೇಳದಿರು ಎಂದರ್ಥ. (ಹಾಗೆ) ಕೇಳಿದರೆ (ತೇ=ತವ) ನಿನ್ನ ಮೂರ್ಧವು ತಲೆಯು (ವ್ಯಪಪ್ತತ್=ವಿಸ್ಪಷ್ಟಂ ಪತೇತ್) ಬಿದ್ದೇ ಹೋಗದಿರಲಿ ! ದೇವತೆಯ ಸ್ವಪ್ರಶ್ನೆಯು ಆಗಮವಿಷಯವಾದದ್ದು[2]; ಆ ಪ್ರಶ್ನ ವಿಷಯವನ್ನು ಗಾರ್ಗಿಯ ಪ್ರಶ್ನೆಯು ಮೀರಿರುತ್ತವೆ, ಏಕೆಂದರೆ (ಅದು) ಅನು ಮಾನಸಂಬಂಧವಾಗಿರುತ್ತದೆ. ಅದು ಯಾವ ದೇವತೆಯ ಪ್ರಶ್ನೆಯೋ ಆ (ದೇವತೆಯು) ಅತಿಪ್ರಶ್ನ್ಯ (ದೇವತೆ), ಅತಿಪ್ರಶ್ನ್ಯವಲ್ಲದ್ದು ಅನತಿಪ್ರಶ್ನ್ಯವು,[3] ತನ್ನ

---

1. ಗಾರ್ಗಿಯ ಪ್ರಶ್ನೆ ಅನುಮಾನಪ್ರಕಾರದ್ದು, ಅದನ್ನು ಬಿಟ್ಟು ಆಗಮದಿಂದ ಕೇಳಬೇಕಾದ ದೇವತೆಯನ್ನು ಅನುಮಾನದಿಂದಲೇ ಕೇಳಿದ್ದರಿಂದ ಅನುಮಾನದ ಎಲ್ಲೆಯನ್ನು ಮೀರಿದಂತೆ ಆಯಿತು. ಇಲ್ಲಿ ಅತಿಪ್ರಶ್ನೆ ಎಂದರೆ ನ್ಯಾಯಪ್ರಕಾರವನ್ನು ಮೀರಿದ ಪ್ರಶ್ನೆ.

2. ಉಪದೇಶಗಮ್ಯವಾದದ್ದು. ಜಗತ್ತಿಗೆಲ್ಲ ಕಾರಣವು ಯಾವದೆಂಬುದು ಆಗಮ ದಿಂದ ಮಾತ್ರವೇ ತಿಳಿಯತಕ್ಕದ್ದು.

3. ಅಂಡದೊಳಗಿರುವ ಭೂತಗಳಾದರೆ ಅತಿಪ್ರಶ್ನೆಗೆ ಎಂದರೆ ಅನುಮಾನಕ್ಕೆ ವಿಷಯ ; ಅದಲ್ಲದ್ದು ಅನತಿಪ್ರಶ್ನೆ. ಇಲ್ಲಿ ಅತಿಪ್ರಶ್ನೆ ಎಂದರೆ ಆಗಮವಿಷಯವನ್ನು ಮೀರಿದ ಆಗಮ ಕ್ಕಿಂತ ಭಿನ್ನವಾದ ಅನುಮಾನವು. ಅತಿಪ್ರಶ್ನೆಯೆಂಬ ಮಾತಿಗೆ ಎರಡರ್ಥವನ್ನು ಮಾಡಿದಂತೆ ಆಯಿತು.

ಪ್ರಶ್ನೆಗೆ ಮಾತ್ರ ವಿಷಯವಾದದ್ದು, ಕೇವಲ ಆಗಮದಿಂದಲೇ ತಿಳಿಯಬರತಕ್ಕದು ಎಂದರ್ಥ. ಆ ಅನತಿಪ್ರಶ್ನ್ಯವಾಗಿರುವದೆಂದು ಪ್ರಸಿದ್ಧವಾದ ದೇವತೆಯನ್ನು ಅತಿ ಪ್ರಶ್ನೆಮಾಡುತ್ತಿರುವೆ; ಆದ್ದರಿಂದ ಗಾರ್ಗಿಯೆ, (ನೀನು) ಸಾಯಲಿಚ್ಛಿಸುವದಿಲ್ಲ ವಾದರೆ[4] ಅತಿಪ್ರಶ್ನೆಮಾಡದಿರು (ಎಂದನು). ಆಗ ಗಾರ್ಗಿವಾಚಕ್ನವಿಯು ಸುಮ್ಮನಾದಳು.

---

4. ಉಪದೇಶಮಾತ್ರಗಮ್ಯವಾದ ವಿಷಯಕ್ಕೆ ತರ್ಕವನ್ನು ಜೋಡಿಸಿ ವಾದಿಸವವನು ಬದುಕಿದ್ದರೂ ಸತ್ತಂತೆ ; ಅವನಿಗೆ ಅನರ್ಥವೇ ಗತಿ, ಪರಮಪುರುಷಾರ್ಥವು ಎಂದಿಗೂ ದೊರಕದು ಎಂಬುದೂ ಇಲ್ಲಿ ಸೂಚಿತವಾಗಿದೆ.

# ಆರನೆಯ ಬ್ರಾಹ್ಮಣದ ಸಾರ

ಈ ಬ್ರಾಹ್ಮಣದಲ್ಲಿ ಕಾರ್ಯಕಾರಣಭಾವದಿಂದೊಡಗೂಡಿರುವ ಪಂಚಭೂತ ರೂಪವಾದ ಅನಾತ್ಮ ನಿರಾಕರಣಪೂರ್ವಕವಾಗಿ ಬ್ರಹ್ಮವನ್ನು ತಿಳಿಯಬೇಕೆಂದು ಹೇಳಿದೆ.

ಕಹೋಲನು ಸುಮ್ಮನಾಗಲು ಗಾರ್ಗಿವಾಚಕ್ನವಿಯು ಪ್ರಶ್ನೆಮಾಡಿದಳು. ಆಕೆಯು ಪೃಥ್ವಿಯು ಅಪ್ಪಿನಿಂದ ವ್ಯಾಪ್ತವಾಗಿದೆಯಷ್ಟೆ; ಹಾಗೆ ಅಪ್ಪು ಯಾವ ಸೂಕ್ಷ್ಮವಾದ ಕಾರಣದಿಂದ ವ್ಯಾಪ್ತವಾಗಿದೆ ಎಂದು ಉತ್ತರವನ್ನು ಕೇಳಿದಳು. ಯಾಜ್ಞವಲ್ಕ್ಯನು ವಾಯುವಿನಿಂದ ಎಂದು ಉತ್ತರವನ್ನು ಕೊಟ್ಟನು. ಮುಂದೆ ಹೀಗೆಯೇ ಕಾರ್ಯಕಾರಣಭಾವದ ಪ್ರಶ್ನೋತ್ತರವು ನಡೆಯಿತು.

ವಾಯುವು ಯಾವ ಕಾರಣದಿಂದ ವ್ಯಾಪ್ತವಾಗಿದೆ ? ಅಂತರಿಕ್ಷದಿಂದ; ಅಂತರಿಕ್ಷವೊ ? ಗಂಧರ್ವಲೋಕದಿಂದ; ಗಂಧರ್ವಲೋಕವೊ? ಆದಿತ್ಯಲೋಕದಿಂದ; ಆದಿತ್ಯಲೋಕವೊ? ಚಂದ್ರ ಲೋಕದಿಂದ; ಚಂದ್ರಲೋಕವೊ? ನಕ್ಷತ್ರಲೋಕದಿಂದ, ನಕ್ಷತ್ರಲೋಕವೊ? ದೇವಲೋಕದಿಂದ ದೇವಲೋಕವೊ? ಇಂದ್ರಲೋಕದಿಂದ; ಇಂದ್ರಲೋಕವೊ? ಪ್ರಜಾಪತಿ (ವಿರಾಟ್)ಲೋಕದಿಂದ; ಪ್ರಜಾಪತಿಲೋಕವೊ? ಬ್ರಹ್ಮಲೋಕದಿಂದ; ಹೀಗೆ ಬ್ರಹ್ಮಲೋಕದವರೆಗೂ ಪಂಚಭೂತಗಳೇ ಸೂಕ್ಷ್ಮಸೂಕ್ಷ್ಮತರತಾರತಮ್ಯದಿಂದ ಬೇರೆಬೇರೆಯ ಆಕಾರದಿಂದ ಸಂಹತವಾಗಿ ಆಯಾ ಲೋಕ ಗಳಾಗಿರುತ್ತವೆ ಎಂಬುದು ಯಾಜ್ಞವಲ್ಕ್ಯನ ಅಭಿಪ್ರಾಯ.

ಆಗ ಗಾರ್ಗಿಯು ಬ್ರಹ್ಮಲೋಕವು ಯಾವ ಕಾರಣದಿಂದ ವ್ಯಾಪ್ತವಾಗಿದೆ ?–ಎಂದು ಕೇಳಿ ದಳು. ಯಾಜ್ಞವಲ್ಕ್ಯನು, 'ಗಾರ್ಗಿಯೆ, ಅದಕ್ಕೆ ವ್ಯಾಪಕವಾದ ಆ ದೇವತೆಯು ಇತರ ಕಾರ್ಯಕಾರಣಭಾವದ ಪದಾರ್ಥಗಳಂತಲ್ಲ; ಆದ್ದರಿಂದ ಅದನ್ನು ಪೃಥಿವೀವೃಷ್ಟಾಂತದಿಂದ ಅನುಮಾನಿಸಿ ತಿಳಿಯುವದಕ್ಕೆ ಬರುವದಿಲ್ಲ. ಅದಕ್ಕೂ ಅನುಮಾನವನ್ನು ನೀನು ಹತ್ತಿಸುವದಕ್ಕೆ ಹೋದರೆ ನಿನಗೆ ಅಶ್ರೇಯಸ್ಸಾದೀತು ! ಆದ್ದರಿಂದ ಇಲ್ಲಿಗೆ ಅನುಮಾನದಿಂದ ಊಹಿಸುವದನ್ನು ನಿಲ್ಲಿಸು !' ಎಂದನು. ಆಗ ಗಾರ್ಗಿಯು ಸುಮ್ಮನಾದಳು.

# ಮೂರನೆಯ ಅಧ್ಯಾಯ-ಏಳನೆಯ ಬ್ರಾಹ್ಮಣ

## (ಉದ್ದಾಲಕನ ಪ್ರಶ್ನೆ : ಸೂತ್ರಾಂತರ್ಯಾಮಿಗಳ ಸ್ವರೂಪ)

### ಸೂತ್ರಾಂತರ್ಯಾಮಿಗಳನ್ನು ಕುರಿತ ಪ್ರಶ್ನೆ

(ಉಪನಿಷತ್ತು)

**ಅಥ ಹೈನಮುದ್ದಾಲಕ ಆರುಣಿಃ ಪಪ್ರಚ್ಛ ಯಾಜ್ಞವಲ್ಕ್ಯೇತಿ ಹೋ ವಾಚ ಮದ್ರೇಷ್ವವಸಾಮ ಪತಞ್ಚಲಸ್ಯ ಕಾಪ್ಯಸ್ಯ ಗೃಹೇಷು ಯಜ್ಞ ಮಧೀಯಾನಾಸ್ತಸ್ಯಾಸೀದ್ಭಾರ್ಯಾ ಗನ್ಧರ್ವಗೃಹೀತಾ ತಮ ಪೃಚ್ಛಾಮ ಕೋಽಸೀತಿ ಸೋಽಬ್ರವೀತ್ ಕಬನ್ಧ ಆಥರ್ವಣ ಇತಿ ಸೋಽಬ್ರವೀತ್ ಪತಞ್ಚಲಂ ಕಾಪ್ಯಂ ಯಾಜ್ಞಿಕಾಗ್ಂಶ್ಚ ವೇತ್ಥ ನು ತ್ವಂ ಕಾಪ್ಯ ತತ್ಸೂತ್ರಂ ಯೇನಾಯಂ ಚ ಲೋಕಃ ಪರಶ್ಚ ಲೋಕಃ ಸರ್ವಾಣಿ ಚ ಭೂತಾನಿ ಸಂದೃಬ್ಧಾನಿ ಭವನ್ತೀತಿ ಸೋಽಬ್ರವೀತ್ ಪತಞ್ಚಲಃ ಕಾಪ್ಯೋ ನಾಹಂ ತದ್ ಭಗವನ್ ವೇದೇತಿ ಸೋಽ ಬ್ರವೀತ್ ಪತಞ್ಚಲಂ ಕಾಪ್ಯಂ ಯಾಜ್ಞಿಕಾಗ್ಂಶ್ಚ ವೇತ್ಥ ನು ತ್ವಂ ಕಾಪ್ಯ ತಮನ್ತರ್ಯಾಮಿಣಂ ಯ ಇಮಂ ಚ ಲೋಕಂ ಚ ಪರಂ ಚ ಲೋಕಗ್ಂ ಸರ್ವಾಣಿ ಚ ಭೂತಾನಿ ಯೋಽನ್ತರೋ ಯಮ ಯತೀತಿ ಸೋಽಬ್ರವೀತ್ ಪತಞ್ಚಲಃ ಕಾಪ್ಯೋ ನಾಹಂ ತಂ ಭಗ ವನ್ ವೇದೇತಿ ಸೋಽಬ್ರವೀತ್ ಪತಞ್ಚಲಂ ಕಾಪ್ಯಂ ಯಾಜ್ಞಿ ಕಾಗ್ಂಶ್ಚ ಯೋ ವೈ ತತ್ ಕಾಪ್ಯ ಸೂತ್ರಂ ವಿದ್ಯಾತ್ ತಂ ಚಾನ್ತ ರ್ಯಾಮಿಣಮಿತಿ ಸ ಬ್ರಹ್ಮವಿತ್ ಸ ಲೋಕವಿತ್ ಸ ದೇವವಿತ್ ಸ ವೇದವಿತ್ ಸ ಭೂತವಿತ್ ಸ ಆತ್ಮವಿತ್ ಸ ಸರ್ವವಿದಿತಿ ತೇಭ್ಯೋಽ ಬ್ರವೀತ್ ತದಹಂ ವೇದ ತಚ್ಚೇತ್ತ್ವಂ ಯಾಜ್ಞವಲ್ಕ್ಯ ಸೂತ್ರಮ ವಿದ್ವಾಗ್ಂಸ್ತಂ ಚಾನ್ತರ್ಯಾಮಿಣಂ ಬ್ರಹ್ಮಗವೀರುದಜಸೇ ಮೂರ್ಧಾ ತೇ ವಿಪತಿಷ್ಯತೀತಿ ವೇದ ವಾ ಅಹಂ ಗೌತಮ ತತ್ ಸೂತ್ರಂ ತಂ ಚಾನ್ತರ್ಯಾಮಿಣಮಿತಿ ಯೋ ವಾ ಇದಂ ಕಶ್ಚಿದ್ ಬ್ರೂಯಾದ್ ವೇದ ವೇದೇತಿ ಯಥಾ ವೇತ್ಥ ತಥಾ ಬ್ರೂಹೀತಿ ॥ ೧**

೧. ಆಗ ಇವನನ್ನು ಉದ್ದಾಲಕ ಆರುಣಿಯು ಕೇಳಿದನು. "ಯಾಜ್ಞ ವಲ್ಕ್ಯನೆ'', ಎಂದನು. "ಮದ್ರದೇಶದಲ್ಲಿ ಪತಂಜಲಕಾಪ್ಯನ ಮನೆಯಲ್ಲಿ ಯಜ್ಞ(ಶಾಸ್ತ್ರ)ವನ್ನು ಅಧ್ಯಯನಮಾಡುತ್ತಿದ್ದೆವು. ಅವನ ಹೆಂಡತಿಯನ್ನು

ಗಂಧರ್ವನು ಹಿಡಿದಿದ್ದನು 'ಯಾರಾಗಿರುವೆ?' ಎಂದು ಅವನನ್ನು ಕೇಳಿದೆವು. ಅವನು 'ಕಬಂಧ ಆಥರ್ವಣನು' ಎಂದನು. ಪತಂಜಲಕಾಪ್ಯನನ್ನೂ ಯಾಜ್ಞಿಕರನ್ನೂ 'ಕಾಪ್ಯನೆ, ಯಾವನಿಂದ ಈ ಲೋಕವೂ ಪರಲೋಕವೂ ಸರ್ವಭೂತಗಳೂ ಸಂದೃಬ್ಧವಾಗಿರುವವೋ ಆ ಸೂತ್ರವನ್ನು ನೀನು ಬಲ್ಲೆಯ?'' ಎಂದು ಕೇಳಿದನು. ಆ ಪತಂಜಲಕಾಪ್ಯನು 'ಭಗವಂತನೆ, ನಾನು ಅದನ್ನು ಅರಿಯೆನು' ಎಂದನು. ಅವನು ಪತಂಜಲಕಾಪ್ಯನನ್ನೂ ಯಾಜ್ಞಿಕರನ್ನೂ "ಕಾಪ್ಯನೆ, ಯಾವನು ಈ ಲೋಕವನ್ನೂ ಪರಲೋಕವನ್ನೂ ಸರ್ವಭೂತಗಳನ್ನೂ ಒಳಗಿದ್ದುಕೊಂಡು ಆಳುತ್ತಿರುವನೋ ಆ ಅಂತರ್ಯಾಮಿಯನ್ನು ನೀನು ಬಲ್ಲೆಯ?'' ಎಂದು ಕೇಳಿದನು. ಆ ಪತಂಜಲಕಾಪ್ಯನು 'ಭಗವಂತನೆ, ನಾನು ಆತನನ್ನು ಅರಿಯೆನು' ಎಂದನು. ಅವನು ಪತಂಜಲಕಾಪ್ಯನನ್ನೂ ಯಾಜ್ಞಿಕರನ್ನೂ ಕುರಿತು "ಕಾಪ್ಯನೆ, ಯಾವನಾದರೆ ಆ ಸೂತ್ರವನ್ನೂ ಆ ಅಂತರ್ಯಾಮಿಯನ್ನೂ ಹೀಗೆ ಅರಿತಿರುವನೋ ಅವನೇ ಬ್ರಹ್ಮವಿದನು, ಅವನೇ ಲೋಕವಿದನು, ಅವನೇ ದೇವವಿದನು, ಅವನೇ ವೇದವಿದನು, ಅವನೇ ಭೂತವಿದನು, ಅವನೇ ಆತ್ಮವಿದನು, ಅವನೇ ಸರ್ವವಿದನು'' ಎಂದು ಅವರಿಗೆ ಹೇಳಿಕೊಟ್ಟನು. ಅದನ್ನು ನಾನು ತಿಳಿದಿರುವೆನು. ಯಾಜ್ಞವಲ್ಕ್ಯನೆ, ಆ ಸೂತ್ರವನ್ನೂ ಆ ಅಂತರ್ಯಾಮಿಯನ್ನೂ ಅರಿಯದೆ ಬ್ರಹ್ಮಗೋವುಗಳನ್ನು ಹೊಡೆದುಕೊಂಡು ಹೋಗುವೆಯಾದರೆ ನಿನ್ನ ಮೂರ್ಧವು ಬಿದ್ದುಹೋಗಲಿ!" ಗೌತಮನೆ, ಆ ಸೂತ್ರವನ್ನೂ ಅಂತರ್ಯಾಮಿಯನ್ನೂ ನಾನು ಬಲ್ಲೆ—ಎನ್ನಲು "ಯಾವನಾದರೂ ಬಲ್ಲೆ, ಬಲ್ಲೆ ಎಂದು ಹೇಳಿಯಾನು. ಹೇಗೆ ಬಲ್ಲೆಯೋ ಹಾಗೆ ಹೇಳು!" ಎಂದನು.

## ಉದ್ದಾಲಕನು ಸೂತ್ರಾಂತರ್ಯಾಮಿಗಳನ್ನು ಅರಿತ ಬಗೆ

(ಭಾಷ್ಯ)

೬೭. ಇದಾನೀಂ ಬ್ರಹ್ಮಲೋಕಾನಾಮ್ ಅನ್ತರತಮಂ ಸೂತ್ರಂ ವಕ್ತವ್ಯಮ್ ಇತಿ ತದರ್ಥ ಆರಮ್ಭಃ। ತಚ್ಚ ಆಗಮೇನೈವ ಪ್ರಷ್ಟವ್ಯಮ್ ಇತಿ ಇತಿಹಾಸೇನ ಆಗಮೋಪನ್ಯಾಸಃ ಕ್ರಿಯತೇ। ಅಥ ಹೈನಮ್ ಉದ್ದಾಲಕೋ ನಾಮತಃ ಅರುಣಸ್ಯಾಪತ್ಯಮ್ ಆರುಣಿಃ ಪಪ್ರಚ್ಛ। ಯಾಜ್ಞವಲ್ಕ್ಯೇತಿ ಹೋವಾಚ। ಮದ್ರೇಷು ದೇಶೇಷು ಅವಸಾಮ ಉಷಿತವನ್ತಃ ಪತಞ್ಚಲಸ್ಯ ಪತಞ್ಚಲೋ ನಾಮತಃ ತಸ್ಯೈವ ಕಪಿಗೋತ್ರಸ್ಯ ಕಾಪ್ಯಸ್ಯ ಗೃಹೇಷು ಯಜ್ಞಮ್ ಅಧೀಯಾನಾಃ ಯಜ್ಞಶಾಸ್ತ್ರ

ಧ್ಯಯನಂ ಕುರ್ವಾಣಾಃ। ತಸ್ಯ ಆಸೀತ್ ಭಾರ್ಯಾ ಗನ್ಧರ್ವಗೃಹೀತಾ। ತಮ್ ಅಪೃಚ್ಛಾಮ ಕೋಽಸೀತಿ। ಸೋಽಬ್ರವೀತ್ ಕಬನ್ಧೋ ನಾಮತಃ ಅಥರ್ವಣೋಽಪತ್ಯಮ್ ಅಥರ್ವಣ ಇತಿ। ಸೋಽಬ್ರವೀತ್ ಗನ್ಧರ್ವಃ ಪತಞ್ಚಲಂ ಕಾಪ್ಯಂ ಯಾಜ್ಞಿಕಾಂಶ್ಚ ತಚ್ಛಿಷ್ಯಾನ್। ವೇತ್ಥ ನು ತ್ವಂ ಹೇ ಕಾಪ್ಯ ಜಾನೀಷೇ ತತ್ ಸೂತ್ರಮ್ ? ಕಿಂ ತತ್? ಯೇನ ಸೂತ್ರೇಣ ಅಯಂ ಚ ಲೋಕಃ ಇದಂ ಚ ಜನ್ಮ ಪರಶ್ಚ ಲೋಕಃ ಪರಂ ಚ ಪ್ರತಿಪತ್ತವ್ಯಂ ಜನ್ಮ ಸರ್ವಾಣಿ ಚ ಭೂತಾನಿ ಬ್ರಹ್ಮಾದಿಸ್ತಮ್ಬಪರ್ಯನ್ತಾನಿ ಸಂದೃಬ್ಧಾನಿ ಸಂಗ್ರಥಿತಾನಿ। ಸ್ರಗಿವ ಸೂತ್ರೇಣ ವಿಷ್ಟಬ್ಧಾನಿ ಭವನ್ತೀ ಯೇನ ತತ್ಕಿಂ ಸೂತ್ರಂ ವೇತ್ಥ?ಸೋಽಬ್ರವೀತ್ ಏವಂ ಪೃಷ್ಟಃ ಕಾಪ್ಯಃ। ನಾಹಂ ತದ್ ಭಗವನ್ ವೇದ ಇತಿ। ತತ್ ಸೂತ್ರಂ ನಾಹಂ ಜಾನೇ ಹೇ ಭಗವನ್ ಇತಿ ಸಂಪೂಜಯನ್ ಆಹ। ಸೋಽಬ್ರವೀತ್ ಪುನರ್ಗನ್ಧರ್ವಃ ಉಪಾಧ್ಯಾಯಮ್ ಅಸ್ಮಾಂಶ್ಚ। ವೇತ್ಥ ನು ತ್ವಂ ಕಾಪ್ಯಮ್ ಅಂತರ್ಯಾಮಿಣಮ್? ಅನ್ತರ್ಯಾಮೀ ಇತಿ ವಿಶೇಷ್ಯತೇ। ಯ ಇಮಂ ಚ ಲೋಕಂ ಪರಂ ಚ ಲೋಕಂ ಸರ್ವಾಣಿ ಚ ಭೂತಾನಿ ಯೋಽನ್ತರೋಽಭ್ಯನ್ತರಃ ಸನ್ ಯಮಯತಿ ನಿಯಮಯತಿ ದಾರುಯನ್ತ್ರಮಿವ ಭ್ರಾಮಯತಿ ಸ್ವಂ ಸ್ವಮುಚಿತವ್ಯಾಪಾರಂ ಕಾರಯತಿ ಇತಿ। ಸೋಽಬ್ರವೀತ್ ಏವಮುಕ್ತಃ ಪತಞ್ಚಲಃ ಕಾಪ್ಯಃ ನಾಹಂ ತಂ ಜಾನೇ ಭಗವನ್ನಿತಿ ಸಂಪೂಜಯನ್ನಾಹ। ಸೋಽಬ್ರವೀತ್ ಪುನರ್ಗನ್ಧರ್ವಃ। ಸೂತ್ರ ತದನ್ತರ್ಗತಾನ್ತರ್ಯಾಮಿಣೋರ್ವಿಜ್ಞಾನಂ ಸ್ತೂಯತೇ। ಯಃ ಕಶ್ಚಿತ್ ವೈ ತತ್ ಸೂತ್ರಂ ಹೇ ಕಾಪ್ಯ ವಿದ್ಯಾತ್ ವಿಜಾನೀಯಾತ್ ತಂ ಚ ಅನ್ತರ್ಯಾಮಿಣಂ ಸೂತ್ರಾನ್ತರ್ಗತಂ ತಸ್ಯೈವ ಸೂತ್ರಸ್ಯ ನಿಯನ್ತಾರಂ ವಿದ್ಯಾತ್ ಯಃ ಇತಿ ಏವಮುಕ್ತೇನ ಪ್ರಕಾರೇಣ ಸ ಹಿ ಬ್ರಹ್ಮವಿತ್ ಪರಮಾತ್ಮವಿತ್। ಲೋಕಾಂಶ್ಚ ಭೂರಾದೀನ್ ಅನ್ತರ್ಯಾಮಿಣಾ ನಿಯಮ್ಯಮಾನಾನ್ ವೇತ್ತಿ। ಸ ದೇವಾಂಶ್ಚ ಅಗ್ನ್ಯಾದೀನ್ ಲೋಕಿನಃ ಜಾನಾತಿ ವೇದಾಂಶ್ಚ ಸರ್ವಪ್ರಮಾಣಭೂತಾನ್ ವೇತ್ತಿ। ಭೂತಾನಿ ಚ ಬ್ರಹ್ಮಾದೀನಿ ಸೂತ್ರೇಣ ಧ್ರಿಯಮಾಣಾನಿ ತದನ್ತರ್ಗತೇನ ಅನ್ತರ್ಯಾಮಿಣಾ ನಿಯಮ್ಯಮಾನಾನಿ ವೇತ್ತಿ। ಸ ಆತ್ಮಾನಂ ಚ ಕರ್ತೃತ್ವಭೋಕ್ತೃತ್ವ ವಿಶಿಷ್ಟಂ ತೇನೈವ ಅನ್ತರ್ಯಾಮಿಣಾ ನಿಯಮ್ಯಮಾನಂ ವೇತ್ತಿ। ಸರ್ವಂ ಚ ಜಗತ್ ತಥಾಭೂತಂ ವೇತ್ತಿ ಇತಿ। ಏವಂ ಸ್ತುತೇ ಸೂತ್ರಾನ್ತರ್ಯಾಮಿ ವಿಜ್ಞಾನೇ ಪ್ರಲುಬ್ಧಃ ಕಾಪ್ಯೋಽಭಿಮುಖೀಭೂತಃ ವಯಂ ಚ ತೇಭ್ಯಶ್ಚ ಅಸ್ಮಭ್ಯಮ್ ಅಭಿಮುಖೀಭೂತೇಭ್ಯಃ ಅಬ್ರವೀತ್ ಗನ್ಧರ್ವಃ ಸೂತ್ರಮ್ ಅನ್ತರ್ಯಾಮಿಣಂ ಚ ॥

(ಭಾಷ್ಯಾರ್ಥ)

ಈಗ ಬ್ರಹ್ಮಲೋಕಗಳಿಗೆ ತೀರ ಒಳಗಿರುವ ಸೂತ್ರವನ್ನು ಹೇಳಬೇಕು ಎಂದು ಅದಕ್ಕಾಗಿ (ಬ್ರಾಹ್ಮಣವನ್ನು) ಆರಂಭಿಸಿದೆ. ಅದನ್ನು ಆಗಮದಿಂದಲೇ

ಕೇಳಬೇಕಾಗಿರುವದರಿಂದ ಇತಿಹಾಸದ ಮೂಲಕವಾಗಿ ಆಗಮವನ್ನು[1] ಪಉನ್ಯಾ ಮಾಡಿರುತ್ತದೆ.

ಇನ್ನು ಈ (ಯಾಜ್ಞವಲ್ಕ್ಯ)ನನ್ನು ಉದ್ದಾಲಕನೆಂಬ ಹೆಸರಿನ ಅರುಣನ ಮಗನಾದ ಆರುಣಿಯು ಪ್ರಶ್ನಿಸಿದನು. ಯಾಜ್ಞವಲ್ಕ್ಯನೆ, ಎಂದನು. ಮದ್ರ ದೇಶದಲ್ಲಿ ಪತಂಜಲನ- ಪತಂಜಲನೆಂಬ ಹೆಸರಿನ, ಅವನೇ ಕಪಿಗೋತ್ರದವನಾದ್ದ ರಿಂದ ಕಾಪ್ಯನು, (ಆ) ಕಾಪ್ಯನ ಮನೆಯಲ್ಲಿ ಯಜ್ಞವನ್ನು ಅಧ್ಯಯನಮಾಡುತ್ತಾ ಯಜ್ಞಶಾಸ್ತ್ರವನ್ನು ಅಧ್ಯಯನಮಾಡುತ್ತಾ ವಾಸವಾಗಿದ್ದೆವು. ಅವನ ಹೆಂಡತಿಯು ಗಂಧರ್ವಗೃಹೀತಳಾಗಿ ಇದ್ದಳು. ಆ (ಗಂಧರ್ವ)ನನ್ನು (ನೀನು) ಯಾರು? ಎಂದು ಕೇಳಿದೆವು. ಅವನು 'ಕಬಂಧನೆಂಬ ಹೆಸರಿನವನು, ಅಥರ್ವನ ಮಗನಾದ್ದ ರಿಂದ ಆಥರ್ವಣನು' ಎಂದು ಹೇಳಿದನು. ಆ (ಕಬಂಧ ಆಥರ್ವಣನೆಂಬ) ಗಂಧ ರ್ವನು ಪತಂಜಲ ಕಾಪ್ಯನನ್ನೂ ಅವನ ಶಿಷ್ಯರಾದ ಯಾಜ್ಞಿಕರನ್ನೂ 'ಎಲೈ ಕಾಪ್ಯನೆ, ನೀನು ಆ ಸೂತ್ರವನ್ನು ಬಲ್ಲೆಯ? ಆ (ಸೂತ್ರ)ವೆಂಬುದು ಯಾವದು? ಎಂದರೆ ಯಾವ ಸೂತ್ರದಿಂದ ಈ ಲೋಕವೂ ಈ ಜನ್ಮವೂ, ಪರಲೋಕವೂ (ಮುಂದೆ) ಪಡೆಯಬೇಕಾಗಿರುವ ಮತ್ತೊಂದು ಜನ್ಮವೂ, ಎಲ್ಲಾ ಬ್ರಹ್ಮಾದಿಸ್ತಂಬಪರ್ಯಂತ ವಾಗಿರುವ ಭೂತಗಳೂ ಸಂದೃಬ್ಧವಾಗಿರುವವೋ ಮಾಲೆಯು ನಾರಿನಿಂದ (ಕಟ್ಟಿರು ವಂತೆ) ಕಟ್ಟಿರುತ್ತವೆಯೋ, ಯಾವದರಿಂದ (ಇವೆಲ್ಲ) ಎತ್ತಿಹಿಡಿಯಲ್ಪಟ್ಟವೆಯೋ ಆ ಸೂತ್ರವನ್ನು ಬಲ್ಲೆಯೇನು?' ಎಂದು ಕೇಳಿದನು. ಹೀಗೆಂದು ಕೇಳಲು ಕಾಪ್ಯನು 'ಭಗವಂತನೆ, ನಾನು ಅದನ್ನು ಅರಿಯೆನು' ಎಂದನು, ಆ ಸೂತ್ರವನ್ನು ನಾನರಿ ಯೆನು, ಎಂದು (ಅವನನ್ನು) ಗೌರವಿಸಿ ನುಡಿದನು.

ಮತ್ತೆ ಗಂಧರ್ವನು (ಆ) ಉಪಾಧ್ಯಾಯನನ್ನೂ ನಮ್ಮನ್ನೂ (ಕುರಿತು) ಕಾಪ್ಯನೆ, ಆ ಅಂತರ್ಯಾಮಿಯನ್ನು- ಅಂತರ್ಯಾಮಿಯನ್ನು ಹೀಗೆಂದು ವಿಶೇ ಷಣದಿಂದ ಕೂಡಿಸಿ ಹೇಳುತ್ತಿದ್ದಾನೆ: ಯಾವನು ಈ ಲೋಕವನ್ನೂ ಪರಲೋಕ ವನ್ನೂ ಸರ್ವಭೂತಗಳನ್ನೂ ಒಳಗೆ ತೀರ ಒಳಗಿದ್ದವನಾಗಿ ಆಳುತ್ತಿರುವನೋ, ಕಟ್ಟನಲ್ಲಿಟ್ಟಿರುವನೋ, ಮರದ ಯಂತ್ರವನ್ನು ಹೇಗೋ ಹಾಗೆ ಚಲಿಸುವಂತೆ ಮಾಡುತ್ತಿರುವನೋ, ಅವರವರಿಗೆ ತಕ್ಕ ವ್ಯಾಪಾರವನ್ನು ಮಾಡಿಸುತ್ತಾನೋ ಎಂದು (ವಿಶೇಷಣ. ಅವನನ್ನು)- ನೀನು ಬಲ್ಲೆಯ? ಹೀಗೆನ್ನಲು ಆ ಪತಂಜಲ

---

1. ಆಗಮವೆಂದರೆ ವಿಷಯವನ್ನು ಅನುಭವದಿಂದ ಬಲ್ಲವರು ಮಾಡುವ ಉಪದೇಶ; ಅತೀಂದ್ರಿಯಪದಾರ್ಥಗಳು ಪ್ರತ್ಯಕ್ಷಾನುಮಾನಗಳಿಗೆ ವಿಷಯವಲ್ಲವಾದ್ದರಿಂದ ಅವನ್ನು ಆಗಮ ದಿಂದಲೇ ತಿಳಿದುಕೊಳ್ಳಬೇಕಾಗಿರುತ್ತದೆ. ಆ ವಿಷಯದಲ್ಲಿ ತರ್ಕವು ತಪ್ಪುತಿಳಿವಳಿಕೆಯನ್ನು ಕಳೆಯುವದಕ್ಕೆ ಮಾತ್ರ.

ಕಾಪ್ಯನು ಇಂತೆಂದನು. 'ಭಗವಂತನೆ, ನಾನು ಅವನನ್ನರಿಯೆನು' ಎಂದು (ಅವನನ್ನು) ಗೌರವಿಸಿ ನುಡಿದನು.

ಮತ್ತೆ ಆ ಗಂಧರ್ವನಿಂತೆಂದನು. ಸೂತ್ರ, ಅದರೊಳಗಿನ ಅಂತರ್ಯಾಮಿ-(ಈ ಇಬ್ಬರ) ವಿಜ್ಞಾನವು (ಇಲ್ಲಿ) ಹೊಗಳಲ್ಪಡುತ್ತಿದೆ. ಎಲೈ ಕಾಪ್ಯನೆ, ಯಾವನೇ ಆಗಲಿ ಆ ಸೂತ್ರವನ್ನು ಅರಿತಿರುವನೋ ಸರಿಯಾಗಿ ತಿಳಿದುಕೊಂಡಿರುವನೋ, ಮತ್ತು ಆ ಸೂತ್ರಾಂತರ್ಗತನಾದ ಅಂತರ್ಯಾಮಿಯನ್ನೂ, ಅದೇ ಸೂತ್ರ ನಿಯಂತೃವಾದ (ಅಂತರ್ಯಾಮಿಯನ್ನೂ) ಯಾವನು ಹೀಗೆಂದು ಉಕ್ತಪ್ರಕಾರದಿಂದ ಅರಿತಿರುವನೋ, ಅವನೇ ಬ್ರಹ್ಮವಿದನು, ಪರಮಾತ್ಮನನ್ನು ಅರಿತವನು; ಅವನೇ ಲೋಕಗಳನ್ನು, ಅಂತರ್ಯಾಮಿಯಿಂದ ನಿಯಮಿತವಾಗಿರುವ ಭೂರಾದಿ ಲೋಕಗಳನ್ನು ಬಲ್ಲವನು; ಅವನೇ ದೇವತೆಗಳನ್ನೂ, ಅಗ್ನ್ಯಾದಿಲೋಕಗಳನ್ನೂ ಬಲ್ಲವನು; (ಅವನೇ) ಎಲ್ಲಕ್ಕೂ ಪ್ರಮಾಣವಾಗಿರುವ ವೇದಗಳನ್ನು ಬಲ್ಲವನು; ಭೂತಗಳನ್ನು ಸೂತ್ರನಿಂದ ಧೃತವಾಗಿರುವ ಮತ್ತು ಆ (ಸೂತ್ರದ) ಒಳಗಿರುವ ಅಂತರ್ಯಾಮಿಯಿಂದ ನಿಯಮಿತವಾಗಿರುವ ಬ್ರಹ್ಮಾದಿಭೂತಗಳನ್ನು ಬಲ್ಲವನು; ಅವನೇ ಆತ್ಮನನ್ನು ಅದೇ ಅಂತರ್ಯಾಮಿಯಿಂದ ನಿಯಮಿತನಾಗಿರುವ ಕರ್ತೃತ್ವ ಭೋಕ್ತೃತ್ವಗಳಿಂದೊಡಗೂಡಿರುವ (ಜೀವನನ್ನು) ಬಲ್ಲವನು; ಹೀಗೆಯೇ (ಸೂತ್ರದಿಂದ ಧೃತವಾಗಿ ಅಂತರ್ಯಾಮಿಯಿಂದ ನಿಯಮಿತವಾಗಿರುವ) ಸರ್ವಜಗತ್ತನ್ನೂ ಬಲ್ಲವನು ಎಂದು (ಹೊಗಳಿದನು).

ಸೂತ್ರಾಂತರ್ಯಾಮಿಗಳ ವಿಜ್ಞಾನವನ್ನು ಹೀಗೆ (ಅವನು) ಹೊಗಳಲಾಗಿ ಆಶೆಯಿಂದ ಕಾಪ್ಯನು ಆಕಡೆಗೇ ತಿರುಗಿದನು; ನಾವೂ (ತಿರುಗಿದೆವು). ಮತ್ತು (ಹೀಗೆ) ಅಭಿಮುಖರಾದ ನಮಗೆ (ಆ) ಗಂಧರ್ವನು ಸೂತ್ರವನ್ನೂ ಅಂತರ್ಯಾಮಿಯನ್ನೂ ಹೇಳಿಕೊಟ್ಟನು.

## ಉದ್ದಾಲಕನ ಪ್ರಶ್ನೆ :
## ಸೂತ್ರವನ್ನೂ ಅಂತರ್ಯಾಮಿಯನ್ನೂ ಹೇಳು

(ಭಾಷ್ಯ)

೭೮. ತದಹಂ ಸೂತ್ರಾನ್ತರ್ಯಾಮಿವಿಜ್ಞಾನಂ ವೇದ ಗಂಧರ್ವಾತ್ ಲಬ್ಧಾಗಮಃ ಸನ್ | ತಚ್ಚೇತ್ ಯಾಜ್ಞವಲ್ಕ್ಯ ಸೂತ್ರಂ ತಂ ಚ ಅಂತರ್ಯಾಮಿಣಮ್ ಅವಿದ್ವಾಂಶ್ಚೇತ್ ಅಬ್ರಹ್ಮವಿತ್ ಸನ್ ಯದಿ ಬ್ರಹ್ಮಗವೀಃ ಉದಜಸೇ ಬ್ರಹ್ಮವಿದಾಂ ಸ್ವಭೂತಾ ಗಾಃ ಉದಜಸೇ ಉನ್ನಯಸಿ ತ್ವಮ್ ಅನ್ಯಾಯೇನ ತತಃ ಮಚ್ಛಾಪದಗ್ಧಸ್ಯ ಮೂರ್ಧಾ ತೇ ಶಿರಸ್ತೇ ತವ (ವಿಪತಿಷ್ಯತಿ)[1] ವಿಸ್ಪಷ್ಟಂ ಪತಿಷ್ಯತಿ

1. ಮೂಲಭಾಷ್ಯದಲ್ಲಿ ಈ ಮಾತು ಇದ್ದದ್ದು ಅಚ್ಚಿನ ಪುಸ್ತಕಗಳಲ್ಲಿ ಕೈ ಬಿಟ್ಟು ಹೋಗಿದೆ.

ಏವಮುಕ್ತೋ ಯಾಜ್ಞವಲ್ಕ್ಯ ಆಹ ವೇದ ಜಾನಾಮಿ ಅಹಂ ಹೇ ಗೌತಮ ಇತಿ ಗೋತ್ರತಃ| ತತ್ ಸೂತ್ರಂ ಯದ್ಗನ್ಧರ್ವಸ್ತುಭ್ಯಮ್ ಉಕ್ತವಾನ್ | ಯಂ ಚ ಅಂತರ್ಯಾಮಿಣಂ ಗನ್ಧರ್ವಾತ್ ವಿದಿತವನ್ತೋ ಯೂಯಂ ತಂ ಚಾನ್ತರ್ಯಾಮಿಣಂ ವೇದಾಹಮಿತಿ| ಏವಮುಕ್ತೇ ಪ್ರತ್ಯಾಹ ಗೌತಮಃ| ಯಃ ಕಶ್ಚಿತ್ ಪ್ರಾಕೃತಃ ಇದಂ ಯತ್ ತ್ವಯೋಕ್ತಂ ಬ್ರೂಯಾತ್ | ಕಥಮ್ ? ವೇದ, ವೇದ ಇತಿ ಆತ್ಮಾನಂ ಶ್ಲಾಘಯನ್| ಕಿಂ ತೇನ ಗರ್ಜಿತೇನ? ಕಾರ್ಯೇಣ ದರ್ಶಯ| ಯಥಾ ವೇತ್ಥ ತಥಾ ಬ್ರೂಹಿ ಇತಿ ||

(ಭಾಷ್ಯಾರ್ಥ)

ಆ ಸೂತ್ರಾಂತರ್ಯಾಮಿಗಳ ವಿಜ್ಞಾನವನ್ನು ನಾನು ಗಂಧರ್ವನಿಂದ ಆಗಮುವನ್ನು ಪಡೆದುಕೊಂಡು ಬಲ್ಲವನಾಗಿರುತ್ತೇನೆ. ಯಾಜ್ಞವಲ್ಕ್ಯನೆ, ಆ ಸೂತ್ರವನ್ನೂ ಆ ಅಂತರ್ಯಾಮಿಯನ್ನೂ ಅರಿಯದೆ ಬ್ರಹ್ಮಜ್ಞಾನಿಯಲ್ಲದೆಯೇ, ಬ್ರಹ್ಮಗೋಗಳನ್ನು ಅಟ್ಟಿಕೊಂಡು ಹೋದರೆ, ಬ್ರಹ್ಮವಿದರಿಗೆ ಸೇರಿರುವ ಗೋಗಳನ್ನು ಅಟ್ಟಿಕೊಂಡು ಹೋದರೆ, ನೀನು ಅನ್ಯಾಯದಿಂದ ಅವುಗಳನ್ನು ಹೊಡೆದುಕೊಂಡು ಹೋಗುವೆಯಾದರೆ, ಆಗ ನನ್ನ ಶಾಪದಿಂದ ದಗ್ಧನಾದ ನಿನ್ನ ಮೂರ್ಧವು, ತಲೆಯು (ಬೀಳಲಿ!), ವಿಸ್ಪಷ್ಟವಾಗಿ ಬೀಳಲಿ !

ಹೀಗೆನ್ನಲು ಯಾಜ್ಞವಲ್ಕ್ಯನಿಂತೆಂದನು. ಎಲೈ ಗೌತಮನೆ, ಎಂದು (ಕರೆದಿರುವದು) ಗೋತ್ರದಿಂದ ; ನಾನು ಆ ಸೂತ್ರವನ್ನೂ ನಿಮಗೆ ಗಂಧರ್ವನು ಹೇಳಿಕೊಟ್ಟನಲ್ಲ(ಅದನ್ನು), ಮತ್ತು ಗಂಧರ್ವನಿಂದ ನೀವು ಯಾವ ಅಂತರ್ಯಾಮಿಯನ್ನು ತಿಳಿದುಕೊಂಡಿರೋ ಆ ಅಂತರ್ಯಾಮಿಯನ್ನೂ ನಾನು ಬಲ್ಲೆನು ! ಹೀಗೆನ್ನಲು (ಆ) ಗೌತಮನು (ಹೀಗೆಂದು) ಉತ್ತರವಿತ್ತನು. ಯಾವ ಪ್ರಾಕೃತನಾದರೂ ನೀನು ಹೇಳಿದೆಯಲ್ಲ, ಇದನ್ನು ಹೇಳಬಹುದು; ಹೀಗೆಂದು (ಹೇಳಬಹುದು) ? 'ಬಲ್ಲೆನು,ಬಲ್ಲೆನು!' ಎಂದು ತನ್ನನ್ನು ಹೊಗಳಿಕೊಂಡು (ಹೇಳಬಹುದು). ಈ ಕೂಗಿನಿಂದ (ಪ್ರಯೋಜನ)ವೇನು ? ಕಾರ್ಯದಿಂದ (ಜ್ಞಾನವನ್ನು) ತೋರಿಸು ! ಹೇಗೆ ಬಲ್ಲೆಯೋ ಹಾಗೆ ಹೇಳು ! (ಎಂದನು)

## ಸಮಷ್ಟಿವ್ಯಷ್ಟ್ಯಾತ್ಮಕವಾಯುವೇ ಸೂತ್ರ

(ಉಪನಿಷತ್ತು)

**ಸ ಹೋವಾಚ ವಾಯುರ್ವೈ ಗೌತಮ ತತ್ಸೂತ್ರಂ ವಾಯುನಾ ವೈ ಗೌತಮ ಸೂತ್ರೇಣಾಯಂ ಚ ಲೋಕಃ ಪರಶ್ಚ ಲೋಕಃ ಸರ್ವಾಣಿ ಚ ಭೂತಾನಿ ಸಂದೃಬ್ಧಾನಿ ಭವನ್ತಿ ತಸ್ಮಾದ್ ವೈ ಗೌತಮ ಪುರುಷಂ ಪ್ರೇತಮಾಹುರ್ವ್ಯಸ್ರಂಸಿಷತಾಸ್ಯಾಙ್ಗಾನೀತಿ ವಾಯುನಾ ಹಿ ಗೌತಮ ಸೂತ್ರೇಣ ಸಂದೃಬ್ಧಾನಿ ಭವನ್ತೀತ್ಯೇವಮೇವೈತದ್ ಯಾಜ್ಞವಲ್ಕ್ಯಾನ್ತರ್ಯಾಮಿಣಂ ಬ್ರೂಹೀತಿ ॥ ೨ ॥**

೨. ಅವನಿಂತೆಂದನು. ಗೌತಮನೆ, ವಾಯುವೇ ಆ ಸೂತ್ರವು. ಗೌತಮನೆ, ವಾಯುವೆಂಬ ಸೂತ್ರದಿಂದಲೇ ಈ ಲೋಕವೂ ಪರಲೋಕವೂ ಸರ್ವಭೂತಗಳೂ ಸಂದೃಬ್ಧವಾಗಿವೆ. ಆದ್ದರಿಂದಲೇ, ಗೌತಮನೆ, ಸತ್ತು ಹೋದ ಪುರುಷನನ್ನು ಇವನ ಅಂಗಗಳು ಜಗುಳಿಸವು ಎನ್ನುತ್ತಾರೆ; ವಾಯುವೆಂಬ ಸೂತ್ರದಿಂದಲೇ ಅಲ್ಲವೆ, ಗೌತಮನೆ, ಸಂದೃಬ್ಧಗಳಾಗಿರುತ್ತವೆ? "ಯಾಜ್ಞವಲ್ಕ್ಯನೆ, ಇದು ಹೀಗೆಯೇ (ಸರಿ). ಅಂತರ್ಯಾಮಿಯನ್ನು ಹೇಳು" ಎಂದನು.

## ಸೂತ್ರದ ನಿರ್ಣಯ

(ಭಾಷ್ಯ)

೬೯. ಸ ಹೋವಾಚ ಯಾಜ್ಞವಲ್ಕ್ಯಃ | ಬ್ರಹ್ಮಲೋಕಾ ಯಸ್ಮಿನ್ನೋತಾಶ್ಚ ಪ್ರೋತಾಶ್ಚ ವರ್ತಮಾನೇ ಕಾಲೇ ಯಥಾ ಪೃಥಿವೀ ಅಪ್ಸು ತತ್ಸೂತ್ರಮ್ ಆಗಮಗಮ್ಯಂ ವಕ್ತವ್ಯಮಿತಿ ತದರ್ಥಂ ಪ್ರಶ್ನಾನ್ತರಮುತ್ಥಾಪಿತಂ| ಅತಸ್ತನ್ನಿರ್ಣಯಾಯಾಹ| ವಾಯುರ್ವೈ ಗೌತಮ ತತ್ ಸೂತ್ರಂ ನಾನ್ಯತ್ | ವಾಯುಃ ಇತಿ ಸೂಕ್ಷ್ಮಮ್ ಆಕಾಶವದ್ ವಿಷ್ಟಮ್ಭಕಂ ಪೃಥಿವ್ಯಾದೀನಾಂ ಯದಾತ್ಮಕಂ ಸಪ್ತದಶವಿಧಂ ಲಿಙ್ಗಂ ಕರ್ಮವಾಸನಾಸಮವಾಯಿ ಪ್ರಾಣಿನಾಂ ಯತ್, ತತ್ಸಮಷ್ಟಿವ್ಯಷ್ಟ್ಯಾತ್ಮಕಮ್| ಯಸ್ಯ ಬಾಹ್ಯಾ ಭೇದಾಃ ಸಪ್ತಸಪ್ತ ಮರುದ್ಗಣಾಃ ಸಮುದ್ರಸ್ಯೇವ ಊರ್ಮಯಃ ತದೇತತ್ ವಾಯವ್ಯಂ ತತ್ತ್ವಂ ಸೂತ್ರಮಿತಿ ಅಭಿಧೀಯತೇ | ವಾಯುನಾ ವೈ ಗೌತಮ ಸೂತ್ರೇಣ ಅಯಂ ಚ ಲೋಕಃ ಪರಶ್ಚ ಲೋಕಃ ಸರ್ವಾಣಿ ಚ ಭೂತಾನಿ ಸಂದೃಬ್ಧಾನಿ ಭವನ್ತಿ ಸಂಗ್ರಥಿತಾನಿ ಭವನ್ತಿ ಇತಿ ಪ್ರಸಿದ್ಧಮೇತತ್ | ಅಸ್ತಿ ಚ ಲೋಕೇ ಪ್ರಸಿದ್ಧಿಃ| ಕಥಮ್ ? ಯಸ್ಮಾದ್ ವಾಯುಃ ಸೂತ್ರಂ ವಾಯುನಾ ವಿಧೃತಂ ಸರ್ವಮ್, ತಸ್ಮಾದ್ ವೈ ಗೌತಮ ಪುರುಷಂ ಪ್ರೇತಮ್ ಆಹುಃ ಕಥಯನ್ತಿ ವ್ಯಸ್ರಂಸಿಷತ ವಿಸ್ರಸ್ತಾನಿ ಅಸ್ಯ ಪುರುಷಸ್ಯ ಅಙ್ಗಾನಿ ಇತಿ| ಸೂತ್ರಾಪಗಮೇ ಹಿ ಮಣ್ಯಾದೀನಾಮ್ ಪ್ರೋತಾನಾಂ ಅವಸ್ರಂಸನಂ ದೃಷ್ಟಮ್| ಏವಂ ವಾಯುಃ ಸೂತ್ರಮ್ ತಸ್ಮಿನ್ ಮಣಿವತ್ ಪ್ರೋತಾನಿ ಯದಿ ಅಸ್ಯ ಅಙ್ಗಾನಿ ಸ್ಯುಃ, ತತೋ ಯುಕ್ತಮೇತದ್ ವಾಯ್ವಪಗಮೇ ಅವಸ್ರಂಸನಮ್ ಅಙ್ಗಾನಾಮ್| ಅತೋ ವಾಯುನಾ ಹಿ ಗೌತಮ ಸೂತ್ರೇಣ ಸದೃಬ್ಧಾನಿ ಭವನ್ತಿ ಇಂತಿ ನಿಗಮಯತಿ| ಏವಮೇವೈತದ್ ಯಾಜ್ಞವಲ್ಕ್ಯ| ಸಮ್ಯಗುಕ್ತಂ ಸೂತ್ರಮ್| ತದನ್ತರ್ಗತಂ ತು ಇದಾನಿಂ ತಸ್ಯೈವ ಸೂತ್ರಸ್ಯ ನಿಯನ್ತಾರಮ್ ಅನ್ತರ್ಯಾಮಿಣಂ ಬ್ರೂಹಿ ||

(ಭಾಷ್ಯಾರ್ಥ)

ಆ ಯಾಜ್ಞವಲ್ಕ್ಯನಿಂತೆಂದನು: ಬ್ರಹ್ಮಲೋಕಗಳು ಪೃಥಿವಿಯು ಅಪ್ಪಿನಲ್ಲಿ (ಓತಪ್ರೋತವಾಗಿರು)ವಂತೆ ಈಗಿನ ಕಾಲದಲ್ಲಿ ಯಾವದರಲ್ಲಿ ಓತವೂ ಪ್ರೋತವೂ ಆಗಿರುವವೋ ಆ ಆಗಮುಗಮ್ಯವಾದ[1] ಸೂತ್ರವನ್ನು ಹೇಳಬೇಕೆಂದು ಅದಕ್ಕಾಗಿ ಪ್ರಶ್ನಾಂತರವನ್ನು ಎಬ್ಬಿಸಲಾಯಿತು. ಅದನ್ನು ನಿರ್ಣಯಿಸುವದಕ್ಕಾಗಿ ಹೇಳುತ್ತಾನೆ.

ಗೌತಮನೆ, ಆ ಸೂತ್ರವು ವಾಯುವೇ, ಮತ್ತೊಂದಲ್ಲ. **ವಾಯು** ಎಂದರೆ ಆಕಾಶದಂತೆ ಸೂಕ್ಷ್ಮವಾಗಿ ಪೃಥಿವ್ಯಾದಿಗಳನ್ನೆಲ್ಲ ಎತ್ತಿಹಿಡಿದಿರುವ (ತತ್ತ್ವವು). ಹದಿನೇಳು ವಿಧವಾದ ಲಿಂಗವು[2] ಆ ವಾಯುವಿನ ಸ್ವರೂಪವಾಗಿರುತ್ತವೆ; (ಅದು) ಪ್ರಾಣಿಗಳ ಕರ್ಮಕ್ಕೂ ವಾಸನೆಗಳಿಗೂ ಆಶ್ರಯವಾದದ್ದು.[3] ಅದು ಸಮಷ್ಟಿ ವ್ಯಷ್ಟಿರೂಪವಾಗಿರುತ್ತದೆ.[4] ಅದರ ಹೊರಗಿನ ಭೇದಗಳೇ ಸಮುದ್ರ ತೆರೆಗಳಂತೆ ಇರುವ ನಲವತ್ತೊಂಬತ್ತು ಮರುದ್ಗಣಗಳಾಗಿರುವವೋ,[5] ಇಂಥ ಈ ವಾಯುವ್ಯ ತತ್ತ್ವವು ಸೂತ್ರವೆನಿಸಿರುತ್ತದೆ. ವಾಯುವಿನಿಂದಲೇ ಸೂತ್ರದಿಂದಲೇ, ಎಲೈ ಗೌತಮನೆ, ಈ ಲೋಕವೂ ಪರಲೋಕವೂ ಸರ್ವಭೂತಗಳೂ ಸಂದೃಬ್ಧವಾಗಿರುತ್ತವೆ, ಕಟ್ಟುವಡೆದಿರುತ್ತವೆ ಎಂಬುದು ಪ್ರಸಿದ್ಧವಾಗಿರುತ್ತದೆ.

ಲೋಕದಲ್ಲಿ (ಹೀಗೆಂಬ) ಪ್ರಸಿದ್ಧಿಯೂ ಇದೆ. ಹೇಗೆ? ಎಂದರೆ, ವಾಯುವೆ ಸೂತ್ರವಾಗಿರುವದಲ್ಲ, ವಾಯುವಿನಿಂದ ಸರ್ವವೂ ಎತ್ತಿಹಿಡಿಯಲ್ಪಟ್ಟಿರುವದಲ್ಲ, ಆ ಕಾರಣದಿಂದಲೇ ಗೌತಮನೆ, ಸತ್ತ ಮನುಷ್ಯನನ್ನು ಈ ಮನುಷ್ಯನ ಅಂಗಗಳು ಜಗುಳಿದವು ಸಡಲಿದವು ಎಂದು ಹೇಳುವರು, ನುಡಿಯುವರು. ಸೂತ್ರವು ಹೋದರೆ ಪೋಣಿಸಿದ್ದ ರತ್ನವೇ ಮುಂತಾದವುಗಳು ಜಗುಳಿಬೀಳುವದು ಕಂಡಿದೆಯಷ್ಟೆ. ಇದರಂತೆ ವಾಯುವು ಸೂತ್ರವು; ಆ (ಸೂತ್ರ)ದಲ್ಲಿ ಇವನ ಅಂಗಗಳು ರತ್ನಗಳಂತೆ ಪೋಣಿಸಿವೆ ಎಂದಾದರೆ, ಆಗ ವಾಯುವು ಹೋಗಲು ಅಂಗಗಳು ಜಗುಳಿಬೀಳುವವೆಂಬುದು ಯುಕ್ತವು.

---

1. ಪೃಥಿವ್ಯಾದಿಗಳಂತೆ ಸ್ಥೂಲವಾಗಿದ್ದು ಅನುಮಾನಗಮ್ಯವಲ್ಲದ್ದರಿಂದ.

2. ಪಂಚಭೂತಗಳು, ದಶೇಂದ್ರಿಯಗಳು, ಪ್ರಾಣ, ಅಂತಃಕರಣ—ಈ ರೂಪವಾಗಿರುವ ಲಿಂಗವು. ಆ. ಗಿ.

3. ಮುಂದೆ ಸೃಷ್ಟಿಯಾಗಲಿರುವ ಪ್ರಾಣಿಗಳ ಕರ್ಮಗಳೂ ವಾಸನೆಗಳೂ ಅವ್ಯಕ್ತವಾಗಿ ವಾಯುವನ್ನೇ ಆಶ್ರಯಿಸಿಕೊಂಡಿರುವವು.

4. ಸಾಮಾನ್ಯವಿಶೇಷರೂಪವಾಗಿರುತ್ತದೆ.

5. ಆವಹಾದಿಭೇದಗಳಿಂದ ನಲವತ್ತೊಂಬತ್ತು ವಾಯುಗಳಿರುವವೆಂದು ಪೌರಾಣಿಕರು ಹೇಳುತ್ತಾರೆ.

ಆದ್ದರಿಂದ, ಗೌತಮನೆ, ವಾಯುವೆಂಬ ಸೂತ್ರದಿಂದಲೇ ಸಂದೃಬ್ಧವಾಗಿರುತ್ತವೆ ಎಂದು ನಿಗಮನಮಾಡಿರುತ್ತಾನೆ. "ಯಾಜ್ಞವಲ್ಕ್ಯನೆ, ಇದು ಹೀಗೆಯೇ (ಸರಿ); ಸೂತ್ರವನ್ನು ಸರಿಯಾಗಿ ಹೇಳಿರುತ್ತೀಯೆ. ಅದರೊಳಗಿರುವ, ಅದೇ ಸೂತ್ರದ ನಿಯಂತೃವಾಗಿರುವ ಅಂತರ್ಯಾಮಿಯನ್ನಾದರೆ ಈಗ ಹೇಳು!

## ಅಂತರ್ಯಾಮಿಯ ವರ್ಣನೆ, ಅಧಿದೈವತ

**ಯಃ ಪೃಥಿವ್ಯಾಂ ತಿಷ್ಠನ್ ಪೃಥಿವ್ಯಾ ಅನ್ತರೋ ಯಂ ಪೃಥಿವೀ ನ ವೇದ ಯಸ್ಯ ಪೃಥಿವೀ ಶರೀರಂ ಯಃ ಪೃಥಿವೀಮನ್ತರೋ ಯಮಯತ್ಯೇಷ ತ ಆತ್ಮಾನ್ತರ್ಯಾಮ್ಯಮೃತಃ ॥ ೩ ॥**

೩. ಯಾವನು ಪೃಥಿವಿಯಲ್ಲಿರುವವನಾಗಿ ಪೃಥಿವಿಗಿಂತಲೂ ಒಳಗಿನವನೋ ಯಾವನನ್ನು ಪೃಥಿವಿಯು ಅರಿಯದೋ ಯಾವನಿಗೆ ಪೃಥಿವಿಯು ಶರೀರವೋ ಯಾವನು ಪೃಥಿವಿಯನ್ನು ಒಳಗಿದ್ದು ಆಳುತ್ತಿರುವನೋ ಅವನೇ ನಿನ್ನ ಆತ್ಮನಾದ ಅಂತರ್ಯಾಮಿಯು, ಅಮೃತನು.

(ಭಾಷ್ಯ)

೭೦. ಇತ್ಯುಕ್ತ ಆಹ। ಯಃ ಪೃಥಿವ್ಯಾಂ ತಿಷ್ಠನ್ ಭವತಿ ಸೋಽನ್ತರ್ಯಾಮೀ। ಸರ್ವಃ ಪೃಥಿವ್ಯಾಂ ತಿಷ್ಠತೀತಿ ಸರ್ವತ್ರ ಪ್ರಸಙ್ಗೋ ಮಾ ಭೂದಿತಿ ವಿಶಿನಷ್ಟಿ, ಪೃಥಿವ್ಯಾ ಅನ್ತರಃ ಅಭ್ಯನ್ತರಃ। ತತ್ರೈತತ್ ಸ್ಯಾತ್ ಪೃಥಿವೀ ದೇವತೈವ ಅನ್ತರ್ಯಾಮೀ ಇತ್ಯತ ಆಹ। ಯಮನ್ತರ್ಯಾಮಿಣಂ ಪೃಥಿವೀ ದೇವತಾಽಪಿ ನ ವೇದ ಮಯ್ಯನ್ಯಃ ಕಶ್ಚಿದ್ ವರ್ತತ ಇತಿ। ಯಸ್ಯ ಪೃಥಿವೀ ಶರೀರಂ ಯಸ್ಯ ಚ ಪೃಥಿವ್ಯೇವ ಶರೀರಮ್, ನಾನ್ಯತ್। ಪೃಥಿವೀದೇವತಾಯಾ ಯತ್ ಶರೀರಮ್। ತದೇವ ಶರೀರಂ ಯಸ್ಯ। ಶರೀರಗ್ರಹಣಂ ಚ ಉಪಲಕ್ಷಣಾರ್ಥಮ್ ಕರಣಂ ಚ ಪೃಥಿವ್ಯಾಸ್ತಸ್ಯ, ಸ್ವಕರ್ಮಪ್ರಯುಕ್ತಂ ಹಿ ಕಾರ್ಯಂ ಕರಣಂ ಚ ಪೃಥಿವೀದೇವತಾಯಾಃ। ತದಸ್ಯ ಸ್ವಕರ್ಮಾಭಾವಾತ್ ಅನ್ತರ್ಯಾಮಿಣಃ ನಿತ್ಯಮುಕ್ತತ್ವಾತ್। ಪರಾರ್ಥಕರ್ತವ್ಯತಾಸ್ವಭಾವತ್ವಾತ್ ಪರಸ್ಯ ಯತ್ಕಾರ್ಯಂ ಕರಣಂ ಚ ತದೇವಾಸ್ಯ ನ ಸ್ವತಃ। ತದಾಹ ಯಸ್ಯ ಪೃಥಿವೀ ಶರೀರಮ್। ಇತಿ। ದೇವತಾಕಾರ್ಯಕರಣಸ್ಯ ಈಶ್ವರಸಾಕ್ಷಿಮಾತ್ರಸಾಂನಿಧ್ಯೇನ ಹಿ ನಿಯಮೇನ ಪ್ರವೃತ್ತಿನಿವೃತ್ತೀ ಸ್ಯಾತಾಮ್। ಯ ಈದೃಗೀಶ್ವರೋ ನಾರಾಯಣಾಖ್ಯಃ ಪೃಥಿವೀಂ ಪೃಥಿವೀದೇವತಾಂ ಯಮಯತಿ ನಿಯಮಯತಿ ಸ್ವವ್ಯಾಪಾರೇ ಅನ್ತರಃ ಅಭ್ಯನ್ತರಸ್ತಿಷ್ಠನ್ ಏಷ ತ ಆತ್ಮಾ ತೇ ತವ। ಮಮ ಚ ಸರ್ವಭೂತಾನಾಂ

ಚೇತ್ಯುಪಲಕ್ಷಣಾರ್ಥಮೇತತ್ । ಅನ್ತರ್ಯಾಮೀ ಯಸ್ತ್ವಯಾ ಪೃಷ್ಟಃ, ಅಮೃತಃ ಸರ್ವಸಂಸಾರಧರ್ಮವರ್ಜಿತಃ ಇತ್ಯೇತತ್ ॥

(ಭಾಷ್ಯಾರ್ಥ)

ಹೀಗೆನ್ನಲು (ಯಾಜ್ಞವಲ್ಕ್ಯನು) ಹೇಳುತ್ತಾನೆ : ಯಾವನು ಪೃಥಿವಿಯಲ್ಲಿ ಇದ್ದುಕೊಂಡಿರುತ್ತಾನೋ, ಅವನೇ ಅಂತರ್ಯಾಮಿಯು. ಪ್ರತಿಯೊಬ್ಬನೂ ಪೃಥಿವಿಯಲ್ಲಿರುತ್ತಾನಾದ್ದರಿಂದ ಎಲ್ಲವೂ (ಅಂತರ್ಯಾಮಿ) ಎಂಬ ಪ್ರಸಕ್ತಿಯಾಗದಿರಲೆಂದು ವಿಶೇಷಣವನ್ನು ಕೊಟ್ಟು (ಹೇಳುತ್ತಾನೆ), ಪೃಥಿವಿಯ ಒಳಗಿರುವವನು, ತೀರ ಒಳಗಿರುವಾತನು. ಇಲ್ಲಿ ಹೀಗೂ ಆಗಬಹುದು. ಪೃಥಿವೀದೇವತೆಯೇ ಅಂತರ್ಯಾಮಿ (ಎನ್ನಬಹುದು). ಆದ್ದರಿಂದ ಹೇಳುತ್ತಾನೆ. ಯಾವ ಅಂತರ್ಯಾಮಿಯನ್ನು ಪೃಥಿವಿಯೆಂಬ ದೇವತೆಯೂ ಅರಿಯದೆ ಇರುವದೋ, ನನ್ನೊಳಗೆ ಮತ್ತೊಬ್ಬನು ಇರುತ್ತಾನೆ—ಎಂದು (ಅರಿಯದೆ ಇರುವದೋ), ಯಾವನಿಗೆ ಪೃಥಿವಿಯು ಶರೀರವೋ, ಯಾವನಿಗೆ ಪೃಥಿವಿಯೇ ಶರೀರವೇ ಹೊರತು ಮತ್ತೊಂದಿಲ್ಲವೋ, ಪೃಥಿವೀದೇವತೆಯ ಶರೀರವು ಯಾವದೋ ಅದೇ ಯಾವನಿಗೆ ಶರೀರವೋ ಎಂದರ್ಥ. (ಇಲ್ಲಿ) ಶರೀರವನ್ನು ಹಿಡಿದಿರುವದು ಉಪಲಕ್ಷಣಕ್ಕಾಗಿ. ಅವನ ಕರಣವೂ ಪೃಥಿವಿಯದೇ. ಪೃಥಿವೀದೇವತೆಗೆ ತನ್ನ ಕರ್ಮದಿಂದ ಪ್ರಯುಕ್ತವಾಗಿಯಲ್ಲವೆ, ಕಾರ್ಯವೂ ಕರಣವೂ (ಉಂಟಾಗಿರುವದು)? ಅದೇ ಈ ಅಂತರ್ಯಾಮಿಗೆ (ಸೇರಿದ್ದು); ಏಕೆಂದರೆ (ಇವನಿಗೆ) ತನ್ನ ಕರ್ಮವೆಂಬುದು (ಬೇರೆ)ಯಿಲ್ಲ. ನಿತ್ಯಮುಕ್ತನಾಗಿರುತ್ತಾನೆ. ಮತ್ತೊಬ್ಬರ ಅರ್ಥವನ್ನು ಮಾಡುವದೇ ಇವನ ಸ್ವಭಾವವಾಗಿರುವದರಿಂದ ಮತ್ತೊಬ್ಬನಿಗೆ ಯಾವ ಕಾರ್ಯವೂ ಕರಣವೂ (ಇರುವದೋ) ಅದೇ ಇವನದೇ ಹೊರತು, ಸ್ವತಃ (ಬೇರೆ ಕಾರ್ಯಕರಣ)ಗಳಿಲ್ಲ. ಅದನ್ನು 'ಯಾವನಿಗೆ ಪೃಥಿವಿಯು ಶರೀರವೋ' ಎಂದು ಹೇಳಿದೆ. ದೇವತೆಯ ಕಾರ್ಯಕರಣಕ್ಕೆ ಈಶ್ವರನೆಂಬ ಸಾಕ್ಷಿಯ ಸಾಂನಿಧ್ಯದಿಂದಲೇ ಅಲ್ಲವೆ,[1] ನಿಯಮವಾಗಿ ಪ್ರವೃತ್ತಿನಿವೃತ್ತಿಗಳು ಆಗುವವು ? ಯಾವನು ಇಂಥ **ನಾರಾಯಣ**ನೆಂಬ ಹೆಸರಿನ ಈಶ್ವರನು ಪೃಥಿವಿಯನ್ನು ಪೃಥಿವೀದೇವತೆಯನ್ನು ಆಳುತ್ತಿರುವನೋ ಅದರ ವ್ಯಾಪಾರದಲ್ಲಿ ನಿಯಮಿಸುತ್ತಿರುವನೋ ಅಂತರನಾಗಿ ಎಂದರೆ ತೀರ ಒಳಗಿದ್ದು (ನಿಯಮಿಸುತ್ತಿರುವನೋ) ಇವನೇ ನಿನ್ನ ಆತ್ಮನು. (ತೇ=ತವ) ನಿನ್ನ ಮತ್ತು ಸರ್ವಭೂತಗಳ ಆತ್ಮನು ಎಂದು ಉಪಲಕ್ಷಣಕ್ಕಾಗಿ ಈ (ತೇ=ನಿನ್ನ) ಎಂದು

---

1. ಗೀ. ಭಾ. ೯–೧೦ ( ಭಾ. ಭಾ. ೧೬) ನೋಡಿ.

(ಹೇಳಿರುವದು[1] ಇವನೇ) ನೀನು ಕೇಳಿದ ಅಂತರ್ಯಾಮಿಯು, ಅಮೃತನು ಎಂದರೆ ಯಾವ ಸಂಸಾರಧರ್ಮವೂ ಇಲ್ಲದವನು[2] ಎಂದು ಅಭಿಪ್ರಾಯ.

(ಉಪನಿಷತ್ತು)

**ಯೋಽಪ್ಸು ತಿಷ್ಠನ್ನದ್ಭ್ಯೋಽನ್ತರೋ ಯಮಾಪೋ ನ ವಿದುರ್ಯಸ್ಯಾಪಃ ಶರೀರಂ ಯೋಽಪೋಽನ್ತರೋ ಯಮಯತ್ಯೇಷ ತ ಆತ್ಮಾನ್ತರ್ಯಾಮ್ಯಮೃತಃ ‖ ೪ ‖**

೪. ಯಾವನು ಅಪ್ಪಿನಲ್ಲಿರುವವನಾಗಿ ಅಪ್ಪಿಗಿಂತಲೂ ಒಳಗಿನವನೋ ಯಾವನನ್ನು ಅಪ್ಪು ಅರಿಯದೋ ಯಾವನಿಗೆ ಅಪ್ಪು ಶರೀರವೋ ಯಾವನು ಅಪ್ಪನ್ನು ಒಳಗಿದ್ದು ಆಳುತ್ತಿರುವನೋ ಅವನೇ ನಿನ್ನ ಆತ್ಮನಾದ ಅಂತರ್ಯಾಮಿಯು, ಅಮೃತನು.

**ಯೋಽಗ್ನೌ ತಿಷ್ಠನ್ನಗ್ನೇರನ್ತರೋ ಯಮಗ್ನಿರ್ನ ವೇದ ಯಸ್ಯಾಗ್ನಿಃ ಶರೀರಂ ಯೋಽಗ್ನಿಮನ್ತರೋ ಯಮಯತ್ಯೇಷ ತ ಆತ್ಮಾನ್ತರ್ಯಾಮ್ಯಮೃತಃ ‖ ೫ ‖**

೫. ಯಾವನು ಅಗ್ನಿಯಲ್ಲಿರುವವನಾಗಿ ಅಗ್ನಿಗಿಂತಲೂ ಒಳಗಿನವನೋ ಯಾವನನ್ನು ಅಗ್ನಿಯು ಅರಿಯದೋ ಯಾವನಿಗೆ ಅಗ್ನಿಯು ಶರೀರವೋ ಯಾವನು ಅಗ್ನಿಯನ್ನು ಒಳಗಿದ್ದು ಆಳುತ್ತಿರುವನೋ ಅವನೇ ನಿನ್ನ ಆತ್ಮನಾದ ಅಂತರ್ಯಾಮಿಯು, ಅಮೃತನು.

**ಯೋಽನ್ತರಿಕ್ಷೇ ತಿಷ್ಠನ್ನನ್ತರಿಕ್ಷಾದನ್ತರೋ ಯಮನ್ತರಿಕ್ಷಂ ನ ವೇದ ಯಸ್ಯಾನ್ತರಿಕ್ಷಗ್ಂ ಶರೀರಂ ಯೋಽನ್ತರಿಕ್ಷಮನ್ತರೋ ಯಮಯತ್ಯೇಷ ತ ಆತ್ಮಾನ್ತರ್ಯಾಮ್ಯಮೃತಃ ‖೬‖**

೬. ಯಾವನು ಅಂತರಿಕ್ಷದಲ್ಲಿರುವವನಾಗಿ ಅಂತರಿಕ್ಷಕ್ಕಿಂತಲೂ ಒಳಗಿನವನೋ ಯಾವನನ್ನು ಅಂತರಿಕ್ಷವು ಅರಿಯದೋ ಯಾವನಿಗೆ ಅಂತ

---

1. ಏಕೆಂದರೆ ಒಬ್ಬೊಬ್ಬರಿಗೊಬ್ಬ ಸರ್ವಾಂತರಾತ್ಮನಿರುವದಿಲ್ಲ. ಶ್ರುತಿಯು ಎಲ್ಲರಿಗೂ ಇವನು ನಿನ್ನ ಆತ್ಮನು ಎಂದು ಉಪದೇಶಿಸಿದೆ ; ತತ್ತ್ವಮಸಿ ಅದು ನೀನಾಗಿದೀಯೆ ಎಂಬ ಶ್ರುತಿಯಂತೆಯೇ ಇದು.

2. ಹಸಿವು ಮುಂತಾದವುಗಳಿಲ್ಲದವನು ಎಂದು ಅಭಿಪ್ರಾಯ. ಅಮೃತ ಎಂಬ ಮಾತಿನಿಂದ ಅಂತ್ಯವಿಕಾರವನ್ನು ನಿಷೇಧಿಸಿದೆ.

ರಿಕ್ಷವು ಶರೀರವೋ ಯಾವನು ಅಂತರಿಕ್ಷವನ್ನು ಒಳಗಿದ್ದು ಆಳುತ್ತಿರುವನೋ ಅವನೇ ನಿನ್ನ ಆತ್ಮನಾದ ಅಂತರ್ಯಾಮಿಯು, ಅಮೃತನು.

**ಯೋ ವಾಯೌ ತಿಷ್ಠನ್ ವಾಯೋರನ್ತರೋ ಯಂ ವಾಯುರ್ನ ವೇದ ಯಸ್ಯ ವಾಯುಃ ಶರೀರಂ ಯೋ ವಾಯುಮನ್ತರೋ ಯಮ ಯತ್ಯೇಷ ತ ಆತ್ಮಾನ್ತರ್ಯಾಮ್ಯಮೃತಃ || ೭ ||**

೭. ಯಾವನು ವಾಯುವಿನಲ್ಲಿರುವವನಾಗಿ ವಾಯುವಿಗಿಂತಲೂ ಒಳಗಿನವನೋ ಯಾವನನ್ನು ವಾಯುವು ಅರಿಯದೋ ಯಾವನಿಗೆ ವಾಯು ಶರೀರವೋ ಯಾವನು ವಾಯುವನ್ನು ಒಳಗಿದ್ದು ಆಳುತ್ತಿರುವನೋ ಅವನೇ ನಿನ್ನ ಆತ್ಮನಾದ ಅಂತರ್ಯಾಮಿಯು, ಅಮೃತನು.

**ಯೋ ದಿವಿ ತಿಷ್ಠನ್ ದಿವೋಽನ್ತರೋ ಯಂ ದ್ಯೌರ್ನ ವೇದ ಯಸ್ಯ ದ್ಯೌಃ ಶರೀರಂ ಯೋ ದಿವಮನ್ತರೋ ಯಮಯತ್ಯೇಷ ತ ಆತ್ಮಾನ್ತರ್ಯಾಮ್ಯಮೃತಃ || ೮ ||**

೮. ಯಾವನು ದ್ಯುಲೋಕದಲ್ಲಿದ್ದು ದ್ಯುಲೋಕಕ್ಕಿಂತಲೂ ಒಳಗಿನವನೋ ಯಾವನನ್ನು ದ್ಯುಲೋಕವು ಅರಿಯದೋ ಯಾವನಿಗೆ ದ್ಯುಲೋಕವು ಶರೀರವೋ ಯಾವನು ದ್ಯುಲೋಕವನ್ನು ಒಳಗಿದ್ದು ಆಳುತ್ತಿರುವನೋ ಅವನೇ ನಿನ್ನ ಆತ್ಮನಾದ ಅಂತರ್ಯಾಮಿಯು, ಅಮೃತನು.

**ಯ ಆದಿತ್ಯೇ ತಿಷ್ಠನ್ನಾದಿತ್ಯಾದನ್ತರೋ ಯಮಾದಿತ್ಯೋ ನ ವೇದ ಯಸ್ಯಾದಿತ್ಯಃ ಶರೀರಂ ಯ ಆದಿತ್ಯಮನ್ತರೋ ಯಮಯತ್ಯೇಷ ತ ಆತ್ಮಾನ್ತರ್ಯಾಮ್ಯಮೃತಃ || ೯ ||**

೯. ಯಾವನು ಆದಿತ್ಯನಲ್ಲಿರುವವನಾಗಿ ಆದಿತ್ಯನಿಗಿಂತಲೂ ಒಳಗಿನವನೋ ಯಾವನನ್ನು ಆದಿತ್ಯನು ಅರಿಯನೋ ಯಾವನಿಗೆ ಆದಿತ್ಯನು ಶರೀರವೋ ಯಾವನು ಆದಿತ್ಯನನ್ನು ಒಳಗಿದ್ದು ಆಳುತ್ತಿರುವನೋ ಇವನೇ ನಿನ್ನ ಆತ್ಮನಾದ ಅಂತರ್ಯಾಮಿಯು, ಅಮೃತನು.

**ಯೋ ದಿಕ್ಷು ತಿಷ್ಠನ್ ದಿಗ್ಭ್ಯೋಽನ್ತರೋ ಯಂ ದಿಶೋ ನ ವಿದುರ್ಯಸ್ಯ ದಿಶಃ ಶರೀರಂ ಯೋ ದಿಶೋಽನ್ತರೋ ಯಮಯತ್ಯೇಷ ತ ಆತ್ಮಾನ್ತರ್ಯಾಮ್ಯಮೃತಃ || ೧೦ ||**

೧೦. ಯಾವನು ದಿಕ್ಕುಗಳಲ್ಲಿರುವವನಾಗಿ ದಿಕ್ಕುಗಳಿಗಿಂತಲೂ ಒಳಗಿನವನೋ ಯಾವನನ್ನು ದಿಕ್ಕುಗಳು ಅರಿಯದಿರುವವೋ ಯಾವನಿಗೆ ದಿಕ್ಕುಗಳು ಶರೀರವೋ ಯಾವನು ದಿಕ್ಕುಗಳನ್ನು ಒಳಗಿದ್ದು ಆಳುತ್ತಿರುವನೋ ಇವನೇ ನಿನ್ನ ಆತ್ಮನಾದ ಅಂತರ್ಯಾಮಿಯು, ಅಮೃತನು.

**ಯಶ್ಚನ್ದ್ರತಾರಕೇ ತಿಷ್ಠಂಶ್ಚನ್ದ್ರತಾರಕಾದನ್ತರೋ ಯಂ ಚನ್ದ್ರತಾರಕಂ ನ ವೇದ ಯಸ್ಯ ಚನ್ದ್ರತಾರಕಗ್ಂ ಶರೀರಂ ಯಶ್ಚನ್ದ್ರತಾರಕಮನ್ತರೋ ಯಮಯತ್ಯೇಷ ತ ಆತ್ಮಾನ್ತರ್ಯಾಮ್ಯಮೃತಃ ‖ ೧೧ ‖**

೧೧. ಯಾವನು ಚಂದ್ರತಾರಕದಲ್ಲಿರುವವನಾಗಿ ಚಂದ್ರತಾರಕಕ್ಕಿಂತ ಒಳಗಿನವನೋ ಯಾವನನ್ನು ಚಂದ್ರತಾರಕವು ಅರಿಯದೋ ಯಾವನಿಗೆ ಚಂದ್ರತಾರಕವು ಶರೀರವೋ ಯಾವನು ಚಂದ್ರತಾರಕವನ್ನು ಒಳಗಿದ್ದು ಆಳುತ್ತಿರುವನೋ ಇವನೇ ನಿನ್ನ ಆತ್ಮನಾದ ಅಂತರ್ಯಾಮಿಯು, ಅಮೃತನು.

**ಯ ಆಕಾಶೇ ತಿಷ್ಠನ್ನಾಕಾಶಾದನ್ತರೋ ಯಮಾಕಾಶೋ ನ ವೇದ ಯಸ್ಯಾಕಾಶಃ ಶರೀರಂ ಯ ಆಕಾಶಮನ್ತರೋ ಯಮಯತ್ಯೇಷ ತ ಆತ್ಮಾನ್ತರ್ಯಾಮ್ಯಮೃತಃ ‖ ೧೨ ‖**

೧೨. ಯಾವನು ಆಕಾಶದಲ್ಲಿರುವವನಾಗಿ ಆಕಾಶಕ್ಕಿಂತಲೂ ಒಳಗಿರುವವನೋ ಯಾವನನ್ನು ಆಕಾಶವು ಅರಿಯದೋ ಯಾವನಿಗೆ ಆಕಾಶವು ಶರೀರವೋ ಯಾವನು ಆಕಾಶವನ್ನು ಒಳಗಿದ್ದು ಆಳುತಿರುತ್ತವನೋ ಇವನೇ ನಿನ್ನ ಆತ್ಮನಾದ ಅಂತರ್ಯಾಮಿಯು, ಅಮೃತನು.

**ಯಸ್ತಮಸಿ ತಿಷ್ಠಗ್ಂಸ್ತಮಸೋಽನ್ತರೋ ಯಂ ತಮೋ ನ ವೇದ ಯಸ್ಯ ತಮಃ ಶರೀರಂ ಯಸ್ತಮೋಽನ್ತರೋ ಯಮಯತ್ಯೇಷ ತ ಆತ್ಮಾನ್ತರ್ಯಾಮ್ಯಮೃತಃ ‖ ೧೩ ‖**

೧೩. ಯಾವನು ತಮಸ್ಸಿನಲ್ಲಿರುವವನಾಗಿ ತಮಸ್ಸಿಗಿಂತಲೂ ಒಳಗಿರುವವನೋ ಯಾವನನ್ನು ತಮಸ್ಸು ಅರಿಯದೋ ಯಾವನಿಗೆ ತಮಸ್ಸು ಶರೀರವೋ ಯಾವನು ತಮಸ್ಸನ್ನು ಒಳಗಿದ್ದುಕೊಂಡು ಆಳುತ್ತಿರುವನೋ ಇವನೇ ನಿನ್ನ ಆತ್ಮನಾದ ಅಂತರ್ಯಾಮಿಯು, ಅಮೃತನು.

**ಯಸ್ತೇಜಸಿ ತಿಷ್ಠಗ್ಂಸ್ತೇಜಸೋಽನ್ತರೋ ಯಂ ತೇಜೋ ನ ವೇದ ಯಸ್ಯ ತೇಜಃ ಶರೀರಂ ಯಸ್ತೇಜೋಽನ್ತರೋ ಯಮಯತ್ಯೇಷ ತ ಆತ್ಮಾನ್ತರ್ಯಾಮ್ಯಮೃತ ಇತ್ಯಧಿದೈವತಮಥಾಧಿಭೂತಮ್ ||೧೪||**

೧೪. ಯಾವನು ತೇಜಸ್ಸಿನಲ್ಲಿರುವವನಾಗಿ ತೇಜಸ್ಸಿಗಿಂತಲೂ ಒಳಗಿರುವವನೋ ಯಾವನನ್ನು ತೇಜಸ್ಸು ಅರಿಯದೋ ಯಾವನಿಗೆ ತೇಜಸ್ಸು ಶರೀರವೋ ಯಾವನು ತೇಜಸ್ಸನ್ನು ಒಳಗಿದ್ದುಕೊಂಡು ಆಳುತ್ತಿರುವನೋ ಇವನೇ ನಿನ್ನ ಆತ್ಮನಾದ ಅಂತರ್ಯಾಮಿಯು, ಅಮೃತನು. ಹೀಗೆ ಅಧಿದೈವತವು, ಇನ್ನು ಅಧಿಭೂತವು.

(ಭಾಷ್ಯ)

೭೧. ಸಮಾನಮನ್ಯತ್ । ಯೋಽಪ್ಸು ತಿಷ್ಠನ್ । ಅಗ್ನೌ, ಅನ್ತರಿಕ್ಷೇ, ವಾಯೌ, ದಿವಿ, ಆದಿತ್ಯೇ, ದಿಕ್ಷು, ಚನ್ದ್ರತಾರಕೇ, ಆಕಾಶೇ, ಯಸ್ತಮಸಿ ಆವರಣಾತ್ಮಕೇ ಬಾಹ್ಯೇ ತಮಸಿ, ತೇಜಸಿ ತದ್ವಿಪರೀತೇ ಪ್ರಕಾಶಸಾಮಾನ್ಯೇ । ಇತ್ಯಧಿದೈವತಮ್ ಅನ್ತರ್ಯಾಮಿವಿಷಯಂ ದರ್ಶನಂ ದೇವತಾಸು । ಅಥ ಅಧಿಭೂತಂ ಭೂತೇಷು ಬ್ರಹ್ಮಾದಿಸ್ತಮ್ಬಪರ್ಯನ್ತೇಷು ಅನ್ತರ್ಯಾಮಿದರ್ಶನಮ್ ಅಧಿಭೂತಮ್ ||

(ಭಾಷ್ಯಾರ್ಥ)

ಮಿಕ್ಕ ಗ್ರಂಥವು ಸಮಾನ(ವಾಗಿದೆ)[1] ಯಾವನು ಅಪ್ಪಿನಲ್ಲಿರುವವನಾಗಿ ಅಗ್ನಿಯಲ್ಲಿ, ಅಂತರಿಕ್ಷದಲ್ಲಿ, ವಾಯುವಿನಲ್ಲಿ, ದ್ಯುಲೋಕದಲ್ಲಿ, ದಿಕ್ಕುಗಳಲ್ಲಿ, ಚಂದ್ರತಾರಕದಲ್ಲಿ, ಆಕಾಶದಲ್ಲಿ, ಯಾವನು ತಮಸ್ಸಿನಲ್ಲಿ ಅಂದರೆ ಆವರಣರೂಪವಾದ ಹೊರಗಿನ ತಮಸ್ಸಿನಲ್ಲಿ, ತೇಜಸ್ಸಿನಲ್ಲಿ ಅಂದರೆ ಅದಕ್ಕೆ ವಿಪರೀತವಾದ ಪ್ರಕಾಶಸಾಮಾನ್ಯದಲ್ಲಿ . . . ಹೀಗೆ ಅಧಿದೈವತವಾಗಿ ದೇವತೆಗಳ ವಿಷಯವಾಗಿ ಅಂತರ್ಯಾಮಿವಿಷಯವಾದ ದರ್ಶನವಾಯಿತು.[2] ಇನ್ನು ಅಧಿಭೂತವಾಗಿ ಬ್ರಹ್ಮನು ಮೊದಲಾಗಿ ಸ್ತಂಬಪರ್ಯಂತವಾಗಿರುವ ಭೂತಗಳ ವಿಷಯದಲ್ಲಿ ಅಂತರ್ಯಾಮಿದರ್ಶನವಿದೆಯಲ್ಲ, (ಆ ಅಧಿಭೂತವನ್ನು) ಹೇಳಲಾಗುವದು.

---

1. ಹಿಂದಿನ ಪೃಥಿವೀವಾಕ್ಯದ ಭಾಷ್ಯದಂತೆಯೇ ಅರ್ಥವನ್ನು ಹೊಂದಿಸಿಕೊಳ್ಳಬೇಕು ಎಂದು ಅಭಿಪ್ರಾಯ.

2. ದೇವತೆಗಳಲ್ಲಿ ಅವರಿಗಿಂತ ವ್ಯತಿರಿಕ್ತನಾದ ಪರಮಾತ್ಮನು ಅಂತರ್ಯಾಮಿಯಾಗಿದ್ದಾನೆ ಎಂಬುದು ಅಧಿದೈವತದ ದರ್ಶನವು ಸೂ. ಭಾ. ೧-೧-೨೧ ಭಾ. ಭಾ. ೧-೨-೧೮ (ಭಾ. ಭಾ. ೧೧೭; ೧೯೦)

## ಅಂತರ್ಯಾಮಿಯ ವರ್ಣನೆ, ಅಧಿಭೂತ

(ಉಪನಿಷತ್ತು)

**ಯಃ ಸರ್ವೇಷು ಭೂತೇಷುತಿಷ್ಠನ್ ಸರ್ವೇಭ್ಯೋ ಭೂತೇಭ್ಯೋಽನ್ತರೋ ಯಗ್ಂ ಸರ್ವಾಣಿ ಭೂತಾನಿ ನ ವಿದುರ್ಯಸ್ಯ ಸರ್ವಾಣಿ ಭೂತಾನಿ ಶರೀರಂ ಯಃ ಸರ್ವಾಣಿ ಭೂತಾನ್ಯನ್ತರೋ ಯಮಯತ್ಯೇಷ ತ ಆತ್ಮಾನ್ತರ್ಯಾಮ್ಯಮೃತ ಇತ್ಯಧಿಭೂತಮಥಾಧ್ಯಾತ್ಮಮ್ || ೧೫ ||**

೧೫. ಯಾವನು ಎಲ್ಲಾ ಭೂತಗಳಲ್ಲಿಯೂ ಇರುವವನಾಗಿ ಎಲ್ಲಾ ಭೂತಗಳಿಗಿಂತಲೂ ಒಳಗಿರುವವನೋ ಯಾವನನ್ನು ಯಾವ ಭೂತಗಳೂ ಅರಿಯವೋ ಯಾವನಿಗೆ ಎಲ್ಲಾ ಭೂತಗಳೂ ಶರೀರವೋ ಯಾವನು ಎಲ್ಲಾ ಭೂತಗಳನ್ನೂ ಒಳಗಿದ್ದು ಆಳುತ್ತಿರುವನೋ ಇವನೇ ನಿನ್ನ ಆತ್ಮನಾದ ಅಂತರ್ಯಾಮಿಯು, ಅಮೃತನು. ಇನ್ನು ಅಧ್ಯಾತ್ಮವು.

## ಅಂತರ್ಯಾಮಿಯ ವರ್ಣನೆ, ಅಧ್ಯಾತ್ಮ

(ಉಪನಿಷತ್ತು)

**ಯಃ ಪ್ರಾಣೇ ತಿಷ್ಠನ್ ಪ್ರಾಣಾದನ್ತರೋ ಯಂ ಪ್ರಾಣೋ ನ ವೇದ ಯಸ್ಯ ಪ್ರಾಣಃ ಶರೀರಂ ಯಃ ಪ್ರಾಣಮನ್ತರೋ ಯಮಯತ್ಯೇಷ ತ ಆತ್ಮಾನ್ತರ್ಯಾಮ್ಯಮೃತಃ || ೧೬ ||**

೧೬. ಯಾವನು ಪ್ರಾಣದಲ್ಲಿರುವವನಾಗಿ ಪ್ರಾಣಕ್ಕಿಂತಲೂ ಒಳಗಿರುವವನೋ ಯಾವನನ್ನು ಪ್ರಾಣವು ಅರಿಯದೋ ಯಾವನಿಗೆ ಪ್ರಾಣವು ಶರೀರವೋ ಯಾವನು ಪ್ರಾಣವನ್ನು ಒಳಗಿದ್ದು ಆಳುತ್ತಿರುವನೋ ಇವನೇ ನಿನ್ನ ಆತ್ಮನಾದ ಅಂತರ್ಯಾಮಿಯು, ಅಮೃತನು.

**ಯೋ ವಾಚಿ ತಿಷ್ಠನ್ ವಾಚೋಽನ್ತರೋ ಯಂ ವಾಙ್ನ ವೇದ ಯಸ್ಯ ವಾಕ್ ಶರೀರಂ ಯೋ ವಾಚಮನ್ತರೋ ಯಮಯತ್ಯೇಷ ತ ಆತ್ಮಾನ್ತರ್ಯಾಮ್ಯಮೃತಃ || ೧೭ ||**

೧೭. ಯಾವನು ವಾಕ್ಕಿನಲ್ಲಿರುವವನಾಗಿ ವಾಕ್ಕಿಗಿಂತಲೂ ಒಳಗಿ

1. ಇದು ಮುಂದಿನ ಅಧ್ಯಾತ್ಮಪರ್ಯಾಯಗಳಿಗೆ ಅವತರಣಿಕೆ.

ನವನೋ, ಯಾವನನ್ನು ವಾಕ್ಕು ಅರಿಯದೋ ಯಾವನಿಗೆ ವಾಕ್ಕು ಶರೀರವೋ ಯಾವನು ವಾಕ್ಕನ್ನು ಒಳಗಿದ್ದು ಆಳುತ್ತಿರುವನೋ ಇವನೇ ನಿನ್ನ ಆತ್ಮನಾದ ಅಂತರ್ಯಾಮಿಯು, ಅಮೃತನು.

**ಯಶ್ಚಕ್ಷುಷಿ ತಿಷ್ಠಂಶ್ಚಕ್ಷುಷೋಽನ್ತರೋ ಯಂ ಚಕ್ಷುರ್ನ ವೇದ ಯಸ್ಯ ಚಕ್ಷುಃ ಶರೀರಂ ಯಶ್ಚಕ್ಷುರನ್ತರೋ ಯಮಯತ್ಯೇಷ ತ ಆತ್ಮಾನ್ತರ್ಯಾಮ್ಯಮೃತಃ ॥ ೧೮ ॥**

೧೮. ಯಾವನು ಚಕ್ಷುಸ್ಸಿನಲ್ಲಿರುವವನಾಗಿ ಚಕ್ಷುಸ್ಸಿಗಿಂತಲೂ ಒಳಗಿನವನೋ ಯಾವನನ್ನು ಚಕ್ಷುಸ್ಸು ಅರಿಯದೋ ಯಾವನಿಗೆ ಚಕ್ಷುಸ್ಸು ಶರೀರವೋ ಯಾವನು ಚಕ್ಷುಸ್ಸನ್ನು ಒಳಗಿದ್ದು ಆಳುತ್ತಿರುವನೋ ಇವನೇ ನಿನ್ನ ಆತ್ಮನಾದ ಅಂತರ್ಯಾಮಿಯು, ಅಮೃತನು.

**ಯಃ ಶ್ರೋತ್ರೇ ತಿಷ್ಠಞ್ಛ್ರೋತ್ರಾದನ್ತರೋ ಯಗ್ಂ ಶ್ರೋತ್ರಂ ನ ವೇದ ಯಸ್ಯ ಶ್ರೋತ್ರಗ್ಂ ಶರೀರಂ ಯಃ ಶ್ರೋತ್ರಮನ್ತರೋ ಯಮಯತ್ಯೇಷ ತ ಆತ್ಮಾನ್ತರ್ಯಾಮ್ಯಮೃತಃ ॥೧೯॥**

೧೯. ಯಾವನು ಶ್ರೋತ್ರದಲ್ಲಿರುವವನಾಗಿ ಶ್ರೋತ್ರಕ್ಕಿಂತಲೂ ಒಳಗಿನವನೋ ಯಾವನನ್ನು ಶ್ರೋತ್ರವು ಅರಿಯದೋ ಯಾವನಿಗೆ ಶ್ರೋತ್ರವು ಶರೀರವೋ ಯಾವನು ಶ್ರೋತ್ರವನ್ನು ಒಳಗಿದ್ದು ಆಳುತ್ತಿರುವನೋ ಇವನೇ ನಿನ್ನ ಆತ್ಮನಾದ ಅಂತರ್ಯಾಮಿಯು, ಅಮೃತನು.

**ಯೋ ಮನಸಿ ತಿಷ್ಠನ್ ಮನಸೋಽನ್ತರೋ ಯಂ ಮನೋ ನ ವೇದ ಯಸ್ಯ ಮನಃ ಶರೀರಂ ಯೋ ಮನೋಽನ್ತರೋ ಯಮಯತ್ಯೇಷ ತ ಆತ್ಮಾನ್ತರ್ಯಾಮ್ಯಮೃತಃ ॥ ೨೦ ॥**

೨೦. ಯಾವನು ಮನಸ್ಸಿನಲ್ಲಿರುವವನಾಗಿ ಮನಸ್ಸಿಗಿಂತಲೂ ಒಳಗಿರುವವನೋ ಯಾವನನ್ನು ಮನಸ್ಸು ಅರಿಯದೋ ಯಾವನಿಗೆ ಮನಸ್ಸು ಶರೀರವೋ ಯಾವನು ಮನಸ್ಸನ್ನು ಒಳಗಿದ್ದು ಆಳುತ್ತಿರುವನೋ ಇವನೇ ನಿನ್ನ ಆತ್ಮನಾದ ಅಂತರ್ಯಾಮಿಯು ಅಮೃತನು.

**ಯಸ್ತ್ವಚಿ ತಿಷ್ಠಗ್ಂ ಸ್ತ್ವಚೋಽನ್ತರೋ ಯಂ ತ್ವಙ್ನ ವೇದ ಯಸ್ಯ ತ್ವಕ್ಶರೀರಂ ಯಸ್ತ್ವಚಮನ್ತರೋ ಯಮಯತ್ಯೇಷ ತ ಆತ್ಮಾ ನ್ತರ್ಯಾಮ್ಯಮೃತಃ ॥ ೨೧ ॥**

೨೧. ಯಾವನು ತ್ವಕ್ಕಿನಲ್ಲಿದ್ದು ತ್ವಕ್ಕಿಗಿಂತಲೂ ಒಳಗಿರುವವನೋ ಯಾವನನ್ನು ತ್ವಕ್ಕು ಅರಿಯದೋ ಯಾವನಿಗೆ ತ್ವಕ್ಕು ಶರೀರವೋ ಯಾವನು ತ್ವಕ್ಕನ್ನು ಒಳಗಿದ್ದು ಆಳುತ್ತಿರುವನೋ ಇವನೇ ನಿನ್ನ ಆತ್ಮನಾದ ಅಂತರ್ಯಾಮಿಯು, ಅಮೃತನು.

**ಯೋ ವಿಜ್ಞಾನೇ ತಿಷ್ಠನ್ ವಿಜ್ಞಾನಾದನ್ತರೋ ಯಂ ವಿಜ್ಞಾನಂ ನ ವೇದ ಯಸ್ಯ ವಿಜ್ಞಾನಗ್ಂ ಶರೀರಂ ಯೋ ವಿಜ್ಞಾನಮನ್ತರೋ ಯಮಯತ್ಯೇಷ ತ ಆತ್ಮಾನ್ತರ್ಯಾಮ್ಯಮೃತಃ ॥ ೨೨ ॥**

೨೨. ಯಾವನು ವಿಜ್ಞಾನದಲ್ಲಿರುವವನಾಗಿ[1] ವಿಜ್ಞಾನಕ್ಕಿಂತಲೂ ಒಳಗಿರುವವನೋ ಯಾವನನ್ನು ವಿಜ್ಞಾನವು ಅರಿಯದೋ ಯಾವನಿಗೆ ವಿಜ್ಞಾನವು ಶರೀರವೋ ಯಾವನು ವಿಜ್ಞಾನವನ್ನು ಒಳಗಿದ್ದುಕೊಂಡು ಆಳುತ್ತಿರುವನೋ ಇವನೇ ನಿನ್ನ ಆತ್ಮನಾದ ಅಂತರ್ಯಾಮಿಯು, ಅಮೃತನು

**ಯೋ ರೇತಸಿ ತಿಷ್ಠನ್ ರೇತಸೋಽನ್ತರೋ ಯಗ್ಂ ರೇತೋ ನ ವೇದ ಯಸ್ಯ ರೇತಃ ಶರೀರಂ ಯೋ ರೇತೋನ್ತರೋ ಯಮಯ ತ್ಯೇಷ ತ ಆತ್ಮಾನ್ತರ್ಯಾಮ್ಯಮೃತೋಽದೃಷ್ಟೋ ದ್ರಷ್ಟಾಽಶ್ರುತಃ ಶ್ರೋತಾಮತೋ ಮನ್ತಾಽವಿಜ್ಞಾತೋ ವಿಜ್ಞಾತಾ ನಾನ್ಯೋಽ ತೋಽಸ್ತಿ ದ್ರಷ್ಟಾ ನಾನ್ಯೋಽತೋಽಸ್ತಿ ಶ್ರೋತಾ ನಾನ್ಯೋಽತೋಽಸ್ತಿ ಮನ್ತಾ ನಾನ್ಯೋಽತೋಽಸ್ತಿ ವಿಜ್ಞಾತೈಷ ತ ಆತ್ಮಾನ್ತರ್ಯಾಮ್ಯ ಮೃತೋಽತೋಽನ್ಯದಾರ್ತಂ ತತೋ ಹೋದ್ದಾಲಕ ಆರುಣಿರುಪ ರರಾಮ ॥ ೨೩ ॥**

೨೩. ಯಾವನು ರೇತಸ್ಸಿನಲ್ಲಿರುವವನಾಗಿ ರೇತಸ್ಸಿಗಿಂತಲೂ ಒಳಗಿ ರುವವನೋ ಯಾವನನ್ನು ರೇತಸ್ಸು ಅರಿಯದೋ ಯಾವನಿಗೆ ರೇತಸ್ಸು

---

1. ಯ ಆತ್ಮನಿ ತಿಷ್ಠನ್ ಎಂದು ಮಾಧ್ಯಂದಿನಪಾಠ. ಈ ವಿಷಯಕ್ಕೆ ಸೂ. ಭಾ. ೧-೨-೨೦ ಭಾ. ಭಾ. ೧೯೪ ನೋಡಿ.

ಶರೀರವೋ ಯಾವನು ರೇತಸ್ಸನ್ನು ಒಳಗಿದ್ದು ಆಳುತ್ತಿರುವನೋ ಇವನೇ ನಿನ್ನ ಆತ್ಮನಾದ ಅಂತರ್ಯಾಮಿಯು, ಅಮೃತನು. ಅದೃಷ್ಟನಾಗಿರುವ ದ್ರಷ್ಟೃ, ಅಶ್ರುತನಾಗಿರುವ ಶ್ರೋತೃ, ಅಮತನಾಗಿರುವಮಂತೃ, ಅವಿಜ್ಞಾತ ವಾಗಿರುವ ವಿಜ್ಞಾತೃ. ಇವನಿಗಿಂತ ಬೇರೆಯ ದ್ರಷ್ಟೃವಿಲ್ಲ, ಇವನಿಗಿಂತ ಬೇರೆಯ ಶ್ರೋತೃವಿಲ್ಲ. ಇವನಿಗಿಂತ ಬೇರೆಯ ಮಂತೃವಿಲ್ಲ, ಇವನಿಗಿಂತ ಬೇರೆವಿಜ್ಞಾತೃವಿಲ್ಲ. ಇವನೇ ನಿನ್ನ ಆತ್ಮನಾದ ಅಂತರ್ಯಾಮಿಯು, ಅಮೃತನು; ಇವನಿಗಿಂತ ಮಿಕ್ಕದ್ದು ಆರ್ತವು. ಆಗ ಉದ್ದಾಲಕ ಆರುಣಿಯು ಸುಮ್ಮನಾದನು.

## ಅಂತರ್ಯಾಮಿಯನ್ನು ಪೃಥಿವ್ಯಾದಿಗಳು ಅರಿಯಲಾರವೇಕೆ?

(ಭಾಷ್ಯ)

೭೨. ಅಥಾಧ್ಯಾತ್ಮಮ್ । ಯಃ ಪ್ರಾಣೇ ಪ್ರಾಣವಾಯುಸಹಿತೇ ಘ್ರಾಣೇ। ಯೋ ವಾಚಿ ಚಕ್ಷುಷಿ ಶ್ರೋತ್ರೇ ಮನಸಿ ತ್ವಚಿ ವಿಜ್ಞಾನೇ ಬುದ್ಧೌ । ರೇತಸಿ ಪ್ರಜನನೇ । ಕಸ್ಮಾತ್ ಪುನಃ ಕಾರಣಾತ್ ಪೃಥಿವ್ಯಾದಿದೇವತಾಃ ಮಹಾಭಾಗಾಃ ಸತ್ಯೋ ಮನುಷ್ಯಾದಿವತ್ ಆತ್ಮನಿ ತಿಷ್ಠನ್ತಮ್ ಆತ್ಮನೋ ನಿಯನ್ತಾರಮ್ ಅನ್ತರ್ಯಾಮಿಣಂ ನ ವಿದುಃ ಇತ್ಯತ ಆಹ–ಅದೃಷ್ಟೋ ನ ದೃಷ್ಟೋ ನ ವಿಷಯೀ ಭೂತಶ್ಚಕ್ಷುರ್ದರ್ಶನಸ್ಯ ಕಸ್ಯಚಿತ್ । ಸ್ವಯಂ ತು ಚಕ್ಷುಷಿ ಸಂನಿಹಿತತ್ವಾದ್ ದೃಶಿ ಸ್ವರೂಪ ಇತಿ ದ್ರಷ್ಟಾ । ತಥಾಽಶ್ರುತಃ ಶ್ರೋತ್ರಗೋಚರತ್ವಮ್ ಅನಾಪನ್ನಃ ಕಸ್ಯಚಿತ್। ಸ್ವಯಂ ತು ಅಲುಪ್ತಶ್ರವಣಶಕ್ತಿಃ ಸರ್ವಶ್ರೋತ್ರೇಷು ಸಂನಿಹಿತತ್ವಾತ್ ಶ್ರೋತಾ । ತಥಾ ಅಮತೋ ಮನಃಸಂಕಲ್ಪವಿಷಯತಾಮ್ ಅನಾಪನ್ನಃ । ದೃಷ್ಟ ಶ್ರುತೇ ಏವ ಹಿ ಸರ್ವಃ ಸಂಕಲ್ಪಯತಿ । ಅದೃಷ್ಟತ್ವಾತ್ ಅಶ್ರುತತ್ವಾದೇವ ಅಮತಃ। ಅಲುಪ್ತಮನನಶಕ್ತಿತ್ವಾತ್ ಸರ್ವಮನಃಸು ಸಂನಿಹಿತತ್ವಾಚ್ಚ ಮನ್ತಾ । ತಥಾ ಅವಿಜ್ಞಾತಃ ನಿಶ್ಚಯಗೋಚರತಾಮ್ ಅನಾಪನ್ನಃ ರೂಪಾದಿವತ್, ಸುಖಾದಿ ವದ್ವಾ । ಸ್ವಯಂ ತು ಅಲುಪ್ತವಿಜ್ಞಾನಶಕ್ತಿತ್ವಾತ್ ತತ್ಸಂನಿಧಾನಾಚ್ಚ ವಿಜ್ಞಾತಾ । ತತ್ರ ಯಂ ಪೃಥಿವೀ ನ ವೇದ ಯಂ ಸರ್ವಾಣಿ ಭೂತಾನಿ ನ ವಿದುಃ ಇತಿ ಚ ಅನ್ಯೇ ನಿಯನ್ತವ್ಯಾ ವಿಜ್ಞಾತಾರಃ, ಅನ್ಯೋ ನಿಯನ್ತಾ ಅನ್ತರ್ಯಾಮೀತಿ ಪ್ರಾಪ್ತಂ ತದನ್ಯತ್ವಾಶಙ್ಕಾನಿವೃತ್ತ್ಯರ್ಥಮ್ ಉಚ್ಯತೇ । ನಾನ್ಯೋಽತಃ । ನಾನ್ಯಃ[1] ಅತಃ

1. ಇಲ್ಲಿ ಮತ್ತೊಂದು ಸಲ ನಾನ್ಯಃ ಎಂದು ಬರೆದುಕೊಂದಿರುವದು ಏಕೆಂಬುದು ತಿಳಿಯದು. ನಾನ್ಯೋಽತಃ ಎಂದು ಮೂಲ ; ನಾನ್ಯಃ ಅತಃ ಎಂಬುದು ಅನ್ವಯ; ಅಸ್ಮಾತ್ ಅನ್ತರ್ಯಾಮಿಣಃ ಎಂಬುದು ಅತಃ ಎಂಬುದರ ಅರ್ಥ ; ನಾನ್ಯೋತೋಽಸ್ತಿ ದ್ರಷ್ಟಾ ಎಂಬುದು ವಾಕ್ಯದ ಉಪಸಂಹಾರ ಎಂದು ನಾವು ಮಾಡಿಕೊಂಡಿದ್ದೇವೆ.

ಅಸ್ಮಾತ್ ಅನ್ತರ್ಯಾಮಿಣಃ ನಾನ್ಯೋಽತೋಽಸ್ತಿ ದ್ರಷ್ಟಾ|ತಥಾ ನಾನ್ಯೋಽತೋಽಸ್ತಿ ಶ್ರೋತಾ | ನಾನ್ಯೋಽತೋಽಸ್ತಿ ಮನ್ತಾ ನಾನ್ಯೋಽತೋಽಸ್ತಿ ವಿಜ್ಞಾತಾ| ಯಸ್ಮಾತ್ ಪರೋ ನಾಸ್ತಿ ದ್ರಷ್ಟಾ ಶ್ರೋತಾ ಮನ್ತಾ ವಿಜ್ಞಾತಾ ಯೋಽದೃಷ್ಟೋ ದ್ರಷ್ಟಾ, ಅಶ್ರುತಃ ಶ್ರೋತಾ, ಅಮತೋ ಮನ್ತಾ ಅವಿಜ್ಞಾತೋ ವಿಜ್ಞಾತಾ, ಅಮೃತಃ ಸರ್ವಸಂಸಾರಧರ್ಮವರ್ಜಿತಃ, ಸರ್ವಸಂಸಾರಿಣಾಂ ಕರ್ಮಫಲವಿಭಾಗ ಕರ್ತಾ, ಏಷ ತ ಆತ್ಮಾಽನ್ತರ್ಯಾಮ್ಯಮೃತಃ ಅಸ್ಮಾತ್ ಈಶ್ವರಾತ್ ಆತ್ಮನೋಽನ್ಯತ್ ಆರ್ತಮ್ | ತತೋ ಹ ಉದ್ದಾಲಕ ಆರುಣಿಃ ಉಪರರಾಮ ||

(ಭಾಷ್ಯಾರ್ಥ)

ಇನ್ನು ಅಧ್ಯಾತ್ಮವು.[1] ಯಾವನು ಪ್ರಾಣದಲ್ಲಿ ಅಂದರೆ ಪ್ರಾಣವಾಯುವಿನಿಂದೊಡಗೂಡಿರುವ ಘ್ರಾಣದಲ್ಲಿ (ಎಂದರ್ಥ). ಯಾವನು ವಾಕ್ಕಿನಲ್ಲಿ, ಚಕ್ಷುಸ್ಸಿನಲ್ಲಿ, ಶ್ರೋತ್ರದಲ್ಲಿ, ಮನಸ್ಸಿನಲ್ಲಿ, ತ್ವಕ್ಕಿನಲ್ಲಿ, ವಿಜ್ಞಾನದಲ್ಲಿ, ಎಂದರೆ ಬುದ್ಧಿಯಲ್ಲಿ, ರೇತಸ್ಸಿನಲ್ಲಿ ಎಂದರೆ ಜನನೇಂದ್ರಿಯದಲ್ಲಿ–(ಈ ಪರ್ಯಾಯಗಳಿಗೆ ಹಿಂದಿನಂತೆಯೇ ಅರ್ಥವನ್ನು ಮಾಡಿಕೊಳ್ಳಬೇಕು).

(ಪ್ರಶ್ನೆ):—ಪೃಥಿವ್ಯಾದಿದೇವತೆಗಳು[2] ಮಹಾಶಕ್ತಿವಂತರಾದರೂ ಮನುಷ್ಯಾದಿಗಳಂತೆಯೇ ತಮ್ಮೊಳಗೇ ಇರುವ ತಮ್ಮ ನಿಯಂತೃವಾದ ಅಂತರ್ಯಾಮಿಯನ್ನು ಅರಿಯರು ಎಂಬುದು ಯಾವ ಕಾರಣದಿಂದ ?

(ಉತ್ತರ):—ಇದಕ್ಕೆ ಹೇಳುತ್ತಾನೆ. **(ಅಂತರ್ಯಾಮಿಯು) ಅದೃಷ್ಟನು, ದೃಷ್ಟನಲ್ಲ, ಯಾರ ಚಕ್ಷುಸ್ಸಿನ ನೋಟಕ್ಕೂ ಗೋಚರನಾಗುವವನಲ್ಲ; ಆದರೆ ತಾನು ಚಕ್ಷುಸ್ಸಿನಲ್ಲಿ ಸಂನಿಹಿತನಾಗಿರುವದರಿಂದ ದೃಗ್ರೂಪನಾಗಿರುತ್ತಾನಾದ್ದರಿಂದ ದ್ರಷ್ಟೃ. ಹೀಗೆಯೇ ಅಶ್ರುತನು ಯಾರಿಗೂ ಶ್ರೋತ್ರ**

---

1. ಮಾಧ್ಯಂದಿನಪಾಠದಲ್ಲಿ ಅಧಿದೈವತ, ಅಧಿಲೋಕ, ಅಧಿವೇದ, ಅಧಿಯಜ್ಞ, ಅಧಿಭೂತ, ಅಧ್ಯಾತ್ಮ– ಎಂದು ಆರು ತಂಡವಾಗಿ ಅಂತರ್ಯಾಮಿದರ್ಶನವನ್ನು ವಿಂಗಡಿಸಿ ಹೇಳಿದೆ. ಸೂ. ಭಾ. ೧-೨-೧೮ ; ಭಾ. ಭಾ. ೧೮೮೮ ಟಿಪ್ಪಣಿಯನ್ನು ನೋಡಿ.

2. ಇಲ್ಲಿ ಹೇಳಿರುವವೆಲ್ಲ ದೇವತೆಗಳೇ.

3. ಚೈತನ್ಯಸ್ವರೂಪನಾಗಿದ್ದು ಚಕ್ಷುಸ್ಸಿಗೆ ಅನುಗ್ರಾಹಕನಾಗಿರುವ ದ್ರಷ್ಟೃ, ನೋಡುವ ಕ್ರಿಯೆಯುಳ್ಳವನೆಂದಲ್ಲ; ಇವನು ಯಾರ ಚಕ್ಷುಸ್ಸಿಗೂ ಗೋಚರನಲ್ಲ. ಆದ್ದರಿಂದ ದೇವತೆಗಳು ಇವನನ್ನು ಕಾಣರೆಂಬುದಕ್ಕೆ ಅಂತರ್ಯಾಮಿಯ ವಸ್ತುಸ್ವಭಾವವೇ ಕಾರಣ ಎಂದುಭಾವ.

**ಗೋಚರತ್ವವನ್ನು ಹೊಂದುವವನಲ್ಲ; ಆದರೆ ತಾನು (ಎಂದಿಗೂ) ಲೋಪವಾಗದ ಶ್ರವಣಶಕ್ತಿಯುಳ್ಳವನು, ಎಲ್ಲಾ ಶ್ರೋತ್ರಗಳಲ್ಲಿಯೂ ಸಂನಿಹಿತನಾಗಿರುವದರಿಂದ ಶ್ರೋತೃ.**[1] ಇದರಂತೆ ಅಮತನು, ಮನಸ್ಸಿನ ಸಂಕಲ್ಪಕ್ಕೆ ವಿಷಯತ್ವವನ್ನು ಹೊಂದದಿರುವವನು. ದೃಷ್ಟ (ಕಂಡದ್ದು), ಶ್ರುತ (ಕೇಳಿದ್ದು- ಇವು)ಗಳನ್ನಲ್ಲವೆ, ಪ್ರತಿಯೊಬ್ಬನೂ ಸಂಕಲ್ಪಿಸುವದು ?[2] (ಈ ಅಂತರ್ಯಾಮಿಯು) ಅದೃಷ್ಟನೂ ಅಶ್ರುತನೂ ಆಗಿರುವದರಿಂದಲೇ ಅಮತನು; (ಆದರೆ ತಾನು ಎಂದಿಗೂ) ಲೋಪವಾಗದ ಮನನಶಕ್ತಿಯುಳ್ಳವನಾಗಿರುವದರಿಂದಲೂ ಎಲ್ಲರ ಮನಸ್ಸುಗಳಲ್ಲಿಯೂ ಸಂನಿಹಿತನಾಗಿರುವದರಿಂದಲೂ ಮಂತೃ. ಇದರಂತೆ ಅವಿಜ್ಞಾತನು, ರೂಪಾದಿಗಳಂತೆ ಅಥವಾ ಸುಖಾದಿಗಳಂತೆ[3] ನಿಶ್ಚಯಕ್ಕೆ ವಿಷಯತ್ವವನ್ನು ಹೊಂದದವನು, ತಾನಾದರೋ (ಎಂದಿಗೂ) ಲೋಪವಾಗದ ವಿಜ್ಞಾನಶಕ್ತಿಯುಳ್ಳವನಾದ್ದರಿಂದ ಆ (ವಿಜ್ಞಾನದಲ್ಲಿ) ಸಂನಿಹಿತನಾಗಿರುವದರಿಂದಲೂ ವಿಜ್ಞಾತೃ.

ಇಲ್ಲಿ 'ಯಾವನನ್ನು ಪೃಥಿವಿಯು ಅರಿಯದೋ', ಎಂದೂ 'ಯಾವನನ್ನು ಯಾವ ಭೂತಗಳೂ ಅರಿಯವೋ' ಎಂದೂ (ಹೇಳಿದ್ದರಿಂದ) ನಿಯಂತವ್ಯರಾದ ವಿಜ್ಞಾತೃಗಳು ಬೇರೆ, ನಿಯಂತೃವಾದ ಅಂತರ್ಯಾಮಿಯು ಬೇರೆ- ಎಂದು ಬಂದೊದಗಿತು. ಅವರು ಬೇರೆಬೇರೆ ಎಂಬ ಆಶಂಕೆಯನ್ನು ತೊಲಗಿಸುವದಕ್ಕಾಗಿ (ಹೀಗೆಂದು) ಹೇಳಲಾಗಿರುತ್ತದೆ: ನಾನ್ಯೋಽತಃ ಎಂಬಲ್ಲಿ ಅತಃ

---

1. ರೂಪಶಬ್ದಗಳಿಲ್ಲದವನಾದ್ದರಿಂದಲೂ ನೋಡುವ ಮತ್ತು ಕೇಳುವ ಚಕ್ಷುಃಶ್ರೋತ್ರಗಳನ್ನು ಬೆಳಗುವವನಾದ್ದರಿಂದಲೂ ಅದೃಷ್ಟ, ಅಶ್ರುತ- ಎಂದಿದೆ. ಎಲ್ಲಾ ಚಕ್ಷುಸ್ಸುಗಳೂ ಎಲ್ಲಾ ಶ್ರೋತ್ರಗಳೂ ಆತ್ಮನ ಸಂನಿಧಿಮಾತ್ರದಿಂದ ತಮ್ಮತಮ್ಮ ಕ್ರಿಯೆಯನ್ನು ಮಾಡುತ್ತವೆಯಾದ್ದರಿಂದ ಇವನನ್ನು ದ್ರಷ್ಟೃ, ಶ್ರೋತೃ- ಎಂದು ಉಪಚಾರಕ್ಕೆ ಕರೆದಿದೆ. ಜೀವನು ದ್ರಷ್ಟೃ ಎಂದರೆ ನೇತ್ರದ ವಿಕಾರದಿಂದ ವಿಕಾರಗಳುಳ್ಳವನು, ಆದರೆ ಆತ್ಮನು ದ್ರಷ್ಟೃ ಎಂದರೆ ನೇತ್ರದ ದೃಕ್ಶಕ್ತಿಯು ಎಂದಿಷ್ಟೇ ಅಭಿಪ್ರಾಯ. ಇಲ್ಲಿ ಹೇಳಿರುವ ದೃಕ್ಶಕ್ತಿ, ಶ್ರವಣಶಕ್ತಿ- ಮುಂತಾದ ಶಕ್ತಿಗಳು ಬೇರೆಬೇರೆಯಲ್ಲ. ಅವೆಲ್ಲ ಚಿದ್ರೂಪಮಾತ್ರವಾಗಿರುತ್ತವೆ. ಉ.ಸಾ.ಪ. ೧೮-೫೪ ನೋಡಿ.

2. ಅದೃಷ್ಟವಾದ ಅಶ್ರುತವಾದ ಯಾವ ವಸ್ತುವನ್ನೂ ಮನಸ್ಸಿನಲ್ಲಿ ಆಲೋಚಿಸುವದಕ್ಕಾಗುವದಿಲ್ಲ.

3. ಮನಸ್ಸಿನಲ್ಲಿ ರೂಪಾದಿಬಾಹ್ಯವಿಷಯಗಳನ್ನು ಅಥವಾ ಸುಖದುಃಖಾದಿ ಅಂತರವಿಷಯಗಳನ್ನು ಇದು ರೂಪವು, ಇದು ಸುಖವು- ಎಂದು ನಿಶ್ಚಯಿಸುವದಕ್ಕಾಗುತ್ತದೆ; ಆದರೆ ಆತ್ಮನು ಅವಿಷಯನಾದ್ದರಿಂದ ಅವನನ್ನು ನಿಶ್ಚಯಿಸುವದಕ್ಕೂ ಆಗುವದಿಲ್ಲ. ಅಂತರ್ಯಾಮಿಯು ಯಾವ ಇಂದ್ರಿಯಮನೋವೃತ್ತಿಗಳಿಗೂ ವಿಷಯನಲ್ಲ ಎಂಬುದೇ ಮುಖ್ಯವಾಗಿ ಇಲ್ಲಿ ವಿವಕ್ಷಿತವಾಗಿದೆ.

ಎಂದರೆ ಈ ಅಂತರ್ಯಾಮಿಗಿಂತ, ನಾನ್ಯಃ ಎಂದರೆ ಮತ್ತೊಬ್ಬನಿಲ್ಲ; (ಹೀಗೆ) ಇವನಿಗಿಂತ ಬೇರೊಬ್ಬ ದ್ರಷ್ಟೃವಿಲ್ಲ (ಎಂಬಿದು ವಾಕ್ಯಾರ್ಥ)[1] ಇದರಂತೆ ಇವನಿಗಿಂತ (ಬೇರೆ) ಮತ್ತೊಬ್ಬ ಶ್ರೋತೃವಿಲ್ಲ, ಇವನಿಗಿಂತ (ಬೇರೆ) ಮತ್ತೊಬ್ಬ ಮಂತೃವಿಲ್ಲ, ಇವನಿಗಿಂತ (ಬೇರೆ) ಮತ್ತೊಬ್ಬ ವಿಜ್ಞಾತೃವಿಲ್ಲ.[2]

**ಯಾವನಿಗಿಂತ (ಬೇರೆಯಾಗಿ) ಮತ್ತೊಬ್ಬ ದ್ರಷ್ಟೃವಾಗಲಿ, ಶ್ರೋತೃವಾಗಲಿ, ಮಂತೃವಾಗಲಿ, ವಿಜ್ಞಾತೃವಾಗಲಿ ಇಲ್ಲವೋ, ಯಾವನು ಅದೃಷ್ಟನಾದ ದ್ರಷ್ಟೃವೂ ಅಶ್ರುತನಾದ ಶ್ರೋತೃವೂ ಅಮತನಾದ ಮಂತೃವೂ ಅವಿಜ್ಞಾತನಾದ ವಿಜ್ಞಾತೃವೂ, ಅಮೃತನು ಎಂದರೆ ಯಾವ ಸಂಸಾರಧರ್ಮವೂ ಇಲ್ಲದವನೂ ಎಲ್ಲಾ ಸಂಸಾರಿಗಳಿಗೂ ಕರ್ಮಫಲವನ್ನು ಹಂಚಿಕೊಡುವವನೂ ಆಗಿರುವನೋ** ಇವನೇ ನಿನ್ನ ಆತ್ಮನಾದ ಅಂತರ್ಯಾಮಿಯು ಅಮೃತನು. ಈ ಈಶ್ವರನಾದ ಆತ್ಮನಿಗಿಂತ ಬೇರೆಯಾದದ್ದೆಲ್ಲವೂ ಆರ್ತವು (— ಎಂದು ಯಾಜ್ಞವಲ್ಕ್ಯನು ನುಡಿದನು).

ಆಗ ಉದ್ದಾಲಕ ಆರುಣಿಯು ಸುಮ್ಮನಾದನು.

---

1. ಇವನಿಗಿಂತ ಬೇರೆಯಾಗಿ ಮತ್ತೊಬ್ಬ ನಿಯಂತೃವಿಲ್ಲ- ಎಂಬರ್ಥವನ್ನು ಕೆಲವರು ತೆಗೆದಿರುತ್ತಾರೆ. ಆದರೆ ಬೇರೆಯ ದ್ರಷ್ಟೃವಿಲ್ಲ, ಶ್ರೋತೃವಿಲ್ಲ- ಎಂದು ಮುಂತಾಗಿ ಸಾಮಾನ್ಯವಾಗಿ ಹೇಳಿರುವಲ್ಲಿ ಅಂತರ್ಯಾಮಿಯಲ್ಲ ಎಂಬ ವಿಶೇಷಾರ್ಥವನ್ನು ಮಾಡುವದು ಉಚಿತವಲ್ಲ, ಆಗ ಅಪ್ರಸಕ್ತವಾದದ್ದನ್ನು ಹೇಳಿದಂತೆಯೂ ಆಗುತ್ತದೆ.

2. ಒಬ್ಬನೇ ಆತ್ಮನಿಗೆ ಶ್ರೋತೃಶ್ರೋತವ್ಯ, ದ್ರಷ್ಟೃದ್ರಷ್ಟವ್ಯ- ಮುಂತಾದ ಭೇದವು ಉಪಾಧಿಯಿಂದಾದದ್ದು; ನಿಜವಾಗಿ ಅಂತರ್ಯಾಮಿಯೊಬ್ಬನೇ ಪರಮಾರ್ಥ ಎಂದರ್ಥ. ಸೂ.ಭಾ. ೧-೨-೨೦, ಭಾ.ಭಾ. ೧೯೫ ನೋಡಿ.

# ಏಳನೆಯ ಬ್ರಾಹ್ಮಣದ ಸಾರ

೧. ಗಾರ್ಗಿಯು ಸುಮ್ಮನಾಗಲು ಉದ್ದಾಲಕ ಆರುಣಿಯು ಸೂತ್ರವನ್ನೂ ಅಂತರ್ಯಾಮಿಯನ್ನೂ ಕುರಿತು ಆಗಮದ್ವಾರದಿಂದ ಯಾಜ್ಞವಲ್ಕ್ಯನನ್ನು ಪ್ರಶ್ನಿಸಿದನು. "ಮದ್ರದೇಶದಲ್ಲಿ ಪತಂಜಲಕಾಪ್ಯನ ಮನೆಯಲ್ಲಿ ನಾವು ಯಜ್ಞಶಾಸ್ತ್ರಾಧ್ಯಯನವನ್ನು ಮಾಡುತ್ತಿರುವಲ್ಲಿ ಅವನ ಹೆಂಡತಿಯನ್ನು ಹಿಡಿದಿದ್ದ ಕಬಂಧ ಅಥರ್ವಣನೆಂಬ ಗಂಧರ್ವನು ನಮಗೆ ಸೂತ್ರಾಂತರ್ಯಾಮಿಗಳನ್ನು ತಿಳಿಸಿಕೊಟ್ಟಿರುತ್ತಾನೆ ಅದನ್ನು ನೀನು ತಿಳಿದಿದ್ದರೆ ಹೇಳು" ಎಂದು ಕೇಳಿದನು. ಇದನ್ನು ತಿಳಿದವನೇ ಬ್ರಹ್ಮಜ್ಞಾನಿಯು, ಲೋಕದೇವ ವೇದಭೂತಗಳನ್ನೂ ಆತ್ಮನನ್ನೂ ಎಲ್ಲವನ್ನೂ ತಿಳಿದವನು– ಎಂದು ಗಂಧರ್ವನು ಈ ವಿದ್ಯೆಯನ್ನು ಹೊಗಳಿದ್ದನು.

೨. ಯಾಜ್ಞವಲ್ಕ್ಯನು ವಾಯುವೇ ಸೂತ್ರವು, ವಾಯುವೇ ಈ ಲೋಕಪರ ಲೋಕಗಳನ್ನೂ ಸರ್ವಭೂತಗಳನ್ನೂ ಕೂಡಿಸಿಟ್ಟಿರುವ ಸೂತ್ರವು ಮನುಷ್ಯನ ಅವಯವ ಗಳನ್ನು ಆ ಸೂತ್ರವೇ ಕೂಡಿಸಿಟ್ಟಿರುತ್ತದೆ, ಸತ್ತಾಗ ವಾಯುವಿನ ಅನುಗ್ರಹವಿಲ್ಲದ್ದ ರಿಂದಲೇ ಅವು ಸಡಿಲವಾಗುತ್ತವೆ" ಎಂದನು. ಉದ್ದಾಲಕ ಆರುಣಿಯು ಇದಕ್ಕೆ ಒಪ್ಪಿ, "ಸರಿ, ಸೂತ್ರವನ್ನು ಸರಿಯಾಗಿ ತಿಳಿಸಿರುತ್ತೀಯೆ. ಈಗ ಅಂತರ್ಯಾಮಿಯನ್ನು ಹೇಳು" ಎಂದನು.

೩-೧೪. ಯಾಜ್ಞವಲ್ಕ್ಯನು "ಅಧಿದೈವತವಾಗಿ ಪೃಥಿವಿ, ಅಪ್ಪು, ಅಗ್ನಿ, ಅಂತರಿಕ್ಷ, ವಾಯು, ದ್ಯುಲೋಕ, ಆದಿತ್ಯ, ದಿಕ್ಕು, ಚಂದ್ರತಾರಕ, ಆಕಾಶ, ತಮಸ್ಸು, ತೇಜಸ್ಸು"– ಎಂಬ ದೇವತೆಗಳಲ್ಲಿ ಅವುಗಳೊಳಗಿದ್ದರೂ ಅವುಗಳ ಅರಿವಿಗೆ ವಿಷಯನಾಗದೆ ಆ ದೇವತೆ ಗಳನ್ನೆಲ್ಲ ತನ್ನ ವಶದಲ್ಲಿಟ್ಟುಕೊಂಡು ಅವರವರ ವ್ಯಾಪಾರದಲ್ಲಿ ತೊಡಗಿಸುತ್ತಿರುವನಲ್ಲ, ಅವನೇ ನಿನ್ನ, ನನ್ನ, ಮತ್ತು ಎಲ್ಲರ ಆತ್ಮನಾದ ಸಂಸಾರಧರ್ಮವರ್ಜಿತನಾದ ಅಂತರ್ಯಾಮಿಯು" ಎಂದನು.

೧೫-೨೩. ಹೀಗೆಯೇ "ಅಧಿಭೂತವಾಗಿ ಎಲ್ಲಾ ಭೂತಗಳಲ್ಲಿಯೂ ಅಧ್ಯಾತ್ಮವಾಗಿ ಪ್ರಾಣ, ವಾಕ್ಕು, ಚಕ್ಷುಸ್ಸು, ಶ್ರೋತ್ರ, ಮನಸ್ಸು, ತ್ವಕ್ಕು, ವಿಜ್ಞಾನ, ರೇತಸ್ಸು– ಇವುಗಳಲ್ಲಿದ್ದುಕೊಂಡು ಅವುಗಳಿಗೂ ಅರಿಯದಂತೆ ಅವನ್ನು ಒಳಗಿನಿಂದ ಆಳುತ್ತಿರುವವನೇ ಸರ್ವಾತ್ಮನಾದ ಅಮೃತನಾದ ಅಂತರ್ಯಾಮಿಯು"– ಎಂದು ವಿವರಿಸಿದನು.

೨೩. "ಈ ಅಂತರ್ಯಾಮಿಯು ಯಾರಿಂದಲೂ ದೃಷ್ಟನಲ್ಲದ ದ್ರಷ್ಟೃ, ಶ್ರುತನಲ್ಲದ ಶ್ರೋತೃ, ಮತನಲ್ಲದ ಮಂತೃ, ವಿಜ್ಞಾತನಲ್ಲದ ವಿಜ್ಞಾತೃ. ಇವನಿಗಿಂತ ಬೇರೆಯಾದ ದ್ರಷ್ಟೃವಾಗಲಿ, ಶ್ರೋತೃವಾಗಲಿ, ಮಂತೃವಾಗಲಿ, ವಿಜ್ಞಾತೃವಾಗಲಿ ಇಲ್ಲ. ಇವನೇ ಎಲ್ಲರಿಗೂ ಆತ್ಮನಾಗಿರುವ ಅಂತರ್ಯಾಮಿಯು" ಎಂದು ಅಂತರ್ಯಾಮಿಸ್ವರೂಪವನ್ನು ಸ್ಪಷ್ಟಪಡಿಸಿದನು.

ಆಗ ಉದ್ದಾಲಕ ಆರುಣಿಯು ತನ್ನ ಪ್ರಶ್ನೆಗೆ ಉತ್ತರವು ಬಂದದ್ದರಿಂದ ಸುಮ್ಮನಾದನು.

---

# ಮೂರನೆಯ ಅಧ್ಯಾಯ—ಎಂಟನೆಯ ಬ್ರಾಹ್ಮಣ

(ಗಾರ್ಗಿಯ ಪ್ರಶ್ನೆ : ನಿರುಪಾಧಿಕಬ್ರಹ್ಮದ ಸ್ವರೂಪ)

## ಗಾರ್ಗಿಯ ಪ್ರಶ್ನೆಗೆ ಬ್ರಾಹ್ಮಣರ ಅನುಮತಿ

(ಉಪನಿಷತ್ತು)

**ಅಥ ಹ ವಾಚಕ್ನವ್ಯುವಾಚ ಬ್ರಾಹ್ಮಣಾ ಭಗವನ್ತೋ ಹನ್ತಾಹಮಿಮಂ ದ್ವೌ ಪ್ರಶ್ನೌ ಪ್ರಕ್ಷ್ಯಾಮಿ ತೌ ಚೇನ್ಮೇ ವಕ್ಷ್ಯತಿ ನ ಜಾತು ಯುಷ್ಮಾಕಮಿಮಂ ಕಶ್ಚಿದ್ ಬ್ರಹ್ಮೋದ್ಯಂ ಜೇತೇತಿ ಪೃಚ್ಛ ಗಾರ್ಗೀತಿ ॥ ೧ ॥**

೧. ಆಗ ವಾಚಕ್ನವಿಯು ಇಂತೆಂದಳು : "ಭಗವಂತರಾದ ಬ್ರಾಹ್ಮಣರೆ, ತಮ್ಮನುಮತಿಯಿಂದ ಇವನನ್ನು ಎರಡು ಪ್ರಶ್ನೆಗಳನ್ನು ಕೇಳುವೆನು. ಅವುಗಳನ್ನು ನನಗೆ (ಬಿಡಿಸಿ) ಹೇಳುವನಾದರೆ ನಿಮ್ಮಗಳಲ್ಲಿ ಯಾವನೂ ಎಂದಿಗೂ ಇವನನ್ನು ಬ್ರಹ್ಮವಾದದಲ್ಲಿ ಜಯಿಸಲಾರನು." "ಗಾರ್ಗಿಯೆ, ಕೇಳು" (ಎಂದರು).

(ಭಾಷ್ಯ)

೭೩. ಅತಃಪರಮ್ ಅಶನಾಯಾದಿವಿನಿರ್ಮುಕ್ತಂ ನಿರುಪಾಧಿಕಂ ಸಾಕ್ಷಾದಪರೋಕ್ಷಾತ್ ಸರ್ವಾನ್ತರಂ ಬ್ರಹ್ಮ ವಕ್ತವ್ಯಮ್ ಇತ್ಯತ ಆರಮ್ಭಃ । **ಅಥ ಹ ವಾಚಕ್ನವೀ ಉವಾಚ** । ಪೂರ್ವಂ ಯಾಜ್ಞವಲ್ಕ್ಯೇನ ನಿಷಿದ್ಧಾ ಮೂರ್ಧಪಾತಭಯಾತ್ ಉಪರತಾ ಸತೀ ಪುನಃ ಪ್ರಷ್ಟುಂ ಬ್ರಾಹ್ಮಣಾನುಜ್ಞಾಂ ಪ್ರಾರ್ಥಯತೇ । ಹೇ ಬ್ರಾಹ್ಮಣಾಃ ಭಗವನ್ತಃ ಪೂಜಾವನ್ತಃ ಶೃಣುತ ಮಮ ವಚಃ । ಹನ್ತ ಅಹಮಿಮಂ ಯಾಜ್ಞವಲ್ಕ್ಯಂ ಪುನಃ ದ್ವೌ ಪ್ರಶ್ನೌ ಪ್ರಕ್ಷ್ಯಾಮಿ ಯದ್ಯನುಮತಿರ್ಭವತಾಮ್ ಅಸ್ತಿ । ತೌ ಪ್ರಶ್ನೌ ಚೇದ್ ಯದಿ ವಕ್ಷ್ಯತಿ ಕಥಯಿಷ್ಯತಿ ಮೇ ಕಥಂಚಿತ್ ನ ವೈ ಜಾತು ಕದಾಚಿತ್ ಯುಷ್ಮಾಕಂ ಮಧ್ಯೇ ಇಮಂ ಯಾಜ್ಞವಲ್ಕ್ಯಂ ಕಶ್ಚಿತ್ ಬ್ರಹ್ಮೋದ್ಯಂ ಬ್ರಹ್ಮವದನಂ ಪ್ರತಿ ಜೇತಾ ನ ವೈ ಕಶ್ಚಿದ್ ಭವೇತ್ ಇತಿ । ಏವಮುಕ್ತಾ ಬ್ರಾಹ್ಮಣಾಃ ಅನುಜ್ಞಾಂ ಪ್ರದದುಃ 'ಪೃಚ್ಛ ಗಾರ್ಗಿ' ಇತಿ॥

(ಭಾಷ್ಯಾರ್ಥ)

ಇನ್ನು ಮುಂದೆ ಹಸಿವು ಮುಂತಾದವುಗಳಿಲ್ಲದ ನಿರುಪಾಧಿಕವಾದ ಸಾಕ್ಷಾದಪರೋಕ್ಷವಾಗಿರುವ ಸರ್ವಾಂತರಬ್ರಹ್ಮವನ್ನು ಹೇಳಬೇಕೆಂದು (ಇವನ್ನು) ಆರಂಭಿಸಿರುತ್ತದೆ.

ಆಗ ವಾಚಕ್ನವಿಯು ಇಂತೆಂದಳು : ಮೊದಲು ಯಾಜ್ಞವಲ್ಕ್ಯನಿಂದ ನಿವಾರಿತಳಾಗಿ ತಲೆಯು ಬಿದ್ದುಹೋಗುವದೆಂಬ ಅಂಜಿಕೆಯಿಂದ ಸುಮ್ಮನಾಗಿದ್ದವಳು[1] ಮತ್ತೆ ಕೇಳುವದಕ್ಕೆ ಬ್ರಾಹ್ಮಣರ ಅನುಜ್ಞೆಯನ್ನು ಬೇಡುತ್ತಿದಾಳೆ : ಎಲೈ ಬ್ರಾಹ್ಮಣರುಗಳೆ, ಭಗವಂತರೆ ಪೂಜ್ಯರೆ, ನನ್ನ ಮಾತನ್ನು ಕೇಳಿರಿ ಈ ಯಾಜ್ಞವಲ್ಕ್ಯನನ್ನು ಮತ್ತೆ ಎರಡು ಪ್ರಶ್ನೆಗಳನ್ನು ಕೇಳುವೆನು, (ಹನ್ತ=) ತಮ್ಮ ಅನುಮತಿಯಿದ್ದರೆ (ಕೇಳುವೆನು). ಆ (ಎರಡು) ಪ್ರಶ್ನೆಗಳನ್ನು (ಇವನು), ನನಗೆ (ಬಿಡಿಸಿ) ಹೇಳುವನಾದರೆ ತಿಳಿಸುತ್ತಾನಾದರೆ (ಚೇತ್ = ಯದಿ) ಹೇಗಾದರೂ (ಮಾಡಿ ಹೇಳುತ್ತಾನಾದರೆ)[2], ನಿಮ್ಮಗಳೊಳಗೆ ಈ ಯಾಜ್ಞವಲ್ಕ್ಯನನ್ನು ಯಾವನೊಬ್ಬನೂ ಎಂದಿಗೂ ಬ್ರಹ್ಮೋದ್ಯದಲ್ಲಿ ಬ್ರಹ್ಮವಾದದಲ್ಲಿ ಗೆಲ್ಲಲಾರನು, ಯಾವನು (ಗೆಲ್ಲುವ)ನಾಗಲಾರನು" ಎಂದು (ನುಡಿದಳು).

ಹೀಗೆನ್ನಲು ಬ್ರಾಹ್ಮಣರು "ಗಾರ್ಗಿಯೆ, ಕೇಳು !" ಎಂದು ಅನುಜ್ಞೆಯನ್ನು ಕೊಟ್ಟರು.

## ಗಾರ್ಗಿಯ ಪ್ರತಿಜ್ಞೆ

(ಉಪನಿಷತ್ತು)

**ಸಾ ಹೋವಾಚಾಹಂ ವೈ ತ್ವಾ ಯಾಜ್ಞವಲ್ಕ್ಯ ಯಥಾ ಕಾಶ್ಯೋ ವಾ ವೈದೇಹೋ ವೋಗ್ರಪುತ್ರ ಉಜ್ಜ್ಯಂ ಧನುರಧಿಜ್ಯಂ ಕೃತ್ವಾ ದ್ವೌ ಬಾಣವನ್ತೌ ಸಪತ್ನಾತಿವ್ಯಾಧಿನಾ ಹಸ್ತೇ ಕೃತ್ವೋಪೋತ್ತಿಷ್ಠೇದೇವಮೇವಾಹಂ ತ್ವಾ ದ್ವಾಭ್ಯಾಂ ಪ್ರಶ್ನಾಭ್ಯಾಮುಪೋದಸ್ಥಾಂ ತೌ ಮೇ ಬ್ರೂಹೀತಿ ಪೃಚ್ಛ ಗಾರ್ಗೀತಿ ॥ ೨ ॥**

೨. ಅವಳಿಂತೆಂದಳು: "ಯಾಜ್ಞವಲ್ಕ್ಯನೆ, ನಾನು ನಿನ್ನನ್ನು ಎರಡು ಪ್ರಶ್ನೆಗಳನ್ನು (ಕೇಳುವೆನು). ಹೇಗೆ ಉಗ್ರಪುತ್ರನಾದ ಕಾಶ್ಯನು ಅಥವಾ ವೈದೇಹನು ಉಜ್ಜ್ಯವಾದ ಧನುಸ್ಸನ್ನು ಅಧಿಜ್ಯವಾಗಿ ಮಾಡಿಕೊಂಡು ಸಪತ್ನನಿಗೆ ಅತಿವ್ಯಾಧಿಯ(ನ್ನುಂಟುಮಾಡುವ) ಎರಡು ಬಾಣಗಳಿರುವ (ಶರ)ಗಳನ್ನು ಕೈಯಲ್ಲಿಟ್ಟುಕೊಂಡು ಬಳಿಯಲ್ಲಿ ಎದುರಿಗೆ ನಿಲ್ಲುವನೋ, ಹಾಗೆಯೇ ನಾನು ಎರಡು ಪ್ರಶ್ನೆಗಳಿಂದೊಡಗೂಡಿ

---

1. ಈಗ ಆಗಮದ ಆಧಾರದಿಂದಲೇ ಪ್ರಶ್ನೆಯನ್ನು ಕೇಳುತ್ತಾಳೆಂಬರ್ಥದ ಸೂಚನೆ ಇದು.

2. 'ಚೇತ್' (ರೆ) ಎಂದಿರುವದರಿಂದ ಈ ಪ್ರಶ್ನೆಗಳಿಗೆ ಉತ್ತರವನ್ನು ಹೇಳುವದು ಕಷ್ಟ, ಒಂದು ವೇಳೆ ಹೇಳಿದರೆ ಎಂಬರ್ಥವು ಹೊರಡುತ್ತದೆ ಎಂದು ಭಾವ.

ಎದುರಿಗೆ ನಿಂತಿರುವೆನು. ಅವುಗಳನ್ನು ನನಗೆ (ಬಿಡಿಸಿ) ಹೇಳು!"
"ಗಾರ್ಗಿಯೆ, ಕೇಳು !"

(ಭಾಷ್ಯ)

೭೪. ಲಬ್ಧಾನುಜ್ಞಾ ಹ ಯಾಜ್ಞವಲ್ಕ್ಯಂ ಸಾ ಹೋವಾಚ ಅಹಂ ವೈ ತ್ವಾ ತ್ವಾಂ ದ್ವೌ ಪ್ರಶ್ನೌ ಪ್ರಕ್ಷ್ಯಾಮಿ ಇತ್ಯನುಷಜ್ಯತೇ । ಕೌ ತೌ ? ಇತಿ ಜಿಜ್ಞಾಸಾಯಾಂ ತಯೋರ್ದುರುತ್ತರತ್ವಂ ದ್ಯೋತಯಿತುಂ ದೃಷ್ಟಾನ್ತಪೂರ್ವಕಂ ತಾವಾಹ- ಹೇ ಯಾಜ್ಞವಲ್ಕ್ಯ, ಯಥಾ ಲೋಕೇ ಕಾಶ್ಯಃ ಕಾಶಿಷು ಭವಃ ಕಾಶ್ಯಃ । ಪ್ರಸಿದ್ಧಂ ಶೌರ್ಯಂ ಕಾಶ್ಯೇ । ವೈದೇಹೋ ವಾ ವಿದೇಹಾನಾಂ ವಾ ರಾಜಾ । ಉಗ್ರಪುತ್ರಃ ಶೂರಾನ್ವಯ ಇತ್ಯರ್ಥಃ । ಉಜ್ಜ್ಯಮ್ ಅವತಾರಿತಜ್ಯಾಕಂ ಧನುಃ ಪುನಃ ಅಧಿಜ್ಯಮ್ ಆರೋಪಿತಜ್ಯಾಕಂ ಕೃತ್ವಾ ದ್ವೌ ಬಾಣವನ್ತೌ ಬಾಣಶಬ್ದೇನ ಶರಾಗ್ರೇ ಯೋ ವಂಶಖಣ್ಡಃ ಸಂಧೀಯತೇ । ತೇನ ವಿನಾಪಿ ಶರೋ ಭವತಿ ಇತ್ಯತೋ ವಿಶಿನಷ್ಟಿ- ಬಾಣವನ್ತಾವಿತಿ । ಬಾಣವನ್ತೌ ಶರೌ । ತಯೋರೇವ ವಿಶೇಷಣಂ ಸಪತ್ನಾತಿವ್ಯಾಧಿನೌ ಶತ್ರೋಃ ಪೀಡಾಕರೌ ಅತಿಶಯೇನ । ಹಸ್ತೇ ಕೃತ್ವಾ ಉಪೋತ್ತಿಷ್ಠೇತ್ ಸಮೀಪತಃ ಆತ್ಮಾನಂ ದರ್ಶಯೇತ್ ಏವಮೇವ ಅಹಂ ತ್ವಾ ತ್ವಾಮ್, ಶರಸ್ಥಾನೀಯಾಭ್ಯಾಂ ಪ್ರಶ್ನಾಭ್ಯಾಂ ದ್ವಾಭ್ಯಾಮ್ ಉಪೋದಸ್ಥಾಮ್ ಉತ್ಥಿತವತೀ ಅಸ್ಮಿ ತ್ವತ್ಸಮೀಪೇ । ತೌ ಮೇ ಬ್ರೂಹೀತಿ, ಬ್ರಹ್ಮವಿಚ್ಚೇತ್ । ಆಹೇತರಃ । ಪೃಚ್ಛ ಗಾರ್ಗೀತಿ ॥

(ಭಾಷ್ಯಾರ್ಥ)

(ಹೀಗೆ ಬ್ರಾಹ್ಮಣರ) ಅನುಜ್ಞೆಯನ್ನು ಪಡೆದು ಅವಳು ಯಾಜ್ಞವಲ್ಕ್ಯನನ್ನು ಕುರಿತು ಇಂತೆಂದಳು : ನಾನು (ತ್ವಾ=ತ್ವಾಂ) ಎರಡು ಪ್ರಶ್ನೆಗಳನ್ನು ಕೇಳುವೆನು ಎಂದು ಅನುಷಂಗವನ್ನು (ಮಾಡಿಕೊಳ್ಳಬೇಕು)[1]. ಅವು ಯಾವವು ? ಎಂಬ ಜಿಜ್ಞಾಸೆಯುಂಟಾದಲ್ಲಿ ಅವುಗಳಿಗೆ ಉತ್ತರವನ್ನು ಹೇಳುವದು ಕಷ್ಟ ಎಂಬುದನ್ನು ತಿಳಿಯಪಡಿಸುವದಕ್ಕಾಗಿ ಅವುಗಳನ್ನು ದೃಷ್ಟಾಂತಪೂರ್ವಕವಾಗಿ ಹೇಳುತ್ತಾಳೆ. ಎಲೈ ಯಾಜ್ಞವಲ್ಕ್ಯನೆ, ಹೇಗೆ ಲೋಕದಲ್ಲಿ ಕಾಶ್ಯನಾಗಲಿ- ಕಾಶಿದೇಶದಲ್ಲಿರುವವನು ಕಾಶ್ಯನು ; ಕಾಶ್ಯನಲ್ಲಿ ಶೌರ್ಯವಿರುವದು ಪ್ರಸಿದ್ಧವು- ಅಥವಾ ವೈದೇಹನಾಗಲಿ, ವಿದೇಹದೇಶದ ರಾಜನಾಗಲಿ, ಉಗ್ರಪುತ್ರನಾದ ಎಂದರೆ ಶೂರರ ವಂಶದವನು ಎಂದರ್ಥ, (ಅಂಥವನು) ಉಜ್ಜ್ಯವಾದ ಕೆಳಗಿಳಿಸಿದ ಬಿಲ್ಲಿನ ಹುರಿಯುಳ್ಳ ಧನುಸ್ಸನ್ನು ಮತ್ತೆ ಅಧಿಜ್ಯವಾಗಿ ಏರಿಸಿದ ಹುರಿಯುಳ್ಳದ್ದನ್ನಾಗಿ ಮಾಡಿ ಎರಡು ಬಾಣಗಳಿರುವ- ಬಾಣಶಬ್ದದಿಂದ ಶರದ ಕೊನೆಯಲ್ಲಿರುವ ಬಿದಿರಿನ ತುಂಡು (ಉಕ್ತವಾಗಿದೆ) ; ಅದಿಲ್ಲದಿದ್ದರೂ ಶರವಿರಬಹು

1. ಹಿಂದಿನ ಕಂಡಿಕೆಯಿಂದ ಸೇರಿಸಿಕೊಳ್ಳಬೇಕು.

ದಾದ್ದರಿಂದ ಬಾಣವುಳ್ಳ ಎಂಬ ವಿಶೇಷಣವನ್ನು ಕೊಟ್ಟಿದೆ- ಬಾಣಗಳಿರುವ ಎರಡು ಶರಗಳನ್ನು- ಆ (ಶರ)ಗಳಿಗೇ (ಇದು ಮತ್ತೊಂದು) ವಿಶೇಷಣವು: ಸಪತ್ನನಿಗೆ ಅತಿವ್ಯಾಧಿ(ಯನ್ನುಂಟುಮಾಡುವ), ಶತ್ರುವಿಗೆ ಬಹಳವಾಗಿ ವ್ಯಥೆಯನ್ನುಂಟುಮಾಡುವ (ಶರಗಳನ್ನು ಎಂದರ್ಥ. ಅವನ್ನು) ಕೈಯಲ್ಲಿಟ್ಟುಕೊಂಡು ಬಳಿಯಲ್ಲಿ ಎದುರಿಗೆ ನಿಲ್ಲುವನೋ, ಹತ್ತಿರದಲ್ಲಿಯೇ ಕಾಣಿಸಿಕೊಳ್ಳುವನೋ ಹಾಗೆಯೇ ನಾನು (ತ್ವಾ=ತ್ವಾಮ್) ನಿನ್ನನ್ನು ಶರಗಳಂತಿರುವ ಎರಡು ಪ್ರಶ್ನೆಗಳೊಡನೆ ನಿನ್ನ ಹತ್ತಿರ ಎದುರಿಗೆ ನಿಂತಿರುವೆನು. (ನೀನು) ಬ್ರಹ್ಮಜ್ಞಾನಿಯಾದರ ಅವನ್ನು ನನಗೆ ಬಿಡಿಸಿಹೇಳು !

ಆಗ ಇನ್ನೊಬ್ಬ(ನಾದ ಯಾಜ್ಞವಲ್ಕ್ಯ)ನು "ಗಾರ್ಗಿಯೆ, ಕೇಳು !" ಎಂದನು.

## ಪ್ರಶ್ನೆ: ಸೂತ್ರವು ಏತರಲ್ಲಿ ಓತವೂ ಪ್ರೋತವೂ ಆಗಿದೆ ?

(ಉಪನಿಷತ್ತು)

**ಸಾ ಹೋವಾಚ ಯದೂರ್ಧ್ವಂ ಯಾಜ್ಞವಲ್ಕ್ಯ ದಿವೋ ಯದವಾರ್ಕ್ ಪೃಥಿವ್ಯಾ ಯದನ್ತರಾ ದ್ಯಾವಾಪೃಥಿವೀ ಇಮೇ ಯದ್ಭೂತಂ ಚ ಭವಚ್ಚ ಭವಿಷ್ಯಚ್ಚೇತ್ಯಾಚಕ್ಷತೇ ಕಸ್ಮಿಗ್ಂಸ್ತದೋತಂ ಚ ಪ್ರೋತಂ ಚೇತಿ ॥ ೩ ॥**

೩. ಆಕೆಯಿಂತೆಂದಳು : ಯಾಜ್ಞವಲ್ಕ್ಯನೆ, ಯಾವದು ದ್ಯುಲೋಕದಮೇಲೂ (ಇದೆಯೋ) ಯಾವದು ಪೃಥಿವಿಯ ಈಚೆಗೂ (ಇದೆಯೋ), ಯಾವದು ದ್ಯಾವಾಪೃಥಿವಿಗಳ ನಡುವೆಯೂ (ಇದೆಯೋ), ಯಾವದನ್ನು ಭೂತವೂ ಭವತ್ತೂ ಭವಿಷ್ಯತ್ತೂ ಎನ್ನುವರೋ, ಅದು ಏತರಲ್ಲಿ ಓತವೂ ಪ್ರೋತವೂ ಆಗಿರುತ್ತದೆ ?"

(ಭಾಷ್ಯ)

೭೫. ಸಾ ಹೋವಾಚ । ಯತ್ ಊರ್ಧ್ವಮ್ ಉಪರಿ ದಿವಃ ಅಣ್ಡಕಪಾಲಾತ್. ಯಚ್ಚ ಅರ್ವಾಕ್ ಅಧಃ ಪೃಥಿವ್ಯಾಃ ಅಧೋಽಣ್ಡಕಪಾಲಾತ್, ಯಚ್ಚ ಅನ್ತರಾ ಮಧ್ಯೇ ದ್ಯಾವಾಪೃಥಿವೀ ದ್ಯಾವಾಪೃಥಿವ್ಯೋಃ ಅಣ್ಡಕಪಾಲಯೋಃ ಇಮೇ ಚ ದ್ಯಾವಾಪೃಥಿವೀ ಯದ್ ಭೂತಂ ಯಚ್ಚ ಅತೀತಂ ಭವಚ್ಚ ವರ್ತಮಾನಂ ಸ್ವವ್ಯಾಪಾರಸ್ಥಂ ಭವಿಷ್ಯಚ್ಚ ವರ್ತಮಾನಾತ್ ಊರ್ಧ್ವಕಾಲಭಾವಿ ಲಿಙ್ಗಗಮ್ಯಮ್- ಯತ್ ಸರ್ವಮೇತತ್ ಆಚಕ್ಷತೇ ಕಥಯನ್ತಿ ಆಗಮತಃ ತತ್ಸರ್ವಂ ದ್ವೈತಜಾತಂ ಯಸ್ಮಿನ್ ಏಕೀಭವತಿ ಇತ್ಯರ್ಥಃ । ತತ್ ಸೂತ್ರಸಂಜ್ಞಂ ಪೂರ್ವೋಕ್ತಂ ಕಸ್ಮಿನ್ ಓತಂ ಚ ಪ್ರೋತಂ ಚ ಪೃಥಿವೀಧಾತುರಿವಾಪ್ಸು?

(ಭಾಷ್ಯಾರ್ಥ)

ಆಕೆಯಿಂತೆಂದಳು: ಯಾವದು ದ್ಯುಲೋಕಕ್ಕಿಂತ (ಅ) ಅಂಡಕಪಾಲಕ್ಕಿಂತ ಆಚೆ, (ಇನ್ನೂ) ಮೇಲೆ ಇರುವದೋ, ಮತ್ತು ಯಾವದು ಪೃಥಿವಿಗಿಂತ ಕೆಳಗಿನ ಅಂಡಕಪಾಲಕ್ಕಿಂತ ಈಚೆಗೆ ಕೆಳಗಡೆಯೂ ಇರುವದೋ, ಮತ್ತು ಯಾವದು (ದ್ಯಾವಾಪೃಥಿವೀ=ದ್ಯಾವಾಪೃಥಿವ್ಯೋಃ) ದ್ಯಾವಾಪೃಥಿವಿಗಳೆಂಬ ಅಂಡಕಪಾಲಗಳ ನಡುವೆಯೂ ಇರುವದೋ, ಯಾವದು ಭೂತವೂ ಆಗಿ ಹೋದದ್ದೂ, ಭವತ್ತೂ (ಈಗ) ತನ್ನ ವ್ಯಾಪಾರದಲ್ಲಿ ಇರುವದೂ, ಭವಿಷ್ಯತ್ತೂ ವರ್ತಮಾನಕ್ಕಿಂತ ಮುಂದಿನ ಕಾಲವಲ್ಲಿ ಆಗತಕ್ಕದ್ದು, (ಆಯಾ) ಲಿಂಗದಿಂದ[1] ಗೊತ್ತಾಗತಕ್ಕದ್ದೂ- ಇದೆಲ್ಲವೂ ಎಂದು ಯಾವದನ್ನು ಆಗಮದಿಂದ ಹೇಳುವರೋ,[2] ಆ ದ್ವೈತಜಾತವೆಲ್ಲವೂ ಯಾವದರಲ್ಲಿ ಒಂದಾಗಿರುವದೋ ಎಂದರ್ಥ. ಆ, ಹಿಂದೆ ಹೇಳಿರುವ, ಸೂತ್ರವೆಂಬ ಹೆಸರಿನ (ತತ್ತ್ವವು), ಪೃಥಿವೀಧಾತುವು ಅಪ್ಪಿನಲ್ಲಿ (ಓತಪ್ರೋತವಾಗಿರುವಂತೆ) ಏತರಲ್ಲಿ ಓತವೂ ಪ್ರೋತವೂ ಆಗಿರುತ್ತದೆ ?

## ಸೂತ್ರವು ಅವ್ಯಾಕೃತಾಕಾಶದಲ್ಲಿ ಓತಪ್ರೋತವಾಗಿದೆ

(ಉಪನಿಷತ್ತು)

**ಸ ಹೋವಾಚ ಯದೂರ್ಧ್ವಂ ಗಾರ್ಗಿ ದಿವೋ ಯದರ್ವಾಕ್ ಪೃಥಿವ್ಯಾ ಯದಂತರಾ ದ್ಯಾವಾಪೃಥಿವೀ ಇಮೇ ಯದ್ಭೂತಂ ಚ ಭವಚ್ಚ ಭವಿಷ್ಯಚ್ಚೇತ್ಯಾಚಕ್ಷತ ಆಕಾಶೇ ತದೋತಂ ಚ ಪ್ರೋತಂ ಚೇತಿ ॥ ೪ ॥**

೪. ಅವನಿಂತೆಂದನು. ಗಾರ್ಗಿಯೆ, ಯಾವದು ದ್ಯುಲೋಕದ ಮೇಲೂ, ಯಾವದು ಪೃಥಿವಿಯ ಈಚೆಗೂ, ಯಾವದು ಈ ದ್ಯಾವಾಪೃಥಿವಿಗಳ ನಡುವೆಯೂ (ಇವೆಯೋ), ಯಾರನ್ನು ಭೂತವೂ ಭವತ್ತೂ ಭವಿಷ್ಯತ್ತೂ ಎನ್ನುವರೋ ಅದು ಆಕಾಶದಲ್ಲಿ ಓತವೂ ಪ್ರೋತವೂ ಆಗಿರುತ್ತದೆ.

---

1. ಚಿಹ್ನೆಯಿಂದ ; ಉದಾಹರಣೆಗೆ ಮೋಡಮಿಂಚುಗಳಿಂದ ಮಳೆ ಬರುವದೆಂದು ಗೊತ್ತು ಮಾಡಬಹುದಾಗಿರುತ್ತದೆ.

2. ನಾನು ಅನುಮಾನದಿಂದ ಹೇಳುತ್ತಿಲ್ಲ, ಇದು ಉಪದೇಶಗಮ್ಯವೆಂದು ಒಪ್ಪಿರುತ್ತೇನೆ- ಎಂಬುದನ್ನು ಆಚಕ್ಷತೇ ಎಂಬ ಮಾತು ಸೂಚಿಸುತ್ತದೆ ಎಂದು ಭಾವ.

## ಸೂತ್ರವು ಯಾವಾಗಲೂ ಅವ್ಯಾಕೃತದಲ್ಲಿಯೇ ಹೆಣೆದುಕೊಂಡಿರುತ್ತದೆ

(ಭಾಷ್ಯ)

೭೬. ಸ ಹೋವಾಚ ಚೇತರಃ । ಹೇ ಗಾರ್ಗಿ । ಯತ್ ತ್ವಯೋಕ್ತಮ್ ಊರ್ಧ್ವಂ ದಿವಃ ಇತ್ಯಾದಿ ತತ್ಸರ್ವಂ ಯತ್ ಸೂತ್ರಮ್ ಆಚಕ್ಷತೇ, ತತ್ ಸೂತ್ರಂ ಆಕಾಶೇ[1] ಓತಂ ಚ ಪ್ರೋತಂ ಚ । ಯದೇತತ್ ವ್ಯಾಕೃತಂ ಸೂತ್ರಾತ್ಮಕಂ ಜಗತ್ ಅವ್ಯಾಕೃತಾಕಾಶೇ ಅಪ್ಸ್ವಿವ ಪೃಥಿವೀಧಾತುಸ್ತ್ರಿಷ್ವಪಿ ಕಾಲೇಷು ವರ್ತತೇ ಉತ್ಪತ್ತೌ, ಸ್ಥಿತೌ, ಲಯೇ ಚ ॥

(ಭಾಷ್ಯಾರ್ಥ)

ಆ ಇನ್ನೊಬ್ಬ(ನಾದ ಯಾಜ್ಞವಲ್ಕ್ಯ)ನಿಂತೆಂದನು: ಎಲೌ ಗಾರ್ಗಿ, ನೀನು ದ್ಯುಲೋಕಕ್ಕಿಂತ ಮೇಲೆ ಎಂದು ಮುಂತಾಗಿ ನೀನು ಹೇಳಿದೆಯಲ್ಲ, ಅದೆಲ್ಲವೂ- ಸೂತ್ರವೆಂದು ಕರೆಯುತ್ತಾರಲ್ಲ, ಆ ಸೂತ್ರವು ಆಕಾಶದಲ್ಲಿ ಓತವೂ ಪ್ರೋತವೂ ಆಗಿರುತ್ತದೆ. ಈ ವ್ಯಾಕೃತವಾದ ಸೂತ್ರಾತ್ಮಕವಾಗಿರುವ ಜಗತ್ತಿದೆಯಲ್ಲ, ಇದು ಅವ್ಯಾಕೃತಾಕಾಶದಲ್ಲಿ, ಅಪ್ಪಿನಲ್ಲಿ ಪೃಥಿವೀಧಾತುವಿನಂತೆ ಉತ್ಪತ್ತಿಯಲ್ಲಿ, ಸ್ಥಿತಿಯಲ್ಲಿ, ಮತ್ತು ಲಯದಲ್ಲಿ- (ಈ) ಮೂರು ಕಾಲಗಳಲ್ಲಿಯೂ[2] ಇದ್ದುಕೊಂಡಿದೆ.

## ಎರಡನೆಯ ಪ್ರಶ್ನೆಗೆ ಗಾರ್ಗಿಯ ಪ್ರತಿಜ್ಞೆ

(ಉಪನಿಷತ್ತು)

**ಸ ಹೋವಾಚ ನಮಸ್ತೇಽಸ್ತು ಯಾಜ್ಞವಲ್ಕ್ಯ । ಯೋ ಮ ಏತಂ ವ್ಯವೋಚೋಽಪರಸ್ಮೈ ಧಾರಯಸ್ವೇತಿ ಪೃಚ್ಛ ಗಾರ್ಗೀತಿ॥**

೫. ಆಕೆಯಿಂತೆಂದಳು: "ಯಾಜ್ಞವಲ್ಕ್ಯನೆ, ನಿನಗೆ ನಮಸ್ಕಾರ! ಏಕೆಂದರೆ ನನ್ನ ಪ್ರಶ್ನೆಯನ್ನು (ಬಿಡಿಸಿ) ಹೇಳಿರುತ್ತೀಯೆ. ಇನ್ನೊಂದು (ಪ್ರಶ್ನೆ)ಗೆ ಗಟ್ಟಿಮಾಡಿಕೊ!" "ಗಾರ್ಗಿಯೆ, ಕೇಳು" (ಎಂದನು).

(ಭಾಷ್ಯ)

೭೭. ಪುನಃ 'ಸಾ ಹೋವಾಚ । ನಮಸ್ತೇಽಸ್ತು' ಇತ್ಯಾದಿ ಪ್ರಶ್ನಸ್ಯ ದುರ್ವಚತ್ವಪ್ರದರ್ಶನಾರ್ಥಮ್ । ಯೋ ಮೇ ಮಮ ಏತಂ ಪ್ರಶ್ನಂ

---

1. ಇದರ ಹಿಂದಿನ 'ತತ್' ಬೇಕಿಲ್ಲವೆಂದು ಬಿಟ್ಟಿದೆ.
2. ವ್ಯವಹಾರದೃಷ್ಟಿಯಿಂದ ಹೇಳಿದ ಮಾತಿದು. ನಿಜವಾಗಿ ಅವ್ಯಾಕೃತವು ತ್ರಿಕಾಲಾತೀತವಾಗಿದೆ. ಮಾಂ.ಭಾ. (ಭಾ.ಭಾ.೩)ನ್ನು ನೋಡಿ.

ವ್ಯವೋಚಃ ವಿಶೇಷೇಣ ಅಪಾಕೃತವಾನ್ ಅಸಿ। ಏತಸ್ಯ ದುರ್ವಚತ್ವೇ ಕಾರಣಂ ಸೂತ್ರಮೇವ ತಾವತ್ ಅಗಮ್ಯಮ್, ಇತರೈರ್ದುರ್ವಾಚ್ಯಮ್ । ಕಿಮ.ತ ತತ್ ಯಸ್ಮಿನ್ ಓತಂ ಚ ಪ್ರೋತಂ ಚೇತಿ। ಅತೋ ನಮಸ್ತೇಽಸ್ತು ತೇ ತುಭ್ಯಮ್, ಅಪರಸ್ಮೈ ದ್ವಿತೀಯಾಯ ಪ್ರಶ್ನಾಯ ಧಾರಯಸ್ವ ದೃಢೀಕುರು ಆತ್ಮಾನಮ್ ಇತ್ಯರ್ಥಃ। ಪೃಚ್ಛ ಗಾರ್ಗಿ ಇತೀತರ ಆಹ ॥

(ಭಾಷ್ಯಾರ್ಥ)

ಮತ್ತೂ 'ಆಕೆಯಿಂತೆಂದಳು : (ಯಾಜ್ಞವಲ್ಕ್ಯನೆ) ನಿನಗೆ ನಮಸ್ಕಾರ!' ಎಂದು ಮುಂತಾಗಿ (ಬಂದಿರುವ ವಾಕ್ಯವು ಈ) ಪ್ರಶ್ನೆಗೆ (ಉತ್ತರವನ್ನ) ಹೇಳುವದು ಕಷ್ಟವೆಂದು ತಿಳಿಸುವದಕ್ಕೆ. (ನೀನು ಮೇ=ಮಮ) ನನ್ನ ಈ ಪ್ರಶ್ನೆಯನ್ನು (ಬಿಡಿಸಿ) ಹೇಳಿದೆಯಲ್ಲ, (ವ್ಯವೋಚಃ=ವಿಶೇಷೇಣ ಅಪಾಕೃತ ವಾನ್) ವಿಶೇಷವಾಗಿ (ಹೀಗೆಯೇ ಎಂದು) ಉತ್ತರಕೊಟ್ಟವನಾಗಿರುತ್ತೀಯಲ್ಲ, — ಈ ಪ್ರಶ್ನೆಗೆ ಉತ್ತರವನ್ನು ಹೇಳುವದು ಕಷ್ಟವೆನ್ನುವದಕ್ಕೆ ಕಾರಣವೇನೆಂದರೆ ಮೊದಲನೆಯದಾಗಿ ಸೂತ್ರವೇ ಆಗಮ್ಯವು, ಇನ್ನೊಬ್ಬರು (ವಿವರಿಸಿ) ಹೇಳುವದಕ್ಕೆ ಕಷ್ಟವಾದದ್ದು; ಇನ್ನು ಅದು ಏತರಲ್ಲಿ ಓತವೂ ಪ್ರೋತವೂ ಆಗಿರುತ್ತದೆಯೋ ಅದು (ಕಷ್ಟವೆಂಬು) ಹೇಳುವದೇನು? ಆದ್ದರಿಂದ (ತೇ= ತುಭ್ಯಂ) ನಿನಗೆ ನಮಸ್ಕಾರವಿರಲಿ! ಮತ್ತೊಂದಕ್ಕೆ ಎರಡನೆಯ ಪ್ರಶ್ನೆಗೆ ಗಟ್ಟಿಮಾಡಿಕೊ, (ಉತ್ತರಹೇಳುವದಕ್ಕೆ) ನಿನ್ನನ್ನು ದೃಢವಾಗಿರಿಸಿಕೊ ಎಂದರ್ಥ. ಇನ್ನೊಬ್ಬನಾದ (ಯಾಜ್ಞವಲ್ಕ್ಯನು) "ಗಾರ್ಗಿಯೆ, ಕೇಳು?" ಎಂದನು.

## ಹಿಂದಿನ ಪ್ರಶ್ನೆಯ ಅನುವಾದ

(ಉಪನಿಷತ್ತು)

**ಸಾ ಹೋವಾಚ ಯದೂರ್ಧ್ವಂ ಯಾಜ್ಞವಲ್ಕ್ಯ ದಿವೋ ಯದವಾರ್ಕ್ ಪೃಥಿವ್ಯಾ ಯದನ್ತರಾ ದ್ಯಾವಾಪೃಥಿವೀ ಇಮೇ ಯದ್ ಭೂತಂ ಚ ಭವಚ್ಚ ಭವಿಷ್ಯಚ್ಚೇತ್ಯಾಚಕ್ಷತೇ ಕಸ್ಮಿಗ್‌ಂಸ್ತದೋತಂ ಚ ಪ್ರೋತಂ ಚೇತಿ ॥ ೬ ॥**

೬. ಆಕೆಯಿಂತೆಂದಳು: "ಯಾಜ್ಞವಲ್ಕ್ಯನೆ, ಯಾವದು ದ್ಯುಲೋಕದ ಮೇಲೆಯೂ (ಇದೆಯೋ), ಯಾವದು ಪೃಥಿವಿಯ ಈಚೆಗೂ (ಇದೆಯೋ), ಯಾವದು ಭೂತವೂ ಭವತ್ತೂ ಭವಿಷ್ಯತ್ತೂ ಎನ್ನಿಸುವದೋ, ಅದು ಏತರಲ್ಲಿ ಓತವೂ ಪ್ರೋತವೂ ಆಗಿರುತ್ತದೆಯೊ!

(ಭಾಷ್ಯ)

೭೮. ವ್ಯಾಖ್ಯಾತಮನ್ಯತ್ । ಸಾ ಹೋವಾಚ । ಯದೂರ್ಧ್ವಂ ಯಾಜ್ಞವಲ್ಕ್ಯೇತ್ಯಾದಿ ಪ್ರಶ್ನಃ ಪ್ರತಿವಚನಂ ಚ ಉಕ್ತಸ್ಯೈವ ಅರ್ಥಸ್ಯ ಅವಧಾರಣಾರ್ಥಂ ಪುನರುಚ್ಯತೇ, ನ ಕಿಂಚಿತ್ ಅಪೂರ್ವಮ್ ಅರ್ಥಾನ್ತರಮ್ ಉಚ್ಯತೇ ॥

(ಭಾಷ್ಯಾರ್ಥ)

ಮಿಕ್ಕದ್ದನ್ನು[1] ವ್ಯಾಖ್ಯಾನಮಾಡಿದೆ. ಆಕೆಯಿಂತೆಂದಳು : "ಯಾಜ್ಞವಲ್ಕ್ಯನೆ, ಯಾವದು (ದ್ಯುಲೋಕಕ್ಕಿಂತ) ಮೇಲೆಯೋ . ." ಮುಂತಾದ ಪ್ರಶ್ನೆಯನ್ನೂ (ಅದಕ್ಕೆ ಯಾಜ್ಞವಲ್ಕ್ಯನ) ಉತ್ತರವನ್ನೂ ಹಿಂದೆ ಹೇಳಿರುವ ವಿಷಯವನ್ನೇ ಒತ್ತಿಹೇಳುವದಕ್ಕಾಗಿ ಮತ್ತೆ ಹೇಳಿಕೊಂಡಿದೆ ; ಹೊಸದಾಗಿ ಮತ್ತೆ (ಹೊಸ) ವಿಷಯವನ್ನೂ (ಇಲ್ಲಿ) ಹೇಳಿಲ್ಲ[2].

## ಯಾಜ್ಞವಲ್ಕ್ಯನ ಉತ್ತರದ ಅನುವಾದವೂ ಹೊಸಪ್ರಶ್ನೆಯೂ

(ಉಪನಿಷತ್ತು)

**ಸ ಹೋವಾಚ ಯದೂರ್ಧ್ವಂ ಗಾರ್ಗಿ ದಿವೋ ಯದರ್ವಾಕ್ ಪೃಥಿವ್ಯಾ ಯದನ್ತರಾ ದ್ಯಾವಾಪೃಥಿವೀ ಇಮೇ ಯದ್ಭೂತಂ ಚ ಭವಚ್ಚ ಭವಿಷ್ಯಚ್ಚೇತ್ಯಾಚಕ್ಷತ ಆಕಾಶ ಏವ ತದೋತಂ ಚ ಪ್ರೋತಂ ಚೇತಿ ಕಸ್ಮಿನ್ನು ಖಲ್ವಾಕಾಶ ಓತಶ್ಚ ಪ್ರೋತಶ್ಚೇತಿ ॥**

೭. ಅವನಿಂತೆಂದನು : ಗಾರ್ಗಿಯೆ, ಯಾವದು ದ್ಯುಲೋಕಕ್ಕಿಂತ ಮೇಲೆಯೂ (ಇರುವದೋ), ಯಾವದು ಪೃಥಿವಿಗಿಂತಲೂ ಈಚೆಗೂ (ಇರುವದೋ) ಯಾವದು ದ್ಯಾವಾಪೃಥಿವಿಗಳ ನಡುವೆಯೂ (ಇರುವದೋ), ಯಾವದು ಭೂತವೂ ಭವತ್ತೂ ಭವಿಷ್ಯತ್ತೂ- ಎನ್ನುಹರೋ ಅದು ಆಕಾಶದಲ್ಲಿ ಓತವೂ ಪ್ರೋತವೂ ಆಗಿದೆ.'' (ಗಾರ್ಗಿಯ ಪ್ರಶ್ನೆ) : ಆಕಾಶವು ಏತರಲ್ಲಿ ಓತವೂ ಪ್ರೋತವೂ ಆಗಿರುತ್ತದೆಯೊ !

---

1. ಅನ್ಯತ್ ಎಂಬುದು ಮೂಲಭಾಷ್ಯಕ್ಕೆ ಈಚೆಗೆ ಸೇರಿದ್ದರೂ ಸೇರಿರಬಹುದು. ಇದನ್ನು ಆಗಲೆ ವ್ಯಾಖ್ಯಾನಮಾಡಿದೆ. ಇವರ ತಾತ್ಪರ್ಯವನ್ನು ಮಾತ್ರ ಹೇಳುತ್ತೇವೆ ಎಂಬುದು ಭಾಷ್ಯಾರ್ಥ.

2. ಹೀಗೆ ವಾದಿಪ್ರತಿವಾದಿಗಳು ಮುಂದಕ್ಕೆ ಹೋಗುವಾಗ ಹಿಂದಿನ ಪ್ರಶ್ನೋತ್ತರಗಳನ್ನು ಮತ್ತೊಂದು ಸಲ ಅವಧಾರಣೆಮಾಡಿ, ಮುಂದುವರಿಯುವದು ಈಗಲೂ ರೂಢಿಯಲ್ಲಿದೆ.

(ಭಾಷ್ಯ)

೭೯. ಸರ್ವಂ ಯಥೋಕ್ತಂ ಗಾರ್ಗ್ಯಾ ಪ್ರತ್ಯುಚ್ಚಾರ್ಯ ತದೇವ ಪೂರ್ವೋಕ್ತಮರ್ಥಮವಧಾರಿತವಾನ್ ಆಕಾಶ ಏವೇತಿ ಯಾಜ್ಞವಲ್ಕ್ಯಃ। ಗಾರ್ಗೀ ಆಹ। ಕಸ್ಮಿನ್ನು ಖಲು ಆಕಾಶ ಓತಶ್ಚ ಪ್ರೋತಶ್ಚೇತಿ। ಆಕಾಶಮೇವ ತಾವತ್ ಕಾಲತ್ರಯಾತೀತತ್ವಾತ್ ದುರ್ವಾಚ್ಯಮ್। ತತೋಽಪಿ ಕಷ್ಟತರಮ್ ಅಕ್ಷರಂ ಯಸ್ಮಿನ್ ಆಕಾಶಮೋತಂ ಚ ಪ್ರೋತಂ ಚ। ಅತೋಽವಾಚ್ಯಮ್ ಇತಿ ಕೃತ್ವಾ ನ ಪ್ರತಿಪದ್ಯತೇ ಸಾ ಅಪ್ರತಿಪತ್ತಿರ್ನಾಮ ನಿಗ್ರಹಸ್ಥಾನಂ ತಾರ್ಕಿಕ ಸಮಯೇ। ಅಥ ಅವಾಚ್ಯಮಪಿ ವಕ್ಷ್ಯತಿ ತಥಾಪಿ ವಿಪ್ರತಿಪತ್ತಿರ್ನಾಮ ನಿಗ್ರಹಸ್ಥಾನಮ್। ವಿರುದ್ಧಾ ಪ್ರತಿಪತ್ತಿರ್ಹಿ ಸಾ ಯದವಾಚ್ಯಸ್ಯ ವದನಮ್। ಅತೋ ದುರ್ವಚನಂ ಪ್ರಶ್ನಂ ಮನ್ಯತೇ ಗಾರ್ಗೀ॥

(ಭಾಷ್ಯಾರ್ಥ)

ಗಾರ್ಗಿಯು ಹೇಳಿದಂತೆಯೇ ಎಲ್ಲವನ್ನೂ ತಿರುಗಿ ಹೇಳಿ ಹಿಂದೆ ಹೇಳಿದ ಅದನ್ನೇ– ಆಕಾಶದಲ್ಲಿಯೇ (ಓತವೂ ಪ್ರೋತವೂ ಆಗಿದೆ) ಎಂದು– ಯಾಜ್ಞವಲ್ಕ್ಯನು ಒತ್ತಿ ಹೇಳಿದನು. ಗಾರ್ಗಿ ಕೇಳುತ್ತಾಳೆ: 'ಆಕಾಶವು ಏತರಲ್ಲಿ ಓತವೂ ಪ್ರೋತವೂ ಆಗಿದೆಯೊ!' ಮೊದಲನೆಯದಾಗಿ **ಆಕಾಶವೇ ಕಾಲತ್ರಯವನ್ನು ಮೀರಿರುವದರಿಂದ ಹೇಳುವದಕ್ಕೆ ಕಷ್ಟವಾದದ್ದು, ಆ ಆಕಾಶವು ಏತರಲ್ಲಿ ಓತವೂ ಪ್ರೋತವೂ ಆಗಿದೆಯೋ (ಆ) ಅಕ್ಷರವು ಇನ್ನೂ ಕಷ್ಟವಾದದ್ದು[1], ಆದ್ದರಿಂದ (ಅದು) ಅವಾಚ್ಯವು ಎಂದು (ಹೇಳುವದಕ್ಕೆ) ತಿಳಿಯದೆಹೋದರೆ ಅದು ತಾರ್ಕಿಕರ ಸಮಯದಲ್ಲಿ ಅಪ್ರತಿಪತ್ತಿ ಎಂಬ ನಿಗ್ರಹಸ್ಥಾನವು.[2] ಹೀಗಿಲ್ಲದೆ ಅವಾಚ್ಯವನ್ನು ಹೇಳಿದರೊ ಎಂದರೆ, ಹಾಗಾದರೂ ವಿಪ್ರತಿಪತ್ತಿ ಎಂಬ ನಿಗ್ರಹಸ್ಥಾನ (ವಾಗುವದು); ಅವಾಚ್ಯವಾದದ್ದನ್ನು ಹೇಳುವದೆಂಬುದು ವಿರುದ್ಧವಾದ ತಿಳಿವಳಿಕೆಯಲ್ಲವೆ? ಆದ್ದರಿಂದ (ಈ) ಪ್ರಶ್ನೆಯನ್ನು (ಬಿಡಿಸಿ) ಹೇಳುವದು ಕಷ್ಟ ಎಂದು ಗಾರ್ಗಿಯು ಭಾವಿಸಿರುತ್ತಾಳೆ.**

---

1. ಜಗತ್ಕಾರಣರೂಪವಾದದ್ದನ್ನು ತಿಳಿಯುವದೇ ಕಷ್ಟ; ಕಾರ್ಯಕಾರಣಭಾವವಿಲ್ಲದ ಪರಮಾರ್ಥವನ್ನು ತಿಳಿಯುವದು ಇನ್ನೂ ಕಷ್ಟ.

2. ವಾದಿಪ್ರತಿವಾದಿಗಳಲ್ಲಿ ಒಬ್ಬರ ಪ್ರಶ್ನೆಗೆ ಇನ್ನೊಬ್ಬರಿಗೆ ಉತ್ತರವು ಹೊಳೆಯದೆ ಇದ್ದರೆ ಅಪ್ರತಿಪತ್ತಿ ಎಂಬ ಸೋಲಿನ ಗುರುತು ಎಂದು ತಾರ್ಕಿಕರ ಸಂಕೇತ. ನ್ಯಾಯಸೂತ್ರದಲ್ಲಿ ಇದೇ ಶಬ್ದದಿಂದ ಹೇಳಿರುವ ನಿಗ್ರಹಸ್ಥಾನಗಳು ಕಾಣಿಸುವದಿಲ್ಲವಾದರೂ ಈ ಅರ್ಥದ ನಿಗ್ರಹಸ್ಥಾನಗಳಿವೆ. ೫-೨-೧೮,೨೩- ಈ ಸೂತ್ರಗಳನ್ನು ನೋಡಿ.

# ಅವ್ಯಾಕೃತವು ಅಕ್ಷರದಲ್ಲಿ ಓತಪ್ರೋತ

(ಉಪನಿಷತ್ತು)

**ಸ ಹೋವಾಚೈತದ್ ವೈ ತದಕ್ಷರಂ ಗಾರ್ಗಿ ಬ್ರಾಹ್ಮಣಾ ಅಭಿ ವದನ್ತ್ಯಸ್ಥೂಲಮನಣ್ವಹ್ರಸ್ವಮದೀರ್ಘಮಲೋಹಿತಮಸ್ನೇಹ ಮಚ್ಛಾಯಮತಮೋಽವಾಯ್ವನಾಕಾಶಮಸಙ್ಗಮರಸಮಗನ್ಧ ಮಚಕ್ಷುಷ್ಕಮಶ್ರೋತ್ರಮವಾಗಮನೋಽತೇಜಸ್ಕಮಪ್ರಾಣ ಮಮುಖಮಮಾತ್ರಮನನ್ತರಮಬಾಹ್ಯಂ ನ ತದಶ್ನಾತಿ ಕಿಂ ಚನ ನ ತದಶ್ನಾತಿ ಕಶ್ಚನ ॥ ೮ ॥**

೮.' ಅವನಿಂತೆಂದನು : ಗಾರ್ಗಿಯೆ, ಇದೇ ಆ ಅಕ್ಷರವು ಎಂದು ಬ್ರಾಹ್ಮಣರು ಹೇಳುತ್ತಾರೆ. (ಇದು) ಅಸ್ಥೂಲವು, ಅನಣು, ಅಹ್ರಸ್ವವು, ಅದೀರ್ಘವು ; ಅಲೋಹಿತವು, ಅಸ್ನೇಹವು, ಅಚ್ಛಾಯವು, ಅತಮವು, ಅವಾಯು, ಅನಾಕಾಶವು, ಅಸಂಗವು, ಅರಸವು, ಅಗಂಧವು, ಅಚಕ್ಷುಷ್ಕವು, ಅಶ್ರೋತ್ರವು, ಅವಾಕ್ಕು, ಅಮನವು, ಅತೇಜಸ್ಕವು, ಅಪ್ರಾಣವು, ಅಮುಖವು, ಅಮಾತ್ರವು, ಅನನ್ತರವು, ಅಬಾಹ್ಯವು. ಅದು ಏನನ್ನೂ ತಿನ್ನುವದಿಲ್ಲ, ಅದನ್ನು ಯಾವದೂ ತಿನ್ನುವದಿಲ್ಲ.

(ಭಾಷ್ಯ)

೮೦. ತದ್ ದೋಷದ್ವಯಮಪಿ ಪರಿಜಿಹೀರ್ಷನ್ ಆಹ। ಸ ಹೋವಾಚ ಯಾಜ್ಞವಲ್ಕ್ಯಃ। ಏತದ್ ವೈ ತದ್ ಯತ್ ಪೃಷ್ಟವತ್ಯಸಿ 'ಕಸ್ಮಿನ್ನು ಖಲ್ವಾಕಾಶ ಓತಶ್ಚ ಪ್ರೋತಶ್ಚ' ಇತಿ। ಕಿಂ ತತ್? ಅಕ್ಷರಂ ಯತ್ ನ ಕ್ಷೀಯತೇ, ನ ಕ್ಷರತಿ ಇತಿ ವಾ ಅಕ್ಷರಮ್। ತದಕ್ಷರಂ ಹೇ ಗಾರ್ಗಿ ಬ್ರಾಹ್ಮಣಾ ಬ್ರಹ್ಮವಿದಃ ಅಭಿವದನ್ತಿ। ಬ್ರಾಹ್ಮಣಾಭಿವದನಕಥನೇನ ನಾಹಮ್ ಅವಾಚ್ಯಂ ವಕ್ಷ್ಯಾಮಿ ನ ಚ ನ ಪ್ರತಿಪದ್ಯೇಯಮ್ ಇತ್ಯೇವಂ ದೋಷದ್ವಯಂ ಪರಿಹರತಿ। ಏವಮ್ ಅಪಾಕೃತೇ ಪ್ರಶ್ನೇ ಪುನರ್ಗಾರ್ಗ್ಯಾಃ ಪ್ರತಿವಚನಮ್ ದ್ರಷ್ಟವ್ಯಂ ಬ್ರೂಹಿ ಕಿಂ ತದಕ್ಷರಂ ಯದ್ ಬ್ರಾಹ್ಮಣಾ ಅಭಿವದನ್ತೀತಿ[1]। ಇತ್ಯುಕ್ತ ಆಹ– ಅಸ್ಥೂಲಂ ತತ್, ಸ್ಥೂಲಾತ್ ಅನ್ಯತ್। ತರ್ಹಿ ಅಣು, ಅನಣು। ಅಸ್ತು ತರ್ಹಿ ಹ್ರಸ್ವಮ್, ಅಹ್ರಸ್ವಮ್। ಏವಂ ತರ್ಹಿ ದೀರ್ಘಮ್, ನಾಪಿ

---

1. ಇಷ್ಟೊಂದು ಇತಿಯು ಬೇಕೆಂದು ಸೇರಿಸಿಕೊಂಡಿದೆ ; ಇದಿಲ್ಲದಿದ್ದರೆ ಇದನ್ನು ಅಧ್ಯಾಹಾರಮಾಡಿಕೊಂಡು ಅನ್ವಯಿಸಬೇಕಾಗುವದು.

ದೀರ್ಘಮ್ ಅದೀರ್ಘಮ್ । ಏವಮ್ ಏತೈಶ್ಚತುರ್ಭಿಃ ಪರಿಮಾಣಪ್ರತಿಷೇಧೈಃ ದ್ರವ್ಯಧರ್ಮಾಃ ಪ್ರತಿಷಿದ್ಧಾಃ । ನ ದ್ರವ್ಯಂ ತದಕ್ಷರಮ್ ಇತ್ಯರ್ಥಃ । ಅಸ್ತು ತರ್ಹಿ ಲೋಹಿತೋ ಗುಣಃ, ತತೋಽಪ್ಯನ್ಯತ್ ಅಲೋಹಿತಮ್ । ಆಗ್ನೇಯೋ ಗುಣೋ ಲೋಹಿತಃ । ಭವತು ತರ್ಹಿ ಅಪಾಂ ಸ್ನೇಹನಮ್ । ನ । ಅಸ್ನೇಹಮ್ । ಅಸ್ತು ತರ್ಹಿ ಛಾಯಾ ಸರ್ವಥಾಪಿ ಅನಿರ್ದೇಶ್ಯತ್ವಾತ್ । ಛಾಯಾಯಾ ಅಪ್ಯನ್ಯತ್ ಅಚ್ಛಾಯಮ್ । ಅಸ್ತು ತರ್ಹಿ ತಮಃ, ಅತಮಃ । ಭವತು ವಾಯುಸ್ತರ್ಹಿ ಅವಾಯುಃ । ಭವೇತ್ ತರ್ಹಿ ಆಕಾಶಮ್, ಅನಾಕಾಶಮ್ । ಭವತು ತರ್ಹಿ ಸಙ್ಗಾತ್ಮಕಂ ಜತುವತ್, ಅಸಙ್ಗಮ್ । ರಸೋಽಸ್ತು ತರ್ಹಿ, ಅರಸಮ್ । ತಥಾ ಗನ್ಧೋಽಸ್ತು,[1] ಅಗನ್ಧಮ್ । ಅಸ್ತು ತರ್ಹಿ ಚಕ್ಷುಷ್ಕಮ್,[2] ಅಚಕ್ಷುಷ್ಕಮ್ । ನ ಹಿ ಚಕ್ಷುರಸ್ಯ ಕರಣಂ ವಿದ್ಯತೇ । ಅತೋಽಚಕ್ಷುಷ್ಕಮ್ । "ಪಶ್ಯತ್ಯಚಕ್ಷುಃ" (ಶ್ವೇ.೩-೧೯) ಇತಿ ಮನ್ತ್ರವರ್ಣಾತ್ । ತಥಾ ಅಶ್ರೋತ್ರಮ್ । "ಸ ಶೃಣೋತ್ಯಕರ್ಣಃ" (ಶ್ವೇ ೩-೧೯) ಇತಿ । ಭವತು ತರ್ಹಿ ವಾಕ್ । ಅವಾಕ್ । ತಥಾ ಅಮನಃ । ತಥಾ ಅತೇಜಸ್ಕಮ್, ಅವಿದ್ಯಮಾನಂ ತೇಜಃ ಅಸ್ಯ, ತದತೇಜಸ್ಕಮ್ । ನ.ಹಿ ತೇಜಃ ಅಗ್ನ್ಯಾದಿಪ್ರಕಾಶವತ್ ಅಸ್ಯ ವಿದ್ಯತೇ । ಅಪ್ರಾಣಮ್ । ಆಧ್ಯಾತ್ಮಿಕೋ ವಾಯುಃ ಪ್ರತಿಷಿಧ್ಯತೇ ಅಪ್ರಾಣಮಿತಿ । ಮುಖಂ ತರ್ಹಿ ದ್ವಾರಮ್, ಅಮುಖಮ್ । ಅಮಾತ್ರಮ್ । ಮೀಯತೇ ಯೇನ ತತ್ ಮಾತ್ರಮ್ । ಅಮಾತ್ರಂ ಮಾತ್ರಾರೂಪಂ ತನ್ನ ಭವತಿ । ನ ತೇನ ಕಿಂಚಿನ್ಮೀಯತೇ । ಅಸ್ತು ತರ್ಹಿ ಛಿದ್ರವತ್ ಅನನ್ತರಮ್ ನಾಸ್ಯಾನ್ತರಮ್ ಅಸ್ತಿ । ಸಂಭವೇತ್ ತರ್ಹಿ ಬಹಿಸ್ತಸ್ಯ, ಅಬಾಹ್ಯಮ್ । ಅಸ್ತು ತರ್ಹಿ ಭಕ್ಷಯಿತೃ ತತ್ । ನ ತದಶ್ನಾತಿ ಕಿಂಚನ । ಭವೇತ್ ತರ್ಹಿ ಭಕ್ಷ್ಯಂ ಕಸ್ಯಚಿತ್ ನ ತದಶ್ನಾತಿ ಕಶ್ಚನ । ಸರ್ವವಿಶೇಷಣರಹಿತಮ್ ಇತ್ಯರ್ಥಃ । ಏಕಮೇವಾದ್ವಿತೀಯಂ ಹಿ ತತ್, ಕೇನ ಕಿಂ ವಿಶೇಷ್ಯತೇ ?[3]

(ಭಾಷ್ಯಾರ್ಥ)

ಆ ಎರಡು ದೋಷಗಳನ್ನೂ ಪರಿಹರಿಸುವದಕ್ಕಾಗಿ ಹೇಳುತ್ತಿದಾನೆ. ಆ ಯಾಜ್ಞವಲ್ಕ್ಯನಿಂತೆಂದನು : ಆಕಾಶವು ಏತರಲ್ಲಿ ಓತವೂ ಪ್ರೋತವೂ ಆಗಿದೆ ಎಂದು ಕೇಳಿದೆಯಲ್ಲ, ಇದೇ ಅದು. ಅದು ಯಾವದು ? ಅಕ್ಷರವು. ಯಾವದು ಕ್ಷಯವಾಗುವದಿಲ್ಲವೋ ಅಥವಾ ಮಾರ್ಪಡುವದಿಲ್ಲವೋ ಆ ಕಾರಣದಿಂದ (ಅದು)

---

1. ಈ ಮಾತು ಮೂಲಕ್ಕೆ ಸೇರಿದ್ದೋ ಅಲ್ಲವೋ ಸಂಶಯಾಸ್ಪದವಾಗಿದೆ ; ಇದಿಲ್ಲದಿದ್ದರೂ ಸಾಗುತ್ತದೆ.

2. ಚಕ್ಷುಃ ಎಂಬುದನ್ನು ಹೀಗೆಂದು ತಿದ್ದಿಕೊಂಡಿದೆ.

3. ವಿಶಿಷ್ಯತೇ ಎಂಬ ಪಾಠವನ್ನು ಬಿಟ್ಟು ಇದನ್ನೇ ಅಂಗೀಕರಿಸಿದೆ.

ಅಕ್ಷರವೆನಿಸಿರುತ್ತದೆ[1]. ಇದೇ ಅಕ್ಷರವೆಂದು ಬ್ರಾಹ್ಮಣರು, ಬ್ರಹ್ಮಜ್ಞಾನಿಗಳು ಹೇಳುತ್ತಾರೆ. **ಬ್ರಾಹ್ಮಣರು ಹೇಳುತ್ತಾರೆಂದದ್ದರಿಂದ ನಾನು ಅವಾಚ್ಯವಾದದ್ದನ್ನು ಹೇಳುತ್ತಲೂ ಇಲ್ಲ, ಅರಿಯೆನೆಂದು ಹೇಳುವದೂ ಇಲ್ಲ –ಎಂದು ಎರಡು ದೋಷಗಳನ್ನೂ ಪರಿಹರಿಸಿರುತ್ತಾನೆ[2].**

ಹೀಗೆಂದು ಪ್ರಶ್ನೆಗೆ (ಉತ್ತರವನ್ನು ಹೇಳಿ) ಪರಿಹರಿಸಲು ಮತ್ತೆ ಗಾರ್ಗಿಯು "ಬ್ರಾಹ್ಮಣರು ಹೇಳುತ್ತಾರೆಂದೆಯಲ್ಲ, ಆ ಅಕ್ಷರವು ಯಾವದು ಹೇಳು!" ಎಂದು ಮತ್ತೆ ಕೇಳಿದಳೆಂದು ಇಟ್ಟುಕೊಳ್ಳಬೇಕು. ಹೀಗೆನ್ನಲು ಯಾಜ್ಞವಲ್ಕ್ಯನು ಹೇಳುತ್ತಾನೆ. ಅಸ್ಥೂಲವು, ದಪ್ಪವಾಗಿರುವದಕ್ಕಿಂತ ಬೇರೆ! ಹಾಗಾದರೆ ಅಣುವೆ? ಅನಣು. ಹಾಗಾದರೆ ಹ್ರಸ್ವವೆಂದಾಗಲಿ! ಎಂದರೆ ಅಹ್ರಸ್ವವು; ಹೀಗಾದರೆ ಉದ್ದಕ್ಕಿರುವದೆಂ(ದಾಯಿತು) ಎಂದರೆ ಉದ್ದವೂ ಅಲ್ಲ, ಅದೀರ್ಘವು. **ಹೀಗೆ ಈ ನಾಲ್ಕು(ಬಗೆಯ) ಪರಿಮಾಣಗಳನ್ನೂ ಅಲ್ಲಗಳೆದದ್ದರಿಂದ ದ್ರವ್ಯಧರ್ಮವನ್ನು ಅಲ್ಲಗಳೆದಂತೆ ಆಯಿತು. ಆ ಅಕ್ಷರವು ದ್ರವ್ಯವಲ್ಲ ಎಂದರ್ಥ[3].** ಹಾಗಾದರೆ ಕೆಂಪೆಂಬ ಗುಣವಾಗಲಿ, ಎಂದರೆ ಅದಕ್ಕಿಂತಲೂ ಬೇರೆಯೇ, ಅಲೋಹಿತವು ಕೆಂಪೆಂಬುದು ಅಗ್ನಿಯ ಗುಣವು. (ಅಗ್ನಿಯ ಗುಣವಲ್ಲವೊ?) ಹಾಗಾದರೆ ಅಪ್ಪಿನ ಅಂಟಿಂಬ (ಗುಣ)ವಾಗಲಿ! ಎಂದರೆ ಅಸ್ನೇಹವು. ಹಾಗಾದರೆ ನೆರಳು ಎಂದಾಗಲಿ, ಏಕೆಂದರೆ ಹೇಗೂ (ಅದನ್ನು) ಗೊತ್ತುಪಡಿಸಿ ತಿಳಿಸುವದಕ್ಕಾಗುವದಿಲ್ಲ ಎಂದರೆ (ಅದು) ನೆರಳಿಗಿಂತಲೂ ಬೇರೆಯೇ ಅಚ್ಛಾಯವು. ಹಾಗಾದರೆ ತಮಸ್ಸೆಂದಾಗಲಿ, ಅತಮಸ್ಸು ವಾಯುವಾಗಲಿ, ಹಾಗಾದರೆ– ಎಂದರೆ ಅವಾಯು. ಹಾಗಾದರೆ ಆಕಾಶವಿರಬಹುದೊ? ಅನಾಕಾಶವು. ಹಾಗಾದರೆ ಅರಗಿನಂತೆ ಅಂಟಿಕೊಳ್ಳುವ ಸ್ವರೂಪದ್ದೆಂದಾಗಲಿ! ಅಸಂಗವು. ಹಾಗಾದರೆ ರುಚಿಯೆಂದಾಗಲಿ! ಎಂದರೆ ಅರಸವು. ಹೀಗೆಯೇ (ಗಂಧವೆಂದಾಗಲಿ![4] ಎಂದರೆ) ಅಗಂಧವು. ಹಾಗಾದರೆ ಚಕ್ಷುಸ್ಸುಳ್ಳದ್ದೊ? ಅಚಕ್ಷುಷ್ಕವು; ಚಕ್ಷುವೆಂಬ ಕರಣವು ಇದಕ್ಕಿರುವದೇ

---

1. ಕಾರ್ಯಕಾರಣರೂಪವಾಗಿರುವ ವಸ್ತುವು ಕ್ಷರವು, ಅದಕ್ಕೆ ವಿರುದ್ಧಸ್ವರೂಪವಾಗಿರುವದರಿಂದ ಇದು ಅಕ್ಷರವು ಎಂದು ವಾರ್ತಿಕ. ಇಲ್ಲಿ ಹೇಳಿರುವ ಅಕ್ಷರವು ಪರಮಾತ್ಮನೇ ಎಂಬುದನ್ನು ಸೂ. ಭಾ. ೧-೩-೧೦ (ಭಾ. ಭಾ. ೩೪೪)ರಲ್ಲಿ ನಿರ್ಣಯಿಸಿದೆ.

2. ಉಪದೇಶದಿಂದ ತಿಳಿದುಕೊಳ್ಳಬೇಕಾದದ್ದೇ ಹೊರತು ಇಂಥದ್ದೆಂದು ವಿಷಯವಾಗಿ ತಿಳಿಯುವದಕ್ಕಾಗಲಿ ಹೇಳುವದಕ್ಕಾಗಲಿ ಆಗುವದಿಲ್ಲ. ಹೀಗೆ ಅವಿಷಯವೆಂದ ಮಾತ್ರಕ್ಕೆ ಅದನ್ನು ತಿಳಿಯಲಿಲ್ಲವೆಂಬ ದೋಷವೂ ಇರುವದಿಲ್ಲ ಎಂದು ಭಾವ. ಇದನ್ನೇ ಸಾಕ್ಷಾದಪರೋಕ್ಷಾದ್ಬ್ರಹ್ಮವೆಂದು ಹಿಂದೆ ಕರೆದಿರುವದು.

3. ದ್ರವ್ಯಗುಣಕರ್ಮಗಳೆಂಬ ವಿಕಲ್ಪಗಳೆಲ್ಲ ಅನಾತ್ಮಕ್ಕೆ ಸೇರಿದವುಗಳು.

4. ಗನ್ಧೋಽಸ್ತು –ಎಂಬುದರ ಅನುವಾದವಿದು; ಇದಿಲ್ಲದಿದ್ದರೂ ಸಾಗುತ್ತದೆ.

ಇಲ್ಲ, ಆದ್ದರಿಂದ ಅಚಕ್ಷುಷ್ಕವು. ಏಕೆಂದರೆ ಚಕ್ಷುಸ್ಸಿಲ್ಲದೆ ನೋಡುತ್ತಾನೆ" (ಶ್ವೇ.೩-೧೯)ಎಂದು ಮಂತ್ರವರ್ಣವಿದೆ. ಅಶ್ರೋತ್ರವು! "ಅವನು ಕರ್ಣವಿಲ್ಲದೆ. ಕೇಳುತ್ತಾನೆ" (ಶ್ವೇ. ೩-೧೯) ಎಂದು (ಮಂತ್ರವರ್ಣವಿದೆ). ಹಾಗಾದರೆ ವಾಕ್ಕೆಂದಾಗಲಿ[1]! ಅವಾಕ್ಕು. ಹೀಗೆಯೇ ಅಮನಸ್ಸು. ಹೀಗೆಯೇ ಅತೇಜಸ್ಕವು; ತೇಜಸ್ಸು ಇಲ್ಲದಿರುವದು ಅತೇಜಸ್ಕವು. ಏಕೆಂದರೆ ಬೆಂಕಿ ಮುಂತಾದವುಗಳ ಬೆಳಕಿನಂತೆ ಇದಕ್ಕೆ ತೇಜಸ್ಸಿರುವದಿಲ್ಲ[2]. ಅಪ್ರಾಣವು; ಆಧ್ಯಾತ್ಮಿಕವಾದ ವಾಯುವು (ಇದಕ್ಕೆ) ಇಲ್ಲ ಎಂದು ಅಪ್ರಾಣವು ಎಂಬ (ವಿಶೇಷಣದಿಂದ) ಅಲ್ಲಗಳೆದಿರುತ್ತದೆ. ಹಾಗಾದರೆ ಅದು ಮುಖವು, ದ್ವಾರವು! (ಹಾಗಲ್ಲ,) ಅಮುಖವು. ಅಮಾತ್ರವು. ಏತರಿಂದ ಅಳತೆಮಾಡಲಾಗುವದೋ ಅದು ಮಾತ್ರವು; ಅ ಮಾ ತ್ರ ವು ಎಂದರೆ ಅದು ಮಾತ್ರಾರೂಪವಾಗಿರುವದಿಲ್ಲ, ಅದರಿಂದ ಯಾವದನ್ನೂ ಅಳತೆಮಾಡುವದಕ್ಕಾಗುವದಿಲ್ಲ. ಹಾಗಾದರೆ ರಂಧ್ರವುಳ್ಳದ್ದೆಂದಾಗಲಿ! ಅನಂತರವು, ಇದಕ್ಕೆ ಒಳಗಿನ (ರಂಧ್ರ) ವಿಲ್ಲ. ಹಾಗಾದರೆ ಅದಕ್ಕೆ ಹೊರಗು ಇರಬಹುದು; ಅಬಾಹ್ಯವು. ಹಾಗಾದರೆ ಅದು ಭಕ್ಷಿಸುವದು ಎಂದಾಗಲಿ! ಅದು ಏನನ್ನೂ ತಿನ್ನುವದಿಲ್ಲ. ಹಾಗಾದರೆ ಮತ್ತೆ ಯಾವನಿಗಾದರೂ ಭಕ್ಷ್ಯವಾಗಿರಬಹುದಲ್ಲ! ಅದನ್ನು ಯಾವದೂ ತಿನ್ನುವದಿಲ್ಲ. (ಹೀಗೆ) **ಯಾವ ವಿಶೇಷಣವೂ ಇಲ್ಲದ್ದು ಎಂದರ್ಥ. ಅದು ತನಗೆರಡನೆಯದಿಲ್ಲದ ಒಂದೇ ಅಲ್ಲವೆ? ಯಾವದರಿಂದ ಏನನ್ನು ವಿಶೇಷಿಸಬಹುದು?**[3]

## ಅಕ್ಷರದ ಇರವಿಗೆ ಅನುಮಾನ

(ಉಪನಿಷತ್ತು)

**ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಸೂರ್ಯಾಚನ್ದ್ರಮಸೌ ವಿಧೃತೌ ತಿಷ್ಠತ ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ದ್ಯಾವಾಪೃಥಿವ್ಯೌ ವಿಧೃತೇ ತಿಷ್ಠತ ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ನಿಮೇಷಾ ಮುಹೂರ್ತಾ ಅಹೋರಾತ್ರಾಣ್ಯರ್ಧಮಾಸಾ ಮಾಸಾ ಋತವಃ ಸಂವತ್ಸರಾ ಇತಿ ವಿಧೃತಾಸ್ತಿಷ್ಠನ್ತ್ಯೇತಸ್ಯ ವಾ**

---

1. ವಾಕ್ಕುಳ್ಳದ್ದೆಂದಾಗಲಿ ಎಂದೂ ಕನ್ನಡಿಸಬಹುದು.

2. ಚೈತನ್ಯರೂಪವಾದ ತೇಜಸ್ಸು ಅದರ ಸ್ವರೂಪವೇ ಆಗಿದೆ; ಆದರೆ ಬೆಂಕಿ, ಸೂರ್ಯ-ಮುಂತಾದವುಗಳಿರುವಂತೆ ಬೆಳಕೆಂಬ ಗುಣವು ಅದಕ್ಕಿರುವದಿಲ್ಲ.

3. ಇಲ್ಲಿ ಇಂಥ ವಸ್ತುವಿಗಿಂತ ಅಥವಾ ಇಂಥ ಧರ್ಮಕ್ಕಿಂತ ಬೇರೆ ಎಂದಾಗಲಿ ಅದಿಲ್ಲದ್ದು ಎಂದಾಗಲಿ ನಞ್ಶಬ್ದಕ್ಕೆ ಅರ್ಥವಲ್ಲ ಆದರೆ ಅದು ಅಲ್ಲ, ಅಥವಾ ಅದು ಇಲ್ಲ -ಎಂದ ಮಾತ್ರದಿಂದ ಅದಕ್ಕೆ ವಿರುದ್ಧವಾದದ್ದು, ಅಥವಾ ವಿರುದ್ಧವಾದ ಧರ್ಮವುಳ್ಳದ್ದು ಎಂದೇನೂ ಅರ್ಥವಲ್ಲ. ಯಾವ ವಿಶೇಷವೂ ಇಲ್ಲದ್ದು ಎಂಬುದೇ ವಿವಕ್ಷಿತ, ಮಾಂ.ಕಾ. ಭಾ .೨-೩೨ (ಛಾ. ಭಾ. ೧೧೫) ನೋಡಿರಿ.

**ಅಕ್ಷರಸ್ಯ ಪ್ರಶಾಸನೇ ಗಾರ್ಗಿ ಪ್ರಾಚ್ಯೋಽನ್ಯಾ ನದ್ಯಃ ಸ್ಯನ್ದನ್ತೇ ಶ್ವೇತೇಭ್ಯಃ ಪರ್ವತೇಭ್ಯಃ ಪ್ರತೀಚ್ಯೋಽನ್ಯಾ ಯಾಂ ಯಾಂ ಚ ದಿಶಮನ್ವೇತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ದದತೋ ಮನುಷ್ಯಾಃ ಪ್ರಶಗ್ಂಸನ್ತಿ ಯಜಮಾನಂ ದೇವಾ ದರ್ವೀಂ ಪಿತರೋಽನ್ವಾಯತ್ತಾಃ ॥ ೯ ॥**

೯. ಗಾರ್ಗಿಯೆ, ಈ ಅಕ್ಷರದ ಪ್ರಶಾಸನದಲ್ಲಿಯೇ ಸೂರ್ಯ ಚಂದ್ರರು ವಿಧೃತರಾಗಿ ಇರುತ್ತಾರೆ. ಗಾರ್ಗಿಯೆ, ಈ ಅಕ್ಷರದ ಪ್ರಶಾಸನದಲ್ಲಿಯೇ ದ್ಯಾವಾಪೃಥಿವಿಗಳು ವಿಧೃತವಾಗಿ ನಿಂತಿರುತ್ತವೆ. ಗಾರ್ಗಿಯೆ, ಈ ಅಕ್ಷರದ ಪ್ರಶಾಸನದಲ್ಲಿಯೇ ನಿಮಿಷಗಳು ಮುಹೂರ್ತಗಳು, ಅಹೋರಾತ್ರಗಳು, ಅರ್ಧಮಾಸಗಳು, ಮಾಸ ಗಳು, ಋತುಗಳು, ಸಂವತ್ಸರಗಳು- ಇವು ವಿಧೃತವಾಗಿ ನಿಂತಿರು ತ್ತವೆ. ಗಾರ್ಗಿಯೆ, ಈ ಅಕ್ಷರದ ಪ್ರಶಾಸನದಲ್ಲಿಯೇ ಪೂರ್ವಕ್ಕೆ ಹರಿ ಯುವ ಕೆಲವು ನದಿಗಳು ಬಿಳಿಯಪರ್ವತಗಳಿಂದ ಹರಿಯುತ್ತಿರುವವು, ಮತ್ತೆ (ಕೆಲವು) ಪಶ್ಚಿಮದ ಕಡೆಗೆ (ಹರಿಯುತ್ತಿರುವವು), ಮತ್ತೆ ಕೆಲವು ಆಯಾ ದಿಕ್ಕಿನಲ್ಲಿಯೇ (ಹರಿಯುತ್ತಿರುವವು). ಗಾರ್ಗಿಯೆ, ಈ ಅಕ್ಷರದ ಪ್ರಶಾಸನದಲ್ಲಿಯೇ, ಜನರು ದಾನಮಾಡುವವರನ್ನು ಹೊಗಳುವರು ; ದೇವತೆಗಳು ಯಜಮಾನನಿಗೂ ಪಿತರರು ದರ್ವಿಗೂ ವಶರಾಗಿರುವರು.

## ಸೂರ್ಯಚಂದ್ರರ ವೃತ್ತಿಯಿಂದ ಅಕ್ಷರಾನುಮಾನ

(ಭಾಷ್ಯ)

೮೧. **ಅನೇಕವಿಶೇಷಣಪ್ರತಿಷೇಧಪ್ರಯಾಸಾತ್ ಅಸ್ತಿತ್ವಂ ತಾವತ್ ಅಕ್ಷರಸ್ಯ ಉಪಗಮಿತಂ ಶ್ರುತ್ಯಾ । ತಥಾಪಿ ಲೋಕಬುದ್ಧಿಮ್ ಅಪೇಕ್ಷ್ಯ ಆಶಙ್ಕ್ಯತೇ ಯತಃ ಅತೋಽಸ್ತಿತ್ವಾಯ ಅನುಮಾನಂ ಪ್ರಮಾಣಮ್ ಉಪ ನ್ಯಸ್ಯತಿ । ಏತಸ್ಯ ವಾ ಅಕ್ಷರಸ್ಯ । ಯದೇತತ್ ಅಧಿಗತಮ್ ಅಕ್ಷರಂ ಸರ್ವಾ ನ್ತರಂ ಸಾಕ್ಷಾತ್ ಅಪರೋಕ್ಷಾತ್ ಬ್ರಹ್ಮ ಯ ಆತ್ಮಾ ಅಶನಾಯಾದಿಧರ್ಮಾ ತೀತಃ ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಯಥಾ ರಾಜ್ಞಃ ಪ್ರಶಾಸನೇ ರಾಜ್ಯಮ್ ಅಸ್ಫುಟಿತಂ ನಿಯತಂ ವರ್ತತೇ ಏವಮ್ ಏತಸ್ಯ ಅಕ್ಷರಸ್ಯ ಪ್ರಶಾಸನೇ ಹೇ ಗಾರ್ಗಿ ಸೂರ್ಯಾಚನ್ದ್ರಮಸೌ ಸೂರ್ಯಶ್ಚ ಚನ್ದ್ರಮಾಶ್ಚ ಸೂರ್ಯಾ ಚನ್ದ್ರಮಸೌ- ಅಹೋರಾತ್ರಯೋರ್ಲೋಕಪ್ರದೀಪೌ ತಾದರ್ಥ್ಯೇನ ಪ್ರಶಾ ಸಿತ್ರಾ ತಾಭ್ಯಾಂ ನಿರ್ವರ್ತ್ಯಮಾನಲೋಕಪ್ರಯೋಜನವಿಜ್ಞಾನವತಾ**

ನಿರ್ಮಿತೌ ಚ ಸ್ಯಾತಾಂ ಸಾಧಾರಣಸರ್ವಪ್ರಾಣಿಪ್ರಕಾಶೋಪಕಾರಕತ್ವಾತ್ ಲೌಕಿಕಪ್ರದೀಪವತ್ । ತಸ್ಮಾತ್ ಅಸ್ತಿ ತತ್, ಯೇನ ವಿಧೃತೌ ಈಶ್ವರೌ ಸ್ವತನ್ತ್ರೌ ಸನ್ತೌ ನಿರ್ಮಿತೌ ತಿಷ್ಠತಃ ನಿಯತದೇಶಕಾಲನಿಮಿತ್ತೋದಯಾಸ್ತಮಯವೃದ್ಧಿಕ್ಷಯಾಭ್ಯಾಂ ವರ್ತೇತೇ । ತದಸ್ತ್ಯೇವಮ್ ಏತಯೋಃ ಪ್ರಶಾಸಿತೃ ಅಕ್ಷರಂ ಪ್ರದೀಪಕರ್ತೃವಿಧಾರಯಿತೃವತ್ ॥

(ಭಾಷ್ಯಾರ್ಥ)

ಅನೇಕವಿಶೇಷಣಗಳನ್ನು ಅಲ್ಲಗಳೆದಿರುವ ಪ್ರಯಾಸದಿಂದ ಅಕ್ಷರವು ಇರಬೇಕೆಂಬುದನ್ನು ಶ್ರುತಿಯು ಮೊದಲು ಒಪ್ಪಿಸಿಕೊಟ್ಟಿರುತ್ತದೆ.[1] ಆದರೂ ಲೋಕಬುದ್ಧಿಯನ್ನು ಇಟ್ಟುಕೊಂಡು ಆಶಂಕೆಮಾಡಬಹುದಷ್ಟೆ.[2] ಆದ್ದರಿಂದ (ಅದು) ಇದೆ ಎಂದು (ತೋರಿಸಿಕೊಡು)ವದಕ್ಕಾಗಿ ಅನುಮಾನವನ್ನು ಪ್ರಮಾಣವಾಗಿ ಉದಾಹರಿಸಿರುತ್ತದೆ.[3]

ಈ ಅಕ್ಷರದ (ಪ್ರಶಾಸನದಲ್ಲಿಯೇ), ಸರ್ವಾಂತರವೂ ಸಾಕ್ಷಾದಪರೋಕ್ಷವೂ ಆದ ಬ್ರಹ್ಮವೆಂದೂ ಹಸಿವು ಮುಂತಾದ (ಸಂಸಾರ)ಧರ್ಮಗಳನ್ನು ಮೀರಿರುವ ಆತ್ಮನೆಂದೂ ಈ ಅಕ್ಷರವನ್ನು ಅರಿತದ್ದಾಗಿದೆಯಷ್ಟೆ; (ಆ) ಈ ಅಕ್ಷರದ ಪ್ರಶಾಸನದಲ್ಲಿಯೇ- ಹೇಗೆ ರಾಜನ ಆಡಳಿತದಲ್ಲಿ ರಾಜ್ಯವು ಒಡೆದುಕೊಳ್ಳದೆ ನಿಯಮದಿಂದ ಸಾಗಿರುವದೋ ಹಾಗೆ ಈ ಅಕ್ಷರದ ಪ್ರಶಾಸನದಲ್ಲಿಯೇ- ಎಲೆ ಗಾರ್ಗಿ, ಸೂರ್ಯಚಂದ್ರರು ಸೂರ್ಯನೂ ಚಂದ್ರನೂ **(ಸೂರ್ಯಚಂದ್ರರು)- ಹಗಲುರಾತ್ರಿಗಳಲ್ಲಿ ಲೋಕಕ್ಕೆ ದೊಡ್ಡ ದೀಪವಾಗಿರುವವರು- ಅದೇ ಪ್ರಯೋಜನಕ್ಕಾಗಿ, ಅವರಿಂದಾಗುವ ಲೋಕಪ್ರಯೋಜನವನ್ನು ಅರಿತಿರುವ[4] ಪ್ರಶಾಸಿತೃವಿನಿಂದ ನಿರ್ಮಿತವಾಗಿರಬೇಕು, ಏಕೆಂದರೆ ಲೋಕದಲ್ಲಿ (ಕಾಣುವ) ಪ್ರದೀಪಗಳಂತೆ ಸಾಧಾರಣವಾಗಿ ಸರ್ವಪ್ರಾಣಿಗಳಿಗೂ ಬೆಳಕನ್ನು (ಕೊಟ್ಟು) ಉಪಕಾರಕವಾಗಿರು**

---

1. ಬರಿಯ ಶೂನ್ಯವೇ ಆಗಿದ್ದರೆ ಇಷ್ಟೊಂದು ವಿಶೇಷಣಗಳನ್ನು ಅಲ್ಲಗಳೆಯುವ ಶ್ರಮವನ್ನು ತೆಗೆದುಕೊಳ್ಳಬೇಕಾದದ್ದೇನೂ ಇರಲಿಲ್ಲ.

2. ಸಾಮಾನ್ಯಜನರು ನಿರ್ವಿಶೇಷವಾದ ಅಕ್ಷರವು ಇದೆ ಎಂಬುದನ್ನು ಪ್ರಮಾಣವಿಲ್ಲದೆ ನಂಬುವದಿಲ್ಲ.

3. ಆದ್ದರಿಂದ ಲೋಕದೃಷ್ಟಿಯಿಂದ ಅನುಮಾನವನ್ನು ಹೇಳುತ್ತದೆ; ಆದರೆ ಪರಮಾರ್ಥವಾಗಿ ಅದು ಅನುಮಾನಗೋಚರವಲ್ಲ. ಸೂ.ಭಾ. ೧-೧-೨ (ಭಾ.ಭಾ ೨೭,೨೯).

4. ಇದರಿಂದ ಅಕ್ಷರವು ಚೇತನವೆಂದೂ ಜಗತ್ತನ್ನು ಸೃಷ್ಟಿಮಾಡುವ ಸರ್ವಜ್ಞವೆಂದೂ ಏರ್ಪಡುತ್ತದೆ. ಸೂ.ಭಾ. ೧-೩-೧೧.

ತ್ತಾರೆ. ಆದ್ದರಿಂದ ವಿಧೃತರಾಗಿ[1] ಈಶ್ವರರೂ ಸ್ವತಂತ್ರರೂ ಆಗಿರುವ[2] (ಇವರು) ಯಾವದರಿಂದ ನಿರ್ಮಿತವಾಗಿ ನಿಂತಿರುತ್ತಾರೆಯೋ, ಗೊತ್ತಾದ ದೇಶ, ಕಾಲ, ನಿಮಿತ್ತಗಳಿಂದ ಉದಯಾಸ್ತಮಯಗಳನ್ನೂ ವೃದ್ಧಿಕ್ಷಯ ಗಳನ್ನೂ (ಹೊಂದುತ್ತಾ) ಇದ್ದುಕೊಂಡಿರುವರೋ ಅದು ಇರಬೇಕು. ಆದ್ದರಿಂದ ಹೀಗೆ ಇವೆರಡನ್ನೂ ಪ್ರಶಾಸನಮಾಡುತ್ತಿರುವ ಅಕ್ಷರವು- ಪ್ರದೀಪವನ್ನು ಮಾಡಿ ಹಿಡಿದಿಟ್ಟಿರುವವ(ನಿರುವಂತೆ)- ಇದೆ (ಎಂದಾಯಿತು).[3]

## ದ್ಯಾವಾಪೃಥಿವಿಗಳಿಂದ ಅಕ್ಷರಾನುಮಾನ

(ಭಾಷ್ಯ)

೮೨. ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ದ್ಯಾವಾಪೃಥಿವ್ಯೌ ದ್ಯೌಶ್ಚ ಪೃಥಿವೀ ಚ ಸಾವಯವತ್ವಾತ್ ಸ್ಫುಟನಸ್ವಭಾವೇ ಅಪಿ ಸತ್ಯೌ ಗುರುತ್ವಾತ್ ಪತನಸ್ವಭಾವೇ ಸಂಯುಕ್ತತ್ವಾತ್ ವಿಯೋಗಸ್ವಭಾವೇ ಚೇತನಾ ವದಭಿಮಾನಿದೇವತಾಧಿಷ್ಠಿತತ್ವಾತ್ ಸ್ವತನ್ತ್ರೇ ಅಪಿ ಏತಸ್ಯಾಕ್ಷರಸ್ಯ ಪ್ರಶಾಸನೇ ವರ್ತೇತೇ ವಿಧೃತೇ ತಿಷ್ಠತಃ । ಏತದ್ಧಿ ಅಕ್ಷರಂ ಸರ್ವವ್ಯವಸ್ಥಾಸೇತುಃ ಸರ್ವ ಮರ್ಯಾದಾವಿಧರಣಮ್ । ಅತೋ ನಾಸ್ಯಾಕ್ಷರಸ್ಯ ಪ್ರಶಾಸನಂ ದ್ಯಾವಾ ಪೃಥಿವ್ಯೌ ಅತಿಕ್ರಾಮತಃ । ತಸ್ಮಾತ್ ಸಿದ್ಧಮಸ್ತಿತ್ವಮ್ ಅಕ್ಷರಸ್ಯ । ಅವ್ಯಭಿ ಚಾರಿ ಹಿ ತಲ್ಲಿಙ್ಗಂ ಯದ್ ದ್ಯಾವಾಪೃಥಿವ್ಯೌ ನಿಯತೇ ವರ್ತೇತೇ । ಚೇತನಾವನ್ತಂ ಪ್ರಶಾಸಿತಾರಮಸಂಸಾರಿಣಮನ್ತರೇಣ ನೈತದ್ ಯುಕ್ತಮ್ । ''ಯೇನ ದ್ಯೌರುಗ್ರಾ ಪೃಥಿವೀ ಚ ದೃಢಾ'' (ಋ. ಸಂ. ೧೦-೧೨೧-೫) ಇತಿ ಮನ್ತ್ರವರ್ಣಾತ್ ॥

(ಭಾಷ್ಯಾರ್ಥ)

ಗಾರ್ಗಿಯೆ, ಈ ಅಕ್ಷರದ ಪ್ರಶಾಸನದಲ್ಲಿಯೇ ದ್ಯಾವಾಪೃಥಿವಿಗಳು- ದ್ಯುಲೋಕವೂ ಪೃಥಿವಿಯೂ ಅವಯವಗಳಿಂದೊಡಗೂಡಿರುವದರಿಂದ ಒಡೆದು ಕೊಳ್ಳುವ ಸ್ವಭಾವವುಳ್ಳವಾಗಿದ್ದರೂ, ತೂಕವಾಗಿರುವದರಿಂದ ಬೀಳುವ

1. ಕಟ್ಟಿನಲ್ಲಿಡಲ್ಪಟ್ಟವರಾಗಿ.

2. ಸ್ವತಂತ್ರರಾಗಿ ಮತ್ತೊಂದನ್ನು ಆಳಲು ಶಕ್ತರಾಗಿರುವ ಸೂರ್ಯಚಂದ್ರರು ಹೀಗೆ ನಿಯಮದಿಂದ ವರ್ತಿಸಬೇಕಾದರೆ ಅವರನ್ನೂ ಆಳುವ ಸರ್ವಸ್ವತಂತ್ರನೊಬ್ಬನ ಕಟ್ಟುಪಾಡಿನಲ್ಲಿ ಅವರು ಇರಬೇಕೆಂದಾಗುತ್ತದೆ ಎಂದು ಭಾವ.

3. ದೀಪದ ದೃಷ್ಟಾಂತದಿಂದ ಊಹಿಸಿ ಅಕ್ಷರವನ್ನು ಇಲ್ಲಿ ಸಾಧಿಸಿರುವದು ಲೋಕ ದೃಷ್ಟಿಯಿಂದ. ನಿಜವಾಗಿ ಸಾಕ್ಷಾದಪರೋಕ್ಷಾದ್ಬ್ರಹ್ಮವಾಗಿರುವ ಆತ್ಮನೇ ಎಲ್ಲಾ ಪ್ರಮಾಣಗಳ ಸಿದ್ಧಿಗೂ ಆಧಾರನಾಗಿರುತ್ತಾನೆ ಎಂಬುದು ಶಾಸ್ತ್ರದೃಷ್ಟಿಯಿಂದ.

ಸ್ವಭಾವವುಳ್ಳವಾದರೂ ಸಂಯೋಗವಾಗಿರುವದರಿಂದ ವಿಯೋಗವಾಗುವ ಸ್ವಭಾವವುಳ್ಳವಾದರೂ ಚೇತನಾವಂತರಾದ ಅಭಿಮಾನಿದೇವತೆಗಳಿಂದ ಅಧಿಷ್ಠಿತವಾಗಿರುವದರಿಂದ ಸ್ವತಂತ್ರವಾದವುಗಳಾದರೂ ಈ ಅಕ್ಷರದ ಪ್ರಶಾಸನದಲ್ಲಿ ಇದ್ದುಕೊಂಡಿವೆ, ವಿಧೃತವಾಗಿ ಇದ್ದುಕೊಂಡಿವೆ. ಈ ಅಕ್ಷರವೇ ಎಲ್ಲಾ ವ್ಯವಸ್ಥೆಗಳಿಗೂ ಸೇತು, ಎಲ್ಲಾ ಮರ್ಯಾದೆಗಳನ್ನೂ ತಡೆದಿಟ್ಟಿರತಕ್ಕದ್ದು; ಆದ್ದರಿಂದ ಈ ಅಕ್ಷರದ ಪ್ರಶಾಸನವನ್ನು ದ್ಯಾವಾಪೃಥಿವಿಗಳು ಅತಿಕ್ರಮಿಸುವದಿಲ್ಲ. ಆದ್ದರಿಂದ ಈ ಅಕ್ಷರವು ಇದೆ ಎಂದು ಸಿದ್ಧವಾಯಿತು ದ್ಯಾವಾಪೃಥಿವಿಗಳು ನಿಯತನಾಗಿದ್ದುಕೊಂಡಿರುವವೆಂಬುದು ಅವ್ಯಭಿಚಾರಿಯಾದ ಲಿಂಗವಷ್ಟೆ; ಚೇತನಾವಂತನಾದ ಪ್ರಶಾಸ್ತೃವಿಲ್ಲದಿದ್ದರೆ ಈ (ನಿಯತವಾಗಿದ್ದುಕೊಂಡಿರುವದು) ಯುಕ್ತ(ವಾಗು)ವದಿಲ್ಲ.[1] "ಯಾವನಿಂದ ದ್ಯುಲೋಕವು ಉಗ್ರವಾಗಿದೆಯೋ,[2] ಪೃಥಿವಿಯೂ ಗಟ್ಟಿಯಾಗಿ (ನಿಂತಿದೆ)ಯೋ" (ಋ.ಸಂ. ೧೦-೧೨೧-೫) ಎಂಬ ಮಂತ್ರವರ್ಣದಿಂದ (ಇದು ಸಿದ್ಧವಾಗುತ್ತದೆ)

## ಕಾಲಾವಯವಗಳಿಂದ ಅಕ್ಷರಾನುಮಾನ

(ಭಾಷ್ಯ)

೮೩. ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ ಗಾರ್ಗಿ ನಿಮೇಷಾ ಮುಹೂರ್ತಾ ಇತ್ಯೇತೇ ಕಾಲಾವಯವಾಃ ಸರ್ವಸ್ಯ ಅತೀತಾನಾಗತವರ್ತಮಾನಸ್ಯ ಜನಿಮತಃ ಕಲಯಿತಾರಃ । ಯಥಾ ಲೋಕೇ ಪ್ರಭುಣಾ ನಿಯತೋ ಗಣಕಃ ಸರ್ವಮ್ ಆಯಂ ವ್ಯಯಂ ಚಾಪ್ರಮತ್ತೋ ಗಣಯತಿ ತಥಾ ಪ್ರಭುಸ್ಥಾನೀಯ ಏಷಾಂ ಕಾಲಾವಯವಾನಾಂ ನಿಯಂತ್ರಾ ॥

(ಭಾಷ್ಯಾರ್ಥ)

ಗಾರ್ಗಿಯೆ, ಈ ಅಕ್ಷರದ ಪ್ರಶಾಸನದಲ್ಲಿಯೇ ನಿಮಿಷಗಳು, ಮುಹೂರ್ತಗಳು– ಎಂಬೀ (ಪ್ರಕಾರದ) ಕಾಲಾವಯವಗಳು ಹಿಂದಿನ, ಮುಂದಿನ, ಈಗಿನ ಪ್ರಾಣಿಗಳನ್ನು ಲೆಕ್ಕಮಾಡುತ್ತಿರುವವು. ಹೇಗೆ ಲೋಕದಲ್ಲಿ ಒಡೆಯನಾದವನು

---

1. ಏಕೆಂದರೆ ಸಾವಯವವಾಗಿದ್ದರೂ ಒಡೆದುಕೊಳ್ಳದೆ, ತೂಕವಾಗಿದ್ದರೂ ಬೀಳದೆ, ಸಂಯೋಗದಿಂದ ಆಗಿದ್ದರೂ ಬಿಟ್ಟುಕೊಳ್ಳದೆ, ಸ್ವತಂತ್ರವಾಗಿದ್ದರೂ ಮತ್ತೊಂದು ಕ್ರಮವನ್ನು ಅನುಸರಿಸದೆ ಇರುವದರಿಂದ ಹಾಗೆ ಅವು ಇರುವಂತೆ ಕಟ್ಟುಮಾಡುವವನೊಬ್ಬನು ಇದಾನೆಂದಾಗುತ್ತದೆ. ಆದ್ದರಿಂದ ಹೊಗೆಯು ಬೆಂಕಿಯ ಅನುಮಾನಕ್ಕೆ ಲಿಂಗವಾಗಿರುವಂತೆ ಇದು ಅಕ್ಷರವಿದೆಯೆಂಬುದಕ್ಕೆ ಲಿಂಗವು.

2. ಈ ಮಾತಿನ ಅರ್ಥವೇನೆಂಬುದು ಸ್ಪಷ್ಟವಾಗಿಲ್ಲ. ಸ್ವತಂತ್ರವಾಗಿರುವದು– ಎಂದು ಟೀಕೆ; ಸಾಯಣಭಾಷ್ಯದಲ್ಲಿ ಗಹನವೆಂದಿದೆ. ಮೇಲುಗಡೆಯಲ್ಲಿದ್ದು ಎಲ್ಲವನ್ನೂ ಒಳಗೊಂಡಿರುವದು ಎಂಬರ್ಥವಿರಬಹುದು.

ನಿಯಮಿಸಿರುವ ಲೆಕ್ಕಿಗನು ಆಯವನ್ನೂ ವ್ಯಯವನ್ನೂ ಎಲ್ಲವನ್ನೂ ಎಚ್ಚರಿಕೆ ಯಿಂದ ಲೆಕ್ಕನಾಡುತ್ತಿರುವನೋ ಹಾಗೆ (ಆ) ಒಡೆಯನಂತಿರುವ ಕಾಲಾದಿ ಗಳನ್ನು ನಿಯಮಿಸಿರುವ (ಪ್ರಶಾಸ್ತೃವೊಬ್ಬನಿರಬೇಕು).

## ನದಿಗಳಿಂದ ಅಕ್ಷರಾನುಮಾನ

(ಭಾಷ್ಯ)

೮೪. ತಥಾ ಪ್ರಾಚ್ಯಃ ಪ್ರಾಗಞ್ಚನಾಃ ಪೂರ್ವದಿಗ್ಗಮನಾಃ ನದ್ಯಃ ಸ್ಯನ್ದನ್ತೇ ಸ್ರವನ್ತಿ ಶ್ವೇತೇಭ್ಯೋ ಹಿಮವದಾದಿಭ್ಯಃ ಪರ್ವತೇಭ್ಯೋ ಗಿರಿಭ್ಯಃ । ಗಙ್ಗಾದ್ಯಾ ನದ್ಯಃ । ತಾಶ್ಚ ಯಥಾಪ್ರವರ್ತಿತಾ ಏವ ನಿಯತಾಃ ಪ್ರವರ್ತನ್ತೇ । ಅನ್ಯಥಾಪಿ ಪ್ರವರ್ತಿತುಮುತ್ಸಹನ್ತ್ಯಃ । ತದೇತಲ್ಲಿಙ್ಗಂ ಪ್ರಶಾಸ್ತುಃ । ಪ್ರತೀಚ್ಯಃ ಅನ್ಯಾಃ ಪ್ರತೀಚೀಂ ದಿಶಮ್ ಅಞ್ಚನ್ತಿ ಸಿನ್ಧ್ವಾದ್ಯಾ ನದ್ಯಃ । ಅನ್ಯಾಶ್ಚ ಯಾಂ ಯಾಂ ದಿಶಮ್ ಅನುಪ್ರವೃತ್ತಾಃ ತಾಂ ತಾಂ ನ ವ್ಯಭಿಚರನ್ತಿ । ತಚ್ಚ ಲಿಙ್ಗಮ್ ॥

(ಭಾಷ್ಯಾರ್ಥ)

ಇದರಂತೆ (ಕೆಲವು) ನದಿಗಳು ಗಂಗಾದಿನದಿಗಳು ಬಿಳಿಯ ಹಿಮಾಲಯವೇ ಮುಂತಾದ ಪರ್ವತಗಳಿಂದ ಗಿರಿಗಳಿಂದ (ಪ್ರಾಚ್ಯಃ=ಪ್ರಾಗಞ್ಚನಾಃ) ಪೂರ್ವಕ್ಕೆ ಹೋಗುವವಾಗಿ, ಪೂರ್ವದಿಕ್ಕಿಗೆ ಹೋಗುವವಾಗಿಯೇ ಹರಿಯುತ್ತಿರುವವು, ಹರಿದುಕೊಂಡು ಹೋಗುತ್ತಿರುವವು. ಅವೂ ಬೇರೆ ತಿರುಗುವದಕ್ಕೆ ಶಕ್ತಿಯುಳ್ಳವಾದರೂ ಹೇಗೆ ಹೊರಟಿರುತ್ತವೆಯೋ ಹಾಗೆಯೇ ಗೊತ್ತಾಗಿ ಮುಂಬರಿಯುತ್ತಿವೆ. ಇದು (ಅವುಗಳಿಗೆ ಒಬ್ಬ) ಪ್ರಶಾಸ್ತೃ(ವಿರುವ)ನೆಂಬುದಕ್ಕೆ ಲಿಂಗವು. ಬೇರೆ (ಕೆಲವು) ಸಿಂಧುವೇ ಮುಂತಾದ ನದಿಗಳು ಪ್ರತ್ಯಂಚಗಳಾಗಿವೆ, ಪಶ್ಚಿಮದಿಕ್ಕಿಗೇ ಹೋಗುತ್ತಿವೆ. ಮತ್ತೆ ಬೇರೆ (ನದಿಗಳು) ಯಾವ ಯಾವ ದಿಕ್ಕಿಗೆ ಹೊರಟಿರುವವೋ ಆಯಾ ದಿಕ್ಕನ್ನು ಬೇರ್ಪಡಿಸುತ್ತಿಲ್ಲ. ಅದೂ (ಪ್ರಶಾಸ್ತೃವೊಬ್ಬನಿದಾನೆಂಬುದಕ್ಕೆ) ಲಿಂಗವು.

## ದಾತೃಗಳ ಪ್ರಶಂಸೆಯಿಂದ ಅಕ್ಷರಾನುಮಾನ

(ಭಾಷ್ಯ)

೮೫. ಕಿಂ ಚ ದದತಃ ಹಿರಣ್ಯಾದೀನ್ ಪ್ರಯಚ್ಛತಃ ಆತ್ಮಪೀಡಾಂ ಕುರ್ವತೋಽಪಿ (ಜನಾಃ)[1] ಪ್ರಮಾಣಜ್ಞಾ ಅಪಿ ಮನುಷ್ಯಾಃ ಪ್ರಶಂಸನ್ತಿ । ತತ್ರ ಯಚ್ಚ ದೀಯತೇ, ಯೇ ಚ ದದತಿ, ಯೇ ಚ ಪ್ರತಿಗೃಹ್ಣನ್ತಿ, ತೇಷಾಮ್ ಇಹೈವ

---

1. ಈ ಮಾತು ಇಲ್ಲಿ ಕೈಬಿಟ್ಟುಹೋಗಿರಬಹುದು.

ಸಮಾಗಮಃ, ವಿಲಯಶ್ಚ ಅನ್ವಕ್ಷೋ ದೃಶ್ಯತೇ। ಅದೃಷ್ಟಸ್ತು ಪರಃ ಸಮಾಗಮಃ। ತಥಾಪಿ ಮನುಷ್ಯಾ ದದತಾಂ ದಾನಫಲೇನ ಸಂಯೋಗಂ ಪಶ್ಯನ್ತಃ ಪ್ರಮಾಣಜ್ಞತಯಾ ಪ್ರಶಂಸನ್ತಿ। ತಚ್ಚ ಕರ್ಮಫಲೇನ ಸಂಯೋಜಯಿತರಿ ಕರ್ತುಃ ಕರ್ಮಫಲವಿಭಾಗಜ್ಞೇ ಪ್ರಶಾಸ್ತರಿ ಅಸತಿ ನ ಸ್ಯಾತ್। ದಾನಕ್ರಿಯಾಯಾಃ ಪ್ರತ್ಯಕ್ಷವಿನಾಶಿತ್ವಾತ್। ತಸ್ಮಾತ್ ಅಸ್ತಿ ದಾನಕರ್ತೄಣಾಂ ಫಲೇನ ಸಂಯೋಜಯಿತಾ। ಅಪೂರ್ವಮ್ ಇತಿ ಚೇತ್। ನ। ತತ್ಸದ್ಭಾವೇ ಪ್ರಮಾಣಾನುಪಪತ್ತೇಃ। ಪ್ರಶಾಸ್ತುರಪಿ ಇತಿ ಚೇತ್। ನ। ಆಗಮತಾತ್ಪರ್ಯಸ್ಯ ಸಿದ್ಧತ್ವಾತ್। ಅವೋಚಾಮ ಹ್ಯಾಗಮಸ್ಯ ವಸ್ತುಪರತ್ವಮ್। ಕಿಂ ಚಾನ್ಯತ್। ಅಪೂರ್ವಕಲ್ಪನಾಯಾಂ ಚ ಅರ್ಥಾಪತ್ತೇಃ ಕ್ಷಯಃ, ಅನ್ಯಥೈವೋಪಪತ್ತೇಃ। ಸೇವಾಫಲಸ್ಯ ಸೇವ್ಯಾತ್ ಪ್ರಾಪ್ತಿದರ್ಶನಾತ್। ಸೇವಾಯಾಶ್ಚ ಕ್ರಿಯಾತ್ವಾತ್ ತತ್ಸಾಮಾನ್ಯಾಚ್ಚ ಯಾಗದಾನಹೋಮಾದೀನಾಂ ಸೇವ್ಯಾತ್ ಈಶ್ವರಾದೇಃ ಫಲಪ್ರಾಪ್ತಿರುಪಪದ್ಯತೇ। ದೃಷ್ಟಕ್ರಿಯಾಧರ್ಮಸಾಮರ್ಥ್ಯಮ್ ಅಪರಿತ್ಯಜ್ಯೈವ ಫಲಪ್ರಾಪ್ತಿಕಲ್ಪನೋಪಪತ್ತೌ ದೃಷ್ಟಕ್ರಿಯಾಧರ್ಮಸಾಮರ್ಥ್ಯಪರಿತ್ಯಾಗೋ ನ ನ್ಯಾಯ್ಯಃ। ಕಲ್ಪನಾಧಿಕ್ಯಾಚ್ಚ। ಈಶ್ವರಃ ಕಲ್ಪ್ಯಃ, ಅಪೂರ್ವಂ ವಾ। ತತ್ರ ಕ್ರಿಯಾಯಾಶ್ಚ ಸ್ವಭಾವಃ ಸೇವ್ಯಾತ್ ಫಲಪ್ರಾಪ್ತಿರ್ದೃಷ್ಟಾ, ನ ತು ಅಪೂರ್ವಾತ್। ನ ಚಾಪೂರ್ವಂ ದೃಷ್ಟಮ್। ತತ್ರ ಅಪೂರ್ವಮ್ ಅದೃಷ್ಟಂ ಕಲ್ಪಯಿತವ್ಯಮ್ ತಸ್ಯ ಚ ಫಲದಾತೃತ್ವೇ ಸಾಮರ್ಥ್ಯಮ್, ಸಾಮರ್ಥ್ಯೇ ಚ ಸತಿ ದಾನಂ ಚಾಭ್ಯಧಿಕಮಿತಿ। ಇಹ ತು ಈಶ್ವರಸ್ಯ ಸೇವ್ಯಸ್ಯ ಸದ್ಭಾವಮಾತ್ರಂ ಕಲ್ಪ್ಯಂ ನ ತು ಫಲದಾನಸಾಮರ್ಥ್ಯಂ ದಾತೃತ್ವಂ ಚ। ಸೇವ್ಯಾತ್ ಫಲಪ್ರಾಪ್ತಿದರ್ಶನಾತ್। ಅನುಮಾನಂ ಚ ದರ್ಶಿತಮ್, "ದ್ಯಾವಾಪೃಥಿವ್ಯೌ ವಿಧೃತೇ ತಿಷ್ಠತಃ" ಇತ್ಯಾದಿ॥

(ಭಾಷ್ಯಾರ್ಥ)

ಮತ್ತು ದಾನಮಾಡುವವರನ್ನೂ ಹಿರಣ್ಯಾದಿಗಳನ್ನು (ಮತ್ತೊಬ್ಬರಿಗೆ ಉಚಿತವಾಗಿ) ಕೊಡುವವರನ್ನು, ತಮಗೆ ಸಂಕಟವನ್ನು ಉಂಟುಮಾಡಿಕೊಳ್ಳುತ್ತಿದ್ದರೂ (ಜನರು) ಪ್ರಮಾಣಜ್ಞರಾದ ಮನುಷ್ಯರು ಕೂಡ ಹೊಗಳುತ್ತಾರೆ. ಇಲ್ಲಿ ಯಾವದನ್ನು ದಾನಮಾಡುತ್ತಾರೋ, ಯಾರು ದಾನಮಾಡುತ್ತಾರೋ, ಮತ್ತು ಯಾರು ಪ್ರತಿಗ್ರಹವನ್ನು ಮಾಡುತ್ತಾರೋ, ಅವರಿಗೆ ಇಲ್ಲಿಯೇ ಸೇರುವಿಕೆಯೂ ನಾಶವೂ (ಆಗುವದು) ಪ್ರತ್ಯಕ್ಷವಾಗಿ ಕಂಡುಬರುತ್ತದೆ, ಪರ (ಲೋಕದಲ್ಲಿ) ಸೇರುವಿಕೆ(ಯಾಗುವದು) ದೃಷ್ಟವಾಗಿಲ್ಲ. ಹೀಗಿದ್ದರೂ ಮನುಷ್ಯರು ಪ್ರಮಾಣಜ್ಞರಾದ್ದರಿಂದ ದಾನಮಾಡಿದವರಿಗೆ ದಾನಫಲದ ಸಂಯೋಗವಾಗುವದೆಂದು ತಿಳಿದು (ಅವರನ್ನು) ಹೊಗಳುತ್ತಾರೆ. ಅದೂ

ಕರ್ಮಫಲವನ್ನು ಕೂಡಿಸಿ(ಕೊಡುವ)ವನೂ ಕರ್ಮಫಲಗಳ ವಿಂಗಡವನ್ನು[1] ಅರಿತವನೂ ಆದ ಪ್ರಶಾಸ್ತೃವು ಇಲ್ಲದಿದ್ದರೆ, ಆಗುತ್ತಿರಲಿಲ್ಲ[2] ; ಏಕೆಂದರೆ ದಾನಕ್ರಿಯೆಯು ಪ್ರತ್ಯಕ್ಷವಾಗಿಯೇ ನಾಶವಾಗತಕ್ಕದ್ದಾಗಿದೆ. ಆದ್ದರಿಂದ ದಾನಕರ್ತೃಗಳಿಗೆ ಫಲವನ್ನು ಕೂಡಿಸಿ(ಕೊಡ)ತಕ್ಕವನು ಇದ್ದಾನೆ (ಎಂದಾಯಿತು).

(ಆಕ್ಷೇಪ) :– ಅಪೂರ್ವವೇ (ಫಲವನ್ನು ಕೂಡಿಸಿಕೊಡತಕ್ಕದ್ದು).[3] ಎನ್ನಬಹುದಲ್ಲ !

(ಪರಿಹಾರ):– ಹಾಗಲ್ಲ. ಏಕೆಂದರೆ, ಅದು ಇದೆ ಎಂಬುದಕ್ಕೆ ಪ್ರಮಾಣ ವಿರುವದಿಲ್ಲ.

(ಆಕ್ಷೇಪ) :– ಪ್ರಶಾಸ್ತೃವಿದ್ದಾನೆಂಬುದಕ್ಕೂ (ಪ್ರಮಾಣವಿಲ್ಲವಲ್ಲ) !

(ಪರಿಹಾರ) .– ಹಾಗಲ್ಲ. ಏಕೆಂದರೆ ಆಗಮವು (ಅವನು ಇದಾನೆಂಬುದರಲ್ಲಿ) ತಾತ್ಪರ್ಯವಿದೆಯೆಂದು ಸಿದ್ಧವಾಗಿರುತ್ತದೆ. ಆಗಮವು ವಸ್ತುಪರವಾಗಿರುವದೆಂಬುದನ್ನು (ಹಿಂದೆ) ಹೇಳಿರುತ್ತೇವಷ್ಟೆ.[4] ಇನ್ನೊಂದು (ಮಾತು). ಅಪೂರ್ವವನ್ನು ಕಲ್ಪಿಸುವದರಲ್ಲಿ ಅರ್ಥಾಪತ್ತಿಯು (ಅದಿಲ್ಲದೆ) ಕ್ಷಯವಾಗಿರುತ್ತದೆ, ಏಕೆಂದರೆ ಬೇರೆ ರೀತಿಯಿಂದಲೂ ಉಪಪತ್ತಿಯಿರುತ್ತದೆ.[5] ಹೇಗೆಂದರೆ ಸೇವೆಯ ಫಲವು ಸೇವ್ಯನಿಂದ ಪ್ರಾಪ್ತವಾಗುವದೆಂದು ಕಂಡುಬಂದಿರುತ್ತದೆ. ಮತ್ತು ಸೇವೆಯೆಂಬುದು ಕ್ರಿಯೆಯಾಗಿದೆ. ಯಾಗದಾನಹೋಮಗಳು ಆ (ಸೇವೆಗೆ) ಸಮಾನವಾಗಿರುವದರಿಂದ[6] ಸೇವ್ಯನಾದ ಈಶ್ವರನೇ ಮೊದಲಾದವ

---

1. ಈ ಕರ್ಮಕ್ಕೆ ಈ ಫಲವೆಂದು ಅರಿತಿರುವ ಚೇತನರೂಪನಾದ ಈಶ್ವರನು.

2. ಜನರು ಹೇಳುತ್ತಿರಲಿಲ್ಲ.

3. ಕರ್ಮವು ನಾಶವಾದರೂ ಅದು ಅಪೂರ್ವವೆಂಬ ಒಂದಾನೊಂದು ರೂಪವನ್ನು ಧರಿಸಿದ್ದು ಆಯಾ ಕರ್ಮಫಲವನ್ನು ಕೊಡುತ್ತದೆ ಎಂದು ಮೀಮಾಂಸಕರೆನ್ನುವರು. ಜೈ. ಸೂ. ಭಾ ೨–೧–೫ ವನ್ನು ನೋಡಿ. ಅಪೂರ್ವದ ಖಂಡನೆಯನ್ನು ಸೂ. ಭಾ. ೩–೨–೩೮ (ಭಾ. ಭಾ. ೩೧೪, ೩–೨–೪೧, ಭಾ. ಭಾ. ೩೧೭) ಇವುಗಳಲ್ಲಿ ಮಾಡಿದೆ.

4. ೧–೫–೩ರಲ್ಲಿ ಪ್ರಾಣನಲ್ಲಿ ವಿಶುದ್ಧ್ಯಾದಿಗುಣಗಳಿವೆ ಎಂಬ ವಿಷಯದ ಚರ್ಚೆಯಲ್ಲಿ (ಭಾ. ಭಾ. ೫೩, ೫೭) ಇದನ್ನು ಹೇಳಿರುತ್ತದೆ.

5. ಅರ್ಥಾಪತ್ತಿಪ್ರಮಾಣಕ್ಕೆ ಅನುಪಪತ್ತಿ, ಅನ್ಯಥಾಪ್ಯುಪಪತ್ತಿ, ಅನ್ಯಥೈವೋಪಪತ್ತಿ– ಎಂಬ ಮೂರು ದೋಷಗಳಿರಬಾರದು, ಪ್ರಕೃತದಲ್ಲಿ ಕರ್ಮಕ್ಕೆ ಫಲವಾಗುವದು ಬೇರೆ ರೀತಿಯಿಂದ ಹೊಂದುವದಿಲ್ಲವಾದ್ದರಿಂದ ಅಪೂರ್ವವನ್ನು ಕಲ್ಪಿಸಬೇಕೆಂದು ಪೂರ್ವಪಕ್ಷಿಯ ಭಾವ. ಆದರೆ ಅದು ಬೇರೆ ರೀತಿಯಿಂದಲೇ ಹೊಂದುತ್ತದೆಯಾದ್ದರಿಂದ ಅಪೂರ್ವವನ್ನು ಕಲ್ಪಿಸುವ ಮೊದಲೇ ಆ ಪ್ರಮಾಣವು ಕ್ಷಯವಾಗಿಬಿಟ್ಟಿರುತ್ತದೆ.

6. ಇದೂ ಸೇವೆಯಂತೆ ಕ್ರಿಯೆಯಾಗಿರುವದರಿಂದ.

ರಿಂದ ಫಲಪ್ರಾಪ್ತಿಯಾಗಬಹುದಾಗಿದೆ. (ನಾವು) ಕಂಡಿರುವ ಕ್ರಿಯಾಧರ್ಮ ಸಾಮರ್ಥ್ಯವನ್ನು ಬಿಡದೆಯೇ (ಈ ಕ್ರಿಯೆಗಳಿಗೂ) ಫಲಪ್ರಾಪ್ತಿಯನ್ನು ಕಲ್ಪಿಸುವದಕ್ಕೆ ಬರುತ್ತಿರುವಲ್ಲಿ ಕಂಡಿರುವ ಕ್ರಿಯಾಧರ್ಮಸಾಮರ್ಥ್ಯವನ್ನು ಕೈಬಿಡುವದು ನ್ಯಾಯುವಲ್ಲ. ಇದಲ್ಲದೆ (ನಿಮ್ಮ ಪಕ್ಷದಲ್ಲಿ) ಕಲ್ಪನಾಧಿಕ್ಯವಿದೆ. (ಇದರ ವಿವರ): ಈಶ್ವರನನ್ನಾದರೂ ಕಲ್ಪಿಸಬೇಕು, ಅಪೂರ್ವವನ್ನಾದರೂ ಕಲ್ಪಿಸಬೇಕು. ಇಲ್ಲಿ ಸೇವ್ಯನಿಂದ ಫಲವನ್ನು ದೊರಕಿಸುವದೆಂಬ ಕ್ರಿಯೆಯ ಸ್ವಭಾವವು (ಲೋಕದಲ್ಲಿ) ಕಂಡಿದೆಯೇ ಹೊರತು, ಅಪೂರ್ವದಿಂದ (ದೊರಕಿಸುವದು) ಕಂಡಿಲ್ಲ, ಅಪೂರ್ವವೂ ಕಂಡುಬಂದಿಲ್ಲ. (ಹೀಗಿರು)ವಲ್ಲಿ **ಅದೃಷ್ಟವಾದ ಅಪೂರ್ವವನ್ನು ಕಲ್ಪಿಸಬೇಕು, ಅದಕ್ಕೆ ಫಲವನ್ನು ಕೊಡುವ ಸಾಮರ್ಥ್ಯವನ್ನು ಕಲ್ಪಿಸಬೇಕು; ಸಾಮರ್ಥ್ಯವಿದ್ದರೆ (ಅದು) ಕೊಡುತ್ತದೆ ಎಂಬುದನ್ನೂ ಹೆಚ್ಚಿಗೆಯಾಗಿ (ಕಲ್ಪಿಸಬೇಕು). ಆದರೆ ಈ (ನಮ್ಮ ಪಕ್ಷ)ದಲ್ಲಿಯೋ ಎಂದರೆ ಈಶ್ವರನೆಂಬ ಸೇವ್ಯನು ಇದಾನೆಂಬುದನ್ನು ಮಾತ್ರ ಕಲ್ಪಿಸಬೇಕಾಗಿದೆಯೇ ಹೊರತು ಫಲವನ್ನು ಕೊಡುವ ಸಾಮರ್ಥ್ಯವನ್ನಾಗಲಿ, (ಫಲವನ್ನು) ಕೊಡುವದನ್ನಾಗಲಿ** (ಕಲ್ಪಿಸಬೇಕಾಗಿರು)ವದಿಲ್ಲ, ಏಕೆಂದರೆ ಸೇವ್ಯನಾದವನಿಂದ ಫಲವು ಪ್ರಾಪ್ತವಾಗುವದು ಕಂಡುಬಂದಿರುತ್ತದೆ. 'ದ್ಯಾವಾಪೃಥಿವಿಗಳು ವಿಧೃತವಾಗಿ ನಿಂತಿರುವವು' ಎಂಬುದೇ ಮುಂತಾದ ಅನುಮಾನವನ್ನೂ ತಿಳಿಸಿದ್ದಾಗಿದೆ.[2]

## ದೇವಾದಿಗಳ ವೃತ್ತಿಯಿಂದ ಅಕ್ಷರಾನುಮಾನ

(ಭಾಷ್ಯ)

೮೬. ತಥಾ ಚ ಯಜಮಾನಂ ದೇವಾಃ ಈಶ್ವರಾಃ ಸನ್ತೋಽ ಜೀವನಾರ್ಥೇಽನುಗತಾಃ ಚರುಪುರೋಡಾಶಾದ್ಯುಪಜೀವನಪ್ರಯೋಜನೇನ ಅನ್ಯಥಾಪಿ ಜೀವಿತುಮುತ್ಸಹನ್ತಃ ಕೃಪಣಾಂ ಹೀನಾಂ ವೃತ್ತಿಮ್ ಆಶ್ರಿತ್ಯ ಸ್ಥಿತಾಃ । ತಚ್ಚ ಪ್ರಶಾಸ್ತುಃ ಪ್ರಶಾಸನಾತ್ ಸ್ಯಾತ್ । ತಥಾ ಪಿತರೋಽಪಿ ತದರ್ಥಂ ದರ್ವೀಂ ದರ್ವೀಹೋಮಮ್ ಅನ್ವಾಯತ್ತಾಃ ಅನುಗತಾಃ ಇತ್ಯರ್ಥಃ ಸಮಾನಂ ಸರ್ವಮನ್ಯತ್ ॥

(ಭಾಷ್ಯಾರ್ಥ)

ಹೀಗೆಯೇ ದೇವತೆಗಳು ಸಮರ್ಥರಾಗಿದ್ದರೂ ಜೀವನಕ್ಕಾಗಿ ಚರು, ಪುರೋಡಾಶ- ಮುಂತಾದ ಉಪಜೀವನದ ಪ್ರಯೋಜನಕ್ಕಾಗಿ ಯಜಮಾನನಿಗೆ

---

1. ಮೊದಲಾದವರೆಂದರೆ ದೇವತೆಗಳು, ಋಷಿಗಳು.

2. ಹೀಗೆ ಆಗಮಾನುಮಾನಗಳ ಬೆಂಬಲವಿರುವದರಿಂದ ದಾನಕ್ರಿಯೆಗೆ ಫಲವನ್ನು ಕೊಡುವವನು ಈಶ್ವರನೆಂದು ತಿಳಿಯುವದೇ ಯುಕ್ತವೆಂದು ಭಾವ. ಸೂ. ಭಾ. ೩-೨-೪೧ರಲ್ಲಿ ಅಪೂರ್ವವನ್ನು ಒಪ್ಪಿರುವದು ಪ್ರೌಢವಾದದಿಂದ ಎಂದು ತಿಳಿಯಬೇಕು.

ಅಧೀನರಾಗಿರುವರು ; ಬೇರೆಯ ರೀತಿಯಲ್ಲಿ ಜೀವಿಸಲು ಶಕ್ತರಾಗಿದ್ದರೂ ಕೃಪಣವಾದ ಹೀನವೃತ್ತಿಯನ್ನು ಆಶ್ರಯಿಸಿಕೊಂಡಿರುವರು. ಇದೂ ಪ್ರಶಾಸ್ತೃ(ವಾದ ಈಶ್ವರನ) ಪ್ರಶಾಸನದಿಂದಲೇ ಆಗಿರಬೇಕು. ಹೀಗೆಯೇ ಪಿತೃಗಳೂ ಅದಕ್ಕಾಗಿ ದರ್ವಿಯನ್ನು ಎಂದರೆ ದರ್ವೀಹೋಮಕ್ಕೆ[1] ಅಧೀನರಾಗಿರುವರು, ಅದನ್ನು ಅನುಸರಿಸಿಕೊಂಡಿರುವರು ಎಂದರ್ಥ. ಮಿಕ್ಕದ್ದೆಲ್ಲವೂ (ಹಿಂದಿನ ಗ್ರಂಥಕ್ಕೆ) ಸಮಾನವು.

## ಅಕ್ಷರಜ್ಞಾನದ ಫಲದಿಂದ ಅಕ್ಷರಾನುಮಾನ

(ಉಪನಿಷತ್ತು)

**ಯೋ ವಾ ಏತದಕ್ಷರಂ ಗಾರ್ಗ್ಯವಿದಿತ್ವಾಽಸ್ಮಿಲ್ಲೋಕೇ ಜುಹೋತಿ ಯಜತೇ ತಪಸ್ತಪ್ಯತೇ ಬಹೂನಿ ವರ್ಷಸಹಸ್ರಾಣ್ಯನ್ತವದೇವಾಸ್ಯ ತದ್ಭವತಿ ಯೋ ವಾ ಏತದಕ್ಷರಂ ಗಾರ್ಗ್ಯವಿದಿತ್ವಾಽಸ್ಮಾಲ್ಲೋಕಾತ್ ಪ್ರೈತಿ ಸ ಕೃಪಣೋಽಥ ಯ ಏತದಕ್ಷರಂ ಗಾರ್ಗಿ ವಿದಿತ್ವಾಽಸ್ಮಾಲ್ಲೋಕಾತ್ ಪ್ರೈತಿ ಸ ಬ್ರಾಹ್ಮಣಃ ॥೧೦॥**

೧೦. ಗಾರ್ಗಿಯೆ, ಯಾವನು ಈ ಅಕ್ಷರವನ್ನು ಅರಿತುಕೊಳ್ಳದೆ ಬಹುವರ್ಷಸಹಸ್ರಗಳವರೆಗೂ ಈ ಲೋಕದಲ್ಲಿ ಹೋಮಮಾಡುವನೋ, ಯಾಗಮಾಡುವನೋ, ತಪಸ್ಸನ್ನು ಮಾಡುವನೋ, ಅವನ ಆ (ಕರ್ಮವು) ಅಂತವುಳ್ಳದ್ದೇ ಆಗಿರುವದು. ಗಾರ್ಗಿಯೆ, ಯಾವನು ಈ ಅಕ್ಷರವನ್ನು ಅರಿಯದೆ ಈ ಲೋಕದಿಂದ ತೆರಳುವನೋ ಅವನು ಕೃಪಣನು ; ಇನ್ನು ಗಾರ್ಗಿಯೆ, ಯಾವನು ಈ ಅಕ್ಷರವನ್ನು ಅರಿತು ಈ ಲೋಕದಿಂದ ತೆರಳುವನೋ ಅವನು ಬ್ರಾಹ್ಮಣನು.

(ಭಾಷ್ಯ)

೮೭. ಇತಶ್ಚಾಸ್ತಿ ತದಕ್ಷರಂ ಯಸ್ಮಾತ್ ತದಜ್ಞಾನೇ ನಿಯತಾ ಸಂಸಾರೋಪಪತ್ತಿಃ । ಭವಿತವ್ಯಂ ತು ತೇನ ಯದ್ವಿಜ್ಞಾನಾತ್ ತದ್ವಿಚ್ಛೇದಃ । ನ್ಯಾಯೋಪಪತ್ತೇಃ । ನನು ಕ್ರಿಯಾತ ಏವ ತದ್ವಿಚ್ಛಿತ್ತಿಃ ಸ್ಯಾತ್ ಇತಿ ಚೇತ್ । ನ । ಯೋ ವಾ ಏತದಕ್ಷರಂ ಹೇ ಗಾರ್ಗಿ ಅವಿದಿತ್ವಾ ಅವಿಜ್ಞಾಯ ಅಸ್ಮಿನ್ ಲೋಕೇ ಜುಹೋತಿ ಯಜತೇ ತಪಸ್ತಪ್ಯತೇ ಯದ್ಯಪಿ ಬಹೂನಿ ವರ್ಷಸಹಸ್ರಾಣಿ ಅನ್ತವದೇವ ಅಸ್ಯ ತತ್ ಫಲಂ ಭವತಿ ತತ್ಫಲೋಪಭೋಗಾನ್ತೇ ಕ್ಷೀಯನ್ತ ಏವಾಸ್ಯ ಕರ್ಮಾಣಿ । ಅಪಿ ಚ ಯದ್ವಿಜ್ಞಾನಾತ್ ಕಾರ್ಪಣ್ಯಾತ್ಯಯಃ ಸಂಸಾರವಿಚ್ಛೇದಃ ಯದ್ವಿಜ್ಞಾನಾಭಾವಾಚ್ಚ ಕರ್ಮಕೃತ್ ಕೃಪಣಃ ಕೃತಫಲಸ್ಯೈವ ಉಪಭೋಕ್ತಾ ಜನನಮರಣಪ್ರಬನ್ಧಾರೂಢಃ ಸಂಸರತಿ ತದಸ್ತಿ

1. ಮತ್ತೊಂದಕ್ಕೆ ಪ್ರಕೃತಿಯೂ ಅಲ್ಲದೆ ವಿಕೃತಿಯೂ ಅಲ್ಲದಿರುವ ಹೋಮ. ಆ॥ಗಿ॥

ಅಕ್ಷರಂ ಪ್ರಶಾಸಿತೃ । ತದೇತದುಚ್ಯತೇ । ಯೋ ವಾ ಏತದಕ್ಷರಂ ಗಾರ್ಗಿ ಅವಿದಿತ್ವಾ ಅಸ್ಮಾತ್ ಲೋಕಾತ್ ಪ್ರೈತಿ ಸ ಕೃಪಣಃ ಪಣಕ್ರೀತ ಇವ ದಾಸಾದಿಃ । ಅಥ ಯ ಏತದಕ್ಷರಂ ಗಾರ್ಗಿ ವಿದಿತ್ವಾ ಅಸ್ಮಾತ್ ಲೋಕಾತ್ ಪ್ರೈತಿ ಸ ಬ್ರಾಹ್ಮಣಃ ॥

(ಭಾಷ್ಯಾರ್ಥ)

ಈ ಕಾರಣದಿಂದಲೂ ಆ ಅಕ್ಷರವು ಇದೆ (ಎನ್ನಬೇಕು). ಏಕೆಂದರೆ ಅದನ್ನು ಅರಿತುಕೊಳ್ಳದೆ ಇದ್ದರೆ ಸಂಸಾರವು ನಿಯತವಾಗಿ ಇದ್ದುಕೊಂಡಿರುತ್ತದೆ. ಯಾವದನ್ನು ಅರಿತುಕೊಂಡದ್ದರಿಂದ ಅದರ ನಾಶವಾಗುವದೋ ಅದು ಇರಬೇಕು. ಏಕೆಂದರೆ (ಹಾಗೆನ್ನುವದು) ಯುಕ್ತಿಯುಕ್ತವಾಗಿರುತ್ತದೆ.

(ಆಕ್ಷೇಪ) :- ಕರ್ಮದಿಂದಲೇ ಅದರ ನಾಶವಾಗಬಹುದಲ್ಲ !

(ಪರಿಹಾರ) :- ಹಾಗಲ್ಲ. ಎಲೈ ಗಾರ್ಗಿಯೆ, ಯಾವನು ಈ ಅಕ್ಷರವನ್ನು ಅರಿತುಕೊಳ್ಳದೆ ವಿಶೇಷವಾಗಿ ಗೊತ್ತುಪಡಿಸಿಕೊಳ್ಳದೆ ಈ ಲೋಕದಲ್ಲಿ ಹೋಮಮಾಡುತ್ತಾನೋ ಯಾಗಮಾಡುತ್ತಾನೋ ತಪಸ್ಸನ್ನು ಮಾಡುತ್ತಾನೋ ಬಹುವರ್ಷಸಹಸ್ರಗಳು (ಹಾಗೆ ಮಾಡಿ)ದರೂ ಅವನಿಗೆ ಆ ಫಲವು ಅಂತವುಳ್ಳದ್ದೇ ಆಗುತ್ತದೆ ; ಆ ಫಲವನ್ನು ಉಪಭೋಗಿಸಿದ್ದು ಮುಗಿಯಲು ಅವನ ಕರ್ಮಗಳು ಕ್ಷಯವೇ ಆಗುತ್ತವೆ.

ಮತ್ತು ಯಾವದನ್ನು ಅರಿತುಕೊಂಡದ್ದರಿಂದ ಕಾರ್ಪಣ್ಯವನ್ನು ತಪ್ಪಿಸಿಕೊಳ್ಳಬಹುದೋ ಸಂಸಾರದ ನಾಶವಾಗುವದೋ, ಮತ್ತು ಯಾವದನ್ನು ಅರಿತುಕೊಳ್ಳದ್ದರಿಂದ ಕರ್ಮವನ್ನು ಮಾಡುವವನು ಕೃಪಣನಾಗಿ ಮಾಡಿದ (ಕರ್ಮದ) ಫಲವನ್ನು ಮಾತ್ರ ಅನುಭವಿಸಿಕೊಂಡು ಜನನಮರಣಪ್ರಬಂಧವನ್ನೇರಿ ಸಂಸಾರದಲ್ಲಿ ತೊಳಲುತ್ತಿರುವನೋ, ಆ ಪ್ರಶಾಸಿತೃವಾದ ಅಕ್ಷರವು ಇರಬೇಕು. ಆ ಇದನ್ನು ಹೇಳುತ್ತಿದಾನೆ. ಗಾರ್ಗಿಯೆ, ಯಾವನು ಈ ಅಕ್ಷರವನ್ನು ಅರಿತುಕೊಳ್ಳದೆ ಈ ಲೋಕದಿಂದ ತೆರಳುತ್ತಾನೋ ಅವನು ಕೃಪಣನು, ಹಣವನ್ನು ಕೊಟ್ಟು ಕೊಂಡ ದಾಸನೇ ಮುಂತಾದವರಂತೆ (ಇರುತ್ತಾನೆ). ಇನ್ನು ಗಾರ್ಗಿಯೆ, ಯಾವನು ಈ ಅಕ್ಷರವನ್ನು ಅರಿತುಕೊಂಡು ಈ ಲೋಕದಿಂದ ತೆರಳುತ್ತಾನೋ ಅವನು ಬ್ರಾಹ್ಮಣನು.[1]

---

1. ಹಿಂದಿನ ವಾಕ್ಯವು ಬದುಕಿರುವವನ ವಿಷಯ, ಈ ವಾಕ್ಯವು ಪರಲೋಕದ ವಿಷಯ ಎಂದು ಆ॥ ವ್ಯಾಖ್ಯಾನದಲ್ಲಿ ವಿಶೇಷವನ್ನು ಹೇಳಿದೆ. ಆದರೆ ಕರ್ಮಫಲವು ಪರಲೋಕಕ್ಕೆ ಸಂಬಂಧಪಟ್ಟದ್ದೇ ಆಗಿದೆ. ಆದ್ದರಿಂದ ಎಷ್ಟು ಕರ್ಮವನ್ನು ಮಾಡಿದರೂ ಅವರಿಂದ ಮೋಕ್ಷವಿಲ್ಲ, ಜ್ಞಾನದಿಂದಲೇ ಮೋಕ್ಷ -ಎಂದು ಮೊದಲನೆಯ ವಾಕ್ಯದ ಆಶಯ, ಕರ್ಮವು ಅಲ್ಪಫಲದಿಂದ ತೃಪ್ತನಾಗಿ ಮತ್ತೆಮತ್ತೆ ದುಡಿಯುವದನ್ನೇ ತಂದುಕೊಡುತ್ತದೆ, ಜ್ಞಾನವು ಅನಂತಫಲವನ್ನು ಕೊಟ್ಟು ಕರ್ಮಬಂಧದಿಂದ ಬಿಡುಗಡೆಮಾಡುತ್ತದೆ ಎಂಬುದು ಎರಡನೆಯ ವಾಕ್ಯದ ಆಶಯ -ಎಂದು ಕಲ್ಪಿಸುವದು ಯುಕ್ತವೆಂದು ನಮ್ಮ ಅಭಿಪ್ರಾಯ.

# ಅಕ್ಷರವು ಅಚೇತನವಲ್ಲ

(ಉಪನಿಷತ್ತು)

**ತದ್ವಾ ಏತದಕ್ಷರಂ ಗಾರ್ಗ್ಯದೃಷ್ಟಂ ದ್ರಷ್ಟ್ರಶ್ರುತಗ್ಂ ಶ್ರೋತ್ರಮತಂ ಮನ್ತ್ರವಿಜ್ಞಾತಂ ವಿಜ್ಞಾತೃ ನಾನ್ಯದತೋಽಸ್ತಿ ದ್ರಷ್ಟೃ ನಾನ್ಯದತೋಽಸ್ತಿ ಶ್ರೋತೃ ನಾನ್ಯದತೋಽಸ್ತಿ ಮನ್ತೃ ನಾನ್ಯದತೋಽಸ್ತಿ ವಿಜ್ಞಾತ್ರೇತಸ್ಮಿನ್ನು ಖಲ್ವಕ್ಷರೇ ಗಾರ್ಗ್ಯಾಕಾಶ ಓತಶ್ಚ ಪ್ರೋತಶ್ಚೇತಿ ॥ ೧೧ ॥**

೧೧. ಗಾರ್ಗಿಯೆ, ಆ ಈ ಅಕ್ಷರವು ಅದೃಷ್ಟವಾದ ದ್ರಷ್ಟೃ, ಅಶ್ರುತವಾದ ಶ್ರೋತೃ, ಅಮತವಾದ ಮಂತೃ, ಅವಿಜ್ಞಾತವಾದ ವಿಜ್ಞಾತೃ. ಇದಕ್ಕಿಂತ ಬೇರೆಯಾದ ದ್ರಷ್ಟೃವಿಲ್ಲ, ಇದಕ್ಕಿಂತ ಬೇರೆಯಾದ ಶ್ರೋತೃವಿಲ್ಲ, ಇದಕ್ಕಿಂತ ಬೇರೆಯಾದ ಮಂತೃವಿಲ್ಲ, ಇದಕ್ಕಿಂತ ಬೇರೆಯಾದ ವಿಜ್ಞಾತೃವಿಲ್ಲ. ಗಾರ್ಗಿಯೆ, ಈ ಅಕ್ಷರದಲ್ಲಿಯೇ ಆಕಾಶವು ಓತವೂ ಪ್ರೋತವೂ ಆಗಿರುತ್ತದೆ.

## ಪ್ರಶಾಸ್ತೃತ್ವವು ಚೈತನ್ಯಸ್ವರೂಪಮಾತ್ರದಿಂದಲೇ

(ಭಾಷ್ಯ)

೮೮. ಅಗ್ನೇರ್ದಹನಪ್ರಕಾಶಕತ್ವವತ್ ಸ್ವಾಭಾವಿಕಮಸ್ಯ ಪ್ರಶಾಸ್ತೃತ್ವಮ್ ಅಚೇತನಸ್ಯೈವೇತ್ಯತ ಆಹ । ತದ್ವಾ ಏತದಕ್ಷರಂ ಗಾರ್ಗಿ ಅದೃಷ್ಟಂ ನ ಕೇನಚಿತ್ ದೃಷ್ಟಮ್ ಅವಿಷಯತ್ವಾತ್ । ಸ್ವಯಂ ತು ದ್ರಷ್ಟೃ ದೃಷ್ಟಿಸ್ವರೂಪತ್ವಾತ್ । ತಥಾ ಅಶ್ರುತಂ ಶ್ರೋತ್ರಾವಿಷಯತ್ವಾತ್ । ಸ್ವಯಂ ಶ್ರೋತೃ। ಶ್ರುತಿಸ್ವರೂಪತ್ವಾತ್ । ತಥಾ ಅಮತಮ್ । ಮನಸೋಽವಿಷಯತ್ವಾತ್ । ಸ್ವಯಂ ಮನ್ತೃ । ಮತಿಸ್ವರೂಪತ್ವಾತ್ । ತಥಾ ಅವಿಜ್ಞಾತಮ್ । ಬುದ್ಧೇರವಿಷಯತ್ವಾತ್ । ಸ್ವಯಂ ವಿಜ್ಞಾತೃ । ವಿಜ್ಞಾನಸ್ವರೂಪತ್ವಾತ್ ॥

(ಭಾಷ್ಯಾರ್ಥ)

ಬೆಂಕಿಗೆ ಸುಡುವಿಕೆ, ಬೆಳಗುವಿಕೆ –ಎಂಬಂತೆ ಇದಕ್ಕೆ ಪ್ರಶಾಸ್ತೃತ್ವವು ಸ್ವಾಭಾವಿಕವು. (ಇದು) ಅಚೇತನದ್ದೇ[1] ಎಂದರೆ ಹೇಳುತ್ತಾನೆ: ಗಾರ್ಗಿಯೆ,

---

1. 'ಸ್ವಾಭಾವಿಕಂ ಚೇತನಸ್ಯೈವೇತ್ಯಾಹ' –ಎಂಬ ಪಾಠವಿದ್ದರೆ ಸ್ವರಸ. ಏಕೆಂದರೆ ಬೆಂಕಿಯು ಸುಡುತ್ತದೆ ಎಂದರೆ ಹೇಗೆ ಅದಕ್ಕಿಂತ ಬೇರೆ ಕ್ರಿಯೆಯಿಲ್ಲವೋ ಹಾಗೆ ಅಕ್ಷರಕ್ಕೆ ಚೈತನ್ಯಸ್ವರೂಪಕ್ಕಿಂತ ಬೇರೆಯಾದ ಪ್ರಶಾಸ್ತೃತ್ವವಿಲ್ಲ ಎಂಬರ್ಥವು ಸರಳವಾಗಿ ಹೊರಡುತ್ತದೆ. ಆದರೆ ವ್ಯಾಖ್ಯಾನಕ್ಕೆ ಇಲ್ಲಿ ಕೊಟ್ಟಿರುವ ಪಾಠವೇ ಸಮ್ಮತವೆಂದು ತೋರುತ್ತದೆ.

ಆ ಈ ಅಕ್ಷರವು ಅದೃಷ್ಟವು, ಮತ್ತೊಬ್ಬರಿಂದಲೂ ದ್ರಷ್ಟೃವಲ್ಲ; ಏಕೆಂದರೆ (ಅದು) ವಿಷಯವಲ್ಲ. ತಾನುತಾನೇ ಆದರೋ ದ್ರಷ್ಟೃ; ಏಕೆಂದರೆ ದೃಷ್ಟಿಯ ಸ್ವರೂಪವೇ ಆಗಿರುತ್ತದೆ[1]. ಹೀಗೆಯೇ (ಅದು) ಅಶ್ರುತವು, ಏಕೆಂದರೆ ಶ್ರೋತ್ರಕ್ಕೆ ವಿಷಯವಲ್ಲ. ತಾನುತಾನು ಶ್ರೋತೃವೇ, ಏಕೆಂದರೆ ಶ್ರುತಿಯ ಸ್ವರೂಪವೇ ಆಗಿರುತ್ತದೆ. ಇದರಂತೆ (ಅದು) ಅಮತವು, ಏಕೆಂದರೆ ಮನಸ್ಸಿಗೆ ಅವಿಷಯವಾಗಿರುತ್ತದೆ. ತಾನುತಾನು ಮಂತೃವೇ, ಏಕೆಂದರೆ ಮತಿಯ ಸ್ವರೂಪವೇ ಆಗಿರುತ್ತದೆ. ಇದರಂತೆ (ಅದು) ಅವಿಜ್ಞಾತವು; ಏಕೆಂದರೆ ಬುದ್ಧಿಗೆ ವಿಷಯವಲ್ಲ. ತಾನುತಾನು ವಿಜ್ಞಾತೃವೇ; ಏಕೆಂದರೆ ವಿಜ್ಞಾನದ ಸ್ವರೂಪವೇ ಆಗಿರುತ್ತದೆ.

## ಅಕ್ಷರವು ಪ್ರಧಾನವೂ ಅಲ್ಲ, ಮತ್ತೊಂದೂ ಅಲ್ಲ

(ಭಾಷ್ಯ)

೮೯. ಕಿಂ ಚ ನಾನ್ಯತ್ ಅತಃ ಅಸ್ಮಾತ್ ಅಕ್ಷರಾತ್ ಅಸ್ತಿ, ನಾಸ್ತಿ ಕಿಂಚಿತ್ ದ್ರಷ್ಟೃ ದರ್ಶನಕ್ರಿಯಾಕರ್ತೃ । ಏತದೇವ ಅಕ್ಷರಂ ದರ್ಶನಕ್ರಿಯಾ ಕರ್ತೃ ಸರ್ವತ್ರ । ತಥಾ ನಾನ್ಯತ್ ಅತೋಽಸ್ತಿ ಶ್ರೋತೃ । ತದೇವ ಅಕ್ಷರಂ ಶ್ರೋತೃ ಸರ್ವತ್ರ । ನಾನ್ಯತ್ ಅತೋಽಸ್ತಿ ಮನ್ತೃ । ತದೇವ ಅಕ್ಷರಂ ಮನ್ತೃ ಸರ್ವತ್ರ ಸರ್ವಮನೋದ್ವಾರೇಣ । ನಾನ್ಯತ್ ಅತೋಽಸ್ತಿ ವಿಜ್ಞಾತೃ ವಿಜ್ಞಾನ ಕ್ರಿಯಾಕರ್ತೃ । ತದೇವ ಅಕ್ಷರಂ ಸರ್ವಬುದ್ಧಿದ್ವಾರೇಣ ವಿಜ್ಞಾನಕ್ರಿಯಾ ಕರ್ತೃ । ನಾಚೇತನಂ ಪ್ರಧಾನಮ್ ಅನ್ಯದ್ವಾ ॥

(ಭಾಷ್ಯಾರ್ಥ)

ಮತ್ತು ಇದಕ್ಕಿಂತ ಈ ಅಕ್ಷರಕ್ಕಿಂತ ಮತ್ತೊಂದು ಇಲ್ಲ; (ಇದಕ್ಕಿಂತ ಬೇರೊಂದು) ಯಾವ ದ್ರಷ್ಟೃವೂ ದರ್ಶನಕ್ರಿಯೆಯನ್ನು ಮಾಡುವದು ಇರುವದಿಲ್ಲ[2]. ಇದೇ ಅಕ್ಷರವೇ ಎಲ್ಲೆಲ್ಲಿಯೂ[3] ದರ್ಶನಕ್ರಿಯೆಗೆ ಕರ್ತೃ. ಹೀಗೆಯೇ ಇದಕ್ಕಿಂತ ಬೇರೊಂದು ಶ್ರೋತೃವಿಲ್ಲ, ಈ ಅಕ್ಷರವೇ ಎಲ್ಲೆಲ್ಲಿಯೂ ಶ್ರೋತೃ. (ಹೀಗೆಯೇ) ಇದಕ್ಕಿಂತ ಬೇರೊಂದು ಮಂತೃವಿಲ್ಲ; ಇದೇ

1. ಪ್ರಕಾಶಸ್ವರೂಪವೇ ಆಗಿರುವ ಬೆಂಕಿ, ಸೂರ್ಯ- ಮುಂತಾದವುಗಳನ್ನು ಪ್ರಕಾಶಕವೆಂಬಂತೆ ದೃಷ್ಟಿಚೈತನ್ಯಸ್ವರೂಪವೇ ಆಗಿರುವ ಪ್ರಶಾಸ್ತೃವನ್ನು ದ್ರಷ್ಟೃವೆನ್ನುತ್ತೇವೆ. ಅದರಲ್ಲಿ ದೃಷ್ಟಿ ಎಂಬ ವಿಕಾರವಾಗುವದೆಂದೇನೂ ಅಭಿಪ್ರಾಯವಿಲ್ಲ ಎಂದರ್ಥ. ಶ್ರುತಿ, ಮತಿ -ಮುಂತಾದವುಗಳೆಲ್ಲವೂ ಹೀಗೆಯೇ ಚೈತನ್ಯಸ್ವರೂಪವೇ.

2. ಪ್ರಧಾನವು ಕರ್ತೃ ಎಂಬ ಸಾಂಖ್ಯರ ಮತವಾಗಲಿ ಜೀವರು ಕರ್ತೃ ಎಂಬ ಮೀಮಾಂಸಕರ ಮತ್ತು ಸಾಮಾನ್ಯಜನರ ಮತವಾಗಲಿ ಸರಿಯಲ್ಲ.

3. ಎಲ್ಲಾ ಶರೀರಗಳಲ್ಲಿಯೂ.

ಅಕ್ಷರವೇ ಎಲ್ಲಾ ಮನಸ್ಸುಗಳ ಮೂಲಕ ಮನನಮಾಡತಕ್ಕದ್ದಾಗಿದೆ[1]. ಇದಕ್ಕಿಂತ ಬೇರೊಂದು ವಿಜ್ಞಾತೃವಿಲ್ಲ, (ಮತ್ತೊಂದು) ವಿಜ್ಞಾನಕ್ರಿಯಾಕರ್ತೃವಿಲ್ಲ ; ಇದೇ ಅಕ್ಷರವೇ ಎಲ್ಲಾ ಬುದ್ಧಿಗಳ ದ್ವಾರದಿಂದ ವಿಜ್ಞಾನಕ್ರಿಯಾಕರ್ತೃವಾಗಿದೆಯೇ[2] ಹೊರತು ಅಚೇತನವಾದ ಪ್ರಧಾನವಾಗಲಿ ಮತ್ತೊಂದಾಗಲಿ ಅಲ್ಲ[3].

## ಗಾರ್ಗಿಯ ಪ್ರಶ್ನೆಯ ಉತ್ತರದ ಉಪಸಂಹಾರ

(ಭಾಷ್ಯ)

೯೦. ಏತಸ್ಮಿನ್ನು ಖಲು ಅಕ್ಷರೇ ಗಾರ್ಗಿ ಆಕಾಶ ಓತಶ್ಚ ಪ್ರೋತಶ್ಚ । ಯದೇವ ಸಾಕ್ಷಾದಪರೋಕ್ಷಾದ್ ಬ್ರಹ್ಮ, ಯ ಆತ್ಮಾ ಸರ್ವಾನ್ತರಃ, ಅಶನಾಯಾದಿಸಂಸಾರಧರ್ಮಾತೀತಃ, ಯಸ್ಮಿನ್ನಾಕಾಶ ಓತಶ್ಚ ಪ್ರೋತಶ್ಚ, ಏಷಾ ಪರಾ ಕಾಷ್ಠಾ, ಏಷಾ ಪರಾ ಗತಿಃ, ಏತತ್ ಪರಂ ಬ್ರಹ್ಮ, ಏತತ್ ಪೃಥಿವ್ಯಾದೇರಾಕಾಶಾನ್ತಸ್ಯ ಸತ್ಯಸ್ಯ ಸತ್ಯಮ್ ॥

(ಭಾಷ್ಯಾರ್ಥ)

ಗಾರ್ಗಿಯೆ, ಈ ಅಕ್ಷರದಲ್ಲಿಯೇ ಆಕಾಶವು[4] ಓತವೂ ಪ್ರೋತವೂ ಆಗಿದೆ[5]. ಯಾವದು (ತಾನೇ) ಸಾಕ್ಷಾತ್ ಅಪರೋಕ್ಷವಾಗಿರುವ ಬ್ರಹ್ಮವೋ, ಯಾವನು ಸರ್ವಾಂತರವಾದ ಆತ್ಮನೋ[6], ಹಸಿವು ಮುಂತಾದ ಸಂಸಾರಧರ್ಮಗಳನ್ನು ಮೀರಿರುವವನೋ, ಯಾವದರಲ್ಲಿ ಆಕಾಶವು ಓತವೂ ಪ್ರೋತವೂ

---

1. ಮನಸ್ಸುಗಳು ಕರಣಮಾತ್ರ ; ಎಲ್ಲಾ ಮನಸ್ಸುಗಳಿಗೂ ಅರಿವು ಆತ್ಮನಿಂದಲೇ ಬರಬೇಕು ಎಂದರ್ಥ. ಹೀಗೆಯೇ ಮಿಕ್ಕ ಕರಣಗಳಿಗೂ ಚೈತನ್ಯವು ಆತ್ಮನಿಂದಲೇ.

2. ವಿಜ್ಞಾನಕ್ರಿಯಾಕರ್ತೃ ಎಂಬುದು ದಹನಕರ್ತೃ ಎಂದಂತೆ ಎಂಬುದನ್ನು ಮರೆಯದಿರಬೇಕು. ವಿಜ್ಞಾನಾತ್ಮಸ್ವರೂಪವು ಆಕಾಶದಲ್ಲಿ ನೀಲವರ್ಣದಂತೆ ಅಕ್ಷರದಲ್ಲಿ ಕಲ್ಪಿತವಾಗಿರುತ್ತದೆ.

3. ಅಕ್ಷರಕ್ಕಿಂತ ಬೇರೆಯಾದ ಅಚೇತನವಾದ ಅಥವಾ ಚೇತನವಾದ ಕರ್ತೃವು ಮತ್ತೊಂದಿಲ್ಲ ಎಂಬುದು ಅರ್ಥ. ಸೂ. ಭಾ. ೧-೩-೧೨, ಭಾ. ಭಾ. ೨೪೭ನ್ನು ನೋಡಿ.

4. ಅವ್ಯಾಕೃತವು.

5. ಅವ್ಯಾಕೃತವು ಪರಮಾತ್ಮನಲ್ಲಿ ಓತಪ್ರೋತವಾಗಿದೆ ಎಂಬುದಕ್ಕೆ ಕ. ಭಾ. ೧-೩-೧೧ (ಭಾ. ಭಾ೯೬) ನೋಡಿ. ಇಲ್ಲಿ ಓತಪ್ರೋತವಾಗಿದೆ ಎಂಬುದನ್ನು ಅದರ ಸ್ವರೂಪದಿಂದಲೇ ಇರುತ್ತದೆ ಎಂದು ಅರ್ಥಮಾಡಿಕೊಳ್ಳಬೇಕು ; ಅವ್ಯಾಕೃತವು ತೋರುವ ರೂಪದಿಂದ ಅಕ್ಷರಕ್ಕಿಂತ ಬೇರೆ ಎಂದಾಗಲಿ ಬೇರೆಯಲ್ಲವೆಂದಾಗಲಿ ನಿರ್ವಚನಮಾಡುವದಕ್ಕೆ ಬರುವದಿಲ್ಲ.

6. ಅಕ್ಷರವೂ ಆತ್ಮನೂ ಒಂದೇ ; ಬೇರೆಯ ಆತ್ಮನೇ ಇಲ್ಲ.

ಆಗಿರುವದೋ ಇದೇ ಕೊನೆಯು, ಇದೇ ಪರಗತಿಯು[1], ಇದೇ ಪರಬ್ರಹ್ಮವು, ಇದೇ ಪೃಥಿವಿಯಿಂದ ಮೊದಲಾಗಿ ಆಕಾಶದವರೆಗಿನ ಸತ್ಯದ ಸತ್ಯವು.

## ವಾಚಕ್ನವಿಯು ಸುಮ್ಮನಾದದ್ದು

(ಉಪನಿಷತ್ತು)

**ಸಾ ಹೋವಾಚ ಬ್ರಾಹ್ಮಣಾ ಭಗವನ್ತಸ್ತದೇವ ಬಹುಮನ್ಯೇಧ್ವಂ ಯದಸ್ಮಾನ್ನಮಸ್ಕಾರೇಣ ಮುಚ್ಯೇಧ್ವಂ ನ ವೈ ಜಾತು ಯುಷ್ಮಾಕಮಿಮಂ ಕಶ್ಚಿದ್ಬ್ರಹ್ಮೋದ್ಯಂ ಜೇತೇತಿ ತತೋ ಹ ವಾಚಕ್ನವ್ಯುಪರರಾಮ ॥ ೧೨ ॥**

೧೨. ಆಕೆ ಇಂತೆಂದಳು: "ಭಗವಂತರಾದ ಬ್ರಾಹ್ಮಣರೆ, ನಮಸ್ಕಾರ(ಮಾಡುವದ)ರಿಂದ ಇವನಿಂದ ಬಿಡುಗಡೆಯಾಗುವಿರಾದರೆ ಅದನ್ನೇ ಹೆಚ್ಚೆಂದು ತಿಳಿಯಿರಿ. ನಿಮ್ಮಗಳಲ್ಲಿ ಇವನನ್ನು ಬ್ರಹ್ಮವಾದದ ವಿಷಯಕ್ಕೆ ಯಾವನೊಬ್ಬನೂ ಎಂದಿಗೂ ಜಯಿಸಲಾರನು" ಆಗ ವಾಚಕ್ನವಿಯು ಸುಮ್ಮನಾದಳು.

## ಗಾರ್ಗಿಯು ಯಾಜ್ಞವಲ್ಕ್ಯನನ್ನು ಕೊಂಡಾಡಿದ್ದು

(ಭಾಷ್ಯ)

೯೧. **ಸಾ ಹೋವಾಚ**। ಹೇ ಬ್ರಾಹ್ಮಣಾಃ ಭಗವನ್ತಃ ಶೃಣುತ ಮದೀಯಂ ವಚಃ। ತದೇವ ಬಹುಮನ್ಯೇಧ್ವಮ್। ಕಿಂ ತತ್? ಯತ್ ಅಸ್ಮಾತ್ ಯಾಜ್ಞವಲ್ಕ್ಯಾತ್ ನಮಸ್ಕಾರೇಣ ಮುಚ್ಯೇಧ್ವಮ್ ಅಸ್ಮೈ ನಮಸ್ಕಾರಂ ಕೃತ್ವಾ ತದೇವ ಬಹುಮನ್ಯಧ್ವಮ್ ಇತ್ಯರ್ಥಃ। ಜಯಸ್ತು ಅಸ್ಯ ಮನಸಾಪಿ ನಾಶಂಸನೀಯಃ ಕಿಮುತ ಕಾರ್ಯತಃ। ಕಸ್ಮಾತ್? ನ ವೈ ಯುಷ್ಮಾಕಂ ಮಧ್ಯೇ ಜಾತು ಕದಾಚಿದಪಿ ಇಮಂ ಯಾಜ್ಞವಲ್ಕ್ಯಂ (ಕಶ್ಚಿತ್) ಬ್ರಹ್ಮೋದ್ಯಂ ಪ್ರತಿ ಜೇತಾ। ಪ್ರಶ್ನೌ ಚೇತ್ ಮಹ್ಯಂ ವಕ್ಷ್ಯತಿ ನ ಜೇತಾ ಭವಿತಾ ಇತಿ ಪೂರ್ವಮೇವ ಮಯಾ ಪ್ರತಿಜ್ಞಾತಮ್। ಅದ್ಯಾಪಿ ಮಮಾಯಮೇವ ನಿಶ್ಚಯಃ ಬ್ರಹ್ಮೋದ್ಯಂ ಪ್ರತಿ ಏತತ್ತುಲ್ಯೋ ನ ಕಶ್ಚಿತ್ ವಿದ್ಯತ ಇತಿ। ತತೋ ಹ ವಾಚಕ್ನವೀ ಉಪರರಾಮ ॥

(ಭಾಷ್ಯಾರ್ಥ)

ಆಕೆ ಇಂತೆಂದಳು: ಎಲೈ ಬ್ರಾಹ್ಮಣರೆ, ಪೂಜ್ಯರೆ, ನನ್ನ ಮಾತನ್ನು ಕೇಳಿರಿ. ಅದನ್ನೇ ಹೆಚ್ಚೆಂದು ತಿಳಿಯಿರಿ. ಅದು ಯಾವದು? ಎಂದರೆ

1. ಕ. ೧-೩-೧೧ರ ಸೂಚನೆ.

ಈ ಯಾಜ್ಞವಲ್ಕ್ಯನಿಂದ ನಮಸ್ಕಾರದಿಂದ ಮುಕ್ತರಾಗುವಿರಾದರೆ, ಅದು. ಅವನಿಗೆ ನಮಸ್ಕಾರವನ್ನು ಮಾಡಿ (ಅವನು ಸುಮ್ಮನೆ ಬಿಟ್ಟರೆ) ಅದೇ ಹೆಚ್ಚೆಂದು ತಿಳಿಯಿರಿ ಎಂದರ್ಥ. ಇವನನ್ನು ಗೆಲ್ಲುವದೆಂಬುದನ್ನು ಮನಸ್ಸಿನಲ್ಲಿಯೂ ಇಟ್ಟುಕೊಳ್ಳತಕ್ಕದ್ದಲ್ಲ, ಕಾರ್ಯದಿಂದ (ಗೆಲ್ಲುವದು) ಎಲ್ಲಿ ಬಂತು ? ಏಕೆ ? ಎಂದರೆ ನಿಮ್ಮಗಳೊಳಗೆ ಎಂದಿಗೂ ಯಾವಾಗಲೇ ಆದರೂ ಈ ಯಾಜ್ಞವಲ್ಕ್ಯನನ್ನು ಬ್ರಹ್ಮವಾದದ ವಿಷಯಕ್ಕೆ (ಯಾವನೂ) ಗೆಲ್ಲುವವನಾಗಲಾರನು. (ಈ ಎರಡು) ಪ್ರಶ್ನೆಗಳನ್ನು ನನಗೆ (ಬಿಡಿಸಿ) ಹೇಳುವದಾದರೆ (ಅವನನ್ನು) ಜಯಿಸುವವನೇ ಇರುವದಿಲ್ಲ ಎಂದು ಮೊದಲೇ ನಾನು ಪ್ರತಿಜ್ಞೆಮಾಡಿದ್ದೆನು. ಈಗಲೂ ಬ್ರಹ್ಮವಾದದ ವಿಷಯಕ್ಕೆ ಇವನಿಗೆ ಸಮನಾದವನು ಇಲ್ಲವೆಂಬುದೇ ನನ್ನ ನಿಶ್ಚಯವು.

ಆ ಬಳಿಕ ವಾಚಕ್ನವಿಯು ಸುಮ್ಮನಾದಳು.

## ಚರ್ಚೆ : ಅಕ್ಷರ, ಅಂತರ್ಯಾಮಿ, ಜೀವರು– ಇವರುಗಳಿಗೆ ಭೇದವೇನು ?

(ಭಾಷ್ಯ)

೯೨. ಅತ್ರ ಅನ್ತರ್ಯಾಮಿಬ್ರಾಹ್ಮಣೇ ಏತದುಕ್ತಮ್ "ಯಂ ಪೃಥಿವೀ ನ ವೇದ", "ಯಂ ಸರ್ವಾಣಿ ಭೂತಾನಿ ನ ವಿದುಃ" ಇತಿ ಚ । ಯಮ್ ಅನ್ತರ್ಯಾಮಿಣಂ ನ ವಿದುಃ ಯೇ ಚ ನ ವಿದುಃ, ಯಚ್ಚ ತದಕ್ಷರಂ ದರ್ಶನಾದಿ ಕ್ರಿಯಾಕರ್ತೃತ್ವೇನ ಸರ್ವೇಷಾಂ ಚೇತನಾಧಾತುಃ ಇತ್ಯುಕ್ತಮ್, ಕಸ್ತೇಷಾಂ ವಿಶೇಷಃ ಕಿಂ ವಾ ಸಾಮಾನ್ಯಮ್ ಇತಿ ?

(ಭಾಷ್ಯಾರ್ಥ)

ಇಲ್ಲಿ ಅಂತರ್ಯಾಮಿಬ್ರಾಹ್ಮಣದಲ್ಲಿ 'ಯಾವನನ್ನು ಪೃಥಿವಿಯು ಅರಿಯದೋ' ಎಂದೂ 'ಯಾವನನ್ನು ಯಾವ ಭೂತಗಳೂ ಅರಿಯವೋ' ಎಂದೂ ಇದನ್ನು ಹೇಳಿದೆಯಷ್ಟೆ; ಯಾವ ಅಂತರ್ಯಾಮಿಯನ್ನು ಅರಿಯವೋ, ಮತ್ತು ಯಾವವು ಅರಿಯವೋ, ಮತ್ತು ಯಾವ ಅಕ್ಷರವನ್ನು ನೋಡುವದೇ ಮುಂತಾದ ಕ್ರಿಯೆಗಳ ಕರ್ತೃವಾಗಿರುವ ಎಲ್ಲರ ಚೇತನಾಧಾತುವೆಂದು ಹೇಳಲಾಯಿತೋ ಇವುಗಳಲ್ಲಿ (ಒಂದೊಂದರ) ವಿಶೇಷವೇನು ? (ಇವುಗಳಿಗೆ) ಸಾಮಾನ್ಯವು ಯಾವದು ?

### ಏಕದೇಶಿಗಳ ಮತಗಳ ಖಂಡನೆ

(ಭಾಷ್ಯ)

೯೩. ತತ್ರ ಕೇಚಿತ್ ಆಚಕ್ಷತೇ । ಪರಸ್ಯ ಮಹಾಸಮುದ್ರಸ್ಥಾನೀಯಸ್ಯ ಬ್ರಹ್ಮಣಃ ಅಕ್ಷರಸ್ಯ ಅಪ್ರಚಲಿತಸ್ವರೂಪಸ್ಯ ಈಷತ್ಪ್ರಚಲಿತಾವಸ್ಥಾ

ಅನ್ತರ್ಯಾಮೀ । ಅತ್ಯನ್ತಪ್ರಚಲಿತಾವಸ್ಥಾ ಕ್ಷೇತ್ರಜ್ಞಃ । ಯಸ್ತಂ ನ ವೇದ ಅನ್ತರ್ಯಾಮಿಣಮ್ । ತಥಾ ಅನ್ಯಾಃ ಪಞ್ಚಾವಸ್ಥಾಃ ಪರಿಕಲ್ಪಯನ್ತಿ । ತಥಾ ಅಷ್ಟಾವಸ್ಥಾ ಬ್ರಹ್ಮಣೋ ಭವನ್ತಿ ಇತಿ ವದನ್ತಿ । ಅನ್ಯೇ ಅಕ್ಷರಸ್ಯ ಶಕ್ತಯ ಏತಾ ಇತಿ ವದನ್ತಿ । ಅನನ್ತಶಕ್ತಿಮದಕ್ಷರಮಿತಿ ಚ । ಅನ್ಯೇ ತು ಅಕ್ಷರಸ್ಯ ವಿಕಾರಾ ಇತಿ ವದನ್ತಿ । ಅವಸ್ಥಾಶಕ್ತೀ ತಾವತ್ ನೋಪಪದ್ಯೇತೇ । ಅಕ್ಷರಸ್ಯ ಅಶನಾಯಾದಿಸಂಸಾರಧರ್ಮಾತೀತತ್ವಶ್ರುತೇಃ । ನ ಹಿ ಅಶನಾಯಾದ್ಯತೀತತ್ವಮ್, ಅಶನಾಯಾದಿಸಂಸಾರಧರ್ಮವದವಸ್ಥಾವತ್ತ್ವಂ ಚ ಏಕಸ್ಯ ಯುಗಪತ್ ಉಪಪದ್ಯತೇ । ತಥಾ ಶಕ್ತಿಮತ್ತ್ವಂ ಚ । ವಿಕಾರಾವಯವತ್ವೇ ಚ ದೋಷಾಃ ಪ್ರದರ್ಶಿತಾಶ್ಚತುರ್ಥೇ । ತಸ್ಮಾತ್ ಏತಾ ಅಸತ್ಯಾಃ ಸರ್ವಾಃ ಕಲ್ಪನಾಃ ॥

(ಭಾಷ್ಯಾರ್ಥ)

ಇಲ್ಲಿ ಕೆಲವರು[1] (ಹೀಗೆಂದು ಉತ್ತರವನ್ನು) ಹೇಳುತ್ತಾರೆ: ಮಹಾಸಮುದ್ರದಂತಿರುವ ಪರಬ್ರಹ್ಮವಾದ ಅಕ್ಷರವು ಸ್ವಲ್ಪವೂ ಅಲುಗಾಡದ ಅವಸ್ಥೆಯದು; (ಅದಕ್ಕೆ) ಒಂದಿಷ್ಟು ಅಲುಗಿದ ಅವಸ್ಥೆಯು **ಅಂತರ್ಯಾಮಿ**; ಅತ್ಯಂತವಾಗಿ ಅಲುಗಾಡಿದ ಅವಸ್ಥೆಯು **ಕ್ಷೇತ್ರಜ್ಞನು,** ಅವನು ಆ ಅಂತರ್ಯಾಮಿಯನ್ನು ಅರಿಯನು. ಹೀಗೆಯೇ ಇನ್ನು ಬೇರೆ ಐದು ಅವಸ್ಥೆಗಳನ್ನು (ಅವರು) ಕಲ್ಪಿಸುತ್ತಾರೆ. ಹೀಗೆ ಬ್ರಹ್ಮಕ್ಕೆ ಎಂಟು **ಅವಸ್ಥೆ**ಗಳು[2] ಇರುತ್ತವೆ ಎಂದು ಅವರು ಹೇಳುತ್ತಾರೆ. ಮತ್ತೆ ಕೆಲವರು ಅಕ್ಷರದ ಶಕ್ತಿಗಳಿವು ಎಂದೂ ಅಕ್ಷರವು ಅನೇಕಶಕ್ತಿಗಳುಳ್ಳದ್ದೆಂದೂ ಹೇಳುತ್ತಿದಾರೆ[3]. ಮತ್ತೆ ಕೆಲವರಾದವರೋ (ಇವು) ಅಕ್ಷರದ **ವಿಕಾರ**ಗಳು ಎಂದು ಹೇಳುತ್ತಿದಾರೆ[4].

ಮೊದಲನೆಯದಾಗಿ (ಇವು) ಅವಸ್ಥೆಗಳು (ಅಥವಾ) ಶಕ್ತಿಗಳು (ಎಂಬುದು) ಹೊಂದುವದಿಲ್ಲ. ಏಕೆಂದರೆ ಅಕ್ಷರವು ಹಸಿವು ಮುಂತಾದ

---

1. ಇದು ಭರ್ತೃಪ್ರಪಂಚರ ಮತವೆಂದು ವಾರ್ತಿಕ ೧-೪-೧೦೪೩ರ ಟೀಕೆಯಲ್ಲಿದೆ.

2. ಪಿಂಡ, ಜಾತಿ, ವಿರಾಟ್, ಸೂತ್ರ, ದೈವ, ಅವ್ಯಾಕೃತ, ಅಂತರ್ಯಾಮಿ, ಸಾಕ್ಷಿ- ಈ ಎಂಟೂ ಅವಸ್ಥೆಗಳೆಂದು ಅವರ ಮತ. ಇವುಗಳೆಲ್ಲ ಒಂದೇ ಅಕ್ಷರದ ಅವಸ್ಥೆಗಳಾಗಿರುವದರಿಂದ ಎಲ್ಲವೂ ಒಂದಕ್ಕೊಂದು ಸಮಾನವಾಗಿವೆ; ಆದ್ದರಿಂದ ಆತ್ಮನು ಅಂತರತಮನು ಎಂಬುದು ಹೊಂದುವದಿಲ್ಲವೆಂದು ವಾರ್ತಿಕದಲ್ಲಿ (೧-೪-೧೦೪೩) ಹೇಳಿದೆ.

3. ಇವರು ಯಾರೆಂಬುದು ತಿಳಿಯದು; ಬ್ರಹ್ಮಕ್ಕೆ ಪರಮಾರ್ಥವಾಗಿಯೂ ಅನೇಕ ಶಕ್ತಿಗಳಿವೆ ಎಂಬ ವಾದವನ್ನು ಸೂ. ಭಾ. ೪-೩-೧೪ (ಭಾ. ಭಾ. ೫೮೩), ರಲ್ಲಿ ಖಂಡಿಸಿದೆ.

4. ವಿಕಾರವಯವಪಕ್ಷಗಳನ್ನು ಸೂ. ಭಾ. ೪-೩-೧೪ (ಭಾ. ಭಾ. ೫೮೪)ರಲ್ಲಿಯೂ ಖಂಡಿಸಿದೆ.

ಸಂಸಾರಧರ್ಮಗಳನ್ನು ದಾಟಿರುವದೆಂದು ಶ್ರುತಿಯಿದೆ. ಹಸಿವು ಮುಂತಾದವು ಗಳನ್ನು ಮೀರಿಯೂ ಇರುವದು, ಹಸಿವು ಮುಂತಾದ ಧರ್ಮವುಳ್ಳ ಅವಸ್ಥಾಂತರ ವುಳ್ಳದ್ದಾಗಿಯೂ ಇರುವದು- (ಎಂಬಿವು) ಒಂದೇ (ಅಕ್ಷರಕ್ಕೆ) ಏಕಕಾಲಕ್ಕೆ ಹೊಂದಲಾರದಷ್ಟೆ. ಹಾಗೆಯೇ (ಸಂಸಾರಧರ್ಮಗಳನ್ನು ಮೀರಿರುವ ಅಕ್ಷರಕ್ಕೆ ಸಂಸಾರಾದಿ)ಶಕ್ತಿಗಳುಳ್ಳದ್ದೆಂಬುದೂ (ಹೊಂದಲಾರದಷ್ಟೆ)? (ಇವು) ವಿಕಾರ ಗಳು, ಅವಯುವಗಳು- ಎಂಬ (ಪಕ್ಷ)ದಲ್ಲಿ ದೋಷವನ್ನು ನಾಲ್ಕನೆಯ (ಅಧ್ಯಾಯದಲ್ಲಿ)[1] ತೋರಿಸಿದ್ದಾಗಿದೆ. ಆದ್ದರಿಂದ ಈ ಕಲ್ಪನೆಗಳೆಲ್ಲ ಅಪರ ಮಾರ್ಥವಾಗಿರುತ್ತವೆ.

## ಅಕ್ಷರಾಂತರ್ಯಾಮಿಜೀವರಿಗೆ ಉಪಾಧಿಕೃತಭೇದ

(ಭಾಷ್ಯ)

೯೪. ಕಸ್ತರ್ಹಿ ಭೇದ ಏಷಾಮ್? ಉಪಾಧಿಕೃತ ಇತಿ ಬ್ರೂಮಃ, ನ ಸ್ವತ ಏಷಾಂ ಭೇದಃ ಅಭೇದೋ ವಾ। ಸೈನ್ಧವಘನವತ್ ಪ್ರಜ್ಞಾನಘನೈಕ ರಸಸ್ವಾಭಾವ್ಯಾತ್। "ಅಪೂರ್ವಮನಪರಮನನ್ತರಮಬಾಹ್ಯಮ್" (೨-೫-೧೯), 'ಅಯಮಾತ್ಮಾ ಬ್ರಹ್ಮ' (೨-೫-೧೯) ಇತಿ ಚ ಶ್ರುತೇಃ। "ಸ ಬಾಹ್ಯಾಭ್ಯನ್ತರೋ ಹ್ಯಜಃ" (ಮುಂ. ೨-೧-೨) ಇತಿ ಚಾಥರ್ವಣೇ। ತಸ್ಮಾತ್ ನಿರುಪಾಧಿಕಸ್ಯ ಆತ್ಮನಃ ನಿರುಪಾಖ್ಯತ್ವಾತ್ ನಿರ್ವಿಶೇಷತ್ವಾತ್, ಏಕತ್ವಾಚ್ಚ ನೇತಿ ನೇತೀತಿ ವ್ಯಪದೇಶೋ ಭವತಿ। ಅವಿದ್ಯಾಕಾಮಕರ್ಮವಿಶಿಷ್ಟಕಾರ್ಯಕರಣೋಪಾಧಿ ರಾತ್ಮಾ ಸಂಸಾರೀ ಜೀವ ಉಚ್ಯತೇ। ನಿತ್ಯನಿರತಿಶಯಜ್ಞಾನಶಕ್ತ್ಯುಪಾಧಿ ರಾತ್ಮಾ ಅನ್ತರ್ಯಾಮೀ ಈಶ್ವರ ಉಚ್ಯತೇ। ಸ ಏವ ನಿರುಪಾಧಿಃ ಕೇವಲಃ ಶುದ್ಧಃ ಸ್ವೇನ ಸ್ವಭಾವೇನ ಅಕ್ಷರಂ ಪರ ಉಚ್ಯತೇ। ತಥಾ ಹಿರಣ್ಯಗರ್ಭಾ ವ್ಯಾಕೃತದೇವತಾಜಾತಿಪಿಣ್ಡಮನುಷ್ಯತಿರ್ಯಕ್ಪ್ರೇತಾದಿಕಾರ್ಯಕರಣೋಪಾಧಿ ಭಿರ್ವಿಶಿಷ್ಟಃ ತದಾಖ್ಯಸ್ತದ್ರೂಪೋ ಭವತಿ। ತಥಾ "ತದೇಜತಿ ತನ್ನೈಜತಿ" (ಈ.೫.) ಇತಿ ವ್ಯಾಖ್ಯಾತಮ್। ತಥಾ "ಏಷ ತ ಆತ್ಮಾ" (೩-೪-೧, ೩-೫-೧), "ಏಷ ಸರ್ವಭೂತಾನ್ತರಾತ್ಮಾ" (ಮುಂ.೨-೧-೪), "ಏಷ ಸರ್ವೇಷು ಭೂತೇಷು ಗೂಢಃ" (ಕ.೧-೩-೧೨), "ತತ್ತ್ವಮಸಿ" (ಛಾಂ.೬-೮-೭), "ಅಹಮೇವೇದಂ ಸರ್ವಮ್" (ಛಾಂ. ೭-೨೫-೧), "ಆತ್ಮೈವೇದಂ ಸರ್ವಮ್" (ಛಾಂ. ೭-೨೫-೧), "ನಾನ್ಯೋಽತೋಽಸ್ತಿ ದ್ರಷ್ಟಾ" (ಛಾಂ. ೩-೭-೨೩)- ಇತ್ಯಾದಿ ಶ್ರುತಯೋ ನ ವಿರುಧ್ಯನ್ತೇ। ಕಲ್ಪನಾನ್ತರೇಷು ಏತಾಃ ಶ್ರುತಯೋ ನ ಗಚ್ಛನ್ತಿ। ತಸ್ಮಾತ್ ಉಪಾಧಿಭೇದೇನೈವ ಏಷಾಂ ಭೇದೋ ನಾನ್ಯಥಾ। ಏಕ ಮೇವಾದ್ವಿತೀಯಮ್ ಇತ್ಯವಧಾರಣಾತ್ ಸರ್ವೋಪನಿಷತ್ಸು ॥

1. ೨-೧-೨೦ (ಭಾ. ಭಾ. ೩೧೪)ರಲ್ಲಿ.

(ಭಾಷ್ಯಾರ್ಥ)

(ಪ್ರಶ್ನೆ) :- ಹಾಗಾದರೆ ಇವುಗಳಿಗೆ (ಒಂದೊಂದಕ್ಕಿರುವ) ಭೇದವು ಯಾವದು ?

(ಉತ್ತರ) :- ಉಪಾಧಿಯಿಂದಾಗಿರುವ ಭೇದವೇ ಎಂದು ಹೇಳುತ್ತೇವೆ. ಸ್ವತಃ (ಇವುಗಳಿಗೆ) ಭೇದವೂ ಇಲ್ಲ, ಅಭೇದವೂ ಇಲ್ಲ ; ಏಕೆಂದರೆ ಉಪ್ಪಿನ ಹರಳಿನಂತೆ ಪ್ರಜ್ಞಾನದ ಗಟ್ಟಿಯೇ ಆಗಿ ಒಂದೇ ರಸವಾಗಿರುವದೇ (ವಸ್ತು ವಿನ) ಸ್ವಭಾವವಾಗಿರುತ್ತದೆ "ಹಿಂದಿಲ್ಲದ್ದು, ಮುಂದಿಲ್ಲದ್ದು, ಒಳಗಿಲ್ಲದ್ದು, ಹೊರಗಿಲ್ಲದ್ದು" ಎಂದೂ "ಈ ಆತ್ಮನು ಬ್ರಹ್ಮನು" (೨-೫-೧೯) ಎಂದೂ ಶ್ರುತಿ ಯಿರುವದರಿಂದ (ಹೀಗೆಂದು ಏರ್ಪಡುತ್ತದೆ). "ಒಳಗೂ ಹೊರಗೂ ಅಜನೇ ಆಗಿರುತ್ತಾನೆ" (ಮುಂ. ೨-೧-೨) ಎಂದು ಆಥರ್ವಣದಲ್ಲಿಯೂ (ಇದೆ).

ಆದ್ದರಿಂದ **ಯಾವ ಉಪಾಧಿಯೂ ಇಲ್ಲದ ಆತ್ಮನು ನಿರು ಪಾಖ್ಯನೂ ನಿರ್ವಿಶೇಷನೂ ಏಕನೂ ಆಗಿರುವದರಿಂದ (ಅವನನ್ನು) 'ನೇತಿ, ನೇತಿ' (ಹೀಗಲ್ಲ, ಹೀಗಲ್ಲ) ಎಂದು ಕರೆಯಲಾಗಿದೆ. ಅವಿದ್ಯಾ ಕಾಮಕರ್ಮಗಳಿಂದೊಡಗೂಡಿದ ಕಾರ್ಯಕರಣಗಳ ಉಪಾಧಿ ಯುಳ್ಳ ಆತ್ಮನು ಸಂಸಾರಿಯಾದ ಜೀವನು ಎಂದು ಕರೆಯಿಸಿಕೊಳ್ಳು ತ್ತಾನೆ ನಿತ್ಯವೂ ಮಿಗಿಲಿಲ್ಲದ್ದೂ ಆಗಿರುವ ಜ್ಞಾನಶಕ್ತಿ ಎಂಬ ಉಪಾಧಿಯುಳ್ಳ ಆತ್ಮನು ಅಂತರ್ಯಾಮಿಯಾದ ಈಶ್ವರನು ಎಂದು ಕರೆಯಿಸಿಕೊಳ್ಳುತ್ತಾನೆ.**[1] **ಅವನೇ ಯಾವ ಉಪಾಧಿಯೂ ಇಲ್ಲದೆ, ಕೇವಲನಾಗಿ ಶುದ್ಧನಾಗಿ ತನ್ನ ಸ್ವರೂಪದಲ್ಲಿರುವಾಗ ಅಕ್ಷರವೆಂದೂ ಪರಮಾತ್ಮನೆಂದೂ ಕರೆಯಿಸಿಕೊಳ್ಳುತ್ತಾನೆ.** ಇದರಂತೆ ಹಿರಣ್ಯಗರ್ಭ, ಅವ್ಯಾಕೃತ, ದೇವತೆ, ಜಾತಿ. ಪಿಂಡ, ಮನುಷ್ಯ, ತಿರ್ಯಕ್ಪ್ರಾಣಿ, ಪ್ರೇತ -ಇವುಗಳ ಕಾರ್ಯಕರಣಗಳೆಂಬ ಉಪಾಧಿಯಿಂದೊಡಗೂಡಿದಾಗ ಆ ಹೆಸರಿನ ವನೂ ಆ ಸ್ವರೂಪದವನೂ ಆಗಿರುತ್ತಾನೆ.[2] ಇದಕ್ಕನುಗುಣವಾಗಿಯೇ "ಅದು ಚಲಿಸುತ್ತದೆ, ಅದು ಚಲಿಸುವದಿಲ್ಲ" (ಈ. ೫) ಎಂಬ (ಶ್ರುತಿಯನ್ನೂ ವ್ಯಾ ಖ್ಯಾನಮಾಡಿದಂತಾಯಿತು. ಹೀಗೆಯೇ "ಇವನೇ ನಿನ್ನ ಆತ್ಮನು" (೩-೪-೧,

---

1. ಸೂ. ಭಾ. ೧-೨-೨೦ (ಭಾ. ಭಾ. ೧೯೫)ರಲ್ಲಿ ಹೇಳಿರುವ ಶಾರೀರಾಂತ ರ್ಯಾಮಿಭೇದವಿಚಾರವನ್ನು ನೋಡಿ.

2. ಐ. ಭಾ ೩-೧-೩ (ಭಾ. ಭಾ. ೮೮)ರಲ್ಲಿ ತೋರ್ಪಡಿರುವ ವಿವರವನ್ನು ಇದಕ್ಕೆ ಹೋಲಿಸಬೇಕು. ಒಂದೇ ಚೈತನ್ಯಕ್ಕೆ ಬೇರೆಬೇರೆಯ ಉಪಾಧಿಗಳಿಂದ ಬೇರೆಬೇರೆಯ ನಾಮರೂಪಗಳಿರುವಂತೆ ತೋರಿದರೂ ಪರಮಾರ್ಥವಾಗಿ ಚೈತನ್ಯವು ಒಂದೇ, ಏಕರಸ ವಾಗಿರುತ್ತದೆ - ಎಂಬುದು ಸಿದ್ಧಾಂತದ ಸಾರವು.

೩-೫-೨), "ಇವನು ಸರ್ವಭೂತಗಳಿಗೂ ಅಂತರಾತ್ಮನು" (ಮುಂ ೨-೧-೪), "ಈ (ಆತ್ಮನು) ಎಲ್ಲಾ ಭೂತಗಳಲ್ಲಿಯೂ ಗೂಢ(ನಾಗಿರುತ್ತಾನೆ)" (ಕ. ೧-೩-೧೨), "ಅದೇ ನೀನಾಗಿರುವೆ"(೩-೪-೧,೩-೫-೨), "ನಾನೇ ಇದೆಲ್ಲವೂ" (ಛಾಂ. ೭-೨೫-೧), "ಇದೆಲ್ಲವೂ ಆತ್ಮನೇ" (ಛಾಂ. ೭-೨೫-೨), ಇವನಿಗಿಂತ ಬೇರೊಬ್ಬ ದ್ರಷ್ಟೃವಿಲ್ಲ" (೩-೭-೨೩) –ಇವೇ ಮುಂತಾದ ಶ್ರುತಿಗಳು (ಹೀಗಾದರೆ) ವಿರುದ್ಧವಾಗುವದಿಲ್ಲ. ಮಿಕ್ಕ (ವಾದಿಗಳ) ಕಲ್ಪನೆಗಳಲ್ಲಿ ಈ ಶ್ರುತಿಗಳು ಹೊಂದುವದಿಲ್ಲ. ಆದ್ದರಿಂದ ಉಪಾಧಿಗಳ ಭೇದದಿಂದಲೇ ಇವುಗಳಿಗೆ ಭೇದವಿರುವದೇ ಹೊರತು, ಬೇರೊಂದು ಪ್ರಕಾರದಿಂದಲ್ಲ; ಏಕೆಂದರೆ ಎಲ್ಲಾ ಉಪನಿಷತ್ತುಗಳಲ್ಲಿಯೂ (ಬ್ರಹ್ಮತತ್ತ್ವವು) ಒಂದೇ ತನಗೆರಡನೆಯದಿಲ್ಲದ್ದು ಎಂದೇ ಒತ್ತಿಹೇಳಿರುತ್ತದೆ.

---

# ಎಂಟನೆಯ ಬ್ರಾಹ್ಮಣದ ಸಾರ

**ಈ ಬ್ರಾಹ್ಮಣದಲ್ಲಿ ನಿರುಪಾಧಿಕಬ್ರಹ್ಮಸ್ವರೂಪವನ್ನು ಸೂಕ್ಷ್ಮತಾರತಮ್ಯಕ್ರಮದಿಂದಲೂ ನಿಯಂತವ್ಯನಿಯಂತೃಭಾವನಿರೂಪಣದಿಂದಲೂ ನಿಶ್ಚಯಿಸಿರುತ್ತದೆ.**

೧-೨. ಉದ್ದಾಲಕ ಆರುಣಿಯು ಸುಮ್ಮನಾಗಲು ಗಾರ್ಗಿವಾಚಕ್ನವಿಯು ಮತ್ತೆ ಪ್ರಶ್ನೆಮಾಡುವದಕ್ಕೆ ಬ್ರಾಹ್ಮಣರ ಅನುಮತಿಯನ್ನು ಪಡೆದುಕೊಂಡು "ಯಾಜ್ಞವಲ್ಕ್ಯನೆ, ಅತ್ಯಂತಸೂಕ್ಷ್ಮವಾಗಿ ಉತ್ತರವನ್ನು ಕೊಡುವದಕ್ಕೆ ಬಹಳ ಕಷ್ಟವಾಗಿರುವ ಅಗಮ್ಯವಾದ ಎರಡು ಪ್ರಶ್ನೆಗಳನ್ನು ಕೇಳುವೆನು, ಅವುಗಳಿಗೆ ಉತ್ತರವನ್ನು ಹೇಳು!" ಎಂದಳು.

೩-೪. "ದ್ಯುಲೋಕಕ್ಕೂ ಮೇಲೆಯೂ ಪೃಥಿವಿಗೂ ಕೆಳಗಡೆಯೂ ದ್ಯಾವಾಪೃಥಿವಿಗಳ ನಡುವೆಯೂ ಇದ್ದುಕೊಂಡು ಭೂತಭವಿಷ್ಯದ್ವರ್ತಮಾನಗಳೆಲ್ಲವೂ ಆಗಿರುವ ಸೂತ್ರವೆಂಬುದಿದೆಯಲ್ಲ, ಅದು ಏತರಲ್ಲಿ ಓತವೂ ಪ್ರೋತವೂ ಆಗಿದೆ?" ಎಂದು ಗಾರ್ಗಿ ಕೇಳಲು ಯಾಜ್ಞವಲ್ಕ್ಯನು "ವ್ಯಾಕೃತಾತ್ಮಕವಾದ ಈ ಸೂತ್ರವು ಆಕಾಶವೆಂಬ ಹೆಸರಿನ ಅವ್ಯಾಕೃತದಲ್ಲಿ ಓತಪ್ರೋತವಾಗಿರುತ್ತದೆ" ಎಂದು ಉತ್ತರವನ್ನು ಕೊಟ್ಟನು.

೫-೭. ಗಾರ್ಗಿಯು ಈ ಉತ್ತರಕ್ಕೆ ಮೆಚ್ಚಿ ಯಾಜ್ಞವಲ್ಕ್ಯನಿಗೆ ನಮಸ್ಕಾರಮಾಡಿ ಮತ್ತೆ ಪ್ರಶ್ನಿಸಿದಳು. "ಸೂತ್ರವೂ ಓತಪ್ರೋತವಾಗಿರುವ ಈ ಅವ್ಯಾಕೃತಾಕಾಶವು ಏತರಲ್ಲಿ ಓತಪ್ರೋತವಾಗಿರುತ್ತದೆ?–" ಎಂದು ಕೇಳಿದಳು.

೮. ಯಾಜ್ಞವಲ್ಕ್ಯನು ಈ ಉತ್ತರವನ್ನು ಹೇಳಿದನು : "ಗಾರ್ಗಿಯೆ, ಆಕಾಶವೂ ಓತಪ್ರೋತವಾಗಿರುವದು ಏತರಲ್ಲೆಂಬುದನ್ನು ಬಲ್ಲವರು ಹೀಗೆಂದು ಹೇಳುತ್ತಾರೆ. ಇದೇ ಆ ಅಕ್ಷರವೆಂಬುದು. ಇದು ಸ್ಥೂಲತ್ವಾದಿದ್ರವ್ಯಧರ್ಮಗಳಿಲ್ಲದ್ದು, ಲೋಹಿತಾದಿಗುಣವಲ್ಲದ್ದು, ದ್ರವ್ಯಗುಣಾದಿಗಳೆಂದು ನಿರ್ದೇಶಿಸುವದಕ್ಕಾಗದ್ದು. ಛಾಯೆಯಲ್ಲ, ತಮಸ್ಸಲ್ಲ. ಅದು ವಾಯುವಲ್ಲ, ಆಕಾಶವಲ್ಲ, ರಸಗಂಧಾದಿಗಳೂ ಅಲ್ಲ. ಚಕ್ಷುರಾದಿಕರಣಗಳಿರುವದಲ್ಲ, ಪ್ರಾಣವಿರುವದಲ್ಲ, ಅಳತೆಯಿರುವದಲ್ಲ, ಒಳಗುಹೊರಗುಗಳಿರುವದಲ್ಲ. ಅದು ಒಂದನ್ನು ತಿನ್ನುವದೂ ಅಲ್ಲ, ಮತ್ತೊಂದರಿಂದ ತಿನ್ನಲ್ಪಡತಕ್ಕದ್ದೂ ಅಲ್ಲ. ಸರ್ವವಿಶೇಷರಹಿತವಾಗಿರುವ ಅದ್ವಿತೀಯತತ್ತ್ವವದು.

೯. "ಈ ಅಕ್ಷರವು ಹೀಗೆ ನಿರ್ಧರ್ಮಕವಾಗಿರುವದಾದರೂ ಅದು ಇಲ್ಲವೆನ್ನುವಂತಿಲ್ಲ. ಏಕೆಂದರೆ ಸೂರ್ಯಚಂದ್ರರು ನಿಯಮದಿಂದ ವ್ಯಾಪಾರಮಾಡುವದಕ್ಕೂ ದ್ಯಾವಾಪೃಥಿವಿಗಳು ಇದ್ದಲ್ಲಿ ಇದ್ದಂತೆಯೇ ಇರುವದಕ್ಕೂ ನಿಮಿಷಮುಹೂರ್ತಾದಿಗಳು ನಿಯತವಾಗಿ ವಸ್ತುಗಳನ್ನು ಗಣನೆಮಾಡುತ್ತಿರುವದಕ್ಕೂ ನದಿಗಳು ನಿಯಮದಿಂದ ಆಯಾ ದಿಕ್ಕಿಗೇ

ಹರಿಯುತ್ತಿರುವದಕ್ಕೂ ಪಾನಮಾಡುವವರಿಗೆ ನಿಯಮದಿಂದ ಪರಲೋಕದಲ್ಲಿ ಫಲವಾಗುವದಕ್ಕೂ ದೇವತೆಗಳು ಯಜಮಾನನನ್ನೂ ಪಿತೃಗಳು ದರ್ವೀಹೋಮವನ್ನೂ ಉಪಜೀವಿಸಿಕೊಂಡಿರುವದಕ್ಕೂ ಈ ಅಕ್ಷರದ ಕಟ್ಟಪ್ಪಣೆಯೇ ಕಾರಣವಾಗಿರುತ್ತದೆ.

೧೦-೧೧. "ಈ ಅಕ್ಷರವನ್ನು ತಿಳಿಯದವನು ಬಹುಕಾಲದವರೆಗೆ ಯಾಗಹೋಮಗಳನ್ನು ಮಾಡಿದರೂ ಅದು ಕ್ಷಯವಾಗುತ್ತದೆ, ಇದನ್ನರಿಯದೆ ಈ ಲೋಕವನ್ನು ಬಿಟ್ಟು ತೆರಳುವವನು ಕೃಪಣನು, ಇದನ್ನರಿತವನೇ ಬ್ರಾಹ್ಮಣನು. ಇದು ಮತ್ತೆ ಏತರಿಂದಲೂ ದೃಷ್ಟವಲ್ಲ, ಶ್ರುತವಲ್ಲ, ಮತವಲ್ಲ, ವಿಜ್ಞಾತವಲ್ಲ; ಇದು ಮಾತ್ರ ಎಲ್ಲಕ್ಕೂ ದ್ರಷ್ಟೃ, ಶ್ರೋತೃ, ಮಂತೃ, ವಿಜ್ಞಾತೃ. ಇದಕ್ಕಿಂತ ಬೇರೆಯಾಗಿ ಯಾವದೊಂದು ದ್ರಷ್ಟೃಶ್ರೋತೃಮಂತೃವಿಜ್ಞಾತೃವೂ ಇರುವದಿಲ್ಲ ಇಂಥ ಅಕ್ಷರದಲ್ಲಿ ಅವ್ಯಾಕೃತಾಕಾಶವು ಓತಪ್ರೋತವಾಗಿರುತ್ತದೆ."

೧೨. ಈ ಉತ್ತರವನ್ನು ಕೇಳಿ ಗಾರ್ಗಿಯು ತೃಪ್ತಳಾದಳು. "ಪೂಜ್ಯರಾದ ಬ್ರಾಹ್ಮಣರುಗಳಿರಾ, ಈತನು ಬ್ರಹ್ಮವಾದದಲ್ಲಿ ಅಪ್ರತಿಮನು ; ಇವನನ್ನು ನಿಮ್ಮೊಳಗೆ ಯಾರೊಬ್ಬನೂ ಸೋಲಿಸಲಾರನು. ಆದ್ದರಿಂದ ಪಾಪಜಿತರಾದೆವೆಂದು ಈತನಿಗೆ ನಮಸ್ಕಾರಮಾಡಿ ಕೃತಕೃತ್ಯರಾಗಿರಿ!" ಎಂದು ಹೇಳಿ ಸುಮ್ಮನಾದಳು.

---

# ಮೂರನೆಯ ಅಧ್ಯಾಯ-
# ಒಂಬತ್ತನೆಯ ಬ್ರಾಹ್ಮಣ

## (ಶಾಕಲ್ಯನ ಪ್ರಶ್ನೆ : ದೇವತೆಗಳ ದ್ವಾರದಿಂದ ಬ್ರಹ್ಮತತ್ತ್ವನಿರ್ಧಾರಣ)

## ಬ್ರಾಹ್ಮಣದ ಸಂಬಂಧ

(ಭಾಷ್ಯ)

೯೫. ಅಥ ಹೈನಂ ವಿದಗ್ಧಃ ಶಾಕಲ್ಯಃ ಪಪ್ರಚ್ಛ। ಪೃಥಿವ್ಯಾದೀನಾಂ ಸೂಕ್ಷ್ಮತಾರತಮ್ಯಕ್ರಮೇಣ ಪೂರ್ವಸ್ಯ ಪೂರ್ವಸ್ಯ ಉತ್ತರಸ್ಮಿನ್ ಉತ್ತರಸ್ಮಿನ್ ಓತಪ್ರೋತಭಾವಂ ಕಥಯನ್ ಸರ್ವಾನ್ತರಂ ಬ್ರಹ್ಮ ಪ್ರಕಾಶಿತವಾನ್। ತಸ್ಯ ಚ ಬ್ರಹ್ಮಣಃ ವ್ಯಾಕೃತವಿಷಯೇ ಸೂತ್ರಭೇದೇಷು ನಿಯನ್ತೃತ್ವಮ್ ಉಕ್ತಮ್, ವ್ಯಾಕೃತವಿಷಯೇ ವ್ಯಕ್ತತರಂ ಲಿಙ್ಗಮ್ ಇತಿ। ತಸ್ಯೈವ ಬ್ರಹ್ಮಣಃ ಸಾಕ್ಷಾದಪರೋಕ್ಷತ್ವೇ ನಿಯನ್ತವ್ಯದೇವತಾಭೇದಸಂಕೋಚವಿಕಾಸದ್ವಾರೇಣಾಧಿಗನ್ತವ್ಯೇ ಇತಿ ತದರ್ಥಂ ಶಾಕಲ್ಯಬ್ರಾಹ್ಮಣಮ್ ಆರಭ್ಯತೇ ॥

(ಭಾಷ್ಯಾರ್ಥ)

"ಅಥ ಹೈನಂ ವಿದಗ್ಧಃ ಶಾಕಲ್ಯಃ ಪಪ್ರಚ್ಛ" (ಎಂಬ ಬ್ರಾಹ್ಮಣದ ಸಂಬಂಧವೇನೆಂದರೆ), ಪೃಥಿವಿಯೇ ಮುಂತಾದವುಗಳಲ್ಲಿ ಸೂಕ್ಷ್ಮತಾರತಮ್ಯದ ಕ್ರಮದಿಂದ ಹಿಂದುಹಿಂದಿನದು ಮುಂದುಮುಂದಿನದರಲ್ಲಿ ಓತಪ್ರೋತವಾಗಿರುತ್ತದೆ ಎಂದು ಹೇಳಿ ಸರ್ವಾಂತರವಾದ ಬ್ರಹ್ಮವನ್ನು ಪ್ರಕಾಶಿಸಿದ್ದಾಯಿತು. ಆ ಬ್ರಹ್ಮವು ವ್ಯಾಕೃತವಿಷಯದಲ್ಲಿರುವ ಸೂತ್ರಭೇದಗಳಲ್ಲಿ[1] ನಿಯಾಮಕವಾಗಿರುವದೆಂದು ಹೇಳಿದ್ದಾಯಿತು, ಏಕೆಂದರೆ ವ್ಯಾಕೃತವಿಷಯದಲ್ಲಿ ಹೆಚ್ಚು ವ್ಯಕ್ತವಾಗಿರುವ ಲಿಂಗವಿದೆ.[2] ಅದೇ ಬ್ರಹ್ಮದ ಸಾಕ್ಷಾದಪರೋಕ್ಷತ್ವಗಳನ್ನು (ಅದಕ್ಕೆ) ನಿಯನ್ತವ್ಯಗಳಾಗಿರುವ ದೇವತಾವಿಶೇಷಗಳ ಸಂಕೋಚವಿಕಾಸಗಳ ಮೂಲಕ ತಿಳಿದುಕೊಳ್ಳಬೇಕಾಗಿರುವದರಿಂದ ಅದಕ್ಕಾಗಿ ಈ ಶಾಕಲ್ಯಬ್ರಾಹ್ಮಣವನ್ನು ಆರಂಭಿಸಿರುತ್ತದೆ.

---

1. ಸೂತ್ರದ ಭೇದಗಳು ಎಂದರೆ ಪೃಥಿವ್ಯಾದಿಗಳು ಪೃಥಿವ್ಯಾದಿಗಳನ್ನು ಪರಮಾತ್ಮನು ಅಂತರ್ಯಾಮಿಯಾಗಿ ಕಟ್ಟಿನಲ್ಲಿಟ್ಟಿರುತ್ತಾನೆ ಎಂದು ಹೇಳಲಾಗಿದೆ.

2. ಪೃಥಿವ್ಯಾದಿಗಳು ಕಟ್ಟಿಗೆ ಒಳಪಟ್ಟಿರುವದು ಬಹಳ ಸ್ಫುಟವಾಗಿರುವದರಿಂದ ಇವನ್ನು ಕಟ್ಟಿನಲ್ಲಿಟ್ಟಿರುವ ಪರಮಾತ್ಮನು ಇದ್ದಾನೆ ಎಂಬುದನ್ನು ತಿಳಿಸುವದು ಸುಲಭ.

# ವಿದಗ್ಧನ ಪ್ರಶ್ನೆ: ದೇವತೆಗಳು ಎಷ್ಟು?

(ಉಪನಿಷತ್ತು)

**ಅಥ ಹೈನಂ ವಿದಗ್ಧಃ ಶಾಕಲ್ಯಃ ಪಪ್ರಚ್ಛ ಕತಿ ದೇವಾ ಯಾಜ್ಞ ವಲ್ಕ್ಯೇತಿ ಸ ಹೈತಯೈವ ನಿವಿದಾ ಪ್ರತಿಪೇದೇ ಯಾವನ್ತೋ ವೈಶ್ವದೇವಸ್ಯ ನಿವಿದ್ಯುಚ್ಯನ್ತೇ ತ್ರಯಶ್ಚ ತ್ರೀ ಚ ಶತಾ ತ್ರಯಶ್ಚ ತ್ರೀ ಚ ಸಹಸ್ರೇತ್ಯೋಮಿತಿ ಹೋವಾಚ ಕತ್ಯೇವ ದೇವಾ ಯಾಜ್ಞವಲ್ಕ್ಯೇತಿ ತ್ರಯಸ್ತ್ರಿಗ್ಂಶದಿತ್ಯೋಮಿತಿ ಹೋವಾಚ ಕತ್ಯೇವ ದೇವಾ ಯಾಜ್ಞವಲ್ಕ್ಯೇತಿ ಷಡಿತ್ಯೋಮಿತಿ ಹೋವಾಚ ಕತ್ಯೇವ ದೇವಾ ಯಾಜ್ಞವಲ್ಕ್ಯೇತಿ ತ್ರಯ ಇತ್ಯೋಮಿತಿ ಹೋವಾಚ ಕತ್ಯೇವ ದೇವಾ ಯಾಜ್ಞವಲ್ಕ್ಯೇತಿ ದ್ವಾವಿತ್ಯೋಮಿತಿ ಹೋವಾಚ ಕತ್ಯೇವ ದೇವಾ ಯಾಜ್ಞವಲ್ಕ್ಯೇತ್ಯಧ್ಯರ್ಧ ಇತ್ಯೋಮಿತಿ ಹೋವಾಚ ಕತ್ಯೇವ ದೇವಾ ಯಾಜ್ಞವಲ್ಕ್ಯೇತ್ಯೇಕ ಇತ್ಯೋಮಿತಿ ಹೋವಾಚ ಕತಮೇ ತೇ ತ್ರಯಶ್ಚ ತ್ರೀ ಚ ಶತಾ ತ್ರಯಶ್ಚ ತ್ರೀ ಚ ಸಹಸ್ರೇತಿ ॥೧॥**

೧. ಆಗ ಇವನನ್ನು ವಿದಗ್ಧಶಾಕಲ್ಯನು ಕೇಳಿದನು: "ಯಾಜ್ಞವಲ್ಕ್ಯನೆ, ದೇವತೆಗಳು ಎಷ್ಟು?" ಅವನು ಇದೇ ನಿವಿತ್ತಿನಿಂದ, ವೈಶ್ವದೇವದ ನಿವಿತ್ತಿನಲ್ಲಿ ಎಷ್ಟು (ದೇವತೆಗಳು) ಉಕ್ತವಾಗಿರುವವೋ (ಅಷ್ಟು, ಅಂದರೆ) ಮುನ್ನೂರಮೂರು, ಮತ್ತು ಮೂರುಸಾವಿರದ ಮೂರು ಎಂದು ಗೊತ್ತುಪಡಿಸಿದನು. (ಅವನು) "ಸರಿ, ಯಾಜ್ಞವಲ್ಕ್ಯನೆ, ದೇವತೆಗಳು, ಎಷ್ಟು[1] ?" ಎಂದನು. "ಮೂವತ್ತುಮೂರು" ಎನ್ನಲು "ಸರಿ, ಯಾಜ್ಞವಲ್ಕ್ಯನೆ, ದೇವತೆಗಳು ಎಷ್ಟು ?" ಎಂದನು. "ಆರು" ಎನ್ನಲು "ಸರಿ, ಯಾಜ್ಞವಲ್ಕ್ಯನೆ, ದೇವತೆಗಳು ಎಷ್ಟು ?" ಎಂದನು. "ಮೂರು" ಎನ್ನಲು "ಸರಿ, ಯಾಜ್ಞವಲ್ಕ್ಯನೆ, ದೇವತೆಗಳು ಎಷ್ಟು ?" ಎಂದನು. "ಎರಡು" ಎನ್ನಲು "ಸರಿ, ಯಾಜ್ಞವಲ್ಕ್ಯನೆ, ದೇವತೆಗಳು ಎಷ್ಟು?" ಎಂದನು. "ಒಂದೂವರೆ" ಎನ್ನಲು "ಸರಿ, ಯಾಜ್ಞವಲ್ಕ್ಯನೆ, ದೇವತೆಗಳು ಎಷ್ಟು ?" ಎಂದನು. "ಒಂದು"

1. ಕತ್ಯೇವ= ಸರಿಯಾಗಿ ಎಷ್ಟು ? ವಿವರವಾಗಿ ಇಷ್ಟಿರಬಹುದು, ಸಂಕ್ಷೇಪಿಸಿದರೆ ಎಷ್ಟರಲ್ಲಿ ಅಡಕವಾಗುತ್ತದೆ ? ಎಂದು ಪ್ರಶ್ನೆಯ ಭಾವ.

ಎನ್ನಲು “ಸರಿ, ಮುನ್ನೂರಮೂರು ಮತ್ತು ಮೂರುಸಾವಿರದ ಮೂರು ಎಂಬ ಆ (ದೇವತೆಗಳು) ಯಾರು ?'' ಎಂದನು.

(ಭಾಷ್ಯ)

೯೬. ಅಥ ಹ ಏನಂ ವಿದಗ್ಧ ಇತಿ ನಾಮತಃ ಶಕಲಸ್ಯ ಅಪತ್ಯಂ ಶಾಕಲ್ಯಃ ಪಪ್ರಚ್ಛ ಕತಿ ಸಂಖ್ಯಾಕಾ ದೇವಾಃ, ಹೇ ಯಾಜ್ಞವಲ್ಕ್ಯ ? ಇತಿ। ಸ ಯಾಜ್ಞವಲ್ಕ್ಯೋ ಹ ಕಿಲ ಏತಯೈವ ವಕ್ಷ್ಯಮಾಣಯಾ ನಿವಿದಾ ಪ್ರತಿಪೇದೇ ಸಂಖ್ಯಾಂ ಯಾಂ[1] ಪೃಷ್ಟವಾನ್ ಶಾಕಲ್ಯಃ। ಯಾವನ್ತೋ ಯಾವತ್ಸಂಖ್ಯಾಕಾಃ ದೇವಾಃ ವೈಶ್ವದೇವಸ್ಯ ಶಸ್ತ್ರಸ್ಯ ನಿವಿದಿ। ನಿವಿನ್ನಾಮ ದೇವತಾಸಂಖ್ಯಾವಾಚಕಾನಿ ಮನ್ತ್ರಪದಾನಿ ಕಾನಿಚಿತ್ ವೈಶ್ವದೇವೇ ಶಸ್ತ್ರೇ ಶಸ್ಯನ್ತೇ, ತಾನಿ ನಿವಿತ್ಸಂಜ್ಞಕಾನಿ। ತಸ್ಯಾಂ ನಿವಿದಿ ಯಾವನ್ತೋ ದೇವಾಃ ಶ್ರೂಯನ್ತೇ ತಾವನ್ತೋ ದೇವಾ ಇತಿ। ಕಾ ಪುನಃ ಸಾ ನಿವಿತ್ ಇತಿ? ತಾನಿ ನಿವಿತ್ಪದಾನಿ ಪ್ರದರ್ಶ್ಯನ್ತೇ। ತ್ರಯಶ್ಚ ತ್ರೀ ಚ ಶತಾ ತ್ರಯಶ್ಚ ದೇವಾಃ। ದೇವಾನಾಂ ತ್ರೀ ಚ ತ್ರೀಣಿ ಚ ಶತಾನಿ। ಪುನರಪ್ಯೇವಂ ತ್ರಯಶ್ಚ ತ್ರೀ ಚ ಸಹಸ್ರಾ ಸಹಸ್ರಾಣಿ। ಏತಾವನ್ತೋ ದೇವಾಃ ಇತಿ। ಶಾಕಲ್ಯೋಽಪಿ ಓಮಿತಿ ಹೋವಾಚ। ಏವಮೇಷಾಂ ಮಧ್ಯಮಾ ಸಂಖ್ಯಾ ಸಮ್ಯಕ್ತಯಾ ಜ್ಞಾತಾ। ಪುನಸ್ತೇಷಾಮೇವ ದೇವಾನಾಂ ಸಂಕೋಚವಿಷಯಾಂ ಸಂಖ್ಯಾಂ ಪೃಚ್ಛತಿ ಕತ್ಯೇವ ದೇವಾ ಯಾಜ್ಞವಲ್ಕ್ಯೇತಿ। ತ್ರಯಸ್ತ್ರಿಂಶತ್, ಷಟ್, ತ್ರಯಃ, ದ್ವೌ, ಅಧ್ಯರ್ಧಃ, ಏಕಃ ಇತಿ। ದೇವತಾಸಂಕೋಚವಿಕಾಸವಿಷಯಾಂ ಸಂಖ್ಯಾಂ ಪೃಷ್ಟ್ವಾ ಪುನಃ ಸಂಖ್ಯೇಯಸ್ವರೂಪಂ ಪೃಚ್ಛತಿ ಕತಮೇ ತೇ ತ್ರಯಶ್ಚ ತ್ರೀ ಚ ಶತಾ ತ್ರಯಶ್ಚ ತ್ರೀ ಚ ಸಹಸ್ರಾ ? ಇತಿ ॥

(ಭಾಷ್ಯಾರ್ಥ)

ಆಗ ವಿದಗ್ಧನೆಂಬ ಹೆಸರಿನ, ಶಾಕಲ್ಯನು ಶಕಲನ ಮಗನು (ಹೀಗೆಂದು) ಕೇಳಿದನು : “ಎಲೈ ಯಾಜ್ಞವಲ್ಕ್ಯನೆ, ದೇವತೆಗಳು ಎಷ್ಟು ಸಂಖ್ಯೆಯುವರು ?” ಆ ಯಾಜ್ಞವಲ್ಕ್ಯನು (ಹ= ಕಿಲ) ಇದೇ ಮುಂದೆ ಹೇಳುವ ನಿವಿತ್ತಿನಿಂದ ಶಾಕಲ್ಯನು ಕೇಳಿದ್ದನಲ್ಲ, ಆ ಸಂಖ್ಯೆಯನ್ನು ಗೊತ್ತುಪಡಿಸಿದನು. ವೈಶ್ವದೇವ ಶಸ್ತ್ರದ[2] ನಿವಿತ್ತಿನಲ್ಲಿ ಎಷ್ಟು, ಎಷ್ಟು ಸಂಖ್ಯೆಯ ದೇವತೆಗಳಿರುವರೋ– ನಿವಿತ್ ಎಂದರೆ : ದೇವತೆಗಳ ಸಂಖ್ಯೆಯನ್ನು ಹೇಳುವ ಕೆಲವು ಮಂತ್ರಪದಗಳನ್ನು

---

1. ಈ ಮಾತಿನ ಹಿಂದೆಯೂ ಮುಂದೆಯೂ ‘ಸಂಖ್ಯಾಂ’ ಎಂದಿರುವುದು ಅನವಶ್ಯ; ಮೊದಲನೆಯ ಸಂಖ್ಯಾಂ ಎಂಬುದನ್ನು ಬಿಟ್ಟಿರುವ ಪಾಠವೂ ಉಂಟು, ನಾವು ಎರಡನೆಯದನ್ನು ಬಿಟ್ಟಿದೇವೆ.

2. ದೇವತೆಯನ್ನು ಹೊಗಳುವದಕ್ಕೆ ಉಪಯೋಗಿಸುವ ಋಕ್ಕಿಗೆ ಶಸ್ತ್ರವೆಂದು ಹೆಸರು, ಹಾಗೆ ಹೊಗಳುವದನ್ನು ‘ಶಂಸನ’ವೆನ್ನುವರು.

ವೈಶ್ವದೇವಶಸ್ತ್ರದಲ್ಲಿ ಶಂಸನಮಾಡುತ್ತಾರೆ. ಅವಕ್ಕೆ ನಿವಿತ್ ಎಂದು ಹೆಸರು. ಆ ನಿವಿತ್ತಿನಲ್ಲಿ ಎಷ್ಟು ದೇವತೆಗಳನ್ನು ಶ್ರುತಿಯಲ್ಲಿ ಹೇಳಿದೆಯೋ- ಅಷ್ಟು ದೇವತೆಗಳು ಎಂದು (ಗೊತ್ತುಪಡಿಸಿದನು). ಆ ನಿವಿತ್ತೆಂಬುದಾದರೂ ಯಾವದು? ಎಂದರೆ ಆ ನಿವಿತ್ಪದಗಳನ್ನು (ಶ್ರುತಿ) ತಿಳಿಸುತ್ತದೆ. 'ತ್ರಯಶ್ಚ ತ್ರೀ ಚ ಶತಾ' ಮೂರು ದೇವತೆಗಳು, ಮತ್ತು ದೇವತೆಗಳ ಮೂರುನೂರು ಮುನ್ನೂರು. ಮತ್ತೂ ಹೀಗೆಯೇ 'ತ್ರಯಶ್ಚ ತ್ರೀ ಚ ಸಹಸ್ರಾ' (ಸಹಸ್ರಾ= ಸಹಸ್ರಾಣಿ) ಮೂರುಸಾವಿರದ ಮೂರು. ಇಷ್ಟು ಜನ ದೇವತೆಗಳು ಎಂದು (ನಿಶ್ಚಯಿಸಿ ದನು).

ಶಾಕಲ್ಯನೂ "ಸರಿ" ಎಂದನು. ಓಜ, ಹೀಗೆಯೇ (ಸರಿ). ಇವುಗಳ ಮಧ್ಯಮಸಂಖ್ಯೆಯನ್ನು[1] ಸರಿಯಾಗಿ ತಿಳಿದುಕೊಂಡಿರುವೆ (ಎಂದರ್ಥ) ಮತ್ತೆ ಅದೇ ದೇವತೆಗಳ ಸಂಕೋಚವಿಷಯದ ಸಂಖ್ಯೆಯನ್ನು[2] "ಯಾಜ್ಞ ವಲ್ಕ್ಯನೆ, ದೇವತೆಗಳು (ಸರಿಯಾಗಿ) ಎಷ್ಟು ?" ಎಂದು ಕೇಳಿರುತ್ತಾನ. ಮೂವತ್ತುಮೂರು, ಆರು, ಮೂರು, ಎರಡು, ಒಂದೂವರೆ, ಒಂದು -ಎಂದು (ಉತ್ತರ)

ದೇವತೆಗಳ ಸಂಕೋಚವಿಕಾಸದ ವಿಷಯದ ಸಂಖ್ಯೆಯನ್ನು ಕೇಳಿದ ಬಳಿಕ ಮತ್ತೆ ಸಂಖ್ಯೇಯ(ದೇವತೆಗಳ) ಸ್ವರೂಪವನ್ನು ಕೇಳುತ್ತಾನೆ. ಮುನ್ನೂರಮೂರು, ಮೂರುಸಾವಿರದಮೂರು- (ಎಂಬ)-ಆ (ದೇವತೆಗಳು) ಯಾರು ?"

## ಮೂವತ್ತುಮೂರು ದೇವತೆಗಳ ವಿವರ

(ಉಪನಿಷತ್ತು)

**ಸ ಹೋವಾಚ ಮಹಿಮಾನ ಏವೈಷಾಮೇತೇ ತ್ರಯಸ್ತ್ರಿಗ್ಂ ಶತ್ತ್ವೇವ ದೇವಾ ಇತಿ ಕತಮೇ ತೇ ತ್ರಯಸ್ತ್ರಿಗ್ಂಶದಿತ್ಯಷ್ಟೌ ವಸವ ಏಕಾದಶ ರುದ್ರಾ ದ್ವಾದಶಾದಿತ್ಯಾಸ್ತ ಏಕತ್ರಿಗ್ಂ ಶದಿನ್ದ್ರಶ್ಚೈವ ಪ್ರಜಾಪತಿಶ್ಚ ತ್ರಯಸ್ತ್ರಿಗ್ಂಶಾವಿತಿ ॥ ೨ ॥**

೨. ಅವನಿಂತೆಂದನು : ಇವು ಅವರ ಮಹಿಮೆಗಳೇ ; ಮೂವತ್ತುಮೂರೇ ದೇವತೆಗಳು. "ಆ ಮೂವತ್ತುಮೂರು (ದೇವತೆ ಗಳು) ಯಾರು ?" ಎಂಟು ವಸುಗಳು, ಹನ್ನೊಂದು ರುದ್ರರು,

1. ದೇವತೆಗಳು, ಅನಂತ : ನಿವಿತ್ತಿನಲ್ಲಿ ಹೇಳಿರುವದು ಮಧ್ಯಮಸಂಖ್ಯೆ.
2. ಇನ್ನೂ ಸಂಕ್ಷೇಪವಾಗಿ ಹೇಳಿದರೆ ಎಷ್ಟು ಎಂಬುದನ್ನು.

ಹನ್ನೆರಡು ಆದಿತ್ಯರು -ಇವರು ಮೂವತ್ತೊಂದು. ಇಂದ್ರನೂ ಪ್ರಜಾ ಪತಿಯೂ ಮೂವತ್ತುಮೂರನೆಯುವರು.

(ಭಾಷ್ಯ)

೯೭. ಸ ಹೋವಾಚ ಇತರಃ। ಮಹಿಮಾನಃ (ಏವ)[1] ವಿಭೂತಯ ಏಷಾಂ ತ್ರಯಸ್ತ್ರಿಂಶತೋ[2] ದೇವಾನಾಮ್ ಏತೇ ತ್ರಯಶ್ಚ ತ್ರೀ ಚ ಶತೇತ್ಯಾದಯಃ। ಪರಮಾರ್ಥತಸ್ತು ತ್ರಯಸ್ತ್ರಿಂಶತ್ತ್ವೇವ ದೇವಾಃ ಇತಿ। ಕತಮೇ ತೇ ತ್ರಯಸ್ತ್ರಿಂಶತ್ ಇತಿ? ಉಚ್ಯತೇ। ಅಷ್ಟೌ ವಸವಃ ಏಕಾದಶ ರುದ್ರಾಃ ದ್ವಾದಶಾದಿತ್ಯಾಃ, ತೇ ಏಕತ್ರಿಂಶತ್। ಇನ್ದ್ರಶ್ಚೈವ ಪ್ರಜಾಪತಿಶ್ಚ ತ್ರಯಸ್ತ್ರಿಂಶಾವಿತಿ ತ್ರಯಸ್ತ್ರಿಂಶತಃ ಪೂರಣೌ ॥

(ಭಾಷ್ಯಾರ್ಥ)

ಆ ಇನ್ನೊಬ್ಬ(ನಾದ ಯಾಜ್ಞವಲ್ಕ್ಯ) ನಿಂತೆಂದನು. ಈ ಮೂನ್ನೂರ ಮೂರು ಮುಂತಾದವು ಮೂವತ್ತುಮೂರು ದೇವತೆಗಳು ಮಹಿಮೆಗಳು ಮಾತ್ರ; ಪರಮಾರ್ಥವಾಗಿಯೋ ಮೂವತ್ತುಮೂರೇ ದೇವತೆಗಳು. ಆ ಮೂವತ್ತುಮೂರು (ದೇವತೆಗಳು) ಯಾರು ? ಎಂದರೆ ಹೇಳುತ್ತಾನೆ. ಎಂಟು ಮಂದಿ ವಸುಗಳು, ಹನ್ನೊಂದುಮಂದಿ ರುದ್ರರು, ಹನ್ನೆರಡುಮಂದಿ ಆದಿತ್ಯರು– ಇವರು ಮೂವತ್ತೊಂದು ; ಇಂದ್ರನೂ ಪ್ರಜಾಪ್ರತಿಯೂ ಮೂವತ್ತು ಮೂರನೆಯುವರು, ಎಂದರೆ ಮುವತ್ತುಮೂರನ್ನು ಪೂರಣಮಾಡುವವರು.

## ವಸುಗಳ ವಿವರ

(ಉಪನಿಷತ್ತು)

**ಕತಮೇ ವಸವ ಇತ್ಯಗ್ನಿಶ್ಚ ಪೃಥಿವೀ ಚ ವಾಯುಶ್ಚಾನ್ತರಿಕ್ಷಂ ಚಾದಿತ್ಯಶ್ಚ ದ್ಯೌಶ್ಚ ಚನ್ದ್ರಮಾಶ್ಚ ನಕ್ಷತ್ರಾಣಿ ಚೈತೇ ವಸವ ಏತೇಷು ಹೀದಗ್ಂ ಸರ್ವಗ್ಂ ಹಿತಮಿತಿ ತಸ್ಮಾದ್ ವಸವ ಇತಿ ॥**

೩. ವಸುಗಳು ಯಾರು ? ಎನ್ನಲು ಅಗ್ನಿಯೂ ಪೃಥಿವಿಯೂ ವಾಯುವೂ ಅಂತರಿಕ್ಷವೂ ಆದಿತ್ಯನೂ ದ್ಯುಲೋಕಗಳೂ ಚಂದ್ರನೂ ನಕ್ಷತ್ರಗಳೂ– ಇವರೇ ವಸುಗಳು. ಇವುಗಳಲ್ಲಲ್ಲವೆ, ಇದೆಲ್ಲವೂ ಇಡಲ್ಪಟ್ಟಿದೆ. ಆದ್ದರಿಂದ(ಇವು) ವಸುಗಳು ಎಂದು (ಉತ್ತರವಿತ್ತನು).

---

1. ಈ ಮಾತು ಇಲ್ಲಿ ಬಿಟ್ಟುಹೋಗಿದೆ ಎಂದು ತೋರುತ್ತದೆ.
2. 'ತ್ರಯಸ್ತ್ರಿಂಶತಾಂ' ಎಂಬ ಆ॥ ಪಾಠವನ್ನು ವಾ॥ ಪಾಠದಲ್ಲಿ ಹೀಗೆ ತಿದ್ದಿ ಬರೆದಿದೆ, ಅದೇ ಸರಿಯಾದದ್ದು. ಇಲ್ಲಿ ವಾ॥ ಪಾಠವನ್ನೇ ಬರೆದುಕೊಂಡಿದೆ.

(ಭಾಷ್ಯ)

೯೮. ಕತಮೇ ವಸವಃ ಇತಿ ತೇಷಾಂ ಸ್ವರೂಪಂ ಪ್ರತ್ಯೇಕಂ ಪೃಚ್ಛ್ಯತೇ । ಅಗ್ನಿಶ್ಚ ಪೃಥಿವೀ ಚೇತಿ । ಅಗ್ನ್ಯಾದ್ಯಾ ನಕ್ಷತ್ರಾನ್ತಾ ಏತೇ ವಸವಃ। ಪ್ರಾಣಿನಾಂ ಕರ್ಮಫಲಾಶ್ರಯತ್ವೇನ ಕಾರ್ಯಕರಣಸಂಘಾತರೂಪೇಣ ತನ್ನಿವಾಸತ್ವೇನ ಚ ವಿಪರಿಣಮನ್ತೋ ಜಗದಿದಂ ಸರ್ವಂ ವಾಸಯನ್ತಿ ವಸನ್ತಿ ಚ । ತೇ ಯಸ್ಮಾತ್ ವಾಸಯನ್ತಿ ತಸ್ಮಾತ್ ವಸವಃ ಇತಿ ॥

(ಭಾಷ್ಯಾರ್ಥ)

ವಸುಗಳು ಯಾರು ? ಎಂದು (ಈಗ) ಆ (ದೇವತೆಗಳ)[1] ಸ್ವರೂಪವನ್ನು ಪ್ರತ್ಯೇಕವಾಗಿ ಕೇಳುತ್ತಿದ್ದಾನೆ ಅಗ್ನಿಯೂ ಪೃಥಿವಿಯೂ ಎಂದು (ಉತ್ತರ) ಅಗ್ನಿಯು ಮೊದಲಾಗಿ ನಕ್ಷತ್ರಗಳವರೆಗಿನ ಇವೇ ವಸುಗಳು. ಪ್ರಾಣಿಗಳ ಕರ್ಮಗಳ ಫಲಗಳಿಗೆ ಆಶ್ರಯವಾಗಿ ಕಾರ್ಯಕರಣಸಂಘಾತರೂಪವಾಗಿಯೂ ಅವುಗಳಿಗೆ ನಿವಾಸರೂಪವಾಗಿಯೂ ಮಾರ್ಪಟ್ಟು ಈ ಜಗತ್ತೆಲ್ಲವನ್ನೂ ವಾಸಮಾಡಿಸುತ್ತಾರೆ, ಮತ್ತು (ಅದರಲ್ಲಿ) ವಾಸವಾಗಿರುತ್ತಾರೆ ; (ಆದ್ದರಿಂದ) ಹೀಗೆ ವಾಸಮಾಡಿಸುತ್ತಾರಲ್ಲ, ಆದ್ದರಿಂದ (ಇವರು) ವಸುಗಳು.[2]

## ರುದ್ರರ ವಿವರ

(ಉಪನಿಷತ್ತು)

**ಕತಮೇ ರುದ್ರಾ ಇತಿ ದಶೇಮೇ ಪುರುಷೇ ಪ್ರಾಣಾ ಆತ್ಮೈಕಾದಶಸ್ತೇ ಯದಸ್ಮಾಚ್ಛರೀರಾನ್ ಮರ್ತ್ಯಾದುತ್ಕ್ರಾಮನ್ತ್ಯಥ ರೋದಯನ್ತಿ ತದ್ಯದ್ರೋದಯನ್ತಿ ತಸ್ಮಾದ್ರುದ್ರಾ ಇತಿ ॥ ೪ ॥**

೪. ರುದ್ರರು ಯಾರು ? ಎನ್ನಲು : ಪುರುಷನಲ್ಲಿರುವ ಈ ಹತ್ತು ಪ್ರಾಣಗಳು, ಆತ್ಮವೇ ಹನ್ನೊಂದನೆಯದು. ಈ ಮರ್ತ್ಯವಾದ ಶರೀರದಿಂದ ಯಾವಾಗ ಉತ್ಕ್ರಾಂತವಾಗುತ್ತವೆಯೋ ಆಗ ಅಳುವಂತೆ ಮಾಡುತ್ತವೆ. (ಹೀಗೆ) ಅಳುವಂತೆ ಮಾಡುತ್ತಿರುವವಲ್ಲ, ಆದ್ದರಿಂದ (ಇವು) ರುದ್ರರು ಎಂದು (ಉತ್ತರವಿತ್ತನು).

(ಭಾಷ್ಯ)

೯೯. ಕತಮೇ ರುದ್ರಾ ಇತಿ ? ದಶೇಮೇ ಪುರುಷೇ ಕರ್ಮಬುದ್ಧೀನ್ದ್ರಿಯಾಣಿ ಪ್ರಾಣಾಃ ಆತ್ಮಾ ಮನ ಏಕಾದಶ ಏಕಾದಶಾನಾಂ ಪೂರಣಃ । ತ ಏತೇ ಪ್ರಾಣಾ ಯದಾಽಸ್ಮಾಚ್ಛರೀರಾತ್ ಮರ್ತ್ಯಾತ್ ಪ್ರಾಣಿನಾಂ ಕರ್ಮ

1. ವಸುರುದ್ರಾದಿತ್ಯಾದಿಗಳ.
2. ಹೀಗೆಂದು ಉಪಾಸನೆಮಾಡಬೇಕು. ಎಂದಭಿಪ್ರಾಯ.

ಫಲೋಪಭೋಗಕ್ಷಯೇ ಉತ್ಕ್ರಾಮನ್ತಿ ಅಥ ತದಾ ರೋದಯನ್ತಿ ತತ್ಸಂಬನ್ಧಿನಃ । ತತ್ ತತ್ರ ಯಸ್ಮಾದ್ ರೋದಯನ್ತಿ ತೇ ಸಂಬನ್ಧಿನಃ, ತಸ್ಮಾದ್ ರುದ್ರಾ ಇತಿ ॥

(ಭಾಷ್ಯಾರ್ಥ)

ರುದ್ರರು ಯಾರು ? ಎನ್ನಲು (ಉತ್ತರವಿದು). ಪುರುಷನಲ್ಲಿ[1] ಕರ್ಮೇಂದ್ರಿಯ, ಬುದ್ಧೀಂದ್ರಿಯ –ಎಂಬೀ ಹತ್ತು ಪ್ರಾಣಗಳು, ಆತ್ಮವು ಎಂದರೆ ಮನಸ್ಸು ಹನ್ನೊಂದನೆಯದು, ಹನ್ನೊಂದನ್ನು ಪೂರ್ಣಗೊಳಿಸತಕ್ಕದ್ದು[2]. ಆ ಈ ಪ್ರಾಣಗಳು ಯಾವಾಗ ಈ ಶರೀರದಿಂದ ಸಾಯುವ ಸ್ವಭಾವದ ಶರೀರದಿಂದ ಪ್ರಾಣಿಗಳ ಕರ್ಮಫಲದ ಉಪಭೋಗವು ಸವೆಯಲು ಉತ್ಕ್ರಾಂತವಾಗುವವೋ, (ಅಥ=ತದಾ) ಆಗ ಅದರ ಸಂಬಂಧಿಗಳನ್ನು ಅಳುವಂತೆ ಮಾಡುತ್ತವೆ. (ತತ್=ತತ್ರ) ಅಲ್ಲಿ ಅವು ಸಂಬಂಧಿಗಳನ್ನು ಹೀಗ ಅಳುವಂತೆ ಮಾಡುವವಷ್ಟೆ, ಆದ್ದರಿಂದ ರುದ್ರರು (ಎನಿಸುತ್ತವೆ).

## ಆದಿತ್ಯರ ವಿವರ

(ಉಪನಿಷತ್ತು)

**ಕತಮ ಆದಿತ್ಯಾ ಇತಿ ದ್ವಾದಶ ವೈ ಮಾಸಾಃ ಸಂವತ್ಸರಸ್ಯೈತ ಆದಿತ್ಯಾ ಏತೇ ಹೀದಗ್ಂ ಸರ್ವಮಾದದಾನಾ ಯನ್ತಿ ತೇ ಯದಿದಗ್ಂ ಸರ್ವಮಾದದಾನಾ ಯನ್ತಿ ತಸ್ಮಾದಾದಿತ್ಯಾ ಇತಿ ॥ ೫ ॥**

೫. 'ಆದಿತ್ಯರು ಯಾರು?' ಎನ್ನಲು ಸಂವತ್ಸರದ ಹನ್ನೆರಡು ಮಾಸಗಳೇ, ಇವೇ ಆದಿತ್ಯರು. ಏಕೆಂದರೆ ಇವೇ ಇದೆಲ್ಲವನ್ನೂ (ಆದದಾನಾಃ) ಸ್ವೀಕರಿಸಿ (ಯನ್ತಿ) ಹೊರಟುಹೋಗುತ್ತವೆ. (ಹೀಗೆ) ಇದೆಲ್ಲವನ್ನೂ ಸ್ವೀಕರಿಸಿ ಹೋಗುತ್ತವೆಯಲ್ಲ, ಆದ್ದರಿಂದ (ಇವೇ) ಆದಿತ್ಯರು ಎಂದು (ಉತ್ತರವಿತ್ತನು).

(ಭಾಷ್ಯ)

೧೦೦. **ಕತಮೇ ಆದಿತ್ಯಾ ಇತಿ । ದ್ವಾದಶ ವೈ ಮಾಸಾಃ ಸಂವತ್ಸರಸ್ಯ ಕಾಲಸ್ಯ ಅವಯವಾಃ ಪ್ರಸಿದ್ಧಾಃ । ಏತೇ ಆದಿತ್ಯಾಃ । ಕಥಮ್ ? ಏತೇ ಹಿ ಯಸ್ಮಾತ್ ಪುನಃಪುನಃ ಪರಿವರ್ತಮಾನಾಃ ಪ್ರಾಣಿನಾಮ್ ಆಯೂಂಷಿ ಕರ್ಮಫಲಂ ಚ ಆದದಾನಾಃ ಗೃಹ್ಣನ್ತಃ ಉಪಾದದತಃ ಯನ್ತಿ ಗಚ್ಛನ್ತಿ**

1. ಮನುಷ್ಯನಲ್ಲಿ ಅಥವಾ ಮನುಷ್ಯಶರೀರದಲ್ಲಿ.
2. ಪ್ರಾಣಗಳು ಹನ್ನೊಂದೇ ಎಂಬುದನ್ನು ಸೂ. ಭಾ. ೨-೪-೬ರಲ್ಲಿ ನಿರ್ಧರಿಸಿದೆ.

**ತೇ ಯದ್ ಯಸ್ಮಾತ್ ಏವಮಿದಂ ಸರ್ವಮ್ ಆದದಾನಾ ಯನ್ತಿ ತಸ್ಮಾತ್ ಆದಿತ್ಯಾಃ ಇತಿ ॥**

(ಭಾಷ್ಯಾರ್ಥ)

ಆದಿತ್ಯರು ಯಾರು? –ಎನ್ನಲು (ಉತ್ತರ): ಹನ್ನೆರಡು ಮಾಸಗಳು ಸಂವತ್ಸರಕ್ಕೆ ಕಾಲಕ್ಕೆ ಅವಯುವಗಳೆಂದು ಪ್ರಸಿದ್ಧವಷ್ಟೆ, ಇವೇ ಆದಿತ್ಯರು. ಹೇಗೆ? (ಹಿ= ಯಸ್ಮಾತ್) ಏಕೆಂದರೆ ಇವು ಮತ್ತೆಮತ್ತೆ ಸುತ್ತುತ್ತಾ ಪ್ರಾಣಿಗಳ ಆಯುಸ್ಸುಗಳನ್ನೂ ಕರ್ಮದ ಫಲವನ್ನೂ ಆದಾನಮಾಡುತ್ತಾ ಸ್ವೀಕರಿಸುತ್ತಾ, ತೆಗೆದುಕೊಂಡು (ಯನ್ತಿ= ಗಚ್ಛನ್ತಿ) ಹೋಗುತ್ತಿರುತ್ತವೆ. ಅವು (ಯತ್ = ಯಸ್ಮಾತ್) ಹೀಗೆ ಇದೆಲ್ಲವನ್ನೂ ಆದಾನಮಾಡಿಕೊಂಡು ಹೋಗುತ್ತವಲ್ಲ, ಆದರಿಂದ ಆದಿತ್ಯರು (ಎನಿಸುವವು).

## ಇಂದ್ರಪ್ರಜಾಪತಿಗಳ ವಿವರ

(ಉಪನಿಷತ್ತು)

**ಕತಮ ಇನ್ದ್ರಃ ಕತಮಃ ಪ್ರಜಾಪತಿರಿತಿ ಸ್ತನಯಿತ್ನುರೇವೇ ನ್ದ್ರೋ ಯಜ್ಞಃ ಪ್ರಜಾಪತಿರಿತಿ ಕತಮಃ ಸ್ತನಯಿತ್ನುರಿತ್ಯಶನಿ ರಿತಿ ಕತಮೋ ಯಜ್ಞ ಇತಿ ಪಶವ ಇತಿ ॥ ೬ ॥**

೬. ಇಂದ್ರನು ಯಾರು, ಪ್ರಜಾಪತಿ ಯಾರು? ಸ್ತನಯಿತ್ನುವೇ ಇಂದ್ರನು, ಯಜ್ಞವೇ ಪ್ರಜಾಪತಿಯು (ಎಂದು ಉತ್ತರವಿತ್ತನು), ಸ್ತನಯಿತ್ನು ಯಾವದು? ಎನ್ನಲು ಅಶನಿಯೇ (ಎಂದುತ್ತರವಿತ್ತನು), ಯಜ್ಞವು ಯಾವದು? ಎನ್ನಲು ಪಶುಗಳೇ (ಎಂದುತ್ತರವಿತ್ತನು).

(ಭಾಷ್ಯ)

೧೧೧. ಕತಮ ಇನ್ದ್ರಃ ಕತಮಃ ಪ್ರಜಾಪತಿರಿತಿ? ಸ್ತನಯಿತ್ನುರೇವ ಇನ್ದ್ರಃ। ಯಜ್ಞಃ ಪ್ರಜಾಪತಿರಿತಿ। ಕತಮಃ ಸ್ತನಯಿತ್ನುರಿತಿ? ಅಶನಿರಿತಿ। ಅಶನಿಃ ವಜ್ರಂ ವೀರ್ಯಂ ಬಲಂ ಯತ್ಪ್ರಾಣಿನಃ ಪ್ರಮಾಪಯತಿ ಸ ಇನ್ದ್ರಃ। ಇನ್ದ್ರಸ್ಯ ಹಿ ತತ್ಕರ್ಮ। ಕತಮೋ ಯಜ್ಞ ಇತಿ? ಪಶವ ಇತಿ। ಯಜ್ಞಸ್ಯ ಹಿ ಸಾಧನಾನಿ ಪಶವಃ। ಯಜ್ಞಸ್ಯ ಅರೂಪತ್ವಾತ್ ಪಶುಸಾಧನಾಶ್ರಯತ್ವಾಚ್ಚ ಪಶವೋ ಯಜ್ಞ ಇತ್ಯುಚ್ಯತೇ ॥

(ಭಾಷ್ಯಾರ್ಥ)

ಇಂದ್ರನು ಯಾರು, ಪ್ರಜಾಪತಿ ಯಾರು? ಎನ್ನಲು ಸ್ತನಯಿತ್ನುವೇ ಇಂದ್ರನು, ಯಜ್ಞವೇ ಪ್ರಜಾಪತಿಯು ಎಂದು (ಉತ್ತರವಿತ್ತನು). ಸ್ತನಯಿತ್ನು ಎಂದರೆ ಯಾವದು? ಅಶನಿಯು, ಎಂದರೆ ವಜ್ರವು, ವೀರ್ಯ; ಪ್ರಾಣಿಗಳನ್ನು ಹಿಂಸಿಸುವ ಬಲವಿದೆಯಲ್ಲ, ಅದೇ ಇಂದ್ರನು; ಆದು ಇಂದ್ರನ ಕರ್ಮ

ವಷ್ಟೆ? ಯಜ್ಞವೆಂದರೆ ಯಾವದು? ಪಶುಗಳೇ. ಯಜ್ಞಕ್ಕೆ ಪಶುಗಳು ಸಾಧನಗಳಲ್ಲವೆ? ಯಜ್ಞಕ್ಕೆ (ಸ್ವತಃ) ರೂಪವಿಲ್ಲದ್ದರಿಂದಲೂ ಪಶುಗಳೆಂಬ ಸಾಧನವನ್ನು ಆಶ್ರಯಿಸಿಕೊಂಡಿರುವದರಿಂದಲೂ ಪಶುಗಳನ್ನೇ ಯಜ್ಞವೆಂದಿದೆ.

## ಆರು ದೇವತೆಗಳ ವಿವರ

(ಉಪನಿಷತ್ತು)

**ಕತಮೇ ಷಡಿತ್ಯಗ್ನಿಶ್ಚ ಪೃಥಿವೀ ಚ ವಾಯುಶ್ಚಾನ್ತರಿಕ್ಷಂ ಚಾದಿತ್ಯಶ್ಚ ದ್ಯೌಶ್ಚೈತೇ ಷಡೇತೇ ಹೀದಗ್ಂ ಸರ್ವಗ್ಂ ಷಡಿತಿ ॥ ೭ ॥**

೭. ಆರು (ದೇವತೆಗಳು) ಯಾರು? ಅಗ್ನಿಯೂ ಪೃಥಿವಿಯೂ ವಾಯುವೂ ಅಂತರಿಕ್ಷವೂ ಆದಿತ್ಯನೂ ದ್ಯುಲೋಕವೂ –ಎಂಬಿವೇ ಆರು. ಈ ಆರೇ ಅಲ್ಲವೆ, ಇದೆಲ್ಲವೂ? ಎಂದು (ಉತ್ತರವಿತ್ತನು).

(ಭಾಷ್ಯ)

೧೦೨. ಕತಮೇ ಷಡಿತಿ? ತ ಏವಾಗ್ನ್ಯಾದಯೋ ವಸುತ್ವೇನ ಪಠಿತಾಃ ಚನ್ದ್ರಮಸಂ ನಕ್ಷತ್ರಾಣಿ ಚ ವರ್ಜಯಿತ್ವಾ ಷಡ್ ಭವನ್ತಿ, ಷಟ್ಸಂಖ್ಯಾವಿಶಿಷ್ಟಾಃ। ಏತೇ ಹಿ ಯಸ್ಮಾತ್ ತ್ರಯಸ್ತ್ರಿಂಶದಾದಿ ಯದುಕ್ತಮ್ ಇದಂ ಸರ್ವಮ್ ಏತ ಏವ ಷಡ್ ಭವನ್ತಿ। ಸರ್ವೋ ಹಿ ವಸ್ವಾದಿವಿಸ್ತರಃ ಏತೇಷ್ವೇವ ಷಟ್ಸು ಅನ್ತರ್ಭವತೀತ್ಯರ್ಥಃ॥

(ಭಾಷ್ಯಾರ್ಥ)

ಆರು (ದೇವತೆಗಳು) ಯಾರು ಎಂದದ್ದಕ್ಕೆ (ಉತ್ತರ): ವಸುಗಳೆಂದು ಹಿಂದೆ ಹೇಳಿರುವ ಅದೇ ಅಗ್ನ್ಯಾದಿಗಳೇ ಚಂದ್ರನನ್ನೂ ನಕ್ಷತ್ರಗಳನ್ನೂ ಬಿಟ್ಟರೆ ಆರು (ಮಂದಿ)ಯಾಗುತ್ತಾರೆ. (ಏಕೆಂದರೆ) ಆರೆಂಬ ಸಂಖ್ಯೆಯಿಂದ ಕೂಡಿರುತ್ತಾರೆ. ಮೂವತ್ತುಮೂರು ಎಂದು ಮುಂತಾಗಿ ಹೇಳಿತ್ತಲ್ಲ, ಇದೆಲ್ಲವೂ ಇವೇ ಆರೇ ಆಗಿರುತ್ತವೆಯಲ್ಲವೆ? ವಸುಗಳು ಎಂದು ಮುಂತಾಗಿ ವಿವರಿಸಿ ಹೇಳಿರುವದು ಈ ಆರರಲ್ಲಿಯೇ ಅಡಕವಾಗಿರುತ್ತದೆ(ಯಷ್ಟೆ) ಎಂದರ್ಥ.

## ಮೂರು ಮುಂತಾದ ದೇವತೆಗಳ ವಿವರ

(ಉಪನಿಷತ್ತು)

**ಕತಮೇ ತೇ ತ್ರಯೋ ದೇವಾ ಇತೀಮ ಏವ ತ್ರಯೋ ಲೋಕಾ ಏಷು ಹೀಮೇ ಸರ್ವೇ ದೇವಾ ಇತಿ ಕತಮೌ ತೌ ದ್ವೌ ದೇವಾ ವಿತ್ಯನ್ನಂ ಚೈವ ಪ್ರಾಣಶ್ಚೇತಿ ಕತಮೋಽಧ್ಯರ್ಧ ಇತಿ ಯೋಽಯಂ ಪವತ ಇತಿ ॥ ೮ ॥**

೮. ಆ ಮೂವರು ದೇವತೆಗಳು ಯಾರು? ಎನ್ನಲು ಈ ಮೂರು ಲೋಕಗಳೇ ; ಇವುಗಳಲ್ಲಿಯೇ ಅಲ್ಲವೆ, ಈ ಎಲ್ಲಾ ದೇವತೆಗಳೂ ಎಂದು (ಉತ್ತರವಿತ್ತನು). ಆ ಇಬ್ಬರು ದೇವತೆಗಳು ಯಾರು ? ಎನ್ನಲು ಅನ್ನವೂ ಪ್ರಾಣವೂ ಎಂದು (ಉತ್ತರವಿತ್ತನು). ಒಂದೂವರೆ ಎಂದರೆ ಯಾವದ - ಬೀಸುತ್ತದೆಯಲ್ಲ, ಇದೇ ಎಂದು (ಉತ್ತರವಿತ್ತನು).

(ಭಾಷ್ಯ)

೧೦೩. ಕತಮೇ ತೇ ತ್ರಯೋ ದೇವಾ ಇತಿ? ಇಮೇ ಏವ ತ್ರಯೋ ಲೋಕಾ ಇತಿ। ಪೃಥಿವೀಮ್ ಅಗ್ನಿಂ ಚ ಏಕೀಕೃತ್ಯ ಏಕೋ ದೇವಃ। ಅನ್ತರಿಕ್ಷಂ ವಾಯುಂ ಚ ಏಕೀಕೃತ್ಯ ದ್ವಿತೀಯಃ। ದಿವಮ್ ಆದಿತ್ಯಂ ಚ ಏಕೀಕೃತ್ಯ ತೃತೀಯಃ। ತೇ ಏವ ತ್ರಯೋ ದೇವಾಃ ಇತಿ। ಏಷು ಹಿ ಯಸ್ಮಾತ್ ತ್ರಿಷು ದೇವೇಷು ಸರ್ವೇ ದೇವಾಃ ಅನ್ತರ್ಭವನ್ತಿ। ತೇನ ಏತ ಏವ ದೇವಾಸ್ತ್ರಯಃ। ಇತ್ಯೇಷ ನೈರುಕ್ತಾನಾಂ ಕೇಷಾಂಚಿತ್ ಪಕ್ಷಃ। ಕತಮೌ ತೌ ದ್ವೌ ದೇವೌ ಇತಿ? ಅನ್ನಂ ಚೈವ ಪ್ರಾಣಶ್ಚ ಏತೌ ದ್ವೌ ದೇವೌ। ಅನಯೋಃ ಸರ್ವೇಷಾಮ್ ಉಕ್ತಾನಾಮ್ ಅನ್ತರ್ಭಾವಃ। ಕತಮೋಽಧ್ಯರ್ಧ ಇತಿ? ಯೋಽಯಂ ಪವತೇ ವಾಯುಃ ॥

(ಭಾಷ್ಯಾರ್ಥ)

ಆ ಮೂವರು ದೇವತೆಗಳು ಯಾರು ? ಎಂಬುದಕ್ಕೆ (ಉತ್ತರ) : ಈ ಮೂರು ಲೋಕಗಳೇ. ಪೃಥಿವಿಯನ್ನೂ ಅಗ್ನಿಯನ್ನೂ ಒಂದುಗೂಡಿಸಿದರೆ ಒಬ್ಬ ದೇವನು , ಅಂತರಿಕ್ಷವನ್ನೂ ವಾಯುವನ್ನೂ ಒಂದುಗೂಡಿಸಿದರೆ ಎರಡನೆಯವನು, ದ್ಯುಲೋಕವನ್ನೂ ಆದಿತ್ಯನನ್ನೂ ಒಂದುಗೂಡಿಸಿದರೆ ಮೂರನೆಯವನು-(ಹೀಗೆ) ಇವರೇ ಮೂರು ದೇವತೆಗಳು. (ಹಿ=ಯಸ್ಮಾತ್) ಏಕೆಂದರೆ ಈ ಮೂರು ದೇವತೆಗಳಲ್ಲಿಯೇ ಎಲ್ಲಾ ದೇವತೆಗಳೂ ಅಡಕವಾಗಿರುತ್ತಾರೆ ; ಆದ್ದರಿಂದ ಇವರೇ ಮೂವರು ದೇವತೆಗಳು. ಹೀಗೆಂಬುದು ಕೆಲವರು ನಿರುಕ್ತಕಾರರ ಪಕ್ಷವು.[1] ಆ ಇಬ್ಬರು ದೇವತೆಗಳು ಯಾರು ? ಎಂಬುದಕ್ಕೆ (ಉತ್ತರವಿದು) ಅನ್ನವೂ ಪ್ರಾಣವೂ- ಇವೇ ಇಬ್ಬರು ದೇವತೆಗಳು ಇವೆರಡರಲ್ಲಿಯೇ ಹಿಂದೆ ಹೇಳಿರುವ ಎಲ್ಲಾ ದೇವತೆಗಳಿಗೂ ಅಂತರ್ಭಾವ(ವಾಗುತ್ತದೆ). ಒಂದೂವರೆ ಯಾರು ? ಎಂಬ ದಕ್ಕೆ (ಉತ್ತರವಿದು) ; ಈ ಬೀಸುತ್ತಿರುವನಲ್ಲ, (ಈ) ವಾಯುವೇ (ಅವನು).

---

1. ಇದು ಕೆಲವರ ಪಕ್ಷವು; ಆದರೆ ಮೂರುಲೋಕಗಳೇ ಮೂವರು ದೇವತೆಗಳು ಎಂಬುದು ಮತ್ತೆ ಕೆಲವರ ಪಕ್ಷವು ಎಂದಭಿಪ್ರಾಯ- ಎಂದು ಆ। ಟೀಕೆ.

## ಒಬ್ಬನೇ ದೇವನು ಪ್ರಾಣನು

(ಉಪನಿಷತ್ತು)

**ತದಾಹುರ್ಯದಯಮೇಕ ಇವೈವ ಪವತೇऽಥ ಕಥಮಧ್ಯರ್ಧ ಇತಿ ಯದಸ್ಮಿನ್ನಿದಗ್ಂ ಸರ್ವಮಧ್ಯಾರ್ಧ್ನೋತ್ತೇನಾಧ್ಯರ್ಧ ಇತಿ ಕತಮ ಏಕೋ ದೇವ ಇತಿ ಪ್ರಾಣ ಇತಿ ಸ ಬ್ರಹ್ಮ ತ್ಯದಿತ್ಯಾಚಕ್ಷತೇ ॥ ೯ ॥**

೯. ಇಲ್ಲಿ ಹೇಳುತ್ತಾರೇನೆಂದರೆ ಇವನು ಒಬ್ಬನೇ ಬೀಸುತ್ತಿರುವನಲ್ಲ, ಹೀಗಿರುವಲ್ಲಿ ಒಂದೂವರೆ ಎಂಬುದು ಹೇಗೆ? (ಉತ್ತರ): ಹೇಗೆಂದರೆ ಇದರಲ್ಲಿಯೇ ಎಲ್ಲವೂ ಮುಂದುಮುಂದಕ್ಕೆ ಋದ್ಧಿಯನ್ನು ಹೊಂದುತ್ತಿದೆ ; ಆದ್ದರಿಂದ (ಇವನು) ಅಧ್ಯರ್ಧನವು. ಒಬ್ಬನೇ ದೇವನು ಯಾರು ? ಎಂಬುದಕ್ಕೆ (ಉತ್ತರವು) : ಪ್ರಾಣನೇ , ಅವನೇ ಬ್ರಹ್ಮವು, ತ್ಯತ್ತು ಎಂದು ಕರೆಯುತ್ತಾರೆ.

(ಭಾಷ್ಯ)

೧೦೪ ತತ್ ತತ್ರ ಆಹುಃ ಚೋದಯನ್ತಿ। ಯದಯಂ ವಾಯು ಏಕ ಇವೈವ ಏಕ ಏವ ಪವತೇ, ಅಥ ಕಥಮ್ ಅಧ್ಯರ್ಧ ಇತಿ? ಯತ್ ಅಸ್ಮಿನ್ ಇದಂ ಸರ್ವಮ್ ಅಧ್ಯಾರ್ಧ್ನೋತ್ ಅಸ್ಮಿನ್ ವಾಯೌ ಸತಿ ಇದಂ ಸರ್ವಮ್ ಅಧ್ಯಾರ್ಧ್ನೋತ್ ಅಧಿ ಋದ್ಧಿಂ ಪ್ರಾಪ್ನೋತಿ ತೇನ ಅಧ್ಯರ್ಧಃ ಇತಿ। ಕತಮ ಏಕೋ ದೇವ ಇತಿ? ಪ್ರಾಣ ಇತಿ। ಸ ಪ್ರಾಣೋ ಬ್ರಹ್ಮ। ಸರ್ವದೇವಾತ್ಮಕತ್ವಾತ್ ಮಹದ್ ಬ್ರಹ್ಮ। ತೇನ ಸ ಬ್ರಹ್ಮ ತ್ಯತ್ ಇತ್ಯಾಚಕ್ಷತೇ। ತ್ಯದಿತಿ ತದ್ ಬ್ರಹ್ಮ ಆಚಕ್ಷತೇ ಪರೋಕ್ಷಾಭಿಧಾಯಕೇನ ಶಬ್ದೇನ। ದೇವಾನಾಮ್ ಏತದೇಕತ್ವಂ ನಾನಾತ್ವಂ ಚ। ಅನನ್ತಾನಾಂ ದೇವಾನಾಂ ನಿವಿತ್ಸಂಖ್ಯಾವಿಶಿಷ್ಟೇಷು ಅನ್ತರ್ಭಾವಃ। ತೇಷಾಮಪಿ ತ್ರಯಸ್ತ್ರಿಂಶದಾದಿಷು ಉತ್ತರೋತ್ತರೇಷು ಯಾವದೇಕಸ್ಮಿನ್ ಪ್ರಾಣೇ। ಪ್ರಾಣಸ್ಯೈವ ಚ ಏಕಸ್ಯ ಸರ್ವಃ ಅನನ್ತಸಂಖ್ಯಾತೋ ವಿಸ್ತರಃ। ಏವಮ್ ಏಕಶ್ಚ ಅನನ್ತಶ್ಚ ಅವಾನ್ತರಸಂಖ್ಯಾವಿಶಿಷ್ಟಶ್ಚ ಪ್ರಾಣ ಏವ। ತತ್ರ ಚ ದೇವಸ್ಯೈಕಸ್ಯ ನಾಮರೂಪಕರ್ಮಗುಣಶಕ್ತಿಭೇದಃ। ಅಧಿಕಾರಭೇದಾತ್ ॥

(ಭಾಷ್ಯಾರ್ಥ)

(ತತ್ = ತತ್ರ) ಈ (ವಿಷಯ)ದಲ್ಲಿ (ಕೆಲವರು) ಹೇಳುತ್ತಾರೇನೆಂದರೆ ಆಕ್ಷೇಪಿಸುವರೇನೆಂದರೆ ಈ ವಾಯು (ಇವೈವ = ಏವ) ಒಬ್ಬನೇ ಬೀಸುತ್ತಿರುವನಲ್ಲ, ಹೀಗಿರುವಲ್ಲಿ ಅಧ್ಯರ್ಧ ಎಂಬುದು ಹೇಗೆ? (ಇದಕ್ಕೆ ಪರಿಹಾರ), ಇವನಲ್ಲಿ

ಇದೆಲ್ಲವೂ ಅಧ್ಯರ್ಧಿಯಾಗುತ್ತದೆ, ಈ ವಾಯುವಿರುವಲ್ಲಿ ಇದೆಲ್ಲವೂ (ಅಧ್ಯಾರ್ಧ್ನೋತ್=ಅಧಿ ಋದ್ಧಿಂ ಪ್ರಾಪ್ನೋತಿ) ಮುಂದುಮುಂದಕ್ಕೆ ಋದ್ಧಿಯನ್ನು ಹೊಂದುತ್ತದೆ; ಆದರಿಂದ (ಇವನು) ಅಧ್ಯರ್ಧವು.[1]

(ಪ್ರಶ್ನೆ) :- ಒಬ್ಬ ದೇವತೆ ಯಾರು ?

(ಉತ್ತರ):- ಪ್ರಾಣನೇ. ಆ ಪ್ರಾಣನೇ ಬ್ರಹ್ಮವು; ಏಕೆಂದರೆ ಎಲ್ಲಾ ದೇವತೆಗಳ ರೂಪದಲ್ಲಿಯೂ ಇರುವದರಿಂದ[2] (ಪ್ರಾಣನು) ದೊಡ್ಡದು, ಬ್ರಹ್ಮ. ಆದ್ದರಿಂದ ಆ ಬ್ರಹ್ಮವನ್ನು ತ್ಯತ್ ಎಂದು ಕರೆಯುತ್ತಾರೆ, ತ್ಯತ್ (ಅದು) ಎಂಬ ಪರೋಕ್ಷ(ವಸ್ತು)ವನ್ನು ಹೇಳುವ ಶಬ್ದದಿಂದ ಆ ಬ್ರಹ್ಮವನ್ನು ಕರೆಯುತ್ತಾರೆ[3]. ದೇವತೆಗಳು ಈ (ದೇವತೆಯೊಡನೆ) ಒಂದಾಗಿರುತ್ತಾರೆ, ಬೇರೆ ಬೇರೆಯಾಗಿಯೂ ಇರುತ್ತಾರೆ[4]. ಅನಂತರಾಗಿರುವ ದೇವತೆಗಳು ನಿವಿತ್ಸಂಖ್ಯೆಯ ದೇವತೆಗಳಲ್ಲಿ ಅಡಕವಾಗಿರುವರು; ಅವರೂ ಮೂವತ್ತು ಮೂರು ಮುಂತಾದ ಮುಂದುಮುಂದಿನ ಸಂಖ್ಯೆಯ ದೇವತೆಗಳಲ್ಲಿ, ಕೊನೆಗೆ ಒಬ್ಬನೇ ಆದ ಪ್ರಾಣನಲ್ಲಿ (ಅಡಕವಾಗಿರುತ್ತಾರೆ). ಪ್ರಾಣನೆಂಬ ಒಬ್ಬ ದೇವತೆಗೆ (ಈ) ಅನಂತಸಂಖ್ಯೆಯ ವಿಸ್ತರವು (ಇರುತ್ತದೆ). ಹೀಗೆ ಒಬ್ಬನೂ ಅನಂತನೂ ಒಳಸಂಖ್ಯೆಗಳಿಂದೊಡಗೂಡಿದವನೂ ಪ್ರಾಣನೇ. ಅದರಲ್ಲಿಯೇ ಆ ಒಬ್ಬ ದೇವನಿಗೆ ನಾಮ, ರೂಪ, ಕರ್ಮ, ಗುಣ, ಶಕ್ತಿ- ಇವುಗಳಿಂದಾಗಿರುವ ಭೇದವು ಅಧಿಕಾರಿಗಳ ಭೇದದಿಂದ (ಆದದ್ದು)[5].

## ಪ್ರಾಣಭೇದಗಳನ್ನು ಕುರಿತ ಪ್ರಶ್ನೋತ್ತರಗಳು

(ಉಪನಿಷತ್ತು)

**ಪೃಥಿವ್ಯೇವ ಯಸ್ಯಾಽಽಯತನಮಗ್ನಿರ್ಲೋಕೋ ಮನೋ ಜ್ಯೋತಿರ್ಯೋ ವೈ ತಂ ಪುರುಷಂ ವಿದ್ಯಾತ್ ಸರ್ವಸ್ಯಾತ್ಮನಃ ಪರಾಯಣಗ್ಂ ಸ ವೈ ವೇದಿತಾ ಸ್ಯಾತ್ । ಯಾಜ್ಞವಲ್ಕ್ಯ**

---

1. ವಾಯುವು 'ಒಂದೂವರೆ' ಎಂದು ಅಧ್ಯರ್ಧಶಬ್ದಕ್ಕೆ ತಟ್ಟನೆ ಆಗುವ ಅರ್ಥ. ಆಕ್ಷೇಪಕರು ಈ ಅರ್ಥವನ್ನು ಇಟ್ಟುಕೊಂಡು ಕೇಳಿದಾರೆ. ಆದರೆ ಯಾಜ್ಞವಲ್ಕ್ಯನಿಗೆ ಆ ಅಭಿಪ್ರಾಯವೇ ಇಲ್ಲ, ಎಲ್ಲದರ ಅಭಿವೃದ್ಧಿಗೂ ಆಧಾರವಾಗಿರುವ ದೇವತೆ ಎಂದೇ ಅವನ ಅಭಿಪ್ರಾಯ.

2. ದೇವತೆಗಳ ಸಮಷ್ಟಿಯೇ ವಾಯು, ಕಿರಣಗಳ ಒಟ್ಟೇ ಸೂರ್ಯನು ಎಂಬಂತೆ ಇದನ್ನು ತಿಳಿದುಕೊಳ್ಳಬೇಕು.

3. ದೊಡ್ಡವರಿಗೆ ಪರೋಕ್ಷನಾಮದಿಂದ ಗೌರವವನ್ನು ತೋರಿಸುವ ಪದ್ಧತಿಯಿದೆ.

4. ಮೂರು ಸಾವಿರದ ಮುನ್ನೂರ ಆರರಲ್ಲಿ ಅಡಕವಾಗಿರುವರು

5. ಪ್ರಾಣನು ಒಬ್ಬನೇ ಆದರೂ ಅಗ್ನಿಯೇ ಮುಂತಾದ ಬೇರೆಬೇರೆಯ ನಾಮರೂಪಕರ್ಮಗುಣಶಕ್ತಿಗಳಿಂದ ಅವನ ಅಂಶಗಳಾದ ದೇವತೆಗಳನ್ನೇ ಆಯಾ ಅಧಿಕಾರಿಗಳು ತಮ್ಮತಮ್ಮ ಇಷ್ಟಫಲಕ್ಕಾಗಿ ಉಪಾಸನೆಮಾಡುವರು.

**ವೇವ ವಾ ಅಹಂ ತಂ ಪುರುಷಗ್ಂ ಸರ್ವಸ್ಯಾಽಽತ್ಮನಃ ಪರಾ ಯಣಂ ಯಮಾತ್ಥ ಯ ಏವಾಯಗ್ಂ ಶಾರೀರಃ ಪುರುಷಃ ಸ ಏಷ ವದೈವ ಶಾಕಲ್ಯ ತಸ್ಯ ಕಾ ದೇವತೇತ್ಯಮೃತಮಿತಿ ಹೋವಾಚ || ೧೦ ||**

೧೦. "ಯಾವನಿಗೆ ಪೃಥಿವಿಯೇ ಆಯತನವೋ, ಅಗ್ನಿಯು ಲೋಕವೋ, ಮನಸ್ಸು ಜ್ಯೋತಿಯೋ, ಆತ್ಮಕ್ಕೆಲ್ಲ ಪರಾಯಣ ವಾಗಿರುವ ಆ ಪುರುಷನನ್ನು ಯಾವನು ಬಲ್ಲನೋ ಅವನೇ ಬಲ್ಲವ ನಯ್ಯ, ಯಾಜ್ಞವಲ್ಕ್ಯ!'' ಆತ್ಮಕ್ಕೆಲ್ಲ ಪರಾಯಣನಾಗಿರುವ ಆ ನೀನು ಹೇಳುವ ಪುರುಷನನ್ನು ಬಲ್ಲೆನು. ಈ ಶಾರೀರಪುರುಷನಿವಾ ನಲ್ಲ, ಅವನೇ ಇವನು. (ಸರಿ ಮುಂದಕ್ಕೆ) ಹೇಳಪ್ಪ, ಶಾಕಲ್ಯ ! 'ಅವನಿಗೆ ದೇವತೆ ಯಾವದು?' 'ಅಮೃತವು' ಎಂದು (ಅವನು ಉತ್ತರವನ್ನು) ಹೇಳಿದನು.

## ಪೃಥಿವ್ಯಭಿಮಾನಿದೇವತೆ

(ಭಾಷ್ಯ)

೧೦೫ ಇದಾನೀಂ ತಸ್ಯೈವ ಪ್ರಾಣಸ್ಯ ಬ್ರಹ್ಮಣಃ ಪುನರಷ್ಟಧಾ ಭೇದ ಉಪದಿಶ್ಯತೇ। ಪೃಥಿವ್ಯೇವ ಯಸ್ಯ ದೇವಸ್ಯ ಆಯತನಮ್ ಆಶ್ರಯಃ। ಅಗ್ನಿ ರ್ಲೋಕೋ ಯಸ್ಯ। ಲೋಕಯತಿ ಅನೇನ ಇತಿ ಲೋಕಃ, ಪಶ್ಯತೀತಿ। ಅಗ್ನಿನಾ ಪಶ್ಯತಿ ಇತ್ಯರ್ಥಃ। ಮನೋಜ್ಯೋತಿಃ। ಮನಸಾ ಜ್ಯೋತಿಷಾ ಸಂಕಲ್ಪ ವಿಕಲ್ಪಾದಿಕಾರ್ಯಂ ಕರೋತಿ ಯಃ ಸೋಽಯಂ ಮನೋಜ್ಯೋತಿಃ। ಪೃಥಿವೀಶರೀರಃ, ಅಗ್ನಿದರ್ಶನಃ ಮನಸಾ ಸಂಕಲ್ಪಯಿತಾ ಪೃಥಿವ್ಯಭಿಮಾನೀ ಕಾರ್ಯಕರಣಸಂಘಾತವಾನ್ ದೇವಃ ಇತ್ಯರ್ಥಃ। ಯ ಏವಂ ವಿಶಿಷ್ಟಂ ವೈ ತಂ ಪುರುಷಂ ವಿದ್ಯಾತ್ ವಿಜಾನೀಯಾತ್, ಸರ್ವಸ್ಯ ಆತ್ಮನಃ ಆಧ್ಯಾತ್ಮಿಕಸ್ಯ ಕಾರ್ಯಕರಣಸಂಘಾತಸ್ಯ ಆತ್ಮನಃ ಪರಮ್ ಅಯನಮ್ ಪರ ಆಶ್ರಯಃ ತಂ ಪರಾಯಣಮ್ ಮಾತೃಜೇನ ತ್ವಙ್ಮಾಂಸರುಧಿರರೂಪೇಣ ಕ್ಷೇತ್ರಸ್ಥಾನೀಯೇನ ಬೀಜಸ್ಥಾನೀಯಸ್ಯ ಪಿತೃಜಸ್ಯ ಅಸ್ಥಿಮಜ್ಜಾಶುಕ್ರರೂಪಸ್ಯ ಪರಮ್ ಅಯ ನಮ್ ಕರಣಾತ್ಮನಶ್ಚ ಸ ವೈ ವೇದಿತಾ ಸ್ಯಾತ್। ಯ ಏತದೇವಂ ವೇತ್ತಿ ಸ ವೈ ವೇದಿತಾ ಪಣ್ಡಿತಃ ಸ್ಯಾತ್ ಇತ್ಯಭಿಪ್ರಾಯಃ। ಯಾಜ್ಞವಲ್ಕ್ಯ. ತ್ವಂ ತಮ ಜಾನನ್ನೇವ ಪಣ್ಡಿತಾಭಿಮಾನೀ ಇತ್ಯಭಿಪ್ರಾಯಃ। ಯದಿ ತದ್ವಿಜ್ಞಾನೇ ಪಾಣ್ಡಿತ್ಯಂ ಲಭ್ಯತೇ ವೇದ ವೈ ಅಹಂ ತಂ ಪುರುಷಂ ಸರ್ವಸ್ಯ ಆತ್ಮನಃ

ಪರಾಯಣಂ ಯ ಏವಾತ್ಥ ಯಂ ಕಥಯಸಿ ತಮಹಂ ವೇದ। ತತ್ರ ಶಾಕಲ್ಯಸ್ಯ ವಚನಂ ದ್ರಷ್ಟವ್ಯಮ್ 'ಯದಿ ತ್ವಂ ವೇತ್ಥ ತಂ ಪುರುಷಮ್। ಬ್ರೂಹಿ ಕಿಂ ವಿಶೇಷಣೋಽಸೌ'। ಶೃಣು ಯದ್ವಿಶೇಷಣಃ ಸಃ। ಯ ಏವಾಯಂ ಶಾರೀರಃ, ಪಾರ್ಥಿವಾಂಶೇ ಶರೀರೇ ಭವಃ ಶಾರೀರಃ ಮಾತೃಜಕೋಶತ್ರಯರೂಪಃ ಇತ್ಯರ್ಥಃ। ಸ ಏಷ ದೇವಃ ಯಸ್ತ್ವಯಾ ಪೃಷ್ಟಃ, ·ಹೇ ಶಾಕಲ್ಯ। ಕಿಂ ತು ಅಸ್ತಿ ತತ್ರ ವಕ್ತವ್ಯಂ ವಿಶೇಷಣಾನ್ತರಮ್। ತತ್ ವದೈವ ಪೃಚ್ಛೈವೇತ್ಯರ್ಥಃ। ಹೇ ಶಾಕಲ್ಯ। ಸ ಏವಂ ಪ್ರಕ್ಷೋಭಿತಃ ಅಮರ್ಷವಶಗ ಆಹ ತೋತ್ತ್ರಾರ್ದಿತ ಇವ ಗಜಃ। ತಸ್ಯ ದೇವಸ್ಯ ಶಾರೀರಸ್ಯ ಕಾ ದೇವತಾ ? ಯಸ್ಮಾತ್ ನಿಷ್ಪದ್ಯತೇ, ಯಃ ಸ[1] ತಸ್ಯ 'ದೇವತಾ' ಇತ್ಯಸ್ಮಿನ್ ಪ್ರಕರಣೇ ವಿವಕ್ಷಿತಮ್[2]। ಅಮೃತಮಿತಿ ಹೋವಾಚ। 'ಅಮೃತಮ್' ಇತಿ ಯೋ ಭುಕ್ತಸ್ಯಾನ್ನಸ್ಯ ರಸಃ ಮಾತೃಜಸ್ಯ ಲೋಹಿತಸ್ಯ ನಿಷ್ಪತ್ತಿಹೇತುಃ। ತಸ್ಮಾದ್ ಹಿ ಅನ್ನರಸಾತ್ ಲೋಹಿತಂ ನಿಷ್ಪದ್ಯತೇ ಸ್ತ್ರಿಯಾಂ ಶ್ರಿತಮ್। ತತಶ್ಚ ಲೋಹಿತಮಯಂ ಶರೀರಂ ಬೀಜಾಶ್ರಯಮ್। ಸಮಾನಮನ್ಯತ್ ॥

(ಭಾಷ್ಯಾರ್ಥ)

ಈ ಅದೇ ಪ್ರಾಣಬ್ರಹ್ಮಕ್ಕೆ ಮತ್ತೆ ಎಂಟು ಬಗೆಯ ಭೇದಗಳನ್ನು ಹೇಳಲಾಗುತ್ತದೆ. ಪೃಥಿವಿಯೇ ಯಾವ ದೇವನಿಗೆ ಆಯತನವೋ ಆಶ್ರಯವೋ, ಅಗ್ನಿಯು ಯಾವನಿಗೆ ಲೋಕವೋ– ಇದರಿಂದ ನೋಡುತ್ತಾರೆ (ಲೋಕಯತಿ= ಪಶ್ಯತಿ) ಆದ್ದರಿಂದ (ಲೋಕ)ವೆನಿಸುತ್ತದೆ– ಅಗ್ನಿಯಿಂದ (ಯಾವನು) ನೋಡುತ್ತಾನೋ ಎಂದರ್ಥ. ಮನೋಜ್ಯೋತಿಯೋ, ಮನಸ್ಸೆಂಬ ಜ್ಯೋತಿಯಿಂದ ಯಾವನು ಸಂಕಲ್ಪವಿಕಲ್ಪಾದಿಗಳನ್ನು ಮಾಡುತ್ತಿರುವನೋ ಅವನು. ಮನೋಜ್ಯೋತಿಯು[3]. ಪೃಥಿವಿಯೆಂಬ ಶರೀರವುಳ್ಳವನೂ ಅಗ್ನಿಯೆಂಬ ಚಕ್ಷುಸ್ಸುಳ್ಳವನೂ ಮನಸ್ಸಿನಿಂದ ಸಂಕಲ್ಪಿಸುವವನೂ ಆಗಿರುವ ಪೃಥಿವ್ಯಭಿಮಾನಿಯಾದ ಕಾರ್ಯಕರಣಸಂಘಾತವಂತನಾದ ದೇವನು ಎಂದರ್ಥ. ಇಂಥ ವಿಶೇಷಣಗಳಿಂದ ಕೂಡಿರುವ ಆ ಪುರುಷನನ್ನು ಯಾವನು ಬಲ್ಲನೋ ತಿಳಿದಿರುವನೋ, ಆತ್ಮಕ್ಕೆಲ್ಲ ಆಧ್ಯಾತ್ಮಿಕವಾದ ಕಾರ್ಯಕರಣಸಂಘಾತವೆಂಬ ಆತ್ಮಕ್ಕೆ ಹೆಚ್ಚಿನ

1. ಸಾ ಎಂಬ ಪಾಠವೂ ಉಂಟು; ಆಗ ದೇವತಾ ಎಂಬುದಕ್ಕೆ ಅದನ್ನು ವಿಶೇಷಣವೆಂದು ಭಾವಿಸಬೇಕು.

2. 'ವಿವಕ್ಷಿತಃ' ಎಂಬ ಪಾಠವೂ ಉಂಟು; ಸಃ ಎಂಬುದಕ್ಕೆ ಅದನ್ನು ವಿಶೇಷಣವೆಂದು ಆಗ ಇಟ್ಟುಕೊಳ್ಳಬೇಕಾಗುವದು.

3. ಭಾಷ್ಯಕಾರರು ಮನೋಜ್ಯೋತಿ ಎಂಬುದನ್ನು ಸಮಸ್ತಪದವೆಂದು ಅಂಗೀಕರಿಸಿ ಈ ವಿವರಣೆಯನ್ನು ಕೊಟ್ಟಿರುತ್ತಾರೆ; ಮನಸ್ಸೇ ಜ್ಯೋತಿಯೋ ಎಂದು ವ್ಯಸ್ತಪದಗಳಾಗಿಯೂ ಇಟ್ಟುಕೊಳ್ಳಬಹುದಾಗಿತ್ತೆಂದು ತೋರುತ್ತದೆ.

ಅಯನವು ಎಂದರೆ ಹೆಚ್ಚಿನ ಆಶ್ರಯವಾಗಿರುವ ಆ ಪರಾಯಣನನ್ನು- ತಾಯಿಯಿಂದಾಗಿರುವ ತ್ವಕ್ಮಾಂಸರಕ್ತಗಳೆಂಬ ಕ್ಷೇತ್ರಸ್ಥಾನೀಯವಾಗಿರುವ (ರೂಪ)ದಿಂದ ತಂದೆಯಿಂದಾಗಿರುವ ಅಸ್ಥಿ, ಮಜ್ಜೆ, ಶುಕ್ರಗಳೆಂಬ ಬೀಜ ಸ್ಥಾನೀಯಕ್ಕೂ[1] ಕರಣಾತ್ಮನಿಗೂ ಹೆಚ್ಚಿನ ಆಯನವಾಗಿರುವವನನ್ನು (ಬಲ್ಲನೋ ಎಂದರ್ಥ)- ಅವನೇ ಬಲ್ಲವನು. ಯಾವನು ಇದನ್ನು ಹೀಗೆಂದು ತಿಳಿದಿರುವನೋ ಅವನೇ ಬಲ್ಲವನು, ಪಂಡಿತನೆನಿಸುವನು ಎಂದು ಅಭಿಪ್ರಾಯ. ಯಾಜ್ಞವಲ್ಕ್ಯನೆ, ನೀನು ಆ (ಪುರುಷನನ್ನು) ಅರಿಯದೆಯೇ ಪಂಡಿತನೆಂಬ ಅಭಿಮಾನವನ್ನು ತಳೆದಿರುವೆ ಎಂದು ಅಭಿಪ್ರಾಯ

ಇದನ್ನು ತಿಳಿದಿದ್ದರೆ ಪಾಂಡಿತ್ಯವು ದೊರೆಯುವದಾದರೆ, ನಾನು ಆ ಪುರುಷನನ್ನು ಬಲ್ಲೆನು- ಆತ್ಮಕ್ಕೆಲ್ಲ ಪರಾಯಣನೆಂದು ನೀನು ಹೇಳುತ್ತಿರುವೆಯಲ್ಲ, ಹಾಗೆನ್ನುತ್ತಿರುವೆಯಲ್ಲ- ಅವನನ್ನು ನಾನು ಬಲ್ಲೆನು. ಇಲ್ಲಿ "ಆ ಪುರುಷನನ್ನು ನೀನು ಬಲ್ಲೆಯಾದರೆ, ಅವನ ವಿಶೇಷಣಗಳು ಯಾವವು, ಹೇಳು!" ಎಂದು ಶಾಕಲ್ಯನು ಕೇಳಿದನೆಂದು ಇಟ್ಟುಕೊಳ್ಳಬೇಕು. (ಯಾಜ್ಞವಲ್ಕ್ಯನು ಇದಕ್ಕೆ ಹೇಳುತ್ತಾನೆ) ಅವನು ಯಾವ ವಿಶೇಷಣಗಳುಳ್ಳವನೋ (ಹೇಳುತ್ತೇನೆ), ಕೇಳು, ಈ ಶಾರೀರನಿದಾನಲ್ಲ- ಪಾರ್ಥಿವಾಂಶವಾದ ಶರೀರದಲ್ಲಿ ಇರುವ ಶಾರೀರನು, ತಾಯಿಯಿಂದಾಗಿರುವ ಕೋಶತ್ರಯರೂಪನು ಎಂದು ಅರ್ಥ. ಅವನೇ ಈ ನೀನು ಕೇಳಿದ ದೇವನಯ್ಯಾ, ಎಲೈ ಶಾಕಲ್ಯ. ಆದರೆ ಇಲ್ಲಿ ಹೇಳಬೇಕಾಗಿರುವ ಮತ್ತೊಂದು ವಿಶೇಷಣವಿದೆ. ಅದನ್ನು ಹೇಳಿಬಿಡು, ಕೇಳಿಬಿಡು ಎಂದರ್ಥ. ಎಲೈ ಶಾಕಲ್ಯನೆ, (ಅದನ್ನು ಕೇಳು)! ಹೀಗೆ ತಳಮಳಗೊಳಿಸಲಾಗಿ ಅಸಹನೆಗೆ ವಶನಾಗಿ ಆ (ಶಾಕಲ್ಯನು), ಅಂಕುಶದಿಂದ ಚುಚ್ಚಿದ ಆನೆಯಂತೆ ಹೇಳುತ್ತಾನೆ: ಆ ಶಾರೀರದೇವನಿಗೆ ದೇವತೆ ಯಾವದು? ಯಾವದು ಏತರಿಂದ ಉಂಟಾಗುತ್ತದೆಯೋ ಅದು ಅದರ ದೇವತೆ ಎಂದು ಈ ಪ್ರಕರಣದಲ್ಲಿ ವಿವಕ್ಷಿತವಾಗಿರುತ್ತದೆ. ಅಮೃತವೇ (ಆ ದೇವತೆ) ಎಂದು (ಯಾಜ್ಞವಲ್ಕ್ಯನು) ಉತ್ತರವಿತ್ತನು. ಅಮೃತವು ಎಂದರೆ ಉಂಡ ಅನ್ನದ ರಸವು, (ಅದೇ) ತಾಯಿಯಿಂದುಂಟಾಗುವ ಲೋಹಿತವುಂಟಾಗುವದಕ್ಕೆ ಹೇತು; ಆ ಅನ್ನರಸದಿಂದಲೇ ಅಲ್ಲವೆ, ಸ್ತ್ರೀಯನ್ನಾಶ್ರಯಿಸಿಕೊಂಡಿರುವ ಲೋಹಿತವು ಉಂಟಾಗುತ್ತದೆ? ಇದರಿಂದ ಬೀಜಕ್ಕೆ ಆಶ್ರಯವಾಗಿ ಲೋಹಿತಮಯವಾದ ಶರೀರವು (ಉಂಟಾಗುತ್ತದೆ). ಮಿಕ್ಕದ್ದು ಸಮಾನವು[2].

---

1. ಮಾತೃಪಿತೃಜವಾದ ಈ ಆರನ್ನೂ ಕೂಡಿಸಿ ಷಟ್ಕೋಶಗಳೆಂದು ಕರೆಯುವರು.

2. ಮುಂದಿನ ಏಳು ಪರ್ಯಾಯಗಳ ಕಂಡಿಕೆಗಳಿಗೆ ಹೀಗೆಯೇ ಅರ್ಥವನ್ನು ಕಲ್ಪಿಸಿಕೊಳ್ಳಬೇಕು ಎಂದರ್ಥ.

## ಕಾಮಾಭಿಮಾನಿದೇವತೆ

(ಉಪನಿಷತ್ತು)

**ಕಾಮ ಏವ ಯಸ್ಯಾಯತನಗ್‌ಂ ಹೃದಯಂ ಲೋಕೋ ಮನೋಜ್ಯೋತಿರ್ಯೋ ವೈ ತಂ ಪುರುಷಂ ವಿದ್ಯಾತ್ ಸರ್ವಸ್ಯಾತ್ಮನಃ ಪರಾಯಣಗ್‌ಂ ಸ ವೈ ವೇದಿತಾ ಸ್ಯಾತ್ । ಯಾಜ್ಞವಲ್ಕ್ಯ ವೇದ ವಾ ಅಹಂ ತಂ ಪುರುಷಗ್‌ಂ ಸರ್ವಸ್ಯಾತ್ಮನಃ ಪರಾಯಣಂ ಯಮಾತ್ಥ ಯ ಏವಾಯಂ ಕಾಮಮಯಃ ಪುರುಷಃ ಸ ಏಷ ವದೈವ ಶಾಕಲ್ಯ ತಸ್ಯ ಕಾ ದೇವತೇತಿ ಸ್ತ್ರಿಯ ಇತಿ ಹೋವಾಚ ॥ ೧೧ ॥**

೧೧. ಯಾವನಿಗೆ ಕಾಮವೇ ಆಯತನವೋ, ಹೃದಯವು ಲೋಕವೋ, ಮನಸ್ಸು ಜ್ಯೋತಿಯೋ ಆತ್ಮಕ್ಕೆಲ್ಲ ಪರಾಯಣನಾಗಿರುವ ಆ ಪುರುಷನನ್ನು ಯಾವನು ಬಲ್ಲನೋ ಅವನೇ ಬಲ್ಲವನಯ್ಯ, ಯಾಜ್ಞವಲ್ಕ್ಯ! ಆತ್ಮಕ್ಕೆಲ್ಲ ಪರಾಯಣನಾಗಿರುವ ಆ ನೀನು ಹೇಳುವ ಪುರುಷನನ್ನು ನಾನು ಬಲ್ಲೆನು. ಈ ಕಾಮಮಯಪುರುಷನಿದಾನಲ್ಲ, ಅವನೇ ಇವನು. (ಸರಿ, ಮುಂದಕ್ಕೆ) ಹೇಳಪ್ಪ, ಶಾಕಲ್ಯ! "ಅವನಿಗೆ ದೇವತೆ ಯಾವದು?'' 'ಸ್ತ್ರೀಯರು' ಎಂದು (ಅವನು ಉತ್ತರವನ್ನು) ಹೇಳಿದನು.

(ಭಾಷ್ಯ)

೧೦೬. ಕಾಮ ಏವ ಯಸ್ಯಾಯತನಮ್ । ಸ್ತ್ರೀವ್ಯತಿಕರಾಭಿಲಾಷಃ ಕಾಮಃ । ಕಾಮಶರೀರಃ ಇತ್ಯರ್ಥಃ । ಹೃದಯಂ ಲೋಕಃ । ಹೃದಯೇನ ಬುದ್ಧ್ಯಾ ಪಶ್ಯತಿ । ಯ ಏವಾಯಂ ಕಾಮಮಯಃ ಪುರುಷಃ ಅಧ್ಯಾತ್ಮಮಪಿ ಕಾಮಮಯ ಏವ । ತಸ್ಯ ಕಾ ದೇವತೇತಿ ? ಸ್ತ್ರಿಯ ಇತಿ ಹೋವಾಚ । ಸ್ತ್ರೀತೋ ಹಿ ಕಾಮಸ್ಯ ದೀಪ್ತಿರ್ಜಾಯತೇ ॥

(ಭಾಷ್ಯಾರ್ಥ)

'ಯಾವನಿಗೆ ಕಾಮವೇ ಆಯತನವೋ' ಕಾಮವೆಂದರೆ ಸ್ತ್ರೀಯಲ್ಲಿ ಬೆರೆಯಬೇಕೆಂಬ ಅಭಿಲಾಷೆ. ಕಾಮಶರೀರನು ಎಂದರ್ಥ. ಹೃದಯವು ಲೋಕವು; ಹೃದಯದಿಂದ ಎಂದರೆ ಬುದ್ಧಿಯಿಂದ ನೋಡುತ್ತಾನೆ. ಈ ಕಾಮಮಯನಾದ ಪುರುಷನಿದಾನಲ್ಲ, ಅಧ್ಯಾತ್ಮವಾಗಿಯೂ ಕಾಮಮಯನಾಗಿಯೇ ಇರುತ್ತಾನಲ್ಲ (ಅವನು). ಅವನಿಗೆ ದೇವತೆ ಯಾವದು ? ಸ್ತ್ರೀಯರು ಎಂದು ಉತ್ತರವಿತ್ತನು. ಸ್ತ್ರೀಗಳಿಂದಲ್ಲವೆ, ಕಾಮದ ದೀಪ್ತಿಯಾಗುವದು ?

## ರೂಪಾಭಿಮಾನಿದೇವತೆ

(ಉಪನಿಷತ್ತು)

**ರೂಪಾಣ್ಯೇವ ಯಸ್ಯಾಯತನಂ ಚಕ್ಷುರ್ಲೋಕೋ ಮನೋ ಜ್ಯೋತಿರ್ಯೋ ವೈ ತಂ ಪುರುಷಂ ವಿದ್ಯಾತ್ ಸರ್ವಸ್ಯಾತ್ಮನಃ ಪರಾಯಣಗ್ಂ ಸ ವೈ ವೇದಿತಾ ಸ್ಯಾತ್ । ಯಾಜ್ಞವಲ್ಕ್ಯ ವೇದ ವಾ ಅಹಂ ತಂ ಪುರುಷಗ್ಂ ಸರ್ವಸ್ಯಾತ್ಮನಃ ಪರಾಯಣಂ ಯಮಾತ್ಥ ಯ ಏವಾಸಾವಾದಿತ್ಯೇ ಪುರುಷಃ ಸ ಏಷ ವದೈವ ಶಾಕಲ್ಯ ತಸ್ಯ ಕಾ ದೇವತೇತಿ ಸತ್ಯಮಿತಿ ಹೋವಾಚ ॥ ೧೨ ॥**

೧೨. "ಯಾವನಿಗೆ ರೂಪಗಳೇ ಆಯತನವೋ ಚಕ್ಷುಸ್ಸು ಲೋಕವೋ ಮನಸ್ಸು ಜ್ಯೋತಿಯೋ ಆತ್ಮಕ್ಕೆಲ್ಲ ಪರಾಯಣನಾದ ಆ ಪುರುಷನನ್ನು ಯಾವನು ಬಲ್ಲನೋ ಅವನೇ ಬಲ್ಲವನಯ್ಯ, ಯಾಜ್ಞವಲ್ಕ್ಯ!" ಆತ್ಮಕ್ಕೆಲ್ಲ ಪರಾಯಣನಾಗಿರುವ ಆ ನೀನು ಹೇಳುವ ಪುರುಷನನ್ನು ನಾನು ಬಲ್ಲೆನು. ಆದಿತ್ಯನಲ್ಲಿರುವ ಪುರುಷನಿದಾನಲ್ಲ, ಅವನೇ ಇವನು. (ಸರಿ ಮುಂದಕ್ಕೆ) ಹೇಳಪ್ಪ, ಶಾಕಲ್ಯ ! "ಅವನಿಗೆ ದೇವತೆ ಯಾವದು ?" 'ಸತ್ಯವು' ಎಂದು (ಅವನು ಉತ್ತರವನ್ನು) ಹೇಳಿದನು.

(ಭಾಷ್ಯ)

೧೦೭. ರೂಪಾಣ್ಯೇವ ಯಸ್ಯಾಯತನಮ್ । ರೂಪಾಣಿ ಶುಕ್ಲಕೃಷ್ಣಾದೀನಿ । ಯ ಏವಾಸೌ ಆದಿತ್ಯೇ ಪುರುಷಃ । ಸರ್ವೇಷಾಂ ಹಿ ರೂಪಾಣಾಂ ವಿಶಿಷ್ಟಂ ಕಾರ್ಯಮ್ ಆದಿತ್ಯೇ ಪುರುಷಃ । ತಸ್ಯ ಕಾ ದೇವತೇತಿ ? ಸತ್ಯಮಿತಿ ಹೋವಾಚ । ಸತ್ಯಮ್ ಇತಿ ಚಕ್ಷುರುಚ್ಯತೇ । ಚಕ್ಷುಷೋ ಹಿ ಅಧ್ಯಾತ್ಮತಃ ಆದಿತ್ಯಸ್ಯ ಅಧಿದೈವತಸ್ಯ ನಿಷ್ಪತ್ತಿಃ ॥

(ಭಾಷ್ಯಾರ್ಥ)

ಯಾವನಿಗೆ "ರೂಪಗಳೇ ಆಯತನವೋ....." ರೂಪಗಳು ಎಂದರೆ ಬಿಳುಪು, ಕಪ್ಪು – ಮುಂತಾದವುಗಳು. 'ಆದಿತ್ಯನಲ್ಲಿರುವ ಪುರುಷನಿದಾನಲ್ಲ'; ಆದಿತ್ಯನಲ್ಲಿರುವ ಪುರುಷನು ಎಲ್ಲಾ ರೂಪಗಳಿಂದಾಗಿರುವ ಅಸಾಧಾರಣ ಕಾರ್ಯವಷ್ಟೆ.[1] 'ಅವನಿಗೆ ದೇವತೆ ಯಾವದು ?' 'ಸತ್ಯವು' ಎಂದು (ಅವನು

1. ರೂಪಸಾಮಾನ್ಯಕ್ಕೆ ಅಭಿಮಾನಿಯಾದ ದೇವನು ಆದಿತ್ಯಪುರುಷನಲ್ಲಿ ವಿಶೇಷವಾಗಿದ್ದುಕೊಂಡಿರುತ್ತಾನೆ ; ಆ ಪುರುಷನು ಸರ್ವರೂಪಗಳನ್ನೂ ಬೆಳಗುವವನಾದ್ದರಿಂದ ಎಲ್ಲಾ ರೂಪಗಳೂ ತಮ್ಮನ್ನು ಬೆಳಗುವದಕ್ಕಾಗಿ ಈ ಪುರುಷನನ್ನುಂಟುಮಾಡಿಕೊಂಡಿವೆ. ಆ॥ ೧॥

ಉತ್ತರವನ್ನು) ಹೇಳಿದನು. ಅಧ್ಯಾತ್ಮವಾದ ಚಕ್ಷುಸ್ಸಿನಿಂದಲೇ ಅಲ್ಲವೆ, ಅಧಿದೈವತವಾದ ಆದಿತ್ಯನ ಉತ್ಪತ್ತಿ[1] ?

## ಆಕಾಶಾಭಿಮಾನಿದೇವತೆ

(ಉಪನಿಷತ್ತು)

**ಆಕಾಶ ಏವ ಯಸ್ಯಾಯತನಗ್ಂ ಶ್ರೋತ್ರಂ ಲೋಕೋ ಮನೋಜ್ಯೋತಿರ್ಯೋ ವೈ ತಂ ಪುರುಷಂ ವಿದ್ಯಾತ್ ಸರ್ವಸ್ಯಾತ್ಮನಃ ಪರಾಯಣಗ್ಂ ಸ ವೈ ವೇದಿತಾ ಸ್ಯಾತ್ । ಯಾಜ್ಞವಲ್ಕ್ಯ ವೇದ ವಾ ಅಹಂ ತಂ ಪುರುಷಗ್ಂ ಸರ್ವಸ್ಯಾತ್ಮನಃ ಪರಾಯಣಂ ಯಮಾತ್ಥ ಯ ಏವಾಯಗ್ಂ ಶ್ರೌತ್ರಃ ಪ್ರಾತಿಶ್ರುತ್ಕಃ ಪುರುಷಃ ಸ ಏಷ ವದೈವ ಶಾಕಲ್ಯ ತಸ್ಯ ಕಾ ದೇವತೇತಿ ದಿಶ ಇತಿ ಹೋವಾಚ ॥ ೧೩ ॥**

೧೩. "ಯಾವನಿಗೆ ಆಕಾಶವೇ ಆಯತನವೋ, ಶ್ರೋತ್ರವು ಲೋಕವೋ ಮನಸ್ಸು ಜ್ಯೋತಿಯೋ ಆತ್ಮಕ್ಕೆಲ್ಲ ಪರಾಯಣನಾದ ಆ ಪುರುಷನನ್ನು ಯಾವನು ಬಲ್ಲನೋ ಅವನೇ ಬಲ್ಲವನಯ್ಯ, ಯಾಜ್ಞವಲ್ಕ್ಯ!'' ಆತ್ಮಕ್ಕೆಲ್ಲ ಪರಾಯಣನಾಗಿರುವ ಆ ನೀನು ಹೇಳುವ ಪುರುಷನನ್ನು ನಾನು ಬಲ್ಲೆನು. ಈ ಶ್ರೌತ್ರಪ್ರಾತಿಶ್ರುತ್ಕಪುರುಷನಿದಾನಲ್ಲ, ಅವನೇ ಇವನು. (ಸರಿ ಮುಂದಕ್ಕೆ) ಹೇಳಪ್ಪ, ಶಾಕಲ್ಯ! "ಅವನಿಗೆ ದೇವತೆ ಯಾವದು ?'' 'ದಿಕ್ಕುಗಳು' ಎಂದು (ಅವನು ಉತ್ತರವನ್ನು) ಹೇಳಿದನು.

(ಭಾಷ್ಯ)

೧೧೮. ಆಕಾಶ ಏವ ಯಸ್ಯಾಯತನಮ್ । ಯ ಏವಾಯಂ ಶ್ರೋತ್ರೇ ಭವಃ ಶ್ರೌತ್ರಃ, ತತ್ರಾಪಿ ಪ್ರತಿಶ್ರವಣವೇಲಾಯಾಂ ವಿಶೇಷತೋ ಭವತೀತಿ ಪ್ರಾತಿಶ್ರುತ್ಕಃ, ತಸ್ಯ ಕಾ ದೇವತೇತಿ ? ದಿಶ ಇತಿ ಹೋವಾಚ । ದಿಗ್ಭ್ಯೋ ಹ್ಯಸಾವಾಧ್ಯಾತ್ಮಿಕೋ ನಿಷ್ಪದ್ಯತೇ ॥

(ಭಾಷ್ಯಾರ್ಥ)

"ಯಾವನಿಗೆ ಆಕಾಶವೇ ಆಯತನವೋ ...." ಈ ಶ್ರೌತ್ರನಾದ ಎಂದರೆ ಶ್ರೋತ್ರದಲ್ಲಿರುವ, ಅದರಲ್ಲಿಯೂ ಪ್ರತಿಶ್ರವಣದ ಕಾಲದಲ್ಲಿ[2] ವಿಶೇಷವಾಗಿರು

1. ವಿರಾಟ್ಪುರುಷನ ಚಕ್ಷುಸ್ಸಿನಿಂದ ಸೂರ್ಯನು ಆದನು ಎಂಬ ಶ್ರುತಿಯು ಇದಕ್ಕೆ ಪ್ರಮಾಣ.

2. ಶಬ್ದವನ್ನು ಕೇಳುವ ಕಾಲದಲ್ಲಿ.

ವದರಿಂದ ಪ್ರಾತಿಶ್ರುತ್ಕ(ಪುರುಷ)ನಿದಾನಲ್ಲ, ಅವನಿಗೆ ದೇವತೆ ಯಾವದು ? ದಿಕ್ಕುಗಳು ಎಂದು (ಅವನು ಉತ್ತರವನ್ನು) ಹೇಳಿದನು. ದಿಕ್ಕುಗಳಿಂದ ಲಲ್ಲವೆ, ಈ ಆಧ್ಯಾತ್ಮಿಕ(ಪುರುಷ)ನು ಉಂಟಾಗುತ್ತಾನೆ ?

## ತಮೋಽಭಿಮಾನಿದೇವತೆ

(ಉಪನಿಷತ್ತು)

**ತಮ ಏವ ಯಸ್ಯಾಯತನಗ್ಂ ಹೃದಯಂ ಲೋಕೋ ಮನೋ ಜ್ಯೋತಿರ್ಯೋ ವೈ ತಂ ಪುರುಷಂ ವಿದ್ಯಾತ್ ಸರ್ವಸ್ಯಾತ್ಮನಃ ಪರಾಯಣಗ್ಂ ಸ ವೈ ವೇದಿತಾ ಸ್ಯಾತ್। ಯಾಜ್ಞವಲ್ಕ್ಯ ವೇದ ವಾ ಅಹಂ ತಂ ಪುರುಷಗ್ಂ ಸರ್ವಸ್ಯಾತ್ಮನಃ ಪರಾಯಣಂ ಯಮಾತ್ಥ ಯ ಏವಾಯಂ ಛಾಯಾಮಯಃ ಪುರುಷಃ ಸ ಏಷ ವದೈವ ಶಾಕಲ್ಯ ತಸ್ಯ ಕಾ ದೇವತೇತಿ ಮೃತ್ಯುರಿತಿ ಹೋವಾಚ॥**

೧೪. "ಯಾವನಿಗೆ ತಮಸ್ಸೇ ಆಯತನವೋ, ಹೃದಯವು ಲೋಕವೋ, ಮನಸ್ಸು ಜ್ಯೋತಿಯೋ, ಆತ್ಮಕ್ಕೆಲ್ಲ ಪರಾಯಣನಾದ ಆ ಪುರುಷನನ್ನು ಯಾವನು ಬಲ್ಲನೋ, ಅವನೇ ಬಲ್ಲವನಯ್ಯ, ಯಾಜ್ಞವಲ್ಕ್ಯ!'' ಆತ್ಮಕ್ಕೆಲ್ಲ ಪರಾಯಣನಾಗಿರುವ ಆ ನೀನು ಹೇಳುವ ಪುರುಷನನ್ನು ನಾನು ಬಲ್ಲೆನು. ಈ ಛಾಯಾಮಯನಾದ ಪುರುಷನಿದಾನಲ್ಲ, ಅವನೇ ಇವನು. (ಸರಿ, ಮುಂದಕ್ಕೆ) ಹೇಳಪ್ಪ, ಶಾಕಲ್ಯ ! "ಅವನಿಗೆ ದೇವತೆ ಯಾರು ?'' 'ಮೃತ್ಯು' ಎಂದು (ಅವನು ಉತ್ತರವನ್ನು) ಹೇಳಿದನು.

(ಭಾಷ್ಯ)

೧೧೯. ತಮ ಏವ ಯಸ್ಯಾಯತನಮ್ । ತಮಃ ಇತಿ ಶಾರ್ವರಾದ್ಯನ್ಧಕಾರಃ ಪರಿಗೃಹ್ಯತೇ। ಅಧ್ಯಾತ್ಮಂ ಛಾಯಾಮಯಃ ಅಜ್ಞಾನಮಯಃ ಪುರುಷಃ। ತಸ್ಯ ಕಾ ದೇವತೇತಿ ? 'ಮೃತ್ಯುಃ' ಇತಿ ಹೋವಾಚ। ಮೃತ್ಯುಃ ಅಧಿದೈವತಂ ತಸ್ಯ ನಿಷ್ಪತ್ತಿಕಾರಣಮ್ ॥

(ಭಾಷ್ಯಾರ್ಥ)

"ಯಾವನಿಗೆ ತಮಸ್ಸೇ ಆಯತನವೋ ..." ತಮಸ್ಸು ಎಂದರೆ ರಾತ್ರಿಯ (ಕತ್ತಲೆಯೇ) ಮುಂತಾದದ್ದು ಆಧ್ಯಾತ್ಮವಾಗಿ (ಅದು) ಛಾಯಾಮಯವು, ಅಜ್ಞಾನಮಯನಾದ ಪುರುಷನು. "ಅವನಿಗೆ ದೇವತೆ ಯಾವದು ? 'ಮೃತ್ಯುವು'

ಎಂದು (ಅವನು ಉತ್ತರವನ್ನು) ಹೇಳಿದನು. ಅಧಿದೈವತವಾಗಿರುವ ಮೃತ್ಯುವೇ ಅವನ ಉತ್ಪತ್ತಿಗೆ ಕಾರಣವು[1].

## ಪ್ರಕಾಶಕರೂಪಾಭಿಮಾನಿದೇವತೆ

(ಉಪನಿಷತ್)

**ರೂಪಾಣ್ಯೇವ ಯಸ್ಯಾಯತನಂ ಚಕ್ಷುರ್ಲೋಕೋ ಮನೋ ಜ್ಯೋತಿರ್ಯೋ ವೈ ತಂ ಪುರುಷಂ ವಿದ್ಯಾತ್ ಸರ್ವಸ್ಯಾತ್ಮನಃ ಪರಾಯಣಗ್ಂ ಸ ವೈ ವೇದಿತಾ ಸ್ಯಾತ್ । ಯಾಜ್ಞವಲ್ಕ್ಯ ವೇದ ವಾ ಅಹಂ ತಂ ಪುರುಷಗ್ಂ ಸರ್ವಸ್ಯಾತ್ಮನಃ ಪರಾಯಣಂ ಯಮಾತ್ಥ ಯ ಏವಾಯಮಾದರ್ಶೇ ಪುರುಷಃ ಸ ಏಷ ವದೈವ ಶಾಕಲ್ಯ ತಸ್ಯ ಕಾ ದೇವತೇತ್ಯಸುರಿತಿ ಹೋವಾಚ　　॥ ೧೫ ॥**

೧೫. "ಯಾವನಿಗೆ ರೂಪಗಳೇ ಆಯತನವೋ ಚಕ್ಷುಸ್ಸು ಲೋಕವೋ, ಮನಸ್ಸು ಜ್ಯೋತಿಯೋ ಆತ್ಮಕ್ಕೆಲ್ಲ ಪರಾಯಣನಾದ ಆ ಪುರುಷನನ್ನು ಯಾವನು ಬಲ್ಲನೋ, ಅವನೇ ಬಲ್ಲವನಯ್ಯ, ಯಾಜ್ಞವಲ್ಕ್ಯ!" ಆತ್ಮಕ್ಕೆಲ್ಲ ಪರಾಯಣನಾದ ಆ ನೀನು ಹೇಳುವ ಪುರುಷನನ್ನು ನಾನು ಬಲ್ಲೆನು. ಈ ಕನ್ನಡಿಯಲ್ಲಿ[2] ಪುರುಷನಿದ್ದಾನಲ್ಲ, ಅವನೇ ಇವನು. (ಸರಿ, ಮುಂದಕ್ಕೆ) ಹೇಳಪ್ಪ, ಶಾಕಲ್ಯ! "ಅವನಿಗೆ ದೇವತೆ ಯಾವದು?" 'ಅಸು!' ಎಂದು (ಅವನು ಉತ್ತರವನ್ನು) ಹೇಳಿದನು.

(ಭಾಷ್ಯ)

೧೧೦. ರೂಪಾಣ್ಯೇವ ಯಸ್ಯ ಆಯತನಮ್ । ಪೂರ್ವಂ ಸಾಧಾರಣಾನಿ ರೂಪಾಣಿ ಉಕ್ತಾನಿ । ಇಹ ತು ಪ್ರಕಾಶಕಾನಿ ವಿಶಿಷ್ಟಾನಿ ರೂಪಾಣಿ ಗೃಹ್ಯನ್ತೇ । ರೂಪಾಯತನಸ್ಯ ದೇವಸ್ಯ ವಿಶೇಷಾಯತನಂ ಪ್ರತಿಬಿಮ್ಬಾಧಾರಮ್ ಆದರ್ಶಾದಿ । ತಸ್ಯ ಕಾ ದೇವತೇತಿ ? ಅಸುಃ ಇತಿ ಹೋವಾಚ । ತಸ್ಯ ಪ್ರತಿಬಿಮ್ಬಾಖ್ಯಸ್ಯ ಪುರುಷಸ್ಯ ನಿಷ್ಪತ್ತಿಃ ಅಸೋಃ ಪ್ರಾಣಾತ್ ॥

---

1. ಅಜ್ಞಾನದಿಂದಲೇ ಸಾವು ಉಂಟಾಗುವದರಿಂದ–ಎಂದು ವಾರ್ತಿಕ. ಸಾವಿನಲ್ಲಿ ಅಜ್ಞಾನವುಂಟಾಗುವದರಿಂದ ಎಂದೂ ಹೇಳಬಹುದು ; ಅಜ್ಞಾನವೆಲ್ಲವೂ ಸಾವೇ ಆಗಿರುವದರಿಂದ ಮೃತ್ಯುವೇ ಈ ಪುರುಷನಿಗೆ ದೇವತೆ.

2. ಸ್ವಚ್ಛವಾಗಿರುವ ದ್ರವ್ಯಗಳಿಗೆಲ್ಲ ಕನ್ನಡಿಯನ್ನು ಉಪಲಕ್ಷಣವಾಗಿ ಹೇಳಿದೆ.

(ಭಾಷ್ಯಾರ್ಥ)

"ಯಾವನಿಗೆ ರೂಪಗಳೇ ಆಯತನವೋ...." ಹಿಂದೆ (೧೨ನೆಯ ಕಂಡಿಕೆಯಲ್ಲಿ) ಸಾಮಾನ್ಯವಾದ (ಶುಕ್ಲಕೃಷ್ಣಾದಿ)ರೂಪಗಳನ್ನು ಹೇಳಿದ್ದಾಯಿತು. ಇಲ್ಲಿಯಾದರೋ ಪ್ರಕಾಶಕವಾದ ವಿಶೇಷರೂಪಗಳನ್ನು ತೆಗೆದುಕೊಂಡು (ಹೇಳಿದೆ). ರೂಪಾಯತನನಾದ ದೇವನಿಗೆ ವಿಶೇಷವಾಗಿ ಪ್ರತಿಬಿಂಬಾಧಾರವಾದ ಕನ್ನಡಿಯೇ ಮುಂತಾದದ್ದು ವಿಶೇಷಾಯತನವು[1] 'ಅವನಿಗೆ ದೇವತೆ ಯಾವದು ?' 'ಅಸು' ಎಂದು (ಅವನು ಉತ್ತರವನ್ನು) ಹೇಳಿದನು. ಪ್ರತಿಬಿಂಬವೆಂಬ ಆ ಪುರುಷನಿಗೆ ಉತ್ಪತ್ತಿಯು ಅಸುವಿನಿಂದ, ಪ್ರಾಣನಿಂದ, (ಆಗುತ್ತದೆ).[2]

## ಅಬಭಿಮಾನಿದೇವತೆ

(ಉಪನಿಷತ್ತು)

**ಆಪ ಏವ ಯಸ್ಯಾಯತನಗ್ ಹೃದಯಂ ಲೋಕೋ ಮನೋ ಜ್ಯೋತಿರ್ಯೋ ವೈ ತಂ ಪುರುಷಂ ವಿದ್ಯಾತ್ ಸರ್ವಸ್ಯಾತ್ಮನಃ ಪರಾಯಣಗ್ಂ ಸ ವೈ ವೇದಿತಾ ಸ್ಯಾತ್ । ಯಾಜ್ಞವಲ್ಕ್ಯ ವೇದ ವಾ ಅಹಂ ತಂ ಪುರುಷಗ್ಂ ಸರ್ವಸ್ಯಾತ್ಮನಃ ಪರಾಯಣಂ ಯಮಾತ್ಥ ಯ ಏವಾಯಮಪ್ಸು ಪುರುಷಃ ಸ ಏಷ ವದೈವ ಶಾಕಲ್ಯ ತಸ್ಯ ಕಾ ದೇವತೇತಿ ವರುಣ ಇತಿ ಹೋವಾಚ ॥ ೧೬ ॥**

೧೬. "ಯಾವನಿಗೆ ಅಪ್ಪೇ ಆಯತನವೋ, ಹೃದಯವು ಲೋಕವೋ, ಮನಸ್ಸು ಜ್ಯೋತಿಯೋ, ಆತ್ಮಕ್ಕೆಲ್ಲ ಪರಾಯಣನಾದ ಆ ಪುರುಷನನ್ನು ಯಾವನು ಬಲ್ಲನೋ ಅವನೇ ಬಲ್ಲವನಯ್ಯ, ಯಾಜ್ಞವಲ್ಕ್ಯ!" ಆತ್ಮಕ್ಕೆಲ್ಲ ಪರಾಯಣನಾದ ನೀನು ಹೇಳುವ ಆ ಪುರುಷನನ್ನು ನಾನು ಬಲ್ಲೆನು ; ಈ ಅಪ್ಪಿನಲ್ಲಿರುವ ಪುರುಷನಿದಾನಲ್ಲ ಅವನೇ ಇವನು. (ಸರಿ, ಮುಂದಕ್ಕೆ) ಹೇಳಪ್ಪ, ಶಾಕಲ್ಯ ! "ಅವನಿಗೆ ದೇವತೆ ಯಾವದು ?" 'ವರುಣನು' ಎಂದು (ಅವನು ಉತ್ತರವನ್ನು) ಹೇಳಿದನು.

---

1. ರೂಪಸಾಮಾನ್ಯವು ದೇವನಿಗೆ ಸಾಮಾನ್ಯಾಯತನವು ; ಸ್ವಚ್ಛದ್ರವ್ಯಗಳು ವಿಶೇಷಸ್ಥಾನಗಳು.

2. ಏಕೆಂದರೆ ತಿಕ್ಕುವದೇ ಮುಂತಾದ ಪ್ರಾಣನ ಕ್ರಿಯೆಯಿಂದ ಪ್ರತಿಬಿಂಬ ಹುಟ್ಟುಗುತ್ತದೆ.

(ಭಾಷ್ಯ)

೧೧೧. ಅಪ ಏವ ಯಸ್ಯಾಯತನಮ್ । ಸಾಧಾರಣಾಃ ಸರ್ವಾ ಅಪಃ ಆಯತನಮ್ । ವಾಪೀಕೂಪತಡಾಗಾದ್ಯಾಶ್ರಯಾಸು ಅಪ್ಸು ವಿಶೇಷಾವಸ್ಥಾನಮ್ । ತಸ್ಯ ಕಾ ದೇವತೇತಿ? ವರುಣ ಇತಿ ವರುಣಾತ್ ಸಂಘಾತಕರ್ತ್ರ್ಯೋಽಧ್ಯಾತ್ಮಮ್ ಅಪ ಏವ ವಾಪ್ಯಾದ್ಯಪಾಂ ನಿಷ್ಪತ್ತಿಕಾರಣಮ್ ।

(ಭಾಷ್ಯಾರ್ಥ)

"ಯಾವನಿಗೆ ಅಪ್ಪೇ ಆಯತನವೋ .." ಸಾಮಾನ್ಯವಾದ ಅಪ್ಪೆಲ್ಲವೂ (ಅವನಿಗೆ) ಆಯತನವು. ಬಾವಿ, ಗುಂಡಿ, ಕೆರೆ- ಮುಂತಾದ ಆಶ್ರಯಗಳಾಗಿರುವ ಅಪ್ಪಿನಲ್ಲಿ ವಿಶೇಷವಾಗಿದ್ದುಕೊಂಡಿರುತ್ತಾನೆ. ಅವನಿಗೆ ದೇವತೆ ಯಾವದು? 'ವರುಣನು' ಎಂದು (ಅವನು ಉತ್ತರವನ್ನು ಹೇಳಿದನು). ವರುಣನಿಂದ[1] (ಉಂಟಾಗಿರುವ) ಅಪ್ಪುಗಳೇ ಸಂಘಾತವನ್ನುಂಟುಮಾಡುವವು; (ಅವೇ) ಬಾವಿ ಮುಂತಾದ ಅಪ್ಪುಗಳುಂಟಾಗುವದಕ್ಕೆ ಕಾರಣವು.

## ರೇತೋಽಭಿಮಾನಿದೇವತೆ

(ಉಪನಿಷತ್ತು)

**ರೇತ ಏವ ಯಸ್ಯಾಯತನಗ್ಂ ಹೃದಯಂ ಲೋಕೋ ಮನೋ ಜ್ಯೋತಿರ್ಯೋ ವೈ ತಂ ಪುರುಷಂ ವಿದ್ಯಾತ್ ಸರ್ವಸ್ಯಾತ್ಮನಃ ಪರಾಯಣಗ್ಂ ಸ ವೈ ವೇದಿತಾ ಸ್ಯಾತ್ । ಯಾಜ್ಞವಲ್ಕ್ಯ ವೇದ ವಾ ಅಹಂ ತಂ ಪುರುಷಗ್ಂ ಸರ್ವಸ್ಯಾತ್ಮನಃ ಪರಾಯಣಂ ಯಮಾತ್ಥ ಯ ಏವಾಯಂ ಪುತ್ರಮಯಃ ಪುರುಷಃ ಸ ಏಷ ವದೈವ ಶಾಕಲ್ಯ ತಸ್ಯ ಕಾ ದೇವತೇತಿ ಪ್ರಜಾಪತಿರಿತಿ ಹೋವಾಚ ॥ ೧೭ ॥**

೧೭. "ಯಾವನಿಗೆ ರೇತಸ್ಸೇ ಆಯತನವೋ, ಹೃದಯವು ಲೋಕವೋ ಮನಸ್ಸು ಜ್ಯೋತಿಯೋ ಆತ್ಮಕ್ಕೆಲ್ಲ ಪರಾಯಣನಾದ ಆ ಪುರುಷನನ್ನು ಯಾವನು ಬಲ್ಲನೋ ಅವನೇ ಬಲ್ಲವನಯ್ಯ, ಯಾಜ್ಞವಲ್ಕ್ಯ!" ಆತ್ಮಕ್ಕೆಲ್ಲ ಪರಾಯಣನಾದ ಆ ನೀನು ಹೇಳುವ ಪುರುಷನನ್ನು ನಾನು ಬಲ್ಲೆನು. ಈ ಪುತ್ರಮಯನಾದ ಪುರುಷನಿದಾನಲ್ಲ, ಅವನೇ ಇವನು. (ಸರಿ, ಮುಂದಕ್ಕೆ) ಹೇಳಪ್ಪ, ಶಾಕಲ್ಯ! "ಅವನಿಗೆ ದೇವತೆ ಯಾವದು?" 'ಪ್ರಜಾಪತಿ'ಯು ಎಂದು (ಅವನು ಉತ್ತರವನ್ನು) ಹೇಳಿದನು.

---

1. ವರುಣನೆಂದರೆ ಇಲ್ಲಿ ಮೋಡಗಳ ದೇವತೆ ಎಂಬು ತಿಳಿದರೆ ಹೊಂದುತ್ತದೆ.

(ಭಾಷ್ಯ)

೧೧೨. ರೇತ ಏವ ಯಸ್ಯಾಯತನಮ್ । ಯ ಏವಾಯಂ ಪುತ್ರಮಯಃ ವಿಶೇಷಾಯತನಂ ರೇತಆಯತನಸ್ಯ । ಪುತ್ರಮಯಃ ಇತಿ ಚ ಅಸ್ಥಿಮಜ್ಜಾಶುಕ್ರಾಣಿ ಪಿತುರ್ಜಾತಾನಿ । ತಸ್ಯ ಕಾ ದೇವತೇತಿ? ಪ್ರಜಾಪತಿರಿತಿ ಹೋವಾಚ । ಪ್ರಜಾಪತಿಃ ಪಿತಾ ಉಚ್ಯತೇ । ಪಿತೃತೋ ಹಿ ಪುತ್ರಸ್ಯೋತ್ಪತ್ತಿಃ ॥

(ಭಾಷ್ಯಾರ್ಥ)

"ಯಾವನಿಗೆ ರೇತಸ್ಸೇ ಆಯತನವೋ...." ರೇತಆಯತನನಾದ (ದೇವ)ನಿಗೆ ವಿಶೇಷಾಯತನನಾದ ಪುತ್ರಮಯನಿದಾನಲ್ಲ" (ಅವನೇ ಇವನು) 'ಪುತ್ರಮಯನು' ಎಂದು (ಇಲ್ಲಿ ಹೇಳಿರುವದು) ತಂದೆಯಿಂದ ಉಂಟಾಗುವ ಎಲುಬು, ಮಜ್ಜೆ, ಶುಕ್ಲ- (ಇವುಗಳನ್ನು). ಆ (ಪುತ್ರಮಯ)ನಿಗೆ ದೇವತೆ ಯಾವದು ? 'ಪ್ರಜಾಪತಿ' ಎಂದು (ಅವನು ಉತ್ತರವನ್ನು) ಹೇಳಿದನು. ತಂದೆಯನ್ನೇ (ಇಲ್ಲಿ) ಪ್ರಜಾಪತಿ ಎಂದಿದೆ ; ತಂದೆಯಿಂದಲಲ್ಲವೆ, ಪುತ್ರನುಂಟಾಗುವದು ?

## ಮುಂದಿನ ಗ್ರಂಥದ ಸಂಬಂಧ

(ಉಪನಿಷತ್ತು)

**ಶಾಕಲ್ಯೇತಿ ಹೋವಾಚ ಯಾಜ್ಞವಲ್ಕ್ಯಸ್ತ್ವಾಗ್ಂ ಸ್ವಿದಿಮೇ ಬ್ರಾಹ್ಮಣಾ ಅಙ್ಗಾರಾವಕ್ಷಯಣಮಕ್ರತಾ೩ ಇತಿ ॥ ೧೮ ॥**

೧೮. ಯಾಜ್ಞವಲ್ಕ್ಯನು "ಶಾಕಲ್ಯನೆ, ನಿನ್ನನ್ನು ಈ ಬ್ರಾಹ್ಮಣರು ಕೆಂಡವನ್ನು ಹಿಡಿಯುವ (ಸಾಧನ)ವಾಗಿ ಮಾಡಿಕೊಂಡಿರುವರೋ ಏನು ?'' ಎಂದನು.

(ಭಾಷ್ಯ)

೧೧೩. ಅಷ್ಟಧಾ ದೇವಲೋಕಪುರುಷಭೇದೇನ ತ್ರಿಧಾ ತ್ರಿಧಾ ಆತ್ಮಾನಂ ಪ್ರವಿಭಜ್ಯ ಅವಸ್ಥಿತ ಏಕೈಕೋ ದೇವಃ ಪ್ರಾಣಭೇದ ಏವ ಉಪಾಸನಾರ್ಥಂ ವ್ಯಪದಿಷ್ಟಃ । ಅಧುನಾ ದಿಗ್ವಿಭಾಗೇನ ಪಞ್ಚಧಾ ಪ್ರವಿಭಕ್ತಸ್ಯ ಆತ್ಮನ್ಯುಪಸಂಹಾರಾರ್ಥಮ್ ಆಹ । ತೂಷ್ಣೀಂ ಭೂತಂ ಶಾಕಲ್ಯಂ ಯಾಜ್ಞವಲ್ಕ್ಯೋ ಗ್ರಹೇಣೇವ ಆವೇಶಯನ್ ಆಹ ಶಾಕಲ್ಯೇತಿ ಹೋವಾಚ ಯಾಜ್ಞವಲ್ಕ್ಯಃ । ತ್ವಾಂ ಸ್ವಿತ್ ಇತಿ ವಿತರ್ಕೇ । ಇಮೇ ನೂನಂ ಬ್ರಾಹ್ಮಣಾಃ ಅಙ್ಗಾರಾವಕ್ಷಯಣಮ್ ಅಙ್ಗಾರಾಃ ಅವಕ್ಷೀಯನ್ತೇ ಯಸ್ಮಿನ್ ಸಂದಂಶಾದೌ ತತ್ ಅಙ್ಗಾರಾವಕ್ಷಯಣಮ್- ತತ್ ನೂನಂ ತ್ವಾಮ್ ಅಕ್ರತ ಕೃತವನ್ತಃ ಬ್ರಾಹ್ಮಣಾಃ । ತ್ವಂ ತು ತತ್ ನ ಬುಧ್ಯಸೇ ಆತ್ಮಾನಂ ಮಯಾ ದಹ್ಯಮಾನಮ್ ಇತಿ ಅಭಿಪ್ರಾಯಃ ॥

(ಭಾಷ್ಯಾರ್ಥ)

ಎಂಟು ವಿಧವಾಗಿ- ದೇವ, ಲೋಕ, ಪುರುಷ- ಎಂಬ ಭೇದಗಳಿಂದ ಮೂರುಮೂರಾಗಿ ತನ್ನನ್ನು- ವಿಂಗಡಿಸಿಕೊಂಡಿರುವ ಒಬ್ಬೊಬ್ಬ ದೇವನೂ ಪ್ರಾಣವಿಶೇಷವೇ ; ಉಪಾಸನೆಗಾಗಿ (ಈ ಭೇದಗಳನ್ನು) ಹೇಳಿರುತ್ತದೆ. ಈಗ ದಿಕ್ಕುಗಳ ವಿಭಾಗದಿಂದ ಐದು ಬಗೆಯಾಗಿ ವಿಂಗಡವಾಗಿರುವ (ಆ ಪ್ರಾಣನನ್ನು) ಆತ್ಮನಲ್ಲಿ ಉಪಸಂಹಾರಮಾಡಿಕೊಳ್ಳುವದಕ್ಕಾಗಿ (ಮುಂದಿನ ಗ್ರಂಥವನ್ನು) ಹೇಳಲಾಗುವದು.

ಸುಮ್ಮನಿದ್ದ ಶಾಕಲ್ಯನನ್ನು ಗ್ರಹದಿಂದ ಆವೇಶವನ್ನು ಮಾಡಿಸುವವನಂತೆ ಯಾಜ್ಞವಲ್ಕ್ಯನಿಂತೆಂದನು : ಶಾಕಲ್ಯನೆ, ಎಂದು ಯಾಜ್ಞವಲ್ಕ್ಯನು ನುಡಿದನು. ನಿನ್ನನ್ನೇ ಏನು ? (ಇಲ್ಲಿ ಸ್ವಿತ್ ಎಂಬ ಅವ್ಯಯುವನ್ನು ವಿತರ್ಕವೆಂಬರ್ಥದಲ್ಲಿ ಪ್ರಯೋಗಿಸಿರುತ್ತದೆ). ಈ ಬ್ರಾಹ್ಮಣರು ನಿಜವಾಗಿಯೂ (ನಿನ್ನನ್ನು) ಅಂಗಾರಾವಕ್ಷಯಣವನ್ನಾಗಿ- ಕೆಂಡವನ್ನು ಹಿಡಿಯುವ ಇಕ್ಕಳವೇ ಮುಂತಾದದ್ದು ಅಂಗಾರಾವಕ್ಷಯಣವು- ಆ (ಕೆಂಡದ ಹಿಡಿಯನ್ನಾಗಿ) ನಿನ್ನನ್ನು (ಈ) ಬ್ರಾಹ್ಮಣರು (ಅಕ್ರತ=ಕೃತವನ್ತಾಃ) ಮಾಡಿಕೊಂಡಿರುತ್ತಾರೆಂದೇ ತಿಳಿಯಬೇಕು. ಆದರೆ ನೀನು (ಮಾತ್ರ) ನನ್ನಿಂದ ಸುಟ್ಟುಹೋಗುತ್ತಿದೇನೆ ಎಂಬುದನ್ನು ಅರಿತುಕೊಳ್ಳದೆ ಇರುವೆ ಎಂದು ಅಭಿಪ್ರಾಯ.

## ದಿಗ್ದೇವತೆಗಳ ವಿಜ್ಞಾನ

(ಉಪನಿಷತ್ತು)

**ಯಾಜ್ಞವಲ್ಕ್ಯೇತಿ ಹೋವಾಚ ಶಾಕಲ್ಯೋ ಯದಿದಂ ಕುರುಪಞ್ಚಾಲಾನಾಂ ಬ್ರಾಹ್ಮಣಾನತ್ಯವಾದೀಃ ಕಿಂ ಬ್ರಹ್ಮ ವಿದ್ವಾನಿತಿ ದಿಶೋ ವೇದ ಸ ದೇವಾಃ ಸ ಪ್ರತಿಷ್ಠಾ ಇತಿ ಯದ್ದಿಶೋ ವೇತ್ಥ ಸ ದೇವಾಃ ಸ ಪ್ರತಿಷ್ಠಾಃ || ೧೯ ||**

೧೯. ಶಾಕಲ್ಯನು ಇಂತೆಂದನು : "ಯಾಜ್ಞವಲ್ಕ್ಯನೆ, ಕುರುಪಾಂಚಾಲ(ದೇಶ)ದ ಬ್ರಾಹ್ಮಣರನ್ನು ಅತಿಕ್ರಮಿಸಿ ಮಾತನಾಡಿದೆಯಲ್ಲ, ಯಾವ ಬ್ರಹ್ಮವನ್ನು ಅರಿತದ್ದರಿಂದ (ಇದು)? ದಿಕ್ಕುಗಳನ್ನು ಬಲ್ಲೆನು, ದೇವತೆಗಳಿಂದೊಡಗೂಡಿ, ಪ್ರತಿಷ್ಠೆಗಳಿಂದೊಡಗೂಡಿ (ಬಲ್ಲೆನು). "ದಿಕ್ಕುಗಳನ್ನು ಸದೇವವಾಗಿ ಸಪ್ರತಿಷ್ಠವಾಗಿ ಬಲ್ಲೆಯಾದರೆ—''

(ಭಾಷ್ಯ)

೧೧೪. ಯಾಜ್ಞವಲ್ಕ್ಯೇತಿ ಹೋವಾಚ ಶಾಕಲ್ಯಃ । ಯದಿದಂ ಕುರುಪಞ್ಚಾಲಾನಾಂ ಬ್ರಾಹ್ಮಣಾನ್ ಅತ್ಯವಾದೀಃ ಅತ್ಯುಕ್ತವಾನಸಿ ಸ್ವಯಂ ಭೀತಾಃ ತ್ವಾಮ್ ಅಙ್ಗಾರಾವಕ್ಷಯಣಂ ಕೃತವನ್ತ ಇತಿ। ಕಿಂ ಬ್ರಹ್ಮ ವಿದ್ವಾನ್ ಸನ್ ಏವಮಧಿಕ್ಷಿಪಸಿ ಬ್ರಾಹ್ಮಣಾನ್ ? ಯಾಜ್ಞವಲ್ಕ್ಯ ಆಹ। ಬ್ರಹ್ಮ ವಿಜ್ಞಾನಂ ತಾವದಿದಂ ಮಮ । ಕಿಂ ತತ್ ? ದಿಶೋ ವೇದ । ದಿಗ್ವಿಷಯಂ ವಿಜ್ಞಾನಂ ಜಾನೇ । ತಚ್ಚ ನ ಕೇವಲಂ ದಿಶ ಏವ ಸದೇವಾಃ ದೇವೈಃ ಸಹ ದಿಗಧಿಷ್ಠಾತೃಭಿಃ । ಕಿಂ ಚ ಸಪ್ರತಿಷ್ಠಾಃ ಪ್ರತಿಷ್ಠಾಭಿಶ್ಚ ಸಹ । ಇತರ ಆಹ । ಯದ್ ಯದಿ ದಿಶೋ ವೇತ್ಥ ಸದೇವಾಃ ಸಪ್ರತಿಷ್ಠಾಃ ಇತಿ । ಸಕಲಂ[1] ಯದಿ ವಿಜ್ಞಾನಂ ತ್ವಯಾ ಪ್ರತಿಜ್ಞಾತಮ್—

(ಭಾಷ್ಯಾರ್ಥ)

ಶಾಕಲ್ಯನಿಂತೆಂದನು : ಯಾಜ್ಞವಲ್ಕ್ಯನೆ, ಕುರುಪಂಚಾಲದೇಶದ ಬ್ರಾಹ್ಮಣರನ್ನು ಅತಿವಾದಮಾಡಿರುವೆಯಲ್ಲ, ಅತಿಕ್ರಮಿಸಿ ಮಾತನಾಡಿರುವೆಯಲ್ಲ "ತಾವು ಹೆದರಿಕೊಂಡು ನಿನ್ನನ್ನು ಕೆಂಡಹಿಡಿಯುವ (ಇಕ್ಕಳವನ್ನು) ಮಾಡಿಕೊಂಡಿರುತ್ತಾರೆ" ಎಂದೆ(ಯಲ್ಲ), ಯಾವ ಬ್ರಹ್ಮವನ್ನು ಅರಿತುಕೊಂಡಿರುವವನಾಗಿ ಹೀಗೆ ಬ್ರಾಹ್ಮಣರನ್ನು ತಿರಸ್ಕರಿಸುತ್ತಿರುವೆ ? ಯಾಜ್ಞವಲ್ಕ್ಯನು ಹೇಳುತ್ತಾನೆ: ಮೊದಲನೆಯದಾಗಿ ಇದು ನನ್ನ ಬ್ರಹ್ಮವಿಜ್ಞಾನವು. ದಿಕ್ಕುಗಳನ್ನು ಬಲ್ಲೆನು, ದಿಗ್ವಿಷಯವಾದ ವಿಜ್ಞಾನವನ್ನು[2] ತಿಳಿದಿರುತ್ತೇನೆ. ಅದೂ ಬರಿಯ ದಿಕ್ಕುಗಳನ್ನೇ ಅಲ್ಲ, ಸದೇವವಾಗಿ, ದಿಕ್ಕುಗಳಿಗೆ ಅಧಿಷ್ಠಾತಗಳಾದ ದೇವತೆಗಳೊಡನೆ; ಮತ್ತು ಸಪ್ರತಿಷ್ಠವಾಗಿ, ಪ್ರತಿಷ್ಠೆಗಳಿಂದೊಡಗೂಡಿ (ಬಲ್ಲೆನು). ಇನ್ನೊಬ್ಬನಾದ (ಶಾಕಲ್ಯನು) ಹೇಳುತ್ತಾನೆ: (ಯದ್= ಯದಿ) ದಿಕ್ಕುಗಳನ್ನು ಸದೇವವಾಗಿ ಸಪ್ರತಿಷ್ಠವಾಗಿ ಬಲ್ಲೆಯಾದರೆ, ಎಲ್ಲಾ ವಿಜ್ಞಾನವನ್ನೂ (ಬಲ್ಲೆನೆಂದು) ನೀನು ಪ್ರತಿಜ್ಞೆಮಾಡಿರುವೆಯಾದರೆ—

## ಪೂರ್ವದಿಗ್ದೇವತೆಗೆ ಹೃದಯವೇ ಪ್ರತಿಷ್ಠೆ

(ಉಪನಿಷತ್ತು)

**ಕಿಂದೇವತೋಽಸ್ಯಾಂ ಪ್ರಾಚ್ಯಾಂ ದಿಶ್ಯಸೀತ್ಯಾದಿತ್ಯದೇವತ ಇತಿ ಸ ಆದಿತ್ಯಃ ಕಸ್ಮಿನ್ ಪ್ರತಿಷ್ಠಿತ ಇತಿ ಚಕ್ಷುಷೀತಿ ಕಸ್ಮಿನ್ನು**

---

1. ಸಫಲಾ ಎಂಬುದಕ್ಕಿಂತ ಈ ಪಾಠವೇ ಮೇಲು: ಏಕೆಂದರೆ ಮುಂದೆ ಫಲವನ್ನೇ ಹೇಳಿಲ್ಲ, ಅಥವಾ ಭಾ. ಭಾ. ೧೨೦ರಲ್ಲಿ ಕರ್ಮಫಲಾತ್ಮಿಕಾಃ- ಎಂದು ಉಪಸಂಹಾರಮಾಡಿರುವದನ್ನೇ ಇಲ್ಲಿ ಸೂಚಿಸಿದೆ ಎಂದೂ ಭಾವಿಸಬಹುದು.

2 ಉಪಾಸನೆಯನ್ನು.

**ಚಕ್ಷುಃ ಪ್ರತಿಷ್ಠಿತಮಿತಿ ರೂಪೇಷ್ವಿತಿ ಚಕ್ಷುಷಾ ಹಿ ರೂಪಾಣಿ ಪಶ್ಯತಿ ಕಸ್ಮಿನ್ನು ರೂಪಾಣಿ ಪ್ರತಿಷ್ಠಿತಾನೀತಿ ಹೃದಯ ಇತಿ ಹೋವಾಚ ಹೃದಯೇನ ಹಿ ರೂಪಾಣಿ ಜಾನಾತಿ ಹೃದಯೇ ಹ್ಯೇವ ರೂಪಾಣಿ ಪ್ರತಿಷ್ಠಿತಾನಿ ಭವನ್ತೀತ್ಯೇವಮೇವೈತದ್ಯಾಜ್ಞವಲ್ಕ್ಯ || ೨೦ ||**

೨೦. ಈ ಪ್ರಾಚೀದಿಕ್ಕಿನಲ್ಲಿ ಯಾವ ದೇವತೆಯುಳ್ಳವನಿರುತ್ತೀಯೆ? ಆದಿತ್ಯದೇವತನಾಗಿರುತ್ತೇನೆ. "ಆ ಆದಿತ್ಯನು ಏತರಲ್ಲಿ ಪ್ರತಿಷ್ಠಿತನಾಗಿರುತ್ತಾನೆ?" ಚಕ್ಷುಸ್ಸಿನಲ್ಲಿ. "ಚಕ್ಷುಸ್ಸು ಏತರಲ್ಲಿ ಪ್ರತಿಷ್ಠಿತವಾಗಿದೆ?" ರೂಪಗಳಲ್ಲಿ; ಚಕ್ಷುಸ್ಸಿನಿಂದಲ್ಲವೆ, ರೂಪಗಳನ್ನು ಕಾಣುತ್ತಾನೆ? 'ರೂಪಗಳು ಏತರಲ್ಲಿ ಪ್ರತಿಷ್ಠಿತವಾಗಿವೆಯೊ!' 'ಹೃದಯದಲ್ಲಿ' ಎಂದು ಅವನು ಉತ್ತರವನ್ನು ಕೊಟ್ಟನು. ಹೃದಯದಿಂದಲೇ ಅಲ್ಲವೆ, ರೂಪಗಳನ್ನು ಅರಿಯುತ್ತಾನೆ. ಹೃದಯದಲ್ಲಿಯೇ ಅಲ್ಲವೆ, ರೂಪಗಳು ಪ್ರತಿಷ್ಠಿತವಾಗಿರುತ್ತವೆ? "ಯಾಜ್ಞವಲ್ಕ್ಯನೆ, ಇದು ಹೀಗೆಯೇ ಸರಿ!"

(ಭಾಷ್ಯ)

೧೧೫. ಕಿಂದೇವತಃ ಕಾ ದೇವತಾ ಅಸ್ಯ ತವ ದಿಗ್ಭೂತಸ್ಯ? ಅಸೌ ಹಿ ಯಾಜ್ಞವಲ್ಕ್ಯೋ ಹೃದಯಮ್ ಆತ್ಮಾನಂ ದಿಕ್ಷು ಪಞ್ಚಧಾ ವಿಭಕ್ತಂ ದಿಗಾತ್ಮಭೂತಂ ತದ್ದ್ವಾರೇಣ ಸರ್ವಂ ಜಗತ್ ಆತ್ಮತ್ವೇನ ಉಪಗಮ್ಯ ಅಹಮಸ್ಮಿ ದಿಗಾತ್ಮಾ ಇತಿ ವ್ಯವಸ್ಥಿತಃ ಪೂರ್ವಾಭಿಮುಖಃ ।[1] ಸಪ್ರತಿಷ್ಠಾವಚನಾತ್ । ಯಥಾ ಯಾಜ್ಞವಲ್ಕ್ಯಸ್ಯ ಪ್ರತಿಜ್ಞಾ ತಥೈವ ಪೃಚ್ಛತಿ ಕಿಂದೇವತಸ್ತ್ವಮ್ ಅಸ್ಯಾಂ ದಿಶ್ಯಸಿ? ಇತಿ । ಸರ್ವತ್ರ ಹಿ ವೇದೇ ಯಾಂ ಯಾಂ ದೇವತಾಮ್ ಉಪಾಸ್ತೇ ಇಹೈವ ತದ್ಭೂತಃ ತಾಂ ತಾಂ ಪ್ರತಿಪದ್ಯತ ಇತಿ । ತಥಾ ಚ ವಕ್ಷ್ಯತಿ "ದೇವೋ ಭೂತ್ವಾ ದೇವಾನಪ್ಯೇತಿ" (೪-೧-೨) ಅಸ್ಯಾಂ ಪ್ರಾಚ್ಯಾಂ ಕಾ ದೇವತಾ ದಿಗಾತ್ಮನಸ್ತವ ಅಧಿಷ್ಠಾತ್ರೀ? ಕಯಾ ದೇವತಯಾ ತ್ವಂ ಪ್ರಾಚೀದಿಗ್ರೂಪೇಣ ಸಂಪನ್ನಃ?– ಇತ್ಯರ್ಥಃ । ಇತರ ಆಹ ಆದಿತ್ಯದೇವತ ಇತಿ । ಪ್ರಾಚ್ಯಾಂ ದಿಶಿ ಮಮ ಆದಿತ್ಯೋ ದೇವತಾ, ಸೋಽಹಮ್ ಆದಿತ್ಯದೇವತಃ । 'ಸದೇವಾ' ಇತ್ಯೇತದುಕ್ತಮ್, ಸಪ್ರತಿಷ್ಠಾ ಇತಿ ತು ವಕ್ತವ್ಯಮ್ ಇತ್ಯಾಹ । ಸ ಆದಿತ್ಯಃ ಕಸ್ಮಿನ್ ಪ್ರತಿಷ್ಠಿತ? ಇತಿ । ಚಕ್ಷುಷಿ

---

1. ಈ ಮಾತು ಮೂಲದಲ್ಲಿತ್ತೆ? ಎಂಬುದು ಸಂಶಯಾಸ್ಪದ; ಅಥವಾ ಭಾಷ್ಯದಲ್ಲಿದ್ದ ಮತ್ತೆ ಯಾವುದೋ ಒಂದು ಪದವು ಲೇಖಕರ ಪ್ರಮಾದದಿಂದ ಈ ರೂಪಕ್ಕಿಳಿದಿರಬಹುದು. ವಾರ್ತಿಕದಲ್ಲಿ ಇದರ ಪರಾಮರ್ಶವಿಲ್ಲ.

ಇತಿ । ಅಧ್ಯಾತ್ಮತಶ್ಚಕ್ಷುಷ ಆದಿತ್ಯೋ ನಿಷ್ಪನ್ನಃ ಇತಿ ಮನ್ತ್ರಬ್ರಾಹ್ಮಣವಾದಾಃ "ಚಕ್ಷೋಃ ಸೂರ್ಯೋ ಅಜಾಯತ" (ಋ.ಸಂ. ೧೦-೯೦-೧೩), "ಚಕ್ಷುಷ ಆದಿತ್ಯಃ" (ಐ. ೧-೧-೪) ಇತ್ಯಾದಯಃ। ಕಾರ್ಯಂ ಹಿ ಕಾರಣೇ ಪ್ರತಿಷ್ಠಿತಂ ಭವತಿ। ಕಸ್ಮಿನ್ನು ಚಕ್ಷುಃ ಪ್ರತಿಷ್ಠಿತಮಿತಿ ? ರೂಪೇಷ್ವಿತಿ। ರೂಪಗ್ರಹಣಾಯ ಹಿ ರೂಪಾತ್ಮಕಂ ಚಕ್ಷುಃ ರೂಪೇಣ ಪ್ರಯುಕ್ತಮ್ । ಯೈರ್ಹಿ ರೂಪೈಃ ಪ್ರಯುಕ್ತಮ್, ತೈಃ ಆತ್ಮಗ್ರಹಣಾಯ ಆರಬ್ಧಂ ಚಕ್ಷುಃ । ತಸ್ಮಾತ್ ಸಾದಿತ್ಯಂ ಚಕ್ಷುಃ ಸಹ ಪ್ರಾಚಾ ದಿಶಾ ಸಹ ತತ್ಸ್ಥೈಃ ಸರ್ವೈಃ ರೂಪೇಷು ಪ್ರತಿಷ್ಠಿತಮ್ । ಚಕ್ಷುಷಾ ಸಹ ಪ್ರಾಚೀ ದಿಕ್ ಸರ್ವಾ ರೂಪಭೂತಾ। ತಾನಿ ಚ ಕಸ್ಮಿನ್ನು ರೂಪಾಣಿ ಪ್ರತಿಷ್ಠಿತಾನೀತಿ ? ಹೃದಯೇ ಇತಿ ಹೋವಾಚ । ಹೃದಯಾರಬ್ಧಾನಿ ರೂಪಾಣಿ । ರೂಪಾಕಾರೇಣ ಹಿ ಹೃದಯಂ ಪರಿಣತಮ್ । ಯಸ್ಮಾತ್ ಹೃದಯೇನ ಹಿ ರೂಪಾಣಿ ಸರ್ವೋ ಲೋಕೋ ಜಾನಾತಿ । ಹೃದಯಮ್ ಇತಿ ಬುದ್ಧಿಮನಸೀ ಏಕೀಕೃತ್ಯ ನಿರ್ದೇಶಃ । ತಸ್ಮಾತ್ ಹೃದಯೇ ಹ್ಯೇವ ರೂಪಾಣಿ ಪ್ರತಿಷ್ಠಿತಾನಿ। ಹೃದಯೇನ ಹಿ ಸ್ಮರಣಂ ಭವತಿ ರೂಪಾಣಾಂ ವಾಸನಾತ್ಮನಾಮ್ । ತಸ್ಮಾತ್ ಹೃದಯೇ ರೂಪಾಣಿ ಪ್ರತಿಷ್ಠಿತಾನಿ ಇತ್ಯರ್ಥಃ । ಏವಮೇವೈತದ್ ಯಾಜ್ಞವಲ್ಕ್ಯ ॥

(ಭಾಷ್ಯಾರ್ಥ)

ಯಾವ ದೇವತೆಯುವನು ? ಈ ದಿಗ್ಭೂತನಾದ ನಿನಗೆ ದೇವತೆ ಯಾವದು? ಈ ಯಾಜ್ಞವಲ್ಕ್ಯನು ಹೃದಯವೆಂಬ ಆತ್ಮನನ್ನು[1] ದಿಕ್ಕುಗಳಲ್ಲಿ ಐದು ಬಗೆಯಾಗಿ ವಿಂಗಡಿಸಿಕೊಂಡು ದಿಗಾತ್ಮನಾಗಿದೆಯೆಂದೂ ಆ ದ್ವಾರದಿಂದ ಸರ್ವಜಗತ್ತೂ ತಾನೇ ಎಂದೂ[2] ಅಂಗೀಕರಿಸಿ ನಾನು ದಿಗಾತ್ಮನಾಗಿರುವೆನು ಎಂದು ಪೂರ್ವಾಭಿಮುಖವಾಗಿ[3] ನಿಂತಿದ್ದನು, ಸಪ್ರತಿಷ್ಠಾರಾಗಿರುವ (ದಿಕ್ಕುಗಳನ್ನು ಬಲ್ಲೆನು) ಎಂಬ ವಚನದಿಂದ (ಹೀಗೆಂದು ನಿಶ್ಚಿತವಾಗಿರುತ್ತದೆ). ಯಾಜ್ಞವಲ್ಕ್ಯನ ಪ್ರತಿಜ್ಞೆಯು ಹೇಗಿದೆಯೋ ಹಾಗೆಯೇ (ಶಾಕಲ್ಯನು) "ನೀನು ಈ ದಿಕ್ಕಿನಲ್ಲಿ ಯಾವ ದೇವತೆಯುವನಾಗಿರುತ್ತೀಯೆ ?" ಎಂದು ಕೇಳಿರುತ್ತಾನೆ. ವೇದದಲ್ಲೆಲ್ಲ **ಯಾವಯಾವ ದೇವತೆಯನ್ನು ಉಪಾಸನೆಮಾಡುತ್ತಾ**

1. ಹೃದಯವೆಂಬ ಉಪಾಧಿಯಿಂದೊಡಗೂಡಿದ ತನ್ನನ್ನು ಎಂದರ್ಥ. ಆತ್ಮಾನಮ್ ಎಂಬ ಭಾಷ್ಯವನ್ನು ಆತ್ಮೀಯಮ್ (ತನ್ನ) ಎಂಬರ್ಥದಲ್ಲಿ ಪ್ರಯೋಗಿಸಿವೆ ಎಂದು ಟೀಕೆಯಲ್ಲಿ ವ್ಯಾಖ್ಯಾನಮಾಡಿದೆ ; ಅದು ಅವಶ್ಯವಿಲ್ಲವೆಂಬು ನಮ್ಮ ಅಭಿಪ್ರಾಯ.

2. ತಾನು ಹೃದಯಾತ್ಮನೆಂದೂ ಹೃದಯವು ದಿಗಾತ್ಮವಾಗಿರುವ ತಾನೂ ಆ ಮೂಲಕ ಸರ್ವಜಗತ್ಸ್ವರೂಪನೆಂದೂ ಎಂದರ್ಥ.

3. 'ಅಹಮಸ್ಮಿ ದಿಗಾತ್ಮಾ ಇತಿ ವ್ಯವಸ್ಥಿತಃ' ಎಂದಿಷ್ಟೇ ಇದ್ದರೆ ನಾನು ದಿಗಾತ್ಮನಾಗಿರುತ್ತೇನೆ ಎಂದು ನಿಶ್ಚಿತನಾಗಿರುತ್ತಾನೆ ಎಂದು ಕನ್ನಡಿಸಿಕೊಳ್ಳಬೇಕಾಗುವದು.

**ನೋ, ಇಲ್ಲಿಯೇ ಆಯಾ (ದೇವತೆಯಾಗಿ)**[1] **ಅದದನ್ನು (ಸತ್ತಬಳಿಕ) ಪಡೆದುಕೊಳ್ಳುತ್ತಾನೆ** (ಎಂದು ಹೇಳಿರುತ್ತದೆ). ಆದ್ದರಿಂದಲೇ "ದೇವನಾಗಿ ದೇವರುಗಳನ್ನು ಸೇರಿಕೊಳ್ಳುತ್ತಾನೆ" (೪-೧-೨) ಎಂದು ಮುಂದೆ ಹೇಳಿರುತ್ತದೆ. ಈ ಪ್ರಾಚೀ(ದಿಕ್ಕಿ)ನಲ್ಲಿ ಯಾವ ದೇವತೆಯು ದಿಗಾತ್ಮನಾಗಿರುವ ನಿನಗೆ ಅಧಿಷ್ಠಾತೃವು ? ಯಾವ ದೇವತೆಯಿಂದ ನೀನು ಪ್ರಾಚೀದಿಗ್ರೂಪವನ್ನು ಪಡೆದಿರುವೆ ?– ಎಂದು (ಪ್ರಶ್ನೆಯ) ಅರ್ಥ. ಇನ್ನೊಬ್ಬ(ನಾದ ಯಾಜ್ಞವಲ್ಕ್ಯನು) ಹೇಳುತ್ತಾನೆ: 'ಆದಿತ್ಯದೇವತನು' ಪ್ರಾಚೀದಿಕ್ಕಿನಲ್ಲಿ ನನಗೆ ಆದಿತ್ಯನು ದೇವತೆ, (ಆದ್ದರಿಂದ) ಆ ನಾನು ಆದಿತ್ಯದೇವತನು.[2]

ಸದೇವ(ವಾದ ದಿಕ್ಕುಗಳನ್ನು) ಎಂಬಿದನ್ನು ಹೇಳಿದ್ದಾಯಿತು. ಆದರೆ ಸಪ್ರತಿಷ್ಠವಾದ ಎಂಬಿ(ದನ್ನು) ಹೇಳಬೇಕೆಂದು (ಶಾಕಲ್ಯನು) ಕೇಳುತ್ತಿದಾನೆ. "ಆ ಆದಿತ್ಯನು ಏತರಲ್ಲಿ ಪ್ರತಿಷ್ಠಿತ(ನಾಗಿರುತ್ತಾನೆ)?" ಅಧ್ಯಾತ್ಮವಾದ ಚಕ್ಷುಸ್ಸಿನಿಂದ ಆದಿತ್ಯನು ಉಂಟಾಗಿರುವನು ಎಂದಲ್ಲವೆ, "ಚಕ್ಷುವಿನಿಂದ ಸೂರ್ಯನು ಉಂಟಾದನು" (ಋ. ಸಂ. ೧೦–೯೦–೧೩), "ಚಕ್ಷುಸ್ಸಿನಿಂದ ಆದಿತ್ಯನು (ಉಂಟಾದನು)" (ಐ. ೧–೧–೪) ಮುಂತಾದ ಮಂತ್ರಬ್ರಾಹ್ಮಣಗಳು ಹೇಳುತ್ತಿರುವವು ? ಕಾರ್ಯವು ಕಾರಣದಲ್ಲಿ ಪ್ರತಿಷ್ಠಿತವಾಗಿರುವದಷ್ಟೆ ?[3] "ಚಕ್ಷುಸ್ಸು ಏತರಲ್ಲಿ ಪ್ರತಿಷ್ಠಿತವಾಗಿದೆಯೊ !" ರೂಪಗಳಲ್ಲಿ ಎಂದು (ಉತ್ತರ). ರೂಪವನ್ನು ಗ್ರಹಿಸುವದಕ್ಕಲ್ಲವೆ, ರೂಪಾತ್ಮಕವಾದ ಚಕ್ಷುಸ್ಸು ರೂಪದಿಂದ ಪ್ರೇರಿತವಾಗುತ್ತದೆ ? ಯಾವ ರೂಪಗಳಿಂದ (ಹೀಗೆ) ಪ್ರೇರಿತವಾಗುತ್ತದೆಯೋ ಅವುಗಳು ತಮ್ಮನ್ನು ಗ್ರಹಿಸಲೆಂದು ಚಕ್ಷುಸ್ಸನ್ನುಂಟುಮಾಡಿರುತ್ತವೆ.[4] ಆದ್ದರಿಂದ ಆದಿತ್ಯಸಹಿತವಾದ ಚಕ್ಷುಸ್ಸು. ಪ್ರಾಚೀದಿಕ್ಕಿನೊಡನೆ, ಮತ್ತು ಆ (ದಿಕ್ಕಿನಲ್ಲಿರುವ) ಎಲ್ಲರೊಡನೆ ರೂಪಗಳಲ್ಲಿ ಪ್ರತಿಷ್ಠಿತವಾಗಿರುತ್ತದೆ, ಚಕ್ಷುಸ್ಸಿನೊಡನೆ ಪ್ರಾಚೀದಿಕ್ಕೆಲ್ಲವೂ ರೂಪಭೂತವಾಗಿರುತ್ತದೆ.

---

1. ಆಯಾ ದೇವತೆಯೇ ತಾನೆಂಬ ಸಾಕ್ಷಾತ್ಕಾರವನ್ನು ಉಪಾಸನೆಯಿಂದ ಪಡೆದುಕೊಂಡು ಎಂದರ್ಥ.

2. ಪೂರ್ವದಿಕ್ಕಿನ ದೇವತೆಯಾದ ಆದಿತ್ಯನೇ ನಾನಾಗಿರುತ್ತೇನೆ ಎಂದರ್ಥ. ಹೀಗೆಯೇ ಆಯಾ ದಿಕ್ಕಿನಲ್ಲಿ ಆಯಾ ದೇವತೆಯ ರೂಪದಿಂದ ಇರುತ್ತೇನೆಂಬುದು ಯಾಜ್ಞವಲ್ಕ್ಯನ ನಿಶ್ಚಯ.

3. ಆದ್ದರಿಂದ ಚಕ್ಷುಸ್ಸಿನಲ್ಲಿ ಆದಿತ್ಯನು ಪ್ರತಿಷ್ಠಿತನಾಗಿರುತ್ತಾನೆ.

4. ಹೀಗೆಯೇ ಆಯಾ ವಿಷಯಗಳು ತಮ್ಮನ್ನು ಗ್ರಹಿಸುವದಕ್ಕೆಂದು ಆಯಾ ಇಂದ್ರಿಯಗಳನ್ನುಂಟುಮಾಡಿಕೊಂಡಿರುತ್ತವೆ ಎಂದರಿಯಬೇಕು. ವಿಷಯಗಳು ಇಂದ್ರಿಯಗಳನ್ನು ಪ್ರೇರಿಸುತ್ತವೆ ಎಂಬುದಕ್ಕೆ ಸೂ. ಭಾ. ೨–೨–೨ (ಭಾ. ಭಾ. ೯)ನ್ನು ನೋಡಿ.

ಆ ರೂಪಗಳು ಏತರಲ್ಲಿ ಪ್ರತಿಷ್ಠಿತವಾಗಿವೆಯೊ ? 'ಹೃದಯದಲ್ಲಿ' ಎಂದು (ಅವನು ಉತ್ತರವನ್ನು) ಕೊಟ್ಟನು. ರೂಪಗಳು ಹೃದಯದಿಂದ ಆಗಿರುತ್ತವೆ, ಹೃದಯವೇ ರೂಪಾಕಾರದಿಂದ ಪರಿಣಾಮವಾಗಿರುತ್ತದೆ; ಏಕೆಂದರೆ ಜನವೆಲ್ಲವೂ ಹೃದಯದಿಂದಲೇ ರೂಪಗಳನ್ನು ಅರಿಯುತ್ತಿದೆ. ಬುದ್ಧಿಮನಸ್ಸುಗಳನ್ನು ಒಂದುಗೂಡಿಸಿ ಹೃದಯವು ಎಂದು ಕರೆದಿರುತ್ತದೆ. ಆದ್ದರಿಂದ ಹೃದಯದಲ್ಲಿಯೇ ರೂಪಗಳು ಪ್ರತಿಷ್ಠಿತವಾಗಿರುತ್ತವೆ. ವಾಸನಾತ್ಮಕವಾದ ರೂಪಗಳ ಸ್ಮರಣೆಯು ಹೃದಯದಲ್ಲಿಯೇ ಆಗುತ್ತದೆಯಷ್ಟೆ? ಆದ್ದರಿಂದ ಹೃದಯದಲ್ಲಿಯೇ ರೂಪಗಳು ಪ್ರತಿಷ್ಠಿತವಾಗಿವೆ ಎಂದರ್ಥ. 'ಯಾಜ್ಞವಲ್ಕ್ಯನೆ, ಹೀಗೆಯೇ ಸರಿ.'

## ದಕ್ಷಿಣದಿಗ್ದೇವತೆಗೆ ಹೃದಯವೇ ಪ್ರತಿಷ್ಠೆ

(ಉಪನಿಷತ್ತು)

**ಕಿಂದೇವತೋಽಸ್ಯಾಂ ದಕ್ಷಿಣಾಯಾಂ ದಿಶ್ಯಸೀತಿ ಯಮದೇವತ ಇತಿ ಸ ಯಮಃ ಕಸ್ಮಿನ್ ಪ್ರತಿಷ್ಠಿತ ಇತಿ ಯಜ್ಞ ಇತಿ ಕಸ್ಮಿನ್ನು ಯಜ್ಞಃ ಪ್ರತಿಷ್ಠಿತ ಇತಿ ದಕ್ಷಿಣಾಯಾಮಿತಿ ಕಸ್ಮಿನ್ನು ದಕ್ಷಿಣಾ ಪ್ರತಿಷ್ಠಿತೇತಿ ಶ್ರದ್ಧಾಯಾಮಿತಿ ಯದಾ ಹ್ಯೇವ ಶ್ರದ್ಧತ್ತೇಽಥ ದಕ್ಷಿಣಾಂ ದದಾತಿ ಶ್ರದ್ಧಾಯಾಗ್ಂ ಹ್ಯೇವ ದಕ್ಷಿಣಾ ಪ್ರತಿಷ್ಠಿತೇತಿ ಕಸ್ಮಿನ್ನು ಶ್ರದ್ಧಾ ಪ್ರತಿಷ್ಠಿತೇತಿ ಹೃದಯ ಇತಿ ಹೋವಾಚ ಹೃದಯೇನ ಹಿ ಶ್ರದ್ಧಾಂ ಜಾನಾತಿ ಹೃದಯೇ ಹ್ಯೇವ ಶ್ರದ್ಧಾ ಪ್ರತಿಷ್ಠಿತಾ ಭವತೀತ್ಯೇವಮೇವೈತದ್ಯಾಜ್ಞವಲ್ಕ್ಯ ॥ ೨೧ ॥**

೨೧. "ಈ ದಕ್ಷಿಣದಿಕ್ಕಿನಲ್ಲಿ ಯಾವ ದೇವತೆಯುಳ್ಳವನಿರುತ್ತೀಯೆ?" ಯಮದೇವತನಾಗಿರುತ್ತೇನೆ. "ಆ ಯಮನು ಏತರಲ್ಲಿ ಪ್ರತಿಷ್ಠಿತನಾಗಿರುತ್ತಾನೆ?" ಯಜ್ಞದಲ್ಲಿ. "ಯಜ್ಞವು ಏತರಲ್ಲಿ ಪ್ರತಿಷ್ಠಿತವಾಗಿದೆಯೊ!" ದಕ್ಷಿಣೆಯಲ್ಲಿ. "ದಕ್ಷಿಣೆಯು ಏತರಲ್ಲಿ ಪ್ರತಿಷ್ಠಿತವಾಗಿರುತ್ತದೆಯೊ!" ಶ್ರದ್ಧೆಯಲ್ಲಿ; ಯಾವಾಗ ಶ್ರದ್ಧೆಯುಳ್ಳವನಾಗುವನೋ ಆಗ ದಕ್ಷಿಣೆಯನ್ನು ಕೊಡುತ್ತಾನೆ. ಶ್ರದ್ಧೆಯಲ್ಲಿಯೇ ದಕ್ಷಿಣೆಯು ಪ್ರತಿಷ್ಠಿತವಾಗಿದೆ. "ಶ್ರದ್ಧೆಯು ಏತರಲ್ಲಿ ಪ್ರತಿಷ್ಠಿತವಾಗಿದೆಯೊ!" 'ಹೃದಯದಲ್ಲಿ' ಎಂದು (ಅವನು ಉತ್ತರವನ್ನು) ಹೇಳಿದನು; ಹೃದಯದಿಂದಲೇ ಅಲ್ಲವೆ, ಶ್ರದ್ಧೆಯನ್ನು ಅರಿಯುತ್ತಾನೆ? (ಆದ್ದರಿಂದ) ಹೃದಯದಲ್ಲಿಯೇ ಶ್ರದ್ಧೆಯು ಪ್ರತಿಷ್ಠಿತವಾಗಿರುತ್ತದೆ. "ಯಾಜ್ಞವಲ್ಕ್ಯನೆ, ಇದು ಹೀಗೆಯೇ ಸರಿ!"

(ಭಾಷ್ಯ)

೧೧೬. 'ಕಿಂದೇವತೋಽಸ್ಯಾಂ ದಕ್ಷಿಣಾಯಾಂ ದಿಶ್ಯಸಿ?' ಇತಿ ಪೂರ್ವವತ್ । ದಕ್ಷಿಣಾಯಾಂ ದಿಶಿ ಕಾ ದೇವತಾ ತವ ? ಯಮದೇವತಃ ಇತಿ । ಯಮೋ ದೇವತಾ ಮಮ ದಕ್ಷಿಣಾದಿಗ್ಭೂತಸ್ಯ । ಸ ಯಮಃ ಕಸ್ಮಿನ್ ಪ್ರತಿಷ್ಠಿತ ಇತಿ ? ಯಜ್ಞೇ ಇತಿ । ಯಜ್ಞೇ ಕಾರಣೇ ಪ್ರತಿಷ್ಠಿತೋ ಯಮಃ ಸಹ ದಿಶಾ । ಕಥಂ ಪುನರ್ಯಜ್ಞಸ್ಯ ಕಾರ್ಯಂ ಯಮ ಇತಿ ? ಉಚ್ಯತೇ । ಋತ್ವಿಗ್ಭಿರ್ನಿಷ್ಪಾದಿತೋ ಯಜ್ಞೋ ದಕ್ಷಿಣಯಾ ಯಜಮಾನಸ್ತೇಭ್ಯೋ ಯಜ್ಞಂ ನಿಷ್ಕ್ರೀಯ ತೇನ ಯಜ್ಞೇನ ದಕ್ಷಿಣಾಂ ದಿಶಂ ಸಹ ಯಮೇನ ಅಭಿಜಯತಿ । ತೇನ ಯಜ್ಞೇ ಯಮಃ ಕಾರ್ಯತ್ವಾತ್ ಪ್ರತಿಷ್ಠಿತಃ ಸಹ ದಕ್ಷಿಣಯಾ ದಿಶಾ । ಕಸ್ಮಿನ್ನು ಯಜ್ಞಃ ಪ್ರತಿಷ್ಠಿತ ಇತಿ ? ದಕ್ಷಿಣಾಯಾಮ್ ಇತಿ । ದಕ್ಷಿಣಯಾ ಸ ನಿಷ್ಕ್ರೀಯತೇ । ತೇನ ದಕ್ಷಿಣಾಕಾರ್ಯಂ ಯಜ್ಞಃ । ಕಸ್ಮಿನ್ನು ದಕ್ಷಿಣಾ ಪ್ರತಿಷ್ಠಿತೇತಿ ? ಶ್ರದ್ಧಾಯಾಮ್ ಇತಿ । ಶ್ರದ್ಧಾ ನಾಮ ದಿತ್ಸುತ್ವಮ್ ಆಸ್ತಿಕ್ಯಬುದ್ಧಿರ್ಭಕ್ತಿಸಹಿತಾ । ಕಥಂ ತಸ್ಯಾಂ ಪ್ರತಿಷ್ಠಿತಾ ದಕ್ಷಿಣಾ ? ಯಸ್ಮಾತ್ ಯದಾ ಹ್ಯೇವ ಶ್ರದ್ಧತ್ತೇ ಅಥ ದಕ್ಷಿಣಾಂ ದದಾತಿ, ನಾಶ್ರದ್ಧಧತ್ ದಕ್ಷಿಣಾಂ ದದಾತಿ । ತಸ್ಮಾತ್ ಶ್ರದ್ಧಾಯಾಂ ಹ್ಯೇವ ದಕ್ಷಿಣಾ ಪ್ರತಿಷ್ಠಿತಾ ಇತಿ । ಕಸ್ಮಿನ್ನು ಶ್ರದ್ಧಾ ಪ್ರತಿಷ್ಠಿತೇತಿ ? ಹೃದಯೇ ಇತಿ ಹೋವಾಚ । ಹೃದಯಸ್ಯ ಹಿ ವೃತ್ತಿಃ ಶ್ರದ್ಧಾ, ಯಸ್ಮಾತ್ ಹೃದಯೇನ ಹಿ ಶ್ರದ್ಧಾಂ ಜಾನಾತಿ । ವೃತ್ತಿಶ್ಚ ವೃತ್ತಿಮತಿ ಪ್ರತಿಷ್ಠಿತಾ ಭವತಿ । ತಸ್ಮಾತ್ ಹೃದಯೇ ಹ್ಯೇವ ಶ್ರದ್ಧಾ ಪ್ರತಿಷ್ಠಿತಾ ಭವತೀತಿ। ಏವಮೇವೈತದ್ ಯಾಜ್ಞವಲ್ಕ್ಯ॥

(ಭಾಷ್ಯಾರ್ಥ)

'ಈ ದಕ್ಷಿಣದಿಕ್ಕಿನಲ್ಲಿ ಯಾವ ದೇವತೆಯುವನಾಗಿರುತ್ತೀಯೆ?' ಎಂಬುದು ಹಿಂದಿನ (ಕಂಡಿಕೆಯ ವಾಕ್ಯ)ದಂತೆಯೇ (ವ್ಯಾಖ್ಯಾನಮಾಡಿಕೊಳ್ಳತಕ್ಕದ್ದು). ದಕ್ಷಿಣದಿಕ್ಕಿನಲ್ಲಿ ನಿನಗೆ ದೇವತೆ ಯಾವದು ? (ಎಂದರ್ಥ). 'ಯಮದೇವತನಾಗಿರುತ್ತೇನೆ', ದಕ್ಷಿಣದಿಕ್ಕಾಗಿರುವ ನನಗೆ ಯಮನೇ ದೇವತೆ (ಎಂದರ್ಥ). 'ಆ ಯಮನು ಏತರಲ್ಲಿ ಪ್ರತಿಷ್ಠಿತನಾಗಿರುತ್ತಾನೆ ?' ಯಜ್ಞದಲ್ಲಿ. ಯಮನು (ಆ) ದಿಕ್ಕಿನೊಡನೆ ಯಜ್ಞವೆಂಬ ಕಾರಣದಲ್ಲಿ ಪ್ರತಿಷ್ಠಿತನಾಗಿರುತ್ತಾನೆ. ಯಮನು ಯಜ್ಞದ ಕಾರ್ಯವೆಂಬುದು ಹೇಗೆ ? ಎಂದರೆ ಹೇಳುತ್ತೇವೆ. ಯಜ್ಞವು ಋತ್ವಿಜರಿಂದ ಆಗಿರತಕ್ಕದ್ದು ; ಯಜಮಾನನು ಅವರಿಂದ ಯಜ್ಞವನ್ನು ದಕ್ಷಿಣೆಯ ಮೂಲಕ ನಿಷ್ಕ್ರಯಮಾಡಿಕೊಂಡು, ಆ ಯಜ್ಞದಿಂದ ದಕ್ಷಿಣದಿಕ್ಕನ್ನು ಯಮನೊಡನೆ ಗೆದ್ದುಕೊಳ್ಳುತ್ತಾನೆ. ಆದ್ದರಿಂದ ಯಜ್ಞದಲ್ಲಿ ಯಮನು (ಅದರ) ಕಾರ್ಯವಾಗಿರುವದರಿಂದ ದಕ್ಷಿಣದಿಕ್ಕಿನೊಡನೆ ಪ್ರತಿಷ್ಠಿತನಾಗಿರುತ್ತಾನೆ.

'ಯಜ್ಞವು ಏತರಲ್ಲಿ ಪ್ರತಿಷ್ಠಿತವಾಗಿದೆಯೊ!' ದಕ್ಷಿಣೆಯಲ್ಲಿ. ಆ (ಯಜ್ಞವು) ದಕ್ಷಿಣೆಯುಮೂಲಕ ನಿಷ್ಕ್ರಯವಾಗಿರುತ್ತದೆ; ಆದ್ದರಿಂದ ಯಜ್ಞವು ದಕ್ಷಿಣೆಯ ಕಾರ್ಯವು. ದಕ್ಷಿಣೆಯು ಏತರಲ್ಲಿ ಪ್ರತಿಷ್ಠಿತವಾಗಿದೆಯೊ!' ಶ್ರದ್ಧೆಯಲ್ಲಿ. ಶ್ರದ್ಧೆ ಎಂದರೆ ಕೊಡಲಿಚ್ಛೆ, ಭಕ್ತಿಸಹಿತವಾದ ಆಸ್ತಿಕ್ಯಬುದ್ಧಿ. ದಕ್ಷಿಣೆಯು ಅದ ರಲ್ಲಿ ಪ್ರತಿಷ್ಠಿತವಾಗಿದೆ ಎಂಬುದು ಹೇಗೆ ? ಹೇಗೆಂದರೆ ಯಾವಾಗ ಶ್ರದ್ಧಾವಂತ ನಾಗಿರುವನೋ ಆಗ ದಕ್ಷಿಣೆಯನ್ನು ಕೊಡುತ್ತಾನೆ, ಶ್ರದ್ಧೆಯಿಲ್ಲದವನು ದಕ್ಷಿಣೆ ಯನ್ನು ಕೊಡುವದಿಲ್ಲ. ಆದ್ದರಿಂದ ಶ್ರದ್ಧೆಯಲ್ಲಿಯೇ ದಕ್ಷಿಣೆಯು ಪ್ರತಿಷ್ಠಿತ ವಾಗಿರುತ್ತದೆ. 'ಶ್ರದ್ಧೆಯು ಏತರಲ್ಲಿ ಪ್ರತಿಷ್ಠಿತವಾಗಿರುತ್ತದೆಯೊ!' 'ಹೃದಯ ದಲ್ಲಿ' ಎಂದು (ಅವನು ಉತ್ತರವನ್ನು) ಹೇಳಿದನು. ಹೃದಯದಿಂದಲೇ ಶ್ರದ್ಧೆ ಯನ್ನು ಅರಿತುಕೊಳ್ಳುತ್ತಾನೆ. ವೃತ್ತಿಯು ವೃತ್ತಿಯುಳ್ಳದ್ದರಲ್ಲಿ ಪ್ರತಿಷ್ಠಿತ ವಾಗಿರುತ್ತದೆ. ಆದ್ದರಿಂದ ಹೃದಯದಲ್ಲಿಯೇ ಶ್ರದ್ಧೆಯು ಪ್ರತಿಷ್ಠಿತವಾಗಿರು ತ್ತದೆ. "ಯಾಜ್ಞವಲ್ಕ್ಯನೆ, ಇದು ಹೀಗೆಯೇ ಸರಿ !"[1]

## ಪಶ್ಚಿಮದಿಗ್ದೇವತೆಗೆ ಹೃದಯವೇ ಪ್ರತಿಷ್ಠೆ

(ಉಪನಿಷತ್ತು)

**ಕಿಂದೇವತೋಽಸ್ಯಾಂ ಪ್ರತೀಚ್ಯಾಂ ದಿಶ್ಯಸೀತಿ ವರುಣದೇವತ ಇತಿ ಸ ವರುಣಃ ಕಸ್ಮಿನ್ ಪ್ರತಿಷ್ಠಿತ ಇತ್ಯಪ್ಸ್ವಿತಿ ಕಸ್ಮಿನ್ನ್ವಾಪಃ ಪ್ರತಿಷ್ಠಿತಾ ಇತಿ ರೇತಸೀತಿ ಕಸ್ಮಿನ್ನು ರೇತಃ ಪ್ರತಿಷ್ಠಿತಮಿತಿ ಹೃದಯ ಇತಿ ತಸ್ಮಾದಪಿ ಪ್ರತಿರೂಪಂ ಜಾತಮಾಹುರ್ಹೃದಯಾ ದಿವ ಸೃಪ್ತೋ ಹೃದಯಾದಿವ ನಿರ್ಮಿತ ಇತಿ ಹೃದಯೇ ಹ್ಯೇವ ರೇತಃ ಪ್ರತಿಷ್ಠಿತಂ ಭವತೀತ್ಯೇವಮೇವೈತದ್ಯಾಜ್ಞವಲ್ಕ್ಯ ॥೨೨॥**

೨೨. 'ಈ ಪ್ರತೀಚೀದಿಕ್ಕಿನಲ್ಲಿ ಯಾವ ದೇವತೆಯವನಿರುತ್ತೀ ಯೆ?' ವರುಣದೇವತನಾಗಿರುತ್ತೇನೆ. ಆ ವರುಣನು ಏತರಲ್ಲಿ ಪ್ರತಿಷ್ಠಿತ ನಾಗಿರುತ್ತಾನೆ?' ಅಪ್ಪಿನಲ್ಲಿ. 'ಅಪ್ಪು ಏತರಲ್ಲಿ ಪ್ರತಿಷ್ಠಿತವಾಗಿದೆಯೊ!' ರೇತಸ್ಸಿನಲ್ಲಿ. 'ರೇತಸ್ಸು ಏತರಲ್ಲಿ ಪ್ರತಿಷ್ಠಿತವಾಗಿದೆಯೊ!' ಹೃದಯ ದಲ್ಲಿ. ಆದ್ದರಿಂದಲೇ ಪ್ರತಿರೂಪನಾಗಿ ಹುಟ್ಟಿರುವ (ಮಗುವನ್ನು) 'ಹೃದಯದಿಂದಲೇ ಬಂದಿರುವಂತಿದಾನೆ', 'ಹೃದಯದಿಂದಲೇ

1. ಪೂರ್ವದಿಕ್ಕಿನಲ್ಲಿ ರೂಪಗಳ ಉಪಸಂಹಾರವನ್ನೂ ಮುಂದಿನ ಮೂರು ದಿಕ್ಕು ಗಳಲ್ಲಿ ಕರ್ಮದ ಉಪಸಂಹಾರವನ್ನೂ, ಧ್ರುವದಿಕ್ಕಿನಲ್ಲಿ ನಾಮದ ಉಪಸಂಹಾರವನ್ನೂ ಮಾಡಿರುತ್ತದೆ. ಹೀಗೆ ನಾಮರೂಪಕರ್ಮಾತ್ಮಕವಾದ ಸರ್ವಜಗತ್ತನ್ನೂ ಹೃದಯದಲ್ಲಿ ಉಪಸಂಹಾರಮಾಡಿರುತ್ತದೆ ಎಂದು ವಾರ್ತಿಕ (೩-೯-೭೬).

ನಿರ್ಮಿತನಾದಂತಿದಾನೆ' ಎನ್ನುವರು. (ಆದ್ದರಿಂದ) ಹೃದಯದಲ್ಲಿಯೇ ರೇತಸ್ಸು ಪ್ರತಿಷ್ಠಿತವಾಗಿರುತ್ತದೆ. 'ಯಾಜ್ಞವಲ್ಕ್ಯನೆ, ಇದು ಹೀಗೆಯೇ ಸರಿ !'

(ಭಾಷ್ಯ)

೧೧೭. 'ಕಿಂದೇವತೋऽಸ್ಯಾಂ ಪ್ರತೀಚ್ಯಾಂ ದಿಶ್ಯಸಿ' ಇತಿ । ತಸ್ಯಾಂ ವರುಣೋऽಧಿದೇವತಾ ಮಮ । ಸ ವರುಣಃ ಕಸ್ಮಿನ್ ಪ್ರತಿಷ್ಠಿತ ಇತಿ ? ಅಪ್ಸ್ವಿತಿ । ಅಪಾಂ ಹಿ ವರುಣಃ ಕಾರ್ಯಮ್ । "ಶ್ರದ್ಧಾ ವಾ ಆಪಃ" (ತೈ. ಸಂ. ೧-೬-೮-೧), 'ಶ್ರದ್ಧಾತೋ ವರುಣಮಸೃಜತ" ( ? ) ಇತಿ ಶ್ರುತೇಃ । ಕಸ್ಮಿನ್ನ್ವಾಪಃ ಪ್ರತಿಷ್ಠಿತಾ ಇತಿ ? ರೇತಸೀತಿ । 'ರೇತಸೋ ಹ್ಯಾಪಃ ಸೃಷ್ಟಾಃ' ( ? ) ಇತಿ ಶ್ರುತೇಃ । ಕಸ್ಮಿನ್ನು ರೇತಃ ಪ್ರತಿಷ್ಠಿತಮಿತಿ ? ಹೃದಯೇ ಇತಿ । ಯಸ್ಮಾತ್ ಹೃದಯಸ್ಯ ಕಾರ್ಯಂ ರೇತಃ । ಕಾಮೋ ಹೃದಯಸ್ಯ ವೃತ್ತಿಃ । ಕಾಮಿನೋ ಹಿ ಹೃದಯಾತ್ ರೇತೋऽಧಿಸ್ಕನ್ದತಿ । ತಸ್ಮಾದಪಿ ಪ್ರತಿರೂಪಮ್ ಅನುರೂಪಂ ಪುತ್ರಂ ಜಾತಮ್ ಆಹು ರ್ಲೌಕಿಕಾಃ ಅಸ್ಯ ಪಿತುರ್ಹೃದಯಾದಿವ ಅಯಂ ಪುತ್ರಃ ಸೃಪ್ತಃ ವಿನಿಃಸೃತಃ ಹೃದಯಾದಿವ ನಿರ್ಮಿತಃ, ಯಥಾ ಸುವರ್ಣೇನ ನಿರ್ಮಿತಃ ಕುಣ್ಡಲಃ । ತಸ್ಮಾದ್ ಹೃದಯೇ ಹ್ಯೇವ ರೇತಃ ಪ್ರತಿಷ್ಠಿತಂ ಭವತೀತಿ । ಏವಮೇವೈತದ್ ಯಾಜ್ಞವಲ್ಕ್ಯ ॥

(ಭಾಷ್ಯಾರ್ಥ)

'ಈ ಪ್ರತೀಚೀದಿಕ್ಕಿನಲ್ಲಿ ಯಾವ ದೇವತೆಯವನಾಗಿರುತ್ತೀಯೆ ?' ಅದರಲ್ಲಿ ನನಗೆ ವರುಣನು ಅಧಿದೇವತೆ. 'ಆ ವರುಣನು ಏತರಲ್ಲಿ ಪ್ರತಿಷ್ಠಿತನಾಗಿರುತ್ತಾನೆ ? ಅಪ್ಪಿನಲ್ಲಿ. ವರುಣನು ಅಪ್ಪಿನ ಕಾರ್ಯವಲ್ಲವೆ ? ಏಕೆಂದರೆ "ಶ್ರದ್ಧೆಯೇ ಅಪ್ಪು" (ತೈ. ಸಂ. ೧-೬-೮-೧), "ಶ್ರದ್ಧೆಯಿಂದ ವರುಣನನ್ನು ಸೃಜಿಸಿದನು" ( ? ) ಎಂದು ಶ್ರುತಿಯು. 'ಅಪ್ಪು ಏತರಲ್ಲಿ ಪ್ರತಿಷ್ಠಿತವಾಗಿದೆ ?" ರೇತಸ್ಸಿನಲ್ಲಿ. ಏಕೆಂದರೆ "ರೇತಸ್ಸಿನಿಂದಲೇ ಅಲ್ಲವೆ, ಅಪ್ಪು ಸೃಷ್ಟವಾಗಿದೆ ?" ( ? ) ಎಂದು ಶ್ರುತಿ. ರೇತಸ್ಸು ಏತರಲ್ಲಿ ಪ್ರತಿಷ್ಠಿತವಾಗಿದೆ ? ಹೃದಯದಲ್ಲಿ. ಏಕೆಂದರೆ ರೇತಸ್ಸು ಹೃದಯದ ಕಾರ್ಯವು. ಕಾಮವೆಂಬುದು ಹೃದಯದ ವೃತ್ತಿ. ಕಾಮಿಯಾದವನಿಗೆ ಹೃದಯದಿಂದಲಲ್ಲವೆ, ರೇತಸ್ಸು ಚಲಿಸುವದು ? ಆದ್ದರಿಂದಲೇ ಪ್ರತಿರೂಪನಾದ, ಅನುರೂಪನಾಗಿರುವ ಹುಟ್ಟಿದ ಮಗನನ್ನು ಜನರು 'ಇವನು ತಂದೆಯ ಹೃದಯದಿಂದಲೇ ಹೊರಬಂದಿರುವನಂತೆ (ಇದಾನೆ)[1], ಹೃದಯದಿಂದಲೇ ನಿರ್ಮಿತವಾದಂತೆ,

1. ಈ ಕಂಡಿಕೆಯಲ್ಲಿ ಪುತ್ರಜನ್ಮದ್ವಾರದಿಂದ ಕರ್ಮವನ್ನು ಹೃದಯದಲ್ಲಿ ಉಪಸಂಹಾರಮಾಡಿರುತ್ತದೆ ಎಂದು ವಾರ್ತಿಕ.

ಚಿನ್ನದಿಂದ ಹತ್ತೊಂಟಿ (ನಿರ್ಮಿತವಾದಂತೆ ಇದಾನೆ)' ಎನ್ನುತ್ತಾರೆ. ಆದ್ದರಿಂದ ಹೃದಯದಲ್ಲಿಯೇ ರೇತಸ್ಸು ಪ್ರತಿಷ್ಠಿತವಾಗಿರುತ್ತದೆ "ಯಾಜ್ಞವಲ್ಕ್ಯನೆ, ಇದು ಹೀಗೆಯೇ ಸರಿ !"

## ಉತ್ತರದಿಗ್ದೇವತೆಗೆ ಹೃದಯವೇ ಪ್ರತಿಷ್ಠೆ

(ಉಪನಿಷತ್ತು)

**ಕಿಂದೇವತೋಽಸ್ಯಾಮುದೀಚ್ಯಾಂ ದಿಶ್ಯಸೀತಿ ಸೋಮದೇವತ ಇತಿ ಸ ಸೋಮಃ ಕಸ್ಮಿನ್ ಪ್ರತಿಷ್ಠಿತ ಇತಿ ದೀಕ್ಷಾಯಾಮಿತಿ ಕಸ್ಮಿನ್ನು ದೀಕ್ಷಾ ಪ್ರತಿಷ್ಠಿತೇತಿ ಸತ್ಯ ಇತಿ ತಸ್ಮಾದಪಿ ದೀಕ್ಷಿತಮಾಹುಃ ಸತ್ಯಂ ವದೇತಿ ಸತ್ಯೇ ಹ್ಯೇವ ದೀಕ್ಷಾ ಪ್ರತಿಷ್ಠಿತೇತಿ ಕಸ್ಮಿನ್ನು ಸತ್ಯಂ ಪ್ರತಿಷ್ಠಿತಮಿತಿ ಹೃದಯ ಇತಿ ಹೋವಾಚ ಹೃದಯೇನ ಹಿ ಸತ್ಯಂ ಜಾನಾತಿ । ಹೃದಯೇ ಹ್ಯೇವ ಸತ್ಯಂ ಪ್ರತಿಷ್ಠಿತಂ ಭವತೀತ್ಯೇವಮೇವೈತದ್ ಯಾಜ್ಞವಲ್ಕ್ಯ ॥ ೨೩ ॥**

೨೩. 'ಈ ಉದೀಚೀದಿಕ್ಕಿನಲ್ಲಿ ಯಾವ ದೇವತೆಯವನಿರುತ್ತೀಯೆ ?' ಸೋಮದೇವತನಾಗಿರುತ್ತೇನೆ. 'ಆ ಸೋಮನು ಏತರಲ್ಲಿ ಪ್ರತಿಷ್ಠಿತನಾಗಿರುತ್ತಾನೆ ?' ದೀಕ್ಷೆಯಲ್ಲಿ. 'ದೀಕ್ಷೆಯು ಏತರಲ್ಲಿ ಪ್ರತಿಷ್ಠಿತವಾಗಿದೆಯೊ !' ಸತ್ಯದಲ್ಲಿ ; ಆದ್ದರಿಂದಲೇ ದೀಕ್ಷಿತನನ್ನು 'ಸತ್ಯವನ್ನು ಹೇಳು !' ಎನ್ನುವರು. ಸತ್ಯದಲ್ಲಿಯೇ ದೀಕ್ಷೆಯು ಪ್ರತಿಷ್ಠಿತವಾಗಿರುತ್ತದೆ. 'ಸತ್ಯವು ಏತರಲ್ಲಿ ಪ್ರತಿಷ್ಠಿತವಾಗಿರುತ್ತದೆಯೊ !' 'ಹೃದಯದಲ್ಲಿ' ಎಂದು (ಅವನು ಉತ್ತರವನ್ನು) ಹೇಳಿದನು. ಹೃದಯದಿಂದಲೇ ಅಲ್ಲವೆ, ಸತ್ಯವನ್ನು ಅರಿಯುತ್ತಾನೆ ? ಹೃದಯಲ್ಲಿಯೇ ಸತ್ಯವು ಪ್ರತಿಷ್ಠಿತವಾಗಿರುತ್ತದೆ. ಯಾಜ್ಞವಲ್ಕನೆ, 'ಇದು ಹೀಗೆಯೇ ಸರಿ !'

(ಭಾಷ್ಯ)

೧೧೮. "ಕಿಂದೇವತೋಽಸ್ಯಾಮ್ ಉದೀಚ್ಯಾಂ ದಿಶ್ಯಸಿ" ಇತಿ ? ಸೋಮದೇವತ ಇತಿ । ಸೋಮ ಇತಿ ಲತಾಂ ಸೋಮದೇವತಾಂ ಚ ಏಕೀಕೃತ್ಯ ನಿರ್ದೇಶಃ । ಸ ಸೋಮಃ ಕಸ್ಮಿನ್ ಪ್ರತಿಷ್ಠಿತ ಇತಿ ? ದೀಕ್ಷಾಯಾಮ್ ಇತಿ । ದೀಕ್ಷಿತೋ ಹಿ ಯಜಮಾನಃ ಸೋಮಂ ಕ್ರೀಣಾತಿ । ಕ್ರೀತೇನ ಸೋಮೇನ ಇಷ್ಟ್ವಾ ಜ್ಞಾನವಾನ್ ಉತ್ತರಾಂ ದಿಶಂ ಪ್ರತಿಪದ್ಯತೇ ಸೋಮದೇವತಾಧಿಷ್ಠಿತಾಂ ಸೌಮ್ಯಾಮ್ । ಕಸ್ಮಿನ್ನು ದೀಕ್ಷಾ ಪ್ರತಿಷ್ಠಿತೇತಿ । ಸತ್ಯೇ ಇತಿ । ಕಥಮ್ ? ಯಸ್ಮಾತ್ ಸತ್ಯೇ ದೀಕ್ಷಾ ಪ್ರತಿಷ್ಠಿತಾ, ತಸ್ಮಾದಪಿ ದೀಕ್ಷಿತಮ್

ಆಹುಃ 'ಸತ್ಯಂ ವದ' ಇತಿ, ಕಾರಣಭ್ರೇಷೇ ಕಾರ್ಯಭ್ರೇಷೋ ಮಾಭೂದಿತಿ। ಸತ್ಯೇ ಹ್ಯೇವ ದೀಕ್ಷಾ ಪ್ರತಿಷ್ಠಿತೇತಿ। ಕಸ್ಮಿನ್ನು ಸತ್ಯಂ ಪ್ರತಿಷ್ಠಿತಮಿತಿ? ಹೃದಯೇ ಇತಿ ಹೋವಾಚ। ಹೃದಯೇನ ಹಿ ಸತ್ಯಂ ಜಾನಾತಿ। ತಸ್ಮಾತ್ ಹೃದಯೇ ಹ್ಯೇವ ಸತ್ಯಂ ಪ್ರತಿಷ್ಠಿತಂ ಭವತೀತಿ। ಏವಮೇವೈತದ್ ಯಾಜ್ಞವಲ್ಕ್ಯ ॥

(ಭಾಷ್ಯಾರ್ಥ)

'ಈ ಉದೀಚೀದಿಕ್ಕಿನಲ್ಲಿ ಯಾವ ದೇವತೆಯುಳ್ಳವನಿರುತ್ತೀಯೆ ?' ಸೋಮದೇವತನಾಗಿರುತ್ತೇನೆ. ಸೋಮ ಎಂದು (ಸೋಮ)ಲತೆಯನ್ನೂ ಸೋಮದೇವತೆಯನ್ನೂ ಒಂದುಗೂಡಿಸಿ (ಒಂದೇ ಮಾತಿನಿಂದ) ಕರೆದಿರುತ್ತದೆ. ಆ ಸೋಮವು ಏತರಲ್ಲಿ ಪ್ರತಿಷ್ಠಿತವಾಗಿದೆ? ದೀಕ್ಷೆಯಲ್ಲಿ. ದೀಕ್ಷಿತನಾದ ಮೇಲಲ್ಲವೆ, ಯಜಮಾನನು ಸೋಮವನ್ನು ಕ್ರಯಕ್ಕೆ ತೆಗೆದುಕೊಳ್ಳುವದು ? (ಹಾಗೆ) ಕ್ರಯಕ್ಕೆ ತೆಗೆದುಕೊಂಡ ಸೋಮದಿಂದ ಯಾಗವನ್ನು ಮಾಡಿ ಜ್ಞಾನ(ಯುಕ್ತ)ನಾಗಿ[1] ಸೋಮದೇವತೆಯಿಂದ ಅಧಿಷ್ಠಿತವಾಗಿರುವ ಸೌಮ್ಯವೆಂಬ ಉತ್ತರದಿಕ್ಕನ್ನು ಪಡೆದುಕೊಳ್ಳುತ್ತಾನೆ. 'ದೀಕ್ಷೆಯು ಏತರಲ್ಲಿ ಪ್ರತಿಷ್ಠಿತವಾಗಿರುವದೊ!' ಸತ್ಯದಲ್ಲಿ ಹೇಗೆ? ಎಂದರೆ, ಸತ್ಯದಲ್ಲಿ ದೀಕ್ಷೆಯು ಪ್ರತಿಷ್ಠಿತವಾಗಿರುವದಲ್ಲ, ಆದ್ದರಿಂದಲೇ ಕಾರಣನಾಶದಿಂದ ಕಾರ್ಯವೂ ನಾಶವಾಗದಿರಲೆಂದೇ ದೀಕ್ಷಿತನನ್ನು 'ಸತ್ಯವನ್ನು ಹೇಳು!' ಎನ್ನುತ್ತಾರೆ. (ಆದ್ದರಿಂದ) ಸತ್ಯದಲ್ಲಿಯೇ ದೀಕ್ಷೆಯು ಪ್ರತಿಷ್ಠಿತವಾಗಿರುತ್ತದೆ. 'ಸತ್ಯವು ಏತರಲ್ಲಿ ಪ್ರತಿಷ್ಠಿತವಾಗಿದೆಯೊ !' 'ಹೃದಯದಲ್ಲಿ' ಎಂದು (ಅವನು ಉತ್ತರವನ್ನು) ಹೇಳಿದನು. ಹೃದಯದಿಂದಲೇ ಅಲ್ಲವೆ, ಸತ್ಯವನ್ನು ಅರಿಯುತ್ತಾನೆ? ಆದ್ದರಿಂದ ಹೃದಯದಲ್ಲಿಯೇ ಸತ್ಯವು ಪ್ರತಿಷ್ಠಿತವಾಗಿದೆ. "ಯಾಜ್ಞವಲ್ಕ್ಯನೆ, ಇದು ಹೀಗೆಯೇ ಸರಿ!"

## ಊರ್ಧ್ವದಿಗ್ದೇವತೆಗೆ ಹೃದಯವೇ ಪ್ರತಿಷ್ಠೆ

(ಉಪನಿಷತ್ತು)

**ಕಿಂದೇವತೋಽಸ್ಯಾಂ ಧ್ರುವಾಯಾಂ ದಿಶ್ಯಸೀತ್ಯಗ್ನಿದೇವತ ಇತಿ ಸೋಽಗ್ನಿಃ ಕಸ್ಮಿನ್ ಪ್ರತಿಷ್ಠಿತ ಇತಿ ವಾಚೀತಿ ಕಸ್ಮಿನ್ನು ವಾಕ್ ಪ್ರತಿಷ್ಠಿತೇತಿ ಹೃದಯ ಇತಿ ಕಸ್ಮಿನ್ನು ಹೃದಯಂ ಪ್ರತಿಷ್ಠಿತಮಿತಿ ॥ ೨೪ ॥**

೨೪. "ಈ ಧ್ರುವದಿಕ್ಕಿನಲ್ಲಿ ಯಾವ ದೇವತೆಯುವನಾಗಿರುತ್ತೀಯೆ?'' ಅಗ್ನಿದೇವತನಾಗಿರುತ್ತೇನೆ. "ಆ ಅಗ್ನಿಯು ಏತರಲ್ಲಿ

1. ಉಪಾಸನಾಯುಕ್ತವಾದ ಕರ್ಮವನ್ನು ಈ ಕಂಡಿಕೆಯಲ್ಲಿ ಹೇಳಿದೆ ಎಂದು ವಾರ್ತಿಕ. ಮುಂದಿನ ಕಂಡಿಕೆಯ ಭಾಷ್ಯವನ್ನು ನೋಡಿ.

ಪ್ರತಿಷ್ಠಿತನಾಗಿರುವನು?" ವಾಕ್ಕಿನಲ್ಲಿ. "ವಾಕ್ಕು ಏತರಲ್ಲಿ ಪ್ರತಿಷ್ಠಿತವಾಗಿದೆಯೊ!" ಹೃದಯದಲ್ಲಿ. "ಹೃದಯವು ಏತರಲ್ಲಿ ಪ್ರತಿಷ್ಠಿತವಾಗಿದೆಯೊ!"

(ಭಾಷ್ಯ)

೧೧೯. ಕಿಂದೇವತೋಽಸ್ಯಾಂ ಧ್ರುವಾಯಾಂ ದಿಶ್ಯಸೀತಿ? ಮೇರೋಃ ಸಮನ್ತತೋ ವಸತಾಮ್ ಅವ್ಯಭಿಚಾರಾತ್ ಊರ್ಧ್ವಾ ದಿಕ್ ಧ್ರುವಾ ಇತ್ಯುಚ್ಯತೇ। ಅಗ್ನಿದೇವತ ಇತಿ। ಊರ್ಧ್ವಾಯಾಂ ಹಿ ಪ್ರಕಾಶ ಭೂಯಸ್ತ್ವಮ್, ಪ್ರಕಾಶಶ್ಚ ಅಗ್ನಿಃ। ಸೋಽಗ್ನಿಃ ಕಸ್ಮಿನ್ ಪ್ರತಿಷ್ಠಿತ ಇತಿ? ವಾಚೀತಿ। ಕಸ್ಮಿನ್ನು ವಾಕ್ ಪ್ರತಿಷ್ಠಿತೇತಿ? ಹೃದಯ ಇತಿ ॥

(ಭಾಷ್ಯಾರ್ಥ)

"ಈ ಧ್ರುವದಿಕ್ಕಿನಲ್ಲಿ ಯಾವ ದೇವತೆಯುವನಾಗಿರುತ್ತೀಯೆ?" ಮೇರುವಿನ ಸುತ್ತಲೂ ವಾಸಮಾಡುತ್ತಿರುವವರಿಗೆ(ಲ್ಲ) ಒಂದೇ ಆಗಿರುವದರಿಂದ ಮೇಲಿನ ದಿಕ್ಕನ್ನು ಧ್ರುವದಿಕ್ಕು ಎಂದಿದೆ. ಅಗ್ನಿದೇವತನಾಗಿರುತ್ತೇನೆ; ಮೇಲು (ದಿಕ್ಕಿನಲ್ಲಿ) ಪ್ರಕಾಶವು ಹೆಚ್ಚಾಗಿರುತ್ತದೆಯಷ್ಟೆ, ಅಗ್ನಿಯು ಪ್ರಕಾಶವೇ. "ಆ ಅಗ್ನಿಯು ಏತರಲ್ಲಿ ಪ್ರತಿಷ್ಠಿತನಾಗಿರುತ್ತಾನೆ?" ವಾಕ್ಕಿನಲ್ಲಿ. "ವಾಕ್ಕು ಏತರಲ್ಲಿ ಪ್ರತಿಷ್ಠಿತವಾಗಿದೆಯೊ!" ಹೃದಯದಲ್ಲಿ.[1]

## ಪ್ರಶ್ನೆ: ಹೃದಯಕ್ಕೆ ಪ್ರತಿಷ್ಠೆ ಯಾವದು?

(ಭಾಷ್ಯ)

೧೨೦. ತತ್ರ ಯಾಜ್ಞವಲ್ಕ್ಯಃ ಸರ್ವಾಸು ದಿಕ್ಷು ವಿಪ್ರಸೃತೇನ ಹೃದಯೇನ ಸರ್ವಾ ದಿಶ ಆತ್ಮತ್ವೇನ ಅಭಿಸಂಪನ್ನಃ। ಸದೇವಾಃ ಸಪ್ರತಿಷ್ಠಾ ದಿಶಃ ಆತ್ಮಭೂತಾಸ್ತಸ್ಯ ನಾಮರೂಪಕರ್ಮಾತ್ಮಭೂತಸ್ಯ ಯಾಜ್ಞವಲ್ಕ್ಯಸ್ಯ। ಯತ್ ರೂಪಂ ತತ್ ಪ್ರಾಚ್ಯಾ ದಿಶಾ ಸಹ ಹೃದಯಭೂತಂ ಯಾಜ್ಞವಲ್ಕ್ಯಸ್ಯ। ಯತ್ಕೇವಲಂ ಕರ್ಮ ಪುತ್ರೋತ್ಪಾದನಲಕ್ಷಣಂ ಜ್ಞಾನಸಹಿತಂ ಚ ಸಹ ಫಲೇನ ಅಧಿಷ್ಠಾತ್ರೀಭಿಶ್ಚ ದೇವತಾಭಿಃ ದಕ್ಷಿಣಾಪ್ರತೀಚ್ಯುದೀಚ್ಯಃ ಕರ್ಮ ಫಲಾತ್ಮಿಕಾಃ ಹೃದಯಮೇವ ಆಪನ್ನಾಸ್ತಸ್ಯ। ಧ್ರುವಾಯಾ ದಿಶಾ ಸಹ ನಾಮ ಸರ್ವಂ ವಾಗ್ದ್ವಾರೇಣ ಹೃದಯಮೇವ ಆಪನ್ನಮ್। ಏತಾವದ್ಧೀದಂ ಸರ್ವಂ ಯದುತ ರೂಪಂ ವಾ ಕರ್ಮ ವಾ ನಾಮ ವಾ ಇತಿ ತತ್ಸರ್ವಂ ಹೃದಯಮೇವ। ತತ್ ಸರ್ವಾತ್ಮಕಂ ಹೃದಯಂ ಪೃಚ್ಛ್ಯತೇ ಕಸ್ಮಿನ್ನು ಹೃದಯಂ ಪ್ರತಿಷ್ಠಿತಮಿತಿ ॥

---

1. ಈ ಕಂಡಿಕೆಯಲ್ಲಿ ನಾಮವನ್ನು ಹೃದಯದಲ್ಲಿ ಉಪಸಂಹಾರಮಾಡಿರುತ್ತದೆ.

(ಭಾಷ್ಯಾರ್ಥ)

ಇಲ್ಲಿ ಯಾಜ್ಞವಲ್ಕ್ಯನು ಎಲ್ಲಾ ದಿಕ್ಕುಗಳಲ್ಲಿಯೂ ಹರಡಿಕೊಂಡಿರುವ ಹೃದಯದಿಂದ ಎಲ್ಲಾ ದಿಕ್ಕುಗಳನ್ನೂ ಆತ್ಮವಾಗಿ ಪಡೆದುಕೊಂಡಿರುತ್ತಾನೆ. ದೇವತೆಗಳೊಡನೆಯೂ ಪ್ರತಿಷ್ಠೆಗಳೊಡನೆಯೂ ದಿಕ್ಕುಗಳು ಆ ನಾಮರೂಪ ಕರ್ಮಾತ್ಮಭೂತನಾದ ಯಾಜ್ಞವಲ್ಕ್ಯನಿಗೆ ಸ್ವರೂಪವೇ ಆಗಿರುತ್ತವೆ. ರೂಪ ವೆಂಬುದಿದೆಯಲ್ಲ, ಅದು ಪೂರ್ವದಿಕ್ಕಿನೊಡನೆ ಯಾಜ್ಞವಲ್ಕ್ಯನ ಹೃದಯ ವಾಗಿರುತ್ತದೆ ; ಕೇವಲ ಕರ್ಮವೂ ಪುತ್ರೋತ್ಪಾದನಲಕ್ಷಣ(ಕರ್ಮ)ವೂ ಜ್ಞಾನಸಹಿತ(ಕರ್ಮವೂ) ಫಲದೊಡನೆಯೂ ಅಧಿಷ್ಠಾತೃದೇವತೆಗಳೊಡನೆ ಯೂ ಕೂಡಿ ಕರ್ಮಫಲಾತ್ಮಕವಾದ[1] ದಕ್ಷಿಣ, ಪಶ್ಚಿಮ, ಉತ್ತರ – ಈ (ದಿಕ್ಕುಗಳೂ) ಅವನಿಗೆ ಹೃದಯವೇ ಆಗಿಬಿಟ್ಟಿವೆ. ಧ್ರುವದಿಕ್ಕಿನೊಡನೆ ನಾಮ ವೆಲ್ಲವೂ (ಅವನ) ಹೃದಯವೇ ಆಗಿಬಿಟ್ಟಿದೆ. ರೂಪ, ಕರ್ಮ, ನಾಮ– ಇಷ್ಟೇ ಅಲ್ಲವೆ, ಇದೆಲ್ಲವೂ ? ಅದೆಲ್ಲವೂ ಹೃದಯವೇ. ಆ ಸರ್ವಾತ್ಮಕವಾದ ಹೃದಯ ವನ್ನು (ಕುರಿತು) ಇಲ್ಲಿ ಹೃದಯವು ಏತರಲ್ಲಿ ಪ್ರತಿಷ್ಠಿತವಾಗಿದೆ? ಎಂದು ಕೇಳಲಾಗಿದೆ.

## ಹೃದಯಶರೀರಗಳಿಗೆ ಅನ್ಯೋನ್ಯಪ್ರತಿಷ್ಠೆ

(ಉಪನಿಷತ್ತು)

**ಅಹಲ್ಲಿಕೇತಿ ಹೋವಾಚ ಯಾಜ್ಞವಲ್ಕ್ಯೋ ಯತ್ರೈತದನ್ಯ ತ್ರಾಸ್ಮನ್ಮನ್ಯಾಸೈ ಯದ್ಧ್ಯೇತದನ್ಯತ್ರಾಸ್ಮತ್ ಸ್ಯಾಚ್ಛ್ವಾನೋ ವೈನದದ್ಯುರ್ವಯಾಗ್ಂಸಿ ವೈನದ್ವಿಮಥ್ನೀರನ್ನಿತಿ || ೨೫ ||**

೨೫. ಯಾಜ್ಞವಲ್ಕ್ಯನಿಂತೆಂದನು : ಅಹಲ್ಲಿಕನೆ, ಯಾವಾಗ ಇದು ನನಗಿಂತ ಬೇರೆಯಿದೆ ಎಂದು ತಿಳಿಯುವೆಯೋ, (ಆಗ ನೀನು ಅಹಲ್ಲಿಕನೇ ಸರಿ). ಇದು ನನಗಿಂತ ಬೇರೆಯಿರುವವಾಗಿದ್ದರೆ ಇದನ್ನು ನಾಯಿಗಳಾದರೂ ತಿಂದುಬಿಡುತ್ತಿದ್ದವು, ಹಕ್ಕಿಗಳಾದರೂ ಇದನ್ನು ಕೀಳುತ್ತಿದ್ದವು !

(ಭಾಷ್ಯ)

೧೨೧. ಅಹಲ್ಲಿಕೇತಿ ಹೋವಾಚ ಯಾಜ್ಞವಲ್ಕ್ಯಃ । ನಾಮಾನ್ತರೇಣ ಸಂಬೋಧನಂ ಕೃತವಾನ್ । ಯತ್ರ ಯಸ್ಮಿನ್ ಕಾಲೇ ಏತತ್ ಹೃದಯಂ ಆತ್ಮಾ ಅಸ್ಯ ಶರೀರಸ್ಯ ಅನ್ಯತ್ರ ಕ್ವಚಿತ್ ದೇಶಾನ್ತರೇ ಅಸ್ಮತ್ ಅಸ್ಮತ್ತಃ ವರ್ತತೇ ಇತಿ ಮನ್ಯಾಸೈ ಮನ್ಯಸೇ । ಯದ್ ಹಿ ಯದಿ ಹಿ ಏತದ್ ಹೃದಯಮ್

1. ಇಲ್ಲಿರುವ 'ಫಲಾತ್ಮಕವಾದ' ಎಂಬ ವಚನವು ಹಿಂದೆ ಭಾ. ಭಾ. ೧೧೪ರಲ್ಲಿರುವ 'ಸಫಲ' ಎಂಬ ಪಾಠವೇ ಸರಿ ಎಂಬುದಕ್ಕೆ ಉಪೋದ್ಬಲಕವಾಗಿದೆ.

ಅನ್ಯತ್ರ ಅಸ್ಮತ್ ಸ್ಯಾತ್ ಭವೇತ್, ಶ್ವಾನೋ ವಾ ಏನತ್ ಶರೀರಮ್ ತದಾ ಅದ್ಯುಃ, ವಯಾಂಸಿ ವಾ ಪಕ್ಷಿಣೋ ವಾ ಏನತ್ ವಿಮಥ್ನೀರನ್ ವಿಲೋಡಯೇಯುಃ ವಿಕರ್ಷೇರನ್ ಇತಿ। ತಸ್ಮಾತ್ ಮಯಿ ಶರೀರೇ ಹೃದಯಂ ಪ್ರತಿಷ್ಠಿತಮ್ ಇತ್ಯರ್ಥಃ। ಶರೀರಸ್ಯಾಪಿ ನಾಮರೂಪಕರ್ಮಾತ್ಮಕತ್ವಾತ್ ಹೃದಯೇ ಪ್ರತಿಷ್ಠಿತತ್ವಮ್॥

(ಭಾಷ್ಯಾರ್ಥ)

ಅಹಲ್ಲಿಕನೆ ಎಂದು ಯಾಜ್ಞವಲ್ಕ್ಯನು (ಅವನನ್ನು) ಮತ್ತೊಂದು ಹೆಸರಿನಿಂದ[1] ಕರೆದು ಹೇಳಿದನು. ಯಾವಾಗ ಯಾವ ಕಾಲದಲ್ಲಿ ಈ ಹೃದಯವು, ಈ ಶರೀರದ ಆತ್ಮವು, (ಅಸ್ಮತ್=ಅಸ್ಮತ್ತಃ) ನನಗಿಂತ ಬೇರೆ ಮತ್ತೊಂದು ದೇಶದಲ್ಲಿ ಇರುತ್ತದೆ ಎಂದು (ಮನ್ಯಾಸೈ=ಮನ್ಯಸೇ) ತಿಳಿಯುವೆಯೊ (ಆಗ ನೀನು ಅಹಲ್ಲಿಕನೇ). ಈ ಹೃದಯವು (ಯದ್ ಹಿ=ಯದಿ ಹಿ) ನನಗಿಂತ ಬೇರೊಂದು ಕಡೆಯಲ್ಲಿರುವದಾದರೆ (ಸ್ಯಾತ್=ಭವೇತ್) ನಾಯಿಗಳಾದರೂ ಈ ಶರೀರವನ್ನು ಆಗ ತಿಂದುಬಿಡುತ್ತಿದ್ದವು, ಹಕ್ಕಿಗಳಾದರೂ ಪಕ್ಷಿಗಳಾದರೂ ಇದನ್ನು ಕೀಳುತ್ತಿದ್ದವು ಕಿತ್ತುಹಾಕುತ್ತಿದ್ದವು, ಕಿತ್ತೆಳೆಯುತ್ತಿದ್ದವು[2]. ಆದ್ದರಿಂದ ನನ್ನಲ್ಲಿ ಎಂದರೆ ಶರೀರದಲ್ಲಿಯೇ ಹೃದಯವು ಪ್ರತಿಷ್ಠಿತವಾಗಿರುತ್ತದೆ ಎಂದರ್ಥ. ಶರೀರವೂ ನಾಮರೂಪಕರ್ಮಾತ್ಮಕವೇ ಆಗಿರುವದರಿಂದ ಹೃದಯದಲ್ಲಿ ಪ್ರತಿಷ್ಠಿತವಾಗಿರುತ್ತದೆ[3].

## ಶರೀರಹೃದಯವಾಯುಗಳು ಪರಾರ್ಥ

(ಉಪನಿಷತ್ತು)

**ಕಸ್ಮಿನ್ನು ತ್ವಂ ಚಾತ್ಮಾ ಚ ಪ್ರತಿಷ್ಠಿತೌ ಸ್ಥ ಇತಿ ಪ್ರಾಣ ಇತಿ ಕಸ್ಮಿನ್ನು ಪ್ರಾಣಃ ಪ್ರತಿಷ್ಠಿತ ಇತ್ಯಪಾನ ಇತಿ ಕಸ್ಮಿನ್ನ್ವಪಾನಃ ಪ್ರತಿಷ್ಠಿತ ಇತಿ ವ್ಯಾನ ಇತಿ ಕಸ್ಮಿನ್ನು ವ್ಯಾನಃ ಪ್ರತಿಷ್ಠಿತ ಇತ್ಯು**

---

1. ಅಹಲ್ಲಿಕೇತಿ ಹೋವಾಚ ಎಂಬಿದು ಹೃದಯವು ಎಲ್ಲಿ ಪ್ರತಿಷ್ಠಿತವಾಗಿದೆ ಎಂದು ಹೇಳಿರುವದರಿಂದ ಹೃದಯವು ಅಹಲ್ಲಿಕವೆಂಬ ಆಧಾರದಲ್ಲಿದೆ ಎಂದು ಅರ್ಥವನ್ನು ಕಲ್ಪಿಸುವದಕ್ಕೆ ಹೋಗಬಾರದು ಎಂದರ್ಥ. ವಿದಗ್ಧ, ಅಹಲ್ಲಿಕ – ಇವೆರಡೂ ಹೆಸರುಗಳೇ ಎಂಬುದು ಆದ್ಯುದಾತ್ತಸ್ವರದಿಂದ ಗೊತ್ತಾಗುತ್ತದೆ ಎಂದು ವಾರ್ತಿಕ. ಅಹಲ್ಲಿಕವೆಂದರೆ ಹಗಲು ಮರೆಯಾಗಿರುವ ಪ್ರೇತವು; ಹೃದಯವು ಶರೀರವನ್ನು ಬಿಟ್ಟು ಮತ್ತೆಲ್ಲಿಯೋ ಇರುವದೆಂದು ತಿಳಿಯುವದರಿಂದ ನಿನ್ನನ್ನು ಪ್ರೇತನೆನ್ನಬೇಕು ಎಂದು ಭಾವ.

2. ಆದರೆ ಹಾಗಿಲ್ಲದ್ದರಿಂದ ಹೃದಯವು ಶರೀರದಲ್ಲಿಯೇ ಇದೆ ಎಂದು ತಿಳಿಯಬೇಕು.

3. ಹೃದಯಶರೀರಗಳಿಗೆ ವನಸಿಂಹನ್ಯಾಯದಿಂದ ಪರಸ್ಪರಾಶ್ರಯವಿದೆ ಎಂದು ವಾರ್ತಿಕ.

**ದಾನ ಇತಿ ಕಸ್ಮಿನ್ನೂದಾನಃ ಪ್ರತಿಷ್ಠಿತ ಇತಿ ಸಮಾನ ಇತಿ ಸ ಏಷ ನೇತಿನೇತ್ಯಾತ್ಮಾಗೃಹ್ಯೋ ನ ಹಿ ಗೃಹ್ಯತೇಽಶೀರ್ಯೋ ನ ಹಿ ಶೀರ್ಯತೇಽಸಙ್ಗೋ ನ ಹಿ ಸಜ್ಯತೇಽಸಿತೋ ನ ವ್ಯಥತೇ ನ ರಿಷ್ಯತಿ। ಏತಾನ್ಯಷ್ಟಾವಾಯತನಾನ್ಯಷ್ಟೌ ಲೋಕಾ ಅಷ್ಟೌ ದೇವಾ ಅಷ್ಟೌ ಪುರುಷಾಃ ಸ ಯಸ್ತಾನ್ ಪುರುಷಾನ್ನಿರುಹ್ಯ ಪ್ರತ್ಯುಹ್ಯಾತ್ಯಕ್ರಾಮತ್ ತಂ ತ್ವೌಪನಿಷದಂ ಪುರುಷಂ ಪೃಚ್ಛಾಮಿ ತಂ ಚೇನ್ಮೇ ನ ವಿವಕ್ಷ್ಯಸಿ ಮೂರ್ಧಾ ತೇ ವಿಪತಿಷ್ಯತೀತಿ। ತಗ್ಂ ಹ ನ ಮೇನೇ ಶಾಕಲ್ಯಸ್ತಸ್ಯ ಹ ಮೂರ್ಧಾ ವಿಪಪಾತಾಪಿ ಹಾಸ್ಯ ಪರಿಮೋಷಿಣೋಽಸ್ಥೀನ್ಯಪಜಹ್ರುರನ್ಯನ್ಮನ್ಯಮಾನಾಃ ॥**

೨೬. 'ನೀನೂ ಆತ್ಮವೂ ಏತರಲ್ಲಿ ಪ್ರತಿಷ್ಠಿತರಾಗಿರುವಿರೊ !' ಪ್ರಾಣದಲ್ಲಿ. 'ಪ್ರಾಣವು ಏತರಲ್ಲಿ ಪ್ರತಿಷ್ಠಿತವಾಗಿರುವದೊ !' ಅಪಾನದಲ್ಲಿ. 'ಅಪಾನವು ಏತರಲ್ಲಿ ಪ್ರತಿಷ್ಠಿತವಾಗಿರುವದೊ !' ವ್ಯಾನದಲ್ಲಿ. 'ವ್ಯಾನವು ಏತರಲ್ಲಿ ಪ್ರತಿಷ್ಠಿತವಾಗಿರುವದೊ !' ಉದಾನದಲ್ಲಿ. 'ಉದಾನವು ಏತರಲ್ಲಿ ಪ್ರತಿಷ್ಠಿತವಾಗಿರುವದೊ !' ಸಮಾನದಲ್ಲಿ. ಆ ಇವನೇ ನೇತಿ ನೇತಿ (ಹೀಗಲ್ಲ, ಹೀಗಲ್ಲ) ಎಂಬ ಆತ್ಮನು. ಅಗೃಹ್ಯನು, ಗ್ರಹಿಸಲ್ಪಡುವದಿಲ್ಲವಷ್ಟೆ ? ಅಶೀರ್ಯನು, ಸವೆಯುವದಿಲ್ಲವಷ್ಟೆ ? ಅಸಂಗನು, ಅಂಟಿಕೊಳ್ಳುವದಿಲ್ಲವಷ್ಟೆ ? ಅಸಿತನು, ವ್ಯಥೆಪಡುವದಿಲ್ಲ, ಹಿಂಸಿತನಾಗುವದಿಲ್ಲ. ಇವು ಎಂಟು ಆಯತನಗಳು, ಎಂಟು ಲೋಕಗಳು, ಎಂಟು ದೇವತೆಗಳು, ಎಂಟು ಪುರುಷರು. ಆ ಪುರುಷರನ್ನು ಯಾವನು ನಿರ್ವಹಿಸಿ ಪ್ರತಿವಹಿಸಿ ಅತಿಕ್ರಮಿಸಿರುವನೋ ಆ ಔಪನಿಷದಪುರುಷನನ್ನಾದರೆ ನಿನ್ನನ್ನು ಕೇಳುತ್ತಿದೇನೆ. ಅವನನ್ನು ನನಗೆ ವಿಸ್ಪಷ್ಟವಾಗಿ ಹೇಳದಿದ್ದರೆ ನಿನ್ನ ತಲೆಯು ಬೀಳುವದು ! ಆ (ಪುರುಷನನ್ನು) ಶಾಕಲ್ಯನು ಅರಿತಿರಲಿಲ್ಲ. ಅವನ ತಲೆಯು ಬಿದ್ದಿತು. ಅವನ ಅಸ್ಥಿಗಳನ್ನು ಕಳ್ಳರು ಮತ್ತೊಂದೆಂದು ತಿಳಿದು ಅಪಹರಿಸಿದರು.

## ಶರೀರಹೃದಯವಾಯುಗಳು ವಿಜ್ಞಾನಮಯಾರ್ಥ

(ಭಾಷ್ಯ)

೧೨೨. **ಹೃದಯಶರೀರಯೋಃ ಏವಮನ್ಯೋನ್ಯಪ್ರತಿಷ್ಠಾ ಉಕ್ತಾ ಕಾರ್ಯಕರಣಯೋಃ । ಅತಃ ತ್ವಾಂ ಪೃಚ್ಛಾಮಿ । ಕಸ್ಮಿನ್ನು ತ್ವಂ ಚ ಶರೀರಮ್**

ಆತ್ಮಾ ಚ ತವ ಹೃದಯಂ ಪ್ರತಿಷ್ಠಿತೌ ಸ್ಥಃ ಇತಿ। ಪ್ರಾಣೇ ಇತಿ। ದೇಹಾತ್ಮಾನೌ ಪ್ರಾಣೇ ಪ್ರತಿಷ್ಠಿತೌ ಸ್ಯಾತಾಂ ಪ್ರಾಣವೃತ್ತೌ। ಕಸ್ಮಿನ್ನು ಪ್ರಾಣಃ ಪ್ರತಿಷ್ಠಿತ ಇತಿ? ಅಪಾನ ಇತಿ। ಸಾಪಿ ಪ್ರಾಣವೃತ್ತಿಃ ಪ್ರಾಗೇವ ಪ್ರೇಯಾತ್ ಅಪಾನವೃತ್ತ್ಯಾ ಚೇನ್ನ ನಿಗೃಹ್ಯೇತ[1] ಕಸ್ಮಿನ್ನು ಅಪಾನಃ ಪ್ರತಿಷ್ಠಿತ ಇತಿ? ವ್ಯಾನೇ ಇತಿ। ಸಾಪಿ ಅಪಾನವೃತ್ತಿಃ ಅಧ ಏವ ಯಾಯಾತ್ ಪ್ರಾಣವೃತ್ತಿಶ್ಚ ಪ್ರಾಗೇವ ಮಧ್ಯಸ್ಥಯಾ ಚೇತ್ ವ್ಯಾನವೃತ್ತ್ಯಾ ನ ನಿಗೃಹ್ಯೇತ। ಕಸ್ಮಿನ್ನು ವ್ಯಾನಃ ಪ್ರತಿಷ್ಠಿತ ಇತಿ? ಉದಾನ ಇತಿ। ಸರ್ವಾಸ್ತಿಸ್ರೋಽಪಿ ವೃತ್ತಯಃ ಉದಾನೇ ಕೀಲಸ್ಥಾನೀಯೇ ಚೇತ್ ನ ನಿಬದ್ಧಾ ವಿಷ್ವಗ್ಜೇವ ಈಯುಃ। ಕಸ್ಮಿನ್ ನು ಉದಾನಃ ಪ್ರತಿಷ್ಠಿತ ಇತಿ? ಸಮಾನೇ ಇತಿ। ಸಮಾನಪ್ರತಿಷ್ಠಾ ಹ್ಯೇತಾಃ ಸರ್ವಾ ವೃತ್ತಯಃ। ಏತದುಕ್ತಂ ಭವತಿ। ಶರೀರಹೃದಯವಾಯವೋಽನ್ಯೋಽನ್ಯಪ್ರತಿಷ್ಠಾಃ ಸಂಘಾತೇನ ನಿಯತಾ ವರ್ತನ್ತೇ ವಿಜ್ಞಾನಮಯಾರ್ಥಪ್ರಯುಕ್ತಾಃ ಇತಿ॥

(ಭಾಷ್ಯಾರ್ಥ)

"ಹೃದಯ, ಶರೀರ– ಎಂಬ ಕಾರ್ಯಕರಣಗಳಿಗೆ ಹೀಗೆ ಅನ್ಯೋನ್ಯ ಪ್ರತಿಷ್ಠೆಯನ್ನು ಹೇಳಿದೆಯಷ್ಟೆ. ಆದ್ದರಿಂದ[2] ಶರೀರವಾದ ನೀನೂ ಆತ್ಮನೂ ಎಂದರೆ ನಿನ್ನ ಹೃದಯವೂ ಏತರಲ್ಲಿ ಪ್ರತಿಷ್ಠಿತರಾಗಿರುವಿರೊ!– ಎಂದು ನಿನ್ನನ್ನು ಕೇಳುತ್ತೇನೆ." ಪ್ರಾಣದಲ್ಲಿ. (ಈ) ದೇಹಾತ್ಮಗಳು ಪ್ರಾಣದಲ್ಲಿ, ಪ್ರಾಣವೃತ್ತಿಯಲ್ಲಿ ಪ್ರತಿಷ್ಠಿತವಾಗಿರಬಹುದು. "ಪ್ರಾಣವು ಏತರಲ್ಲಿ ಪ್ರತಿಷ್ಠಿತವಾಗಿದೆಯೊ!" ಅಪಾನದಲ್ಲಿ. ಆ ಪ್ರಾಣವೃತ್ತಿಯೂ ಅಪಾನವೃತ್ತಿಯಿಂದ ನಿಗೃಹೀತವಾಗದೆ ಇದ್ದರೆ ಮುಂದುಮುಂದಕ್ಕೇ ಹೋಗಿಬಿಡುತ್ತಿತ್ತು. "ಅಪಾನವು ಏತರಲ್ಲಿ ಪ್ರತಿಷ್ಠಿತವಾಗಿದೆಯೊ!" ವ್ಯಾನದಲ್ಲಿ. ನಡುವಿನ ವ್ಯಾನವೃತ್ತಿಯಿಂದ ನಿಗೃಹೀತವಾಗದೆ ಇದ್ದರೆ ಆ ಅಪಾನವೃತ್ತಿಯೂ ಕೆಳಕ್ಕೇ ಹೋಗಿಬಿಡುತ್ತಿತ್ತು, ಪ್ರಾಣವೃತ್ತಿಯೂ ಮುಂದಕ್ಕೇ ಹೋಗಿಬಿಡುತ್ತಿತ್ತು[3]. "ವ್ಯಾನವೃತ್ತಿಯು ಏತರಲ್ಲಿ ಪ್ರತಿಷ್ಠಿತವಾಗಿದೆಯೊ!" ಉದಾನದಲ್ಲಿ. (ಈ) ಮೂರು ವೃತ್ತಿಗಳೂ ಕೀಲಿನಂತಿರುವ ಉದಾನಕ್ಕೆ ಕಟ್ಟುಬೀಳದೆ ಇದ್ದಿದ್ದರೆ ಕಂಡಕಂಡಕಡೆಗೇ

---

1. ಆ॥ ವಾ॥ ಗಳಲ್ಲಿರುವ ಈ ಪಾಠವೇ ಮೇಲು.

2. ಹೀಗೆ ಒಂದಕ್ಕೊಂದು ಸಂಹತವಾಗಿರುವದು ಮತ್ತೊಂದರ ಆಶ್ರಯದಲ್ಲಿರಬೇಕಷ್ಟೆ, ಆದ್ದರಿಂದ.

3. ಪ್ರಾಣವು ಮುನ್ನಡೆಯ ಸ್ವಭಾವದ್ದು, ಅಪಾನವೃತ್ತಿಯು ಕೆಳಕ್ಕೆಳೆಯುವ ಸ್ವಭಾವದ್ದು. ಇವೆರಡೇ ಇದ್ದರೆ ಅಪಾನವು ಪ್ರಾಣವನ್ನೂ ಹಿಂಜಗ್ಗಬಹುದಾಗಿತ್ತು, ಅಥವಾ ಪ್ರಾಣವೇ ಬಲವಾದರೆ ಅಪಾನವನ್ನೂ ಎಳೆದುಕೊಂಡು ಹೋಗಬಹುದಾಗಿತ್ತು. ವ್ಯಾನವು ಈ ಎರಡು ಬಗೆಯ ಫಲವನ್ನೂ ತಪ್ಪಿಸಿರುತ್ತದೆ ಎಂದು ಭಾವ.

ಹೋಗಿಬಿಡುತ್ತಿದ್ದವು. "ಉ ದಾ ನ ವು ಏತರಲ್ಲಿ ಪ್ರತಿಷ್ಠಿತವಾಗಿದೆಯೊ!" ಸಮಾನದಲ್ಲಿ. ಈ ವೃತ್ತಿಗಳೆಲ್ಲ ಸಮಾನದಲ್ಲಿಯೇ ಪ್ರತಿಷ್ಠಿತವಾಗಿವೆಯಲ್ಲವೆ?

ಇಷ್ಟನ್ನು ಹೇಳಿದಂತೆ ಆಗಿದೆ. ಶರೀರ, ಹೃದಯ, ವಾಯು- (ಇವು) ಗಳು ಒಂದರಲ್ಲೊಂದು ಪ್ರತಿಷ್ಠಿತವಾಗಿ ಸಂಘಾತವಾಗಿ ನಿಯಮದಿಂದ ವಿಜ್ಞಾನ ಮಯನ ಪ್ರಯೋಜನಕ್ಕಾಗಿ ಪ್ರವರ್ತಿಸುತ್ತಿರುತ್ತವೆ.

## ಸರ್ವಕ್ಕೂ ಪ್ರತಿಷ್ಠಿತನಾದ ನಿರುಪಾಧಿಕಾತ್ಮ

(ಭಾಷ್ಯ)

೧೨೩. ಸರ್ವಮೇತತ್ ಯೇನ ನಿಯತಂ ಯಸ್ಮಿನ್ ಪ್ರತಿಷ್ಠಿತಮ್ ಆಕಾಶಾನ್ತಮ್ ಓತಂ ಪ್ರೋತಂ ಚ ತಸ್ಯ ನಿರುಪಾಧಿಕಸ್ಯ ಸಾಕ್ಷಾದಪರೋಕ್ಷಾದ್ ಬ್ರಹ್ಮಣೋ ನಿರ್ದೇಶಃ ಕರ್ತವ್ಯ ಇತ್ಯಯಮಾರಮ್ಭಃ। ಸ ಏಷಃ ಸ ಯಃ 'ನೇತಿ ನೇತಿ' (೨-೩-೬) ಇತಿ ನಿರ್ದಿಷ್ಟೋ ಮಧುಕಾಂಡೇ ಏಷ ಸಃ। ಸೋಽಯ ಮಾತ್ಮಾ ಅಗೃಹ್ಯಃ ನ ಗೃಹ್ಯಃ। ಕಥಮ್ ? ಯಸ್ಮಾತ್ ಸರ್ವಕಾರ್ಯಧರ್ಮಾ ತೀತಃ ತಸ್ಮಾದಗೃಹ್ಯಃ। ಕುತಃ ? ಯಸ್ಮಾದ್ ನ ಹಿ ಗೃಹ್ಯತೇ। ಯದ್ಧಿ ಕರಣ ಗೋಚರಂ ವ್ಯಾಕೃತಂ ವಸ್ತು ತದ್ ಗ್ರಹಣಗೋಚರಮ್। ಇದಂ ತು ತದ್ವಿಪರೀತಮ್ ಆತ್ಮತತ್ತ್ವಮ್। ತಥಾ ಅಶೀರ್ಯಃ। ಯದ್ ಹಿ ಮೂರ್ತಂ ಸಂಹತಂ ಶರೀರಾದಿ ತತ್ ಶೀರ್ಯತೇ। ಅಯಂ ತು ತದ್ವಿಪರೀತಃ। ಅತೋ ನ ಹಿ ಶೀರ್ಯತೇ। ತಥಾ ಅಸಙ್ಗಃ। ಮೂರ್ತೋ ಮೂರ್ತಾನ್ತರೇಣ ಸಂಬಧ್ಯ ಮಾನಃ ಸಜ್ಯತೇ। ಅಯಂ ಚ ತದ್ವಿಪರೀತಃ। ಅತೋ ನ ಹಿ ಸಜ್ಯತೇ। ತಥಾ ಅಸಿತಃ ಅಬದ್ಧಃ। ಯದ್ ಹಿ ಮೂರ್ತಂ ತದ್ ಬಧ್ಯತೇ। ಅಯಂ ತು ತದ್ವಿಪರೀತಃ।[1] ಅಬದ್ಧತ್ವಾತ್ ನ ವ್ಯಥತೇ। ಅತೋ ನ ರಿಷ್ಯತಿ। ಗ್ರಹಣ ವಿಶರಣಸಙ್ಗಬನ್ಧಕಾರ್ಯಧರ್ಮರಹಿತತ್ವಾತ್ ನ ರಿಷ್ಯತಿ। ನ ಹಿಂಸಾಮ್ ಆಪದ್ಯತೇ। ನ ವಿನಶ್ಯತಿ ಇತ್ಯರ್ಥಃ॥

(ಭಾಷ್ಯಾರ್ಥ)

ಇದೆಲ್ಲವೂ ಯಾವದರಿಂದ ಕಟ್ಟನಲ್ಲಿಡಲ್ಪಟ್ಟಿದೆಯೋ, ಏತರಲ್ಲಿಯೇ ಪ್ರತಿಷ್ಠಿತವಾಗಿರುತ್ತದೆಯೋ, ಆಕಾಶಾಂತವಾಗಿ (ಎಲ್ಲವೂ) ಓತಪ್ರೋತವಾಗಿ ದೆಯೋ, ಆ ನಿರುಪಾಧಿಕವಾದ ಸಾಕ್ಷಾದಪರೋಕ್ಷಬ್ರಹ್ಮವನ್ನು [2] ತಿಳಿಸ ಬೇಕೆಂದು ಇದನ್ನು ಪ್ರಾರಂಭಿಸಿರುತ್ತದೆ. ಆ ಇವನೇ ಮಧುಕಾಂಡದಲ್ಲಿ

---

1. ತದ್ವಿಪರೀತತ್ವಾತ್ ಎಂಬ ಪಾಠವಿದ್ದರೆ ಅಸಿತಃ ಎಂಬ ವಾ॥ ಪಾಠವನ್ನು ಅನು ಸರಿಸಬೇಕು.

2. ೩-೮-೧೧ರಲ್ಲಿರುವ ಅಕ್ಷರದಲ್ಲಿ ಆಕಾಶಾಂತವಾಗಿ ಎಲ್ಲವೂ ಓತಪ್ರೋತ ವಾಗಿದೆ. ಆದ್ದರಿಂದ ಅದನ್ನೇ ಇಲ್ಲಿ ತಿಳಿಸಬೇಕೆಂದು ಹೊರಟಿದೆ.

'ಹೀಗಲ್ಲ, ಹೀಗಲ್ಲ' (೨-೩-೬) ಎಂದು ತಿಳಿಸಿತ್ತಲ್ಲ, ಅವನೇ ಇವನು ಆ ಈ ಆತ್ಮನು ಅಗೃಹ್ಯನು[1], ಗೃಹ್ಯನಲ್ಲ, ಹೇಗೆ ? ಎಂದರೆ ಕಾರ್ಯಧರ್ಮಗಳನ್ನೆಲ್ಲ ಮೀರಿರುವನಲ್ಲವೆ, ಅದರಿಂದ ಅಗೃಹ್ಯನು. ಏಕೆ ? ಎಂದರೆ ಗೃಹೀತನಾಗದಿರುವ ದರಿಂದ, ಯಾವದು ಕರಣಗಳಿಗೆ ಗೋಚರವಾಗದಿರುವ ವ್ಯಾಕೃತ(ವಸ್ತುವೋ) ಅದು ಗ್ರಹಣಕ್ಕೆ ಗೋಚರವಾಗಿರುತ್ತದೆ. ಈ ಆತ್ಮತತ್ತ್ವವಾದರೋ ಅದಕ್ಕೆ ವಿಪರೀತವಾಗಿರುತ್ತದೆ. ಹೀಗೆಯೇ ಅಶೀರ್ಯನು, ಯಾವದು ಮೂರ್ತವಾಗಿ ಸಂಹತವಾಗಿರುತ್ತದೆಯೋ ಆ ಶರೀರವೇ ಮುಂತಾದದ್ದು ಸವೆಯುತ್ತದೆ ; ಆದರೆ ಇವನು ಅದಕ್ಕೆ ವಿಪರೀತನಾಗಿರುತ್ತಾನೆ, ಆದ್ದರಿಂದ ಸವೆಯುವದಿಲ್ಲ, ಹೀಗೆಯೇ ಅಸಂಗನು, ಮೂರ್ತವಾದದ್ದು ಮತ್ತೊಂದು ಮೂರ್ತಕ್ಕೆ ಸಂಬದ್ಧ ವಾದರೆ ಅಂಟಿಕೊಳ್ಳುತ್ತದೆ, ಆದರೆ ಇವನು ಅದಕ್ಕೆ ವಿಪರೀತನಾಗಿರುತ್ತಾನೆ. ಆದ್ದರಿಂದ ಅಂಟಿಕೊಳ್ಳುವದಿಲ್ಲ. ಇದರಂತೆ ಅಸಿತನು, ಬದ್ಧನಲ್ಲ ಯಾವದು ಮೂರ್ತವೋ ಅದು ಬದ್ಧವಾಗಿರುತ್ತದೆ. ಆದರೆ ಇವನು ಅದಕ್ಕೆ ವಿಪರೀತ ನಾಗಿರುತ್ತಾನೆ[2] ಅಬದ್ಧನಾಗಿರುವದರಿಂದ ವ್ಯಥೆಗೊಳ್ಳುವದಿಲ್ಲ. ಆದ್ದರಿಂದ ಹಿಂಸಿತನಾಗುವದಿಲ್ಲ, ಹಿಡಿಯುವದಕ್ಕಾಗುವದು ಸವೆಯುವದು, ಅಂಟಿಕೊಳ್ಳು ವದು, ಬದ್ಧನಾಗಿರುವದು– ಇವುಗಳ ಕಾರ್ಯವೆಂಬ ಧರ್ಮವಿಲ್ಲದವನಾದ್ದ ರಿಂದ ಹಿಂಸೆಯನ್ನು ಹೊಂದುವದಿಲ್ಲ, ನಾಶವಾಗುವದಿಲ್ಲ ಎಂದರ್ಥ.

## ಯಾಜ್ಞವಲ್ಕ್ಯನ ಪ್ರಶ್ನೆ: ಔಪನಿಷದಪುರುಷನು ಯಾರು ?

(ಭಾಷ್ಯ)

೧೨೪. ಕ್ರಮಮ್ ಅತಿಕ್ರಮ್ಯ ಔಪನಿಷದಸ್ಯ ಪುರುಷಸ್ಯ ಆಖ್ಯಾಯಿ ಕಾತೋಽಪಸೃತ್ಯ ಶ್ರುತ್ಯಾ ಸ್ವೇನ ರೂಪೇಣ ತ್ವರಯಾ ನಿರ್ದೇಶಃ ಕೃತಃ। ತತಃ ಪುನರಾಖ್ಯಾಯಿಕಾಮೇವ ಆಶ್ರಿತ್ಯ ಆಹ। ಏತಾನಿ ಯಾನಿ ಉಕ್ತಾನಿ ಅಷ್ಟಾವಾಯತನಾನಿ 'ಪೃಥಿವ್ಯೇವ ಯಸ್ಯಾಯತನಮ್' ಇತ್ಯೇವಮಾದೀನಿ ಅಷ್ಟೌ ಲೋಕಾಃ ಅಗ್ನಿಲೋಕಾದಯಃ, ಅಷ್ಟೌ ದೇವಾಃ 'ಅಮೃತಮಿತಿ ಹೋವಾಚ' (೩-೯-೧೦) ಇತ್ಯೇವಮಾದಯಃ। ಅಷ್ಟೌ ಪುರುಷಾಃ ಶಾರೀರಃ ಪುರುಷಃ ಇತ್ಯಾದಯಃ। ಸ ಯಃ ಕಶ್ಚಿತ್ ತಾನ್ ಪುರುಷಾನ್ ಶಾರೀರ ಪ್ರಭೃತೀನ್ ನಿರುಹ್ಯ ನಿಶ್ಚಯೇನ ಉಹ್ಯ ಗಮಯಿತ್ವಾ ಅಷ್ಟಚತುಷ್ಕಭೇದೇನ ಲೋಕಸ್ಥಿತಿಮ್ ಉಪಪಾದ್ಯ ಪುನಃ ಪ್ರಾಚೀದಿಗಾದಿದ್ವಾರೇಣ ಪ್ರತ್ಯುಹ್ಯ

1. ಆಕಾಶಾಂತವಾಗಿ ಓತಪ್ರೋತವಾಗಿದೆ ಎಂದು ಹಿಂದೆ ಹೇಳಿದೆ, ಈಗ ಶರೀರಾದಿ ಗಳು ಪ್ರತಿಷ್ಠಿತವಾಗಿವೆ ಎಂದು ವರ್ಣಿಸಿರುವ ಆತ್ಮನು ಎಂದರ್ಥ.

2. ಅಸಿತಃ ಎಂದೂ ಇದ್ದರೆ ವಿಪರೀತನಾಗಿರುವದರಿಂದ ಅಸಿತನು ಎಂದು ಅನುವಾದ

ಉಪಸಂಹೃತ್ಯ ಸ್ವಾತ್ಮನಿ ಹೃದಯೇ ಅತ್ಯಕ್ರಾಮತ್ ಅತಿಕ್ರಾನ್ತವಾನ್, ಉಪಾಧಿ ಧರ್ಮಂ ಹೃದಯಾದ್ಯಾತ್ಮತ್ವಂ ಸ್ವೇನೈವ ಆತ್ಮನಾ ವ್ಯವಸ್ಥಿತಃ ಯ ಔಪನಿಷದಃ ಪುರುಷಃ ಅಶನಾಯಾದಿವರ್ಜಿತಃ ಉಪನಿಷತ್ಸ್ವೇವ ವಿಜ್ಞೇಯಃ ನಾನ್ಯ ಪ್ರಮಾಣಗಮ್ಯಃ ತಂ ತ್ವಾ ತ್ವಾಂ ವಿದ್ಯಾಭಿಮಾನಿನಂ ಪುರುಷಂ ಪೃಚ್ಛಾಮಿ ತಂ ಚೇತ್ ಯದಿ ಮೇ ನ ವಿವಕ್ಷ್ಯಸಿ ವಿಸ್ಪಷ್ಟಂ ನ ಕಥಯಿಷ್ಯಸಿ ಮೂರ್ಧಾ ತೇ ವಿಪತಿಷ್ಯತಿ ಇತ್ಯಾಹ ಯಾಜ್ಞವಲ್ಕ್ಯಃ ॥

(ಭಾಷ್ಯಾರ್ಥ)

ಕ್ರಮವನ್ನು ಬಿಟ್ಟು ಆಖ್ಯಾಯಿಕೆಯಿಂದ ಹಿಂತಿರುಗಿ ಶ್ರುತಿಯು ತನ್ನ ರೂಪದಿಂದಲೇ ಔಪನಿಷದಪುರುಷನ ನಿರ್ದೇಶವನ್ನು ಮಾಡಿತು.[1] ಆ ಬಳಿಕ ಮತ್ತೆ ಆಖ್ಯಾಯಿಕೆಯನ್ನೇ ಆಶ್ರಯಿಸಿ ಹೇಳುತ್ತಿದೆ :[2] ಇವೇ ಎಂಟು ಆಯತನ ಗಳು, 'ಯಾವನಿಗೆ ಪೃಥಿವಿಯೇ ಆಯತನವೋ' (೩-೯-೧೦) ಎಂದು ಮುಂತಾಗಿ[3] ಹೇಳಿದವಲ್ಲ (ಅವು); ಎಂಟು ಲೋಕಗಳು, ಅಗ್ನಿಲೋಕವೇ ಮುಂತಾದವುಗಳು[4] : ಎಂಟು ದೇವತೆಗಳು, " 'ಅಮೃತವು' ಎಂದು (ಅವನು ಉತ್ತರವನ್ನು) ಹೇಳಿದನು" ಮುಂತಾದವು[5] , ಎಂಟು ಪುರುಷರು, 'ಶಾರೀರ ಪುರುಷನು' ಮುಂತಾದವರು.[6] ಯಾವನಾದರೆ ಶಾರೀರನೇ ಮುಂತಾದ ಆ ಪುರುಷರನ್ನು ನಿರ್ವಹಿಸಿ (ನಿಶ್ಚಯೇನ ಉಹ್ಯ) ನಿಶ್ಚಯದಿಂದ ವಹಿಸಿ ಸೇರಿಸಿ

---

1. ಇದನ್ನು ಪ್ರಶ್ನೆಗೇ ಸೇರಿಸಿಕೊಳ್ಳಬಹುದೆಂದೂ ಶಾಕಲ್ಯನ ಪ್ರಶ್ನೆಯು ಸಮಾನ ವ್ಯಾಸಂಗದಿಂದಿರುವ ಬ್ರಹ್ಮವನ್ನು ಕುರಿತದ್ದಾಗಿರಲು ಯಾಜ್ಞವಲ್ಕ್ಯನು ಐಕಾತ್ಮ್ಯವನ್ನು ಕುರಿತ ಪ್ರಶ್ನೆಯನ್ನು ಕೇಳಿದನೆಂದೂ ಕಲ್ಪಿಸಿ ಹೀಗಾದರೇ ಶಾಸ್ತ್ರಾರ್ಥವು ಸಂಬದ್ಧವಾಗುವ ದೆಂದು ವ್ಯಾಖ್ಯಾನಾಂತರವನ್ನು ವಾರ್ತಿಕದಲ್ಲಿ ಬರೆದಿದೆ.

2. ಮೊದಲು ಶ್ರುತಿಯಾಗಿ ಹೇಳಿತ್ತು, ಈಗ ಯಾಜ್ಞವಲ್ಕ್ಯರೂಪದಿಂದ ಹೇಳು ತ್ತಿದೆ. ಶ್ರುತಿಯು ವಿಷಯಪ್ರತಿಪಾದನೆಗಾಗಿ ಯಾಜ್ಞವಲ್ಕ್ಯಶಾಕಲ್ಯಾದಿರೂಪವನ್ನು ಧರಿಸಿಕೊಂಡು ಮಾತಾಡುತ್ತಿದೆ ಎಂದು ಭಾವ.

3 ಪೃಥಿವಿ, ಕಾಮ, ರೂಪಸಾಮಾನ್ಯ, ಆಕಾಶ, ತಮಸ್ಸು, ಪ್ರಕಾಶಕರೂಪಗಳು, ಅಪ್ಪು, ರೇತಸ್ಸು- ಎಂಬ ಎಂಟು ಆಯತನಗಳು.

4. ಅಗ್ನಿ, ಹೃದಯ, ಚಕ್ಷುಸ್ಸು, ಶ್ರೋತ್ರ, ಹೃದಯ, ಚಕ್ಷುಸ್ಸು, ಹೃದಯ, ಹೃದಯ- ಎಂಬ ಎಂಟು ಲೋಕಗಳು ಎಂದರೆ ನೋಡುವದಕ್ಕೆ ಕರಣಗಳು.

5. ಅಮೃತ, ಸ್ತ್ರೀಯರು, ಸತ್ಯ, ದಿಶ, ಮೃತ್ಯು, ಅಸು, ವರುಣ, ಪ್ರಜಾಪತಿ- ಎಂಬ ಎಂಟು ದೇವತೆಗಳು ಎಂದರೆ ನಿಷ್ಪತ್ತಿಕಾರಣಗಳು.

6. ಶಾರೀರಪುರುಷ, ಕಾಮಮಯಪುರುಷ, ಆದಿತ್ಯಪುರುಷ, ಪ್ರಾತಿಶ್ರುತ್ಕಪುರುಷ, ಛಾಯಾ(ಅಜ್ಞಾನ)ಮಯಪುರುಷ, ಆದರ್ಶಪುರುಷ, ಅಪ್ಪುರುಷ, ಪುತ್ರಮಯಪುರುಷ- ಎಂಬ ಎಂಟು ವಿಶೇಷರೂಪದ ಪುರುಷರು.

ಎಂಟು ಚತುಷ್ಕಗಳ ಭೇದದಿಂದ ಲೋಕಸ್ಥಿತಿಯನ್ನು ಏರ್ಪಡಿಸಿ[1], ಮತ್ತೆ ಪ್ರಾಚೀದಿಕ್ಕೇ ಮುಂತಾದವುಗಳ ದ್ವಾರದಿಂದ ಪ್ರತಿವಹಿಸಿ ತನ್ನ ಆತ್ಮನಾದ ಹೃದಯದಲ್ಲಿ ಉಪಸಂಹಾರಮಾಡಿಕೊಂಡು[2] ಅತಿಕ್ರಮಿಸಿರುವನೋ ಉಪಾಧಿ ಧರ್ಮವಾದ ಹೃದಯಾದ್ಯಾತ್ಮಭಾವವನ್ನು ಮೀರಿ ತನ್ನ ಸ್ವರೂಪದಿಂದಲೇ ಇರುವ **ಔಪನಿಷದಪುರುಷನಿದಾನಲ್ಲ, ಹಸಿವು ಮುಂತಾದವುಗಳಿಲ್ಲದ ಉಪನಿಷತ್ತುಗಳಲ್ಲಿಯೇ ತಿಳಿಯಬರುವವನೇ ಹೊರತು ಮತ್ತೊಂದು ಪ್ರಮಾಣದಿಂದ ತಿಳಿಯಬರುವಂತಿಲ್ಲವಲ್ಲ,**[3] ಆ ಪುರುಷನನ್ನು ಕುರಿತು ವಿದ್ಯಾಭಿಮಾನಿಯಾದ (ತ್ವಾ=ತ್ವಾಮ್) ನಿನ್ನನ್ನು ಕೇಳುತ್ತಿದೇನೆ. ಅವನನ್ನು ನನಗೆ (ನ ವಿವಕ್ಷ್ಯಸಿ=ವಿಸ್ಪಷ್ಟಂ ನ ಕಥಯಿಷ್ಯಸಿ) ವಿಸ್ಪಷ್ಟವಾಗಿ ಹೇಳಲಾರೆ ಯಾದರೆ ನಿನ್ನ ತಲೆಯು ಬೀಳಲಿ! ಎಂದು ಯಾಜ್ಞವಲ್ಕ್ಯನು ನುಡಿದನು.[4]

## ಬ್ರಹ್ಮಜ್ಞಾನಿಯೊಡನೆ ಚರ್ಚಿಸಿದ ಅಪರಾಧದ ದುಷ್ಪರಿಣಾಮ

(ಭಾಷ್ಯ)

೧೨೫. ತಂ ತು ಔಪನಿಷದಂ ಪುರುಷಂ ಶಾಕಲ್ಯೋ ನ ಮೇನೇ ಹ ನ ವಿಜ್ಞಾತವಾನ್ ಕಿಲ। ತಸ್ಯ ಹ ಮೂರ್ಧಾ ವಿಪಪಾತ ವಿಪತಿತಃ। ಸಮಾಪ್ತಾ ಆಖ್ಯಾಯಿಕಾ। ಶ್ರುತೇರ್ವಚನಂ 'ತಂ ಹ ನ ಮೇನೇ' ಇತ್ಯಾದಿ। ಕಿಂ ಚ ಅಪಿ ಹಾಸ್ಯ ಪರಿಮೋಷಿಣಸ್ತಸ್ಕರಾಃ ಅಸ್ಥೀನ್ಯಪಿ ಸಂಸ್ಕಾರಾರ್ಥಂ ಶಿಷ್ಯೈರ್ನೀಯ ಮಾನಾನಿ ಗೃಹಾನ್ ಪ್ರತಿ ಅಪಜಹ್ರುಃ ಅಪಹೃತವನ್ತಃ। ಕಿಂನಿಮಿತ್ತಮ್ ? ಅನ್ಯದ್ ಧನಂ ನೀಯಮಾನಂ ಮನ್ಯಮಾನಾಃ। ಪೂರ್ವವೃತ್ತಾ ಹಿ ಆಖ್ಯಾಯಿಕಾ ಇಹ ಸೂಚಿತಾ। ಅಷ್ಟಾಧ್ಯಾಯ್ಯಾಂ ಕಿಲ ಶಾಕಲ್ಯೇನ ಯಾಜ್ಞ

---

1. ಆಯತನಾದಿಚತುಷ್ಕಗಳು ಎಂಟರಿಂದ ಜಗತ್ತಿನ ಸ್ಥಿತಿಯು ಉಪಪನ್ನ ವಾಗಿರುತ್ತದೆ.

2. ಬಾಹ್ಯಜಗತ್ತನ್ನೆಲ್ಲ ಐದು ಪಂಗಡವಾಗಿ ವಿಂಗಡಿಸಿ ದಿಕ್ಕು, ದೇವತೆ– ಎಲ್ಲವನ್ನೂ ಹೃದಯದಲ್ಲಿ ಉಪಸಂಹಾರಮಾಡಿಕೊಂಡು.

3. ಎಲ್ಲರ ಆತ್ಮನಾಗಿರುವ ಸರ್ವಸಾಕ್ಷಿಯಾದ ಪರಮಾತ್ಮನನ್ನು ಉಪನಿಷತ್ತಿನಿಂದ ಮಾತ್ರ ತಿಳಿದುಕೊಳ್ಳಬಹುದು. ಸೂ. ಭಾ. ೧–೧–೪ (ಭಾ. ಭಾ. ೫೪).

4. ಬ್ರಹ್ಮಜ್ಞಾನಿಯಾದವನಿಗೆಂದೇ ಗೋಧನವನ್ನು ರಾಜನು ಇಡಿಸಿರುತ್ತಾನೆ ; ಆದ್ದರಿಂದ ಬ್ರಹ್ಮಿಷ್ಠನಾದ ನಿನಗೆ ಪ್ರಶ್ನೆಮಾಡುವ ಅಧಿಕಾರವಿಲ್ಲ ಎಂದು ಸ್ಪಷ್ಟಗೊಳಿಸುವದ ಕ್ಕಾಗಿ ಯಾಜ್ಞವಲ್ಕ್ಯನು ಈ ಪ್ರಶ್ನೆಯನ್ನು ಮಾಡಿರುತ್ತಾನೆ– ಎಂದು ವಾರ್ತಿಕ. ಶಾಪವನ್ನು ಕೊಡುವ ಮುಂಚೆ ಶಾಕಲ್ಯನು ಅಪರಾಧಿ ಎಂಬುದನ್ನು ಈ ಪ್ರಶ್ನೆಯ ಮೂಲಕ ಸಾಧಿಸಿ ಕೊಟ್ಟಂತೆ ಆಯಿತೆಂದು ಭಾವ.

ವಲ್ಕ್ಯಸ್ಯ ಸಮಾನಾನ್ತ ಏವ ಕಿಲ ಸಂವಾದೋ ನಿರ್ವೃತ್ತಃ। ತತ್ರ ಯಾಜ್ಞವಲ್ಕ್ಯೇನ ಶಾಪೋ ದತ್ತಃ। "ಪುರೇ ತಿಥ್ಯೇ[1] ಮರಿಷ್ಯಸಿ ನ ತೇಽಸ್ಥೀನಿ ಚ ನ ಗೃಹಾನ್ ಪ್ರಾಪ್ಸ್ಯನ್ತೀತಿ ಸ ಹ[2] ತಥೈವ ಮಮಾರ। ತಸ್ಯ ಹಾಪ್ಯನ್ಯನ್ಮನ್ಯಮಾನಾಃ ಪರಿಮೋಷಿಣೋಽಸ್ಥೀನ್ಯಪಜಹ್ರುಃ। ತಸ್ಮಾನ್ನೋಪವಾದೀ ಸ್ಯಾದುತ ಹ್ಯೇವಂವಿತ್ಪರೋ ಭವತಿ" (ಶತ. ಬ್ರಾ. ೧೧-೬-೩-೧೧)। ಸೈಷಾ ಆಖ್ಯಾಯಿಕಾ ಆಚಾರಾರ್ಥಂ ಸೂಚಿತಾ ವಿದ್ಯಾಸ್ತುತಯೇ ಚೇಹ ॥

(ಭಾಷ್ಯಾರ್ಥ)

ಆದರೆ ಆ ಔಪನಿಷದಪುರುಷನನ್ನು ಶಾಕಲ್ಯನು ತಿಳಿದಿರಲಿಲ್ಲ, ಅರಿತುಕೊಂಡಿರಲಿಲ್ಲ. ಅವನ ತಲೆಯು ಬಿದ್ದುಹೋಯಿತು, ಬಿದ್ದದ್ದಾಯಿತು. (ಇಲ್ಲಿಗೆ) ಕಥೆಯು ಮುಗಿಯಿತು. 'ಆ (ಔಪನಿಷದಪುರುಷ)ನನ್ನು ತಿಳಿದಿರಲಿಲ್ಲ' ಎಂದು ಮುಂತಾಗಿರುವದು ಶ್ರುತಿಯ ಮಾತು. ಮತ್ತು ಇವನ ಎಲುಬುಗಳನ್ನು ಕೂಡ ಕಳ್ಳರು ಕಳುವವರು ಸಂಸ್ಕಾರಕ್ಕಾಗಿ ಶಿಷ್ಯರು ಮನೆಗೆ ಒಯ್ಯುತ್ತಿರುವಲ್ಲಿ ಕದ್ದೊಯ್ದರು, ಕದ್ದೊಯ್ಯುವವರಾದರು. ಏತಕ್ಕಾಗಿ? ಮತ್ತೊಂದನ್ನು, ಧನವನ್ನು ತೆಗೆದುಕೊಂಡು ಹೋಗುತ್ತಿದಾರೆಂದು ಬಗೆದವರಾಗಿ (ಕದ್ದೊಯ್ದರು).

ಇಲ್ಲಿ ಹಿಂದೆ ನಡೆದಿರುವ ಕಥೆಯನ್ನೇ ಸೂಚಿಸಿರುತ್ತದೆ. **ಅಷ್ಟಾಧ್ಯಾಯಿಯಲ್ಲಿ** ಶಾಕಲ್ಯನೊಡನೆ ಯಾಜ್ಞವಲ್ಕ್ಯನಿಗೆ ಇದೇ ಬಗೆಯ ಪರ್ಯವಸಾನದ ಸಂವಾದವು ನಡೆದಿತ್ತು[3]. ಅಲ್ಲಿ ಯಾಜ್ಞವಲ್ಕ್ಯನು (ಹೀಗೆಂದು) ಶಾಪವನ್ನು ಕೊಟ್ಟನು[4]. "ನಾಳೆ ತಿಥಿಯೊಳಗಾಗಿಯೇ[5] ಸಾಯುವೆ! ನಿನ್ನ ಅಸ್ಥಿಗಳು

---

1. 'ಪುರೇತಿಥ್ಯೈ' ಎಂದು ಶತ. ಬ್ರಾ. ಮೂಲದಲ್ಲಿ ಪಾಠವಿದೆ; ಭಾಷ್ಯಕಾರರೂ ಹಾಗೆಯೇ ಬರೆದಿದ್ದರೋ ಇಲ್ಲವೋ ತಿಳಿಯದು. ಅನುವಾದವನ್ನು ನೋಡಿ.

2. ಮೂಲದಲ್ಲಿರುವ ಹ ಶಬ್ದವು ಆ॥ ಪಾಠದಲ್ಲಿ ಬಿಟ್ಟುಹೋಗಿದೆ.

3. ಅಲ್ಲಿ ದೇವತೆಗಳ ವಿಷಯದ ವಿವರವನ್ನು ಮಾತ್ರ ಶಾಕಲ್ಯನು ಕೇಳಿರುತ್ತಾನೆ.

4. 'ಅನತಿಪ್ರಶ್ನ್ಯವಾದ ಪ್ರಾಣದೇವತೆಯನ್ನು ಕುರಿತು ಕೇಳಿದೆಯಾದ್ದರಿಂದ ನೀನು ಸಾಯುವೆ' ಎಂದು ಅಲ್ಲಿ ಶಾಪವಿದೆ.

5. ಪುರೋತಿಥ್ಯೈ ಎಂಬುದು ಪಂಚಮ್ಯರ್ಥದ ಚತುರ್ಥಿ ಎಂದು ಸಾಯಣಭಾಷ್ಯ. ನಾಳೆಯ ತಿಥಿಯು ಹುಟ್ಟುವ ಮುಂಚೆ ಎಂದು ಅದಕ್ಕೆ ಅರ್ಥವನ್ನು ಅವರು ಬರೆದಿರುವದನ್ನೇ ಇಲ್ಲಿ ನಾವೂ ಅನುಸರಿಸಿದೇವೆ. ಪುರೇ ಅತಿಥ್ಯೇ ಎಂಬ ಸಪ್ತಮೀಪಾಠವನ್ನು ಸ್ವೀಕರಿಸಿ ಪುಣ್ಯಕ್ಷೇತ್ರಾತಿರಿಕ್ತದೇಶದಲ್ಲಿ ಪುಣ್ಯತಿಥಿಶೂನ್ಯವಾದ ಕಾಲದಲ್ಲಿ ಎಂದು ಆ॥ ವ್ಯಾಖ್ಯಾನದಲ್ಲಿ ಅರ್ಥಮಾಡಿದೆ. ಆದರೆ ಸಾಯಣಭಾಷ್ಯದಲ್ಲಿ ಪಾಠಾಂತರದ ಸೂಚನೆಯೇನೂ ಇಲ್ಲ.

ಕೂಡ ಮನೆಗೆ ಸೇರುವದಿಲ್ಲ!" ಅವನು ಹಾಗೆಯೇ ಸತ್ತನು. ಅವನ ಅಸ್ಥಿಗಳನ್ನು ಕಳ್ಳರು ಮತ್ತೊಂದು (ವಸ್ತುವೆಂದು) ಬಗೆದು ಕದ್ದೊಯ್ದರು. ಆದ್ದರಿಂದ ಉಪವಾದಿಯಾಗಬಾರದು. ಇಂಥ ತಿಳಿದವನೂ ಶತ್ರುವಾಗುತ್ತಾನೆ[1]" (ಶತ. ಬ್ರಾ. ೧೧-೬-೩-೧೧) ಆ ಈ ಕಥೆಯನ್ನು ಆಚಾರಕ್ಕಾಗಿಯೂ ವಿದ್ಯೆಯನ್ನು ಹೊಗಳುವದಕ್ಕಾಗಿಯೂ[2] ಇಲ್ಲಿ ಹೇಳಿರುತ್ತದೆ.

## ಯಾಜ್ಞವಲ್ಕ್ಯನು ಬ್ರಾಹ್ಮಣರನ್ನು ಪ್ರಶ್ನಿಸಿದ್ದು

(ಉಪನಿಷತ್ತು)

**ಅಥ ಹೋವಾಚ ಬ್ರಾಹ್ಮಣಾ ಭಗವನ್ತೋ ಯೋ ವಃ ಕಾಮಯತೇ ಸ ಮಾ ಪೃಚ್ಛತು ಸರ್ವೇ ವಾ ಮಾ ಪೃಚ್ಛತ ಯೋ ವಃ ಕಾಮಯತೇ ತಂ ವಃ ಪೃಚ್ಛಾಮಿ ಸರ್ವಾನ್ ವಾ ವಃ ಪೃಚ್ಛಾಮೀತಿ ತೇ ಹ ಬ್ರಾಹ್ಮಣಾ ನ ದಧೃಷುಃ ॥ ೨೭ ॥**

೨೭. ಆಗ ಇಂತೆಂದನು: "ಭಗವಂತರಾದ ಬ್ರಾಹ್ಮಣರೆ, ನಿಮ್ಮಲ್ಲಿ ಯಾವನು ಇಚ್ಛಿಸುತ್ತಾನೋ ಅವನು ನನ್ನನ್ನು ಕೇಳಲಿ! ಅಥವಾ ಎಲ್ಲರೂ ನನ್ನನ್ನು ಕೇಳಿರಿ! ನಿಮ್ಮಲ್ಲಿ ಯಾವನು ಇಚ್ಛಿಸುತ್ತಾನೋ ನಿಮ್ಮಲ್ಲಿ ಅವನನ್ನು ಕೇಳುವೆನು, ಅಥವಾ ನಿಮ್ಮೆಲ್ಲರನ್ನೂ ಕೇಳುವೆನು!" ಆ ಬ್ರಾಹ್ಮಣರು ಎದೆಗಾರರಾಗಲಿಲ್ಲ.

## ಮುಂದಿನ ಗ್ರಂಥದ ಸಂಬಂಧ

(ಭಾಷ್ಯ)

೧೨೭. ಯಸ್ಯ ನೇತಿನೇತೀತಿ ಅನ್ಯಪ್ರತಿಷೇಧದ್ವಾರೇಣ ಬ್ರಹ್ಮಣೋ ನಿರ್ದೇಶಃ ಕೃತಃ, ತಸ್ಯ ವಿಧಿಮುಖೇನ ಕಥಂ ನಿರ್ದೇಶಃ ಕರ್ತವ್ಯಃ ಇತಿ ಪುನರಾಖ್ಯಾಯಿಕಾಮೇವ ಆಶ್ರಿತ್ಯ ಆಹ, ಮೂಲಂ ಚ ಜಗತೋ ವಕ್ತವ್ಯಮಿತಿ।

---

1. 'ಉತ ಹ್ಯೇವಂವಿತ್ಪರೋ ಭವತಿ' ಎಂಬುದು ಜಲ್ಪವಾದಿಯಾದ ಉಪವಾದಿಯಾಗಬಾರದು ಎಂಬುದರ ವ್ಯಾಖ್ಯಾನ, (ಹೀಗೆ ತಿಳಿದಿರುವವನಲ್ಲಿ ತಾತ್ಪರ್ಯದಿಂದ ಸೇವೆಯನ್ನು ಮಾಡಬೇಕು ಎಂದು ಅಭಿಪ್ರಾಯ) ಎಂದು ಆ॥ಟೀ॥ ಇದು ಸಾಯಣಭಾಷ್ಯಾನುಸಾರಿ. ನಾವು ವಾರ್ತಿಕವನ್ನು (೧೨೪,೧೨೯) ಅನುಸರಿಸಿ 'ಉಪವಾದಿಗೆ ಇಂಥ ಜ್ಞಾನಿಯೂ ಶತ್ರುವಾಗುತ್ತಾನೆ' ಎಂಬ ಅರ್ಥವನ್ನು ತೆಗೆದಿದ್ದೇವೆ; ವ್ಯಾಖ್ಯಾನಕಾರರೂ ವಾರ್ತಿಕಕ್ಕೆ ಇದೇ ಅರ್ಥವನ್ನು ಬರೆದಿದ್ದಾರೆ.

2. ದೊಡ್ಡವರೊಡನೆ ಜಲ್ಪವಿತಂಡಾವಾದಗಳನ್ನು ಹೂಡಬಾರದೆಂಬುದು ಆಚಾರ; ಬ್ರಹ್ಮಜ್ಞಾನಿಯೊಡನೆ ಸ್ಪರ್ಧಿಸುವವರಿಗೆ ಇಹಪರಗಳು ತಪ್ಪಿಹೋಗುವವು ಎಂಬುದು ವಿದ್ಯಾಸ್ತುತಿ.

ಆಖ್ಯಾಯಿಕಾಸಂಬನ್ಧಸ್ತು ಅಬ್ರಹ್ಮವಿದೋ ಬ್ರಾಹ್ಮಣಾನ್ ಜಿತ್ವಾ ಗೋಧನಂ ಹರ್ತವ್ಯಮ್ ಇತಿ ನ್ಯಾಯಂ ಮತ್ವಾ ಆಹ ॥

(ಭಾಷ್ಯಾರ್ಥ)

ಯಾವ ಬ್ರಹ್ಮಕ್ಕೆ "ಹೀಗಲ್ಲ, ಹೀಗಲ್ಲ" ಎಂದು ಮತ್ತೊಂದನ್ನು ಅಲ್ಲಗಳೆಯುವ ಮೂಲಕ ನಿರ್ದೇಶವನ್ನು ಮಾಡಲಾಯಿತೋ, ಅದನ್ನು ವಿಧಿಮುಖವಾಗಿ ನಿರ್ದೇಶಮಾಡಿ (ತಿಳಿಸುವದು) ಹೇಗೆ? (ಎಂಬುದನ್ನು ತಿಳಿಸುವದಕ್ಕಾಗಿಯೂ) ಜಗತ್ತಿನ ಮೂಲವನ್ನು ಹೇಳುವದಕ್ಕಾಗಿಯೂ ಮತ್ತೆ ಆಖ್ಯಾಯಿಕೆಯನ್ನೇ ಆಶ್ರಯಿಸಿ (ಶ್ರುತಿ) ಹೇಳುತ್ತಿದೆ. ಆದರೆ ಆಖ್ಯಾಯಿಕೆಯ ಸಂಬಂಧವೇನೆಂದರೆ, ಬ್ರಹ್ಮಜ್ಞಾನಿಗಳಲ್ಲದ (ಆ) ಬ್ರಾಹ್ಮಣರನ್ನು ಗೆದ್ದೇ ಗೋಧನವನ್ನು ತೆಗೆದುಕೊಳ್ಳಬೇಕೆಂಬುದು ನ್ಯಾಯವೆಂದು ತಿಳಿದು[1] ಹೀಗೆನ್ನುತ್ತಿದಾನೆ :

## ಯಾಜ್ಞವಲ್ಕ್ಯನು ಬ್ರಾಹ್ಮಣರನ್ನು ವಾದಕ್ಕೆ ಕರೆದದ್ದು

(ಭಾಷ್ಯ)

೧೨೭. ಅಥ ಹೋವಾಚ । ಅಥ ಅನನ್ತರಂ ತೂಷ್ಣೀಂಭೂತೇಷು ಬ್ರಾಹ್ಮಣೇಷು ಹೋವಾಚ । ಹೇ ಬ್ರಾಹ್ಮಣಾ ಭಗವನ್ತಃ ಇತ್ಯೇವಂ ಸಂಬೋಧ್ಯ । ಯೋ ವೋ ಯುಷ್ಮಾಕಂ ಮಧ್ಯೇ ಕಾಮಯತೇ ಇಚ್ಛತಿ ಯಾಜ್ಞವಲ್ಕ್ಯಂ ಪೃಚ್ಛಾಮಿ ಇತಿ ಸ ಮಾ ಮಾಮ್ ಆಗತ್ಯ ಪೃಚ್ಛತು । ಸರ್ವೇ ವಾ ಮಾ ಪೃಚ್ಛತ । ಸರ್ವೇ ವಾ ಯೂಯಂ ಮಾ ಮಾಂ ಪೃಚ್ಛತ । ಯೋ ವಃ ಕಾಮಯತೇ ಯಾಜ್ಞವಲ್ಕ್ಯೋ ಮಾಂ ಪೃಚ್ಛತು ಇತಿ ತಂ ವಃ ಪೃಚ್ಛಾಮಿ ಸರ್ವಾನ್ ವಾ ವೋ ಯುಷ್ಮಾನ್ ಅಹಂ ಪೃಚ್ಛಾಮಿ । ತೇ ಹ ಬ್ರಾಹ್ಮಣಾ ನ ದಧೃಷುಃ । ತೇ ಬ್ರಾಹ್ಮಣಾ ಏವಮುಕ್ತಾ ಅಪಿ ನ ಪ್ರಗಲ್ಭಾಃ ಸಂವೃತ್ತಾಃ ಕಿಂಚಿದಪಿ ಪ್ರತ್ಯುತ್ತರಂ ವಕ್ತುಮ್ ॥

(ಭಾಷ್ಯಾರ್ಥ)

ಆಗ ಇಂತೆಂದನು: ಆಗ ಬಳಿಕ ಬ್ರಾಹ್ಮಣರು ಸುಮ್ಮನಾಗಲು "ಎಲೈ ಭಗವಂತರಾದ ಬ್ರಾಹ್ಮಣರೆ, ಎಂದು (ಅವರನ್ನು) ಕರೆದು ಇಂತೆಂದನು. (ವಃ = ಯುಷ್ಮಾಕಂ ಮಧ್ಯೇ) ನಿಮ್ಮಗಳಲ್ಲಿ ಯಾವನು ಇಚ್ಛಿಸುತ್ತಾನೋ, ಯಾಜ್ಞವಲ್ಕ್ಯನನ್ನು ಪ್ರಶ್ನಿಸುವೆನು ಎಂದು ಇಚ್ಛಿಸುತ್ತಾನೋ, ಅವನು (ಮಾ = ಮಾಮ್) ನನ್ನನ್ನು ಬಂದು ಕೇಳಲಿ! ಅಥವಾ ಎಲ್ಲರೂ ನನ್ನನ್ನು

---

1. ಈ ಬ್ರಾಹ್ಮಣರು ಬ್ರಹ್ಮಜ್ಞಾನಿಗಳೆಂದು ಅಭಿಮಾನಪಡುತ್ತಿರುವರೇ ಹೊರತು ನಿಜವಾಗಿ ಅವರು ಬ್ರಹ್ಮಜ್ಞಾನಿಗಳಲ್ಲ –ಎಂದು ತೋರಿಸಿಕೊಟ್ಟೇ ಪಣವನ್ನು ಸ್ವೀಕರಿಸುವದು ಯುಕ್ತವೆಂದುಕೊಂಡು ಎಂದರ್ಥ.

ಕೇಳಿರಿ, ನೀವೆಲ್ಲರೂ ನನ್ನನ್ನು ಪ್ರಶ್ನಿಸಿರಿ! ನಿಮ್ಮಗಳಲ್ಲಿ ಯಾವನು ಇಚ್ಛಿಸುತ್ತಾನೋ, ಯಾಜ್ಞವಲ್ಕ್ಯನು ನನ್ನನ್ನು ಕೇಳಲಿ ಎಂದು (ಇಚ್ಛಿಸುತ್ತಾನೊ) ನಿಮ್ಮಲ್ಲಿ ಅವನನ್ನು ಕೇಳುತ್ತೇನೆ, ಅಥವಾ ನಿಮ್ಮೆಲ್ಲರನ್ನೂ ಕೇಳುತ್ತೇನೆ" (ಎಂದನು). ಆ ಬ್ರಾಹ್ಮಣರು ಎದೆಗಾರರಾಗಲಿಲ್ಲ, ಹೀಗೆಂದು (ಯಾಜ್ಞವಲ್ಕ್ಯನು ಹೇಳಿದರೂ ಆ ಬ್ರಾಹ್ಮಣರು ಯಾವದೊಂದು ಪ್ರತ್ಯುತ್ತರವನ್ನು ಹೇಳುವದಕ್ಕೂ ದಿಟ್ಟರಾಗಲಿಲ್ಲ.

## ಪ್ರಶ್ನೆ: ಜಗತ್ತಿಗೆ ಮೂಲವು ಯಾವದು?

(ಉಪನಿಷತ್ತು)

**ತಾನ್ ಹೈತೈಃ ಶ್ಲೋಕೈಃ ಪಪ್ರಚ್ಛ —**
**ಯಥಾ ವೃಕ್ಷೋ ವನಸ್ಪತಿಸ್ತಥೈವ ಪುರುಷೋಽಮೃಷಾ ।**
**ತಸ್ಯ ಲೋಮಾನಿ ಪರ್ಣಾನಿ ತ್ವಗಸ್ಯೋತ್ಪಾಟಿಕಾ ಬಹಿಃ ॥ ೧ ॥**

ಅವರನ್ನು ಈ ಶ್ಲೋಕಗಳ ಮೂಲಕವಾಗಿ ಕೇಳಿದನು:

(೧) ಹೇಗೆ ವನಸ್ಪತಿವೃಕ್ಷ(ವಿರುವದೋ) ಹಾಗೆಯೇ ಪುರುಷನು, ಸುಳ್ಳಲ್ಲ. ಅವನ ಮೈಗೂದಲುಗಳೇ (ಅದರ) ಎಲೆಗಳು, ಇವನ ಚರ್ಮವೇ (ಅದರ) ಹೊರಚಕ್ಕೆ.

## ಮನುಷ್ಯನು ವೃಕ್ಷದಂತೆ

(ಭಾಷ್ಯ)

೧-೨೮. ತೇಷು ಅಪ್ರಗಲ್ಭಭೂತೇಷು ಬ್ರಾಹ್ಮಣೇಷು ತಾನ್ ಹ ಏತೈಃ ವಕ್ಷ್ಯಮಾಣೈಃ ಶ್ಲೋಕೈಃ ಪಪ್ರಚ್ಛ ಪೃಷ್ಟವಾನ್ । ಯಥಾ ಲೋಕೇ ವೃಕ್ಷೋ ವನಸ್ಪತಿಃ । ವೃಕ್ಷಸ್ಯ ವಿಶೇಷಣಂ ವನಸ್ಪತಿರಿತಿ । ತಥೈವ ಪುರುಷಃ ಅಮೃಷಾ । ಅಮೃಷಾ ಸತ್ಯಮೇತತ್ । ತಸ್ಯ ಲೋಮಾನಿ ತಸ್ಯ ಪುರುಷಸ್ಯ ಲೋಮಾನಿ ಇತರಸ್ಯ ವನಸ್ಪತೇಃ ಪರ್ಣಾನಿ । ತ್ವಗಸ್ಯ ಉತ್ಪಾಟಿಕಾ ಬಹಿಃ । ತ್ವಕ್ ಅಸ್ಯ ಪುರುಷಸ್ಯ ಇತರಸ್ಯ ಉತ್ಪಾಟಿಕಾ ವನಸ್ಪತೇಃ ॥

(ಭಾಷ್ಯಾರ್ಥ)

ಆ ಬ್ರಾಹ್ಮಣರು (ಹೀಗೆ) ಎದೆಗೆಡಲು ಅವರನ್ನು ಈ ಮುಂದೆ ಹೇಳುವ ಶ್ಲೋಕಗಳಿಂದ ಕೇಳಿದನು, ಕೇಳಿದವನಾದನು. "ಲೋಕದಲ್ಲಿ ಹೇಗೆ ವನಸ್ಪತಿ ವೃಕ್ಷವಿರುವದೋ, ವನಸ್ಪತಿ[1] ಎಂಬುದು ವೃಕ್ಷದ ವಿಶೇಷಣವು. ಹಾಗೆಯೇ ಪುರುಷನು. ಸುಳ್ಳಲ್ಲ, ಇದು ಸತ್ಯವು. ಅವನ ಲೋಮಗಳು, ಆ ಪುರುಷನ ಮೈಗೂದಲುಗಳು ಇನ್ನೊಂದಾದ ವನಸ್ಪತಿಯ ಎಲೆಗಳು— ಇವನ ಚರ್ಮವೇ

1. ದೊಡ್ಡಮರವು ವನಸ್ಪತಿ ಎನಿಸುವದು.

(ಅದರ) ಹೊರಚಕ್ಕೆ, ಈ ಪುರುಷನ ಚರ್ಮವೇ ಇನ್ನೊಂದಾದ ವನಸ್ಪತಿಗೆ ಚಕ್ಕೆ.

(ಉಪನಿಷತ್ತು)

**ತ್ವಚ ಏವಾಸ್ಯ ರುಧಿರಂ ಪ್ರಸ್ಯನ್ದಿ ತ್ವಚ ಉತ್ಪಟಃ ।**
**ತಸ್ಮಾತ್ ತದಾತೃಣ್ಣಾತ್ ಪ್ರೈತಿ ರಸೋ ವೃಕ್ಷಾದಿವಾಹತಾತ್ ॥ ೨ ॥**

(೨) ಇವನ ಚರ್ಮದಿಂದಲೇ ರಕ್ತವು ಸುರಿಯುವದು, ಚಕ್ಕೆಯಿಂದ ರಸವು. ಆದ್ದರಿಂದ ಕೊರೆದ ಅವನಿಂದ, ಹೊಡೆದ ಮರದಿಂದ ರಸವು (ಬರು)ವಂತೆ ಹೊರಕ್ಕೆ ಬರುವದು.

(ಭಾಷ್ಯ)

೧೨೯. ತ್ವಚ ಏವ ಸಕಾಶಾತ್ ಅಸ್ಯ ಪುರುಷಸ್ಯ ರುಧಿರಂ ಪ್ರಸ್ಯನ್ದಿ। ವನಸ್ಪತೇಃ ತ್ವಚಃ ಉತ್ಪಟಃ। ತ್ವಚ ಏವ ಉತ್ಸ್ಫುಟತಿ ಯಸ್ಮಾತ್। ಏವಂ ಸರ್ವಂ ಸಮಾನಮೇವ ವನಸ್ಪತೇಃ ಪುರುಷಸ್ಯ ಚ। ತಸ್ಮಾತ್ ಆತೃಣ್ಣಾತ್ ಹಿಂಸಿತಾತ್ ಪ್ರೈತಿ ತತ್ ರುಧಿರಂ ನಿರ್ಗಚ್ಛತಿ, ವೃಕ್ಷಾದಿವ ಆಹತಾತ್ ಛಿನ್ನಾತ್ ರಸಃ ॥

(ಭಾಷ್ಯಾರ್ಥ)

ಚರ್ಮದ ದೆಸೆಯಿಂದಲೇ ಈ ಪುರುಷನಿಗೆ ರಕ್ತವು ಸುರಿಯುವದು. ವನಸ್ಪತಿಯ ಚಕ್ಕೆಯಿಂದ ರಸವು (ಸುರಿಯುವದು) ; ಚಕ್ಕೆಯಿಂದ ಮೇಲಕ್ಕೆದ್ದು ತೋರಿಕೊಳ್ಳುವದರಿಂದ (ಆ ರಸಕ್ಕೆ ಉತ್ಪಟವೆಂದು ಹೆಸರು). ಹೀಗೆ ವನಸ್ಪತಿಗೂ ಪುರುಷನಿಗೂ ಎಲ್ಲವೂ ಸಮಾನವೇ. ಆದ್ದರಿಂದ ಕೊರೆದ ಹಿಂಸಿಸಿದ (ಪುರುಷನ ಮೈಯಿಂದ), ಹೊಡೆದ ಕತ್ತರಿಸಿದ ಮರದಿಂದ ರಸವು (ಹೊರಕ್ಕೆ ಬರು)ವಂತೆ, ಆ ರಕ್ತವು ಹೊರಕ್ಕೆ ಬರುತ್ತಿರುವದು.

(ಉಪನಿಷತ್ತು)

**ಮಾಗ್ಂಸಾನ್ಯಸ್ಯ ಶಕರಾಣಿ ಕಿನಾಟಗ್ಂ ಸ್ನಾವ ತತ್ ಸ್ಥಿರಮ್ ।**
**ಅಸ್ಥೀನ್ಯನ್ತರತೋ ದಾರೂಣಿ ಮಜ್ಜಾ ಮಜ್ಜೋಪಮಾ ಕೃತಾ ॥ ೩ ॥**

(೩) ಇವನ ಮಾಂಸಗಳು (ಅದರ) ಶಕರಗಳು ; (ಅವನ) ನರಗಳು (ಅದರ) ಕಿನಾಟವು. ಅದು ಸ್ಥಿರವಾಗಿದೆ. ಅಸ್ಥಿಗಳು ಒಳಗಿನ ದಾರುಗಳು ; ಮಜ್ಜೆಯು ಮಜ್ಜೋಪಮವಾಗಿ ಮಾಡಲ್ಪಟ್ಟಿರುತ್ತದೆ.

(ಭಾಷ್ಯ)

೧೩೦. ಏವಂ ಮಾಂಸಾನ್ಯಸ್ಯ ಪುರುಷಸ್ಯ ವನಸ್ಪತೇಸ್ತಾನಿ ಶಕರಾಣಿ ಶಕಲಾನಿ ಇತ್ಯರ್ಥಃ। ಕಿನಾಟಮ್। ವೃಕ್ಷಸ್ಯ ಕಿನಾಟಂ ನಾಮ ಶಕಲೇ

ಭ್ಯೋಽನ್ತರಂ ವಲ್ಕಲರೂಪಂ ಕಾಷ್ಠಸಂಲಗ್ನಮ್, ತತ್ ಸ್ನಾವ ಪುರುಷಸ್ಯ। ತತ್ ಸ್ಥಿರಮ್। ತಚ್ಚ ಕಿನಾಟಮ್। ಸ್ನಾವವತ್ ದೃಢಂ ಹಿ ತತ್। ಅಸ್ಥೀನಿ ಪುರುಷಸ್ಯ। ಸ್ನಾವ್ನೋಽನ್ತರತಃ ಅಸ್ಥೀನಿ ಭವನ್ತಿ। ತಥಾ ಕಿನಾಟಸ್ಯ ಅಭ್ಯನ್ತರತೋ ದಾರೂಣಿ ಕಾಷ್ಠಾನಿ। ಮಜ್ಜಾ ಮಜ್ಜೈವ ವನಸ್ಪತೇಃ ಪುರುಷಸ್ಯ ಚ ಮಜ್ಜೋಪಮಾ ಕೃತಾ। ಮಜ್ಜಾಯಾ ಉಪಮಾ ಮಜ್ಜೋಪಮಾ। ನಾನ್ಯೋ ವಿಶೇಷೋಽಸ್ತಿ ಇತ್ಯರ್ಥಃ। ಯಥಾ ವನಸ್ಪತೇರ್ಮಜ್ಜಾ ತಥಾ ಪುರುಷಸ್ಯ ಯಥಾ ಪುರುಷಸ್ಯ ತಥಾ ವನಸ್ಪತೇಃ ॥

(ಭಾಷ್ಯಾರ್ಥ)

ಹೀಗೆಯೇ ಈ ಪುರುಷನ ಮಾಂಸಗಳಿವೆಯಲ್ಲ, ಇವು ವನಸ್ಪತಿಯ ಶಕರಗಳು, ಶಕಲಗಳು (ದಪ್ಪಚಕ್ಕೆಗಳು) ಎಂದರ್ಥ. ಕಿನಾಟವು –ಮರದ ಕಿನಾಟವು ಎಂದರೆ ದಪ್ಪಚಕ್ಕೆಗಳಿಗಿಂತ ಒಳಗಿನ, ಕಟ್ಟಿಗಗೆ ಅಂಟಿಕೊಂಡಿರುವ ನಾರು, ಅದು– ಪುರುಷನ ನರವು. ಅದು ಸ್ಥಿರವಾಗಿರುತ್ತದೆ, ಅದೇ ಕಿನಾಟವು. ನರದಂತೆ ಅದು ಬಿಗಿದುಕೊಂಡಿರುತ್ತದೆಯಲ್ಲವೆ ? ಪುರುಷನ ಅಸ್ಥಿಗಳು, ನರಕ್ಕಿಂತ ಒಳಗೆ ಎಲುಬುಗಳು ಇರುತ್ತವೆ , ಹಾಗೆಯೇ ಕಿನಾಟಕ್ಕಿಂತ ಒಳಗೆ ದಾರುಗಳು, ಕಟ್ಟಿಗೆಗಳು, ಮಜ್ಜೆಯು, ವನಸ್ಪತಿಯ ಮಜ್ಜೆಯೇ, ಮತ್ತು ಪುರುಷನ (ಮಜ್ಜೆಯೇ) ಮಜ್ಜೋಪಮವಾಗಿ ಮಾಡಲ್ಪಟ್ಟಿರುತ್ತದೆ. ಮಜ್ಜೆಗೆ ಉಪಮೆಯು, ಮಜ್ಜೋಪಮೆಯು, ಮತ್ತೆ ಯಾವ ವಿಶೇಷವೂ ಇರುವದಿಲ್ಲ ಎಂದರ್ಥ. ವನಸ್ಪತಿಯ ಮಜ್ಜೆಯು ಹೇಗಿರುವದೋ ಹಾಗೇ ಪುರುಷನ ಮಜ್ಜ; ಪುರುಷನ (ಮಜ್ಜೆಯು) ಹೇಗಿರುವದೋ ಹಾಗೆಯೇ ವನಸ್ಪತಿಯ (ಮಜ್ಜ).

## ಸತ್ತ ಪುರುಷನು ಯಾವ ಮೂಲದಿಂದ ಹುಟ್ಟುವನು ?

(ಉಪನಿಷತ್ತು)

**ಯದ್ವೃಕ್ಷೋ ವೃಕ್ಣೋ ರೋಹತಿ ಮೂಲಾನ್ನವತರಃ ಪುನಃ ।**
**ಮರ್ತ್ಯಃ ಸ್ವಿನ್ಮೃತ್ಯುನಾ ವೃಕ್ಣಃ ಕಸ್ಮಾನ್ಮೂಲಾತ್ ಪ್ರರೋಹತಿ ॥**

(೪) ವೃಕ್ಷವು ಕಡಿದಮೇಲೆ ಬೇರಿನಿಂದ ಹೊಸದಾಗಿ ಮತ್ತೆ ಚಿಗುರುತ್ತದೆಯಾದರೆ, ಮರ್ತ್ಯನು ಮೃತ್ಯುವಿನಿಂದ ಕತ್ತರಿಸಿಹೋದ ಬಳಿಕ ಮತ್ತೆ ಯಾವ ಬೇರಿನಿಂದ ಚಿಗುರುವನೊ !

(ಭಾಷ್ಯ)

೧೩೧. ಯದ್ ಯದಿ ವೃಕ್ಷಃ ವೃಕ್ಣಃ ಛಿನ್ನಃ ರೋಹತಿ ಪುನಃ ಪುನಃ ಪ್ರರೋಹತಿ ಪ್ರಾದುರ್ಭವತಿ ಮೂಲಾತ್ ಪುನರ್ನವತರಃ ಪೂರ್ವಸ್ಮಾತ್

ಅಭಿನವತರಃ । ಯದೇತಸ್ಮಾತ್ ವಿಶೇಷಣಾತ್[1] ಪ್ರಾಕ್ ವನಸ್ಪತೇಃ ಪುರುಷಸ್ಯ ಚ ಸರ್ವಂ ಸಾಮಾನ್ಯಮ್ ಅವಗತಮ್ । ಅಯಂ ತು ವನಸ್ಪತೌ ವಿಶೇಷೋ ದೃಶ್ಯತೇ ಯತ್ ಛಿನ್ನಸ್ಯ ಪ್ರರೋಹಣಮ್ । ನ ತು ಪುರುಷೇ ಮೃತ್ಯುನಾ ವೃಕ್ಣೇ ಪುನಃ ಪ್ರರೋಹಣಂ ದೃಶ್ಯತೇ। ಭವಿತವ್ಯಂ ಚ ಕುತಶ್ಚಿತ್ ಪ್ರರೋಹಣೇನ । ತಸ್ಮಾತ್ ವಃ ಪೃಚ್ಛಾಮಿ ಮರ್ತ್ಯೋ ಮನುಷ್ಯಃ ಸ್ವಿತ್ ಮೃತ್ಯುನಾ ವೃಕ್ಣಃ ಕಸ್ಮಾತ್ ಮೂಲಾತ್ ಪ್ರರೋಹತಿ ? ಮೃತಸ್ಯ ಪುರುಷಸ್ಯ ಕುತಃ ಪ್ರರೋಹಣಮ್ ? ಇತ್ಯರ್ಥಃ ॥

(ಭಾಷ್ಯಾರ್ಥ)

ವೃಕ್ಷವು ಕೆಡಹಿದಮೇಲೆ ಕತ್ತರಿಸಿದ ಬಳಿಕ ಮತ್ತೆಮತ್ತೆ ಚಿಗುರುತ್ತದೆ (ಯತ್ = ಯದಿ)ಯಾದರೆ, ಬೇರಿನಿಂದ ಮತ್ತೆ ಹೊಸದಾಗಿ ಹಿಂದಿದ್ದದ್ದಕ್ಕಿಂತ ಹೊಸ ರೂಪವುಳ್ಳದ್ದಾಗಿ ತೋರಿಕೊಳ್ಳುತ್ತದೆ(ಯಾದರೆ)— ಈ ವಿಶೇಷಕ್ಕಿಂತ ಮುಂಚೆ ವನಸ್ಪತಿಗೂ ಪುರುಷನಿಗೂ ಹೋಲಿಕೆಯೇ ಇತ್ತೆಂದು ಗೊತ್ತಾಗಿದೆ ಯಷ್ಟೆ; ಆದರೆ ಕೆಡಹಿದರೆ ಚಿಗುರುವದೆಂಬ ಇದೊಂದು ವಿಶೇಷವು ವನಸ್ಪತಿಯಲ್ಲಿ ಕಂಡುಬರುತ್ತಿದೆ, ಆದರೆ ಪುರುಷನು ಮೃತ್ಯುವಿನಿಂದ ಛಿನ್ನನಾದ ಬಳಿಕ ಮತ್ತೆ ಚಿಗುರುವದು ಕಂಡುಬರುವದಿಲ್ಲ. ಆದರೆ ಎಲ್ಲಿಂದಲೋ ಇದು ಚಿಗುರುವದು ಆಗಲೇಬೇಕು. ಆದ್ದರಿಂದ ನಿಮ್ಮನ್ನು ಕೇಳುತ್ತಿದೇನೆ— ಮರ್ತ್ಯನು ಮನುಷ್ಯನು ಕತ್ತರಿಸಿಹಾಕಿಹೋದ ಬಳಿಕ ಯಾವ ಬೇರಿನಿಂದ ಚಿಗುರುವನೋ (ಹೇಳಿ). ಸತ್ತ ಮನುಷ್ಯನು (ಮತ್ತೆ) ಏತರಿಂದ ಹುಟ್ಟುವನು ? ಎಂದರ್ಥ.

**ರೇತಸ ಇತಿ ಮಾ ವೋಚತ ಜೀವತಸ್ತತ್ಪ್ರಜಾಯತೇ ।**
**ಧಾನಾರುಹ ಇವ ವೈ ವೃಕ್ಷೋಽಞ್ಜಸಾ ಪ್ರೇತ್ಯ ಸಂಭವಃ ॥ ೫ ॥**

(೫) ರೇತಸ್ಸಿನಿಂದ ಎಂದು ಹೇಳದಿರಿ. ಬದುಕಿರುವವನಿಗೆ ಅದು ಉಂಟಾಗುತ್ತದೆ. ವೃಕ್ಷವು ಬೀಜದಿಂದ ಹುಟ್ಟುವದೂ ಆಗಿದೆ, ಸತ್ತ ಬಳಿಕ ಮತ್ತೆ (ಅದು) ನೇರಾಗಿ ಹುಟ್ಟಬಹುದಾಗಿದೆ.

(ಭಾಷ್ಯ)

೧೫೨. ಯದಿ ಚೇತ್ ಏವಂ ವದಥ ರೇತಸಃ ಪ್ರರೋಹತಿ ಇತಿ, ಮಾ ವೋಚತ ನೈವಂ ವಕ್ತುಮರ್ಹಥ । ಕಸ್ಮಾತ್ ? ಯಸ್ಮಾತ್ ಜೀವತಃ ಪುರುಷಾತ್ ತತ್ ರೇತಃ ಪ್ರಜಾಯತೇ ನ ಮೃತಾತ್ । ಅಪಿ ಚ ಧಾನಾರುಹಃ ಧಾನಾ ಬೀಜಮ್ ! ಬೀಜರುಹೋಽಪಿ ವೃಕ್ಷೋ ಭವತಿ ನ ಕೇವಲಂ ಕಾಣ್ಡರುಹ ಏವ। ಇವಶಬ್ದೋಽನರ್ಥಕಃ। ವೈ ವೃಕ್ಷಃ ಅಞ್ಜಸಾ ಸಾಕ್ಷಾತ್ ಪ್ರೇತ್ಯ

1. "ವಿಶೇಷಾತ್" ಎಂದಿದ್ದರೇ ಸಾಕೆಂದು ತೋರುತ್ತದೆ.

ವೃತ್ವಾ ಸಂಭವಃ। ಧಾನಾತೋಽಪಿ ಪ್ರೇತ್ಯ ಸಂಭವೋ ಭವೇತ್ ಅಞ್ಜಸಾ ಪುನರ್ವನಸ್ಪತೇಃ ॥

(ಭಾಷ್ಯಾರ್ಥ)

ರೇತಸ್ಸಿನಿಂದ ಹುಟ್ಟುತ್ತಾನೆ ಎಂದಿಂತು ಹೇಳುವಿರಾದರೆ ಹೇಳದಿರಿ, ಹಾಗೆಂದು ಹೇಳಬಾರದು. ಏಕೆ? ಎಂದರೆ, ಆ ರೇತಸ್ಸು ಬದುಕಿರುವವನಿಂದ ಉಂಟಾಗುತ್ತದೆಯೇ ಹೊರತು ಸತ್ತವನಿಂದ ಉಂಟಾಗುವದಿಲ್ಲವಲ್ಲವೆ? ಮತ್ತು ವೃಕ್ಷವು ಧಾನಾರುಹವೂ ಆಗಿರುತ್ತದೆ, ಧಾನವೆಂದರೆ ಬೀಜವು. ಬೀಜದಿಂದ ಹುಟ್ಟುವದೂ ಆಗಿರುತ್ತದೆ, ಬರಿಯ ಕಾಂಡದಿಂದ ಹುಟ್ಟುವದೇ ಆಗಿರುವದಿಲ್ಲ. (ಇಲ್ಲಿ) ಇವ ಎಂಬ ಶಬ್ದಕ್ಕೆ ಅರ್ಥವಿಲ್ಲ. ವೃಕ್ಷವು (ಅಞ್ಜಸಾ=ಸಾಕ್ಷಾತ್) ನೇರಾಗಿ ಹೋದ ಬಳಿಕ ಸತ್ತ ಬಳಿಕ ಮತ್ತೆ ಅದು ಹುಟ್ಟಬಹುದು, ಬೀಜದಿಂದಲೂ ವನಸ್ಪತಿಗೆ ಮತ್ತೆ ಸತ್ತ ಬಳಿಕ ಹುಟ್ಟು ಆಗಬಹುದಾಗಿರುತ್ತದೆ[1].

(ಉಪನಿಷತ್ತು)

**ಯತ್ ಸಮೂಲಮಾವೃಹೇಯುರ್ವೃಕ್ಷಂ ನ ಪುನರಾಭವೇತ್ ।**
**ಮರ್ತ್ಯಃ ಸ್ವಿನ್ ಮೃತ್ಯುನಾ ವೃಕ್ಣಃ ಕಸ್ಮಾನ್ಮೂಲಾತ್ ಪ್ರರೋಹತಿ ॥**

(೬) ಸಮೂಲವಾಗಿ ವೃಕ್ಷವನ್ನು ತೆಗೆದುಹಾಕುವವಾದರೆ (ಅದು) ಮತ್ತೆ ಉಂಟಾಗಲಾರದು. ಮರ್ತ್ಯನು ಮೃತ್ಯುವಿನಿಂದ ಕತ್ತರಿಸಿ ಹೋದ ಬಳಿಕ ಯಾವ ಮೂಲದಿಂದ ಚಿಗುರುವನೊ!

(ಭಾಷ್ಯ)

೧೩೩. ಯತ್ ಯದಿ ಸಹ ಮೂಲೇನ ಧಾನಯಾ ವಾ ಆವೃಹೇಯುಃ ಉದ್ಯಚ್ಛೇಯುಃ ಉತ್ಪಾಟಯೇಯುಃ ವೃಕ್ಷಮ್ ನ ಪುನರಾಭವೇತ್ ಪುನರಾಗತ್ಯ ನ ಭವೇತ್ । ತಸ್ಮಾತ್ ವಃ ಪೃಚ್ಛಾಮಿ । ಸರ್ವಸ್ಯೈವ ಜಗತೋ ಮೂಲಮ್ । ಮರ್ತ್ಯಃ ಸ್ವಿತ್ ಮೃತ್ಯುನಾ ವೃಕ್ಣಃ ಕಸ್ಮಾತ್ ಮೂಲಾತ್ ಪ್ರರೋಹತಿ ? ॥

(ಭಾಷ್ಯಾರ್ಥ)

(ಸಮೂಲವಾಗಿ) ಬೇರಿನೊಡನೆ, ಅಥವಾ ಬೀಜಸಹಿತವಾಗಿ ವೃಕ್ಷವನ್ನು ತೆಗೆದುಹಾಕಿದರೆ, ಎತ್ತಿಹಾಕಿದರೆ, ಕಿತ್ತುಹಾಕಿದರೆ ಮತ್ತೆ ಉಂಟಾಗಲಾರದು,

---

1. ಕಾಂಡದಿಂದ ಮರವು ಚಿಗುರಿ ಹುಟ್ಟುವಂತೆ ಕೈಕಾಲುಗಳು ಮುರಿದವನು ಸತ್ತರೆ, ಮತ್ತೆ ಆ ಶರೀರದಿಂದ ಅವನು ಚಿಗುರಿಕೊಂಡು ಹುಟ್ಟುವದಿಲ್ಲ, ಬೀಜದಲ್ಲಿ ಮೊಳಕೆಯಾಗುವ ಶಕ್ತಿಯಿರುವಂತೆ ಮನುಷ್ಯನಿಗೆ ಹುಟ್ಟುವದಕ್ಕೆ ಬೇಕಾದ ಬೀಜವೂ ಕಾಣಿಸುವದಿಲ್ಲವಲ್ಲ!– ವಾರ್ತಿಕ (೧೩೪, ೮೩೯, ೧೪೦).

ಮತ್ತೆ ಬಂದು ಹುಟ್ಟಲಾರದು[1]. ಆದ್ದರಿಂದ ನಿಮ್ಮನ್ನು ಜಗತ್ತಿಗೆಲ್ಲ ಮೂಲವು ಯಾವದೆಂಬುದನ್ನು ಕೇಳುತ್ತಲಿದ್ದೇನೆ. ಮರ್ತ್ಯನು ಮೃತ್ಯುವಿನಿಂದ ಕತ್ತರಿಸಿ ಹೋದ ಬಳಿಕ ಯಾವ ಮೂಲದಿಂದ ಚಿಗುರುವನೊ !

(ಉಪನಿಷತ್ತು)

**ಜಾತ ಏವ ನ ಜಾಯತೇ ಕೋ ನ್ವೇನಂ ಜನಯೇತ್ ಪುನಃ ।**
**ವಿಜ್ಞಾನಮಾನನ್ದಂ ಬ್ರಹ್ಮ ರಾತಿರ್ದಾತುಃ ಪರಾಯಣಂ ತಿಷ್ಠ**
**ಮಾನಸ್ಯ ತದ್ವಿದ ಇತಿ　　॥ ೭ ॥**

(೭) (ಆಕ್ಷೇಪ) : ಹುಟ್ಟಿಯೇ ಇರುತ್ತಾನಲ್ಲ ! (ಪರಿಹಾರ) : ಹಾಗಲ್ಲ, ಹುಟ್ಟುತ್ತಾನೆ. ಇವನನ್ನು ಮತ್ತೆ ಹುಟ್ಟಿಸುವವರು ಯಾರು ? (ಎಂದು ಪ್ರಶ್ನೆ). ವಿಜ್ಞಾನವೂ ಆನಂದವೂ ಆದ ಬ್ರಹ್ಮವು. ರಾತಿಯನ್ನು ದಾನಮಾಡುವವನಿಗೆ ಪರಾಯಣವು, (ಅದರಲ್ಲಿ) ನಿಂತಿರುವ ತಜ್ಜ್ಞನಿಗೆ (ಪರಾಯಣವು).

(ಭಾಷ್ಯ)

೧೩೪. ಜಾತ ಏವೇತಿ ಮನ್ಯಧ್ವಂ ಯದಿ ಕಿಮತ್ರ ಪ್ರಷ್ಟವ್ಯಮ್ ಇತಿ । ಜನಿಷ್ಯಮಾಣಸ್ಯ ಹಿ ಸಂಭವಃ ಪ್ರಷ್ಟವ್ಯಃ, ನ ಜಾತಸ್ಯ । ಅಯಂ ತು ಜಾತ ಏವ । ಅತೋಽಸ್ಮಿನ್ ವಿಷಯೇ ಪ್ರಶ್ನ ಏವ ನೋಪಪದ್ಯತ ಇತಿ ಚೇತ್ । ನ । ಕಿಂ ತರ್ಹಿ ಮೃತಃ ಪುನರಪಿ ಜಾಯತ ಏವ । ಅನ್ಯಥಾ ಅಕೃತಾಭ್ಯಾಗಮ ಕೃತನಾಶಪ್ರಸಙ್ಗಾತ್, ಅತೋ ವಃ ಪೃಚ್ಛಾಮಿ । ಕೋ ನು ಏನಂ ಮೃತಂ ಪುನರ್ಜನಯೇತ್ ? ॥

(ಭಾಷ್ಯಾರ್ಥ)

(ಆಕ್ಷೇಪ) :– ಹುಟ್ಟಿಯೇ ಇರುವನಲ್ಲ, ಇಲ್ಲಿ ಕೇಳತಕ್ಕದ್ದೇನಿದೆ ? ಎಂದು ಅಭಿಪ್ರಾಯಪಡುವಿರಾದರೆ, (ಇದರ ವಿವರ) : ಮುಂದೆ ಹುಟ್ಟಲಿರುವವನಿಗಲ್ಲವೆ, ಹುಟ್ಟು ಎಂಬುದನ್ನು ಕೇಳಬೇಕು ? (ಆಗಲೆ) ಹುಟ್ಟಿರುವವನಿಗಲ್ಲವಲ್ಲ ! ಆದರೆ ಇವನೋ ಹುಟ್ಟಿಯೇ ಇರುತ್ತಾನೆ. ಆದ್ದರಿಂದ ಈ ವಿಷಯದಲ್ಲಿ ಪ್ರಶ್ನೆಯೇ ಹೊಂದುವದಿಲ್ಲವಲ್ಲ !– ಎಂದರೆ

---

1. ಸಾಕ್ಷಾತ್ತಾಗಿ ಬೇರಿನಿಂದಲೂ ಬೀಜದಿಂದಲೂ ಮರವು ಹೇಗೆ ಉಂಟಾಗುವದೋ ಹಾಗೆ ಸತ್ತವನಿಗೆ ಬೇರುಬೀಜಗಳು ಯಾವವು ಹೇಳಿರಿ; ಮಗ ಮೊಮ್ಮಗ ಮುಂತಾದವರು ಹುಟ್ಟುವಂತೆ ಆಗುವ ಜನ್ಮವನ್ನಲ್ಲ, ನಾನು ಕೇಳಿರುವದು. ಮೂಲಬೀಜಗಳಿಲ್ಲದೆ ಅದೇ ಮರವು ಮತ್ತೆ ಹುಟ್ಟಲಾರದಷ್ಟೆ ? ವಾರ್ತಿಕ (೧೪೧, ೧೪೩)

(ಪರಿಹಾರ) : ಹಾಗಲ್ಲ, ಮತ್ತೇನೆಂದರೆ ಸತ್ತವನು ಮತ್ತೂ ಹುಟ್ಟಿಯೇ ತೀರುತ್ತಾನೆ[1]. ಹಾಗಲ್ಲದಿದ್ದರೆ ಮಾಡದೆ ಇದ್ದ (ಕರ್ಮದ ಫಲವು) ಬಂದೊದಗುವದು, ಮಾಡಿದ (ಕರ್ಮವು) ನಾಶವಾಗುವದು– (ಇವು) ಪ್ರಸಕ್ತವಾಗುವವು. ಆದ್ದರಿಂದ[2] ನಿಮ್ಮನ್ನು ಕೇಳುತ್ತಲಿದೇನೆ. "ಇವನು ಸತ್ತರೆ ಮತ್ತೆ ಹುಟ್ಟಿಸುವವರು ಯಾರು ?"[3]

## ಜಗನ್ಮೂಲದ ಸ್ವರೂಪ

(ಭಾಷ್ಯ)

೧೩೫ ತನ್ನ ವಿಜಜ್ಞುರ್ಬ್ರಾಹ್ಮಣಾಃ ಯತೋ ಮೃತಃ ಪುನಃ ಪ್ರರೋಹತಿ । ಜಗತೋ ಮೂಲಂ ನ ವಿಜ್ಞಾತಂ ಬ್ರಾಹ್ಮಣೈಃ । ಅತೋ ಬ್ರಹ್ಮಿಷ್ಠತ್ವಾತ್ ಹೃತಾ ಗಾವೋ ಯಾಜ್ಞವಲ್ಕ್ಯೇನ, ಜಿತಾ ಬ್ರಾಹ್ಮಣಾಃ । ಸಮಾಪ್ತಾ ಆಖ್ಯಾಯಿಕಾ । ಯಜ್ಜಗತೋ ಮೂಲಮ್ ಯೇನ ಚ ಶಬ್ದೇನ ಸಾಕ್ಷಾದ್ ವ್ಯಪದಿಶ್ಯತೇ ಬ್ರಹ್ಮ ಯದ್ ಯಾಜ್ಞವಲ್ಕ್ಯೋ ಬ್ರಾಹ್ಮಣಾನ್ ಪೃಷ್ಟವಾನ್ ತತ್ ಸ್ವೇನ ರೂಪೇಣ ಶ್ರುತಿರಸ್ಮಭ್ಯಮ್ ಆಹ । ವಿಜ್ಞಾನಂ ವಿಜ್ಞಪ್ತಿರ್ವಿಜ್ಞಾನಮ್ । ತಚ್ಚ ಆನನ್ದಂ ನ ವಿಷಯವಿಜ್ಞಾನವತ್ ದುಃಖಾನುವಿದ್ಧಮ್, ಕಿಂ ತರ್ಹಿ ಪ್ರಸನ್ನಂ ಶಿವಮ್ ಅತುಲಮ್ ಅನಾಯಾಸಂ ನಿತ್ಯತೃಪ್ತಮೇಕರಸಮ್ ಇತ್ಯರ್ಥಃ । ಕಿಂ ತತ್ ? ಬ್ರಹ್ಮ ಉಭಯವಿಶೇಷಣವತ್ । ರಾತಿಃ ರಾತೇಃ । ಷಷ್ಠ್ಯರ್ಥೇ ಪ್ರಥಮಾ । ಧನಸ್ಯ ಇತ್ಯರ್ಥಃ । ಧನಸ್ಯ ದಾತುಃ ಕರ್ಮಕೃತೋ

---

1. ಉಪನಿಷತ್ತಿನಲ್ಲಿರುವ 'ಜಾತ ಏವ' ಎಂಬುದಿಷ್ಟೇ ಪೂರ್ವಪಕ್ಷವೆಂದೂ 'ನ ಜಾಯತೇ' ಎಂಬುದು ಸಿದ್ಧಾಂತಕ್ಕೆ ಸೇರಿದ್ದೆಂದೂ ಆ॥ ವ್ಯಾಖ್ಯಾನ. ಅದರಂತೆ ನಾವೂ ಉಪನಿಷತ್ತನ್ನು ಕನ್ನಡಿಸಿದೇವೆ. ಆದರೆ 'ಹುಟ್ಟಿಯೇ ಇರುವನಲ್ಲ, ಹುಟ್ಟುತ್ತಿಲ್ಲವಲ್ಲ !' ಎಂಬುದನ್ನು ಪೂರ್ವಪಕ್ಷವೆಂದೂ ಭಾವಿಸಬಹುದು. ವಾರ್ತಿಕವು ಅದಕ್ಕೆ ಅನುಗುಣವಾಗಿಯೇ ಇದೆ. ದೀಪದ ಜ್ವಾಲೆಯಂತೆ ಸಂಸಾರವು ಪ್ರವಾಹರೂಪವಾಗಿದೆ : ಯಾವದೊಂದೂ ಹುಟ್ಟುತ್ತಿಲ್ಲ, ಮುಂದೆ ಹುಟ್ಟಬೇಕಾದದ್ದೂ ಇಲ್ಲ (ವಾ.೧೪೪)– ಎಂದು ಆಕ್ಷೇಪ. ಹಾಗಲ್ಲ, ಹುಟ್ಟಿದವನು ಸಾಯುತ್ತಾನೆ, ಸತ್ತವನು ಹುಟ್ಟುತ್ತಾನೆ– ಎಂಬಿದು ಪರಿಹಾರ. ಈ ಪರಿಹಾರವು 'ಇವನನ್ನು ಮತ್ತೆ ಹುಟ್ಟಿಸುವವರು ಯಾರು ?' ಎಂಬ ಪ್ರಶ್ನೆಯಲ್ಲಿಯೇ ಗರ್ಭಿತವಾಗಿದೆ ಎಂದು ಭಾವಿಸಬಹುದು.

2. ಕರ್ಮವಿಲ್ಲದೆ ಫಲವಾಗುವದೆಂಬ ದೋಷವೂ ಕರ್ಮವಿದ್ದರೂ ಫಲವಿಲ್ಲವೆಂಬ ದೋಷವೂ ಆಗಬಾರದಾದ್ದರಿಂದ ಜನ್ಮಾಂತರವಿರಬೇಕಾಯಿತಾಗಿ.

3. ಈ ಶ್ರುತಿಯನ್ನು ಆಕ್ಷೇಪಾರ್ಥಕವೆಂದು ಕಲ್ಪಿಸಿ ಮಾಂ. ಕಾ. ಭಾ. ೩–೨೫ (ಭಾ. ಭಾ. ೧೭೪)ರಲ್ಲಿ ಅವಿದ್ಯೆಯಿಂದುಂಟಾಗಿ ನಷ್ಟವಾಗಿರುವವನನ್ನು ಮತ್ತೆ ಯಾರೂ ಹುಟ್ಟಿಸುವವರಿಲ್ಲ ಎಂಬ ತಾತ್ಪರ್ಯವನ್ನು ಬರೆದಿರುತ್ತದೆ. ವ್ಯವಹಾರಪರಮಾರ್ಥದೃಷ್ಟಿದ್ವಯದಿಂದ ಹೀಗೆ ಎರಡು ಬೇರೆಬೇರೆಯ ಅರ್ಥಗಳನ್ನು ಮಾಡಿರಬಹುದೆ ?

ಯಜಮಾನಸ್ಯ ಪರಾಯಣಂ ಪರಾ ಗತಿಃ ಕರ್ಮಫಲಸ್ಯ ಪ್ರದಾತೃ । ಕಿಂ ಚ ವ್ಯುತ್ಥಾಯ ಏಷಣಾಭ್ಯಸ್ತಸ್ಮಿನ್ನೇವ ಬ್ರಹ್ಮಣಿ ತಿಷ್ಠತಿ ಅಕರ್ಮಕೃತ್ ತದ್ಬ್ರಹ್ಮ ವೇತ್ತಿ ಇತಿ ತದ್ವಿಚ್ಚ । ತಸ್ಯ ತಿಷ್ಠಮಾನಸ್ಯ ಚ ತದ್ವಿದಃ । ಬ್ರಹ್ಮವಿದಃ ಇತ್ಯರ್ಥಃ । ಪರಾಯಣಮ್ ಇತಿ ॥

(ಭಾಷ್ಯಾರ್ಥ)

ಯಾವುದರಿಂದ ಸತ್ತವನು ಮತ್ತೆ ಹುಟ್ಟುತ್ತಾನೋ ಅದು ಬ್ರಾಹ್ಮಣರಿಗೆ ಗೊತ್ತಿರಲಿಲ್ಲ. ಜಗತ್ತಿನ ಮೂಲವು (ಯಾವುದೆಂಬುದು) ಬ್ರಾಹ್ಮಣರಿಗೆ ತಿಳಿದಿರಲಿಲ್ಲ. ಆದ್ದರಿಂದ ಬ್ರಹ್ಮಿಷ್ಠನಾದ್ದರಿಂದ ಯಾಜ್ಞವಲ್ಕ್ಯನು ಗೋಗಳನ್ನು ಹೊಡೆದುಕೊಂಡು ಹೋದನು, ಬ್ರಾಹ್ಮಣರು ಸೋತುಹೋದರು. ಕಥೆಯು ಮುಗಿಯಿತು. ಯಾವುದು ಜಗತ್ತಿಗೆ ಮೂಲವೋ, ಮತ್ತು ಯಾಜ್ಞವಲ್ಕ್ಯನು ಬ್ರಾಹ್ಮಣರನ್ನು ಕೇಳಿದ ಬ್ರಹ್ಮವನ್ನು ಯಾವ ಶಬ್ದದಿಂದ ನೇರಾಗಿ ಹೇಳಬಹುದೋ[1] ಅದನ್ನು ತನ್ನ ರೂಪ(ದಿಂದಲೇ) ಶ್ರುತಿಯು ನಮಗೆ ತಿಳಿಸುತ್ತಿದೆ: **ವಿಜ್ಞಾನವು- (ಇಲ್ಲಿ) ವಿಜ್ಞಪ್ತಿಯೇ[2] ವಿಜ್ಞಾನವು- ಮತ್ತು ಆನಂದ (ರೂಪವಾದ ವಿಜ್ಞಾನ)ವದು, ವಿಷಯವಿಜ್ಞಾನದಂತೆ ದುಃಖಸಂಬಂಧವುಳ್ಳ (ವಿಜ್ಞಾನ)ವಲ್ಲ, ಮತ್ತೇನೆಂದರೆ ಪ್ರಸನ್ನವಾಗಿ ಶಿವವಾಗಿ ಅಸಮಾನವಾಗಿ ಅನಾಯಾಸವಾಗಿ[3] ನಿತ್ಯತೃಪ್ತವಾಗಿ ಏಕರಸವಾಗಿರತಕ್ಕದ್ದು[4] ಎಂದರ್ಥ. ಅದು ಯಾವುದು ? (ಈ) ಎರಡು ವಿಶೇಷಣಗಳುಳ್ಳ[5] ಬ್ರಹ್ಮವು.** (ಮೂಲದಲ್ಲಿ ರಾತಿಃ ಎಂಬ ಮಾತನ್ನು ರಾತೇಃ ಎಂಬ ಷಷ್ಠ್ಯರ್ಥದಲ್ಲಿ ಪ್ರಥಮಾವಿಭಕ್ತಿಯಲ್ಲಿ ಪ್ರಯೋಗಿಸಿರುತ್ತದೆ. ರಾತಿಃ ಎಂದರೆ ಧನದ ಎಂದರ್ಥ). ಧನದ ದಾತೃವಿಗೆ, ಕರ್ಮವನ್ನು ಮಾಡುವ ಯಜಮಾನನಿಗೆ, ಪರಾಯಣವು, ಕೊನೆಯ ಗತಿಯು, ಕರ್ಮದ ಫಲವನ್ನು

---

1. ನೇರಾಗಿ ಹೇಳಬಹುದು ಎಂದರೆ ವಿಷಯವಾಗಿಸಿಕೊಂಡು ತಿಳಿಸಬಹುದು ಎಂದೇನೂ ಅರ್ಥವಲ್ಲ. ಆತ್ಮ, ಬ್ರಹ್ಮ, ವಿಜ್ಞಾನ, ಆನಂದ- ಈ ಶಬ್ದಗಳಿಗೂ ಆತ್ಮನು ವಿಷಯನಲ್ಲ; ವಿಧಿಮುಖವಾಗಿ ಹೇಳಿದರೆ ಇವು ತೀರ ಹತ್ತಿರದ ಶಬ್ದಗಳಾಗುವವು ಎಂದು ಅಭಿಪ್ರಾಯ. ಕೇ. ಭಾ. ೨-೧ (ಭಾ. ಭಾ. ೪೨). ಛಾಂ. ಭಾ. ೭-೧-೩

2 ಕೂಟಸ್ಥವಾದ ಚೈತನ್ಯವೇ ; ಜ್ಞಾನಸಾಧನವೆಂದಾಗಲಿ, ಜ್ಞಾನಕ್ರಿಯೆಯೆಂದಾಗಲಿ, ಅದರ ಫಲವೆಂದಾಗಲಿ ಅರ್ಥವಲ್ಲ. ಇವೆಲ್ಲವೂ ಯಾವ ಚೈತನ್ಯಕ್ಕೆ ಸಾಕ್ಷ್ಯವಾಗಿರುವವೋ ಅದು. ವಾರ್ತಿಕ (೧೫೧, ೧೫೩)

3. ವಿಷಯವಿಷಯಿಭಾವದಿಂದ ಪಡೆಯುವ ಆಯಾಸಲಭ್ಯವಲ್ಲದೆ.

4. ತನ್ನೊಳಗೆ ಯಾವ ಭೇದವೂ ಇಲ್ಲದ ಒಂದೇ ಚೈತನ್ಯಮಾತ್ರವಾಗಿರತಕ್ಕದ್ದು.

5. ವಿಜ್ಞಾನ, ಆನಂದ- ಎಂದು ಎರಡು ವಿಶೇಷಣಗಳುಳ್ಳದ್ದು ಎಂದಭಿಪ್ರಾಯವಲ್ಲ, ಈ ಎರಡರ ಸ್ವರೂಪದಿಂದಿರುವ ವಸ್ತು ಎಂದೇ ಅಭಿಪ್ರಾಯ.

ಕೊಡತಕ್ಕದ್ದು[1] ಮತ್ತು ಏಷಣೆಗಳನ್ನು ಬಿಟ್ಟಿದ್ದು ಕರ್ಮಗಳನ್ನು ಮಾಡದೆ ಅದೇ ಬ್ರಹ್ಮದಲ್ಲಿ ನೆಲೆನಿಂತಿರುತ್ತಾನೆ; ಮತ್ತು ಆ ಬ್ರಹ್ಮವನ್ನು ಅರಿತಿರುತ್ತಾನೆ, ಆದ್ದರಿಂದ ತಜ್ಜ್ಞಾನಿಯು. ಆ (ಬ್ರಹ್ಮದಲ್ಲಿ ನೆಲೆ)ನಿಂತಿರುವ ತಜ್ಜ್ಞಾನಿಗೆ ಎಂದರೆ ಬ್ರಹ್ಮಜ್ಞಾನಿಗೆ ಎಂದರ್ಥ ; (ಅವನಿಗೂ) ಪರಾಯಣವು[2]

# ಚರ್ಚೆ : ಬ್ರಹ್ಮಾನಂದವು ಸಂವೇದ್ಯವೆ?

## ವಿಚಾರದ ಆವಶ್ಯಕತೆ

(ಭಾಷ್ಯ)

೧೩೬. ಅತ್ರೇದಂ ವಿಚಾರ್ಯತೇ । ಆನನ್ದಶಬ್ದೋ ಲೋಕೇ ಸುಖವಾಚೀ ಪ್ರಸಿದ್ಧಃ । ಅತ್ರ ಚ ಬ್ರಹ್ಮಣೋ ವಿಶೇಷಣತ್ವೇನ ಆನನ್ದಶಬ್ದಃ ಶ್ರೂಯತೇ "ಆನನ್ದಂ ಬ್ರಹ್ಮ" ಇತಿ । ಶ್ರುತ್ಯನ್ತರೇ ಚ "ಆನನ್ದೋ ಬ್ರಹ್ಮೇತಿ ವ್ಯಜಾನಾತ್" (ತೈ. ೩-೬), "ಆನನ್ದಂ ಬ್ರಹ್ಮಣೋ ವಿದ್ವಾನ್" (ತೈ. ೨-೯) "ಯದೇಷ ಆಕಾಶ ಆನನ್ದೋ ನ ಸ್ಯಾತ್" (ತೈ. ೨-೭), "ಯೋ ವೈ ಭೂಮಾ ತತ್ಸುಖಮ್" (ಛಾಂ. ೭-೨೩-೧) ಇತಿ ಚ । ["ಏಷ ಏವ[3] ಪರಮ ಆನನ್ದಃ" (೪-೩-೩೩) ಇತ್ಯೇವಮಾದ್ಯಾಃ ।][4] ಸಂವೇದ್ಯೇ ಚ ಸುಖೇ ಆನನ್ದಶಬ್ದಃ ಪ್ರಸಿದ್ಧಃ । ಬ್ರಹ್ಮಾನನ್ದಶ್ಚ ಯದಿ ಸಂವೇದ್ಯಃ ಸ್ಯಾತ್ ಯುಕ್ತಾ ಏತೇ ಬ್ರಹ್ಮಣಿ ಆನನ್ದಶಬ್ದಾಃ । ನನು ಚ ಶ್ರುತಿಪ್ರಾಮಾಣ್ಯಾತ್ ಸಂವೇದ್ಯಾನನ್ದಸ್ವರೂಪಮೇವ ಬ್ರಹ್ಮ, ಕಿಂ ತತ್ರ ವಿಚಾರ್ಯಮಿತಿ ? ನ । ವಿರುದ್ಧಶ್ರುತಿವಾಕ್ಯದರ್ಶನಾತ್ । ಸತ್ಯಮ್, ಆನನ್ದಶಬ್ದೋ ಬ್ರಹ್ಮಣಿ ಶ್ರೂಯತೇ । ವಿಜ್ಞಾನಪ್ರತಿಷೇಧಶ್ಚೈಕತ್ವೇ "ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್ ತತ್ ಕೇನ ಕಂ ಪಶ್ಯೇತ್, ತತ್ ಕೇನ ಕಂ ವಿಜಾನೀಯಾತ್" (೪-೫-೧೫) "ಯತ್ರ ನಾನ್ಯತ್ ಪಶ್ಯತಿ ನಾನ್ಯಚ್ಛೃಣೋತಿ ನಾನ್ಯದ್ವಿಜಾನಾತಿ ಸ ಭೂಮಾ"(ಛಾಂ. ೭-೨೪-೧), "ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತೋ ನ ಬಾಹ್ಯಂ ಕಿಂಚನ ವೇದ"(೪-೩-೨೧) ಇತ್ಯಾದಿ । ವಿರುದ್ಧಶ್ರುತಿವಾಕ್ಯದರ್ಶನಾತ್ (ತೇನ)[5] ಕರ್ತವ್ಯೋ ವಿಚಾರಃ । ತಸ್ಮಾತ್ ಯುಕ್ತಂ ವೇದವಾಕ್ಯಾರ್ಥನಿರ್ಣಯಾಯ ವಿಚಾರಯಿತುಮ್ ।

---

1. ಕರ್ಮಕ್ಕೆ ಫಲವನ್ನು ಕೊಡುವ ಈಶ್ವರನೂ ಪರಮಾರ್ಥತತ್ತ್ವವಾದ ಬ್ರಹ್ಮವೂ ಒಂದೇ, ಬೇರೆಬೇರೆಯ ತತ್ತ್ವಗಳಲ್ಲ.

2 ಕರ್ಮಿಗೆ ಭಿನ್ನವಾಗಿಯೇ ಪರಾಯಣವು ; ಜ್ಞಾನಿಗೆ ಅವನ ಸ್ವರೂಪದಿಂದಲೇ ಪರಾಯಣವು.

3. 'ಏವ' ಎಂಬ ಮಾತು ಬಿಟ್ಟುಹೋಗಿದೆಯೆಂದು ಸೇರಿಸಿದೆ.

4. ಈ ವಾಕ್ಯವೇ ಇಲ್ಲಿ ಬೇಕಿಲ್ಲವೆಂದು ತೋರುತ್ತದೆ. ಅನುವಾದದ ಟಿಪ್ಪಣಿಯನ್ನು ನೋಡಿ.

5 ಈ ಮಾತು ಅಚ್ಚಿನ ಪುಸ್ತಕಗಳಲ್ಲಿದೆ ; ಇಲ್ಲದಿದ್ದರೂ ಸಾಗುತ್ತದೆ.

ಮೋಕ್ಷವಾದಿವಿಪ್ರತಿಪತ್ತೇಶ್ಚ । ಸಾಂಖ್ಯಾ ವೈಶೇಷಿಕಾಶ್ಚ ಮೋಕ್ಷವಾದಿನೋ ನಾಸ್ತಿ ಮೋಕ್ಷೇ ಸುಖಂ ಸಂವೇದ್ಯಮ್ ಇತ್ಯೇವಂ ಪ್ರತಿಪನ್ನಾಃ[1] । ಅನ್ಯೇ ನಿರತಿಶಯಂ ಸುಖಂ ಸ್ವಸಂವೇದ್ಯಮಿತಿ ॥

(ಭಾಷ್ಯಾರ್ಥ)

ಇಲ್ಲಿ ಇದನ್ನು ವಿಚಾರಮಾಡಲಾಗುವದು : ಆನಂದಶಬ್ದವು ಸುಖವಾಚಕವಾಗಿ ಲೋಕದಲ್ಲಿ ಪ್ರಸಿದ್ಧವಾಗಿರುತ್ತದೆ. ಇಲ್ಲಿಯೂ ಬ್ರಹ್ಮಕ್ಕೆ ವಿಶೇಷಣವಾಗಿ 'ಆನಂದಂ ಬ್ರಹ್ಮ' ಎಂದು ಆನಂದಶಬ್ದವು ಶ್ರುತಿಯಲ್ಲಿರುತ್ತದೆ ಮತ್ತೊಂದು ಶ್ರುತಿಯಲ್ಲಿಯೂ "ಆನಂದವು ಬ್ರಹ್ಮವೆಂದು ಅರಿತುಕೊಂಡನು" (ತೈ. ೩-೬), "ಬ್ರಹ್ಮದ ಆನಂದವನ್ನು ಅರಿತುಕೊಂಡವನು (ಏತಕ್ಕೂ ಹೆದರುವದಿಲ್ಲ)" (ತೈ. ೨-೯), "ಹೃದಯಾಕಾಶದಲ್ಲಿ ಆನಂದವು ಇಲ್ಲದಿದ್ದರೆ .." (ತೈ. ೨-೭) (ಎಂದೂ) "ಭೂಮವಿದೆಯಲ್ಲ, ಅದೇ ಸುಖವು" (ಛಾಂ.೭-೨೩-೧) ಎಂದೂ (ಇದೆ). "ಇದೇ ಪರಮಾನಂದವು" (೪-೩-೩೩)- ಮುಂತಾದ (ಶ್ರುತಿಗಳೂ ಮುಂದೆ ಇವೆ)[2]. ಸಂವೇದ್ಯನಾದ ಸುಖದಲ್ಲಿ ಆನಂದಶಬ್ದವು ಪ್ರಸಿದ್ಧವಾಗಿರುತ್ತದೆ. ಬ್ರಹ್ಮಾನಂದವೂ ಸಂವೇದ್ಯವಾಗಿದ್ದರೆ ಬ್ರಹ್ಮದಲ್ಲಿ (ಪ್ರಯೋಗಿಸಿರುವ) ಈ ಆನಂದಶಬ್ದಗಳು ಯುಕ್ತ(ವಾಗುತ್ತವೆ).

(ಆಕ್ಷೇಪ) : — ಶ್ರುತಿಪ್ರಾಮಾಣ್ಯದಿಂದ ಸಂವೇದ್ಯವಾದ ಆನಂದಸ್ವರೂಪವುಳ್ಳದ್ದೇ ಬ್ರಹ್ಮವು (ಎಂದಾಗಲಿ), ಇಲ್ಲಿ ವಿಚಾರಮಾಡತಕ್ಕದ್ದೇನಿದೆ ?

(ಪರಿಹಾರ) :— ಹಾಗಲ್ಲ. ಏಕೆಂದರೆ ವಿರುದ್ಧವಾದ ಶ್ರುತಿವಾಕ್ಯಗಳು ಕಂಡುಬರುತ್ತಿವೆ. (ಇವರ ವಿವರ) : ನಿಜ, ಆನಂದಶಬ್ದವನ್ನು ಬ್ರಹ್ಮದಲ್ಲಿ ಶ್ರುತಿಯಲ್ಲಿ (ಪ್ರಯೋಗಿಸಿ)ರುತ್ತದೆ. ಆದರೆ ಏಕತ್ವದಲ್ಲಿ ಅರಿಯುವವನ್ನು ಅಲ್ಲಗಳೆದೂ ಇರುತ್ತದೆ. "ಆದರೆ ಎಲ್ಲಿ ಇವನಿಗೆ ಎಲ್ಲವೂ ಆತ್ಮನೇ ಆಗಿರುವದೊ, ಅಲ್ಲಿ ಏತರಿಂದ ಏನನ್ನು ನೋಡಿಯಾನು ? ಅಲ್ಲಿ ಏತರಿಂದ ಏನನ್ನು ಅರಿತಾನು?" (೪-೫-೧೫), "ಎಲ್ಲಿ ಮತ್ತೊಂದನ್ನು ಕಾಣುವದಿಲ್ಲವೋ, ಮತ್ತೊಂದನ್ನು ಕೇಳುವದಿಲ್ಲವೋ, ಮತ್ತೊಂದನ್ನು ಅರಿಯುವದಿಲ್ಲವೋ ಅದು ಭೂಮವು" (ಛಾಂ. ೭-೨೪-೧) "ಪ್ರಾಜ್ಞಾತ್ಮನಿಂದ ಆಲಿಂಗಿತನಾಗಿ ಹೊರಗಿನದೇನನ್ನೂ (ಒಳಗಿನದೇನನ್ನೂ) ಅರಿಯದೆ ಇರುತ್ತಾನೆ" (೪-೩-೨೧) ಎಂದು ಮುಂತಾಗಿ ವಚನವಿದೆ. (ಹೀಗೆ) ವಿರುದ್ಧವಾಗಿರುವ ಶ್ರುತಿವಾಕ್ಯಗಳು ಕಂಡುಬರುತ್ತಿರು

---

1. 'ವಿಪ್ರತಿಪನ್ನಾಃ' ಎಂಬ ಪಾಠದಲ್ಲಿ ವಿ ಹೆಚ್ಚು.

2. ಇತಿ ಚ ಎಂಬಲ್ಲಿಗೇ ಹಿಂದಿನ ವಾಕ್ಯವು ಪೂರ್ಣವಾಗಿರುತ್ತದೆ; ಈ ವಾಕ್ಯವು ಭಾಷ್ಯದಲ್ಲಿ ಸಾಕಾಂಕ್ಷವಾಗಿಯೂ ಇದೆ. ವಾರ್ತಿಕದಲ್ಲಿ ಉದಾಹರಿಸಿಕೊಂಡಿರುವ ಈ ವಾಕ್ಯವನ್ನು ಯಾರೋ ಇಲ್ಲಿ ಸೇರಿಸಿಕೊಂಡಿರಬೇಕೆಂದು ತೋರುತ್ತದೆ.

ವದರಿಂದ ವಿಚಾರವನ್ನು ಮಾಡಬೇಕು. ಆದ್ದರಿಂದ ವೇದವಾಕ್ಯಗಳ ಅರ್ಥ ವನ್ನು ನಿರ್ಣಯಿಸುವದಕ್ಕಾಗಿ ವಿಚಾರಮಾಡುವದು ಯುಕ್ತವು. ಮೋಕ್ಷ ವಾದಿಗಳಲ್ಲಿ ವಿರುದ್ಧವಾದ ಅಭಿಪ್ರಾಯವಿರುವದರಿಂದಲೂ (ವಿಚಾರಮಾಡ ತಕ್ಕದ್ದು ಯುಕ್ತವು. ಹೇಗೆಂದರೆ): ಮೋಕ್ಷವಾದಿಗಳಾದ ಸಾಂಖ್ಯರೂ ವೈ ಶೇಷಿಕರೂ ಮೋಕ್ಷದಲ್ಲಿ ಸಂವೇದ್ಯವಾದ ಸುಖವು ಇರುವದಿಲ್ಲ ಎಂದು ಅರಿತಿರು ತ್ತಾರೆ; ಇತರರು ನಿರತಿಶಯವಾದ (ಮೋಕ್ಷ)ಸುಖವು ತನಗೇ ತಿಳಿದುಬರು ತ್ತಿದೆ ಎಂದು (ಅಭಿಪ್ರಾಯಪಡುತ್ತಾರೆ.)[1]

## ಪೂರ್ವಪಕ್ಷ: ಮೋಕ್ಷಸುಖವು ಸಂವೇದ್ಯವೇ

(ಭಾಷ್ಯ)

೧೩೭. ಕಿಂ ತಾವದ್ಯುಕ್ತಮ್? ಆನನ್ದಾದಿಶ್ರವಣಾತ್ "ಜಕ್ಷತ್ಕ್ರೀ ಡನ್ ರಮಮಾಣಃ" (ಛಾಂ. ೮-೧೨-೩), "ಸ ಯದಿ ಪಿತೃಲೋಕಕಾಮೋ ಭವತಿ" (ಛಾಂ. ೮-೨-೧), "ಯಃ ಸರ್ವಜ್ಞಃ ಸರ್ವವಿತ್" (ಮು೦. ೧-೧-೯) "ಸರ್ವಾನ್ ಕಾಮಾನ್ ಸಮಶ್ನುತೇ" (ತೈ. ೨-೫) ಇತ್ಯಾದಿಶ್ರುತಿಭ್ಯೋ ಮೋಕ್ಷೇ ಸುಖಂ ಸಂವೇದ್ಯಮಿತಿ । ನನು ಏಕತ್ವೇ ಕಾರಕವಿಭಾಗಾಭಾವಾತ್ ವಿಜ್ಞಾನಾನುಪಪತ್ತಿಃ । ಕ್ರಿಯಾಯಾಶ್ಚ ಅನೇಕಕಾರಕಸಾಧ್ಯತ್ವಾತ್, ವಿಜ್ಞಾ ನಸ್ಯ ಚ ಕ್ರಿಯಾತ್ವಾತ್ । ನೈಷ ದೋಷಃ । ಶಬ್ದಪ್ರಾಮಾಣ್ಯಾತ್ ಭವೇದ್ವಿ ಜ್ಞಾನಮ್ ಆನನ್ದವಿಷಯೇ । "ವಿಜ್ಞಾನಮಾನನ್ದಮ್" ಇತ್ಯಾದೀನಿ ಆನನ್ದ ಸ್ವರೂಪಸ್ಯ ಅಸಂವೇದ್ಯತ್ವೇ ಅನುಪಪನ್ನಾನಿ ವಚನಾನಿ ಇತ್ಯವೋಚಾಮ । ನನು ವಚನೇನಾಪಿ ಅಗ್ನೇಃ ಶೈತ್ಯಮ್ ಉದಕಸ್ಯ ಚ ಔಷ್ಣ್ಯಂ ನ ಕ್ರಿಯತ ಏವ । ಜ್ಞಾಪಕತ್ವಾತ್ ವಚನಾನಾಮ್ । ನ ಚ ದೇಶಾನ್ತರೇಽಗ್ನಿಃ ಶೀತಃ ಇತಿ ಶಕ್ಯತೇ ಜ್ಞಾಪಯಿತುಮ್ ಅಗಮ್ಯೇ ವಾ ದೇಶಾನ್ತರೇ ಉಷ್ಣಮುದಕಮಿತಿ । ನ । ಪ್ರತ್ಯಗಾತ್ಮನಿ ಆನನ್ದವಿಜ್ಞಾನದರ್ಶನಾತ್ । ನ 'ವಿಜ್ಞಾನಮಾನನ್ದಮ್' ಇತ್ಯೇವಮಾದೀನಾಂ ವಚನಾನಾಂ ಶೀತೋಽಗ್ನಿರಿತ್ಯಾದಿವಾಕ್ಯವತ್ ಪ್ರತ್ಯಕ್ಷಾದಿ ವಿರುದ್ಧಾರ್ಥಪ್ರತಿಪಾದಕತ್ವಮ್ । ಅನುಭೂಯತೇ ತ್ವವಿರುದ್ಧಾರ್ಥತಾ । ಸುಖ್ಯಹಮಿತಿ ಸುಖಾತ್ಮಕಮಾತ್ಮಾನಂ ಸ್ವಯಮೇವ ವೇದಯತೇ । ತಸ್ಮಾತ್ ಸುತರಾಂ ಪ್ರತ್ಯಕ್ಷಾವಿರುದ್ಧಾರ್ಥತಾ । ತಸ್ಮಾತ್ ಆನನ್ದಂ ಬ್ರಹ್ಮ ವಿಜ್ಞಾ ನಾತ್ಮಕಂ ಸತ್ ಸ್ವಯಮೇವ ವೇದಯತೇ । ತಥಾ ಆನನ್ದಪ್ರತಿಪಾದಿಕಾಃ ಶ್ರುತಯಃ ಸಮಞ್ಜಸಾಃ ಸ್ಯುಃ "ಜಕ್ಷತ್ ಕ್ರೀಡನ್ ರಮಮಾಣಃ" (ಛಾಂ. ೮-೧೨-೩) ಇತ್ಯೇವಮಾದ್ಯಾಃ ಪೂರ್ವೋಕ್ತಾಃ ॥

---

1. ವಸ್ತುವಿನಲ್ಲಿ ವಿಕಲ್ಪವಿರಲಾರದಾದ್ದರಿಂದ ಈ ಎರಡು ವಿರುದ್ಧಮತಗಳಲ್ಲಿ ಒಂದೇ ಸರಿಯಾಗಿರಬಹುದಾಗಿದೆ.

(ಭಾಷ್ಯಾರ್ಥ)

ಮೊದಲು ಯಾವದು ಯುಕ್ತ(ವಾಗಿ ತೋರುತ್ತದೆ)? ಆನಂದವೇ ಮುಂತಾದವುಗಳನ್ನು "ನಗುತ್ತಾ ಆಡುತ್ತಾ ರಮಿಸುತ್ತಾ" (ಛಾಂ. ೮-೧೨-೩) "ಅವನು ಪಿತೃಲೋಕಕಾಮನಾದರೆ ...." (ಛಾಂ. ೮-೨-೧), "ಯಾವನು ಸರ್ವಜ್ಞನೋ, ಸರ್ವವಿದನೋ" (ಮುಂ. ೧-೧-೯), "ಸರ್ವಕಾಮಗಳನ್ನೂ ಪಡೆದುಕೊಳ್ಳುತ್ತಾನೆ" (ತೈ. ೨-೫) ಎಂದು ಮುಂತಾದ ಶ್ರುತಿಗಳು ಹೇಳಿರುವದರಿಂದ ಮೋಕ್ಷದಲ್ಲಿ ಸುಖವು ಅರಿಯಲ್ಪಡತಕ್ಕದ್ದೇ.

(ಸಿದ್ಧಾಂತಿ) :- ಏಕತ್ವವಿರುವಲ್ಲಿ ಕಾರಕಗಳ ವಿಂಗಡವಿರುವದಿಲ್ಲವಾಗಿ ಅರಿಯುವದು ಆಗಲಾರದಲ್ಲ! ಕ್ರಿಯೆಯು ಅನೇಕಕಾರಕಗಳಿಂದ ಆಗತಕ್ಕದ್ದು, ವಿಜ್ಞಾನವೆಂಬುದೂ ಕ್ರಿಯೆಯೇ (ಅಲ್ಲವೆ)?

(ಪೂರ್ವಪಕ್ಷಿ) :- ಇದೇನೂ ದೋಷವಲ್ಲ. (ಏಕೆಂದರೆ) ಶಬ್ದದ ಪ್ರಾಮಾಣ್ಯದಿಂದ ಆನಂದದ ವಿಷಯದಲ್ಲಿ ವಿಜ್ಞಾನವಾಗಬಹುದಾಗಿದೆ.[1] 'ವಿಜ್ಞಾನವೂ ಆನಂದವೂ' ಮುಂತಾದ ವಚನಗಳು ಆನಂದವು ಅಸಂವೇದ್ಯವೆಂದಾದರೆ ಅಯುಕ್ತವಾಗುವವು ಎಂದು ಹೇಳಿಯೇ ಇರುತ್ತೇವಷ್ಟೆ.

(ಸಿದ್ಧಾಂತಿ) :- ವಚನವುಕೂಡ ಬೆಂಕಿಗೆ ತಂಪನ್ನೂ ನೀರಿಗೆ ಬಿಸಿಯನ್ನೂ ಉಂಟುಮಾಡಲಾರದಲ್ಲ! ಏಕೆಂದರೆ **ವಚನಗಳು ಜ್ಞಾಪಕವಾಗಿರುತ್ತವೆ.** ಮತ್ತೊಂದು ದೇಶದಲ್ಲಿ ಬೆಂಕಿಯು ತಣ್ಣಗಿರುತ್ತದೆಯೆಂದಾಗಲಿ, (ನಾವು) ಹೋಗುವದಕ್ಕೆ ಅಶಕ್ಯವಾದ ಮತ್ತೊಂದು ದೇಶದಲ್ಲಿ ನೀರು ಬಿಸಿಯಾಗಿರುವದೆಂದಾಗಲಿ (ವಚನವು) ತಿಳಿಸಿಕೊಡುವದಕ್ಕಾಗಲಾರದಷ್ಟೆ?[2]

(ಪೂರ್ವಪಕ್ಷಿ) :- ಹಾಗಲ್ಲ. ಏಕೆಂದರೆ ಪ್ರತ್ಯಗಾತ್ಮನಲ್ಲಿ ಆನಂದದ ಅರಿವು (ಉಂಟಾಗುವದು) ಕಂಡುಬಂದಿರುತ್ತದೆ. 'ವಿಜ್ಞಾನವೂ ಆನಂದವೂ' (ಆಗಿರುವದು ಬ್ರಹ್ಮವು)' ಮುಂತಾದ ವಚನಗಳು 'ಬೆಂಕಿಯು ತಣ್ಣಗಿದೆ' ಮುಂತಾದ ವಾಕ್ಯಗಳಂತೆ ಪ್ರತ್ಯಕ್ಷಾದಿಗಳಿಗೆ ವಿರುದ್ಧವಾದ ಅರ್ಥ(ವುಳ್ಳವು) ಎಂದು ಹೇಳುವದು ಸರಿಯಲ್ಲ. (ಏಕೆಂದರೆ) ಅವಿರುದ್ಧವಾಗಿರುವ ಅರ್ಥವಿದೆ ಎಂಬುದು ಅನುಭವದಲ್ಲಿಯೇ ಇದೆ. (ಹೇಗೆಂದರೆ) 'ನಾನು ಸುಖಿಯು'

---

1. ಮೋಕ್ಷದಲ್ಲಿ ಮತ್ತೇನನ್ನೂ ಅರಿಯುವದಕ್ಕಾಗವೆಂಬುದಕ್ಕೆ ನೀವು ಹೇಳಿದ ಯುಕ್ತಿಯು ಹೊಂದಬಹುದು, ಆದರೆ ಬ್ರಹ್ಮವು ವಿಜ್ಞಾನವೂ ಆನಂದವೂ ಆಗಿದೆ ಎಂಬ ವಚನದ ಪ್ರಾಮಾಣ್ಯದಿಂದ ಬ್ರಹ್ಮಸ್ವರೂಪನಾಗಿರುವ ಮುಕ್ತನು ತನ್ನ ಆನಂದವನ್ನು ಅನುಭವಿಸುತ್ತಾನೆಂದೇ ತಿಳಿಯಬೇಕಾಗುತ್ತದೆ.

2. ಏಕೆಂದರೆ ವಸ್ತುವಿನ ಸ್ವಭಾವವು ಎಲ್ಲಾ ದೇಶಕಾಲಗಳಲ್ಲಿಯೂ ಒಂದೇ ಆಗಿರುತ್ತದೆ.

ಎಂದು ತಾನು ಸುಖಾತ್ಮನಾಗಿರುವದನ್ನು ತಾನೇ ಅನುಭವಿಸುತ್ತಿರುತ್ತಾನೆ. ಆದ್ದರಿಂದ (ವಾಕ್ಯಗಳಿಗೆ) ಪ್ರತ್ಯಕ್ಷಕ್ಕೆ ಅವಿರುದ್ಧವಾದ ಅರ್ಥವಿರುವದೆಂಬುದು ಇನ್ನೂ (ಬಲವಾಯಿತು)[1] ಆದ್ದರಿಂದ ಆನಂದ(ಸ್ವರೂಪವಾಗಿರುವ) ಬ್ರಹ್ಮವು ವಿಜ್ಞಾನಾತ್ಮಕವಾಗಿರುವದರಿಂದ ತಾನೇ (ಆನಂದವನ್ನು) ಅನುಭವಿಸುತ್ತದೆ. ಹೀಗಾದರೆ 'ನಗುತ್ತಾ ಆಡುತ್ತಾ ರಮಿಸುತ್ತಾ' (ಛಾಂ. ೮-೧೨-೩) ಮುಂತಾದ (ಮೇಲೆ) ಹೇಳಿರುವ ಆನಂದವನ್ನು ತಿಳಿಸುವ ಶ್ರುತಿಗಳು ಸಮಂಜಸವೂ ಆಗುವವು.

## ಸಿದ್ಧಾಂತ: ವಿಜ್ಞಾನವೂ ಆನಂದವೂ ಬ್ರಹ್ಮದ ಸ್ವರೂಪವೇ

(ಭಾಷ್ಯ)

೧೩೮. ನ । ಕಾರ್ಯಕರಣಾಭಾವೇ ಅನುಪಪತ್ತೇರ್ವಿಜ್ಞಾನಸ್ಯ । ಶರೀರವಿಯೋಗೋ ಹಿ ಮೋಕ್ಷ ಆತ್ಯನ್ತಿಕಃ । ಶರೀರಾಭಾವೇ ಚ ಕರಣಾನುಪಪತ್ತಿಃ । ಆಶ್ರಯಾಭಾವಾತ್ । ತತಶ್ಚ ವಿಜ್ಞಾನಾನುಪಪತ್ತಿಃ । ಅಕಾರ್ಯಕರಣತ್ವಾತ್ । ದೇಹಾದ್ಯಭಾವೇ ಚ ವಿಜ್ಞಾನೋತ್ಪತ್ತೌ ಸರ್ವೇಷಾಂ ಕಾರ್ಯಕರಣೋಪಾದಾನಾನರ್ಥಕ್ಯಪ್ರಸಙ್ಗಃ । ಏಕತ್ವವಿರೋಧಾಚ್ಚ । ಪರಂ ಚೇತ್ ಬ್ರಹ್ಮ ಆನನ್ದಾತ್ಮಕಮಾತ್ಮಾನಂ ನಿತ್ಯವಿಜ್ಞಾನತ್ವಾತ್ ನಿತ್ಯಮೇವ ವಿಜಾನೀಯಾತ್ । ತನ್ನ ಸಂಸಾರ್ಯಪಿ ಸಂಸಾರವಿನಿರ್ಮುಕ್ತಃ ಸ್ವಾಭಾವ್ಯಂ ಪ್ರತಿಪದ್ಯೇತ । ಜಲಾಶಯೇ ಇವ ಉದಕಾಞ್ಜಲಿಃ ಕ್ಷಿಪ್ತೋ ನ ಪೃಥಕ್ತ್ವೇನ ವ್ಯವತಿಷ್ಠತೇ ಆನನ್ದಾತ್ಮಕಬ್ರಹ್ಮವಿಜ್ಞಾನಾಯ । ತದಾ ಮುಕ್ತ ಆನನ್ದಾತ್ಮಕಮಾತ್ಮಾನಂ ವೇದಯತ ಇತ್ಯೇತತ್ ಅನರ್ಥಕಂ ವಾಕ್ಯಮ್ । ಅಥ ಬ್ರಹ್ಮಾನನ್ದಮ್ ಅನ್ಯಃ ಸನ್ ಮುಕ್ತೋ ವೇದಯತೇ ಪ್ರತ್ಯಗಾತ್ಮಾನಂ ಚ ಅಹಮಸ್ಮಿ ಆನನ್ದಸ್ವರೂಪ ಇತಿ । ತದಾ ಏಕತ್ವವಿರೋಧಃ । ತಥಾ ಚ ಸತಿ ಸರ್ವಶ್ರುತಿವಿರೋಧಃ । ತೃತೀಯಾ ಚ ಕಲ್ಪನಾ ನೋಪಪದ್ಯತೇ । ಕಿಂ ಚಾನ್ಯತ್ । ಬ್ರಹ್ಮಣಶ್ಚ ನಿರನ್ತರಾತ್ಮಾನನ್ದವಿಜ್ಞಾನೇ ವಿಜ್ಞಾನಾವಿಜ್ಞಾನಕಲ್ಪನಾನರ್ಥಕ್ಯಮ್ । ನಿರನ್ತರಂ ಚೇತ್ ಆತ್ಮಾನನ್ದವಿಷಯಂ ಬ್ರಹ್ಮಣೋ ವಿಜ್ಞಾನಮ್, ತದೇವ ತಸ್ಯ ಸ್ವಭಾವ ಇತಿ ಆತ್ಮಾನನ್ದಂ ವಿಜಾನಾತಿ ಇತಿ ಕಲ್ಪನಾ ಅನುಪಪನ್ನಾ । ಅತದ್ವಿಜ್ಞಾನಪ್ರಸಙ್ಗೇ ಹಿ ಕಲ್ಪನಾಯಾಃ ಅರ್ಥವತ್ತ್ವಮ್, ಯಥಾ ಆತ್ಮಾನಂ ಪರಂ ಚ ವೇತ್ತಿ ಇತಿ । ನ ಹಿ ಇಷ್ವಾದ್ಯಾಸಕ್ತಮನಸಃ ನೈರನ್ತರ್ಯೇಣ ಇಷುಜ್ಞಾನಾಜ್ಞಾನಕಲ್ಪನಾಯಾ ಅರ್ಥವತ್ತ್ವಮ್ । ಅಥ

---

1. ಇಲ್ಲಿ ಪೂರ್ವಪಕ್ಷದಲ್ಲಿ ಅಹಂಪ್ರತ್ಯಯಗೋಚರನಾದ ಆತ್ಮನನ್ನು ಉದಾಹರಣೆಗೆ ತೆಗೆದುಕೊಂಡಿದೆ. 'ನಾನು ಸುಖಿಯು' ಎಂಬ ಅನುಭವದಲ್ಲಿ ತನ್ನನ್ನೇ ತಾನು ಅನುಭವಿಸುತ್ತಾನೆಂಬ ವಿರುದ್ಧಾರ್ಥವನ್ನು ಪೂರ್ವಪಕ್ಷಿಯು ಒಪ್ಪಿರುತ್ತಾನೆಂಬುದನ್ನು ಲಕ್ಷಿಸಬೇಕು.

ವಿಚ್ಛಿನ್ನಮ್ ಆತ್ಮಾನನ್ದಂ ವಿಜಾನಾತಿ । ವಿಜ್ಞಾನಸ್ಯ ಆತ್ಮವಿಜ್ಞಾನಚ್ಛಿದ್ರೇ ಅನ್ಯವಿಷಯತ್ವಪ್ರಸಙ್ಗಃ । ಆತ್ಮನಶ್ಚ ವಿಕ್ರಿಯಾವತ್ತ್ವಮ್ । ತತಶ್ಚ ಅನಿತ್ಯತ್ವ ಪ್ರಸಙ್ಗಃ । ತಸ್ಮಾತ್ 'ವಿಜ್ಞಾನಮಾನನ್ದಮ್' ಇತಿ ಸ್ವರೂಪಾನ್ವಾಖ್ಯಾಪನ ಪರೈವ ಶ್ರುತಿಃ, ನಾತ್ಮಾನನ್ದಸಂವೇದ್ಯತ್ವಾರ್ಥಾ ॥

(ಭಾಷ್ಯಾರ್ಥ)

ಹಾಗಲ್ಲ. ಏಕೆಂದರೆ ಕಾರ್ಯಕರಣಗಳಿಲ್ಲದ್ದರಿಂದ ಅರಿವೇ ಆಗುವ ಹಾಗಿರುವದಿಲ್ಲ. (ಇದರ ವಿವರ): ಶರೀರದಿಂದಗಲುವದಲ್ಲವೆ, ಆತ್ಯಂತಿಕ ವಾದ ಮೋಕ್ಷವು ? ಶರೀರವು ಇಲ್ಲದಿದ್ದರೆ ಕರಣಗಳೂ ಇರುವಂತಿಲ್ಲ; ಏಕೆಂದರೆ (ಅವುಗಳಿಗೆ) ಆಶ್ರಯ(ವಾದ ದೇಹವೇ) ಇರುವದಿಲ್ಲ. ಹೀಗಿರುವದರಿಂದ ದೇಹೇಂದ್ರಿಯಗಳಿಲ್ಲದ್ದರಿಂದ (ಮುಕ್ತನಿಗೆ) ಅರಿವು ಆಗುವಹಾಗಿರುವದಿಲ್ಲ. ದೇಹಾದಿಗಳು ಇಲ್ಲದೆಯೇ ಅರಿವು ಉಂಟಾಗುವದಾದರೆ ಎಲ್ಲರೂ ಕಾರ್ಯ ಕರಣಗಳನ್ನು ಸ್ವೀಕರಿಸುವದು ವ್ಯರ್ಥವೆಂದಾಗುವದು.

ಏಕತ್ವಕ್ಕೆ ವಿರುದ್ಧವಾಗಿರುವದರಿಂದಲೂ (ವಿಜ್ಞಾನವು ಆಗುವಂತಿಲ್ಲ). (ಅರಿಯತಕ್ಕದ್ದು) ಪರಬ್ರಹ್ಮವಾದರೆ, (ಅದು) ಆನಂದಸ್ವರೂಪವಾಗಿರುವ ತನ್ನನ್ನು ನಿತ್ಯವಿಜ್ಞಾನವುಳ್ಳದ್ದಾದ್ದರಿಂದ ಯಾವಾಗಲೂ ಅರಿಯುತ್ತಲೇ ಇರ ಬೇಕಾಗುವದು. ಆಗ ಸಂಸಾರಿಯೂ ಸಂಸಾರದಿಂದ ಮುಕ್ತನಾಗಿ ಸ್ವಾಭಾವ್ಯ ವನ್ನು ಅರಿಯುವದಿಲ್ಲವೆಂದಾಗುವದು [1] ಜಲಾಶಯದಲ್ಲಿ ಹಾಕಿದ ಬೊಗಸೆಯ ನೀರು (ಹೇಗೆ ಬೇರೆಯಾಗಿರುವದಿಲ್ಲವೋ) ಹಾಗೆ (ಜೀವನು ಆಗ) ಆನಂದಾ ತ್ಮಕಬ್ರಹ್ಮವನ್ನು ಅರಿಯುವದಕ್ಕೆ ಬೇರೆಯಾಗಿ ಇದ್ದುಕೊಂಡಿರುವದಿಲ್ಲ. ಆಗ ಮುಕ್ತನು ಆನಂದಾತ್ಮಕನಾದ ತನ್ನನ್ನು ಅರಿಯುತ್ತಾನೆ ಎಂಬ ವಾಕ್ಯಕ್ಕೆ ಅರ್ಥವಿರುವದಿಲ್ಲ.[2] ಹೀಗಲ್ಲದೆ ಮುಕ್ತನು (ಬ್ರಹ್ಮಕ್ಕಿಂತ) ಬೇರೆಯಾಗಿ

---

1. ಏಕೆಂದರೆ ಸಂಸಾರವೆಂಬುದೇ ಇರುವದಿಲ್ಲ, ಸಂಸಾರದಶೆಯಲ್ಲಿಯೂ ಬ್ರಹ್ಮವು ತನ್ನನ್ನು ತಾನು ಅರಿಯುತ್ತಲೇ ಇರುವದರಿಂದ ಸಂಸಾರದಲ್ಲಿ ಅರಿಯುವದಿಲ್ಲವೆಂದೂ ಮುಕ್ತಿಯಲ್ಲಿ ಅರಿಯುವನೆಂಬುದೂ ಸುಳ್ಳಾಗುವದು- ಎಂದರ್ಥ. ಇಲ್ಲಿ "ತನ್ನ। ಸಂಸಾರ್ಯಪಿ" ಎಂದು ಛೇದವನ್ನು ಮಾಡಿಕೊಂಡು ವ್ಯಾಖ್ಯಾನದಲ್ಲಿ ಬೇರೆ ವಿಧವಾಗಿ ಅರ್ಥವನ್ನು ಮಾಡಿದೆ, ಅದಕ್ಕೆ ಭಾಷ್ಯವು ಹೊಂದುಗೆಯಾಗಿಲ್ಲವೆಂದು ನಮಗೆ ತೋರುತ್ತದೆ.

2 ಸಂಸಾರಿಯೂ ಬ್ರಹ್ಮವೇ ಆಗಿರುವದರಿಂದಲೂ ಬ್ರಹ್ಮವು ತನ್ನನ್ನು ಅರಿಯುತ್ತ ಲೇ ಇರುವದರಿಂದಲೂ ಸಂಸಾರಿಯು ಮುಕ್ತನಾಗಿ ಆತ್ಮಾನಂದವನ್ನು ಅರಿಯುವನು ಎನ್ನುವದಕ್ಕಿಲ್ಲ ಎಂದು ಹಿಂದೆ ಹೇಳಿತ್ತು; ಈಗ ಮುಕ್ತನು ಬ್ರಹ್ಮವೇ ಆಗಿರುವದರಿಂದ ಮುಕ್ತನು ಅರಿಯುತ್ತಾನೆ ಎನ್ನುವದಕ್ಕಿಲ್ಲ ಎಂದು ಹೇಳಿದೆ.

ಬ್ರಹ್ಮಾನಂದವನ್ನು ಅರಿಯುತ್ತಾನೆ, ನಾನು ಆನಂದಸ್ವರೂಪನಾಗಿರುತ್ತೇನೆ ಎಂದು ತನ್ನ ಆತ್ಮನನ್ನೂ ಅರಿಯುತ್ತಾನೆ- ಎನ್ನುವದಾದರೆ, ಆಗ ಏಕತ್ವಕ್ಕೆ ವಿರೋಧವಾಗುತ್ತದೆ ; ಹಾಗಾದರೆ ಎಲ್ಲಾ ಶ್ರುತಿಗಳಿಗೂ ವಿರೋಧವಾಗುವದು. (ಈ ಎರಡನ್ನು ಬಿಟ್ಟರ)[1] ಮೂರನೆಯ ಕಲ್ಪನೆಯು ಹೊಂದುವ ಹಾಗೆಯೇ ಇಲ್ಲ.

ಇನ್ನೂ ಒಂದು ಬ್ರಹ್ಮವು ನಿರಂತರವಾಗಿ ತನ್ನ ಆನಂದವನ್ನು ಅರಿಯುವದಾದರೆ ಅರಿಯುವದು, ಅರಿಯದಿರುವದು- ಎಂಬ ಕಲ್ಪನೆಯು ವ್ಯರ್ಥವಾಗುವದು.[2] (ಇದರ ವಿವರ) : ಬ್ರಹ್ಮಕ್ಕೆ ಆನಂದವಿಷಯದ ವಿಜ್ಞಾನವು ಎಡೆಬಿಡದೆ (ಇದ್ದೇ) ಇದ್ದರೆ, ಅದೇ ಅದರ ಸ್ವಭಾವವಾಗಿರುವದರಿಂದ ತನ್ನ ಆನಂದವನ್ನು ಅರಿತುಕೊಳ್ಳುತ್ತದೆ ಎಂಬ ಕಲ್ಪನೆಯು ಅಯುಕ್ತವಾಗುವದು. ಅದನ್ನು ಅರಿಯದೆ ಇರುವ ಪ್ರಸಂಗದಲ್ಲಿಯೇ ಅಲ್ಲವೆ, (ಆ) ಕಲ್ಪನೆಯು ಸಾರ್ಥಕವಾಗುವದು ?[3] ಉದಾಹರಣೆಗೆ ತನ್ನನ್ನೂ ಮತ್ತೊಬ್ಬನನ್ನೂ ಅರಿಯುತ್ತಾನೆ ಎಂಬ (ಕಲ್ಪನೆಯು ಈ ಪ್ರಸಂಗವಿರುವದರಿಂದ ಸಾರ್ಥಕವಾಗಿರುತ್ತದೆ).[4] ಎಡೆಬಿಡದೆ ಬಾಣವೇ ಮುಂತಾದದ್ದರಲ್ಲಿಯೇ ಆಸಕ್ತವಾಗಿರುವ ಮನಸ್ಸುಳ್ಳವನಿಗೆ ಬಾಣದ ಜ್ಞಾನ, ಅಜ್ಞಾನ- ಇವುಗಳನ್ನು ಕಲ್ಪಿಸುವದರಲ್ಲಿ ಅರ್ಥವೇನೂ ಇಲ್ಲವಷ್ಟೆ ?[5] ಹೀಗಲ್ಲದೆ (ನಡುವೆ) ಬಿಟ್ಟು,ಬಿಟ್ಟು ತನ್ನ ಆನಂದವನ್ನು (ಬ್ರಹ್ಮವು) ಅರಿಯುತ್ತದೆ ಎನ್ನುವದಾದರೆ, ವಿಜ್ಞಾನವು ಆತ್ಮನನ್ನರಿಯದೆ ಇರುವ ಸಂಧಿಯಲ್ಲಿ (ಅದಕ್ಕೆ) ಮತ್ತೊಂದು ವಿಷಯವಿರಬಹುದಾಗುವದು,[6] ಆತ್ಮನು ವಿಕಾರವುಳ್ಳವನೆಂದಾಗುವದು,[7] ಆದರಿಂದ (ಅವನು)

---

1. ಬ್ರಹ್ಮವು ಅರಿಯುತ್ತದೆ, ಸಂಸಾರಿಯು ಮುಕ್ತನಾದಾಗ ಅರಿಯುತ್ತಾನೆ- ಎಂಬ ಎರಡು ಕಲ್ಪಗಳನ್ನು ಬಿಟ್ಟರೆ ಬೇರೆಯ ಕಲ್ಪವೇ ಇರುವಂತಿಲ್ಲ.

2. ಬ್ರಹ್ಮವು ಈಗ ಅರಿಯುತ್ತದೆ, ಆಗ ಅರಿಯುವದಿಲ್ಲ ಎಂಬ ಪ್ರಸಕ್ತಿಯೇ ಇರುವದಿಲ್ಲ.

3. ಅರಿಯದೆ ಇರುವದೂ ಉಂಟಾದರೆ ಈಗ ಅರಿಯುತ್ತದೆ ಎಂದು ಹೇಳುವದು ಯುಕ್ತ ; ಹಾಗಿಲ್ಲದಿದ್ದರೆ ಬೆಟ್ಟವು ನಿಂತಿದೆ ಎಂಬಂತೆ ಔಪಚಾರಿಕಪ್ರಯೋಗವಾಗುತ್ತದೆ.

4. ನಿದ್ರೆಯಲ್ಲಿ ಯಾರನ್ನೂ ಅರಿಯುವದಿಲ್ಲ, ಆದ್ದರಿಂದ ಎಚ್ಚರವಾದಾಗ ತನ್ನನ್ನೂ ಮತ್ತೊಬ್ಬರನ್ನೂ ಅರಿಯುತ್ತಾನೆ ಎಂದು ಹೇಳುವದು ಸಾರ್ಥಕ.

5 ಏಕೆಂದರೆ ಬಾಣದ ಅಜ್ಞಾನವು ಅವನಿಗೆ ಇಲ್ಲವೇ ಇಲ್ಲ.

6. ಆಗ ಅದು ಅದ್ವಿತೀಯವಲ್ಲವೆಂದಾಗುವದು.

7. ಅರಿಯುವದು, ಅರಿಯದಿರುವದು, ಅನೇಕವಿಷಯಗಳನ್ನು ಒಂದೊಂದಾಗಿ ಅರಿಯುವದು -ಎಂಬ ವಿಕಾರಗಳಿಂದ ಆತ್ಮನೂ ಅಂತಃಕರಣದಂತೆ ಮಾರ್ಪಡುವನೆಂದಾಗುವದು.

ಅನಿತ್ಯನೆಂದೂ ಆಗುವದು.[1] ಆದ್ದರಿಂದ "ವಿಜ್ಞಾನವೂ ಆನಂದವೂ" ಎಂಬ ಶ್ರುತಿಯು ಸ್ವರೂಪವನ್ನು ಅನುವಾದಮಾಡುವದೇ ಹೊರತು ಆತ್ಮಾನಂದವು ಅರಿಯಲ್ಪಡತಕ್ಕದ್ದೆಂದು ಹೇಳುವದಕ್ಕಾಗಿ ಬಂದದ್ದಲ್ಲ.

## ಆನಂದವು ಸ್ವರೂಪವೇ ಆದರೆ ಭೇದಶ್ರುತಿಗಳಿಗೆ ಗತಿ

(ಭಾಷ್ಯ)

೧೩೯. "ಜಕ್ಷತ್ ಕ್ರೀಡನ್" (ಛಾಂ. ೮-೧೨-೩) ಇತ್ಯಾದಿಶ್ರುತಿವಿರೋಧೋಽಸಂವೇದ್ಯತ್ವೇ ಇತಿ ಚೇತ್ । ನ । ಸರ್ವಾತ್ಮೈಕತ್ವೇ ಯಥಾಪ್ರಾಪ್ತಾನುವಾದಿತ್ವಾತ್ । ಮುಕ್ತಸ್ಯ ಸರ್ವಾತ್ಮಭಾವೇ ಸತಿ ಯತ್ರ ಕ್ವಚಿತ್ ಯೋಗಿಷು ದೇವೇಷು ವಾ ಜಕ್ಷಣಾದಿ ಪ್ರಾಪ್ತಮ್, ತದ್ ಯಥಾಪ್ರಾಪ್ತಮೇವ ಅನೂದ್ಯತೇ ತತ್ ತಸ್ಯೈವ ಸರ್ವಾತ್ಮಭಾವಾತ್ ಇತಿ ಸರ್ವಾತ್ಮಭಾವಮೋಕ್ಷಸ್ತುತಯೇ । ಯಥಾಪ್ರಾಪ್ತಾನುವಾದಿತ್ವೇ ದುಃಖಿತ್ವಮಪಿ ಇತಿ ಚೇತ್ । ಯೋಗ್ಯಾದಿಷು ಯಥಾಪ್ರಾಪ್ತಜಕ್ಷಣಾದಿವತ್ ಸ್ಥಾವರಾದಿಷು ಯಥಾಪ್ರಾಪ್ತದುಃಖಿತ್ವಮಪಿ ಇತಿ ಚೇತ್ । ನ । ನಾಮರೂಪಕೃತಕಾರ್ಯಕರಣೋಪಾಧಿಸಂಪರ್ಕಜನಿತಭ್ರಾನ್ತ್ಯಧ್ಯಾರೋಪಿತತ್ವಾತ್ ಸುಖಿತ್ವದುಃಖಿತ್ವಾದಿವಿಶೇಷಸ್ಯ ಇತಿ ಪರಿಹೃತಮೇತತ್ ಸರ್ವಮ್ । ವಿರುದ್ಧಶ್ರುತೀನಾಂ ಚ ವಿಷಯಮ್ ಅವೋಚಾಮ । ತಸ್ಮಾತ್ "ಏಷೋಽಸ್ಯ ಪರಮ ಆನನ್ದಃ" (೪-೩-೩೨) ಇತಿವತ್ ಸರ್ವಾಣಿ ಆನನ್ದವಾಕ್ಯಾನಿ ದ್ರಷ್ಟವ್ಯಾನಿ ॥

(ಭಾಷ್ಯಾರ್ಥ)

(ಆಕ್ಷೇಪ) :– "ನಗುತ್ತಾ ಆಡುತ್ತಾ" (ಛಾಂ. ೮-೧೨-೩) ಮುಂತಾದ ಶ್ರುತಿಗಳಿಗೆ, (ಆನಂದವು) ಅಸಂವೇದ್ಯವಾದರೆ, ವಿರೋಧವಾಗುವದಲ್ಲ ![2]

(ಪರಿಹಾರ) :– ಹಾಗಲ್ಲ. ಏಕೆಂದರೆ ಸರ್ವಾತ್ಮವೊಂದೇ ಇರುವಲ್ಲಿ ಯಥಾಪ್ರಾಪ್ತವಾದ (ಜಕ್ಷಣಾದಿಗಳನ್ನು ಇಲ್ಲಿ) ಅನುವಾದಮಾಡಿರುತ್ತದೆ. (ಇದರ ವಿವರ) : ಮುಕ್ತನಿಗೆ ಸರ್ವಾತ್ಮಭಾವವು (ಪ್ರಾಪ್ತ)ವಾಗಿರಲಾಗಿ, ಯೋಗಿಗಳಲ್ಲಿ ಅಥವಾ ದೇವತೆಗಳಲ್ಲಿ (ಈ) ನಗುವದೇ ಮುಂತಾದ (ಆನಂದವು) ಎಲ್ಲಿಯಾದರೂ ಬಂದೊದಗಿರುವದಲ್ಲ, ಅದನ್ನು ಬಂದೊದಗಿದಂತೆಯೇ "ಅದು ಆ (ಮುಕ್ತ)ನದೇ, ಏಕೆಂದರೆ (ಅವನಿಗೆ) ಸರ್ವಾತ್ಮಭಾವವು (ಬಂದಿರುತ್ತದೆ)"

1. ವಿಕಾರವುಳ್ಳದ್ದೂ ನಿತ್ಯವಾಗಿರಬಹುದು ಎಂಬುದು ಪರಿಣಾಮಿನಿತ್ಯದ ವಿಷಯ ; ಪರಿಣಾಮಿನಿತ್ಯವೂ ಕ್ರಮಕ್ರಮವಾಗಿ ನಾಶವಾಗುವದೆಂಬುದು ಪ್ರಸಿದ್ಧ.

2. ಅಧ್ಯಾತ್ಮವಿದ್ಯೆಯ ಫಲವಾದ ಮುಕ್ತಿಯಲ್ಲಿ ಜಕ್ಷಣಾದಿಗಳನ್ನು ಹೇಳಿರುವದರಿಂದ ಆನಂದಾನುಭವವೂ ಮುಕ್ತನಿಗೆ ಉಂಟೆಂದು ಕಲ್ಪಿಸಬೇಕಲ್ಲವೆ? ಎಂದು ಭಾವ.

ಎಂದು ಸರ್ವಾತ್ಮಭಾವವೆಂಬ ಮೋಕ್ಷವನ್ನು ಹೊಗಳುವದಕ್ಕಾಗಿ ಅನುವಾದ ಮಾಡಿಕೊಂಡಿರುತ್ತದೆ[1].

(ಆಕ್ಷೇಪ) :- ಯಥಾಪ್ರಾಪ್ತವಾದ (ಆನಂದಾನುಭವವನ್ನು) ಅನುವಾದ ಮಾಡಿಕೊಂಡಿದೆಯಾದರೆ ದುಃಖಿತ್ವವೂ (ಬಂದೊದಗುವದಲ್ಲ)! (ಇದರ ವಿವರ) : ಯೋಗಿಗಳು ಮುಂತಾದವರಲ್ಲಿ ಬಂದೊದಗಿರುವ ಜಕ್ಷಣವೇ ಮುಂತಾದವುಗಳಂತೆ ಸ್ಥಾವರಾದಿಗಳಲ್ಲಿ ಬಂದೊದಗಿರುವ ದುಃಖಿತ್ವವೂ (ಮುಕ್ತನಿಗೆ ಆಗಬೇಕಾಗುವದಲ್ಲ) !

(ಪರಿಹಾರ) :- ಹಾಗಲ್ಲ. ಏಕೆಂದರೆ ನಾಮರೂಪಗಳಿಂದಾಗಿರುವ ಕಾರ್ಯಕರಣಗಳೆಂಬ ಉಪಾಧಿಸಂಪರ್ಕದಿಂದಾದ ಭ್ರಾಂತಿಯಿಂದ ಸುಖಿತ್ವ ದುಃಖಿತ್ವಾದಿವಿಶೇಷಗಳು ಅಧ್ಯಾರೋಪಿತವಾಗಿರುತ್ತವೆ ಎಂದು (ಹಿಂದೆಯೇ) ಇದೆಲ್ಲವನ್ನೂ ಪರಿಹಾರಗೊಳಿಸಿರುತ್ತೇವೆ[2]. ವಿರುದ್ಧಶ್ರುತಿಗಳಿಗೆ ವಿಷಯವನ್ನು ಹೇಳಿರುತ್ತೇವೆ[3]. ಆದ್ದರಿಂದ "ಇದು ಇವನ ಪರಮ ಆನಂದವು" (೪-೩-೩೨) ಎಂಬಂತೆ[4] ಆನಂದವಾಕ್ಯಗಳನ್ನೆಲ್ಲ ಅರಿಯಬೇಕು

---

1. ಮುಕ್ತನು ಎಲ್ಲರ ಆತ್ಮನೂ ಆಗಿರುವದರಿಂದ ಯೋಗಿಗಳು, ದೇವತೆಗಳು ಮುಂತಾದವರು ಅನುಭವಿಸುವ ಆನಂದವು ಆವನ ಸ್ವರೂಪವೇ- ಎಂದು ಮುಕ್ತಿಯನ್ನು ಹೊಗಳಿದೆಯೇ ಹೊರತು ಮುಕ್ತನು ತನ್ನ ಆನಂದವನ್ನು ಅನುಭವಿಸುತ್ತಾನೆ ಎಂದು ಹೇಳುವದಕ್ಕೆ ಈ ಶ್ರುತಿಗಳು ಬಂದಿಲ್ಲ

2. ಸುಖಿತ್ವದುಃಖಿತ್ವಾದಿಗಳು ಕಲ್ಪಿತವಾದ ವಿಶೇಷಗಳು, ಅದ್ವಿತೀಯನಿರ್ವಿಶೇಷತ್ವವೇ ಆತ್ಮನ ಸ್ವರೂಪವು ಎಂದು ಹೇಳಿದೇವೆ. ಆದ್ದರಿಂದ ಉಪಾಧಿಕಲ್ಪಿತವಿಶೇಷಗಳು ಯಾವವೂ ಆತ್ಮನಿಗೆ ಸೇರಿರುವದಿಲ್ಲ.

3. ೨-೫-೧೫ (ಭಾ ಭಾ. ೩೯೯)ರಲ್ಲಿ ಪರಸ್ಪರವಿರುದ್ಧವಾಗಿ ಕಾಣುವ ಶ್ರುತಿಗಳಿಗೆ ಸೋಪಾಧಿಕನಿರುಪಾಧಿಕವಿವೇಚನೆಯಿಂದ ವ್ಯವಸ್ಥೆ ಮಾಡಬೇಕೆಂದು ಹೇಳಿದ್ದಾಗಿದೆ. ಇಲ್ಲಿಯೂ ಜಕ್ಷತ್ ಮುಂತಾದ ಶ್ರುತಿಗಳು ಯಥಾಪ್ರಾಪ್ತವಾಗಿರುವ ಆನಂದವನ್ನೇ ಸರ್ವಾತ್ಮಭಾವಶ್ರುತಿಗಾಗಿ ಹೇಳಿದೆ ಎಂದು ವಿರೋಧಪರಿಹಾರವನ್ನು ಮಾಡಿದ್ದಾಗಿದೆ.

4. ಇದು ಸುಷುಪ್ತಿಯಲ್ಲಿರುವ ಆತ್ಮನ ಆನಂದಸ್ವರೂಪದ ವಿಷಯದ ವಾಕ್ಯ. ಅಲ್ಲಿ 'ಇವನ ಪರಮಾನಂದವು' ಎಂದಿದ್ದರೂ ಹೇಗೆ ಆನಂದ, ಆನಂದಿ- ಎಂಬ ಭೇದವಿಲ್ಲವೋ ಹಾಗೆಯೇ ಎಲ್ಲಾ ಬ್ರಹ್ಮಾನಂದವಾಕ್ಯಗಳಲ್ಲಿಯೂ ಯಾವ ಭೇದವೂ ನಿಜವಾಗಿ ಇರುವದಿಲ್ಲವೆಂದು ತಿಳಿಯಬೇಕು -ಎಂದು ಭಾವ.

# ಒಂಬತ್ತನೆಯ ಬ್ರಾಹ್ಮಣದ ಸಾರ

**ದೇವತಾಸಂಕೋಚವಿಕಾಸಗಳ ಮೂಲಕವಾಗಿ ಆತ್ಮನ ಸಾಕ್ಷಾದಪರೋಕ್ಷತ್ವವನ್ನು ಈ ಬ್ರಾಹ್ಮಣದಲ್ಲಿ ನಿರ್ಧರಿಸಲಾಗಿದೆ.**

೧-೬. ಗಾರ್ಗಿಯು ಸುಮ್ಮನಾಗಲು ವಿದಗ್ಧಶಾಕಲ್ಯನು ಯಾಜ್ಞವಲ್ಕ್ಯನನ್ನು ದೇವತೆಗಳ ಸಂಖ್ಯೆಯನ್ನು ಕುರಿತ ಪ್ರಶ್ನೆಯನ್ನು ಮಾಡಿದನು. ಯಾಜ್ಞವಲ್ಕ್ಯನು "ಮೂವತ್ತುಮೂರುಸಾವಿರದ ಆರು" ಎಂದು ನಿವಿತ್ಸಂಖ್ಯೆಯನ್ನು ಹೇಳಿ "ಇವು ದೇವತೆಗಳ ವಿಭೂತಿಗಳು ಮಾತ್ರ, ನಿಜವಾಗಿ ಮೂವತ್ತುಮೂರೇ ದೇವತೆಗಳು. ಅಗ್ನಿ, ಪೃಥಿವಿ, ವಾಯು, ಅಂತರಿಕ್ಷ, ದ್ಯುಲೋಕ, ಚಂದ್ರ, ನಕ್ಷತ್ರ- ಎಂಬ ಅಷ್ಟವಸುಗಳು; ಕರ್ಮಜ್ಞಾನೇಂದ್ರಿಯಗಳು ಹತ್ತು, ಮನಸ್ಸು ಒಂದು- ಎಂಬ ಏಕಾದಶರುದ್ರರು; ಸಂವತ್ಸರದ ದ್ವಾದಶಮಾಸಗಳೆಂಬ ದ್ವಾದಶಾದಿತ್ಯರು, ಸಿಡಿಲೇ ಇಂದ್ರನು, ಯಜ್ಞವೇ ಪ್ರಜಾಪತಿ- ಇವರಿಬ್ಬರೂ ಸೇರಿದರೆ ಒಟ್ಟು ಮೂವತ್ತುಮೂರು ದೇವತೆಗಳಾಗುವರು" ಎಂದು ನಿರ್ಧರಿಸಿದನು.

೭-೯. ಇನ್ನೂ ಸಂಕೋಚಮಾಡಿದರೆ ಅಗ್ನಿ, ಪೃಥಿವಿ, ವಾಯು, ಅಂತರಿಕ್ಷ, ಆದಿತ್ಯ, ದ್ಯುಲೋಕ- ಎಂದು ದೇವತೆಗಳು ಆರೇ; ಈ ಮೂರು ಲೋಕಗಳೆಂಬ ಮೂರು ದೇವತೆಗಳೇ ಎಂದೂ ಹೇಳಬಹುದು; ವಾಯುವೇ ಅಧ್ಯರ್ಧದೇವತೆ. ಪ್ರಾಣನು ಒಬ್ಬನೇ ನಿಜವಾಗಿ ದೇವತೆ, ಅವನೇ ಬ್ರಹ್ಮವು- ಎಂದು ಕೊನೆಗೆ ನಿರ್ಣಯಿಸಿದನು.

೧೦-೧೭. ಶಾಕಲ್ಯನು ಮತ್ತೆ 'ಪೃಥಿವಿ ಎಂಬ ಆಯತನದಲ್ಲಿರುವವನಾಗಿ ಅಗ್ನಿ ಎಂಬ ಲೋಕ(ದರ್ಶನಕರಣ)ವುಳ್ಳವನಾಗಿ, ಮನಸ್ಸೆಂಬ ಜ್ಯೋತಿಯುಳ್ಳವನಾಗಿರುವ ಸರ್ವಕಾರ್ಯಕರಣಸಂಘಾತಗಳಿಗೂ ಪರಾಯಣನಾಗಿರುವ ಪುರುಷನು ಯಾರು?' ಎಂದು ಕೇಳಲು ಶರೀರದಲ್ಲಿ ಮಾತೃಜಕೋಶತ್ರಯರೂಪನಾಗಿರುವವನೇ ಆ ಪುರುಷನು ಎಂದು ಯಾಜ್ಞವಲ್ಕ್ಯನು ಉತ್ತರವಿತ್ತನು. ಇದರಂತೆ ಕಾಮವೇ ಮುಂತಾದ ಆಯತನಗಳು, ಹೃದಯವೇ ಮುಂತಾದ ಲೋಕಗಳು, ಮನೋಜ್ಯೋತಿ- ಇವುಗಳುಳ್ಳ ಬೇರೆ ಬೇರೆಯ ಪುರುಷರ ಸ್ವರೂಪವನ್ನು ಕೇಳಲು ಯಾಜ್ಞವಲ್ಕ್ಯನು ಆಯಾ ಪುರುಷರ ಸ್ವರೂಪವನ್ನೂ ನಿರ್ಧರಿಸಿ ಹೇಳಿದ್ದಲ್ಲದೆ, ಆಯಾ ಪುರುಷರಿಗೆ ದೇವತೆಗಳನ್ನೂ- ಎಂದರೆ ನಿಷ್ಪತ್ತಿಕಾರಣಗಳನ್ನೂ ತಿಳಿಸಿಕೊಟ್ಟನು. ಹೀಗೆ ಎಂಟು ಬಗೆಯಾಗಿ ದೇವ, ಲೋಕ, ಪುರುಷ- ಎಂಬ ಭೇದದಿಂದ ಮೂರುಮೂರುಬಗೆಯಾಗಿ ವಿಂಗಡಿಸಿಕೊಂಡಿರುವ ಪ್ರಾಣನೆಂಬ ಒಬ್ಬ ದೇವನನ್ನೇ ಉಪಾಸನೆಗಾಗಿ ಈ ಸಂವಾದದಿಂದ ಶ್ರುತಿಯು ತಿಳಿಸಿಕೊಟ್ಟಿರುತ್ತದೆ.

೧೮-೨೪. ಸುಮ್ಮನಿದ್ದ ಶಾಕಲ್ಯನನ್ನು ಯಾಜ್ಞವಲ್ಕ್ಯನು "ಎಲಾ, ನಿನ್ನನ್ನು ಈ ಬ್ರಾಹ್ಮಣರು ಬೆಂಕಿಯಿಂತಿರುವ ನನ್ನನ್ನು ಹಿಡಿಯುವದಕ್ಕೆ ಇಕ್ಕಳವನ್ನು ಮಾಡಿಕೊಂಡಿದಾರೆ. ಇದನ್ನು ನೀನರಿಯೆ!" ಎಂದನು. ಶಾಕಲ್ಯನು ಕೋಪದಿಂದ "ನಿನಗೆ ಯಾವ ಬ್ರಹ್ಮವಿದ್ಯೆಯಿದೆ ಎಂಬ ಹೆಮ್ಮೆಯಿಂದ ಈ ಬ್ರಾಹ್ಮಣರನ್ನೆಲ್ಲ ಹೀಗೆ ತಿರಸ್ಕರಿಸುತ್ತಿರುವೆ?" ಎಂದು ಕೇಳಿದನು. ಆದಕ್ಕೆ ಉತ್ತರವಾಗಿ ಯಾಜ್ಞವಲ್ಕ್ಯನು "ಪೂರ್ವ, ಪಶ್ಚಿಮ, ದಕ್ಷಿಣ,

ಉತ್ತರ, ಊರ್ಧ್ವ- ಎಂಬ ಐದು ದಿಕ್ಕುಗಳಲ್ಲಿಯೂ ಆದಿತ್ಯಾದಿರೂಪದಿಂದಿರುವ ದೇವತೆಗಳನ್ನೂ, ಅವರಿಗೆ ಪರಂಪರೆಯಿಂದ ಹೃದಯವೇ ಪ್ರತಿಷ್ಠೆ ಎಂಬುದನ್ನೂ ಆಯಾ ದೇವತೆಯ ಸಾಕ್ಷಾತ್ಕಾರದಿಂದ ನಾನೇ ಆ ದೇವತೆ ಎಂಬುದನ್ನೂ ಅರಿತಿದೇನೆ" ಎಂದು ವಿವರಿಸಿದನು.

೨೫-೨೬. ಈ ಹೃದಯವು ಏತರಲ್ಲಿ ಪ್ರತಿಷ್ಠಿತವಾಗಿದೆ? ಎಂದರೆ ಶರೀರದಲ್ಲಿ; ಶರೀರವೂ ಹೃದಯವೂ ಏತರಲ್ಲಿ ಪ್ರತಿಷ್ಠಿತವಾಗಿದೆ? ಎಂದರೆ ಪ್ರಾಣದಲ್ಲಿ, ಪ್ರಾಣವು ಏತರಲ್ಲಿ ಪ್ರತಿಷ್ಠಿತವಾಗಿದೆ? ಎಂದರೆ ಅಪಾನದಲ್ಲಿ; ಅಪಾನವು ಏತರಲ್ಲಿ ಪ್ರತಿಷ್ಠಿತವೆಂದರೆ ವ್ಯಾನದಲ್ಲಿ, ವ್ಯಾನವು ಏತರಲ್ಲಿ ಪ್ರತಿಷ್ಠಿತವೆಂದರೆ ಉದಾನದಲ್ಲಿ, ಉದಾನವು ಏತರಲ್ಲಿ ಪ್ರತಿಷ್ಠಿತವೆಂದರೆ ಸಮಾನದಲ್ಲಿ- ಎಂದಿಂತು ಮುಂದುಮುಂದಕ್ಕೆ ಪ್ರತಿಷ್ಠೆಯನ್ನು ಹೇಳುತ್ತಾ ಸರ್ವಕ್ಕೂ ಪ್ರತಿಷ್ಠೆಯಾದ ಪರಮಾತ್ಮನನ್ನು ಸೂಚಿಸಿದನು. ಆ ಪರಮಾತ್ಮನೇ ನೇತಿ ನೇತಿ ಎಂದು ಹೇಳುವದಕ್ಕೆ ತಕ್ಕ ಅಗೃಹ್ಯನೂ ಅಶೀರ್ಯನೂ ಅಸಂಗನೂ ಅಸಿತನೂ ಆದ ಪರಮಾತ್ಮನು. ಯಾಜ್ಞವಲ್ಕ್ಯನು ಶಾಕಲ್ಯನನ್ನು ಕುರಿತು "ಯಾವನು ಈ ಎಂಟು ಆಯತನಗಳು, ಎಂಟು ಲೋಕಗಳು, ಎಂಟು ದೇವತೆಗಳು, ಎಂಟು ಪುರುಷರು- ಇವರೆಲ್ಲರನ್ನೂ ಹೊರಗೆ ವಿಂಗಡಿಸಿಟ್ಟು ತನ್ನೊಳಗೆ ಉಪಸಂಹಾರಮಾಡಿಕೊಂಡು ಎಲ್ಲವನ್ನೂ ಮೀರಿರುವ ಸ್ವರೂಪದವನಾಗಿರುವನೋ ಆ ಔಪನಿಷದಪುರುಷನು ಯಾರು? ಹೇಳು. ಅವನನ್ನು ನೀನು ತಿಳಿಸಲಾರೆಯಾದರೆ ನಿನ್ನ ತಲೆಯು ಬಿದ್ದುಹೋಗಲಿ!"- ಎಂದು ಕ್ರುದ್ಧನಾಗಿ ನುಡಿದನು. ಶಾಕಲ್ಯನು ಅದನ್ನು ಅರಿತಿರಲಿಲ್ಲವಾಗಿ ಅವನ ತಲೆಯು ಬಿದ್ದುಹೋಯಿತು, ಯಾಜ್ಞವಲ್ಕ್ಯನಂಥ ಬ್ರಹ್ಮಜ್ಞಾನಿಯ ತಿರಸ್ಕಾರದಿಂದಾದ ಫಲವಾಗಿ ಅವನಿಗೆ ಉತ್ತರ ಸಂಸ್ಕಾರವುಕೂಡ ಆಗದಂತೆ ಅವನ ಅಸ್ಥಿಗಳನ್ನು ಕಳ್ಳರು ಅಪಹರಿಸಿಕೊಂಡುಹೋದರು.

೨೭-೨೮. ಆ ಬಳಿಕ ಯಾಜ್ಞವಲ್ಕ್ಯನು ಬ್ರಾಹ್ಮಣರನ್ನು ಕುರಿತು "ನಿಮ್ಮಲ್ಲಿ ಯಾವನೊಬ್ಬನೇ ಆಗಲಿ, ಅಥವಾ ನೀವೆಲ್ಲರೂ ಸೇರಿಯೇ ಆಗಲಿ ನನ್ನನ್ನು ಪ್ರಶ್ನಿಸಿರಿ! ಅಥವಾ ನಿಮ್ಮಲ್ಲಿ ಯಾವನೊಬ್ಬನು ಮುಂದೆ ಬಂದರೂ ಅಥವಾ ನೀವೆಲ್ಲರೂ ಸೇರಿ ಮುಂದೆ ಬಂದರೂ ಪ್ರಶ್ನಿಸುವೆನು" ಎಂದನು. ಬ್ರಾಹ್ಮಣರು ಎದೆಗೆಟ್ಟು ಸುಮ್ಮನಿದ್ದರು. ಆಗ ಯಾಜ್ಞವಲ್ಕ್ಯನು "ಮನುಷ್ಯನು ಅನೇಕವಿಷಯಗಳಲ್ಲಿ ಒಂದು ವನಸ್ಪತಿಯಾದ ಮರದಂತೆ ಇರುತ್ತಾನೆ. ಅದಕ್ಕೆ ಎಲೆಗಳು, ಮೇಲುಹೊದಿಕೆ, ರಸ, ಚೆಕ್ಕೆ, ನಾರು, ಒಳಗಿನ ಕಟ್ಟಿಗೆ ಮಜ್ಜೆ- ಇವುಗಳಿರುವಂತೆಯೇ ಇವನಿಗೆ ಮೈಗೂದಲು, ಚರ್ಮ, ರಕ್ತ, ಮಾಂಸ, ನರಗಳು, ಅಸ್ಥಿಗಳು, ಮಜ್ಜೆ- ಇವುಗಳಿವೆ ಆದರೆ ಮರವು ಕಡಿದುಹಾಕಿದರೆ ಮತ್ತೆ ಚಿಗುರುವದುಂಟು, ಬೀಜದಿಂದಲೂ ಬೆಳೆಯುವದುಂಟು. ಹಾಗೆ ಬೇರುಬೀಜಗಳಂತೆ ಮನುಷ್ಯನು ಸತ್ತಬಳಿಕ ಹುಟ್ಟುವದಕ್ಕೆ ಕಾರಣವಾಗಿರುವ ಮೂಲವು ಯಾವದು? ಹೇಳಿರಿ. ಮನುಷ್ಯನು ಮತ್ತೆ ಹುಟ್ಟುವದೇ ಇಲ್ಲನೆಂದು ಹೇಳುವದಕ್ಕಿಲ್ಲವಷ್ಟೆ? ಎಂದು ಕೇಳಿದನು. ಅದು ಬ್ರಾಹ್ಮಣರಿಗೆ ತಿಳಿಯದೆ ಹೋಯಿತು. ಆದ್ದರಿಂದ ಯಾಜ್ಞವಲ್ಕ್ಯನೇ ವಾದದಲ್ಲಿ ಜಯಿಸಿ ಗೋವುಗಳನ್ನು ಹಿಡಿದನು. ಕರ್ಮಿಗಳಿಗೂ ಜ್ಞಾನಿಗಳಿಗೂ ಪರಾಯಣವಾಗಿರುವ ವಿಜ್ಞಾನಾನಂದಸ್ವರೂಪವಾದ ಬ್ರಹ್ಮವೇ ಅವನು ಹೇಳಿದ ಜಗನ್ಮೂಲವು.

# ನಾಲ್ಕನೆಯ ಅಧ್ಯಾಯ - ಒಂದನೆಯ ಬ್ರಾಹ್ಮಣ

(ವಾಗಾದಿದೇವತೆಗಳ ದ್ವಾರದಿಂದ ಬ್ರಹ್ಮನಿರ್ಧಾರಣ)

## ಮುಂದಿನ ಬ್ರಾಹ್ಮಣದ್ವಯದ ಸಂಬಂಧ

(ಭಾಷ್ಯ)

೧೪೦. "ಜನಕೋ ಹ ವೈದೇಹ ಆಸಾಂಚಕ್ರೇ"। ಅಸ್ಯ ಸಂಬನ್ಧಃ। ಶಾರೀರಾದ್ಯಾನ್ ಅಷ್ಟೌ ಪುರುಷಾನ್ ನಿರುಹ್ಯ ಪ್ರತ್ಯುಹ್ಯ ಪುನರ್ಹೃದಯೇ, ದಿಗ್ಭೇದೇನ ಚ ಪುನಃ ಪಞ್ಚಧಾ ವ್ಯೂಹ್ಯ ಹೃದಯೇ ಪ್ರತ್ಯುಹ್ಯ, ಹೃದಯಂ ಚ ಶರೀರಂ ಚ ಪುನರನ್ಯೋನ್ಯಪ್ರತಿಷ್ಠಂ ಪ್ರಾಣಾದಿಪಞ್ಚವೃತ್ತ್ಯಾತ್ಮಕೇ ಸಮಾನಾಖ್ಯೇ ಜಗದಾತ್ಮನಿ ಸೂತ್ರೇ ಉಪಸಂಹೃತ್ಯ, ಜಗದಾತ್ಮಾನಂ ಶರೀರಹೃದಯಸೂತ್ರಾವಸ್ಥಮ್ ಅತಿಕ್ರಾನ್ತವಾನ್ ಯ ಔಪನಿಷದಃ ಪುರುಷಃ ನೇತಿ ನೇತೀತಿ ವ್ಯಪದಿಷ್ಟಃ ಸ ಸಾಕ್ಷಾಚ್ಚೋಪಾದಾನಕಾರಣಸ್ವರೂಪೇಣ ಚ ನಿರ್ದಿಷ್ಟೋ ವಿಜ್ಞಾನಮಾನನ್ದಮ್ ಇತಿ। ತಸ್ಯೈವ ವಾಗಾದಿದೇವತಾದ್ವಾರೇಣ ಪುನರಧಿಗಮಃ ಕರ್ತವ್ಯಃ ಇತಿ ಅಧಿಗಮನೋಪಾಯಾನ್ತರಾರ್ಥೋಽಯಮಾರಮ್ಭೋ ಬ್ರಾಹ್ಮಣದ್ವಯಸ್ಯ। ಆಖ್ಯಾಯಿಕಾ ತು ಆಚಾರಪ್ರದರ್ಶನಾರ್ಥಾ॥

(ಭಾಷ್ಯಾರ್ಥ)

"ಜನಕೋ ಹ ವೈದೇಹ ಆಸಾಂಚಕ್ರೇ" ಈ (ಗ್ರಂಥದ) ಸಂಬಂಧ (ವಿದು): ಶಾರೀರನೇ ಮುಂತಾದ ಎಂಟು ಪುರುಷರನ್ನು ವಿಂಗಡಿಸಿಟ್ಟು ಮತ್ತೆ ಹೃದಯದಲ್ಲಿ ಅವರನ್ನು ಉಪಸಂಹಾರಮಾಡಿಕೊಂಡು, ದಿಕ್ಕುಗಳ ಭೇದದಿಂದ ಮತ್ತೂ ಐದು ಬಗೆಯಿಂದ ವಿಂಗಡಿಸಿಟ್ಟು ಹೃದಯದಲ್ಲಿ ಉಪಸಂಹಾರಮಾಡಿಕೊಂಡು, ಹೃದಯವೂ ಶರೀರವೂ ಒಂದರಲ್ಲೊಂದು ಪ್ರತಿಷ್ಠಿತವಾಗಿರುವದರಿಂದ (ಇವನ್ನು) ಪ್ರಾಣವೇ ಮುಂತಾದ ಐದು ವೃತ್ತಿಗಳುಳ್ಳ ಸಮಾನವೆಂಬ ಜಗದಾತ್ಮನಾದ ಸೂತ್ರದಲ್ಲಿ[1] ಉಪಸಂಹಾರಮಾಡಿ, ಶರೀರ, ಹೃದಯ, ಸೂತ್ರ-ಎಂಬ ಅವಸ್ಥೆಗಳುಳ್ಳ ಜಗದಾತ್ಮನನ್ನು ಮೀರಿರುವ ನೇತಿ ನೇತಿ (ಹೀಗಲ್ಲ, ಹೀಗಲ್ಲ) ಎಂದು ವ್ಯಪದಿಷ್ಟನಾಗಿರುವ ಔಪನಿಷದಪುರುಷನಿದಾನಲ್ಲ, ಅವನನ್ನು ನೇರಾಗಿಯೂ ಉಪಾದಾನಕಾರಣಸ್ವರೂಪದಿಂದ "ವಿಜ್ಞಾನವೂ ಆನಂದವೂ" ಎಂದೂ ನಿರ್ದೇಶಮಾಡಲಾಯಿತು.[2] ಅದೇ (ಔಪನಿಷದಪುರುಷನನ್ನೇ)

---

1. ಕ್ರಿಯಾಪ್ರಧಾನನಾದ ಸಮಷ್ಟಿವ್ಯಷ್ಟ್ಯಾತ್ಮನಲ್ಲಿ.
2. 'ಸ ಏಷ ನೇತಿ ನೇತ್ಯಾತ್ಮಾ' (೩-೯-೨೬) ಎಂದು ನೇರಾಗಿಯೂ 'ವಿಜ್ಞಾನಮಾನನ್ದಂ ಬ್ರಹ್ಮ' ಎಂದು ಜಗನ್ಮೂಲವಾಗಿಯೂ ನಿರ್ದೇಶಮಾಡಿದ್ದಾಯಿತು.

ವಾಗಾದಿದೇವತೆಗಳ ದ್ವಾರದಿಂದ ತಿಳಿದುಕೊಳ್ಳಬೇಕಾಗಿರುವದರಿಂದ (ಅವನನ್ನು) ತಿಳಿಸುವ ಮತ್ತೊಂದು ಉಪಾಯವನ್ನು (ಹೇಳುವದ)ಕ್ಕಾಗಿ ಈ (ಮುಂದಿನ) ಬ್ರಾಹ್ಮಣದ್ವಯವನ್ನು ಆರಂಭಿಸಿರುತ್ತದೆ. (ಇಲ್ಲಿರುವ) ಆಖ್ಯಾಯಿಕೆಯಾದರೋ ಆಚಾರವನ್ನು[1] ತಿಳಿಸುವದಕ್ಕಾಗಿ.

## ಯಾಜ್ಞವಲ್ಕ್ಯನು ಜನಕನಲ್ಲಿಗೆ ಬಂದದ್ದು

(ಉಪನಿಷತ್ತು)

**ಜನಕೋ ಹ ವೈದೇಹ ಆಸಾಂಚಕ್ರೇಽಥ ಹ ಯಾಜ್ಞವಲ್ಕ್ಯ ಆವವ್ರಾಜ । ತಗ್ಂ ಹೋವಾಚ ಯಾಜ್ಞವಲ್ಕ್ಯ ಕಿಮರ್ಥಮಚಾರೀಃ ಪಶೂನಿಚ್ಛನ್ನಣ್ವನ್ತಾನಿತಿ । ಉಭಯಮೇವ ಸಮ್ರಾಡಿತಿ ಹೋವಾಚ ॥ ೧ ॥**

೧. ವೈದೇಹಜನಕನು ಕುಳಿತಿದ್ದನು. ಆಗ ಯಾಜ್ಞವಲ್ಕ್ಯನು ಬಂದನು. ಅವನನ್ನು ಕುರಿತು ಇಂತೆಂದನು: ಯಾಜ್ಞವಲ್ಕ್ಯನೆ, ಏತಕ್ಕೋಸ್ಕರ ಸಂಚಾರಮಾಡಿದೀಯೆ ? ಪಶುಗಳನ್ನಿಚ್ಛಿಸಿಯೊ, ಅಣ್ವಂತ(ಪ್ರಶ್ನೆಗಳನ್ನಿಚ್ಛಿಸಿಯೊ)? "ಸಮ್ರಾಜನೆ, ಎರಡನ್ನೂ" ಎಂದು (ಅವನು) ನುಡಿದನು.

(ಭಾಷ್ಯ)

೧।೧. ಜನಕೋ ಹ ವೈದೇಹ ಆಸಾಂಚಕ್ರೇ ಆಸನಂ ಕೃತವಾನ್ ಆಸ್ಥಾಯಿಕಾಂ ದತ್ತವಾನಿತ್ಯರ್ಥಃ । ದರ್ಶನಕಾಮೇಭ್ಯೋ ರಾಜ್ಞಃ । ಅಥ ಹ ತಸ್ಮಿನ್ ಅವಸರೇ ಯಾಜ್ಞವಲ್ಕ್ಯ ಆವವ್ರಾಜ ಆಗತವಾನ್ । ಆತ್ಮನೋ ಯೋಗಕ್ಷೇಮಾರ್ಥಮ್, ರಾಜ್ಞೋ ವಾ ವಿವಿದಿಷಾಂ ದೃಷ್ಟ್ವಾ ಅನುಗ್ರಹಾರ್ಥಮ್ । ತಮ್ ಆಗತಂ ಯಾಜ್ಞವಲ್ಕ್ಯಂ ಯಥಾವತ್ ಪೂಜಾಂ ಕೃತ್ವಾ ಉವಾಚ ಹ ಉಕ್ತವಾನ್ ಜನಕಃ । ಹೇ ಯಾಜ್ಞವಲ್ಕ್ಯ ಕಿಮರ್ಥಮ್ ಅಚಾರೀಃ ಆಗತೋಽಸಿ ? ಕಿಂ ಪಶೂನ್ ಇಚ್ಛನ್ ಪುನರಪಿ, ಆಹೋಸ್ವಿತ್ ಅಣ್ವನ್ತಾನ್ ಸೂಕ್ಷ್ಮಾನ್ತಾನ್ ಸೂಕ್ಷ್ಮವಸ್ತುನಿರ್ಣಯಾನ್ತಾನ್ ಪ್ರಶ್ನಾನ್ ಮತ್ತಃ ಶ್ರೋತುಮಿಚ್ಛನ್ ಇತಿ । ಉಭಯಮೇವ ಪಶೂನ್ ಪ್ರಶ್ನಾಂಶ್ಚ ಹೇ ಸಮ್ರಾಟ್ । ಸಮ್ರಾಡಿತಿ ವಾಜಪೇಯಯಾಜಿನೋ ಲಿಙ್ಗಮ್ । ಯಶ್ಚ

1. ಆಚಾರ್ಯರಿಂದಲೇ ಶ್ರದ್ಧಾದಿಗಳಿಂದೊಡಗೂಡಿದವನಾಗಿ ವಿದ್ಯೆಯನ್ನು ಪಡೆದುಕೊಳ್ಳಬೇಕು- ಎಂಬುದು ಶಿಷ್ಯನ ಆಚಾರ ; ಶಿಷ್ಯನನ್ನು ಕೃತಾರ್ಥನನ್ನು ಮಾಡಬೇಕು- ಎಂಬುದು ಗುರುವಿನ ಆಚಾರ.

ಆಜ್ಞಯಾ ರಾಜ್ಯಂ ಪ್ರಶಾಸ್ತಿ ಸ ಸಮ್ರಾಟ್। ತಸ್ಯ ಆಮನ್ತ್ರಣಂ ಹೇ ಸಂರಾಟ್ ಇತಿ । ಸಮಸ್ತಸ್ಯ ವಾ ಭಾರತಸ್ಯ ವರ್ಷಸ್ಯ ರಾಜಾ ॥

(ಭಾಷ್ಯಾರ್ಥ)

ವೈದೇಹನಾದ ಜನಕನು ಕುಳಿತಿದ್ದನು, ಆಸನವನ್ನು ಮಾಡಿಕೊಂಡಿದ್ದನು: ರಾಜನ ದರ್ಶನವನ್ನು ಬಯಸುವವರಿಗೆ ದರ್ಶನಕೊಡುತ್ತಾ (ಕುಳಿತಿದ್ದನು) ಎಂದರ್ಥ. ಆಗ ಆ ಸಮಯದಲ್ಲಿ ಯಾಜ್ಞವಲ್ಕ್ಯನು ಬಂದನು, ತನ್ನ ಯೋಗಕ್ಷೇಮಾರ್ಥವಾಗಿ ಅಥವಾ ರಾಜನು ಜ್ಞಾನೇಚ್ಛೆ(ಯುಳ್ಳವನೆಂಬುದನ್ನು) ಕಂಡು (ಅವನಿಗೆ) ಅನುಗ್ರಹವನ್ನು ಮಾಡುವದಕ್ಕಾಗಿ ಬಂದನು.

ಬಂದ ಆ ಯಾಜ್ಞವಲ್ಕ್ಯನನ್ನು ತಕ್ಕಂತೆ ಪೂಜೆಯನ್ನು ಮಾಡಿ ಜನಕನು ಇಂತೆಂದನು, (ಹೀಗೆಂದು) ನುಡಿದನು "ಎಲೈ ಯಾಜ್ಞವಲ್ಕ್ಯನೆ, ಏತಕ್ಕೋಸ್ಕರ ಸಂಚಾರಮಾಡಿದೀಯೆ, ಬಂದಿರುತ್ತೀಯೆ? ಮತ್ತೂ ಪಶುಗಳನ್ನು ಬಯಸಿ (ಬಂದಿರುವೆಯೊ), ಅಥವಾ ಅಣ್ವಂತವಾದ ಸೂಕ್ಷ್ಮವಾದ ಅಂತವುಳ್ಳ, ಸೂಕ್ಷ್ಮವಸ್ತುವನ್ನು ನಿರ್ಣಯಿಸುವದರಲ್ಲಿ ಕೊನೆಕಾಣುವ, ಪ್ರಶ್ನೆಗಳನ್ನು ನನ್ನಿಂದ ಕೇಳಬಯಸಿ (ಬಂದಿರುವೆಯೊ)?" ಎರಡನ್ನೂ ಎಂದರೆ ಪಶುಗಳನ್ನೂ ಪ್ರಶ್ನೆಗಳನ್ನೂ (ಬಯಸಿ ಬಂದಿರುವೆನು), ಎಲೈ ಸಮ್ರಾಜನೆ- (ಎಂದು ಯಾಜ್ಞವಲ್ಕ್ಯನು) ನುಡಿದನು. ಸಮ್ರಾಟ್ ಎಂಬುದು (ಇವನು) ವಾಜಪೇಯಯಾಗವನ್ನು ಮಾಡಿದವನೆಂಬುದಕ್ಕೆ ಗುರುತು; ಮತ್ತು ಯಾವನು ಆಜ್ಞೆಯಿಂದ ರಾಜ್ಯವನ್ನು ಆಳುತ್ತಿರುವನೋ ಅವನು ಸಮ್ರಾಜನು. ಎಲೈ ಸಮ್ರಾಜನೆ, ಎಂಬುದು ಅವನನ್ನು (ಸಂಬೋಧಿಸಿ) ಕರೆದದ್ದು. ಅಥವಾ ಸಮಸ್ತ ಭಾರತ ವರ್ಷದ ರಾಜನು (ಎಂಬುದನ್ನು ಸಮ್ರಾಟ್ ಎಂಬ ವಿಶೇಷಣವು ತಿಳಿಸುತ್ತದೆ ಎಂದೂ ಅರ್ಥವನ್ನು ಹೇಳಬಹುದು).

## ವಾಗ್ದೇವತೆಯ ವಿವರ

(ಉಪನಿಷತ್ತು)

**ಯತ್ತೇ ಕಶ್ಚಿದಬ್ರವೀತ್ ತಚ್ಛೃಣವಾಮೇತ್ಯಬ್ರವೀನ್ ಮೇ ಜಿತ್ವಾ ಶೈಲಿನಿರ್ವಾಗ್ವೈ ಬ್ರಹ್ಮೇತಿ ಯಥಾ ಮಾತೃಮಾನ್ ಪಿತೃಮಾನಾಚಾರ್ಯವಾನ್ ಬ್ರೂಯಾತ್ ತಥಾ ತಚ್ಛೈಲಿನಿರಬ್ರವೀದ್ ವಾಗ್ವೈ ಬ್ರಹ್ಮೇತ್ಯವದತೋ ಹಿ ಕಿꣳ ಸ್ಯಾದಿತ್ಯಬ್ರವೀತ್ತು ತೇ ತಸ್ಯಾಯತನಂ ಪ್ರತಿಷ್ಠಾಂ ನ ಮೇಽಬ್ರವೀದಿತ್ಯೇಕಪಾದ್ವಾ ಏತತ್ಸಮ್ರಾಡಿತಿ ಸ ವೈ ನೋ ಬ್ರೂಹಿ ಯಾಜ್ಞವಲ್ಕ್ಯ ವಾಗೇವಾಯತನಮಾಕಾಶಃ ಪ್ರತಿಷ್ಠಾ ಪ್ರಜ್ಞೇತ್ಯೇನದುಪಾ**

**ಸೀತ । ಕಾ ಪ್ರಜ್ಞತಾ ಯಾಜ್ಞವಲ್ಕ್ಯ । ವಾಗೇವ ಸಮ್ರಾಡಿತಿ ಹೋವಾಚ । ವಾಚಾ ವೈ ಸಮ್ರಾಡ್ಬನ್ಧುಃ ಪ್ರಜ್ಞಾಯತ ಋಗ್ವೇದೋ ಯಜುರ್ವೇದಃ ಸಾಮವೇದೋಽಥರ್ವಾಙ್ಗಿರಸ ಇತಿಹಾಸಃ ಪುರಾಣಂ ವಿದ್ಯಾ ಉಪನಿಷದಃ ಶ್ಲೋಕಾಃ ಸೂತ್ರಾಣ್ಯನುವ್ಯಾಖ್ಯಾನಾನಿ ವ್ಯಾಖ್ಯಾನಾನೀಷ್ಟಗ್ಂ ಹುತಮಾಶಿತಂ ಪಾಯಿತಮಯಂ ಚ ಲೋಕಃ ಪರಶ್ಚ ಲೋಕಃ ಸರ್ವಾಣಿ ಚ ಭೂತಾನಿ ವಾಚೈವ ಸಮ್ರಾಟ್ಪ್ರಜ್ಞಾಯನ್ತೇ ವಾಗ್ವೈ ಸಮ್ರಾಟ್ ಪರಮಂ ಬ್ರಹ್ಮ ನೈನಂ ವಾಗ್ ಜಹಾತಿ ಸರ್ವಾಣ್ಯೇನಂ ಭೂತಾನ್ಯಭಿಕ್ಷರನ್ತಿ ದೇವೋ ಭೂತ್ವಾ ದೇವಾನಪ್ಯೇತಿ ಯ ಏವಂ ವಿದ್ವಾನೇತದುಪಾಸ್ತೇ । ಹಸ್ತ್ಯೃಷಭಗ್ಂ ಸಹಸ್ರಂ ದದಾಮೀತಿ ಹೋವಾಚ ಜನಕೋ ವೈದೇಹಃ । ಸ ಹೋವಾಚ ಯಾಜ್ಞವಲ್ಕ್ಯಃ ಪಿತಾ ಮೇಽಮನ್ಯತ ನಾನನುಶಿಷ್ಯ ಹರೇತೇತಿ ॥ ೨ ॥**

೨. “ನಿನಗೆ ಯಾವನಾದರೂ ಏನು ಹೇಳಿಕೊಟ್ಟಿರುತ್ತಾನೋ ಅದನ್ನೇ ಕೇಳೋಣ !” ನನಗೆ ಜಿತ್ವಾಶೈಲಿನಿಯು ವಾಕ್ಕೇ ಬ್ರಹ್ಮವೆಂದು ಹೇಳಿರುತ್ತಾನೆ. “ಮಾತೃವಂತನೂ ಪಿತೃವಂತನೂ ಆಚಾರ್ಯವಂತನೂ (ಆದವನು) ಹೇಗೆ ಹೇಳಬೇಕೋ ಹಾಗೆಯೇ ವಾಕ್ಕೇ ಬ್ರಹ್ಮವೆಂಬುದನ್ನು ಶೈಲಿನಿಯು ಹೇಳಿರುತ್ತಾನೆ: ಮಾತನಾಡದವನಿಗೆ ಏನಾದೀತು? ಆದರೆ ಆ (ಬ್ರಹ್ಮದ) ಆಯತನವನ್ನೂ ಪ್ರತಿಷ್ಠೆಯನ್ನೂ ಹೇಳಿರುವನೇನು ?” ನನಗೆ ಹೇಳಿರುವದಿಲ್ಲ. “ಸಮ್ರಾಜನೆ, ಇದು ಒಕ್ಕಾಲಿನ (ಬ್ರಹ್ಮವೇ)” ಯಾಜ್ಞವಲ್ಕ್ಯನೆ, ಆ (ನೀನು) ನಮಗೆ (ಅದನ್ನು) ಹೇಳು ? “ವಾಕ್ಕೇ ಆಯತನವು, ಆಕಾಶವು ಪ್ರತಿಷ್ಠೆ, ಪ್ರಜ್ಞೆ ಎಂದು ಇದನ್ನು ಉಪಾಸನೆಮಾಡಬೇಕು !” ಯಾಜ್ಞವಲ್ಕ್ಯನೆ, ಪ್ರಜ್ಞತೆ ಯಾವದು ? “ಸಮ್ರಾಜನೆ, ವಾಕ್ಕಿನಿಂದಲೇ ಅಲ್ಲವೆ, ಬಂಧುವು ತಿಳಿಯಬರುತ್ತಾನೆ ? ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಾಂಗಿರಸವು, ಇತಿಹಾಸವು[1], ಪುರಾಣವು, ವಿದ್ಯೆ, ಉಪನಿಷತ್ತುಗಳು, ಶ್ಲೋಕಗಳು, ಸೂತ್ರಗಳು, ಅನುವ್ಯಾಖ್ಯಾನಗಳು, ವ್ಯಾಖ್ಯಾನಗಳು, ಇಷ್ಟವು,

1. ಇಲ್ಲಿರುವ ಇತಿಹಾಸವೇ ಮುಂತಾದವುಗಳ ಅರ್ಥವನ್ನು ೨-೪-೧೦ರ ಭಾಷ್ಯದಲ್ಲಿ ನೋಡಿ ತಿಳಿಯಬೇಕು.

ಹುತವು, ಆಶಿತವು, ಪಾಯಿತವು, ಈ ಲೋಕವು, ಪರಲೋಕವು, ಸರ್ವಭೂತಗಳು- (ಇವು) ಸಮ್ರಾಜನೆ, ವಾಕ್ಕಿನಿಂದಲೇ ತಿಳಿಯ ಬರುತ್ತವೆ. ಸಮ್ರಾಜನೆ, ವಾಕ್ಕೇ ಪರಮಬ್ರಹ್ಮವು. ಯಾವನು ಹೀಗೆಂದರಿತು ಈ (ಬ್ರಹ್ಮವನ್ನು) ಉಪಾಸನೆಮಾಡುತ್ತಾನೋ ಅವನನ್ನು ವಾಕ್ಕು ಬಿಟ್ಟುಹೋಗುವದಿಲ್ಲ, ಸರ್ವಭೂತಗಳೂ ಅವನ ಕಡೆಗೆ ಬರುವವು, (ಅವನು) ದೇವನಾಗಿ ದೇವತೆಗಳನ್ನು ಸೇರುವನು" ಎಂದು ನುಡಿದನು. ಜನಕ ವೈದೇಹನು 'ಹಸ್ತ್ಯೃಷಭವುಳ್ಳ (ಗೋ) ಸಹಸ್ರವನ್ನು ಕೊಡುವೆನು' ಎಂದನು. ಆ ಯಾಜ್ಞವಲ್ಕ್ಯನಿಂತೆಂದನು: "ನಮ್ಮ ತಂದೆಯು ಅನುಶಾಸನಮಾಡದೆ (ಧನವನ್ನು) ತೆಗೆದುಕೊಳ್ಳಬಾರದು-ಎಂಬ ಅಭಿಪ್ರಾಯವುಳ್ಳವನಾಗಿದ್ದನು !"

## ಜಿತ್ವಾಶೈಲಿನಿಯ ಉಪದೇಶದ ಅನುವಾದ

(ಭಾಷ್ಯ)

೧೮೨. ಕಿಂತು ಯತ್ ತೇ ತುಭ್ಯಂ ಕಶ್ಚಿತ್ ಅಬ್ರವೀತ್ ಆಚಾರ್ಯಃ, ಅನೇಕಾಚಾರ್ಯಸೇವೀ ಹಿ ಭವಾನ್ ತತ್ ಶೃಣವಾಮ ಇತಿ । ಇತರ ಆಹ । ಅಬ್ರವೀತ್ ಉಕ್ತವಾನ್ ಮೇ ಮಮ ಆಚಾರ್ಯೋ ಜಿತ್ವಾ ನಾಮತಃ ಶಿಲಿನಸ್ಯ ಅಪತ್ಯಂ ಶೈಲಿನಿಃ । ವಾಗ್ ವೈ ಬ್ರಹ್ಮ ಇತಿ । ವಾಗ್ದೇವತಾ ಬ್ರಹ್ಮ ಇತಿ । ಆಹೇತರಃ ಯಥಾ ಮಾತೃಮಾನ್ ಮಾತಾ ಯಸ್ಯ ವಿದ್ಯತೇ ಪುತ್ರಸ್ಯ ಸಮ್ಯಗನುಶಾಸ್ತ್ರೀ ಅನುಶಾಸನಕರ್ತ್ರೀ ಸ ಮಾತೃಮಾನ್ । ಅತ ಊರ್ಧ್ವಂ ಪಿತಾ ಯಸ್ಯ ಅನುಶಾಸ್ತಾ ಸ ಪಿತೃಮಾನ್ ಉಪನಯನಾತ್ ಊರ್ಧ್ವಮ್ ಆ ಸಮಾವರ್ತನಾತ್ ಆಚಾರ್ಯೋ ಯಸ್ಯ ಅನುಶಾಸ್ತಾ ಸ ಆಚಾರ್ಯವಾನ್ । ಏವಂ ಶುದ್ಧಿತ್ರಯಹೇತುಸಂಯುಕ್ತಃ ಸ ಸಾಕ್ಷಾದಾಚಾರ್ಯಃ ಸ್ವಯಂ ನ ಕದಾಚಿದಪಿ ಪ್ರಾಮಾಣ್ಯಾದ್ ವ್ಯಭಿಚರತಿ । ಸ ಯಥಾ ಬ್ರೂಯಾತ್ ಶಿಷ್ಯಾಯ ತಥಾ ಅಸೌ ಜಿತ್ವಾ ಶೈಲಿನಿಃ ಉಕ್ತವಾನ್ ವಾಗ್ವೈ ಬ್ರಹ್ಮೇತಿ । ಅವದತೋ ಹಿ ಕಿಗ್ಂ ಸ್ಯಾದಿತಿ । ನ ಹಿ ಮೂಕಸ್ಯ ಇಹಾರ್ಥಮ್ ಅಮುತ್ರಾರ್ಥಂ ವಾ ಕಿಂಚನ ಸ್ಯಾತ್॥

(ಭಾಷ್ಯಾರ್ಥ)

ಆದರೆ ಯಾವನಾದರೂ ಆಚಾರ್ಯನು ನಿನಗೆ ಏನು ಹೇಳಿಕೊಟ್ಟಿದ್ದಾನೋ -ನೀನು ಅನೇಕ ಆಚಾರ್ಯರನ್ನು ಸೇವಿಸಿರುವನಲ್ಲವೆ ? -ಅದನ್ನೇ ಕೇಳೋಣ ಎನ್ನಲು ಇನ್ನೊಬ್ಬ(ನಾದ ಜನಕನು) ಹೇಳುತ್ತಾನೆ. (ಮೇ=ಮಮ) ನನಗೆ ಆಚಾರ್ಯನಾದ ಜಿತ್ವಾ ಎಂಬ ಹೆಸರಿನ ಶೈಲಿನಿಯು ಶಿಲನನ ಮಗನು, ವಾಕ್ಕೇ ಬ್ರಹ್ಮವು, ವಾಗ್ದೇವತೆಯೇ ಬ್ರಹ್ಮವು ಎಂದು ಹೇಳಿರುತ್ತಾನೆ.

ಇನ್ನೊಬ್ಬನಾದ ಯಾಜ್ಞವಲ್ಕ್ಯನೆನ್ನುತ್ತಾನೆ. ಹೇಗೆ ಮಾತೃವಂತನು, ಯಾವ ಮಗನಿಗೆ ಚೆನ್ನಾಗಿ ಅನುಶಾಸಕಳಾದ ಅನುಶಾಸನವನ್ನು ಮಾಡುವ ತಾಯಿಯಿರುವಳೋ ಅವನು ಮಾತೃವಂತನು ; ಆಮೇಲೆ ಯಾವನಿಗೆ ತಂದೆಯು ಅನುಶಾಸಕನೋ ಅವನು ಪಿತೃವಂತನು ; ಉಪನಯನವಾದ ಬಳಿಕ ಸಮಾವರ್ತನೆಯಾಗುವವರೆಗೆ[1] ಆಚಾರ್ಯನು ಯಾವನಿಗೆ (ಅನುಶಾಸಕನೋ ಅವನು ಆಚಾರ್ಯವಂತನು. ಹೀಗೆ ತಾನು ಶುದ್ಧಿಗೆ ಕಾರಣವಾದ ಈ ಮೂರನ್ನೂ ಕೂಡಿರುವ ನಿಜವಾದ ಆಚಾರ್ಯನಿದಾನಲ್ಲ, ಅವನು ಎಂದಿಗೂ ತಾನೂ ಪ್ರಾಮಾಣ್ಯವನ್ನು ತಪ್ಪಿಹೋಗುವದಿಲ್ಲ.[2] ಅಂಥ (ಆಚಾರ್ಯನು) ಶಿಷ್ಯನಿಗೆ ಹೇಗೆ ಹೇಳಬೇಕೋ ಹಾಗೆಯೇ ಈ ಜಿತ್ವಾಶೈಲಿನಿಯು ವಾಗ್ವೈ ಬ್ರಹ್ಮ (ವಾಕ್ಕೇ ಬ್ರಹ್ಮವು) ಎಂದು ಹೇಳಿರುತ್ತಾನೆ. ಏಕಂದರೆ ಮಾತಾಡದವನಿಗೆ ಏನಾದೀತು ? ಮೂಕನಿಗೆ ಇಹ(ಸುಖ)ಕ್ಕಾಗಲಿ ಪರ(ಸುಖ)ಕ್ಕಾಗಲಿ ಯಾವದೂ ಆಗಲಾರದಷ್ಟೆ ?

## ವಾಗ್ಬ್ರಹ್ಮದ ನಾಲ್ಕು ಪಾದಗಳು

(ಭಾಷ್ಯ)

೧೪೩. ಕಿಂ ತು ಅಬ್ರವೀತ್ ಉಕ್ತವಾನ್ ತೇ ತುಭ್ಯಂ ತಸ್ಯ ಬ್ರಹ್ಮಣ ಆಯತನಂ ಪ್ರತಿಷ್ಠಾಂ ಚ ? ಆಯತನಂ ನಾಮ ಶರೀರಮ್ । ಪ್ರತಿಷ್ಠಾ ತ್ರಿಷ್ವಪಿ ಕಾಲೇಷು ಯ ಆಶ್ರಯಃ । ಆಹೇತರಃ ನ ಮೇಽಬ್ರವೀತ್ ಇತಿ । ಇತರ ಆಹ ಯದ್ಯೇವಮ್ ಏಕಪಾದ್ ವಾ ಏತದ್ । ಏಕಃ ಪಾದಃ ಯಸ್ಯ ಬ್ರಹ್ಮಣಃ ತದಿದಮ್ ಏಕಪಾದ್ ಬ್ರಹ್ಮ । ತ್ರಿಭಿಃ ಪಾದೈಃ ಶೂನ್ಯಮ್ ಉಪಾಸ್ಯಮಾನಮಪಿ ನ ಫಲಾಯ ಭವತಿ ಇತ್ಯರ್ಥಃ । ಯದ್ಯೇವಂ ಸ ತ್ವಂ ವಿದ್ವಾನ್ ಸನ್ ನಃ ಅಸ್ಮಭ್ಯಂ ಬ್ರೂಹಿ ಹೇ ಯಾಜ್ಞವಲ್ಕ್ಯೇತಿ । ಸ ಚಾಹ । ವಾಗೇವ ಆಯತನಂ ವಾಗ್ದೇವಸ್ಯ ಬ್ರಹ್ಮಣಃ । ವಾಗೇವ ಕರಣಮ್ ಆಯತನಂ ಶರೀರಮ್ । ಆಕಾಶೋಽವ್ಯಾಕೃತಾಖ್ಯಃ ಪ್ರತಿಷ್ಠಾ ಉತ್ಪತ್ತಿಸ್ಥಿತಿಲಯಕಾಲೇಷು ಪ್ರಜ್ಞಾ ಇತ್ಯೇನತ್ ಉಪಾಸೀತ । ಪ್ರಜ್ಞೇತೀಯಮ್ ಉಪನಿಷತ್ ಬ್ರಹ್ಮಣಃ ಚತುರ್ಥಃ ಪಾದಃ । ಪ್ರಜ್ಞೇತಿ ಕೃತ್ವಾ ಏನದ್ ಬ್ರಹ್ಮ ಉಪಾಸೀತ ॥

---

1. ಗುರುಗಳ ಅನುಜ್ಞೆಯನ್ನು ಪಡೆದು ಮದುವೆಯಾಗುವದಕ್ಕೆ ಮನೆಗೆ ಹೋಗುವದು ಸಮಾವರ್ತನವು ; ಅಲ್ಲಿಯವರೆಗೆ ಎಂದರ್ಥ.

2. ಪ್ರಮಾಣವಾಗಿರುತ್ತಾನೆ, ಅವನ ವಾಕ್ಯವು ಅವಶ್ಯವಾಗಿ ಪ್ರಮಾಣವಾಗಿರುತ್ತದೆ ಎಂದರ್ಥ

(ಭಾಷ್ಯಾರ್ಥ)

"ಆದರೆ (ತೇ=ತುಭ್ಯಮ್) ನಿನಗೆ (ಅವನು) ಆ ಬ್ರಹ್ಮದ ಆಯತನವನ್ನು ಪ್ರತಿಷ್ಠೆಯನ್ನು ಹೇಳಿದನೇನು?" ಆಯತನವೆಂದರೆ ಶರೀರವು, ಪ್ರತಿಷ್ಠೆ ಎಂದರೆ ಮೂರು ಕಾಲದಲ್ಲಿಯೂ (ಅದಕ್ಕೆ) ಆಶ್ರಯವಾಗಿರುವದಲ್ಲ (ಅದು).

ಇನ್ನೊಬ್ಬ(ನಾದ ಜನಕನು) ಹೇಳುತ್ತಾನೆ. ನನಗೆ ಹೇಳಲಿಲ್ಲ. (ಇದಕ್ಕೆ) ಇನ್ನೊಬ್ಬ(ನಾದ ಯಾಜ್ಞವಲ್ಕ್ಯನು) ಹೇಳುತ್ತಾನೆ. ಹೀಗಾದರೆ ಇದು ಒಕ್ಕಾಲಿನ (ಬ್ರಹ್ಮವೇ). ಒಂದೇ ಪಾದವು ಇರುವ ಬ್ರಹ್ಮವಿದೆಯಲ್ಲ, ಅದನ್ನು ಏಕಪಾದ್ ಬ್ರಹ್ಮ(ವೆಂದಿದೆ). (ಮಿಕ್ಕ) ಮೂರು ಪಾದಗಳಿಲ್ಲದೆ ಉಪಾಸನೆಮಾಡಿದರೂ ಫಲಕ್ಕಾಗುವದಿಲ್ಲ ಎಂದರ್ಥ. ಹಾಗಾದರೆ ನೀನು (ಅದನ್ನು) ತಿಳಿದಿರುವೆ ಯಾದ್ದರಿಂದ (ನಃ=ಅಸ್ಮಭ್ಯಂ) ನಮಗೆ ಹೇಳಿಕೊಡಯ್ಯ, ಯಾಜ್ಞವಲ್ಕ್ಯ!

ಆ (ಯಾಜ್ಞವಲ್ಕ್ಯನು) ಹೇಳುತ್ತಾನೆ. ವಾಕ್ಕೇ ಆಯತನವು; ವಾಗ್ದೇವ ನಾದ (ಈ) ಬ್ರಹ್ಮಕ್ಕೆ ವಾಕ್ಕೆಂಬ ಕರಣವೇ ಆಯತನವು, ಶರೀರವು, ಆಕಾಶವು, ಅವ್ಯಾಕೃತವೆಂಬ (ಆಕಾಶವು) ಉತ್ಪತ್ತಿಸ್ಥಿತಿಲಯಕಾಲಗಳಲ್ಲಿ(ಅದಕ್ಕೆ) ಪ್ರತಿಷ್ಠೆ ಯು, ಪ್ರಜ್ಞೆ ಎಂದು ಇದನ್ನು ಉಪಾಸನೆಮಾಡಬೇಕು. ಪ್ರಜ್ಞೆ ಎಂಬ ಉಪನಿಷತ್ತೇ ಬ್ರಹ್ಮದ ನಾಲ್ಕನೆಯ ಪಾದವು[1], ಈ ಬ್ರಹ್ಮವನ್ನು ಪ್ರಜ್ಞೆ ಎಂದು ಭಾವಿಸಿ ಉಪಾಸನೆಮಾಡಬೇಕು[2].

## ವಾಕ್ಕು ಪ್ರಜ್ಞೆ ಎಂಬುದು ಹೇಗೆ?

(ಭಾಷ್ಯ)

೧೪೪. ಕಾ ಪ್ರಜ್ಞತಾ ಯಾಜ್ಞವಲ್ಕ್ಯ? ಕಿಂ ಸ್ವಯಮೇವ ಪ್ರಜ್ಞಾ, ಉತ ಪ್ರಜ್ಞಾನಿಮಿತ್ತಮ್[3]? ಯಥಾ ಆಯತನಪ್ರತಿಷ್ಠೇ ಬ್ರಹ್ಮಣೋ ವ್ಯತಿರಿಕ್ತೇ ತದ್ವತ್ ಕಿಮ್? ನ। ಕಥಂ ತರ್ಹಿ? ವಾಗೇವ ಸಮ್ರಾಟ್ ಇತಿ ಹೋವಾಚ। ವಾಗೇವ ಪ್ರಜ್ಞಾ ಇತಿ ಹೋವಾಚ, ಉಕ್ತವಾನ್ ನ ವ್ಯತಿರಿಕ್ತಾ

1. ದೇವತೆ, ಶರೀರ, ಪ್ರತಿಷ್ಠೆ, ಉಪನಿಷತ್ತು (ಹೆಸರು) ಇವೇ ಬ್ರಹ್ಮದ ನಾಲ್ಕು ಪಾದಗಳು ಎಂದರ್ಥ.

2. ಈ ಪರ್ಯಾಯಗಳಲ್ಲಿ ಶ್ರೋತ್ರೇಂದ್ರಿಯಗಳನ್ನು ಹೇಳಿರುವವರಿಂದ ವಿರಾಜನನ್ನೇ ಉಪಾಸನೆಮಾಡಬೇಕು; ವಾಕ್ಕೇ ಬ್ರಹ್ಮ ಮುಂತಾದವುಗಳಿಂದ ಸೂತ್ರಾತ್ಮನನ್ನು ಗ್ರಹಿಸ ಬೇಕು; ಆಕಾಶವೇ ಪ್ರತಿಷ್ಠೆ ಎಂಬಲ್ಲಿ ಅಂತರ್ಯಾಮಿಯನ್ನು ಗ್ರಹಿಸಬೇಕು. ಹೀಗೆ ಸರ್ವಜಗತ್ತನ್ನೂ ಉಪಾಸನೆಮಾಡಬೇಕೆಂಬುದೇ ಇಲ್ಲಿ ವಿವಕ್ಷಿತ– ಎಂದು ವಾರ್ತಿಕ.

3. ಟೀಕೆಯನ್ನನುಸರಿಸಿದರೆ 'ಪ್ರಜ್ಞಾನಿಮಿತ್ತಾ' ಎಂಬ ವಾ॥ ಪಾಠವನ್ನು ಅನುಸರಿಸ ಬೇಕಾಗುವದು; ಇಲ್ಲದಿದ್ದರೆ 'ಪ್ರಜ್ಞಾ ನಿಮಿತ್ತಮ್' ಎಂದು ವ್ಯಸ್ತಪದಗಳಾಗಿರುವ ಪಾಠವೂ ಆಗಬಹುದು.

ಪ್ರಜ್ಞಾ ಇತಿ । ಕಥಂ ಪುನರ್ವಾಗೇವ ಪ್ರಜ್ಞಾ ಇತಿ ? ಉಚ್ಯತೇ। ವಾಚಾ ವೈ ಸಮ್ರಾಟ್ ಬನ್ಧುಃ ಪ್ರಜ್ಞಾಯತೇ । ಅಸ್ಮಾಕಂ ಬನ್ಧುರಿತ್ಯುಕ್ತೇ ಪ್ರಜ್ಞಾಯತೇ ಬನ್ಧುಃ । ತಥಾ ಋಗ್ವೇದಾದಿ । ಇಷ್ಟಂ ಯಾಗನಿಮಿತ್ತಂ ಧರ್ಮಜಾತಮ್, ಹುತಂ ಹೋಮನಿಮಿತ್ತಂ ಚ । ಆಶಿತಮ್ ಅನ್ನದಾನನಿಮಿತ್ತಮ್ । ಪಾಯಿತಂ ಪಾನದಾನನಿಮಿತ್ತಮ್ । ಅಯಂ ಚ ಲೋಕಃ ಇದಂ ಚ ಜನ್ಮ, ಪರಶ್ಚ ಲೋಕಃ ಪ್ರತಿಪತ್ತವ್ಯಂ ಚ ಜನ್ಮ । ಸರ್ವಾಣಿ ಚ ಭೂತಾನಿ ವಾಚೈವ ಸಮ್ರಾಟ್ ಪ್ರಜ್ಞಾಯನ್ತೇ ॥

(ಭಾಷ್ಯಾರ್ಥ)

ಯಾಜ್ಞವಲ್ಕ್ಯನೆ, (ವಾಕ್ಕಿನ) ಪ್ರಜ್ಞತೆ ಎಂಬುದು ಯಾವದು ? (ಅದು) ತಾನೇ ಪ್ರಜ್ಞೆಯೊ, ಅಥವಾ ಪ್ರಜ್ಞೆಯು (ಅದಕ್ಕೆ) ನಿಮಿತ್ತವೊ ? ಆಯತನ ಪ್ರತಿಷ್ಠೆಗಳು ಹೇಗೆ (ವಾಗ್ರೂಪ)ಬ್ರಹ್ಮಕ್ಕಿಂತ ಬೇರೆಯಾಗಿರುವವೋ (ಇದೂ) ಹಾಗೇನು ?

(ಯಾಜ್ಞವಲ್ಕ್ಯನು) ಹಾಗಲ್ಲ. ಮತ್ತೆ ಹೇಗೆಂದರೆ ಸಮ್ರಾಜನೆ, ವಾಕ್ಕೇ –ಎಂದು ನುಡಿದನು. ವಾಕ್ಕೇ ಪ್ರಜ್ಞೆಯೆಂದು ನುಡಿದನು, ಹೇಳಿದವನಾದನು, ಪ್ರಜ್ಞೆಯು (ಅದಕ್ಕಿಂತ) ವ್ಯತಿರಿಕ್ತವಲ್ಲ ಎಂದನು.

(ಪ್ರಶ್ನೆ) :– ವಾಕ್ಕೇ ಪ್ರಜ್ಞೆ ಎಂದರೆ ಹೇಗೆ ?

(ಉತ್ತರ) :– ಹೇಳುತ್ತೇನೆ. ಸಮ್ರಾಜನೆ, ವಾಕ್ಕಿನಿಂದಲೇ ಅಲ್ಲವೆ, ಬಂಧುವು ತಿಳಿಯುಬರುತ್ತಾನೆ ? ನಮ್ಮ ಬಂಧು(ಇವನು) ಎಂದು ಹೇಳಿದರೆ ಬಂಧುವು ಗೊತ್ತಾಗುತ್ತಾನೆ. ಹೀಗೆಯೇ ಋಗ್ವೇದವೇ ಮುಂತಾದದ್ದೂ ಇಷ್ಟವೂ ಯಾಗನಿಮಿತ್ತದಿಂದಾದ ಧರ್ಮಜಾತವೂ, ಹುತವೂ ಹೋಮನಿಮಿತ್ತವಾದ(ಧರ್ಮಜಾತವೂ), ಆಶಿತವೂ ಅನ್ನದಾನನಿಮಿತ್ತದಿಂದಾದದ್ದೂ, ಪಾಯಿತವೂ ಪಾನದಾನನಿಮಿತ್ತದಿಂದಾದದ್ದೂ, ಈ ಲೋಕವೂ ಈ ಜನ್ಮವೂ, ಪರಲೋಕವೂ ಮುಂದೆ ಪಡೆಯಬೇಕಾಗಿರುವ ಜನ್ಮವೂ, ಎಲ್ಲಾ ಭೂತಗಳೂ– ಸಮ್ರಾಜನೆ, ವಾಕ್ಕಿನಿಂದಲೇ ತಿಳಿದುಬರುತ್ತವೆ.

## ವಾಗ್ಬ್ರಹ್ಮದ ಉಪಾಸನೆಯ ಫಲ

(ಭಾಷ್ಯ)

೧೪೫. ಅತಃ ವಾಗ್ ವೈ ಸಮ್ರಾಟ್ ಪರಮಂ ಬ್ರಹ್ಮ । ನೈನಂ ಯಥೋಕ್ತಬ್ರಹ್ಮವಿದಂ ವಾಗ್ ಜಹಾತಿ । ಸರ್ವಾಣಿ ಏನಂ ಭೂತಾನಿ ಅಭಿಕ್ಷರನ್ತಿ ಬಲಿದಾನಾದಿಭಿಃ । ಇಹ ದೇವೋ ಭೂತ್ವಾ ಪುನಃ ಶರೀರಪಾತೋತ್ತರಕಾಲಂ ದೇವಾನ್ ಅಪ್ಯೇತಿ ಅಪಿ ಗಚ್ಛತಿ ಯ ಏವಂ ವಿದ್ವಾನ್ ಏತದುಪಾಸ್ತೇ॥

(ಭಾಷ್ಯಾರ್ಥ)

ಆದ್ದರಿಂದ ಸಮ್ರಾಜನೆ, ವಾಕ್ಕೇ ಪರಮಬ್ರಹ್ಮವು. ಯಾವನು ಹೀಗೆಂದರಿತುಕೊಂಡು ಇದನ್ನು ಉಪಾಸನೆಮಾಡುತ್ತಾನೋ, ಅವನನ್ನೂ (ಈ) ಮೇಲೆ ಹೇಳಿದ (ವಾಗ್ರೂಪ) ಬ್ರಹ್ಮವನ್ನರಿತುಕೊಂಡಿರುವವನನ್ನೂ ವಾಕ್ಕು ಬಿಟ್ಟು ಹೋಗುವದಿಲ್ಲ, ಅವನನ್ನು ಸರ್ವಭೂತಗಳೂ ಕಪ್ಪವನ್ನು ಕೊಡುವದೇ ಮುಂತಾದ ಪ್ರಕಾರಗಳಿಂದ ಬಳಿಸಾರುವವು. **ಅವನು ಇಲ್ಲಿಯೇ ದೇವನಾಗಿ[1] ಮತ್ತೆ ಶರೀರಪಾತವಾದ ಮುಂದಿನ ಕಾಲದಲ್ಲಿ ದೇವತೆಗಳನ್ನು ಸೇರುವನು, (ಅವರಲ್ಲಿ) ಲಯವಾಗುವನು[2].**

## ಶಿಷ್ಯನನ್ನು ಕೃತಾರ್ಥನನ್ನಾಗಿಮಾಡಿಯೇ ದಕ್ಷಿಣೆಯನ್ನು ಸ್ವೀಕರಿಸಬೇಕು

(ಭಾಷ್ಯ)

೧೪೬. ವಿದ್ಯಾನಿಷ್ಕ್ರಯಾರ್ಥಂ ಹಸ್ತಿತುಲ್ಯಋಷಭೋ ಹಸ್ತ್ಯೃಷಭಃ ಯಸ್ಮಿನ್ ಗೋಸಹಸ್ರೇ ತತ್ ಹಸ್ತ್ಯೃಷಭಂ ಸಹಸ್ರಂ ದದಾಮಿ ಇತಿ ಹೋವಾಚ ಜನಕೋ ವೈದೇಹಃ । ಸ ಹೋವಾಚ ಯಾಜ್ಞವಲ್ಕ್ಯಃ । ಅನನುಶಿಷ್ಯ ಶಿಷ್ಯಂ ಕೃತಾರ್ಥಮಕೃತ್ವಾ ಶಿಷ್ಯಾದ್ ಧನಂ ನ ಹರೇತ ಇತಿ ಮೇ ಮಮ ಪಿತಾ ಅಮನ್ಯತ । ಮಮಾಪಿ ಅಯಮೇವಾಭಿಪ್ರಾಯಃ ॥

(ಭಾಷ್ಯಾರ್ಥ)

ವಿದ್ಯೆಯ ನಿಷ್ಕ್ರಯಕ್ಕಾಗಿ ಆನೆಗೆ ಸಮಾನವಾಗಿರುವ ಗೂಳಿಯು ಹಸ್ತ್ಯೃಷಭವು; (ಅದು) ಯಾವ ಗೋಸಹಸ್ರದಲ್ಲಿರುವದೋ ಅಂಥ ಹಸ್ತ್ಯೃಷಭಸಹಸ್ರವನ್ನು ಕೊಡುತ್ತೇನೆ ಎಂದು ಜನಕವೈದೇಹನು ನುಡಿದನು. ಆ ಯಾಜ್ಞವಲ್ಕ್ಯನಿಂತೆಂದನು : ಅನುಶಾಸನಮಾಡದೆ ಶಿಷ್ಯನನ್ನು ಕೃತಾರ್ಥನನ್ನಾಗಿ ಮಾಡದೆ ಶಿಷ್ಯನಿಂದ ಧನವನ್ನು ತೆಗೆದುಕೊಳ್ಳಬಾರದು ಎಂದು (ಮೇ=

---

1. ಬ್ರಹ್ಮಜ್ಞಾನಕ್ಕಿಂತ ಮೊದಲೂ ಬ್ರಹ್ಮನೇ ಆಗಿದ್ದು ಜ್ಞಾನದಿಂದ ಬ್ರಹ್ಮವನ್ನು ಪಡೆಯುವಂತಲ್ಲ ಉಪಾಸನೆಯ ಫಲ; ಉಪಾಸನೆಯಿಂದ ಉಪಾಸ್ಯದೇವತೆಯ ಸಾಕ್ಷಾತ್ಕಾರವನ್ನು ಮೊದಲು ಪಡೆದು ಶರೀರಪಾತವಾದ ಬಳಿಕ ಆಯಾ ದೇವತೆಯ ಸಾಯುಜ್ಯವನ್ನು ಪಡೆಯಬೇಕು- ಎಂಬುದನ್ನು 'ಭೂತ್ವಾ' ಎಂಬ ಮಾತು ಸೂಚಿಸುತ್ತದೆ.

2. ಹಿಂದೆ ಹೇಳಿರುವದು ದೃಷ್ಟಫಲವು, ಇದು ಅದೃಷ್ಟಫಲವು. ದೇವತೆಗಳಲ್ಲಿ ಎಂದು ಹೇಳಿರುವದರಿಂದ ಇಲ್ಲಿ ಹೇಳಿರುವ ವಾಗ್ಬ್ರಹ್ಮೋಪಾಸನೆಯೇ ಮುಂತಾದವುಗಳೆಲ್ಲ ಸೇರಿ ಒಂದೇ ಉಪಾಸನೆ ಎಂಬುದನ್ನು ಸೂಚಿಸಿದೆ ಎಂದು ವಾರ್ತಿಕ.

ಮನು) ನನ್ನ ತಂದೆಯೂ ಅಭಿಪ್ರಾಯವುಳ್ಳವನಾಗಿದ್ದನು; ನನಗೂ ಇದೇ ಅಭಿಪ್ರಾಯವಿದೆ.[1]

## ಪ್ರಾಣದೇವತೆಯ ವಿವರ

(ಉಪನಿಷತ್ತು)

**ಯದೇವ ತೇ ಕಶ್ಚಿದಬ್ರವೀತ್ತಚ್ಛೃಣವಾಮೇತ್ಯಬ್ರವೀನ್ಮ ಉದಙ್ಕಃ ಶೌಲ್ಬಾಯನಃ ಪ್ರಾಣೋ ವೈ ಬ್ರಹ್ಮೇತಿ ಯಥಾ ಮಾತೃಮಾನ್ ಪಿತೃಮಾನಾಚಾರ್ಯವಾನ್ ಬ್ರೂಯಾತ್ ತಥಾ ತಚ್ಛೌಲ್ಬಾಯನೋಽಬ್ರವೀತ್ ಪ್ರಾಣೋ ವೈ ಬ್ರಹ್ಮೇತ್ಯಪ್ರಾಣತೋ ಹಿ ಕಿಗ್ಂ ಸ್ಯಾದಿತ್ಯಬ್ರವೀತ್ತು ತೇ ತಸ್ಯಾಯತನಂ ಪ್ರತಿಷ್ಠಾಂ ನ ಮೇಽಬ್ರವೀದಿತ್ಯೇಕಪಾದ್ವಾ ಏತತ್ ಸಮ್ರಾಡಿತಿ ಸ ವೈ ನೋ ಬ್ರೂಹಿ ಯಾಜ್ಞವಲ್ಕ್ಯ ಪ್ರಾಣ ಏವಾಯತನಮಾಕಾಶಃ ಪ್ರತಿಷ್ಠಾ ಪ್ರಿಯಮಿತ್ಯೇನದುಪಾಸೀತ ಕಾ ಪ್ರಿಯತಾ ಯಾಜ್ಞವಲ್ಕ್ಯ ಪ್ರಾಣ ಏವ ಸಮ್ರಾಡಿತಿ ಹೋವಾಚ ಪ್ರಾಣಸ್ಯ ವೈ ಸಮ್ರಾಟ್ ಕಾಮಾಯಾಯಾಜ್ಯಂ ಯಾಜಯತ್ಯಪ್ರತಿಗೃಹ್ಯಸ್ಯ ಪ್ರತಿಗೃಹ್ಣಾತ್ಯಪಿ ತತ್ರ ವಧಾಶಙ್ಕಂ ಭವತಿ ಯಾಂ ದಿಶಮೇತಿ ಪ್ರಾಣಸ್ಯೈವ ಸಮ್ರಾಟ್ ಕಾಮಾಯ ಪ್ರಾಣೋ ವೈ ಸಮ್ರಾಟ್ ಪರಮಂ ಬ್ರಹ್ಮ ನೈನಂ ಪ್ರಾಣೋ ಜಹಾತಿ ಸರ್ವಾಣ್ಯೇನಂ ಭೂತಾನ್ಯಭಿಕ್ಷರನ್ತಿ ದೇವೋ ಭೂತ್ವಾ ದೇವಾನಪ್ಯೇತಿ ಯ ಏವಂ ವಿದ್ವಾನೇತದುಪಾಸ್ತೇ ಹಸ್ತ್ಯೃಷಭಗ್ಂ ಸಹಸ್ರಂ ದದಾಮೀತಿ ಹೋವಾಚ ಜನಕೋ ವೈದೇಹಃ ಸ ಹೋವಾಚ ಯಾಜ್ಞವಲ್ಕ್ಯಃ ಪಿತಾ ಮೇಽಮನ್ಯತ ನಾನನುಶಿಷ್ಯ ಹರೇತೇತಿ ॥**

೩. ನಿನಗೆ ಯಾವನಾದರೂ ಏನು ಹೇಳಿಕೊಟ್ಟಿರುತ್ತಾನೋ ಅದನ್ನೇ ಕೇಳೋಣ! ನನಗೆ ಉದಂಕಶೌಲ್ಬಾಯನನು ಪ್ರಾಣವೇ ಬ್ರಹ್ಮವೆಂದು ಹೇಳಿರುತ್ತಾನೆ. "ಮಾತೃವಂತನೂ ಪಿತೃವಂತನೂ ಆಚಾರ್ಯವಂತನೂ (ಆದವನು) ಹೇಗೆ ಹೇಳಬೇಕೋ ಹಾಗೆಯೇ ಪ್ರಾಣವೇ ಬ್ರಹ್ಮವೆಂಬಿದನ್ನು ಶೌಲ್ಬಾಯನನು ಹೇಳಿರುತ್ತಾನೆ.

---

1. ಯಾವದನ್ನು ತಿಳಿದರೆ ಎಲ್ಲವನ್ನೂ ತಿಳಿದಂತಾಗುವದೋ ಮಾಡತಕ್ಕದ್ದೆಲ್ಲವೂ ಕೃತವಾಗುವದೋ ಪ್ರಾಪ್ತವಾಗತಕ್ಕದ್ದೆಲ್ಲವೂ ಪ್ರಾಪ್ತವಾದಂತಾಗುವದೋ ಬಿಡತಕ್ಕದ್ದೆಲ್ಲವೂ ತ್ಯಕ್ತವಾಗುವದೋ ಆ ಬ್ರಹ್ಮವಿದ್ಯೆಯನ್ನು ತಿಳಿಸಿದರೇ ಪೂರ್ಣಾನುಶಾಸನವಾಗುವದು ವಾರ್ತಿಕ.

ಏಕೆಂದರೆ ಪ್ರಾಣನವನ್ನು ಮಾಡದಿರುವನಿಗೆ ಏನಾದೀತು ? ಆದರೆ ಆ (ಬ್ರಹ್ಮದ) ಆಯತನವನ್ನೂ ಪ್ರತಿಷ್ಠೆಯನ್ನೂ ಹೇಳಿರುವನೇನು ? '' ನನಗೆ ಹೇಳಿರುವದಿಲ್ಲ. "ಸಮ್ರಾಜನೆ, ಇದು ಒಕ್ಕಾಲಿನ ಬ್ರಹ್ಮವೇ. '' ಯಾಜ್ಞವಲ್ಕ್ಯನೆ, ಆ (ನೀನು) ನಮಗೆ (ಅದನ್ನು) ಹೇಳು ! "ಪ್ರಾಣವೇ ಆಯತನವು ; ಆಕಾಶವು ಪ್ರತಿಷ್ಠೆ, ಪ್ರಿಯವೆಂದು ಇದನ್ನು ಉಪಾಸನೆಮಾಡಬೇಕು. '' ಯಾಜ್ಞವಲ್ಕ್ಯನೆ, ಪ್ರಿಯತೆ ಯಾವದು ? "ಸಮ್ರಾಜನೆ, ಪ್ರಾಣವೇ. ಪ್ರಾಣದ ಕಾಮಕ್ಕೇ ಅಲ್ಲವೆ, ಅಯಾಜ್ಯನನ್ನು ಯಾಜನಮಾಡಿಸುತ್ತಾನೆ, ಅಪ್ರತಿಗೃಹ್ಯನಿಂದಲೂ ಪ್ರತಿಗ್ರಹವನ್ನು ಮಾಡುತ್ತಾನೆ, ಯಾವ ದಿಕ್ಕಿಗೆ ಹೋಗುತ್ತಾನೋ ಅಲ್ಲಿ ಕೊಲೆಯ ಹೆದರಿಕೆಯಾಗುತ್ತದೆ? ಸಮ್ರಾಜನೆ, (ಇದೆಲ್ಲವೂ) ಪ್ರಾಣದ ಕಾಮಕ್ಕಾಗಿಯೇ. ಸಮ್ರಾಜನೆ, ಪ್ರಾಣವೇ ಪರಮಬ್ರಹ್ಮವು. ಯಾವನು ಹೀಗೆಂದರಿತು ಈ (ಬ್ರಹ್ಮವನ್ನು) ಉಪಾಸನೆಮಾಡುತ್ತಾನೋ, ಅವನನ್ನು ಪ್ರಾಣವು ಬಿಟ್ಟುಹೋಗುವದಿಲ್ಲ, ಸರ್ವಭೂತಗಳೂ ಅವನ ಕಡೆಗೆ ಬರುವವು, (ಅವನು) ದೇವನಾಗಿ ದೇವತೆಗಳನ್ನು ಸೇರುವನು'' ಎಂದು ನುಡಿದನು. ಜನಕ ವೈದೇಹನು 'ಹಸ್ತ್ಯೃಷಭವುಳ್ಳ (ಗೋ) ಸಹಸ್ರವನ್ನು ಕೊಡುವೆನು' ಎಂದನು. ಆ ಯಾಜ್ಞವಲ್ಕ್ಯನಿಂತೆಂದನು, "ನಮ್ಮ ತಂದೆಯು ಅನುಶಾಸನಮಾಡದೆ (ಧನವನ್ನು) ತೆಗೆದುಕೊಳ್ಳಬಾರದು ಎಂಬ ಅಭಿಪ್ರಾಯವುಳ್ಳವನಾಗಿದ್ದನು. ''

(ಭಾಷ್ಯ)

೧೪೭. ಯದೇವ ತೇ ಕಶ್ಚಿದಬ್ರವೀತ್ । ಉದಙ್ಕೋ ನಾಮತಃ, ಶುಲ್ಬಸ್ಯ ಅಪತ್ಯಂ ಶೌಲ್ಬಾಯನಃ ಅಬ್ರವೀತ್ । ಪ್ರಾಣೋ ವೈ ಬ್ರಹ್ಮೇತಿ । ಪ್ರಾಣೋ ವಾಯುರ್ದೇವತಾ ಪೂರ್ವವತ್ । ಪ್ರಾಣ ಏವ ಆಯತನಮ್, ಆಕಾಶಃ ಪ್ರತಿಷ್ಠಾ, ಉಪನಿಷತ್ ಪ್ರಿಯಮಿತ್ಯೇನತ್ ಉಪಾಸೀತ । ಕಥಂ ಪುನಃ ಪ್ರಿಯತ್ವಮ್? ಪ್ರಾಣಸ್ಯ ವೈ ಹೇ ಸಮ್ರಾಟ್ ಕಾಮಾಯ ಪ್ರಾಣಸ್ಯಾರ್ಥಾಯ ಅಯಾಜ್ಯಂ ಯಾಜಯತಿ ಪತಿತಾದಿಕಮಪಿ । ಅಪ್ರತಿಗ್ರಾಹ್ಯಸ್ಯಾಪಿ ಉಗ್ರಾದೇಃ ಪ್ರತಿಗೃಹ್ಣಾತ್ಯಪಿ । ತತ್ರ ತಸ್ಯಾಂ ದಿಶಿ ವಧನಿಮಿತ್ತಮ್ ಆಶಙ್ಕಂ ವಧಾಶಙ್ಕಾ ಇತ್ಯರ್ಥಃ । ಯಾಂ ದಿಶಮ್ ಏತಿ ತಸ್ಕರಾದ್ಯಾಕೀರ್ಣಾಂ ಚ ತಸ್ಯಾಂ ದಿಶಿ ವಧಾಶಙ್ಕಾ । ತಚ್ಚ ಏತತ್ ಸರ್ವಂ ಪ್ರಾಣಸ್ಯ ಪ್ರಿಯತ್ವೇ ಭವತಿ । ಪ್ರಾಣಸ್ಯೈವ ಸಮ್ರಾಟ್ ಕಾಮಾಯ । ತಸ್ಮಾತ್ ಪ್ರಾಣೋ ವೈ ಸಮ್ರಾಟ್ ಪರಮಂ ಬ್ರಹ್ಮ । ನೈನಂ ಪ್ರಾಣೋ ಜಹಾತಿ । ಸಮಾನಮನ್ಯತ್ ॥

(ಭಾಷ್ಯಾರ್ಥ)

'ಯದೇವ ತೇ ಕಶ್ಚಿದಬ್ರವೀತ್' (ಎಂಬ ಮೂರನೆಯ ಕಂಡಿಕೆಯ ಅರ್ಥವಿದು) ; ಉದಂಕನೆಂಬುದು ಹೆಸರು ; ಶುಲ್ಬನ ಮಗನು ಶೌಲ್ಬಾಯನನು. (ಅವನು) ಹೇಳಿರುತ್ತಾನೆ. ಪ್ರಾಣವೇ ಬ್ರಹ್ಮ ಎಂಬಲ್ಲಿ ಪ್ರಾಣವೆಂದರೆ ವಾಯು ದೇವತೆ, ಹಿಂದಿನಂತೆಯೇ (ಇದು)[1]. ಪ್ರಾಣವೇ (ದೇವತೆಗೆ) ಆಯತನ, ಆಕಾಶವು ಪ್ರತಿಷ್ಠೆ. (ಆದಕ್ಕೆ) ಉಪನಿಷತ್ತು (ಯಾವದೆಂದರೆ) ಇದನ್ನು ಪ್ರಿಯ ವೆಂದು ಉಪಾಸನೆಮಾಡಬೇಕು.

(ಪ್ರಾಣದೇವತೆ) ಪ್ರಿಯವೆಂಬುದು ಹೇಗೆ? ಎಲೈ ಸಮ್ರಾಜನೆ, ಪ್ರಾಣದ ಕಾಮಕ್ಕಾಗಿಯೇ, ಪ್ರಾಣಕ್ಕೋಸ್ಕರವಾಗಿಯೇ, ಅಯಾಜ್ಯನನ್ನು ಪತಿತನೇ ಮೊದಲಾದವನನ್ನೂ ಯಾಜನಮಾಡಿಸುತ್ತಾನೆ, ಅಪ್ರತಿಗೃಹ್ಯವಾದವನಿಂದಲೂ ಉಗ್ರನೇ ಮುಂತಾದವರಿಂದಲೂ[2] ಪ್ರತಿಗ್ರಹಮಾಡುತ್ತಾನೆ. ಯಾವ ದಿಕ್ಕನ್ನು ಕಳ್ಳರೇ ಮುಂತಾದವರು ತುಂಬಿರುವ ಯಾವ ದಿಕ್ಕಿಗೆ ಹೋಗುತ್ತಾನೋ ಅಲ್ಲಿ ಆ ದಿಕ್ಕಿನಲ್ಲಿ ವಧನಿಮಿತ್ತವಾದ ಆಶಂಕವು, (ಆಶಙ್ಕಮ್ = ಆಶಙ್ಕಾ) ಕೊಲೆಯ ಆಶಂಕೆಯು (ಆಗುವದು). ಇದೆಲ್ಲವೂ ಪ್ರಾಣವು ಪ್ರಿಯವಾಗಿರು ವದರಿಂದಲೇ; ಸಮ್ರಾಜನೆ, ಪ್ರಾಣದ ಕಾಮಕ್ಕಾಗಿಯೇ. ಆದ್ದರಿಂದ ಸಮ್ರಾಜನೆ, ಪ್ರಾಣವೇ ಪರಮಬ್ರಹ್ಮವು. ಇವನನ್ನು ಪ್ರಾಣವು ಬಿಡುವದಿಲ್ಲ (ಮುಂತಾದ) ಮಿಕ್ಕದ್ದು (ಹಿಂದಿನ ಕಂಡಿಕೆಗೆ) ಸಮಾನ(ವಾಗಿದೆ).

## ಚಕ್ಷುರ್ಬ್ರಹ್ಮದ ವಿವರ

(ಉಪನಿಷತ್ತು)

**ಯದೇವ ತೇ ಕಶ್ಚಿದಬ್ರವೀತ್ತಚ್ಛೃಣವಾಮೇತ್ಯಬ್ರವೀನ್ಮೇ ಬರ್ಕುರ್ವಾರ್ಷ್ಣಶ್ಚಕ್ಷುರ್ವೈ ಬ್ರಹ್ಮೇತಿ ಯಥಾ ಮಾತೃಮಾನ್ ಪಿತೃಮಾನಾಚಾರ್ಯವಾನ್ ಬ್ರೂಯಾತ್ ತಥಾ ತದ್ವಾರ್ಷ್ಣೋಽ ಬ್ರವೀಚ್ಚಕ್ಷುರ್ವೈ ಬ್ರಹ್ಮೇತ್ಯಪಶ್ಯತೋ ಹಿ ಕಿಗ್ಂ ಸ್ಯಾದಿತ್ಯ ಬ್ರವೀತ್ತು ತೇ ತಸ್ಯಾಯತನಂ ಪ್ರತಿಷ್ಠಾಂ ನ ಮೇಽಬ್ರವೀದಿತ್ಯೇಕ ಪಾದ್ವಾ ಏತತ್ ಸಮ್ರಾಡಿತಿ ಸ ವೈ ನೋ ಬ್ರೂಹಿ ಯಾಜ್ಞವಲ್ಕ್ಯ ಚಕ್ಷುರೇವಾಯತನಮಾಕಾಶಃ ಪ್ರತಿಷ್ಠಾ ಸತ್ಯಮಿತ್ಯೇನದುಪಾ ಸೀತ ಕಾ ಸತ್ಯತಾ ಯಾಜ್ಞವಲ್ಕ್ಯ ಚಕ್ಷುರೇವ ಸಮ್ರಾಡಿತಿ**

---

1. ಹಿಂದೆ ವಾಕ್ಕು ಎಂದರೆ ಅಗ್ನಿದೇವತೆಯಾಗಿರುವಂತೆಯೇ.

2. ಉಗ್ರನೆಂದರೆ ಒಂದಾನೊಂದು ಕೀಳುಜಾತಿಯವನು ; ಆದಿ ಎಂದದ್ದರಿಂದ ಮ್ಲೇಚ್ಛಾದಿಗಳಿಂದ ಎಂದು ಅರ್ಥವನ್ನು ಮಾಡಬೇಕು– ಎಂದು ಆ॥ ಟೀ॥

**ಹೋವಾಚ ಚಕ್ಷುಷಾ ವೈ ಸಮ್ರಾಟ್ ಪಶ್ಯನ್ತಮಾಹುರದ್ರಾಕ್ಷೀ ರಿತಿ ಸ ಆಹಾದ್ರಾಕ್ಷಮಿತಿ ತತ್ಸತ್ಯಂ ಭವತಿ ಚಕ್ಷುರ್ವೈ ಸಮ್ರಾಟ್ ಪರಮಂ ಬ್ರಹ್ಮನೈನಂ ಚಕ್ಷುರ್ಜಹಾತಿ ಸರ್ವಾಣ್ಯೇನಂ ಭೂತಾ ನ್ಯಭಿಕ್ಷರನ್ತಿ ದೇವೋ ಭೂತ್ವಾ ದೇವಾನಪ್ಯೇತಿ ಯ ಏವಂ ವಿದ್ವಾ ನೇತದುಪಾಸ್ತೇ ಹಸ್ತ್ಯೃಷಭಗ್ಂ ಸಹಸ್ರಂ ದದಾಮೀತಿ ಹೋವಾಚ ಜನಕೋ ವೈದೇಹಃ ಸ ಹೋವಾಚ ಯಾಜ್ಞವಲ್ಕ್ಯಃ ಪಿತಾ ಮೇಽಮನ್ಯತ ನಾನನುಶಿಷ್ಯ ಹರೇತೇತಿ ॥ ೪ ॥**

೪. "ನಿನಗೆ ಯಾವನಾದರೂ ಏನನ್ನು ಹೇಳಿಕೊಟ್ಟಿರು ತ್ತಾನೋ ಅದನ್ನೇ ಕೇಳೋಣ" ನನಗೆ ಬರ್ಕು ವಾರ್ಷ್ಣನು ಚಕ್ಷುಸ್ಸೇ ಬ್ರಹ್ಮವೆಂದು ಹೇಳಿರುತ್ತಾನೆ. "ಮಾತೃವಂತನೂ ಪಿತೃವಂತನೂ ಆಚಾರ್ಯವಂತನೂ ಹೇಗೆ ಹೇಳಬೇಕೋ ಹಾಗೆಯೇ ಚಕ್ಷುಸ್ಸೇ ಬ್ರಹ್ಮವೆಂಬುದನ್ನು ವಾರ್ಷ್ಣನು ಹೇಳಿರುತ್ತಾನೆ. ಏಕೆಂದರೆ ಕಾಣದವ ನಿಗೆ ಏನಾದೀತು ? ಆದರೆ ಆ (ಬ್ರಹ್ಮದ) ಆಯತನವನ್ನೂ ಪ್ರತಿಷ್ಠೆ ಯನ್ನೂ ಹೇಳಿರುತ್ತಾನೇನು ?" ನನಗೆ ಹೇಳಿರುವದಿಲ್ಲ. "ಸಮ್ರಾಜನೆ, ಇದು ಒಕ್ಕಾಲಿನ (ಬ್ರಹ್ಮವೇ)." ಯಾಜ್ಞವಲ್ಕ್ಯನೆ, ಆ (ನೀನು) ನಮಗೆ (ಅದನ್ನು) ಹೇಳು ! "ಚಕ್ಷುಸ್ಸೇ ಆಯತನವು. ಆಕಾಶವು ಪ್ರತಿಷ್ಠೆ, ಸತ್ಯವೆಂದು ಇದನ್ನು ಉಪಾಸನೆಮಾಡಬೇಕು." ಯಾಜ್ಞವಲ್ಕ್ಯನೆ, ಸತ್ಯತೆ ಯಾವದು ? ಸಮ್ರಾಜನೆ, ಚಕ್ಷುಸ್ಸೇ ; ಸಮ್ರಾಜನೆ, ಚಕ್ಷುಸ್ಸಿ ನಿಂದಲೇ ಕಂಡವನನ್ನು ಕಂಡಿರುವೆಯ ? ಎನ್ನುತ್ತಾರೆ ; ಅವನು ಕಂಡಿ ರುವೆನು ಎನ್ನುತ್ತಾನೆ. ಅದು ಸತ್ಯವಾಗುತ್ತದೆ. ಸಮ್ರಾಜನೆ, ಚಕ್ಷುಸ್ಸೇ ಪರಮಬ್ರಹ್ಮವು. ಯಾವನು ಹೀಗೆಂದರಿತು ಈ (ಬ್ರಹ್ಮವನ್ನು) ಉಪಾಸನೆಮಾಡುತ್ತಾನೋ, ಅವನನ್ನು ಕಣ್ಣು ಬಿಟ್ಟುಹೋಗುವದಿಲ್ಲ, ಸರ್ವಭೂತಗಳೂ ಅವನ ಕಡೆಗೆ ಬರುವವು. (ಅವನು) ದೇವನಾಗಿ ದೇವತೆಗಳನ್ನು ಸೇರುವನು" ಎಂದು ನುಡಿದನು. ಜನಕ ವೈದೇಹನು 'ಹಸ್ತ್ಯೃಷಭವುಳ್ಳ (ಗೋ)ಸಹಸ್ರವನ್ನು ಕೊಡುವೆನು' ಎಂದನು. ಆ ಯಾಜ್ಞವಲ್ಕ್ಯನಿಂತೆಂದನು. ನಮ್ಮ ತಂದೆಯು ಅನುಶಾಸನಮಾಡದೆ (ಧನವನ್ನು) ತೆಗೆದುಕೊಳ್ಳಬಾರದು ಎಂಬ ಅಭಿಪ್ರಾಯವುಳ್ಳವ ನಾಗಿದ್ದನು.

(ಭಾಷ್ಯ)

೧೪೪. ಯದೇವ ತೇ ಕಶ್ಚಿತ್ । ಬರ್ಕುರಿತಿ ನಾಮತಃ ವೃಷ್ಣಸ್ಯ ಅಪತ್ಯಂ ವಾರ್ಷ್ಣಃ । ಚಕ್ಷುರ್ವೈ ಬ್ರಹ್ಮ ಇತಿ । ಆದಿತ್ಯೋ ದೇವತಾ ಚಕ್ಷುಷಿ । ಉಪನಿಷತ್ ಸತ್ಯಮ್ । ಯಸ್ಮಾತ್ ಶ್ರೋತ್ರೇಣ ಶ್ರುತಮಪಿ ಅನೃತಮಪಿ ಸ್ಯಾತ್ ನ ತು ಚಕ್ಷುಷಾ ದೃಷ್ಟಮ್ । ತಸ್ಮಾದ್ ವೈ ಸಮ್ರಾಟ್[1] ಪಶ್ಯನ್ತಮಾಹುಃ ಅದ್ರಾಕ್ಷೀಸ್ತ್ವಂ ಹಸ್ತಿನಮ್ ? ಇತಿ । ಸ ಚೇತ್ 'ಅದ್ರಾಕ್ಷಮ್' ಇತ್ಯಾಹ ತತ್ಸತ್ಯಮೇವ ಭವತಿ ಯಸ್ತು ಅನ್ಯೋ ಬ್ರೂಯಾತ್ 'ಅಹಮಶ್ರೌಷಮ್' ಇತಿ । ತದ್ ವ್ಯಭಿಚರತಿ । ಯತ್ತು ಚಕ್ಷುಷಾ ದೃಷ್ಟಂ ತದವ್ಯಭಿಚಾರಿತ್ವಾತ್ ಸತ್ಯಮೇವ ಭವತಿ ॥

(ಭಾಷ್ಯಾರ್ಥ)

'ಯದೇವ ಕಶ್ಚಿತ್' (ಇತ್ಯಾದಿಯಾದ ನಾಲ್ಕನೆಯ ಕಂಡಿಕೆಯ ವ್ಯಾಖ್ಯಾನವಿದು): ಬರ್ಕುವೆಂಬುದು ಹೆಸರು, ವೃಷ್ಣನ ಮಗನು ವಾರ್ಷ್ಣನು. ಚಕ್ಷುಸ್ಸೇ ಬ್ರಹ್ಮವು ಎಂಬಲ್ಲಿ ಚಕ್ಷುಸ್ಸಿನಲ್ಲಿರುವ ಆದಿತ್ಯದೇವತೆಯೇ (ಚಕ್ಷುಸ್ಸು). (ಅದಕ್ಕೆ) ಉಪನಿಷತ್ತು ಸತ್ಯವೆಂಬುದು. ಶ್ರೋತ್ರದಿಂದ ಕೇಳಿದ್ದು ಸುಳ್ಳೂ ಆಗುತ್ತದೆ, ಆದರೆ ಚಕ್ಷುಸ್ಸಿನಿಂದ ಕಂಡದ್ದು ಆಗಲಾರದಷ್ಟೆ, ಆದ್ದರಿಂದಲೇ ಸಮ್ರಾಜನೆ, (ಕಣ್ಣಿನಿಂದ) ಕಂಡವನನ್ನು 'ನೀನು ಆನೆಯನ್ನು ಕಂಡಿರುವೆ ಯೇನು?' ಎಂದು ಕೇಳುವರು ; ಅವನು ಕಂಡಿರುವೆನು ಎಂದು ಹೇಳಿದರೆ ಅದು ಸತ್ಯವೇ ಆಗುತ್ತದೆ, ಆದರೆ ಇನ್ನೊಬ್ಬನು 'ನಾನು ಕೇಳಿರುವೆನು' ಎಂದು ಹೇಳುತ್ತಾನಲ್ಲ, ಅದು ಬೇರೆಯಾಗಿಯೂ ಇರಬಹುದು, ಆದರೆ ಕಣ್ಣಿಂದ ಕಂಡಿದ್ದು ಬೇರೆಯಾಗಿರುವದಿಲ್ಲವಾದ್ದರಿಂದ ಸತ್ಯವೇ ಆಗಿರುತ್ತದೆ[2].

## ಶ್ರೋತ್ರಬ್ರಹ್ಮದ ವಿವರ

(ಉಪನಿಷತ್ತು)

**ಯದೇವ ತೇ ಕಶ್ಚಿದಬ್ರವೀತ್ತಚ್ಛೃಣವಾಮೇತ್ಯಬ್ರವೀನ್ಮೇ ಗರ್ದಭೀವಿಪೀತೋ ಭಾರದ್ವಾಜಃ ಶ್ರೋತ್ರಂ ವೈ ಬ್ರಹ್ಮೇತಿ ಯಥಾ ಮಾತೃಮಾನ್ ಪಿತೃಮಾನಾಚಾರ್ಯವಾನ್ ಬ್ರೂಯಾತ್ ತಥಾ ತದ್ಭಾರದ್ವಾಜೋಽಬ್ರವೀಚ್ಛ್ರೋತ್ರಂ ವೈ ಬ್ರಹ್ಮೇತ್ಯಶೃಣ್ವತೋ ಹಿ ಕಿಗ್ಂ ಸ್ಯಾದಿತ್ಯಬ್ರವೀತ್ತು ತೇ ತಸ್ಯಾಯತನಂ ಪ್ರತಿಷ್ಠಾಂ ನ ಮೇಽಬ್ರವೀದಿತ್ಯೇಕಪಾದ್ವಾ ಏತತ್ ಸಮ್ರಾಡಿತಿ ಸ ವೈ ನೋ ಬ್ರೂಹಿ ಯಾಜ್ಞವಲ್ಕ್ಯ ಶ್ರೋತ್ರಮೇ**

1. ಇಲ್ಲಿ ಚಕ್ಷುಷಾ ಪಶ್ಯನ್ತಮ್ ಎಂದಿದ್ದು ಮೊದಲನೆಯ ಮಾತನ್ನು ಬರೆಯುವವರು ಕೈಬಿಟ್ಟಿರಲೂಬಹುದಾಗಿದೆ

2. ಆದ್ದರಿಂದ ಚಕ್ಷುರ್ದೇವತೆಯ ರಹಸ್ಯನಾಮವು 'ಸತ್ಯ'ವೆಂದು.

**ಮಾಯತನಮಾಕಾಶಃ ಪ್ರತಿಷ್ಠಾನನ್ತ ಇತ್ಯೇನದುಪಾಸೀತ ಕಾನ ನ್ತತಾ ಯಾಜ್ಞವಲ್ಕ್ಯ ದಿಶ ಏವ ಸಮ್ರಾಡಿತಿ ಹೋವಾಚ ತಸ್ಮಾದ್ ವೈ ಸಮ್ರಾಡಪಿ ಯಾಂ ಕಾಂ ಚ ದಿಶಂ ಗಚ್ಛತಿ ನೈವಾ ಸ್ಯಾ ಅನ್ತಂ ಗಚ್ಛತ್ಯನನ್ತಾ ಹಿ ದಿಶೋ ದಿಶೋ ವೈ ಸಮ್ರಾಟ್ ಶ್ರೋತ್ರಗ್‌ಂ ಶ್ರೋತ್ರಂ ವೈ ಸಮ್ರಾಟ್ ಪರಮಂ ಬ್ರಹ್ಮ ನೈನಗ್‌ಂ ಶ್ರೋತ್ರಂ ಜಹಾತಿ ಸರ್ವಾಣ್ಯೇನಂ ಭೂತಾನ್ಯಭಿ ಕ್ಷರನ್ತಿ ದೇವೋ ಭೂತ್ವಾ ದೇವಾನಪ್ಯೇತಿ ಯ ಏವಂ ವಿದ್ವಾನೇ ತದುಪಾಸ್ತೇ ಹಸ್ತ್ಯೃಷಭಗ್‌ಂ ಸಹಸ್ರಂ ದದಾಮೀತಿ ಹೋವಾಚ ಜನಕೋ ವೈದೇಹಃ ಸ ಹೋವಾಚ ಯಾಜ್ಞ ವಲ್ಕ್ಯಃ ಪಿತಾ ಮೇಽಮನ್ಯತ ನಾನನುಶಿಷ್ಯ ಹರೇತೇತಿ ॥ ೫ ॥**

೫. "ನಿನಗೆ ಯಾವನಾದರೂ ಏನು ಹೇಳಿಕೊಟ್ಟಿರುತ್ತಾನೋ ಅದನ್ನೇ ಕೇಳೋಣ!'' ನನಗೆ ಗರ್ದಭೀವಿಪೀತ ಭಾರದ್ವಾಜನು ಶ್ರೋತ್ರವೇ ಬ್ರಹ್ಮವೆಂದು ಹೇಳಿರುತ್ತಾನೆ. "ಮಾತೃವಂತನೂ ಪಿತೃವಂತನೂ ಆಚಾರ್ಯವಂತನೂ (ಆದವನು) ಹೇಗೆ ಹೇಳಬೇಕೋ ಹಾಗೆಯೇ ಶ್ರೋತ್ರವೇ ಬ್ರಹ್ಮವೆಂಬುದನ್ನು ಭಾರದ್ವಾಜನು ಹೇಳಿರುತ್ತಾನೆ. ಏಕೆಂದರೆ ಕೇಳದೆ ಇರುವವನಿಗೆ ಏನಾದೀತು? ಆದರೆ ಆ (ಬ್ರಹ್ಮದ) ಆಯತನವನ್ನೂ ಪ್ರತಿಷ್ಠೆಯನ್ನೂ ಹೇಳಿರುವನೇನು?'' ನನಗೆ ಹೇಳಿರುವದಿಲ್ಲ. "ಸಮ್ರಾಜನೆ, ಇದು ಒಕ್ಕಾಲಿನ (ಬ್ರಹ್ಮವೇ)'' ಯಾಜ್ಞವಲ್ಕ್ಯನೆ, ಆ (ನೀನು) ನಮಗೆ (ಅದನ್ನು) ಹೇಳು. "ಶ್ರೋತ್ರವೇ ಆಯತನವು, ಆಕಾಶವು ಪ್ರತಿಷ್ಠೆ; ಅನಂತವೆಂದು ಇದನ್ನು ಉಪಾಸನೆಮಾಡಬೇಕು.'' ಯಾಜ್ಞವಲ್ಕ್ಯನೆ, ಅನಂತತ್ವವು ಯಾವದು? "ಸಮ್ರಾಜನೆ, ದಿಕ್ಕುಗಳೇ; ಆದ್ದರಿಂದಲೇ ಸಮ್ರಾಜನೆ, ಯಾವ ಯಾವ ದಿಕ್ಕಿಗೆ ಹೋಗುತ್ತಾನೋ ಅದದರ ಅಂತವನ್ನು ಮುಟ್ಟುವದೇ ಇಲ್ಲ; ದಿಕ್ಕುಗಳು ಅನಂತವಲ್ಲವೆ? ಸಮ್ರಾಜನೆ, ದಿಕ್ಕುಗಳೇ ಶ್ರೋತ್ರವು. ಸಮ್ರಾಜನೆ, ಶ್ರೋತ್ರವೇ ಪರಮಬ್ರಹ್ಮವು. ಯಾವನು ಹೀಗೆಂದರಿತು ಈ (ಬ್ರಹ್ಮವನ್ನು) ಉಪಾಸನೆಮಾಡುತ್ತಾನೋ, ಅವನನ್ನು ಶ್ರೋತ್ರವು ಬಿಟ್ಟುಹೋಗುವದಿಲ್ಲ. ಸರ್ವಭೂತಗಳೂ ಅವನ ಕಡೆಗೆ ಬರುವವು, (ಅವನು) ದೇವನಾಗಿ ದೇವತೆಗಳನ್ನು ಸೇರುವನು'' ಎಂದು ನುಡಿದನು. ಜನಕವೈದೇಹನು 'ಹಸ್ತ್ಯೃಷಭ

ವುಳ್ಳ (ಗೋ)ಸಹಸ್ರವನ್ನು ಕೊಡುವೆನು' ಎಂದನು. ಆ ಯಾಜ್ಞವಲ್ಕ್ಯನಿಂತೆಂದನು: "ನಮ್ಮ ತಂದೆಯು ಅನುಶಾಸನಮಾಡದೆ (ಧನವನ್ನು) ತೆಗೆದುಕೊಳ್ಳಬಾರದು ಎಂಬ ಅಭಿಪ್ರಾಯವುಳ್ಳವನಾಗಿದ್ದನು.

(ಭಾಷ್ಯ)

೧೪೯. ಯದೇವ ತೇ। ಗರ್ದಭೀವಿಪೀತ ಇತಿ ನಾಮತಃ। ಭಾರದ್ವಾಜೋ ಗೋತ್ರತಃ। ಶ್ರೋತ್ರಂ ವೈ ಬ್ರಹ್ಮೇತಿ। ಶ್ರೋತ್ರೇ ದಿಕ್ ದೇವತಾ। ಅನನ್ತ ಇತ್ಯೇನದುಪಾಸೀತ। ಕಾ ಅನನ್ತತಾ ಶ್ರೋತ್ರಸ್ಯ? ದಿಶ ಏವ ಶ್ರೋತ್ರಸ್ಯ ಆನನ್ತ್ಯಂ ಯಸ್ಮಾತ್, ತಸ್ಮಾತ್ ವೈ ಸಮ್ರಾಟ್ ಪ್ರಾಚೀಮ್ ಉದೀಚೀಂ ವಾ ಯಾಂ ಕಾಂಚಿದಪಿ ದಿಶಂ ಗಚ್ಛತಿ ನೈವಾಸ್ಯಾ ಅನ್ತಂ ಗಚ್ಛತಿ ಕಶ್ಚಿದಪಿ। ಅತೋಽನನ್ತಾ ಹಿ ದಿಶಃ। ದಿಶೋ ವೈ ಸಮ್ರಾಟ್ ಶ್ರೋತ್ರಮ್। ತಸ್ಮಾತ್ ದಿಗಾನನ್ತ್ಯಮೇವ ಶ್ರೋತ್ರಸ್ಯಾನನ್ತ್ಯಮ್ ॥

(ಭಾಷ್ಯಾರ್ಥ)

'ಯದೇವ ತೇ' (ಎಂಬ ಐದನೆಯ ಕಂಡಿಕೆಯ ವ್ಯಾಖ್ಯಾನ): ಗರ್ದಭೀವಿಪೀತನೆಂದಿರುವದು ಹೆಸರಿನಿಂದ; ಭಾರದ್ವಾಜನೆಂಬದ್ದು ಗೋತ್ರದಿಂದ. ಶ್ರೋತ್ರವೇ ಬ್ರಹ್ಮ ಎಂಬಲ್ಲಿ ಶ್ರೋತ್ರಕ್ಕೆ ದಿಕ್ಕೇ ದೇವತೆ. ಈ (ದೇವತೆಯನ್ನು) ಅನಂತವೆಂದು ಉಪಾಸನೆಮಾಡಬೇಕು. ಶ್ರೋತ್ರದ ಅನಂತ್ಯವು ಯಾವದು? ಎಂದರೆ, ದಿಕ್ಕುಗಳೇ ಶ್ರೋತ್ರದ ಆನಂತ್ಯವು. ಹೀಗಿರುವದಷ್ಟೆ, ಆದ್ದರಿಂದಲೇ ಸಮ್ರಾಜನೆ, ಪೂರ್ವಕ್ಕೊ ಉತ್ತರಕ್ಕೊ ಯಾವಯಾವ ದಿಕ್ಕಿಗೆ ಹೋಗುತ್ತಾನೋ ಅದರ ಅಂತವನ್ನು ಯಾವನೂ ಮುಟ್ಟುವದೇ ಇಲ್ಲ. ಆದ್ದರಿಂದ ದಿಕ್ಕುಗಳು ಅನಂತವಷ್ಟೆ. ಸಮ್ರಾಜನೆ, ದಿಕ್ಕುಗಳೇ ಶ್ರೋತ್ರವು. ಆದ್ದರಿಂದ ದಿಕ್ಕುಗಳ ಆನಂತ್ಯವೇ ಶ್ರೋತ್ರದ ಆನಂತ್ಯವು.

## ಮನೋಬ್ರಹ್ಮದ ವಿವರ

(ಉಪನಿಷತ್ತು)

**ಯದೇವ ತೇ ಕಶ್ಚಿದಬ್ರವೀತ್ ತಚ್ಛೃಣವಾಮೇತ್ಯಬ್ರವೀನ್ಮೇ ಸತ್ಯಕಾಮೋ ಜಾಬಾಲೋ ಮನೋ ವೈ ಬ್ರಹ್ಮೇತಿ ಯಥಾ ಮಾತೃಮಾನ್ ಪಿತೃಮಾನಾಚಾರ್ಯವಾನ್ ಬ್ರೂಯಾತ್ತಥಾ ತಜ್ಜಾಬಾಲೋಽಬ್ರವೀನ್ಮನೋ ವೈ ಬ್ರಹ್ಮೇತ್ಯಮನಸೋ ಹಿ ಕಿಗ್‍ಂ ಸ್ಯಾದಿತ್ಯಬ್ರವೀತ್ತು ತೇ ತಸ್ಯಾಯತನಂ ಪ್ರತಿಷ್ಠಾಂ ನ ಮೇಽಬ್ರವೀದಿತ್ಯೇಕಪಾದ್ವಾ ಏತತ್ ಸಮ್ರಾಡಿತಿ ಸ ವೈ ನೋ**

**ಬ್ರೂಹಿ ಯಾಜ್ಞವಲ್ಕ್ಯ ಮನ ಏವಾಯತನಮಾಕಾಶಃ ಪ್ರತಿಷ್ಠಾಽನನ್ದ ಇತ್ಯೇನದುಪಾಸೀತ ಕಾಽನನ್ದತಾ ಯಾಜ್ಞವಲ್ಕ್ಯ ಮನ ಏವ ಸಮ್ರಾಡಿತಿ ಹೋವಾಚ ಮನಸಾ ವೈ ಸಮ್ರಾಟ್ ಸ್ತ್ರಿಯಮಭಿಹಾರ್ಯತೇ ತಸ್ಯಾಂ ಪ್ರತಿರೂಪಃ ಪುತ್ರೋ ಜಾಯತೇ ಸ ಆನನ್ದೋ ಮನೋ ವೈ ಸಮ್ರಾಟ್ ಪರಮಂ ಬ್ರಹ್ಮ ನೈನಂ ಮನೋ ಜಹಾತಿ ಸರ್ವಾಣ್ಯೇನಂ ಭೂತಾನ್ಯಭಿಕ್ಷರನ್ತಿ ದೇವೋ ಭೂತ್ವಾ ದೇವಾನಪ್ಯೇತಿ ಯ ಏವಂ ವಿದ್ವಾನೇತದುಪಾಸ್ತೇ ಹಸ್ತ್ಯೃಷಭಗ್ಂ ಸಹಸ್ರಂ ದದಾಮೀತಿ ಹೋವಾಚ ಜನಕೋ ವೈದೇಹಃ ಸ ಹೋವಾಚ ಯಾಜ್ಞವಲ್ಕ್ಯಃ ಪಿತಾ ಮೇಽಮನ್ಯತ ನಾನನುಶಿಷ್ಯ ಹರೇತೇತಿ ॥ ೬ ॥**

೬. "ನಿನಗೆ ಯಾವನಾದರೂ ಏನು ಹೇಳಿಕೊಟ್ಟಿರುತ್ತಾನೋ ಅದನ್ನೇ ಕೇಳೋಣ!" ನನಗೆ ಸತ್ಯಕಾಮಜಾಬಾಲನು ಮನಸ್ಸೇ ಬ್ರಹ್ಮವೆಂದು ಹೇಳಿರುತ್ತಾನೆ. "ಮಾತೃವಂತನೂ ಪಿತೃವಂತನೂ ಆಚಾರ್ಯವಂತನೂ (ಆದವನು) ಹೇಗೆ ಹೇಳಬೇಕೋ ಹಾಗೆಯೇ ಮನಸ್ಸೇ ಬ್ರಹ್ಮವೆಂಬುದನ್ನು ಜಾಬಾಲನು ಹೇಳಿರುತ್ತಾನೆ. ಏಕೆಂದರೆ ಮನಸ್ಸಿಲ್ಲದವನಿಗೆ ಏನಾದೀತು? ಆದರೆ ಆ (ಬ್ರಹ್ಮದ) ಆಯತನವನ್ನೂ ಪ್ರತಿಷ್ಠೆಯನ್ನೂ ಹೇಳಿರುವನೇನು?" ನನಗೆ ಹೇಳಿರುವದಿಲ್ಲ. ಸಮ್ರಾಜನೆ, ಇದು ಒಕ್ಕಾಲಿನ (ಬ್ರಹ್ಮವೇ). ಯಾಜ್ಞವಲ್ಕ್ಯನೆ, ಆ (ನೀನು) ನಮಗೆ ಅದನ್ನು ಹೇಳು. "ಮನಸ್ಸೇ ಆಯತನವು, ಆಕಾಶವು ಪ್ರತಿಷ್ಠೆ; ಆನಂದವೆಂದು ಇದನ್ನು ಉಪಾಸನೆಮಾಡಬೇಕು." ಯಾಜ್ಞವಲ್ಕ್ಯನೆ, ಆನಂದತ್ವವು ಯಾವದು? "ಸಮ್ರಾಜನೆ, ಮನಸ್ಸೇ. ಮನಸ್ಸಿನಿಂದಲೇ ಸ್ತ್ರೀಯನ್ನು ಅಭಿಪ್ರಾಯಪೂರ್ವಕವಾಗಿ ಬಯಸುತ್ತಾನೆ, ಆ ಸ್ತ್ರೀಯಲ್ಲಿ ಪ್ರತಿರೂಪನಾದ ಪುತ್ರನು ಹುಟ್ಟುತ್ತಾನೆ. ಅದು ಆನಂದವು. ಸಮ್ರಾಜನೆ, ಮನಸ್ಸೇ ಪರಮಬ್ರಹ್ಮವು. ಯಾವನು ಹೀಗೆಂದರಿತು ಈ (ಬ್ರಹ್ಮವನ್ನು) ಉಪಾಸನೆಮಾಡುತ್ತಾನೋ ಅವನನ್ನು ಮನಸ್ಸು ಬಿಟ್ಟುಹೋಗುವದಿಲ್ಲ, ಸರ್ವಭೂತಗಳೂ ಅವನ ಕಡೆಗೆ ಬರುವವು. ಅವನು ದೇವನಾಗಿ ದೇವತೆಗಳನ್ನು ಸೇರುವನು" ಎಂದು ನುಡಿದನು. ಜನಕವೈದೇಹನು 'ಹಸ್ತ್ಯೃಷಭವುಳ್ಳ (ಗೋ) ಸಹಸ್ರವನ್ನು ಕೊಡುವೆನು' ಎಂದನು. ಆ ಯಾಜ್ಞವಲ್ಕ್ಯನಿಂತೆಂದನು:

"ನನ್ನ ತಂದೆಯು ಅನುಶಾಸನಮಾಡದೆ (ಧನವನ್ನು) ತೆಗೆದುಕೊಳ್ಳ ಬಾರದು ಎಂಬ ಅಭಿಪ್ರಾಯವುಳ್ಳವನಾಗಿದ್ದನು."

(ಭಾಷ್ಯ)

೧೫೦. ಸತ್ಯಕಾಮ ಇತಿ ನಾಮತಃ। ಜಬಾಲಾಯಾ ಅಪತ್ಯಂ ಜಾಬಾಲಃ, ಚನ್ದ್ರಮಾ ಮನಸಿ ದೇವತಾ। ಆನನ್ದ ಇತ್ಯುಪನಿಷತ್। ಯಸ್ಮಾತ್ ಮನ ಏವ ಆನನ್ದಃ। ತಸ್ಮಾತ್ ಮನಸಾ ವೈ ಸಮ್ರಾಟ್ ಸ್ತ್ರಿಯಮ್ ಅಭಿಕಾಮಯ ಮಾನಃ ಅಭಿಹಾರ್ಯತೇ ಪ್ರಾರ್ಥಯತೇ ಇತ್ಯರ್ಥಃ। ತಸ್ಮಾತ್ ಯಾಂ ಸ್ತ್ರಿಯಮ್ ಅಭಿಕಾಮಯಮಾನೋಽಭಿಹಾರ್ಯತೇ, ತಸ್ಯಾಂ ಪ್ರತಿರೂಪಃ ಅನುರೂಪಃ ಪುತ್ರೋ ಜಾಯತೇ। ಸ ಆನನ್ದಹೇತುಃ ಪುತ್ರಃ। ಸ ಯೇನ ಮನಸಾ ನಿರ್ವರ್ತ್ಯತೇ ತನ್ಮನಃ ಆನನ್ದಃ ॥

(ಭಾಷ್ಯಾರ್ಥ)

ಸತ್ಯಕಾಮನೆಂಬುದು ಹೆಸರಿನಿಂದ, ಜಬಾಲೆಯ ಮಗನು ಜಾಬಾಲನು, ಚಂದ್ರನು ಮನಸ್ಸಿಗೆ ದೇವತೆಯು. ಆನಂದ ಎಂಬುದು ಉಪನಿಷತ್ತು. ಮನಸ್ಸೇ ಆನಂದವಾಗಿರುವದಲ್ಲ, ಆದ್ದರಿಂದ ಮನಸ್ಸಿನಿಂದಲೇ ಸಮ್ರಾಜನೆ, ಸ್ತ್ರೀಯನ್ನು ಕಾಮಿಸಿ ಪ್ರಾರ್ಥಿಸುತ್ತಾನೆ ಎಂದರ್ಥ. ಆದ್ದರಿಂದ ಯಾವ ಸ್ತ್ರೀಯನ್ನು ಅಭಿಪ್ರಾಯಪೂರ್ವಕವಾಗಿ ಬಯಸುತ್ತಾನೋ ಅವಳಲ್ಲಿ ಪ್ರತಿರೂಪನಾದ ಅನುರೂಪನಾದ ಪುತ್ರನು ಹುಟ್ಟುತ್ತಾನೆ. ಆ ಪುತ್ರನು ಆನಂದಕ್ಕೆ ಕಾರಣ ವಾಗಿರುತ್ತಾನೆ; ಅವನು ಯಾವ ಮನಸ್ಸಿನಿಂದ ಉಂಟಾಗುತ್ತಾನೋ ಆ ಮನಸ್ಸು ಆನಂದವು.

## ಹೃದಯಬ್ರಹ್ಮದ ವಿವರ

(ಉಪನಿಷತ್ತು)

**ಯದೇವ ತೇ ಕಶ್ಚಿದಬ್ರವೀತ್ತಚ್ಛೃಣವಾಮೇತ್ಯಬ್ರವೀನ್ಮೇ ವಿದಗ್ಧಃ ಶಾಕಲ್ಯೋ ಹೃದಯಂ ವೈ ಬ್ರಹ್ಮೇತಿ ಯಥಾ ಮಾತೃ ಮಾನ್ ಪಿತೃಮಾನಾಚಾರ್ಯವಾನ್ ಬ್ರೂಯಾತ್ತಥಾ ತಚ್ಛಾ ಕಲ್ಯೋಽಬ್ರವೀದ್ಧೃದಯಂ ವೈ ಬ್ರಹ್ಮೇತ್ಯಹೃದಯಸ್ಯ ಹಿ ಕಿಗ್ಂ ಸ್ಯಾದಿತ್ಯಬ್ರವೀತ್ತು ತೇ ತಸ್ಯಾಯತನಂ ಪ್ರತಿಷ್ಠಾಂ ನ ಮೇಽ ಬ್ರವೀದಿತ್ಯೇಕಪಾದ್ವಾ ಏತತ್ ಸಮ್ರಾಡಿತಿ ಸ ವೈ ನೋ ಬ್ರೂಹಿ ಯಾಜ್ಞವಲ್ಕ್ಯ ಹೃದಯಮೇವಾಯತನಮಾಕಾಶಃ ಪ್ರತಿಷ್ಠಾ ಸ್ಥಿತಿರಿತ್ಯೇನದುಪಾಸೀತ ಕಾ ಸ್ಥಿತತಾ ಯಾಜ್ಞವಲ್ಕ್ಯ ಹೃದಯಂ**

**ಮೇವ ಸಮ್ರಾಡಿತಿ ಹೋವಾಚ ಹೃದಯಂ ವೈ ಸಮ್ರಾಟ್ ಸರ್ವೇಷಾಂ ಭೂತಾನಾಮಾಯತನಗ್ಂ ಹೃದಯಂ ವೈ ಸಮ್ರಾಟ್ ಸರ್ವೇಷಾಂ ಭೂತಾನಾಂ ಪ್ರತಿಷ್ಠಾ ಹೃದಯೇ ಹ್ಯೇವ ಸಮ್ರಾಟ್ ಸರ್ವಾಣಿ ಭೂತಾನಿ ಪ್ರತಿಷ್ಠಿತಾನಿ ಭವನ್ತಿ ಹೃದಯಂ ವೈ ಸಮ್ರಾಟ್ ಪರಮಂ ಬ್ರಹ್ಮ ನೈನಗ್ಂ ಹೃದಯಂ ಜಹಾತಿ ಸರ್ವಾಣ್ಯೇನಂ ಭೂತಾನ್ಯಭಿಕ್ಷರನ್ತಿ ದೇವೋ ಭೂತ್ವಾ ದೇವಾನ ಪ್ಯೇತಿ ಯ ಏವಂ ವಿದ್ವಾನೇತದುಪಾಸ್ತೇ ಹಸ್ತ್ಯೃಷಭಗ್ಂ ಸಹಸ್ರಂ ದದಾಮೀತಿ ಹೋವಾಚ ಜನಕೋ ವೈದೇಹಃ ಸ ಹೋವಾಚ ಯಾಜ್ಞವಲ್ಕ್ಯಃ ಪಿತಾ ಮೇಽಮನ್ಯತ ನಾನನುಶಿಷ್ಯ ಹರೇತೇತಿ ॥ ೭ ॥**

೭. "ನಿನಗೆ ಯಾವನಾದರೂ ಏನು ಹೇಳಿಕೊಟ್ಟಿರುತ್ತಾನೋ ಅದನ್ನು ಕೇಳೋಣ!'' ನನಗೆ ವಿದಗ್ಧಶಾಕಲ್ಯನು ಹೃದಯವೇ ಬ್ರಹ್ಮವೆಂದು ಹೇಳಿರುತ್ತಾನೆ. "ಹೇಗೆ ಮಾತೃವಂತನೂ ಪಿತೃವಂತನೂ ಆಚಾರ್ಯವಂತನೂ (ಆದವನು) ಹೇಳಬೇಕೋ ಹಾಗೆಯೇ ಹೃದಯವೇ ಬ್ರಹ್ಮವೆಂಬುದನ್ನು ಶಾಕಲ್ಯನು ಹೇಳಿರುತ್ತಾನೆ. ಏಕೆಂದರೆ ಹೃದಯವಿಲ್ಲದವನಿಗೆ ಏನಾದೀತು ? ಆದರೆ ಆ (ಬ್ರಹ್ಮದ) ಆಯತನವನ್ನೂ ಪ್ರತಿಷ್ಠೆಯನ್ನೂ ಹೇಳಿರುವನೇನು?'' ನನಗೆ ಹೇಳಿರುವದಿಲ್ಲ. "ಸಮ್ರಾಜನೆ, ಇದು ಒಕ್ಕಾಲಿನ (ಬ್ರಹ್ಮವೇ).'' ಯಾಜ್ಞವಲ್ಕ್ಯನೆ, ಆ (ನೀನು) ನಮಗೆ (ಅದನ್ನು) ಹೇಳಿಕೊಡು. "ಹೃದಯವೇ ಆಯತನವು, ಆಕಾಶವು ಪ್ರತಿಷ್ಠೆ, ಸ್ಥಿತಿಯೆಂದು ಇದನ್ನು ಉಪಾಸನೆ ಮಾಡಬೇಕು'' ಯಾಜ್ಞವಲ್ಕ್ಯನೆ, ಸ್ಥಿತತ್ವವು ಯಾವದು? "ಸಮ್ರಾಜನೆ, ಹೃದಯವೇ ; ಸಮ್ರಾಜನೆ, ಹೃದಯವೇ ಸರ್ವಭೂತಗಳಿಗೂ ಪ್ರತಿಷ್ಠೆಯು, ಹೃದಯದಲ್ಲಿಯೇ ಸರ್ವಭೂತಗಳೂ ಪ್ರತಿಷ್ಠಿತವಾಗಿರುವವಲ್ಲವೆ ? ಸಮ್ರಾಜನೆ, ಹೃದಯವೇ ಪರಮಬ್ರಹ್ಮವು. ಹೀಗೆಂದರಿತು ಯಾವನು ಈ (ಬ್ರಹ್ಮವನ್ನು) ಉಪಾಸನೆಮಾಡುತ್ತಾನೋ, ಅವನನ್ನು ಹೃದಯವು ಬಿಟ್ಟುಹೋಗುವದಿಲ್ಲ. ಸರ್ವಭೂತಗಳೂ ಅವನ ಕಡೆಗೆ ಬರುವವು, (ಅವನು) ದೇವನಾಗಿ ದೇವತೆಗಳನ್ನು ಸೇರುವನು'' ಎಂದು ನುಡಿದನು. ಜನಕವೈದೇಹನು 'ಹಸ್ತ್ಯೃಷಭವುಳ್ಳ (ಗೋ) ಸಹಸ್ರವನ್ನು ಕೊಡುವೆನು' ಎಂದನು. ಆ ಯಾಜ್ಞ

ವಲ್ಕ್ಯನಿಂತೆಂದನು. "ನಮ್ಮ ತಂದೆಯು ಅನುಶಾಸನಮಾಡದೆ (ಧನವನ್ನು) ತೆಗೆದುಕೊಳ್ಳಬಾರದು ಎಂಬ ಅಭಿಪ್ರಾಯವುಳ್ಳವನಾಗಿದ್ದನು."

(ಭಾಷ್ಯ)

೧೫೧. ವಿದಗ್ಧಃ ಶಾಕಲ್ಯಃ। ಹೃದಯಂ ವೈ ಬ್ರಹ್ಮೇತಿ। ಹೃದಯಂ ವೈ ಸಮ್ರಾಟ್, ಸರ್ವೇಷಾಂ ಭೂತಾನಾಮ್ ಆಯತನಮ್। ನಾಮರೂಪಕರ್ಮಾತ್ಮಕಾನಿ ಹಿ ಭೂತಾನಿ ಹೃದಯಾಶ್ರಯಾಣಿ ಇತ್ಯವೋಚಾಮ ಶಾಕಲ್ಯಬ್ರಾಹ್ಮಣೇ, ಹೃದಯಪ್ರತಿಷ್ಠಿತಾನಿ ಇತಿ ಚ। ತಸ್ಮಾತ್ ಹೃದಯೇ ಹ್ಯೇವ ಸಮ್ರಾಟ್, ಸರ್ವಾಣಿ ಭೂತಾನಿ ಪ್ರತಿಷ್ಠಿತಾನಿ ಭವನ್ತಿ। ತಸ್ಮಾತ್ ಹೃದಯಂ ಸ್ಥಿತಿಃ ಇತ್ಯುಪಾಸೀತ। ಹೃದಯೇ ಚ ಪ್ರಜಾಪತಿರ್ದೇವತಾ ॥

(ಭಾಷ್ಯಾರ್ಥ)

ವಿದಗ್ಧಶಾಕಲ್ಯನು (ಆಚಾರ್ಯನು), ಹೃದಯವೇ ಬ್ರಹ್ಮವು- ಎಂದು (ಹೇಳಿರುತ್ತಾನೆ). "ಸಮ್ರಾಜನೆ, ಹೃದಯವೇ ಸರ್ವಭೂತಗಳಿಗೂ ಆಯತನವಷ್ಟೆ." ನಾಮರೂಪಕರ್ಮಾತ್ಮಕವಾದ (ಸರ್ವ)ಭೂತಗಳೂ ಹೃದಯಾಶ್ರಯವಾಗಿದೆಯೆಂದೂ ಹೃದಯದಲ್ಲಿ ಪ್ರತಿಷ್ಠಿತವಾಗಿವೆಯೆಂದೂ ಶಾಕಲ್ಯಬ್ರಾಹ್ಮಣದಲ್ಲಿ (೩-೯-೨೪) ಹೇಳಿರುತ್ತೇವೆ. ಆದ್ದರಿಂದ "ಸಮ್ರಾಜನೆ. ಹೃದಯದಲ್ಲಿಯೇ ಸರ್ವಭೂತಗಳೂ ಪ್ರತಿಷ್ಠಿತವಾಗಿರುತ್ತವೆ." ಪ್ರಜಾಪತಿಯು ಹೃದಯಕ್ಕೆ ಅಧಿದೇವತೆ.

# ಒಂದನೆಯ ಬ್ರಾಹ್ಮಣದ ಸಾರ

**ಅಗ್ನ್ಯಾದಿದೇವತೆಗಳ ದ್ವಾರದಿಂದ ನಿರ್ವಿಶೇಷವಾದ ಬ್ರಹ್ಮವನ್ನು ತಿಳಿಸುವದಕ್ಕೆ ಒಂದನೆಯ ಎರಡನೆಯ ಬ್ರಾಹ್ಮಣಗಳು ಬಂದಿರುತ್ತವೆ.**

೧-೨. ಒಮ್ಮೆ ಯಾಜ್ಞವಲ್ಕ್ಯನು ಜನಕನ ಸಭೆಗೆ ಬಂದನು. ಜನಕನು "ಯಾಜ್ಞವಲ್ಕ್ಯನೆ, ಏತಕ್ಕೆ ಬಂದೆ ? ಪಶುಕಾಮನಾಗಿಯೊ, ಸೂಕ್ಷ್ಮಪ್ರಶ್ನೆಗಳನ್ನು ನಾನು ಕೇಳಲಿ ಎಂದೊ ?" -ಎನ್ನಲು "ಸಮ್ರಾಜನೆ, ಎರಡಕ್ಕಾಗಿಯೂ ಬಂದೆನು. ಆದರೆ ನಿನಗೆ ಯಾವ ಆಚಾರ್ಯನಾದರೂ ಹೇಳಿಕೊಟ್ಟಿರುವದನ್ನು ಮೊದಲು ತಿಳಿಸು, ಕೇಳೋಣ !" ಎಂದನು.

೨. ಜಿತ್ವಾಶೈಲಿನಿ ಎಂಬಾಚಾರ್ಯನು ವಾಕ್ಕೇ (ಅಗ್ನಿಯೇ) ಬ್ರಹ್ಮವೆಂದು ತಿಳಿಸಿರುತ್ತಾನೆ ಎಂದು ಜನಕನು ಹೇಳಲು ಶೈಲಿನಿಯು ಪ್ರಮಾಣಶುದ್ಧವಾಗಿಯೇ ಹೇಳಿದ್ದಾನೆ, ಏಕೆಂದರೆ ಮಾತಿಲ್ಲದವನಿಗೆ ಇಹಪರಗಳಿಲ್ಲ. ಆದರೆ ಆ ಬ್ರಹ್ಮಕ್ಕೆ ಆಯತನವು ಯಾವದು ? ಪ್ರತಿಷ್ಠೆ ಯಾವದು ?"-ಎಂದು ಯಾಜ್ಞವಲ್ಕ್ಯನು ಕೇಳಿದನು ಶೈಲಿನಿಯು ಇದನ್ನು ತಿಳಿಸಿರಲಿಲ್ಲ. "ಈ ಬ್ರಹ್ಮಕ್ಕೆ ನಾಲ್ಕು ಪಾದಗಳಿವೆ; ಒಂದೇ ಪಾದವನ್ನು ತಿಳಿದಿರುವದರಿಂದ ಈ ಉಪಾಸನೆಯ ಫಲವು ನಿನಗೆ ಸಿಕ್ಕಲಾರದು" ಎಂದು ಯಾಜ್ಞವಲ್ಕ್ಯನೆನ್ನಲು ಜನಕನು ಅದನ್ನು ಪೂರ್ಣವಾಗಿ ಹೇಳಿಕೊಡಬೇಕೆಂದು ಕೇಳಿಕೊಂಡನು. "ವಾಕ್ಕೇ ಅದಕ್ಕೆ ಆಯತನವು, ಅವ್ಯಾಕೃತಾಕಾಶವೇ ಪ್ರತಿಷ್ಠೆಯು, ಪ್ರಜ್ಞೆ ಎಂಬುದು ಅದರ ಉಪನಿಷತ್ತು, ರಹಸ್ಯನಾಮವು ಆ ಪ್ರಜ್ಞೆಯು ವಾಕ್ಕಿನ ಸ್ವರೂಪವೇ, ಏಕೆಂದರೆ ವಾಕ್ಕಿನಿಂದಲೇ ಬಂಧುಗಳನ್ನೂ ಋಗ್ವೇದಾದಿಗಳನ್ನೂ, ಇಷ್ಟ, ಹುತ, ಆಶಿತ, ಪಾಯಿತ, ಇಹಲೋಕ- ಇವುಗಳನ್ನೂ ಅರಿತುಕೊಳ್ಳುತ್ತಾರೆ ಯಾವನು ಈ ಚತುಷ್ಪಾದ್ಬ್ರಹ್ಮವನ್ನು ಹೀಗೆಂದು ಉಪಾಸನೆಮಾಡುವನೋ ಅವನಿಗೆ ವಾಕ್ಕು ಕೊನೆಯವರೆಗೂ ಬಿಟ್ಟುಹೋಗದಿರುವದೆಂಬ ದೃಷ್ಟಫಲವೂ ಸರ್ವದೇವಾತ್ಮಕನಾದ ಹಿರಣ್ಯಗರ್ಭನಲ್ಲಿ ಸಾಯುಜ್ಯವನ್ನು ಪಡೆಯುವದೆಂಬ ಅದೃಷ್ಟಫಲವೂ ದೊರಕುವವು" ಎಂದು ಸಾಂಗವಾಗಿ ಸಫಲವಾಗಿ ವಾಗ್ಬ್ರಹ್ಮವನ್ನು ತಿಳಿಸಿದನು. ಜನಕನು ವೃಷಭಸಹಿತವಾಗಿ ಸಾವಿರ ಗೋಗಳ ದಕ್ಷಿಣೆಯನ್ನು ಕೊಡುವದಕ್ಕೆ ಹೋಗಲು 'ಪೂರ್ಣವಾಗಿ ಅನುಶಾಸನಮಾಡದೆ ಗುರುದಕ್ಷಿಣೆಯನ್ನು ಸ್ವೀಕರಿಸಬಾರದೆಂದು ನಮ್ಮ ತಂದೆ ತಿಳಿಸಿರುತ್ತಾನೆ' ಎಂದು ಯಾಜ್ಞವಲ್ಕ್ಯನೆಂದನು.

೩. ಹೀಗೆಯೇ ಉದಂಕಶೌಲ್ಬಾಯನನು ಹೇಳಿಕೊಟ್ಟ ಪ್ರಾಣ(ವಾಯು) ಬ್ರಹ್ಮಕ್ಕೆ ಪ್ರಾಣವೇ ಆಯತನವು, ಅವ್ಯಾಕೃತಾಕಾಶವೇ ಪ್ರತಿಷ್ಠೆ ; ಪ್ರಿಯವೆಂಬುದು ರಹಸ್ಯನಾಮ, ಏಕೆಂದರೆ ಪ್ರಾಣವು ಪ್ರಿಯವಾಗಿರುತ್ತದೆ. ಈ ಬ್ರಹ್ಮವನ್ನು ಉಪಾಸನೆಮಾಡುವವನಿಗೆ ಪ್ರಾಣವು ಬಿಟ್ಟುಹೋಗುವದಿಲ್ಲವೆಂಬುದು ದೃಷ್ಟಫಲವು, ದೇವತಾಸಾಯುಜ್ಯವು ಅದೃಷ್ಟಫಲವು- ಎಂದು ಯಾಜ್ಞವಲ್ಕ್ಯನು ಹೇಳಿಕೊಟ್ಟನು. ಅನುಶಾಸನವು ಪೂರ್ಣವಾಗದ್ದರಿಂದ ಜನಕನು ಕೊಡುವದಕ್ಕೆ ಬಂದ ಧನವನ್ನು ಮಾತ್ರ ಸ್ವೀಕರಿಸಲಿಲ್ಲ.

೪. ಇದರಂತೆ ಬರ್ಕುವಾರ್ಷ್ಣನೆಂಬ ಆಚಾರ್ಯನು ತಿಳಿಸಿಕೊಟ್ಟ ಚಕ್ಷುಸ್ಸು (ಆದಿತ್ಯ) ಎಂಬ ಬ್ರಹ್ಮಕ್ಕೆ ಚಕ್ಷುಸ್ಸು ಆಯತನವು. ಅವ್ಯಾಕೃತಾಕಾಶವು ಪ್ರತಿಷ್ಠೆ, ಸತ್ಯವೆಂಬುದು ರಹಸ್ಯನಾಮವು, ಏಕೆಂದರೆ ಕಣ್ಣಿನಿಂದ ಕಂಡದ್ದೇ ಸತ್ಯವಾಗಿರುತ್ತದೆ. ಈ ಬ್ರಹ್ಮವನ್ನು ಉಪಾಸನೆಮಾಡಿದವನಿಗೆ ಚಕ್ಷುರಿಂದ್ರಿಯವು ಬಿಟ್ಟುಹೋಗುವದಿಲ್ಲವೆಂಬ ದೃಷ್ಟಫಲವೂ ದೇವತಾಸಾಯುಜ್ಯವೆಂಬ ಅದೃಷ್ಟಫಲವೂ ಆಗುವದೆಂದು ಯಾಜ್ಞವಲ್ಕ್ಯನು ಹೇಳಿಕೊಟ್ಟನು. ಈಗಲೂ ಅನುಶಾಸನವು ಪೂರ್ಣವಾಗಲಿಲ್ಲವಾಗಿ ದಕ್ಷಿಣೆಯನ್ನು ಸ್ವೀಕರಿಸಲಿಲ್ಲ.

೫. ಹೀಗೆಯೇ ಗರ್ದಭೀವಿಪೀತ ಭಾರದ್ವಾಜನು ಹೇಳಿಕೊಟ್ಟಿದ್ದ ಶ್ರೋತ್ರ (ದಿಗ್ದೇವತಾ) ಎಂಬ ಬ್ರಹ್ಮಕ್ಕೆ ಶ್ರೋತ್ರವು ಆಯತನವು, ಅವ್ಯಾಕೃತಾಕಾಶವು ಪ್ರತಿಷ್ಠೆ, ಅನಂತವೆಂಬುದು ರಹಸ್ಯನಾಮವು, ಏಕೆಂದರೆ ದಿಕ್ಕುಗಳು ಅಂತವಿಲ್ಲದವುಗಳು. ಈ ಬ್ರಹ್ಮವನ್ನು ಉಪಾಸನೆಮಾಡಿದವನಿಗೆ ಶ್ರೋತ್ರವು ಬಿಟ್ಟುಹೋಗದಿರುವದೆಂಬುದು ದೃಷ್ಟಫಲವು, ದೇವತಾಸಾಯುಜ್ಯವು ಅದೃಷ್ಟಫಲವು– ಎಂದು ಯಾಜ್ಞವಲ್ಕ್ಯನು ಹೇಳಿಕೊಟ್ಟನು. ಈಗಲೂ ಉಪದೇಶವು ಪೂರ್ಣವಾಗಲಿಲ್ಲ, ಆದ್ದರಿಂದ ದಕ್ಷಿಣೆಯನ್ನು ಸ್ವೀಕರಿಸಲಿಲ್ಲ.

೬. ಹೀಗೆಯೇ ಸತ್ಯಕಾಮಜಾಬಾಲನು ಹೇಳಿಕೊಟ್ಟಿದ್ದ ಮನೋಬ್ರಹ್ಮ (ಚಂದ್ರಬ್ರಹ್ಮ)ಕ್ಕೆ ಮನಸ್ಸು ಆಯತನವು, ಅವ್ಯಾಕೃತಾಕಾಶವು ಪ್ರತಿಷ್ಠೆಯು, ಆನಂದವೆಂಬುದು ರಹಸ್ಯನಾಮ, ಏಕೆಂದರೆ ಮನಃಪೂರ್ವಕವಾಗಿ ಬೆರೆತ ಸ್ತ್ರೀಯಿಂದ ಆನಂದಕರನಾದ ಪುತ್ರನು ಹುಟ್ಟುತ್ತಾನೆ. ಈ ಮನೋಬ್ರಹ್ಮದ ಉಪಾಸಕನಿಗೆ ಮನಸ್ಸು ಬಿಟ್ಟುಹೋಗದಿರುವದೆಂಬುದು ದೃಷ್ಟಫಲ, ದೇವತಾಸಾಯುಜ್ಯವೆಂಬುದು ಅದೃಷ್ಟಫಲ –ಎಂದು ಯಾಜ್ಞವಲ್ಕ್ಯನು ಹೇಳಿಕೊಟ್ಟನು. ಈಗಲೂ ವಿದ್ಯೋಪದೇಶವು ಪೂರ್ಣವಾಗಲಿಲ್ಲ, ದಕ್ಷಿಣೆಯನ್ನು ಸ್ವೀಕರಿಸಲಿಲ್ಲ.

೭. ಇದರಂತೆ ವಿದಗ್ಧಶಾಕಲ್ಯನೆಂಬ ಆಚಾರ್ಯನು ಹೇಳಿಕೊಟ್ಟಿದ್ದ ಹೃದಯ(ಪ್ರಜಾಪತಿ) ಬ್ರಹ್ಮಕ್ಕೆ ಹೃದಯವೇ ಆಯತನವು, ಅವ್ಯಾಕೃತಾಕಾಶವು ಪ್ರತಿಷ್ಠೆ ; ಸ್ಥಿತಿ ಎಂಬುದು ರಹಸ್ಯನಾಮವು, ಏಕೆಂದರೆ ನಾಮರೂಪಕರ್ಮಾತ್ಮಕವಾದ ಭೂತಗಳು ಹೃದಯದಲ್ಲಿಯೇ ಪ್ರತಿಷ್ಠಿತವಾಗಿರುತ್ತವೆ –ಎಂದು ಯಾಜ್ಞವಲ್ಕ್ಯನು ಹೇಳಿಕೊಟ್ಟನು. ಈಗಲೂ ಅನುಶಾಸನವು ಪೂರ್ಣವಾದಂತಾಗಲಿಲ್ಲವಾಗಿ ಯಾಜ್ಞವಲ್ಕ್ಯನು ಗುರುದಕ್ಷಿಣೆಯನ್ನು ಸ್ವೀಕರಿಸಲಿಲ್ಲ.

---

# ನಾಲ್ಕನೆಯ ಅಧ್ಯಾಯ-ಎರಡನೆಯ ಬ್ರಾಹ್ಮಣ

(ಉಪಾಸಕನಿಗೆ ತುರೀಯಾತ್ಮವೇ ಪರಮಗತಿ)

## ಉಪಾಸಕನಿಗೆ ಪರಮಗತಿ ಯಾವದು?

(ಉಪನಿಷತ್ತು)

**ಜನಕೋ ಹ ವೈದೇಹಃ ಕೂರ್ಚಾದುಪಾವಸರ್ಪನ್ನುವಾಚ ನಮಸ್ತೇಽಸ್ತು ಯಾಜ್ಞವಲ್ಕ್ಯಾನು ಮಾ ಶಾಧೀತಿ ಸ ಹೋವಾಚ ಯಥಾ ವೈ ಸಮ್ರಾಣ್ಮಹಾನ್ತಮಧ್ವಾನಮೇಷ್ಯನ್ ರಥಂ ವಾ ನಾವಂ ವಾ ಸಮಾದದೀತೈವಮೇವೈತಾಭಿರುಪನಿಷದ್ಭಿಃ ಸಮಾಹಿತಾತ್ಮಾಸ್ಯೇವಂ ವೃನ್ದಾರಕ ಆಢ್ಯಃ ಸನ್ನಧೀತವೇದ ಉಕ್ತೋಪನಿಷತ್ಕ ಇತೋ ವಿಮುಚ್ಯಮಾನಃ ಕ್ವ ಗಮಿಷ್ಯಸೀತಿ ನಾಹಂ ತದ್ಭಗವನ್ ವೇದ ಯತ್ರ ಗಮಿಷ್ಯಾಮೀತ್ಯಥ ವೈ ತೇಽಹಂ ತದ್ವಕ್ಷ್ಯಾಮಿ ಯತ್ರ ಗಮಿಷ್ಯಸೀತಿ ಬ್ರವೀತು ಭಗವಾನಿತಿ ॥ ೧ ॥**

೧. ಜನಕವೈದೇಹನು ಕೂರ್ಚದಿಂದ (ಎದ್ದು) ಬಳಿಸಾರಿ ಯಾಜ್ಞವಲ್ಕ್ಯನೆ, ನಿನಗೆ ನಮಸ್ಕಾರವಿರಲಿ! ನನಗೆ ಅನುಶಾಸನವನ್ನು ಮಾಡು!'' ಎಂದನು. ಅವನಿಂತೆಂದನು: "ಸಮ್ರಾಜನೆ, ಹೇಗೆ ದೊಡ್ಡ ದಾರಿಯನ್ನು ಪಯಣಮಾಡುವವನಾಗಿದ್ದು ರಥವನ್ನಾಗಲಿ ನಾವೆಯನ್ನಾಗಲಿ ಸ್ವೀಕರಿಸುವನೋ ಹಾಗೆಯೇ ಈ ಉಪನಿಷತ್ತುಗಳಿಂದ ಸಮಾಹಿತಾತ್ಮನಾಗಿರುತ್ತೀಯೆ! ಹೀಗೆಯೇ ವೃಂದಾರಕನೂ ಆಢ್ಯನೂ ಆಗಿ ಅಧೀತವೇದನಾಗಿ ಉಕ್ತೋಪನಿಷತ್ಕನಾಗಿ ಇದರಿಂದ ವಿಮುಕ್ತನಾಗುವಾಗ ಎಲ್ಲಿಗೆ ಹೋಗುವೆ?'' ಭಗವಂತನೆ, ಎಲ್ಲಿಗೆ ಹೋಗುವೆನೋ ಅದನ್ನರಿಯೆನು. "ಈಗ ನಿನಗೆ ಎಲ್ಲಿಗೆ ಹೋಗುವೆಯೋ ಅದನ್ನು ಹೇಳಿಕೊಡುವೆನು.'' ಭಗವಂತನೆ, ಹೇಳಬೇಕು!

## ಯಾಜ್ಞವಲ್ಕ್ಯನು ಪರಮಗತಿಯನ್ನು ಹೇಳುವದಕ್ಕೆ ಉಪಕ್ರಮಿಸಿದ್ದು

(ಭಾಷ್ಯ)

೧೩೨. ಜನಕೋ ಹ ವೈದೇಹಃ। ಯಸ್ಮಾತ್ ಸವಿಶೇಷಣಾನಿ ಸರ್ವಾಣಿ ಬ್ರಹ್ಮಾಣಿ ಜಾನಾತಿ ಯಾಜ್ಞವಲ್ಕ್ಯಃ, ತಸ್ಮಾತ್ ಆಚಾರ್ಯಕತ್ವಂ ಹಿತ್ವಾ

ಜನಕಃ ಕೂರ್ಚಾತ್ ಆಸನವಿಶೇಷಾತ್ ಉತ್ಥಾಯ ಉಪ ಸಮೀಪಮ್ ಅವ ಸರ್ಪನ್ ಪಾದಯೋರ್ನಿಪತನ್ ಇತ್ಯರ್ಥಃ। ಉವಾಚ ಉಕ್ತವಾನ್ ನಮಃ ತೇ ತುಭ್ಯಮ್ ಅಸ್ತು ಹೇ ಯಾಜ್ಞವಲ್ಕ್ಯ। ಅನು ಮಾ ಶಾಧಿ ಅನುಶಾಧಿ ಮಾಮ್ ಇತ್ಯರ್ಥಃ। ಇತಿಶಬ್ದೋ ವಾಕ್ಯಪರಿಸಮಾಪ್ತ್ಯರ್ಥಃ। ಸ ಹೋವಾಚ ಯಾಜ್ಞವಲ್ಕ್ಯಃ। ಯಥಾ ವೈ ಲೋಕೇ ಹೇ ಸಮ್ರಾಟ್ ಮಹಾಸ್ತಂ ದೀರ್ಘಮ್ ಅಧ್ವಾನಮ್ ಏಷ್ಯನ್ ಗಮಿಷ್ಯನ್ ರಥಂ ವಾ ಸ್ಥಲೇನ ಗಮಿಷ್ಯನ್ ನಾವಂ ವಾ ಜಲೇನ ಗಮಿಷ್ಯನ್ ಸಮಾದದೀತ, ಏವಮೇವ ಏತಾನಿ ಬ್ರಹ್ಮಾಣಿ ಏತಾಭಿರುಪ ನಿಷದ್ಭಿರ್ಯುಕ್ತಾನಿ ಉಪಾಸೀನಃ ಸಮಾಹಿತಾತ್ಮಾ ಅಸಿ, ಅತ್ಯನ್ತಮೇತಾಭಿ ರುಪನಿಷದ್ಭಿಃ ಸಂಯುಕ್ತಾತ್ಮಾ ಅಸಿ। ನ ಕೇವಲಮ್ ಉಪನಿಷತ್ಸಮಾಹಿತಃ, ಏವಂ ವೃನ್ದಾರಕಃ ಪೂಜ್ಯಶ್ಚ ಆಢ್ಯಶ್ಚ ಈಶ್ವರಃ ನ ದರಿದ್ರಃ ಇತ್ಯರ್ಥಃ। ಅಧೀತ ವೇದಃ ಅಧೀತಃ ವೇದಃ ಯೇನ ಸ ತ್ವಮ್ ಅಧೀತವೇದಃ। ಉಕ್ತಾಶ್ಚ ಉಪನಿ ಷದಃ ಆಚಾರ್ಯೈಃ ತುಭ್ಯಮ್ ಸ ತ್ವಮುಕ್ತೋಪನಿಷತ್ಕಃ। ಏವಂ ಸರ್ವ ವಿಭೂತಿಸಂಪನ್ನೋಽಪಿ ಸನ್ ಭಯಮಧ್ಯಸ್ಥ ಏವ ಪರಮಾತ್ಮಜ್ಞಾನೇನ ವಿನಾ ಅಕೃತಾರ್ಥ ಏವ ತಾವತ್ ಇತ್ಯರ್ಥಃ। ಯಾವತ್ ಪರಂ ಬ್ರಹ್ಮ ನ ವೇತ್ಸಿ। ಇತಃ ಅಸ್ಮಾತ್ ದೇಹಾತ್ ವಿಮುಚ್ಯಮಾನಃ ಏತಾಭಿಃ ನೌರಥಸ್ಥಾನೀಯಾಭಿಃ ಸಮಾಹಿತಃ ಕ್ವ ಕಸ್ಮಿನ್ ಗಮಿಷ್ಯಸಿ। ಕಿಂ ವಸ್ತು ಪ್ರಾಪ್ಸ್ಯಸಿ ಇತಿ। ನಾಹಂ ತದ್ ವಸ್ತು ಭಗವನ್ ಪೂಜಾವನ್ ವೇದ ಜಾನೇ ಯತ್ರ ಗಮಿಷ್ಯಾಮಿ ಇತಿ। ಅಥ ಯದ್ಯೇವಂ ನ ಜಾನೀಷೇ ಯತ್ರ ಗತಃ ಕೃತಾರ್ಥಃ ಸ್ಯಾಃ, ಅಹಂ ವೈ ತೇ ತುಭ್ಯಂ ತದ್ ವಕ್ಷ್ಯಾಮಿ ಯತ್ರ ಗಮಿಷ್ಯಸೀತಿ। ಬ್ರವೀತು ಭಗವಾನ್ ಇತಿ ಯದಿ ಪ್ರಸನ್ನೋ ಮಾಂ ಪ್ರತಿ। ಶೃಣು—

(ಭಾಷ್ಯಾರ್ಥ)

'ಜನಕೋ ಹ ವೈದೇಹಃ' ಎಂಬ (ಬ್ರಾಹ್ಮಣದ ಸಂಬಂಧವಿದು): ಸವಿಶೇಷಣವಾಗಿರುವ[1] ಬ್ರಹ್ಮಗಳನ್ನೆಲ್ಲ ಯಾಜ್ಞವಲ್ಕ್ಯನು ಅರಿತಿರುವನೆಂದಾಯಿತಷ್ಟೆ, ಆದ್ದರಿಂದ ಜನಕನು ಆಚಾರ್ಯತ್ವವನ್ನು ಬಿಟ್ಟು[2] ಕೂರ್ಚವೆಂಬ ಆಸನ

---

1. ಹಿಂದಿನ ಬ್ರಾಹ್ಮಣದಲ್ಲಿ ಹೇಳಿರುವ ಆಗ್ನ್ಯಾದಿಬ್ರಹ್ಮಗಳು ಸವಿಶೇಷಣಬ್ರಹ್ಮಗಳು ; ಈ ಬ್ರಾಹ್ಮಣದಲ್ಲಿ ನಿರ್ವಿಶೇಷಣಬ್ರಹ್ಮವನ್ನು ತಿಳಿಸಲಾಗುವದು.

2. ಜನಕನು ಆಚಾರ್ಯನೆಂದು ತಿಳಿದುಕೊಂಡಿದ್ದನೆಂಬುದು ಹಿಂದಿನ ಗ್ರಂಥದಿಂದ ಸ್ಪಷ್ಟವಾಗುವದಿಲ್ಲ. ಹಿಂದೆ 'ಅಣ್ವಂತವಾದ ಪ್ರಶ್ನೆಗಳನ್ನು ಇಚ್ಛಿಸಿಬಂದೆಯೋ ?' ಎಂದು ಜನಕನು ಕೇಳಿದ್ದಕ್ಕೆ 'ನನ್ನಿಂದ ತಿಳಿದುಕೊಳ್ಳುವದಕ್ಕೆ ಬಂದಿದ್ದೀಯೋ' ಎಂಬರ್ಥವನ್ನು ಮಾಡುವದು ಸಲ್ಲದೆಂದು ವಾರ್ತಿಕದಲ್ಲಿ ೪-೧-೫೭ರಲ್ಲಿ ಹೇಳಿಯೂ ಇದೆ. ಆದರೂ ಉಚ್ಚಾಸನದಲ್ಲಿ ಕುಳಿತಿರುವದು ಆಚಾರ್ಯನಿಗೇ ತಕ್ಕದ್ದು ಎಂಬ ಬುದ್ಧಿಯಿಂದ ಆಸನದಿಂದ ಕೆಳಕ್ಕಿಳಿದನು ಎಂದು ಭಾಷ್ಯಕ್ಕೆ ತಾತ್ಪರ್ಯವನ್ನು ಕಲ್ಪಿಸಬೇಕು.

ವಿಶೇಷದಿಂದ ಎದ್ದು (ಉಪ) ಹತ್ತಿರಕ್ಕೆ (ಅವಸರ್ಪನ್) ಸಾರಿಬಂದು, ಪಾದಗಳಿಗೆ ಬಿದ್ದು ಎಂದರ್ಥ[1]; ಹೀಗೆಂದನು, ಹೀಗೆಂದು ನುಡಿದನು. ಎಲೈ ಯಾಜ್ಞವಲ್ಕ್ಯನೆ, (ತೇ= ತುಭ್ಯಮ್) ನಿನಗೆ ನಮಸ್ಕಾರವಿರಲಿ! (ಅನು ಮಾ ಶಾಧಿ) ನನಗೆ ಅನುಶಾಸನವನ್ನು ಮಾಡು[2] ಎಂದರ್ಥ. (ಇಲ್ಲಿರುವ) ಇತಿಶಬ್ದವು (ಜನಕನ) ವಾಕ್ಯದ ಪರಿಸಮಾಪ್ತಿಯನ್ನು (ತಿಳಿಸು)ವದಕ್ಕೆ.

ಆ ಯಾಜ್ಞವಲ್ಕ್ಯನಿಂತೆಂದನು ಎಲೈ ಸಮ್ರಾಜನೆ, ಹೇಗೆ ಲೋಕದಲ್ಲಿ ದೊಡ್ಡದೀರ್ಘವಾದ ದಾರಿಯನ್ನು ಪಯಣಮಾಡುವವನಾಗಿದ್ದು ನೆಲದಮೇಲೆ ಹೋಗುವವನಾದರೆ ಗಾಡಿಯನ್ನೋ, ನೀರಿನ ಮೇಲೆ ಹೋಗುವವನಾದರೆ ನಾವೆಯನ್ನೋ ಸ್ವೀಕರಿಸುವನೋ ಹಾಗೆಯೇ ಈ ಉಪನಿಷತ್ತುಗಳಿಂದ[3] ಕೂಡಿರುವ ಈ ಬ್ರಹ್ಮಗಳನ್ನು ಉಪಾಸನೆಮಾಡುತ್ತಾ ಸಮಾಹಿತಾತ್ಮನಾಗಿರುತ್ತೀಯೆ. ಈ ಉಪನಿಷತ್ತುಗಳಿಂದ ಅತ್ಯಂತವಾಗಿ ಸಂಯುಕ್ತವಾದ ಅಂತಃಕರಣವುಳ್ಳವನಾಗಿರುತ್ತೀಯೆ[4]. ಸುಮ್ಮನೆ ಉಪನಿಷತ್ತುಗಳಿಂದ ಸಮಾಹಿತನಾಗಿಲ್ಲ, ಹಾಗೆಯೇ ವೃಂದಾರಕನೂ ಪೂಜ್ಯನೂ ಆಢ್ಯನೂ ಐಶ್ವರ್ಯವಂತನೂ ಬಡವನಲ್ಲ[5] ಎಂದರ್ಥ. ಅಧೀತವೇದನಾಗಿ ವೇದಗಳನ್ನು ಯಾವನು ಅಧ್ಯಯನ ಮಾಡಿರುವನೋ ಅಂಥ ಅಧೀತವೇದನು ನೀನು , ಆಚಾರ್ಯರಿಂದ ಉಕ್ತವಾದ ಉಪನಿಷತ್ತುಗಳುಳ್ಳವನಾದ್ದರಿಂದ ನೀನು ಉಕ್ತೋಪನಿಷತ್ಕನು. ಹೀಗೆ ಸರ್ವಭೂತಿಗಳಿಂದೊಡಗೂಡಿದ್ದರೂ ಭಯದೊಳಗೆ ಇರುವವನೇ ; ಪರಮಾತ್ಮಜ್ಞಾನವಿಲ್ಲದೆ, ಎಲ್ಲಿಯವರೆಗೆ ಪರಬ್ರಹ್ಮವನ್ನು ತಿಳಿವಿಲ್ಲವೋ ಅಲ್ಲಿಯವರೆಗೆ ಇನ್ನೂ ಅಕೃತಾರ್ಥನೇ (ಆಗಿರುತ್ತೀಯೆ) ಎಂದರ್ಥ. ಇದರಿಂದ ಈ ದೇಹದಿಂದ ವಿಮುಕ್ತನಾಗುವಾಗ ಈ ನಾವೆಗಳಂತೆಯೂ ಗಾಡಿಗಳಂತೆಯೂ ಇರುವ (ಸಾಧನಗಳಿಂದ) ಒಡಗೂಡಿದವನಾಗಿ ಎಲ್ಲಿಗೆ ಯಾವ(ಲ್ಲಿಗೆ) ಹೋಗುವೆ ? ಯಾವ ವಸ್ತುವನ್ನು ಪಡೆಯುವೆ ?

---

1. ಇದುವರೆಗೆ ತಾನು ತಿಳಿದುಕೊಂಡಿದ್ದ ಆಗ್ನ್ಯಾದಿಬ್ರಹ್ಮಗಳಿಗಿಂತ ಬೇರೆಯು ಬ್ರಹ್ಮವು ಇದೆ ಎಂದು ಈಗ ಗೊತ್ತಾದದ್ದರಿಂದ ಅದನ್ನು ತಿಳಿಯುವದಕ್ಕೆ ಶಿಷ್ಯನಾಗಿ ನಮಸ್ಕರಿಸಿದನು.

2. ಪೂರ್ಣಾನುಶಾಸನವೆಂದು ನೀನು ಹೇಳಿದ ಉಪದೇಶವನ್ನು ಮಾಡು ಎಂದರ್ಥ. ಜ್ಞಾನಪ್ರಕರಣದಲ್ಲಿರುವ ಉಪಾಸನೆಗಳೆಲ್ಲವೂ ಐಕಾತ್ಮ್ಯಜ್ಞಾನದಲ್ಲಿಯೇ ಪರ್ಯವಸಾನವಾಗುವವು ಎಂಬುದನ್ನು ಇದು ತಿಳಿಸುತ್ತದೆ ಎಂದು ವಾರ್ತಿಕ.

3. ಪ್ರಜ್ಞಾದಿಗುಣನಾಮಗಳಿಂದ 4. ತದ್ಭಾವಭಾವಿತನಾಗಿರುತ್ತೀಯೆ.

5. ಇಹಪರಕ್ಕೆ ಬೇಕಾದ ಸರ್ವಸಂಪತ್ತೂ ಜ್ಞಾನಕ್ಕಾಗಿ ಎಂಬುದರ ಸೂಚನೆಯಿದು.

ಭಗವಂತನೆ ಪೂಜ್ಯನೆ, ನಾನು ಆ ವಸ್ತುವನ್ನು, ಅರಿಯೆನು ಎಲ್ಲಿಗೆ ಹೋಗುವೆನೋ ತಿಳಿಯದೆ ಇರುವೆನು[1] ಎನ್ನಲು, "ಹೀಗೆ ಆರಿಯೆಯಾದರೆ ಈಗ (ತೇ= ತುಭ್ಯಂ) ನಿನಗೆ ಎಲ್ಲಿಗೆ ಹೋಗುವೆಯೋ ಅದನ್ನು ಹೇಳುವೆನು" ಎಂದನು. ನನ್ನಲ್ಲಿ ಪ್ರಸನ್ನನಾಗಿದ್ದರೆ ಭಗವಂತನು ಹೇಳಬೇಕು ಎಂದು (ಜನಕನು ಕೇಳಿಕೊಂಡನು). ಕೇಳು[2] —

## ವೈಶ್ವಾನರಾತ್ಮಪ್ರಾಪ್ತಿ

(ಉಪನಿಷತ್ತು)

**ಇನ್ಧೋ ಹ ವೈ ನಾಮೈಷ ಯೋಽಯಂ ದಕ್ಷಿಣೇಽಕ್ಷನ್ ಪುರುಷ ಸ್ತಂ ವಾ ಏತಮಿನ್ಧಗ್ಂ ಸನ್ತಮಿನ್ದ್ರ ಇತ್ಯಾಚಕ್ಷತೇ ಪರೋ ಕ್ಷೇಣೈವ ಪರೋಕ್ಷಪ್ರಿಯಾ ಇವ ಹಿ ದೇವಾಃ ಪ್ರತ್ಯಕ್ಷದ್ವಿಷಃ ॥**

೨. ಈ ಬಲಗಣ್ಣಿನಲ್ಲಿ ಪುರುಷನಿದಾನಲ್ಲ, ಇವನು ಇಂಧ ನೆಂಬ ಹೆಸರಿನವನು. ಇಂಧನಾಗಿರುವ ಆ ಇವನನ್ನು ಇಂದ್ರನೆಂದು ಪರೋಕ್ಷವಾಗಿ ಕರೆಯುವರು. ದೇವತೆಗಳು ಪರೋಕ್ಷಪ್ರಿಯರೇ, ಪ್ರತ್ಯಕ್ಷದ್ವೇಷಿಗಳು.

(ಭಾಷ್ಯ)

೧೫೩. ಇನ್ಧೋ ಹ ವೈ ನಾಮ। ಇನ್ಧಃ ಇತ್ಯೇವಂ ನಾಮಾ। ಯಶ್ಚಕ್ಷುರ್ವೈ ಬ್ರಹ್ಮೇತಿ ಪುರಾ ಉಕ್ತಃ ಆದಿತ್ಯಾನ್ತರ್ಗತಃ ಪುರುಷಃ ಸ ಏಷಃ, ಯೋಽಯಂ ದಕ್ಷಿಣೇ ಅಕ್ಷನ್ ಅಕ್ಷಣಿ ವಿಶೇಷೇಣ ವ್ಯವಸ್ಥಿತಃ। ಸ ಚ ಸತ್ಯ ನಾಮಾ। ತಂ ವೈ ಏತಂ ಪುರುಷಂ ದೀಪ್ತಿಗುಣತ್ವಾತ್ ಪ್ರತ್ಯಕ್ಷಂ ನಾಮ ಅಸ್ಯ ಇನ್ಧಃ ಇತಿ। ತಮ್ ಇನ್ಧಂ ಸನ್ತಮ್ ಇನ್ದ್ರ ಇತ್ಯಾಚಕ್ಷತೇ ಪರೋ ಕ್ಷೇಣ। ಯಸ್ಮಾತ್ ಪರೋಕ್ಷಪ್ರಿಯಾ ಇವ ಹಿ ದೇವಾಃ। ಪ್ರತ್ಯಕ್ಷದ್ವಿಷಃ ಪ್ರತ್ಯಕ್ಷನಾಮಗ್ರಹಣಂ ದ್ವಿಷನ್ತಿ। ಏಷ ತ್ವಂ ವೈಶ್ವಾನರಮ್ ಆತ್ಮಾನಂ ಸಂಪನ್ನೋಽಸಿ ॥

---

1. ಉಪಾಸನೆಮಾಡಿದವನು ಉಪಾಸ್ಯದೇವತೆಯನ್ನು ಸೇರುವನೆಂಬುದು ಸಿದ್ಧವೇ ಆಗಿದೆ, ದೇವಾನಪ್ಯೇತಿ ಎಂದು ಫಲವನ್ನು ಹೇಳಿಯೂ ಇದೆ. ಆದ್ದರಿಂದ ಇಲ್ಲಿ ಉಪಾಸನೆ ಯ ಸಾಕ್ಷಾತ್ಫಲವನ್ನು ಕೇಳಿಲ್ಲ. ಪರಂಪರೆಯಿಂದ ಜ್ಞಾನವನ್ನು ಪಡೆದು ಕ್ರಮಮುಕ್ತಿ ಎಂಬ ಫಲವೂ ಆಗುತ್ತದೆ -ಎಂಬಿದು ಈ ಪ್ರಶ್ನೋತ್ತರಗಳಿಂದ ಗೊತ್ತಾಗುವ ವಿಷಯವು. ಇಲ್ಲಿ ಜನಕನಿಗೆ ಮಾರ್ಗವು ಗೊತ್ತಿಲ್ಲದ್ದರಿಂದ ಕೇಳಿರುತ್ತಾನೆ; ಮೂರನೆಯ ಕಂಡಿಕೆಯಲ್ಲಿ ನಾಡೀಮಾರ್ಗವನ್ನು ಹೇಳಿಯೂ ಇದೆ -ಎಂಬ ಭರ್ತೃಪ್ರಪಂಚರ ವ್ಯಾಖ್ಯಾನವನ್ನು ವಾರ್ತಿಕದಲ್ಲಿ ಖಂಡಿಸಿದೆ.

2. ಇದು ಮುಂದಿನ ಕಂಡಿಕೆಗೆ ಅವತರಣಿಕೆ.

(ಭಾಷ್ಯಾರ್ಥ)

ಇಂಧನೆಂಬ ಇನ್ಧನು ಎಂಬೀ ಹೆಸರುಳ್ಳವನು, "ಚಕ್ಷುಸ್ಸೇ ಬ್ರಹ್ಮವು" (೪-೧-೪) ಎಂದು ಹಿಂದೆ ಆದಿತ್ಯನೊಳಗಿರುವ ಪುರುಷನನ್ನು ಹೇಳಿತ್ತಷ್ಟೆ, ಅವನು, ಈ ಬಲಗಣ್ಣಿನಲ್ಲಿ (ಅಕ್ಷನ್= ಅಕ್ಷಣಿ) ವಿಶೇಷವಾಗಿ ಇದ್ದುಕೊಂಡಿರುವ ಇವನೇ[1]. ಅವನಿಗೆ ಸತ್ಯನೆಂದು ಹೆಸರು. ಆ ಈ ಪುರುಷನನ್ನು. ಆ ಈ ಪುರುಷನನ್ನು– ದೀಪ್ತಿ ಎಂಬ ಗುಣವಿರುವದರಿಂದ ಇವನಿಗೆ ಇಂಧನೆಂಬ ಪ್ರತ್ಯಕ್ಷವಾದ ಹೆಸರು[2]. ಆ ಇಂಧನಾಗಿರುವ ಇವನನ್ನು– ಇಂದ್ರನು ಎಂದು ಪರೋಕ್ಷವಾಗಿ ಕರೆಯುತ್ತಾರೆ. ಏಕೆಂದರೆ ದೇವತೆಗಳು ಪರೋಕ್ಷಪ್ರಿಯರೇ ಆಗಿರುತ್ತಾರೆ, ಪ್ರತ್ಯಕ್ಷದ್ವೇಷಿಗಳು, ಪ್ರತ್ಯಕ್ಷವಾದ ನಾಮವನ್ನು ಹೇಳಿದರೆ (ಅದನ್ನು) ದ್ವೇಷಿಸುತ್ತಾರೆ[3]. ಇಗೋ, ನೀನು ವೈಶ್ವಾನರಾತ್ಮನನ್ನು ಹೊಂದಿದವನಾಗಿರುತ್ತೀಯೆ[4].

## ತೈಜಸಾತ್ಮನ ವರ್ಣನೆ

(ಉಪನಿಷತ್ತು)

**ಅಥೈತದ್ವಾಮೇಽಕ್ಷಣಿ ಪುರುಷರೂಪಮೇಷಾಸ್ಯ ಪತ್ನೀ ವಿರಾಟ್ ತಯೋರೇಷ ಸಗ್ಂಸ್ತಾವೋ ಯ ಏಷೋಽನ್ತರ್ಹೃದಯ ಆಕಾಶೋಽಥೈನಯೋರೇತದನ್ನಂ ಯ ಏಷೋಽನ್ತರ್ಹೃದಯೇ ಲೋಹಿತಪಿಣ್ಡೋಽಥೈನಯೋರೇತತ್ ಪ್ರಾವರಣಂ ಯದೇತದನ್ತರ್ಹೃದಯೇ ಜಾಲಕಮಿವಾಥೈನಯೋರೇಷಾ ಸೃತಿಃ ಸಂಚರಣೀ ಯೈಷಾ ಹೃದಯಾದೂರ್ಧ್ವಾ ನಾಡ್ಯುಚ್ಚರತಿ ಯಥಾ ಕೇಶಃ ಸಹಸ್ರಧಾ ಭಿನ್ನ ಏವಮಸ್ಯೈತಾ ಹಿತಾ ನಾಮ ನಾಡ್ಯೋಽನ್ತರ್ಹೃದಯೇ ಪ್ರತಿಷ್ಠಿತಾ ಭವನ್ತ್ಯೇತಾಭಿರ್ವಾ**

---

1. ಜಾಗ್ರತ್ಸ್ಥಾನನಾದ ವೈಶ್ವಾನರನೇ.

2. ಪ್ರಕಾಶಸ್ವರೂಪನೆಂದು ತಿಳಿಸುವ ನೇರಾದ ಹೆಸರು.

3. ಸಾಮಾನ್ಯಜನರಿಗೆ ನಾಮತತ್ತ್ವವು ತಿಳಿಯದಿರಲೆಂದು ಪರೋಕ್ಷನಾಮದಿಂದಲೇ ಪ್ರೀತರಾಗುತ್ತಾರೆ.

4. ಹೀಗೆ ಉಪಾಸನೆಮಾಡಿದರೆ ವೈಶ್ವಾನರಪ್ರಾಪ್ತಿಯ ಫಲ ಎಂದರ್ಥ. ಇಲ್ಲಿ ಜಾಗ್ರದಾದ್ಯವಸ್ಥೆಗಳ ವಿವೇಕದಿಂದಾಗುವ ಸಾಕ್ಷಾಜ್ಞಾನವನ್ನು ಹೇಳುತ್ತಿಲ್ಲ; ಆದ್ದರಿಂದಲೇ "ಎಲ್ಲಿಗೆ ಹೋಗುವೆ ?" ಎಂಬ ಪ್ರಶ್ನೆಯೂ ಹೊಂದುತ್ತದೆ. ಏಕೆಂದರೆ ಅಧ್ಯಾತ್ಮ, ಅಧಿಭೂತ, ಅಧಿದೈವ– ಎಂಬ ಪರಿಚ್ಛೇದವಿದ್ದಾಗ ಬ್ರಹ್ಮಲೋಕಕ್ಕೆ ಹೋಗುತ್ತಾನೆ; ಆ ಪರಿಚ್ಛೇದವೂ ಹೋಗಿ ಮುಂದೆ ಪಡೆಯುವ ಕ್ರಮಮುಕ್ತಿಯನ್ನು ಇಲ್ಲಿ ಹೇಳುವದಕ್ಕೆ ಪ್ರಾರಂಭಿಸಿದೆ.

**ಏತದಾಸ್ರವದಾಸ್ರವತಿ ತಸ್ಮಾದೇಷಾ ಪ್ರವಿವಿಕ್ತಾಹಾರತರ ಇವೈವ ಭವತ್ಯಸ್ಮಾಚ್ಛಾರೀರಾದಾತ್ಮನಃ ॥ ೩ ॥**

೩. ಇನ್ನು ಈ ವಾಮಾಕ್ಷಿಯಲ್ಲಿ ಪುರುಷರೂಪವಿದೆಯಲ್ಲ, ಇವೇ ಇವನ ಪತ್ನಿಯಾದ ವಿರಾಟ್. ಅವರಿಬ್ಬರಿಗೂ ಈ ಹೃದಯದೊಳಗಿನ ಆಕಾಶವಿದೆಯಲ್ಲ, ಇದೇ ಸಂಸ್ತಾವವು ; ಇನ್ನು ಈ ಹೃದಯದೊಳಗೆ ಲೋಹಿತಪಿಂಡವಿದೆಯಲ್ಲ, ಇದು ಇವರಿಗೆ ಅನ್ನವು ; ಇನ್ನು ಈ ಹೃದಯದೊಳಗೆ ಜಾಲಕದಂತೆ ಇದೆಯಲ್ಲ, ಇದು ಹೊದಿಕೆಯು ; ಇನ್ನು ಈ ಹೃದಯದಿಂದ ಮೇಲಕ್ಕೆ ನಾಡಿಯು ಹೋಗಿದೆಯಲ್ಲ, ಇದು ಇವರಿಗೆ ಸಂಚರಣಿಯಾದ ಸೃತಿಯು. ತಲೆಗೂದಲು ಸಾವಿರಪಾಲಾಗಿ ಸೀಳಿದರೆ ಹೇಗಿರುವದೋ ಹಾಗೆ ಇದಕ್ಕೆ ಈ ಹಿತ ಎಂಬ ನಾಡಿಗಳು ಹೃದಯದೊಳಗೆ ಪ್ರತಿಷ್ಠಿತವಾಗಿರುತ್ತವೆ. ಇವುಗಳಿಂದಲೇ ಇದು ಹೊರಟುಸುರಿಯುತ್ತಿರುವದು. ಆದ್ದರಿಂದ ಇವನು ಈ ಶಾರೀರಾತ್ಮನಿಗಿಂತ ಪ್ರವಿವಿಕ್ತಾಹಾರತರನೇ ಆಗಿರುತ್ತಾನೆ.

## ತೈಜಸನ ವ್ಯಾಪ್ತಿ

(ಭಾಷ್ಯ)

೧೫೪. ಅಥ ಏತದ್ ವಾಮೇಽಕ್ಷಣಿ ಪುರುಷರೂಪಮ್ ಏಷಾ ಅಸ್ಯ ಪತ್ನೀ ಯಂ ತ್ವಂ ವೈಶ್ವಾನರಮಾತ್ಮಾನಂ ಸಂಪನ್ನೋಽಸಿ । ತಸ್ಯಾಸ್ಯ ಇನ್ದ್ರಸ್ಯ ಭೋಕ್ತುರ್ಭೋಗ್ಯಾ ಏಷಾ ಪತ್ನೀ ವಿರಾಟ್ ಅನ್ನಮ್ । ಭೋಗ್ಯತ್ವಾದೇವ । ತದೇತತ್ ಅನ್ನಂ ಚಾತ್ತಾ ಚ ಏಕಂ ಮಿಥುನಂ ಸ್ವಪ್ನೇ । ಕಥಮ್ ? ತಯೋರೇಷ ಇನ್ದ್ರಾಣ್ಯಾ ಇನ್ದ್ರಸ್ಯ ಚೈಷ ಸಂಸ್ತಾವಃ ಸಂಭೂಯ ಯತ್ರ ಸಂಸ್ತವಂ ಕುರ್ವಾತೇ ಅನ್ಯೋನ್ಯಮ್, ಸ ಏಷ ಸಂಸ್ತಾವಃ । ಕೋಽಸೌ ? ಯ ಏಷೋಽನ್ತರ್ಹೃದಯೇ ಆಕಾಶಃ, ಅನ್ತರ್ಹೃದಯೇ ಹೃದಯಸ್ಯ ಮಾಂಸಪಿಣ್ಡಸ್ಯ ಮಧ್ಯೇ । ಅಥ ಏನಯೋಃ ಏತತ್ ವಕ್ಷ್ಯಮಾಣಮ್ ಅನ್ನಂ ಭೋಜ್ಯಮ್, ಸ್ಥಿತಿಹೇತುಃ । ಕಿಂ ತತ್ ? ಯ ಏಷೋಽನ್ತರ್ಹೃದಯೇ ಲೋಹಿತಪಿಣ್ಡಃ ಲೋಹಿತ ಏವ ಪಿಣ್ಡಾಕಾರಾಪನ್ನೋ ಲೋಹಿತಪಿಣ್ಡಃ । "ಅನ್ನಂ ಜಗ್ಧಂ ದ್ವೇಧಾ ಪರಿಣಮತೇ । ಯತ್ ಸ್ಥೂಲಮ್ ತದಧೋ ಗಚ್ಛತಿ । ಯದನ್ಯತ್ ತತ್ಪುನರಗ್ನಿನಾ ಪಚ್ಯಮಾನಂ ದ್ವೇಧಾ ಪರಿಣಮತೇ । ಯೋ ಮಧ್ಯಮೋ ರಸಃ ಸ ಲೋಹಿತಾದಿ ಕ್ರಮೇಣ ಪಾಞ್ಚಭೌತಿಕಂ ಪಿಣ್ಡಂ ಶರೀರಮ್ ಉಪಚಿನೋತಿ । ಯೋಽಣಿಷ್ಠೋ ರಸಃ ಸ ಏಷ ಲೋಹಿತಪಿಣ್ಡಃ ಇನ್ದ್ರಸ್ಯ ಲಿಙ್ಗಾತ್ಮನೋ ಹೃದಯೇ

ಮಿಥುನೀಭೂತಸ್ಯ । ಯಂ ತೈಜಸಮ್ ಆಚಕ್ಷತೇ[1]" । ಸ ತಯೋಃ ಇನ್ದ್ರೇನ್ದ್ರಾಣ್ಯೋರ್ಹೃದಯೇ ಮಿಥುನೀಭೂತಯೋಃ ಸೂಕ್ಷ್ಮಾಸು ನಾಡೀಷು ಅನುಪ್ರವಿಷ್ಟಃ ಸ್ಥಿತಿಹೇತುರ್ಭವತಿ । ತದೇತತ್ ಉಚ್ಯತೇ 'ಅಥೈನಯೋರೇತದನ್ನಮ್' ಇತ್ಯಾದಿ । ಕಿಂಚಾನ್ಯತ್ । ಅಥೈನಯೋರೇತತ್ ಪ್ರಾವರಣಮ್ । ಭುಕ್ತವತೋಃ ಸ್ವಪತೋಶ್ಚ ಪ್ರಾವರಣಂ ಭವತಿ ಲೋಕೇ ತತ್ಸಾಮಾನ್ಯಂ ಹಿ ಕಲ್ಪಯತಿ ಶ್ರುತಿಃ । ಕಿಂ ತದಿಹ ಪ್ರಾವರಣಮ್ ? ಯದೇತತ್ ಅನ್ತರ್ಹೃದಯೇ ಜಾಲಕಮಿವ ಅನೇಕನಾಡೀಚ್ಛಿದ್ರಬಹುಲತ್ವಾತ್ ಜಾಲಕಮಿವ । ಅಥೈನಯೋಃ ಏಷಾ ಸೃತಿರ್ಮಾರ್ಗಃ । ಸಂಚರತೋಽನಯಾ ಇತಿ ಸಂಚರಣೀ। ಸ್ವಪ್ನಾತ್ ಜಾಗರಿತದೇಶಾಗಮನಮಾರ್ಗಃ। ಕಾ ಸಾ ಸೃತಿಃ? ಯೈಷಾ ಹೃದಯಾತ್ ಹೃದಯದೇಶಾತ್ ಊರ್ಧ್ವಾಭಿಮುಖೀ ಸತೀ ಉಚ್ಚರತಿ ನಾಡೀ । ತಸ್ಯಾಃ ಪರಿಮಾಣಮ್ ಇದಮುಚ್ಯತೇ। ಯಥಾ ಲೋಕೇ ಕೇಶಃ ಸಹಸ್ರಧಾ ಭಿನ್ನಃ ಅತ್ಯನ್ತಸೂಕ್ಷ್ಮೋ ಭವತಿ, ಏವಂ ಸೂಕ್ಷ್ಮಾ ಅಸ್ಯ ದೇಹಸ್ಯ ಸಂಬನ್ಧಿನ್ಯೋ ಹಿತಾ ನಾಮ ಹಿತಾ ಇತ್ಯೇವಂ ಖ್ಯಾತಾಃ ನಾಡ್ಯಃ । ತಾಶ್ಚ ಅನ್ತರ್ಹೃದಯೇ ಮಾಂಸಪಿಣ್ಡೇ ಪ್ರತಿಷ್ಠಿತಾ ಭವನ್ತಿ ಹೃದಯಾತ್ ವಿಪ್ರರೂಢಾಸ್ತಾಃ ಸರ್ವತ್ರ ಕದಮ್ಬಕೇಸರವತ್ । ಏತಾಭಿರ್ನಾಡೀಭಿಃ ಅತ್ಯನ್ತಸೂಕ್ಷ್ಮಾಭಿಃ ಏತದನ್ನಮ್ ಆಸ್ರವತ್ ಗಚ್ಛತ್ ಆಸ್ರವತಿ ಗಚ್ಛತಿ । ತದೇತತ್ ದೇವತಾಶರೀರಮ್ ಅನೇನ ಅನ್ನೇನ ದಾಮಭೂತೇನ ಉಪಚೀಯಮಾನಂ ತಿಷ್ಠತಿ । ತಸ್ಮಾತ್ ಯಸ್ಮಾತ್ ಸ್ಥೂಲೇನಾನ್ನೇನ ಉಪಚಿತಃ ಪಿಣ್ಡಃ, ಇದಂ ತು ದೇವತಾಶರೀರಂ ಲಿಙ್ಗಂ ಸೂಕ್ಷ್ಮೇಣ ಅನ್ನೇನ ಉಪಚಿತಂ ತಿಷ್ಠತಿ। ಪಿಣ್ಡೋಪಚಯಕರಮಪಿ ಅನ್ನಂ ಪ್ರವಿವಿಕ್ತಮೇವ ಮೂತ್ರಪುರೀಷಾದಿಸ್ಥೂಲಮಪೇಕ್ಷ್ಯ । ಲಿಙ್ಗಸ್ಥಿತಿಕರಂ ತು ಅನ್ನಂ ತತೋಽಪಿ ಸೂಕ್ಷ್ಮತರಮ್। ಅತಃ ಪ್ರವಿವಿಕ್ತಾಹಾರಃ ಪಿಣ್ಡಃ । ತಸ್ಮಾತ್ ಪ್ರವಿವಿಕ್ತಾಹಾರಾದಪಿ ಪ್ರವಿವಿಕ್ತಾಹಾರತರಃ ಏಷ ಲಿಙ್ಗಾತ್ಮಾ ಇವೈವ ಭವತಿ ಅಸ್ಮಾತ್ ಶಾರೀರಾತ್[2] । ಶರೀರಮೇವ ಶಾರೀರಮ್ । ಅಸ್ಮಾತ್ ಶಾರೀರಾತ್। ಆತ್ಮನೋ ವೈಶ್ವಾನರಾತ್ ತೈಜಸಃ ಸೂಕ್ಷ್ಮಾನ್ನೋಪಚಿತೋ ಭವತಿ ॥

---

1. ಶತ. ಬ್ರಾ. ೧೦-೧-೧-೧೧ರಲ್ಲಿ ಈ ಅಭಿಪ್ರಾಯದ ಛಾಯೆ ಇದೆ. ಅಲ್ಲಿ 'ತದಿದಮನ್ನಂ ಜಗ್ಧಮ್' ಎಂದು ಪ್ರಾರಂಭವಾಗಿದ್ದರೂ ತೈಜಸನ ಪರಾಮರ್ಶವಿಲ್ಲ. ಹಿಂದೆ ೨-೨-೧ (ಭಾ. ಭಾ. ೩೩೦)ರಲ್ಲಿ 'ಅನ್ನಂ ಹಿ ಭುಕ್ತಮ್' ಎಂದಿರುವ ವಾಕ್ಯವನ್ನೂ ಅದರ ಅನುವಾದದ ಟಿಪ್ಪಣಿಯನ್ನೂ ನೋಡಿ. ಇಲ್ಲಿರುವ ವಿವರವು ಶತ. ಬ್ರಾ.ದ ಕಾಣ್ವಪಾಠದಲ್ಲಿದೆಯೋ ಇಲ್ಲವೋ ನೋಡಬೇಕಾಗಿದೆ. ಇದು ಶ್ರುತಿಯ ಅಭಿಪ್ರಾಯದ ಅನುವಾದ ಮಾತ್ರವೆಂತ ಕಾಣುತ್ತದೆ.

2. ಶರೀರಾತ್ ಎಂಬ ಅಚ್ಚಿನ ಅ॥ ಪಾಠವನ್ನು ಹೀಗೆ ತಿದ್ದಿಕೊಂಡಿದೆ.

(ಭಾಷ್ಯಾರ್ಥ)

ಇನ್ನು ಈ ಎಡಗಣ್ಣಿನಲ್ಲಿರುವ ಪುರುಷರೂಪವಿದೆಯಲ್ಲ, ಇದು ಅವನ ಪತ್ನಿಯು. ಯಾವ ವೈಶ್ವಾನರಾತ್ಮನನ್ನು ನೀನು ಪಡೆದುಕೊಂಡಿರುವೆಯೋ ಆ ಈ ಇಂದ್ರನ ಭೋಕ್ತೃವಿಗೆ ಭೋಗ್ಯವಾದ ಇದು ಪತ್ನಿಯಾದ ವಿರಾಟ್[1], (ಅವನಿಗೆ) ಭೋಗ್ಯವಾಗಿರುವದರಿಂದಲೇ ಅನ್ನವು. ಆ ಈ ಅನ್ನವೂ ಅತ್ತೃವೂ ಎಂಬ ಮಿಥುನವು ಸ್ವಪ್ನದಲ್ಲಿ ಒಂದಾಗಿರುತ್ತದೆ. ಹೇಗಂದರೆ, ಅವರಿಗೆ, (ಆ) ಇಂದ್ರಾಣಿಗೂ ಇಂದ್ರನಿಗೂ ಇದು ಸಂಸ್ತಾವವು, ಎಲ್ಲಿ ಪರಸ್ಪರವಾಗಿ ಸಂಸ್ತವವನ್ನು ಮಾಡುತ್ತಾರೋ[2] ಆ ಇದು ಸಂಸ್ತಾವವು. ಅದು ಯಾವದು? ಈ ಹೃದಯದೊಳಗಿನ ಆಕಾಶವಿದೆಯಲ್ಲ, ಇದು. ಹೃದಯದೊಳಗೆ ಎಂದರೆ ಮಾಂಸಪಿಂಡವಾದ ಹೃದಯದಲ್ಲಿ[3].

ಇನ್ನು ಇವರಿಬ್ಬರಿಗೂ ಈ ಮುಂದೆ ಹೇಳುವದು ಅನ್ನವು, ಭೋಜ್ಯವು, ಸ್ಥಿತಿಗೆ ಕಾರಣವಾಗಿರತಕ್ಕದ್ದು. ಅದು ಯಾವದು? ಎಂದರೆ ಹೃದಯದೊಳಗೆ ಈ ಲೋಹಿತಪಿಂಡವಿದೆಯಲ್ಲ, (ಅದು). ಲೋಹಿತಪಿಂಡವೆಂದರೆ ರಕ್ತವೇ ಪಿಂಡಾಕಾರವನ್ನು ಪಡೆದಿರುವದು. ಉಂಡ ಅನ್ನವು ಎರಡು ಪ್ರಕಾರವಾಗಿ ಪರಿಣಾಮವಾಗುತ್ತದೆ. (ಅವುಗಳಲ್ಲಿ) ಸ್ಥೂಲವಾದದ್ದು ಕೆಳಕ್ಕೆ ಹೋಗುತ್ತದೆ; ಇನ್ನೊಂದು ಇದೆಯಲ್ಲ, ಅದು ಮತ್ತೆ ಅಗ್ನಿಯಿಂದ ಪಕ್ವವಾಗಿ ಎರಡು ಪ್ರಕಾರವಾಗಿ ಪರಿಣಮಿಸುತ್ತದೆ. (ಅವುಗಳಲ್ಲಿ) ನಡುವಿನ ರಸವಿದೆಯಲ್ಲ, ಅದು ರಕ್ತವೇ ಮುಂತಾದ ಕ್ರಮದಿಂದ ಪಾಂಚಭೌತಿಕವಾದ ಶರೀರವನ್ನು ಬೆಳೆಯಿಸುತ್ತದೆ. ತೀರಸೂಕ್ಷ್ಮವಾದ ರಸವಿದೆಯಲ್ಲ, ಆ ಈ ಲೋಹಿತಪಿಂಡವು ಹೃದಯದಲ್ಲಿ ಮಿಥುನೀಭೂತನಾಗಿರುವ ಲಿಂಗಾತ್ಮನದು, ಅವನನ್ನೇ ತೈಜಸನೆನ್ನುವರು[4]. ಆ (ರಸವು) ಈ ಹೃದಯದಲ್ಲಿ ಮಿಥುನೀಭೂತರಾಗಿರುವ ಇಂದ್ರೇಂದ್ರಾಣಿಯರಿಗೆ ಸೂಕ್ಷ್ಮವಾದ ನಾಡಿಗಳಲ್ಲಿ ಪ್ರವಿಷ್ಟವಾಗಿದ್ದುಕೊಂಡು ಸ್ಥಿತಿಗೆ ಕಾರಣವಾಗಿರುತ್ತದೆ. ಆ ಇದನ್ನೇ "ಇನ್ನು ಇದು ಇವರಿಗೆ ಅನ್ನವು" ಎಂದು ಹೇಳಿದೆ.

---

1. ಒಬ್ಬನೇ ದೇವನನ್ನು ಇಂದ್ರ, ಇಂದ್ರಾಣಿ -ಎಂದು ಅಕ್ಷಿಸ್ಥಾನಭೇದದಿಂದ ಅಗ್ನೀಷೋಮರೂಪದಿಂದ ಧ್ಯಾನಮಾಡಬೇಕೆಂದು ಇಲ್ಲಿ ಹೇಳಿವೆ ಎಂದು ವಾರ್ತಿಕ.

2. ಬೆರೆತಿರುತ್ತಾರೋ.

3. ದಕ್ಷಿಣಾಕ್ಷಿಪುರುಷನನ್ನು ಇಂದ್ರನೆಂದೂ ವಾಮಾಕ್ಷಿಪುರುಷನನ್ನು ಇಂದ್ರಾಣಿಯೆಂದೂ ಉಪಾಸನೆಮಾಡಬೇಕೆಂದು ಶತ. ಬ್ರಾ. ೧೦-೫-೨-೯ರಲ್ಲಿ ವಿಧಿಸಿವೆ; ಹೃದಯಾಕಾಶದಲ್ಲಿ ಅವರಿಬ್ಬರೂ ಬೆರೆತಾಗ ಅದು ಮುಗಿಯಲು ಜೀವಾತ್ಮನು ನಿದ್ರಿಸುತ್ತಾನೆಂದು ಶತ. ಬ್ರಾ. ೧೦-೫-೨-೧೧ರಲ್ಲಿ ಹೇಳಿದೆ.

4. ಇಂದ್ರಾಣಿಯಲ್ಲಿ ಬೆರೆತ ಇಂದ್ರನೇ ತೈಜಸನು.

ಮತ್ತೊಂದು (ವಿಷಯವು). ಇನ್ನು ಇವರಿಬ್ಬರಿಗೂ ಪ್ರಾವರಣವು -ಉಂಡು ನಿದ್ರಿಸುತ್ತಿರುವವರಿಗೆ ಲೋಕದಲ್ಲಿ ಹೊದಿಕೆಯಿರುತ್ತದೆಯಷ್ಟೆ ; ಅದಕ್ಕೆ ಹೋಲಿಕೆಯನ್ನೇ (ಇಲ್ಲಿ) ಶ್ರುತಿ ಕಲ್ಪಿಸಿರುತ್ತದೆ. ಇಲ್ಲಿ ಆ ಪ್ರಾವರಣವು ಯಾವದು ?ಎಂದರೆ- ಈ ಹೃದಯದೊಳಗೆ ಜಾಲಕದಂತೆ ಇದೆಯಲ್ಲ, ಅದು. ಅನೇಕ ನಾಡಿಗಳ ರಂಧ್ರಗಳು ಪ್ರಚುರವಾಗಿರುವದರಿಂದ (ಅದು) ಬಲೆಯಂತಿರುತ್ತದೆ.

ಇನ್ನು ಇವರಿಗೆ ಇದು ಸಂಚರಣಿಯಾದ- ಯಾವದರಿಂದ ಸಂಚರಿಸುತ್ತಾರೋ ಅದು ಸಂಚರಣಿಯು. (ಅ) - ಸೃತಿಯು, ಮಾರ್ಗವು, ಕನಸಿನಿಂದ ಎಚ್ಚರದ ದೇಶಕ್ಕೆ ಬರುವ ಮಾರ್ಗವು. ಆ ಸೃತಿ ಯಾವದು ? ಹೃದಯದಿಂದ ಹೃದಯಪ್ರದೇಶದಿಂದ ಮೇಲಕ್ಕಭಿಮುಖವಾಗಿ ಹೋಗಿದೆಯಲ್ಲ, ಆ ಈ ನಾಡಿಯು. ಅದರ ಪರಿಮಾಣವನ್ನು ಹೇಳುತ್ತಾರೆ. ಹೇಗೆ ಲೋಕದಲ್ಲಿ ತಲೆಗೂದಲು ಸಾವಿರಪಾಲಾಗಿ ಒಡೆದರೆ ಅತ್ಯಂತಸೂಕ್ಷ್ಮವಾಗುತ್ತದೆಯೋ[1] ಹಾಗೆ ಈ ದೇಹಕ್ಕೆ ಸೇರಿರುವ ಹಿತಾ ಎಂಬ ಹಿತಾಎಂಬ ಹೆಸರಿನ ನಾಡಿಗಳು ಸೂಕ್ಷ್ಮವಾಗಿರುತ್ತವೆ. ಅವು ಹೃದಯದೊಳಗೆ ಮಾಂಸಪಿಂಡದಲ್ಲಿ ಪ್ರತಿಷ್ಠಿತವಾಗಿರುತ್ತವೆ, ಹೃದಯದಿಂದ ಅವು ಎಲ್ಲಾ ಕಡೆಗೂ ಕದಂಬಕುಸುಮದ ಕೇಸರದಂತೆ ಹರಡಿಕೊಂಡಿರುತ್ತವೆ. ಈ ಅತ್ಯಂತಸೂಕ್ಷ್ಮವಾದ ನಾಡಿಗಳಿಂದ ಈ ಅನ್ನವು ಹೊರಸುರಿಯುವಾಗ ಹೊರಕ್ಕೆ ಬರುವಾಗ ಹೊರಸುರಿಯುತ್ತದೆ, ಹೊರಕ್ಕೆ ಬರುತ್ತದೆ ಆ ಈ ದೇವತಾಶರೀರವು ದಾಮವಾಗಿರುವ[2] ಈ ಅನ್ನದಿಂದ ಬೆಳೆಯುತ್ತಾ ಇದ್ದುಕೊಂಡಿರುತ್ತದೆ. ಆದ್ದರಿಂದ ಸ್ಥೂಲಶರೀರವು ಸ್ಥೂಲಾನ್ನದಿಂದ ಬೆಳೆಯುತ್ತಿದೆಯಷ್ಟೆ, ಈ ದೇವತಾಶರೀರವಾದ ಲಿಂಗವಾದರೋ ಸೂಕ್ಷ್ಮವಾದ ಅನ್ನದಿಂದ ಬೆಳೆಯುತ್ತಾ ಇದ್ದುಕೊಂಡಿರುತ್ತದೆ[3]. ಸ್ಥೂಲಶರೀರವನ್ನು ಬೆಳೆಯಿಸುವ ಅನ್ನವೂ ಮೂತ್ರಪುರೀಷಾದಿಗಳ ಅಪೇಕ್ಷೆಯಿಂದ ಪ್ರವಿವಿಕ್ತವಾಗಿಯೇ ಇರುತ್ತದೆ; ಆದರೆ ಲಿಂಗದ ಸ್ಥಿತಿಗೆ ಕಾರಣವಾಗಿರುವ ಅನ್ನವೋ ಅವಕ್ಕಿಂತಲೂ ಸೂಕ್ಷ್ಮತರವಾಗಿರುತ್ತದೆ. ಆದ್ದರಿಂದ ಪಿಂಡಾತ್ಮನು ಪ್ರವಿವಿಕ್ತಾಹಾರನು, ಆ ಪ್ರವಿವಿಕ್ತಾಹಾರನಾಗಿರುವ (ಶಾರೀರ)ನಿಗಿಂತಲೂ ಲಿಂಗಾತ್ಮನು ಇನ್ನೂ ಪ್ರವಿ

---

1. ಸೂಕ್ಷ್ಮತ್ವಕ್ಕೆ ಇದು ದೃಷ್ಟಾಂತವೇ ಹೊರತು ನಿಜವಾಗಿ ಕೂದಲನ್ನು ಸಾವಿರ ಪಾಲು ಮಾಡಿದಷ್ಟು ಎಂದೇನೂ ಅಭಿಪ್ರಾಯವಿಲ್ಲ.

2. ೨-೨-೧ರಲ್ಲಿ ವರ್ಣಿಸಿದ ಪ್ರಾಣಶಿಶುವಿನ ಹಗ್ಗವೇ ಈ ಅನ್ನವು.

3. ನಾಡಿಗಳು ಅನೇಕವಿರುವದರಿಂದ ಬೇರೆಬೇರೆ ಕರಣಗಳಿಗೆ ಬೇರೆಬೇರೆ ನಾಡಿಗಳಿರುವವು; ಆ ನಾಡಿಗಳ ಮೂಲಕವಾಗಿ ಶಬ್ದಾದ್ಯನ್ನಗಳನ್ನು ಆಯಾ ಕರಣಗಳು ಸ್ವೀಕರಿಸುತ್ತವೆ. ವಾರ್ತಿಕ.

ವಿಕ್ತಾಹಾರತರನಾಗಿರುತ್ತಾನೆ (ಪ್ರವಿವಿಕ್ತಾಹಾರತರ)ನಾದಂತೆಯೋ[1] ಆಗಿರುತ್ತಾನೆ. ಈ ಶಾರೀರನಿಗಿಂತ—ಶರೀರವೇ ಶಾರೀರವು, ಆ ಶಾರೀರಾತ್ಮನಿಗಿಂತ, ವೈಶ್ವಾನರನಿಗಿಂತ[2] ತೈಜಸನು ಸೂಕ್ಷ್ಮಾನ್ನದಿಂದ ಬೆಳೆಯುತ್ತಿರುತ್ತಾನೆ[3].

## ಪ್ರಾಜ್ಞತುರೀಯರ ಪ್ರಾಪ್ತಿ

(ಉಪನಿಷತ್ತು)

**ತಸ್ಯ ಪ್ರಾಚೀ ದಿಕ್ಪ್ರಾಞ್ಚಃ ಪ್ರಾಣಾಃ ದಕ್ಷಿಣಾ ದಿಗ್ದಕ್ಷಿಣೇ ಪ್ರಾಣಾಃ ಪ್ರತೀಚೀ ದಿಕ್ಪ್ರತ್ಯಞ್ಚಃ ಪ್ರಾಣಾಃ ಉದೀಚೀದಿಗುದಞ್ಚಃ ಪ್ರಾಣಾಃ ಊರ್ಧ್ವಾ ದಿಗೂರ್ಧ್ವಾಃ ಪ್ರಾಣಾಃ ಅವಾಚೀ ದಿಗವಾಞ್ಚಃ ಪ್ರಾಣಾಃ ಸರ್ವಾ ದಿಶಃ ಸರ್ವೇ ಪ್ರಾಣಾಃ ಸ ಏಷ ನೇತಿ ನೇತ್ಯಾತ್ಮಾಗೃಹ್ಯೋ ನ ಹಿ ಗೃಹ್ಯತೇಽಶೀರ್ಯೋ ನ ಹಿ ಶೀರ್ಯತೇಽಸಙ್ಗೋ ನ ಹಿ ಸಜ್ಯತೇಽಸಿತೋ ನ ವ್ಯಥತೇ ನ ರಿಷ್ಯತ್ಯಭಯಂ ವೈ ಜನಕ ಪ್ರಾಪ್ತೋಽಸೀತಿ ಹೋವಾಚ ಯಾಜ್ಞವಲ್ಕ್ಯಃ। ಸ ಹೋವಾಚ ಜನಕೋ ವೈದೇಹೋಽಭಯಂ ತ್ವಾ ಗಚ್ಛತಾದ್ಯಾಜ್ಞವಲ್ಕ್ಯ ಯೋ ನೋ ಭಗವನ್ನಭಯಂ ವೇದಯಸೇ ನಮಸ್ತೇಽಸ್ತ್ವಿಮೇ ವಿದೇಹಾ ಅಯಮಹಮಸ್ಮಿ ॥ ೪ ॥**

---

1. ಮೂಲದಲ್ಲಿರುವ ಇವೈವ ಎಂಬ ಮಾತುಗಳ ಅರ್ಥವನ್ನು ಭಾಷ್ಯದಲ್ಲಿ ವಿವರಿಸಿಲ್ಲ. ಇವ ಎಂಬುದಕ್ಕೆ ಅರ್ಥವಿಲ್ಲವೆಂದು ಕೆಲವರು, ಲಿಂಗಾತ್ಮನು ಪ್ರವಿವಿಕ್ತಾಹಾರತರನೇ ಎಂಬ ಅವಧಾರಣೆಗೆ ಹೊರಗಿನ ಪಿಂಡಕ್ಕೆ ಆಹಾರವು ಹೇಗೆ ಬೆಳೆಯುವದಕ್ಕೆ ಕಾರಣವಾಗಿದೆಯೋ ಹಾಗೆಯೇ ಎಂಬುವದನ್ನು ಇವಶಬ್ದವು ಹೇಳುತ್ತದೆ ಎಂದು ಭರ್ತೃಪ್ರಪಂಚರು, ಲಿಂಗಾತ್ಮನು ಪ್ರವಿವಿಕ್ತಾಹಾರತರನೇ ಎಂದಲ್ಲ, ಪ್ರವಿವಿಕ್ತಾಹಾರತರನಾದಂತೆಯೋ; ಏಕೆಂದರೆ ಪ್ರಾಜ್ಞಾತ್ಮನು ಇನ್ನೂ ಪ್ರವಿವಿಕ್ತವಾದ ಆಹಾರವುಳ್ಳವನು ಎಂದು ವಾರ್ತಿಕ (೬೬).

2. ಇಲ್ಲಿ ಸ್ಥೂಲಶರೀರಾಭಿಮಾನಿಯನ್ನೇ ವೈಶ್ವಾನರನೆಂದಿರುವದರಿಂದ ಸ್ಥೂಲಾನ್ನದಿಂದ ಅವನು ಬೆಳೆಯುತ್ತಾನೆಂದಿದೆ.

3 ಭರ್ತೃಪ್ರಪಂಚರು ಇಲ್ಲಿ ಹೇಳಿರುವ ನಾಡಿಗಳ ಮೂಲಕವಾಗಿ ಎಲ್ಲಾ ಜಗತ್ತನ್ನೂ ಸೂತ್ರಾತ್ಮನು ವ್ಯಾಪಿಸಿಕೊಂಡಿರುತ್ತಾನೆಂದೂ ಸರ್ವಕರಣದೇವತೆಗಳೂ ಹಾಗೆಯೇ ವ್ಯಾಪಿಸಿಕೊಂಡಿರುವರೆಂದೂ ಆಯಾ ದೇವತೆಗಳಿಗೆ ಸ್ವಸ್ವಕಾರ್ಯದಲ್ಲಿ ಪ್ರಾಧಾನ್ಯವಿರುವದೆಂದೂ ನಾಡಿಗಳಿರುವಷ್ಟು ಪ್ರಾಜಾಪತ್ಯಾಗ್ನಿಗಳೆಂದು ಉಪಾಸನೆ ಮಾಡಬೇಕೆಂದೂ ಈ ದೇವತೆಯು ಅಧ್ಯಾತ್ಮ, ಅಧಿಭೂತ, ಅಧಿದೈವತ- ಹೀಗೆ ಮೂರು ಪ್ರಕಾರದಿಂದಲೂ ಜಗತ್ತನ್ನು ವ್ಯಾಪಿಸಿದೆ -ಎಂದು ಉಪಾಸನೆಮಾಡಬೇಕೆಂದೂ ಹೇಳಿದ್ದರಂತೆ. ವಾರ್ತಿಕದಲ್ಲಿ ಅದನ್ನೂ ಅಂಗೀಕರಿಸಿದೆ.

೪. "ಅವನಿಗೆ ಪೂರ್ವದಿಕ್ಕು ಪೂರ್ವದ ಪ್ರಾಣಗಳು, ದಕ್ಷಿಣ ದಿಕ್ಕು ದಕ್ಷಿಣದ ಪ್ರಾಣಗಳು, ಪಶ್ಚಿಮದಿಕ್ಕು ಪಶ್ಚಿಮದ ಪ್ರಾಣಗಳು, ಉತ್ತರದಿಕ್ಕು ಉತ್ತರದ ಪ್ರಾಣಗಳು, ಊರ್ಧ್ವದಿಕ್ಕು ಊರ್ಧ್ವ ಪ್ರಾಣಗಳು, ಕೆಳಗಿನ ದಿಕ್ಕು ಕೆಳಗಿನ ಪ್ರಾಣಗಳು, ಎಲ್ಲಾ ದಿಕ್ಕುಗಳು ಎಲ್ಲಾ ಪ್ರಾಣಗಳು. ಆ ಇವನೇ ನೇತಿ ನೇತಿ (ಹೀಗಲ್ಲ, ಹೀಗಲ್ಲ) ಎಂಬ ಆತ್ಮನು. ಅಗೃಹ್ಯನು, ಗ್ರಹಿಸಲ್ಪಡುವದಿಲ್ಲವಷ್ಟೆ? ಅಶೀರ್ಯನು, ಸವೆಯುವದಿಲ್ಲವಷ್ಟೆ ? ಅಸಂಗನು, ಅಂಟಿಕೊಳ್ಳುವದಿಲ್ಲವಷ್ಟೆ ? ಅಸಿತನು, ವ್ಯಥೆಪಡುವದಿಲ್ಲ, ಹಿಂಸಿತನಾಗುವದಿಲ್ಲ. ಜನಕನೆ, ಅಭಯುವನ್ನೇ ಪಡೆದಿರುತ್ತೀಯೆ'' ಎಂದು ಯಾಜ್ಞವಲ್ಕ್ಯನು ನುಡಿದನು. ಆ ಜನಕವೈದೇಹನಿಂತೆಂದನು : "ಯಾಜ್ಞವಲ್ಕ್ಯನೆ, ನಿನಗೆ ಅಭಯವೇ ಬಂದು ಸೇರಲಿ ! ನಮ್ಮನ್ನು ಅಭಯವನ್ನು ತಿಳಿಯುವಂತೆ ಮಾಡಿರುವೆಯಲ್ಲ! ನಿನಗೆ ನಮಸ್ಕಾರ! ಇದು ವಿದೇಹವು, ಇಗೊ ನಾನೂ ಇರುತ್ತೇನೆ!''

## ಪ್ರಾಣಾತ್ಮನ ಪ್ರಾಪ್ತಿ

(ಭಾಷ್ಯ)

೧೫೫. ಸ ಏಷ ಹೃದಯಭೂತಸ್ತೈಜಸಃ ಸೂಕ್ಷ್ಮಭೂತೇನ ಪ್ರಾಣೇನ ವಿಧ್ರಿಯಮಾಣಃ ಪ್ರಾಣ ಏವ ಭವತಿ। ತಸ್ಯಾಸ್ಯ ವಿದುಷಃ ಕ್ರಮೇಣ ವೈಶ್ವಾನರಾತ್ ತೈಜಸಂ ಪ್ರಾಪ್ತಸ್ಯ ಹೃದಯಾತ್ಮಾನಮಾಪನ್ನಸ್ಯ ಹೃದಯಾತ್ಮನಶ್ಚ ಪ್ರಾಣಾತ್ಮಾನಮ್ ಆಪನ್ನಸ್ಯ ಪ್ರಾಚೀ ದಿಕ್ ಪ್ರಾಞ್ಚಃ ಪ್ರಾಗ್ಗತಾಃ ಪ್ರಾಣಾಃ। ತಥಾ ದಕ್ಷಿಣಾ ದಿಕ್ ದಕ್ಷಿಣೇ ಪ್ರಾಣಾಃ। ತಥಾ ಪ್ರತೀಚೀ ದಿಕ್ ಪ್ರತ್ಯಞ್ಚಃ ಪ್ರಾಣಾಃ। ಉದೀಚೀ ದಿಕ್ ಉದಞ್ಚಃ ಪ್ರಾಣಾಃ। ಊರ್ಧ್ವಾ ದಿಕ್ ಊರ್ಧ್ವಾಃ ಪ್ರಾಣಾಃ ಅವಾಚೀ ದಿಕ್ ಅವಾಞ್ಚಃ ಪ್ರಾಣಾಃ। ಸರ್ವಾ ದಿಶಃ ಸರ್ವೇ ಪ್ರಾಣಾಃ। ಏವಂ ವಿದ್ವಾನ್ ಕ್ರಮೇಣ ಸರ್ವಾತ್ಮಕಂ ಪ್ರಾಣಮ್ ಆತ್ಮತ್ವೇನ ಉಪಗತೋ ಭವತಿ ॥

(ಭಾಷ್ಯಾರ್ಥ)

ಆ ಈ ಹೃದಯ(ಸ್ವರೂಪನಾದ) ತೈಜಸನು ಸೂಕ್ಷ್ಮಭೂತನಾದ ಪ್ರಾಣನಿಂದ ಧರಿಸಲ್ಪಟ್ಟವನಾಗಿ ಪ್ರಾಣನೇ ಆಗಿಬಿಡುತ್ತಾನೆ. ಹೀಗೆ ಕ್ರಮವಾಗಿ ವೈಶ್ವಾನರನಿಂದ ತೈಜಸನನ್ನು ಪಡೆದು ಹೃದಯಾತ್ಮತ್ವವನ್ನು ಪಡೆದಿರುವ, ಹೃದ

ಯಾತ್ಮನಿಂದ ಪ್ರಾಣಾತ್ಮತ್ವವನ್ನು ಪಡೆದಿರುವ ಈ ಜ್ಞಾನಿಗೆ[1] ಪೂರ್ವದಿಕ್ಕೇ ಪೂರ್ವದ ಪ್ರಾಣಗಳು[2], ಹೀಗೆಯೇ ದಕ್ಷಿಣದಿಕ್ಕೇ ದಕ್ಷಿಣದಿಕ್ಕಿನಲ್ಲಿರುವ ಪ್ರಾಣಗಳು, ಹೀಗೆಯೇ ಪಶ್ಚಿಮದಿಕ್ಕೇ ಪಶ್ಚಿಮಪ್ರಾಣಗಳು; ಉತ್ತರದಿಕ್ಕೇ ಉತ್ತರ ಪ್ರಾಣಗಳು; ಮೇಲಿನ ದಿಕ್ಕು ಮೇಲಿರುವ ಪ್ರಾಣಗಳು; ಕೆಳಗಿನ ದಿಕ್ಕೇ ಕೆಳಗಿನ ಪ್ರಾಣಗಳು; ಎಲ್ಲಾ ದಿಕ್ಕುಗಳು ಎಲ್ಲಾ ಪ್ರಾಣಗಳು. ಹೀಗೆಂದು ಅರಿತುಕೊಂಡವನು ಕ್ರಮವಾಗಿ ಪ್ರಾಣನನ್ನೇ ಆತ್ಮನಾಗಿ ಪಡೆದುಕೊಳ್ಳುತ್ತಾನೆ.

## ತುರೀಯಾತ್ಮಪ್ರಾಪ್ತಿ

(ಭಾಷ್ಯ)

೧೫೭. ೨೦ ಸರ್ವಾತ್ಮಾನಂ ಪ್ರತ್ಯಗಾತ್ಮನಿ ಉಪಸಂಹೃತ್ಯ ದ್ರಷ್ಟುರ್ಹಿ ದ್ರಷ್ಟೃಭಾವಂ ನೇತಿ ನೇತೀತ್ಯಾತ್ಮಾನಂ ತುರೀಯಂ ಪ್ರತಿಪದ್ಯತೇ। ಯಮೇಷ ವಿದ್ವಾನ್ ಅನೇನ ಕ್ರಮೇಣ ಪ್ರತಿಪದ್ಯತೇ 'ಸ ಏಷ ನೇತಿ ನೇತ್ಯಾತ್ಮಾ' ಇತ್ಯಾದಿ 'ನ ರಿಷ್ಯತಿ' ಇತ್ಯನ್ತಂ ವ್ಯಾಖ್ಯಾತಮೇತತ್। ಅಭಯಂ ವೈ ಜನ್ಮಮರಣಾದಿನಿಮಿತ್ತಭಯಶೂನ್ಯಂ ಹೇ ಜನಕ ಪ್ರಾಪ್ತೋಽಸಿ ಇತಿ ಹೈವಂ ಕಿಲ ಉವಾಚ ಉಕ್ತವಾನ್ ಯಾಜ್ಞವಲ್ಕ್ಯಃ। ತದೇತದುಕ್ತಮ್ "ಅಥ ವೈ ತೇಽಹಂ ತದ್ವಕ್ಷ್ಯಾಮಿ ಯತ್ರ ಗಮಿಷ್ಯಸೀತಿ" (೪-೨-೧) ಇತಿ। ಸ ಹೋವಾಚ ಜನಕೋ ವೈದೇಹೋಽಭಯಮೇವ ತ್ವಾ ತ್ವಾಮಪಿ ಗಚ್ಛತಾತ್ ಗಚ್ಛತು ಯಸ್ತ್ವಂ ನಃ। ಅಸ್ಮಾನ್ ಹೇ ಯಾಜ್ಞವಲ್ಕ್ಯ ಭಗವನ್ ಪೂಜಾವನ್ ಅಭಯಂ ಬ್ರಹ್ಮ ವೇದಯಸೇ ಜ್ಞಾಪಯಸಿ ಪ್ರಾಪಿತವಾನ್ ಉಪಾಧಿಕೃತಾಜ್ಞಾನವ್ಯವಧಾನಾಪನಯನೇನ ಇತ್ಯರ್ಥಃ। ಕಿಮನ್ಯತ್ ಅಹಂ ವಿದ್ಯಾನಿಷ್ಕ್ರಯಾರ್ಥಂ ಪ್ರಯಚ್ಛಾಮಿ ಸಾಕ್ಷಾತ್ ಆತ್ಮಾನಮೇವ ದತ್ತವತೇ। ಅತಃ ನಮಸ್ತೇಽಸ್ತು। ಇಮೇ ವಿದೇಹಾಃ

---

1. ಆಧ್ಯಾತ್ಮಿಕಪುರುಷನು ನಾಡೀಲಕ್ಷಣವಾದ ಮಾರ್ಗದಿಂದ ಜಗತ್ತೆಲ್ಲವನ್ನೂ ವ್ಯಾಪಿಸಿಕೊಂಡಿರುವಂತೆ ವಿರಾಜನ ರಶ್ಮಿಗಳು, ವ್ಯಾಪಿಸಿಕೊಂಡಿರುತ್ತವೆ –ಎಂಬ ಭರ್ತೃಪ್ರಪಂಚರ ಪ್ರಕ್ರಿಯೆಯನ್ನೂ ವಾರ್ತಿಕದಲ್ಲಿ ಅಂಗೀಕರಿಸಿದೆ. ಆಧ್ಯಾತ್ಮಿಕಪರಿಚ್ಛೇದವನ್ನು ವಿರಾಜನಲ್ಲಿಯೂ ವಿರಾಜನನ್ನು ಹಿರಣ್ಯಗರ್ಭನಲ್ಲಿಯೂ ಹಿರಣ್ಯಗರ್ಭನನ್ನು ಪ್ರಾಣನೆಂಬ ಪ್ರಾಜ್ಞಾತ್ಮನಲ್ಲಿಯೂ ಲಯಮಾಡಿಕೊಳ್ಳಬೇಕು –ಎಂದು ವಾರ್ತಿಕ (೭೮ರಿಂದ ೮೪).

2. ಕಾರಣರೂಪನಾದ ಪ್ರಾಜ್ಞತ್ವವನ್ನು ಪಡೆದ ಜ್ಞಾನಿಗೆ ಪರಿಚ್ಛೇದವು ಕಳೆಯುವುದು. ಆಯಾ ದಿಕ್ಕುಗಳಲ್ಲಿದ್ದ ಪ್ರಾಣಗಳು ಆಯಾ ದಿಕ್ಕುಗಳೇ ಅದವು; ಆ ದಿಕ್ಕುಗಳೂ ಪ್ರಾಜ್ಞನಿಗಿಂತ ಬೇರೆಯಾಗಿರುವದಿಲ್ಲ. ವಾರ್ತಿಕ (೮೬, ೮೭). ಲಿಂಗಾತ್ಮನಿಗೆ ಶರೀರದಲ್ಲಿ ನಾಡಿಗಳಿರುವಂತೆಯೇ ಶರೀರದಿಂದ ಹೊರಟು ಹೊರಗೂ ವಾಯುಮಯವಾದ ಪ್ರಾಣನಾಡಿಗಳಿವೆ ಎಂಬುದು ಭರ್ತೃಪ್ರಪಂಚರ ಪ್ರಕ್ರಿಯೆ; ಅದನ್ನು ವಾರ್ತಿಕದಲ್ಲಿ ಒಪ್ಪಿದೆ. ಪ್ರಾಜ್ಞನಿಗೆ ಈ ಪ್ರಾಣಗಳು ಬೇರೆಯಿರುವದಿಲ್ಲ; ಅವನನ್ನೇ ಪ್ರಾಣಾತ್ಮನೆಂದು ಇಲ್ಲಿ ಕರೆದಿರುವದು.

ತವ ಯಥೇಷ್ಟಂ ಭುಜ್ಯನ್ತಾಮ್ । ಅಯಂ ಚಾಹಮಸ್ಮಿ ದಾಸಭಾವೇ ಸ್ಥಿತಃ ।
ಯಥೇಷ್ಟಂ ಮಾಂ ರಾಜ್ಯಂ ಚ ಪ್ರತಿಪದ್ಯಸ್ವ ಇತ್ಯರ್ಥಃ ॥

(ಭಾಷ್ಯಾರ್ಥ)

ಆ ಸರ್ವಾತ್ಮನನ್ನು ಪ್ರತ್ಯಗಾತ್ಮನಲ್ಲಿ ಉಪಸಂಹಾರಮಾಡಿಕೊಂಡು[1] ದ್ರಷ್ಟೃವಿನ ದ್ರಷ್ಟೃತ್ವವನ್ನು (ಉಪಸಂಹಾರಮಾಡಿಕೊಂಡು)[2] ನೇತಿ ನೇತಿ (ಹೀಗಲ್ಲ, ಹೀಗಲ್ಲ ಎಂಬ) ಆತ್ಮನಾದ ತುರೀಯನನ್ನು ಹೊಂದುತ್ತಾನೆ[3]. ಯಾವನನ್ನು ಜ್ಞಾನಿಯು ಈ ಕ್ರಮದಿಂದ ಪಡೆದುಕೊಳ್ಳುತ್ತಾನೋ 'ಆ ಇವನೇ ನೇತಿ ನೇತಿ (ಹೀಗಲ್ಲ, ಹೀಗಲ್ಲ) ಎಂಬ ಆತ್ಮನು' ಎಂಬುದರಿಂದ ಹಿಡಿದು 'ಹಿಂಸಿತನಾಗುವದಿಲ್ಲ' ಎಂಬವರೆಗಿನ (ಗ್ರಂಥವನ್ನು) ಹಿಂದೆಯೇ ವ್ಯಾಖ್ಯಾನ ಮಾಡಿದ್ದಾಗಿದೆ[4]. ಎಲೈ ಜನಕನೆ, ಅಭಯವನ್ನೇ ಹುಟ್ಟುಹೊಂದುಗಳೇ ಮುಂತಾದ ನಿಮಿತ್ತದಿಂದಾಗುವ ಭಯವಿಲ್ಲದ(ವಸ್ತುವನ್ನೇ) ಪಡೆದಿರುತ್ತೀಯೆ[5]. –ಎಂದಿಂತು ಯಾಜ್ಞವಲ್ಕ್ಯನು ಹೇಳಿದನಂತೆ (ಹ= ಕಿಲ) –ಇದನ್ನೇ ಹಿಂದೆ "(ನೀನು) ಎಲ್ಲಿಗೆ ಹೋಗುವೆಯೋ (ಅದನ್ನು) ಈಗ ನಾನು ಹೇಳುವೆನು" (೪–೨–೧) ಎಂದು (ಯಾಜ್ಞವಲ್ಕ್ಯನು) ಹೇಳಿದ್ದು[6].

---

1. ಪ್ರಾಜ್ಞನನ್ನು ಒಳಗಿನ ಆತ್ಮನಲ್ಲಿ ಲಯಮಾಡಿಕೊಂಡು ಎಂದರ್ಥ.

2. ದೃಶ್ಯವಿಲ್ಲದ್ದರಿಂದ ದೃಶ್ಯತ್ವವೂ ಇಲ್ಲವೆಂದು ಅರಿತುಕೊಂಡು ಎಂದರ್ಥ.

3. ವೈಶ್ವಾನರನೂ ತೈಜಸನೂ ದ್ವಿತೀಯವಸ್ತುವನ್ನು ಅರಿಯುವವರು, ಪ್ರಾಜ್ಞನು ದ್ವೈತಜ್ಞಾನವಿಲ್ಲದವನು. ಅಜ್ಞಾನತತ್ಕಾರ್ಯಗಳು ಆತ್ಮನ ದೃಷ್ಟಿಗೆ ವಿಷಯವಾಗಿರುವದರಿಂದ ಶುದ್ಧಾತ್ಮನಲ್ಲಿ ಕಾರ್ಯಕಾರಣಭಾವವಿರುವದಿಲ್ಲ. ಆ ಅಜ್ಞಾನತತ್ಕಾರ್ಯಗಳು ಆತ್ಮನನ್ನು ಬಿಟ್ಟು ಬೇರೆಯಿರುವದಿಲ್ಲವಾದ್ದರಿಂದ ದೃಶ್ಯತ್ವವು ಮಿಥ್ಯೆಯಾದರೆ ದ್ರಷ್ಟೃತ್ವವೂ ಮಿಥ್ಯೆಯೆಂದು ಅರಿತು ಕೇವಲ ಚಿನ್ಮಾತ್ರರೂಪದಲ್ಲಿ ಉಳಿದುಕೊಳ್ಳುತ್ತಾನೆ ಎಂದು ವಾರ್ತಿಕ.

4. ಶಾಕಲ್ಯಬ್ರಾಹ್ಮಣಭಾಷ್ಯದಲ್ಲಿ ಇದನ್ನು ವಿವರಿಸಿದೆ

5. ಅವಸ್ಥಾತ್ರಯಗಳನ್ನು ಒಂದರಲ್ಲೊಂದನ್ನು ಲಯಮಾಡಿಕೊಂಡು ಅಜ್ಞಾನವನ್ನು ಕಳೆದುಕೊಂಡು ಪೂರ್ಣದೃಷ್ಟ್ಯೈಕಾತ್ಮನಾಗಿ ಉಳಿದುಕೊಳ್ಳುವದೇ ಐಕಾತ್ಮ್ಯಜ್ಞಾನಕ್ಕೆ ಮಾರ್ಗವು. ಇಷ್ಟೇ ಹೊರತು ಅರ್ಚಿರಾದಿಗಳಂತೆ ನಿತ್ಯಪ್ರಾಪ್ತವಾದ ಆತ್ಮನನ್ನು ಹೊಂದುವದಕ್ಕೆ ಗತಿಯೇನೂ ಅವಶ್ಯವಿಲ್ಲ –ಎಂಬುದನ್ನು ತಿಳಿಸುವದಕ್ಕಾಗಿಯೇ 'ಅಭಯವನ್ನು ಹೊಂದಿರುತ್ತೀಯೆ' ಎಂದು ಹೇಳಿರುತ್ತಾನೆ; ಹಾಗಿಲ್ಲದಿದ್ದರೆ 'ಪಡೆಯುವೆ' ಎಂದು ಹೇಳುತ್ತಿದ್ದನು. ವಾರ್ತಿಕ (೬೯೦ರಿಂದ ೯೫).

6. ಗತಿಯನ್ನೇನೂ ಇಲ್ಲಿ ಹೇಳಿಲ್ಲ.

ಆ ಜನಕವೈದೇಹನು ಇಂತೆಂದನು : ನಿನ್ನನ್ನು ಕೂಡ ಅಭಯುವೇ (ಗಚ್ಛತಾತ್= ಗಚ್ಛತು) ಬಂದು ಸೇರಲಿ[1], (ಏಕೆಂದರೆ) ಎಲೈ ಭಗವಂತನೆ ಪೂಜ್ಯನೆ, ಯಾಜ್ಞವಲ್ಕ್ಯನೆ ನೀನು (ನಃ= ಅಸ್ಮಾನ್) ನಮ್ಮಗಳನ್ನು ಅಭಯುನಾದ ಬ್ರಹ್ಮವನ್ನು ತಿಳಿಯುವಂತೆ ಮಾಡಿದೀಯೆ, ತಿಳಿಸಿಕೊಟ್ಟಿರುತ್ತೀಯೆ[2] ; ಉಪಾಧಿಯಿಂದಾದ ಅಜ್ಞಾನದ ಮರೆಯನ್ನು ತೊಲಗಿಸಿ (ಬ್ರಹ್ಮವನ್ನು ತಿಳಿಸಿರುತ್ತೀಯೆ) ಎಂದರ್ಥ. ನಾನು ವಿದ್ಯೆಯ ನಿಷ್ಕ್ರಯಕ್ಕಾಗಿ ಸಾಕ್ಷಾದಾತ್ಮನನ್ನೇ ಕೊಟ್ಟ (ನಿನಗೆ) ಬೇರೆ ಯಾವದನ್ನು ಕೊಡಲಿ? ಆದ್ದರಿಂದ ನಿನಗೆ ನಮಸ್ಕಾರವಿರಲಿ! ಇದು ವಿದೇಹ (ರಾಜ್ಯವು) ನಿನ್ನದು, ಯಥೇಷ್ಟವಾಗಿ ಭೋಗಿಸು! ಇಗೊ, ಈ ನಾನೂ ದಾಸಭಾವದಲ್ಲಿರುವವನಾಗಿರುತ್ತೇನೆ. ಯಥೇಷ್ಟವಾಗಿ ನನ್ನನ್ನೂ ರಾಜ್ಯವನ್ನೂ ಪಡೆದುಕೊ ಎಂದರ್ಥ[3].



1. ಅಭಯುವೊಂದಲ್ಲದೆ ಜ್ಞಾನಕ್ಕೆ ಸಮಾನವಾದ ಗುರುದಕ್ಷಿಣೆಯೇ ಇಲ್ಲವೆಂಬುದನ್ನು ಸೂಚಿಸುವದಕ್ಕೆ ಹೀಗೆಂದಿದಾನೆ. ತನಗೆ ಜ್ಞಾನವುಂಟಾಯಿತೆಂದು ಈ ವಾಕ್ಯದಿಂದ ತಿಳಿಸಿದಾನೆ. ವಾರ್ತಿಕ (೯೬, ೧೦೯).

2. ಅಜ್ಞಾನನಾಶದಿಂದಲೇ ಬ್ರಹ್ಮವು ಪ್ರಾಪ್ಯ ಎಂಬುದಕ್ಕೆ ಈ ವಾಕ್ಯವೊಂಪು ಗುರುತು. ನಿನಗೆ ಬ್ರಹ್ಮಸಾಕ್ಷಾತ್ಕಾರವಾಗಲಿ, ಅಥವಾ ವಿದೇಹಮುಕ್ತಿಯಾಗಲಿ ಎಂಬ ಆಶಯದಿಂದ ಜನಕನು ಈ ಮಾತನ್ನು ಆಡಿರುತ್ತಾನೆ ಎಂಬ ಭರ್ತೃಪ್ರಪಂಚರ ಮತವನ್ನು ವಾರ್ತಿಕದಲ್ಲಿ ಖಂಡಿಸಿದೆ.

3. ನಾನು ನೀನು -ಎಂಬ ಭೇದವು ಅಳಿಯಿತು ; ಇವೆಲ್ಲವೂ ಹೇಗೆ ನನ್ನದೋ ಹಾಗೆಯೇ ನಿನ್ನದು ಎಂದರ್ಥ. ವಾರ್ತಿಕ ೧೧೨, ೧೧೩.

# ಎರಡನೆಯ ಬ್ರಾಹ್ಮಣದ ಸಾರ

ಇಲ್ಲಿ ಉಪಾಸಕನಿಗೆ ಆಗುವ ಪರಮಫಲವನ್ನು ಅವಸ್ಥಾತ್ರಯಪರೀಕ್ಷೆಯಿಂದ ತಿಳಿಸಿದೆ.

೧. ಸವಿಶೇಷಬ್ರಹ್ಮಗಳನ್ನೆಲ್ಲ ಅರಿತಿದ್ದು ಅವುಗಳಿಗಿಂತ ಹೆಚ್ಚಿನ ತತ್ತ್ವವೊಂದನ್ನು ಅನುಶಾಸನಮಾಡತಕ್ಕದ್ದಿದೆ -ಎಂದು ಹೇಳಿದ ಯಾಜ್ಞವಲ್ಕ್ಯನ ಮಾತನ್ನು ಕೇಳಿ ಜನಕನು ವಿನಯದಿಂದ ಶಿಷ್ಯನಾಗಿ "ಹಾಗಾದರೆ ನೀನು ಅರಿತಿರುವ ಬ್ರಹ್ಮವನ್ನು ಹೇಳಿಕೊಡು !" ಎಂದು ಕೇಳಿಕೊಂಡನು. ಯಾಜ್ಞವಲ್ಕ್ಯನು "ಅಗ್ನಿ, ವಾಯು, ಆದಿತ್ಯ- ಮುಂತಾದ ಬ್ರಹ್ಮಗಳನ್ನೂ ಅವುಗಳ ಆಯತನ, ಪ್ರತಿಷ್ಠೆ, ರಹಸ್ಯಗುಣನಾಮ- ಇವುಗಳನ್ನೂ ಅರಿತುಕೊಂಡು ದೀರ್ಘಪ್ರಯಾಣಕ್ಕೆ ಅನುವಾದವನಂತೆ ಉಪಾಸನಾಸಂಭಾರದಿಂದೊಡಗೂಡಿರುವೆಯಲ್ಲ, ಈ ದೇಹದಿಂದ ಮುಕ್ತನಾಗಿ ಯಾವ ವಸ್ತುತತ್ತ್ವವನ್ನು ಮುಟ್ಟುವೆ ಎಂಬುದು ನಿನಗೆ ತಿಳಿದಿದೆಯೇನು ?" ಎಂದು ಕೇಳಿದನು. ಜನಕನಿಗೆ ಉಪಾಸನೆಯಿಂದಾಗುವ ದೇವತಾಸಾಯುಜ್ಯವು ತಿಳಿದಿತ್ತೇಹೊರತು ಎಲ್ಲದರಿಂದಲೂ ಮುಕ್ತನಾಗಿ ಕೊನೆಗೆ ಮುಟ್ಟುವ ವಸ್ತುತತ್ತ್ವವು ತಿಳಿದಿರಲಿಲ್ಲ. "ದಯವಿಟ್ಟು ನೀನೇ ಅದನ್ನು ನನಗೆ ತಿಳಿಸಿಕೊಡು" ಎಂದು ಕೇಳಿಕೊಂಡನು. "ಹಾಗಾದರೆ ನೀನು ಪಡೆಯಬಹುದಾದ ತತ್ತ್ವವನ್ನು ತಿಳಿಸುವೆನು" ಎಂದು ಯಾಜ್ಞವಲ್ಕ್ಯನು ಉಪದೇಶಿಸುವದಕ್ಕೆ ಪ್ರಾರಂಭಿಸಿದನು.

೨. "ದೀಪ್ತಿಗುಣನಾದ ಆದಿತ್ಯಾಂತರ್ಗತನೂ ಬಲಗಣ್ಣಿನಲ್ಲಿರುವವನೂ ಆದ ಪುರುಷನಿಗೆ 'ಇಂಧ'ನೆಂದು ಹೆಸರು. ಇವನನ್ನು ಪರೋಕ್ಷವಾಗಿ ಇಂದ್ರನೆಂದು ಕರೆಯುತ್ತಾರೆ. ಇವನೇ ವೈಶ್ವಾನರನೆಂಬ ಜಾಗ್ರದವಸ್ಥೆಯ ಆತ್ಮನು ; ಇವನೇ ನೀನು.

೩. "ಈ ಇಂದ್ರನು ಭೋಕ್ತೃ, ಎಡಗಣ್ಣಿನಲ್ಲಿರುವ ಇದೇ ಪುರುಷನ ರೂಪಕ್ಕೆ ಇಂದ್ರಾಣಿ ಎಂದು ಹೆಸರು, ಅದು ಭೋಗ್ಯವು. ಈ ಇಂದ್ರೇಂದ್ರಾಣಿಯರು ಸ್ವಪ್ನದಲ್ಲಿ ಒಂದಾಗಿ ಹೃದಯದಲ್ಲಿದ್ದು ಪ್ರವಿವಿಕ್ತಾಹಾರತರನಾದಂತೆ ಇರುವ ತೈಜಸನೆನಿಸುವರು. ಈ ವೈಶ್ವಾನರನು ಸ್ಥೂಲಾಹಾರವುಳ್ಳವನು, ತೈಜಸನು ಸೂಕ್ಷ್ಮಾಹಾರನಾಗಿದ್ದರಿಂದ ಪ್ರವಿವಿಕ್ತಾಹಾರನು. ಈ ಹೃದಯಾತ್ಮನಾದ ತೈಜಸನೂ ನೀನೇ.

೪. "ಇದೇ ತೈಜಸನು ಇನ್ನೂ ಸೂಕ್ಷ್ಮನಾಗಿರುವ 'ಪ್ರಾಣಾತ್ಮನ ಆಧಾರದಿಂದ ವ್ಯಾಪಾರಮಾಡುತ್ತಿರುತ್ತಾನೆ. ಸರಿಯಾಗಿ ವಿಚಾರಮಾಡಿದರೆ ಹೃದಯಾತ್ಮನ ಪ್ರಾಣಗಳು ಆ ಪ್ರಾಣಾತ್ಮನಿಗಿಂತ ಬೇರೆಯಾಗಿರುವದಿಲ್ಲ. ಪ್ರಾಣಾತ್ಮನಿಗೆ ಪ್ರಾಜ್ಞನು, ಕಾರಣಾತ್ಮನು ಎಂದೂ ಹೆಸರು. ಈ ಕಾರಣಾತ್ಮನಿಗಿಂತ ಬೇರೆಯಾಗಿ ಮತ್ತೆ ಯಾವದೂ ಇರುವದೇ ಇಲ್ಲ, ಈ ಪ್ರಾಜ್ಞನೂ ನೀನೇ.

ಸರ್ವಾತ್ಮನಾದ ಪ್ರಾಜ್ಞನಲ್ಲಿ ಹೀಗೆ ಎಲ್ಲವನ್ನೂ ಲಯಗೊಳಿಸಿಕೊಂಡ ಬಳಿಕ ದೃಶ್ಯವೇ ಇಲ್ಲದ್ದರಿಂದ ಆತ್ಮನಿಗೆ ದ್ರಷ್ಟೃತ್ವವೂ ಉಳಿಯುವದಿಲ್ಲ. ಆ ಸ್ವರೂಪದಲ್ಲಿ ಯಾವ ವಿಶೇಷವೂ ಇಲ್ಲದ್ದರಿಂದ ಅದನ್ನು ನೇತಿ ನೇತಿ (ಹೀಗಲ್ಲ, ಹೀಗಲ್ಲ) ಎಂದೇ ಕರೆಯ ಬೇಕಾಗಿರುತ್ತದೆ. ಇವನು ಅಸಂಗನು, ಅಶೀರ್ಯನು, ಅಬದ್ಧನು, ಅದ್ವಿತೀಯನಾಗಿರುವದ ರಿಂದ ಇದೇ ಅಭಯವಾದ ಬ್ರಹ್ಮವು. ಮೇಲೆ ಹೇಳಿದಂತೆ ನಿಜವಾದ ಈ ಆತ್ಮಸ್ವರೂಪ ವನ್ನು ಅರಿತದ್ದರಿಂದ ನೀನು ಅಭಯಬ್ರಹ್ಮವೇ ಆಗಿರುವೆ" ಎಂದು ಯಾಜ್ಞವಲ್ಕ್ಯನು ತನ್ನ ಅನುಶಾಸನವನ್ನು ಮುಗಿಸಿದನು.

ಆಗ ಜನಕನು "ಯಾಜ್ಞವಲ್ಕ್ಯನೆ, ಅಭಯವಾದ ಬ್ರಹ್ಮವನ್ನು ಹೀಗೆ ತಿಳಿಸಿಕೊಟ್ಟಿರುವೆ ಯಲ್ಲ, ಈ ವಿದ್ಯೋಪದೇಶಕ್ಕೆ ಯಾವ ದಕ್ಷಿಣೆಯು ತಾನೆ ತಕ್ಕದ್ದಾದೀತು ? ನೀನೂ ಅಭಯ ಸ್ವರೂಪನಾದ ಬ್ರಹ್ಮವೇ ಆಗಿರುವೆ. ಆದ್ದರಿಂದ ಈ ನನ್ನ ರಾಜ್ಯವೂ ನಾನೂ ನಿನಗಿಂತ ಬೇರೆಯಿರುವವನೇ ಇಲ್ಲ, ಇದೆಲ್ಲವೂ ನನ್ನದು ಹೇಗೋ ಹಾಗೆಯೇ ನಿನ್ನದೂ ಆಗಿರುತ್ತದೆ" ಎಂದು ಕೃತಜ್ಞತೆಯನ್ನು ತೋರ್ಪಡಿಸಿಕೊಂಡನು.

---

# ನಾಲ್ಕನೆಯ ಅಧ್ಯಾಯ-ಮೂರನೆಯ ಬ್ರಾಹ್ಮಣ

## (ಅವಸ್ಥಾತ್ರಯಪರೀಕ್ಷೆಯಿಂದ ಬ್ರಹ್ಮಪ್ರಾಪ್ತಿ)

## ಬ್ರಾಹ್ಮಣದ ಸಂಬಂಧ

(ಭಾಷ್ಯ)

೧೫೭. "ಜನಕಂ ಹ ವೈದೇಹಂ ಯಾಜ್ಞವಲ್ಕ್ಯೋ ಜಗಾಮ" ಇತ್ಯಸ್ಯ ಅಭಿಸಂಬನ್ಧಃ। ವಿಜ್ಞಾನಮಯ ಆತ್ಮಾ ಸಾಕ್ಷಾತ್ ಅಪರೋಕ್ಷಾದ್ ಬ್ರಹ್ಮ ಸರ್ವಾನ್ತರಃ ಪರ ಏವ। "ನಾನ್ಯೋಽತೋಽಸ್ತಿ ದ್ರಷ್ಟಾ" (೩-೭-೨೩), "ನಾನ್ಯದತೋಽಸ್ತಿ ದ್ರಷ್ಟೃ" (೩-೮-೧೧) ಇತ್ಯಾದಿಶ್ರುತಿಭ್ಯಃ। ಸ ಏಷ ಇಹ ಪ್ರವಿಷ್ಟಃ ವದನಾದಿಲಿಙ್ಗಃ ಅಸ್ತಿ ವ್ಯತಿರಿಕ್ತಃ ಇತಿ ಮಧುಕಾಣ್ಡೇ ಅಜಾತಶತ್ರುಸಂವಾದೇ ಪ್ರಾಣಾದಿಕರ್ತೃತ್ವಭೋಕ್ತೃತ್ವಪ್ರತ್ಯಾಖ್ಯಾನೇನ ಅಧಿಗತೋಽಪಿ ಸನ್ ಪುನಃ ಪ್ರಾಣನಾದಿಲಿಙ್ಗಮ್ ಉಪನ್ಯಸ್ಯ ಔಷಸ್ತಪ್ರಶ್ನೇ ಪ್ರಾಣನಾದಿಲಿಙ್ಗೋ ಯಃ ಸಾಮಾನ್ಯೇನ ಅಧಿಗತಃ "ಪ್ರಾಣೇನ ಪ್ರಾಣಿತಿ" ಇತ್ಯಾದಿನಾ, "ದೃಷ್ಟೇರ್ದ್ರಷ್ಟಾ" ಇತ್ಯಾದಿನಾ ಅಲುಪ್ತಶಕ್ತಿಸ್ವಭಾವೋಽಧಿಗತಃ। ತಸ್ಯ ಚ ಪರೋಪಾಧಿನಿಮಿತ್ತಃ ಸಂಸಾರೋ ಯಥಾ ರಜ್ಜೂಷರಶುಕ್ತಿಕಾಗಗನಾದಿಷು ಸರ್ಪೋದಕರಜತಮಲಿನತ್ವಾದಿಪರಾಧ್ಯಾರೋಪಣನಿಮಿತ್ತಮೇವ ನ ಸ್ವತಃ। ತಥಾ ನಿರುಪಾಧಿಕೋ ನಿರುಪಾಖ್ಯೋ ನೇತಿ ನೇತೀತಿ ವ್ಯಪದೇಶ್ಯಃ ಸಾಕ್ಷಾದಪರೋಕ್ಷಾತ್ ಸರ್ವಾನ್ತರ ಆತ್ಮಾ ಬ್ರಹ್ಮಾಕ್ಷರಮನ್ತರ್ಯಾಮೀ ಪ್ರಶಾಸ್ತಾ ಔಪನಿಷದಃ ಪುರುಷಃ ವಿಜ್ಞಾನಮಾನನ್ದಂ ಬ್ರಹ್ಮ- ಇತ್ಯಧಿಗತಮ್। ತದೇವ ಪುನರಿನ್ಧಸಂಜ್ಞಃ ಪ್ರವಿವಿಕ್ತಾಹಾರಃ, ತತೋಽನ್ತರ್ಹೃದಯೇ ಲಿಙ್ಗಾತ್ಮಾ ಪ್ರವಿವಿಕ್ತಾಹಾರತರಃ, ತತಃ ಪರೇಣ ಜಗದಾತ್ಮಾ ಪ್ರಾಣೋಪಾಧಿಃ। ತತೋಽಪಿ ಪ್ರವಿಲಾಪ್ಯ ಜಗದಾತ್ಮಾನಮ್ ಉಪಾಧಿಭೂತಂ ರಜ್ಜ್ವಾದಾವಿವ ಸರ್ಪಾದಿಕಂ ವಿದ್ಯಯಾ ಸ ಏಷ ನೇತಿ ನೇತೀತಿ ಸಾಕ್ಷಾತ್ ಸರ್ವಾನ್ತರಂ ಬ್ರಹ್ಮ ಅಧಿಗತಮ್। ಏವಮ್ ಅಭಯಂ ಪರಿಪ್ರಾಪಿತೋ ಜನಕೋ ಯಾಜ್ಞವಲ್ಕ್ಯೇನ ಆಗಮತಃ ಸಂಕ್ಷೇಪತಃ ಅತ್ರ ಚ ಜಾಗ್ರತ್ಸ್ವಪ್ನಸುಷುಪ್ತತುರೀಯಾಣಿ ಉಪನ್ಯಸ್ತಾನಿ ಅನ್ಯಪ್ರಸಙ್ಗೇನ ಇನ್ಧಃ, ಪ್ರವಿವಿಕ್ತಾಹಾರತರಃ, ಸರ್ವೇ ಪ್ರಾಣಾಃ, ಸ ಏಷ ನೇತಿನೇತೀತಿ। ಇದಾನೀಂ ಜಾಗ್ರತ್ಸ್ವಪ್ನಾದಿದ್ವಾರೇಣೈವ ಮಹತಾ ತರ್ಕೇಣ ವಿಸ್ತರತೋಽಧಿಗಮಃ ಕರ್ತವ್ಯಃ। ಅಭಯಂ ಪ್ರಾಪಯಿತವ್ಯಮ್। ಸದ್ಭಾವಶ್ಚ ಆತ್ಮನಃ ವಿಪ್ರತಿಪತ್ತ್ಯಾಶಙ್ಕಾನಿರಾಕರಣದ್ವಾರೇಣ। ವ್ಯತಿರಿಕ್ತತ್ವಂ ಶುದ್ಧತ್ವಂ ಸ್ವಯಂ ಜ್ಯೋತಿಷ್ಟ್ವಮ್ ಅಲುಪ್ತಶಕ್ತಿಸ್ವರೂಪತ್ವಂ ನಿರತಿಶಯಾನನ್ದಸ್ವಾಭಾವ್ಯಮ್

ಅದ್ವೈತತತ್ತ್ವಂ ಚ ಅಧಿಗನ್ತವ್ಯಮ್ ಇತಿ ಇದಮಾರಭ್ಯತೇ। ಆಖ್ಯಾಯಿಕಾ ತು ವಿದ್ಯಾಸಂಪ್ರದಾನಗ್ರಹಣವಿಧಿಪ್ರಕಾಶನಾರ್ಥಾ। ವಿದ್ಯಾಸ್ತುತಯೇ ಚ ವಿಶೇಷತಃ। ವರದಾನಾದಿಸೂಚನಾತ್ ॥

(ಭಾಷ್ಯಾರ್ಥ)

"ಜನಕಂ ಹ ವೈದೇಹಂ ಯಾಜ್ಞವಲ್ಕ್ಯೋ ಜಗಾಮ" ಎಂಬೀ ಬ್ರಾಹ್ಮಣದ ಸಂಬಂಧವೇನೆಂದರೆ: ವಿಜ್ಞಾನಮಯಾತ್ಮನು ಸಾಕ್ಷಾತ್ತಾಗಿ[1] ಅಪರೋಕ್ಷವಾಗಿರುವ[2] ಬ್ರಹ್ಮವು, ಸರ್ವಾಂತರನಾದ ಪರಮಾತ್ಮನೇ[3]; "ಇವನಿಗಿಂತ ಬೇರೆಯಾಗಿರುವ ದ್ರಷ್ಟೃವಿಲ್ಲ" (೩-೭-೨೩), "ಇದಕ್ಕಿಂತ ಬೇರೆಯಾಗಿರುವ ದ್ರಷ್ಟೃವಿಲ್ಲ" (೩-೮-೧೧) ಮುಂತಾದ ಶ್ರುತಿಗಳಿಂದ (ಇದು ಸಿದ್ಧವಾಗುತ್ತದೆ)[4]. ಆ ಈ (ಪರಮಾತ್ಮನು) ಇಲ್ಲಿ ಒಳಹೊಕ್ಕು ವಾಕ್ಕೇ ಮುಂತಾದ ಲಿಂಗಗಳಿಂದ[5] (ತಿಳಿಯಬರುವವನಾಗಿ ಕಾರ್ಯಕರಣಸಂಘಾತಕ್ಕಿಂತ) ವ್ಯತಿರಿಕ್ತನಾಗಿ ಇರುತ್ತಾನೆ -ಎಂದು ಮಧುಕಾಂಡದಲ್ಲಿ ಅಜಾತಶತ್ರು(ಗಾರ್ಗ್ಯರ) ಸಂವಾದದಲ್ಲಿ ಪ್ರಾಣವೇ ಮುಂತಾದವುಗಳು ಕರ್ತೃಭೋಕ್ತೃಗಳಲ್ಲವೆಂಬು[6] ಹೇಳುವಮೂಲಕ ತಿಳಿಯಬಂದ ಮೇಲೂ, ಮತ್ತೂ ಉಷಸ್ತನ ಪ್ರಶ್ನೆಯಲ್ಲಿ 'ಪ್ರಾಣೇನ ಪ್ರಾಣಿತಿ' ಮುಂತಾದ (ವಾಕ್ಯ)ದಿಂದ ಪ್ರಾಣನವೇ ಮುಂತಾದ ಲಿಂಗಗಳುಳ್ಳವನೆಂದು ಸಾಮಾನ್ಯವಾಗಿ ಗೊತ್ತಾಗಿರುವವನೇ ದೃಷ್ಟೇರ್ದ್ರಷ್ಟಾ ಮುಂತಾದ ವಾಕ್ಯದಿಂದ ಅಲುಪ್ತವಾದ (ಚೈತನ್ಯ)ಶಕ್ತಿಸ್ವಭಾವವುಳ್ಳವನು ಎಂದು (ವಿಶೇಷವಾಗಿ) ಗೊತ್ತುಪಡಿಸಿದ್ದಾಯಿತು[7]. ಆ (ಆತ್ಮನಿಗೆ) ಬೇರೆಯಾಗಿರುವ ಉಪಾಧಿಗಳ ನಿಮಿತ್ತ

---

1. ಅವ್ಯವಹಿತವಾಗಿ.

2. ಶ್ರೋತ್ರಬ್ರಹ್ಮವೇ ಮುಂತಾದವುಗಳಂತೆ ಗೌಣವಲ್ಲದೆ.

3. ಸರ್ವಾಂತರನಾಗಿರುವದರಿಂದ ಈ ಪರಮಾತ್ಮನಿಗಿಂತಲೂ ಮತ್ತೊಬ್ಬ ಬೇರೆಯ ಆತ್ಮನಿರುವನೆನ್ನುವದಕ್ಕಿಲ್ಲ.

4. ಅಂತರ್ಯಾಮಿಯಾಗಿಯೂ ಅಕ್ಷರವೆಂಬ ಹೆಸರಿನ ನಿರ್ವಿಶೇಷಪರಮಾತ್ಮನಾಗಿಯೂ ಇರುವವನಿಗಿಂತ ಬೇರೊಬ್ಬ ಸಂಸಾರ್ಯಾತ್ಮನಿಲ್ಲ ಎಂಬುದು ಈ ಶ್ರುತಿಗಳ ಅರ್ಥ.

5. ೧-೪-೭ರಲ್ಲಿ ಪ್ರಾಣನ್ನೇವ ಪ್ರಾಣೋ ಭವತಿ ಎಂಬುದರ ಪರಾಮರ್ಶವಿದು.

6. ಗಾರ್ಗ್ಯನು ಹೇಳಿದ ಪರಿಚ್ಛಿನ್ನಬ್ರಹ್ಮಗಳಿವು; ಅವನು ಆದಿತ್ಯಾದಿಪುರುಷರನ್ನೇ ಬ್ರಹ್ಮವೆಂದು ತಿಳಿಸಿದ್ದರೂ ಮುಖ್ಯಪ್ರಾಣನನ್ನು ಕರ್ತೃಭೋಕ್ತೃವಲ್ಲವೆಂದು ತಿಳಿಸುವದೇ ಅಜಾತಶತ್ರುವಿನ ಉದ್ದೇಶ.

7. ಕಾರ್ಯಕರಣಸಂಘಾತವು ಯಾವನ ಸಂನಿಧಿಯಲ್ಲಿ ವ್ಯಾಪಾರಮಾಡುತ್ತಿರುವದೋ ಆ ಆತ್ಮನು ಅವಕ್ಕಿಂತ ವಿಲಕ್ಷಣನು ಎಂದು ಸಾಮಾನ್ಯವಾಗಿ ೩-೪-೧ರಲ್ಲಿ ಗೊತ್ತಾಯಿತು; ದೃಷ್ಟಿಗೂ ದ್ರಷ್ಟೃವಾಗಿರುವ ಚೈತನ್ಯಸ್ವರೂಪನು ಎಂದು ವಿಶೇಷವಾಗಿ ೩-೪-೨ರಲ್ಲಿ ಗೊತ್ತಾಯಿತು.

ದಿಂದಲೇ ಸಂಸಾರವು ; ಹೇಗೆ ಹಗ್ಗ, ಮರುಭೂಮಿ, ಕಪ್ಪೆಯಚಿಪ್ಪು, ಆಕಾಶ –ಮುಂತಾದವುಗಳಲ್ಲಿ ಹಾವು, ನೀರು, ಬೆಳ್ಳಿ, ಮಾಲಿನ್ಯ –ಮುಂತಾದವು ಬೇರೆಯ ಉಪಾಧಿಗಳ ಅಧ್ಯಾರೋಪದಿಂದಾದವುಗಳೋ (ಹಾಗೆಯೇ ಹೊರತು) ಸ್ವತಃ (ಆತ್ಮನಲ್ಲಿರು)ವದಲ್ಲ. (ಆತ್ಮನು ಸ್ವತಃ) ಉಪಾಧಿರಹಿತನಾಗಿ(ರುವಾಗ) ನಿರುಪಾಖ್ಯನು, ನೇತಿ ನೇತಿ (ಹೀಗಲ್ಲ, ಹೀಗಲ್ಲ) ಎಂದು ಹೇಳಿಸಿಕೊಳ್ಳತಕ್ಕವನು, ಸಾಕ್ಷಾತ್ ಅಪರೋಕ್ಷಾದ್ ಸರ್ವಾಂತರನಾದ ಆತ್ಮನು, ಬ್ರಹ್ಮವು, ಅಕ್ಷರವು, ಅಂತರ್ಯಾಮಿಯು, ಪ್ರಶಾಸ್ತೃವು, ಔಪನಿಷದಪುರುಷನು, ವಿಜ್ಞಾನವೂ ಆನಂದವೂ ಆದ ಬ್ರಹ್ಮವು –ಎಂದು ಗೊತ್ತುಮಾಡಿದ್ದಾಯಿತು[1]. ಅದನ್ನೇ ಮತ್ತೊಮ್ಮೆ ಇಂಧನೆಂಬ ಹೆಸರಿನ ಪ್ರವಿವಿಕ್ತಾಹಾರನು, ಅದಕ್ಕಿಂತಲೂ (ಮುಂದೆ) ಹೃದಯದೊಳಗಿನ ಲಿಂಗಾತ್ಮನಾಗಿ ಪ್ರವಿವಿಕ್ತಾಹಾರತರನು ಅದಕ್ಕಿಂತಲೂ ಮುಂದೆ ಪ್ರಾಣೋಪಾಧಿಕನಾದ ಜಗದಾತ್ಮನು, ಅದಕ್ಕಿಂತಲೂ (ಮುಂದೆ ಈ) ಉಪಾಧಿಯಾಗಿರುವ ಜಗದಾತ್ಮನನ್ನು ಹಗ್ಗವೇ ಮುಂತಾದವುಗಳಲ್ಲಿ ಸರ್ಪಾದಿಗಳನ್ನು (ಲಯಮಾಡುವಂತೆ) ವಿದ್ಯೆಯಿಂದ ಪ್ರವಿಲಯಮಾಡಿಕೊಂಡರೆ, ಆ ಇವನೇ ನೇತಿ ನೇತಿ ಎಂಬ ಸಾಕ್ಷಾತ್ ಸರ್ವಾಂತರಬ್ರಹ್ಮವು ಎಂದು ಗೊತ್ತುಪಡಿಸಿದ್ದಾಯಿತು. ಈ ರೀತಿಯಲ್ಲಿ ಜನಕನನ್ನು ಯಾಜ್ಞವಲ್ಕ್ಯನು ಆಗಮದಮೂಲಕ ಸಂಕ್ಷೇಪವಾಗಿ ಅಭಯವನ್ನು ಮುಟ್ಟಿಸಿದನು[2]. ಇಲ್ಲಿ ಜಾಗ್ರತ್ಸ್ವಪ್ನಸುಷುಪ್ತತುರೀಯ ಗಳನ್ನು ಮತ್ತೊಂದರ ಪ್ರಸಕ್ತಿಯಿಂದ[3] ಇಂಧನು, ಪ್ರವಿವಿಕ್ತಾಹಾರತರನು, ಸರ್ವಪ್ರಾಣಗಳೂ (ಸರ್ವದಿಕ್ಕುಗಳೇ), ಆ ಇವನು ನೇತಿ ನೇತಿ (ಎಂಬ ಆತ್ಮನು) –ಎಂದು ತಿಳಿಸಿದ್ದಾಯಿತು.

---

1. ಗ್ರಹಾತಿಗ್ರಹಗಳೇ ಬಂಧವೆಂದೂ ಅವುಗಳಿಂದ ಮುಕ್ತರಾದವರಿಗೆ ಮುಕ್ತಿಯೆಂದೂ ಹೇಳಿದ್ದರಿಂದ ಸಂಸಾರವು ಪರೋಪಾಧಿನಿಮಿತ್ತವೆಂದು ಹಿಂದಿನ ಅಧ್ಯಾಯದ ಎರಡು ಬ್ರಾಹ್ಮಣಗಳಲ್ಲಿ ನಿರ್ಣಯವಾಯಿತು. ಮಿಕ್ಕ ಬ್ರಾಹ್ಮಣಗಳಲ್ಲಿ ಆತ್ಮನ ನಿರುಪಾಧಿಕ ಸ್ವರೂಪವನ್ನು ನಿಶ್ಚಯಿಸಿದ್ದಾಯಿತು.

2. ಇದು ಹಿಂದಿನ ಬ್ರಾಹ್ಮಣದ ಸಾರಾಂಶವು. ಜಾಗ್ರತ್ಸ್ವಪ್ನಸುಷುಪ್ತಗಳಲ್ಲಿರುವ ಆತ್ಮಸ್ವರೂಪವನ್ನು ನಿಶ್ಚಯಿಸಿ ಆಗಮದ ಮೂಲಕ ಎಂದರೆ ಉಪದೇಶಪ್ರಧಾನವಾಗಿ ತಿಳಿಸುವದರಿಂದ ಆತ್ಮನ ಸಾಕ್ಷಾತ್ಸ್ವರೂಪವನ್ನು ನಿಶ್ಚಯಿಸಿದ್ದಾಯಿತು ಎಂದರ್ಥ.

3. ಉಪಾಸನೆಗಳಿಗೆ ಕ್ರಮಮುಕ್ತಿಯಾಗುವದು ಎಂದು ತಿಳಿಸುವ ಪ್ರಸಂಗದಿಂದ ಮುಕ್ತನು ಕೊನೆಗೆ ಪಡೆಯುವ ತುರೀಯತ್ವವನ್ನು ಹೇಳಿದ್ದಾಯಿತು. ಪೃಥಿವಿ, ಅಪ್ಪು, ತೇಜಸ್ಸು, ವಾಯು, ಆಕಾಶ– ಇವುಗಳು ಹಿಂದುಹಿಂದಿನದು ಮುಂದುಮುಂದಿನವರಲ್ಲಿ ಓತಪ್ರೋತವಾಗಿರುವಂತೆ ಪರಾರ್ಥವಾದದ್ದೆಲ್ಲವೂ ಸ್ವಾರ್ಥದಲ್ಲಿಯೇ ತಾದಾತ್ಮ್ಯದಿಂದ ಇದ್ದುಕೊಂಡಿರುತ್ತದೆ; ಆದ್ದರಿಂದ ಎಲ್ಲವೂ ಆತ್ಮನೇ ಆಗಿರುವದರಿಂದ ಅದನ್ನು ಪಡೆಯುವದಕ್ಕೆ ಹೋಗಬೇಕಾದದ್ದಿಲ್ಲ –ಎಂಬ ಜ್ಞಾನವೇ ಅಲ್ಲಿ ಉಪದಿಷ್ಟವಾಗಿದೆ ಎಂದು ವಾರ್ತಿಕ. ೪–೨–೨೪,೨೫.

ಈಗ ಜಾಗ್ರತ್ಸ್ವಪ್ನಾದಿದ್ವಾರದಿಂದಲೇ ಮಹಾತರ್ಕದಿಂದ ವಿಸ್ತಾರವಾಗಿ[1] (ಆತ್ಮನ ಸಾಕ್ಷಾತ್ಸ್ವರೂಪದ) ಅರಿವನ್ನು ಮಾಡಿಕೊಡಬೇಕು, ಅಭಯ(ವಾದ ಬ್ರಹ್ಮವನ್ನು) ಮುಟ್ಟಿಸಬೇಕು, ವಿಪ್ರತಿಪತ್ತಿಯ ಆಶಂಕೆಗಳನ್ನು ನಿರಾಕರಣ ಮಾಡುವದರ ಮೂಲಕ ಆತ್ಮನು ಇಪಾನೆಂಬುದನ್ನೂ, (ಅವನು ಕಾರ್ಯಕರಣ ಸಂಘಾತಕ್ಕಿಂತ) ಬೇರೆ ಎಂಬುದನ್ನೂ ಶುದ್ಧನೆಂಬುದನ್ನೂ ಸ್ವಯಂಜ್ಯೋತಿ ಎಂಬುದನ್ನೂ ಅಲುಪ್ತ(ಚೈತನ್ಯ)ಶಕ್ತಿಸ್ವರೂಪನೆಂಬುದನ್ನೂ ನಿರತಿಶಯವಾದ ಆನಂದದ ಸ್ವರೂಪದವನೆಂಬುದನ್ನೂ ಅದ್ವೈತನೆಂಬುದನ್ನೂ ಗೊತ್ತುಪಡಿಸಬೇಕು ಎಂದು ಈ (ಬ್ರಾಹ್ಮಣ)ವನ್ನು ಆರಂಭಿಸಿರುತ್ತದೆ. ಆಖ್ಯಾಯಿಕೆಯೋ ಎಂದರೆ ವಿದ್ಯೆಯನ್ನು (ಉಪದೇಶಮಾಡಿ)ಕೊಡುವದು, ಗ್ರಹಿಸುವದು –ಇವುಗಳ ಪ್ರಕಾರ ವನ್ನು ತಿಳಿಯಪಡಿಸುವದಕ್ಕೆ, ವಿಶೇಷವಾಗಿ ವಿದ್ಯೆಯನ್ನು ಹೊಗಳುವದಕ್ಕೆ (ಬಂದಿದೆ), ಏಕೆಂದರೆ ವರದಾನವೇ ಮುಂತಾದವುಗಳನ್ನು (ಇಲ್ಲಿ) ಸೂಚಿಸಿದೆ[2].

## ಜನಕನು ಯಾಜ್ಞವಲ್ಕ್ಯನನ್ನು ಪ್ರಶ್ನೆಮಾಡಿದ್ದು

(ಉಪನಿಷತ್ತು)

**ಜನಕಗ್ಂ ಹ ವೈದೇಹಂ ಯಾಜ್ಞವಲ್ಕ್ಯೋ ಜಗಾಮ ಸ ಮೇನೇ ನ ವದಿಷ್ಯ ಇತ್ಯಥ ಹ ಯಜ್ಜನಕಶ್ಚ ವೈದೇಹೋ ಯಾಜ್ಞವಲ್ಕ್ಯಶ್ಚಾಗ್ನಿಹೋತ್ರೇ ಸಮೂದಾತೇ ತಸ್ಮೈ ಹ ಯಾಜ್ಞ ವಲ್ಕ್ಯೋ ವರಂ ದದೌ ಸ ಹ ಕಾಮಪ್ರಶ್ನಮೇವ ವವ್ರೇ ತಗ್ಂ ಹಾಸ್ಮೈ ದದೌ ತಗ್ಂ ಹ ಸಮ್ರಾಡೇವ ಪೂರ್ವಂ ಪಪ್ರಚ್ಛ॥ ೧ ॥**

೧. ಜನಕವೈದೇಹನ ಬಳಿಗೆ ಯಾಜ್ಞವಲ್ಕ್ಯನು ಬಂದನು. ಅವನು ಹೇಳುವದಿಲ್ಲ ಎಂದು ಭಾವಿಸಿಕೊಂಡಿದ್ದನು. ಆದರೆ ಜನಕ ವೈದೇಹನೂ ಯಾಜ್ಞವಲ್ಕ್ಯನೂ ಅಗ್ನಿಹೋತ್ರ(ನಿಮಿತ್ತ)ವಾಗಿ ಸಂವಾದಮಾಡಿದಾಗ ಯಾಜ್ಞವಲ್ಕ್ಯನು ವರವನ್ನು ಕೊಟ್ಟಿದ್ದ ನಂತೆ; ಅವನು ಕಾಮಪ್ರಶ್ನವನ್ನೇ ವರಿಸಿದ್ದನಂತೆ; ಅದನ್ನೇ ಅವನಿಗೆ (ಯಾಜ್ಞವಲ್ಕ್ಯನು) ಕೊಟ್ಟಿದ್ದನಂತೆ. ಆ (ಯಾಜ್ಞವಲ್ಕ್ಯನನ್ನು ಈಗ) ಸಮ್ರಾಜನೇ ಮೊದಲು ಪ್ರಶ್ನೆಮಾಡಿದನು.

---

1. ಹಿಂದೆ ಹೇಳಿದ್ದು ಆಗಮಪ್ರಧಾನವಾಗಿ, ಇಲ್ಲಿ ಅದನ್ನೇ ವಿಸ್ತಾರವಾಗಿ ತರ್ಕದಿಂದ ಉಪಪಾದನೆಮಾಡುತ್ತದೆ.

2. ತತ್ತ್ವನಿರ್ಣಯಾರ್ಥವಾಗಿ ಮಾಡುವ ವಾದದಿಂದಲೇ ವಿದ್ಯೆಯನ್ನು ಗ್ರಹಿಸ ಬೇಕೆಂಬುದು ಗ್ರಹಣಪ್ರಕಾರ. ಜನಕನು ಬ್ರಹ್ಮವಿದ್ಯೆಯನ್ನೇ ಕಾಮಪ್ರಶ್ನಕ್ಕೆ ಗುರಿಯಾಗಿ ಮಾಡಿಕೊಂಡನೆಂಬುದು ವಿದ್ಯೆಯ ಸ್ತುತಿ.

(ಭಾಷ್ಯ)

೧೫೮. ಜನಕಂ ಹ ವೈದೇಹಂ ಯಾಜ್ಞವಲ್ಕ್ಯೋ ಜಗಾಮ। ಸ ಚ ಗಚ್ಛನ್ ಏವಂ ಮೇನೇ ಚಿನ್ತಿತವಾನ್ ನ ವದಿಷ್ಯೇ ಕಿಂಚಿದಪಿ ರಾಜ್ಞೇ। ಗಮನ ಪ್ರಯೋಜನಂ ತು ಯೋಗಕ್ಷೇಮಾರ್ಥಮ್। ನ ವದಿಷ್ಯೇ ಇತ್ಯೇವಂ ಸಂಕಲ್ಪೋಽಪಿ ಯಾಜ್ಞವಲ್ಕ್ಯೋ ಯದ್ಯತ್ ಜನಕಃ ಪೃಷ್ಟವಾನ್ ತತ್ ತತ್ ಪ್ರತಿಪೇದೇ ತತ್ರ ಕೋ ಹೇತುಃ ಸಂಕಲ್ಪಿತಸ್ಯ ಅನ್ಯಥಾಕರಣೇ? ಇತ್ಯತ್ರ ಆಖ್ಯಾಯಿಕಾಮ್ ಆಚಷ್ಟೇ। ಪೂರ್ವತ್ರ ಕಿಲ ಜನಕಯಾಜ್ಞವಲ್ಕ್ಯಯೋಃ ಸಂವಾದ ಆಸೀತ್ ಅಗ್ನಿಹೋತ್ರೇ ನಿಮಿತ್ತೇ। ತತ್ರ ಜನಕಸ್ಯ ಅಗ್ನಿಹೋತ್ರವಿಷಯಂ ವಿಜ್ಞಾನಮ್ ಉಪಲಭ್ಯ ಪರಿತುಷ್ಟೋ ಯಾಜ್ಞವಲ್ಕ್ಯಃ ತಸ್ಮೈ ಜನಕಾಯ ಹ ಕಿಲ ವರಂ ದದೌ। ಸ ಚ ಜನಕೋ ಹ ಕಾಮಪ್ರಶ್ನಮೇವ ವರಂ ವವ್ರೇ ವೃತವಾನ್। ತಂ ಚ ವರಂ ಹ ಅಸ್ಮೈ ದದೌ ಯಾಜ್ಞವಲ್ಕ್ಯಃ। ತೇನ ವರಪ್ರದಾನಸಾಮರ್ಥ್ಯೇನ ಅವ್ಯಾಚಿಖ್ಯಾಸುಮಪಿ ಯಾಜ್ಞವಲ್ಕ್ಯಂ ತೂಷ್ಣೀಂ ಸ್ಥಿತಮಪಿ ಸಮ್ರಾಡೇವ ಜನಕಃ ಪೂರ್ವಂ ಪಪ್ರಚ್ಛ। ತತ್ರೈವ ಅನುಕ್ತಿಃ ಬ್ರಹ್ಮವಿದ್ಯಾಯಾಃ ಕರ್ಮಣಾ ವಿರುದ್ಧತ್ವಾತ್। ವಿದ್ಯಾಯಾಶ್ಚ ಸ್ವಾತನ್ತ್ರ್ಯಾತ್। ಸ್ವತನ್ತ್ರಾ ಹಿ ಬ್ರಹ್ಮವಿದ್ಯಾ ಸಹಕಾರಿಸಾಧನಾನ್ತರನಿರಪೇಕ್ಷಾ ಪುರುಷಾರ್ಥ ಸಾಧನೇತಿ ಚ ॥

(ಭಾಷ್ಯಾರ್ಥ)

ಜನಕವೈದೇಹನ ಬಳಿಗೆ ಯಾಜ್ಞವಲ್ಕ್ಯನು ಬಂದನು. ಅವನು ಬರುತ್ತಿರುವಾಗ ಹೀಗೆಂದು ಭಾವಿಸಿಕೊಂಡಿದ್ದನು, ಯೋಚಿಸಿಕೊಂಡಿದ್ದನು, ರಾಜನಿಗೆ ಏನನ್ನೂ ಹೇಳುವದಿಲ್ಲ, ಬಂದಿರುವದು ಮಾತ್ರ ಯೋಗಕ್ಷೇಮಕ್ಕಾಗಿ.[1] ಹೇಳುವದಿಲ್ಲ ಎಂಬೀ ಸಂಕಲ್ಪವುಳ್ಳವನಾಗಿದ್ದರೂ ಯಾಜ್ಞವಲ್ಕ್ಯನು ಜನಕನು ಯಾವಯಾವದನ್ನು ಕೇಳಿದನೋ ಅದನ್ನು ತಿಳಿಸಿದನಲ್ಲ, ಸಂಕಲ್ಪಿಸಿದ್ದನ್ನು ಬೇರ್ಪಡಿಸಿದನಲ್ಲ, ಅದಕ್ಕೆ ಕಾರಣವೇನು? –ಎಂಬಲ್ಲಿ (ಶ್ರುತಿಯು ಹಿಂದಿನ) ಆಖ್ಯಾಯಿಕೆಯನ್ನು ಹೇಳುತ್ತದೆ. ಹಿಂದೆ ಜನಕಯಾಜ್ಞವಲ್ಕ್ಯರಿಗೆ ಅಗ್ನಿಹೋತ್ರನಿಮಿತ್ತವಾಗಿ ಸಂವಾದವಾಗಿತ್ತಂತೆ; ಆಗ ಅಗ್ನಿಹೋತ್ರವಿಷಯವಾಗಿ ಜನಕನಿಗಿದ್ದ ವಿಜ್ಞಾನವನ್ನು ಕಂಡು ಪರಿತುಷ್ಟನಾದ ಯಾಜ್ಞವಲ್ಕ್ಯನು, ಆ ಜನಕನಿಗೆ ವರವನ್ನು (ಹ= ಕಿಲ) ಕೊಟ್ಟನಂತೆ; ಆ ಜನಕನು ಕಾಮಪ್ರಶ್ನೆವೆಂಬ ವರವನ್ನೇ ವರಿಸಿದನಂತೆ, ಬೇಡಿಕೊಂಡನಂತೆ. ಆ ವರವನ್ನು ಯಾಜ್ಞ

1 ರಾಜನಿಂದ ತನ್ನ ಯಜ್ಞಾದಿಕರ್ಮಾನುಷ್ಠಾನಕ್ಕೂ ಕುಟುಂಬರಕ್ಷಣೆಗೂ ಬೇಕಾದದ್ದನ್ನು ಪ್ರತಿಗ್ರಹಮಾಡುವದಕ್ಕಾಗಿ.

ವಲ್ಕ್ಯನು ಅವನಿಗೆ ಕೊಟ್ಟು ಇದ್ದನು.[1] ಆ (ವರ)ದಾನಸಾಮರ್ಥ್ಯದಿಂದ, ಮಾತನಾಡುವದಿಲ್ಲವೆಂದು ಸುಮ್ಮನೆ ಇದ್ದ ಯಾಜ್ಞವಲ್ಕ್ಯನನ್ನು ಸಮ್ರಾಜನಾದ ಜನಕನೇ ಮೊದಲು ಪ್ರಶ್ನೆ ಮಾಡಿದನು.

ಅಲ್ಲಿಯೇ (ಇದನ್ನು) ಹೇಳದೆ ಇರುವದು[2] (ಏಕೆಂದರೆ), ಬ್ರಹ್ಮವಿದ್ಯೆಯು ಕರ್ಮಕ್ಕೆ ವಿರುದ್ಧವಾಗಿರುವದರಿಂದ[3] ವಿದ್ಯೆಯು ಸ್ವತಂತ್ರವಾಗಿರುವದರಿಂದಲೂ (ಅಲ್ಲಿ ಹೇಳಲಿಲ್ಲ); ಬ್ರಹ್ಮವಿದ್ಯೆಯು ಸಹಕಾರಿಸಾಧನಗಳನ್ನು ಬಯಸದೆಯೇ ಸ್ವತಂತ್ರವಾಗಿಯೇ ಪುರುಷಾರ್ಥಕ್ಕೆ ಸಾಧನವಾಗಿರುವದಷ್ಟೆ[4].

## ಈ ಪುರುಷನ ವ್ಯವಹಾರಕ್ಕೆ ಸೂರ್ಯನ ಬೆಳಕು ಬೇಕು

(ಉಪನಿಷತ್ತು)

**ಯಾಜ್ಞವಲ್ಕ್ಯ ಕಿಂಜ್ಯೋತಿರಯಂ ಪುರುಷ ಇತಿ । ಆದಿತ್ಯಜ್ಯೋತಿಃ ಸಮ್ರಾಡಿತಿ ಹೋವಾಚಾದಿತ್ಯೇನೈವಾಯಂ ಜ್ಯೋತಿ**

---

1. ಶ್ವೇತಕೇತು, ಆರುಣೇಯ, ಸೋಮಶುಷ್ಮ, ಸಾತ್ಯಯಜ್ಞಿ, ಯಾಜ್ಞವಲ್ಕ್ಯ- ಇವರು ಜನಕನಲ್ಲಿಗೆ ಬಂದರೆಂದೂ ಅವರನ್ನು ಅಗ್ನಿಹೋತ್ರವಿಷಯವಾಗಿ ರಾಜನು ಪ್ರಶ್ನಿಸಿದನೆಂದೂ ಆ ಸಂದರ್ಭದಲ್ಲಿ ಯಾಜ್ಞವಲ್ಕ್ಯನಿಗೂ ತಿಳಿಯದಿದ್ದ ಕೆಲವು ವಿಷಯಗಳನ್ನು ಅವನು ಹೇಳಿದನೆಂದೂ ಅದರಿಂದ ಪರಿತುಷ್ಟನಾಗಿ ಯಾಜ್ಞವಲ್ಕ್ಯನು ಮೇಲೆ ಹೇಳಿದಂತೆ ಕಾಮಪ್ರಶ್ನವರವನ್ನು ಕೊಟ್ಟನೆಂದೂ ಕಥೆ. ಶತ. ಬ್ರಾ. ೧೧-೬-೨ನ್ನು ನೋಡಿರಿ. ಹೀಗೆ ಕಾಮಪ್ರಶ್ನವನ್ನು ಕೊಟ್ಟಿದ್ದರೂ ನಿಷ್ಕಾರಣವಾಗಿ ಏನೂ ಮಾತಾಡುವದಿಲ್ಲವೆಂದು ಸಂಕಲ್ಪಿಸುವದೂ ಜನಕನು ಏನೂ ತಿಳಿಯದೆ ಅವನನ್ನು ಮಾತಾಡಿಸುವದೂ ಹೊಂದುವದಿಲ್ಲವಾದ್ದರಿಂದ 'ಸಮ್ ಏನೇನ ವದಿಷ್ಯೇ' ಎಂದು ಪದಚ್ಛೇದವನ್ನು ಮಾಡಿ ಇವನೊಡನೆ ಸಂವಾದವನ್ನು ಮಾಡುವೆನು ಎಂದು ಯಾಜ್ಞವಲ್ಕ್ಯನು ಬಂದನು -ಎಂಬರ್ಥವನ್ನು ವಾರ್ತಿಕ (೪-೩-೧೦, ೧೩,೧೪)ದಲ್ಲಿ ತೆಗೆದಿರುತ್ತದೆ. ಸಮ್ ಎಂಬ ಉಪಸರ್ಗದ ಸಂಬಂಧದಿಂದ ವದಿಷ್ಯೇ ಎಂಬ ಆತ್ಮನೇಪದಪ್ರಯೋಗವಾಗಿರುವದು ಅದಕ್ಕೆ ಅನುಗುಣವಾಗುತ್ತದೆ.

2. ರಾಜನು ಕೇಳದೆ ಇರುವದು ಎಂದು ವಾರ್ತಿಕದ ಅರ್ಥ. ಶ್ರುತಿಯಲ್ಲಿ ಆತ್ಮವಿಷಯದ ಪ್ರಶ್ನಪ್ರತಿವಚನಗಳನ್ನು ತಿಳಿಸದೆ ಇರುವದು ಎಂದಿಷ್ಟೇ ಅರ್ಥವನ್ನು ಮಾಡಿದರೆ ಸಾಕೆಂದು ಕಾಣುತ್ತದೆ "ತತೋ ಬ್ರಹ್ಮಾ ಜನಕ ಆಸ" ಆದರಿಂದ ಜನಕನು ಬ್ರಹ್ಮಿಷ್ಠನಾದನು- ಎಂದಿಷ್ಟೇ ಅಲ್ಲಿ ಸೂಚಿತವಾಗಿದೆ, ವಿವರವಿಲ್ಲ.

3. ಕ್ರಿಯಾಕಾರಕಫಲಗಳು ಅಸತ್ಯವೆಂದೇ ತಿಳಿಸುತ್ತದೆಯಾದ್ದರಿಂದ ಜ್ಞಾನವು ಕರ್ಮಕ್ಕೆ ವಿರುದ್ಧ.

4 ಜ್ಞಾನೋತ್ಪತ್ತಿಗೆ ಸಾಧನಗಳು ಬೇಕಾದರೂ ಫಲವನ್ನು ಕೊಡುವದಕ್ಕೆ ಯಾವ ಸಾಧನದ ಸಹಾಯವೂ ಅದಕ್ಕೆ ಬೇಡ. ಸೂ.ಭಾ. ೩-೪-೧ (ಭಾ.ಭಾ. ೪೩೭), ೩-೪-೨೬ (ಭಾ.ಭಾ. ೪೩೯, ೪೭೦). ಕರ್ಮಫಲಗಳು ಸಹಕಾರಿಗಳೆಂದು ಬ್ರಹ್ಮಸೂತ್ರ ೩-೪-೩೩ರಲ್ಲಿರುವದು ಇದಕ್ಕೆ ವಿರುದ್ಧವಲ್ಲ. ಭಾ.ಭಾ. ೪೭೭ನ್ನು ನೋಡಿ.

**ಷಾಽಽಸ್ತೇ ಪಲ್ಯಯತೇ ಕರ್ಮ ಕುರುತೇ ವಿಪಲ್ಯೇತೀತ್ಯೇವ ಮೇವೈತದ್ಯಾಜ್ಞವಲ್ಕ್ಯ ॥ ೨ ॥**

೨. "ಯಾಜ್ಞವಲ್ಕ್ಯನೆ, ಈ ಪುರುಷನು ಯಾವ ಜ್ಯೋತಿಯುಳ್ಳವನು?"[1] "ಸಮ್ರಾಜನೆ, ಆದಿತ್ಯಜ್ಯೋತಿಯುಳ್ಳವನು; ಆದಿತ್ಯನೆಂಬ ಜ್ಯೋತಿಯಿಂದಲೇ ಇವನು ಕುಳಿತಿರುತ್ತಾನೆ, ಹೋಗುತ್ತಾನೆ, ಕರ್ಮವನ್ನು ಮಾಡುತ್ತಾನೆ, ಹಿಂತಿರುಗಿ ಬರುತ್ತಾನೆ." "ಯಾಜ್ಞವಲ್ಕ್ಯನೆ, ಇದು ಹೀಗೆಯೇ(ಸರಿ),—"[2]

## ಜನಕಪ್ರಶ್ನೆಯ ಅಭಿಪ್ರಾಯ

(ಭಾಷ್ಯ)

**ಗರ್ಭ ಹೇ ಯಾಜ್ಞವಲ್ಕ್ಯ ಇತ್ಯೇವಂ ಸಂಬೋಧ್ಯ ಅಭಿಮುಖೀಕರಣಾಯ । ಕಿಂಜ್ಯೋತಿರಯಂ ಪುರುಷಃ ? ಇತಿ । ಕಿಮಸ್ಯ ಪುರುಷಸ್ಯ ಜ್ಯೋತಿರ್ಯೇನ ಜ್ಯೋತಿಷಾ ವ್ಯವಹರತಿ ಸೋಽಯಂ ಕಿಂಜ್ಯೋತಿಃ । ಅಯಂ •ಪ್ರಾಕೃತಃ ಕಾರ್ಯಕರಣಸಂಘಾತರೂಪಃ ಶಿರಃಪಾಣ್ಯಾದಿಮಾನ್ ಪುರುಷಃ ಪೃಚ್ಛ್ಯತೇ । ಕಿಮಯಂ ಸ್ವಾವಯವಸಂಘಾತಬಾಹ್ಯೇನ ಜ್ಯೋತಿರನ್ತರೇಣ ವ್ಯವಹರತಿ, ಆಹೋಸ್ವಿತ್ ಸ್ವಾವಯವಸಂಘಾತಮಧ್ಯಪಾತಿನಾ ಜ್ಯೋತಿಷಾ ಜ್ಯೋತಿಷ್ಕಾರ್ಯಮಯಂ ಪುರುಷೋ ನಿರ್ವರ್ತಯತಿ? ಇತ್ಯೇತದಭಿಪ್ರೇತ್ಯ ಪೃಚ್ಛತಿ । ಕಿಂಚಾತಃ ಯದಿ ವ್ಯತಿರಿಕ್ತೇನ, ಯದಿ ವಾ ಅವ್ಯತಿರಿಕ್ತೇನ ಜ್ಯೋತಿಷಾ ಜ್ಯೋತಿಷ್ಕಾರ್ಯಂ ನಿರ್ವರ್ತಯತಿ? ಶೃಣು ತತ್ರ ಕಾರಣಮ್ । ಯದಿ ವ್ಯತಿರಿಕ್ತೇನೈವ ಜ್ಯೋತಿಷಾ ಜ್ಯೋತಿಷ್ಕಾರ್ಯನಿರ್ವರ್ತಕತ್ವಮ್ ಅಸ್ಯ ಸ್ವಭಾವೋ ನಿರ್ಧಾರಿತೋ ಭವತಿ, ತತೋಽದೃಷ್ಟಜ್ಯೋತಿಷ್ಕಾರ್ಯವಿಷಯೇಽಪಿ ಅನುಮಾಸ್ಯಾಮಹೇ ವ್ಯತಿರಿಕ್ತಜ್ಯೋತಿರ್ನಿಮಿತ್ತಮೇವೇದಂ ಕಾರ್ಯಮಿತಿ । ಅಥ ಅವ್ಯತಿರಿಕ್ತೇನೈವ ಸ್ವಾತ್ಮನಾ ಜ್ಯೋತಿಷಾ ವ್ಯವಹರತಿ । ತತಃ ಅಪ್ರತ್ಯಕ್ಷೇಽಪಿ ಜ್ಯೋತಿಷಿ ಜ್ಯೋತಿಷ್ಕಾರ್ಯದರ್ಶನೇ ಅವ್ಯತಿರಿಕ್ತಮೇವ ಜ್ಯೋತಿರನುಮೇಯಮ್ । ಅಥ ಅನಿಯಮ ಏವ, ವ್ಯತಿರಿಕ್ತಮವ್ಯತಿರಿಕ್ತಂ ವಾ ಜ್ಯೋತಿಃ ಪುರುಷಸ್ಯ ವ್ಯವಹಾರಹೇತುಃ, ತತೋಽನಧ್ಯವಸಾಯ ಏವ**

---

1. ಹಿಂದಿನ ವಾಕ್ಯದಲ್ಲಿರುವ "ಪ್ರಶ್ನೆಮಾಡಿದನು" ಎಂಬುದನ್ನು ಸೇರಿಸಿಕೊಂಡು ಅನ್ವಯಿಸಿಕೊಳ್ಳಬೇಕು.

2. "ಆದಿತ್ಯನು ಅಸ್ತಮಿತನಾದರೆ ಈ ಪುರುಷನು ಯಾವ ಜ್ಯೋತಿಯುಳ್ಳವನು ?" ಎಂಬ ಪ್ರಶ್ನವಾಕ್ಯಕ್ಕೆ ಇದನ್ನು ಸೇರಿಸಿಕೊಂಡು ಅನ್ವಯಿಸಬೇಕು. ಮುಂದಿನ ಕಂಡಿಕೆಯಲ್ಲಿಯೂ ಹೀಗೆಯೇ ಮುಂದುಮುಂದಕ್ಕೆ ಅನ್ವಯಿಸಬೇಕು.

ಜ್ಯೋತಿರ್ವಿಷಯಃ ಇತ್ಯೇವಂ ಮನ್ವಾನಃ ಪೃಚ್ಛತಿ ಜನಕೋ ಯಾಜ್ಞವಲ್ಕ್ಯಂ ಕಿಂಜ್ಯೋತಿರಯಂ ಪುರುಷ ಇತಿ ॥

(ಭಾಷ್ಯಾರ್ಥ)

ತನ್ನ ಕಡೆಗೆ ತಿರುಗಿಸಿಕೊಳ್ಳುವದಕ್ಕಾಗಿ 'ಎಲೈ ಯಾಜ್ಞವಲ್ಕ್ಯನೆ', ಎಂದಿಂತು ಸಂಬೋಧನೆಮಾಡಿ (ಹೀಗೆಂದು ಕೇಳಿದನು). ಈ ಪುರುಷನು ಯಾವ ಜ್ಯೋತಿಯುಳ್ಳವನು ? (ಇವನು) ಯಾವ ಜ್ಯೋತಿಯಿಂದ ವ್ಯವಹರಿಸುತ್ತಿರುವನೋ ಆ ಈ ಪುರುಷನ ಜ್ಯೋತಿ ಯಾವದು ? ಆ ಇವನು ಯಾವ ಜ್ಯೋತಿಯುಳ್ಳವನು ?[1] ಈ ಪ್ರಾಕೃತವಾದ ಕಾರ್ಯಕರಣಸಂಘಾತರೂಪವಾದ ತಲೆ ಕೈ ಮುಂತಾದವುಗಳುಳ್ಳ ಪುರುಷನನ್ನು ಕುರಿತು (ಇಲ್ಲಿ) ಕೇಳಿದೆ. ಈ (ಪುರುಷನು) ತನ್ನ ಅವಯವಸಂಘಾತಕ್ಕಿಂತ ಹೊರಚ್ಚಾಗಿರುವ ಮತ್ತೊಂದು ಜ್ಯೋತಿಯಿಂದ ವ್ಯವಹರಿಸುತ್ತಿದಾನೊ, ಅಥವಾ ತನ್ನ ಅವಯವ ಸಂಘಾತಕ್ಕೇ ಸೇರಿಕೊಂಡಿರುವ ಜ್ಯೋತಿಯಿಂದ ಜ್ಯೋತಿಷ್ಕಾರ್ಯವನ್ನು ಈ ಪುರುಷನು ಮಾಡಿಕೊಳ್ಳುತ್ತಿರುವನೊ ಎಂದೆಂಬೀ ಅಭಿಪ್ರಾಯದಿಂದ (ಜನಕನು) ಕೇಳುತ್ತಿದಾನೆ [2]

(ಪ್ರಶ್ನೆ) :- ವ್ಯತಿರಿಕ್ತವಾದ (ಜ್ಯೋತಿಯಿಂದ) ಜ್ಯೋತಿಷ್ಕಾರ್ಯವನ್ನು ಮಾಡಿಕೊಳ್ಳಲಿ, ಅಥವಾ ಅವ್ಯತಿರಿಕ್ತವಾದ ಜ್ಯೋತಿಯಿಂದ (ಮಾಡಿಕೊಳ್ಳಲಿ), ಅದರಿಂದ ಏನು (ಪ್ರಯೋಜನವಾಗುವದು) ?

(ಉತ್ತರ) :- ಇಲ್ಲಿ ಪ್ರಯೋಜನವನ್ನು (ಹೇಳುವೆವು) ಕೇಳು ವ್ಯತಿರಿಕ್ತವಾದ ಜ್ಯೋತಿಯಿಂದಲೇ ಜ್ಯೋತಿಷ್ಕಾರ್ಯವನ್ನು ಮಾಡಿಕೊಳ್ಳುತ್ತಿದಾನೆಂಬುದೇ ಇವನ ಸ್ವಭಾವವೆಂದು ನಿಶ್ಚಯವಾಗುತ್ತದೆಯಾದರೆ, ಆಗ ಅದೃಷ್ಟವಾದ ಜ್ಯೋತಿಷ್ಕಾರ್ಯವಿಷಯದಲ್ಲಿಯೂ ವ್ಯತಿರಿಕ್ತವಾದ ಜ್ಯೋತಿಯು ನಿಮಿತ್ತದಿಂದಲೇ ಈ ಕಾರ್ಯವು ಆಗುತ್ತದೆ ಎಂದು (ನಾವು) ಅನುಮಾನಿಸಬಹುದಾಗುವದು. ಹಾಗಿಲ್ಲದೆ ಅವ್ಯತಿರಿಕ್ತವಾದ ಸ್ವರೂಪವಾದ ಜ್ಯೋತಿಯಿಂದಲೇ ವ್ಯವಹರಿಸುತ್ತಾನೆ (ಎಂದಾದರೆ), ಆಗ ಜ್ಯೋತಿಯು ಅಪ್ರತ್ಯಕ್ಷವಾಗಿರುವಾಗಲೂ ಜ್ಯೋತಿಷ್ಕಾರ್ಯವನ್ನು ಕಂಡಾಗ ಅವ್ಯತಿರಿಕ್ತವಾದ ಜ್ಯೋತಿಯನ್ನೇ ಅನುಮಾನಿಸಬೇಕಾಗುವದು. ಹೀಗಲ್ಲದೆ, ನಿಯಮವೇ ಇಲ್ಲ, ವ್ಯತಿರಿಕ್ತವೋ ಅವ್ಯತಿ

---

1. "ಕಿಂ ಜ್ಯೋತಿಃ ಅಸ್ಯ ಸೋಽಯಂ ಕಿಂಜ್ಯೋತಿಃ" ಎಂಬುದು ಸಮಾಸಕ್ಕೆ ವಿಗ್ರಹವಾಕ್ಯ.

2. ಶರೀರಕರಣಗಳ ಸಂಘಾತವು ಬೇರೆಬೇರೆಯ ಕೆಲಸಗಳನ್ನು ಮಾಡುತ್ತಿರುವದಷ್ಟೆ, ಇದಕ್ಕೆ ಬೇಕಾದ ವ್ಯವಹಾರಸಾಧನವಾದ ಬೆಳಕು ಯಾವದು ? ಸಂಘಾತಕ್ಕೇ ಸೇರಿದ್ದೊ, ಅದಕ್ಕಿಂತ ವಿಲಕ್ಷಣವಾದದ್ದೊ ?- ಎಂಬುದು ಪ್ರಶ್ನೆ.

ರಿಕ್ತವೋ (ಯಾವದೋ ಒಂದು) ಜ್ಯೋತಿಯು ಪುರುಷನ ವ್ಯವಹಾರಕ್ಕೆ ಹೇತುವೆಂದಾದರೆ, ಆಗ ಜ್ಯೋತಿಯ ವಿಷಯದಲ್ಲಿ ಯಾವ ನಿಶ್ಚಯವನ್ನೂ (ಮಾಡುವದಕ್ಕೆ) ಬರುವದಿಲ್ಲ. ಹೀಗೆಂದು ತಿಳಿದು ಜನಕನು ಯಾಜ್ಞವಲ್ಕ್ಯರನ್ನು "ಈ ಪುರುಷನು ಯಾವ ಜ್ಯೋತಿಯುಳ್ಳವನು ?" ಎಂದು ಪ್ರಶ್ನಿಸಿರುತ್ತಾನೆ.

## ಜನಕನು ತಾನೇ ನಿರ್ಧರಿಸಲಿಲ್ಲವೇಕೆ ?

(ಭಾಷ್ಯ)

೧೬೦. ನನು ಏವಮನುಮಾನಕೌಶಲೇ ಜನಕಸ್ಯ ಕಿಂ ಪ್ರಶ್ನೇನ, ಸ್ವಯಮೇವ ಕಸ್ಮಾತ್ ನ ಪ್ರತಿಪದ್ಯತೇ ಇತಿ ? ಸತ್ಯಮೇತತ್ । ತಥಾಪಿ ಲಿಙ್ಗಲಿಙ್ಗಿಸಂಬನ್ಧವಿಶೇಷಾಣಾಮ್ ಅತ್ಯನ್ತಸೌಕ್ಷ್ಮ್ಯಾತ್ ದುರವಬೋಧತಾಂ ಮನ್ಯತೇ ಬಹೂನಾಮಪಿ ಪಣ್ಡಿತಾನಾಮ್, ಕಿಮುತೈಕಸ್ಯ । ಅತ ಏವ ಹಿ ಧರ್ಮಸೂಕ್ಷ್ಮನಿರ್ಣಯೇ ಪರಿಷದ್ವ್ಯಾಪಾರಃ ಇಷ್ಯತೇ ಪುರುಷವಿಶೇಷಶ್ಚಾಪೇಕ್ಷ್ಯತೇ । ದಶಾವರಾ ಪರಿಷತ್, ತ್ರಯೋ ವಾ, ಏಕೋ ವಾ ಇತಿ । ತಸ್ಮಾತ್ ಯದ್ಯಪಿ ಅನುಮಾನಕೌಶಲಂ ರಾಜ್ಞಃ ತಥಾಪಿ ತು ಯುಕ್ತೋ ಯಾಜ್ಞವಲ್ಕ್ಯಃ ಪ್ರಷ್ಟುಮ್ । ವಿಜ್ಞಾನಕೌಶಲತಾರತಮ್ಯೋಪಪತ್ತೇಃ ಪುರುಷಾಣಾಮ್ । ಅಥವಾ ಶ್ರುತಿಃ ಸ್ವಯಮೇವ ಆಖ್ಯಾಯಿಕಾವ್ಯಾಜೇನ ಅನುಮಾನಮಾರ್ಗಮ್ ಉಪನ್ಯಸ್ಯ ಅಸ್ಮಾನ್ ಬೋಧಯತಿ ಪುರುಷಮತಿಮ್ ಅನುಸರನ್ತೀ ॥

(ಭಾಷ್ಯಾರ್ಥ)

(ಆಕ್ಷೇಪ) :- ಜನಕನಿಗೆ ಇಂಥ ಅನುಮಾನಕೌಶಲವಿದೆಯಾದರೆ ಪ್ರಶ್ನೆಯಿಂದೇನು ? ತಾನೇ ಏತಕ್ಕೆ ನಿಶ್ಚಯಿಸಬಾರದು ?

(ಪರಿಹಾರ) :- ಇದು ನಿಜ. ಆದರೂ ಲಿಂಗಲಿಂಗಿಗಳ ಸಂಬಂಧವಿಶೇಷಗಳು ಅತ್ಯಂತಸೂಕ್ಷ್ಮವಾಗಿರುವದರಿಂದ ಬಹುಜನ ಪಂಡಿತರಿಗೂ (ಇದು) ತಿಳಿಯುವದಕ್ಕೆ ಕಷ್ಟವೆಂದು ಎಣಿಸಿರುತ್ತಾನೆ; (ಇನ್ನು) ಒಬ್ಬನಿಗೇ (ತಿಳಿಯುವದು ಕಷ್ಟವೆಂಬುದನ್ನು) ಹೇಳತಕ್ಕದ್ದೇನು ? ಆದ್ದರಿಂದಲೇ ಅಲ್ಲವೆ, ಧರ್ಮಸೂಕ್ಷ್ಮವನ್ನು ನಿರ್ಣಯಿಸುವಲ್ಲಿ ಪರಿಷತ್ತಿನ ವ್ಯಾಪಾರವು ಬೇಕೆನ್ನುವದು, ಇಂಥಿಂಥ ಪುರುಷರೇ ಬೇಕೆನ್ನುವದು ? ಪರಿಷತ್ತು ದಶಾವರವಾಗಿರಬೇಕು, ಅಥವಾ ಮೂವರು, ಅಥವಾ ಒಬ್ಬನು[1] (ಇರಬೇಕು) ಎಂದು (ಪುರುಷವಿಶೇಷ

---

1. ವೈದಿಕವಿದ್ಯೆಯನ್ನು ಬಲ್ಲವನು, ಶ್ರುತ್ಯವಿರುದ್ಧನ್ಯಾಯವನ್ನು ಬಲ್ಲವನು, ಮೀಮಾಂಸಾರೂಪತರ್ಕವನ್ನು ಬಲ್ಲವನು, ನಿರುಕ್ತವನ್ನು ಬಲ್ಲವನು, ಧರ್ಮಶಾಸ್ತ್ರಜ್ಞನು, ಬ್ರಹ್ಮಚಾರಿ, ಗೃಹಸ್ಥ, ವಾನಪ್ರಸ್ಥ- ಇವರಿಂದೊಡಗೂಡಿ ಹತ್ತುಜನಕ್ಕೆ ಕಡಿಮೆಯಿಲ್ಲದ್ದು ದಶಾವರಪರಿಷತ್ತು. ಮನು. ೧೨-೧೧೧. ಮೂರು ವೇದಗಳನ್ನು ಬಲ್ಲವರು ಮೂರು ಜನವಿರುವದು ತ್ರ್ಯವರಪರಿಷತ್ತು. ವೇದಾರ್ಥಜ್ಞಾನಿಯೊಬ್ಬನೇ ಇದ್ದರೂ ಆಗಬಹುದು- ಎಂದು ಮನು. ೧೨-೧೧೨, ೧೧೩.

ವನ್ನು) ಬಯಸುತ್ತಾರೆ. ಆದ್ದರಿಂದ ರಾಜನಿಗೆ ಅನುಮಾನಕೌಶಲವಿದ್ದರೂ, ಹಾಗೂ ಯಾಜ್ಞವಲ್ಕ್ಯನನ್ನು ಕೇಳುವದು ಯುಕ್ತವೇ ಏಕೆಂದರೆ ವಿಜ್ಞಾನ ಕೌಶಲದಲ್ಲಿ ಪುರುಷರಲ್ಲಿ ತಾರತಮ್ಯವಿರಬಹುದಾಗಿದೆ.[1] ಅಥವಾ ಶ್ರುತಿಯು ತಾನೇ ಆಖ್ಯಾಯಿಕೆಯ ನೆಪದಿಂದ ಅನುಮಾನಮಾರ್ಗವನ್ನು ಹೇಳಿ ಪುರುಷ ಮತಿಯನ್ನು ಅನುಸರಿಸಿಯೇ ನಮಗೆ (ನಿಜವನ್ನು) ತಿಳಿಸಿಕೊಡುತ್ತಿದೆ (ಎಂದಾದರೂ ಹೇಳಬಹುದು)[2]

## ಆದಿತ್ಯನೇ ವ್ಯವಹಾರಕ್ಕೆ ಬೆಳಕು

(ಭಾಷ್ಯ)

೧೬೧. ಯಾಜ್ಞವಲ್ಕ್ಯೋಽಪಿ ಜನಕಾಭಿಪ್ರಾಯಾಭಿಜ್ಞತಯಾ ವ್ಯತಿರಿಕ್ತಮ್ ಆತ್ಮಜ್ಯೋತಿರ್ಬೋಧಯಿಷ್ಯನ್ ಜನಕಂ ವ್ಯತಿರಿಕ್ತಪ್ರತಿಪಾದಕಮೇವ ಲಿಙ್ಗಂ ಪ್ರತಿಪೇದೇ ಯಥಾಪ್ರಸಿದ್ಧಮ್। ಆದಿತ್ಯಜ್ಯೋತಿಃ ಸಮ್ರಾಡಿತಿ ಹೋವಾಚ। ಕಥಮ್ ? ಆದಿತ್ಯೇನೈವ ಸ್ವಾವಯವಸಂಘಾತವ್ಯತಿರಿಕ್ತೇನ ಚಕ್ಷುಷೋಽನುಗ್ರಾಹಕೇಣ ಜ್ಯೋತಿಷಾ ಅಯಂ ಪ್ರಾಕೃತಃ ಪುರುಷಃ ಆಸ್ತೇ ಉಪವಿಶತಿ। ಪಲ್ಯಯತೇ ಪರ್ಯೇತಿ ಕ್ಷೇತ್ರಮ್ ಅರಣ್ಯಂ ವಾ। ತತ್ರ ಗತ್ವಾ ಕರ್ಮ ಕುರುತೇ। ವಿಪಲ್ಯೇತಿ ವಿಪರ್ಯೇತಿ ಚ ಯಥಾಗತಮ್। ಅತ್ಯನ್ತವ್ಯತಿರಿಕ್ತಜ್ಯೋತಿಷ್ಟ್ವಪ್ರಸಿದ್ಧತಾಪ್ರದರ್ಶನಾರ್ಥಮ್ ಅನೇಕವಿಶೇಷಣಮ್। ಬಾಹ್ಯಾನೇಕಜ್ಯೋತಿಃಪ್ರದರ್ಶನಂ ಚ ಲಿಙ್ಗಸ್ಯ ಅವ್ಯಭಿಚಾರಿತ್ವಪ್ರದರ್ಶನಾರ್ಥಮ್। ಏವಮೇವೈತದ್ಯಾಜ್ಞವಲ್ಕ್ಯ ॥

(ಭಾಷ್ಯಾರ್ಥ)

ಯಾಜ್ಞವಲ್ಕ್ಯನೂ ಜನಕನ (ಈ) ಅಭಿಪ್ರಾಯವನ್ನು ಬಲ್ಲವನಾದ್ದರಿಂದ ವ್ಯತಿರಿಕ್ತವಾಗಿರುವ ಆತ್ಮಜ್ಯೋತಿಯನ್ನು ಜನಕನಿಗೆ ತಿಳಿಸಿಕೊಡುವದಕ್ಕಾಗಿ ವ್ಯತಿರಿಕ್ತವೆಂದು ತಿಳಿಸಿಕೊಡುವ ಲಿಂಗವನ್ನೇ ಪ್ರಸಿದ್ಧಿಗನುಗುಣ

---

1. ಆದ್ದರಿಂದ ಅಧ್ಯಾತ್ಮವೇತ್ತನಾದ ಯಾಜ್ಞವಲ್ಕ್ಯನಿಗೆ ತಿಳಿದಿರಬಹುದಾದ ಹೆಚ್ಚಿಗೆಯ ವಿಷಯವನ್ನು ತಿಳಿಯಬೇಕೆಂದು ಅವನನ್ನು ಪ್ರಶ್ನೆಮಾಡಿರುತ್ತಾನೆ

2. ಜನಕ, ಯಾಜ್ಞವಲ್ಕ್ಯ- ಮುಂತಾದವುಗಳೆಲ್ಲ ಶ್ರುತಿಯ ಕಲ್ಪನೆ. ಜನರು ಹೀಗೆ ಅನುಮಾನದಿಂದ ತತ್ತ್ವವನ್ನು ನಿರ್ಧಾರಣೆಮಾಡುವದು ಕಂಡಿರುವದರಿಂದ ಅವರ ದೃಷ್ಟಿಯಿಂದಲೇ ಶ್ರುತಿಯು ಈ ಸಂಭಾಷಣೆಯ ನೆಪದಿಂದ ನಮಗೆ ಅನುಮಾನವನ್ನು ತಿಳಿಸಿದೆ. ತರ್ಕವನ್ನುಪಯೋಗಿಸುವಾಗ ಶ್ರುತ್ಯನುಗೃಹೀತವಾದ ಇಂಥ ತರ್ಕವನ್ನೇ ಉಪಯೋಗಿಸಿದರೆ ಅನುಭವವುಂಟಾಗುತ್ತದೆ. ಸೂ. ಭಾ. ೨-೧-೬, ಭಾ. ಭಾ. ೪೧೮ ಶ್ರುತಿಯ ದೃಷ್ಟಿಯಿಂದ ಆತ್ಮನೇ ಕಾರ್ಯಕರಣಸಂಘಾತವನ್ನು ಬೆಳಗುತ್ತಾನೆಂಬುದು ಸ್ವತಃಸಿದ್ಧ, ಅದಕ್ಕೆ ಅನುಮಾನವೇ ಬೇಡ.

ವಾಗಿ ತಿಳಿಸಿದನು[1]. ಸಮ್ರಾಜನೆ, (ಇವನು) ಆದಿತ್ಯನನ್ನೇ ಜ್ಯೋತಿಯಾಗಿ ಉಳ್ಳವನು ಎಂದನು. ಹೇಗೆ? ಎಂದರೆ, ತನ್ನ ಅವಯವಸಂಘಾತಕ್ಕಿಂತ ವ್ಯತಿರಿಕ್ತವಾಗಿರುವ ಚಕ್ಷುಸ್ಸಿಗೆ ಅನುಗ್ರಹವನ್ನುಂಟುಮಾಡುವ ಆದಿತ್ಯನೆಂಬ ಜ್ಯೋತಿಯಿಂದಲೇ[2] ಈ ಪ್ರಾಕೃತಪುರುಷನು ಕುಳಿತಿರುತ್ತಾನೆ, ಕೂತು ಕೊಂಡಿರುತ್ತಾನೆ; (ಪಲ್ಯಯತೇ=ಪರ್ಯೇತಿ) ಹೊಲಕ್ಕೆ ಅಥವಾ ಕಾಡಿಗೆ ಹೋಗುತ್ತಾನೆ, ಅಲ್ಲಿಗೆ ಹೋಗಿ ಕೆಲಸವನ್ನು ಮಾಡುತ್ತಾನೆ; (ವಿಪಲ್ಯೇತಿ=ವಿಪರ್ಯೇತಿ) ಹೋಗಿದ್ದು (ಮಾರ್ಗ)ವನ್ನನುಸರಿಸಿ ಹಿಂದಕ್ಕೆ ಬರುತ್ತಾನೆ. (ಆದಿತ್ಯನು) ಅತ್ಯಂತವಾಗಿ ವ್ಯತಿರಿಕ್ತನಾದ[3] ಜ್ಯೋತಿಯು ಎಂದು ತಿಳಿಯಿಸುವದಕ್ಕಾಗಿ (ಇಲ್ಲಿ) ಅನೇಕ ವಿಶೇಷಣಗಳನ್ನು (ತೆಗೆದುಕೊಂಡಿದೆ). ಹೊರಗಿನ ಅನೇಕ ಜ್ಯೋತಿಗಳನ್ನು ತೆಗೆದುಕೊಂಡಿರುವದೋ ಎಂದರೆ ಲಿಂಗವು ಅವ್ಯಭಿಚರಿತವಾಗಿದೆ ಎಂದು ತೋರಿಸಿಕೊಡುವದಕ್ಕೆ[4]. ಯಾಜ್ಞವಲ್ಕ್ಯನೆ, ಇದು ಹೀಗೆಯೇ (ಸರಿ).

## ಆದಿತ್ಯನಿಲ್ಲದಾಗ ಚಂದ್ರನು ಜ್ಯೋತಿ

(ಉಪನಿಷತ್ತು)

**ಅಸ್ತಮಿತ ಆದಿತ್ಯೇ ಯಾಜ್ಞವಲ್ಕ್ಯ ಕಿಂಜ್ಯೋತಿರೇವಾಯಂ ಪುರುಷ ಇತಿ ಚನ್ದ್ರಮಾ ಏವಾಸ್ಯ ಜ್ಯೋತಿರ್ಭವತೀತಿ ಚನ್ದ್ರಮಸೈವಾಯಂ ಜ್ಯೋತಿಷಾಸ್ತೇ ಪಲ್ಯಯತೇ ಕರ್ಮ ಕುರುತೇ ವಿಪಲ್ಯೇತೀತ್ಯೇವಮೇವೈತದ್ಯಾಜ್ಞವಲ್ಕ್ಯ ॥ ೩ ॥**

೩. "ಯಾಜ್ಞವಲ್ಕ್ಯನೆ, ಆದಿತ್ಯನು ಮುಳುಗಿದರೆ ಈ ಪುರುಷನು ಯಾವ ಜ್ಯೋತಿಯುಳ್ಳವನೇ (ಆಗಿರುವನು)?'' "ಚಂದ್ರನೇ ಇವನಿಗೆ ಜ್ಯೋತಿಯಾಗಿರುವನು. ಚಂದ್ರನೆಂಬ ಜ್ಯೋತಿಯಿಂದಲೇ

---

1. ದೇಹರೂಪವಾಗಿರುವ ಈ ಪುರುಷನು ತೋರುವದಕ್ಕೂ ವ್ಯವಹರಿಸುವದಕ್ಕೂ ಇದಕ್ಕಿಂತ ವ್ಯತಿರಿಕ್ತವಾದ ಜ್ಯೋತಿಯೇ ಬೇಕೆಂಬುದು ಪ್ರಸಿದ್ಧವಾಗಿದೆ ಎಂದು ತಿಳಿಸಿದನು.

2. ಆದಿತ್ಯೇನೈವ-ಆದಿತ್ಯನಿಂದಲೇ ಎಂದಿರುವದು ಮತ್ತೊಂದು ಜ್ಯೋತಿಯಿಲ್ಲವೆಂದು ಹೇಳುವದಕ್ಕಲ್ಲ; ವ್ಯತಿರಿಕ್ತಜ್ಯೋತಿಯಿಂದಲೇ ಎಂಬುದನ್ನು ತಿಳಿಸುವ ಲಿಂಗವೆಂಬ ಅಭಿಪ್ರಾಯದಿಂದ.

3 ದೇಹಾವಯವಗಳಿಗಿಂತ ಜಾತಿ, ಆಕಾರ, ಕ್ರಿಯೆ, ಪ್ರದೇಶ-ಮುಂತಾದವುಗಳಿಲ್ಲದರಲ್ಲಿಯೂ ಅತ್ಯಂತವ್ಯತಿರಿಕ್ತವಾಗಿರುವ.

4. ದೇಹಪುರುಷನಿಗಿಂತ ಅತ್ಯಂತವ್ಯತಿರಿಕ್ತವಾದ ಜ್ಯೋತಿಯಿಂದಲೇ ವ್ಯವಹಾರವಾಗುವದೆಂಬ ವ್ಯಾಪ್ತಿಯು ಇದೆ ಎಂದು ತಿಳಿಸುವದಕ್ಕೆ ಅನೇಕವ್ಯತಿರಿಕ್ತಜ್ಯೋತಿಗಳನ್ನು ತಿಳಿಸಿದೆ.

ಇವನು ಕುಳಿತಿರುತ್ತಾನೆ, ಹೋಗುತ್ತಾನೆ, ಕರ್ಮವನ್ನು ಮಾಡುತ್ತಾನೆ, ಹಿಂತಿರುಗಿ ಬರುತ್ತಾನೆ." "ಯಾಜ್ಞವಲ್ಕ್ಯನೆ, ಇದು ಹೀಗೆಯೇ (ಸರಿ),—"

(ಭಾಷ್ಯ)

೧೬೨. ತಥಾ ಅಸ್ತಮಿತೇ ಆದಿತ್ಯೇ ಯಾಜ್ಞವಲ್ಕ್ಯ, ಕಿಂಜ್ಯೋತಿರೇವಾಯಂ ಪುರುಷ ಇತಿ । ಚನ್ದ್ರಮಾ ಏವಾಸ್ಯ ಜ್ಯೋತಿಃ ॥

(ಭಾಷ್ಯಾರ್ಥ)

ಹೀಗೆಯೇ ಆದಿತ್ಯನು ಮುಳುಗಿದರೆ ಈ ಪುರುಷನು ಯಾವ ಜ್ಯೋತಿಯುಳ್ಳವನೇ (ಆಗಿರುವನು) ? ಚಂದ್ರನೇ ಇವನಿಗೆ ಜ್ಯೋತಿಯು.

## ಸೂರ್ಯಚಂದ್ರರಿಲ್ಲದಾಗ ಅಗ್ನಿಯು ಜ್ಯೋತಿ

(ಉಪನಿಷತ್ತು)

**ಅಸ್ತಮಿತ ಆದಿತ್ಯೇ ಯಾಜ್ಞವಲ್ಕ್ಯ ಚನ್ದ್ರಮಸ್ಯಸ್ತಮಿತೇ ಕಿಂ ಜ್ಯೋತಿರೇವಾಯಂ ಪುರುಷ ಇತ್ಯಗ್ನಿರೇವಾಸ್ಯ ಜ್ಯೋತಿರ್ಭವತೀತ್ಯಗ್ನಿನೈವಾಯಂ ಜ್ಯೋತಿಷಾಽಽಸ್ತೇ ಪಲ್ಯಯತೇ ಕರ್ಮ ಕುರುತೇ ವಿಪಲ್ಯೇತೀತ್ಯೇವಮೇವೈತದ್ಯಾಜ್ಞವಲ್ಕ್ಯ ॥ ೪ ॥**

೪. "ಯಾಜ್ಞವಲ್ಕ್ಯನೆ, ಆದಿತ್ಯನು ಮುಳುಗಿದರೆ ಚಂದ್ರನೂ ಮುಳುಗಿದರೆ ಈ ಪುರುಷನು ಯಾವ ಜ್ಯೋತಿಯುಳ್ಳವನೇ (ಆಗಿರುವನು) ?" "ಅಗ್ನಿಯೇ ಇವನಿಗೆ ಜ್ಯೋತಿಯಾಗಿರುತ್ತದೆ. ಅಗ್ನಿ ಎಂಬ ಜ್ಯೋತಿಯಿಂದಲೇ ಕುಳಿತಿರುತ್ತಾನೆ, ಹೋಗುತ್ತಾನೆ, ಕರ್ಮವನ್ನು ಮಾಡುತ್ತಾನೆ, ಹಿಂತಿರುಗಿಬರುತ್ತಾನೆ." "ಯಾಜ್ಞವಲ್ಕ್ಯನೆ, ಇದು ಹೀಗೆಯೇ (ಸರಿ),—"

(ಭಾಷ್ಯ)

೧೬೩. ಅಸ್ತಮಿತ ಆದಿತ್ಯೇ ಚನ್ದ್ರಮಸಿ ಅಸ್ತಮಿತೇ ಅಗ್ನಿರ್ಜ್ಯೋತಿಃ॥

(ಭಾಷ್ಯಾರ್ಥ)

ಆದಿತ್ಯನು ಮುಳುಗಿ ಚಂದ್ರನೂ ಮುಳುಗಿದರೆ ಅಗ್ನಿಯು ಜ್ಯೋತಿಯು.

## ಸೂರ್ಯಾದಿಗಳಿಲ್ಲದಾಗ ವಾಕ್ಕೇ ಜ್ಯೋತಿ

(ಉಪನಿಷತ್ತು)

**ಅಸ್ತಮಿತ ಆದಿತ್ಯೇ ಯಾಜ್ಞವಲ್ಕ್ಯ ಚನ್ದ್ರಮಸ್ಯಸ್ತಮಿತೇ ಶಾನ್ತೇಽಗ್ನೌ ಕಿಂಜ್ಯೋತಿರೇವಾಯಂ ಪುರುಷ ಇತಿ ವಾಗೇ**

**ವಾಸ್ಯ ಜ್ಯೋತಿರ್ಭವತೀತಿ ವಾಚೈವಾಯಂ ಜ್ಯೋತಿಷಾಽಽಸ್ತೇ ಪಲ್ಯಯತೇ ಕರ್ಮ ಕುರುತೇ ವಿಪಲ್ಯೇತೀತಿ ತಸ್ಮಾದ್ವೈ ಸಮ್ರಾಡಪಿ ಯತ್ರ ಸ್ವಃ ಪಾಣಿರ್ನ ವಿನಿರ್ಜ್ಞಾಯತೇಽಥ ಯತ್ರ ವಾಗುಚ್ಚ ರತ್ಯುಪೈವ ತತ್ರ ನ್ಯೇತೀತ್ಯೇವಮೇವೈತದ್ಯಾಜ್ಞವಲ್ಕ್ಯ ॥೫॥**

೫. "ಯಾಜ್ಞವಲ್ಕ್ಯನೆ, ಆದಿತ್ಯನು ಮುಳುಗಿದರೆ, ಚಂದ್ರನು ಮುಳುಗಿದರೆ ಅಗ್ನಿಯೂ ಆರಿದರೆ ಈ ಪುರುಷನು ಯಾವ ಜ್ಯೋತಿ ಯುಳ್ಳವನೇ (ಆಗಿರುವನು)?" ವಾಕ್ಕೇ ಇವನಿಗೆ ಜ್ಯೋತಿಯಾಗಿರುತ್ತದೆ. ವಾಕ್ಕೆಂಬ ಜ್ಯೋತಿಯಿಂದಲೇ ಕುಳಿತಿರುತ್ತಾನೆ, ಹೋಗುತ್ತಾನೆ, ಕರ್ಮವನ್ನು ಮಾಡುತ್ತಾನೆ. ಹಿಂದಕ್ಕೆ ಬರುತ್ತಾನೆ. ಸಮ್ರಾಜನೆ, ಆದ್ದರಿಂದಲೇ ತನ್ನ ಕೈಯೂ ಕೂಡ ಯಾವಾಗ ತಿಳಿದು ಬರುವದಿಲ್ಲವೋ ಆಗ ಎಲ್ಲಿ ವಾಕ್ಕು ಎದ್ದುಬರುವದೋ ಅಲ್ಲಿಗೇ ಹೋಗುತ್ತಾನೆ. "ಯಾಜ್ಞವಲ್ಕ್ಯನೆ, ಇದು ಹೀಗೆಯೇ (ಸರಿ),—"

(ಭಾಷ್ಯ)

೧೬೪. ಶಾನ್ತೇಽಗ್ನೌ ವಾಕ್ ಜ್ಯೋತಿಃ। ವಾಗಿತಿ ಶಬ್ದಃ ಪರಿಗೃಹ್ಯತೇ। ಶಬ್ದೇನ ವಿಷಯೇಣ ಶ್ರೋತ್ರಮಿನ್ದ್ರಿಯಂ ದೀಪ್ಯತೇ। ಶ್ರೋತ್ರೇನ್ದ್ರಿಯೇ ಸಂಪ್ರದೀಪ್ತೇ ಮನಸಿ ವಿವೇಕ ಉಪಜಾಯತೇ। ತೇನ ಮನಸಾ ಬಾಹ್ಯಾಂ ಚೇಷ್ಟಾಂ ಪ್ರತಿಪದ್ಯತೇ। "ಮನಸಾ ಹ್ಯೇವ ಪಶ್ಯತಿ ಮನಸಾ ಶೃಣೋತಿ" (೧-೫-೩) ಇತಿ[1] ಬ್ರಾಹ್ಮಣಮ್। ಕಥಂ ಪುನರ್ವಾಗ್ ಜ್ಯೋತಿರಿತಿ? ವಾಚೋ ಜ್ಯೋತಿಷ್ಟ್ವಮ್ ಅಪ್ರಸಿದ್ಧಮ್ ಇತ್ಯತ ಆಹ। ತಸ್ಮಾದ್ ವೈ ಸಮ್ರಾಟ್ ಯಸ್ಮಾತ್ ವಾಚಾ ಜ್ಯೋತಿಷಾ ಅನುಗೃಹೀತೋಽಯಂ ಪುರುಷೋ ವ್ಯವಹರತಿ ತಸ್ಮಾತ್ ಪ್ರಸಿದ್ಧಮೇತತ್ ವಾಚೋ ಜ್ಯೋತಿಷ್ಟ್ವಮ್। ಕಥಮ್? ಅಪಿ ಯತ್ರ ಯಸ್ಮಿನ್ ಕಾಲೇ ಪ್ರಾವೃಷಿ ಪ್ರಾಯೇಣ ಮೇಘಾನ್ಧಕಾರೇ ಸರ್ವಜ್ಯೋತಿಃಪ್ರತ್ಯಸ್ತಮಯೇ ಸ್ವೋಽಪಿ ಪಾಣಿಃ ಹಸ್ತಃ ನ ವಿಸ್ಪಷ್ಟಂ ನಿರ್ಜ್ಞಾಯತೇ, ಅಥ ತಸ್ಮಿನ್ ಕಾಲೇ ಸರ್ವಚೇಷ್ಟಾನಿರೋಧೇ ಪ್ರಾಪ್ತೇ ಬಾಹ್ಯಜ್ಯೋತಿಷೋಽಭಾವಾತ್ ಯತ್ರ ವಾಕ್ ಉಚ್ಚರತಿ, ಶ್ವಾ ವಾ ಭಷತಿ ಗರ್ದಭೋ ವಾ ರೌತಿ ಉಪೈವ ತತ್ರ ನ್ಯೇತಿ। ತೇನ ಶಬ್ದೇನ ಜ್ಯೋತಿಷಾ ಶ್ರೋತ್ರಮನಸೋರ್ನೈರನ್ತರ್ಯಂ ಭವತಿ। ತೇನ ಜ್ಯೋತಿಷ್ಕಾರ್ಯತ್ವಂ ವಾಕ್ ಪ್ರತಿಪದ್ಯತೇ। ತೇನ ವಾಚಾ ಜ್ಯೋತಿಷಾ ಉಪನ್ಯೇತ್ಯೇವ ಉಪಗಚ್ಛತ್ಯೇವ। ತತ್ರ ಸಂನಿಹಿತೋ ಭವತಿ ಇತ್ಯರ್ಥಃ। ತತ್ರ ಚ ಕರ್ಮ ಕುರುತೇ ವಿಪಲ್ಯೇತಿ। ತತ್ರ

---

1. ಇದರ ಮುಂದೆ ಒಂದು ಹಿ ಶಬ್ದವಿದ್ದರೆ ಚೆನ್ನಾಗಿರುತ್ತೆಂದು ತೋರುತ್ತದೆ.

ವಾಗ್ಜ್ಯೋತಿಷೋ ಗ್ರಹಣಂ ಗನ್ಧಾದೀನಾಮ್ ಉಪಲಕ್ಷಣಾರ್ಥಮ್। ಗನ್ಧಾದಿಭಿರಪಿ ಹಿ ಘ್ರಾಣಾದಿಷು ಅನುಗೃಹೀತೇಷು ಪ್ರವೃತ್ತಿನಿವೃತ್ತ್ಯಾದಯೋ ಭವನ್ತಿ। ತೇನ ತೈರಪಿ ಅನುಗ್ರಹೋ ಭವತಿ ಕಾರ್ಯಕರಣಸಂಘಾತಸ್ಯ। ಏವಮೇವೈತದ್ ಯಾಜ್ಞವಲ್ಕ್ಯ॥

(ಭಾಷ್ಯಾರ್ಥ)

ಅಗ್ನಿಯೂ ಶಾಂತವಾದರೆ ವಾಕ್ಕೇ ಜ್ಯೋತಿಯು ವಾಕ್ಕೆಂದರೆ (ಇಲ್ಲಿ) ಶಬ್ದ(ವೆಂಬರ್ಥವನ್ನು) ಗ್ರಹಿಸಬೇಕು. ಶಬ್ದವೆಂಬ ವಿಷಯದಿಂದ ಶ್ರೋತ್ರವೆಂಬ ಇಂದ್ರಿಯವು ದೀಪ್ತವಾಗುವದು, ಶ್ರೋತ್ರೇಂದ್ರಿಯವು ಚೆನ್ನಾಗಿ ದೀಪ್ತವಾಗಲು ಮನಸ್ಸಿನಲ್ಲಿ ವಿವೇಕವುಂಟಾಗುವದು ; ಆ ಮನಸ್ಸಿನಿಂದ (ಮನುಷ್ಯನು) ಹೊರಗಿನ ವ್ಯಾಪಾರವನ್ನು ಪಡೆದುಕೊಳ್ಳುತ್ತಾನೆ. "ಮನಸ್ಸಿನಿಂದಲೇ ಅಲ್ಲವೆ, ನೋಡುತ್ತಾನೆ; ಮನಸ್ಸಿನಿಂದಲೇ ಕೇಳುತ್ತಾನೆ" (೧-೫-೩) ಎಂದಲ್ಲವೆ, ಬ್ರಾಹ್ಮಣ(ವಾಕ್ಯ) ?

(ಆಕ್ಷೇಪ) :- ವಾಕ್ಕು ಜ್ಯೋತಿ ಎಂಬುದು ಹೇಗೆ ? ವಾಕ್ಕು ಜ್ಯೋತಿ ಎಂಬುದು ಪ್ರಸಿದ್ಧವಾಗಿಲ್ಲವಲ್ಲ !

(ಪರಿಹಾರ) :- ಇದಕ್ಕೆ ಹೇಳುತ್ತಾರೆ : ಸಮ್ರಾಜನೆ, ಆದ್ದರಿಂದಲೇ-ವಾಕ್ಕೆಂಬ ಜ್ಯೋತಿಯಿಂದ ಅನುಗೃಹೀತನಾಗಿ ಈ ಪುರುಷನು ವ್ಯವಹರಿಸುತ್ತಾನಲ್ಲ, ಆದ್ದರಿಂದಲೇ, ವಾಕ್ಕು ಜ್ಯೋತಿ ಎಂಬುದು ಪ್ರಸಿದ್ಧವಾಗಿರುತ್ತದೆ ಹೇಗೆ ? ಎಂದರೆ ಯಾವಾಗ, ಯಾವ ಕಾಲದಲ್ಲಿ, ಮಳೆಗಾಲದಲ್ಲಿ ಬಹಳವಾಗಿ ಮೋಡದಿಂದ ದಟ್ಟವಾಗಿ ಕತ್ತಲು ಕವಿದುಕೊಂಡು ಯಾವ ಬೆಳಕೂ ಇಲ್ಲದಿರುವಾಗ ತನ್ನ ಕೈಯೂ (ತನ್ನ) ಹಸ್ತವು ಕೂಡ ವಿಸ್ಪಷ್ಟವಾಗಿ ಎಲ್ಲಿ ತಿಳಿಯಬರುವದಿಲ್ಲವೊ, ಆಗ ಆ ಕಾಲದಲ್ಲಿ ಹೊರಗಿನ ಜ್ಯೋತಿಯಿಲ್ಲದ್ದರಿಂದ ಯಾವ ವ್ಯವಹಾರವೂ ಇಲ್ಲದಂತಾಗಬೇಕಾಗಿಬಂದೊದಗಲು, ಎಲ್ಲಿ ವಾಕ್ಕು ಎದ್ದು ಕೇಳಬರುವದೋ ನಾಯಿ ಬಗುಳುವದೋ ಅಥವಾ ಕತ್ತೆ ಕಿರಿಚುವದೋ (ಎಲ್ಲಿ ಕೇಳಿಬರುವದೋ), ಅಲ್ಲಿಗೆ ಹೋಗಿಯೇ ಹೋಗುತ್ತಾನೆ. ಆ ಶಬ್ದವೆಂಬ ಜ್ಯೋತಿಯಿಂದ ಶ್ರೋತ್ರಮನಸ್ಸುಗಳಿಗೆ ವ್ಯವಧಾನವಿಲ್ಲದಂತಾಗುತ್ತದೆ ; ಅದರಿಂದ ವಾಕ್ಕಿಗೆ ಜ್ಯೋತಿಷ್ಕಾರ್ಯವು ಉಂಟಾಗುತ್ತದೆ. ಆ ವಾಕ್ಕೆಂಬ ಜ್ಯೋತಿಯಿಂದ (ಉಪನ್ಯೇತ್ಯೇವ ಎಂದು ಅನ್ವಯ), (ಅದರ) ಹತ್ತಿರಕ್ಕೆ ಹೋಗಿಯೇ ಹೋಗುತ್ತಾನೆ, ಅಲ್ಲಿಗೆ ಬಂದು ಸೇರುತ್ತಾನೆ ಎಂದರ್ಥ. ಅಲ್ಲಿ ಕರ್ಮವನ್ನು ಮಾಡುತ್ತಾನೆ, ಹಿಂತಿರುಗುತ್ತಾನೆ.

ಇಲ್ಲಿ ವಾಗ್ಜ್ಯೋತಿಯನ್ನು ತೆಗೆದುಕೊಂಡಿರುವದು ಗಂಧವೇ ಮುಂತಾದವುಗಳಿಗೂ ಉಪಲಕ್ಷಣವಾಗಿರಲೆಂದು. ಏಕೆಂದರೆ ಗಂಧಾದಿಗಳಿಂದಲೂ

ಘ್ರಾಣವೇ ಮುಂತಾದ (ಇಂದ್ರಿಯ)ಗಳು ಅನುಗೃಹೀತವಾಗಲು ಪ್ರವೃತ್ತಿ, ನಿವೃತ್ತಿ- ಮುಂತಾದವುಗಳು ಆಗುತ್ತವೆ. ಆದ್ದರಿಂದ ಅವುಗಳಿಂದಲೂ ಕಾರ್ಯಕರಣಸಂಘಾತಕ್ಕೆ ಅನುಗ್ರಹವಾಗುತ್ತದೆ.

## ಹೊರಗಿನ ಜ್ಯೋತಿಗಳಿಲ್ಲದಾಗ ಆತ್ಮನೇ ಜ್ಯೋತಿ

(ಉಪನಿಷತ್ತು)

**ಅಸ್ತಮಿತ ಆದಿತ್ಯೇ ಯಾಜ್ಞವಲ್ಕ್ಯ ಚನ್ದ್ರಮಸ್ಯಸ್ತಮಿತೇ ಶಾನ್ತೇಽಗ್ನೌ ಶಾನ್ತಾಯಾಂ ವಾಚಿ ಕಿಂಜ್ಯೋತಿರೇವಾಯಂ ಪುರುಷ ಇತ್ಯಾತ್ಮೈವಾಸ್ಯ ಜ್ಯೋತಿರ್ಭವತೀತ್ಯಾತ್ಮನೈವಾಯಂ ಜ್ಯೋತಿಷಾಽಽಸ್ತೇ ಪಲ್ಯಯತೇ ಕರ್ಮ ಕುರುತೇ ವಿಪಲ್ಯೇತೀತಿ||**

೬. "ಯಾಜ್ಞವಲ್ಕ್ಯನೆ, ಆದಿತ್ಯನು ಮುಳುಗಿ ಚಂದ್ರನೂ ಮುಳುಗಿ ಅಗ್ನಿಯು ಶಾಂತವಾಗಿ ವಾಕ್ಕು ಶಾಂತವಾಗಲು ಈ ಪುರುಷನು ಯಾವ ಜ್ಯೋತಿಯುಳ್ಳವನೇ ಆಗಿರುವನು?'' ಆತ್ಮನೇ ಇವನಿಗೆ ಜ್ಯೋತಿಯಾಗಿರುವನು. ಆತ್ಮನೆಂಬ ಜ್ಯೋತಿಯಿಂದಲೇ ಇವನು ಕುಳಿತಿರುತ್ತಾನೆ, ಹೋಗುತ್ತಾನೆ, ಕರ್ಮವನ್ನು ಮಾಡುತ್ತಾನೆ, ಹಿಂದಕ್ಕೆ ಬರುತ್ತಾನೆ.

## ಜನಕನ ಪ್ರಶ್ನೆಯ ಅಭಿಪ್ರಾಯ

(ಭಾಷ್ಯ)

೧೬೫. ಶಾನ್ತಾಯಾಂ ಪುನರ್ವಾಚಿ ಗನ್ಧಾದಿಷ್ವಪಿ ಚ ಶಾನ್ತೇಷು ಬಾಹ್ಯೇಷು ಅನುಗ್ರಾಹಕೇಷು ಸರ್ವಪ್ರವೃತ್ತಿನಿರೋಧಃ ಪ್ರಾಪ್ತೋಽಸ್ಯ ಪುರುಷಸ್ಯ। ಏತದುಕ್ತಂ ಭವತಿ। ಜಾಗ್ರದ್ವಿಷಯೇ ಬಹಿರ್ಮುಖಾನಿ ಕರಣಾನಿ ಚಕ್ಷುರಾದೀನಿ ಆದಿತ್ಯಾದಿಜ್ಯೋತಿರ್ಭಿರನುಗೃಹ್ಯಮಾಣಾನಿ ಯದಾ ತದಾ ಸ್ಫುಟತರಃ ಸಂವ್ಯವಹಾರೋಽಸ್ಯ ಭವತೀತ್ಯೇವಂ ತಾವತ್ ಜಾಗರಿತೇ ಸ್ವಾವಯವಸಂಘಾತವ್ಯತಿರಿಕ್ತೇನೈವ ಜ್ಯೋತಿಷಾ ಜ್ಯೋತಿಷ್ಕಾರ್ಯಸಿದ್ಧಿಃ ಅಸ್ಯ ಪುರುಷಸ್ಯ ದೃಷ್ಟಾ। ತಸ್ಮಾತ್ ತೇ ವಯಂ ಮನ್ಯಾಮಹೇ ಸರ್ವಬಾಹ್ಯಜ್ಯೋತಿಃಪ್ರತ್ಯಸ್ತಮಯೇಽಪಿ ಸ್ವಪ್ನಸುಷುಪ್ತಕಾಲೇ ಜಾಗರಿತೇ ಚ ತಾದೃಗವಸ್ಥಾಯಾಂ ಸ್ವಾವಯವಸಂಘಾತವ್ಯತಿರಿಕ್ತೇನೈವ ಜ್ಯೋತಿಷಾ ಜ್ಯೋತಿಷ್ಕಾರ್ಯಸಿದ್ಧಿರಸ್ಯ ಇತಿ। ದೃಶ್ಯತೇ ಚ ಸ್ವಪ್ನೇ ಜ್ಯೋತಿಷ್ಕಾರ್ಯಸಿದ್ಧಿಃ ಬನ್ಧುಸಂಗಮನವಿಯೋಗದರ್ಶನಮ್, ದೇಶಾನ್ತರಗಮನಾದಿ ಚ। ಸುಷು

ಪ್ರಾತಶ್ಚ ಉತ್ಥಾನಮ್, ಸುಖಮಹಮಸ್ವಾಪ್ಸಂ ನ ಕಿಂಚಿದವೇದಿಷಮಿತಿ । ತಸ್ಮಾದಸ್ತಿ ವ್ಯತಿರಿಕ್ತಂ ಕಿಮಪಿ ಜ್ಯೋತಿಃ । ಕಿಂ ಪುನಸ್ತಚ್ಛಾನ್ತಾಯಾಂ ವಾಚಿ ಜ್ಯೋತಿರ್ಭವತೀತಿ ॥

(ಭಾಷ್ಯಾರ್ಥ)

ಹಾಗಾದರೆ ವಾಕ್ಕು ಶಾಂತವಾಗಲು ಹೊರಗಿನ ಅನುಗ್ರಾಹಕಗಳಾದ ಗಂಧಾದಿಗಳೂ ಶಾಂತವಾಗಲು ಈ ಪುರುಷನಿಗೆ ಯಾವ ಪ್ರವೃತ್ತಿಯೂ ಇಲ್ಲದಂತಾಗಬೇಕಾಗುವದು. ಇದರ ಅಭಿಪ್ರಾಯವಿದು: ಎಚ್ಚರದ ವಿಷಯದಲ್ಲಿ ಚಕ್ಷುರಾದಿಕರಣಗಳು ಹೊರಮುಖವಾಗಿ ಆದಿತ್ಯನೇ ಮುಂತಾದ ಜ್ಯೋತಿಗಳಿಂದ ಅನುಗೃಹೀತವಾಗುತ್ತಿರುವಾಗ ಈ (ಪುರುಷ)ನಿಗೆ ಸ್ಫುಟತರವಾಗಿ ವ್ಯವಹಾರವಾಗುತ್ತಿರುವದರಿಂದ ಮೊದಲನೆಯದಾಗಿ ಹೀಗೆ ಎಚ್ಚರದಲ್ಲಿ ತನ್ನ ಅವಯುವಸಂಘಾತಗಳಿಗಿಂತ ವ್ಯತಿರಿಕ್ತವೇ ಆಗಿರುವ ಜ್ಯೋತಿಯಿಂದ ಈ ಪುರುಷನಿಗೆ ಜ್ಯೋತಿಷ್ಕಾರ್ಯವಾಗುವದು ಕಂಡುಬರುತ್ತದೆ. ಹೀಗಿರುವದರಿಂದ (ಇದನ್ನು ನೋಡಿದ) ಆ ನಮಗೆ ಯಾವ ಜ್ಯೋತಿಯೂ ಇಲ್ಲವಾಗಿರುವ ಕನಸುನಿದ್ರೆಗಳ ಕಾಲದಲ್ಲಿಯೂ, ಮತ್ತು ಎಚ್ಚರದಲ್ಲಿ ಅಂಥ ಅವಸ್ಥೆಯಿರುವಾಗಲೂ[1] ತನ್ನ ಅವಯುವಗಳ ಸಂಘಾತಕ್ಕಿಂತ ವ್ಯತಿರಿಕ್ತವಾದ ಜ್ಯೋತಿಯಿಂದಲೇ ಈ (ಪುರುಷ)ನಿಗೆ ಜ್ಯೋತಿಷ್ಕಾರ್ಯವು ಸಿದ್ಧವಾಗಬೇಕು ಎಂದು ತೋರುತ್ತದೆ. ಕನಸಿನಲ್ಲಿ ನಂಟರನ್ನು ಸೇರುವದು, ಅವರನ್ನಗಲುವದು, ಮತ್ತೊಂದು ಸ್ಥಲಕ್ಕೆ ಹೋಗುವದು– ಮುಂತಾದ ಜ್ಯೋತಿಷ್ಕಾರ್ಯವು ಕಂಡೂಬರುತ್ತಿದೆ. ನಿದ್ರೆಯಿಂದಲೂ– ನಾನು ಸುಖವಾಗಿ ನಿದ್ರಿಸಿದೆನು, ಏನನ್ನೂ ಅರಿಯಲಿಲ್ಲ ಎಂದು[2]– ಏಳುವದೂ (ಕಂಡುಬರುತ್ತಿದೆ). ಆದ್ದರಿಂದ (ಪುರುಷನಿಗಿಂತ) ಅತಿರಿಕ್ತವಾದ ಯಾವದೋ ಒಂದು ಜ್ಯೋತಿಯಿರಬೇಕು. ಹಾಗಾದರೆ ವಾಕ್ಕು ಶಾಂತವಾದಾಗ ಆ ಜ್ಯೋತಿಯಾಗಿರುವದು ಯಾವದು ?

## ಯಾಜ್ಞವಲ್ಕ್ಯನ ಉತ್ತರ: ಆತ್ಮನೇ ಜ್ಯೋತಿ

(ಭಾಷ್ಯ)

೧೬೬. ಉಚ್ಯತೇ । ಆತ್ಮೈವಾಸ್ಯ ಜ್ಯೋತಿರ್ಭವತೀತಿ । ಆತ್ಮಾ ಇತಿ ಕಾರ್ಯಕರಣಸ್ವಾವಯುವಸಂಘಾತವ್ಯತಿರಿಕ್ತಂ ಕಾರ್ಯಕರಣಾವಭಾಸಕಮ್

---

1. ಯಾವ ಹೊರಗಿನ ಜ್ಯೋತಿಯ ವ್ಯಾಪಾರವೂ ಇಲ್ಲದ ಸ್ಥಿತಿಯಲ್ಲಿಯೂ.

2. ಕೂತುಕೊಂಡಿರುವದು, ಹೋಗುವದು– ಮುಂತಾದ ಕ್ರಿಯೆಗಳನ್ನೇ ವ್ಯವಹಾರವೆಂದು ಉದಾಹರಿಸುವ ಸಂದರ್ಭದಲ್ಲಿ ಈ ಸ್ಮರಣೆಯನ್ನೇಕೆ ಉದಾಹರಿಸಿದೆ ಎಂಬುದು ತಿಳಿಯುವದಿಲ್ಲ, ಈ ವಾಕ್ಯಭಾಗವು ಮೂಲಭಾಷ್ಯದಲ್ಲಿಲ್ಲದಿದ್ದರೂ ಇರಬಹುದು.

ಆದಿತ್ಯಾದಿಬಾಹ್ಯಜ್ಯೋತಿರ್ವತ್ ಸ್ವಯಮನ್ಯೇನ ಅನವಭಾಸ್ಯಮಾನಮ್ ಅಭಿಧೀಯತೇ ಜ್ಯೋತಿಃ । ಅನ್ತಃಸ್ಥಂ ಚ ತತ್ । ಪಾರಿಶೇಷ್ಯಾತ್ । ಕಾರ್ಯ ಕರಣವ್ಯತಿರಿಕ್ತಂ ತದಿತಿ ತಾವತ್ ಸಿದ್ಧಮ್ । ಯಚ್ಚ ಕಾರ್ಯಕರಣವ್ಯತಿರಿಕ್ತಂ ಕಾರ್ಯಕರಣಸಂಘಾತಾನುಗ್ರಾಹಕಂ ಚ ಜ್ಯೋತಿಃ ತದ್ಬಾಹ್ಯೈಶ್ಚಕ್ಷುರಾದಿ ಕರಣೈರುಪಲಭ್ಯಮಾನಂ ದೃಷ್ಟಮ್ । ನ ತು ತಥಾ ತಚ್ಚಕ್ಷುರಾದಿಭಿರುಪ ಲಭ್ಯತೇ ಆದಿತ್ಯಾದಿಜ್ಯೋತಿಃಷೂಪರತೇಷು । ಕಾರ್ಯಂ ತು ಜ್ಯೋತಿಷೋ ದೃಶ್ಯತೇ ಯಸ್ಮಾತ್ ತಸ್ಮಾತ್ ಆತ್ಮನೈವಾಯಂ ಜ್ಯೋತಿಷಾ ಆಸ್ತೇ ಪಲ್ಯ ಯತೇ ಕರ್ಮ ಕುರುತೇ ವಿಪಲ್ಯೇತೀತಿ । ತಸ್ಮಾತ್ ನೂನಮನ್ತಃಸ್ಥಂ ಜ್ಯೋತಿಃ ಇತ್ಯವಗಮ್ಯತೇ । ಕಿಂ ಚ ಆದಿತ್ಯಾದಿಜ್ಯೋತಿರ್ವಿಲಕ್ಷಣಂ ತತ್ ಅಭೌತಿಕಂ ಚ । ಸ ಏವ ಹೇತುಃ, ಯಚ್ಚಕ್ಷುರಾದ್ಯಗ್ರಾಹ್ಯತ್ವಮ್ ಆದಿತ್ಯಾದಿ ವತ್ ॥

(ಭಾಷ್ಯಾರ್ಥ)

(ಅದಕ್ಕೆ ಉತ್ತರವನ್ನು) ಹೇಳುತ್ತಾನೆ: ಆತ್ಮನೇ ಇವನಿಗೆ ಜ್ಯೋತಿ ಯಾಗಿರುತ್ತಾನೆ. ಆತ್ಮ ಎಂದು ಕಾರ್ಯಕರಣವೆಂಬ ತನ್ನ ಅವಯವಸಂಘಾತ ಕ್ಕಿಂತ ವ್ಯತಿರಿಕ್ತವಾಗಿ, ಆದಿತ್ಯನೇ ಮುಂತಾದ ಹೊರಗಿನ ಜ್ಯೋತಿಗಳಂತೆ ಕಾರ್ಯಕರಣವನ್ನು ಬೆಳಗುವದಾಗಿ, ತಾನು ಮತ್ತೊಂದರಿಂದ ಬೆಳಗಲ್ಪಡದೆ ಇರುವ ಜ್ಯೋತಿಯನ್ನು ಹೇಳಿರುತ್ತದೆ. ಅದು ಒಳಗೆ ಇರುವ (ಜ್ಯೋತಿಯೂ ಆಗಿದೆ) ಎಂದು ಪರಿಶೇಷನ್ಯಾಯದಿಂದ ಸಿದ್ಧವಾಗುತ್ತದೆ. (ಇದರ ವಿವರ): ಮೊದಲನೆಯದಾಗಿ ಅದು ಕಾರ್ಯಕರಣಗಳಿಗಿಂತ ವ್ಯತಿರಿಕ್ತವಾಗಿದೆ ಎಂದು ಸಿದ್ಧವಾಗಿರುತ್ತದೆ. ಯಾವ ಜ್ಯೋತಿಯು ಕಾರ್ಯಕರಣಗಳಿಗಿಂತ ವ್ಯತಿರಿಕ್ತ ವಾಗಿದ್ದುಕೊಂಡು ಕಾರ್ಯಕರಣಸಂಘಾತಕ್ಕೆ ಅನುಗ್ರಾಹಕವಾಗಿರುತ್ತದೆಯೋ ಅದು ಹೊರಗಿನ ಚಕ್ಷುರಾದಿಕರಣಗಳಿಗೆ ತಿಳಿದುಬರುತ್ತದೆ ಎಂದು ಕಂಡಿರು ತ್ತದೆ. ಆದರೆ ಆದಿತ್ಯನೇ ಮುಂತಾದ ಜ್ಯೋತಿಗಳು (ವ್ಯಾಪಾರಮಾಡದೆ) ಸುಮ್ಮನಾಗಲು ಅದು ಹಾಗೆ ಕಂಡುಬರುವದಿಲ್ಲ. ಆದರೆ ಜ್ಯೋತಿಯ ಕಾರ್ಯ ವೇನೋ ಕಂಡುಬರುತ್ತಿರುವದಷ್ಟೆ, ಆದ್ದರಿಂದ ಆತ್ಮನೆಂಬ ಜ್ಯೋತಿಯಿಂದಲೇ (ಇವನು) ಕುಳಿತುಕೊಳ್ಳುತ್ತಾನೆ, ಕರ್ಮವನ್ನು ಮಾಡುತ್ತಾನೆ, ಹಿಂದಕ್ಕೆ ಬರುತ್ತಾನೆ. ಆದ್ದರಿಂದ (ಆ) ಜ್ಯೋತಿಯು ಒಳಗೆ ಇರಬೇಕು ಎಂದಾಯಿತು. ಮತ್ತು ಆ (ಜ್ಯೋತಿಯು) ಆದಿತ್ಯಾದಿಜ್ಯೋತಿಗಳಿಗಿಂತ ಅದು ವಿಲಕ್ಷಣವಾಗಿ ಯೂ ಅಭೌತಿಕವಾಗಿಯೂ (ಇರಬೇಕು) ; ಆದಿತ್ಯಾದಿಗಳಂತೆ ಚಕ್ಷುರಾದಿ ಗಳಿಗೆ ಕಾಣಬರುವದಿಲ್ಲವೆಂಬ ಅದೇ (ಇದಕ್ಕೂ) ಹೇತುವಾಗಿರುತ್ತದೆ.

# ಆತ್ಮಜ್ಯೋತಿಯ ವಿಷಯದಲ್ಲಿ ಆಕ್ಷೇಪಸಮಾಧಾನಗಳು

## ದೇಹಾತ್ಮವಾದಿಯ ಆಕ್ಷೇಪ

(ಭಾಷ್ಯ)

೧೭೭. ನ। ಸಮಾನಜಾತೀಯೇನೈವ ಉಪಕಾರದರ್ಶನಾತ್। ಯತ್ ಆದಿತ್ಯಾದಿವಿಲಕ್ಷಣಂ ಜ್ಯೋತಿರಾನ್ತರಂ ಸಿದ್ಧಮಿತಿ? ಏತದಸತ್। ಕಸ್ಮಾತ್? ಉಪಕ್ರಿಯಮಾಣಸಮಾನಜಾತೀಯೇನೈವ ಆದಿತ್ಯಾದಿಜ್ಯೋತಿಷಾ ಕಾರ್ಯಕರಣಸಂಘಾತಸ್ಯ ಭೌತಿಕಸ್ಯ ಭೌತಿಕೇನೈವ ಉಪಕಾರಃ ಕ್ರಿಯಮಾಣೋ ದೃಶ್ಯತೇ। ಯಥಾದೃಷ್ಟಂ ಚ ಇದಮನುಮೇಯಮ್। ಯದಿ ನಾಮ ಕಾರ್ಯಕರಣಾತ್ ಅರ್ಥಾನ್ತರಂ ತದುಪಕಾರಕಮ್ ಆದಿತ್ಯಾದಿವತ್ ಜ್ಯೋತಿಃ ತಥಾಪಿ ಕಾರ್ಯಕರಣಸಂಘಾತಸಮಾನಜಾತೀಯಮೇವ ಅನುಮೇಯಮ್। ಕಾರ್ಯಕರಣಸಂಘಾತೋಪಕಾರಕತ್ವಾತ್ ಆದಿತ್ಯಾದಿಜ್ಯೋತಿರ್ವತ್। ಯತ್ ಪುನಃ ಅನ್ತಃಸ್ಥತ್ವಾತ್ ಅಪ್ರತ್ಯಕ್ಷತ್ವಾಚ್ಚ ವೈಲಕ್ಷಣ್ಯಮುಚ್ಯತೇ। ತಚ್ಚಕ್ಷುರಾದಿ ಜ್ಯೋತಿರ್ಭಿರನೈಕಾನ್ತಿಕಮ್। ಯತಃ ಅಪ್ರತ್ಯಕ್ಷಾಣಿ ಅನ್ತಃಸ್ಥಾನಿ ಚ ಚಕ್ಷುರಾದಿಜ್ಯೋತೀಂಷಿ ಭೌತಿಕಾನ್ಯೇವ। ತಸ್ಮಾತ್ ತವ ಮನೋರಥಮಾತ್ರಮ್ ವಿಲಕ್ಷಣಮಾತ್ಮಜ್ಯೋತಿಃ ಸಿದ್ಧಮಿತಿ। ಕಾರ್ಯಕರಣಸಂಘಾತಭಾವಭಾವಿತ್ವಾಚ್ಚ ಸಂಘಾತಧರ್ಮತ್ವಮನುಮೀಯತೇ ಜ್ಯೋತಿಷಃ। ಸಾಮಾನ್ಯತೋ ದೃಷ್ಟಸ್ಯ ಚ ಅನುಮಾನಸ್ಯ ವ್ಯಭಿಚಾರಿತ್ವಾತ್ ಅಪ್ರಾಮಾಣ್ಯಮ್। ಸಾಮಾನ್ಯತೋದೃಷ್ಟಬಲೇನ ಹಿ ಭವಾನ್ ಆದಿತ್ಯಾದಿವತ್ ವ್ಯತಿರಿಕ್ತಂ ಜ್ಯೋತಿಃ ಸಾಧಯತಿ ಕಾರ್ಯಕರಣೇಭ್ಯಃ। ನ ಚ ಪ್ರತ್ಯಕ್ಷಮ್ ಅನುಮಾನೇನ ಬಾಧಿತುಂ ಶಕ್ಯತೇ। ಅಯಮೇವ ತು ಕಾರ್ಯಕರಣಸಂಘಾತಃ ಪ್ರತ್ಯಕ್ಷಂ ಪಶ್ಯತಿ ಶೃಣೋತಿ ಮನುತೇ ವಿಜಾನಾತಿ ಚ। ಯದಿ ನಾಮ ಜ್ಯೋತಿರನ್ತರಮ್ ಅಸ್ಯ ಉಪಕಾರಕಂ ಸ್ಯಾತ್ ಆದಿತ್ಯಾದಿವತ್, ನ ತದ್ ಆತ್ಮಾ ಸ್ಯಾತ್ ಜ್ಯೋತಿರನ್ತರಮ್ ಆದಿತ್ಯಾದಿವದೇವ। ಯ ಏವ ತು ಪ್ರತ್ಯಕ್ಷಂ ದರ್ಶನಾದಿಕ್ರಿಯಾಂ ಕರೋತಿ ಸ ಏವ ಆತ್ಮಾ ಸ್ಯಾತ್ ಕಾರ್ಯಕರಣಸಂಘಾತೋ ನಾನ್ಯಃ। ಪ್ರತ್ಯಕ್ಷವಿರೋಧೇ ಅನುಮಾನಸ್ಯ ಅಪ್ರಾಮಾಣ್ಯಾತ್। ನನು ಅಯಮೇವ ಚೇತ್ ದರ್ಶನಾದಿಕ್ರಿಯಾ ಕರ್ತಾ ಆತ್ಮಾ ಸಂಘಾತಃ ಕಥಮವಿಕಲಸ್ಯೈವಾಸ್ಯ ದರ್ಶನಾದಿಕ್ರಿಯಾಕರ್ತೃತ್ವಮ್ ಕದಾಚಿದ್ ಭವತಿ, ಕದಾಚಿನ್ನೇತಿ? ನೈಷ ದೋಷಃ। ದೃಷ್ಟತ್ವಾತ್। ನ ಹಿ ದೃಷ್ಟೇ ಅನುಪಪನ್ನಂ ನಾಮ। ನ ಹಿ ಖದ್ಯೋತೇ ಪ್ರಕಾಶಾಪ್ರಕಾಶಕತ್ವೇನ ದೃಶ್ಯಮಾನೇ ಕಾರಣಾನ್ತರಮ್ ಅನುಮೇಯಮ್। ಅನುಮೇಯತ್ವೇ ಚ ಕೇನಚಿತ್ ಸಾಮಾನ್ಯಾತ್ ಸರ್ವಂ ಸರ್ವತ್ರ ಅನುಮೇಯಂ ಸ್ಯಾತ್।

**ತಚ್ಚಾನಿಷ್ಟಮ್ । ನ ಚ ಪದಾರ್ಥಸ್ವಭಾವೋ ನಾಸ್ತಿ । ನ ಹಿ ಅಗ್ನೇಃ ಉಷ್ಣಸ್ವಾಭಾವ್ಯಮ್ ಅನ್ಯನಿಮಿತ್ತಮ್, ಉದಕಸ್ಯ ವಾ ಶೈತ್ಯಮ್ । ಪ್ರಾಣಿಧರ್ಮಾಧರ್ಮಾದ್ಯಪೇಕ್ಷಮ್ ಇತಿ ಚೇತ್ । ಧರ್ಮಾಧರ್ಮಾದೇರ್ನಿಮಿತ್ತಾನ್ತರಾಪೇಕ್ಷಸ್ವಭಾವಪ್ರಸಙ್ಗಃ । ಅಸ್ತ್ವಿತಿ ಚೇತ್ । ನ । ತದನವಸ್ಥಾಪ್ರಸಙ್ಗಃ । ಸ ಚಾನಿಷ್ಟಃ ॥**

(ಭಾಷ್ಯಾರ್ಥ)

(ದೇಹಾತ್ಮವಾದಿ) :- ಹಾಗಲ್ಲ. ಏಕೆಂದರೆ ಸಮಾನಜಾತಿಯ (ಪದಾರ್ಥ) ದಿಂದಲೇ ಉಪಕಾರವಾಗುವದು ಕಂಡುಬರುತ್ತದೆ (ಇದರ ವಿವರ) : ಆದಿತ್ಯನೇ ಮುಂತಾದವಕ್ಕಿಂತ ವಿಲಕ್ಷಣವಾದ, ಒಳಗಿನ ಜ್ಯೋತಿಯು ಸಿದ್ಧವಾಗುತ್ತದೆ ಎಂದು ಹೇಳುತ್ತೀಯಲ್ಲ, ಇದು ಸುಳ್ಳು. ಏಕೆ? ಎಂದರೆ, ಉಪಕಾರವನ್ನು ಹೊಂದುವದರ ಸಮಾನಜಾತೀಯವಾದ ಆದಿತ್ಯಜ್ಯೋತಿಯಿಂದಲೇ ಕಾರ್ಯಕರಣಸಂಘಾತಕ್ಕೆ- ಭೌತಿಕವಾದದ್ದಕ್ಕೆ ಭೌತಿಕವಾದದ್ದರಿಂದಲೇ- ಉಪಕಾರವು ಮಾಡಲ್ಪಡುವದು ಕಂಡುಬರುತ್ತಿದೆ. ಹೇಗೆ ಕಂಡಿದೆಯೋ ಹಾಗೆಯೇ ಇದನ್ನು ಅನುಮಾನಿಸಬೇಕು. ಒಂದು ವೇಳೆ ಕಾರ್ಯಕರಣಕ್ಕಿಂತ ಬೇರೆಯಾದ ವಸ್ತುವೇ ಆದಿತ್ಯಾದಿಗಳಂತೆ (ಅದಕ್ಕೆ) ಉಪಕಾರಕವಾದ ಜ್ಯೋತಿಯು ಎಂದರೂ ಆಗಲಿ, ಆಗಲೂ ಕಾರ್ಯಕರಣಸಂಘಾತಕ್ಕೆ ಸಮಾನವಾದ ಜಾತಿಯುದಾದ (ಜ್ಯೋತಿಯ)ನ್ನೇ ಅನುಮಾನಿಸಬಹುದಾಗುವದು. ಏಕೆಂದರೆ ಆದಿತ್ಯಾದಿಜ್ಯೋತಿಗಳಂತೆ (ಅದೂ) ಕಾರ್ಯಕರಣಸಂಘಾತಕ್ಕೆ ಉಪಕಾರಕವಾಗಿರುತ್ತದೆ. ಇನ್ನು (ಈ ಜ್ಯೋತಿಯು) ಒಳಗಿರುವದರಿಂದಲೂ ಅಪ್ರತ್ಯಕ್ಷವಾಗಿರುವದರಿಂದಲೂ (ಅವುಗಳಿಗಿಂತ) ವಿಲಕ್ಷಣವೆಂದು ಹೇಳುತ್ತೀರಷ್ಟೆ, ಈ (ಹೇತುವು) ಚಕ್ಷುರಾದಿಜ್ಯೋತಿಗಳ (ಉದಾಹರಣೆಯಿಂದ) ನಿಯತವಲ್ಲವೆಂದು ಗೊತ್ತಾಗುತ್ತದೆ, ಏಕೆಂದರೆ ಅಪ್ರತ್ಯಕ್ಷವಾಗಿಯೂ ಒಳಗಿರುವವುಗಳಾಗಿಯೂ ಇರುವ ಚಕ್ಷುರಾದಿಜ್ಯೋತಿಗಳು ಭೌತಿಕವಾಗಿಯೇ ಇರುತ್ತವೆ. ಆದ್ದರಿಂದ (ಆದಿತ್ಯಾದಿಗಳಿಗಿಂತ) ಆತ್ಮಜ್ಯೋತಿಯು ವಿಲಕ್ಷಣವೆಂದು ಸಿದ್ಧವಾಯಿತೆಂಬುದು ನಿನ್ನ ಮನೋರಥಮಾತ್ರವಾಗಿರುತ್ತದೆ

ಇದಲ್ಲದೆ ಕಾರ್ಯಕರಣಸಂಘಾತವಿದ್ದರೇ ಇರುವದರಿಂದ (ಈ) ಜ್ಯೋತಿಯು ಸಂಘಾತಧರ್ಮವೆಂದೇ ಅನುಮಾನಿಸಬಹುದಾಗಿದೆ.[1] ಸಾಮಾನ್ಯತೋದೃಷ್ಟವಾದ ಅನುಮಾನದಿಂದ ಬೇರ್ಪಡಬಹುದಾದ್ದರಿಂದ (ಅದು) ಪ್ರಮಾಣ

1. ಆತ್ಮಜ್ಯೋತಿಯು ಸಂಘಾತಕ್ಕಿಂತ ಬೇರೆಯೆಂದು ಒಪ್ಪಿ, ಆದಿತ್ಯಾದಿಗಳಂತೆ ಅದೂ ಭೌತಿಕವಾಗಿಯೇ ಇರಬೇಕು- ಎಂದು ಹಿಂದೆ ಅನುಮಾನಿಸಲಾಗಿತ್ತು, ಈಗ ಅದು ಬೇರೆಯೇ ಅಲ್ಲವೆಂದು ಅನುಮಾನಿಸುತ್ತದೆ

ವಲ್ಲ.[1] ಸಾಮಾನ್ಯತೋದೃಷ್ಟವಾದದ್ದರ ಬಲದಿಂದಲ್ಲವೆ, ನೀನು ಆದಿತ್ಯಾದಿಗಳಂತೆ ಕಾರ್ಯಕರಣಗಳಿಗಿಂತ ವ್ಯತಿರಿಕ್ತವಾದ ಜ್ಯೋತಿಯನ್ನು ಸಾಧಿಸುತ್ತಿರುವದು? ಆದರೆ ಪ್ರತ್ಯಕ್ಷವನ್ನು ಅನುಮಾನದಿಂದ ಬಾಧಿಸುವದು ಆಗಲಾರದು. ಆದರೆ ಈ ಕಾರ್ಯಕರಣಸಂಘಾತವೇ ನೋಡುತ್ತದೆ, ಕೇಳುತ್ತದೆ, ಮನನ ಮಾಡುತ್ತದೆ, ಮತ್ತು ಅರಿತುಕೊಳ್ಳುತ್ತದೆ ಎಂಬುದು ಪ್ರತ್ಯಕ್ಷವಾಗಿದೆ.[2] ಒಂದು ವೇಳೆ ಬೇರೊಂದು ಜ್ಯೋತಿಯು ಆದಿತ್ಯಾದಿಗಳಂತೆ ಇದಕ್ಕೆ ಉಪಕಾರಕವಾಗುತ್ತದೆ ಎಂದರೂ, ಆ ಮತ್ತೊಂದಾದ ಜ್ಯೋತಿಯು ಆದಿತ್ಯಾದಿಗಳಂತೆಯೇ ಆತ್ಮನಲ್ಲವೆಂದೇ ಆಗುತ್ತದೆ.[3] ಯಾವದು ಪ್ರತ್ಯಕ್ಷವಾಗಿ ದರ್ಶನಾದಿಕ್ರಿಯೆಗಳನ್ನು ಮಾಡುತ್ತಿದೆಯೋ ಆ ಕಾರ್ಯಕರಣಸಂಘಾತವೇ ಆತ್ಮನಾದೀತೇ ಹೊರತು ಮತ್ತೊಂದು (ಆತ್ಮ)ನಾಗಲಾರದು. ಏಕೆಂದರೆ ಪ್ರತ್ಯಕ್ಷಕ್ಕೆ ವಿರುದ್ಧವಾದಾಗ ಅನುಮಾನವು ಅಪ್ರಮಾಣವಾಗಿರುತ್ತದೆ.

(ಸಿದ್ಧಾಂತಿಯ ಆಕ್ಷೇಪ).– ಈ ಸಂಘಾತವೇ ದರ್ಶನಾದಿಕ್ರಿಯೆಗಳಿಗೆ ಕರ್ತೃವಾದ ಆತ್ಮನು ಎನ್ನುವದಾದರೆ ಯಾವ ಹೆಚ್ಚುಕಡಿಮೆಯೂ ಆಗದೆ ಇರುವಲ್ಲಿಯೂ ಇದಕ್ಕೆ ದರ್ಶನಾದಿಕ್ರಿಯಾಕರ್ತೃತ್ವವು ಆಗುವದು, ಒಂದು ಸಲ ಆಗದೆ ಇರುವದು –(ಇದು) ಹೇಗೆ (ಹೊಂದುತ್ತದ) ?

**(ದೇಹಾತ್ಮವಾದಿಯ ಪರಿಹಾರ)**:– ಇದೇನೂ ದೋಷವಲ್ಲ. ಏಕೆಂದರೆ ಇದು ದೃಷ್ಟವಾಗಿರುತ್ತದೆ. ದೃಷ್ಟವಾದದ್ದರಲ್ಲಿ ಹೊಂದುವದಿಲ್ಲ ಎಂಬುದಿಲ್ಲವಷ್ಟೆ? ದೀಪದ ಹುಳು ಪ್ರಕಾಶಾಪ್ರಕಾಶಕ(ರೂಪ)ದಿಂದ ಕಂಡುಬರುತ್ತಿರುವಲ್ಲಿ (ಅದಕ್ಕೆ) ಮತ್ತೊಂದು ಕಾರಣವನ್ನು ಅನುಮಾನಿಸುವದು (ಸರಿ)ಯಲ್ಲವಷ್ಟೆ? (ಹಾಗೆ) ಅನುಮಾನಿಸಬಹುದಾದರೆ, ಯಾವದಾದರೊಂದು ಸಾಮಾನ್ಯದಿಂದ ಯಾವದನ್ನಾದರೂ ಎಲ್ಲಿಯಾದರೂ ಅನುಮಾನಿಸಬಹುದಾಗುವದು.[4] ಅದು (ಯಾರಿಗೂ) ಇಷ್ಟವಲ್ಲ. ಪದಾರ್ಥಕ್ಕೆ ಸ್ವಭಾವವೇ ಇಲ್ಲ ಎನ್ನುವಂತೆ

---

1. ಜ್ಯೋತಿಷ್ಕಾರ್ಯವು ತನಗಿಂತ ಬೇರೆಯಾಗಿರುವ ಜ್ಯೋತಿಯಿಂದ ಆಗಿರಬೇಕು ಎಂಬುದು ಸಾಮಾನ್ಯತೋದೃಷ್ಟ, ಶರೀರಕ್ಕಿಂತ ವ್ಯತಿರಿಕ್ತವಾಗಿ ಜ್ಯೋತಿಯೊಂದು ಇರಬೇಕು ಎಂಬ ವಿಶೇಷವ್ಯಾಪ್ತಿಯನ್ನು ಸಿದ್ಧಾಂತಿಯು ಉದಾಹರಿಸುವದಕ್ಕೆ ಬರುವದಿಲ್ಲ.

2 ಪ್ರತ್ಯಕ್ಷವಾಗಿದೆ ಎಂದರೆ ದೃಢವಾದ ಪ್ರತ್ಯಯವು ಎಲ್ಲರಿಗೂ ಆಗುತ್ತದೆ, ಅಥವಾ ಅನುಮಾನವನ್ನುಂಟುಮಾಡುವದಕ್ಕಿಂತ ಮೊದಲೇ ತಿಳಿಯಬರುತ್ತದೆ ಎಂದರ್ಥ.

3. ಆದಿತ್ಯಾದಿಗಳಿಲ್ಲದಾಗಿನ ಜ್ಯೋತಿಯು (೧) ಭೌತಿಕವಾಗಿರಬೇಕು' (೨) ಸಂಘಾತದ ಧರ್ಮವೇ ಆಗಿರಬೇಕು ಎಂಬ ಎರಡು ಅನುಮಾನಗಳನ್ನು ಹೇಳಿ ಈಗ (೩) ಅದು ಅನಾತ್ಮವೇ ಆಗಿರಬೇಕು ಎಂಬ ಮೂರನೆಯ ಅನುಮಾನವನ್ನು ಹೇಳಿದೆ.

4 ಬೆಂಕಿಯು ಪದಾರ್ಥವಾದ್ದರಿಂದ ಮಂಜಿನಂತೆ ತಣ್ಣಗಿದೆ ಎಂದೂ ಅನುಮಾನಿಸಬಹುದಾಗುವದು.

ಯೂ ಇಲ್ಲ. ಬೆಂಕಿಗೆ ಬಿಸಿಯಾಗಿರುವ ಸ್ವಭಾವವು ಮತ್ತೊಂದು ನಿಮಿತ್ತ ದಿಂದಾದದ್ದು, ಅಥವಾ ನೀರಿಗೆ ತಂಪು (ಮತ್ತೊಂದು ನಿಮಿತ್ತದಿಂದಾದದ್ದು) ಎಂಬುದಿಲ್ಲವಷ್ಟೆ[1] ?

(ಸಿದ್ಧಾಂತಿಯ ಆಕ್ಷೇಪ) :- ಅದು ಪ್ರಾಣಿಗಳ ಧರ್ಮಾಧರ್ಮಗಳೇ ಮುಂತಾದವುಗಳ[2] ಅಪೇಕ್ಷೆಯಿಂದ (ಆಗಿರುತ್ತದೆ) ಎನ್ನಬಹುದಲ್ಲ !

(ದೇಹಾತ್ಮವಾದಿಯ ಪರಿಹಾರ) :- ಹಾಗಾದರೆ ಧರ್ಮಾಧರ್ಮಾದಿಗಳ ಸ್ವಭಾವವೂ ಮತ್ತೊಂದು ನಿಮಿತ್ತದ ಅಪೇಕ್ಷೆಯಿಂದಾದದ್ದು ಎಂಬ ಪ್ರಸಂಗವು (ಬರುವದು). (ಅದೂ) ಆಗಲಿ ಎಂಬುದು ಸರಿಯಲ್ಲ ; (ಆಗ) ಅದರ ನಿಲುಗಡೆ ಯಿಲ್ಲದೆಹೋಗುವ ಪ್ರಸಂಗ(ವುಂಟಾಗುವದು). ಅದು (ನಿಮಗೂ) ಇಷ್ಟವಲ್ಲ.

## ಸಿದ್ಧಾಂತ : ಆತ್ಮಜ್ಯೋತಿಯು ವ್ಯತಿರಿಕ್ತ

(ಭಾಷ್ಯ)

೧೯೮. ನ । ಸ್ವಪ್ನಸ್ಮೃತ್ಯೋರ್ದೃಷ್ಟಸ್ಯೈವ ದರ್ಶನಾತ್ । ಯದುಕ್ತಂ ಸ್ವಭಾವವಾದಿನಾ ದೇಹಸ್ಯೈವ ದರ್ಶನಾದಿಕ್ರಿಯಾ ನ ವ್ಯತಿರಿಕ್ತಸ್ಯ ಇತಿ । ತನ್ನ । ಯದಿ ಹಿ ದೇಹಸ್ಯೈವ ದರ್ಶನಾದಿಕ್ರಿಯಾ, ಸ್ವಪ್ನೇ ದೃಷ್ಟಸ್ಯೈವ ದರ್ಶನಂ ನ ಸ್ಯಾತ್ । ಅನ್ಧಃ ಸ್ವಪ್ನಂ ಪಶ್ಯನ್ ದೃಷ್ಟಪೂರ್ವಮೇವ ಪಶ್ಯತಿ ನ ಶಾಕದ್ವೀಪಾದಿಗತಮ್ ಅದೃಷ್ಟರೂಪಮ್ । ತತಶ್ಚ ಏತತ್ ಸಿದ್ಧಂ ಭವತಿ ಯಃ ಸ್ವಪ್ನೇ ಪಶ್ಯತಿ ದೃಷ್ಟಪೂರ್ವಂ ವಸ್ತು ಸ ಏವ ಪೂರ್ವಂ ವಿದ್ಯಮಾನೇ ಚಕ್ಷುಷಿ ಅದ್ರಾಕ್ಷೀತ್ ನ ದೇಹ ಇತಿ । ದೇಹಶ್ಚೇತ್ ದ್ರಷ್ಟಾ ಸ ಯೇನ ಅದ್ರಾಕ್ಷೀತ್ ತಸ್ಮಿನ್ ಉದ್ಧೃತೇ ಚಕ್ಷುಷಿ ಸ್ವಪ್ನೇ ತದೇವ ದೃಷ್ಟಪೂರ್ವಂ ನ ಪಶ್ಯೇತ್ । ಅಸ್ತಿ ಚ ಲೋಕೇ ಪ್ರಸಿದ್ಧಿಃ ಪೂರ್ವಂ ದೃಷ್ಟಂ ಮಯಾ ಹಿಮವತಃ ಶೃಙ್ಗಮ್ ಅದ್ಯಾಹಂ ಸ್ವಪ್ನೇ ಅದ್ರಾಕ್ಷಮ್ ಇತಿ ಉದ್ಧೃತಚಕ್ಷುಷಾಮನ್ಧಾನಾಮಪಿ । ತಸ್ಮಾತ್ ಅನುದ್ಧೃತೇಽಪಿ ಚಕ್ಷುಷಿ ಯಃ ಸ್ವಪ್ನದೃಕ್ ಸ ಏವ ದ್ರಷ್ಟಾ ನ ದೇಹಃ ಇತ್ಯವಗಮ್ಯತೇ। ತಥಾ ಸ್ಮೃತೌ ದ್ರಷ್ಟೃಸ್ಮರ್ತ್ರೋರೇಕತ್ವೇ ಸತಿ ಯ ಏವ ದ್ರಷ್ಟಾ ಸ ಏವ ಸ್ಮರ್ತಾ । ಯದಾ ಚೈವಮ್ ತದಾ ನಿಮೀಲಿತಾಕ್ಷೋಽಪಿ ಸ್ಮರನ್ ದೃಷ್ಟಪೂರ್ವಂ ಯದ್ರೂಪಂ ತದ್ ದೃಷ್ಟವದೇವ ಪಶ್ಯತೀತಿ । ತಸ್ಮಾತ್ ಯನ್ನಿಮೀಲಿತಂ ತನ್ನ ದ್ರಷ್ಟೃ । ಯನ್ನಿಮೀಲಿತೇ ಚಕ್ಷುಷಿ ಸ್ಮರದ್ರೂಪಂ ಪಶ್ಯತಿ ತದೇವ ಅನಿಮೀಲಿತೇಽಪಿ ಚಕ್ಷುಷಿ ದ್ರಷ್ಟ್ರಾಸೀತ್ ಇತ್ಯವ

1. ಅವುಗಳಿಗೆ ಅದು ಹೇಗೆ ಸ್ವಭಾವವೋ ಹಾಗೆ ದರ್ಶನಾದಿಕ್ರಿಯಾಕರ್ತೃತ್ವವೂ ಶರೀರಕ್ಕೆ ಸ್ವಭಾವವು ಎಂದು ಭಾವ.

2. ಮುಂತಾದವುಗಳೆಂದರೆ ಈಶ್ವರ, ಕಾಲ- ಮುಂತಾದವುಗಳು.

ಗಮ್ಯತೇ । ಮೃತೇ ಚ ದೇಹೇ ಅವಿಕಲಸ್ಯೈವ ಚ ರೂಪಾದಿದರ್ಶನಾಭಾವಾತ್ । ದೇಹಸ್ಯೈವ ದ್ರಷ್ಟೃತ್ವೇ ಮೃತೇಽಪಿ ದರ್ಶನಾದಿಕ್ರಿಯಾ ಸ್ಯಾತ್ । ತಸ್ಮಾತ್ ಯದಪಾಯೇ ದೇಹೇ ದರ್ಶನಂ ನ ಭವತಿ, ಯದ್ಭಾವೇ ಚ ಭವತಿ, ತದ್ದರ್ಶನಾದಿ ಕ್ರಿಯಾಕರ್ತೃ ನ ದೇಹಃ ಇತ್ಯವಗಮ್ಯತೇ । ಚಕ್ಷುರಾದೀನ್ಯೇವ ದರ್ಶನಾದಿಕ್ರಿಯಾಕರ್ತೄಣಿ ಇತಿ ಚೇತ್ । ನ । ಯದಹಮ್ ಅದ್ರಾಕ್ಷಮ್ ತತ್ ಸ್ಪೃಶಾಮಿ ಇತಿ ಭಿನ್ನಕರ್ತೃತ್ವೇ ಪ್ರತಿಸಂಧಾನಾನುಪಪತ್ತೇಃ । ಮನಸ್ತರ್ಹಿ ಇತಿ ಚೇತ್ । ನ । ಮನಸೋಽಪಿ ವಿಷಯತ್ವಾತ್ ರೂಪಾದಿವತ್ ದ್ರಷ್ಟೃತ್ವಾದ್ಯನುಪಪತ್ತಿಃ । ತಸ್ಮಾತ್ ಅನ್ತಃಸ್ಥಂ ವ್ಯತಿರಿಕ್ತಮ್ ಆದಿತ್ಯಾದಿವತ್ ಇತಿ ಸಿದ್ಧಮ್ ॥

(ಭಾಷ್ಯಾರ್ಥ)

ಹಾಗಲ್ಲ. ಏಕೆಂದರೆ ಸ್ವಪ್ನಸ್ಮೃತಿಗಳಲ್ಲಿ (ಹಿಂದೆ) ಕಂಡದ್ದನ್ನೇ ಕಾಣುತ್ತಾನೆ. (ಇದರ ವಿವರ): ಸ್ವಭಾವವಾದಿಯು ದರ್ಶನಾದಿಕ್ರಿಯೆಯು ದೇಹಕ್ಕೇ ಸೇರಿದ್ದು ಎಂದು ಹೇಳಿದನಷ್ಟೆ, ಅದು (ಸರಿ)ಯಲ್ಲ. ಏಕೆಂದರೆ ದರ್ಶನಾದಿ ಕ್ರಿಯೆಯು ದೇಹಕ್ಕೇ ಸೇರಿರುವದಾದರೆ, ಸ್ವಪ್ನದಲ್ಲಿ (ಹಿಂದೆ) ನೋಡಿದ್ದನ್ನೇ ನೋಡುವದು ಆಗಲಾರದು. ಕುರುಡನು ಕನಸನ್ನು ಕಾಣುವವನಾಗಿ (ಹಿಂದೆ ಎಚ್ಚರದಲ್ಲಿ ತಾನು) ಕಂಡದ್ದನ್ನೇ ಕಾಣುತ್ತಾನೆಯೇ ಹೊರತು ಶಾಕದ್ವೀಪದಲ್ಲಿರುವ ಅದೃಷ್ಟರೂಪವಾದ (ವಸ್ತುವನ್ನು) ಕಾಣುವದಿಲ್ಲ[1] ; ಆದರಿಂದ ಯಾವನು ಸ್ವಪ್ನದಲ್ಲಿ ಹಿಂದೆ ನೋಡಿದ್ದ ವಸ್ತುವನ್ನು ಕಾಣುತ್ತಾನೋ ಅವನೇ ಹಿಂದೆ ಕಣ್ಣು ಇದ್ದಾಗಲೂ ಕಾಣುತ್ತಿದ್ದನೇ ಹೊರತು ದೇಹವಲ್ಲ ಎಂದು ಸಿದ್ಧವಾಗುತ್ತದೆ. ದೇಹವು ದ್ರಷ್ಟೃವಾಗಿದ್ದರೆ ಅವನು ಏತರಿಂದ ಕಾಣುತ್ತಿದ್ದನೋ ಆ ಕಣ್ಣು ಹೋದಮೇಲೆ ಸ್ವಪ್ನದಲ್ಲಿ ಆ ಹಿಂದೆ ನೋಡಿದ್ದನ್ನೇ ಕಾಣಬಾರದು. ಆದರೆ "ಹಿಂದೆ ನಾನು ನೋಡಿದ್ದ ಹಿಮವತ್ಪರ್ವತದ ಕೋಡುಗಲ್ಲನ್ನು ಇಂದು ನಾನು ಕನಸಿನಲ್ಲಿ ಕಂಡೆನು" ಎಂದು ಕಣ್ಣುಹೋದ ಕುರುಡರಿಗೂ (ಅರಿವಾಗುವದೆಂದು) ಲೋಕದಲ್ಲಿ ಪ್ರಸಿದ್ಧಿಯಿದೆ. ಆದ್ದರಿಂದ ಕಣ್ಣುಹೋಗದೆ ಇರುವಾಗಲೂ ಯಾವನು ಸ್ವಪ್ನವನ್ನು ಕಾಣುವನೋ ಅವನೇ ದ್ರಷ್ಟೃವೇ ಹೊರತು ದೇಹವಲ್ಲ ಎಂದು ನಿಶ್ಚಯವಾಗುತ್ತದೆ. ಇದರಂತೆ ಸ್ಮೃತಿಯಲ್ಲಿಯೂ (ಹಿಂದೆ) ಕಂಡವನು, (ಈಗ) ಸ್ಮರಿಸಿಕೊಳ್ಳುವವನು– ಇವರಿಬ್ಬರೂ ಒಬ್ಬನೇ ಆಗಿರುವದರಿಂದ ಹಿಂದೆ ಯಾವನು ಕಂಡವನೋ ಅವನೇ ಸ್ಮರಿಸಿಕೊಳ್ಳುವವನು, ಮತ್ತು ಹೀಗೆಯೇ ಕಣ್ಣುಮುಚ್ಚಿಕೊಂಡು ಸ್ಮರಿಸುವವನೂ

1. ಎಚ್ಚರದಲ್ಲಿ ಕಾಣುವ ವಸ್ತುವನ್ನು ಕನಸಿನಲ್ಲಿ ಕಾಣಬಹುದೆ ಇಲ್ಲವೆ, ಎಂಬುದೇನೂ ಇಲ್ಲಿ ಪ್ರಕೃತವಲ್ಲ ; ಎಚ್ಚರದಲ್ಲಿ ಕಂಡದ್ದನ್ನೇ ಕನಸಿನಲ್ಲಿ ಕಾಣುವದೆಂಬುದು ದೇಹವ್ಯತಿರಿಕ್ತದ್ರಷ್ಟೃವಿದ್ದರೆ ಸಾಧ್ಯ ಎಂಬುದು ವಿವಕ್ಷಿತ.

ಹಿಂದೆ ಕಂಡಿರುವ ರೂಪವನ್ನು (ಹಿಂದೆ) ಕಂಡಂತೆಯೇ ಕಾಣುತ್ತಾನಾದ್ದರಿಂದ ಯಾವದನ್ನು ಮುಚ್ಚಿದನೋ ಆ (ಕಣ್ಣು) ದ್ರಷ್ಟೃವಲ್ಲ ; ಕಣ್ಣುಮುಚ್ಚಿದರೂ ಯಾವದು ಸ್ಮರಿಸಿಕೊಂಡು ರೂಪವನ್ನು ಕಾಣುತ್ತದೆಯೋ ಅದೇ ಕಣ್ಣು ಮುಚ್ಚದೆ ಇರುವಾಗಲೂ ದ್ರಷ್ಟೃವಾಗಿದ್ದಿತೆಂದು ನಿಶ್ಚಯವಾಗುತ್ತದೆ.

ದೇಹವು ಸತ್ತುಹೋದರೆ (ಅದು) ಹಾಗೆಯೇ ಇದ್ದರೂ ರೂಪವೇ ಮುಂತಾದವುಗಳನ್ನು ಕಾಣುವದಿಲ್ಲವಾದ್ದರಿಂದಲೂ (ಹೀಗೆಂದು ಸಿದ್ಧವಾಗುತ್ತದೆ). ದೇಹವೇ ದ್ರಷ್ಟೃವಾಗಿದ್ದಿದ್ದರೆ (ಅದು) ಸತ್ತರೂ ದರ್ಶನವೇ ಮುಂತಾದ ಕ್ರಿಯೆಯು ಆಗಬಹುದಾಗಿತ್ತು. ಆದ್ದರಿಂದ ಯಾವದು ಹೋದದ್ದರಿಂದ ದೇಹದಲ್ಲಿ ದರ್ಶನವು ಆಗುವದಿಲ್ಲವೋ, ಯಾವದಿದ್ದರೆ ಆಗುವದೋ ಅದೇ ದರ್ಶನಾದಿಕ್ರಿಯೆಗೆ ಕರ್ತೃವೇ ಹೊರತು ದೇಹವಲ್ಲ ಎಂದು ಗೊತ್ತಾಗುತ್ತದೆ.[1]

(ಸ್ವಭಾವವಾದಿ) :– ಚಕ್ಷುರಾದಿಗಳೇ ದರ್ಶನಾದಿಕ್ರಿಯೆಗೆ ಕರ್ತೃಗಳು.

(ಸಿದ್ಧಾಂತಿ) :– ಹಾಗಲ್ಲ. ಏಕೆಂದರೆ ನಾನು ಯಾವದನ್ನು ಕಂಡಿದ್ದೆನೋ ಅದನ್ನೇ ಮುಟ್ಟುತ್ತಿದೇನೆ ಎಂಬ ಪ್ರತಿಸಂಧಾನವು ಕರ್ತೃಗಳು ಭಿನ್ನಭಿನ್ನವಾದರೆ ಆಗಲಾರದು.[2]

(ಸ್ವಭಾವವಾದಿ) :– ಹಾಗಾದರೆ ಮನಸ್ಸೇ (ಅವಕ್ಕೆ) ಕರ್ತೃವಾಗಲಿ !

(ಸಿದ್ಧಾಂತಿ) :– ಹಾಗಲ್ಲ. ಏಕೆಂದರೆ ಮನಸ್ಸೂ ವಿಷಯವಾಗಿರುವದರಿಂದ ರೂಪಾದಿಗಳಂತೆ (ಅದಕ್ಕೂ) ದ್ರಷ್ಟೃತ್ವಾದಿಗಳು ಹೊಂದುವಹಾಗಿಲ್ಲ.

ಆದ್ದರಿಂದ ಒಳಗಿರುವ (ಜ್ಯೋತಿಯು) ಆದಿತ್ಯಾದಿಗಳಂತೆ (ಸಂಘಾತಕ್ಕಿಂತ) ವ್ಯತಿರಿಕ್ತವೇ ಎಂದು ಸಿದ್ಧವಾಯಿತು.

## ಪೂರ್ವಪಕ್ಷಯುಕ್ತಿಗಳ ಖಂಡನೆ

(ಭಾಷ್ಯ)

೧೬೯. ಯದುಕ್ತಂ ಕಾರ್ಯಕರಣಸಂಘಾತಸಮಾನಜಾತೀಯಮೇವ ಜ್ಯೋತಿರನ್ತರಮ್ ಅನುಮೇಯಮ್ । ಆದಿತ್ಯಾದಿಭಿಸ್ತತ್ಸಮಾನಜಾತೀಯೈರೇವ ಉಪಕ್ರಿಯಮಾಣತ್ವಾತ್ ಇತಿ । ತದಸತ್ । ಉಪಕಾರ್ಯೋಪಕಾರಕಭಾವಸ್ಯ ಅನಿಯಮದರ್ಶನಾತ್ । ಕಥಮ್ ? ಪಾರ್ಥಿವೈರಿನ್ಧನೈಃ ಪಾರ್ಥಿವತ್ವಸಮಾನಜಾತೀಯೈಃ ತೃಣೋಲಪಾದಿಭಿರಗ್ನೇಃ ಪ್ರಜ್ವಲನೋಪಕಾರಃ ಕ್ರಿಯಮಾಣೋ ದೃಶ್ಯತೇ । ನ ಚ ತಾವತಾ ತತ್ಸಮಾನಜಾತೀಯೈರೇವ ಅಗ್ನೇಃ ಪ್ರಜ್ವಲನೋಪಕಾರಃ ಸರ್ವತ್ರಾನುಮೇಯಃ ಸ್ಯಾತ್ । ಯೇನ ಉದ

---

1. ಸೂ. ಭಾ. ೩-೩-೫೪, ಭಾ. ಭಾ. ೪೧೭.

2. ಏಕೆಂದರೆ ಸ್ಪರ್ಶೇಂದ್ರಿಯವು ಹಿಂದೆ ಕಂಡಿರಲಿಲ್ಲವಾಗಿ, ನಾನೇ ಮುಟ್ಟಿದೆನು ಎಂಬ ನೆನಪು ಅದಕ್ಕೆ ಆಗುವದಕ್ಕಿಲ್ಲ.

ಕೇನಾಪಿ ಪ್ರಜ್ವಲನೋಪಕಾರೋ ಭಿನ್ನಜಾತೀಯೇನ ವೈದ್ಯುತಸ್ಯ ಅಗ್ನೇ ರ್ಜಾಠರಸ್ಯ ಚ ಕ್ರಿಯಮಾಣೋ ದೃಶ್ಯತೇ । ತಸ್ಮಾತ್ ಉಪಕಾರ್ಯೋಪಕಾರಕ ಭಾವೇ ಸಮಾನಜಾತೀಯಾಸಮಾನಜಾತೀಯನಿಯಮೋ ನಾಸ್ತಿ । ಕದಾಚಿತ್ ಸಮಾನಜಾತೀಯಾ ಮನುಷ್ಯಾ ಮನುಷ್ಯೈರೇವ ಉಪಕ್ರಿಯನ್ತೇ । ಕದಾಚಿತ್ ಸ್ಥಾವರಪಶ್ವಾದಿಭಿಶ್ಚ ಭಿನ್ನಜಾತೀಯೈಃ । ತಸ್ಮಾತ್ ಅಹೇತುಃ ಕಾರ್ಯಕರಣ ಸಂಘಾತಸಮಾನಜಾತೀಯೈರೇವ ಆದಿತ್ಯಾದಿಜ್ಯೋತಿರ್ಭಿಃ ಉಪಕ್ರಿಯಮಾಣ ತ್ವಾತ್ ಇತಿ । ಯತ್ಪುನರಾತ್ಥ ಚಕ್ಷುರಾದಿಭಿರಾದಿತ್ಯಾದಿಜ್ಯೋತಿರ್ವದದೃಶ್ಯ ತ್ವಾತ್ ಇತ್ಯಯಂ ಹೇತುರ್ಜ್ಯೋತಿರನ್ತರಸ್ಯ ಅನ್ತಃಸ್ಥತ್ವಂ ವೈಲಕ್ಷಣ್ಯಂ ಚ ನ ಸಾಧಯತಿ ಚಕ್ಷುರಾದಿಭಿರನೈಕಾನ್ತಿಕತ್ವಾದಿತಿ । ತದಸತ್ । 'ಚಕ್ಷುರಾದಿಕರಣೇ ಭ್ಯೋಽನ್ಯತ್ವೇ ಸತಿ' ಇತಿ ಹೇತೋರ್ವಿಶೇಷಣತ್ವೋಪಪತ್ತೇಃ । ಕಾರ್ಯಕರಣ ಸಂಘಾತಧರ್ಮತ್ವಂ ಜ್ಯೋತಿಷಃ ಇತಿ ಯದುಕ್ತಮ್, ತನ್ನ । ಅನುಮಾನ ವಿರೋಧಾತ್ । ಆದಿತ್ಯಾದಿಜ್ಯೋತಿರ್ವತ್ ಕಾರ್ಯಕರಣಸಂಘಾತಾತ್ ಅರ್ಥಾ ನ್ತರಂ ಜ್ಯೋತಿಃ ಇತಿ ಹಿ ಅನುಮಾನಮ್ ಉಕ್ತಮ್ । ತೇನ ವಿರುಧ್ಯತ ಇಯಂ ಪ್ರತಿಜ್ಞಾ ಕಾರ್ಯಕರಣಸಂಘಾತಧರ್ಮತ್ವಂ ಜ್ಯೋತಿಷಃ ಇತಿ । ತದ್ಭಾವಭಾವಿತ್ವಂ ತು ಅಸಿದ್ಧಮ್। ಮೃತೇ ದೇಹೇ ಜ್ಯೋತಿಷೋಽದರ್ಶನಾತ್। ಸಾಮಾನ್ಯತೋದೃಷ್ಟಸ್ಯ ಅನುಮಾನಸ್ಯ ಅಪ್ರಾಮಾಣ್ಯೇ ಸತಿ ಪಾನಭೋಜನಾದಿ ಸರ್ವವ್ಯವಹಾರಲೋಪಪ್ರಸಙ್ಗಃ । ಸ ಚಾನಿಷ್ಟಃ । ಪಾನಭೋಜನಾದಿಷು ಹಿ ಕ್ಷುತ್ಪಿಪಾಸಾದಿನಿವೃತ್ತಿಮ್ ಉಪಲಬ್ಧವತಸ್ತತ್ಸಾಮಾನ್ಯಾತ್ ಪಾನಭೋಜನಾ ದ್ಯುಪಾದಾನಂ ದೃಶ್ಯಮಾನಂ ಲೋಕೇ ನ ಪ್ರಾಪ್ನೋತಿ । ದೃಶ್ಯನ್ತೇ ಹಿ ಉಪಲಬ್ಧಪಾನಭೋಜನಾಃ ಸಾಮಾನ್ಯತಃ ಪುನಃ ಪಾನಭೋಜನಾನ್ತರೈಃ ಕ್ಷುತ್ಪಿಪಾಸಾದಿನಿವೃತ್ತಿಮನುಮಿನ್ವನ್ತಃ ತಾದರ್ಥ್ಯೇನ ಪ್ರವರ್ತಮಾನಾಃ । ಯದುಕ್ತಮಯಮೇವ ತು ದೇಹೋ ದರ್ಶನಾದಿಕ್ರಿಯಾಕರ್ತಾ ಇತಿ, ತತ್ ಪ್ರಥಮಮೇವ ಪರಿಹೃತಮ್, ಸ್ವಪ್ನಸ್ಮೃತ್ಯೋರ್ದೇಹಾದರ್ಥಾನ್ತರಭೂತೋ ದ್ರಷ್ಟಾ ಇತಿ । ಅನೇನೈವ ಜ್ಯೋತಿರನ್ತರಸ್ಯ ಅನಾತ್ಮತ್ವಮಪಿ ಪ್ರತ್ಯುಕ್ತಮ್। ಯತ್ಪುನಃ ಖದ್ಯೋತಾದೇಃ ಕಾದಾಚಿತ್ಕಂ ಪ್ರಕಾಶಾಪ್ರಕಾಶಕತ್ವಮ್, ತದಸತ್ । ಪಕ್ಷಾದ್ಯವಯವಸಂಕೋಚವಿಕಾಸನಿಮಿತ್ತತ್ವಾತ್ ಪ್ರಕಾಶಾಪ್ರಕಾಶ ಕತ್ವಸ್ಯ । ಯತ್ಪುನರುಕ್ತಮ್ ಧರ್ಮಾಧರ್ಮಯೋರವಶ್ಯಂ ಫಲದಾತೃತ್ವಂ ಸ್ವಭಾವೋಽಭ್ಯುಪಗನ್ತವ್ಯಃ ಇತಿ ।[1] ತದಭ್ಯುಪಗಮೇ ಭವತಃ ಸಿದ್ಧಾನ್ತ ಹಾನಾತ್ । ಏತೇನ ಅನವಸ್ಥಾದೋಷಃ ಪ್ರತ್ಯುಕ್ತಃ । ತಸ್ಮಾತ್ ಅಸ್ತಿ ವ್ಯತಿರಿಕ್ತಂ ಚಾನ್ತಃಸ್ಥಂ ಜ್ಯೋತಿರಾತ್ಮಾ ಇತಿ ॥

---

1. ಇದರ ಮುಂದೆ "ತದಯುಕ್ತಮ್" ಎಂದೋ "ತನ್ನ" ಎಂದೋ ಒಂದು ವಾಕ್ಯವು ಬಿಟ್ಟುಹೋಗಿದೆ ಎಂದು ಊಹಿಸುವದಕ್ಕೆಡೆಯಿದೆ.

(ಭಾಷ್ಯಾರ್ಥ)

ಕಾರ್ಯಕರಣಸಂಘಾತಕ್ಕೆ ಸಮಾನವಾದ ಜಾತಿಯುವಾದ ಮತ್ತೊಂದು ಜ್ಯೋತಿಯನ್ನೇ ಅನುಮಾನಿಸಬೇಕು ; ಏಕೆಂದರೆ ಆದಿತ್ಯನೇ ಮುಂತಾದ ಅದಕ್ಕೆ ಸಮಾನವಾದ ಜಾತಿಯುವಾದ (ವಸ್ತುಗಳಿಂದಲೇ ಅದಕ್ಕೆ) ಉಪಕಾರವಾಗುತ್ತಿದೆ ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ, ಅದು ಸರಿಯಲ್ಲ. ಏಕೆಂದರೆ ಉಪಕಾರ್ಯೋಪಕಾರಕಭಾವದಲ್ಲಿ (ಯಾವ) ನಿಯಮವೂ ಇಲ್ಲವೆಂದು ಕಂಡುಬರುತ್ತದೆ. ಹೇಗೆ? ಎಂದರೆ ಪಾರ್ಥಿವವಾದ ಇಂಧನಗಳಾದ ಕಡ್ಡಿ, ಹುಲ್ಲು- ಮುಂತಾದವುಗಳಿಂದ ಬೆಂಕಿಗೆ ಉರಿಯುವದಕ್ಕೆ ಉಪಕಾರವಾಗುವದು ಕಂಡುಬರುತ್ತದೆ. ಆದರೆ ಅಷ್ಟುಮಾತ್ರದಿಂದ ಅದಕ್ಕೆ ಸಮಾನಜಾತಿಯುವಾದ (ಪದಾರ್ಥ)ಗಳಿಂದಲೇ ಬೆಂಕಿಗೆ ಉರಿಯುವದಕ್ಕೆ ಉಪಕಾರವಾಗಬೇಕೆಂದು ಎಲ್ಲೆಲ್ಲಿಯೂ ಅನುಮಾನಿಸುವದಕ್ಕಾಗಲಾರದು ; ಏಕೆಂದರೆ ಬೇರೆಯ ಜಾತಿಯುದಾದ ನೀರಿನಿಂದಲೂ ಮಿಂಚಿನ ಅಗ್ನಿಗೂ ಜಾಠರಾಗ್ನಿಗೂ (ಉಪಕಾರ)ವಾಗುವದು ಕಂಡುಬರುತ್ತದೆ. ಆದ್ದರಿಂದ ಉಪಕಾರ್ಯ, ಉಪಕಾರಕ- ಎಂಬ ಸಂಬಂಧಕ್ಕೆ ಸಮಾನಜಾತಿಯದಾಗಿರುವದು ಅಥವಾ ಅಸಮಾನಜಾತಿಯದಾಗಿರುವದು ಎಂಬ ನಿಯಮವಿಲ್ಲ ಕೆಲವುವೇಳೆ ಸಮಾನಜಾತೀಯರಾದ ಮನುಷ್ಯರಿಗೆ ಮನುಷ್ಯರಿಂದಲೇ ಉಪಕಾರವಾಗುತ್ತದೆ; ಕೆಲವುವೇಳೆ ಸ್ಥಾವರಗಳು, ಪಶುಗಳು- ಮುಂತಾದ ಬೇರೆಯ ಜಾತಿಯುವುಗಳಿಂದಲೂ (ಉಪಕಾರವಾಗುತ್ತದೆ). ಆದ್ದರಿಂದ ಸಮಾನಜಾತೀಯಗಳೇ ಆಗಿರುವ ಆದಿತ್ಯಾದಿ ಜ್ಯೋತಿಗಳಿಂದ ಉಪಕಾರವಾಗುತ್ತಿರುವದರಿಂದ -ಎಂಬುದು (ಸರಿಯಾದ) ಹೇತುವಲ್ಲ.

ಇನ್ನು ಚಕ್ಷುರಾದಿಗಳಿಂದ ಆದಿತ್ಯಾದಿಜ್ಯೋತಿಗಳಂತೆ ಅದೃಶ್ಯವಾಗಿರುವದರಿಂದ- ಎಂಬುದು (ಆ) ಮತ್ತೊಂದು ಜ್ಯೋತಿಯು ಅಂತಃಸ್ಥವೆಂಬುದನ್ನೂ (ಅವುಗಳಿಗಿಂತ) ವಿಲಕ್ಷಣವೆಂಬುದನ್ನೂ ಸಾಧಿಸಿಕೊಡಲಾರದು , ಏಕೆಂದರೆ ಚಕ್ಷುಸ್ಸೇ ಮುಂತಾದ(ವುಗಳ ಉದಾಹರಣೆಯಿಂದ ಅದು) ಅನಿಯತ(ವೆಂದು ಗೊತ್ತಾಗುತ್ತದೆ) ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ. ಅದು ಸರಿಯಲ್ಲ. ಏಕೆಂದರೆ ಚಕ್ಷುರಾದಿಕರಣಗಳಿಗಿಂತ ಅನ್ಯವಾಗಿದ್ದು (ಅದೃಶ್ಯವಾಗಿರುವದರಿಂದ) ಎಂದು ಹೇತುವಿಗೆ ವಿಶೇಷಣವನ್ನು ಹಾಕಿಕೊಳ್ಳಬಹುದಾಗಿರುತ್ತದೆ.

(ಆ) ಜ್ಯೋತಿಯು ಕಾರ್ಯಕರಣಸಂಘಾತಧರ್ಮವೇ ಎಂದು (ಪೂರ್ವಪಕ್ಷದಲ್ಲಿ ಹೇಳಿತ್ತಷ್ಟೆ, ಅದು (ಸರಿ)ಯಲ್ಲ ; ಏಕೆಂದರೆ (ಅದು) ಅನುಮಾನಕ್ಕೆ ವಿರುದ್ಧವಾಗಿರುತ್ತದೆ. ಆದಿತ್ಯಾದಿಜ್ಯೋತಿಗಳಂತೆ ಕಾರ್ಯಕರಣಸಂಘಾತ ಜ್ಯೋತಿಯು ಬೇರೊಂದು ಪದಾರ್ಥವು ಎಂದಲ್ಲವೆ, ಅನುಮಾನವನ್ನು (ನಾವು) ಹೇಳಿರುವದು ? ಜ್ಯೋತಿಯು ಕಾರ್ಯಕರಣಸಂಘಾತದ ಧರ್ಮ

ವಾಗಿರುತ್ತದೆ ಎಂಬೀ ಪ್ರತಿಜ್ಞೆಯು ಅದಕ್ಕೆ ವಿರುದ್ಧವಾಗಿರುತ್ತದೆ.[1] ಅದಿದ್ದರೆ (ಇದೂ) ಇರುತ್ತದೆ ಎಂಬುದಾದರೋ[2] ಸಿದ್ಧವಾಗಿರುವದಿಲ್ಲ; ಏಕೆಂದರೆ ದೇಹವು ಸತ್ತಿರುವಲ್ಲಿ ಜ್ಯೋತಿಯು ಕಾಣಬರುವದಿಲ್ಲ. ಸಾಮಾನ್ಯತೋ ದೃಷ್ಟವಾದ ಅನುಮಾನವು ಅಪ್ರಮಾಣವೆಂದರೆ[3] ಕುಡಿಯುವದು, ಊಟ ಮಾಡುವದು– ಮುಂತಾದ ಸಕಲವ್ಯವಹಾರಗಳೂ ಇಲ್ಲವಾಗಬೇಕಾಗಿಬರುವದು; ಆದರೆ (ಅದು ಯಾರಿಗೂ) ಇಷ್ಟವಲ್ಲ, ಪಾನಭೋಜನಾದಿಗಳಲ್ಲಿ ಬಾಯಾರಿಕೆ, ಹಸಿವು ಮುಂತಾದವುಗಳು ತೊಲಗುತ್ತಿರುವದನ್ನು ಕಂಡವನು ಅವುಗಳ ಹೋಲಿಕೆಯಿಂದ (ಬೇರೆಯ) ಪಾನಭೋಜನಾದಿಗಳನ್ನು (ಹಸಿವು ಬಾಯಾರಿಕೆಗಳೇ ಮುಂತಾದವುಗಳ ನಿವೃತ್ತಿಗೆಂದು) ಸ್ವೀಕರಿಸುವದು ಲೋಕದಲ್ಲಿ ಕಂಡಿದೆಯಲ್ಲ, (ಅದು) ಆಗಬಾರದಾಗುವದು. ಪಾನಭೋಜನಗಳ ಅನುಭವವುಳ್ಳವರು ಸಾಮಾನ್ಯದಿಂದ ಮತ್ತೆ ಬೇರೆಯ ಪಾನಭೋಜನಗಳಿಂದ ಹಸಿವು ಬಾಯಾರಿಕೆ ಮುಂತಾದವುಗಳು ತೊಲಗುವವೆಂದು ಅನುಮಾನಿಸಿ ಅದಕ್ಕಾಗಿ ಮುಂದುವರಿಯುವವರು ಕಂಡುಬರುತ್ತಾರಲ್ಲವೆ ?

ಈ ದೇಹವೇ ದರ್ಶನಾದಿಕ್ರಿಯೆಗಳ ಕರ್ತೃ ಎಂದು (ಪೂರ್ವಪಕ್ಷದಲ್ಲಿ) ಹೇಳಿತ್ತಷ್ಟೆ; ಸ್ವಪ್ನಸ್ಮೃತಿಗಳಲ್ಲಿ ದೇಹಕ್ಕಿಂತ ಬೇರೆಯಾಗಿ ದ್ರಷ್ಟೃವಿರುತ್ತಾನೆಂದು (ತಿಳಿಸಿ) ಅದನ್ನು (ಈ) ಮೊದಲೇ ಪರಿಹರಿಸಿದ್ದಾಗಿದೆ. ಇದರಿಂದಲೇ (ಆ) ಇನ್ನೊಂದು ಜ್ಯೋತಿಯು ಆತ್ಮನಲ್ಲವೆಂಬ (ಪೂರ್ವಪಕ್ಷ)ವನ್ನು ತಿರಸ್ಕರಿಸಿದಂತೆ ಆಯಿತು.[4] ಇನ್ನು ದೀಪದಹುಳುವೇ ಮುಂತಾದದ್ದಕ್ಕೆ ಕೆಲವುವೇಳೆಗಳಲ್ಲಿ ಮಾತ್ರ ಪ್ರಕಾಶಕತ್ವವೂ ಅಪ್ರಕಾಶಕತ್ವವೂ (ಇರುವದು ಪ್ರತ್ಯಕ್ಷವಾಗಿದೆ ಎಂದಿರಲ್ಲ), ಅದು ಸರಿಯಲ್ಲ, ಏಕೆಂದರೆ (ಅದಕ್ಕೆ) ಪ್ರಕಾಶಕತ್ವವೂ ಅಪ್ರಕಾಶಕತ್ವವೂ ಇರುವದಕ್ಕೆ ರೆಕ್ಕೆಗಳೇ ಮುಂತಾದ ಅವಯವಗಳನ್ನು ಕುಗ್ಗಿಸುವದು ಹಿಗ್ಗಿಸುವದು ಎಂಬಿದೇ ನಿಮಿತ್ತವಾಗಿದೆ. ಇನ್ನು ಧರ್ಮಾಧರ್ಮಗಳು ಫಲವನ್ನು ಕೊಡುವವೆಂದರೂ (ಅದು ಅವುಗಳ) ಸ್ವಭಾವವೇ ಎಂದು ಒಪ್ಪಬೇಕು (ಎಂದಿರಲ್ಲ, ಅದೂ ಸರಿಯಲ್ಲ); ಏಕೆಂದರೆ ಅದನ್ನೊಪ್ಪಿದರೆ ನಿಮ್ಮ ಸಿದ್ಧಾಂತವನ್ನೇ ಕೈ

1. ಬೇರೊಂದು ಜ್ಯೋತಿಯನ್ನು ಒಪ್ಪಿ ಸಮಾನಜಾತೀಯವಾದ ಜ್ಯೋತಿಯೇ ಆಗಿರಲಿ ಎಂದು ಪೂರ್ವಪಕ್ಷಿಯೂ ವಾದಿಸಿದ್ದಾನೆ ; ಅದಕ್ಕೂ ಇದು ವಿರುದ್ಧ.

2. ದೇಹವಿದ್ದರೆ ಚೈತನ್ಯಜ್ಯೋತಿಯಿರುತ್ತದೆ ಎಂಬುದು.

3. ಸಾಮಾನ್ಯವಾಗಿ ಸಂಘಾತಕ್ಕಿಂತ ವ್ಯತಿರಿಕ್ತವಾಗಿರುವ ಆದಿತ್ಯಾದಿಜ್ಯೋತಿಗಳನ್ನು ಕಂಡು ಅದೃಷ್ಟವಾದ ಜ್ಯೋತಿಯೂ ವ್ಯತಿರಿಕ್ತವಾಗಿರಬೇಕೆಂದು ಅನುಮಾನಿಸುವದು ಸರಿಯಲ್ಲ ಎಂಬ ಹೇಳುವದಕ್ಕಾಗಿ ಪೂರ್ವಪಕ್ಷಿಯು ಸಾಮಾನ್ಯತೋದೃಷ್ಟವಾದ ಅನುಮಾನವೇ ಅಪ್ರಮಾಣ ಎಂದಿದ್ದನು.

4. ಏಕೆಂದರೆ ಜಾಗ್ರತ್ಸ್ವಪ್ನಗಳಲ್ಲಿರುವ ಅನಾತ್ಮಗಳನ್ನೆಲ್ಲ ಬೆಳಗುವ ಜ್ಯೋತಿಯು ಆತ್ಮನೇ ಆಗಿರಬೇಕೆಂದು ಸಿದ್ಧವಾಗಿದೆ.

ಬಿಡಬೇಕಾಗುವದು.[1] ಇದರಿಂದ ಅನವಸ್ಥಾದೋಷವನ್ನೂ ತಿರಸ್ಕರಿಸಿದಂತೆ ಆಯಿತು.[2] ಆದ್ದರಿಂದ (ಸಂಘಾತಕ್ಕಿಂತ) ವ್ಯತಿರಿಕ್ತವಾಗಿ ಒಳಗಿರುವ ಆತ್ಮನೆಂಬ ಜ್ಯೋತಿಯಿದೆ.[3]

## ಆತ್ಮಸ್ವರೂಪನಿರ್ಧಾರಣ

(ಉಪನಿಷತ್ತು)

**ಕತಮ ಆತ್ಮೇತಿ ಯೋಽಯಂ ವಿಜ್ಞಾನಮಯಃ ಪ್ರಾಣೇಷು ಹೃದ್ಯನ್ತರ್ಜ್ಯೋತಿಃ ಪುರುಷಃ ಸ ಸಮಾನಃ ಸನ್ನುಭೌ ಲೋಕಾವನುಸಂಚರತಿ ಧ್ಯಾಯತೀವ ಲೇಲಾಯತೀವ ಸ ಹಿ ಸ್ವಪ್ನೋ ಭೂತ್ವೇಮಂ ಲೋಕಮತಿಕ್ರಾಮತಿ ಮೃತ್ಯೋ ರೂಪಾಣಿ ॥ ೭ ॥**

೭. "ಆತ್ಮನೆಂದರೆ ಯಾವನು?" ಪ್ರಾಣಗಳಲ್ಲಿರುವ ವಿಜ್ಞಾನಮಯನಾದ ಹೃದಯದೊಳಗಿರುವ ಜ್ಯೋತಿಯಾದ ಈ ಪುರುಷನಿದಾನಲ್ಲ, (ಅವನು). ಅವನು ಸಮಾನನಾಗಿ ಎರಡು ಲೋಕಗಳನ್ನೂ ಅನುಸಂಚಾರಮಾಡುತ್ತಿರುವನು. ಧ್ಯಾನಮಾಡುವವನಂತೆ, ಅಲುಗಾಡುವವನಂತೆ (ಇರುತ್ತಾನೆ). ಅವನೇ ಸ್ವಪ್ನವಾಗಿ ಈ ಲೋಕವನ್ನು, ಮೃತ್ಯುವಿನ ರೂಪಗಳನ್ನು, ಅತಿಕ್ರಮಿಸುತ್ತಾನೆ.

## ಪ್ರಶ್ನವಾಕ್ಯದ ವಿಭಾಗ

(ಭಾಷ್ಯ)

೧೭೦. ಯದ್ಯಪಿ ವ್ಯತಿರಿಕ್ತತ್ವಾದಿ ಸಿದ್ಧಮ್। ತಥಾಪಿ ಸಮಾನಜಾತೀಯಾನುಗ್ರಾಹಕತ್ವದರ್ಶನನಿಮಿತ್ತಭ್ರಾನ್ತ್ಯಾ ಕರಣಾನಾಮೇವ ಅನ್ಯತಮಃ ವ್ಯತಿರಿಕ್ತೋ ವಾ ಇತ್ಯವಿವೇಕತಃ ಪೃಚ್ಛತಿ 'ಕತಮಃ?' ಇತಿ। ನ್ಯಾಯಸೂಕ್ಷ್ಮತಯಾ[4] ದುರ್ವಿಜ್ಞೇಯತ್ವಾತ್ ಉಪಪದ್ಯತೇ ಭ್ರಾನ್ತಿಃ। ಅಥವಾ

---

1. ವಸ್ತುಗಳಿಗೇ ಆಯಾ ಸ್ವಭಾವವಿದೆ ಎಂಬುದು ಸಿದ್ಧಾಂತವು : ಅದು ಧರ್ಮಾಧರ್ಮನಿಮಿತ್ತವೆಂದರೆ ಅದಕ್ಕೆ ವಿರೋಧವಾಗುವದು.

2. ಏಕೆಂದರೆ ಧರ್ಮಾಧರ್ಮಗಳಿಗೆ ಮತ್ತೊಂದು ನಿಮಿತ್ತವನ್ನು ನಾವು ಒಪ್ಪಿಲ್ಲ.

3. ಈ ಚರ್ಚೆಯಲ್ಲಿ ಅವಸ್ಥಾಸಾಕ್ಷಿಯಾದ ಚೈತನ್ಯವು ಸ್ವತಃಸಿದ್ಧವೆಂಬುದನ್ನು ಇಟ್ಟುಕೊಳ್ಳದೆ ಚರ್ಚಿಸಿದೆ ಎಂಬುದನ್ನು ಲಕ್ಷಿಸಬೇಕು. ಪ್ರತ್ಯಕ್ಷವು ಪ್ರಮಾಣವೆನ್ನುವದಕ್ಕೂ ಪ್ರಮಾಣಫಲವೆಂದು ದೇಹಾತ್ಮವಾದಿಗಳೂ ಒಪ್ಪುವ ಅನುಭವವು ಬೇಕಾಗುತ್ತದೆ. ಅಜ್ಞಾನವೂ ಪ್ರಮಾಣವೂ ಎರಡೂ ಅನುಭವದಿಂದಲೇ ಸಿದ್ಧವಾದ್ದರಿಂದ ಆ ಅನುಭವರೂಪನಾದ ಆತ್ಮನನ್ನು ಇಲ್ಲವೆನ್ನುವದಕ್ಕಾಗುವದಿಲ್ಲ ಎಂದು ಮುಂತಾಗಿ ವಾರ್ತಿಕದಲ್ಲಿ ವಿಶದಗೊಳಿಸಿದೆ.

4. "ನ್ಯಾಯಸೂಕ್ಷ್ಮತಾಯಾಃ" ಎಂದು ಅಚ್ಚಿನ ಪುಸ್ತಕದ ಪಾಠ.

ಶರೀರವ್ಯತಿರಿಕ್ತೇ ಸಿದ್ಧೇಽಪಿ ಕರಣಾನಿ ಸರ್ವಾಣಿ ವಿಜ್ಞಾನವನ್ತೀವ । ವಿವೇಕತ ಆತ್ಮನೋಽನುಪಲಬ್ಧತ್ವಾತ್ । ಅತೋಽಹಂ ಪೃಚ್ಛಾಮಿ ಕತಮ ಆತ್ಮೇತಿ । ಕತಮೋಽಸೌ ದೇಹೇನ್ದ್ರಿಯಪ್ರಾಣಮನಸ್ಸು ಯಸ್ತ್ವಯೋಕ್ತ ಆತ್ಮಾ, ಯೇನ ಜ್ಯೋತಿಷಾ 'ಆಸ್ತೇ' ಇತ್ಯುಕ್ತಮ್ ? ಅಥವಾ ಯೋಽಯಮಾತ್ಮಾ ತ್ವಯಾ ಅಭಿಪ್ರೇತೋ ವಿಜ್ಞಾನಮಯಃ । ಸರ್ವ ಇಮೇ ಪ್ರಾಣಾ ವಿಜ್ಞಾನ ಮಯಾ ಇವ, ಏಷು ಪ್ರಾಣೇಷು ಕತಮಃ ? ಯಥಾ ಸಮುದಿತೇಷು ಬ್ರಾಹ್ಮ ಣೇಷು ಸರ್ವ ಇಮೇ ತೇಜಸ್ವಿನಃ, ಕತಮ ಏಷು ಷಡಙ್ಗವಿತ್ ? ಇತಿ । ಪೂರ್ವಸ್ಮಿನ್ ವ್ಯಾಖ್ಯಾನೇ 'ಕತಮ ಆತ್ಮಾ ?' ಇತ್ಯೇತಾವದೇವ ಪ್ರಶ್ನ ವಾಕ್ಯಮ್, 'ಯೋಽಯಂ ವಿಜ್ಞಾನಮಯಃ' ಇತಿ ಪ್ರತಿವಚನಮ್ । ದ್ವಿತೀಯೇ ತು ವ್ಯಾಖ್ಯಾನೇ 'ಪ್ರಾಣೇಷು' ಇತ್ಯೇವಮನ್ತಂ ಪ್ರಶ್ನವಾಕ್ಯಮ್ । ಅಥವಾ ಸರ್ವಮೇವ ಪ್ರಶ್ನವಾಕ್ಯಮ್ 'ವಿಜ್ಞಾನಮಯೋ ಹೃದ್ಯನ್ತರ್ಜ್ಯೋತಿಃ ಪುರುಷಃ'[1] ಇತ್ಯೇತದನ್ತಮ್ । 'ಯೋಽಯಂ ವಿಜ್ಞಾನಮಯಃ' ಇತ್ಯೇತಸ್ಯ ಶಬ್ದಸ್ಯ ನಿರ್ಧಾರಿತಾರ್ಥವಿಶೇಷವಿಷಯತ್ವಮ್ । 'ಕತಮ ಆತ್ಮೇತಿ' ಇತಿ[2] ಇತಿಶಬ್ದಸ್ಯ ಪ್ರಶ್ನವಾಕ್ಯಪರಿಸಮಾಪ್ತ್ಯರ್ಥತ್ವಂ ವ್ಯವಹಿತಸಂಬನ್ಧಮನ್ತರೇಣ ಯುಕ್ತಮ್ ಇತಿ ಕೃತ್ವಾ 'ಕತಮ ಆತ್ಮೇತಿ'[3] ಇತ್ಯೇವಮನ್ತಮೇವ ಪ್ರಶ್ನ ವಾಕ್ಯಮ್, 'ಯೋಽಯಮ್' ಇತ್ಯಾದಿ ಪರಂ ಸರ್ವಮೇವ ಪ್ರತಿವಚನಮ್ ಇತಿ ನಿಶ್ಚೀಯತೇ ॥

(ಭಾಷ್ಯಾರ್ಥ)

(ಆತ್ಮನು ಕಾರ್ಯಕರಣಸಂಘಾತಕ್ಕಿಂತ) ವ್ಯತಿರಿಕ್ತನಾಗಿರುವದೇ ಮುಂತಾದದ್ದು[4] ಸಿದ್ಧವೇ (ಆಗಿದೆ); ಆದರೂ ಸಮಾನಜಾತೀಯ (ಪದಾರ್ಥ) ಗಳು ಅನುಗ್ರಾಹಕವಾಗಿರುವದು ಕಂಡುಬರುವವೆಂಬ ನಿಮಿತ್ತದಿಂದಾದ ಭ್ರಾಂತಿ ಯಿಂದ ಕರಣಗಳಲ್ಲಿಯೇ ಯಾವದಾದರೂ ಒಂದೇ (ಆತ್ಮನೊ), (ಅವುಗಳಿ ಗಿಂತ) ವ್ಯತಿರಿಕ್ತನೊ? —ಎಂದು ವಿವೇಚನೆಯಿಲ್ಲದೆ 'ಯಾವನು' ಎಂದು ಕೇಳುತ್ತಿದಾನೆ. ನ್ಯಾಯವು ಸೂಕ್ಷ್ಮವಾಗಿರುವದರಿಂದ (ನಿಜವನ್ನು) ತಿಳಿದು ಕೊಳ್ಳುವದು ಕಷ್ಟವಾಗಿರುವದರಿಂದ (ಈ) ಭ್ರಾಂತಿಯು ಆಗಬಹುದಾಗಿದೆ.[5]

---

1. ಆ॥ ಪಾಠದಲ್ಲಿರುವ ಇದರ ಮುಂದಿನ 'ಕತಮಃ' ಎಂಬುದು ಹೆಚ್ಚೆಂದು ಬಿಟ್ಟಿದೆ.
2. ಇಲ್ಲೊಂದು ಇತಿ ಶಬ್ದವು ಬೇಕಾಗಿರುವದರಿಂದ ಇಟ್ಟುಕೊಂಡಿದೆ.
3. ಇಲ್ಲಿಯೂ ಇತಿ ಶಬ್ದವು ಬೇಕು ; ವಾ॥ ಪಾಠದಲ್ಲಿದೆ.
4. ಅಭೌತಿಕವಾಗಿರುವದು, ಅಂತಃಸ್ಥವಾಗಿರುವದು.
5. ಈ ಭ್ರಾಂತಿಯಿಂದಲೇ ಸಂಘಾತಾತ್ಮವಾದಿಗಳು ಚಕ್ಷುರಾದಿಗಳೇ ಆತ್ಮನೆಂದು ವಾದಿಸುವದು ; ಇದನ್ನು ತಿಳಿಸುವದಕ್ಕೇ ಹಿಂದಿನ ಕಂಡಿಕೆಯ ಭಾಷ್ಯದಲ್ಲಿ ಚರ್ಚೆಯನ್ನು ಆರಂಭಿಸಿದ್ದು.

ಅಥವಾ (ಆತ್ಮನು) ಶರೀರಕ್ಕಿಂತ ವ್ಯತಿರಿಕ್ತನೆಂದು ಸಿದ್ಧವಾದರೂ ಕರಣಗಳೆಲ್ಲವೂ ವಿಜ್ಞಾನವುಳ್ಳವುಗಳಂತೆಯೇ (ಕಾಣುತ್ತಿವೆ); ಏಕೆಂದರೆ ಆತ್ಮನು ಬೇರೆಯಾಗಿ ಕಂಡುಬರುವದಿಲ್ಲ. ಆದ್ದರಿಂದ ನಾನು 'ಆತ್ಮನು ಯಾವನು?' ಎಂದು ಕೇಳುತ್ತಿದೇನೆ. ದೇಹ, ಇಂದ್ರಿಯಗಳು, ಪ್ರಾಣ, ಮನಸ್ಸು- ಇವುಗಳಲ್ಲಿ[1] ನೀನು ಹೇಳಿದ ಈ ಆತ್ಮನು ಯಾವನು? ಯಾವ ಜ್ಯೋತಿಯಿಂದ '(ಪುರುಷನು) ಕುಳಿತುಕೊಳ್ಳುತ್ತಾನೆ ....?' ಎಂದೆಯೋ, ಆ (ಆತ್ಮನು ಯಾವನು)?

ಅಥವಾ ನಿನ್ನ ಅಭಿಪ್ರಾಯದಲ್ಲಿ ವಿಜ್ಞಾನಮಯನೆಂದು (ಇರುವ) ಈ ಆತ್ಮನಿದಾನಲ್ಲ- ಈ ಪ್ರಾಣಗಳೆಲ್ಲವೂ ವಿಜ್ಞಾನಮಯವಾಗಿಯೇ (ಇವೆ); ಈ ಪ್ರಾಣಗಳಲ್ಲಿ- (ಅವನು) ಯಾವನು? ಹೇಗೆ ಬ್ರಾಹ್ಮಣರು ಒಟ್ಟಾಗಿರುವಲ್ಲಿ "ಇವರೆಲ್ಲರೂ ತೇಜಸ್ವಿಗಳೇ (ಆಗಿರುತ್ತಾರೆ); ಇವರಲ್ಲಿ ಷಡಂಗಗಳನ್ನು ಬಲ್ಲವನು ಯಾವನು?' ಎಂದು (ಕೇಳುತ್ತಾರೆಯೋ ಹಾಗೆಯೇ ಇದು.).

ಮೊದಲನೆಯ ವ್ಯಾಖ್ಯಾನದಲ್ಲಿ 'ಕತಮ ಆತ್ಮಾ' (ಆತ್ಮನು ಯಾವನು)"- ಎಂಬುದಿಷ್ಟೇ ಪ್ರಶ್ನವಾಕ್ಯವು; 'ಯೋಽಯಂ ವಿಜ್ಞಾನಮಯಃ' (ಈ ವಿಜ್ಞಾನಮಯನಿದಾನಲ್ಲ) ಎಂಬುದು ಉತ್ತರವು. ಆದರೆ ಎರಡನೆಯ ವ್ಯಾಖ್ಯಾನದಲ್ಲಿ 'ಪ್ರಾಣೇಷು' (ಪ್ರಾಣಗಳೊಳಗೆ) ಎಂಬವರೆಗೂ ಪ್ರಶ್ನವಾಕ್ಯವು. ಅಥವಾ ಎಲ್ಲವೂ 'ವಿಜ್ಞಾನಮಯೋ ಹೃದ್ಯನ್ತರ್ಜ್ಯೋತಿಃ ಪುರುಷಃ' (ವಿಜ್ಞಾನಮಯನಾಗಿ ಹೃದಯದೊಳಗಿನ ಜ್ಯೋತಿಯಾಗಿರುವ ಪುರುಷನಾದ) ಎಂಬವರೆಗಿನದೆಲ್ಲವೂ ಪ್ರಶ್ನವಾಕ್ಯವೇ; 'ಯೋಽಯಂ ವಿಜ್ಞಾನಮಯಃ' ಎಂಬೀ ಶಬ್ದಕ್ಕೆ (ಹಿಂದೆ) ನಿಶ್ಚಯಿಸಿರುವ ಅರ್ಥವಿಶೇಷವೇ ವಿಷಯವು (ಎಂದು ತಿಳಿಯಬೇಕು).[2] 'ಕತಮ ಆತ್ಮೇತಿ' ಎಂಬಲ್ಲಿರುವ ಇತಿಶಬ್ದಕ್ಕೆ ಪ್ರಶ್ನವಾಕ್ಯವನ್ನು ಸಮಾಪ್ತಿಗೊಳಿಸುವದೆಂಬರ್ಥವು ವ್ಯವಹಿತವಾದ (ಪದಗಳ) ಸಂಬಂಧವಿಲ್ಲದೆಯೇ (ಆಗುವದು) ಯುಕ್ತವು ಎಂದು ಇಟ್ಟುಕೊಂಡರೆ, 'ಕತಮ ಆತ್ಮೇತಿ' (ಆತ್ಮನು ಯಾವನು)? ಎಂಬವರೆಗೇ ಪ್ರಶ್ನವಾಕ್ಯವು, 'ಯೋಽಯಮ್' ಎಂದು ಮುಂತಾಗಿ ಮುಂದೆ ಇರುವದೆಲ್ಲವೂ ಉತ್ತರವೇ ಎಂದು ನಿಶ್ಚಿತವಾಗುತ್ತದೆ.[3]

---

1. ಇಂದ್ರಿಯಗಳು, ಪ್ರಾಣ, ಮನಸ್ಸು- ಇಷ್ಟನ್ನು 'ಪ್ರಾಣೇಷು' ಎಂಬ ಮಾತಿನಿಂದ ಗ್ರಹಿಸಬೇಕು.

2. ಆತ್ಮನು ವಿಜ್ಞಾನಮಯನೆಂದು ನಿಶ್ಚಯಿಸಿ ನೀನು ಹೇಳಿರುತ್ತೀಯೆ, ಆದರೆ ಪ್ರಾಣಗಳೂ ವಿಜ್ಞಾನಮಯವಾಗಿ ಕಾಣುತ್ತಿವೆಯಲ್ಲ! ಅವುಗಳಿಗಿಂತ ವ್ಯತಿರಿಕ್ತನಾದ ಆತ್ಮನು ಯಾವನು? ಎಂಬುದು ಈ ವ್ಯಾಖ್ಯಾನದ ಅಭಿಪ್ರಾಯ. ಆದರೆ 'ಆತ್ಮನು ಯಾವನು?' ಎಂಬುದು ಪ್ರಶ್ನೆ; ವಿಜ್ಞಾನಮಯನಾಗಿರುವವನೇ ಆತ್ಮನು ಎಂಬುದೇ ಉತ್ತರ -ಎಂಬುದು ಮೊದಲನೆಯ ವ್ಯಾಖ್ಯಾನದ ಅಭಿಪ್ರಾಯ.

3. ಇದೇ ಭಾಷ್ಯಕಾರರು ಕೊನೆಗೆ ಒಪ್ಪಿದ ವ್ಯಾಖ್ಯಾನವೆಂಬುದಕ್ಕೆ ಇಲ್ಲಿ ಕೊಟ್ಟಿರುವ ಯುಕ್ತಿಯೇ ಆಧಾರ.

ಕಂಡಿಕೆಯಲ್ಲಿ ವಿಜ್ಞಾನಮಯನೆಂದರೆ ವಿಜ್ಞಾನಪ್ರಾಯನು

(ಭಾಷ್ಯ)

೧೭೧. ಯೋಽಯಮ್ ಇತಿ ಆತ್ಮನಃ ಪ್ರತ್ಯಕ್ಷತ್ವಾತ್ ನಿರ್ದೇಶಃ। ವಿಜ್ಞಾನಮಯಃ ವಿಜ್ಞಾನಪ್ರಾಯಃ। ಬುದ್ಧಿವಿಜ್ಞಾನೋಪಾಧಿಸಂಪರ್ಕಾವಿವೇಕಾತ್ ವಿಜ್ಞಾನಮಯಃ ಇತ್ಯುಚ್ಯತೇ। ಬುದ್ಧಿವಿಜ್ಞಾನಸಂಪೃಕ್ತ ಏವ ಹಿ ಯಸ್ಮಾತ್ ಉಪಲಭ್ಯತೇ ರಾಹುರಿವ ಚನ್ದ್ರಾದಿತ್ಯಸಂಪೃಕ್ತಃ। ಬುದ್ಧಿರ್ಹಿ ಸರ್ವಾರ್ಥಕರಣಂ ತಮಸೀವ ಪ್ರದೀಪಃ ಪುರೋಽವಸ್ಥಿತಃ। "ಮನಸಾ ಹ್ಯೇವ ಪಶ್ಯತಿ ಮನಸಾ ಶೃಣೋತಿ" (೧-೫-೩) ಇತಿ ಹಿ ಉಕ್ತಮ್। ಬುದ್ಧಿವಿಜ್ಞಾನಾಲೋಕವಿಶಿಷ್ಟಮೇವ ಹಿ ಸರ್ವಂ ವಿಷಯಜಾತಮ್ ಉಪಲಭ್ಯತೇ ಪುರೋಽವಸ್ಥಿತಪ್ರದೀಪಾಲೋಕವಿಶಿಷ್ಟಮಿವ ತಮಸಿ। ದ್ವಾರಮಾತ್ರಾಣಿ ತು ಅನ್ಯಾನಿ ಕರಣಾನಿ ಬುದ್ಧೇಃ। ತಸ್ಮಾತ್ ತೇನೈವ ವಿಶೇಷ್ಯತೇ 'ವಿಜ್ಞಾನಮಯಃ' ಇತಿ। ಯೇಷಾಂ ಪರಮಾತ್ಮವಿಜ್ಞಪ್ತಿವಿಕಾರಃ ಇತಿ ವ್ಯಾಖ್ಯಾನಮ್, ತೇಷಾಂ "ವಿಜ್ಞಾನಮಯೋ ಮನೋಮಯಃ" (೪-೪-೫) ಇತ್ಯಾದೌ ವಿಜ್ಞಾನಮಯಶಬ್ದಸ್ಯ ಅನ್ಯಾರ್ಥದರ್ಶನಾತ್ ಅಶ್ರೌತಾರ್ಥತಾ ಅವಸೀಯತೇ। ಸಂದಿಗ್ಧಶ್ಚ ಪದಾರ್ಥೋಽನ್ಯತ್ರ ನಿಶ್ಚಿತಪ್ರಯೋಗದರ್ಶನಾತ್ ನಿರ್ಧಾರಯಿತುಂ ಶಕ್ಯಃ, ವಾಕ್ಯಶೇಷಾತ್, ನಿಶ್ಚಿತನ್ಯಾಯಬಲಾದ್ವಾ। 'ಸಧೀ'ರಿತಿ ಚ ಉತ್ತರತ್ರ ಪಾಠಾತ್। ಹೃದ್ಯನ್ತರಿತಿ ವಚನಾತ್ ಯುಕ್ತಂ ವಿಜ್ಞಾನಪ್ರಾಯತ್ವಮೇವ॥

(ಭಾಷ್ಯಾರ್ಥ)

'ಈ (ವಿಜ್ಞಾನಮಯ)ನಿದಾನಲ್ಲ' ಎಂದು ಆತ್ಮನನ್ನು (ಈ ಎಂಬ ಶಬ್ದದಿಂದ) ತಿಳಿಸಿದೆ, ಏಕೆಂದರೆ (ಆತ್ಮನು) ಪ್ರತ್ಯಕ್ಷನಾಗಿರುತ್ತಾನೆ. ವಿಜ್ಞಾನಮಯನು ಎಂದರೆ ವಿಜ್ಞಾನಪ್ರಾಯನು[1], ಬುದ್ಧಿವಿಜ್ಞಾನವೆಂಬ ಉಪಾಧಿಯ ಸಂಪರ್ಕದಿಂದ ವಿಂಗಡಿಸಿಕೊಳ್ಳದೆ ಇರುವದರಿಂದ (ಇವನನ್ನು) ವಿಜ್ಞಾನಮಯನು ಎಂದಿದೆ; (ಇದರ ವಿವರ): ಬುದ್ಧಿವಿಜ್ಞಾನದ ಸಂಪರ್ಕವುಳ್ಳವನಾಗಿಯೇ ಅಲ್ಲವೆ, ರಾಹುವು ಚಂದ್ರಸೂರ್ಯರ ಸಂಪರ್ಕ(ದಿಂದಲೇ ಕಾಣು)ವಂತೆ (ಆತ್ಮನು) ಕಾಣಬರುತ್ತಾನೆ[2]? ಬುದ್ಧಿಯಲ್ಲವೆ, ಕತ್ತಲೆಯಲ್ಲಿ ಮುಂದಿಟ್ಟ ದೀಪದಂತೆ ಸರ್ವಾರ್ಥ(ಗಳನ್ನೂ ತಿಳಿಯುವದಕ್ಕೆ) ಕರಣವು? "ಮನಸ್ಸಿನಿಂದಲೇ ಅಲ್ಲವೆ ಕಾಣುತ್ತಾನೆ, ಮನಸ್ಸಿನಿಂದಲೇ ಕೇಳುತ್ತಾನೆ" (೧-೫-೩)

1. ಹಿಂದೆ ಗಾರ್ಗ್ಯಾಜಾತಶತ್ರು ಸಂವಾದದ "ಯ ಏಷ ವಿಜ್ಞಾನಮಯಃ" (೨-೧-೧೬) ಎಂಬುದರ ವ್ಯಾಖ್ಯಾನ (ಭಾ. ಭಾ. ೨೮೭) ವನ್ನು ನೋಡಿ. ಅಲ್ಲಿ ವಿಜ್ಞಾನಪ್ರಾಯನೆಂಬುದರ ಅರ್ಥವನ್ನು ಇನ್ನಷ್ಟು ವಿಶದಗೊಳಿಸಿದೆ.

2 ತೈ. ಭಾ. ೨-೬ (ಭಾ. ಭಾ. ೧೭೬)ದಲ್ಲಿರುವ ರಾಹುದೃಷ್ಟಾಂತವನ್ನೂ ಅದರ ವಿವರಣೆಯನ್ನೂ ನೋಡಿರಿ.

ಎಂದಲ್ಲವೆ, (ಹಿಂದೆ) ಹೇಳಿದೆ ? ಬುದ್ಧಿವಿಜ್ಞಾನವೆಂಬ ಬೆಳಕಿನಿಂದೊಡಗೂಡಿಯೇ ಅಲ್ಲವೆ, ವಿಷಯಜಾತವೆಲ್ಲವೂ ಕತ್ತಲೆಯಲ್ಲಿ ಮುಂದಿಟ್ಟ ಪ್ರದೀಪದ ಬೆಳಕಿನಿಂದೊಡಗೂಡಿ (ತಿಳಿಯ)ಬರುವಂತೆ ತಿಳಿಯಬರುತ್ತದೆ[1] ? ಮಿಕ್ಕ ಕರಣಗಳು ಬುದ್ಧಿಗೆ ಬರಿಯ ದ್ವಾರವಾಗಿರುತ್ತವೆ. ಆದ್ದರಿಂದ ಅದರಿಂದಲೇ 'ವಿಜ್ಞಾನಮಯನು' ಎಂದು (ಆತ್ಮನಿಗೆ) ವಿಶೇಷಣವನ್ನು ಕೊಟ್ಟಿರುತ್ತದೆ.[2]

ಯಾರ ಮತದಲ್ಲಿ[3] ಪರಮಾತ್ಮವಿಜ್ಞಪ್ತಿಯ ವಿಕಾರವು (ವಿಜ್ಞಾನಮಯನು) ಎಂದು ವ್ಯಾಖ್ಯಾನಮಾಡಲಾಗಿದೆಯೋ, ಅವರ (ಮತದಲ್ಲಿಯೇ), "ವಿಜ್ಞಾನಮಯನು, ಮನೋಮಯನು " (೪-೪-೫) ಮುಂತಾದ (ಕಂಡಿಕೆ) ಯಲ್ಲಿ ಬೇರೆಯ ಅರ್ಥವು ಕಂಡುಬರುವದರಿಂದ (ಅವರು ಹೇಳುವದು) ಶ್ರುತಿಯ ಅರ್ಥವಲ್ಲವೆಂದು ನಿಶ್ಚಯಿಸಬೇಕು.[4] ಸಂದಿಗ್ಧವಾದ ಅರ್ಥವನ್ನು ಮತ್ತೊಂದು ಕಡೆಯಲ್ಲಿ ನಿಶ್ಚಿತವಾದ (ಅರ್ಥದ) ಪ್ರಯೋಗದಿಂದಲೋ, ವಾಕ್ಯಶೇಷದಿಂದಲೋ, ನಿಶ್ಚಿತವಾದ ನ್ಯಾಯದ ಬಲದಿಂದಲೋ ನಿಶ್ಚಯಿಸುವದಕ್ಕೆ ಆಗುತ್ತದೆ.[5] ಸಧೀಃ (ಬುದ್ಧಿಯಿಂದೊಡಗೂಡಿ) ಎಂಬ ಮುಂದೆ ಪಾಠವಿರುವದರಿಂದಲೂ[6] 'ಹೃದಯದ ಒಳಗೆ' ಎಂದು ವಚನವಿರುವದರಿಂದಲೂ[7] (ವಿಜ್ಞಾನಮಯನೆಂದರೆ) ವಿಜ್ಞಾನಪ್ರಾಯನು ಎಂಬುದೇ ಯುಕ್ತ.

---

1. ಎಚ್ಚರದಲ್ಲಿ ವಿಶೇಷವಿಜ್ಞಾನವಾಗುವಾಗ ಬೆಳಕಿನ ಸಂಬಂಧವು ಹೇಗೆ ನಿಯತವಾಗಿ ಬೇಕೋ ಹಾಗೆ ಒಳಗಿನ ಬುದ್ಧಿವಿಜ್ಞಾನದ ಸಂಬಂಧವೂ ನಿಯತವಾಗಿ ಬೇಕು ಎಂದರ್ಥ.

2. ಚಕ್ಷುರಾದಿಗಳು ರೂಪಾದಿಗಳೆಂಬ ವಿಶೇಷವನ್ನು ಮಾತ್ರ ತಿಳಿಸುತ್ತವೆ ; ಆದರೆ ಬುದ್ಧಿವಿಜ್ಞಾನವು ಅವೆಲ್ಲಕ್ಕೂ ಸಮಾನವಾಗಿದ್ದೇ ಇರಬೇಕು. ಆದ್ದರಿಂದ ಜೀವನನ್ನು ಚಕ್ಷುರ್ಮಯಃ ಎಂದು ಮುಂತಾಗಿ ಕರೆಯುವದಕ್ಕಿಂತ ವಿಜ್ಞಾನಮಯನೆಂಬ ವಿಶೇಷಣದಿಂದ ಕರೆಯುವದೇ ಹೆಚ್ಚು ಒಪ್ಪುತ್ತದೆ.

3. ಭರ್ತೃಪ್ರಪಂಚರು "ವಿಜ್ಞಾನವೆಂದರೆ ಪರಬ್ರಹ್ಮವು, ಬ್ರಹ್ಮಪ್ರಕೃತಿಕನಾದ ಜೀವನೇ ವಿಜ್ಞಾನಮಯನು" ಎಂದು ಬರೆದಿದ್ದಾರು.

4. ವಿಜ್ಞಾನಮಯಃ ಮನೋಮಯಃ– ಎಂಬಲ್ಲಿ ವಿಜ್ಞಾನವೆಂದರೆ ಬುದ್ಧಿಯೇ ಎಂಬುದು ಸ್ಪಷ್ಟ, ಅಲ್ಲಿ ಮಯಟ್ಪ್ರತ್ಯಯವು ವಿಕಾರಾರ್ಥವಲ್ಲವೆಂದು ಭರ್ತೃಪ್ರಪಂಚರೂ ಒಪ್ಪಿರುತ್ತಾರೆ.

5. ಶ್ರುತಿಯ ಪ್ರಯೋಗವನ್ನು ಉದಾಹರಿಸಿದ್ದಾಯಿತು ; ಇಲ್ಲಿ ವಾಕ್ಯಶೇಷವೂ ವಿಕಾರವಾದದ್ದು ಅನಿತ್ಯವಾದ್ದರಿಂದ ಜೀವನು ಬ್ರಹ್ಮದ ವಿಕಾರವಲ್ಲ ಎಂಬ ನ್ಯಾಯವೂ ಪ್ರಾಯಾರ್ಥಕ್ಕೆ ಬೆಂಬಲವನ್ನು ಕೊಡುತ್ತವೆ ಎಂದಭಿಪ್ರಾಯ.

6. 'ಸಧೀಃ' ಎಂಬುದು 'ಸ ಹಿ' ಎಂಬ ಕಾಣ್ವಪಾಠದ ಸ್ಥಾನದಲ್ಲಿರುವ ಮಾಧ್ಯಂದಿನ ಪಾಠ ; ಇದು ವಾಕ್ಯಶೇಷಕ್ಕೆಂದು ಉದಾಹರಿಸಿದ್ದು.

7. ಹೃದಯದೊಳಗಿನ ಜ್ಯೋತಿ– ಎಂದದ್ದರಿಂದ ಬುದ್ಧಿಯ ಸಂಬಂಧವು ಆತ್ಮನಿಗಿದೆ ಎಂದು ಹೇಳಿದಂತೆ ಆಯಿತು; ಇದೂ ಪ್ರಾಯಾರ್ಥಕ್ಕೆ ಬಲವನ್ನು ಕೊಡುತ್ತದೆ.

## ಪ್ರಾಣೇಷು ಎಂದರೆ ಪ್ರಾಣಗಳಿಂದ ವ್ಯತಿರಿಕ್ತನು

(ಭಾಷ್ಯ)

೧೭೨. ಪ್ರಾಣೇಷು ಇತಿ ವ್ಯತಿರೇಕಪ್ರದರ್ಶನಾರ್ಥಾ ಸಪ್ತಮೀ। ಯಥಾ ಪಾಷಾಣೇಷು ವೃಕ್ಷಃ[1] ಇತಿ ಸಾಮೀಪ್ಯಲಕ್ಷಣಾ। ಪ್ರಾಣೇಷು ಹಿ ವ್ಯತಿರೇಕಾವ್ಯತಿರೇಕತಾ ಸಂದಿಹ್ಯತ ಆತ್ಮನಃ। ಪ್ರಾಣೇಷು ಪ್ರಾಣೇಭ್ಯೋ ವ್ಯತಿರಿಕ್ತಃ ಇತ್ಯರ್ಥಃ। ಯೋ ಹಿ ಯೇಷು ಭವತಿ ಸ ತದ್ವ್ಯತಿರಿಕ್ತೋ ಭವತ್ಯೇವ। ಯಥಾ ಪಾಷಾಣೇಷು ವೃಕ್ಷಃ॥

(ಭಾಷ್ಯಾರ್ಥ)

ಪ್ರಾಣೇಷು (ಪ್ರಾಣಗಳ ಸಮೀಪದಲ್ಲಿ) ಎಂಬುದು ವ್ಯತಿರೇಕವನ್ನು ತಿಳಿಸುವದಕ್ಕಾಗಿ 'ಕಲ್ಲುಬಂಡೆಗಳ (ಹತ್ತಿರ)ದಲ್ಲಿರುವ ಮರವು' ಎಂಬಂತೆ ಸಾಮೀಪ್ಯಲಕ್ಷಣೆಯಿಂದ (ಉಪಯೋಗಿಸಿರುವ) ಸಪ್ತಮೀಯು.[2] ಪ್ರಾಣಗಳಲ್ಲಿಯೇ ಅಲ್ಲವೆ, ಆತ್ಮನು (ಅವಕ್ಕಿಂತ) ವ್ಯತಿರಿಕ್ತನೊ, ಅವ್ಯತಿರಿಕ್ತನೊ ಎಂದು ಸಂದೇಹವುಂಟಾಗಿರುವದು ? (ಆದ್ದರಿಂದ) ಪ್ರಾಣಗಳ (ಸಮೀಪದ)ಲ್ಲಿ ಎಂದರೆ ಪ್ರಾಣಗಳಿಗೆ ವ್ಯತಿರಿಕ್ತವಾಗಿರುವ ಎಂದರ್ಥ. ಯಾವನು ಯಾವವುಗಳ (ಬಳಿ)ಯಲ್ಲಿರುತ್ತಾನೋ ಅವನು ಅವಕ್ಕಿಂತ ವ್ಯತಿರಿಕ್ತನಾಗಿದ್ದೇ ಇರುತ್ತಾನಷ್ಟೆ? ಉದಾಹರಣೆಗೆ ಕಲ್ಲುಬಂಡೆಗಳ (ಬಳಿ)ಯಲ್ಲಿರುವ ಮರವು (ಅವಕ್ಕಿಂತ ವ್ಯತಿರಿಕ್ತವಾಗಿಯೇ ಇರುತ್ತದೆ).[3]

## ಹೃದಯದೊಳಗೆ ಇರುವ ಜ್ಯೋತಿಯು ಆತ್ಮನೆಂಬ ಪುರುಷನು

(ಭಾಷ್ಯ)

೧೭೩. ಹೃದಿ। ತತ್ರ ಏತತ್ ಸ್ಯಾತ್। ಪ್ರಾಣೇಷು ಪ್ರಾಣಜಾತೀಯೈವ ಬುದ್ಧಿಃ ಸ್ಯಾತ್ ಇತ್ಯತ ಆಹ– ಹೃದ್ಯನ್ತರಿತಿ। ಹೃಚ್ಛಬ್ದೇನ ಪುಣ್ಡರೀಕಾ

1. 'ವೃಕ್ಷೇಷು ಪಾಷಾಣಃ' ಎಂಬ ಅಚ್ಚಿನ ಪಾಠವನ್ನು ಹೀಗೆಂದು ತಿದ್ದಿಕೊಂಡಿದೆ.

2. ಮೂಲದಲ್ಲಿರುವ 'ವೃಕ್ಷೇಷು ಪಾಷಾಣಃ' (ಮರಗಳಲ್ಲಿ ಕಲ್ಲುಬಂಡೆ) ಎಂಬ ವಾಕ್ಯವನ್ನು ತಿದ್ದಿ ಹೀಗೆ ಕನ್ನಡಿಸಿಕೊಂಡಿದೆ, ಇದು ಉಪಸಂಹಾರವಾಕ್ಯಕ್ಕೆ ಹೊಂದಿಗೆಯಾಗುತ್ತದೆ.

3. ಬಂಡೆಗಳನ್ನು ತೋರಿಸಿ ಆ ಬಂಡೆಗಳಲ್ಲಿರುವದೇ ಮರವು ಎಂದರೆ ಬಂಡೆಗಳಿಗಿಂತ ಬೇರೆಯಾಗಿ ಅವುಗಳ ಹತ್ತಿರವೇ ಇರುವ ಮರವನ್ನು ಸುಲಭವಾಗಿ ತಿಳಿಸಿದಂತೆ ಆಗುವದು. ಹೀಗೆಯೇ ಪ್ರಾಣಗಳಲ್ಲಿ ಎಂದರೆ ಪ್ರಾಣಗಳ ಬಳಿಯಲ್ಲಿ ಅವುಗಳನ್ನು ಬೆಳಗುತ್ತಾ ಇರುವ ಚೈತನ್ಯಸ್ವರೂಪನೇ ಆತ್ಮನು ಎಂದು ತಿಳಿಸುವದಕ್ಕಾಗಿ ಪ್ರಾಣೇಷು (ಪ್ರಾಣಗಳಲ್ಲಿ) ಹಿಂದಿದೆ ಎಂಬು ಭಾವ.

ಕಾರೋ ಮಾಂಸಪಿಣ್ಡಃ। ತಾತ್ಸ್ಥ್ಯಾತ್ ಬುದ್ಧಿರ್ಹೃತ್। ತಸ್ಯಾಂ ಹೃದಿ ಬುದ್ಧೌ। ಅನ್ತರಿತಿ ಬುದ್ಧಿವೃತ್ತಿವ್ಯತಿರೇಕಪ್ರದರ್ಶನಾರ್ಥಮ್। ಜ್ಯೋತಿಃ ಅವಭಾಸಕತ್ವಾತ್ ಆತ್ಮಾ ಉಚ್ಯತೇ। ತೇನ ಹಿ ಅವಭಾಸಕೇನ ಆತ್ಮನಾ ಜ್ಯೋತಿಷಾ ಆಸ್ತೇ ಪಲ್ಯಯತೇ ಕರ್ಮ ಕುರುತೇ (ವಿಪಲ್ಯೇತಿ ?) ಚೇತನಾವಾನಿವ ಹಿ ಅಯಂ ಕಾರ್ಯಕರಣಪಿಣ್ಡಃ, ಯಥಾ ಆದಿತ್ಯಪ್ರಕಾಶಸ್ಥೋ ಘಟಃ। ಯಥಾ ವಾ ಮರಕತಾದಿರ್ಮಣಿಃ ಕ್ಷೀರಾದಿದ್ರವ್ಯೇ ಪ್ರಕ್ಷಿಪ್ತಃ ಪರೀಕ್ಷಣಾಯ ಆತ್ಮಚ್ಛಾಯಮೇವ ತತ್ ಕ್ಷೀರಾದಿದ್ರವ್ಯಂ ಕರೋತಿ। ತಾದೃಗೇತತ್ ಆತ್ಮಜ್ಯೋತಿರ್ಬುದ್ಧೇರಪಿ ಹೃದಯಾತ್, ಸೂಕ್ಷ್ಮತ್ವಾತ್ ಹೃದ್ಯನ್ತಃಸ್ಥಮಪಿ ಹೃದಯಾದಿಕಂ ಕಾರ್ಯಕರಣಸಂಘಾತಂ ಚ ಏಕೀಕೃತ್ಯ ಆತ್ಮಜ್ಯೋತಿಶ್ಛಾಯಂ ಕರೋತಿ। ಪಾರಮ್ಪರ್ಯೇಣ ಸೂಕ್ಷ್ಮಸ್ಥೂಲತಾರತಮ್ಯಾತ್ ಸರ್ವಾನ್ತರತಮತ್ವಾತ್[1]। ಬುದ್ಧಿಸ್ತಾವತ್ ಸ್ವಚ್ಛತ್ವಾತ್ ಆನನ್ತರ್ಯಾಚ್ಚ ಆತ್ಮಚೈತನ್ಯಜ್ಯೋತಿಃಪ್ರತಿಚ್ಛಾಯಾ ಭವತಿ। ತೇನ ಹಿ ವಿವೇಕಿನಾಮಪಿ ತತ್ರ ಆತ್ಮಾಭಿಮಾನಬುದ್ಧಿಃ ಪ್ರಥಮಾ। ತತೋಽಪಿ ಅನನ್ತರ್ಯಾನ್ಮನಸಿ ಚೈತನ್ಯಾವಭಾಸತಾ, ಬುದ್ಧಿಸಂಪರ್ಕಾತ್। ತತ ಇನ್ದ್ರಿಯೇಷು, ಮನಃಸಂಯೋಗಾತ್। ತತೋಽನನ್ತರಂ ಶರೀರೇ, ಇನ್ದ್ರಿಯಸಂಪರ್ಕಾತ್। ಏವಂ ಪಾರಂಪರ್ಯೇಣ ಕೃತ್ಸ್ನಂ ಕಾರ್ಯಕರಣಸಂಘಾತಮಾತ್ಮಾ ಚೈತನ್ಯಸ್ವರೂಪಜ್ಯೋತಿಷಾ ಅವಭಾಸಯತಿ। ತೇನ ಹಿ ಸರ್ವಸ್ಯ ಲೋಕಸ್ಯ ಕಾರ್ಯಕರಣಸಂಘಾತೇ ತದ್ವೃತ್ತಿಷು ಚ ಅನಿಯತಾ ಆತ್ಮಾಭಿಮಾನಬುದ್ಧಿರ್ಯಥಾವಿವೇಕಂ ಜಾಯತೇ। ತಥಾ ಚ ಭಗವತೋಕ್ತಂ ಗೀತಾಸು–"ಯಥಾ ಪ್ರಕಾಶಯತ್ಯೇಕಃ ಕೃತ್ಸ್ನಂ ಲೋಕಮಿಮಂ ರವಿಃ। ಕ್ಷೇತ್ರಂ ಕ್ಷೇತ್ರೀ ತಥಾ ಕೃತ್ಸ್ನಂ ಪ್ರಕಾಶಯತಿ ಭಾರತ।" (ಗೀ. ೧೩–೩೩), "ಯದಾದಿತ್ಯಗತಂ ತೇಜಃ" (ಗೀ. ೧೫–೧೨) ಇತ್ಯಾದಿ ಚ। "ನಿತ್ಯೋ ನಿತ್ಯಾನಾಂ ಚೇತನಶ್ಚೇತನಾನಾಮ್" (ಕ. ೨–೨–೧೩) ಇತಿ ಚ ಕಾಠಕೇ। "ತಮೇವ ಭಾನ್ತಮನುಭಾತಿ ಸರ್ವಂ ತಸ್ಯ ಭಾಸಾ ಸರ್ವಮಿದಂ ವಿಭಾತಿ" ಇತಿ ಚ (ಕ. ೨–೨–೧೫)। "ಯೇನ ಸೂರ್ಯಸ್ತಪತಿ ತೇಜಸೇದ್ಧಃ" (ತೈ. ಬ್ರಾ ೩–೧೨–೯–೭) ಇತಿ ಚ ಮನ್ತ್ರವರ್ಣಃ। ತೇನಾಯಂ ಹೃದ್ಯನ್ತರ್ಜ್ಯೋತಿಃ ಪುರುಷಃ। ಆಕಾಶವತ್ ಸರ್ವಗತತ್ವಾತ್ ಪೂರ್ಣ ಇತಿ ಪುರುಷಃ। ನಿರತಿಶಯಂ ಚ ಅಸ್ಯ ಸ್ವಯಂಜ್ಯೋತಿಷ್ಟ್ವಮ್। ಸರ್ವಾವಭಾಸಕತ್ವಾತ್ ಸ್ವಯಮನ್ಯಾನವಭಾಸ್ಯತ್ವಾಚ್ಚ। ಸ ಏಷ ಪುರುಷಃ ಸ್ವಯಮೇವ ಜ್ಯೋತಿಃಸ್ವಭಾವಃ ಯಂ ತ್ವಂ ಪೃಚ್ಛಸಿ ಕತಮ ಆತ್ಮೇತಿ॥

---

1. "ಸರ್ವಾನ್ತರತ್ವಾತ್" ಎಂದಿಷ್ಟೇ ಇದ್ದರೂ ಆಗುತ್ತಿತ್ತು.

(ಭಾಷ್ಯಾರ್ಥ)

"ಹೃದಯದೊಳಗೆ" ಇಲ್ಲಿ ಪ್ರಾಣಗಳ (ಬಳಿ)ಯಲ್ಲಿರುವದು ಪ್ರಾಣಗಳ ಜಾತಿಯ ಬುದ್ಧಿಯೇ ಆಗಿರಬಹುದು ಎಂದು (ಯಾರಿಗಾದರೂ ಅಭಿಪ್ರಾಯ) ವಾಗಬಹುದು. ಆದ್ದರಿಂದ (ಶ್ರುತಿಯು) ಹೃದಯದೊಳಗೆ (ಎಂದು) ಹೇಳಿರುತ್ತದೆ. ಹೃತ್ ಎಂಬ ಶಬ್ದದಿಂದ ಕಮಲದಾಕಾರದ ಮಾಂಸದ ಮುದ್ದೆ(ಯನ್ನು ಹೇಳಲಾಗುತ್ತದೆ) ; ಅದರಲ್ಲಿರುವದರಿಂದ ಬುದ್ಧಿಯನ್ನು ಹೃತ್ತೆಂದು (ಇಲ್ಲಿ ಕರೆದಿದೆ)[1] ; ಆ ಹೃತ್ತಿನಲ್ಲಿ, ಬುದ್ಧಿಯಲ್ಲಿ, 'ಒಳಗ' ಎಂಬ (ಮಾತನ್ನು) ಬುದ್ಧಿವೃತ್ತಿಗಳಿಗಿಂತ ವ್ಯತಿರಿಕ್ತವೆಂಬುದನ್ನು ತಿಳಿಸುವದಕ್ಕೆ.[2]

ಜ್ಯೋತಿ ಎಂದು ಅವಭಾಸರೂಪನಾಗಿರುವದರಿಂದ ಆತ್ಮನನ್ನೇ ಕರೆದಿದೆ. ಬೆಳಕಿನ ರೂಪವಾಗಿರುವ ಆತ್ಮನೆಂಬ ಜ್ಯೋತಿಯಿಂದಲೇ ಅಲ್ಲವೆ, ಕುಳಿತಿರುತ್ತಾನೆ, ಹೋಗುತ್ತಾನೆ, ಕರ್ಮವನ್ನು ಮಾಡುತ್ತಾನೆ, (ಹಿಂತಿರುಗುತ್ತಾನೆ)[3]; ಈ ಕಾರ್ಯಕರಣಗಳ ಒಟ್ಟು, ಆದಿತ್ಯನ ಬೆಳಕಿನಲ್ಲಿರುವ ಗಡಿಗೆಯು (ಪ್ರಕಾಶಾತ್ಮಕವಾಗಿರು)ವಂತೆ (ಅದರಿಂದಲೇ) ಚೇತನಾವಂತವಾಗಿರುವಂತೆ (ಕಾಣುತ್ತಿದೆ) ಯಲ್ಲವೆ[4] ? ಅಥವಾ ಹೇಗೆ ಮರಕತವೇ ಮುಂತಾದ ರತ್ನವು ಹಾಲೇ ಮುಂತಾದ ಪದಾರ್ಥದಲ್ಲಿ ಪರೀಕ್ಷೆಗೆಂದು ಹಾಕಿದಾಗ ಆ ಹಾಲೇ ಮುಂತಾದ ಪದಾರ್ಥವನ್ನು ತನ್ನ ಛಾಯೆಯುಳ್ಳದ್ದನ್ನಾಗಿಯೇ ಮಾಡುತ್ತದೆಯೋ[5], ಹಾಗೆ ಈ ಆತ್ಮಜ್ಯೋತಿಯು ಹೃದಯವೆಂಬ ಬುದ್ಧಿಗಿಂತಲೂ ಸೂಕ್ಷ್ಮವಾಗಿರುವದರಿಂದ ಹೃದಯದ ಒಳಗೆ ಇದ್ದರೂ ಹೃದಯವೇ ಮುಂತಾದದ್ದನ್ನೂ ಕಾರ್ಯ

---

1. ಆದ್ದರಿಂದ ಆತ್ಮನು ಬುದ್ಧಿಗಿಂತ ವ್ಯತಿರಿಕ್ತನು, ವಿಲಕ್ಷಣನು-ಎಂದು ಹೇಳಿದಂತೆ ಆಯಿತು.

2. ಬುದ್ಧಿಯಲ್ಲಿ ಎಂದಿಷ್ಟೇ ಹೇಳಿದ್ದರೆ ವೃತ್ತಿಗಳೂ ಅದರಲ್ಲಿರುವದರಿಂದ ಅವೇ ಆತ್ಮನೆಂದಾಗಬಹುದಾಗುತ್ತಿತ್ತು. ಅವಕ್ಕಿಂತಲೂ ಬೇರೆ ಎಂದು ತಿಳಿಸುವದಕ್ಕೆ 'ಒಳಗೆ' ಎಂದಿದೆ ಎಂದು ಭಾವ.

3. 'ವಿಪಲ್ಯೇತಿ' ಎಂಬ ಮೂಲದ ಮಾತನ್ನು ಇಲ್ಲಿ ಭಾಷ್ಯದಲ್ಲಿ ಬರೆದಿದ್ದು ಬಿಟ್ಟು ಹೋಗಿದೆಯೊ, ಅಥವಾ ಅದನ್ನು ಉಪಲಕ್ಷಣವಾಗಿ ಗ್ರಹಿಸಬೇಕೆಂದಾಶಯವೋ ತಿಳಿಯದು.

4. ಜ್ಯೋತಿಃ ಎಂಬ ಮಾತು 'ಆತ್ಮನು ಮಾತ್ರ ಬೆಳಗುವವನು, ಕಾರ್ಯಕರಣಸಂಘಾತವು ಬೆಳಗಲ್ಪಡತಕ್ಕದ್ದು ; ಆದರೂ ಬೆಳಕಿನಲ್ಲಿರುವ ಗಡಿಗೆಯನ್ನು ಅದರಿಂದ ವಿಂಗಡಿಸಿಕೊಳ್ಳದಿರುವಂತೆ ಈ ಆತ್ಮಾನಾತ್ಮಗಳನ್ನು ಸಾಮಾನ್ಯರು ವಿಂಗಡಿಸಿಕೊಳ್ಳುವದಿಲ್ಲ ಎಂಬುದನ್ನು ಸೂಚಿಸುತ್ತದೆ ಎಂದು ಭಾವ.

5. ಹಾಲಿನ ಬಿಳುಪನ್ನು ಮರೆಮಾಡಿಬಿಡುತ್ತದೆಯೋ, ಹಸುರುಬಣ್ಣದ್ದೆಂದೇ ತೋರಿಸುತ್ತದೆಯೋ -ಎಂದರ್ಥ.

ಕರಣಸಂಘಾತವನ್ನೂ[1] ಒಂದುಮಾಡಿ ಆತ್ಮಜ್ಯೋತಿಯ ಛಾಯೆಯುಳ್ಳದ್ದನ್ನಾಗಿಯೇ ಮಾಡಿರುತ್ತದೆ, ಏಕೆಂದರೆ ಪರಂಪರೆಯಿಂದ (ಇವುಗಳಲ್ಲಿ) ಸೂಕ್ಷ್ಮಸ್ಥೂಲತಾರತಮ್ಯವಿರುತ್ತದೆ, ಮತ್ತು (ಆತ್ಮನು) ಸರ್ವಾಂತರನೂ ಆಗಿರುತ್ತಾನೆ[2] (ಇದರ ವಿವರ): ಮೊದಲನೆಯದಾಗಿ ಬುದ್ಧಿಯು ಸ್ವಚ್ಛವಾಗಿರುವದರಿಂದಲೂ (ಆತ್ಮನಿಗೆ) ಅನಂತರವಾಗಿಯೇ ಇರುವದರಿಂದಲೂ ಆತ್ಮಚೈತನ್ಯದ ಪ್ರತಿಚ್ಛಾಯೆಯುಳ್ಳದ್ದಾಗಿರುತ್ತದೆ. ಆದ್ದರಿಂದಲೇ ಅಲ್ಲವೆ, ವಿವೇಕಿಗಳಿಗೂ ಅದರಲ್ಲಿ ಆತ್ಮನೆಂಬ ಅಭಿಮಾನದ ಬುದ್ಧಿಯು ಮೊದಲು ಉಂಟಾಗುತ್ತದೆ? ಅದಕ್ಕಿಂತ ಮುಂದೆ ಇರುವದರಿಂದ ಮನಸ್ಸಿನಲ್ಲಿ ಚೈತನ್ಯದ ತೋರಿಕೆಯಿರುತ್ತದೆ, ಏಕೆಂದರೆ (ಅದಕ್ಕೆ) ಬುದ್ಧಿಯ ಸಂಪರ್ಕವಿರುತ್ತದೆ. ಆ ಬಳಿಕ ಇಂದ್ರಿಯಗಳಲ್ಲಿ (ಚೈತನ್ಯಾಭಾಸವಿರುತ್ತದೆ); ಏಕೆಂದರೆ (ಅವಕ್ಕೆ) ಮನಸ್ಸಿನ ಸಂಯೋಗವಿದೆ. ಅವುಗಳಾದ ಬಳಿಕ ಶರೀರದಲ್ಲಿ (ಚೈತನ್ಯದ ಆಭಾಸವಿರುತ್ತದೆ), ಏಕೆಂದರೆ (ಅದಕ್ಕೆ) ಇಂದ್ರಿಯಗಳ ಸಂಪರ್ಕವಿದೆ. ಹೀಗೆ ಪರಂಪರೆಯಿಂದ ಇಡಿಯ ಕಾರ್ಯಕರಣಸಂಘಾತವನ್ನೇ ಆತ್ಮನು ಚೈತನ್ಯರೂಪವಾದ ಜ್ಯೋತಿಯಿಂದ ಬೆಳಗುತ್ತಿರುತ್ತಾನೆ.[3] ಇದರಿಂದಲೇ ಅಲ್ಲವೆ, ಜನಕ್ಕೆಲ್ಲ ಕಾರ್ಯಕರಣಸಂಘಾತದಲ್ಲಿಯೂ ಅವುಗಳ ವೃತ್ತಿಗಳಲ್ಲಿಯೂ ಅನಿಯತವಾಗಿ ಆತ್ಮನೆಂಬ ಅಭಿಮಾನದ ಬುದ್ಧಿಯು ಅವರವರ ವಿವೇಕಕ್ಕನುಗುಣವಾಗಿ ಉಂಟಾಗುತ್ತಿದೆ? ಆದ್ದರಿಂದಲೇ ಭಗವಂತನು "ಈ ಲೋಕವೆಲ್ಲವನ್ನೂ ಸೂರ್ಯನೊಬ್ಬನೇ ಹೇಗೆ ಬೆಳಗುತ್ತಿರುವನೋ, ಹಾಗೆ ಕ್ಷೇತ್ರಿಯು (ಒಬ್ಬನೇ) ಕ್ಷೇತ್ರವೆಲ್ಲವನ್ನೂ ಬೆಳಗುತ್ತಿರುವನಯ್ಯ, ಭಾರತನೆ" (ಗೀ. ೧೩-೩೩), "ಆದಿತ್ಯನಲ್ಲಿರುವ ತೇಜಸ್ಸಿದೆಯಲ್ಲ, (ಅದನ್ನು ನನ್ನದೆಂದು ತಿಳಿ, ಗೀ. ೧೫-೧೨) ಎಂದು ಗೀತೆಗಳಲ್ಲಿ (ಹೇಳಿರುತ್ತಾನೆ). "ಅನಿತ್ಯವಾದ (ಪ್ರಾಣಿಗಳಲ್ಲಿ) ನಿತ್ಯವಾಗಿ, ಚೇತನಗಳಿಗೆ ಚೇತನನಾಗಿ" (ಕ. ೨-೨-೧೩) ಎಂದು ಕಾಠಕದಲ್ಲಿಯೂ ಇದೆ. "ಬೆಳಗುತ್ತಿರುವ ಅವನನ್ನೇ ಎಲ್ಲವೂ ಅನುಸರಿಸಿ ಬೆಳಗುತ್ತಿರುವದು, ಅವನ ಬೆಳಕಿನಿಂದಲೇ ಇದೆಲ್ಲವೂ ಬೆಳಗುತ್ತಿರುವದು" (ಕ. ೨-೨-೧೫) ಎಂದೂ (ಅಲ್ಲಿದೆ). "ಯಾವ ತೇಜಸ್ಸಿನಿಂದ ದೀಪ್ತನಾಗಿ ಸೂರ್ಯನು ತಪಿಸುತ್ತಿರುವನೋ

---

1. ಇಲ್ಲಿ ಹೃದಯ, ಮನಸ್ಸು- ಇವುಗಳನ್ನು ಕರಣಗಳಿಗಿಂತ ಬೇರೆ ಎಂದು ಎಣಿಸಿದೆ; ಅಥವಾ "ಕಾರ್ಯಕರಣಸಂಘಾತಂ ಚ" ಎಂಬಲ್ಲಿ ಚ ಹೆಚ್ಚು. ಈ ಪಕ್ಷದಲ್ಲಿ 'ಹೃದಯವೇ ಮುಂತಾದ ಕಾರ್ಯಕರಣಸಂಘಾತವನ್ನು' ಎಂದು ಅನುವಾದ.

2 ಹೇತುಗಳು ಬೇರೆಬೇರೆಯ ವಸ್ತುಗಳಿಗೆ ಸೇರುವಂತೆ ಇಲ್ಲಿ ವಾಕ್ಯವಿದೆ. ಭಾಷ್ಯದ ಮೂಲದಲ್ಲಿ ಏನಾದರೂ ಹೆಚ್ಚುಕಡಿಮೆಯಾಗಿದೆಯೋ ಏನೋ.

3. ಆತ್ಮಚೈತನ್ಯಾಭಾಸವೇ ಬುದ್ಧ್ಯಾದಿದೇಹಾಂತವಾದ ಅನಾತ್ಮಗಳಲ್ಲಿ ತೋರುವದೆಂಬುದಕ್ಕೆ ಗೀ.ಭಾ. ೧೮-೫೦ (ಭಾ.ಭಾ. ೫೫೬)ನ್ನು ನೋಡಿ.

(ಅವನನ್ನು ವೇದವಿದನಲ್ಲದವನು ಅರಿಯಲಾರನು, ತೈ ಬ್ರಾ. ೩-೧೨-೯-೭) ಎಂದು ಮಂತ್ರವರ್ಣವೂ ಇದೆ. ಹೀಗಿರುವದರಿಂದ ಈ (ಆತ್ಮನು) ಹೃದಯದೊಳಗೆ ಇರುವ ಜ್ಯೋತಿಯು (ಎಂದು ಶ್ರುತಿಯು ಹೇಳಿರುತ್ತದೆ).

ಪುರುಷನು : ಆಕಾಶದಂತೆ ಸರ್ವಗತನಾಗಿರುವದರಿಂದ ಪೂರ್ಣನಾಗಿರುತ್ತಾನಾದ್ದರಿಂದ (ಇವನು) ಪುರುಷನು.[1] ಇವನ ಸ್ವಯಂಜ್ಯೋತಿಷ್ಟ್ವವು ಮಿಗಿಲಿಲ್ಲದ್ದಾಗಿರುತ್ತದೆ, ಏಕೆಂದರೆ (ಇವನು ಎಲ್ಲವನ್ನೂ) ಬೆಳಗುತ್ತಾನೆ, ತಾನು ಮತ್ತೆ ಯಾವದರಿಂದಲೂ ಬೆಳಗಲ್ಪಡುತ್ತಿಲ್ಲ. ಆ ಈ ಪುರುಷನು ತಾನೇ ಜ್ಯೋತಿಯ ಸ್ವಭಾವದವನಾಗಿರುತ್ತಾನೆ, 'ಆತ್ಮನು ಯಾವನು' ಎಂದು ನೀನು ಕೇಳಿದೆಯಲ್ಲ, (ಅವನೇ ಈ ಜ್ಯೋತಿಃಸ್ವಭಾವದ ಪುರುಷನು)

## ಸ್ವಪ್ನವಿಚಾರಕ್ಕೆ ಅವತರಣಿಕೆ

(ಭಾಷ್ಯ)

೧೭೪. ಬಾಹ್ಯಾನಾಂ ಜ್ಯೋತಿಷಾಂ ಸರ್ವಕರಣಾನುಗ್ರಾಹಕಾಣಾಂ ಪ್ರತ್ಯಸ್ತಮಯೇ ಅನ್ತಃಕರಣದ್ವಾರೇಣ ಹೃದ್ಯನ್ತರ್ಜ್ಯೋತಿಃ ಪುರುಷ ಆತ್ಮಾ ಅನುಗ್ರಾಹಕಃ ಕರಣಾನಾಮ್ ಇತ್ಯುಕ್ತಮ್ । ಯದಾಪಿ ಬಾಹ್ಯಕರಣಾನುಗ್ರಾಹಕಾಣಾಮ್ ಆದಿತ್ಯಾದಿಜ್ಯೋತಿಷಾಂ ಭಾವಃ ತದಾಪಿ ಆದಿತ್ಯಾದಿಜ್ಯೋತಿಷಾಂ ಪರಾರ್ಥತ್ವಾತ್ ಕಾರ್ಯಕರಣಸಂಘಾತಸ್ಯ ಅಚೈತನ್ಯೇ ಸ್ವಾರ್ಥಾನುಪಪತ್ತೇಃ[2] ಸ್ವಾರ್ಥಜ್ಯೋತಿಷಃ ಆತ್ಮನೋಽನುಗ್ರಹಾಭಾವೇ ಅಯಂ ಕಾರ್ಯಕರಣಸಂಘಾತೋ ನ ವ್ಯವಹಾರಾಯ ಕಲ್ಪತೇ । ಆತ್ಮಜ್ಯೋತಿರನುಗ್ರಹೇಣೈವ ಹಿ ಸರ್ವದಾ ಸರ್ವಃ ಸಂವ್ಯವಹಾರಃ । "ಯದೇತದ್ಧೃದಯಂ ಮನಶ್ಚೈತತ್ ಸಂಜ್ಞಾನಮ್" (ಐ. ೩-೨) ಇತ್ಯಾದಿಶ್ರುತ್ಯನ್ತರಾತ್ । ಸಾಭಿಮಾನೋ ಹಿ ಸರ್ವಪ್ರಾಣಿಸಂವ್ಯವಹಾರಃ । ಅಭಿಮಾನಹೇತುಂ ಚ ಮರಕತಮಣಿದೃಷ್ಟಾನ್ತೇನ ಅವೋಚಾಮ । ಯದ್ಯಪ್ಯೇವಮೇತತ್, ತಥಾಪಿ ಜಾಗ್ರದ್ವಿಷಯೇ ಸರ್ವಕರಣಾಗೋಚರತ್ವಾತ್ ಆತ್ಮಜ್ಯೋತಿಷಃ ಬುದ್ಧ್ಯಾದಿಬಾಹ್ಯಾಭ್ಯನ್ತರಕಾರ್ಯಕರಣವ್ಯವಹಾರಸಂನಿಪಾತವ್ಯಾಕುಲತ್ವಾತ್ ನ ಶಕ್ಯತೇ ತಜ್ಜ್ಯೋತಿರಾತ್ಮಾಖ್ಯಂ ಮುಞ್ಜೇಷೀಕಾವತ್ ನಿಷ್ಕೃಷ್ಯ ದರ್ಶಯಿತುಮ್ ಇತ್ಯತಃ ಸ್ವಪ್ನೇ ದಿದರ್ಶಯಿಷುಃ ಪ್ರಕ್ರಮತೇ ॥

(ಭಾಷ್ಯಾರ್ಥ)

ಎಲ್ಲಾ ಕರಣಗಳಿಗೂ ಅನುಗ್ರಾಹಕವಾಗಿರುವ ಹೊರಗಿನ ಜ್ಯೋತಿಗಳು ಇಲ್ಲವಾಗಲು ಅಂತಃಕರಣದ್ವಾರದಿಂದ ಹೃದಯದೊಳಗಿನ ಜ್ಯೋತಿಯಾಗಿರುವ

---

1. ಕಾರ್ಯಕರಣಸಂಘಾತರೂಪಪುರುಷನಂತೆ ಪರಿಚ್ಛಿನ್ನನಲ್ಲ.

2. "ಸ್ವಾರ್ಥತ್ವಾನುಪಪತ್ತೇಃ" ಎಂದಿದ್ದರೆ ಚೆನ್ನಾಗಿರುತ್ತಿತ್ತು ; ಅಥವಾ ಆ ಅರ್ಥದಲ್ಲಿಯೇ ಈ ಪ್ರಯೋಗವೆಂದೂ ಹೇಳಬಹುದು.

ಪುರುಷನಾದ ಆತ್ಮನೇ ಕರಣಗಳಿಗೆ ಅನುಗ್ರಾಹಕನು ಎಂದು ಹೇಳಿದ್ದಾಯಿತು. ಹೊರಗಿನ ಕರಣಗಳಿಗೆ ಅನುಗ್ರಾಹಕಗಳಾಗಿರುವ ಆದಿತ್ಯಾದಿಜ್ಯೋತಿಗಳು ಇರುತ್ತವೆಯಲ್ಲ, ಆಗಲೂ ಆದಿತ್ಯಾದಿಜ್ಯೋತಿಗಳು ಪರಾರ್ಥವಾಗಿರುವದರಿಂದಲೂ ಕಾರ್ಯಕರಣಸಂಘಾತವು ಅಚೈತನ್ಯವಾಗಿರುವದರಿಂದ (ಅದಕ್ಕೆ) ಸ್ವಾರ್ಥತ್ವವು ಹೊಂದುವದಿಲ್ಲವಾದ್ದರಿಂದಲೂ ಸ್ವಾರ್ಥವಾದ ಜ್ಯೋತಿಯುಳ್ಳ[1] ಆತ್ಮನ ಅನುಗ್ರಹವಿಲ್ಲದಿದ್ದರೆ ಈ ಕಾರ್ಯಕರಣಸಂಘಾತವು ವ್ಯವಹಾರಕ್ಕೆ ಶಕ್ತವಾಗಲಾರದು. ಆತ್ಮಜ್ಯೋತಿಯ ಅನುಗ್ರಹದಿಂದಲೇ ಅಲ್ಲವೆ, ಎಲ್ಲಾ ಸಂವ್ಯವಹಾರವೂ ಆಗುತ್ತಿದೆ? "ಈ ಹೃದಯವೆಂಬುದಿದೆಯಲ್ಲ, ಈ ಮನಸ್ಸು ಎಂಬುದಿದೆಯಲ್ಲ, (ಇದು) ಸಂಜ್ಞಾನವು (.... ಇವೆಲ್ಲವೂ ಪ್ರಜ್ಞಾನದ ನಾಮಧೇಯಗಳಾಗಿವೆ)" (ಐ. ೩–೨) ಎಂಬ ಮುಂತಾಗಿರುವ ಶ್ರುತ್ಯಂತರದಿಂದ (ಇದು ಸಿದ್ಧವಾಗುತ್ತದೆ)[2]. ಪ್ರಾಣಿಗಳ ವ್ಯವಹಾರವೆಲ್ಲ (ಆತ್ಮನೆಂಬ) ಅಭಿಮಾನದಿಂದಲ್ಲವೆ, (ಆಗುತ್ತದೆ)?[3] ಅಭಿಮಾನಕ್ಕೆ ಕಾರಣವನ್ನು ಮರಕತರತ್ನದ ದೃಷ್ಟಾಂತದಿಂದ ಹೇಳಿರುತ್ತೇವೆ.[4] ಇದು ಹೀಗೆಯೇ ಆದರೂ ಎಚ್ಚರದ ವಿಷಯದಲ್ಲಿ ಯಾವ ಕರಣಗಳಿಗೂ ಗೋಚರವಲ್ಲದ್ದರಿಂದ ಆತ್ಮಜ್ಯೋತಿಯು ಬುದ್ಧಿಯೇ ಮುಂತಾದ ಹೊರಗಿನ ಮತ್ತು ಒಳಗಿನ ಕಾರ್ಯಕರಣವ್ಯವಹಾರಗಳ ಗುಂಪಿನಲ್ಲಿ ಸೇರಿಕೊಂಡುಬಿಟ್ಟಿರುವದರಿಂದ ಆ ಆತ್ಮನೆಂಬ ಜ್ಯೋತಿಯನ್ನು ನೊಸೆಹುಲ್ಲಿನ ದಿಂಡಿನಂತೆ ವಿಂಗಡಿಸಿ ತೋರಿಸುವದಕ್ಕೆ ಆಗುವದಿಲ್ಲವೆಂಬ ಕಾರಣದಿಂದ ಸ್ವಪ್ನದಲ್ಲಿ ಅದನ್ನು ತೋರಿಸಬೇಕೆಂದು (ಶ್ರುತಿಯು) ಪ್ರಾರಂಭಿಸಿರುತ್ತದೆ[5]

---

1. ಆತ್ಮನು ಮತ್ತೊಂದರ ಅಪೇಕ್ಷೆಯಿಲ್ಲದೆ ತಾನೇ ಬೆಳಗುವದರಿಂದ ಸ್ವಾರ್ಥಜ್ಯೋತಿಯು, ಆದಿತ್ಯನೂ ಬುದ್ಧ್ಯಾದಿಗಳೂ ಪರಾರ್ಥಜ್ಯೋತಿಗಳು, ಅವಕ್ಕೆ ಸ್ವತಂತ್ರವಾದ ಜ್ಯೋತಿಯಿಲ್ಲ.

2. ಅಂತಃಕರಣದ ವೃತ್ತಿಗಳೆಲ್ಲ ಪರಾರ್ಥವಾಗಿದ್ದು ಆತ್ಮನಿಗೆ ಸೇರಿಕೊಂಡೇ ತೋರುವವಾಗಿವೆ ಎಂಬುದು ಶ್ರುತಿಯ ಅರ್ಥ.

3. ದೇಹವ್ಯವಹಾರವು ದೇಹವೇ ನಾನೆಂಬ ಅಭಿಮಾನದಿಂದ, ಇಂದ್ರಿಯಾದಿಗಳ ವ್ಯವಹಾರವೂ ಇಂದ್ರಿಯಾದಿಗಳೇ ನಾನೆಂಬ ಅಭಿಮಾನದಿಂದ.

4. ಮರಕತಮಣಿಯು ಹಾಲು ಮುಂತಾದದ್ದಕ್ಕೆ ತನ್ನ ಛಾಯೆಯನ್ನುಂಟುಮಾಡುವಂತೆ ಆತ್ಮನು ತನ್ನ ಚಿತ್ತಿನ ಆಭಾಸವನ್ನು ಬುದ್ಧ್ಯಾದಿಗಳಿಗೆ ಉಂಟುಮಾಡುತ್ತಿರುವದರಿಂದಲೇ ಬುದ್ಧಿಯೇ ಮುಂತಾದವುಗಳನ್ನು ತಾನೆಂದು ಜೀವರು ಅಭಿಮಾನ ಮಾಡಿಕೊಳ್ಳುತ್ತಾರೆ.

5. ವಿಲಕ್ಷಣವಾಗಿರುವ ಚಕ್ಷುರಾದಿಗಳೇ ಒಟ್ಟು ಸೇರಿ ಒಂದು ದೇಹದಲ್ಲಿ ಕ್ರಿಯೆಯನ್ನು ಮಾಡುವವೆಂಬ ಸಾಲಕ್ಷಣ್ಯವು ಇರುವಂತೆ ಸಲಕ್ಷಣವಾಗಿರುವ ಬುದ್ಧೀಂದ್ರಿಯಾದಿಗಳಲ್ಲಿಯೇ ಬುದ್ಧಿಗೆ ಮಾತ್ರ ಭೋಕ್ತೃತ್ವವೆಂಬ ವಿಲಕ್ಷಣಧರ್ಮವಿದೆ ಎಂದು ನಂಬಬಹುದಲ್ಲ!– ಎಂಬ ಶಂಕೆಯನ್ನು ಪರಿಹರಿಸುವದಕ್ಕೆ ಮುಂದಿನ ಗ್ರಂಥವೆಂದು ಭರ್ತೃಪ್ರಪಂಚರು. ಅದನ್ನೂ ವಾರ್ತಿಕದಲ್ಲಿ ಒಪ್ಪಿದೆ.

# ಆತ್ಮನು ಬುದ್ಧಿಗೆ ಸಮಾನನಾಗಿರುವದರಿಂದ ಸಂಸಾರಿ

(ಭಾಷ್ಯ)

೧೭೫. ಸ ಸಮಾನಃ ಸನ್ ಉಭೌ ಲೋಕೌ ಅನುಸಂಚರತಿ। ಯಃ ಪುರುಷಃ ಸ್ವಯಮೇವ ಜ್ಯೋತಿರಾತ್ಮಾ, ಸ ಸಮಾನಃ ಸದೃಶಃ ಸನ್। ಕೇನ? ಪ್ರಕೃತತ್ವಾತ್ ಸಂನಿಹಿತತ್ವಾಚ್ಚ ಹೃದಯೇನ। ಹೃದಿ ಇತಿ[1] ಹೃಚ್ಛಬ್ದ ವಾಚ್ಯಾ ಬುದ್ಧಿಃ ಪ್ರಕೃತಾ ಸಂನಿಹಿತಾ ಚ। ತಸ್ಮಾತ್ ತಯೈವ ಸಾಮಾನ್ಯಮ್। ಕಿಂ ಪುನಃ ಸಾಮಾನ್ಯಮ್? ಅಶ್ವಮಹಿಷವತ್ ವಿವೇಕತೋಽನುಪಲಬ್ಧಿಃ। ಅವಭಾಸ್ಯಾ ಬುದ್ಧಿಃ ಅವಭಾಸಕಂ ತದಾತ್ಮಜ್ಯೋತಿಃ, ಆಲೋಕವತ್। ಅವಭಾಸ್ಯಾವಭಾಸಕಯೋಃ ವಿವೇಕತೋಽನುಪಲಬ್ಧಿಃ ಪ್ರಸಿದ್ಧಾ। ವಿಶುದ್ಧತ್ವಾದ್ ಹಿ ಆಲೋಕೋಽವಭಾಸ್ಯೇನ ಸದೃಶೋ ಭವತಿ। ಯಥಾ ರಕ್ತಮವಭಾಸಯನ್ ರಕ್ತಸದೃಶೋ, ರಕ್ತಾಕಾರೋ ಭವತಿ ತಥಾ[2] ಹರಿತಂ ನೀಲಂ ಲೋಹಿತಂ ವಾ[3] ಅವಭಾಸಯದ್ ಆಲೋಕಸ್ತತ್ಸಮಾನೋ ಭವತಿ। ತಥಾ ಬುದ್ಧಿಮ್ ಅವಭಾಸಯನ್ ಬುದ್ಧಿದ್ವಾರೇಣ ಕೃತ್ಸ್ನಂ ಕ್ಷೇತ್ರಮ್ ಅವಭಾಸಯತೀತ್ಯುಕ್ತಮ್। ಮರಕತಮಣಿನಿದರ್ಶನೇನ ಚ।[4] ತೇನ ಸರ್ವೇಣ ಸಮಾನಃ ಬುದ್ಧಿಸಾಮಾನ್ಯದ್ವಾರೇಣ। "ಸರ್ವಮಯಃ" (೪-೪-೫) ಇತಿ ಚಾತ ಏವ ವಕ್ಷ್ಯತಿ। ತೇನಾಸೌ ಕುತಶ್ಚಿತ್ ಪ್ರವಿಭಜ್ಯ ಮುಞ್ಜೇಷೀಕಾವತ್ ಸ್ವೇನ ಜ್ಯೋತೀರೂಪೇಣ ದರ್ಶಯಿತುಂ ನ ಶಕ್ಯತ ಇತಿ ಸರ್ವವ್ಯಾಪಾರಂ ತತ್ರಾಧ್ಯಾರೋಪ್ಯ ನಾಮರೂಪಗತಂ ಜ್ಯೋತಿರ್ಧರ್ಮಂ ಚ ನಾಮರೂಪಯೋರ್ನಾಮರೂಪೇ ಚ ಆತ್ಮಜ್ಯೋತಿಷಿ ಸರ್ವೋ ಲೋಕೋ ಮೋಮುಹ್ಯತೇ ಅಯಮಾತ್ಮಾ, ನಾಯಮಾತ್ಮಾ ಏವಂಧರ್ಮಾ ನೈವಂಧರ್ಮಾ, ಕರ್ತಾ ಅಕರ್ತಾ, ಶುದ್ಧೋಽಶುದ್ಧಃ ಬದ್ಧೋ ಮುಕ್ತಃ, ಸ್ಥಿತೋ ಗತಃ, ಆಗತಃ, ಅಸ್ತಿ ನಾಸ್ತೀತ್ಯಾದಿವಿಕಲ್ಪೈಃ। ಅತಃ ಸಮಾನಃ ಸನ್ ಉಭೌ ಲೋಕೌ ಪ್ರತಿಪನ್ನಪ್ರತಿಪತ್ತವ್ಯೌ ಇಹಲೋಕಪರಲೋಕೌ ಉಪಾತ್ತದೇಹೇನ್ದ್ರಿಯಾದಿಸಂಘಾತತ್ಯಾಗಾನ್ಯೋಪಾದಾನಸಂತಾನಪ್ರಬನ್ಧಶತಸಂನಿಪಾತೈಃ ಅನುಕ್ರಮೇಣ ಸಂಚರತಿ। ಧೀಸಾದೃಶ್ಯಮೇವ ಉಭಯಲೋಕಸಂಚರಣಹೇತುರ್ನ ಸ್ವತಃ ಇತಿ ॥

---

1. ಇಲ್ಲಿ "ಚ" ಹೆಚ್ಚು.

2 ಯಥಾ ಎಂಬುದನ್ನು ಹೀಗೆ ತಿದ್ದಿಕೊಂಡಿದೆ; ಯಾವ ಶಬ್ದವೂ ಇಲ್ಲದಿದ್ದರೂ ಸಾಗುತ್ತದೆ.

3. ಚ ಎಂದು ಆ॥ ಪಾ॥

4. ಇಲ್ಲೊಂದು ಚ ಬೇಕೆಂದು ಸೇರಿಸಿಕೊಂಡಿದೆ.

(ಭಾಷ್ಯಾರ್ಥ)

ಅವನು ಸಮಾನನಾಗಿ ಎರಡು ಲೋಕಗಳನ್ನೂ ಅನುಸಂಚಾರಮಾಡು ತ್ತಿರುತ್ತಾನೆ. ಯಾವ ಪುರುಷನು ತಾನೇ ಜ್ಯೋತಿಯಾಗಿರುವ ಆತ್ಮನೋ ಅವನು ಸಮಾನನಾಗಿ ಸದೃಶನಾಗಿ. ಯಾವದಕ್ಕೆ ? ಪ್ರಕೃತವಾಗಿರುವದರಿಂದ ಲೂ ಸಂನಿಹಿತವಾಗಿರುವದರಿಂದಲೂ ಹೃದಯಕ್ಕೆ (ಸಮಾನನಾಗಿ ಎಂದರ್ಥ. ಇದರ ವಿವರ) : ಹೃದಯ(ದೊಳಗೆ) ಎಂದು ಹೃಚ್ಛಬ್ದದಿಂದ ಕರೆದಿರುವ ಬುದ್ಧಿಯು ಪ್ರಕೃತವಾಗಿರುತ್ತದೆ ; (ಈ ವಾಕ್ಯಕ್ಕೆ) ಸಮೀಪದಲ್ಲಿ ಹೇಳಿಯೂ ಇರುತ್ತದೆ ; ಆದ್ದರಿಂದ ಆ (ಬುದ್ಧಿಗೇ) ಸಾದೃಶ್ಯ(ವನ್ನು ಇಲ್ಲಿ ಆತ್ಮನಿಗೆ ಹೇಳಿದೆ). (ಈ) ಸಾಮಾನ್ಯವೆಂಬುದು ಯಾವದು ? ಕುದುರೆಕೋಣಗಳಂತೆ ವಿಂಗಡಿಸಿ ತೋರದೆ ಇರುವವು. (ಇದರ ವಿವರ) : ಬುದ್ಧಿಯು ಬೆಳಗಿಸಿಕೊಳ್ಳ ತಕ್ಕದ್ದು; ಆ ಆತ್ಮಜ್ಯೋತಿಯು (ಸೂರ್ಯಾದಿಗಳ) ಬೆಳಕಿನಂತೆ ಬೆಳಗತಕ್ಕದ್ದು. ಬೆಳಗಿಸಿಕೊಳ್ಳತಕ್ಕದ್ದು, ಬೆಳಗತಕ್ಕದ್ದು- ಇವುಗಳನ್ನು ವಿವೇಚನೆಮಾಡಿ ಅರಿ ಯದೆ ಇರುವದು ಪ್ರಸಿದ್ಧವೇ ಆಗಿರುತ್ತದೆ. ಬೆಳಕು ವಿಶುದ್ಧವಾಗಿರುವದರಿಂದ ಬೆಳಗಿಸಿಕೊಳ್ಳತಕ್ಕ (ಪದಾರ್ಥಕ್ಕೆ) ಸದೃಶವಾಗಿರುತ್ತದೆ. ಹೇಗೆಂದರೆ ಕೆಂಪು (ಪದಾರ್ಥ)ವನ್ನು ಬೆಳಗುವಾಗ ಕೆಂಪಾಗಿರುವ (ಪದಾರ್ಥ)ದಂತೆ ಕೆಂಪಿನ ಆಕಾರವೇ ಆಗಿರುತ್ತದೆ, (ಹಾಗೆಯೇ)[1] ಹಸುರು, ಕಪ್ಪು, ಅಥವಾ ಲೋಹಿತ[2] ಇವುಗಳನ್ನು ಬೆಳಗುವಾಗ ಬೆಳಕು ಅದಕ್ಕೆ ಸಮಾನವಾಗಿಯೇ ಆಗಿರುತ್ತದೆ. ಹೀಗೆಯೇ ಬುದ್ಧಿಯನ್ನು ಬೆಳಗುವಾಗ ಬುದ್ಧಿಯ ದ್ವಾರದಿಂದ ಇಡಿಯ ಕ್ಷೇತ್ರ ವನ್ನು ಬೆಳಗುತ್ತದೆ ಎಂದು ಹೇಳಿದೆವು, ಮರಕತರತ್ನದ ದೃಷ್ಟಾಂತದಿಂದಲೂ (ತಿಳಿಸಿದೆವು). **ಈ ಬುದ್ಧಿಸಾದೃಶ್ಯದ್ವಾರದಿಂದ (ಆತ್ಮನು) ಎಲ್ಲಕ್ಕೂ ಸಮಾನನಾಗಿರುತ್ತಾನೆ.** ಆದ್ದರಿಂದಲೇ "ಸರ್ವಮಯ(ನಾಗಿರುತ್ತಾನೆ)" (೪-೪-೫) ಎಂದೂ ಮುಂದೆ (ಶ್ರುತಿ) ಹೇಳುತ್ತದೆ. **ಆದ್ದರಿಂದ ಇವನನ್ನು ನೊಸೆಹುಲ್ಲಿನ ದಿಂಡಿನಂತೆ ಯಾವದರಿಂದಲೂ ವಿಂಗಡಿಸಿ ತನ್ನ ಜ್ಯೋತಿಯ ರೂಪದಿಂದ ತೋರಿಸುವದಕ್ಕೆ ಆಗುವಂತಿಲ್ಲವಾಗಿ ನಾಮ ರೂಪಗಳಲ್ಲಿರುವ ಎಲ್ಲಾ ವ್ಯಾಪಾರವನ್ನೂ ಆದರಲ್ಲಿ ಅಧ್ಯಾರೋಪಿಸಿ, ಜ್ಯೋತಿಯ ಧರ್ಮವನ್ನು ನಾಮರೂಪಗಳಲ್ಲಿಯೂ ನಾಮರೂಪ ಗಳನ್ನು ಆತ್ಮಜ್ಯೋತಿಯಲ್ಲಿಯೂ (ಅಧ್ಯಾರೋಪಿಸಿ) ಇವನು ಆತ್ಮನು, ಇವನು ಆತ್ಮನಲ್ಲ ; ಈ ಧರ್ಮದವನು, ಈ ಧರ್ಮದವನಲ್ಲ ; ಕರ್ತೃ, ಅಕರ್ತೃ ; ಶುದ್ಧನು, ಅಶುದ್ಧನು ; ಬದ್ಧನು, ಮುಕ್ತನು ; ನಿಂತಿರು**

---

1. ಹಿಂದಿನ ವಾಕ್ಯವಿಲ್ಲದೆ ಯಥಾ ಹರಿತಂ- ಮುಂತಾದ ವಾಕ್ಯವೇ ಇದ್ದರೂ ಸಾಕಾಗುತ್ತಿತ್ತು.

2. ಕೆಂಪಿನಲ್ಲಿ ಒಂದು ವಿಶೇಷವಿದು.

**ವವನು, ನಡೆಯುವವನು, ಬಂದವನು; ಇರುವನು, ಇಲ್ಲ"- ಎಂಬಿದೇ ಮುಂತಾದ ವಿಕಲ್ಪಗಳನ್ನು ಮಾಡಿ ಜನವೆಲ್ಲ ಮತ್ತೆಮತ್ತೆ ಮೋಹ ಗೊಳ್ಳುತ್ತಿರುವದು.**[1] ಅದ್ದರಿಂದ (ಬುದ್ಧಿಗೆ) ಸಮಾನನಾಗಿ ಎರಡು ಲೋಕ ಗಳನ್ನೂ ಪಡೆದಿರುವ ಮತ್ತು ಪಡೆಯಲಿರುವ ಇಹಲೋಕಪರಲೋಕಗಳನ್ನೂ ತೆಗೆದುಕೊಂಡ ದೇಹೇಂದ್ರಿಯಾದಿಸಂಘಾತವನ್ನು ಬಿಡುವದು, ಮತ್ತೊಂದು (ಸಂಘಾತ)ವನ್ನು ತೆಗೆದುಕೊಳ್ಳುವದು- ಎಂಬ ನೂರಾರು ಸಂತಾನಪ್ರಬಂಧದ ಸೇರುವಿಕೆಯಿಂದ ಒಂದಾಗುತ್ತಲೊಂದನ್ನು ಅನುಸಂಚಾರಮಾಡುತ್ತಿರುವನು, ಬುದ್ಧಿಸಾದೃಶ್ಯವೇ ಉಭಯಲೋಕಸಂಚಾರಕ್ಕೆ ಕಾರಣವೇ ಹೊರತು ಸ್ವತಃ (ಸಂಚಾರವಿಲ್ಲ).

## ಬುದ್ಧಿಸಾದೃಶ್ಯವೇ ಸಂಸಾರಹೇತುವೆಂಬುದು ಹೇಗೆ ?

(ಭಾಷ್ಯ)

೧೭೬. ತತ್ರ ನಾಮರೂಪೋಪಾಧಿಸಾದೃಶ್ಯಂ ಭ್ರಾನ್ತಿನಿಮಿತ್ತಂ ಯತ್ ತದೇವ ಹೇತುಃ ನ ಸ್ವತಃ ಇತ್ಯೇತದುಚ್ಯತೇ। ಯಸ್ಮಾತ್ ಸ ಸಮಾನಃ ಸನ್ ಉಭೌ ಲೋಕೌ ಅನುಕ್ರಮೇಣ ಸಂಚರತಿ ತದೇತತ್ ಪ್ರತ್ಯಕ್ಷಮ್ ಇತ್ಯೇತದ್ ದರ್ಶಯತಿ। ಯತೋ ಧ್ಯಾಯತೀವ ಧ್ಯಾನವ್ಯಾಪಾರಂ ಕರೋತೀವ ಚಿನ್ತಯತೀವ ಧ್ಯಾನವ್ಯಾಪಾರವತೀಂ ಬುದ್ಧಿಂ ಸ ತತ್ಸ್ಥೇನ ಚಿತ್ಸ್ವಭಾವಜ್ಯೋತೀರೂಪೇಣ ಅವಭಾಸಯನ್ ತತ್ಸದೃಶಃ ತತ್ಸಮಾನಃ ಸನ್ ಧ್ಯಾಯತೀವ ಆಲೋಕವದೇವ। ಅತೋ ಭವತಿ 'ಚಿನ್ತಯತಿ' ಇತಿ ಭ್ರಾನ್ತಿರ್ಲೋಕಸ್ಯ। ನ ತು ಪರಮಾರ್ಥತೋ ಧ್ಯಾಯತಿ। ತಥಾ ಲೇಲಾಯತೀವ ಅತ್ಯರ್ಥಂ ಚಲತೀವ। ತೇಷ್ವೇವ ಕರಣೇಷು ಬುದ್ಧ್ಯಾದಿಷು ವಾಯುಷು ಚಲತ್ಸು ತದವಭಾಸಕತ್ವಾತ್ ತತ್ಸದೃಶಂ ತದಿತಿ ಲೇಲಾಯತೀವ। ನ ತು ಪರಮಾರ್ಥತಶ್ಚಲನಧರ್ಮಕಂ ತದಾತ್ಮಜ್ಯೋತಿಃ। ಕಥಂ ಪುನರೇತದವಗಮ್ಯತೇ ತತ್ಸಮಾನತ್ವಭ್ರಾನ್ತಿರೇವ ಉಭಯಲೋಕಸಂಚರಣಾದಿಹೇತುಃ ನ ಸ್ವತಃ ಇತ್ಯಸ್ಯಾರ್ಥಸ್ಯ ಪ್ರದರ್ಶನಾಯ ಹೇತುರುಪದಿಶ್ಯತೇ। ಸ ಆತ್ಮಾ ಹಿ ಯಸ್ಮಾತ್ ಸ್ವಪ್ನೋ ಭೂತ್ವಾ। ಸ ಯಯಾ ಧಿಯಾ ಸಮಾನಃ ಸಾ ಧೀರ್ಯದ್ಯದ್ ಭವತಿ ತತ್ತದಸಾವಪಿ ಭವತೀವ। ತಸ್ಮಾತ್ ಯದಾ ಅಸೌ ಸ್ವಪ್ನೋ ಭವತಿ ಸ್ವಾಪವೃತ್ತಿಂ ಪ್ರತಿಪದ್ಯತೇ ಧೀಃ, ತದಾ ಸೋಽಪಿ ಸ್ವಪ್ನವೃತ್ತಿಂ ಪ್ರತಿಪದ್ಯತೇ। ಯದಾ ಧೀರ್ಜಿಜಾಗರಿಷತಿ ತದಾ ಅಸಾವಪಿ। ಅತ ಆಹ। ಸ್ವಪ್ನೋ ಭೂತ್ವಾ

---

1. ಇಲ್ಲಿರುವ ಅತ್ಮವಿಕಲ್ಪಗಳನ್ನು ಐ.ಭಾ. ೧-೩ (ಭಾ.ಭಾ. ೭೧)ರಲ್ಲಿ ನೋಡಿ. ಆತ್ಮಾನಾತ್ಮಗಳ ಅನ್ಯೋನ್ಯಾಧ್ಯಾಸವೆಂದು ಸೂ. ಭಾ. ದ ಆದಿಯಲ್ಲಿ ವರ್ಣಿಸಿರುವದು ಇದೇ ಅಧ್ಯಾರೋಪವು.

ಸ್ವಪ್ನವೃತ್ತಿಮವಭಾಸಯನ್ ಧಿಯಃ ಸ್ವಾಪವೃತ್ತ್ಯಾಕಾರೋ ಭೂತ್ವಾ ಇಮಂ ಲೋಕಂ ಜಾಗರಿತವ್ಯವಹಾರಲಕ್ಷಣಂ ಕಾರ್ಯಕರಣಸಂಘಾತಾತ್ಮಕಂ ಲೌಕಿಕ ಶಾಸ್ತ್ರೀಯವ್ಯವಹಾರಾಸ್ಪದಮ್ ಅತಿಕ್ರಾಮತಿ ಅತೀತ್ಯ ಕ್ರಾಮತಿ ವಿವಿಕ್ತೇನ ಸ್ವೇನ ಆತ್ಮಜ್ಯೋತಿಷಾ ಸ್ವಪ್ನಾತ್ಮಿಕಾಂ ಧೀವೃತ್ತಿಮ್ ಅವಭಾಸಯನ್ ಅನತಿಷ್ಠತೇ ಯಸ್ಮಾತ್ ತಸ್ಮಾತ್ ಸ್ವಯಂಜ್ಯೋತಿಃಸ್ವಭಾವ ಏವ ಏವಾಸೌ ವಿಶುದ್ಧಃ ಸನ್[1] ಕರ್ತೃಕ್ರಿಯಾಕಾರಕಫಲಶೂನ್ಯಃ । ಪರಮಾರ್ಥತೋ ಧೀ ಸಾದೃಶ್ಯಮೇವ ತು ಉಭಯಲೋಕಸಂಚಾರಾದಿಸಂವ್ಯವಹಾರಭ್ರಾನ್ತಿಹೇತುಃ । ಮೃತ್ಯೋಃ ರೂಪಾಣಿ ಮೃತ್ಯುಃ ಕರ್ಮಾವಿದ್ಯಾದಿಃ । ನ ತಸ್ಯ ಅನ್ಯದ್ ರೂಪಂ ಸ್ವತಃ ಕಾರ್ಯಕರಣಾನ್ಯೇವ ಅಸ್ಯ ರೂಪಾಣಿ । ಅತಸ್ತಾನಿ ಮೃತ್ಯೋಃ ರೂಪಾಣಿ ಅತಿಕ್ರಾಮತಿ ಕ್ರಿಯಾಫಲಾಶ್ರಯಾಣಿ ॥

(ಭಾಷ್ಯಾರ್ಥ)

ಇಲ್ಲಿ[2] ನಾಮರೂಪಗಳೆಂಬ ಉಪಾಧಿಯ ಸಾದೃಶ್ಯವೆಂಬ ಭ್ರಾಂತಿನಿಮಿತ್ತ ವಿದಯಲ್ಲ, ಅದೇ ಹೇತುವೇ ಹೊರತು ಸ್ವತಃ (ಸಂಚಾರ)ವಿಲ್ಲ ಎಂಬುದನ್ನು ತಿಳಿಸುತ್ತಾನೆ. ಏಕೆಂದರೆ ಅವನು ಸಮಾನನಾಗಿಯೇ ಎರಡು ಲೋಕಗಳನ್ನೂ (ಅನು=)ಕ್ರಮವಾಗಿ ಸಂಚಾರಮಾಡುತ್ತಾನೆ ಇದು ಪ್ರತ್ಯಕ್ಷವಾಗಿರುತ್ತದೆ ಎಂಬುದನ್ನು ತಿಳಿಸುತ್ತಾನೆ ಏಕೆಂದರೆ ಧ್ಯಾನಮಾಡುವವನಂತೆ, ಧ್ಯಾನ ವ್ಯಾಪಾರವನ್ನು ಮಾಡುವವನಂತೆ, ಚಿಂತನೆಮಾಡುವವನಂತೆ (ಇರುತ್ತಾನೆ). ಧ್ಯಾನವ್ಯಾಪಾರವುಳ್ಳ ಬುದ್ಧಿಯನ್ನು, ಅವನು ಅದರಲ್ಲಿರುವ ಚಿತ್ಸ್ವಭಾವದ ಜ್ಯೋತಿಯ ರೂಪದಿಂದ ಬೆಳಗುತ್ತಾ ಅದಕ್ಕೆ ಸದೃಶನಾಗಿ ಅದಕ್ಕೆ ಸಮಾನನೇ ಆಗಿ ಧ್ಯಾನಮಾಡುತ್ತಾನೆಯೋ ಎಂಬಂತೆಯೇ (ಇರುತ್ತಾನೆ), ಬೆಳಕು (ಹೇಗೆ ಬೆಳಗಲ್ಪಡುವ ವಸ್ತುವಿನ ಸದೃಶವಾಗಿ ಕಾಣಿಸುತ್ತದೆಯೋ) ಹಾಗೆಯೇ (ಇದು). ಆದ್ದರಿಂದ ಜನಕ್ಕೆ (ಇವನು) ಚಿಂತನೆಮಾಡುತ್ತಿರುತ್ತಾನೆ ಎಂಬ ಭ್ರಾಂತಿಯು ಆಗುತ್ತದೆ. (ಇಷ್ಟೇ ಹೊರತು) ನಿಜವಾಗಿ ಚಿಂತನೆಮಾಡುತ್ತಿರುವದಿಲ್ಲ. ಇದರಂತೆ ಅಲುಗಾಡುವವನಂತೆ, ಬಹಳವಾಗಿ ಚಲಿಸುತ್ತಿರುವವನಂತೆ. ಬುದ್ಧಿಯೇ ಮುಂತಾದ ಅದೇ ಕರಣಗಳೂ ವಾಯುಗಳೂ[3] ಚಲಿಸುತ್ತಿರುವಲ್ಲಿ ಅವುಗಳನ್ನು ಬೆಳಗುತ್ತಿರುವದರಿಂದ ಅದು ಅವುಗಳ ಸದೃಶವಾಗಿರು

1. "ಸ" ಎಂಬುದಕ್ಕಿಂತ ಈ ಪಾಠವು ಮೇಲು, ಈ ಮಾತು ಇಲ್ಲದಿದ್ದರೂ ಆಗುತ್ತದೆ.

2. ಎರಡು ಲೋಕಗಳನ್ನು ಅನುಸಂಚಾರಮಾಡುವಲ್ಲಿ.

3. ಪ್ರಾಣಾಪಾನಾದಿಗಳೂ. ಬುದ್ಧಿವೃತ್ತಿಗಳಿಗೆಲ್ಲ ಧ್ಯಾನವೆಂಬುದು ಉಪಲಕ್ಷಣವು; ಚಲನವೆಂಬುದು ಕ್ರಿಯೆಗಳಿಗೆಲ್ಲ ಉಪಲಕ್ಷಣವು ಎಂದು ವಾರ್ತಿಕ. (೪೧೦)

ತ್ತದೆಯಾದ್ದರಿಂದ ಚಲಿಸುತ್ತದೆಯೋ ಎನ್ನುವಂತಿದೆ. (ಇಷ್ಟೇ) ಹೊರತು ಪರಮಾರ್ಥವಾಗಿ ಆ ಆತ್ಮಜ್ಯೋತಿಯು ಚಲನಧರ್ಮವುಳ್ಳದ್ದಲ್ಲ.[1]

ಇನ್ನು ಅದಕ್ಕೆ ಸಮಾನವಾಗಿರುವದೆಂಬ ಭ್ರಾಂತಿಯೇ ಎರಡು ಲೋಕಗಳಲ್ಲಿಯೂ ಸಂಚರಿಸುವದೇ ಮುಂತಾದದ್ದಕ್ಕೆ[2] ಹೇತುವೇ ಹೊರತು ತಾನೇ ಅಲ್ಲ ಎಂಬಿದು ಹೇಗೆ ಗೊತ್ತು ? ಎಂಬೀ ಅರ್ಥವನ್ನು ತಿಳಿಸುವದಕ್ಕಾಗಿ ಹೇತುವನ್ನು ಹೇಳುತ್ತಾನೆ. ಆ ಆತ್ಮನು (ಹಿ= ಯಸ್ಮಾತ್) ಸ್ವಪ್ನವಾಗಿ—ಅವನು ಯಾವ ಬುದ್ಧಿಗೆ ಸಮಾನನಾಗಿರುವನೋ ಆ- ಬುದ್ಧಿಯು ಯಾವಯಾವದು ಆಗುತ್ತದೆಯೋ ಅದದು ಇವನೂ ಆಗುವಂತಿರುತ್ತಾನೆ. ಆದ್ದರಿಂದ ಯಾವಾಗ ಆ ಬುದ್ಧಿಯು ಸ್ವಪ್ನವಾಗುತ್ತದೆಯೋ ಸ್ವಪ್ನವೃತ್ತಿಯನ್ನು ಹೊಂದುತ್ತದೆಯೋ, ಆಗ ಅವನೂ ಸ್ವಪ್ನವೃತ್ತಿಯನ್ನು ಹೊಂದುತ್ತಾನೆ, ಯಾವಾಗ ಬುದ್ಧಿಯು ಎಚ್ಚರವಾಗಲಿರುವದೋ ಆಗ ಇವನು ಎಚ್ಚರುವನು. ಆದ್ದರಿಂದ (ಹೀಗೆಂದು) ಹೇಳುತ್ತಾನೆ. ಸ್ವಪ್ನವಾಗಿ, ಎಂದರೆ ಸ್ವಪ್ನವೃತ್ತಿಯನ್ನು ಬೆಳಗುವವನಾಗಿ ಬುದ್ಧಿಯ ಸ್ವಾಪವೃತ್ತಿಯ ಆಕಾರವುಳ್ಳವನಾಗಿ ಈ ಲೋಕವನ್ನು, **ಜಾಗರಿತೆ ವ್ಯವಹಾರಲಕ್ಷಣವಾಗಿರುವ, ಕಾರ್ಯಕರಣಸಂಘಾತರೂಪವಾದ ಲೌಕಿಕಶಾಸ್ತ್ರೀಯವ್ಯವಹಾರಕ್ಕೆ ಆಶ್ರಯವಾಗಿರುವ[3] (ಈ ಲೋಕವನ್ನು)** ಅತಿಕ್ರಮಿಸುತ್ತಾನೆ, ದಾಟಿಹೋಗುತ್ತಾನೆ. ವಿಂಗಡವಾಗಿರುವ ತನ್ನ ಆತ್ಮಜ್ಯೋತಿಯಿಂದ ಸ್ವಪ್ನಾತ್ಮಕವಾದ ಬುದ್ಧಿವೃತ್ತಿಯನ್ನು ಬೆಳಗುತ್ತಾ ಇರುತ್ತಾನಲ್ಲ, ಆದ್ದರಿಂದ ಇವನು ಸ್ವಯಂಜ್ಯೋತಿಃಸ್ವಭಾವನೇ, ಪರಮಾರ್ಥವಾಗಿ ವಿಶುದ್ಧನು, ಕರ್ತೃಕ್ರಿಯಾಕ್ರಿಯಾಕಾರಕಫಲರಹಿತನಾಗಿಯೇ ಇರುತ್ತಾನೆ. ಬುದ್ಧಿಸಾದೃಶ್ಯವೇ ಎರಡು ಲೋಕಗಳ ಸಂಚಾರವೇ ಮುಂತಾದ ಸಂವ್ಯವಹಾರದ ಭ್ರಾಂತಿಗೆ ಹೇತುವಾಗಿರುತ್ತದೆ. ಮೃತ್ಯುವಿನ ರೂಪಗಳನ್ನು— ಮೃತ್ಯು ಎಂದರೆ ಕರ್ಮ, ಅವಿದ್ಯೆ- ಮುಂತಾದದ್ದು, ಅವನಿಗೆ ಸ್ವತಃ ಮತ್ತೊಂದು ರೂಪವಿರುವದಿಲ್ಲ. ಕಾರ್ಯಕರಣಗಳೇ ಆ (ಮೃತ್ಯುವಿನ) ರೂಪಗಳು, ಆದ್ದರಿಂದ ಕ್ರಿಯಾಫಲಗಳಿಗೆ ಆಶ್ರಯವಾದ ಆ ಮೃತ್ಯುವಿನ ರೂಪಗಳನ್ನು ಅತಿಕ್ರಮಿಸುತ್ತಾನೆ.

---

1. ಧ್ಯಾತೃ, ಧ್ಯಾನ, ಧ್ಯೇಯ- ಇವೂ ಕರ್ತೃ, ಕರಣ, ಕರ್ಮ- ಇವೂ ಆತ್ಮನಲ್ಲಿಲ್ಲ.

2. ಮುಂತಾದದ್ದಕ್ಕೆ ಎಂದಿರುವದರಿಂದ ಧ್ಯಾನಮಾಡುವಂತಿರುವದು, ಚಲಿಸುವಂತಿರುವದು- ಇವುಗಳನ್ನು ಸೇರಿಸಿಕೊಳ್ಳಬೇಕು.

3. ಲೌಕಿಕ ಮತ್ತು ಶಾಸ್ತ್ರೀಯ -ಎಂಬ ಎಲ್ಲಾ ಬಗೆಯ ವ್ಯವಹಾರಕ್ಕೂ ದೇಹೇಂದ್ರಿಯಗಳ ಅಧ್ಯಾಸವೇ ಕಾರಣ. ಸೂ. ಭಾ.ದ ಅವತರಣಿಕೆಯನ್ನು ನೋಡಿ.

# ಬುದ್ಧಿವ್ಯತಿರಿಕ್ತಾತ್ಮನ ವಿಷಯಕ್ಕೆ ಚರ್ಚೆ
## ಬೌದ್ಧರ ಪೂರ್ವಪಕ್ಷಗಳು

(ಭಾಷ್ಯ)

೧೭೭. ನನು ನಾಸ್ತ್ಯೇವ ಧಿಯಾ ಸಮಾನಮ್ ಅನ್ಯತ್ ಧಿಯೋಽವಭಾಸಕಮ್ ಆತ್ಮಜ್ಯೋತಿಃ। ಧೀವ್ಯತಿರೇಕೇಣ ಪ್ರತ್ಯಕ್ಷೇಣ ವಾ ಅನುಮಾನೇನ ವಾ ಅನುಪಲಮ್ಭಾತ್ । ಯಥಾ ಅನ್ಯಾ ತತ್ಕಾಲ ಏವ ದ್ವಿತೀಯಾ ಧೀಃ। ಯತ್ತು ಅವಭಾಸ್ಯಾವಭಾಸಕಯೋಃ ಅನ್ಯತ್ವೇಽಪಿ ವಿವೇಕಾನುಪಲಮ್ಭಾತ್ ಸಾದೃಶ್ಯಮಿತಿ ಘಟಾದ್ಯಾಲೋಕಯೋಃ। ತತ್ರ ಭವತು ಅನ್ಯತ್ವೇನ ಆಲೋಕಸ್ಯ ಉಪಲಮ್ಭಾತ್ ಘಟಾದೇಃ, ಸಂಶ್ಲಿಷ್ಟಯೋಃ ಸಾದೃಶ್ಯಂ ಭಿನ್ನಯೋರೇವ । ನ ಚ ತಥಾ ಇಹ ಘಟಾದೇರಿವ ಧಿಯೋಽವಭಾಸಕಂ ಜ್ಯೋತಿರನ್ತರಂ ಪ್ರತ್ಯಕ್ಷೇಣ ವಾ ಅನುಮಾನೇನ ವಾ ಉಪಲಭಾಮಹೇ। ಧೀರೇವ ಹಿ ಚಿತ್ಸ್ವರೂಪಾವಭಾಸಕತ್ವೇನ ಸ್ವಾಕಾರಾ ವಿಷಯಾಕಾರಾ ಚ। ತಸ್ಮಾತ್ ನಾನುಮಾನತಃ। ನಾಪಿ ಪ್ರತ್ಯಕ್ಷತಃ ಧಿಯೋಽವಭಾಸಕಂ ಜ್ಯೋತಿಃ ಶಕ್ಯತೇ ಪ್ರತಿಪಾದಯಿತುಂ ವ್ಯತಿರಿಕ್ತಮ್। ಯದಪಿ ದೃಷ್ಟಾನ್ತರೂಪಮ್ ಅಭಿಹಿತಮ್ ಅವಭಾಸ್ಯಾವಭಾಸಕಯೋಃ ಭಿನ್ನಯೋರೇವ ಘಟಾದ್ಯಾಲೋಕಯೋಃ ಸಂಯುಕ್ತಯೋಃ ಸಾದೃಶ್ಯಮಿತಿ। ತತ್ರಾಭ್ಯುಪಗಮಮಾತ್ರಮ್ ಅಸ್ಮಾಭಿರುಕ್ತಮ್। ನ ತತ್ರ ಘಟಾದ್ಯವಭಾಸ್ಯಾವಭಾಸಕೌ ಭಿನ್ನೌ। ಪರಮಾರ್ಥತಸ್ತು ಘಟಾದಿರೇವ ಅವಭಾಸಾತ್ಮಕಃ ಸಾಲೋಕಃ, ಅನ್ಯೋಽನ್ಯೋ ಹಿ ಘಟಾದಿರುತ್ಪದ್ಯತೇ। ವಿಜ್ಞಾನಮಾತ್ರಮೇವ ಸಾಲೋಕಘಟಾದಿವಿಷಯಾಕಾರಮ್ ಅವಭಾಸತೇ। ಯದ್ಯೈವಮ್, ತದಾ ನ ಬಾಹ್ಯೋ ದೃಷ್ಟಾನ್ತೋಽಸ್ತಿ। ವಿಜ್ಞಾನಸ್ವಲಕ್ಷಣ[1]ಮಾತ್ರತ್ವಾತ್ ಸರ್ವಸ್ಯ। ಏವಂ ತಸ್ಯೈವ ವಿಜ್ಞಾನಸ್ಯ ಗ್ರಾಹ್ಯಗ್ರಾಹಕಾಕಾರತಾಮಲಂ ಪರಿಕಲ್ಪ್ಯ ತಸ್ಯೈವ ಪುನರ್ವಿಶುದ್ಧಿಂ ಪರಿಕಲ್ಪಯನ್ತಿ ತದ್ಗ್ರಾಹ್ಯಗ್ರಾಹಕವಿನಿರ್ಮುಕ್ತಂ ವಿಜ್ಞಾನಂ ಸ್ವಚ್ಛೀಭೂತಂ ಕ್ಷಣಿಕಂ ವ್ಯವತಿಷ್ಠತ ಇತಿ ಕೇಚಿತ್। ತಸ್ಯಾಪಿ ಶಾನ್ತಿಂ ಕೇಚಿದಿಚ್ಛನ್ತಿ। ತದಪಿ ವಿಜ್ಞಾನಂ ಸಂವೃತಮ್[2], ಗ್ರಾಹ್ಯಗ್ರಾಹಕಾಂಶವಿನಿರ್ಮುಕ್ತಂ ಶೂನ್ಯಮೇವ ಘಟಾದಿಬಾಹ್ಯವಸ್ತುವತ್ ಇತ್ಯಪರೇ ಮಾಧ್ಯಮಿಕಾ ಆಚಕ್ಷತೇ ॥

(ಭಾಷ್ಯಾರ್ಥ)

(ಆಕ್ಷೇಪ) :– ಬುದ್ಧಿಗೆ ಸದೃಶವಾಗಿರುವ, ಬುದ್ಧಿಯನ್ನು ಬೆಳಗುವ ಆತ್ಮಜ್ಯೋತಿ ಎಂಬ ಮತ್ತೊಂದು ಇಲ್ಲವೇ ಇಲ್ಲವಲ್ಲ ! ಏಕೆಂದರೆ (ಅದು) ಬುದ್ಧಿ

---

1. ವಿಜ್ಞಾನಲಕ್ಷಣ ಎಂಬ ಪಾಠಕ್ಕಿಂತ ಇದೇ ಮೇಲು.
2. 'ಅನಾವೃತಮ್' ಎಂಬ ಪಾಠಾಂತರವನ್ನು ಬಿಟ್ಟು ಇದನ್ನೇ ಗ್ರಹಿಸಿದೆ, ಏಕೆಂದರೆ ಇದೇ ವಾರ್ತಿಕಕ್ಕೆ ಸಮ್ಮತ.

ಗಿಂತ ವ್ಯತಿರಿಕ್ತವಾಗಿ ಪ್ರತ್ಯಕ್ಷದಿಂದಲಾಗಲಿ, ಅನುಮಾನದಿಂದಲಾಗಲಿ ಕಾಣ ಬರುವದಿಲ್ಲ; ಹೇಗೆ ಅದೇ ಕಾಲದಲ್ಲಿಯೇ ಮತ್ತೊಂದು ಬುದ್ಧಿಯು (ಕಾಣಬರು ವದಿಲ್ಲವೋ ಹಾಗೆಯೇ ಇದು) ಬೆಳಗುವದು, ಬೆಳಗಲ್ಪಡತಕ್ಕದ್ದು –ಇವು ಬೇರೆಬೇರೆಯಾಗಿದ್ದರೂ ಏಗಡವಾಗಿ ಕಾಣಬರುವ ಇರುವದರಿಂದ ಘಟಾದಿ ಗಳಿಗೂ ಬೆಳಕಿಗೂ ಸಾದೃಶ್ಯವಿರುತ್ತದೆ ಎಂದು (ದೃಷ್ಟಾಂತವನ್ನು) ಕಲ್ಪಿಸಿದ್ದಿ ರಷ್ಟೆ, ಅಲ್ಲಿಯಾದರೆ ಬೆಳಕೆಂಬುದು ಘಟಾದಿಗಿಂತ ಬೇರೆಯಾಗಿ ಕಾಣಬರುವದ ರಿಂದ ಬೇರೆಬೇರೆಯಾಗಿಯೇ ಇದ್ದರೂ ಸೇರಿಕೊಂಡಿರುವ (ಘಟಾದಿಗಳಿಗೂ ಬೆಳಕಿಗೂ) ಸಾದೃಶ್ಯವು (ಕಾಣುತ್ತದೆ) ಎಂದಾಗಲಿ, ಆದರೆ ಇಲ್ಲಿ ಘಟಾದಿ ಗಳನ್ನು (ಬೆಳಗುವ ಬೆಳಕಿನಂತೆ) ಬುದ್ಧಿಯನ್ನು ಬೆಳಗುವ ಮತ್ತೊಂದು ಜ್ಯೋತಿಯು ಪ್ರತ್ಯಕ್ಷದಿಂದಲಾಗಲಿ ಅನುಮಾನದಿಂದಲಾಗಲಿ ನಮಗೆ ಕಾಣ ಬರುತ್ತಿಲ್ಲ.[1] (ಬರಿಯ) ಬುದ್ಧಿಯೇ ಚಿತ್ಸ್ವರೂಪವಾಗಿದ್ದು ಬೆಳಗುವದಾಗಿ ರುವದರಿಂದ ತನ್ನ ಆಕಾರವಾಗಿಯೂ ವಿಷಯದ ಆಕಾರವಾಗಿಯೂ ಇರುತ್ತದೆ.[2] ಆದ್ದರಿಂದ ಅನುಮಾನದಿಂದಲಾಗಲಿ, ಪ್ರತ್ಯಕ್ಷದಿಂದಲಾಗಲಿ (ಅದಕ್ಕಿಂತ) ವ್ಯತಿರಿಕ್ತವಾದ ಜ್ಯೋತಿಯನ್ನು ತಿಳಿಸಿಕೊಡುವದಕ್ಕೆ ಆಗಲಾರದು.[3]

ಇನ್ನು ಘಟಾದಿಗಳು ಬೆಳಕು– ಇವು ಬೆಳಗಲ್ಪಡತಕ್ಕದ್ದು, ಬೆಳಗತಕ್ಕದ್ದು ಎಂದು ಬೇರೆಬೇರೆಯೇ ಆಗಿದ್ದರೂ ಕೂಡಿಕೊಂಡಿರುವದರಿಂದ ಒಂದಕ್ಕೊಂದು ಸಾದೃಶ್ಯ(ವಿರಬಹುದು) ಎಂದು ದೃಷ್ಟಾಂತರೂಪವನ್ನು ಹೇಳಿದವಲ್ಲ, ಅದು ಸುಮ್ಮನೆ (ಹೊರಗಿನ ವಸ್ತುವನ್ನು) ಒಪ್ಪಿ ನಾವು ಹೇಳಿರುತ್ತೇವೆ, ಆದರ ಅಲ್ಲಿ

---

1. ಬೌದ್ಧರು ಇಂದ್ರಿಯಪ್ರತ್ಯಕ್ಷ, ಮಾನಸಪ್ರತ್ಯಕ್ಷ, ಸ್ವಯಂವೇದನಪ್ರತ್ಯಕ್ಷ, ಯೋಗಿಪ್ರತ್ಯಕ್ಷ– ಎಂದು ನಾಲ್ಕುಬಗೆಯ ಪ್ರತ್ಯಕ್ಷವನ್ನು ಒಪ್ಪಿದಾರೆ ಪ್ರತ್ಯಕ್ಷವು ಸವಿಕಲ್ಪಕ ವೆಂದೂ ನಿರ್ವಿಕಲ್ಪಕವೆಂದೂ ಎರಡು ವಿಧ, ಸವಿಕಲ್ಪಕದಲ್ಲಿ ಗ್ರಾಹ್ಯಗ್ರಾಹಕಭೇದವು ತೋರುತ್ತದೆ, ನಿಜವಾಗಿ ಈ ಭೇದವು ಇಲ್ಲವೆಂಬುದು ನಿರ್ವಿಕಲ್ಪಕಪ್ರತ್ಯಕ್ಷದಿಂದ ಗೊತ್ತಾ ಗುತ್ತದೆ. ಅಂತೂ ಪ್ರತ್ಯಕ್ಷದಿಂದ ಬುದ್ಧಿಯು ಮಾತ್ರ ತಿಳಿಯಬರುವದೇ ಹೊರತು, ಆತ್ಮ ಜ್ಯೋತಿಯು ತಿಳಿಯಬರುವದಿಲ್ಲ ಎಂಬುದು ವಿಜ್ಞಾನವಾದಿಗಳ ಮತ ಬುದ್ಧಿಯು ಕ್ಷಣ ಮಾತ್ರವಿರುತ್ತದೆ, ಒಂದು ಬುದ್ಧಿಯಿರುವಾಗ ಇನ್ನೊಂದು ಹೇಗೆ ಇರುವದಿಲ್ಲವೋ ಆತ್ಮನೂ ಹಾಗೆಯೇ ಇರುವದಿಲ್ಲ ಎಂದೂ ಆತ್ಮನಿದಾನೆಂಬುದೇ ಗೊತ್ತಿಲ್ಲವಾದ್ದರಿಂದ ಆತ್ಮನನ್ನು ಅನುಮಾನದಿಂದಲೂ ತಿಳಿಯುದಕ್ಕಾಗಲಾರದೆಂದೂ ಅವರ ಅಭಿಪ್ರಾಯ.

2. ಇದೂ ವಿಜ್ಞಾನವಾದಿಗಳ ಅಭಿಪ್ರಾಯವೇ ಗಡಿಗೆ, ಬೆಳಕು– ಎಂಬಿವುಗಳಿಗೆ ಭೇದವನ್ನು ಮೇಲೆ ಒಪ್ಪಿದ್ದು ಹೊರಗೆ ಕ್ಷಣಿಕವಾದ ವಸ್ತುಗಳಿವೆ ಎಂಬ ಬಾಹ್ಯಸತ್ಯತ್ವ ವಾದಿಗಳ ಮತವನ್ನನುಸರಿಸಿ ಹೇಳಿರುವದೇ ಹೊರತು ವಿಜ್ಞಾನವಾದಿಗಳಿಗೆ ಇದು ಸಮ್ಮತವಲ್ಲ.

3. ಸರ್ವಜ್ಞನಾದ ಬುದ್ಧವಚನಕ್ಕೆ ವಿರುದ್ಧವಾದ ಯಾವ ವಾಕ್ಯವನ್ನೂ ಬೌದ್ಧರು ಪ್ರಮಾಣವೆಂದು ಒಪ್ಪುವದಿಲ್ಲ, ಆದ್ದರಿಂದ ವೇದವಾಕ್ಯವು ಅವರಿಗೆ ಅಪ್ರಮಾಣ

ಗಡಿಗೆಯೇ ಮುಂತಾದ ಅವಭಾಸ್ಯವೂ (ಅವುಗಳ) ಅವಭಾಸಕವೂ ಬೇರೆಬೇರೆಯಾಗಿರುವದಿಲ್ಲ. ನಿಜವಾಗಿ (ನೋಡಿದ)ರಾದರೋ ಗಡಿಗೆ ಮುಂತಾದದ್ದೇ ಬೆಳಕಿನೊಡಗೂಡಿ ಅವಭಾಸದ ರೂಪವಾಗಿದೆ. ಬೇರೆಬೇರೆಯು ಘಟಾದಿಗಳು ಹುಟ್ಟುತ್ತಲೇ ಇರುತ್ತವೆಯಲ್ಲವೆ ?

ವಿಜ್ಞಾನವೊಂದೇ ಬೆಳಕಿನಿಂದೊಡಗೂಡಿದ ಘಟಾದಿವಿಷಯದ ಆಕಾರದಿಂದ ತೋರುತ್ತಿರುತ್ತದೆ. ಹೀಗಿರುವದೆಂದು ಯಾವಾಗ (ಒಪ್ಪುವೆವೋ) ಆಗ ಹೊರಗಿನ ದೃಷ್ಟಾಂತವೇ ಇರುವದಿಲ್ಲ, ಏಕೆಂದರೆ ಎಲ್ಲವೂ ವಿಜ್ಞಾನಸ್ವಲಕ್ಷಣ ಮಾತ್ರವಾಗಿರುತ್ತದೆ. ಹೀಗೆ ಅದೇ ವಿಜ್ಞಾನಕ್ಕೆ ಗ್ರಾಹ್ಯಗ್ರಾಹಕಾಕಾರತ್ವವೆಂಬ ಮಲವನ್ನು ಕಲ್ಪಿಸಿ, ಆ ವಿಜ್ಞಾನವು ಗ್ರಾಹ್ಯಗ್ರಾಹಕರಹಿತವಾಗಿ ಸ್ವಚ್ಛೀಭೂತವಾಗಿ ಕ್ಷಣಿಕವಾಗಿ ನಿಲ್ಲುತ್ತದೆ ಎಂದು ಕೆಲವರು ಅದಕ್ಕೆ ಮತ್ತೆ ವಿಶುದ್ಧಿಯಾಗುವದೆಂದು ಕಲ್ಪಿಸಿರುತ್ತಾರೆ.[2] ಅದಕ್ಕೂ ನಾಶವನ್ನು ಕೆಲವರು ಒಪ್ಪಿರುತ್ತಾರೆ ಆ ವಿಜ್ಞಾನವು ಕೂಡ ಸಂವೃತವೇ, ಅದು ಹೊರಗಿನ ಘಟಾದಿವಸ್ತುಗಳಂತೆ ಗ್ರಾಹ್ಯಗ್ರಾಹಕಾಂಶವಿನಿರ್ಮುಕ್ತವಾದ ಶೂನ್ಯವೇ, ಎಂದು ಮತ್ತೆ ಕೆಲವರು ಮಾಧ್ಯಮಿಕರು ಹೇಳುತ್ತಿರುವರು.[3]

## ಸಿದ್ಧಾಂತ : ಬಾಹ್ಯಾರ್ಥವಾದಿಗಳ ಖಂಡನೆ

(ಭಾಷ್ಯ)

೧೭೮. ಸರ್ವಾ ಏತಾಃ ಕಲ್ಪನಾಃ ಬುದ್ಧಿವಿಜ್ಞಾನಾವಭಾಸಕಸ್ಯ ವ್ಯತಿರಿಕ್ತಸ್ಯ ಆತ್ಮಜ್ಯೋತಿಷೋಽಪಹ್ನವಾತ್ ಅಸ್ಯ ಶ್ರೇಯೋಮಾರ್ಗಸ್ಯ ಪ್ರತಿಪಕ್ಷಭೂತಾ ವೈದಿಕಸ್ಯ । ತತ್ರ ಯೇಷಾಂ ಬಾಹ್ಯೋಽರ್ಥೋಽಸ್ತಿ ತಾನ್ ಪ್ರತ್ಯುಚ್ಯತೇ ತಾವತ್ । ನ ಸ್ವಾತ್ಮಾವಭಾಸಕತ್ವಂ ಘಟಾದೇಃ । ತಮಸ್ಯವಸ್ಥಿತೋ ಘಟಾದಿಸ್ತಾವತ್ ನ ಕದಾಚಿದಪಿ ಸ್ವಾತ್ಮನಾ ಅನುಭಾವ್ಯತೇ । ಪ್ರದೀಪಾದ್ಯಾಲೋಕಸಂಯೋಗೇನ ತು ನಿಯಮೇನೈವ ಅವಭಾಸ್ಯಮಾನೋ ದೃಷ್ಟಃ । ಸಾಲೋಕೋ ಘಟಃ ಇತಿ ಸಂಶ್ಲಿಷ್ಟಯೋರಪಿ ಘಟಾಲೋಕಯೋಃ ಅನ್ಯತ್ವ

1 ಹೊರಗೆ, ಕ್ಷಣಿಕವಾದ ವಸ್ತುವಿರುವದೆಂದೂ ಆ ವಸ್ತುವಿನ ಸ್ವರೂಪವು ಪ್ರತ್ಯಕ್ಷಗಮ್ಯವೆಂದೂ ಅನುಮೇಯವೆಂದೂ ಹೇಳುವ ಬೌದ್ಧರ ವಾದವಿದು.

2. ಕ್ಷಣಿಕವಿಜ್ಞಾನಕ್ಕಿಂತ ಬೇರೆಯು ಹೊರಗಿನ ವಸ್ತುವೇ ಇಲ್ಲ, ಅದೇ ವಿಜ್ಞಾನಾಕಾರವಾಗಿಯೂ ವಿಷಯಾಕಾರವಾಗಿಯೂ ತೋರುತ್ತದೆ, ಅದು ಈ ಗ್ರಾಹ್ಯಗ್ರಾಹಕಭೇದವಿಲ್ಲದ ವಿಜ್ಞಾನಮಾತ್ರವೇ ಎಂದು ತಿಳಿಯುವದು ಪರಮಾರ್ಥಜ್ಞಾನವು ಎಂಬ ಬೌದ್ಧರ ವಾದವಿದು.

3. ವಿಜ್ಞಾನವೂ ಹೊರಗಿನ ವಿಷಯವೂ ಎರಡೂ ನಿಸ್ಸಾರವೇ; ಶೂನ್ಯವೇ ಪರಮಾರ್ಥವು ಎಂಬ ಬೌದ್ಧರ ವಾದವಿದು. ಸಂವೃತವು ಎಂದರೆ ಆವೃತಸ್ವರೂಪವುಳ್ಳದ್ದು, ಪರಮಾರ್ಥವಲ್ಲ, ಕಲ್ಪಿತರೂಪವೇ- ಎಂದು ಅಭಿಪ್ರಾಯ.

ಮೇವ। ಪುನಃ ಪುನಃ ಸಂಶ್ಲೇಷೇ ವಿಶ್ಲೇಷೇ ಚ ವಿಶೇಷದರ್ಶನಾತ್, ರಜ್ಜು ಘಟಯೋರಿವ। ಅನ್ಯತ್ವೇ ಚ ವ್ಯತಿರಿಕ್ತಾವಭಾಸಕತ್ವಮ್, ನ ಸ್ವಾತ್ಮನೈವ ಸ್ವಮಾತ್ಮಾನಮ್ ಅವಭಾಸಯತಿ। ನನು ಪ್ರದೀಪಃ ಸ್ವಾತ್ಮಾನಮೇವ ಅವ ಭಾಸಯನ್ ದೃಷ್ಟಃ ಇತಿ। ನ ಹಿ ಘಟಾದಿವತ್ ಪ್ರದೀಪದರ್ಶನಾಯ ಪ್ರಕಾ ಶಾನ್ತರಮ್ ಉಪಾದದತೇ ಲೌಕಿಕಾಃ। ತಸ್ಮಾತ್ ಪ್ರದೀಪಃ ಸ್ವಾತ್ಮಾನಂ ಪ್ರಕಾಶಯತಿ। ನ। ಅವಭಾಸ್ಯತ್ವಾವಿಶೇಷಾತ್। ಯದ್ಯಪಿ ಪ್ರದೀಪೋಽ ನ್ಯಸ್ಯ ಅವಭಾಸಕಃ, ಸ್ವಯಮವಭಾಸಾತ್ಮಕತ್ವಾತ್, ತಥಾಪಿ ವ್ಯತಿರಿಕ್ತ ಚೈತನ್ಯಾವಭಾಸ್ಯತ್ವಂ ನ ವ್ಯಭಿಚರತಿ ಘಟಾದಿವದೇವ। ಯದಾ ಚೈವಂ ತದಾ ವ್ಯತಿರಿಕ್ತಾವಭಾಸ್ಯತ್ವಂ ತಾವತ್ ಅವಶ್ಯಂಭಾವಿ। ನನು ಯಥಾ ಘಟಃ ಚೈತನ್ಯಾವಭಾಸ್ಯತ್ವೇಽಪಿ ವ್ಯತಿರಿಕ್ತಮ್ ಆಲೋಕಾನ್ತರಮ್ ಅಪೇಕ್ಷತೇ, ನ ತ್ವೇವಂ ಪ್ರದೀಪೋಽನ್ಯಮ್ ಆಲೋಕಾನ್ತರಮ್ ಅಪೇಕ್ಷತೇ। ತಸ್ಮಾತ್ ಪ್ರದೀಪೋಽನ್ಯಾವಭಾಸ್ಯೋಽಪಿ ಸನ್ ಆತ್ಮಾನಂ ಘಟಂ ಚ ಅವಭಾಸಯತಿ। ನ। ಸ್ವತಃ ಪರತೋ ವಾ ವಿಶೇಷಾಭಾವಾತ್। ಯಥಾ ಚೈತನ್ಯಾವಭಾಸ್ಯತ್ವಂ ಘಟಸ್ಯ, ತಥಾ ಪ್ರದೀಪಸ್ಯಾಪಿ ಚೈತನ್ಯಾವಭಾಸ್ಯತ್ವಮ್ ಅವಿಶಿಷ್ಟಮ್। ಯತ್ತೂಚ್ಯತೇ ಪ್ರದೀಪಃ ಆತ್ಮಾನಂ ಘಟಂ ಚಾವಭಾಸಯತೀತಿ। ತದಸತ್। ಕಸ್ಮಾತ್? ಯದಾ ಆತ್ಮಾನಂ ನಾವಭಾಸಯತಿ ತದಾ ಕೀದೃಶಃ ಸ್ಯಾತ್? ನ ಹಿ ತದಾ ಪ್ರದೀಪಸ್ಯ ಸ್ವತೋ ವಾ ಪರತೋ ವಾ ವಿಶೇಷಃ ಕಶ್ಚಿತ್ ಉಪ ಲಭ್ಯತೇ। ಸ ಹಿ ಅವಭಾಸ್ಯೋ ಭವತಿ ಯಸ್ಯ ಅವಭಾಸಕಸಂನಿಧೌ ಅಸಂನಿಧೌ ಚ ವಿಶೇಷಃ ಉಪಲಭ್ಯತೇ। ನ ಹಿ ಪ್ರದೀಪಸ್ಯ ಸ್ವಾತ್ಮಸಂನಿಧಿಃ ಅಸಂನಿಧಿರ್ವಾ ಶಕ್ಯಃ ಕಲ್ಪಯಿತುಮ್। ಅಸತಿ ಚ ಕಾದಾಚಿತ್ಕೇ ವಿಶೇಷೇ ಆತ್ಮಾನಂ ಪ್ರದೀಪಃ ಪ್ರಕಾಶಯತಿ ಇತಿ ಮೃಷೈವ ಉಚ್ಯತೇ। ಚೈತನ್ಯಗ್ರಾಹ್ಯತ್ವಂ ತು ಘಟಾದಿಭಿ ರವಿಶಿಷ್ಟಂ ಪ್ರದೀಪಸ್ಯ। ತಸ್ಮಾತ್ ವಿಜ್ಞಾನಸ್ಯ ಆತ್ಮಗ್ರಾಹ್ಯಗ್ರಾಹಕತ್ವೇ ನ ಪ್ರದೀಪೋ ದೃಷ್ಟಾನ್ತಃ॥

(ಭಾಷ್ಯಾರ್ಥ)

ಈ ಎಲ್ಲಾ ಕಲ್ಪನೆಗಳೂ[1] ಬುದ್ಧಿವಿಜ್ಞಾನವನ್ನು ಬೆಳಗುತ್ತಿರುವ (ಅದ ಕ್ಕಿಂತ) ವ್ಯತಿರಿಕ್ತವಾದ ಆತ್ಮಜ್ಯೋತಿಯನ್ನು ಅಲ್ಲಗಳೆಯುವದರಿಂದ ಈ ವೈದಿಕವಾದ ಶ್ರೇಯೋಮಾರ್ಗಕ್ಕೆ ಪ್ರತಿಪಕ್ಷಗಳಾಗಿರುತ್ತವೆ.[2] ಇಲ್ಲಿ ಯಾರಿಗೆ

---

1. ಸಾಲೋಕವಾದ ಘಟವು ತಾನೇ ತೋರಿಕೊಳ್ಳುತ್ತದೆ; ವಿಜ್ಞಾನವೇ ಜ್ಞಾನಾ ಕಾರವಾಗಿಯೂ ಸಾಲೋಕಘಟಾಕಾರವಾಗಿಯೂ ತೋರುತ್ತದೆ; ಶೂನ್ಯವೇ ಪರಮಾರ್ಥವು ಎಂಬೀ ಮೂರು ಕಲ್ಪನೆಗಳೂ.

2 ಏಕೆಂದರೆ ಈ ಬೌದ್ಧಮತಪ್ರಭೇದಗಳಲ್ಲಿ ಆತ್ಮಜ್ಞಾನದಿಂದ ಶ್ರೇಯಸ್ಸು ಎಂಬುದು ಅಸಿದ್ಧವಾಗಿರುತ್ತದೆ.

ಹೊರಗಿನ ಅರ್ಥವು ಇರುತ್ತದೆಯೋ, ಅವರಿಗೆ ಮೊದಲು (ಈ) ಉತ್ತರವನ್ನು ಹೇಳುತ್ತೇವೆ

ಘಟಾದಿ(ವಸ್ತು) ತನ್ನನ್ನು ತಾನು ಬೆಳಗಲಾರದು. (ಏಕೆಂದರೆ) ಮೊದಲನೆಯದಾಗಿ ಕತ್ತಲೆಯಲ್ಲಿರುವ ಘಟಾದಿ(ವಸ್ತು) ತನ್ನಿಂದ (ತಾನು) ಬೆಳಗಲ್ಪಟ್ಟದ್ದು ಎಂದಿಗೂ ಇಲ್ಲ. ಪ್ರದೀಪವೇ ಮುಂತಾದವುಗಳ ಸಂಯೋಗದಿಂದಲಾದರೆ ನಿಯಮದಿಂದಲೇ ಬೆಳಗಲ್ಪಡುತ್ತದೆ ಎಂಬುದು ಕಂಡಿರುತ್ತದೆ. "ಬೆಳಕಿನಿಂದೊಡಗೂಡಿದ ಘಟವು" ಎಂದು[1] ಒಂದಕ್ಕೊಂದು ಕೂಡಿಕೊಂಡಿರುವ ಘಟ, ಬೆಳಕು- ಇವುಗಳೂ ಬೇರೆಬೇರೆಯೇ; ಏಕೆಂದರೆ ಮತ್ತೆಮತ್ತೆ ಸಂಬಂಧವೂ ಅಸಂಬಂಧವೂ ಆದಾಗ (ಅವುಗಳಲ್ಲಿ) ರಜ್ಜುಘಟಗಳಂತೆಯೇ ವಿಶೇಷವು ಕಂಡುಬರುತ್ತದೆ.[2] (ಅವು) ಬೇರೆಬೇರೆ(ಯೆಂದು ಸಿದ್ಧವಾಗಿರು)ವದರಿಂದ (ತನಗಿಂತ) ವ್ಯತಿರಿಕ್ತವಾದ ಅವಭಾಸಕವುಳ್ಳದ್ದೇ (ಎಂದು ಏರ್ಪಡುತ್ತದೆ), ತನ್ನಿಂದಲೇ ತನ್ನನ್ನು (ಸಾಲೋಕಘಟವು) ಬೆಳಗುತ್ತದೆ (ಎಂಬುದು ಸರಿ)ಯಲ್ಲ(ವೆಂದಾಗುತ್ತದೆ).

(ಆಕ್ಷೇಪ).- ಪ್ರದೀಪವು ತನ್ನನ್ನೇ (ತಾನು) ಬೆಳಗುತ್ತಿರುವದು ಕಂಡಿವೆಯಲ್ಲ ![3] ಗಡಿಗೆಯೇ ಮುಂತಾದವುಗಳಂತೆ ಪ್ರದೀಪವನ್ನು ಕಾಣುವದಕ್ಕೆಂದು ಮತ್ತೊಂದು ಬೆಳಕನ್ನು ಲೋಕದ ಜನರು ತೆಗೆದುಕೊಳ್ಳುವದಿಲ್ಲವಷ್ಟೆ ? ಆದ್ದರಿಂದ ಪ್ರದೀಪವು ತನ್ನನ್ನು (ತಾನೇ) ಬೆಳಗುತ್ತದೆ (ಎಂದಾಯಿತಲ್ಲ) !

(ಪರಿಹಾರ).- ಹಾಗಲ್ಲ. ಏಕೆಂದರೆ ಬೆಳಗಲ್ಪಡತಕ್ಕದ್ದೆಂಬುದು ಸಮಾನವಾಗಿರುತ್ತದೆ. (ಇದರ ವಿವರ) : ಪ್ರದೀಪವು ತಾನೇ ಬೆಳಕಿನ ಸ್ವಭಾವವುಳ್ಳದ್ದಾದ್ದರಿಂದ ಮತ್ತೊಂದನ್ನು ಬೆಳಗುತ್ತದೆ ಎಂಬುದು ನಿಜ, ಆದರೂ (ತನಗಿಂತ) ಘಟಾದಿ(ವಸ್ತು)ವಿನಂತೆಯೇ ವ್ಯತಿರಿಕ್ತವಾದ ಚೈತನ್ಯದಿಂದ[4] ಬೆಳಗಲ್ಪಡುತ್ತದೆ ಎಂಬುದನ್ನೇನೂ (ಅದು) ಬಿಟ್ಟುಹೋಗುವದಿಲ್ಲ ಯಾವಾಗ

1. "ಸಾಲೋಕೋ ಘಟ ಇತಿ" ಎಂಬುದನ್ನು ಹಿಂದಕ್ಕೆ ಅನ್ವಯಿಸಿದರೆ ಬೆಳಕಿನಿಂದೊಡಗೂಡಿದ ಘಟವು ಎಂದು ಕಂಡುಬರುತ್ತದೆ- ಎಂದು ಕಲ್ಪಿಸಬೇಕಾಗುವದು; ಅದಕ್ಕಿಂತ ಈಗ ನಾವು ಮಾಡಿರುವ ಅನ್ವಯವೇ ಉತ್ತಮವೆಂದು ಕಾಣುತ್ತದೆ

2. ಹಗ್ಗವನ್ನು ಕಟ್ಟಿದ ಗಡಿಗೆಯಲ್ಲಿ ಬರಿಯ ಗಡಿಗೆಗಿಂತ ಬಂದಾನೊಂದು ವಿಶೇಷವಿರುವಂತೆಯೇ ಎಂದರ್ಥ

3. ಸಾಲೋಕಘಟವು ತನ್ನನ್ನು ತಾನೇ ಬೆಳಗುತ್ತದೆ- ಎಂಬುದನ್ನು ಸಿದ್ಧಾಂತಿಯು ಖಂಡಿಸಲಾಗಿ ಘಟವೂ ಬೆಳಕೂ ಬೇರೆಬೇರೆಯಾಗಿವೆ ಎಂದು ಒಪ್ಪಬೇಕಾದರೂ ದೀಪವು ತನ್ನನ್ನು ತಾನೇ ಬೆಳಗುವದಿಲ್ಲವೆ ? ಆಗ ವ್ಯತಿರಿಕ್ತಭಾಸ್ಯತ್ವವೇ ಇರಬೇಕೆಂಬ ವ್ಯಾಪ್ತಿ ಹೋಗುವದಿಲ್ಲವೆ ?- ಎಂದು ಪೂರ್ವಪಕ್ಷಿ ಶಂಕಿಸಿರುತ್ತಾನೆ

4. ಪೂರ್ವಪಕ್ಷಿಯು ಆತ್ಮಚೈತನ್ಯವನ್ನು ಒಪ್ಪದಿದ್ದರೂ ಬುದ್ಧಿಚೈತನ್ಯವನ್ನು ಒಪ್ಪಿರುತ್ತಾನೆ. ಆದ್ದರಿಂದ ಪ್ರದೀಪವು ತನಗಿಂತ ವ್ಯತಿರಿಕ್ತವಾದ ಮತ್ತೊಂದರಿಂದ ಬೆಳಗಲ್ಪಡುತ್ತದೆ ಎಂಬುದು ಇಬ್ಬರಿಗೂ ಸಮ್ಮತ

ಹೀಗೆಂದು (ಒಪ್ಪುವೆವೋ) ಆಗ (ತನಗಿಂತ) ವ್ಯತಿರಿಕ್ತವಾದದ್ದರಿಂದ ಬೆಳಗಲ್ಪಡತಕ್ಕದ್ದೆಂಬುದು ಅವಶ್ಯವಾಗಿ (ಅದಕ್ಕೂ) ಇರಬೇಕಾಗುವದು.

(ಬೌದ್ಧ) :- ಗಡಿಗೆಯು ಚೈತನ್ಯದಿಂದ ಬೆಳಗಲ್ಪಡತಕ್ಕದ್ದಾದರೂ (ತನಗಿಂತ) ವ್ಯತಿರಿಕ್ತವಾದ ಮತ್ತೊಂದು ಬೆಳಕನ್ನು ಹೇಗೆ ಬಯಸುತ್ತದೆಯೋ ಹಾಗೆ ಪ್ರದೀಪವು ಬೇರೆಯ ಮತ್ತೊಂದು ಬೆಳಕನ್ನು ಬಯಸುವದಿಲ್ಲ, ಆದ್ದರಿಂದ ಪ್ರದೀಪವು ಮತ್ತೊಂದರಿಂದ ಬೆಳಗಲ್ಪಡತಕ್ಕದ್ದಾಗಿದ್ದರೂ ತನ್ನನ್ನೂ ಗಡಿಗೆಯನ್ನೂ ಬೆಳಗುತ್ತದೆ (ಎನ್ನಬಹುದಲ್ಲ) [1]?

(ಸಿದ್ಧಾಂತಿ) :- ಹಾಗಲ್ಲ. ಏಕೆಂದರೆ ತನ್ನಿಂದಲಾಗಲಿ ಮತ್ತೊಂದರಿಂದಲಾಗಲಿ (ಪ್ರದೀಪಕ್ಕೆ) ವಿಶೇಷವೇನೂ ಇರುವದಿಲ್ಲ. (ಇದರ ವಿವರ). ಹೇಗೆ ಘಟವು ಚೈತನ್ಯದಿಂದ ಬೆಳಗಲ್ಪಡತಕ್ಕದ್ದಾಗಿದೆಯೋ ಹಾಗೆಯೇ ಪ್ರದೀಪವೂ ಚೈತನ್ಯದಿಂದ ಬೆಳಗಲ್ಪಡತಕ್ಕದ್ದು ಎಂಬುದು ಸಮಾನವಾಗಿದೆ. ಆದರೆ ಪ್ರದೀಪವು ತನ್ನನ್ನೂ ಘಟವನ್ನೂ ಬೆಳಗುತ್ತದೆ ಎನ್ನುತ್ತೀಯಲ್ಲ, ಅದು ನಿಜವಲ್ಲ. ಏಕೆ ? ಎಂದರೆ, ಯಾವಾಗ (ಅದು) ತನ್ನನ್ನು (ತಾನು) ಬೆಳಗುತ್ತಿರುವದಿಲ್ಲವೋ ಆಗ ಎಂಥದ್ದಾಗಿದ್ದೀತು ? ಆಗ ಪ್ರದೀಪಕ್ಕೆ ತನ್ನಿಂದಲಾಗಲಿ ಮತ್ತೊಂದರಿಂದಲಾಗಲಿ ಯಾವ ವಿಶೇಷವೂ ಇರುವದಿಲ್ಲವಲ್ಲವೆ[2] ? ಯಾವದಕ್ಕೆ ಬೆಳಗುವ (ವಸ್ತು)ವಿನ ಸಂನಿಧಿಯಲ್ಲಿಯೂ ಅಸಂನಿಧಿಯಲ್ಲಿಯೂ ವಿಶೇಷವು ಕಂಡುಬರುವದೋ ಅದಲ್ಲವೆ, ಬೆಳಗಲ್ಪಡತಕ್ಕದ್ದು (ಎನಿಸುವದು) ? ಆದರೆ ಪ್ರದೀಪಕ್ಕೆ ತನ್ನ ಸಂನಿಧಿಯನ್ನಾಗಲಿ, ಅಸಂನಿಧಿಯನ್ನಾಗಲಿ ಕಲ್ಪಿಸುವದಕ್ಕೆ ಆಗಲಾರದಷ್ಟೆ[3] ? ಹೀಗೆ ಒಂದಾನೊಂದು ಕಾಲದಲ್ಲಿ ಮಾತ್ರ ಆಗುವ ವಿಶೇಷವು

1. ಚೈತನ್ಯಕ್ಕೆ ತೋರುವ ಗಡಿಗೆಯು ಮತ್ತೊಂದು ಬೆಳಕಿದ್ದರೇ ತೋರುತ್ತದೆ, ಆದೇ ಚೈತನ್ಯಕ್ಕೆ ತೋರುವ ದೀಪಕ್ಕೆ ಮತ್ತೊಂದು ಬೆಳಕಿದ್ದೇ ತೋರುವವೆಂಬುದಿಲ್ಲ, ಅದು ತಾನೊಂದೇ ಇದ್ದರೂ ತೋರುತ್ತದೆ. ಆದ್ದರಿಂದ ಚೈತನ್ಯಕ್ಕೆ ವಸ್ತುವನ್ನು ಕಾಣುವದಕ್ಕೆ ಬೇಕಾದ ಮತ್ತೊಂದು ಬೆಳಕು ದೀಪಕ್ಕೆ ಬೇಡ, ದೀಪವೇ ಬೆಳಗಲ್ಪಡತಕ್ಕದ್ದು, ದೀಪವೇ ಚೈತನ್ಯಕ್ಕೆ ಬೇಕಾದ ಬೆಳಕು ಎಂದಾಯಿತಲ್ಲ !- ಎಂದು ಭಾವ.

2. ಪ್ರದೀಪವಿದೆ, ಆದರೆ ಅದು ತನ್ನನ್ನು ಬೆಳಗುತ್ತಿಲ್ಲ ; ಆದ್ದರಿಂದ ಅದು ಇಂಥದ್ದೊಂದು ಅಸಾಧಾರಣರೂಪದಲ್ಲಿದೆ- ಎಂದು ಆಗ ಬೆಳಗುವ ದೀಪಕ್ಕಿಂತಲೂ ಮತ್ತೊಂದು ವಸ್ತುವಿಗಿಂತಲೂ ದೀಪದಲ್ಲಿ ಯಾವ ವಿಶೇಷಸ್ವರೂಪವನ್ನೂ ಕಾಣುವದಕ್ಕಿಲ್ಲ.

3. ದೀಪವು ತನ್ನನ್ನು ತಾನು ಬೆಳಗುವದಿಲ್ಲ ಎಂಬ ಸ್ವತೋವಿಶೇಷವಿರಬಹುದಲ್ಲ ! ಎಂಬ ಶಂಕೆಗೆ ಸಮಾಧಾನವಿದು. ಗಡಿಗೆಯನ್ನು ದೀಪವು ಬೆಳಗುತ್ತದೆ ಎನ್ನುವಾಗ ದೀಪದ ಸಂನಿಧಿಯು ಗಡಿಗೆಗೆ ಇರುತ್ತದೆ; ಬೆಳಗುವದಿಲ್ಲ ಎನ್ನುವಾಗ ಇರುವದಿಲ್ಲ. ಆದರೆ ಹಾಗೆ ದೀಪವು ತನ್ನನ್ನು ತಾನು ಬೆಳಗುತ್ತದೆ ಎಂಬಲ್ಲಿ ಅದಕ್ಕೇ ಅದರ ಸಂನಿಧಿಯನ್ನು ಕಲ್ಪಿಸುವದಕ್ಕೆ ಬರುವದಿಲ್ಲ, ದೀಪವು ತಾನೇ ತೋರುತ್ತಿರುತ್ತದೆ ; ಅದು ಮತ್ತೊಂದರ ಸಂನಿಧಿಯಿಂದ ತೋರುತ್ತಿರುವದಿಲ್ಲ. ದೀಪವು ತನ್ನನ್ನು ತಾನು ಬೆಳಗುವದಿಲ್ಲ ಎಂಬ ಅಸಂನಿಧಿಯಂತೂ ಕಲ್ಪನಾತೀತವಾಗಿರುತ್ತದೆ.

ಇಲ್ಲದಿರುವಲ್ಲಿ ಪ್ರದೀಪವು ತನ್ನನ್ನು ತಾನು ಬೆಳಗುತ್ತದೆ ಎಂದು ಹೇಳುವದು ಸುಳ್ಳೇ ಎಂದಾಯಿತು. ಚೈತನ್ಯದಿಂದ ಗ್ರಹಿಸಲ್ಪಡಬೇಕೆಂಬುದಂತೂ ಘಟಾದಿಗಳಿಗೂ ಪ್ರದೀಪಕ್ಕೂ ಸಮಾನವೇ ಆಗಿರುತ್ತದೆ.[1] ಆದ್ದರಿಂದ ವಿಜ್ಞಾನವು ತಾನೇ ಗ್ರಾಹ್ಯವೂ ಗ್ರಾಹಕವೂ ಆಗಿದೆ ಎಂಬುದಕ್ಕೆ ಪ್ರದೀಪವು ದೃಷ್ಟಾಂತವಲ್ಲ.

(ಭಾಷ್ಯ)

೧೭೯. ಚೈತನ್ಯಗ್ರಾಹ್ಯತ್ವಂ ಚ ವಿಜ್ಞಾನಸ್ಯ ಬಾಹ್ಯವಿಷಯೈಃ ಅವಿಶಿಷ್ಟಮ್। ಚೈತನ್ಯಗ್ರಾಹ್ಯತ್ವೇ ಚ ವಿಜ್ಞಾನಸ್ಯ ಕಿಂ ಗ್ರಾಹ್ಯವಿಜ್ಞಾನಗ್ರಾಹ್ಯತ್ವೈವ, ಕಿಂ ವಾ ಗ್ರಾಹಕವಿಜ್ಞಾನಗ್ರಾಹ್ಯತೇತಿ ತತ್ರ[2] ಸಂದಿಹ್ಯಮಾನೇ ವಸ್ತುನಿ ಯೋಽನ್ಯತ್ರ ದೃಷ್ಟೋ ನ್ಯಾಯಃ ಸ ಕಲ್ಪಯಿತುಂ ಯುಕ್ತಃ, ನ ತು ದೃಷ್ಟವಿಪರೀತಃ। ತಥಾ ಚ ಸತಿ ಯಥಾ ವ್ಯತಿರಿಕ್ತೇನೈವ ಗ್ರಾಹಕೇಣ ಬಾಹ್ಯಾನಾಂ ಪ್ರದೀಪಾನಾಂ ಗ್ರಾಹ್ಯತ್ವಂ ದೃಷ್ಟಮ್, ತಥಾ ವಿಜ್ಞಾನಸ್ಯಾಪಿ ಚೈತನ್ಯಗ್ರಾಹ್ಯತ್ವಾತ್ ಪ್ರಕಾಶಕತ್ವೇ ಸತ್ಯಪಿ ಪ್ರದೀಪವತ್ ವ್ಯತಿರಿಕ್ತಚೈತನ್ಯಗ್ರಾಹ್ಯತ್ವಂ ಯುಕ್ತಂ ಕಲ್ಪಯಿತುಮ್, ನ ತು ಅನನ್ಯಗ್ರಾಹ್ಯತ್ವಮ್। ಯಶ್ಚಾನ್ಯೋ ವಿಜ್ಞಾನಸ್ಯ ಗ್ರಹೀತಾ ಸ ಆತ್ಮಾ ಜ್ಯೋತಿರನ್ತರಂ ವಿಜ್ಞಾನಾತ್। ತದಾ ಅನವಸ್ಥಾ ಇತಿ ಚೇತ್। ನ। ಗ್ರಾಹ್ಯತ್ವಮಾತ್ರಂ ಹಿ ತದ್ಗ್ರಾಹಕಸ್ಯ ವಸ್ತ್ವನ್ತರತ್ವೇ ಲಿಙ್ಗಮುಕ್ತಂ ನ್ಯಾಯತಃ। ನ ತು ಏಕಾನ್ತತೋ ಗ್ರಾಹಕತ್ವೇ ತದ್ಗ್ರಾಹಕಾನ್ತರಾಸ್ತಿತ್ವೇ[3] ಕದಾಚಿದಪಿ ಲಿಙ್ಗಂ ಸಂಭವತಿ। ತಸ್ಮಾತ್ ನ ತದನವಸ್ಥಾಪ್ರಸಙ್ಗಃ। ವಿಜ್ಞಾನಸ್ಯ ವ್ಯತಿರಿಕ್ತಗ್ರಾಹ್ಯತ್ವೇ ಕರಣಾನ್ತರಾಪೇಕ್ಷಾಯಾಮ್ ಅನವಸ್ಥಾ ಇತಿ ಚೇತ್। ನ। ನಿಯಮಾಭಾವಾತ್। ನ ಹಿ ಸರ್ವತ್ರ ಅಯಂ ನಿಯಮೋ ಭವತಿ ಯತ್ರ ವಸ್ತ್ವನ್ತರೇಣ ಗೃಹ್ಯತೇ ವಸ್ತ್ವನ್ತರಮ್, ತತ್ರ ಗ್ರಾಹ್ಯಗ್ರಾಹಕವ್ಯತಿರಿಕ್ತಂ ಕರಣಾನ್ತರಂ ಸ್ಯಾತ್ ಇತಿ ನೈಕಾನ್ತೇನ ನಿಯನ್ತುಂ ಶಕ್ಯತೇ। ವೈಚಿತ್ರ್ಯದರ್ಶನಾತ್। ಕಥಮ್? ಘಟಸ್ತಾವತ್ ಸ್ವಾತ್ಮವ್ಯತಿರಿಕ್ತಾತ್ಮನಾ ಗ್ರಾಹಕೇಣ[4] ಗೃಹ್ಯತೇ। ತತ್ರ ಪ್ರದೀಪಾದಿರಾಲೋಕೋ ಗ್ರಾಹ್ಯಗ್ರಾಹಕವ್ಯತಿರಿಕ್ತಂ ಕರಣಮ್। ನ ಹಿ ಪ್ರದೀಪಾದ್ಯಾಲೋಕಃ ಘಟಾಂಶಃ ಚಕ್ಷುರಂಶೋ ವಾ। ಘಟವತ್ ಚಕ್ಷುರ್ಗ್ರಾಹ್ಯತ್ವೇಽಪಿ ಪ್ರದೀಪಸ್ಯ ಚಕ್ಷುಃ

---

1. ದೀಪವು ಗಡಿಗೆಯನ್ನು ಬೆಳಗುವ ವಿಷಯಿಯಾದರೂ ಚೈತನ್ಯಕ್ಕೆ ವಿಷಯವಾಗಿಯೇ ಅದು ಗಡಿಗೆಯನ್ನು ಬೆಳಗಬೇಕು.

2. ಈ ಮಾತು ಅವಶ್ಯವಿಲ್ಲವೆಂದು ತೋರುತ್ತದೆ, ಅನುವಾದದಲ್ಲಿ ಇದನ್ನು ಬಿಟ್ಟುಬಿಟ್ಟಿದೇವೆ.

3. ಇದರ ಮುಂದೆ ಅಚ್ಚಿನಪುಸ್ತಕದಲ್ಲಿರುವ ವಾಶಬ್ದವನ್ನು ಬಿಟ್ಟುಬಿಟ್ಟಿದೆ

4. 'ವ್ಯತಿರಿಕ್ತೇನ ಆತ್ಮನಾ' ಎಂಬುದನ್ನು ವ್ಯತಿರಿಕ್ತಾತ್ಮನಾ ಎಂದು ತಿದ್ದಿಕೊಂಡಿದೆ; 'ಗ್ರಾಹಕೇಣ' ಎಂದು ಕೆಲವು ಕೋಶಗಳಲ್ಲಿ ಹೆಚ್ಚಾಗಿರುವದನ್ನೂ ಸೇರಿಸಿಕೊಂಡಿವೆ. ಅನುವಾದದ ಟಿಪ್ಪಣಿಯನ್ನು ನೋಡಿ

ಪ್ರದೀಪವ್ಯತಿರೇಕೇಣ ನ ಬಾಹ್ಯಮ್ ಆಲೋಕಸ್ಥಾನೀಯಂ ಕಿಂಚಿತ್ ಕರಣಾನ್ತರಮ್ ಅಪೇಕ್ಷತೇ। ತಸ್ಮಾತ್ ನೈವ ನಿಯನ್ತುಂ ಶಕ್ಯತೇ ಯತ್ರ ಯತ್ರ ವ್ಯತಿರಿಕ್ತಗ್ರಾಹ್ಯತ್ವಮ್ ತತ್ರ ತತ್ರ ಕರಣಾನ್ತರಂ ಸ್ಯಾದೇವ ಇತಿ। ತಸ್ಮಾತ್ ವಿಜ್ಞಾನಸ್ಯ ವ್ಯತಿರಿಕ್ತಗ್ರಾಹಕಗ್ರಾಹ್ಯತ್ವೇ ನ ಕರಣದ್ವಾರಾ ಅನವಸ್ಥಾ। ನಾಪಿ ಗ್ರಾಹಕತ್ವದ್ವಾರಾ ಕದಾಚಿದಪಿ ಉಪಪಾದಯಿತುಂ ಶಕ್ಯತೇ। ತಸ್ಮಾತ್ ಸಿದ್ಧಂ ವಿಜ್ಞಾನವ್ಯತಿರಿಕ್ತಮ್ ಆತ್ಮಜ್ಯೋತಿರನ್ತರಮಿತಿ ॥

(ಭಾಷ್ಯಾರ್ಥ)

ಚೈತನ್ಯಗ್ರಾಹ್ಯವಾಗಿರುವದೆಂಬುದು ವಿಜ್ಞಾನಕ್ಕೂ ಹೊರಗಿನ ವಿಷಯಗಳಿಗೂ ಸಮಾನವಾಗಿರುತ್ತದೆ.[1] ವಿಜ್ಞಾನವು ಚೈತನ್ಯಗ್ರಾಹ್ಯವೆಂದು ಆಗಿರುವಲ್ಲಿ ಗ್ರಾಹ್ಯವಿಜ್ಞಾನದಿಂದಲೇ (ಅದು) ಗ್ರಾಹ್ಯವೆ, ಅಥವಾ ಗ್ರಾಹಕವಿಜ್ಞಾನದಿಂದ ಗ್ರಾಹ್ಯವೆ? –ಎಂದು ವಸ್ತುವಿನಲ್ಲಿ ಸಂದೇಹವಾಗಲು[2] ಮತ್ತೊಂದು ಕಡೆಯಲ್ಲಿ ದೃಷ್ಟವಾಗಿರುವ ನ್ಯಾಯವನ್ನು (ಇಲ್ಲಿಯೂ) ಕಲ್ಪಿಸಬೇಕೇ ಹೊರತು ಕಂಡದ್ದಕ್ಕೆ ವಿಪರೀತವಾದ (ನ್ಯಾಯವನ್ನು) ಕಲ್ಪಿಸಬಾರದು. ಹಾಗಾದಲ್ಲಿ **ಹೇಗೆ (ತನಗಿಂತ) ವ್ಯತಿರಿಕ್ತವಾದ ಗ್ರಾಹಕದಿಂದಲೇ ಹೊರಗಿನ ಪ್ರದೀಪಾದಿಗಳು ಗ್ರಾಹ್ಯವಾಗಿರುವದು ಕಂಡುಬಂದಿರುತ್ತದೆಯೋ ಹಾಗೆಯೇ ವಿಜ್ಞಾನವೂ ಚೈತನ್ಯಗ್ರಾಹ್ಯವಾಗಿರುವದರಿಂದ (ಅದು) ಪ್ರದೀಪದಂತೆ ಪ್ರಕಾಶವೇ ಆಗಿದ್ದರೂ (ತನಗಿಂತ) ವ್ಯತಿರಿಕ್ತವಾದ ಚೈತನ್ಯದಿಂದ ಗ್ರಾಹ್ಯವೆಂದು ಕಲ್ಪಿಸುವದು ಯುಕ್ತವೇ ಹೊರತು ಅನನ್ಯಗ್ರಾಹ್ಯವೆಂದು ಕಲ್ಪಿಸುವದು ಯುಕ್ತವಲ್ಲ.**[3] ವಿಜ್ಞಾನವನ್ನು ಗ್ರಹಿಸುವ (ಈ) ಮತ್ತೊಬ್ಬನಿದಾನಲ್ಲ, ಆ ಆತ್ಮನೇ ವಿಜ್ಞಾನಕ್ಕಿಂತ ಬೇರೆಯಾದ ಮತ್ತೊಂದು ಜ್ಯೋತಿಯು.

(ಬೌದ್ಧ) :- ಆಗ ಅನವಸ್ಥೆಯಾಗುವದಲ್ಲ ![4]

---

1. ಘಟವೂ ದೀಪವೂ ವ್ಯತಿರಿಕ್ತವಾದ ಚೈತನ್ಯದಿಂದ ಗ್ರಾಹ್ಯ, ಅವುಗಳು ತಾವೇ ತಮ್ಮನ್ನು ಗ್ರಹಿಸುವದಿಲ್ಲವೆಂದು ಸಿದ್ಧವಾಯಿತು. ಹೀಗೆಯೇ ವಿಜ್ಞಾನವೂ ಚೈತನ್ಯಗ್ರಾಹ್ಯವಾಗಿದೆಯಾದ್ದರಿಂದ ಅದೂ ವ್ಯತಿರಿಕ್ತಗ್ರಾಹ್ಯವೆಂದು ತೋರಿಸುವದಕ್ಕೆ ಹೊರಟಿದಾರೆ.

2. ಬೌದ್ಧನ ಮತದಂತೆ ವಿಜ್ಞಾನವು ಗ್ರಾಹ್ಯವಾದ ವಿಜ್ಞಾನದಿಂದಲೇ ಗ್ರಾಹ್ಯ ; ಸಿದ್ಧಾಂತಿಯ ಮತದಲ್ಲಿ ವ್ಯತಿರಿಕ್ತವಾದ ಗ್ರಾಹಕವಾದ ಚೈತನ್ಯದಿಂದ ಗ್ರಾಹ್ಯ. ಈ ಎರಡರಲ್ಲಿ ಯಾವದು ಸರಿ ? –ಎಂಬುದು ಇಲ್ಲಿ ಸಂಶಯ.

3. ಏಕೆಂದರೆ ಅನನ್ಯಗ್ರಾಹ್ಯತ್ವಕ್ಕೆ ದೃಷ್ಟಾಂತವಿಲ್ಲ.

4. ವಿಜ್ಞಾನವು ಗ್ರಾಹಕವಾದರೂ ಅದನ್ನು ಅದಕ್ಕಿಂತ ವ್ಯತಿರಿಕ್ತವಾದ ಗ್ರಾಹಕವು ಗ್ರಹಿಸಬೇಕು– ಎನ್ನುವದಾದರೆ ಆ ಗ್ರಾಹಕನಾದ ಆತ್ಮನಿಗೆ ಮತ್ತೊಂದು ಗ್ರಾಹಕ, ಅದಕ್ಕೂ ಮತ್ತೊಂದು ಗ್ರಾಹಕ– ಹೀಗೆ ಗ್ರಾಹಕಗಳನ್ನು ನಿಲುಗಡೆಯಿಲ್ಲದೆ ಕಲ್ಪಿಸಬಹುದಾಗುವದಲ್ಲ ? ಎಂದು ಶಂಕೆ.

(ಸಿದ್ಧಾಂತಿ) :- ಹಾಗಲ್ಲ ಏಕೆಂದರೆ ಗ್ರಾಹ್ಯತ್ವವನ್ನೊಂದನ್ನೇ ಆದರ ಗ್ರಾಹಕವು ಮತ್ತೊಂದಾಗಿರಬೇಕೆಂಬುದಕ್ಕೆ ಲಿಂಗವೆಂದು ಯುಕ್ತಿಯಿಂದ ಹೇಳಿದೆವು. (ಇಷ್ಟೇ) ಹೊರತು **ನಿಯಮವಾಗಿ ಗ್ರಾಹಕವೇ ಆಗಿರುವಲ್ಲಿ ಆದಕ್ಕೂ ಮತ್ತೊಂದು ಗ್ರಾಹಕವಿರಬೇಕೆಂಬುದಕ್ಕೆ ಎಂದಿಗೂ ಲಿಂಗ ವಿರುವದಿಲ್ಲ.**[1] ಆದ್ದರಿಂದ ಆ (ಗ್ರಾಹಕನಿಗೆ) ಅನವಸ್ಥೆಯಾಗುವ ಪ್ರಸಂಗವಿಲ್ಲ.[2]

(ಬೌದ್ಧ).- ವಿಜ್ಞಾನವು (ತನಗಿಂತ) ವ್ಯತಿರಿಕ್ತವಾದ್ದರಿಂದ ಗ್ರಾಹ್ಯವೆಂದಾದರೆ ಮತ್ತೊಂದು ಕರಣವೂ ಬೇಕಾಗುವದರಿಂದ ಅನವಸ್ಥೆಯಾಗುವದಲ್ಲ ![3]

(ಸಿದ್ಧಾಂತಿ) :- ಹಾಗಲ್ಲ. ಏಕೆಂದರೆ ನಿಯಮವಿಲ್ಲ (ಇದರ ವಿವರ) : ಎಲ್ಲೆಲ್ಲಿಯೂ ಈ ನಿಯಮವಿರುವದಿಲ್ಲ **ಎಲ್ಲಿ ಒಂದು ವಸ್ತು ಮತ್ತೊಂದು ವಸ್ತುವಿನಿಂದ ಗೃಹೀತವಾಗಿರುವದೋ ಅಲ್ಲಿ ಗ್ರಾಹ್ಯಗ್ರಾಹಕಗಳಿಗಿಂತ ವ್ಯತಿರಿಕ್ತವಾದ ಮತ್ತೊಂದು ಕರಣಾಂತರವಿರಬೇಕೆಂದು ಒಂದೇ ರೀತಿಯಿಂದ ನಿಯಮವನ್ನು ಮಾಡುವದು ಶಕ್ಯವಲ್ಲ;** ಏಕೆಂದರೆ ವೈಚಿತ್ರ್ಯವು ಕಂಡುಬರುತ್ತದೆ. ಹೇಗೆಂದರೆ, ಮೊದಲನೆಯದಾಗಿ ಘಟವು ತನಗಿಂತ ವ್ಯತಿರಿಕ್ತವಾದ ಗ್ರಾಹಕದಿಂದ[4] ಗೃಹೀತವಾಗುತ್ತದೆಯಷ್ಟೆ ; ಅಲ್ಲಿ ಪ್ರದೀಪವೇ ಮುಂತಾದ ಬೆಳಕು ಗ್ರಾಹ್ಯಗ್ರಾಹಕಗಳಿಗಿಂತ ವ್ಯತಿರಿಕ್ತವಾಗಿರುವ ಕರಣವಾಗಿರುತ್ತದೆ. ಏಕೆಂದರೆ ಪ್ರದೀಪವೇ ಮುಂತಾದ ಬೆಳಕು ಘಟದಂಶವೂ ಅಲ್ಲ, ಚಕ್ಷುಸ್ಸಿನಂಶವೂ ಅಲ್ಲ. (ಆದರೆ) ಪ್ರದೀಪವು ಘಟದಂತೆಯೇ ಚಕ್ಷುಸ್ಸಿನಿಂದ ಗ್ರಾಹ್ಯವಾಗಿರುತ್ತಿದ್ದರೂ (ಅಲ್ಲಿ) ಚಕ್ಷುಸ್ಸು ಪ್ರದೀಪಕ್ಕಿಂತ ವ್ಯತಿರಿಕ್ತವಾಗಿ ಹೊರಗಿನ ಬೆಳಕಿನಂತಿರುವ ಯಾವದೊಂದು ಕರಣವನ್ನೂ ಬಯಸುವ

---

1 ಗ್ರಾಹ್ಯಕ್ಕೆ ಗ್ರಾಹಕವಿರಬೇಕೆಂಬ ಲಿಂಗವಿದೆ, ಆ ಗ್ರಾಹಕವು ಅತಿರಿಕ್ತವಾಗಿರಬೇಕೆಂಬುದಕ್ಕೂ ದೃಷ್ಟಾಂತವಿದೆ. ವಿಜ್ಞಾನವು ಗ್ರಾಹಕವಾದರೂ ಗ್ರಾಹ್ಯವೂ ಆಗಿದೆ ; ಆದರೆ ಆತ್ಮನು ಗ್ರಾಹಕಮಾತ್ರ, ಗ್ರಾಹ್ಯನಲ್ಲ ಅವನಿಗೆ ಮತ್ತೊಂದು ಗ್ರಾಹಕವನ್ನು ಕಲ್ಪಿಸುವದಕ್ಕೆ ನ್ಯಾಯವೆಲ್ಲಿದೆ ?

2. ನ ತದನವಸ್ಥಾಪ್ರಸಙ್ಗಃ ಎಂಬುದರ ಕನ್ನಡವಿದು , ತದಾ ನಾನವಸ್ಥಾಪ್ರಸಙ್ಗಃ ಎಂದಿದ್ದರೆ ಆಗ ಅನವಸ್ಥೆಯ ಪ್ರಸಂಗವಿಲ್ಲ ಎಂದೇ ಅನುವಾದ

3. ಗಡಿಗೆಯನ್ನು ಮತ್ತೊಬ್ಬ ಗ್ರಾಹಕನು ಗ್ರಹಿಸಿದರೆ ದೀಪವು ಬೇಕು , ಹೀಗೆಯೇ ಬುದ್ಧಿಯನ್ನು ಮತ್ತೊಬ್ಬ ಗ್ರಾಹಕನು ಗ್ರಹಿಸಿದರೆ ಕರಣವು ಬೇಕು, ಆ ಕರಣವನ್ನು ಗ್ರಹಿಸುವದಕ್ಕೆ ಮತ್ತೊಂದು ಬೇಕು- ಹೀಗೆ ಅನವಸ್ಥೆ ಬರುತ್ತದೆ ಎಂದು ಭಾವ.

4. ಇಲ್ಲಿ ಗ್ರಾಹಕವು ಚಕ್ಷುಸ್ಸು ಎಂಬುದು ವಾಕ್ಯವಿಶೇಷದಿಂದ ಗೊತ್ತಾಗುತ್ತದೆ ; ಆದ್ದರಿಂದಲೇ ನಾವು "ವ್ಯತಿರಿಕ್ತೇನಾತ್ಮನಾ" ಎಂಬುದನ್ನು ವ್ಯತಿರಿಕ್ತಾತ್ಮನಾ ಗ್ರಾಹಕೇಣ ಎಂದು ತಿದ್ದಿಕೊಂಡದ್ದು.

ದಿಲ್ಲ.[1] ಆದ್ದರಿಂದ ಎಲ್ಲೆಲ್ಲಿ ವ್ಯತಿರಿಕ್ತಗ್ರಾಹ್ಯತ್ವವಿದೆಯೋ ಅಲ್ಲಲ್ಲಿ ಮತ್ತೊಂದು ಕರಣವು ಇರಲೇಬೇಕು ಎಂದು ನಿಯಮವನ್ನು ಮಾಡುವದಕ್ಕೆ ಆಗುವದಿಲ್ಲ. ಆದ್ದರಿಂದ ವಿಜ್ಞಾನವು ತನಗಿಂತ ವ್ಯತಿರಿಕ್ತವಾದ ಗ್ರಾಹಕದಿಂದ ಗ್ರಾಹ್ಯವಾಗಿರುತ್ತದೆ ಎಂಬ (ಪಕ್ಷ)ದಲ್ಲಿ ಕರಣದ ದ್ವಾರದಿಂದಲೂ ಅನವಸ್ಥೆಯಿರುವದಿಲ್ಲ, ಗ್ರಾಹಕತ್ವದ್ವಾರದಿಂದಲೂ (ಅನವಸ್ಥೆ ಎಂದು) ಎಂದಿಗೂ ತೋರಿಸಿಕೊಡುವದಕ್ಕೆ ಆಗುವಂತಿಲ್ಲ. ಆದ್ದರಿಂದ ವಿಜ್ಞಾನವ್ಯತಿರಿಕ್ತವಾದ ಆತ್ಮನೆಂಬ ಮತ್ತೊಂದು ಜ್ಯೋತಿಯು ಸಿದ್ಧವಾಯಿತು.

## ವಿಜ್ಞಾನವಾದದ ಖಂಡನೆ

(ಭಾಷ್ಯ)

೧೮೦. ನನು ನಾಸ್ತ್ಯೇವ ಬಾಹ್ಯೋಽರ್ಥೋ ಘಟಾದಿಃ ಪ್ರದೀಪೋ ವಾ ವಿಜ್ಞಾನವ್ಯತಿರಿಕ್ತಃ । ಯದ್ಧಿ ಯದ್ವ್ಯತಿರೇಕೇಣ ನೋಪಲಭ್ಯತೇ ತತ್ ತಾವನ್ಮಾತ್ರಂ ವಸ್ತು ದೃಷ್ಟಮ್ । ಯಥಾ ಸ್ವಪ್ನವಿಜ್ಞಾನಗ್ರಾಹ್ಯಂ ಘಟಪಟಾದಿವಸ್ತು ಸ್ವಪ್ನವಿಜ್ಞಾನವ್ಯತಿರೇಕೇಣ ಅನುಪಲಭ್ಯಾತ್ ಸ್ವಪ್ನಘಟಪ್ರದೀಪಾದೇಃ ಸ್ವಪ್ನವಿಜ್ಞಾನಮಾತ್ರತಾ ಅವಗಮ್ಯತೇ, ತಥಾ ಜಾಗರಿತೇಽಪಿ ಘಟಪ್ರದೀಪಾದೇರ್ಜಾಗ್ರದ್ವಿಜ್ಞಾನವ್ಯತಿರೇಕೇಣ ಅನುಪಲಮ್ಭಾತ್ ಜಾಗ್ರದ್ವಿಜ್ಞಾನಮಾತ್ರತೈವ ಯುಕ್ತಾ ಭವಿತುಮ್ । ತಸ್ಮಾತ್ ನಾಸ್ತಿ ಬಾಹ್ಯೋಽರ್ಥೋ ಘಟಪ್ರದೀಪಾದಿಃ । ವಿಜ್ಞಾನಮಾತ್ರಮೇವ ತು ಸರ್ವಮ್ । ತತ್ರ ಯದುಕ್ತಮ್ ವಿಜ್ಞಾನಸ್ಯ ವ್ಯತಿರಿಕ್ತಾವಭಾಸ್ಯತ್ವಾತ್ ವಿಜ್ಞಾನವ್ಯತಿರಿಕ್ತಮಸ್ತಿ ಜ್ಯೋತಿರನ್ತರಮ್ ಘಟಾದೇರಿವ ಇತಿ। ತನ್ಮಿಥ್ಯಾ । ಸರ್ವಸ್ಯ ವಿಜ್ಞಾನಮಾತ್ರತ್ವೇ ದೃಷ್ಟಾನ್ತಾಭಾವಾತ್ । ನ । ಯಾವತ್ತಾವದಭ್ಯುಪಗಮಾತ್ । ನ ತು ಬಾಹ್ಯೋಽರ್ಥೋ ಭವತಾ ಏಕಾನ್ತೇನೈವ ನಾಭ್ಯುಪಗಮ್ಯತೇ । ನನು ಮಯಾ ನಾಭ್ಯುಪಗಮ್ಯತ ಏವ । ನ । ವಿಜ್ಞಾನಂ ಘಟಃ ಪ್ರದೀಪಃ ಇತಿ ಚ ಶಬ್ದಾರ್ಥಪೃಥಕ್ತ್ವಾತ್ ಯಾವತ್ತಾವದಪಿ ಬಾಹ್ಯಮ್ ಅರ್ಥಾನ್ತರಮ್ ಅವಶ್ಯಮ್ ಅಭ್ಯುಪಗನ್ತವ್ಯಮ್ । ವಿಜ್ಞಾನಾತ್ ಅರ್ಥಾನ್ತರಂ ವಸ್ತು ನ ಚೇತ್ ಅಭ್ಯುಪಗಮ್ಯತೇ ವಿಜ್ಞಾನಂ ಘಟಃ ಪಟಃ ಇತ್ಯೇವಮಾದೀನಾಂ ಶಬ್ದಾನಾಮ್ ಏಕಾರ್ಥತ್ವೇ ಪರ್ಯಾಯಶಬ್ದತ್ವಂ ಪ್ರಾಪ್ನೋತಿ । ತಥಾ ಸಾಧನಾನಾಂ ಫಲಸ್ಯ ಚೈಕತ್ವೇ ಸಾಧ್ಯಸಾಧನಭೇದೋಪದೇಶಶಾಸ್ತ್ರಾನರ್ಥಕ್ಯಪ್ರಸಙ್ಗಃ ।

---

1. ಮೂಲದಲ್ಲಿ "ಅಪೇಕ್ಷ್ಯತೇ" ಎಂದಿದ್ದರೆ "ಚಕ್ಷುಸ್ಸು ಪ್ರದೀಪ (ಎಂಬ ಗ್ರಾಹ್ಯ ಗ್ರಾಹಕ)ವ್ಯತಿರಿಕ್ತವಾಗಿ ಹೊರಗೆ ಬೆಳಕಿನಂತಿರುವ ಯಾವ ಮತ್ತೊಂದು ಕರಣವೂ (ಅಲ್ಲಿ) ಬೇಕಿರುವದಿಲ್ಲ" ಎಂದು ಕನ್ನಡಿಸಿಕೊಳ್ಳಬೇಕಾಗುವದು ; ಗ್ರಾಹ್ಯಗ್ರಾಹಕವ್ಯತಿರಿಕ್ತವಾದ ಕರಣವೇ ಇಲ್ಲಿ ನಿರಾಕರಿಸತಕ್ಕದ್ದೆಂಬುದು ಆಗ ಸ್ಫುಟವಾಗುವದು.

ತತ್ಕರ್ತೃರಜ್ಞಾನಪ್ರಸಙ್ಗೋ ವಾ। ಕಿಂ ಚಾನ್ಯತ್। ವಿಜ್ಞಾನವ್ಯತಿರೇಕೇಣ ಪ್ರತಿವಾದಿವಾದತದ್ದೋಷಾಭ್ಯುಪಗಮಾತ್। ನ ಹಿ ಆತ್ಮವಿಜ್ಞಾನಮಾತ್ರಮೇವ ಪ್ರತಿವಾದೀ ವಾದಃ[1] ತದ್ದೋಷೋ ವಾ ಅಭ್ಯುಪಗಮ್ಯತೇ। ನಿರಾಕರ್ತ ವ್ಯತ್ವಾತ್ ಪ್ರತಿವಾದ್ಯಾದೀನಾಮ್। ನ ಹಿ ಆತ್ಮೀಯಂ ವಿಜ್ಞಾನಂ ನಿರಾಕರ್ತವ್ಯಮಭ್ಯುಪಗಮ್ಯತೇ। ಸ್ವಯಂ ವಾ ಆತ್ಮಾ ಕಸ್ಯಚಿತ್। ತಥಾ ಚ ಸತಿ ಸರ್ವಸಂವ್ಯವಹಾರಲೋಪಪ್ರಸಙ್ಗಃ। ನ ಚ ಪ್ರತಿವಾದ್ಯಾದಯಃ ಸ್ವಾತ್ಮನೈವ ಗೃಹ್ಯನ್ತ ಇತ್ಯಭ್ಯುಪಗಮಃ। ವ್ಯತಿರಿಕ್ತಗ್ರಾಹ್ಯಾ ಹಿ ತೇ ಅಭ್ಯುಪಗಮ್ಯನ್ತೇ। ತಸ್ಮಾತ್ ತದ್ವತ್ ಸರ್ವಮೇವ ವ್ಯತಿರಿಕ್ತಗ್ರಾಹ್ಯಂ ವಸ್ತು ಜಾಗ್ರದ್ವಿಷಯತ್ವಾತ್ ಜಾಗ್ರದ್ವಸ್ತು ಪ್ರತಿವಾದ್ಯಾದಿವತ್ ಇತಿ ಸುಲಭೋ ದೃಷ್ಟಾನ್ತಃ। ಸನ್ತತ್ಯನ್ತರವತ್, ವಿಜ್ಞಾನಾನ್ತರವಚ್ಚೇತಿ। ತಸ್ಮಾತ್ ವಿಜ್ಞಾನವಾದಿನಾಪಿ ನ ಶಕ್ಯಂ ವಿಜ್ಞಾನವ್ಯತಿರಿಕ್ತಂ ಜ್ಯೋತಿರನ್ತರಂ ನಿರಾಕರ್ತುಮ್। ಸ್ವಪ್ನೇ ವಿಜ್ಞಾನವ್ಯತಿರೇಕಾಭಾವಾತ್ ಅಯುಕ್ತಮ್ ಇತಿ ಚೇತ್। ನ। ಅಭಾವಾದಪಿ ಭಾವಸ್ಯ ವಸ್ತ್ವನ್ತರತ್ವೋಪಪತ್ತೇಃ। ಭವತೈವ ತಾವತ್ ಸ್ವಪ್ನೇ ಘಟಾದಿ ವಿಜ್ಞಾನಸ್ಯ ಭಾವಭೂತತ್ವಮ್ ಅಭ್ಯುಪಗತಮ್। ತದಭ್ಯುಪಗಮ್ಯ ತದ್ವ್ಯತಿರೇಕೇಣ ಘಟಾದ್ಯಭಾವ ಉಚ್ಯತೇ। ಸ ವಿಜ್ಞಾನವಿಷಯೋ ಘಟಾದಿಃ ಯದ್ಯಭಾವೋ ಯದಿ ವಾ ಭಾವಃ ಸ್ಯಾತ್, ಉಭಯಥಾಪಿ ಘಟಾದಿವಿಜ್ಞಾನಸ್ಯ ಭಾವಭೂತತ್ವಮ್ ಅಭ್ಯುಪಗತಮೇವ। ನ ತು ತನ್ನಿವರ್ತಯಿತುಂ ಶಕ್ಯತೇ। ತನ್ನಿವರ್ತಕನ್ಯಾಯಾಭಾವಾತ್। ಏತೇನ ಸರ್ವಸ್ಯ ಶೂನ್ಯತಾ ಪ್ರತ್ಯುಕ್ತಾ। ಪ್ರತ್ಯಗಾತ್ಮಗ್ರಾಹ್ಯತಾ ಚಾತ್ಮನೋಽಹಮಿತಿ (ಇತಿ)[2] ಮೀಮಾಂಸಕಪಕ್ಷಃ ಪ್ರತ್ಯುಕ್ತಃ॥

(ಭಾಷ್ಯಾರ್ಥ)

(ಬೌದ್ಧ):- ಘಟಾದಿಯೇ ಆಗಲಿ ಪ್ರದೀಪವಾಗಲಿ ವಿಜ್ಞಾನಕ್ಕಿಂತ ವ್ಯತಿರಿಕ್ತವಾದ ಹೊರಗಿನ ಪದಾರ್ಥವೇ ಇಲ್ಲ. ಏಕೆಂದರೆ ಯಾವದು ಯಾವದಕ್ಕಿಂತ ವ್ಯತಿರಿಕ್ತವಾಗಿ ಕಾಣಬರುವದಿಲ್ಲವೋ. ಆ ವಸ್ತುವು ಅಷ್ಟುಮಾತ್ರವೇ ಎಂದು ಕಂಡಿದೆ; ಉದಾಹರಣೆಗೆ ಸ್ವಪ್ನವಿಜ್ಞಾನಗ್ರಾಹ್ಯವಾದ ಘಟಪಟಾದಿ (ವಸ್ತು)ಗಳು. (ಹೀಗೆ) ಸ್ವಪ್ನದಲ್ಲಿರುವ ಘಟ, ಪ್ರದೀಪ -ಮುಂತಾದದ್ದು ಸ್ವಪ್ನ ವಿಜ್ಞಾನಕ್ಕಿಂತ ಬೇರೆಯಾಗಿ ಕಾಣದೆ ಇರುವದರಿಂದ (ಅವು) ಸ್ವಪ್ನವಿಜ್ಞಾನ

1. ಅಚ್ಚಿನ ಪುಸ್ತಕದಲ್ಲಿ ಪ್ರತಿವಾದಿ ಎಂಬ ಮಾತಿನ ಆದಿಯಲ್ಲಿರುವ 'ವಾದಿ' ಶಬ್ದವನ್ನು ಬಿಟ್ಟುಬಿಟ್ಟದೆ; 'ಪ್ರತಿವಾದಿವಾದಃ' ಎಂಬುದನ್ನು ಪ್ರತಿವಾದೀ ವಾದಃ ಎಂದು ತಿದ್ದಿಕೊಂಡಿದೆ.

2. ಇಲ್ಲೊಂದು ಇತಿಶಬ್ದವು ಬೇಕೆಂದು ತೋರುತ್ತದೆ.

ಮಾತ್ರವೇ ಎಂದು ನಿಶ್ಚಿತವಾಗುತ್ತದೆ. ಹಾಗೆಯೇ ಎಚ್ಚರದಲ್ಲಿಯೂ ಘಟ, ಪ್ರದೀಪ -ಮುಂತಾದದ್ದು ಜಾಗ್ರದ್ವಿಜ್ಞಾನಕ್ಕಿಂತ ವ್ಯತಿರಿಕ್ತವಾಗಿ ಕಾಣದೆ ಇರುವದರಿಂದ (ಅದೂ) ಜಾಗ್ರದ್ವಿಜ್ಞಾನಮಾತ್ರವೇ ಎಂದಾಗುವದು ಯುಕ್ತವಾಗಿರುತ್ತದೆ. ಆದ್ದರಿಂದ ಘಟ, ಪ್ರದೀಪ- ಮುಂತಾದ ಹೊರಗಿನ ವಸ್ತು (ಯಾವದೂ) ಇರುವದಿಲ್ಲ, ಎಲ್ಲವೂ ಬರಿಯ ವಿಜ್ಞಾನವೇ , ಹೀಗಿರುವಲ್ಲಿ ವಿಜ್ಞಾನವು (ತನಗಿಂತ) ವ್ಯತಿರಿಕ್ತವಾದದ್ದರಿಂದ ಬೆಳಗಲ್ಪಡುತ್ತಿರುವದರಿಂದ ಘಟಾದಿ (ವಸ್ತು)ವಿಗೆ ಹೇಗೋ ಹಾಗೆಯೇ ವಿಜ್ಞಾನಕ್ಕಿಂತ ವ್ಯತಿರಿಕ್ತವಾದ ಮತ್ತೊಂದು ಜ್ಯೋತಿಯು ಇರುತ್ತದೆ, ಎಂದು ಹೇಳಿದಿರಲ್ಲ, ಅದು ಸುಳ್ಳು ; ಏಕೆಂದರೆ ಎಲ್ಲವೂ ವಿಜ್ಞಾನಮಾತ್ರವಾಗಿರುವಲ್ಲಿ (ಈ ಅನುಮಾನಕ್ಕೆ) ದೃಷ್ಟಾಂತವೇ ಇರುವದಿಲ್ಲ.[1]

(ಸಿದ್ಧಾಂತಿ) – ಹಾಗಲ್ಲ. ಏಕೆಂದರೆ, ಅಷ್ಟುಮಾತ್ರಕ್ಕಾದರೂ (ನೀನು ಒಪ್ಪಿರುತ್ತೀಯೆ), ಹೊರಗಿನ ಪದಾರ್ಥವನ್ನು ನೀನು ನಿಯಮದಿಂದ ಒಪ್ಪುವದೇ ಇಲ್ಲ ಎಂಬುದೇನೂ ಇಲ್ಲ.

(ವಿಜ್ಞಾನವಾದಿ) :– ನಾನು (ಅದನ್ನು) ಒಪ್ಪುವದೇ ಇಲ್ಲವಲ್ಲ !

(ಸಿದ್ಧಾಂತಿ) :– ಹಾಗಲ್ಲ. ವಿಜ್ಞಾನ, ಘಟ, ಮತ್ತು ಪ್ರದೀಪ- ಎಂಬ ಶಬ್ದಗಳೂ ಅರ್ಥಗಳೂ ಬೇರೆಬೇರೆಯಾಗಿರುವದರಿಂದ ಅಷ್ಟುಮಾತ್ರಕ್ಕಾದರೂ (ನೀನು) ಹೊರಗಿನ ಮತ್ತೊಂದು ಪದಾರ್ಥವನ್ನು ಅವಶ್ಯವಾಗಿ ಒಪ್ಪಬೇಕು[2],

---

1. ಹಿಂದೆ ಕಾರ್ಯಕರಣಸಂಘಾತವು ತಾನೇ ಬೆಳಗುತ್ತದೆ ಎಂಬ ಚಾರ್ವಾಕವಾದವನ್ನು ಖಂಡಿಸುವಾಗ ಸ್ವಪ್ನಸ್ಮೃತಿಗಳಲ್ಲಿ ಹಿಂದೆ ಕಂಡದ್ದನ್ನೇ ಅರಿಯುವದು ವ್ಯತಿರಿಕ್ತವಾದ ಆತ್ಮಚೈತನ್ಯಜ್ಯೋತಿಯು ಇದೆ ಎಂದು ತಿಳಿಸುತ್ತದೆ ಎಂದು ಹೇಳಿತ್ತು. ಇಲ್ಲಿಯೂ ಬಾಹ್ಯಾರ್ಥವಾದಿಬೌದ್ಧಮತವ ಖಂಡನೆಯಲ್ಲಿ ವ್ಯತಿರಿಕ್ತಚೈತನ್ಯವನ್ನು ಅನುಮಾನದಿಂದ ಸಾಧಿಸಿದೆ. ಈಗ ವಿಜ್ಞಾನವಾದಿಬೌದ್ಧನು ಸ್ವಪ್ನದಂತೆ ಜಾಗ್ರತ್ತು- ಎಂಬ ಅನುಭವವನ್ನು ಇಟ್ಟುಕೊಂಡು 'ಎರಡರಲ್ಲಿಯೂ ವಿಜ್ಞಾನಮಾತ್ರವಿದೆ, ಹೊರಗಿನ ವಸ್ತುವೇ ಇಲ್ಲ. ಆದ್ದರಿಂದ ಗ್ರಾಹ್ಯದಿಂದ ಗ್ರಾಹಕಚೈತನ್ಯವನ್ನು ಸಾಧಿಸುವದು ಸರಿಯಲ್ಲ, ಏಕೆಂದರೆ ಈ ಅನುಮಾನಕ್ಕೆ ದೃಷ್ಟಾಂತವಿಲ್ಲ' ಎಂದು ವಾದಿಸುತ್ತಿದಾನೆ. ಆತ್ಮನು ಚೈತನ್ಯಸ್ವರೂಪನಾಗಿ ಸ್ವತಃಸಿದ್ಧನಾಗಿರುತ್ತಾನೆ ; ಪ್ರಮಾಣಪ್ರಮೇಯವ್ಯವಹಾರವೆಲ್ಲವೂ ಆ ನಿತ್ಯಸಿದ್ಧಚೈತನ್ಯದ ಆಧಾರದಿಂದಲೇ ಸಾಗಿದೆ -ಎಂಬ ಅನುಭವವನ್ನು ಇಲ್ಲಿ ಬದಿಗಿಟ್ಟು ವಿಚಾರಮಾಡುತ್ತಿದೆ ಎಂಬುದನ್ನು ಲಕ್ಷಿಸಬೇಕು.

2. ವಿಜ್ಞಾನವಾದಿಯು ಎಲ್ಲವೂ ವಿಜ್ಞಾನವೇ ಎನ್ನುವದಕ್ಕೆ 'ಎಲ್ಲ' ಎಂಬ ಬಾಹ್ಯಪದಾರ್ಥವನ್ನು ಮೊದಲು ಒಪ್ಪಬೇಕು. ಹೊರಗಿನ ಘಟ, ಪ್ರದೀಪ -ಎಲ್ಲವೂ ವಿಜ್ಞಾನವೇ ಎನ್ನುವವನು ಘಟ, ಪ್ರದೀಪ- ಎಂಬ ಮಾತುಗಳಿಗೆ ಯಾವ ಅರ್ಥವೂ ಇಲ್ಲವೆಂದು ಹೇಗೆ ಹೇಳುವನು ? ವ್ಯವಹಾರದೃಷ್ಟಿಯಿಂದಲಾದರೂ ಶಬ್ದ, ಅರ್ಥ- ಇವುಗಳ ಭೇದವನ್ನು ಒಪ್ಪಬೇಕಲ್ಲವೆ ? - ಎಂದು ಅಭಿಪ್ರಾಯ.

ವಿಜ್ಞಾನಕ್ಕಿಂತ ಬೇರೆ ಯಾವ ಪದಾರ್ಥವನ್ನೂ (ನೀನು) ಒಪ್ಪುವದಿಲ್ಲವಾದರೆ ವಿಜ್ಞಾನ, ಘಟ, ಪಟ[1] –ಎಂಬಿವೇ ಮುಂತಾದ ಶಬ್ದಗಳಿಗೆ (ವಿಜ್ಞಾನವೆಂಬ) ಒಂದೇ ಅರ್ಥವಾಗುವದರಿಂದ (ಇವೆಲ್ಲ) ಪರ್ಯಾಯಶಬ್ದಗಳೆಂದಾಗುವದು. ಹೀಗೆಯೇ ಸಾಧನಗಳೂ ಫಲವೂ ಒಂದೇ ಆವರೆ ಸಾಧ್ಯ, ಸಾಧನ– ಎಂಬ ಭೇದವನ್ನು ಉಪದೇಶಿಸುವ ಶಾಸ್ತ್ರವು ವ್ಯರ್ಥವೆಂದಾಗುವದು ; ಅದನ್ನು ಮಾಡಿದ (ಬುದ್ಧನಿಗೆ) ಅಜ್ಞಾನ(ವಿತ್ತೆಂ)ದಾದರೂ ಪ್ರಸಕ್ತವಾಗುವದು.[2] ಮತ್ತೂ ಒಂದು ಮಾತು. ವಿಜ್ಞಾನಕ್ಕಿಂತ ವ್ಯತಿರಿಕ್ತವಾಗಿ ಪ್ರತಿವಾದಿವಾದದೋಷಗಳನ್ನು ಒಪ್ಪಿರುವದರಿಂದಲೂ (ನಿಮ್ಮ ಮತವು ಸರಿಯಲ್ಲ). ಪ್ರತಿವಾದಿಯಾಗಲಿ, (ಅವನ) ವಾದವಾಗಲಿ, ಅದರ ದೋಷವಾಗಲಿ ತನ್ನ ವಿಜ್ಞಾನವೇ ಎಂದು (ನೀನು) ಒಪ್ಪುವದಿಲ್ಲವಷ್ಟೆ, ಏಕೆಂದರೆ ಪ್ರತಿವಾದಿಯೇ ಮುಂತಾದವುಗಳನ್ನು ನಿರಾಕರಿಸಬೇಕಾಗಿರುತ್ತದೆ.[3] ಯಾವನಿಗೇ ಆಗಲಿ ತನ್ನ ವಿಜ್ಞಾನವೇ ಆಗಲಿ, ತಾನೇ ಆಗಿರುವ ಆತ್ಮನಾಗಲಿ ನಿರಾಕರಣೆಮಾಡತಕ್ಕದ್ದೆಂದು (ನೀನು) ಒಪ್ಪಿರುವದಿಲ್ಲ.[4] ಹಾಗೆ (ಒಪ್ಪಿರುವ)ದಾದರೆ ಎಲ್ಲಾ ಸಂವ್ಯವಹಾರವೂ ಲೋಪವಾಗಬೇಕಾದೀತು. ಪ್ರತಿವಾದಿಯೇ ಮುಂತಾದವು ತಮ್ಮಿಂದಲೇ (ತಾವು) ಗ್ರಹಿಸಲ್ಪಡುತ್ತವೆ ಎಂದು (ನೀನು) ಒಪ್ಪಿರುವದೂ ಇಲ್ಲ, (ತಮಗಿಂತ) ವ್ಯತಿರಿಕ್ತವಾದ (ವಿಜ್ಞಾನ)ದಿಂದ ಗ್ರಾಹ್ಯವೆಂದೇ ಒಪ್ಪಿರುತ್ತೀಯಲ್ಲವೆ[5] ? ಆದ್ದರಿಂದ ಅವುಗಳಂತೆಯೇ ಎಲ್ಲಾ ವಸ್ತುವೂ (ತನಗಿಂತ) ವ್ಯತಿರಿಕ್ತವಾದ (ವಸ್ತು)ವಿನಿಂದ ಗ್ರಾಹ್ಯವಾಗಿರುತ್ತದೆ, ಏಕೆಂದರೆ ಅದು ಜಾಗ್ರದ್ವಸ್ತುವಾದ ಪ್ರತಿವಾದಿಯೇ ಮುಂತಾದವುಗಳಂತೆಯೂ, ಮತ್ತೊಂದು (ವಿಜ್ಞಾನ)ಸಂತತಿಯಂತೆಯೂ ಮತ್ತೊಂದು ವಿಜ್ಞಾನದಂತೆಯೂ ಜಾಗ್ರದ್ವಿಷಯವಾದ (ವಸ್ತು)ವಾಗಿದೆ

---

1. ಪಟ ಎಂಬುದರ ಬದಲು 'ಪ್ರದೀಪ' ಎಂಬ ಮಾತೇ ಮೂಲಭಾಷ್ಯದಲ್ಲಿದ್ದಿರಬಹುದೆಂದು ಊಹಿಸುವದಕ್ಕೆ ಎಡೆಯಿದೆ.

2. ತೃಷ್ಣಾತ್ಯಾಗವೇ ಮೊದಲಾದದ್ದು ಸಾಧನ, ನಿರ್ವಾಣವು ಫಲ, ಇವೆರಡೂ ವಿಜ್ಞಾನವಾದ್ದರಿಂದ ಒಂದೇ ಎಂದರೆ ಸಾಧನವನ್ನು ಮಾಡಿ ಫಲವನ್ನು ಹೊಂದಬೇಕೆಂಬ ಉಪದೇಶವು ವ್ಯರ್ಥವಾಗುವದು. ಭೇದವಿಲ್ಲದಿದ್ದರೂ ಭೇದವನ್ನು ಹೇಳಿಕೊಟ್ಟ ಬುದ್ಧನು ಅಜ್ಞನೆಂದೂ ಆಗುವದು.

3. ತನ್ನ ವಿಜ್ಞಾನವು ನಿರಾಕರಿಸತಕ್ಕದ್ದಲ್ಲವಾದ್ದರಿಂದ ಅವು ಅದಕ್ಕಿಂತ ವ್ಯತಿರಿಕ್ತವೆಂದು ಒಪ್ಪಬೇಕು. ಇಲ್ಲಿ 'ವಾದಿಪ್ರತಿವಾದಿ' ಎಂದು ಮೂಲದಲ್ಲಿರುವದು ಸರಿಯಲ್ಲವೆಂಬುದು ಸ್ಪಷ್ಟ, ಏಕೆಂದರೆ ವಾದಿಯನ್ನು ನಿರಾಕರಿಸತಕ್ಕದ್ದಲ್ಲ.

4. ವಿಜ್ಞಾನವು ತನ್ನದು ಎಂದರೂ ಅದನ್ನು ಸ್ವೀಕರಿಸುವದೇ ಹೊರತು ನಿರಾಕರಿಸತಕ್ಕದ್ದಲ್ಲವೆಂಬುದು ಸ್ಪಷ್ಟ.

5. ಪ್ರತಿವಾದಿಯನ್ನು ತನ್ನ ವಿಜ್ಞಾನವು ಗ್ರಹಿಸುತ್ತದೆ ಎಂಬುವೇ ಬೌದ್ಧನಿಗೆ ಸಮ್ಮತ. ಪ್ರತಿವಾದಿಯೇ ಪ್ರತಿವಾದಿಯನ್ನು ಗ್ರಹಿಸುತ್ತಾನೆ ಎಂದೇನೂ ಅವನೆನ್ನುವದಿಲ್ಲ.

-ಎಂದು ದೃಷ್ಟಾಂತವು ಸುಲಭವಾಗಿ (ಸಿಕ್ಕುವ)ದಾಗಿರುತ್ತದೆ.[1] ಆದ್ದರಿಂದ ವಿಜ್ಞಾನವಾದಿಯೂ ವಿಜ್ಞಾನಕ್ಕಿಂತ ವ್ಯತಿರಿಕ್ತವಾದ ಮತ್ತೊಂದು ಜ್ಯೋತಿಯನ್ನು ನಿರಾಕರಿಸುವದಕ್ಕೆ ಆಗುವಹಾಗಿಲ್ಲ.

(ವಿಜ್ಞಾನವಾದಿ).- ಸ್ವಪ್ನದಲ್ಲಿ ವಿಜ್ಞಾನವ್ಯತಿರಿಕ್ತವಾಗಿ (ಏನೂ) ಇಲ್ಲದ್ದರಿಂದ (ಇದು) ಅಯುಕ್ತವು.[2]

(ಸಿದ್ಧಾಂತಿ).- ಹಾಗಲ್ಲ. ಏಕೆಂದರೆ ಅಭಾವಕ್ಕಿಂತಲೂ ಭಾವವು ಬೇರೆಯ ವಸ್ತು ಎಂಬುದು ಹೊಂದುತ್ತದೆ. (ಇದರ ವಿವರ). ಮೊದಲನೆಯದಾಗಿ ಸ್ವಪ್ನದಲ್ಲಿ ಘಟಾದಿಗಳ ವಿಜ್ಞಾನವು ಭಾವರೂಪವಾಗಿದೆ ಎಂದು ಒಪ್ಪಿರುತ್ತೀಯೆ, ಅದನ್ನು ಒಪ್ಪಿ ಅದಕ್ಕಿಂತ ವ್ಯತಿರಿಕ್ತವಾಗಿ ಘಟವೇ ಮುಂತಾದವುಗಳ ಅಭಾವವನ್ನು ಹೇಳುತ್ತಿದೀಯೆ. ಆ ವಿಜ್ಞಾನಕ್ಕೆ ವಿಷಯವಾದ ಘಟಾದಿ (ವಸ್ತು) ಅಭಾವವೇ ಆಗಲಿ, ಭಾವವೇ ಆಗಲಿ,[3] ಎರಡು ಪಕ್ಷದಲ್ಲಿಯೂ ಘಟಾದಿವಿಜ್ಞಾನವು ಭಾವವಾಗಿರುವದೆಂಬುದನ್ನು ಒಪ್ಪಿಯೇ ಇರುತ್ತೀಯೆ, ಅದನ್ನು ಇಲ್ಲವೆನ್ನುವದಕ್ಕೆ ಆಗುವಹಾಗೆಯೇ ಇಲ್ಲ ಏಕೆಂದರೆ ಅದನ್ನು ಇಲ್ಲವೆನ್ನುವದಕ್ಕೆ ನ್ಯಾಯವಿಲ್ಲ.[4] ಇದರಿಂದ ಸರ್ವವೂ ಶೂನ್ಯವೆಂಬ (ವಾದವನ್ನು) ತಿರಸ್ಕರಿಸಿದಂತೆ ಆಯಿತು[5], ಆತ್ಮನು ನಾನು ಎಂದು ಪ್ರತ್ಯಗಾತ್ಮಗ್ರಾಹ್ಯನು

---

1. ಅನುಮಾನಕ್ಕೆ ದೃಷ್ಟಾಂತವು ಬೇಕು. ಪ್ರತಿವಾದಿ, ಅವನ ವಾದ, ಅದರ ದೋಷ, ವಿಜ್ಞಾನಸಂತತಿಗಳು, ವಿಜ್ಞಾನಾಂತರ- ಇವನ್ನೆಲ್ಲ ಬೌದ್ಧನು ಒಪ್ಪಿರುವದರಿಂದಲೂ ಅವು ವ್ಯತಿರಿಕ್ತಗ್ರಾಹ್ಯವಾದ್ದರಿಂದಲೂ ವಿಜ್ಞಾನವು ತನಗಿಂತ ವ್ಯತಿರಿಕ್ತಜ್ಯೋತಿಯಿಂದ ಗ್ರಾಹ್ಯವಾಗಿರಬೇಕೆಂಬ ಅನುಮಾನಕ್ಕೆ ದೃಷ್ಟಾಂತವಾಗುತ್ತವೆ. ಆದ್ದರಿಂದ ದೃಷ್ಟಾಂತವೇ ಸಿಕ್ಕುವದಿಲ್ಲವೆಂಬುದು ಸರಿಯಲ್ಲ.

2 ವಿಜ್ಞಾನವ್ಯತಿರಿಕ್ತವಾಗಿ ಏನೂ ಇಲ್ಲದಿದ್ದರೂ ಸ್ವಪ್ನದಲ್ಲಿ ನಿಜವಾಗಿ ಇದ್ದಂತೆ ತೋರುತ್ತದೆ; ಆದ್ದರಿಂದ ಅಲ್ಲಿ ಸ್ವಪ್ನದ ವಿಜ್ಞಾನವೇ ಹಾಗೆ ತೋರುತ್ತದೆ ಎಂದಾಯಿತು. ಅದರಂತೆ ಎಚ್ಚರದಲ್ಲಿಯೂ ಗ್ರಾಹ್ಯವು ವಿಜ್ಞಾನಮಾತ್ರವೇ ಎನ್ನಬೇಕು- ಎಂದು ಭಾವ.

3. ಸ್ವಪ್ನದಲ್ಲಿ ಕಾಣುವದು ಅಭಾವವೆಂದು ಹೇಳುವದಕ್ಕಿಲ್ಲ, ಏಕೆಂದರೆ ಅದು ಕಾಣುತ್ತಿರುತ್ತದೆ. ಆದರೂ ಅವನ್ನು ಅಭಾವವೆಂದು ಒಪ್ಪಿದರೂ ಅದಕ್ಕಿಂತ ವ್ಯತಿರಿಕ್ತವಾದ ವಿಜ್ಞಾನವು ಇದ್ದೇ ಇರುತ್ತದೆ.

4. ಸ್ವಪ್ನದಲ್ಲಿ ತೋರುವ ಘಟಾದಿಗಳಿಗಿಂತ ವ್ಯತಿರಿಕ್ತವಾದ ಅವನ್ನು ಗ್ರಹಿಸುವ ವಿಜ್ಞಾನವನ್ನು ನೀನೇ ಒಪ್ಪಿದ್ದೀಯೆ, ಘಟಾದಿಯು ಭಾವವಾಗಲಿ ಅಭಾವವಾಗಲಿ ವ್ಯತಿರಿಕ್ತಗ್ರಾಹ್ಯವೆಂದೇ ಆಯಿತು ಎಂದರ್ಥ. ಸೂ. ಭಾ. ೨-೨-೨೮ರಿಂದ ೩೨ರವರೆಗೆ ವಿಜ್ಞಾನವಾದವನ್ನು ವಿಸ್ತಾರವಾಗಿ ಖಂಡಿಸಿರುವದನ್ನು ನೋಡಿ.

5. ಜ್ಞಾನ, ಜ್ಞೇಯಗಳು- ಬೇರೆಬೇರೆಯಾಗಿರುವದರಿಂದ ಸರ್ವವೂ ಶೂನ್ಯವೆಂಬ ವಾದವು ಹೊಂದುವದಿಲ್ಲ.

ಎಂಬ ಮೀಮಾಂಸಕರ ಪಕ್ಷವನ್ನೂ ತಿರಸ್ಕರಿಸಿದಂತೆ ಆಯಿತು.[1]

## ಕ್ಷಣಭಂಗವಾದದ ಖಂಡನೆ

(ಭಾಷ್ಯ)

೧೮೧. ಯತ್ತೂಕ್ತಮ್ ಸಾಲೋಽಕೋಽನ್ಯಶ್ಚಾನ್ಯಶ್ಚ ಘಟೋ ಜಾಯತೇ ಇತಿ। ತದಸತ್। ಕ್ಷಣಾನ್ತರೇಽಪಿ ಸ ಏವಾಯಂ ಘಟಃ ಇತಿ ಪ್ರತ್ಯಭಿಜ್ಞಾನಾತ್। ಸಾದೃಶ್ಯಾತ್ ಪ್ರತ್ಯಭಿಜ್ಞಾನಮ್, ಕೃತ್ತೋತ್ಥಿತಕೇಶನಖಾದಿಷ್ವಿವ ಇತಿ ಚೇತ್। ನ। ತತ್ರಾಪಿ ಕ್ಷಣಿಕತ್ವಸ್ಯ ಅಸಿದ್ಧತ್ವಾತ್। ಜಾತ್ಯೇಕತ್ವಾಚ್ಚ। ಕೃತ್ತೇಷು ಪುನರುತ್ಥಿತೇಷು ಚ ಕೇಶನಖಾದಿಷು ಕೇಶನಖತ್ವಜಾತೇರೇಕತ್ವಾತ್ ಕೇಶನಖತ್ವಪ್ರತ್ಯಯಸ್ತನ್ನಿಮಿತ್ತಃ ಅಭ್ರಾನ್ತ ಏವ। ನ ಹಿ ದೃಶ್ಯಮಾನಲೂನೋತ್ಥಿತಕೇಶನಖಾದಿಷು ವ್ಯಕ್ತಿನಿಮಿತ್ತಃ ಸ ಏವ ಇತಿ ಪ್ರತ್ಯಯೋ ಭವತಿ ಕಸ್ಯಚಿತ್। ದೀರ್ಘಕಾಲವ್ಯವಹಿತದೃಷ್ಟೇಷು ಚ ತುಲ್ಯಪರಿಮಾಣೇಷು ತತ್ಕಾಲೀನವಾಲಾದಿತುಲ್ಯಾ ಇಮೇ ಕೇಶನಖಾದ್ಯಾಃ ಇತಿ ಪ್ರತ್ಯಯೋ ಭವತಿ, ನ ತು ತ ಏವೇತಿ। ಘಟಾದಿಷು ಪುನರ್ಭವತಿ ಸ ಏವ ಇತಿ ಪ್ರತ್ಯಯಃ। ತಸ್ಮಾತ್ ನ ಸಮೋ ದೃಷ್ಟಾನ್ತಃ। ಪ್ರತ್ಯಕ್ಷೇಣ ಹಿ ಪ್ರತ್ಯಭಿಜ್ಞಾಯಮಾನೇ[2] ವಸ್ತುನಿ ತದೇವೇತಿ ನ ಚಾನ್ಯತ್ವಮನುಮಾತುಂ ಯುಕ್ತಮ್। ಪ್ರತ್ಯಕ್ಷವಿರೋಧೇ ಲಿಙ್ಗಸ್ಯ ಆಭಾಸತ್ವೋಪಪತ್ತೇಃ। ಸಾದೃಶ್ಯಪ್ರತ್ಯಯಾನುಪಪತ್ತೇಶ್ಚ। ಜ್ಞಾನಸ್ಯ ಕ್ಷಣಿಕತ್ವಾತ್। ಏಕಸ್ಯ ಹಿ ವಸ್ತುದರ್ಶಿನೋ ವಸ್ತ್ವನ್ತರದರ್ಶನೇ ಸಾದೃಶ್ಯಪ್ರತ್ಯಯಃ ಸ್ಯಾತ್। ನ ತು ವಸ್ತುದರ್ಶೀ ಏಕೋ ವಸ್ತ್ವನ್ತರದರ್ಶನಾಯ ಕ್ಷಣಾನ್ತರಮ್ ಅವತಿಷ್ಠತೇ। ವಿಜ್ಞಾನಸ್ಯ ಕ್ಷಣಿಕತ್ವಾತ್ ಸಕೃದ್ವಸ್ತುದರ್ಶನೇನೈವ ಕ್ಷಯೋಪಪತ್ತೇಃ। "ತೇನೇದಂ ಸದೃಶಮ್" ಇತಿ ಹಿ ಸಾದೃಶ್ಯಪ್ರತ್ಯಯೋ ಭವತಿ। ತೇನ ಇತಿ ದೃಷ್ಟಸ್ಮರಣಮ್, ಇದಮ್ ಇತಿ ವರ್ತಮಾನಪ್ರತ್ಯಯಃ। ತೇನ ಇತಿ ದೃಷ್ಟಂ ಸ್ಮೃತ್ವಾ ಯಾವತ್ ಇದಮ್ ಇತಿ ವರ್ತಮಾನಕ್ಷಣಕಾಲಮನುವತಿಷ್ಠೇತ್, ತತಃ ಕ್ಷಣಿಕವಾದಹಾನಿಃ। ಅಥ ತೇನ ಇತ್ಯೇವ ಉಪಕ್ಷೀಣಃ ಸ್ಮಾರ್ತಃ ಪ್ರತ್ಯಯಃ। ಇದಮ್ ಇತಿ ಚಾನ್ಯ ಏವ ವಾರ್ತಮಾನಿಕಃ ಪ್ರತ್ಯಯಃ (ಕ್ಷೀಯತೇ)[3]। ತತಃ ಸಾದೃಶ್ಯಪ್ರತ್ಯಯಾನುಪಪತ್ತಿಃ "ತೇನೇದಂ ಸದೃಶಮ್" ಇತಿ। ಅನೇಕದರ್ಶಿನ ಏಕಸ್ಯ ಅಭಾವಾತ್। ವ್ಯಪ

---

1. ವಿಜ್ಞಾನವೊಂದೇತನ್ನನ್ನು ತಾನು ಗ್ರಹಿಸುತ್ತದೆ–ಎಂದು ಬೌದ್ಧರು ಹೇಗೆ ಹೇಳುವರೋ ಹಾಗೆಯೇ ಆತ್ಮನೊಬ್ಬನೇ ನಾನು ಎಂದು ತನ್ನಿಂದ ತಾನು ಗ್ರಾಹ್ಯನಾಗಿರುತ್ತಾನೆಂದು ಮೀಮಾಂಸಕರೆನ್ನುವರು. ಆತ್ಮನು ಗ್ರಾಹ್ಯನಲ್ಲವೇ ಅಲ್ಲ ಎನ್ನುವದು ವೇದಾಂತಿಗಳವಾದ, ಈ ಉಪನಿಷದ್ಭಾಷ್ಯದ ಅವತರಣಿಕೆ (ಭಾ.ಭಾ. ೪)ಯನ್ನು ನೋಡಿರಿ.

2. "ಪ್ರತ್ಯಭಿಜ್ಞಾಯತೇ" ಎಂಬ ಆ॥ ಪಾಠವು ಅಚ್ಚಿನ ತಪ್ಪು, ಇಲ್ಲಿರುವ ಅ॥ವಾ॥ ಪಾಠವೇ ಸರಿ. ಅಥವಾ ಪ್ರತ್ಯಭಿಜ್ಞಾತೇ ಎಂದೂ ಇರಬಹುದು.

3. ಇದು ಇಲ್ಲದಿದ್ದರೂ ಆಗುತ್ತದೆ.

ದೇಶಾನುಪಪತ್ತಿಶ್ಚ । ದೃಷ್ಟವ್ಯದರ್ಶನೇನೈವ ಉಪಕ್ಷಯಾತ್ ವಿಜ್ಞಾನಸ್ಯ । "ಇದಂ ಪಶ್ಯಾಮಿ, ಅದೋಽದ್ರಾಕ್ಷಮ್" ಇತಿ ವ್ಯಪದೇಶಾನುಪಪತ್ತಿಃ । ದೃಷ್ಟವತೋ ವ್ಯಪದೇಶಕ್ಷಣಾನವಸ್ಥಾನಾತ್ । ಅಥ ಅವತಿಷ್ಠೇತ ಕ್ಷಣಿಕವಾದಹಾನಿಃ । ಅಥ ಅದೃಷ್ಟವತೋ ವ್ಯಪದೇಶಃ ಸಾದೃಶ್ಯಪ್ರತ್ಯಯಶ್ಚ ತದಾನೀಂ ಜಾತ್ಯನ್ಧಸ್ಯೇವ ರೂಪವಿಶೇಷವ್ಯಪದೇಶಃ, ತತ್ಸಾದೃಶ್ಯಪ್ರತ್ಯಯಶ್ಚ ಸರ್ವಮ್ ಅನ್ಧಪರಂಪರೇತಿ ಪ್ರಸಜ್ಯೇತ, ಸರ್ವಜ್ಞಶಾಸ್ತ್ರಪ್ರಣಯನಾದಿ । ನ ಚೈತದಿಷ್ಯತೇ । ಅಕೃತಾಭ್ಯಾಗಮಕೃತವಿಪ್ರಣಾಶದೋಷೌ ತು ಪ್ರಸಿದ್ಧತರೌ ಕ್ಷಣವಾದೇ । ದೃಷ್ಟವ್ಯಪದೇಶಹೇತುಃ ಪೂರ್ವೋತ್ತರಸಹಿತ ಏಕ ಏವ ಶೃಙ್ಖಲಾವತ್ಪ್ರತ್ಯಯೋ ಜಾಯತೇ ಇತಿ ಚೇತ್ । ತೇನೇದಂ ಸದೃಶಮ್ ಇತಿ ಚ । ನ । ವರ್ತಮಾನಾತೀತಯೋರ್ಭಿನ್ನಕಾಲತ್ವಾತ್ । ತತ್ರ ವರ್ತಮಾನಪ್ರತ್ಯಯ ಏಕಃ ಶೃಙ್ಖಲಾವಯವಸ್ಥಾನೀಯಃ, ಅತೀತಶ್ಚಾಪರಃ । ತೌ ಪ್ರತ್ಯಯೌ ಭಿನ್ನಕಾಲೌ । ತದುಭಯಪ್ರತ್ಯಯವಿಷಯಸ್ಪೃಕ್ ಚೇತ್ ಶೃಙ್ಖಲಾಪ್ರತ್ಯಯಃ । ತತಃ ಕ್ಷಣದ್ವಯವ್ಯಾಪಿತ್ವಾತ್ ಏಕಸ್ಯ ವಿಜ್ಞಾನಸ್ಯ ಪುನಃ ಕ್ಷಣವಾದಹಾನಿಃ । ಮಮತವತಾದಿವಿಶೇಷಾನುಪಪತ್ತೇಶ್ಚ ಸರ್ವಸಂವ್ಯವಹಾರಲೋಪಪ್ರಸಙ್ಗಃ ॥

(ಭಾಷ್ಯಾರ್ಥ)

ಆಲೋಕಸಹಿತವಾದ ಬೇರೆಬೇರೆಯ ಘಟವೇ (ಒಂದೊಂದು ಕ್ಷಣದಲ್ಲಿಯೂ) ಹುಟ್ಟುತ್ತದೆ ಎಂದು (ಬಾಹ್ಯಾರ್ಥವಾದಿಬೌದ್ಧನು) ಹೇಳಿದ್ದನಷ್ಟೆ, ಅದು ಸರಿಯಲ್ಲ. ಏಕೆಂದರೆ ಮತ್ತೊಂದು ಕ್ಷಣದಲ್ಲಿಯೂ 'ಅದೇ ಈ ಘಟವು' ಎಂದು ಪ್ರತ್ಯಭಿಜ್ಞಾನವುಂಟಾಗುತ್ತದೆ.

(ಬೌದ್ಧ) :- ಕತ್ತರಿಸಿ ಬೆಳೆದ ಕೂದಲು, ಉಗುರು- ಮುಂತಾದವುಗಳಂತೆ ಸಾದೃಶ್ಯವಿರುವದರಿಂದ (ಈ) ಪ್ರತ್ಯಭಿಜ್ಞಾನ(ವಾಗುತ್ತದೆ).[1]

(ಸಿದ್ಧಾಂತಿ) :- ಹಾಗಲ್ಲ. ಏಕೆಂದರೆ ಅಲ್ಲಿಯೂ ಕ್ಷಣಿಕತ್ವವು ಅಸಿದ್ಧವಾಗಿರುತ್ತದೆ. ಜಾತ್ಯೇಕತ್ವವಿರುವದರಿಂದಲೇ (ಈ ಪ್ರತ್ಯಯವಾಗುತ್ತದೆ) ಯಾದ್ದರಿಂದಲೂ (ಇದೇ ಸರಿ. ಇದರ ವಿವರ) : ಕೂದಲು, ಉಗುರು- ಮುಂತಾದವು ಕತ್ತರಿಸಿದ್ದು ಮತ್ತೆ ಬೆಳೆದುಕೊಳ್ಳಲು ಕೇಶತ್ವ, ನಖತ್ವ- ಎಂಬ ಜಾತಿಯು ಒಂದಾಗಿರುವದರಿಂದ ಕೂದಲು, ಉಗುರು- ಎಂಬ ಪ್ರತ್ಯಯವು ಆ (ಜಾತ್ಯೇಕತ್ವ)ನಿಮಿತ್ತವಾಗಿ (ಆಗುವದರಿಂದ) ಭ್ರಾಂತ(ಪ್ರತ್ಯಯ)ವಲ್ಲವೇ

---

1. ಕಾರ್ಯದಲ್ಲಿ ಕಾರಣಾನ್ವಯಬುದ್ಧಿಯು ಸಾದೃಶ್ಯದಿಂದಾದದ್ದು ಎಂಬ ಬೌದ್ಧರ ವಾದವನ್ನು ೧-೨-೧ (ಭಾ. ಭಾ. ೧೮)ರಲ್ಲಿ ಖಂಡಿಸಿದೆ. ಇಲ್ಲಿ ಸಾದೃಶ್ಯವಾದವನ್ನೇ ಸಾಮಾನ್ಯವಾಗಿ ಖಂಡಿಸಿದೆ.

ಅಲ್ಲ. ಕಂಡಿದ್ದು ಕತ್ತರಿಸಿಹಾಕಿ, ಮತ್ತೆ ಬೆಳೆದ ಕೂದಲು, ಉಗುರು-ಮುಂತಾದವುಗಳ (ವಿಷಯದಲ್ಲಿ) ವ್ಯಕ್ತಿನಿಮಿತ್ತವಾದ ಅದೇ (ಇದೆಂಬ) ಪ್ರತ್ಯಯವು ಯಾವನಿಗೂ ಆಗುವದಿಲ್ಲವಷ್ಟೆ. ಬಹಳ ಕಾಲ ವ್ಯವಧಾನವಾಗಿ ಕಂಡಿದ್ದು, ಅದೇ ಪರಿಮಾಣದ (ಕೂದಲು ಮುಂತಾದವು)ಗಳಲ್ಲಿಯಾದರೆ ಆ ಕಾಲದಲ್ಲಿದ್ದ ಕೂದಲು ಮುಂತಾದವುಗಳಿಗೆ ಈ ಕೂದಲು ಉಗುರು ಮುಂತಾದವು ಸಮವಾಗಿರುತ್ತವೆ ಎಂಬ ಪ್ರತ್ಯಯವಾಗುತ್ತದೆಯೇ ಹೊರತು ಅವೇ ಎಂಬ (ಪ್ರತ್ಯಯ)ವಾಗುವದಿಲ್ಲ. ಘಟಾದಿಗಳಲ್ಲಿಯೋ ಎಂದರೆ ಅದೇ(ಘಟವೇ ಇದು) ಎಂಬ ಪ್ರತ್ಯಯವಾಗುತ್ತದೆ. ಆದ್ದರಿಂದ (ಕೂದಲು ಮುಂತಾದವುಗಳ) ದೃಷ್ಟಾಂತವು (ಇದಕ್ಕೆ) ಸಮನಲ್ಲ. ಏಕೆಂದರೆ ಪ್ರತ್ಯಕ್ಷದಿಂದ ಅದೇ ಎಂದು ಪ್ರತ್ಯಭಿಜ್ಞಾತವಾದ ವಸ್ತುವಿನಲ್ಲಿ, (ಅದು) ಬೇರೆ ಎಂದು ಅನುಮಾನಿಸುವದು ಯುಕ್ತವಲ್ಲ. ಏಕೆಂದರೆ ಪ್ರತ್ಯಕ್ಷಕ್ಕೆ ವಿರೋಧವಾದರೆ ಲಿಂಗವು ಆಭಾಸವೆನ್ನಬಹುದಾಗಿರುತ್ತದೆ.[1]

ಜ್ಞಾನವು ಕ್ಷಣಿಕವಾಗಿರುವದರಿಂದ ಸಾದೃಶ್ಯಪ್ರತ್ಯಯವು (ಉಂಟಾಗುವದೆಂಬುದು) ಹೊಂದುವದಿಲ್ಲವಾದ್ದರಿಂದಲೂ (ಹೀಗೆಂದು ಒಪ್ಪಬೇಕು). ವಸ್ತುವನ್ನು ಕಂಡವನು ಒಬ್ಬನೇ ಆಗಿದ್ದರಲ್ಲವೆ, ಮತ್ತೊಂದು ವಸ್ತುವನ್ನು ಕಂಡರೆ ಸಾದೃಶ್ಯಪ್ರತ್ಯಯವಾದೀತು ? ಆದರೆ (ನಿಮ್ಮ ಮತದಲ್ಲಿ) ವಸ್ತುವನ್ನು ಕಂಡ ಒಬ್ಬನೇ ಮತ್ತೊಂದು ವಸ್ತುವನ್ನು ಕಾಣುವದಕ್ಕೆ ಇನ್ನೊಂದು ಕ್ಷಣದವರೆಗೆ ನಿಲ್ಲುವದಿಲ್ಲ; ಏಕೆಂದರೆ ವಿಜ್ಞಾನವು ಕ್ಷಣಿಕವಾಗಿರುವದರಿಂದ ಒಂದು ಸಲ ವಸ್ತುದರ್ಶನವಾದ್ದರಿಂದ (ಅದು) ನಾಶವಾಗುವದಾಗಿದೆ. 'ಅದಕ್ಕೆ ಇದು ಸದೃಶವು' ಎಂದಲ್ಲವೆ, ಸಾದೃಶ್ಯಪ್ರತ್ಯಯವಾಗುವದು ? 'ಅದಕ್ಕೆ' ಎಂಬುದು (ಹಿಂದೆ) ಕಂಡದ್ದರ ಸ್ಮರಣವು; 'ಇದು' ಎಂಬುದು ಈಗಿನ ಕಾಲದ ಪ್ರತ್ಯಯವು. 'ಅದಕ್ಕೆ' ಎಂದು (ಹಿಂದೆ) ಕಂಡದ್ದನ್ನು ನೆನಪಿಗೆ ತಂದುಕೊಂಡು 'ಇದು' ಎಂಬ ವರ್ತಮಾನಕ್ಷಣದ ಕಾಲದವರೆಗೂ ಇರುವನಾದರೆ, ಅದರಿಂದ ಕ್ಷಣಿಕವಾದವನ್ನು[2] ಬಿಡಬೇಕಾಗುವದು. ಹೀಗಲ್ಲದೆ 'ಅದಕ್ಕೆ' ಎಂಬಿಷ್ಟರಿಂದಲೇ ಸ್ಮೃತಿಯ ಪ್ರತ್ಯಯವು ಮುಗಿದುಹೋಯಿತು, 'ಇದು' ಎಂಬುದಾದರೆ ಮತ್ತೊಂದೇ ವರ್ತ

---

1. ಅದೇ ಇದು ಎಂಬ ಪ್ರತ್ಯಯವು ಆಗುವದಿಲ್ಲ, ಅದರಂತೆ ಇದು ಎಂದೇ ಪ್ರತ್ಯಕ್ಷಜ್ಞಾನವು ಎಲ್ಲರಿಗೂ ಆಗುತ್ತದೆ. ಆದ್ದರಿಂದ ಪ್ರತ್ಯಕ್ಷವನ್ನವಲಂಬಿಸಿಯೇ ಉಂಟಾಗಬೇಕಾಗಿರುವ ಅನುಮಾನವು ಇದಕ್ಕೆ ವಿರುದ್ಧವಾಗಲಾರದು. ಆದ್ದರಿಂದ ಅನುಮಾನವನ್ನವಲಂಬಿಸಿ ಪ್ರತ್ಯಕ್ಷವನ್ನು ತಳ್ಳಿಹಾಕುವದು ಯುಕ್ತವಾಗಲಾರದು. ೧-೩-೧ (ಭಾ.ಭಾ. ೧೮) ರಲ್ಲಿ ಇದೇ ವಿಷಯವನ್ನು ಚರ್ಚಿಸಿರುವದನ್ನು ನೋಡಿ.

2. ಕ್ಷಣಿಕವಾದ ಎಂಬುದಕ್ಕೆ ಕ್ಷಣವಾದ ಎಂಬ ಪಾಠಾಂತರವೂ ಇದೆ.

ಮಾನಪ್ರತ್ಯಯವು (ಅಷ್ಟಕ್ಕೇ ಮುಗಿಯುತ್ತದೆ)[1] ಎನ್ನುವದಾದರೆ, ಆಗ ಅದಕ್ಕೆ ಇದು ಸದೃಶವು ಎಂಬ ಸಾದೃಶ್ಯಪ್ರತ್ಯಯವು ಹೊಂದುವದಿಲ್ಲ; ಏಕೆಂದರೆ ಅನೇಕ ವಸ್ತುಗಳನ್ನು ಕಾಣುವ ಒಬ್ಬನು (ಈ ಪಕ್ಷದಲ್ಲಿ) ಇರುವದಿಲ್ಲ. ವ್ಯಪದೇಶವೂ ಹೊಂದುವದಿಲ್ಲ. (ಇದರ ವಿವರ). ವಿಜ್ಞಾನವು (ಆಯಾ) ದ್ರಷ್ಟವ್ಯದ ದರ್ಶನ ದಿಂದಲೇ ಮುಗಿದುಹೋಗಿರುವದರಿಂದ 'ಇದನ್ನು ನೋಡುತ್ತಿದ್ದೇನೆ, ಅದನ್ನು ಕಂಡೆನು' ಎಂಬ ಹೇಳಿಕೆಯು ಹೊಂದುವದಿಲ್ಲ, ಏಕೆಂದರೆ ಕಂಡವನು (ಹೀಗೆಂದು) ಹೇಳುವ ಕ್ಷಣದ(ವರೆಗೂ) ಇರುವದಿಲ್ಲ. ಅಥವಾ ಇರುತ್ತಾನೆನ್ನುವ ದಾದರೆ, ಕ್ಷಣಿಕವಾದವನ್ನು ಬಿಡಬೇಕಾಗುವದು. ಹೀಗಲ್ಲದೆ ಕಾಣದಿರುವವ ನಿಗೇ ಈ ಹೇಳಿಕೆಯೂ ಸಾದೃಶ್ಯಪ್ರತ್ಯಯವೂ (ಸೇರಿರುವವೆನ್ನುವ)ದಾದರೆ ಆಗ ಹುಟ್ಟುಕುರುಡನು ಒಂದಾನೊಂದು ರೂಪವನ್ನು ಹೇಳುವದೂ ಆ (ರೂಪದ) ಸಾದೃಶ್ಯಪ್ರತ್ಯಯವು (ಅವನಿಗೆ ಆಗುವದೂ) ಹೇಗೋ ಹಾಗೆ ಸರ್ವಜ್ಞ(ನಾದ ಬುದ್ಧನು) ಶಾಸ್ತ್ರವನ್ನು ಮಾಡಿದನು ಎಂಬುದೇ ಮುಂತಾದದ್ದೆಲ್ಲವೂ ಅಂಧ ಪರಂಪರೆಯೇ[2] ಎಂದಾಗಬೇಕಾದೀತು. ಆದರ ಇದು (ನಿಮಗೆ) ಒಪ್ಪಲ್ಲ. ಅಕೃತಾಭ್ಯಾಗಮ, ಕೃತವಿಪ್ರಣಾಶ -ಎಂಬ ದೋಷಗಳಂತೂ ಕ್ಷಣವಾದದಲ್ಲಿ ಬಹಳ ಪ್ರಸಿದ್ಧವಾಗಿವೆ.[3]

(ಬೌದ್ಧ):- ಹಿಂದೆ ಕಂಡದ್ದನ್ನು ಹೇಳುವದಕ್ಕೆ ಕಾರಣವಾಗಿರುವದು ಹಿಂದುಮುಂದಿನ (ಕಾಲದ) ಸಹಿತವಾದ ಒಂದೇ ಒಂದು ಪ್ರತ್ಯಯವು ಸರಪಳಿ ಯಂತೆ ಉಂಟಾಗುತ್ತದೆ, ಅದಕ್ಕೆ ಇದು ಸದೃಶವು ಎಂಬ (ಪ್ರತ್ಯಯ)ವೂ (ಹಾಗೆಯೇ ಉಂಟಾಗುತ್ತದೆ) ಎಂದರೊ ?

(ಸಿದ್ಧಾಂತಿ):- ಹಾಗಲ್ಲ. ಏಕೆಂದರೆ ಈಗಿನಹಿಂದಿನವು ಬೇರೆಬೇರೆಯ ಕಾಲ(ದ ಪ್ರತ್ಯಯ)ಗಳಾಗಿವೆ. ಇದರ ವಿವರ). ಅವುಗಳಲ್ಲಿ ಸರಪಳಿಯ ಅವಯವ ದಂತಿರುವ ಒಂದು (ಪ್ರತ್ಯಯವು) ವರ್ತಮಾನಪ್ರತ್ಯಯವು; ಇನ್ನೊಂದು ಹಿಂದಿನ (ಕಾಲದ್ದು). ಆ ಎರಡು ಪ್ರತ್ಯಯಗಳೂ ಬೇರೆಬೇರೆಯ ಕಾಲ(ದವು ಗಳು). (ಈ) ಸರಪಳಿಯ ಪ್ರತ್ಯಯವು ಆ ಎರಡು ಪ್ರತ್ಯಯಗಳ ವಿಷಯ ಗಳನ್ನು ಮುಟ್ಟುವದಾದರೆ ಆಗ ಒಂದೇ ವಿಜ್ಞಾನವು ಎರಡು ಕ್ಷಣಗಳನ್ನು ವ್ಯಾಪಿಸಿರುವದರಿಂದ ಮತ್ತೂ ಕ್ಷಣವಾದವನ್ನು ಬಿಟ್ಟಂತಾಗುವದು. ನನ್ನದು,

---

1. ಒಂದೊಂದು ಕ್ಷಣಕ್ಕೂ ಒಂದೊಂದು ಬೇರೆಯ ವಿಜ್ಞಾನವೇ.

2. ಎಲ್ಲಾ ವಿಜ್ಞಾನಗಳೂ ಹೊಸದಾಗಿ ಹುಟ್ಟಿದವುಗಳಾದ್ದರಿಂದ ಹಿಂದಿನದನ್ನು ಯಾವ ಜ್ಞಾನವೂ ಕಾಣುವಹಾಗಿಲ್ಲ ಎನ್ನುವದಾದರೆ ಬುದ್ಧನು ಸರ್ವಜ್ಞನು ಎಂಬುದೂ ಅಜ್ಞರಿಗಾಗಿ ಶಾಸ್ತ್ರವನ್ನು ಮಾಡಿರುತ್ತಾನೆನ್ನುವದೇ ಮುಂತಾದದ್ದೂ ಕುರುಡರ ಸಾಲಿನಲ್ಲಿ ಒಬ್ಬರಿಂದೊಬ್ಬರು ತಿಳಿದುಕೊಳ್ಳಬಹುದೆಂದಂತೆ ಆಗುವದು.

3. ಏಕೆಂದರೆ ಯಾರೊಬ್ಬನಿಗೂ ಹಿಂದಿನ ಕರ್ಮದ ಫಲವು ಈಗ ಬರಬಾರದು, ಈಗ ಮಾಡಿದ್ದಕ್ಕೂ ಮುಂದೆ ಫಲವಿರಬಾರದು.

ನಿನ್ನದು -ಮುಂತಾದ ವಿಶೇಷಗಳು (ಯಾವವೂ) ಹೊಂದುವದಿಲ್ಲವಾದ್ದರಿಂದ[1] ಎಲ್ಲಾ ಸಂವ್ಯವಹಾರಗಳೂ ಲೋಪವಾಗಬೇಕಾದೀತು.

## ಬೌದ್ಧಮತದಲ್ಲಿ ಮೋಕ್ಷವೂ ಹೊಂದುವದಿಲ್ಲ

(ಭಾಷ್ಯ)

೧೮೨. ಸರ್ವಸ್ಯ ಚ ಸ್ವಸಂವೇದ್ಯವಿಜ್ಞಾನಮಾತ್ರತ್ವೇ ವಿಜ್ಞಾನಸ್ಯ ಚ ಸ್ವಚ್ಛಾವಬೋಧಾವಭಾಸಮಾತ್ರಸ್ವಾಭಾವ್ಯಾಭ್ಯುಪಗಮಾತ್ ತದ್ದರ್ಶಿನಶ್ಚಾನ್ಯಸ್ಯ ಅಭಾವೇ ಅನಿತ್ಯದುಃಖಶೂನ್ಯಾನಾತ್ಮತ್ವಾದ್ಯನೇಕಕಲ್ಪನಾನುಪಪತ್ತಿಃ। ನ ಚ ದಾಡಿಮಾದೇರಿವ ವಿರುದ್ಧಾನೇಕಾಂಶವತ್ತ್ವಂ ವಿಜ್ಞಾನಸ್ಯ। ಸ್ವಚ್ಛಾವಭಾಸಸ್ವಾಭಾವ್ಯಾತ್ ವಿಜ್ಞಾನಸ್ಯ। ಅನಿತ್ಯದುಃಖಾದೀನಾಂ ವಿಜ್ಞಾನಾಂಶತ್ವೇ ಚ ಸತಿ ಅನುಭೂಯಮಾನತ್ವಾದ್ವ್ಯತಿರಿಕ್ತವಿಷಯತ್ವಪ್ರಸಙ್ಗಃ। ಅಥ ಅನಿತ್ಯದುಃಖಾದ್ಯಾತ್ಮೈಕತ್ವಮೇವ ವಿಜ್ಞಾನಸ್ಯ ತದಾ ತದ್ವಿಯೋಗಾತ್ ವಿಶುದ್ಧಿಕಲ್ಪನಾನುಪಪತ್ತಿಃ। ಸಂಯೋಗಿಮಲವಿಯೋಗಾತ್ ಹಿ ವಿಶುದ್ಧಿರ್ಭವತಿ। ಯಥಾ ಆದರ್ಶಪ್ರಭೃತೀನಾಮ್। ನ ತು ಸ್ವಾಭಾವಿಕೇನ ಧರ್ಮೇಣ ಕಸ್ಯಚಿತ್ ವಿಯೋಗೋ ದೃಷ್ಟಃ। ನ ಹಿ ಅಗ್ನೇಃ ಸ್ವಾಭಾವಿಕೇನ ಪ್ರಕಾಶೇನ ಔಷ್ಣ್ಯೇನ ವಾ ವಿಯೋಗೋ ದೃಷ್ಟಃ। ಯದಪಿ ಪುಷ್ಪಗುಣಾನಾಂ ರಕ್ತತ್ವಾದೀನಾಂ ದ್ರವ್ಯಾನ್ತರಯೋಗೇನ ವಿಯೋಜನಂ ದೃಶ್ಯತೇ ತತ್ರಾಪಿ ಸಂಯೋಗಪೂರ್ವಕತ್ವಮ್ ಅನುಮೀಯತೇ। ಬೀಜಭಾವನಯಾ ಪುಷ್ಪಫಲಾದೀನಾಂ ಗುಣಾನ್ತರೋತ್ಪತ್ತಿದರ್ಶನಾತ್। ಅತೋ ವಿಜ್ಞಾನಸ್ಯ ವಿಶುದ್ಧಕಲ್ಪನಾನುಪಪತ್ತಿಃ। ವಿಷಯವಿಷಯ್ಯಾಭಾಸತ್ವಂ ಚ ಯನ್ಮಲಂ ಪರಿಕಲ್ಪ್ಯತೇ ವಿಜ್ಞಾನಸ್ಯ ತದಪಿ ಅನ್ಯಸಂಸರ್ಗಾಭಾವಾತ್ ಅನುಪಪನ್ನಮ್। ನ ಹಿ ಅವಿದ್ಯಮಾನೇನ ವಿದ್ಯಮಾನಸ್ಯ ಸಂಸರ್ಗಃ ಸ್ಯಾತ್। ಅಸತಿ ಚ ಅನ್ಯಸಂಸರ್ಗೇ ಯೋ ಧರ್ಮೋ ಯಸ್ಯ ದೃಷ್ಟಃ ಸ ತತ್ಸ್ವಭಾವತ್ವಾತ್ ನ ತೇನ ವಿಯೋಗಮರ್ಹತಿ ಯಥಾ ಅಗ್ನೇರೌಷ್ಣ್ಯಮ್, ಸವಿತುರ್ವಾ ಪ್ರಭಾ। ತಸ್ಮಾತ್ ಅನಿತ್ಯಸಂಸರ್ಗೇಣ ಮಲಿನತ್ವಂ ತದ್ವಿಶುದ್ಧಿಶ್ಚ ವಿಜ್ಞಾನಸ್ಯ ಇತೀಯಂ ಕಲ್ಪನಾ ಅನ್ಧಪರಂಪರೈವ ಪ್ರಮಾಣಶೂನ್ಯಾ ಇತ್ಯವಗಮ್ಯತೇ। ಯದಪಿ ತಸ್ಯ ವಿಜ್ಞಾನಸ್ಯ ನಿರ್ವಾಣಂ ಪುರುಷಾರ್ಥಂ ಕಲ್ಪಯನ್ತಿ। ತತ್ರಾಪಿ ಫಲಾಶ್ರಯಾನುಪಪತ್ತಿಃ।

---

1. ಎಲ್ಲವೂ ಕ್ಷಣಿಕವಾಗಿರುವದರಿಂದ ನನ್ನದು, ನಿನ್ನದು -ಎಂದು ಮುಂತಾಗಿರುವ ಸಂಬಂಧವೇ ಇರುವಹಾಗಿಲ್ಲ.

2 ಇದು ಅನಿತ್ಯತ್ವ ಎಂದಿರಬೇಕು; ಅಥವಾ ಆ ಅರ್ಥವಲ್ಲಿ ಪ್ರಯುಕ್ತವಾಗಿದೆ ಎಂದು ಕಲ್ಪಿಸಬೇಕು.

ಕಣ್ಟಕವಿದ್ಧಸ್ಯ ಹಿ ಕಣ್ಟಕವೇಧಜನಿತದುಃಖನಿವೃತ್ತಿಃ ಫಲಮ್ । ನ ತು ಕಣ್ಟಕವಿದ್ಧಮರಣೇ ತದ್ದುಃಖನಿವೃತ್ತಿಫಲಸ್ಯ ಆಶ್ರಯಃ ಉಪಪದ್ಯತೇ । ತದ್ವತ್ ಸರ್ವನಿರ್ವಾಣೇ ಅಸತಿ ಚ ಫಲಾಶ್ರಯೇ ಪುರುಷಾರ್ಥಕಲ್ಪನಾ ವ್ಯರ್ಥೈವ । ಯಸ್ಯ ಹಿ ಪುರುಷಶಬ್ದವಾಚ್ಯಸ್ಯ ಸರ್ವಸ್ಯ[1] ಆತ್ಮನೋ ವಿಜ್ಞಾನಸ್ಯ ಚಾರ್ಥಃ ಪರಿಕಲ್ಪ್ಯತೇ ತಸ್ಯ ಪುನಃ ಪುರುಷಸ್ಯ ನಿರ್ವಾಣೇ ಕಸ್ಯಾರ್ಥಃ ಪುರುಷಾರ್ಥಃ ಇತಿ ಸ್ಯಾತ್ ? ಯಸ್ಯ ಪುನರಸ್ತಿ ಅನೇಕಾರ್ಥದರ್ಶೀ ವಿಜ್ಞಾನವ್ಯತಿರಿಕ್ತ ಆತ್ಮಾ ತಸ್ಯ ದೃಷ್ಟಸ್ಮರಣದುಃಖಸಂಯೋಗವಿಯೋಗಾದಿ ಸರ್ವಮೇವೋಪಪನ್ನಮ್ ಅನ್ಯಸಂಯೋಗನಿಮಿತ್ತಂ ಕಾಲುಷ್ಯಮ್ । ತದ್ವಿಯೋಗನಿಮಿತ್ತಾ ಚ ವಿಶುದ್ಧಿಃ ಇತಿ । ಶೂನ್ಯವಾದಿಪಕ್ಷಸ್ತು ಸರ್ವಪ್ರಮಾಣಪ್ರತಿಷಿದ್ಧ ಇತಿ ತನ್ನಿರಾಕರಣಾಯ ನಾದರಃ ಕ್ರಿಯತೇ ॥

(ಭಾಷ್ಯಾರ್ಥ)

ಎಲ್ಲವೂ ತನ್ನಿಂದ ತಾನೇ ಅರಿಯಲ್ಪಡುವ ವಿಜ್ಞಾನಮಾತ್ರವು ಎನ್ನುವ ಪಕ್ಷದಲ್ಲಿ ಸ್ವಚ್ಛವಾದ ಅರಿವಿನ ಬೆಳಕೇ ಅದರ ಸ್ವಭಾವವು ಎಂದು ಒಪ್ಪಿರುವದರಿಂದಲೂ ಅದನ್ನು ಕಾಣುವವನು ಮತ್ತೊಬ್ಬನು ಇಲ್ಲವಾದ್ದರಿಂದಲೂ (ಆದರಲ್ಲಿ) ಅನಿತ್ಯತ್ವ, ದುಃಖ, ಶೂನ್ಯತ್ವ, ಅನಾತ್ಮತ್ವ- ಮುಂತಾದ ಅನೇಕ ಕಲ್ಪನೆಗಳನ್ನು ಮಾಡಿರುವದು ಹೊಂದುವದಿಲ್ಲ.[2] ವಿಜ್ಞಾನದಲ್ಲಿ ದಾಳಿಂಬೆಯ ಹಣ್ಣಿನಂತೆ (ತನ್ನ ಸ್ವಭಾವಕ್ಕೆ) ವಿರುದ್ಧವಾದ ಅನೇಕಾಂಶಗಳು ಇರುವ ಹಾಗಿಲ್ಲ; ಏಕೆಂದರ ವಿಜ್ಞಾನವು ಸ್ವಚ್ಛವಾದ ಬೆಳಕಿನ ಸ್ವಭಾವದ್ದಾಗಿರುತ್ತದೆ.[3] ಅನಿತ್ಯತ್ವ, ದುಃಖ -ಮುಂತಾದವುಗಳು ವಿಜ್ಞಾನದ ಅಂಶವೆಂದರೆ (ಅವು) ಅನುಭವಿಸಲ್ಪಡುತ್ತಿರುವದರಿಂದ (ಅದಕ್ಕಿಂತ) ವ್ಯತಿರಿಕ್ತವಾದ ವಿಷಯ (ವಾಗಿರುವ)ವೆಂದಾಗುವದು.[4] ಹೀಗಲ್ಲದೆ ಅನಿತ್ಯತ್ವ, ದುಃಖ ಮುಂತಾದವುಗಳ ಸ್ವರೂಪದಲ್ಲಿರುವದೇ ವಿಜ್ಞಾನವು ಎಂದರೆ, ಆಗ ಅವು ಹೋಗುವದರಿಂದ (ಅದಕ್ಕೆ ವಿಶುದ್ಧಿಯಾಗುವದೆಂದು) ಕಲ್ಪಿಸಿರುವದು ಹೊಂದುವದಿಲ್ಲ. ಸೇರಿಕೊಂಡಿರುವ ಮಲವು ಹೋಗುವದರಿಂದಲ್ಲವೆ, ವಿಶುದ್ಧಿಯಾಗುವದು ?

---

1. 'ಸತ್ತ್ವಸ್ಯ' ಎಂಬುದಕ್ಕಿಂತ ಈ ಪಾಠವು ಮೇಲು.

2. ವಿಜ್ಞಾನಮಾತ್ರಸ್ವಭಾವವುಳ್ಳದ್ದೆಂದೂ ಅನಿತ್ಯತ್ವಾದ್ಯನೇಕರೂಪವಾಗಿಯೂ ಇರುವದೆಂದೂ ಕಲ್ಪಿಸುವದು ಪರಸ್ಪರವಿರುದ್ಧವಾಗಿರುತ್ತದೆ.

3. ಅನಿತ್ಯತ್ವಾದಿಗಳು ವಿಜ್ಞಾನದಂಶಗಳು, ಅವುಗಳ ಒಟ್ಟೇ ವಿಜ್ಞಾನವು -ಎನ್ನುವದಾದರೆ ಆಗಲೂ ವ್ಯಾಘಾತದೋಷವೇ.

4. ವಿಜ್ಞಾನಕ್ಕಿಂತ ವ್ಯತಿರಿಕ್ತವಾಗಿ ವಿಷಯವೇ ಇಲ್ಲವೆಂದೂ ವಿಜ್ಞಾನವೇ ವಿಷಯಾಕಾರವಾಗಿಯೂ ಇರುವದೆಂದೂ ಹೇಳುವ ನಿಮ್ಮ ಮತಕ್ಕೆ ಇದು ವಿರುದ್ಧ.

ಉದಾಹರಣೆಗೆ ಆದರ್ಶವೇ ಮುಂತಾದವುಗಳಿಗೆ (ಹೀಗೆ ವಿಶುದ್ಧಿಯಾಗುತ್ತದೆ).[1] (ಇಷ್ಟೇ) ಹೊರತು ಸ್ವಾಭಾವಿಕವಾಗಿರುವ ಧರ್ಮವನ್ನು ಯಾವ (ಪದಾರ್ಥವೂ) ಬಿಟ್ಟಗಲುವದು ಕಂಡಿರುವದಿಲ್ಲ. ಬೆಂಕಿಯು (ತನ್ನ) ಸ್ವಭಾವವಾಗಿರುವ ಬೆಳಕನ್ನು ಅಥವಾ ಬಿಸಿಯನ್ನು ಬಿಟ್ಟಗಲುವದು ಕಂಡುಬಂದಿಲ್ಲವಷ್ಟೆ? ಹೂವಿನ ಗುಣವಾಗಿರುವ ಕೆಂಪು ಮುಂತಾದವುಗಳಿಗೆ ಮತ್ತೊಂದು ದ್ರವ್ಯವನ್ನು ಸೇರಿಸುವದರಿಂದ (ಅವನ್ನು) ಬಿಟ್ಟಗಲಿಸುವದು ಕಂಡಿರುತ್ತದೆಯಷ್ಟೆ, ಅಲ್ಲಿಯೂ (ಆ ಗುಣಗಳು) ಬಂದು ಸೇರಿಕೊಂಡಿದ್ದವೇ ಎಂದು ಅನುಮಾನಿಸಬೇಕಾಗುತ್ತದೆ, ಏಕೆಂದರೆ ಬೀಜಗಳಿಗೆ ಭಾವನೆಮಾಡುವದರಿಂದ ಹೂಹಣ್ಣು ಮುಂತಾದವುಗಳಲ್ಲಿ ಮತ್ತೊಂದು ಗುಣವು ಉಂಟಾಗುವದು ಕಂಡುಬರುತ್ತದೆ. ಆದ್ದರಿಂದ ವಿಜ್ಞಾನಕ್ಕೆ ವಿಶುದ್ಧಿಯನ್ನು[2] ಕಲ್ಪಿಸುವದು ಹೊಂದುವದಿಲ್ಲ. ವಿಷಯವಿಷಯಿಗಳ (ರೂಪದಿಂದ) ತೋರುವದೆಂಬ ಮಲವನ್ನು ವಿಜ್ಞಾನಕ್ಕೆ ಕಲ್ಪಿಸುತ್ತಾರಷ್ಟೆ, (ವಿಜ್ಞಾನಕ್ಕೆ) ಮತ್ತೊಂದರ ಸಂಬಂಧವಿಲ್ಲದ್ದರಿಂದ ಅದೂ ಹೊಂದುವದಿಲ್ಲ. ಇಲ್ಲದ್ದರ ಸಂಬಂಧವು ಇರುವದಕ್ಕೆ ಆಗಲಾರದಷ್ಟೆ.[3] ಮತ್ತೊಂದರ ಸಂಬಂಧವು ಇಲ್ಲವೆಂದಾಗಿರುವಲ್ಲಿ, ಯಾವದಕ್ಕೆ ಯಾವ ಧರ್ಮವು ಕಂಡುಬಂದಿದೆಯೋ, ಅದು ಅದರ ಸ್ವಭಾವವೇ ಆಗಿರುವದರಿಂದ ಅದನ್ನು ಬಿಟ್ಟು ಅಗಲಲಾರದು; ಹೇಗೆ ಬೆಂಕಿಯ ಬಿಸಿಯು, ಅಥವಾ ಸೂರ್ಯನ ಪ್ರಕಾಶವು (ಅದನ್ನು ಬಿಟ್ಟಗಲಲಾರದೋ ಹಾಗೆಯೇ ಇದು). ಆದ್ದರಿಂದ ಅನಿತ್ಯವಾದ(ದ್ದರ) ಸಂಬಂಧದಿಂದ ವಿಜ್ಞಾನಕ್ಕೆ ಮಾಲಿನ್ಯವೂ (ಅದರ ವಿಯೋಗದಿಂದ) ಅದಕ್ಕೆ ವಿಶುದ್ಧಿಯೂ ಎಂಬೀ ಕಲ್ಪನೆಯು ಅಂಧಪರಂಪರೆಯೇ ಆಗಿರುತ್ತದೆ.[4]

---

1. ಕಂಚಿನ ಕನ್ನಡಿಯನ್ನು ಉಜ್ಜುವದರಿಂದ ಅದಕ್ಕೆ ಹಿಡಿದಿದ್ದ ಕಿಲುಬು ಹೋಗುವದು ಪ್ರಸಿದ್ಧವಾಗಿದೆ, ಹಾಗೆ ಯಾವದಾದರೂ ಕಾರಣದಿಂದ ಅನಿತ್ಯತ್ವಾದಿಮಲವು ವಿಜ್ಞಾನದಿಂದ ಹೋಗಿ ಮುಕ್ತಿಯಾಗುವದೆಂದು ಕಲ್ಪಿಸುವದಕ್ಕೆ ಬರುವದಿಲ್ಲ. ಏಕೆಂದರೆ ತಾನೇ ಅನಿತ್ಯತ್ವಾದಿರೂಪವಾಗಿರುವದರಿಂದ ಅದು ಹೋಗುವದಕ್ಕೆ ತಾನೇ ನಾಶವಾಗಬೇಕಾಗುವದ.

2. ಅನಿತ್ಯತ್ವ, ದುಃಖ— ಮುಂತಾದವು ಹೋಗಿ ಅದು ಶುದ್ಧವಾಗುವದೆಂಬುದನ್ನು.

3. ವಿಜ್ಞಾನವೊಂದೇ ಇರುವಲ್ಲಿ ಅದಕ್ಕೆ ಮತ್ತೊಂದರ ಸಂಬಂಧವು ಹೇಗೆ?

4. ವಿಜ್ಞಾನವೊಂದೇ ಎಂದೂ ಅದರಲ್ಲಿ ವಿಷಯಿವಿಷಯಾಕಾರದ ಮಲವು ಹೋದರೆ ಸ್ವಚ್ಛರೂಪದಿಂದ ನಿಲ್ಲುವದೆಂದೂ ಕಲ್ಪಿಸುವದು ಸರಿಯಲ್ಲ. ಏಕೆಂದರೆ ವಿಜ್ಞಾನಕ್ಕಿಂತ ವ್ಯತಿರಿಕ್ತವಾದದ್ದು ಇದೆಯೆಂಬುದೇ ಅಸಿದ್ಧ, ಅದರ ಸಂಯೋಗವಾಗಲಿ ವಿಯೋಗವಾಗಲಿ ಆಗುವದೂ, ಆ ಸಂಯೋಗವಿಯೋಗಗಳಿಂದ ಬಂಧಮೋಕ್ಷಗಳಾಗುವವೆಂಬುದೂ ಇನ್ನೂ ಅಸಿದ್ಧ. ಹೀಗೆ ಒಂದು ಅಸಿದ್ಧದಿಂದ ಮತ್ತೊಂದು ಅಸಿದ್ಧವಾದದ್ದನ್ನು ಸಾಧಿಸುವ ಈ ಮತವು ಅಂಧಪರಂಪರೆಯನ್ನು— ಕುರುಡರು ತೋರಿಸಿದ ಹಾದಿಯಲ್ಲಿ ಬೇರೆಯ ಕುರುಡರು ನಡೆಯುವರೆಂಬುದನ್ನು— ಹೋಲುತ್ತದೆ ಎಂದರ್ಥ.

ಇನ್ನು ಆ ವಿಜ್ಞಾನಕ್ಕೆ ನಿರ್ವಾಣವೇ[1] ಪುರುಷಾರ್ಥವೆಂದು ಕಲ್ಪಿಸುತ್ತಾರಲ್ಲ, ಅಲ್ಲಿಯೂ ಫಲಕ್ಕೆ ಆಶ್ರಯವೇ ಹೊಂದುವದಿಲ್ಲ. (ಇದರ ವಿವರ) : ಮುಳ್ಳುಚುಚ್ಚಿಕೊಂಡವನಿಗಲ್ಲವೆ, ಮುಳ್ಳುಚುಚ್ಚಿದ್ದರಿಂದುಂಟಾದ ದುಃಖನಿವೃತ್ತಿಯೆಂಬ ಫಲವಾಗುವದು ? ಆದರೆ ಮುಳ್ಳುಚುಚ್ಚಿದವನು ಸತ್ತರೆ, ಆ ದುಃಖನಿವೃತ್ತಿ ಎಂಬ ಫಲಕ್ಕೆ ಆಶ್ರಯವು ಇರುವಹಾಗಿರುವದಿಲ್ಲ. ಇದರಂತೆ ಎಲ್ಲವೂ ನಿರ್ವಾಣವಾದರೆ ಫಲಕ್ಕೆ ಆಶ್ರಯವೂ ಇಲ್ಲದಿರುವಲ್ಲಿ ಪುರುಷಾರ್ಥವೆಂದು ಕಲ್ಪಿಸುವದು ವ್ಯರ್ಥವೇ. ಪ್ರತಿಯೊಬ್ಬನಿಗೂ ಆತ್ಮನಾಗಿರುವ ಪುರುಷಶಬ್ದವಾಚ್ಯವಾದ ಯಾವ ಜ್ಞಾನಕ್ಕೆ ಅರ್ಥವಾದ್ದರಿಂದ (ಪುರುಷಾರ್ಥವೆಂದು) ಕಲ್ಪಿಸಿರುತ್ತಾರೋ, ಆ ಪುರುಷನೇ ನಿರ್ವಾಣವಾಗಿರುವಲ್ಲಿ ಯಾವನಿಗಾಗುವ ಅರ್ಥವು ಪುರುಷಾರ್ಥವೆಂದಾದೀತು ?[2] ಆದರೆ ಯಾವನ (ಮತದಲ್ಲಿ) ವಿಜ್ಞಾನಕ್ಕಿಂತ ಬೇರೆಯಾಗಿರುವ ಅನೇಕ ಅರ್ಥಗಳನ್ನು ಕಾಣುವ ಆತ್ಮನು ಇರುತ್ತಾನೋ, ಅವನ (ಮತದಲ್ಲಿ) ಕಂಡದ್ದನ್ನು ನೆನಪಿಸಿಕೊಳ್ಳುವದು, (ಅದರ) ಸಂಯೋಗ, ವಿಯೋಗ– ಇದೇ ಮುಂತಾದದ್ದು ಮತ್ತೊಂದರ ಸಂಯೋಗದ ನಿಮಿತ್ತದಿಂದಾದ ಕಾಲುಷ್ಯವೂ ಅದರ ವಿಯೋಗನಿಮಿತ್ತದಿಂದ ವಿಶುದ್ಧಿಯೂ– (ಇದೇ ಮುಂತಾದದ್ದು) ಎಲ್ಲವೂ ಹೊಂದುಗಡೆಯಾಗುತ್ತದೆ[3].

ಶೂನ್ಯವಾದಿಗಳ ಪಕ್ಷವಾದರೋ ಎಲ್ಲಾ ಪ್ರಮಾಣಗಳಿಗೂ ವಿರುದ್ಧವಾಗಿರುವದರಿಂದ ಅದನ್ನು ನಿರಾಕರಿಸುವದಕ್ಕೆ ಆದರವನ್ನು ಮಾಡುವದಿಲ್ಲ.[4]

---

1. ಅದೂ ನಾಶವಾಗುವದು.

2. ಪುರುಷನಿಗಾಗುವ ಪ್ರಯೋಜನವೇ ಪುರುಷಾರ್ಥವು ; ಪುರುಷನಾದ ವಿಜ್ಞಾನವೇ ಇಲ್ಲದಿರುವಾಗ ಪುರುಷಾರ್ಥವೆಂದರೇನು ?– ಎಂದು ಆಕ್ಷೇಪ. ಅದ್ವೈತಿಗಳ ಪಕ್ಷದಲ್ಲಿಯೂ ನಾನು ಎಂಬುದೇ ಇಲ್ಲದಿರುವಾಗ ನನಗೆ ಮೋಕ್ಷವು ಎಂಬುದು ಹೊಂದುವದಿಲ್ಲವಲ್ಲ !– ಎಂದು ಕೆಲವರು ಹೀಗೆಯೇ ಆಕ್ಷೇಪಿಸಿರುತ್ತಾರೆ ; ಆದರೆ ನಿತ್ಯಮುಕ್ತನಾದ ಆತ್ಮನು ನಾನು ಎಂಬ ಜ್ಞಾನದಿಂದ ಮೋಕ್ಷವೆಂಬುದು ಅದ್ವೈತಿಗಳ ಸಿದ್ಧಾಂತ.

3. ಸ್ಮೃತಿ, ಪ್ರತ್ಯಭಿಜ್ಞೆ– ಮುಂತಾದವುಗಳು ಅಂತಃಕರಣವೆಂಬ ಉಪಾಧಿಯುಳ್ಳ ಆತ್ಮನಿಗೆ ಆಗುತ್ತವೆ ; ಅವಿದ್ಯೆಯಿಂದ ಕಾಲುಷ್ಯವೂ ಅದರ ವಿಯೋಗದಿಂದ ವಿಶುದ್ಧಿಯೂ ಆಗುತ್ತವೆ– ಎಂಬುದು ವೇದಾಂತಿಗಳ ಮತ. ಅಂತಃಕರಣವ್ಯತಿರಿಕ್ತನಾದ ಆತ್ಮನೊಬ್ಬನು ಇದಾನೆ– ಎಂಬ ಆಸ್ತಿಕರಿಗೆಲ್ಲ ಹೊಂದಲಿ ಎಂದು ಇಲ್ಲಿ ವ್ಯಾವಹಾರಿಕವಾದ ಬಂಧಮೋಕ್ಷವ್ಯವಹಾರಗಳನ್ನು ಹೇಳಿದೆ.

4. ಪ್ರತ್ಯಕ್ಷಾದಿಗಳೆಲ್ಲ ಪ್ರಮಾಣವಾಗಿರುವದರಿಂದ ಅವು ತಿಳಿಸುವದನ್ನು ಅಲ್ಲಗಳೆಯುವದಕ್ಕೆ ಯಾವ ಪ್ರಮಾಣದ ಆಧಾರವೂ ಇಲ್ಲ ; ಪರಮಾರ್ಥವಾದ ಅಕಲ್ಪಿತವಸ್ತುವನ್ನು ಒಪ್ಪದಿದ್ದರೆ ತೋರುವದು ಕಲ್ಪಿತವೆನ್ನುವದಕ್ಕೂ ಬರುವದಿಲ್ಲ.

# ಜನನಮರಣಗಳಿಂದ ಆತ್ಮಸ್ವರೂಪನಿರ್ಧಾರಣ

(ಉಪನಿಷತ್ತು)

**ಸ ವಾ ಅಯಂ ಪುರುಷೋ ಜಾಯಮಾನಃ ಶರೀರಮಭಿ ಸಂಪದ್ಯಮಾನಃ ಪಾಪ್ಮಭಿಃ ಸಗ್‍ಂಸೃಜ್ಯತೇ ಸ ಉತ್ಕ್ರಾಮನ್ ಮ್ರಿಯಮಾಣಃ ಪಾಪ್ಮನೋ ವಿಜಹಾತಿ ॥ ೮ ॥**

೮. ಆ ಈ ಪುರುಷನು ಶರೀರವನ್ನು ಪಡೆದು ಹುಟ್ಟುವಾಗ (ಪಾಪಗಳಿಗೆ) ಸಂಬದ್ಧನಾಗುತ್ತಾನೆ ; ಅವನು ಸಾಯುವವನಾಗಿ ಉತ್ಕ್ರಾಂತನಾಗುವಾಗ ಪಾಪಗಳನ್ನು ಬಿಡುತ್ತಾನೆ.

## ಆತ್ಮನು ಕಾರ್ಯಕರಣವ್ಯತಿರಿಕ್ತನೆಂಬುದು ಹೇಗೆ

(ಭಾಷ್ಯ)

೧೮೩. ಯಥೈವ ಇಹ ಏಕಸ್ಮಿನ್ ದೇಹೇ ಸ್ವಪ್ನೋ ಭೂತ್ವಾ ಮೃತ್ಯೋ ರೂಪಾಣಿ ಕಾರ್ಯಕರಣಾನಿ ಅತಿಕ್ರಮ್ಯ ಸ್ವಪ್ನೇ ಸ್ವೇ ಆತ್ಮಜ್ಯೋತಿಷಿ ಆಸ್ತೇ, ಏವಂ ಸ ವೈ ಪ್ರಕೃತಃ ಪುರುಷಃ ಅಯಂ ಜಾಯಮಾನಃ। ಕಥಂ ಜಾಯಮಾನಃ ಇತಿ ? ಉಚ್ಯತೇ। ಶರೀರಂ ದೇಹೇನ್ದ್ರಿಯಸಂಘಾತಮ್ ಅಭಿಸಂಪದ್ಯಮಾನಃ। ಶರೀರ ಆತ್ಮಭಾವಮ್ ಆಪದ್ಯಮಾನಃ ಇತ್ಯರ್ಥಃ। ಪಾಪ್ಮಭಿಃ ಪಾಪ್ಮಸಮವಾಯಿಭಿಃ ಧರ್ಮಾಧರ್ಮಾಶ್ರಯೈಃ ಕಾರ್ಯಕರಣೈಃ ಇತ್ಯರ್ಥಃ। ಸಂಸೃಜ್ಯತೇ ಸಂಯುಜ್ಯತೇ। ಸ ಏವ ಉತ್ಕ್ರಾಮನ್ ಶರೀರಾನ್ತರಮ್ ಊರ್ಧ್ವಂ ಕ್ರಾಮನ್ ಗಚ್ಛನ್ ಮ್ರಿಯಮಾಣಃ ಇತ್ಯೇತಸ್ಯ ವ್ಯಾಖ್ಯಾನಮ್ ಉತ್ಕ್ರಾಮನ್ ಇತಿ। ತಾನೇವ ಸಂಶ್ಲಿಷ್ಟಾನ್ ಪಾಪ್ಮರೂಪಾನ್ ಕಾರ್ಯಕರಣಲಕ್ಷಣಾನ್ ವಿಜಹಾತಿ, ತೈರ್ವಿಯುಜ್ಯತೇ, ತಾನ್ ಪರಿತ್ಯಜತಿ। ಯಥಾ ಅಯಂ ಸ್ವಪ್ನಜಾಗ್ರದ್ವೃತ್ತ್ಯೋಃ ವರ್ತಮಾನ ಏವ ಏಕಸ್ಮಿನ್ ದೇಹೇ ಪಾಪ್ಮರೂಪಕಾರ್ಯಕರಣೋಪಾದಾನಪರಿತ್ಯಾಗಾಭ್ಯಾಮ್ ಅನವರತಂ ಸಂಚರತಿ ಧಿಯಾ ಸಮಾನಃ ಸನ್, ತಥಾ ಸೋಽಯಂ ಪುರುಷಃ ಉಭೌ ಇಹಲೋಕಪರಲೋಕೌ ಜನ್ಮಮರಣಾಭ್ಯಾಂ ಕಾರ್ಯಕರಣೋಪಾದಾನಪರಿತ್ಯಾಗೌ ಅನವರತಂ ಪ್ರತಿಪದ್ಯಮಾನಃ ಆ ಸಂಸಾರಮೋಕ್ಷಾತ್ ಸಂಚರತಿ। ತಸ್ಮಾತ್ ಸಿದ್ಧಮಸ್ಯ ಆತ್ಮಜ್ಯೋತಿಷಃ ಅನ್ಯತ್ವಮ್ ಕಾರ್ಯಕರಣರೂಪೇಭ್ಯಃ ಪಾಪ್ಮಭ್ಯಃ ಸಂಯೋಗವಿಯೋಗಾಭ್ಯಾಮ್। ನ ಹಿ ತದ್ಧರ್ಮತ್ವೇ ಸತಿ ತೈರೇವ ಸಂಯೋಗೋ ವಿಯೋಗೋ ವಾ ಯುಕ್ತಃ ॥

(ಭಾಷ್ಯಾರ್ಥ)

ಹೇಗೆ ಇಲ್ಲಿ ಒಂದೇ ದೇಹದಲ್ಲಿ ಸ್ವಪ್ನವಾಗಿ ಮೃತ್ಯುವಿನ ರೂಪಗಳಾದ ಕಾರ್ಯಕರಣಗಳನ್ನು ಮೀರಿ ಸ್ವಪ್ನದಲ್ಲಿ ತನ್ನ ಆತ್ಮಜ್ಯೋತಿಯಲ್ಲಿ ಇರುತ್ತಾನೋ ಹಾಗೆಯೇ ಆ ಈ ಪ್ರಕೃತನಾದ ಪುರುಷನು ಹುಟ್ಟುವವನಾಗಿ, ಹೇಗೆ ಹುಟ್ಟುವವನಾಗಿ? ಎಂದರೆ ಹೇಳುತ್ತಾನೆ. ಶರೀರವನ್ನು ದೇಹೇಂದ್ರಿಯಸಂಘಾತವನ್ನು ಪಡೆದು, ಶರೀರದಲ್ಲಿ ತಾನೆಂಬ ಭಾವವನ್ನು ಹೊಂದಿ ಎಂದರ್ಥ[1]. ಪಾಪಗಳಿಗೆ, ಪಾಪಸಂಬದ್ಧವಾಗಿರುವ ಧರ್ಮಾಧರ್ಮಾಶ್ರಯವಾಗಿರುವ ಕಾರ್ಯಕರಣಗಳಿಗೆ ಎಂದರ್ಥ[2], ಸಂಬದ್ಧನಾಗುತ್ತಾನೆ ಸೇರಿಕೊಳ್ಳುತ್ತಾನೆ[3]. ಅವನೇ ಉತ್ಕ್ರಾಂತನಾಗುವಾಗ ಮತ್ತೊಂದು ಶರೀರಕ್ಕೆ ಮೇಲಕ್ಕೆ ಹೋಗಿ ಸೇರುವಾಗ, ಸಾಯುವವನಾಗಿ ಎಂಬುದರ ವ್ಯಾಖ್ಯಾನವೇ ಉತ್ಕ್ರಾಂತನಾಗುವಾಗ ಎಂಬುದು[4]. (ಆಗ) ಅವನೇ (ತನಗೆ) ಸಂಬದ್ಧವಾಗಿರುವ ಕಾರ್ಯಕರಣಲಕ್ಷಣವಾದ ಪಾಪರೂಪಗಳನ್ನು[5] ಬಿಡುತ್ತಾನೆ, ಅವುಗಳನ್ನು ಬಿಟ್ಟಗಲುತ್ತಾನೆ, ಅವುಗಳನ್ನು ಬಿಟ್ಟುಬಿಡುತ್ತಾನೆ.

**ಹೇಗೆ ಇವನು ಈಗಿನ ಒಂದೇ ದೇಹದಲ್ಲಿಯೋ ಸ್ವಪ್ನಜಾಗ್ರದ್ವೃತ್ತಿಗಳಲ್ಲಿ ಪಾಪದ ರೂಪಗಳಾದ ಕಾರ್ಯಕರಣಗಳನ್ನು ತೆಗೆದುಕೊಳ್ಳುವದು, ಬಿಡುವದು–ಇವುಗಳಿಂದ ಒಂದೇ ಸಮನೆ ಬುದ್ಧಿಗೆ ಸದೃಶನಾಗಿ ಸಂಚರಿಸುತ್ತಿರುವನೋ ಹಾಗೆಯೇ ಆ ಈ ಪುರುಷನು ಇಹಲೋಕಪರಲೋಕಗಳೆಂಬ ಎರಡನ್ನೂ ಜನ್ಮಮರಣಗಳಿಂದ ಕಾರ್ಯಕರಣಗಳನ್ನು ತೆಗೆದುಕೊಳ್ಳುವದು, ಬಿಡುವದು– ಎಂಬಿವನ್ನು ಅನವರತವಾಗಿ ಪಡೆಯುವವನಾಗಿ ಸಂಸಾರದಿಂದ ಮೋಕ್ಷವಾಗುವವರೆಗೂ ಸಂಚರಿಸುತ್ತಿರುತ್ತಾನೆ.[6] ಆದ್ದರಿಂದ ಈ ಆತ್ಮಜ್ಯೋತಿಯು ಕಾರ್ಯ**

---

1. ಹೊಸ ಶರೀರದಲ್ಲಿ ತಾನೆಂಬ ಅಭಿಮಾನವನ್ನು ತಳೆಯುವದೇ ಹುಟ್ಟುವದು. ಸೂ. ಭಾ. ೨-೩-೧೬, (ಭಾ. ಭಾ. ೧೧೮).

2. ಪಾಪಗಳು ಅತೀಂದ್ರಿಯವಾಗಿದ್ದರೂ, ಅವುಗಳನ್ನು ಮಾಡುವದಕ್ಕೆ ಬೇಕಾಗಿರುವ ಕಾರ್ಯಕರಣಗಳನ್ನೇ ಇಲ್ಲಿ ಪಾಪಗಳೆಂದಿದೆ. ಪಾಪವೆಂಬುದು ಧರ್ಮಾಧರ್ಮಗಳೆರಡಕ್ಕೂ ಹೆಸರು. ಸೂ. ಭಾ. ೪-೧-೧೪, (ಭಾ. ಭಾ. ೫೨೯).

3 ಶರೀರಾಭಿಮಾನದಿಂದಲೇ ಅದರ ಸಂಬಂಧವು

4. ಸಾಯುವದೆಂದರೆ ಶರೀರಾಂತರವನ್ನು ಪಡೆಯುವದಕ್ಕೆಂದು ಈ ಶರೀರವನ್ನು ಬಿಟ್ಟುಹೋಗುವದೇ.

5. ಮೃತ್ಯುವಿನ ರೂಪಗಳನ್ನು ಎಂದು ಹಿಂದಿನ ಕಂಡಿಕೆಯಲ್ಲಿ ಹೇಳಿದ್ದು ಇವುಗಳನ್ನೇ.

6. ಮೋಕ್ಷವಾಗುವವರೆಗೂ ಬುದ್ಧಿಸಾಮ್ಯವೂ ಕಾರ್ಯಕರಣಗಳನ್ನು ಅನುಕ್ರಮವಾಗಿ ಪಡೆಯುವದೂ ಇದ್ದೇ ಇರುತ್ತದೆ. ಸೂ. ಭಾ. ೨-೩-೨೯ (ಭಾ. ಭಾ. ೧೩೮) ೨-೩-೩೦ (ಭಾ. ಭಾ. ೧೪೧).

**ಕರಣರೂಪವಾದ ಪಾಪಗಳಿಗಿಂತ ಬೇರೆ ಎಂಬುದು ಸಿದ್ಧವಾಯಿತು ; ಏಕೆಂದರೆ (ಇದಕ್ಕೆ ಅವುಗಳ) ಸಂಯೋಗವಿಯೋಗಗಳಾಗುತ್ತಿರುತ್ತವೆ. ಅದರ ಧರ್ಮವೇ ಆದರೆ ಅವುಗಳೇ ಸಂಯೋಗವಾಗುವದಾಗಲಿ ವಿಯೋಗವಾಗುವದಾಗಲಿ ಯುಕ್ತವಾಗಲಾರದಷ್ಟೆ ?**[1]

## ಸ್ವಪ್ನವು ಸಂಧ್ಯಸ್ಥಾನ

(ಉಪಸ್ಥಿತಿ)

**ತಸ್ಯ ವಾ ಏತಸ್ಯ ಪುರುಷಸ್ಯ ದ್ವೇ ಏವ ಸ್ಥಾನೇ ಭವತ ಇದಂ ಚ ಪರಲೋಕಸ್ಥಾನಂ ಚ ಸಂಧ್ಯಂ ತೃತೀಯಗ್ಂ ಸ್ವಪ್ನಸ್ಥಾನಂ ತಸ್ಮಿನ್ ಸಂಧ್ಯೇ ಸ್ಥಾನೇ ತಿಷ್ಠನ್ನೇತೇ ಉಭೇ ಸ್ಥಾನೇ ಪಶ್ಯತೀದಂ ಚ ಪರಲೋಕಸ್ಥಾನಂ ಚ। ಅಥ ಯಥಾಕ್ರಮೋಽಯಂ ಪರಲೋಕಸ್ಥಾನೇ ಭವತಿ ತಮಾಕ್ರಮಮಾಕ್ರಮ್ಯೋಭಯಾನ್ ಪಾಪ್ಮನ ಆನಂದಾಗ್ಂಶ್ಚ ಪಶ್ಯತಿ ಸ ಯತ್ರ ಪ್ರಸ್ವಪಿತ್ಯಸ್ಯ ಲೋಕಸ್ಯ ಸರ್ವಾವತೋ ಮಾತ್ರಾಮಪಾದಾಯ ಸ್ವಯಂ ವಿಹತ್ಯ ಸ್ವಯಂ ನಿರ್ಮಾಯ ಸ್ವೇನ ಭಾಸಾ ಸ್ವೇನ ಜ್ಯೋತಿಷಾ ಪ್ರಸ್ವಪಿತ್ಯತ್ರಾಯಂ ಪುರುಷಃ ಸ್ವಯಂಜ್ಯೋತಿರ್ಭವತಿ ॥ ೯ ॥**

೯. ಆ ಈ ಪುರುಷನಿಗೆ ಎರಡೇ ಸ್ಥಾನಗಳಿರುತ್ತವೆ. ಇದು ಮತ್ತು ಪರಲೋಕಸ್ಥಾನವು. ಮೂರನೆಯದಾದ ಸ್ವಪ್ನಸ್ಥಾನವು ಸಂಧ್ಯವು. ಆ ಸಂಧ್ಯಸ್ಥಾನದಲ್ಲಿದ್ದುಕೊಂಡು ಈ ಲೋಕ, ಪರಲೋಕಸ್ಥಾನ- ಈ ಎರಡು ಸ್ಥಾನಗಳನ್ನೂ ಕಾಣುತ್ತಿರುತ್ತಾನೆ. ಆಗ ಇವನು ಪರಲೋಕಕ್ಕೆ ಎಂಥ ಆಕ್ರಮವುಳ್ಳವನಾಗಿರುತ್ತಾನೋ ಆ ಆಕ್ರಮವನ್ನು ಆಕ್ರಮಿಸಿಕೊಂಡು ಪಾಪ್ಮಗಳನ್ನೂ ಆನಂದಗಳನ್ನೂ ಎರಡನ್ನೂ ಕಾಣುತ್ತಾನೆ. ಅವನು ಎಲ್ಲಿ ಪ್ರಸ್ವಾಪಮಾಡುತ್ತಾನೋ ಈ ಸರ್ವಾವಂತವಾದ ಲೋಕದ ಮಾತ್ರೆಯನ್ನು ತೆಗೆದುಕೊಂಡು ತಾನೇ ಬಡಿಗಿಟ್ಟು ತಾನೇ ನಿರ್ಮಿಸಿಕೊಂಡು ತನ್ನ ಭಾಸದಿಂದ ತನ್ನ ಜ್ಯೋತಿಯಿಂದ ಪ್ರಸ್ವಾಪಮಾಡುತ್ತಿರುತ್ತಾನೆ. ಇಲ್ಲಿ ಈ ಪುರುಷನು ಸ್ವಯಂಜ್ಯೋತಿಯಾಗಿರುತ್ತಾನೆ.

---

1. ಅದ್ದರಿಂದ ಮಿಥ್ಯಾಜ್ಞಾನಪ್ರಯುಕ್ತವಾಗಿ ಉಪಾಧಿಸಂಬಂಧವೂ ಸಮ್ಯಗ್ಜ್ಞಾನದಿಂದ ಅದರಿಂದ ಮುಕ್ತಿಯೂ ಯುಕ್ತವಾಗುತ್ತದೆ. ಸೂ.ಭಾ ೨-೩-೩೦ (ಭಾ.ಭಾ.೧೪೧).

## ಸ್ವಪ್ನವು ಎರಡು ಲೋಕಗಳ ಸಂಧಿ

(ಭಾಷ್ಯ)

೧೮೪. ನನು ನ ಸ್ವಪ್ನೋಽಸ್ಯ ಉಭೌ ಲೋಕೌ, ಯೌ ಜನ್ಮಮರಣಾಭ್ಯಾಮ್ ಅನುಕ್ರಮೇಣ ಸಂಚರತಿ ಸ್ವಪ್ನಜಾಗರಿತೇ ಇವ। ಸ್ವಪ್ನಜಾಗರಿತೇ ತು ಪ್ರತ್ಯಕ್ಷಮ್ ಅವಗಮ್ಯೇತೇ ನ ತು ಇಹಲೋಕಪರಲೋಕೌ ಕೇನಚಿತ್ ಪ್ರಮಾಣೇನ। ತಸ್ಮಾತ್ ಏತೇ ಏವ ಸ್ವಪ್ನಜಾಗರಿತೇ ಇಹಲೋಕಪರಲೋಕೌ ಇತಿ। ಉಚ್ಯತೇ। ತಸ್ಯ ಏತಸ್ಯ ಪುರುಷಸ್ಯ ದ್ವೇ ಏವ ಸ್ಥಾನೇ ಭವತಃ, ನ ತೃತೀಯಂ ಚತುರ್ಥಂ ವಾ। ಕೇ ತೇ? ಇದಂ ಚ ಯತ್ ಪ್ರತಿಪನ್ನಂ ವರ್ತಮಾನಂ ಜನ್ಮ ಶರೀರೇನ್ದ್ರಿಯವಿಷಯವೇದನಾವಿಶಿಷ್ಟಂ ಸ್ಥಾನಂ ಪ್ರತ್ಯಕ್ಷತೋಽನುಭೂಯಮಾನಮ್। ಪರಲೋಕ ಏವ ಸ್ಥಾನಂ ಪರಲೋಕಸ್ಥಾನಮ್। ತಚ್ಚ ಶರೀರಾದಿವಿಯೋಗೋತ್ತರಕಾಲಾನುಭಾವ್ಯಮ್। ನನು ಸ್ವಪ್ನೋಽಪಿ ಪರಲೋಕಃ। ತಥಾ ಚ ಸತಿ ದ್ವೇ ಏವೇತಿ ಅವಧಾರಣಮ್ ಅಯುಕ್ತಮ್। ನ। ಕಥಂ ತರ್ಹಿ, ಸಂಧ್ಯಂ ತತ್। ಇಹಲೋಕಪರಲೋಕಯೋಃ ಯಃ ಸಂಧಿಃ ತಸ್ಮಿನ್ ಭವಂ ಸಂಧ್ಯಂ ಯತ್ ತೃತೀಯಂ ತತ್ ಸ್ವಪ್ನಸ್ಥಾನಮ್। ತೇನ ಸ್ಥಾನದ್ವಿತ್ವಾವಧಾರಣಮ್। ನ ಹಿ ಗ್ರಾಮಯೋಃ ಸಂಧಿಃ ತಾವೇವ ಗ್ರಾಮೌ ಅಪೇಕ್ಷ್ಯ ತೃತೀಯತ್ವಪರಿಗಣನಮರ್ಹತಿ ॥

(ಭಾಷ್ಯಾರ್ಥ)

(ಆಕ್ಷೇಪ) .- ಇವನು ಸ್ವಪ್ನಜಾಗರಿತಗಳಂತೆಯೇ ಜನ್ಮಮರಣಗಳಿಂದ ಅನುಕ್ರಮವಾಗಿ ಸಂಚರಿಸುತ್ತಾನೆಂದಿರಲ್ಲ, ಇವನಿಗೆ (ಆ) ಎರಡು ಲೋಕಗಳು ಇಲ್ಲವಲ್ಲ! ಸ್ವಪ್ನಜಾಗರಿತಗಳಾದರೋ ಪ್ರತ್ಯಕ್ಷವಾಗಿ ಅನುಭೂತವಾಗಿರುತ್ತವೆ; ಆದರೆ ಇಹಲೋಕಪರಲೋಕಗಳು ಯಾವ ಪ್ರಮಾಣದಿಂದಲೂ ಅನುಭೂತವಾಗಿರುವದಿಲ್ಲ. ಆದ್ದರಿಂದ ಈ ಸ್ವಪ್ನಜಾಗರಿತಗಳೇ ಇಹಲೋಕಪರಲೋಕಗಳು.

(ಪರಿಹಾರ) :- (ಇದಕ್ಕೆ) ಹೇಳುತ್ತಾನೆ. ಆ ಈ ಪುರುಷನಿಗೆ ಎರಡೇ ಸ್ಥಾನಗಳು ಇರುತ್ತವೆ, ಮೂರನೆಯದಾಗಲಿ, ನಾಲ್ಕನೆಯದಾಗಲಿ ಇಲ್ಲ. ಅವು ಯಾವವು? ಎಂದರೆ, ಇದು, ಈಗ ಪಡೆದುಕೊಂಡಿರುವ ಜನ್ಮವೆಂಬ ಶರೀರ, ಇಂದ್ರಿಯಗಳು, ವಿಷಯವೇದನೆ- ಇವುಗಳಿಂದೊಡಗೂಡಿ ಪ್ರತ್ಯಕ್ಷವಾಗಿ ಅನುಭವಿಸುತ್ತಿರುವ ಸ್ಥಾನ(ವೊಂದು), ಪರಲೋಕಸ್ಥಾನವು, ಪರಲೋಕವೆಂಬ ಸ್ಥಾನವು, (ಮತ್ತೊಂದು); ಅದು ಶರೀರವೇ ಮುಂತಾದವುಗಳನ್ನು ಬಿಟ್ಟಗಲಿದ ಬಳಿಕಿನ ಕಾಲದಲ್ಲಿ ಅನುಭವಿಸತಕ್ಕದ್ದು.

(ಆಕ್ಷೇಪ) :- ಸ್ವಪ್ನವೂ ಪರಲೋಕವೇ ಅಲ್ಲವೆ ? ಹಾಗಾದರೆ ಎರಡೇ (ಸ್ಥಾನಗಳು) ಎಂದು ಒತ್ತಿ ಹೇಳಿರುವದು ಅಯುಕ್ತವಾಗುವದಲ್ಲ !

(ಪರಿಹಾರ) :- ಹಾಗಲ್ಲ, ಮತ್ತೆ ಹೇಗೆಂದರೆ ಅದು ಸಂಧ್ಯವು. ಇಹಲೋಕಪರಲೋಕಗಳಿಗೆ ಸಂಧಿಯಿದೆಯಲ್ಲ, ಅದರಲ್ಲಿರತಕ್ಕದ್ದು ಸಂಧ್ಯವು, ಮೂರನೆಯದಾದ ಸ್ವಪ್ನಸ್ಥಾನವಿದೆಯಲ್ಲ, ಅದು (ಇಂಥ ಸಂಧ್ಯವು). ಆದ್ದರಿಂದ ಸ್ಥಾನಗಳು ಎರಡೇ ಎಂದು ಒತ್ತಿ ಹೇಳಿದೆ. ಗ್ರಾಮಗಳೆರಡರ ಸಂಧಿಯು ಆ ಗ್ರಾಮಗಳಿಗಿಂತಲೇ (ಬೇರೆಯಾಗಿ) ಮೂರನೆಯದೆಂದು ಎಣಿಸತಕ್ಕದ್ದಲ್ಲವಷ್ಟೆ ?

## ಸ್ವಪ್ನದಲ್ಲಿ ಆಗುವ ಪರಲೋಕಾನುಭವ

(ಭಾಷ್ಯ)

೧೮೫. ಕಥಂ ಪುನಸ್ತಸ್ಯ ಪರಲೋಕಸ್ಥಾನಸ್ಯ ಅಸ್ತಿತ್ವಮ್ ಅವಗಮ್ಯತೇ, ಯದಪೇಕ್ಷ್ಯ ಸ್ವಪ್ನಸ್ಥಾನಂ ಸಂಧ್ಯಂ ಭವೇತ್ ? ಯತಃ ತಸ್ಮಿನ್ ಸಂಧ್ಯೇ ಸ್ವಪ್ನಸ್ಥಾನೇ ತಿಷ್ಠನ್ ಭವನ್ ವರ್ತಮಾನಃ ಏತೇ ಉಭೇ ಸ್ಥಾನೇ ಪಶ್ಯತಿ। ಕೇ ತೇ ಉಭೇ ? ಇದಂ ಚ ಪರಲೋಕಸ್ಥಾನಂ ಚ। ತಸ್ಮಾತ್ ಸ್ತಃ ಸ್ವಪ್ನಜಾಗರಿತವ್ಯತಿರೇಕೇಣ ಉಭೌ ಲೋಕೌ ಯೌ ಧಿಯಾ ಸಮಾನಃ ಸನ್ ಅನುಸಂಚರತಿ ಜನ್ಮಮರಣಸಂತಾನಪ್ರಬನ್ಧೇನ। ಕಥಂ ಪುನಃ ಸ್ವಪ್ನೇ ಸ್ಥಿತಃ ಸನ್ ಉಭೌ ಲೋಕೌ ಪಶ್ಯತಿ ? ಕಿಮಾಶ್ರಯಃ ಕೇನ ವಿಧಿನಾ ಇತಿ ? ಉಚ್ಯತೇ। ಅಥ ಕಥಂ ಪಶ್ಯತೀತಿ ಶೃಣು। ಯಥಾಕ್ರಮಃ। ಆಕ್ರಮತ್ಯನೇನ ಇತಿ ಆಕ್ರಮಃ। ಆಶ್ರಯಃ, ಅವಷ್ಟಮ್ಭಃ ಇತ್ಯರ್ಥಃ। ಯಾದೃಶಃ ಆಕ್ರಮಃ ಅಸ್ಯ ಸೋಽಯಂ ಯಥಾಕ್ರಮಃ। ಅಯಂ ಪುರುಷಃ ಪರಲೋಕಸ್ಥಾನೇ ಪ್ರತಿಪತ್ತವ್ಯೇ ನಿಮಿತ್ತೇ ಯಥಾಕ್ರಮೋ ಭವತಿ ಯಾದೃಶೇನ ಪರಲೋಕಪ್ರತಿಪತ್ತಿಸಾಧನೇನ ವಿದ್ಯಾಕರ್ಮಪೂರ್ವಪ್ರಜ್ಞಾಲಕ್ಷಣೇನ ಯುಕ್ತೋ ಭವತಿ ಇತ್ಯರ್ಥಃ। ತಮ್ ಆಕ್ರಮಂ ಪರಲೋಕಸ್ಥಾನಾಯ ಉನ್ಮುಖೀಭೂತಂ ಪ್ರಾಪ್ತಾಙ್ಕುರೀಭಾವಮಿವ ಬೀಜಂ ತಮಾಕ್ರಮಮ್ ಆಕ್ರಮ್ಯ ಅವಷ್ಟಭ್ಯ ಆಶ್ರಿತ್ಯ ಉಭಯಾನ್ ಪಶ್ಯತಿ। ಬಹುವಚನಂ ಧರ್ಮಾಧರ್ಮಫಲಾನೇಕತ್ವಾತ್। ಉಭಯಾನ್ ಉಭಯಪ್ರಕಾರಾನ್ ಇತ್ಯರ್ಥಃ। ಕಾಂಸ್ತಾನ್ ? ಪಾಪ್ಮನಃ ಪಾಪಫಲಾನಿ। ನ ತು ಪುನಃ ಸಾಕ್ಷಾದೇವ ಪಾಪ್ಮನಾಂ ದರ್ಶನಂ ಸಂಭವತಿ। ತಸ್ಮಾತ್ ಪಾಪಫಲಾನಿ ದುಃಖಾನಿ ಇತ್ಯರ್ಥಃ। ಆನನ್ದಾಂಶ್ಚ ಧರ್ಮಫಲಾನಿ। ಸುಖಾನಿ ಇತ್ಯೇತತ್। ತಾನ್ ಉಭಯಾನ್ ಪಾಪ್ಮನಃ ಆನನ್ದಾಂಶ್ಚ ಪಶ್ಯತಿ ಜನ್ಮಾನ್ತರದೃಷ್ಟವಾಸನಾಮಯಾನ್। ಯಾನಿ ಚ ಪ್ರತಿಪತ್ತವ್ಯಜನ್ಮವಿಷಯಾಣಿ ಕ್ಷುದ್ರಧರ್ಮಾಧರ್ಮಫಲಾನಿ ಧರ್ಮಾಧರ್ಮಪ್ರಯುಕ್ತೋ ದೇವತಾನು

ಗ್ರಹಾದ್ ವಾ ಪಶ್ಯತಿ। ತತ್ ಕಥಮವಗಮ್ಯತೇ ಪರಲೋಕಸ್ಥಾನಭಾವಿ ತತ್ಸ್ವಾಪ್ನಾನನ್ದದರ್ಶನಂ ಸ್ವಪ್ನೇ ಇತಿ ? ಉಚ್ಯತೇ। ಯಸ್ಮಾತ್ ಇಹ ಜನ್ಮನ್ಯನನುಭಾವ್ಯಮಪಿ ಪಶ್ಯತಿ ಬಹು। ನ ಚ ಸ್ವಪ್ನೋ ನಾಮ ಅಪೂರ್ವಂ ದರ್ಶನಮ್। ಪೂರ್ವದೃಷ್ಟಸ್ಮೃತಿರ್ಹಿ ಸ್ವಪ್ನಃ ಪ್ರಾಯೇಣ। ತೇನ ಸ್ವಪ್ನಜಾಗರಿತಸ್ಥಾನವ್ಯತಿರೇಕೇಣ ಸ್ತಃ ಉಭೌ ಲೋಕೌ ॥

(ಭಾಷ್ಯಾರ್ಥ)

(ಪ್ರಶ್ನೆ) :– ಆ ಪರಲೋಕಸ್ಥಾನವು ಇದೆ ಎಂಬುದು ಹೇಗೆ ಗೊತ್ತಾಗುತ್ತದೆ ? ಅದಕ್ಕೆ ಹೋಲಿಸಿದ್ದರಿಂದಲ್ಲವೆ, ಸ್ವಪ್ನಸ್ಥಾನವು ಸಂಧ್ಯ(ಸ್ಥಾನ)ವೆಂದಾದೀತು ?

(ಉತ್ತರ) :– ಏಕೆಂದರೆ ಆ ಸಂಧ್ಯವಾದ ಸ್ವಪ್ನಸ್ಥಾನದಲ್ಲಿ (ತಿಷ್ಠನ್ = ಭವನ್) ಇರುವವನಾಗಿ ಇದ್ದುಕೊಂಡು ಈ ಎರಡು ಸ್ಥಾನಗಳನ್ನೂ ಕಾಣುತ್ತಾನೆ. ಅವೆರಡೂ ಯಾವವು ? ಇದೂ ಪರಲೋಕಸ್ಥಾನವೂ. ಆದ್ದರಿಂದ ಸ್ವಪ್ನಜಾಗರಿತಗಳಿಗಿಂತ ಬೇರೆಯಾಗಿ ಎರಡು ಲೋಕಗಳೂ ಇವೆ, ಅವುಗಳನ್ನು (ಈ ಪುರುಷನು) ಬುದ್ಧಿಗೆ ಸಮಾನನಾಗಿ ಜನ್ಮಮರಣಗಳು ಒಂದೇ ಸಮನೆ ಆಗುವವೆಂಬ ಪ್ರಬಂಧದಿಂದ[1] ಅನುಸಂಚಾರಮಾಡುತ್ತಿರುತ್ತಾನೆ.

(ಪ್ರಶ್ನೆ) :– ಸ್ವಪ್ನದಲ್ಲಿದ್ದುಕೊಂಡವನಾಗಿ ಎರಡು ಲೋಕಗಳನ್ನೂ ಕಾಣುತ್ತಾನೆ ಎಂಬುದು ಹೇಗೆ ? ಏನನ್ನು ಆಶ್ರಯಿಸಿಕೊಂಡು (ಕಾಣುತ್ತಾನೆ) ಹೇಗೆ ?

(ಉತ್ತರ) :– ಹೇಳುತ್ತೇವೆ. ಈಗ ಹೇಗೆ ಕಾಣುತ್ತಾನೆಂಬುದನ್ನು ಕೇಳು. ಯಥಾಕ್ರಮನಾಗಿ ಅದರಿಂದ ಆಕ್ರಮಿಸುತ್ತಾನಾದ್ದರಿಂದ ಆಶ್ರಯವು ಆಕ್ರಮ (ವೆನಿಸುತ್ತದೆ), ಅವಲಂಬನೆ ಎಂದರ್ಥ. ಇವನಿಗೆ ಎಂಥ ಆಶ್ರಯವಿರುವದೋ ಎಂಬುದಕ್ಕೆ ಆ ಇವನನ್ನು ಯಥಾಕ್ರಮನಾಗಿ (ಎಂದಿದೆ). ಈ ಪುರುಷನು ಪರಲೋಕಸ್ಥಾನವೆಂಬ ಪಡೆದುಕೊಳ್ಳಬೇಕಾದ ನಿಮಿತ್ತದಲ್ಲಿ[2] ಎಂಥ ಆಕ್ರಮವುಳ್ಳವನಾಗಿರುತ್ತಾನೋ ಎಂಥ ಪರಲೋಕಪ್ರಾಪ್ತಿಯ ಸಾಧನದಿಂದ, ಎಂಥ ವಿದ್ಯೆ, ಕರ್ಮ, ಪೂರ್ವಪ್ರಜ್ಞೆ[3] ಎಂಬ (ಸಾಧನದಿಂದ) ಕೂಡಿರುತ್ತಾನೋ ಎಂದರ್ಥ. ಆ ಆಕ್ರಮವನ್ನು– ಪರಲೋಕಸ್ಥಾನದ ಕಡೆಗೆ ಉನ್ಮುಖವಾಗಿರುವ, ಮೊಳಕೆಯ ಭಾವವನ್ನು ಪಡೆದ ಬೀಜದಂತಿರುವ, ಆ ಆಕ್ರಮವನ್ನು– ಆಕ್ರಮಿಸಿಕೊಂಡು ಅವಲಂಬಿಸಿಕೊಂಡು, ಆಶ್ರಯಿಸಿಕೊಂಡು ಎರಡನ್ನೂ ನೋಡುತ್ತಾನೆ.

1. ಜನನಮರಣಗಳು ಒಂದರ ಹಿಂದೊಂದು ಆಗುವ ಸಾಲಾಗಿ ಎಂದರ್ಥ.
2. ಪರಲೋಕಸ್ಥಾನೇ ಎಂಬುದು ನಿಮಿತ್ತಸಪ್ತಮಿ ಎಂದು ಭಾವ
3. ೪-೪-೨ನ್ನೂ ಅದರ ಭಾಷ್ಯವನ್ನೂ ನೋಡಿ.

(ಉಭಯಾನ್ ಎಂದು) ಬಹುವಚನವನ್ನು (ಪ್ರಯೋಗಿಸಿರುವದು) ಧರ್ಮಾಧರ್ಮಗಳ ಫಲಗಳು ಅನೇಕವಾಗಿರುವದರಿಂದ- ಎರಡನ್ನೂ ಎಂದರೆ ಎರಡು ಪ್ರಕಾರವಾಗಿರುವವನ್ನೂ ಎಂದರ್ಥ. ಆ (ಎರಡನ್ನೂ ಎಂದರೆ) ಯಾವವನ್ನು ? ಪಾಪಗಳನ್ನೂ ಎಂದರೆ ಪಾಪಫಲಗಳನ್ನೂ—ಅಷ್ಟೇ ಹೊರತು ನೇರಾಗಿಯೇ ಪಾಪಗಳನ್ನು ನೋಡುವದು ಆಗುವಂತಿಲ್ಲ. ಆದ್ದರಿಂದ ಪಾಪಫಲಗಳಾದ ದುಃಖಗಳನ್ನೂ ಎಂದರ್ಥ; ಆನಂದಗಳನ್ನು ಧರ್ಮಫಲಗಳಾದ ಸುಖಗಳನ್ನೂ ಎಂದು ಅಭಿಪ್ರಾಯ. ಆ ಎರಡನ್ನೂ ಜನ್ಮಾಂತರದಲ್ಲಿ ಅನುಭವಿಸಿದ್ದರ ವಾಸನೆಯ ರೂಪವಾದ ಪಾಪಗಳನ್ನೂ ಆನಂದಗಳನ್ನೂ ಮತ್ತು ಮುಂದೆ ಪಡೆಯಲಿರುವ ಜನ್ಮದ ವಿಷಯವಾದ ಅಲ್ಪವಾದ ಧರ್ಮಾಧರ್ಮಫಲಗಳಿರುವವೋ (ಅವುಗಳನ್ನು) ಧರ್ಮಾಧರ್ಮಗಳಿಂದ ಪ್ರೇರಿತನಾಗಿ ಅಥವಾ ದೇವತಾನುಗ್ರಹದಿಂದ-ಕಾಣುತ್ತಾನೆ.

(ಪ್ರಶ್ನೆ) :- ಪರಲೋಕಸ್ಥಾನದಲ್ಲಿ ಆಗುವ ಆ ಪಾಪಾನಂದಗಳ ದರ್ಶನವು ಸ್ವಪ್ನದಲ್ಲಿ ಆಗುತ್ತದೆ ಎಂದು ಹೇಗೆ ಗೊತ್ತಾಗುತ್ತದೆ ?

(ಉತ್ತರ) :- ಏಕೆಂದರೆ ಈ ಜನ್ಮದಲ್ಲಿ ಅನುಭವಿಸುವದಕ್ಕಾಗದ್ದನ್ನೂ ಬಹಳವಾಗಿ (ಅಲ್ಲಿ) ಕಾಣುತ್ತಾನೆ. ಸ್ವಪ್ನವೆಂಬುದು ಹೊಸದಾಗಿ ಆಗುವ ದರ್ಶನವೆಂದೂ ಹೇಳುವದಕ್ಕಾಗುವದಿಲ್ಲ. ಏಕೆಂದರೆ ಸ್ವಪ್ನವು ಬಹಳಮಟ್ಟಿಗೆ ಹಿಂದೆ ಅನುಭವಿಸಿದ್ದರ ಸ್ಮೃತಿಯೇ[1] ಅಲ್ಲವೆ? ಆದ್ದರಿಂದ ಸ್ವಪ್ನಜಾಗರಿತ ಸ್ಥಾನಗಳಿಗಿಂತ ವ್ಯತಿರಿಕ್ತವಾದ ಎರಡು ಲೋಕಗಳೂ ಇವೆ.

## ಸ್ವಪ್ನದಲ್ಲಿ ಆತ್ಮನು ಸ್ವಯಂಜ್ಯೋತಿಯಾಗಿರುತ್ತಾನೆ

(ಭಾಷ್ಯ)

೧೪೬. ಯತ್ ಆದಿತ್ಯಾದಿಬಾಹ್ಯಜ್ಯೋತಿಷಾಮ್ ಅಭಾವೇ ಅಯಂ ಕಾರ್ಯಕರಣಸಂಘಾತಃ ಪುರುಷೋ ಯೇನ ವ್ಯತಿರಿಕ್ತೇನ ಆತ್ಮನಾ ಜ್ಯೋತಿಷಾ ವ್ಯವಹರತೀತ್ಯುಕ್ತಮ್, ತದೇವ ನಾಸ್ತಿ ಯತ್ ಆದಿತ್ಯಾದಿಜ್ಯೋತಿಷಾಮಭಾವಗಮನಂ ಯತ್ರೇದಂ ವಿವಿಕ್ತಂ ಸ್ವಯಂಜ್ಯೋತಿರುಪಲಭ್ಯೇತ । ಯೇನ ಸರ್ವದೈವ ಅಯಂ ಕಾರ್ಯಕರಣಸಂಘಾತಃ ಸಂಸೃಷ್ಟ ಏವ ಉಪಲಭ್ಯತೇ । ತಸ್ಮಾತ್ ಅಸತ್ಸಮಃ ಅಸನ್ನೇವ ವಾ ಸ್ವೇನ ವಿವಿಕ್ತಸ್ವಭಾವೇನ ಜ್ಯೋತೀ

---

1. ಎಚ್ಚರದ ವಾಸನೆಯಿಂದಾಗುವದೆಂಬ ವ್ಯವಹಾರವನ್ನವಲಂಬಿಸಿ ಕನಸನ್ನು ಇಲ್ಲಿ ಸ್ಮೃತಿ ಎಂದಿದೆ. ಆದರೆ ಪರಮಾರ್ಥವಾಗಿ ಕನಸು ಸ್ಮೃತಿರೂಪವಾಗಿ ಅನುಭವಕ್ಕೆ ಬರುವದಿಲ್ಲ. ಮಾಂ. ಕಾ. ೪-೪೧ನ್ನು ನೋಡಿ.

ರೂಪೇಣ ಆತ್ಮಾ ಇತಿ । ಅಥ ಕ್ವಚಿತ್ ವಿವಿಕ್ತಃ ಸ್ವೇನ ಜ್ಯೋತೀರೂಪೇಣ ಉಪಲಭ್ಯೇತ ಬಾಹ್ಯಾಧ್ಯಾತ್ಮಿಕಭೂತಭೌತಿಕಸಂಸರ್ಗಶೂನ್ಯಃ, ತತೋ ಯಥೋಕ್ತಂ ಸರ್ವಂ ಭವಿಷ್ಯತಿ ಇತ್ಯೇತದರ್ಥಮ್ ಆಹ –ಸ ಯಃ ಪ್ರಕೃತ ಆತ್ಮಾ ಯತ್ರ ಯಸ್ಮಿನ್ ಕಾಲೇ ಪ್ರಸ್ವಪಿತಿ ಪ್ರಕರ್ಷೇಣ ಸ್ವಾಪಮ್ ಅನುಭವತಿ ತದಾ ಕಿಮುಪಾದಾನಃ ಕೇನ ವಿಧಿನಾ ಸ್ವಪಿತಿ ಸಂಧ್ಯಂ ಸ್ಥಾನಂ ಪ್ರತಿಪದ್ಯತ ಇತ್ಯುಚ್ಯತೇ । ಅಸ್ಯ ದೃಷ್ಟಸ್ಯ ಲೋಕಸ್ಯ ಜಾಗರಿತಲಕ್ಷಣಸ್ಯ ಸರ್ವಾವತಃ ಸರ್ವಮ್ ಅವತಿ ಇತಿ ಸರ್ವಾವಾನ್ ಅಯಂ ಲೋಕಃ ಕಾರ್ಯಕರಣ ಸಂಘಾತಃ ವಿಷಯವೇದನಾಸಂಯುಕ್ತಃ । ಸರ್ವಾವತ್ತ್ವಮಸ್ಯ ವ್ಯಾಖ್ಯಾತಮ್ ಅನ್ನತ್ರಯಪ್ರಕರಣೇ "ಅಥೋ ಅಯಂ ವಾ ಆತ್ಮಾ" (೧-೪-೧೬) ಇತ್ಯಾದಿನಾ । ಸರ್ವಾ ವಾ ಭೂತಭೌತಿಕಮಾತ್ರಾಃ ಅಸ್ಯ ಸಂಸರ್ಗಕಾರಣ ಭೂತಾ ವಿದ್ಯನ್ತೇ ಇತಿ ಸರ್ವವಾನ್ । ಸರ್ವವಾನೇವ ಸರ್ವಾವಾನ್ । ತಸ್ಯ ಸರ್ವಾವತಃ ಮಾತ್ರಾಮ್ ಏಕದೇಶಮ್ ಅವಯವಮ್ ಅಪಾದಾಯ ಅಪಚ್ಛಿದ್ಯ ಆದಾಯ ಗೃಹೀತ್ವಾ। ದೃಷ್ಟಜನ್ಮವಾಸನಾವಾಸಿತಃ ಸನ್ ಇತ್ಯರ್ಥಃ। ಸ್ವಯಮ್ ಆತ್ಮನೈವ ವಿಹತ್ಯ ದೇಹಂ ಪಾತಯಿತ್ವಾ ನಿಃಸಂಬೋಧತಾಮ್ ಆಪಾದ್ಯ । ಜಾಗರಿತೇ ಹಿ ಆದಿತ್ಯಾದೀನಾಂ ಚಕ್ಷುರಾದಿಷು ಅನುಗ್ರಹಃ, ದೇಹ ವ್ಯವಹಾರಾರ್ಥಃ । ದೇಹವ್ಯವಹಾರಶ್ಚ ಆತ್ಮನಃ ಧರ್ಮಾಧರ್ಮಫಲೋಪ ಭೋಗಪ್ರಯುಕ್ತಃ । ತದ್ಧರ್ಮಾಧರ್ಮಫಲೋಪಭೋಗೋಪರಮಣಮ್ ಅಸ್ಮಿನ್ ದೇಹೇ ಆತ್ಮಕರ್ಮೋಪರಮಕೃತಮ್ ಇತ್ಯತ್ಮಾ ಅಸ್ಯ ವಿಹನ್ತಾ ಉಚ್ಯತೇ । ಸ್ವಯಂ ನಿರ್ಮಾಯ ನಿರ್ಮಾಣಂ ಕೃತ್ವಾ, ವಾಸನಾಮಯಮ್ ಸ್ವಪ್ನದೇಹಂ ಮಾಯಾಮಯಮಿವ । ನಿರ್ಮಾಣಮಪಿ ತತ್ಕರ್ಮಾಪೇಕ್ಷತ್ವಾತ್ ಸ್ವಯಂಕರ್ತೃಕಮುಚ್ಯತೇ । ಸ್ವೇನ ಆತ್ಮೀಯೇನ ಭಾಸಾ ಮಾತ್ರೋಪಾದಾನ ಲಕ್ಷಣೇನ ಭಾಸಾ ದೀಪ್ತ್ಯಾ ಪ್ರಕಾಶೇನ । ಸರ್ವವಾಸನಾತ್ಮಕೇನ ಅನ್ತಃಕರಣ ವೃತ್ತಿಪ್ರಕಾಶೇನ ಇತ್ಯರ್ಥಃ। ಸಾ ಹಿ ತತ್ರ ವಿಷಯಭೂತಾ ಸರ್ವವಾಸನಾಮಯೀ ಪ್ರಕಾಶತೇ । ಸಾ ತತ್ರ ಸ್ವಂ[1] ಭಾಃ ಉಚ್ಯತೇ । ತೇನ ಸ್ವೇನ ಭಾಸಾ ವಿಷಯ ಭೂತೇನ ಸ್ವೇನ ಚ ಜ್ಯೋತಿಷಾ ತದ್ವಿಷಯಿಣಾ ವಿವಿಕ್ತರೂಪೇಣ ಅಲುಪ್ತದೃಕ್ಸ್ವ ಭಾವೇನ ತದ್ಭಾರೂಪಂ ವಾಸನಾತ್ಮಕಂ ವಿಷಯೀಕುರ್ವನ್ ಪ್ರಸ್ವಪಿತಿ । ಯದೇವಂ ವರ್ತನಂ ತತ್ ಪ್ರಸ್ವಪಿತಿ ಇತ್ಯುಚ್ಯತೇ । ಅತ್ರ ಏತಸ್ಯಾಮ್ ಅವಸ್ಥಾ ಯಾಮ್ ಏತಸ್ಮಿನ್ ಕಾಲೇ ಅಯಂ ಪುರುಷ ಆತ್ಮಾ ಸ್ವಯಮೇವ ವಿವಿಕ್ತ ಜ್ಯೋತಿರ್ಭವತಿ । ಬಾಹ್ಯಾಧ್ಯಾತ್ಮಿಕಭೂತಭೌತಿಕಸಂಸರ್ಗರಹಿತಂ ಜ್ಯೋತಿ ರ್ಭವತಿ । ನನು ಅಸ್ಯ ಲೋಕಸ್ಯ ಮಾತ್ರೋಪಾದಾನಂ ಕೃತಮ್ । ಕಥಂ ತಸ್ಮಿನ್ ಸತಿ ಅತ್ರಾಯಂ ಪುರುಷಃ ಸ್ವಯಂಜ್ಯೋತಿರ್ಭವತೀತ್ಯುಚ್ಯತೇ ? ನೈಷ

1. ಸ್ವಯಂ ಎಂಬುದು ಅಚ್ಚಿನ ತಪ್ಪು.

ದೋಷಃ। ವಿಷಯಭೂತಮೇವ ಹಿ ತತ್ । ತೇನೈವ ಚ ಅತ್ರಾಯಂ ಪುರುಷಃ ಸ್ವಯಂಜ್ಯೋತಿರ್ದರ್ಶಯಿತುಂ ಶಕ್ಯಃ। ನ ತು ಅನ್ಯಥಾ ಅಸತಿವಿಷಯೇ ಕಸ್ಮಿಂಶ್ಚಿತ್ ಸುಷುಪ್ತಕಾಲೇ ಇವ। ಯದಾ ಪುನಃ ಸಾ ಭಾಃ ವಾಸನಾತ್ಮಿಕಾ ವಿಷಯಭೂತಾ ಉಪಲಭ್ಯಮಾನಾ ಭವತಿ ತದಾ ಅಸಿಃ ಕೋಶಾದಿವ ನಿಷ್ಕೃಷ್ಟಃ ಸರ್ವಸಂಸರ್ಗರಹಿತಂ ಚಕ್ಷುರಾದಿಕಾರ್ಯಕರಣವ್ಯಾವೃತ್ತಸ್ವರೂಪಮ್ ಅಲುಪ್ತ ದೃಗಾತ್ಮಜ್ಯೋತಿಃ ಸ್ವೇನ ರೂಪೇಣ ಅವಭಾಸಯತ್ ಗೃಹ್ಯತೇ। ತೇನ ಅತ್ರಾಯಂ ಪುರುಷಃ ಸ್ವಯಂಜ್ಯೋತಿರ್ಭವತೀತಿ ಸಿದ್ಧಮ್ ॥

(ಭಾಷ್ಯಾರ್ಥ)

ಆದಿತ್ಯನೇ ಮುಂತಾದ ಹೊರಗಿನ ಜ್ಯೋತಿಗಳು ಇಲ್ಲದಿರುವಾಗ ಈ ಕಾರ್ಯಕರಣಸಂಘಾತವೆಂಬ ಪುರುಷನು ಯಾವ ವ್ಯತಿರಿಕ್ತವಾದ ಆತ್ಮನೆಂಬ ಜ್ಯೋತಿಯಿಂದ ವ್ಯವಹರಿಸುತ್ತಾನೆ ಎಂದು ಹೇಳಿತಲ್ಲ, ಆದಿತ್ಯಾದಿಜ್ಯೋತಿಗಳು ಇಲ್ಲವಾಗುವದೆಂಬ ಅದೇ ಇಲ್ಲ, (ಹಾಗಿದ್ದರಲ್ಲವೆ,) ಅಲ್ಲಿ ಈ ವಿವಿಕ್ತವಾದ ಸ್ವಯಂಜ್ಯೋತಿಯು ಕಂಡುಬಂದೀತು ? ಏಕೆಂದರೆ ಯಾವಾಗಲೂ ಈ ಕಾರ್ಯಕರಣಸಂಘಾತವು (ಆದಿತ್ಯಾದಿಜ್ಯೋತಿಃ)ಸಂಬದ್ಧವಾಗಿಯೇ ಕಂಡುಬರುತ್ತಿರುತ್ತದೆ. ಆದ್ದರಿಂದ ತನ್ನ ವಿವಿಕ್ತವಾದ ಸ್ವಭಾವವುಳ್ಳ ಜ್ಯೋತೀರೂಪದಿಂದ (ಇರುವ) ಈ ಆತ್ಮನು ಅಸತ್ಸಮನೇ ಆಗಿರುತ್ತಾನೆ, ಅಥವಾ ಇಲ್ಲವೇ ಇಲ್ಲ. ಹೀಗಲ್ಲದೆ ಎಲ್ಲಿಯಾದರೂ ಪಿಂಗಡವಾಗಿ ತನ್ನ ಜ್ಯೋತಿಯ ರೂಪದಿಂದ ಹೊರಗಿನ ಮತ್ತು ಒಳಗಿನ ಭೂತಭೌತಿಕಗಳ ಸಂಬಂಧರಹಿತನಾಗಿ ಕಂಡುಬರುತ್ತಾನೆಂದಾದರೆ, ಆಗ (ಮೇಲೆ) ಹೇಳಿರುವವೆಲ್ಲವೂ ಆಗಬಹುದಾಗುತ್ತದೆ. (ಆದ್ದರಿಂದ) ಈ ಪ್ರಯೋಜನಕ್ಕಾಗಿ (ಹೀಗೆಂದು) ಹೇಳುತ್ತಾನೆ :

ಪ್ರಕೃತನಾದ ಆತ್ಮನಿದಾನಲ್ಲ ಅವನು, ಎಲ್ಲಿ ಯಾವ ಕಾಲದಲ್ಲಿ, ಪ್ರಸ್ವಾಪ ಮಾಡುತ್ತಾನೋ ಪ್ರಕರ್ಷದಿಂದ ಸ್ವಪ್ನವನ್ನು ಅನುಭವಿಸುತ್ತಿರುತ್ತಾನೋ, ಆಗ ಏನನ್ನು ತೆಗೆದುಕೊಂಡು ಯಾವ ರೀತಿಯಿಂದ ಸ್ವಾಪಮಾಡುತ್ತಾನೆ, ಸಂಧ್ಯಸ್ಥಾನವನ್ನು ಹೊಂದುತ್ತಾನೆ ? ಎಂದರೆ ಹೇಳುತ್ತಾನೆ : ಈ ದೃಷ್ಟವಾದ ಜಾಗರಿತವೆಂಬ ಲೋಕದ– ಸರ್ವಾವಂತವಾದ (ಎಂಬಲ್ಲಿ) ಎಲ್ಲವನ್ನೂ ಕಾಪಾಡುವದರಿಂದ ಸರ್ವಾವಂತವು, ಈ ವಿಷಯವೇದನೆಗಳಿಂದೊಡಗೂಡಿರುವ ಕಾರ್ಯಕರಣಸಂಘಾತವೆಂಬ ಲೋಕವು. ಇದು ಸರ್ವಾವಂತವೆಂಬುದನ್ನು ಅನ್ನತ್ರಯ ಪ್ರಕರಣದಲ್ಲಿ "ಈಗ ಈ ಆತ್ಮನೇ" (೧–೪–೧೭) ಮುಂತಾದದ್ದರಿಂದ ವಿವರವಾಗಿ ಹೇಳಿರುತ್ತದೆ. ಅಥವಾ ಸಂಬಂಧಕ್ಕೆ ಕಾರಣವಾಗಿರುವ ಭೂತಭೌತಿಕ ಮಾತ್ರೆಗಳೆಲ್ಲವೂ ಇದಕ್ಕೆ ಇವೆಯಾದ್ದರಿಂದ (ಇದಕ್ಕೆ) ಸರ್ವವಂತ(ವೆಂದು ಹೆಸರು) ; ಸರ್ವವಂತವನ್ನೇ ಸರ್ವಾವಂತವು (ಎಂದು ಸ್ವಾರ್ಥಪ್ರತ್ಯಯವನ್ನು ಸೇರಿಸಿ ಕರೆದಿದೆ). ಆ –ಸರ್ವಾವಂತವಾದ (ಲೋಕದ) ಮಾತ್ರೆಯನ್ನು ಎಂದರೆ

ಏಕದೇಶವನ್ನು, ಅವಯುವವನ್ನು, (ಅಪಾದಾಯ=ಅಪಚ್ಛಿದ್ಯ, ಆದಾಯ) ಬಿಡಿಸಿ ತೆಗೆದುಕೊಂಡು ; (ಈಗ) ಕಂಡಿರುವ ಜನ್ಮದ ವಾಸನೆಯಿಂದ ವಾಸಿತನಾಗಿ[1] ಎಂದರ್ಥ ಗ್ರಹಿಸಿಕೊಂಡು ತಾನೇ ತನ್ನಿಂದಲೇ ದೇಹವನ್ನು ಬದಿಗಿಟ್ಟು ದೇಹವನ್ನು ಕೆಡಹಿ. ಎಚ್ಚರವಿಲ್ಲದಂತೆ ಮಾಡಿಕೊಂಡು– ಎಚ್ಚರ(ದವಸ್ಥೆ)ಯಲ್ಲಿ ಆದಿತ್ಯಾದಿಗಳ ಅನುಗ್ರಹವು ಚಕ್ಷುರಾದಿಗಳಲ್ಲಿ ಆಗುತ್ತಿರುವದು ದೇಹವ್ಯವಹಾರಕ್ಕಷ್ಟೆ, (ಆ) ದೇಹವ್ಯವಹಾರವೋ ತನ್ನ ಧರ್ಮಾಧರ್ಮಗಳ ಫಲಗಳನ್ನು ಉಪಭೋಗಮಾಡುವದಕ್ಕಾಗಿ ; ಆ ಧರ್ಮಾಧರ್ಮಫಲಗಳ ಉಪಭೋಗವು ಈ ದೇಹದಲ್ಲಿ ನಿಂತುಹೋಗುವದೆಂಬುದು ತನ್ನ ಕರ್ಮವು ಮುಗಿದದ್ದರಿಂದಲಾದ್ದರಿಂದ ಆತ್ಮನು ಇದರ ವಿಹಂತೃ (ಕಡಹುವವನು) ಎಂದಿದೆ– ತಾನೇ ನಿರ್ಮಿಸಿಕೊಂಡು ವಾಸನಾಮಯವಾದ ಮಾಯಾಮಯ(ದೇಹ)ದಂತಿರುವ ಸ್ವಪ್ನದೇಹವನ್ನು ನಿರ್ಮಾಣಮಾಡಿಕೊಂಡು– ನಿರ್ಮಾಣವೂ ತನ್ನ ಕರ್ಮದ ಅಪೇಕ್ಷೆಯಿಂದಲೇ ಆಗುವದರಿಂದ ತಾನೇ ಮಾಡಿದ್ದು ಎಂದಿದೆ[2]– ತನ್ನ ತನಗೆ ಸೇರಿದ ಭಾಸದಿಂದ ಮಾತ್ರೆಯನ್ನು ತೆಗೆದುಕೊಂಡದ್ದೆಂಬ ಭಾಸದಿಂದ ದೀಪ್ತಿಯಿಂದ ಬೆಳಕಿನಿಂದ, ಸರ್ವವಾಸನಾರೂಪವಾದ ಅಂತಃಕರಣವೃತ್ತಿಯ ಪ್ರಕಾಶದಿಂದ[3] ಎಂದರ್ಥ , ಅಲ್ಲಿ ಸರ್ವವಾಸನಾಮಯವಾದ ಅದು ವಿಷಯವಾಗಿ ತೋರುತ್ತಿರುವದಲ್ಲವೆ, (ಆದ್ದರಿಂದ) ಅವನ್ನು ಅಲ್ಲಿ ತನ್ನ ಭಾಸವೆಂದು ಕರೆದಿದೆ. ಆ ವಿಷಯರೂಪವಾದ ತನ್ನಭಾಸದಿಂದಲೂ –ಮತ್ತು ತನ್ನ ಜ್ಯೋತಿಯಿಂದಲೂ ಆ (ಭಾಸಕ್ಕೆ) ವಿಷಯಿಯಾಗಿ ಬಿಂಗಡವಾಗಿರುವ ಸ್ವರೂಪವುಳ್ಳ ಎಂದಿಗೂ ಲೋಪವಾಗದ ದೃಕ್ಸ್ವಭಾವದ (ಜ್ಯೋತಿಯಿಂದ) ಆ ವಾಸನಾತ್ಮಕವಾದ ಭಾರೂಪವನ್ನು ವಿಷಯೀಕರಿಸುತ್ತಾ ಪ್ರಸ್ವಾಪಮಾಡುತ್ತಿರುತ್ತಾನೆ.[4] ಹೀಗೆ ಇರುವದಿದೆಯಲ್ಲ, ಇದನ್ನು (ಪ್ರಸ್ವಪಿತಿ) ತೆದ್ರಿಸುತ್ತಿರುತ್ತಾನೆ ಎಂದಿದೆ.

---

1 ಭೂತಮಾತ್ರೆಯನ್ನು ಸ್ವತಂತ್ರವಾಗಿ ತೆಗೆದುಕೊಳ್ಳುವದಿಲ್ಲ, ಅದರ ವಾಸನೆಯಿಂದ ವಾಸಿತನಾಗಿ ಕನಸಿಗೆ ಬರುವದನ್ನೇ ಇಲ್ಲಿ ಮಾತ್ರೆಯನ್ನು ತೆಗೆದುಕೊಂಡು ಎಂದು ಹೇಳಿದೆ– ಎಂದು ಭಾವ.

2. ಈ ದೇಹವನ್ನು ತಾನೇ ಕೆಡಹಿದ್ದಾಗಲಿ, ಸ್ವಪ್ನದಲ್ಲಿ ಮತ್ತೊಂದು ದೇಹವನ್ನು ತಾನೇ ನಿರ್ಮಿಸಿಕೊಂಡದ್ದಾಗಲಿ ಅನುಭವದಲ್ಲಿಲ್ಲವಾದರೂ ದೇಹವೆಂಬುದು ಧರ್ಮಾಧರ್ಮಗಳ ಫಲಭೋಗಕ್ಕಾಗಿ ಏರ್ಪಡತಕ್ಕದ್ದು ; ಆ ಧರ್ಮಾಧರ್ಮಗಳನ್ನು ತಾನೇ ಮಾಡಿರುವದರಿಂದ ತಾನೇ ಕೆಡಹಿ, ತಾನೇ ನಿರ್ಮಿಸಿಕೊಂಡು– ಎಂದಿದೆ ಎಂದರ್ಥ.

3. ಅಂತಃಕರಣದಲ್ಲಿ ಆತ್ಮಚೈತನ್ಯದ ಪ್ರಕಾಶವು ಹೊಳೆದು ತೋರುತ್ತಿರುವದರಿಂದ ಅದರ ವೃತ್ತಿಗಳನ್ನೇ ಇಲ್ಲಿ 'ತನ್ನ ಭಾಸ'ವೆಂದು ಕರೆದಿದೆ ಎಂದರ್ಥ.

4. ವಿಷಯವಾದ ಅಂತಃಕರಣವನ್ನು ವಿಷಯಿಯಾಗಿ ಬೆಳಗುವದೇ ಆತ್ಮಜ್ಯೋತಿಯು.

ಇಲ್ಲಿ ಈ ಅವಸ್ಥೆಯಲ್ಲಿ ಈ ಕಾಲದಲ್ಲಿ[1] ಈ ಪುರುಷನು ಆತ್ಮನು, ತಾನೇ ವಿಂಗಡವಾಗಿರುವ ಜ್ಯೋತಿಯಾಗಿರುತ್ತಾನೆ, ಹೊರಗಿನ ಭೂತಭೌತಿಕಗಳ ಸಂಬಂಧರಹಿತವಾಗಿರುವ ಜ್ಯೋತಿಯಾಗಿರುತ್ತಾನೆ.

(ಆಕ್ಷೇಪ) – ಈ ಲೋಕದ ಮಾತ್ರೆಯನ್ನು ತೆಗೆದುಕೊಂಡಿದ್ದನಲ್ಲ! ಅದು ಇರುವಲ್ಲಿ, ಇಲ್ಲಿ ಈ ಪುರುಷನು ಸ್ವಯಂಜ್ಯೋತಿಯಾಗಿರುತ್ತಾನೆ ಎಂದು ಹೇಳುವದು ಹೇಗೆ (ಸರಿ)?

(ಪರಿಹಾರ):– ಇದೇನೂ ದೋಷವಲ್ಲ. ಏಕೆಂದರೆ ಅದು ವಿಷಯವಾಗಿಯೇ ಇರುತ್ತದೆ. ಆದ್ದರಿಂದಲೇ ಈ ಪುರುಷನು ಸ್ವಯಂಜ್ಯೋತಿ ಎಂದು ತೋರಿಸಿಕೊಡುವದು ಶಕ್ಯವಾಗಿರುತ್ತದೆ, ಹೀಗಲ್ಲದೆ ವಿಷಯವೇ ಇಲ್ಲದ ಸುಷುಪ್ತಿಕಾಲದಂಥ (ಮತ್ತೆ) ಯಾವ (ಅವಸ್ಥೆಯಲ್ಲಿಯೂ ಹೀಗೆ ತೋರಿಸಿಕೊಡುವದು ಶಕ್ಯ)ವಲ್ಲ[2]. ಆದರೆ ಯಾವಾಗ ಆ ವಾಸನಾತ್ಮಕವಾದ ಭಾಸವು ವಿಷಯಭೂತವಾಗಿ ತೋರಿಬರುತ್ತಿರುವದೋ– ಆಗ ಒರೆಯಿಂದ ಹಿರಿದ ಕತ್ತಿಯಂತೆ, ಯಾವ ಸಂಬಂಧವೂ ಇಲ್ಲದ ಚಕ್ಷುವೇ ಮುಂತಾದ ಕಾರ್ಯಕರಣಗಳಿಂದ ಬೇರ್ಪಟ್ಟ ಸ್ವರೂಪವುಳ್ಳ ಅಲುಪ್ತದೃಗ್ರೂಪವಾದ ಆತ್ಮಜ್ಯೋತಿಯು ತನ್ನ ರೂಪದಿಂದ ಬೆಳಗುತ್ತಿರುವದು ಗೊತ್ತಾಗುತ್ತದೆ. ಆದ್ದರಿಂದ ಇಲ್ಲಿ ಈ ಪುರುಷನು ಸ್ವಯಂಜ್ಯೋತಿಯಾಗಿರುತ್ತಾನೆ– ಎಂದು ಸಿದ್ಧವಾಯಿತು.

## ಸ್ವಪ್ನದಲ್ಲಿ ಆತ್ಮನು ಸೃಜಿಸಿಕೊಳ್ಳುವ ಪ್ರಪಂಚ

(ಉಪನಿಷತ್ತು)

**ನ ತತ್ರ ರಥಾ ನ ರಥಯೋಗಾ ನ ಪನ್ಥಾನೋ ಭವನ್ತ್ಯಥ ರಥಾನ್ ರಥಯೋಗಾನ್ ಪಥಃ ಸೃಜತೇ ನ ತತ್ರಾಽಽನನ್ದಾ ಮುದಃ ಪ್ರಮುದೋ ಭವನ್ತ್ಯಥಾಽಽನನ್ದಾನ್ ಮುದಃ ಪ್ರಮುದಃ ಸೃಜತೇ ನ ತತ್ರ ವೇಶಾನ್ತಾಃ ಪುಷ್ಕರಿಣ್ಯಃ ಸ್ರವನ್ತ್ಯೋ ಭವನ್ತ್ಯಥ ವೇಶಾನ್ತಾನ್ ಪುಷ್ಕರಿಣೀಃ ಸ್ರವನ್ತೀಃ ಸೃಜತೇ ಸ ಹಿ ಕರ್ತಾ ॥ ೧೦ ॥**

---

1. ಆತ್ಮಜ್ಯೋತಿಯು ಯಾವಾಗಲೂ ಸ್ವಯಂಜ್ಯೋತಿಯೇ ಆದರೂ ಆದಿತ್ಯಾದಿಗಳ ಮತ್ತು ಕರಣಾದಿಗಳ ಸಹಾಯವಿಲ್ಲದೆ ಬೆಳಗುವದೆಂದು ಈ ಕಾಲದಲ್ಲಿ ಸ್ಫುಟವಾಗಿರುತ್ತದೆ ಎಂದರ್ಥ. ಇದನ್ನು ಮುಂದೆ ಭಾಷ್ಯದಲ್ಲಿಯೇ ಸ್ಪಷ್ಟಗೊಳಿಸಿದೆ.

2. ಏಕೆಂದರೆ ಸುಷುಪ್ತಿಯಲ್ಲಿ ಜ್ಯೋತಿಯಿಂದ ಬೇರೆಯಾಗಲ್ಪಡತಕ್ಕದ್ದೇ ಯಾವದೂ ಇಲ್ಲ ಎಂದು ಭಾವ. ಸುಷುಪ್ತಿಯ ಅನುಭವವು ಸ್ವಯಂಜ್ಯೋತಿಯಾಗಿರುವದರಿಂದಲೇ ಆ ಅವಸ್ಥೆಯ ಅನುಭವವಾಗಿದ್ದರೂ ಲೌಕಿಕದೃಷ್ಟಿಯಿಂದ ಸುಷುಪ್ತಿಯಲ್ಲಿ ಜ್ಞಾನವೇ ಇಲ್ಲವಾದ್ದರಿಂದ ಅಲ್ಲಿ ಸ್ವಯಂಜ್ಯೋತಿಷ್ಟ್ವವನ್ನು ತೋರಿಸಿಕೊಡುವದು ಸುಲಭವಲ್ಲವೆಂಬ ಕಾರಣದಿಂದ ಹೀಗೆಂದಿದೆ ಪ್ರ. ಭಾ. ೪-೫ (ಭಾ. ಭಾ. ೬೬)ನೋಡಿ.

೧೦. ಅಲ್ಲಿ ರಥಗಳಿರುವದಿಲ್ಲ, ರಥಯೋಗಗಳಿರುವದಿಲ್ಲ. ಹಾದಿಗಳಿರುವದಿಲ್ಲ; ಆದರೂ ರಥಗಳನ್ನೂ ರಥಯೋಗಗಳನ್ನೂ ಹಾದಿಗಳನ್ನೂ ಸೃಜಿಸಿಕೊಳ್ಳುತ್ತಾನೆ. ಅಲ್ಲಿ ಆನಂದಗಳಿರುವದಿಲ್ಲ, ಮೋದಗಳಿರುವದಿಲ್ಲ, ಪ್ರಮೋದಗಳಿರುವದಿಲ್ಲ; ಆದರೂ ಆನಂದಗಳನ್ನೂ ಮೋದಗಳನ್ನೂ ಪ್ರಮೋದಗಳನ್ನೂ ಸೃಜಿಸಿಕೊಳ್ಳುತ್ತಾನೆ. ಅಲ್ಲಿ ಕೆರೆಗಳಿರುವದಿಲ್ಲ, ಕಟ್ಟೆಯ ಭಾವಿಗಳಿರುವದಿಲ್ಲ, ನದಿಗಳಿರುವದಿಲ್ಲ; ಆದರೂ ಕೆರೆಗಳನ್ನೂ ಕಟ್ಟೆಯ ಭಾವಿಗಳನ್ನೂ ನದಿಗಳನ್ನೂ ಸೃಜಿಸಿಕೊಳ್ಳುತ್ತಾನೆ. ಅವನೇ ಕರ್ತೃವಲ್ಲವೆ?

## ಸ್ವಪ್ನದಲ್ಲಿ ಕೇವಲ ವಾಸನಾಮಯವಾದ ಸೃಷ್ಟಿ

(ಭಾಷ್ಯ)

೧೮೭. ನನ್ವತ್ರ ಕಥಂ ಪುರುಷಃ ಸ್ವಯಂಜ್ಯೋತಿಃ? ಯೇನ ಜಾಗರಿತ ಇವ ಗ್ರಾಹ್ಯಗ್ರಾಹಕಾದಿಲಕ್ಷಣಃ ಸರ್ವೋ ವ್ಯವಹಾರೋ ದೃಶ್ಯತೇ। ಚಕ್ಷುರಾದ್ಯನುಗ್ರಾಹಕಾಶ್ಚ ಆದಿತ್ಯಾದ್ಯಾ ಲೋಕಾಃ ತಥೈವ ದೃಶ್ಯನ್ತೇ ಯಥಾ ಜಾಗರಿತೇ। ತತ್ರ ಕಥಂ ವಿಶೇಷಾವಧಾರಣಂ ಕ್ರಿಯತೇ ಅತ್ರ ಅಯಂ ಪುರುಷಃ ಸ್ವಯಂಜ್ಯೋತಿರ್ಭವತೀತಿ। ಉಚ್ಯತೇ। ವೈಲಕ್ಷಣ್ಯಾತ್ ಸ್ವಪ್ನದರ್ಶನಸ್ಯ। ಜಾಗರಿತೇ ಹಿ ಇನ್ದ್ರಿಯಬುದ್ಧಿಮನಆಲೋಕಾದಿವ್ಯಾಪಾರಸಂಕೀರ್ಣಮ್ ಆತ್ಮಜ್ಯೋತಿಃ। ಇಹ ತು ಸ್ವಪ್ನೇ ಇನ್ದ್ರಿಯಾಭಾವಾತ್ ತದನುಗ್ರಾಹಕಾದಿತ್ಯಾದ್ಯಾಲೋಕಾಭಾವಾಚ್ಚ ವಿವಿಕ್ತಂ ಕೇವಲಂ ಭವತಿ। ತಸ್ಮಾತ್ ವಿಲಕ್ಷಣಮ್। ನನು ತಥೈವ ವಿಷಯಾ ಉಪಲಭ್ಯನ್ತೇ ಸ್ವಪ್ನೇಽಪಿ ಯಥಾ ಜಾಗರಿತೇ। ತತ್ರ ಕಥಮ್ ಇನ್ದ್ರಿಯಾಭಾವಾತ್ ವೈಲಕ್ಷಣ್ಯಮುಚ್ಯತೇ ಇತಿ?

ಶೃಣು। ನ ತತ್ರ ವಿಷಯಾಃ ಸ್ವಪ್ನೇ ರಥಾದಿಲಕ್ಷಣಾಃ। ತಥಾ ನ ರಥಯೋಗಾಃ ರಥೇಷು ಯುಜ್ಯನ್ತ ಇತಿ ರಥಯೋಗಾಃ ಅಶ್ವಾದಯಃ ತತ್ರ ನ ವಿದ್ಯನ್ತೇ। ನ ಚ ಪನ್ಥಾನಃ ರಥಮಾರ್ಗಾ ಭವನ್ತಿ। ಅಥ ರಥಾನ್ ರಥಯೋಗಾನ್ ಪಥಶ್ಚ ಸೃಜತೇ ಸ್ವಯಮ್। ಕಥಂ ಪುನಃ ಸೃಜತೇ ರಥಾದಿಸಾಧನಾನಾಂ ವೃಕ್ಷಾದೀನಾಮಭಾವೇ? ಉಚ್ಯತೇ। ನನೂಕ್ತಮ್ "ಅಸ್ಯ ಲೋಕಸ್ಯ ಸರ್ವಾವತೋ ಮಾತ್ರಾಮ್ ಅಪಾದಾಯ ಸ್ವಯಂ ವಿಹತ್ಯ ಸ್ವಯಂ ನಿರ್ಮಾಯ" (೪-೩-೯) ಇತಿ। ಅನ್ತಃಕರಣವೃತ್ತಿಃ ಅಸ್ಯ ಲೋಕಸ್ಯ ವಾಸನಾಮಾತ್ರಾ। ತಾಮ್ ಅಪಾದಾಯ ರಥಾದಿವಾಸನಾರೂಪಾನ್ತಃಕರಣವೃತ್ತಿಃ ತದುಪಲಬ್ಧಿನಿಮಿತ್ತೇನ ಕರ್ಮಣಾ ಚೋದ್ಯಮಾನಾ ದೃಶ್ಯತ್ವೇನ ವ್ಯವತಿಷ್ಠತೇ ತದುಚ್ಯತೇ ಸ್ವಯಂ ನಿರ್ಮಾಯ ಇತಿ। ತದೇವಾಹ ರಥಾದೀನ್

ಸೃಜತ ಇತಿ । ನ ತು ತತ್ರ ಕರಣಂ ವಾ ಕರಣಾನುಗ್ರಾಹಕಾಣಿ ವಾ ಆದಿತ್ಯಾದಿ ಜ್ಯೋತೀಂಷಿ ತದವಭಾಸ್ಯಾ ವಾ ರಥಾದಯೋ ವಿಷಯಾಃ ವಿದ್ಯನ್ತೇ । ತದ್ವಾಸನಾಮಾತ್ರಂ ತು ಕೇವಲಂ ತದುಪಲಬ್ಧಿಕರ್ಮನಿಮಿತ್ತಚೋದಿತೋದ್ಭೂತಾನ್ತಃಕರಣವೃತ್ತ್ಯಾಶ್ರಯಂ ದೃಶ್ಯತೇ । ತದಸ್ಯ ಜ್ಯೋತಿಷೋ ದೃಶ್ಯತೇ ಅಲುಪ್ತದೃಶಃ ತದಾತ್ಮಜ್ಯೋತಿಃ ಅತ್ರ ಕೇವಲಮ್ ಅಸಿರಿವ ಕೋಶಾತ್ ವಿವಿಕ್ತಮ್ । ತಥಾ ನ ತತ್ರ ಆನನ್ದಾಃ ಸುಖವಿಶೇಷಾಃ, ಮುದಃ ಹರ್ಷಾಃ ಪುತ್ರಾದಿಲಾಭನಿಮಿತ್ತಾಃ, ಪ್ರಮುದಃ ತ ಏವ ಪ್ರಕರ್ಷೋಪೇತಾಃ । ಅಥ ಚ ಆನನ್ದಾದೀನ್ ಸೃಜತೇ । ತಥಾ ನ ತತ್ರ ವೇಶಾನ್ತಾಃ ಪಲ್ವಲಾಃ ಪುಷ್ಕರಿಣ್ಯಃ ತಡಾಗಾಃ ಸ್ರವನ್ತ್ಯಃ ನದ್ಯಃ ಭವನ್ತಿ । ಅಥ ಚ ವೇಶಾನ್ತಾದೀನ್ ಸೃಜತೇ ವಾಸನಾಮಾತ್ರರೂಪಾನ್ ॥

(ಭಾಷ್ಯಾರ್ಥ)

(ಆಕ್ಷೇಪ):- ಇಲ್ಲಿ ಪುರುಷನು ಸ್ವಯಂಜ್ಯೋತಿಯಾಗಿರುತ್ತಾನೆಂಬುದು ಹೇಗೆ? ಎಚ್ಚರದಲ್ಲಿ ಹೇಗೋ ಹಾಗೆ (ಇಲ್ಲಿಯೂ) ಗ್ರಾಹ್ಯಗ್ರಾಹಕಾದಿರೂಪವಾದ ವ್ಯವಹಾರವೆಲ್ಲ ಕಾಣಿಸುತ್ತಿರುವದಲ್ಲ! ಚಕ್ಷುರಾದಿಗಳಿಗೆ ಅನುಗ್ರಾಹಕವಾದ ಆದಿತ್ಯಾದಿಗಳ ಬೆಳಕುಗಳೂ ಎಚ್ಚರದಲ್ಲಿ ಹೇಗೋ ಹಾಗೆಯೇ ಕಾಣಿಸುತ್ತಿರುವವಲ್ಲ! ಹೀಗಿರುವಲ್ಲಿ 'ಇಲ್ಲಿ ಇವನು ಸ್ವಯಂಜ್ಯೋತಿಯಾಗಿರುತ್ತಾನೆ' ಎಂದು ವಿಶೇಷವಾಗಿ ಅವಧಾರಣೆಮಾಡಿರುವದು ಹೇಗೆ (ಸರಿ)?

(ಪರಿಹಾರ):- (ಇದಕ್ಕೆ) ಹೇಳುತ್ತೇವೆ. ಏಕೆಂದರೆ ಸ್ವಪ್ನದರ್ಶನವು ವಿಲಕ್ಷಣವಾಗಿರುತ್ತದೆ[1]. (ಇದರ ವಿವರ): ಎಚ್ಚರದಲ್ಲಿ ಇಂದ್ರಿಯಗಳು, ಬುದ್ಧಿ, ಮನಸ್ಸು, ಬೆಳಕು- ಮುಂತಾದವುಗಳ ವ್ಯಾಪಾರದಿಂದ ಆತ್ಮಜ್ಯೋತಿಯು ಮಿಶ್ರಿತವಾಗಿರುತ್ತದೆ. ಆದರೆ ಸ್ವಪ್ನದಲ್ಲಿಯಾದರೋ ಇಂದ್ರಿಯಗಳಿಲ್ಲದಿರುವದರಿಂದಲೂ ಅವುಗಳಿಗೆ ಅನುಗ್ರಾಹಕವಾದ ಆದಿತ್ಯಾದಿಗಳ ಬೆಳಕುಗಳೂ ಇಲ್ಲದಿರುವದದಿಂದಲೂ ವಿಂಗಡವಾಗಿ ತಾನೊಂದೇ ಇದ್ದುಕೊಂಡಿರುತ್ತದೆ. ಆದ್ದರಿಂದ (ಅದಕ್ಕಿಂತ ಇದು) ವಿಲಕ್ಷಣ(ವಾದದ್ದು).

---

1. ಇಲ್ಲಿ ಜಾಗ್ರತ್ಸ್ವಪ್ನಗಳಿಗೆ ಹೇಳಿರುವ ತಾರತಮ್ಯವು ಜಾಗ್ರದ್ದೃಷ್ಟಿಯಿಂದ ಹೇಳಿದ್ದು. ಜಾಗ್ರತ್ತಿನಲ್ಲಿರುವ ಆದಿತ್ಯಾದಿಗಳು ಸತ್ಯವೆಂದಿಟ್ಟುಕೊಂಡಿರುವದರಿಂದ ಆತ್ಮನ ಸ್ವಯಂಜ್ಯೋತಿಷ್ಟ್ವವನ್ನು ತೋರಿಸುವದಕ್ಕೆ ಆಗುವದಿಲ್ಲವೆಂದು ಸ್ವಪ್ನಕ್ಕೆ ಬಂದಿದೆ. ಆದ್ದರಿಂದ ಪರಮಾರ್ಥದೃಷ್ಟಿಯಿಂದ ಜಾಗ್ರತ್ಸ್ವಪ್ನಗಳೆರಡೂ ಒಂದೇ ಎಂದು ಪ್ರತಿಪಾದಿಸಿರುವ ಮಾಂಡೂಕ್ಯಕಾರಿಕೆಯ ವೈತಥ್ಯಪ್ರಕರಣಕ್ಕೂ ಇದಕ್ಕೂ ವಿರೋಧವಿಲ್ಲ. ಸೂ. ಭಾ. ೨-೨-೨೯ (ಭಾ. ಭಾ. ೬೧) ರಲ್ಲಿ ಹೇಳಿರುವ ತಾರತಮ್ಯವೂ ಹೀಗೆಯೇ ಎಚ್ಚರದ ದೃಷ್ಟಿಯಿಂದಲೇ ಹೇಳಿದ್ದು. ಇಲ್ಲಿಯೂ ಮುಂದೆ ಜಾಗ್ರತ್ಸ್ವಪ್ನಗಳು ಸಮವೆಂದು ಶ್ರುತಿಯ ಆಧಾರದಿಂದ ೪-೩-೧೪ರ ಭಾಷ್ಯ (ಭಾ. ಭಾ. ೨೦೩)ದಲ್ಲಿ ಪ್ರತಿಪಾದಿಸಲಾಗುವದು.

(ಆಕ್ಷೇಪ):- ಎಚ್ಚರದಲ್ಲಿ ಹೇಗೋ ಹಾಗೆಯೇ ಸ್ವಪ್ನದಲ್ಲಿಯೂ ವಿಷಯಗಳು ಕಾಣಿಸುತ್ತಿರುವವಲ್ಲ! ಹೀಗಿರುವಲ್ಲಿ ಇಂದ್ರಿಯಗಳಿಲ್ಲದ್ದರಿಂದ ವೈಲಕ್ಷಣ್ಯವನ್ನು ಹೇಳಿದ್ದು ಹೇಗೆ ಸರಿ?

(ಪರಿಹಾರ):- ಕೇಳು. ಅಲ್ಲಿ ಸ್ವಪ್ನದಲ್ಲಿ ರಥವೇ ಮುಂತಾದ ವಿಷಯಗಳಿರುವದಿಲ್ಲ, ಹಾಗೂ ರಥಯೋಗಗಳೂ ಇರುವದಿಲ್ಲ, ಗಾಡಿಗೆ ಕಟ್ಟುವದರಿಂದ ಕುದುರೆಯೇ ಮುಂತಾದ (ಪ್ರಾಣಿಗಳಿಗೆ) ರಥಯೋಗಗಳು (ಎಂದು ಹೆಸರು. ಅವೂ) ಅಲ್ಲಿರುವದಿಲ್ಲ. ಹಾದಿಗಳಿರುವದಿಲ್ಲ, ಗಾಡಿಗಳ ದಾರಿಗಳೂ (ಇರುವದಿಲ್ಲ) ಆದರೂ ರಥಗಳನ್ನೂ ರಥಯೋಗಗಳನ್ನೂ ಹಾದಿಗಳನ್ನೂ ತಾನೇ ಸೃಜಿಸಿಕೊಳ್ಳುತ್ತಾನೆ

(ಆಕ್ಷೇಪ):- ರಥವೇ ಮುಂತಾದವುಗಳಿಗೆ ಬೇಕಾದ ಮರವೇ ಮುಂತಾದವುಗಳಿಲ್ಲದಿರುವಲ್ಲಿ ಹೇಗೆ ಸೃಜಿಸಿಕೊಳ್ಳುತ್ತಾನೆ?

(ಪರಿಹಾರ):- ಹೇಳುತ್ತೇವೆ 'ಈ ಲೋಕದ ಸರ್ವಾವಂತವಾದ ಮಾತ್ರೆಯನ್ನು ತೆಗೆದುಕೊಂಡು ತಾನೇ ಬದಿಗಿಟ್ಟು ತಾನೇ ನಿರ್ಮಿಸಿಕೊಂಡು' (೪-೩-೯) ಎಂದು (ಹಿಂದೆ) ಹೇಳಿದೆಯಲ್ಲವೆ? ಅಂತಃಕರಣದ ವೃತ್ತಿಯಾದ ವಾಸನೆಯೇ ಈ ಲೋಕದ ಮಾತ್ರೆ; ಆದನ್ನು ತೆಗೆದುಕೊಂಡು ರಥಾದಿಗಳ ವಾಸನೆಯು ರೂಪವಾದ[1] ಅಂತಃಕರಣವೃತ್ತಿಯು ಅದನ್ನು ಕಾಣುವದಕ್ಕೆ ನಿಮಿತ್ತವಾದ ಕರ್ಮದಿಂದ ಪ್ರೇರಿತವಾಗಿ ದೃಶ್ಯವಾಗಿ (ಬಂದು) ನಿಲ್ಲುತ್ತದೆ. ಇದನ್ನೇ 'ತಾನೇ ನಿರ್ಮಿಸಿಕೊಂಡು' (೪-೩-೯) ಎಂದು ಹೇಳಿರುವದು. ಅದನ್ನೇ (ಇಲ್ಲಿ) 'ರಥಗಳನ್ನು ಸೃಜಿಸಿಕೊಳ್ಳುತ್ತಾನೆ' ಎಂದು ಹೇಳಿರುತ್ತದೆ. ಇಷ್ಟೇ ಹೊರತು ಅಲ್ಲಿ ಕರಣವಾಗಲಿ, ಕರಣಗಳಿಗೆ ಅನುಗ್ರಾಹಕವಾಗಿರುವ ಆದಿತ್ಯಾದಿಜ್ಯೋತಿಗಳಾಗಲಿ, ಅವುಗಳಿಂದ ಬೆಳಗಲ್ಪಡುವ ರಥಾದಿಗಳೆಂಬ ವಿಷಯಗಳಾಗಲಿ ಇರುವದಿಲ್ಲ. ಬರಿಯ ಅವುಗಳ ವಾಸನೆಯು ಮಾತ್ರವೇ ಅದನ್ನು ಕಾಣುವ ಕರ್ಮವೆಂಬ ನಿಮಿತ್ತದಿಂದ ಪ್ರೇರಿತವಾಗಿ ಉಂಟಾಗಿರುವ ಅಂತಃಕರಣವೃತ್ತಿಯನ್ನು ಆಶ್ರಯಿಸಿಕೊಂಡು ಕಾಣಿಸುತ್ತಿರುತ್ತದೆ.[2] ಅದು ಯಾವ ಅಲುಪ್ತದೃಗ್ರೂಪವಾದ ಜ್ಯೋತಿಗೆ ಕಾಣಿಸುತ್ತದೆಯೋ ಆ ಆತ್ಮಜ್ಯೋತಿಯು ಇಲ್ಲಿ ತಾನೊಂದೇ ಒರೆಯಿಂದ ಬೇರ್ಪಟ್ಟ ಕತ್ತಿಯಂತೆ (ಇರುತ್ತದೆ).

---

1. ವಾಸನಾರೂಪವಾದ, ವಾಸನಾಶ್ರಯವಾದ- ಇವೆರಡೂ ಪರ್ಯಾಯಗಳೇ.

2. ಜಾಗ್ರತ್ತಿನ ಅಂತಃಕರಣವೇ ಸ್ವಪ್ನದಲ್ಲಿಯೂ ಇದ್ದುಕೊಂಡಿರುವದೆಂದೂ ಸ್ವಪ್ನದಲ್ಲಿ ಕಾಣುವ ವಾಸನಾರೂಪವಾದ ವಿಷಯಗಳು ಜಾಗ್ರತ್ಕರ್ಮದ ಫಲಗಳೆಂದೂ ಇಲ್ಲಿ ಪ್ರತಿಪಾದಿಸಿರುವದೂ ಜಾಗ್ರದ್ದೃಷ್ಟಿಯಿಂದಲೇ. ಸ್ವಪ್ನದಲ್ಲಿ ಕಾಣುವ ಭಾವಗಳು ಅಲ್ಲಿಯೇ ತೋರುತ್ತವೆ; ಜಾಗ್ರತ್ತಿನಿಂದುಂಟಾದವುಗಳಲ್ಲ ಎಂಬ ಉತ್ತಮಸಿದ್ಧಾಂತವನ್ನು ಅಲಾತಶಾಂತಿಪ್ರಕರಣದಲ್ಲಿ (೪-೧೧, ಭಾ. ಭಾ. ೩೮೬) ಶ್ರೀಗೌಡಪಾದರವರು ಪ್ರತಿಪಾದಿಸಿರುತ್ತಾರೆ.

ಇದರಂತೆ ಅಲ್ಲಿ ಆನಂದಗಳು, ಸುಖವಿಶೇಷಗಳು ಇರುವದಿಲ್ಲ; ಮೋದಗಳು ಮಗನೇ ಮುಂತಾದದ್ದನ್ನು ಪಡೆದುಕೊಂಡ ನಿಮಿತ್ತದಿಂದಾದ ಹರ್ಷಗಳು (ಇರುವದಿಲ್ಲ), ಪ್ರಮೋದಗಳು ಇನ್ನೂ ಬಲವಾದಾಗ (ಕಾಣುವ) ಅದೇ (ಮೋದಗಳು ಇರುವದಿಲ್ಲ). ಆದರೂ ಆನಂದಾದಿಗಳನ್ನು ಸೃಜಿಸಿಕೊಳ್ಳುತ್ತಾನೆ. ಹೀಗೆಯೇ ಅಲ್ಲಿ ಕೆರೆಗಳಿರುವದಿಲ್ಲ, ಪುಷ್ಕರಿಣಿಗಳು ಎಂದರೆ ಕಟ್ಟಿಯ ಭಾವಿಗಳಿರುವದಿಲ್ಲ. ಹರಿಯುವ ನದಿಗಳೂ ಇರುವದಿಲ್ಲ. ಆದರೂ ಬರಿಯ ವಾಸನೆಯಿಂದಾದ ಕೆರೆಗಳೇ ಮುಂತಾದವನ್ನು ಸೃಜಿಸಿಕೊಳ್ಳುತ್ತಾನೆ.

## ಜೀವನು ಸ್ವಾಪ್ನಪದಾರ್ಥಗಳಿಗೆ ಕರ್ತೃವೆಂದರೆ ಹೇಗೆ?

(ಭಾಷ್ಯ)

೧೮೮. ಯಸ್ಮಾತ್ ಸ ಹಿ ಕರ್ತಾ। ತದ್ವಾಸನಾಶ್ರಯಚಿತ್ತವೃತ್ತ್ಯುದ್ಭವನಿಮಿತ್ತಕರ್ಮಹೇತುತ್ವೇನ ಇತ್ಯವೋಚಾಮ ತಸ್ಯ ಕರ್ತೃತ್ವಮ್। ನ ತು ಸಾಕ್ಷಾದೇವ ತತ್ರ ಕ್ರಿಯಾ ಸಂಭವತಿ। ಸಾಧನಾಭಾವಾತ್। ನ ಹಿ ಕಾರಕಮಂತರೇಣ ಕ್ರಿಯಾ ಸಂಭವತಿ। ನ ಚ ತತ್ರ ಹಸ್ತಪಾದಾದೀನಿ ಕ್ರಿಯಾಕಾರಕಾಣಿ ಸಂಭವನ್ತಿ। ಯತ್ರ ತು ತಾನಿ ವಿದ್ಯನ್ತೇ ಜಾಗರಿತೇ ತತ್ರ ಆತ್ಮಜ್ಯೋತಿರವಭಾಸಿತೈಃ ಕಾರ್ಯಕರಣೈಃ ರಥಾದಿವಾಸನಾಶ್ರಯಾನ್ತಃಕರಣವೃತ್ತ್ಯುದ್ಭವನಿಮಿತ್ತಂ ಕರ್ಮ ನಿರ್ವರ್ತ್ಯತೇ। ತೇನೋಚ್ಯತೇ ಸ ಹಿ ಕರ್ತಾ ಇತಿ। ತದುಕ್ತಮ್ "ಆತ್ಮನೈವಾಯಂ ಜ್ಯೋತಿಷಾಽಽಸ್ತೇ ಪಲ್ಯಯತೇ ಕರ್ಮ ಕುರುತೇ" (೪-೩-೬) ಇತಿ। ತತ್ರಾಪಿ ನ ಪರಮಾರ್ಥತಃ ಸ್ವತಃ ಕರ್ತೃತ್ವಂ ಚೈತನ್ಯಜ್ಯೋತಿಷಃ ಅವಭಾಸಕತ್ವವ್ಯತಿರೇಕೇಣ। ಯಚ್ಚೈತನ್ಯಾತ್ಮಜ್ಯೋತಿಷಾ ಅನ್ತಃಕರಣದ್ವಾರೇಣ ಅವಭಾಸಯತಿ ಕಾರ್ಯಕರಣಾನಿ, ತದವಭಾಸಿತಾನಿ ಕರ್ಮಸು ವ್ಯಾಪ್ರಿಯನ್ತೇ ಕಾರ್ಯಕರಣಾನಿ ತತ್ರ ಕರ್ತೃತ್ವಮ್ ಉಪಚರ್ಯತ ಆತ್ಮನಃ। ಯದುಕ್ತಮ್ "ಧ್ಯಾಯತೀವ ಲೇಲಾಯತೀವ" (೪-೩-೭) ಇತಿ। ತದೇವ ಅನೂದ್ಯತೇ 'ಸ ಹಿ ಕರ್ತಾ' ಇತೀಹ ಹೇತ್ವರ್ಥಮ್॥

(ಭಾಷ್ಯಾರ್ಥ)

ಏಕೆಂದರೆ ಅವನೇ ಕರ್ತೃ. ಆ (ಜಾಗ್ರತ್ತಿನ) ವಾಸನೆಗಳಿಗೆ ಆಶ್ರಯವಾಗಿರುವ ಚಿತ್ತವೃತ್ತಿಯು ಉಂಟಾಗುವದಕ್ಕೆ ನಿಮಿತ್ತವಾದ ಕರ್ಮಕ್ಕೆ ಕಾರಣವಾಗಿರುವದೇ ಅವನ ಕರ್ತೃತ್ವವು ಎಂದು (ಮೇಲೆ) ಹೇಳಿರುತ್ತೇವೆ. ಇಷ್ಟೇ ಹೊರತು ನೇರಾಗಿಯೇ ಅಲ್ಲಿ ಕ್ರಿಯೆಯು ಸಂಭವಿಸುವದಿಲ್ಲ; ಏಕೆಂದರೆ ಸಾಧನಗಳು (ಯಾವವೂ) ಇರುವದಿಲ್ಲ. ಕಾರಕವಿಲ್ಲದೆ ಕ್ರಿಯೆಯು ಆಗಲಾರದಷ್ಟೆ? ಆದರೆ ಕೈಕಾಲುಗಳೇ ಮುಂತಾದ ಕ್ರಿಯೆಯ ಕಾರಕಗಳು ಅಲ್ಲಿ ಸಂಭವಿಸು

ವದಿಲ್ಲ.[1] ಆದರೆ ಯಾವ ಎಚ್ಚರದಲ್ಲಿ ಆ (ಕಾರಕಗಳು) ಇರುತ್ತವೆಯೋ ಅಲ್ಲಿ ಆತ್ಮಜ್ಯೋತಿಯಿಂದ ಬೆಳಗಲ್ಪಟ್ಟ ಕಾರ್ಯಕರಣಗಳಿಂದ ರಥವೇ ಮುಂತಾದವುಗಳ ವಾಸನೆಗೆ ಆಶ್ರಯವಾಗಿರುವ ಅಂತಃಕರಣವೃತ್ತಿಯು ಹುಟ್ಟುವದಕ್ಕೆ ಕಾರಣವಾದ ಕರ್ಮವನ್ನು (ಅವನು) ಮಾಡುತ್ತಿರುತ್ತಾನೆ. ಆದ್ದರಿಂದ ಅವನು ಕರ್ತೃವಲ್ಲವೆ? ಎಂದಿರೆ.[2] ಇದನ್ನು "ಆತ್ಮನೆಂಬ ಜ್ಯೋತಿಯಿಂದಲೇ ಕುಳಿತುಕೊಳ್ಳುತ್ತಾನೆ, ಹೋಗುತ್ತಾನೆ ಕರ್ಮವನ್ನು ಮಾಡುತ್ತಾನೆ" (೪-೩-೬) ಎಂದು (ಹಿಂದೆ) ಹೇಳಿರುತ್ತದೆ. **ಅಲ್ಲಿಯೂ ಈ ಚೈತನ್ಯಜ್ಯೋತಿಗೆ (ಕಾರ್ಯಕರಣಗಳನ್ನು) ಬೆಳಗುವದಲ್ಲದೆ ಪರಮಾರ್ಥವಾಗಿಯೇ ಸ್ವತಃ ಕರ್ತೃತ್ವವಿರುವದಿಲ್ಲ; ಚೈತನ್ಯರೂಪವಾದ ತನ್ನ ಜ್ಯೋತಿಯಿಂದ ಕಾರ್ಯಕರಣಗಳನ್ನು ಅಂತಃಕರಣದ ಮೂಲಕವಾಗಿ ಬೆಳಗುತ್ತಾನಲ್ಲ, ಆ (ಜ್ಯೋತಿಯಿಂದ) ಬೆಳಗಲ್ಪಟ್ಟ ಕಾರ್ಯಕರಣಗಳು ಕರ್ಮಗಳಲ್ಲಿ ತೊಡಗುವವಲ್ಲ, (ಅದೇ) ಆತ್ಮನ ಕರ್ತೃತ್ವವೆಂದು ಅಲ್ಲಿ ಉಪಚಾರಕ್ಕಾಗಿ ಹೇಳಿರುತ್ತದೆ.**[3] "ಧ್ಯಾನಮಾಡುವವನಂತೆ, ಅಲುಗಾಡುತ್ತಿರುವವನಂತೆ" (೪-೩-೭) ಎಂದು ಹೇಳಿತ್ತಲ್ಲ, ಅದನ್ನೇ ಇಲ್ಲಿ 'ಅವನೇ ಕರ್ತನು' ಎಂದು ಹೇತುವಿಗೋಸ್ಕರವಾಗಿ ಅನುವಾದಮಾಡಿಕೊಂಡಿದೆ.[4]

## ಸ್ವಪ್ನದ ವಿಷಯಕ್ಕೆ ಶ್ಲೋಕಗಳು

(ಉಪನಿಷತ್ತು)

**ತದೇತೇ ಶ್ಲೋಕಾ ಭವನ್ತಿ :—**

**ಸ್ವಪ್ನೇನ ಶಾರೀರಮಭಿಪ್ರಹೃತ್ಯಾ**
**ಸುಪ್ತಃ ಸುಪ್ತಾನಭಿಚಾಕಶೀತಿ ।**
**ಶುಕ್ರಮಾದಾಯ ಪುನರೈತಿ ಸ್ಥಾನಗ್ಂ**
**ಹಿರಣ್ಮಯಃ ಪುರುಷ ಏಕ ಹಗ್ಂಸಃ ॥ ೧೧ ॥**

---

1. ಆದ್ದರಿಂದ ಸ್ವಪ್ನವು ಮಿಥ್ಯವೇ ಆಗಿರುವದರಿಂದ ಆತ್ಮನು ಸ್ವಯಂಜ್ಯೋತಿಯೆಂದು ಸಿದ್ಧವಾಗುತ್ತದೆ ಎಂದು ಅಭಿಪ್ರಾಯ. ಜಾಗ್ರದ್ದೃಷ್ಟಿಯಿಂದ ವಿಚಾರಮಾಡಿ ಸ್ವಪ್ನವನ್ನು ಮಿಥ್ಯೆಯೆಂದು ತೋರಿಸಿ ಆ ಬಳಿಕ ಎಚ್ಚರವೂ ಮಿಥ್ಯೆಯೆಂದು ತೋರಿಸುವದು ವೇದಾಂತಿಗಳ ಒಂದು ಕ್ರಮ. ಮಾಂ. ಕಾ ೨-೧ರಿಂದ ೩ನೆಯ ಕಾರಿಕೆಯವರೆಗಿನ ಗ್ರಂಥ, ಸೂ. ಭಾ. ೩-೨-೩, ೪ (ಭಾ. ಭಾ. ೨೫೬ರಿಂದ ೨೫೮)- ಈ ಗ್ರಂಥಗಳಲ್ಲಿ ಸ್ವಪ್ನ ಮಿಥ್ಯಾತ್ವವನ್ನು ಸಾಧಿಸಿರುವದು ಇದಕ್ಕಾಗಿಯೇ

2. ಅವನ ಕರ್ಮದಿಂದಲೇ ವಾಸನೆಯುಂಟಾಗುವದರಿಂದ ಅವನನ್ನು ಕರ್ತೃವೆಂದಿದೆಯೇ ಹೊರತು ನಿಜವಾಗಿ ಅವನು ಕನಸಿನಲ್ಲಿಯೂ ಕರ್ತೃವೆಂದಲ್ಲ.

3. ಆತ್ಮನಿಗೆ ಕರ್ತೃತ್ವವು ಸ್ವಾಭಾವಿಕವಲ್ಲವೆಂಬುದನ್ನು ಸೂ. ಭಾ. ೨-೩-೪೦ (ಭಾ. ಭಾ. ೧೫೧, ೧೫೨)ರಲ್ಲಿ ಸಾಧಿಸಿದೆ.

4. ವಾಸನಾಮಯಪ್ರಪಂಚಕ್ಕೆ ಆವನು ಈ ರೀತಿಯಲ್ಲಿ ಕರ್ತೃವಾಗಿರುತ್ತಾನಾದರಿಂದ ಇದು ಪರಮಾರ್ಥವಲ್ಲ ಎಂದು ತಿಳಿಸುತ್ತದೆ ಎಂದು ಅಭಿಪ್ರಾಯ. ಸೂ. ಭಾ. ೩-೨-೪ (ಭಾ. ಭಾ. ೨೫೮)ನ್ನು ನೋಡಿ.

ಅಲ್ಲಿ ಈ ಶ್ಲೋಕಗಳು ಇರುತ್ತವೆ :

೧೧. "ಹಿರಣ್ಮಯನೂ ಏಕಹಂಸನೂ ಆದ ಪುರುಷನು ಸ್ವಪ್ನದಿಂದ ಶಾರೀರವನ್ನು ಬದಿಗಿಟ್ಟು (ತಾನು) ಅಸುಪ್ತನಾಗಿ ಶುಕ್ರವನ್ನು ತೆಗೆದುಕೊಂಡು ಸುಪ್ತರನ್ನು ನೋಡುತ್ತಿರುವನು. ಮತ್ತೆ (ಈ) ಸ್ಥಾನಕ್ಕೆ ಬರುತ್ತಿರುವನು.

(ಭಾಷ್ಯ)

೧೪೯. ತದೇತೇ ಏತಸ್ಮಿನ್ ಉಕ್ತೇಽರ್ಥೇ ಏತೇ ಶ್ಲೋಕಾ ಮನ್ತ್ರಾಃ ಭವನ್ತಿ। ಸ್ವಪ್ನೇನ ಸ್ವಪ್ನಭಾವೇನ ಶಾರೀರಂ ಶರೀರಮ್ ಅಭಿಪ್ರಹತ್ಯ ನಿಶ್ಚೇಷ್ಟಮಾಪಾದ್ಯ ಅಸುಪ್ತಃ ಸ್ವಯಮ್ ಅಲುಪ್ತದೃಗಾದಿಸ್ವಾಭಾವ್ಯಾತ್ ಸುಪ್ತಾನ್ ವಾಸನಾಕಾರೋದ್ಭೂತಾನ್ ಅನ್ತಃಕರಣವೃತ್ತ್ಯಾಶ್ರಯಾನ್ ಬಾಹ್ಯಾಧ್ಯಾತ್ಮಿಕಾನ್ ಸರ್ವಾನೇವ ಭಾವಾನ್ ಸ್ವೇನ ರೂಪೇಣ ಪ್ರತ್ಯಸ್ತಮಿತಾನ್ ಸುಪ್ತಾನ್ ಅಭಿಚಾಕಶೀತಿ, ಅಲುಪ್ತಯಾ ಆತ್ಮದೃಷ್ಟ್ಯಾ ಪಶ್ಯತಿ ಅವಭಾಸಯತಿ ಇತ್ಯರ್ಥಃ। ಶುಕ್ರಂ ಶುದ್ಧಂ ಜ್ಯೋತಿಷ್ಮತ್ ಇನ್ದ್ರಿಯಮಾತ್ರಾರೂಪಮ್ ಆದಾಯ ಗೃಹೀತ್ವಾ ಪುನಃ ಕರ್ಮಣೇ ಜಾಗರಿತಸ್ಥಾನಮ್ ಏತಿ ಆಗಚ್ಛತಿ। ಹಿರಣ್ಮಯಃ ಹಿರಣ್ಮಯ ಇವ ಚೈತನ್ಯಜ್ಯೋತಿಃಸ್ವಭಾವಃ ಪುರುಷಃ ಏಕಹಂಸಃ ಏಕ ಏವ ಹನ್ತಿ ಇತಿ ಏಕಹಂಸಃ। ಏಕೋ ಜಾಗ್ರತ್ಸ್ವಪ್ನೇಹಲೋಕಪರಲೋಕಾದೀನ್ ಗಚ್ಛತಿ ಇತಿ ಏಕಹಂಸಃ॥

(ಭಾಷ್ಯಾರ್ಥ)

ಅಲ್ಲಿ ಇವು, ಈ ಹೇಳಿದರ್ಥದಲ್ಲಿ ಈ ಶ್ಲೋಕಗಳು ಎಂದರೆ ಮಂತ್ರಗಳು ಇರುತ್ತವೆ. ಸ್ವಪ್ನದಿಂದ ಸ್ವಪ್ನಸ್ಥಿತಿಯಿಂದ ಶಾರೀರವನ್ನು ಶರೀರವನ್ನು ಬದಿಗಿಟ್ಟು ಯಾವ ವ್ಯಾಪಾರವೂ ಇಲ್ಲದಂತೆ ಮಾಡಿಕೊಂಡು ತಾನು ಲೋಪವಾಗದ ದೃಗಾದಿ[1] ಶಕ್ತಿಯುಳ್ಳ ಸ್ವಭಾವದವನಾದ್ದರಿಂದ ಅಸುಪ್ತನಾಗಿ ಸುಪ್ತರನ್ನು ವಾಸನಾಕಾರದಿಂದ ಎದ್ದುಕೊಂಡಿರುವ ಅಂತಃಕರಣದ ವೃತ್ತಿಯನ್ನು ಆಶ್ರಯಿಸಿರುವ ಹೊರಗಿನ ಮತ್ತು ಒಳಗಿನ ಎಲ್ಲಾ ಪದಾರ್ಥಗಳನ್ನೂ ತಮ್ಮ ರೂಪದಿಂದ ಮರೆಯಾಗಿರುವದರಿಂದ ಸುಪ್ತವಾಗಿರುವ (ಪದಾರ್ಥಗಳನ್ನು) ನೋಡುತ್ತಿರುವನು, ಅಲುಪ್ತವಾದ ತನ್ನ ದೃಷ್ಟಿಯಿಂದ ಕಾಣುತ್ತಿರುವನು, ಬೆಳಗುತ್ತಿರುವನು ಎಂದರ್ಥ. ಶುಕ್ರವನ್ನು ಎಂದರೆ ಶುದ್ಧವಾದ ಬೆಳಕುಳ್ಳ ಇಂದ್ರಿಯಗಳ ಮಾತ್ರಾರೂಪವನ್ನು ತೆಗೆದುಕೊಂಡು ಗ್ರಹಿಸಿ (ಸ್ವಪ್ನದಲ್ಲಿ ಸುಪ್ತ ಪದಾರ್ಥಗಳನ್ನು ಕಾಣುತ್ತಿರುವನು). ಮತ್ತೆ ಕರ್ಮಕ್ಕಾಗಿ ಜಾಗರಿತಸ್ಥಾನಕ್ಕೆ (ಏತಿ= ಆಗಚ್ಛತಿ) ಬರುತ್ತಿರುವನು. ಹಿರಣ್ಮಯನು ಎಂದರೆ ಹಿರಣ್ಮಯನಂತೆ

1. ದೃಷ್ಟಿ, ಶ್ರುತಿ -ಮುಂತಾದವುಗಳ ಶಕ್ತಿಯು ಚೈತನ್ಯವೇ, ಅದು ಎಂದಿಗೂ ಲುಪ್ತವಾಗುವದಲ್ಲ.

ಚೈತನ್ಯಜ್ಯೋತಿಃಸ್ವಭಾವನಾದ ಪುರುಷನು, ಏಕಹಂಸನು (ಏಕ ಏವ ಹನ್ತೀತಿ ಏಕಹಂಸಃ) ಒಬ್ಬನೇ ಹೋಗುತ್ತಿರುವದರಿಂದ ಏಕಹಂಸನು, ಜಾಗ್ರತ್ಸ್ವಪ್ನಗಳನ್ನೂ ಇಹಲೋಕಪರಲೋಕಗಳನ್ನೂ ತಾನೊಬ್ಬನೇ ಹೊಂದುತ್ತಿರುವದರಿಂದ ಏಕಹಂಸನು.[1]

(ಉಪನಿಷತ್ತು)

**ಪ್ರಾಣೇನ ರಕ್ಷನ್ನವರಂ ಕುಲಾಯಂ**
**ಬಹಿಷ್ಕುಲಾಯಾದಮೃತಶ್ಚರಿತ್ವಾ ।**
**ಸ ಈಯತೇಽಮೃತೋ ಯತ್ರ ಕಾಮಗ್ಂ**
**ಹಿರಣ್ಮಯಃ ಪುರುಷ ಏಕಹಗ್ಂಸಃ ॥ ೧೨ ॥**

೧೨. "ಹಿರಣ್ಮಯನೂ ಏಕಹಂಸನೂ ಆದ ಪುರುಷನು ಪ್ರಾಣದಿಂದ ಕೀಳುಗೂಡನ್ನು ರಕ್ಷಿಸಿಕೊಂಡು, ಅಮೃತನಾದ (ತಾನು) ಗೂಡಿನಿಂದ ಹೊರಕ್ಕೆ ಹೋಗಿ, ಅವನು ಅಮೃತನಾಗಿ ಕಾಮವಿದ್ದಲ್ಲಿಗೆ ಹೋಗುತ್ತಾನೆ.

(ಭಾಷ್ಯ)

೧೯೦. ತಥಾ ಪ್ರಾಣೇನ ಪಞ್ಚವೃತ್ತಿನಾ ರಕ್ಷನ್ ಪರಿಪಾಲಯನ್ । ಅನ್ಯಥಾ ಮೃತಭ್ರಾನ್ತಿಃ ಸ್ಯಾತ್ । ಅವರಂ ನಿಕೃಷ್ಟಮ್ ಅನೇಕಾಶುಚಿಸಂಘಾತತ್ವಾತ್ ಅತ್ಯನ್ತಬೀಭತ್ಸಂ ಕುಲಾಯಂ ನೀಡಂ ಶರೀರಮ್ । ಸ್ವಯಂ ತು ಬಹಿಸ್ತಸ್ಮಾತ್ ಕುಲಾಯಾತ್ ಚರಿತ್ವಾ । ಯದ್ಯಪಿ ಶರೀರಸ್ಥ ಏವ ಸ್ವಪ್ನಂ ಪಶ್ಯತಿ, ತಥಾಪಿ ತತ್ಸಂಬನ್ಧಾಭಾವಾತ್ ತತ್ಸ್ಥ ಇವ ಆಕಾಶೋ ಬಹಿಶ್ಚರಿತ್ವಾ ಇತ್ಯುಚ್ಯತೇ । ಅಮೃತಃ ಸ್ವಯಮ್ ಅಮರಣಧರ್ಮಾ ಈಯತೇ ಗಚ್ಛತಿ ಯತ್ರ ಕಾಮಂ ಯತ್ರ ಯತ್ರ ಕಾಮೋ ವಿಷಯೇಷು ಉದ್ಭೂತವೃತ್ತಿರ್ಭವತಿ ತಂ ತಂ ಕಾಮಂ ವಾಸನಾರೂಪೇಣ ಉದ್ಭೂತಂ ಗಚ್ಛತಿ ॥

(ಭಾಷ್ಯಾರ್ಥ)

ಹೀಗೆಯೇ ಐದು ವೃತ್ತಿಗಳ ಪ್ರಾಣದಿಂದ ರಕ್ಷಿಸಿಕೊಂಡು ಕಾಪಾಡಿಕೊಂಡು– (ಏಕೆಂದರೆ) ಹೀಗಲ್ಲದಿದ್ದರೆ ಸತ್ತನೆಂಬ ಭ್ರಾಂತಿಯುಂಟಾದೀತು[2] — ಕೀಳಾದ ನೀಚವಾದ ಅನೇಕ ಅಶುಚಿಗಳ ರಾಶಿಯಾಗಿರುವದರಿಂದ ಅತ್ಯಂತವಾಗಿ ಅಸಹ್ಯವಾಗಿರುವ, ಗೂಡನ್ನು ಆಶ್ರಯವಾದ ಶರೀರವನ್ನು (ರಕ್ಷಿಸಿಕೊಂಡು) ತಾನಾದರೋ ಆ ಗೂಡಿನಿಂದ ಹೊರಕ್ಕೆ ಹೋಗಿ—ನಿಜವಾಗಿ ಶರೀರದಲ್ಲಿದ್ದು

1. ಆದ್ದರಿಂದ ಇವನಿಗೆ ಅವಸ್ಥೆಗಳ ಮತ್ತು ಲೋಕಗಳ ಸಂಗವಿಲ್ಲವೆಂದಾಯಿತು.

2 ತಾನು ನಿದ್ರಿಸುತ್ತಿದ್ದರೂ ಶರೀರವು ಮಂಗಲಕರವಾಗಿ ಕಾಣುವದಕ್ಕೆ ಪ್ರಾಣದಿಂದ ರಕ್ಷಿಸಿಕೊಂಡಿರುವದು ಕಾರಣ.

ಕೊಂಡೇ ಸ್ವಪ್ನವನ್ನು ಕಾಣುತ್ತಾನೆ, ಆದರೂ ಅದರಲ್ಲಿರುವ ಆಕಾಶದಂತೆ (ಆಗ) ಆ (ಶರೀರದ) ಸಂಬಂಧವಿಲ್ಲದಿರುವದರಿಂದ 'ಹೊರಕ್ಕೆ ಹೋಗಿ' ಎಂದು ಹೇಳಿರುತ್ತದೆ.[1] ಅಮೃತನಾಗಿ ತಾನು ಮರಣಧರ್ಮವಿಲ್ಲದವನಾಗಿ ಕಾಮವಿದ್ದಲ್ಲಿಗೆ, ಎಲ್ಲೆಲ್ಲಿ ಕಾಮವು ವಿಷಯಗಳಲ್ಲಿ ಹೊರತೋರಿಕೊಂಡ ವೃತ್ತಿಯುಳ್ಳದ್ದಾಗುವದೋ ವಾಸನಾರೂಪದಿಂದ ತೋರಿಕೊಂಡ ಆಯಾ ಕಾಮದ ಬಳಿಗೆ, ಹೋಗುತ್ತಾನೆ.[2]

(ಉಪನಿಷತ್ತು)

ಸ್ವಪ್ನಾನ್ತ ಉಚ್ಚಾವಚಮೀಯಮಾನೋ
ರೂಪಾಣಿ ದೇವಃ ಕುರುತೇ ಬಹೂನಿ ।
ಉತೇವ ಸ್ತ್ರೀಭಿಃ ಸಹ ಮೋದಮಾನೋ
ಜಕ್ಷದುತೇವಾಪಿ ಭಯಾನಿ ಪಶ್ಯನ್ ॥ ೧೩ ॥

೧೩. "ಸ್ವಪ್ನಾಂತದಲ್ಲಿ ಮೇಲುಕೀಳಾದ (ಭಾವಗಳನ್ನು) ಪಡೆಯುತ್ತಾ (ಈ) ದೇವನು ಬಹಳ ರೂಪಗಳನ್ನು ಮಾಡಿಕೊಳ್ಳುತ್ತಿರುವನು. ಸ್ತ್ರೀಯರೊಡನೆ ಮೋದಗೊಳ್ಳುತ್ತಿರುವಂತೆಯೂ ನಗುತ್ತಿರುವವನಂತೆಯೂ ಮತ್ತು ಭಯಗಳನ್ನು ಕಾಣುವವನಂತೆಯೂ (ಇರುವನು).

(ಭಾಷ್ಯ)

೯೯೧. ಕಿಂಚ ಸ್ವಪ್ನಾನ್ತೇ ಸ್ವಪ್ನಸ್ಥಾನೇ ಉಚ್ಚಾವಚಮ್ । ಉಚ್ಚಂ ದೇವಾದಿಭಾವಮ್ ಅವಚಂ ತಿರ್ಯಗಾದಿಭಾವಂ ನಿಕೃಷ್ಟಮ್ । ತದುಚ್ಚಾವಚಮ್ ಈಯಮಾನಃ ಗಮ್ಯಮಾನಃ ಪ್ರಾಪ್ನುವನ್ ರೂಪಾಣಿ ದೇವೋ ದ್ಯೋತನವಾನ್ ಕುರುತೇ ನಿರ್ವರ್ತಯತಿ ವಾಸನಾರೂಪಾಣಿ ಬಹೂನಿ ಅಸಂಖ್ಯೇಯಾನಿ । ಉತಾಪಿ ಸ್ತ್ರೀಭಿಃ ಸಹ ಮೋದಮಾನ ಇವ । ಜಕ್ಷದಿವ ಹಸನ್ನಿವ ವಯಸ್ಯೈಃ । ಉತ ಇವಾಪಿ ಭಯಾನಿ ಬಿಭೇತ್ಯೇಭ್ಯಃ ಇತಿ ಭಯಾನಿ ಸಿಂಹವ್ಯಾಘ್ರಾದೀನಿ ಪಶ್ಯನ್ನಿವ ॥

(ಭಾಷ್ಯಾರ್ಥ)

ಮತ್ತು ಸ್ವಪ್ನಾಂತದಲ್ಲಿ ಸ್ವಪ್ನಾವಸ್ಥೆಯಲ್ಲಿ ಮೇಲುಕೀಳಾದ—ಮೇಲಾದದ್ದು ಎಂದರೆ ದೇವಾದಿಭಾವವು; ಕೀಳಾದದ್ದು ಎಂದರೆ ನೀಚವಾದ ತಿರ್ಯ

---

1. ಆಕಾಶವು ಎಲ್ಲೆಲ್ಲಿಯೂ ಇರುವದರಿಂದ ಘಟಾದಿಗಳ ಒಳಗೂ ಹೊರಗೂ ಇರುವಂತೆ ಶರೀರಸಂಬಂಧವಿಲ್ಲದ ಆತ್ಮನು ಶರೀರದ ಹೊರಗೂ ಇರುತ್ತಾನೆ ಎನ್ನಬಹುದು ಎಂದು ಅಭಿಪ್ರಾಯ. ಶರೀರದೊಳಗೇ ಸ್ವಪ್ನವಾಗುತ್ತಿರುವದೆಂಬುದು ಜಾಗ್ರದ್ದೃಷ್ಟಿಯಿಂದ ಹೇಳಿದ್ದು.

2. ಇತರ ಕಾಮದ ವಾಸನೆಯು ಎದ್ದುಕೊಳ್ಳುವದೋ ಅದು ಎದುರಿಗೆ ತೋರುತ್ತದೆ ಎಂದು ಅಭಿಪ್ರಾಯ.

ಗ್ಜಂತುವಿನ ಭಾವವೇ ಮುಂತಾದದ್ದು. ಈ ಮೇಲುಕೀಳಾದ- (ಭಾವವನ್ನು) ಪಡೆಯುವವನಾಗಿ ಸೇರುತ್ತಾ ಹೊಂದುತ್ತಾ ದೇವನು ಬೆಳಕುಳ್ಳ (ಈ ಆತ್ಮನು) ಬಹುವಾದ ಲೆಕ್ಕವಿಲ್ಲದಷ್ಟು ರೂಪಗಳನ್ನು ವಾಸನಾರೂಪಗಳನ್ನು ಮಾಡಿಕೊಳ್ಳು ತ್ತಾನೆ, ಉಂಟುಮಾಡಿಕೊಳ್ಳುತ್ತಾನೆ. (ಉತಾಪಿ) ಮತ್ತು ಸ್ತ್ರೀಯರೊಡನೆ ಮೋದಗೊಳ್ಳುತ್ತಿರುವಂತೆಯೂ ಗೆಳೆಯರೊಡನೆ ನಗುತ್ತಿರುವಂತೆಯೂ ಮತ್ತು ಭಯಗಳನ್ನು -- ಅವುಗಳಿಗೆ ಹೆದರುತ್ತಾರಾದ್ದರಿಂದ ಸಿಂಹ, ಹುಲಿ-ಮುಂತಾದವು ಭಯಗಳು. (ಅವನ್ನು)- ನೋಡುತ್ತಿರುವಂತೆಯೂ ಇರುವನು.[1]

(ಉಪನಿಷತ್ತು)

**ಆರಾಮಮಸ್ಯ ಪಶ್ಯನ್ತಿ ನ ತಂ ಪಶ್ಯತಿ ಕಶ್ಚನೇತಿ। ತಂ ನಾಯತಂ ಬೋಧಯೇದಿತ್ಯಾಹುಃ। ದುರ್ಭಿಷಜ್ಯಗ್ಂ ಹಾಸ್ಮೈ ಭವತಿ ಯಮೇಷ ನ ಪ್ರತಿಪದ್ಯತೇ। ಅಥೋ ಖಲ್ವಾಹು ರ್ಜಾಗರಿತದೇಶ ಏವಾಸ್ಯೈಷ ಇತಿ ಯಾನಿ ಹ್ಯೇವ ಜಾಗ್ರತ್ ಪಶ್ಯತಿ ತಾನಿ ಸುಪ್ತ ಇತ್ಯತ್ರಾಯಂ ಪುರುಷಃ ಸ್ವಯಂಜ್ಯೋತಿ ರ್ಭವತಿ ಸೋಽಹಂ ಭಗವತೇ ಸಹಸ್ರಂ ದದಾಮ್ಯತ ಊರ್ಧ್ವಂ ವಿಮೋಕ್ಷಾಯ ಬ್ರೂಹೀತಿ ॥೧೪॥**

೧೪. "ಇವನ ಆರಾಮವನ್ನು ಕಾಣುತ್ತಾರೆ, (ಆದರೆ) ಇವನನ್ನು ಯಾವನೊಬ್ಬನೂ ಕಾಣುವದಿಲ್ಲ.'' ಅವನನ್ನು ತಟ್ಟನೆ ಎಚ್ಚರಗೊಳಿಸಬಾರದು ಎನ್ನುವರು. ಯಾವದನ್ನು ಇವನು ಸೇರು ವದಿಲ್ಲವೋ ಇದಕ್ಕೆ ದುರ್ಭಿಷಜ್ಯವಾಗುತ್ತದೆ. ಮತ್ತು (ಕೆಲವರು) ಎಚ್ಚರದ ದೇಶದಲ್ಲಿಯೇ ಈ (ಕನಸು) ಆಗುತ್ತದೆ; ಏಕೆಂದರೆ ಯಾವ ವನ್ನು ಎಚ್ಚರದಲ್ಲಿ ಕಾಣುತ್ತಾನೋ ಅವನ್ನೇ ಸ್ವಪ್ನವನ್ನು ಹೊಂದಿ ದವನೂ (ಕಾಣುತ್ತಾನೆ) ಎನ್ನುವರು. ಇಲ್ಲಿ ಈ ಪುರುಷನು ಸ್ವಯಂ ಜ್ಯೋತಿಯಾಗಿರುವನು. "ಆ ನಾನು ಭಗವಂತನಾದ (ನಿನಗೆ) ಸಾವಿರ ವನ್ನು ಕೊಡುತ್ತೇನೆ; ಇನ್ನುಮೇಲೆ ವಿಮೋಕ್ಷಕ್ಕೆ ಹೇಳು !''

(ಭಾಷ್ಯ)

೧೯೨. ಆರಾಮಮ್ ಆರಮಣಮ್ ಆಕ್ರೀಡಾಮ್ ಅನೇನ ನಿರ್ಮಿ ತಾಂ ವಾಸನಾರೂಪಮ್ ಅಸ್ಯ ಆತ್ಮನಃ ಪಶ್ಯನ್ತಿ ಸರ್ವೇ ಜನಾಃ। ಗ್ರಾಮಂ

---

1 ಆಯಾ ವಾಸನೆಗೆ ಅನುಗುಣವಾಗಿ ಒಳ್ಳೆಯ ಅಥವಾ ಕೆಟ್ಟ ದೃಶ್ಯಗಳನ್ನು ಕಾಣುವಂತಿರುತ್ತಾನೆ.

ನಗರಂ ಸ್ತ್ರಿಯಮ್ ಅನ್ನಾದ್ಯಮ್ ಇತ್ಯಾದಿವಾಸನಾನಿರ್ಮಿತಂ ಆಕ್ರೀಡನರೂಪಮ್ । ನ ತಂ ಪಶ್ಯತಿ[1] ಕಶ್ಚನ । ಕಷ್ಟಂ ಭೋ ವರ್ತತೇ ಅತ್ಯನ್ತವಿವಿಕ್ತಂ ದೃಷ್ಟಿಗೋಚರಾಪನ್ನಮಪಿ ಅಹೋ ಭಾಗ್ಯಹೀನತಾ ಲೋಕಸ್ಯ ಯತ್ ಶಕ್ಯದರ್ಶನಮಪಿ ಆತ್ಮಾನಂ ನ ಪಶ್ಯತೀತಿ ಲೋಕಂ ಪ್ರತಿ ಅನುಕ್ರೋಶಂ ದರ್ಶಯತಿ ಶ್ರುತಿಃ । ಅತ್ಯನ್ತವಿವಿಕ್ತಃ ಸ್ವಯಂಜ್ಯೋತಿರಾತ್ಮಾ ಸ್ವಪ್ನೇ ಭವತಿ ಇತ್ಯಭಿಪ್ರಾಯಃ ॥

(ಭಾಷ್ಯಾರ್ಥ)

ಆರಾಮವೆಂದರೆ ಆರಮಣವು. ಈ ಆತ್ಮನು ನಿರ್ಮಿಸಿಕೊಂಡಿರುವ ವಾಸನಾರೂಪವಾದ ಆಕ್ರೀಡೆಯ (ವಿಷಯ)ವನ್ನು ಎಲ್ಲಾ ಜನರೂ ಕಾಣುತ್ತಾರೆ. ಹಳ್ಳಿ, ನಗರ, ಹೆಂಗಸು, ಉಣ್ಣುವ ಅನ್ನ- ಈ ಮುಂತಾದ ವಾಸನಾನಿರ್ಮಿತವಾದ ಆಟದ (ವಿಷಯದ) ರೂಪದ (ಆರಾಮವನ್ನು ಎಲ್ಲರೂ ನೋಡುತ್ತಾರೆ).[2] **ಅತ್ಯಂತವಾಗಿ ವಿಂಗಡವಾಗಿ ದೃಷ್ಟಿಗೆ ವಿಷಯನಾಗಿದ್ದರೂ[3] ಅವನನ್ನು ಯಾವನೊಬ್ಬನೂ ಕಾಣುವದಿಲ್ಲ; ಆಹಾ, ಎಂಥ ಕಷ್ಟದ (ವಿಷಯ)ವಾಗಿದೆ, (ಇದು)! ಅಯ್ಯೊ, ಜನರ ಭಾಗ್ಯಹೀನತೆಯೆ! ನೋಡುವದಕ್ಕಾಗುತ್ತಿರುವ ಆತ್ಮನನ್ನುಕೂಡ ನೋಡುವದಿಲ್ಲವಲ್ಲ! ಎಂದು ಜನರ ವಿಷಯಕ್ಕೆ ಶ್ರುತಿಯು ಮರುಕವನ್ನು ತೋರಿಸುತ್ತಿದೆ.** ಸ್ವಪ್ನದಲ್ಲಿ ಅತ್ಯಂತವಾಗಿ ವಿಂಗಡವಾಗಿದ್ದುಕೊಂಡು ಆತ್ಮನು ಸ್ವಯಂಜ್ಯೋತಿಯಾಗಿರುತ್ತಾನೆ- ಎಂದು ಅಭಿಪ್ರಾಯ.[4]

## ಸ್ವಪ್ನದಲ್ಲಿ ಆತ್ಮಜ್ಯೋತಿಯು ದೇಹವ್ಯತಿರಿಕ್ತವಾಗಿರುವದಕ್ಕೆ ಲೋಕಪ್ರಸಿದ್ಧಿ

(ಭಾಷ್ಯ)

೧೯೩. ತಂ ನಾಯತಂ ಬೋಧಯೇತ್ ಇತ್ಯಾಹುಃ । ಪ್ರಸಿದ್ಧಿರಪಿ ಲೋಕೇ ವಿದ್ಯತೇ ಸ್ವಪ್ನೇ ಆತ್ಮಜ್ಯೋತಿಷೋ ವ್ಯತಿರಿಕ್ತತ್ವೇ । ಕಾಽಸೌ ತಮಾ

---

1. 'ತಂ ನ ಪಶ್ಯತಿ' ಎಂಬ ಪದಗಳು ಅಚ್ಚಿನಪುಸ್ತಕದಲ್ಲಿ ಇವರ ಮುಂದೆ ಇದ್ದರೂ ಆವಶ್ಯವಿಲ್ಲವೆಂದು ಬಿಟ್ಟುಬಿಟ್ಟಿದೆ. ಇವು ಇಲ್ಲದ ಪಾಠವೂ ಉಂಟು.

2. ವ್ಯವಹಾರದೃಷ್ಟಿಯಿಂದ ಇದನ್ನು ಈಶ್ವರನ ವಿಚಿತ್ರಸೃಷ್ಟಿಗೆ ದೃಷ್ಟಾಂತವಾಗಿ ಸೂ. ಭಾ. ೨-೧-೨೮ ರಲ್ಲಿ ಉಪಯೋಗಿಸಿದೆ. ಇಲ್ಲಿ ಆತ್ಮನು ಸ್ವಯಂಜ್ಯೋತಿ ಎಂಬುದನ್ನು ಸಿದ್ಧಗೊಳಿಸುವದಕ್ಕೆ ಉಪಯೋಗಿಸಿದೆ. ಆದ್ದರಿಂದ ಈ ಎರಡಕ್ಕೂ ವಿರೋಧವಿಲ್ಲ.

3. ಶಾಸ್ತ್ರದೃಷ್ಟಿಯಿಂದ ಅರಿತುಕೊಳ್ಳುವದಕ್ಕೆ ಶಕ್ಯವಿದ್ದರೂ ಎಂದರ್ಥ, ಆತ್ಮನು ಜ್ಞಾನಕ್ಕೆ ವಿಷಯನೆಂಬ ಅಭಿಪ್ರಾಯವೇನೂ ಇಲ್ಲಿಲ್ಲ.

4. ಇದು ಶ್ಲೋಕಗಳಿಗೆಲ್ಲ ಒಟ್ಟರ್ಥ.

ತ್ಮಾನಂ ಸುಪ್ತಮ್ ಆಯತಂ ಸಹಸಾ ಭೃಶಂ ನ ಬೋಧಯೇತ್ ಇತ್ಯಾಹುಃ ಏವಂ ಕಥಯನ್ತಿ ಚಿಕಿತ್ಸಕಾದಯೋ ಜನಾಃ ಲೋಕೇ। ನೂನಂ ತೇ ಪಶ್ಯನ್ತಿ ಜಾಗ್ರದ್ದೇಹಾತ್ ಇನ್ದ್ರಿಯದ್ವಾರತಃ ಅಪಸೃತ್ಯ ಕೇವಲೋ ಬಹಿರ್ವರ್ತತ ಇತಿ। ಯತ ಆಹುಃ ತಂ ನಾಯತಂ ಬೋಧಯೇತ್ ಇತಿ। ತತ್ರ ಚ ದೋಷಂ ಪಶ್ಯನ್ತಿ ಭೃಶಂ ಹಿ ಅಸೌ ಬೋಧ್ಯಮಾನಃ ತಾನಿ ಇನ್ದ್ರಿಯದ್ವಾರಾಣಿ ಸಹಸಾ ಪ್ರತಿಬೋಧ್ಯಮಾನಃ ನ ಪ್ರತಿಪದ್ಯತ ಇತಿ। ತದೇತದಾಹ। ದುರ್ಭಿಷಜ್ಯಂ ಹ ಅಸ್ಮೈ ಭವತಿ ಯಮ್ ಏಷ ನ ಪ್ರತಿಪದ್ಯತೇ ಯಮ್ ಇನ್ದ್ರಿಯದ್ವಾರದೇಶಂ ಯಸ್ಮಾತ್ ದೇಶಾತ್ ಶುಕ್ರಮಾದಾಯ ಅಪಸೃತಃ ತಮ್ ಇನ್ದ್ರಿಯದೇಶಮ್ ಏಷ ಆತ್ಮಾ ಪುನರ್ನ ಪ್ರತಿಪದ್ಯತೇ। ಕದಾಚಿತ್ ವ್ಯತ್ಯಾಸೇನ ಇನ್ದ್ರಿಯಮಾತ್ರಾಃ ಪ್ರವೇಶಯತಿ। ತತ ಆನ್ಧ್ಯಬಾಧಿರ್ಯಾದಿ ದೋಷಪ್ರಾಪ್ತೌ ದುರ್ಭಿಷಜ್ಯಂ ದುಃಖಭಿಷಕ್ಕರ್ಮತಾ ಹ ಅಸ್ಮೈ ದೇಹಾಯ ಭವತಿ ದುಃಖೇನ ಚಿಕಿತ್ಸನೀಯೋಽಸೌ ದೇಹೋ ಭವತಿ ಇತ್ಯರ್ಥಃ। ತಸ್ಮಾತ್ ಪ್ರಸಿದ್ಧ್ಯಾಪಿ ಸ್ವಪ್ನೇ ಸ್ವಯಂಜ್ಯೋತಿಷ್ಟ್ವಮ್ ಅಸ್ಯ ಗಮ್ಯತೇ ಸ್ವಪ್ನೋ ಭೂತ್ವಾ ಅತಿಕ್ರಾನ್ತೋ ಮೃತ್ಯೋ ರೂಪಾಣಿ[1] ತಸ್ಮಾತ್ ಸ್ವಪ್ನೇ ಸ್ವಯಂಜ್ಯೋತಿರಾತ್ಮಾ ॥

(ಭಾಷ್ಯಾರ್ಥ)

"ಅವನನ್ನು ತಟ್ಟನೆ ಎಬ್ಬಿಸಬಾರದು ಎನ್ನುವರು" (ಎಂಬ ವಾಕ್ಯದ ಅಭಿಪ್ರಾಯವೇನೆಂದರೆ), ಸ್ವಪ್ನದಲ್ಲಿ ಆತ್ಮಜ್ಯೋತಿಯು ವ್ಯತಿರಿಕ್ತ(ವಾಗಿರುತ್ತದೆ ಎಂಬುದಕ್ಕೆ) ಲೋಕದಲ್ಲಿ (ಈ) ಪ್ರಸಿದ್ಧಿಯೂ ಇರುತ್ತದೆ. ಈ (ಪ್ರಸಿದ್ಧಿ) ಯಾವದು ? ಎಂದರೆ, ಆ ಆತ್ಮನನ್ನು ನಿದ್ರಿಸುತ್ತಿರುವಾಗ ತಟ್ಟನೆ, ಇದ್ದಕ್ಕಿದ್ದ ಹಾಗೆ, ಬಲಾತ್ಕಾರದಿಂದ ಎಬ್ಬಿಸಬಾರದು ಎನ್ನುವರು, ಲೋಕದಲ್ಲಿ ವೈದ್ಯರೇ ಮುಂತಾದ ಜನರು ಹೇಳುತ್ತಾರೆ. ನಿಜವಾಗಿ ಅವನು ಜಾಗ್ರದ್ದೇಹದಿಂದ ಇಂದ್ರಿಯದ್ವಾರದಿಂದ ಹೊರಹೊರಟು ತಾನೊಬ್ಬನೇ ಹೊರಗೆ ಇರುತ್ತಾನೆ ಎಂಬುದೇ ಅವರ ಅಭಿಪ್ರಾಯವಾಗಿರಬೇಕು ; ಆದ್ದರಿಂದಲೇ ಅವನನ್ನು ತಟ್ಟನೆ ಎಚ್ಚರಗೊಳಿಸಬಾರದು ಎನ್ನುತ್ತಾರೆ. (ಹೀಗೆ ಮಾಡು)ವದರಲ್ಲಿ ಅವರಿಗೆ (ಈ) ದೋಷವೂ ಕಂಡಿರಬೇಕು, ಬಲಾತ್ಕಾರದಿಂದ ಇವನನ್ನು ಎಚ್ಚರಗೊಳಿಸಿದರೆ ಆ ಇಂದ್ರಿಯದ್ವಾರಗಳನ್ನು ತಟ್ಟನೆ ಎಚ್ಚರಗೊಳಿಸಿದರೆ ಸೇರುವದಿಲ್ಲ ಎಂಬುದೇ (ಆ ದೋಷ). ಆ ಇದನ್ನು (ಶ್ರುತಿ) ಹೇಳುತ್ತದೆ : ಯಾವದನ್ನು ಇವನು ಸೇರುವದಿಲ್ಲವೋ ಇದಕ್ಕೆ (ಅದು) ದುರ್ಭಿಷಜ್ಯವಾಗು

---

1. ಇದರ ಮುಂದೆ ಅಚ್ಚಿನ ಪುಸ್ತಕಗಳಲ್ಲಿರುವ ಇತಿಯನ್ನು ಹೆಚ್ಚೆಂದು ಬಿಟ್ಟು ಬಿಟ್ಟಿದೆ.

ತ್ತದೆ ; ಯಾವ ಇಂದ್ರಿಯದ್ವಾರವನ್ನು- ಯಾವ ಪ್ರದೇಶದಿಂದ ಶುಕ್ರವನ್ನು ತೆಗೆದುಕೊಂಡು (ಸ್ವಪ್ನಕ್ಕೆ) ಹೋಗಿದ್ದನೋ[1] ಆ ಇಂದ್ರಿಯಪ್ರದೇಶವನ್ನು- ಈ ಆತ್ಮನು ಮತ್ತೆ ಸೇರುವದಿಲ್ಲ, ಕೆಲವು ವೇಳೆ ವ್ಯತ್ಯಸ್ತವಾಗಿಯೂ ಇಂದ್ರಿಯಮಾತ್ರೆಗಳನ್ನು ಇವನು ಪ್ರವೇಶಿಸುವಂತೆ ಮಾಡುವದುಂಟು[2] ; ಆದರಿಂದ ಕುರುಡು, ಕಿವುಡು- ಮುಂತಾದ ದೋಷಗಳು ಉಂಟಾದರೆ ದುರ್ಭಿಷಜ್ಯವು, ವೈದ್ಯಕರ್ಮವು ಕಷ್ಟವಾಗುವಿಕೆಯು, ಈ ದೇಹಕ್ಕೆ ಆಗುತ್ತದೆ. ಈ ದೇಹಕ್ಕೆ ಚಿಕಿತ್ಸೆಮಾಡುವದು ಕಷ್ಟವಾಗುತ್ತದೆ ಎಂದರ್ಥ. ಆದ್ದರಿಂದ (ಈ) ಪ್ರಸಿದ್ಧಿಯಿಂದಲೂ ಈ (ಆತ್ಮನು) ಸ್ವಪ್ನದಲ್ಲಿ ಸ್ವಯಂಜ್ಯೋತಿ ಎಂದು ಗೊತ್ತಾಗುತ್ತದೆ.

(ಹೀಗೆ) ಸ್ವಪ್ನವಾಗಿ ಮೃತ್ಯುವಿನ ರೂಪಗಳನ್ನು ಅತಿಕ್ರಮಿಸುತ್ತಾನೆ (೪-೩-೭), ಆದ್ದರಿಂದ ಸ್ವಪ್ನದಲ್ಲಿ ಆತ್ಮನು ಸ್ವಯಂಜ್ಯೋತಿಯಾಗಿರುತ್ತಾನೆ.

## ಸ್ವಪ್ನದಲ್ಲಿ ಆತ್ಮನು ಸ್ವಯಂಜ್ಯೋತಿಯೇ

(ಭಾಷ್ಯ)

೧೪. ಅಥೋ ಅಪಿ ಖಲು ಅನ್ಯೇ ಆಹುಃ ಜಾಗರಿತದೇಶ ಏವಾಸ್ಯ ಏಷ ಯಃ ಸ್ವಪ್ನಃ । ನ ಸಂಧ್ಯಂ ಸ್ಥಾನಾನ್ತರಮಿಹಲೋಕಪರಲೋಕಾಭ್ಯಾಂ ವ್ಯತಿರಿಕ್ತಮ್, ಕಿಂ ತರ್ಹಿ ಇಹಲೋಕ ಏವ ಜಾಗರಿತದೇಶಃ । ಯದ್ಯೇವಮ್, ಕಿಂ ಚಾತಃ ? ಶೃಣು ಅತೋ ಯದ್ಭವತಿ। ಯದಾ ಜಾಗರಿತದೇಶ ಏವಾಯಂ ಸ್ವಪ್ನಃ ತದಾ ಅಯಮಾತ್ಮಾ ಕಾರ್ಯಕರಣೇಭ್ಯೋ ನ ವ್ಯಾವೃತ್ತಃ, ತೈರ್ಮಿಶ್ರೀಭೂತಃ । ಅತೋ ನ ಸ್ವಯಂಜ್ಯೋತಿರಾತ್ಮಾ ಇತ್ಯತಃ ಸ್ವಯಂಜ್ಯೋತಿಷ್ಟ್ವಬಾಧನಾಯ ಅನ್ಯೇ ಆಹುಃ ಜಾಗರಿತದೇಶ ಏವಾಸ್ಯ ಏಷಃ ಇತಿ । ತತ್ರ ಚ ಹೇತುಮ್ ಆಚಕ್ಷತೇ ಜಾಗರಿತದೇಶತ್ವೇ ಯಾನಿ ಹಿ ಯಸ್ಮಾತ್ ಹಸ್ತ್ಯಾದೀನಿ ಪದಾರ್ಥಜಾತಾನಿ ಜಾಗ್ರತ್ ಜಾಗರಿತದೇಶೇ ಪಶ್ಯತಿ ಲೌಕಿಕಃ, ತಾನ್ಯೇವ ಸುಪ್ತೋಽಪಿ ಪಶ್ಯತಿ ಇತಿ । ತದಸತ್ । ಇನ್ದ್ರಿಯೋಪರಮಾತ್ । ಉಪರತೇಷು ಹಿ ಇನ್ದ್ರಿಯೇಷು ಸ್ವಪ್ನಾನ್ ಪಶ್ಯತಿ । ತಸ್ಮಾತ್ ನಾನ್ಯಸ್ಯ ಜ್ಯೋತಿಷಃ ತತ್ರ ಸಂಭವೋಽಸ್ತಿ । ತದುಕ್ತಮ್ "ನ ತತ್ರ ರಥಾ ನ ರಥಯೋಗಾಃ" (೪-೩-೧೦) ಇತ್ಯಾದಿ । ತಸ್ಮಾತ್ ಅತ್ರಾಯಂ ಪುರುಷಃ ಸ್ವಯಂಜ್ಯೋತಿರ್ಭವತ್ಯೇವ ॥

---

1. ೪-೩-೧೧ನ್ನೂ ಅದರ ಭಾಷ್ಯವನ್ನೂ ನೋಡಿ.

2. ಕಣ್ಣಿಗೆ ಮೂಗಿನ ಮಾತ್ರೆ, ಮೂಗಿಗೆ ಕಣ್ಣಿನ ಮಾತ್ರೆ- ಹೀಗೆ ಸೇರಿಸುವದೂ ಉಂಟು ಎಂದರ್ಥ.

(ಭಾಷ್ಯಾರ್ಥ)

(ಅಥೋ=ಅಪಿ) ಮತ್ತು ಕೆಲವರು ಹೇಳುತ್ತಾರೇನೆಂದರೆ :[1] ಈ ಸ್ವಪ್ನವೆಂಬಿದು ಇವನ ಎಚ್ಚರದ ಪ್ರದೇಶದಲ್ಲಿಯೇ[2] (ಆಗತಕ್ಕದ್ದು), ಈ ಲೋಕ ಪರಲೋಕಗಳಿಗಿಂತ ವ್ಯತಿರಿಕ್ತವಾದ ಸಂಧ್ಯವೆಂಬ ಮತ್ತೊಂದು ಸ್ಥಾನವು ಇಲ್ಲ, ಮತ್ತೇನೆಂದರೆ (ಅದು) ಈ ಲೋಕವೇ ಎಚ್ಚರದ ಪ್ರದೇಶದಲ್ಲಿ (ಆಗತಕ್ಕದ್ದೇ).

(ಪ್ರಶ್ನೆ) :- ಹಾಗಾದರೆ ಇದರಿಂದೇನಾಗುವದು ?

( ಉತ್ತರ ) :- ಇದರಿಂದ ಏನಾಗುವದೋ (ಹೇಳುವೆವು). ಕೇಳು, ಯಾವಾಗ ಈ ಸ್ವಪ್ನವು ಎಚ್ಚರದ ಪ್ರದೇಶದಲ್ಲಿಯೇ (ಆಗತಕ್ಕದ್ದೆಂದು ಒಪ್ಪುವೆವೋ) ಆಗ ಈ ಆತ್ಮನು ಕಾರ್ಯಕರಣಗಳಿಂದ ವಿವಿಕ್ತನಲ್ಲ, ಅವುಗಳಿಂದ ಮಿಶ್ರಿತನಾದವನೇ. ಆದ್ದರಿಂದ (ಅವನು) ಸ್ವಯಂಜ್ಯೋತಿಯಲ್ಲ ಎಂದಾಗುವದು. ಆದ್ದರಿಂದ ಸ್ವಯಂಜ್ಯೋತಿಷ್ಟ್ವವನ್ನು ಬಾಧಿಸುವದಕ್ಕಾಗಿ ಮತ್ತೆ ಕೆಲವರು "ಈ (ಸ್ವಪ್ನವು) ಎಚ್ಚರದ ಪ್ರದೇಶದಲ್ಲಿಯೇ (ಆಗತಕ್ಕದ್ದು)" ಎಂದು ಹೇಳುತ್ತಾರೆ. ಮತ್ತು ಜಾಗರಿತಪ್ರದೇಶದ್ದೇ ಎಂಬುದಕ್ಕೆ (ಈ) ಹೇತುವನ್ನು ಹೇಳುತ್ತಾರೆ . (ಹಿ=ಯಸ್ಮಾತ್) ಏಕೆಂದರೆ ಯಾವ ಆನೆ ಮುಂತಾದ ಪದಾರ್ಥ ಜಾತಗಳನ್ನು ಎಚ್ಚರದಲ್ಲಿ ಎಚ್ಚರದ ಪ್ರದೇಶದಲ್ಲಿ ಲೋಕದ ಜನವು ನೋಡುತ್ತದೆಯೋ ಅವನ್ನೇ ಕನಸಿನಲ್ಲಿರುವವನೂ ಕಾಣುತ್ತಾನೆ ಎಂಬುದು (ಹೇತು).

ಇದು ಸರಿಯಲ್ಲ. ಏಕೆಂದರೆ ಇಂದ್ರಿಯಗಳು ಸುಪ್ತನಾಗಿರುತ್ತವೆ. ಇಂದ್ರಿಯಗಳು ಸುಪ್ತನಾದವೇಲಲ್ಲವೆ, ಸ್ವಪ್ನಗಳನ್ನು ಕಾಣುತ್ತಾನೆ ? ಆದ್ದರಿಂದ ಮತ್ತೊಂದು ಜ್ಯೋತಿಗೆ ಅಲ್ಲಿ ಸಂಭವವಿರುವದಿಲ್ಲ[3] ಇದನ್ನು "ಅಲ್ಲಿ ರಥಗಳಿರುವದಿಲ್ಲ, ರಥಯೋಗಗಳಿರುವದಿಲ್ಲ" (೪-೩-೧೦) ಎಂದು ಮುಂತಾಗಿ (ಹಿಂದೆ) ಹೇಳಿರುತ್ತದೆ.[4] ಆದ್ದರಿಂದ ಇಲ್ಲಿ ಈ ಪುರುಷನು ಸ್ವಯಂಜ್ಯೋತಿಯಾಗಿಯೇ ಇರುತ್ತಾನೆ.

---

1. ಖಲು ಎಂಬುದು ವಾಕ್ಯಾಲಂಕಾರಕ್ಕಾಗಿ ಉಪಯೋಗಿಸಿದ್ದಾದ್ದರಿಂದ ಅದನ್ನು ಕನ್ನಡಿಸಿಲ್ಲ.

2 ಎಚ್ಚರದ ಒಂದು ಭಾಗವೇ, ಎಚ್ಚರಕ್ಕಿಂತ ಬೇರೆಯಲ್ಲ ಎಂದರ್ಥ

3. ಮನಸ್ಸು ಅಲ್ಲಿದ್ದರೂ ವಾಸನಾರೂಪವಾಗಿ ಪರಿಣಮಿಸಿರುವ ಅದು ಆತ್ಮನಿಗೇ ವಿಷಯವಾಗಿರುತ್ತದೆಯಾದ್ದರಿಂದ ಆತ್ಮನ ಸ್ವಯಂಜ್ಯೋತಿಷ್ಟ್ವಕ್ಕೆ ಬಾಧಕವಲ್ಲವೆಂಬ ಭಾವ.

4. ರಥಾದಿಗಳಿರುವದಿಲ್ಲವೆಂಬುದನ್ನು ಇಲ್ಲಿ ಪ್ರತಿಪಾದಿಸಿದೆ ; ವಾಸನಾಮಯವಾದ ದೃಶ್ಯಗಳನ್ನು ಕಾಣುತ್ತಾನಾದ್ದರಿಂದ ಅವನ್ನು ಸೃಷ್ಟಿಮಾಡಿಕೊಳ್ಳುತ್ತಾನೆಂದು ಗೌಣವೃತ್ತಿಯಿಂದ ಹೇಳಿದೆ. ಸೂ.ಭಾ. ೩-೨-೪ ; ಭಾ.ಭಾ. ೨೫೪.

# ಜನಕನು ಮೋಕ್ಷಕ್ಕಾಗಿ ಮತ್ತೂ ಪ್ರಶ್ನಿಸಿದ್ದು

(ಭಾಷ್ಯ)

೧೯೫. ಸ್ವಯಂಜ್ಯೋತಿರಾತ್ಮಾ ಅಸ್ತಿ ಇತಿ ಸ್ವಪ್ನನಿದರ್ಶನೇನ ಪ್ರದರ್ಶಿತಮ್ । 'ಅತಿಕ್ರಾಮತಿ ಮೃತ್ಯೋ ರೂಪಾಣಿ' (೪-೩-೭) ಇತಿ ಚ ಕ್ರಮೇಣ ಸಂಚರನ್ ಇಹಲೋಕಪರಲೋಕಾದೀನ್ ಇಹಲೋಕಪರಲೋಕಾದಿವ್ಯತಿರಿಕ್ತಃ । ತಥಾ ಜಾಗ್ರತ್ಸ್ವಪ್ನಕುಲಾಯಾಭ್ಯಾಂ ವ್ಯತಿರಿಕ್ತಃ । ತತ್ರ ಚ ಕ್ರಮಸಂಚಾರಾತ್ ನಿತ್ಯಶ್ಚ ಇತ್ಯೇತತ್ ಪ್ರತಿಪಾದಿತಂ ಯಾಜ್ಞವಲ್ಕ್ಯೇನ । ಅತೋ ವಿದ್ಯಾನಿಷ್ಕ್ರಯಾರ್ಥಂ ಸಹಸ್ರಂ ದದಾಮೀತ್ಯಾಹ ಜನಕಃ । ಸೋಽಹಮ್ ಏವಂ ಬೋಧಿತಸ್ತ್ವಯಾ ಭಗವತೇ ತುಭ್ಯಂ ಸಹಸ್ರಂ ದದಾಮಿ । ವಿಮೋಕ್ಷಶ್ಚ ಕಾಮಪ್ರಶ್ನೋ ಮಯಾ ಅಭಿಪ್ರೇತಃ । ತದುಪಯೋಗೀ ಅಯಂ ತಾದರ್ಥ್ಯಾತ್ ತದೇಕದೇಶ ಏವ । ಅತಃ ತ್ವಾಂ ನಿಯೋಕ್ಷ್ಯಾಮಿ ಸಮಸ್ತಕಾಮಪ್ರಶ್ನನಿರ್ಣಯಶ್ರವಣೇನ ವಿಮೋಕ್ಷಾಯ 'ಅತ ಊರ್ಧ್ವಂ ಬ್ರೂಹಿ' ಇತಿ ಯೇನ ಸಂಸಾರಾದ್ ವಿಮುಚ್ಯೇಯಮ್[1] ತ್ವತ್ಪ್ರಸಾದಾತ್ । ವಿಮೋಕ್ಷಪದಾರ್ಥೈಕದೇಶನಿರ್ಣಯಹೇತೋಃ ಸಹಸ್ರದಾನಮ್ ॥

(ಭಾಷ್ಯಾರ್ಥ)

ಸ್ವಯಂಜ್ಯೋತಿಯಾದ ಆತ್ಮನು ಇದಾನೆ ಎಂದು ಸ್ವಪ್ನದೃಷ್ಟಾಂತದಿಂದ ತೋರಿಸಿಕೊಟ್ಟದ್ದಾಯಿತು, ಕ್ರಮವಾಗಿ ಇಹಲೋಕಪರಲೋಕವೇ ಮುಂತಾದವುಗಳನ್ನು[2] ಸಂಚರಿಸುತ್ತಿರುವದರಿಂದ ಇಹಲೋಕಪರಲೋಕಾದಿಗಳಿಗಿಂತ ವ್ಯತಿರಿಕ್ತನಾಗಿ ಮೃತ್ಯುವಿನ ರೂಪಗಳನ್ನು ದಾಟುತ್ತಾನೆ ಎಂದೂ (ತಿಳಿಸಿದ್ದಾಯಿತು). ಇದರಂತೆ ಜಾಗ್ರತ್ಸ್ವಪ್ನಗಳ ಗೂಡುಗಳಿಗಿಂತ ಬೇರೆಯಾದವನೂ ನಿತ್ಯನೂ ಆಗಿರುತ್ತಾನೆ, ಏಕೆಂದರೆ ಅಲ್ಲಿ ಕ್ರಮದಿಂದ ಸಂಚರಿಸುತ್ತಿರುತ್ತಾನೆ- ಎಂಬಿದನ್ನು ಯಾಜ್ಞವಲ್ಕ್ಯನು ಪ್ರತಿಪಾದಿಸಿರುತ್ತಾನೆ. ಆದ್ದರಿಂದ ವಿದ್ಯೆಯ ನಿಷ್ಕ್ರಯಕ್ಕಾಗಿ ಸಾವಿರ (ಧನ)ವನ್ನು ಕೊಡುತ್ತೇನೆ- ಎಂದು ಜನಕನು ಹೇಳುತ್ತಿದಾನೆ.

ಹೀಗೆ ನೀನು ತಿಳಿಸಿಕೊಟ್ಟಿರುವ ಆ ನಾನು ಪೂಜ್ಯನಾದ ನಿನಗೆ ಸಾವಿರ (ಧನ)ವನ್ನು ಕೊಡುತ್ತೇನೆ. ಆದರೆ ವಿಮೋಕ್ಷವೇ ಕಾಮಪ್ರಶ್ನೆ ಎಂಬುದು ನನ್ನ ಅಭಿಪ್ರಾಯವು. ಇದು ಅದಕ್ಕೆ ಉಪಯೋಗಿಯಾಗಿರುತ್ತದೆ. ಅದ

---

1. 'ವಿಪ್ರಮುಚ್ಯೇಯಮ್' ಎಂಬುದಕ್ಕಿಂತ ಈ ಪಾಠವು ಮೇಲು ; ಏಕೆಂದರೆ 'ವಿಮೋಕ್ಷಾಯ' ಎಂಬ ಶ್ರುತಿಗೆ ಅನುಗುಣವಾಗಿದೆ.

2. ಇಲ್ಲಿ ಮುಂತಾದ ಎಂಬ ಮಾತಿಗೆ ಆಯಾ ದೇಹಾದಿಗಳಿಗಿಂತ ವ್ಯತಿರಿಕ್ತನು ಎಂದರ್ಥವೆಂದು ಟೀಕೆ.

ಕ್ಕಾಗಿರುವದರಿಂದ (ಇದು) ಅದರಲ್ಲಿ ಒಂದಂಶಮಾತ್ರವಾಗಿರುತ್ತದೆ. ಆದ್ದರಿಂದ ಕಾಮಪ್ರಶ್ನೆಯೆಲ್ಲವನ್ನೂ ನಿರ್ಣಯಿಸಿದ್ದನ್ನು ಕೇಳಿ, ನಿನ್ನನುಗ್ರಹದಿಂದ ಸಂಸಾರದಿಂದ ಮುಕ್ತನಾಗುವೆನೆಂದು ಇನ್ನೂ ಮುಂದೆ ವಿಮೋಕ್ಷಕ್ಕಾಗಿಯೇ ಹೇಳು ಎಂದು ಕೇಳುತ್ತಿದೇನೆ (ಆ) ವಿಮೋಕ್ಷಪದಾರ್ಥದ ಒಂದು ಭಾಗ ವನ್ನು ನಿರ್ಣಯಿಸಿದ್ದರಿಂದ ಸಾವಿರ (ಧನ)ವನ್ನು ಕೊಡುತ್ತೇನೆ

## ಮೃತ್ಯುವು ಆತ್ಮನ ಧರ್ಮವಲ್ಲ

(ಉಪನಿಷತ್ತು)

**ಸ ವಾ ಏಷ ಏತಸ್ಮಿನ್ ಸಂಪ್ರಸಾದೇ ರತ್ವಾ ಚರಿತ್ವಾ ದೃಷ್ಟ್ವೈವ ಪುಣ್ಯಂ ಚ ಪಾಪಂ ಚ । ಪುನಃ ಪ್ರತಿನ್ಯಾಯಂ ಪ್ರತಿಯೋನ್ಯಾ ದ್ರವತಿ ಸ್ವಪ್ನಾಯೈವ ಸ ಯತ್ತತ್ರ ಕಿಂಚಿತ್ ಪಶ್ಯತ್ಯನನ್ವಾಗತ ಸ್ತೇನ ಭವತ್ಯಸಙ್ಗೋ ಹ್ಯಯಂ ಪುರುಷ ಇತ್ಯೇವಮೇವೈತ ದ್ಯಾಜ್ಞವಲ್ಕ್ಯ ಸೋಽಹಂ ಭಗವತೇ ಸಹಸ್ರಂ ದದಾಮ್ಯತ ಊರ್ಧ್ವಂ ವಿಮೋಕ್ಷಾಯೈವ ಬ್ರೂಹೀತಿ ॥ ೧೫ ॥**

೧೫. "ಆ ಇವನೇ ಈ ಸಂಪ್ರಸಾದದಲ್ಲಿ ರಮಿಸಿ ಸಂಚರಿಸಿ ಪುಣ್ಯವನ್ನೂ ಪಾಪವನ್ನೂ ಕಾಣುತ್ತಲೇ ಇದ್ದು ಮತ್ತೆ ಪ್ರತಿನ್ಯಾಯ ದಿಂದ ಪ್ರತಿಯೋನಿಯಾಗಿ ಸ್ವಪ್ನಕ್ಕೇ ಬರುತ್ತಿರುವನು. ಅವನು ಅಲ್ಲಿ ಏನೇನನ್ನು ಕಾಣುತ್ತಾನೋ ಅದರಿಂದ ಅನನ್ವಾಗತನಾಗಿರು ತ್ತಾನೆ. ಈ ಪುರುಷನು ಅಸಂಗನಲ್ಲವೆ?" "ಯಾಜ್ಞವಲ್ಕ್ಯನೆ, ಇದು ಹೀಗೆಯೇ, ಆ ನಾನು ಭಗವಂತನಾದ (ನಿನಗೆ) ಸಹಸ್ರವನ್ನು ಕೊಡುತ್ತೇನೆ; ಇನ್ನುಮೇಲೆ ವಿಮೋಕ್ಷಕ್ಕೇ ಹೇಳು!"

## ಮುಂದಿನ ಗ್ರಂಥದ ಸಂಬಂಧ

(ಭಾಷ್ಯ)

೧೯೬. ಯತ್ ಪ್ರಸ್ತುತಮ್ "ಆತ್ಮನೈವಾಯಂ ಜ್ಯೋತಿಷಾಽಽಸ್ತೇ" (೪-೩-೬) ಇತಿ ತತ್ ಪ್ರತ್ಯಕ್ಷತಃ ಪ್ರತಿಪಾದಿತಮ್ "ಅತ್ರಾಯಂ ಪುರುಷಃ ಸ್ವಯಂಜ್ಯೋತಿರ್ಭವತಿ" ಇತಿ ಸ್ವಪ್ನೇ। ಯತ್ತೂಕ್ತಮ್ "ಸ್ವಪ್ನೋ ಭೂತ್ವೇಮಂ ಲೋಕಮತಿಕ್ರಾಮತಿ ಮೃತ್ಯೋ ರೂಪಾಣಿ" (೪-೩-೭) ಇತಿ ತತ್ರ ಏತದಾ ಶಙ್ಕ್ಯತೇ ಮೃತ್ಯೋ ರೂಪಾಣ್ಯೇವ ಅತಿಕ್ರಾಮತಿ ನ ಮೃತ್ಯುಮ್ । ಪ್ರತ್ಯಕ್ಷಂ ಹ್ಯೇತತ್ ಸ್ವಪ್ನೇ ಕಾರ್ಯಕರಣವ್ಯಾವೃತ್ತಸ್ಯಾಪಿ ಮೋದತ್ರಾಸಾದಿದರ್ಶನಮ್। ತಸ್ಮಾತ್ ನೂನಂ ನೈವಾಯಂ ಮೃತ್ಯುಮತಿಕ್ರಾಮತಿ। ಕರ್ಮಣೋ ಹಿ

ಮೃತ್ಯೋಃ ಕಾರ್ಯಂ ಮೋಹತ್ರಾಸಾದಿ ದೃಶ್ಯತೇ। ಯದಿ ಚ ಮೃತ್ಯುನಾ ಬದ್ಧ ಏವಾಯಂ ಸ್ವಭಾವತಃ, ತತೋ ವಿಮೋಕ್ಷೋ ನೋಪಪದ್ಯತೇ। ನ ಹಿ ಸ್ವಭಾವಾತ್ ಕಶ್ಚಿತ್ ವಿಮುಚ್ಯತೇ। ಅಥ ಸ್ವಭಾವೋ ನ ಭವತಿ ಮೃತ್ಯುಃ, ತತಸ್ತಸ್ಮಾತ್ ಮೋಕ್ಷ ಉಪಪತ್ಸ್ಯತೇ। ಯಥಾ ಅಸೌ ಮೃತ್ಯುಃ ಆತ್ಮೀಯೋ ಧರ್ಮೋ ನ ಭವತಿ ತಥಾ ಪ್ರದರ್ಶನಾಯ "ಅತ ಊರ್ಧ್ವಂ ವಿಮೋಕ್ಷಾಯ ಬ್ರೂಹಿ" ಇತ್ಯೇವಂ ಜನಕೇನ ಪರ್ಯನುಯುಕ್ತೋ ಯಾಜ್ಞವಲ್ಕ್ಯಃ ತದ್ದಿದರ್ಶಯಿಷಯಾ ಪ್ರವವೃತೇ ॥

(ಭಾಷ್ಯಾರ್ಥ)

"ಆತ್ಮನೆಂಬ ಜ್ಯೋತಿಯಿಂದಲೇ ಕುಳ್ಳಿರುತ್ತಾನೆ" (೪-೩-೬) ಎಂದು ಪ್ರಾರಂಭವಾಗಿತ್ತಲ್ಲ, ಅದನ್ನು "ಇಲ್ಲಿ ಈ ಪುರುಷನು ಸ್ವಯಂಜ್ಯೋತಿಯಾಗಿರುತ್ತಾನೆ" ಎಂದು ಸ್ವಪ್ನದಲ್ಲಿ ಪ್ರತ್ಯಕ್ಷಾನುಭವದಿಂದ ಪ್ರತಿಪಾದಿಸಿದ್ದಾಯಿತು. ಇನ್ನು "ಸ್ವಪ್ನವಾಗಿ ಈ ಲೋಕವನ್ನೂ ಮೃತ್ಯುವಿನ ರೂಪಗಳನ್ನೂ ಅತಿಕ್ರಮಿಸುತ್ತಾನೆ" (೪-೩-೭) ಎಂದು ಹೇಳಿತ್ತಲ್ಲ, ಅಲ್ಲಿ ಇದನ್ನು ಆಶಂಕಿಸಲಾಗುತ್ತದೆ: ಮೃತ್ಯುವಿನ ರೂಪಗಳನ್ನೇ ಅತಿಕ್ರಮಿಸುತ್ತಾನೆಯೇ ಹೊರತು ಮೃತ್ಯುವನ್ನು (ಅತಿಕ್ರಮಿಸು)ವದಿಲ್ಲ. ಸ್ವಪ್ನದಲ್ಲಿ ಕಾರ್ಯಕರಣಗಳು ಇಲ್ಲದಿದ್ದರೂ ಸಂತೋಷ, ಭಯ- ಮುಂತಾದವುಗಳು ಕಾಣುತ್ತವೆ ಎಂಬಿದು ಪ್ರತ್ಯಕ್ಷಾನುಭವದಲ್ಲಿದೆಯಷ್ಟೆ. ಆದ್ದರಿಂದ ಇವನು ಮೃತ್ಯುವನ್ನು ಅತಿಕ್ರಮಿಸುವದೇ ಇಲ್ಲವೆಂದಾಯಿತು. ಕರ್ಮವೆಂಬ ಮೃತ್ಯುವಿನ ಕಾರ್ಯವಾದ ಮೋದತ್ರಾಸಾದಿಗಳು (ಸ್ವಪ್ನದಲ್ಲಿಯೂ) ಕಾಣಬರುವವಲ್ಲವೆ ? ಇವನು ಸ್ವಭಾವದಿಂದಲೇ ಮೃತ್ಯುವಿನಿಂದ ಬದ್ಧನಾಗಿರುತ್ತಾನಾದರೆ, (ಆಗ) ಅದರಿಂದ ಬಿಡುಗಡೆಯಾಗುವದೆಂಬುದು ಹೊಂದುವದಿಲ್ಲ. ಏಕೆಂದರೆ ಯಾವನಿಗೂ ಸ್ವಭಾವದಿಂದ ಬಿಡುಗಡೆಯಾಗಲಾರದು. ಹೀಗಲ್ಲದೆ ಮೃತ್ಯುವು ಸ್ವಭಾವವಲ್ಲವೆಂದಾದರೆ ಆಗ ಅದರಿಂದ ಬಿಡುಗಡೆಯಾಗುವದೆಂಬುದು ಹೊಂದುತ್ತದೆ. ಈ ಮೃತ್ಯುವು ಆತ್ಮನ ಧರ್ಮವಲ್ಲವೆಂಬುದು ಹೇಗೆಂಬುದನ್ನು ತಿಳಿಸುವದಕ್ಕಾಗಿ "ಇನ್ನು ಮೇಲೆ ವಿಮೋಕ್ಷಕ್ಕೇ ಹೇಳು" ಎಂದಿಂತು ಜನಕನು ಕೇಳಲು ಯಾಜ್ಞವಲ್ಕ್ಯನು ಅದನ್ನು ತಿಳಿಸುವದಕ್ಕಾಗಿ ಹೊರಟಿರುತ್ತಾನೆ.

## ಸ್ವಪ್ನದಲ್ಲಿ ಕರ್ಮವನ್ನೂ ಮೀರಿರುತ್ತಾನೆ

(ಭಾಷ್ಯ)

೧೯೭. ಸ ವೈ ಪ್ರಕೃತಃ ಸ್ವಯಂಜ್ಯೋತಿಃ ಪುರುಷಃ ಏಷಃ ಯಃ ಸ್ವಪ್ನೇ ಪ್ರದರ್ಶಿತಃ। ಏತಸ್ಮಿನ್ ಸಂಪ್ರಸಾದೇ। ಸಮ್ಯಕ್ ಪ್ರಸೀದತಿ ಅಸ್ಮಿನ್ ಇತಿ ಸಂಪ್ರಸಾದಃ। ಜಾಗರಿತೇ ದೇಹೇನ್ದ್ರಿಯವ್ಯಾಪಾರಶತಸಂನಿಪಾತಜಂ

ಹಿತ್ವಾ ಕಾಲುಷ್ಯಂ ತೇಭ್ಯೋ ವಿಪ್ರಮುಕ್ತಃ ಈಷತ್ ಪ್ರಸೀದತಿ ಸ್ವಪ್ನೇ। ಇಹ ತು ಸುಷುಪ್ತೇ ಸಮ್ಯಕ್ ಪ್ರಸೀದತಿ ಇತ್ಯತಃ ಸುಷುಪ್ತಂ ಸಂಪ್ರಸಾದ ಉಚ್ಯತೇ। "ತೀರ್ಣೋ ಹಿ ತದಾ ಸರ್ವಾಞ್ಛೋಕಾನ್" (೪-೩-೨೨) ಇತಿ "ಸಲಿಲ ಏಕೋ ದ್ರಷ್ಟಾ" (೪-೩-೩೧) ಇತಿ ಹಿ ವಕ್ಷ್ಯತಿ ಸುಷುಪ್ತಸ್ಥಮ್ ಆತ್ಮಾನಮ್। ಸ ವೈ ಏಷ ಏತಸ್ಮಿನ್ ಸಂಪ್ರಸಾದೇ ಕ್ರಮೇಣ ಸಂಪ್ರಸನ್ನಃ ಸನ್ ಸುಷುಪ್ತೇ ಸ್ಥಿತ್ವಾ। ಕಥಂ ಸಂಪ್ರಸನ್ನಃ? ಸ್ವಪ್ನಾತ್ ಸುಷುಪ್ತಂ ಪ್ರವಿವಿಕ್ಷುಃ ಸ್ವಪ್ನಾವಸ್ಥ ಏವ ರತ್ವಾ ರತಿಮನುಭೂಯ ಮಿತ್ರಬನ್ಧುಜನದರ್ಶನಾದಿನಾ ಚರಿತ್ವಾ ವಿಹೃತ್ಯ ಅನೇಕಧಾ ಚರಣಫಲಂ ಶ್ರಮಮ್ ಉಪಲಭ್ಯ ಇತ್ಯರ್ಥಃ। ದೃಷ್ಟ್ವೈವ ನ ಕೃತ್ವಾ ಇತ್ಯರ್ಥಃ। ಪುಣ್ಯಂ ಪುಣ್ಯಫಲಂ ಪಾಪಂ ಚ ಪಾಪಫಲಮ್। ನ ತು ಪುಣ್ಯಪಾಪಯೋಃ ಸಾಕ್ಷಾತ್ ದರ್ಶನಮ್ ಅಸ್ತಿ ಇತ್ಯವೋಚಾಮ। ತಸ್ಮಾತ್ ನ ಪುಣ್ಯಪಾಪಾಭ್ಯಾಮ್ ಅನುಬದ್ಧಃ। ಯೋ ಹಿ ಕರೋತಿ ಪುಣ್ಯಾಪಾಪೇ ಸ ತಾಭ್ಯಾಮ್ ಅನುಬಧ್ಯತೇ। ನ ಹಿ ದರ್ಶನಮಾತ್ರೇಣ ತದನುಬದ್ಧಃ ಸ್ಯಾತ್। ತಸ್ಮಾತ್ ಸ್ವಪ್ನೋ ಭೂತ್ವಾ ಮೃತ್ಯುಮ್ ಅತಿಕ್ರಾಮತ್ಯೇವ ನ ಮೃತ್ಯುರೂಪಾಣ್ಯೇವ ಕೇವಲಮ್ ॥

(ಭಾಷ್ಯಾರ್ಥ)

ಆ ಇವನೇ, ಪ್ರಕೃತನಾಗಿರುವ ಸ್ವಪ್ನದಲ್ಲಿ ಸ್ವಯಂಜ್ಯೋತಿ ಎಂದು ತೋರಿಸಲಾಯಿತಲ್ಲ ಈ ಪುರುಷನೇ, ಈ ಸಂಪ್ರಸಾದದಲ್ಲಿ–ಇದರಲ್ಲಿ ಚೆನ್ನಾಗಿ ಪ್ರಸನ್ನನಾಗುತ್ತಾನಾದ್ದರಿಂದ ಸಂಪ್ರಸಾದ(ವಿದು). ಎಚ್ಚರದಲ್ಲಿ ದೇಹೇಂದ್ರಿಯಗಳ ನೂರಾರು ವ್ಯಾಪಾರಗಳ ಸಂಮಿಶ್ರಣದಿಂದ ಆದ ಕಾಲುಷ್ಯವನ್ನು ಬಿಟ್ಟು, ಅವುಗಳಿಂದ ಬಿಡುಗಡೆಯನ್ನು ಹೊಂದಿ ಸ್ವಪ್ನದಲ್ಲಿ ಒಂದಿಷ್ಟು ಸಂಪ್ರಸನ್ನನಾಗುತ್ತಾನೆ; ಆದರೆ ಈ ತನಿನಿದ್ರೆಯಲ್ಲಾದರೆ ಚೆನ್ನಾಗಿ ಪ್ರಸನ್ನನಾಗುತ್ತಾನಾದ್ದರಿಂದ ತನಿನಿದ್ರೆಯನ್ನು ಸಂಪ್ರಸಾದವೆಂದಿದೆ. "ಆಗ ಎಲ್ಲಾ ಶೋಕಗಳನ್ನೂ ದಾಟಿರುತ್ತಾನೆ" (೪-೩-೨೨), "ನೀರಿನಂತಿರುವವನು, ಏಕನು, ದ್ರಷ್ಟೃವು" (೪-೩-೩೨) ಎಂದಲ್ಲವೆ, ತನಿನಿದ್ರೆಯಲ್ಲಿರುವ ಆತ್ಮನನ್ನು (ಶ್ರುತಿಯು) ಮುಂದೆ ಹೇಳುವದು? ಆ ಇವನೇ ಈ ಸಂಪ್ರಸಾದದಲ್ಲಿ—ಕ್ರಮದಿಂದ ಸಂಪ್ರಸನ್ನನಾದವನಾಗಿ ತನಿನಿದ್ರೆಯಲ್ಲಿದ್ದು (ಎಂದರ್ಥ). ಹೇಗೆ (ಸಂಪ್ರಸನ್ನ)ನಾಗಿ? ಎಂದರೆ ಸ್ವಪ್ನದಿಂದ ತನಿನಿದ್ರೆಯನ್ನು ಪ್ರವೇಶಿಸುವವನಾಗಿ ಸ್ವಪ್ನಾವಸ್ಥೆಯಲ್ಲಿಯೇ[1] ರಮಿಸಿ ಮಿತ್ರರು, ಬಂಧುಜನರು–ಇವರುಗಳನ್ನು ನೋಡುವದೇ ಮುಂತಾದದ್ದರಿಂದಾದ ರತಿಯನ್ನು ಅನುಭವಿಸಿ; ಸಂಚರಿಸಿ

1. ಸುಷುಪ್ತಿಯಲ್ಲಿ ರತ್ಯಾದಿಗಳು ಸಂಭವಿಸುವದಿಲ್ಲವಾದ್ದರಿಂದ ಸಂಪ್ರಸಾದ ಎಂಬುದಕ್ಕೆ ರತ್ವಾ ಎಂಬುದನ್ನು ಅನ್ವಯಿಸಬಾರದು ಎಂದು ಭಾವ.

ವಿಹರಿಸಿ, ಬಲುಬಗೆಯಿಂದ ಸಂಚಾರದ ಫಲವಾದ ಶ್ರಮವನ್ನು ಅನುಭವಿಸಿ ಎಂದರ್ಥ. ಪುಣ್ಯವನ್ನು ಎಂದರೆ ಪುಣ್ಯದ ಫಲವನ್ನು ಪಾಪವನ್ನು ಎಂದರೆ ಪಾಪದ ಫಲವನ್ನು ಕಾಣುತ್ತಲೇ (ಇದ್ದು ಎಂದರ್ಥ), ಅಷ್ಟೇ ಹೊರತು (ಪುಣ್ಯ ಪಾಪಗಳನ್ನು) ಮಾಡಿಯಲ್ಲ ಎಂದರ್ಥ. (ಪುಣ್ಯಪಾಪಗಳೆಂದರೆ ಅವುಗಳ ಫಲ ಗಳನ್ನೇ ಹೊರತು) ಪುಣ್ಯಪಾಪಗಳನ್ನೇ ನೇರಾಗಿ ಕಾಣುವದೆಂಬುದಿಲ್ಲ ಎಂದು ಹಿಂದೆ (ಭಾ. ಭಾ. ೧೮೫) ಹೇಳಿರುತ್ತೇವೆ. ಆದ್ದರಿಂದ ಪುಣ್ಯಪಾಪಗಳ ಸಂಬಂಧ ವಿರುವವನಲ್ಲ. ಯಾವನು ಪುಣ್ಯಪಾಪಗಳನ್ನು ಮಾಡುತ್ತಾನೋ ಅವನು ಅವಕ್ಕೆ ಸಂಬದ್ಧನಾಗಿರುತ್ತಾನೆ. (ಸುಮ್ಮನೆ) ನೋಡಿದ ಮಾತ್ರದಿಂದ ಅವಕ್ಕೆ ಸಂಬದ್ಧ ನಾಗಲಾರನಷ್ಟೆ? ಆದ್ದರಿಂದ ಸ್ವಪ್ನವಾಗಿ ಮೃತ್ಯುವನ್ನು ಅತಿಕ್ರಮಿಸಿಯೇ ಇರುತ್ತಾನೆ, ಬರಿಯ ಮೃತ್ಯುರೂಪಗಳನ್ನೇ (ಅತಿಕ್ರಮಿಸಿರು)ವದಿಲ್ಲ.

## ಕರ್ಮವು ಆತ್ಮನ ಸ್ವಭಾವವಲ್ಲ

(ಭಾಷ್ಯ)

೧೯೮. ಅತಃ ನ ಮೃತ್ಯೋರಾತ್ಮಸ್ವಭಾವತ್ವಾಶಙ್ಕಾ। ಮೃತ್ಯುಶ್ಚೇತ್ ಸ್ವಭಾವೋಽಸ್ಯ ಸ್ವಪ್ನೇಽಪಿ ಕುರ್ಯಾತ್। ನ ತು ಕರೋತಿ। ಸ್ವಭಾವಶ್ಚೇತ್ ಕ್ರಿಯಾ ಸ್ಯಾತ್ ಅನಿರ್ಮೋಕ್ಷತೈವ ಸ್ಯಾತ್। ನ ತು ಸ್ವಭಾವಃ। ಸ್ವಪ್ನೇಽಭಾವಾತ್। ಅತಃ ವಿಮೋಕ್ಷೋಽಸ್ಯ ಉಪಪದ್ಯತೇ ಮೃತ್ಯೋಃ ಪುಣ್ಯಪಾಪಾಭ್ಯಾಮ್। ನನು ಜಾಗರಿತೇ ಅಸ್ಯ ಸ್ವಭಾವ ಏವ। ನ। ಬುದ್ಧ್ಯಾದ್ಯುಪಾಧಿಕೃತಂ ಹಿ ತತ್! ತಚ್ಚ ಪ್ರತಿಪಾದಿತಂ ಸಾದೃಶ್ಯಾತ್ "ಧ್ಯಾಯತೀವ ಲೇಲಾಯತೀವ" (೪-೩-೭) ಇತಿ। ತಸ್ಮಾತ್ ಏಕಾನ್ತೇನೈವ ಸ್ವಪ್ನೇ ಮೃತ್ಯುರೂಪಾತಿಕ್ರಮಣಾತ್ ನ ಸ್ವಾಭಾವಿಕತ್ವಾಶಙ್ಕಾ ಅನಿರ್ಮೋಕ್ಷತಾ ವಾ। ತತ್ರ 'ಚರಿತ್ವಾ' ಇತಿ ಚರಣಫಲಂ ಶ್ರಮಮುಪಲಭ್ಯ ಇತ್ಯರ್ಥಃ। ತತಃ ಸಂಪ್ರಸಾದಾನುಭವೋತ್ತರಕಾಲಂ ಪುನಃ ಪ್ರತಿನ್ಯಾಯಂ ಯಥಾನ್ಯಾಯಮ್, ಯಥಾಗತಮ್। ನಿಶ್ಚಿತ ಆಯಃ ನ್ಯಾಯಃ। ಅಯನಮ್ ಆಯಃ ನಿರ್ಗಮನಂ ಪುನಃ ಪೂರ್ವಗಮನವೈಪರೀತ್ಯೇನ ಯತ್ ಆಗಮನಂ ಸ ಪ್ರತಿನ್ಯಾಯಃ। ಯಥಾಗತಂ ಪುನರಾಗಚ್ಛತಿ ಇತ್ಯರ್ಥಃ। ಪ್ರತಿಯೋನಿ ಯಥಾಸ್ಥಾನಮ್। ಸ್ವಪ್ನಸ್ಥಾನಾದ್ ಹಿ ಸುಷುಪ್ತಂ ಪ್ರತಿಪನ್ನಃ ಸ[1] ಯಥಾಸ್ಥಾನಮೇವ ಪುನರಾಗಚ್ಛತಿ। ಪ್ರತಿಯೋನಿ ಆದ್ರವತಿ ಸ್ವಪ್ನಾಯೈವ ಸ್ವಪ್ನಸ್ಥಾನಾಯೈವ॥

(ಭಾಷ್ಯಾರ್ಥ)

ಆದ್ದರಿಂದ ಮೃತ್ಯುವು ಆತ್ಮನ ಸ್ವಭಾವವೆಂಬ ಆಶಂಕೆ(ಯುಂಟಾಗುವ) ಹಾಗಿಲ್ಲ. ಮೃತ್ಯುವು ಇವನ ಸ್ವಭಾವವಾಗಿದ್ದರೆ ಸ್ವಪ್ನದಲ್ಲಿಯೂ ಮಾಡು

1 'ಪ್ರತಿಪನ್ನಃ ಸನ್' ಎಂಬುದಕ್ಕಿಂತ ಈ ಪಾಠವು ಮೇಲು.

ತ್ತಿದ್ದನು; ಆದರೆ (ಹಾಗೆ) ಮಾಡುತ್ತಿರುವದಿಲ್ಲ. ಕ್ರಿಯೆಯು (ಇವನ) ಸ್ವಭಾವವಾಗಿದ್ದರೆ (ಅದರಿಂದ) ಬಿಡುಗಡೆಯೇ ಆಗುತ್ತಿರಲಿಲ್ಲ. ಆದರೆ (ಅದು) ಸ್ವಭಾವವಲ್ಲ, ಏಕೆಂದರೆ ಸ್ವಪ್ನದಲ್ಲಿರುವದಿಲ್ಲ. ಆದ್ದರಿಂದ ಪುಣ್ಯಪಾಪಗಳೆಂಬ ಮೃತ್ಯುವಿನಿಂದ ಇವನಿಗೆ ಬಿಡುಗಡೆಯಾಗುವದೆಂಬುದು ಹೊಂದುತ್ತದೆ.

(ಆಕ್ಷೇಪ):- ಎಚ್ಚರದಲ್ಲಿ ಇವನಿಗೆ (ಅದು) ಸ್ವಭಾವವೇ ಅಷ್ಟೆ?

(ಪರಿಹಾರ):- ಹಾಗಲ್ಲ ಏಕೆಂದರೆ ಅದು ಬುದ್ಧಿಯೇ ಮುಂತಾದ ಉಪಾಧಿಯಿಂದ ಆದದ್ದು. ಅದನ್ನು (ಬುದ್ಧಿ)ಸಾದೃಶ್ಯದಿಂದ "ಧ್ಯಾನಮಾಡುವವನಂತೆ, ಅಲುಗಾಡುವವನಂತೆ" ಇರುತ್ತಾನೆ (೪-೩-೭) ಎಂದು ತಿಳಿಸಿದ್ದಾಗಿದೆ. ಆದ್ದರಿಂದ ನಿಯಮದಿಂದಲೇ ಸ್ವಪ್ನದಲ್ಲಿ ಮೃತ್ಯುರೂಪಗಳನ್ನು ಅತಿಕ್ರಮಿಸಿರುವದರಿಂದ (ಮೃತ್ಯುವು) ಸ್ವಾಭಾವಿಕವೆಂಬ ಶಂಕೆಯೂ ಇಲ್ಲ, (ಅದರಿಂದ) ಮೋಕ್ಷವಿಲ್ಲವೆಂಬುದೂ ಇಲ್ಲ.

ಇಲ್ಲಿ 'ಸಂಚರಿಸಿ' ಎಂದರೆ ಸಂಚಾರದ ಫಲವಾದ ಶ್ರಮವನ್ನು ಅನುಭವಿಸಿ ಎಂದರ್ಥ. ಆ ಬಳಿಕ ಸಂಪ್ರಸಾದವನ್ನು ಅನುಭವಿಸಿದ ಮುಂದಿನ ಕಾಲದಲ್ಲಿ ಮತ್ತೆ ಪ್ರತಿನ್ಯಾಯದಿಂದ ಯಥಾನ್ಯಾಯವಾಗಿ ಹೇಗೆ ಹೋಗಿದ್ದನೋ ಹಾಗೆ- ನಿಶ್ಚಿತವಾದ ಆಯವು ನ್ಯಾಯವು, ಆಯನವೆಂದರೆ ಅಯನವು, ಹೊರಟು ಹೋದದ್ದು. ಮತ್ತೆ ಹಿಂದೆ ಹೋದದ್ದಕ್ಕೆ ವಿಪರೀತವಾಗಿ ಬರುವದಿದೆಯಲ್ಲ, ಅದು ಪ್ರತಿನ್ಯಾಯವು. (ಆ ಪ್ರತಿನ್ಯಾಯದಿಂದ) ಹಿಂದೆ ಹೋಗಿದ್ದಂತೆ -ಮತ್ತೆ ಬರುತ್ತಾನೆ ಎಂದರ್ಥ. ಪ್ರತಿಯೋನಿಯಾಗಿ ಯಥಾಸ್ಥಾನವಾಗಿ (ಎಂದರ್ಥ). ಸ್ವಪ್ನಸ್ಥಾನದಿಂದಲಲ್ಲವೆ, ತನಿನಿದ್ರೆಯನ್ನು ಪಡೆದಿದ್ದನು? ಅವನು ಯಥಾಸ್ಥಾನವಾಗಿ (ಅಲ್ಲಿಗೇ) ಮತ್ತೆ ಬರುತ್ತಿರುತ್ತಾನೆ. ಪ್ರತಿಯೋನಿಯಾಗಿ ಸ್ವಪ್ನಕ್ಕೇ, ಸ್ವಪ್ನಸ್ಥಾನಕ್ಕೇ ಬರುತ್ತಿರುತ್ತಾನೆ.

## ಸ್ವಪ್ನದಲ್ಲಿ ಕರ್ಮವಿಲ್ಲವೆಂಬುದು ಹೇಗೆ?

(ಭಾಷ್ಯ)

೧೯೯. ನನು ಸ್ವಪ್ನೇ ನ ಕರೋತಿ ಪುಣ್ಯಪಾಪೇ ತಯೋಃ ಫಲಮೇವ ಪಶ್ಯತಿ ಇತಿ ಕಥಮ್ ಅವಗಮ್ಯತೇ? ಯಥಾ ಜಾಗರಿತೇ ತಥಾ ಕರೋತ್ಯೇವ ಸ್ವಪ್ನೇಽಪಿ। ತುಲ್ಯತ್ವಾತ್ ದರ್ಶನಸ್ಯೇತಿ। ಅತ ಆಹ। ಸ ಆತ್ಮಾ ಯತ್ಕಿಂಚಿತ್ ತತ್ರ ಸ್ವಪ್ನೇ ಪಶ್ಯತಿ ಪುಣ್ಯಪಾಪಫಲಮ್ ಅನನ್ವಾಗತಃ ಅನನುಬದ್ಧಃ ತೇನ ದೃಷ್ಟೇನ ಭವತಿ, ನೈವಾನುಬದ್ಧೋ ಭವತಿ। ಯದಿ ಹಿ ಸ್ವಪ್ನೇ ಕೃತಮೇವ ತೇನ ಸ್ಯಾತ್ ತೇನ ಅನುಬಧ್ಯೇತ। ಸ್ವಪ್ನಾದ್ ಉತ್ಥಿತೋಽಪಿ ಸಮನ್ವಾಗತಃ ಸ್ಯಾತ್। ನ ಚ ತಲ್ಲೋಕೇ ಸ್ವಪ್ನಕೃತಕರ್ಮಣಾ ಅನ್ವಾಗತತ್ವಪ್ರಸಿದ್ಧಿಃ। ನ

ಹಿ ಸ್ವಪ್ನಕೃತೇನ ಆಗಸಾ ಆಗಸ್ಕಾರಿಣಮ್ ಆತ್ಮಾನಂ ಮನ್ಯತೇ ಕಶ್ಚಿತ್ । ನ ಚ ಸ್ವಪ್ನದೃಶ ಆಗಃ ಶ್ರುತ್ವಾ ಲೋಕಃ ತಂ ಗರ್ಹತಿ ಪರಿಹರತಿ ವಾ। ಅತಃ ಅನನ್ವಾಗತ ಏವ ತೇನ ಭವತಿ। ತಸ್ಮಾತ್ ಸ್ವಪ್ನೇ ಕುರ್ವನ್ನಿವ ಉಪಲಭ್ಯತೇ ನ ತು ಕ್ರಿಯಾ ಅಸ್ತಿ ಪರಮಾರ್ಥತಃ। "ಉತೇವ ಸ್ತ್ರೀಭಿಃ ಸಹ ಮೋದಮಾನಃ" (೪-೩-೧೩) ಇತಿ ಶ್ಲೋಕ ಉಕ್ತಃ। ಆಖ್ಯಾತಾರಶ್ಚ ಸ್ವಪ್ನಸ್ಯ ಸಹ ಇವಶಬ್ದೇನ ಆಚಕ್ಷತೇ 'ಹಸ್ತಿನೋಽದ್ಯ ಘಟೀಕೃತಾ ಧಾವಸ್ತೀವ ಮಯಾ ದೃಷ್ಟಾಃ' ಇತಿ। ಅತೋ ನ ತಸ್ಯ ಕರ್ತೃತ್ವಮಿತಿ ॥

(ಭಾಷ್ಯಾರ್ಥ)

(ಆಕ್ಷೇಪ) :— ಸ್ವಪ್ನದಲ್ಲಿ ಪುಣ್ಯಪಾಪಗಳನ್ನು ಮಾಡುವದಿಲ್ಲ, ಅವುಗಳ ಫಲವನ್ನೇ ಕಾಣುತ್ತಿರುತ್ತಾನೆ ಎಂದು ಹೇಗೆ ಗೊತ್ತಾಗುತ್ತದೆ? ಎಚ್ಚರದಲ್ಲಿ ಹೇಗೋ ಹಾಗೆ ಸ್ವಪ್ನದಲ್ಲಿಯೂ ಮಾಡುತ್ತಲೇ ಇರುವನಲ್ಲ! ಏಕೆಂದರೆ (ಪುಣ್ಯ ಪಾಪಗಳನ್ನು) ಕಾಣುವದು (ಎರಡು ಅವಸ್ಥೆಗಳಲ್ಲಿಯೂ) ಸಮಾನವಾಗಿರುತ್ತದೆ.

(ಪರಿಹಾರ) — ಇದಕ್ಕೆ ಹೇಳುತ್ತಾನೆ ಆ ಆತ್ಮನು ಆ ಸ್ವಪ್ನದಲ್ಲಿ ಏನೇನನ್ನು ಕಾಣುತ್ತಾನೋ, (ಯಾವಯಾವ) ಪುಣ್ಯಪಾಪಫಲವನ್ನು (ಕಾಣುತ್ತಾನೋ) ಅದರಿಂದ (ಆ) ಕಾಣುವದರಿಂದ ಅನನ್ವಾಗತನಾಗಿರುತ್ತಾನೆ, ಅದರಿಂದ ಅನುಬದ್ಧನಾಗಿರುವದೇ ಇಲ್ಲ. ಸ್ವಪ್ನದಲ್ಲಿ ಅವನು (ನಿಜವಾಗಿ) ಮಾಡಿಯೇ ಇರುವದಾದರೆ ಅದರಿಂದ ಅನುಬದ್ಧನಾಗಿರಬೇಕಾಗಿತ್ತು, ಸ್ವಪ್ನದಿಂದ ಎಚ್ಚತ್ತ ಬಳಿಕವೂ ಹಿಂಬಾಲಿಸಲ್ಪಡಬೇಕಾಗಿತ್ತು. ಆದರೆ ಆ (ಎಚ್ಚರದ) ಲೋಕದಲ್ಲ ಸ್ವಪ್ನಕೃತವಾದ ಕರ್ಮದಿಂದ ಹಿಂಬಾಲಿಸಲ್ಪಡುತ್ತಾನೆಂಬ ಪ್ರಸಿದ್ಧಿ (ಇರುವ) ದಿಲ್ಲ. ಸ್ವಪ್ನದಲ್ಲಿ ಮಾಡಿದ ಅಪರಾಧದಿಂದ ತಾನು (ನಿಜವಾಗಿ) ಅಪರಾಧವನ್ನು ಮಾಡಿದೆನೆಂದು ಯಾವನೂ ಎಣಿಸುವದಿಲ್ಲ. ಸ್ವಪ್ನವನ್ನು ಕಂಡವನು (ಮಾಡಿದ) ಅಪರಾಧವನ್ನು ಕೇಳಿದ ಜನರು ಅವನನ್ನು ನಿಂದಿಸುವದಿಲ್ಲ, ದೂರ ಬಿಡುವದೂ ಇಲ್ಲ. ಆದ್ದರಿಂದ ಅವರಿಂದ ಅನನ್ವಾಗತನೇ ಆಗಿರುತ್ತಾನೆ. ಆದ್ದರಿಂದ ಸ್ವಪ್ನದಲ್ಲಿ ಮಾಡುವವನಂತೆ ಕಾಣುತ್ತಾನೆಯೇ ಹೊರತು ಪರಮಾರ್ಥವಾಗಿ (ಅವನಿಗೆ) ಕ್ರಿಯೆ ಇರುವದಿಲ್ಲ "ಸ್ತ್ರೀಯರೊಡನೆ ಮೋದಗೊಳ್ಳುತ್ತಿರುವವನಂತೆಯೂ " (೪-೩-೧೩) ಎಂಬ ಶ್ಲೋಕವನ್ನು (ಹಿಂದೆ) ಹೇಳಿದ್ದಾಗಿದೆ. ಸ್ವಪ್ನವನ್ನು ಹೇಳುವವರೂ 'ಇಂದು ಆನೆಗಳು ಗುಂಪಾಗಿ ಓಡುತ್ತಿರುವಂತೆ ನಾನು ಕಂಡೆನು' ಎಂದು ಇವ (ಅಂತೆ ಎಂಬ) ಶಬ್ದದೊಡನೆಯೇ ಹೇಳುತ್ತಾರೆ. ಆದ್ದರಿಂದ ಆ (ಸ್ವಪ್ನದರ್ಶಿಗೆ) ಕರ್ತೃತ್ವವಿರುವದಿಲ್ಲ (ವೆಂದಾಯಿತು).

## ಆತ್ಮನ ಅಕರ್ತೃತ್ವಕ್ಕೆ ಕಾರಣ

(ಭಾಷ್ಯ)

೨೦೦. ಕಥಂ ಪುನರಸ್ಯ ಅಕರ್ತೃತ್ವಮಿತಿ? ಯತಃ[1] ಕಾರ್ಯಕರಣೈಃ ಮೂರ್ತೈಃ ಸಂಶ್ಲೇಷೋ ಮೂರ್ತಸ್ಯ। ಸ ತು ಕ್ರಿಯಾಹೇತುರ್ದೃಷ್ಟಃ। ನ ಹಿ ಅಮೂರ್ತಃ ಕಶ್ಚಿತ್ ಕ್ರಿಯಾವಾನ್ ದೃಶ್ಯತೇ। ಅಮೂರ್ತಶ್ಚ ಆತ್ಮಾ। ಅತೋಽಸಙ್ಗಃ। ಯಸ್ಮಾಚ್ಚ ಅಸಙ್ಗೋಽಯಂ ಪುರುಷಃ, ತಸ್ಮಾತ್ ಅನನ್ವಾಗತಸ್ತೇನ ಸ್ವಪ್ನದೃಷ್ಟೇನ। ಅತ ಏವ ನ ಕ್ರಿಯಾಕರ್ತೃತ್ವಮಸ್ಯ ಕಥಂಚಿತ್ ಉಪಪದ್ಯತೇ। ಕಾರ್ಯಕರಣಸಂಶ್ಲೇಷೇಣ ಹಿ ಕರ್ತೃತ್ವಂ ಸ್ಯಾತ್। ಸ ಚ ಸಂಶ್ಲೇಷಃ ಸಙ್ಗಃ ಅಸ್ಯ ನಾಸ್ತಿ ಯತಃ ಅಸಙ್ಗೋ ಹಿ ಅಯಂ ಪುರುಷಃ। ತಸ್ಮಾತ್ ಅಮೃತಃ ॥

(ಭಾಷ್ಯಾರ್ಥ)

(ಪ್ರಶ್ನೆ) :- ಇವನು ಅಕರ್ತೃವೆಂಬುದು ಹೇಗೆ ?

(ಉತ್ತರ) :- ಏಕೆಂದರೆ ಮೂರ್ತವಾಗಿರುವ ಕಾರ್ಯಕರಣಗಳಿಗೆ ಮೂರ್ತದ ಸಂಬಂಧವಾಗುತ್ತದೆ. ಅದೇ ಕ್ರಿಯೆಗೆ ಹೇತುವೆಂದು ಕಂಡು ಬಂದಿರುತ್ತದೆ. ಅಮೂರ್ತವಾಗಿರುವ ಯಾವದೂ ಕ್ರಿಯೆಯುಳ್ಳದ್ದಾಗಿರುವದು ಕಂಡಿಲ್ಲವಷ್ಟೆ ? ಆದರೆ ಆತ್ಮನು ಅಮೂರ್ತನು ; ಆದ್ದರಿಂದ ಈ ಪುರುಷನು ಅಸಂಗನು. ಮತ್ತು ಈ ಪುರುಷನು ಅಸಂಗನಾಗಿರುತ್ತಾನಷ್ಟೆ, ಆದ್ದರಿಂದಲೇ ಆ ಸ್ವಪ್ನದಲ್ಲಿ ಕಂಡದ್ದರಿಂದ ಅನ್ವಾಗತನಾಗಿರುವದಿಲ್ಲ. ಆದ್ದರಿಂದಲೇ ಇವನಿಗೆ ಕ್ರಿಯೆಯ ಕರ್ತೃತ್ವವೆಂಬುದು ಹೇಗೂ ಹೊಂದುವದಿಲ್ಲ. ಕಾರ್ಯಕರಣ ಸಂಬಂಧದಿಂದಲೇ ಅಲ್ಲವೆ, ಕರ್ತೃತ್ವವು ಆದೀತು ? ಆ ಸಂಬಂಧವೆಂಬ ಸಂಗವು ಇವನಿಗೆ ಇಲ್ಲವಾದ್ದರಿಂದ ಈ ಪುರುಷನು ಅಸಂಗನೇ. ಆದ್ದರಿಂದ (ಇವನು) ಅಮೃತನು.

## ಜನಕನು ಮೋಕ್ಷಕ್ಕಾಗಿ ಮತ್ತೂ ಪ್ರಶ್ನಿಸಿದ್ದು

(ಭಾಷ್ಯ)

೨೦೧. ಏವಮೇವೈತದ್ ಯಾಜ್ಞವಲ್ಕ್ಯ। ಸೋಽಹಂ ಭಗವತೇ ಸಹಸ್ರಂ ದದಾಮಿ। ಅತ ಊರ್ಧ್ವಂ ವಿಮೋಕ್ಷಾಯೈವ ಬ್ರೂಹಿ। ಮೋಕ್ಷ ಪದಾರ್ಥೈಕದೇಶಸ್ಯ ಕರ್ಮಪ್ರವಿವೇಕಸ್ಯ ಸಮ್ಯಗ್ದರ್ಶಿತತ್ವಾತ್। ಅತ ಊರ್ಧ್ವಂ ವಿಮೋಕ್ಷಾಯೈವ ಬ್ರೂಹಿ ಇತಿ ॥

---

1 ಈ ಮಾತನ್ನು ಸೇರಿಸಿರುವ ಪಾಠವೇ ಮೇಲು.

(ಭಾಷ್ಯಾರ್ಥ)

ಯಾಜ್ಞವಲ್ಕ್ಯನೆ, ಇದು ಹೀಗೆಯೇ (ಸರಿ). 'ಆ ನಾನು ಭಗವಂತನಾದ (ನಿನಗೆ) ಸಾವಿರ (ಗೋಗಳನ್ನು) ಕೊಡುತ್ತೇನೆ. ಇನ್ನುಮೇಲೆ ವಿಮೋಕ್ಷಕ್ಕೇ ಹೇಳು!' ಮೋಕ್ಷಪದಾರ್ಥದ ಒಂದು ಭಾಗವಾದ ಕರ್ಮಪ್ರವಿವೇಕವನ್ನು ಚೆನ್ನಾಗಿ ಹೇಳಿದ್ದರಿಂದ (ಸಾವಿರವನ್ನು ಕೊಡುತ್ತಿದೇನೆ), ಇನ್ನುಮುಂದೆ ವಿಮೋಕ್ಷಕ್ಕೇ ಹೇಳು ಎಂದು (ಜನಕನು ಕೇಳಿದನು).

## ಸ್ವಪ್ನದಲ್ಲಿ ಆತ್ಮನು ಅಸಂಗನೇ

(ಉಪನಿಷತ್ತು)

**ಸ ವಾ ಏಷ ಏತಸ್ಮಿನ್ ಸ್ವಪ್ನೇ ರತ್ವಾ ಚರಿತ್ವಾ ದೃಷ್ಟ್ವೈವ ಪುಣ್ಯಂ ಚ ಪಾಪಂ ಚ ಪುನಃ ಪ್ರತಿನ್ಯಾಯಂ ಪ್ರತಿಯೋನ್ಯಾದ್ರವತಿ ಬುದ್ಧಾಂತಾಯೈವ ಸ ಯತ್ತತ್ರ ಕಿಂಚಿತ್ ಪಶ್ಯತ್ಯನನ್ವಾಗತಸ್ತೇನ ಭವತ್ಯಸಙ್ಗೋ ಹ್ಯಯಂ ಪುರುಷ ಇತ್ಯೇವಮೇವೈತದ್ಯಾಜ್ಞವಲ್ಕ್ಯ ಸೋಽಹಂ ಭಗವತೇ ಸಹಸ್ರಂ ದದಾಮ್ಯತ ಊರ್ಧ್ವಂ ವಿಮೋಕ್ಷಾಯೈವ ಬ್ರೂಹೀತಿ ॥ ೧೬ ॥**

೧೬. "ಆ ಇವನೇ ಈ ಸ್ವಪ್ನದಲ್ಲಿ ರಮಿಸಿ ಸಂಚರಿಸಿ ಪುಣ್ಯವನ್ನೂ ಪಾಪವನ್ನೂ ಕಾಣುತ್ತಲೇ ಇದ್ದು ಮತ್ತೆ ಪ್ರತಿನ್ಯಾಯದಿಂದ ಪ್ರತಿಯೋನಿಯಾಗಿ ಬುದ್ಧಾಂತಕ್ಕೇ ಬರುತ್ತಿರುವನು. ಅವನು ಅಲ್ಲಿ ಏನೇನನ್ನು ಕಾಣುತ್ತಾನೋ ಅದರಿಂದ ಅನನ್ವಾಗತನಾಗಿರುತ್ತಾನೆ. ಈ ಪುರುಷನು ಅಸಂಗನಲ್ಲವೆ? ಯಾಜ್ಞವಲ್ಕ್ಯನೆ, ಇದು ಹೀಗೆಯೇ; ಆ ನಾನು ಭಗವಂತನಾದ (ನಿನಗೆ) ಸಹಸ್ರವನ್ನು ಕೊಡುತ್ತೇನೆ; ಇನ್ನು ಮೇಲೆ ವಿಮೋಕ್ಷಕ್ಕೇ ಹೇಳು!"

## ಸ್ವಪ್ನದಲ್ಲಿ ಆತ್ಮನು ಅಸಂಗನೆಂಬ ಬಗ್ಗೆ ಆಕ್ಷೇಪಪರಿಹಾರಗಳು

(ಭಾಷ್ಯ)

೨೦೨. ತತ್ರ 'ಅಸಙ್ಗೋ ಹ್ಯಯಂ ಪುರುಷಃ' (೪-೩-೧೫) ಇತಿ **ಅಸಙ್ಗತಾ ಅಕರ್ತೃತ್ವೇ ಹೇತುರುಕ್ತಃ। ಉಕ್ತಂ ಚ ಪೂರ್ವಂ ಕರ್ಮವಶಾತ್ "ಸ ಈಯತೇ ಯತ್ರ ಕಾಮಮ್" (೪-೩-೧೨) ಇತಿ। ಕಾಮಶ್ಚ ಸಙ್ಗಃ। ಅತಃ ಅಸಿದ್ಧೋ ಹೇತುರುಕ್ತಃ 'ಅಸಙ್ಗೋ ಹ್ಯಯಂ ಪುರುಷಃ' ಇತಿ। ನ ತ್ವೇತದಸ್ತಿ।**

ಕಥಂ ತರ್ಹಿ? ಅಸಙ್ಗ ಏವ ಇತ್ಯೇತದುಚ್ಯತೇ। ಸ ವಾ ಏಷ ಏತಸ್ಮಿನ್ ಸ್ವಪ್ನೇ। ಸ ವಾ ಏಷ ಪುರುಷಃ। ಸಂಪ್ರಸಾದಾತ್ ಪ್ರತ್ಯಾಗತಃ ಸ್ವಪ್ನೇ ರತ್ವಾ ಚರಿತ್ವಾ ಯಥಾಕಾಮಂ 'ದೃಷ್ಟ್ವೈವ ಪುಣ್ಯಂ ಚ ಪಾಪಂ ಚ' ಇತಿ ಸರ್ವಂ ಪೂರ್ವವತ್। ಬುದ್ಧಾನ್ತಾಯೈವ ಜಾಗರಿತಸ್ಥಾನಾಯ। ತಸ್ಮಾತ್ ಅಸಙ್ಗ ಏವಾಯಂ ಪುರುಷಃ। ಯದಿ ಸ್ವಪ್ನೇ ಸಙ್ಗವಾನ್ ಸ್ಯಾತ್ ಕಾಮೀ। ತತಃ ತತ್ಸಙ್ಗಜೈರ್ದೋಷೈಃ ಬುದ್ಧಾನ್ತಾಯ ಪ್ರತ್ಯಾಗತೋ ಲಿಪ್ಯೇತ ॥

(ಭಾಷ್ಯಾರ್ಥ)

(ಆಕ್ಷೇಪ):- 'ಈ ಪುರುಷನು ಅಸಂಗನಲ್ಲವೆ?' (೪-೩-೧೫) ಎಂದು ಅಸಂಗತ್ವವನ್ನು ಅಕರ್ತೃತ್ವಕ್ಕೆ ಹೇತುವೆಂದು ಹೇಳಿತ್ತು. ಆದರೆ ಹಿಂದೆ ಕರ್ಮವಶದಿಂದ 'ಅವನು ಕಾಮವಿದ್ದಲ್ಲಿಗೆ ಹೋಗುತ್ತಾನೆ' (೪-೩-೧೨) ಎಂದು ಹೇಳಿತ್ತು; ಕಾಮವೆಂದರೆ ಸಂಗವೇ. ಆದ್ದರಿಂದ 'ಈ ಪುರುಷನು ಅಸಂಗನಲ್ಲವೆ?' ಎಂಬ ಹೇತುವನ್ನು ಹೇಳಿದ್ದು ಅಸಿದ್ಧ(ಹೇತುವೆಂದಾಯಿತು).

(ಪರಿಹಾರ):- ಆದರೆ ಇದು (ಸರಿ)ಯಲ್ಲ. ಮತ್ತೇನೆಂದರೆ ಅಸಂಗನೇ ಎಂಬಿದನ್ನು 'ಸ ವಾ ಏಷ ಏತಸ್ಮಿನ್ ಸ್ವಪ್ನೇ' (ಎಂಬ ಕಂಡಿಕೆಯಲ್ಲಿ) ಹೇಳಲಾಗುತ್ತದೆ.

ಆ ಈ ಪುರುಷನೇ ಸಂಪ್ರಸಾದದಿಂದ ಹಿಂತಿರುಗಿ ಬಂದು ಸ್ವಪ್ನದಲ್ಲಿ ರಮಿಸಿ ಇಚ್ಛೆಯಿದ್ದಂತೆ ಸಂಚರಿಸಿ ಪಾಪವನ್ನು ಕಾಣುತ್ತಲೇ ಇದ್ದು -ಎಂಬಿದೆಲ್ಲವೂ (ಹಿಂದಿನ ಕಂಡಿಕೆಯಂತೆ ವ್ಯಾಖ್ಯಾನಮಾಡಿಕೊಳ್ಳತಕ್ಕದ್ದು).

ಬುದ್ಧಾಂತಕ್ಕೇ ಎಂದರೆ ಜಾಗರಿತಸ್ಥಾನಕ್ಕೇ (ಬರುತ್ತಿರುವನು), ಆದ್ದರಿಂದ ಈ ಪುರುಷನು ಅಸಂಗನೇ. ಸ್ವಪ್ನದಲ್ಲಿ ಸಂಗವಂತನಾಗಿ ಕಾಮಿಯಾಗಿದ್ದಿದ್ದರೆ, ಆಗ ಅದರ ಸಂಗದಿಂದಾದ ದೋಷಗಳಿಂದ ಬುದ್ಧಾಂತಕ್ಕೆ ಹಿಂತಿರುಗಿ ಬಂದವನು ಲಿಪ್ತನಾಗುತ್ತಿದ್ದನು.

## ಜಾಗ್ರದ್ದೋಷಗಳ ಲೇಪವೂ ಆತ್ಮನಿಗಿಲ್ಲ

(ಉಪನಿಷತ್ತು)

**ಸ ವಾ ಏಷ ಏತಸ್ಮಿನ್ ಬುದ್ಧಾನ್ತೇ ರತ್ವಾ ಚರಿತ್ವಾ ದೃಷ್ಟ್ವೈವ ಪುಣ್ಯಂ ಚ ಪಾಪಂ ಚ ಪುನಃ ಪ್ರತಿನ್ಯಾಯಂ ಪ್ರತಿಯೋನ್ಯಾದ್ರವತಿ ಸ್ವಪ್ನಾನ್ತಾಯೈವ ॥ ೧೭ ॥**

೧೭. ಆ ಇವನೇ ಈ ಬುದ್ಧಾಂತದಲ್ಲಿ ರಮಿಸಿ ಸಂಚರಿಸಿ ಪುಣ್ಯವನ್ನೂ ಪಾಪವನ್ನೂ ಕಾಣುತ್ತಲೇ ಇದ್ದು ಮತ್ತೆ ಪ್ರತಿನ್ಯಾಯದಿಂದ ಪ್ರತಿಯೋನಿಯಾಗಿ ಸ್ವಪ್ನಾಂತಕ್ಕೇ ಬರುತ್ತಿರುವನು.

# ಎಚ್ಚರದಲ್ಲಿಯೂ ಆತ್ಮನಿಗೆ ಪುಣ್ಯಪಾಪಕರ್ತೃತ್ವವಿಲ್ಲ

(ಭಾಷ್ಯ)

೨೦೩. ಯಥಾ ಅಸೌ ಸ್ವಪ್ನೇ ಅಸಙ್ಗತ್ವಾತ್ ಸ್ವಪ್ನಪ್ರಸಙ್ಗಜೈಃ[1] ದೋಷೈಃ ಜಾಗರಿತೇ ಪ್ರತ್ಯಾಗತೋ ನ ಲಿಪ್ಯತೇ, ಏವಂ ಜಾಗರಿತಸಙ್ಗಜೈರಪಿ ದೋಷೈಃ ನ ಲಿಪ್ಯತ ಏವ ಬುದ್ಧಾನ್ತೇ[2] । ತದೇತದುಚ್ಯತೇ । ಸ ವಾ ಏಷ ಏತಸ್ಮಿನ್ ಬುದ್ಧಾನ್ತೇ ಜಾಗರಿತೇ ರತ್ವಾ ಚರಿತ್ವಾ ಇತ್ಯಾದಿ ಪೂರ್ವವತ್ । ಸ ಯತ್ ತತ್ರ ಬುದ್ಧಾನ್ತೇ ಕಿಂಚಿತ್ ಪಶ್ಯತಿ ಅನನ್ವಾಗತಸ್ತೇನ ಭವತಿ । ಅಸಙ್ಗೋ ಹಿ ಅಯಂ ಪುರುಷಃ ಇತಿ । ನನು ದೃಷ್ಟ್ವೈವ ಇತಿ ಕಥಮ್ ಅವಧಾರ್ಯತೇ ? ಕರೋತಿ ಚ ತತ್ರ ಪುಣ್ಯಪಾಪೇ ತತ್ಫಲಂ ಚ ಪಶ್ಯತಿ। ನ । ಕಾರಕಾವಭಾಸಕತ್ವೇನ ಕರ್ತೃತ್ವೋಪಪತ್ತೇಃ । "ಆತ್ಮನೈವಾಯಂ ಜ್ಯೋತಿಷಾಽಽಸ್ತೇ" (೪-೩-೬) ಇತ್ಯಾದಿನಾ ಆತ್ಮಜ್ಯೋತಿಷಾ ಅವಭಾಸಿತಃ ಕಾರ್ಯಕರಣಸಂಘಾತೋ ವ್ಯವಹರತಿ, ತೇನಾಸ್ಯ ಕರ್ತೃತ್ವಮ್ ಉಪಚರ್ಯತೇ ನ ಸ್ವತಃ ಕರ್ತೃತ್ವಮ್ । ತಥಾ[3] ಚೋಕ್ತಮ್ "ಧ್ಯಾಯತೀವ ಲೇಲಾಯತೀವ" (೪-೩-೭) ಇತಿ । ಬುದ್ಧ್ಯಾದ್ಯುಪಾಧಿಕೃತಮೇವ ನ ಸ್ವತಃ । ಇಹ ತು ಪರಮಾರ್ಥಾಪೇಕ್ಷಯಾ ಉಪಾಧಿನಿರಪೇಕ್ಷ ಉಚ್ಯತೇ ದೃಷ್ಟ್ವೈವ ಪುಣ್ಯಂ ಚ ಪಾಪಂ ಚ ನ ಕೃತ್ವಾ ಇತಿ । ತೇನ ನ ಪೂರ್ವಾಪರ ವ್ಯಾಘಾತಾಶಙ್ಕಾ । ಯಸ್ಮಾತ್ ನಿರುಪಾಧಿಕಃ ಪರಮಾರ್ಥತೋ ನ ಕರೋತಿ ನ ಲಿಪ್ಯತೇ ಕ್ರಿಯಾಫಲೇನ। ತಥಾ ಚ ಭಗವತಾ ಉಕ್ತಮ್– "ಅನಾದಿತ್ವಾನ್ನಿರ್ಗುಣತ್ವಾತ್ ಪರಮಾತ್ಮಾಽಯಮವ್ಯಯಃ । ಶರೀರಸ್ಥೋಽಪಿ ಕೌನ್ತೇಯ ನ ಕರೋತಿ ನ ಲಿಪ್ಯತೇ॥" (ಗೀ. ೧೩–೧೧) ಇತಿ । ತಥಾ[4] ಸಹಸ್ರದಾನಂ ತು ಕಾಮಪ್ರವಿವೇಕಸ್ಯ ದರ್ಶಿತತ್ವಾತ್ ॥

(ಭಾಷ್ಯಾರ್ಥ)

ಹೇಗೆ ಇವನು ಸ್ವಪ್ನದಲ್ಲಿ ಅಸಂಗನಾಗಿರುವದರಿಂದ ಸ್ವಪ್ನದ ಸಂಗದಿಂದುಂಟಾದ ದೋಷಗಳಿಂದ ಎಚ್ಚರಕ್ಕೆ ಬಂದವನು ಲಿಪ್ತನಾಗುವದಿಲ್ಲವೋ ಹಾಗೆಯೇ ಎಚ್ಚರದ ಸಂಗದಿಂದುಂಟಾದ ದೋಷಗಳಿಂದಲೂ ಎಚ್ಚರದಲ್ಲಿ ಲಿಪ್ತನಾಗುವದೇ ಇಲ್ಲ. ಅ ಇದನ್ನು (ಇಲ್ಲಿ) ಹೇಳಿರುತ್ತದೆ.

---

1. "ಸ್ವಪ್ನಸಙ್ಗಜೈಃ" ಎಂದಿಷ್ಟೇ ಭಾಷ್ಯದಲ್ಲಿ ಮೊದಲು ಇದ್ದಿರಬಹುದು ; ಅಚ್ಚಿನ ಪುಸ್ತಕಗಳಲ್ಲೆಲ್ಲ "ಪ್ರಸಙ್ಗಜೈಃ" ಎಂದೇ ಇದೆ.
2. ಬುದ್ಧಾನ್ತೇನ ಎಂಬುದಕ್ಕಿಂತ ಈ ಪಾಠವೇ ಮೇಲು.
3. "ಯಥಾ ಚೋಕ್ತಮ್" ಎಂಬ ಆ॥ ಪಾಠವು ಅಚ್ಚಿನ ತಪ್ಪಿರಬೇಕು.
4. ಅನುವಾದದ ಟಿಪ್ಪಣಿಯನ್ನು ನೋಡಿ.

ಆ ಇವನೇ ಈ ಬುದ್ಧಾಂತದಲ್ಲಿ ಎಚ್ಚರದಲ್ಲಿ "ರಮಿಸಿ ಸಂಚರಿಸಿ" ಮುಂತಾದದ್ದಕ್ಕೆ ಹಿಂದಿನಂತೆ (ವ್ಯಾಖ್ಯಾನ). "ಅವನು ಅಲ್ಲಿ ಬುದ್ಧಾಂತದಲ್ಲಿ ಏನೇನು ಕಾಣುತ್ತಾನೋ ಅದರಿಂದ ಅನನ್ವಾಗತನೇ ಆಗಿರುತ್ತಾನೆ, ಈ ಪುರುಷನು ಅಸಂಗನಲ್ಲವೆ ?

(ಆಕ್ಷೇಪ) :– "ಕಾಣುತ್ತಲೇ ಇದ್ದು" ಎಂದು ಒತ್ತಿ ಹೇಳಿರುವದು ಹೇಗೆ (ಸರಿ) ? ಅಲ್ಲಿ ಪುಣ್ಯಪಾಪಗಳನ್ನು ಮಾಡಿಯೂ ಮಾಡುತ್ತಾನೆ, ಅವುಗಳ ಫಲವನ್ನೂ ಕಾಣುತ್ತಾನಲ್ಲ ?

(ಪರಿಹಾರ) :– ಹಾಗಲ್ಲ. ಏಕೆಂದರೆ ಕಾರಕಗಳನ್ನು ಬೆಳಗುವದರಿಂದ (ಅವನಿಗೆ) ಕರ್ತೃತ್ವವು ಇರಬಹುದಾಗಿದೆ "ಆತ್ಮನೆಂಬ ಜ್ಯೋತಿಯಿಂದಲೇ ಇವನು ಕುಳ್ಳಿರುತ್ತಾನೆ ." (೪-೩-೬) ಎಂದು ಮುಂತಾಗಿರುವ (ವಾಕ್ಯ) ದಲ್ಲಿ ಹೇಳಿರುವಂತೆ ಆತ್ಮಜ್ಯೋತಿಯಿಂದ ಬೆಳಗಲ್ಪಟ್ಟ ಕಾರ್ಯಕರಣ ಸಂಘಾತವು ವ್ಯವಹರಿಸುತ್ತದೆ; ಅದರಿಂದ ಇವನಿಗೆ ಕರ್ತೃತ್ವವನ್ನು ಉಪಚಾರಕ್ಕೆ ಹೇಳಿರುತ್ತದೆಯೋ ಹೊರತು ತನ್ನಿಂದಲೇ ಕರ್ತೃತ್ವವನ್ನು (ಹೇಳಿ)ಲ್ಲ. ಆದ್ದರಿಂದಲೇ(ಹಿಂದೆ) **"ಧ್ಯಾನಮಾಡುತ್ತಿರುವವನಂತೆ, ಅಲುಗಾಡುತ್ತಿರುವವನಂತೆ" (೪-೩-೭) ಎಂದು ಬುದ್ಧಿಯೇ ಮುಂತಾದ ಉಪಾಧಿಕೃತವಾದ (ಕರ್ತೃತ್ವವನ್ನು) ಹೇಳಿದೆಯೋ ಹೊರತು ತನ್ನಿಂದಲೇ (ಕರ್ತೃ)ನೆಂದು ಹೇಳಿಲ್ಲ. ಆದರೆ ಇಲ್ಲಿ ಪರಮಾರ್ಥದ ಅಪೇಕ್ಷೆಯಿಂದ ಉಪಾಧಿಗಳ ಅಪೇಕ್ಷೆಯಿಲ್ಲದೆ ಪುಣ್ಯವನ್ನೂ ಪಾಪವನ್ನೂ ಕಾಣುತ್ತಲೇ ಇದ್ದು, ಮಾಡಿಯಲ್ಲ– ಎಂದು ಹೇಳಿದೆ. ಆದ್ದರಿಂದ ಹಿಂದುಮುಂದಿನ (ವಾಕ್ಯಗಳಿಗೆ) ವಿರೋಧವೆಂಬ ಆಶಂಕೆಯುಂಟಾಗಲಾರದು.** ನಿರುಪಾಧಿಕನಾಗಿರುವದರಿಂದ ಪರಮಾರ್ಥವಾಗಿ ಮಾಡುವದಿಲ್ಲವಾದ್ದರಿಂದ ಕ್ರಿಯಾಫಲದಿಂದ ಲಿಪ್ತನಾಗುವದಿಲ್ಲ. ಆದ್ದರಿಂದಲೇ **ಭಗವಂತನು** "ಅನಾದಿಯಾಗಿರುವದರಿಂದಲೂ ನಿರ್ಗುಣನಾಗಿರುವದರಿಂದಲೂ ಈ ಅವ್ಯಯನಾದ ಪರಮಾತ್ಮನು ಶರೀರದಲ್ಲಿದ್ದರೂ ಮಾಡುವದಿಲ್ಲ, ಲಿಪ್ತನಾಗುವದಿಲ್ಲ" (ಗೀ. ೧೩-೩೧) ಎಂದು ಹೇಳಿರುತ್ತಾನೆ.

ಹೀಗೆಯೇ[1] ಸಹಸ್ರವನ್ನು ಕೊಟ್ಟಿರುವದಾದರೋ ಕಾಮಪ್ರವಿವೇಕವನ್ನು ತೋರಿಸಿಕೊಟ್ಟಿರುವದರಿಂದ.

---

1. ಇಲ್ಲಿ ಮೂಲಭಾಷ್ಯದಲ್ಲಿ ತಥಾ ಎಂಬ ಮಾತು ಇತ್ತೋ ಇಲ್ಲವೋ ಹೇಳುವದಕ್ಕಿಲ್ಲ. ವ್ಯಾಖ್ಯಾನದಲ್ಲಿ "ಹೇಗೆ ಮೋಕ್ಷದಲ್ಲಿ ಒಂದು ಭಾಗವಾದ ಕರ್ಮವಿವೇಕವನ್ನು ತಿಳಿಸಿದ್ದರಿಂದ ದಾನಮಾಡಿದೆಯೋ ಹೊರತು ಕಾಮಪ್ರಶ್ನೆಯನ್ನೇ ನಿರ್ಣಯಿಸಿದ್ದರಿಂದಲ್ಲವೋ ಹಾಗೆಯೇ ಅದರ ಒಂದು ಭಾಗವಾದ ಕಾಮವಿವೇಕವನ್ನು ತಿಳಿಸಿದ್ದರಿಂದ ಸಹಸ್ರದಾನವನ್ನು ಮಾಡಿದೆಯೋ ಹೊರತು ಕಾಮಪ್ರಶ್ನೆಯನ್ನೇ ನಿರ್ಣಯಿಸಿದ್ದರಿಂದಲ್ಲ" ಎಂದು ಈ ಮಾತಿನ ಸ್ವಾರಸ್ಯವನ್ನು ವಿವರಿಸಿದೆ.

# ಈ ಎರಡು ಕಂಡಿಕೆಗಳಿಗೂ ಅಸಂಗತ್ವದಲ್ಲಿ ತಾತ್ಪರ್ಯ

(ಭಾಷ್ಯ)

೨೦೪. ತಥಾ 'ಸ ವಾ ಏಷ ಏತಸ್ಮಿನ್ ಸ್ವಪ್ನೇ', 'ಸ ವಾ ಏಷ ಏತಸ್ಮಿನ್ ಬುದ್ಧಾನ್ತೇ' ಇತ್ಯೇತಾಭ್ಯಾಂ ಕಣ್ಡಿಕಾಭ್ಯಾಮ್ ಅಸಙ್ಗತೈವ ಪ್ರತಿಪಾದಿತಾ। ಯಸ್ಮಾತ್ ಬುದ್ಧಾನ್ತೇ ಕೃತೇನ ಸ್ವಪ್ನಾನ್ತಂ ಗತಃ ಸಂಪ್ರಸನ್ನೋಽಸಂಬದ್ಧೋ ಭವತಿ ಸ್ತ್ರ್ಯನ್ನಾದಿಕಾರ್ಯಾದರ್ಶನಾತ್, ತಸ್ಮಾತ್ ತ್ರಿಷ್ವಪಿ ಸ್ಥಾನೇಷು ಸ್ವತೋಽಸಙ್ಗ ಏವಾಯಮ್। ಅತೋಽಮೃತಃ ಸ್ಥಾನತ್ರಯಧರ್ಮವಿಲಕ್ಷಣಃ। ಪ್ರತಿಯೋನಿ ಆದ್ರವತಿ ಸ್ವಪ್ನಾನ್ತಾಯೈವ ಸಂಪ್ರಸಾದಾಯ ಇತ್ಯರ್ಥಃ। ದರ್ಶನವೃತ್ತೇಃ ಸ್ವಪ್ನಸ್ಯ ಸ್ವಪ್ನಶಬ್ದೇನ ಅಭಿಧಾನದರ್ಶನಾತ್। ಅನ್ತಶಬ್ದೇನ ಚ ವಿಶೇಷಣೋಪಪತ್ತೇಃ। 'ಏತಸ್ಮಾ ಅನ್ತಾಯ ಧಾವತಿ' (೪-೩-೧೯) ಇತಿ ಚ ಸುಷುಪ್ತಂ ದರ್ಶಯಿಷ್ಯತಿ। ಯದಿ ಪುನರೇವಮುಚ್ಯತೇ "ಸ್ವಪ್ನಾನ್ತೇ ರತ್ವಾ ಚರಿತ್ವಾ" (೪-೩-೩೪)[1] "ಏತಾವುಭಾವನ್ತಾವನುಸಂಚರತಿ ಸ್ವಪ್ನಾನ್ತಂ ಚ ಬುದ್ಧಾನ್ತಂ ಚ" (೪-೩-೧೮) ಇತಿ ದರ್ಶನಾತ್ ಸ್ವಪ್ನಾನ್ತಾಯೈವ ಇತ್ಯತ್ರಾಪಿ ದರ್ಶನವೃತ್ತಿರೇವ ಸ್ವಪ್ನ ಉಚ್ಯತೇ ಇತಿ, ತಥಾಪಿ ನ ಕಿಂಚಿತ್ ದುಷ್ಯತಿ! ಅಸಙ್ಗತಾ ಹಿ ಸಿಷಾಧಯಿಷಿತಾ ಸಿಧ್ಯತ್ಯೇವ। ಯಸ್ಮಾತ್[2] ಜಾಗರಿತೇ ದೃಷ್ಟ್ವೈವ ಪುಣ್ಯಂ ಚ ಪಾಪಂ ಚ ರತ್ವಾ ಚರಿತ್ವಾ ಚ ಸ್ವಪ್ನಾನ್ತಮಾಗತೋ ನ ಜಾಗರಿತದೋಷೇಣ ಅನುಗತೋ ಭವತಿ ॥

(ಭಾಷ್ಯಾರ್ಥ)

ಆ ಇವನೇ ಈ ಸ್ವಪ್ನದಲ್ಲಿ (೪-೩-೧೬), "ಆ ಇವನೇ ಈ ಬುದ್ಧಾಂತದಲ್ಲಿ" (೪-೩-೧೭) ಎಂಬೀ (ಎರಡು) ಕಂಡಿಕೆಗಳಿಂದ ಅಸಂಗತ್ವವನ್ನೇ ತಿಳಿಸಿಕೊಟ್ಟಿರುತ್ತದೆ. ಬುದ್ಧಾಂತದಲ್ಲಿ ಮಾಡಿದ (ಕರ್ಮದಿಂದ) ಸ್ವಪ್ನಾಂತವನ್ನು ಹೊಂದಿ ಸಂಪ್ರಸನ್ನನಾದರೆ ಕಳ್ಳತನವೇ ಮುಂತಾದ ಕಾರ್ಯವು ಕಾಣುವದಿಲ್ಲವಾದ್ದರಿಂದ[3] ಸಂಬದ್ಧನಾಗಿರುವದಿಲ್ಲವಷ್ಟೆ; ಆದ್ದರಿಂದ ಮೂರು ಸ್ಥಾನಗಳಲ್ಲಿಯೂ ಇವನು ತಾನುತಾನು ಅಸಂಗನೇ. ಆದ್ದರಿಂದ ಸ್ಥಾನತ್ರಯಗಳ ಧರ್ಮಗಳಿಗಿಂತ ವಿಲಕ್ಷಣ(ಸ್ವಭಾವದವನಾಗಿ) ಅಮೃತನೇ (ಆಗಿರುತ್ತಾನೆ).

ಪ್ರತಿಯೋನಿಯಾಗಿ ಸ್ವಪ್ನಾಂತಕ್ಕೇ ಎಂದರೆ ಸಂಪ್ರಸಾದಕ್ಕೇ ಬರುತ್ತಾನೆ ಎಂದರ್ಥ. ದರ್ಶನವೃತ್ತಿಯಾದ ಸ್ವಪ್ನವನ್ನು ಸ್ವಪ್ನಶಬ್ದದಿಂದಲೇ ಹೇಳಿರುವದು

1. "ಸ್ವಪ್ನಾನ್ತೇ ರತ್ವಾ ಚರಿತ್ವಾ" ಎಂಬ ಒಂದು ವಾಕ್ಯವು ಇಲ್ಲಿಲ್ಲ ; ಮಾಧ್ಯಂದಿನ ಪಾಠದಲ್ಲಿದೆ. ಈ ಪಾಠದಲ್ಲಿ ಮುಂದೆ ೪-೩-೩೪ರಲ್ಲಿ ಇದೆ.

2. "ತಸ್ಮಾತ್" ಎಂಬ ಆ॥ ಪಾಠವು ಅಚ್ಚಿನ ತಪ್ಪಿರಬಹುದು.

3. ೪-೩-೨೨ನ್ನು ನೋಡಿ.

ಕಂಡುಬರುವದರಿಂದಲೂ ಅಂತಶಬ್ದದಿಂದ (ಸ್ವಪ್ನಕ್ಕೆ) ವಿಶೇಷಣವನ್ನು ಕೊಟ್ಟಿರುವದು ಹೊಂದುವದರಿಂದಲೂ (ಹೀಗೆಂದು ಅರ್ಥವನ್ನು ಮಾಡಬೇಕು)[1]. "ಈ ಅಂತಕ್ಕೆ ಓಡಿಬರುತ್ತಾನೆ" (೪-೩-೧೯) ಎಂದು ಸುಷುಪ್ತಿಯನ್ನು ಮುಂದೆ (ಅಂತಶಬ್ದದಿಂದ) ತಿಳಿಸಿಯೂ ಇರುತ್ತದೆ. (ಹೀಗಲ್ಲದೆ) "ಸ್ವಪ್ನಾಂತದಲ್ಲಿ ರಮಿಸಿ ಸಂಚರಿಸಿ" (೪-೩-೩೪, ಮಾ. ೪-೧-೧೭), "ಸ್ವಪ್ನಾಂತ, ಬುದ್ಧಾಂತ- ಎಂಬೀ ಎರಡು ಅಂತಗಳನ್ನು ಅನುಕ್ರಮವಾಗಿ ಸಂಚರಿಸುತ್ತಾನೆ" (೪-೩-೧೮) ಎಂದು (ಪ್ರಯೋಗವು) ಕಂಡುಬರುವದರಿಂದ ದರ್ಶನವೃತ್ತಿಯಾದ ಸ್ವಪ್ನವನ್ನೇ ಇಲ್ಲಿಯೂ "ಸ್ವಪ್ನಾಂತಕ್ಕೇ" ಎಂದು ಹೇಳಿರುತ್ತದೆ ಎನ್ನುವದಾದರೆ[2], (ಆಗಲೂ) ಯಾವ ದೋಷವೂ ಆಗುವದಿಲ್ಲ. ಏಕೆಂದರೆ (ಇಲ್ಲಿ) ಸಾಧಿಸಬೇಕಾಗಿರುವ ಅಸಂಗತ್ವವು (ಆಗಲೂ) ಸಿದ್ಧವೇ ಆಗುತ್ತದೆ. ಏಕೆಂದರ ಜಾಗರಿತದಲ್ಲಿ ಪುಣ್ಯವನ್ನೂ ಪಾಪವನ್ನೂ ಕಾಣುತ್ತಲೇ ಇದ್ದು ರಮಿಸಿ ಸಂಚರಿಸಿ ಸ್ವಪ್ನಾಂತಕ್ಕೆ ಬಂದರೆ (ಆತ್ಮನು) ಜಾಗರಿತದೋಷದಿಂದ ಅನ್ವಿತನಾಗಿರುವದಿಲ್ಲ[3].

## ಆತ್ಮನ ಅಸಂಗತ್ವಕ್ಕೆ ದೃಷ್ಟಾಂತ

(ಉಪನಿಷತ್ತು)

**ತದ್ಯಥಾ ಮಹಾಮತ್ಸ್ಯ ಉಭೇ ಕೂಲೇ ಅನುಸಂಚರತಿ ಪೂರ್ವಂ ಚಾಪರಂ ಚೈವಮೇವಾಯಂ ಪುರುಷ ಏತಾವುಭಾವನ್ತಾವನು ಸಂಚರತಿ ಸ್ವಪ್ನಾನ್ತಂ ಚ ಬುದ್ಧಾನ್ತಂ ಚ ॥ ೧೮ ॥**

೧೮. ಅದು ಹೇಗೆಂದರೆ (ಹೇಗೆ) ಮಹಾಮತ್ಸ್ಯವು ಈಚಿನ ಮತ್ತು ಆಚೆಯ ಎರಡು ದಡಗಳನ್ನೂ ಅನುಕ್ರಮವಾಗಿ ಸಂಚರಿಸುತ್ತಿರುವದೋ, ಹೀಗೆಯೇ ಈ ಪುರುಷನು ಸ್ವಪ್ನಾಂತ, ಬುದ್ಧಾಂತ- ಈ ಎರಡು ಅಂತಗಳನ್ನು ಅನುಕ್ರಮವಾಗಿ ಸಂಚರಿಸುತ್ತಾನೆ.

---

1. ಸ್ವಪ್ನದ ಅಂತವೆಂದರೆ ಸುಷುಪ್ತಿ ಎಂದು ಅಂತವಿಶೇಷಣವು ಸ್ವರಸವಾಗಿ ಹೊಂದುತ್ತದೆ ಎಂದು ಭಾವ.

2. ಸ್ವಪ್ನಾಂತವೆಂದರೆ ದರ್ಶನವೃತ್ತಿಯಾದ ಎಂದರೆ ಎರಡನೆಯ ವಸ್ತು ಕಾಣುವ ನಿದ್ರೆಯಾದ ಸ್ವಪ್ನವೇ, ಅದರ್ಶನವೃತ್ತಿಯಾದ ಸುಷುಪ್ತಿಯಲ್ಲ ಎನ್ನುವದಾದರೆ ಎಂದರ್ಥ.

3. ಅನನ್ವಾಗತವಾಕ್ಯದಿಂದ ಕರ್ಮವಿವೇಕವನ್ನೂ ಅಸಂಗವಚನದಿಂದ ಕಾಮವಿವೇಕವನ್ನೂ ತಿಳಿಸಿದೆ ಎಂಬುದು ಭರ್ತೃಪ್ರಪಂಚರ ಮತ. ಬೃ. ವಾ. ೪-೩-೧೦೧೫.

## ಮುಂದಿನ ಕಂಡಿಕೆಯ ಸಂಬಂಧ

(ಭಾಷ್ಯ)

೨೦೫. ಏವಮಯಂ ಪುರುಷ ಆತ್ಮಾ ಸ್ವಯಂಜ್ಯೋತಿಃ ಕಾರ್ಯಕರಣ ವಿಲಕ್ಷಣಃ ತತ್ಪ್ರಯೋಜಕಾಭ್ಯಾಂ ಕಾಮಕರ್ಮಭ್ಯಾಂ ವಿಲಕ್ಷಣಃ, ಯಸ್ಮಾತ್ ಅಸಙ್ಗೋ ಹ್ಯಯಂ ಪುರುಷಃ, ಅಸಙ್ಗತ್ವಾತ್[1] ಇತ್ಯಯಮರ್ಥಃ "ಸ ವಾ ಏಷ ಏತಸ್ಮಿನ್ ಸಂಪ್ರಸಾದೇ" (೪-೩-೧೫) ಇತ್ಯಾದ್ಯಾಭಿಸ್ತಿಸೃಭಿಃ ಕಣ್ಡಿಕಾಭಿಃ ಪ್ರತಿಪಾದಿತಃ। ತತ್ರಾಸಙ್ಗತೈವ ಆತ್ಮನಃ ಕುತಃ? ಯಸ್ಮಾತ್ ಜಾಗರಿತಾತ್ ಸ್ವಪ್ನಂ ಸ್ವಪ್ನಾಚ್ಚ ಸಂಪ್ರಸಾದಂ ಸಂಪ್ರಸಾದಾಚ್ಚ ಪುನಃ ಸ್ವಪ್ನಂ ಕ್ರಮೇಣ ಬುದ್ಧಾನ್ತಂ ಜಾಗರಿತಂ ಬುದ್ಧಾನ್ತಾಚ್ಚ ಪುನಃ ಸ್ವಪ್ನಾನ್ತಮ್ ಇತ್ಯೇವಮ್ ಅನುಕ್ರಮಸಂಚಾರೇಣ ಸ್ಥಾನತ್ರಯಸ್ಯ ವ್ಯತಿರೇಕಃ ಸಾಧಿತಃ। ಪೂರ್ವಮಪಿ ಉಪನ್ಯಸ್ತೋಽಯಮರ್ಥಃ "ಸ್ವಪ್ನೋ ಭೂತ್ವೇಮಂ ಲೋಕಮತಿಕ್ರಾಮತಿ ಮೃತ್ಯೋ ರೂಪಾಣಿ" (೪-೩-೭) ಇತಿ। ತಂ ವಿಸ್ತರೇಣ ಪ್ರತಿಪಾದ್ಯ ಕೇವಲಂ ದೃಷ್ಟಾನ್ತಮಾತ್ರಮ್ ಅವಶಿಷ್ಟಮ್, ತದ್ ವಕ್ಷ್ಯಾಮೀತ್ಯಾರಭತೇ[2] ॥

(ಭಾಷ್ಯಾರ್ಥ)

ಹೀಗೆ ಈ ಪುರುಷನಾದ ಆತ್ಮನು ಸ್ವಯಂಜ್ಯೋತಿಯು, ಕಾರ್ಯಕರಣ ಗಳಿಗಿಂತ ವಿಲಕ್ಷಣನಾದವನು, ಅವುಗಳಿಗೆ ಪ್ರೇರಕವಾಗಿರುವ ಕಾಮಕರ್ಮ ಗಳಿಗಿಂತಲೂ ವಿಲಕ್ಷಣನು, ಏಕೆಂದರೆ ಈ ಪುರುಷನು ಅಸಂಗನಲ್ಲವೆ ? ಎಂದು ಅಸಂಗನಾಗಿರುವದರಿಂದ (ಈ ಸ್ವರೂಪದವನು) ಎಂಬೀ ಅರ್ಥವನ್ನು "ಆ ಇವನೇ ಈ ಸಂಪ್ರಸಾದದಲ್ಲಿ " (೪-೩-೧೫) ಎಂಬಿದೇ ಮುಂತಾದ ಮೂರು ಕಂಡಿಕೆಗಳಿಂದ ಪ್ರತಿಪಾದನೆಮಾಡಿದ್ದಾಯಿತು. ಇಲ್ಲಿ ಆತ್ಮನು ಅಸಂಗ ನೆಂಬುದೇ (ಮೊದಲು) ಹೇಗೆ ಹೊಂದುತ್ತದೆ ? ಹೇಗೆಂದರೆ ಜಾಗರಿತದಿಂದ ಸ್ವಪ್ನ ವನ್ನೂ ಸ್ವಪ್ನದಿಂದ ಸಂಪ್ರಸಾದವನ್ನೂ ಸಂಪ್ರಸಾದದಿಂದ ಮತ್ತೆ ಸ್ವಪ್ನವನ್ನೂ, ಕ್ರಮವಾಗಿ ಬುದ್ಧಾಂತವೆಂಬ ಎಚ್ಚರವನ್ನೂ ಬುದ್ಧಾಂತದಿಂದ ಮತ್ತೆ ಸ್ವಪ್ನಾಂತ ವನ್ನೂ– ಎಂದಿಂತು ಅನುಕ್ರಮವಾಗಿ ಸಂಚರಿಸುತ್ತಿರುವದರಿಂದ ಸ್ಥಾನತ್ರಯದ ವ್ಯತಿರೇಕವನ್ನು[3] ಸಾಧಿಸಿದ್ದಾಗಿದೆ. ಮೊದಲೂ ಇದೇ ಅರ್ಥವನ್ನು "ಸ್ವಪ್ನ ವಾಗಿ ಈ ಲೋಕವನ್ನು ಮೃತ್ಯುವಿನ ರೂಪಗಳನ್ನು ಅತಿಕ್ರಮಿಸುತ್ತಾನೆ" (೪-೩-೭) ಎಂದು ಹೇಳಿಯೇ ಇತ್ತು. ಅದನ್ನು ವಿಸ್ತಾರವಾಗಿ ತಿಳಿಸಿಕೊಟ್ಟು

---

1. ಈ ಮಾತು ಇಲ್ಲದಿದ್ದರೂ ಸಾಗುತ್ತಿತ್ತು ; ಶ್ರುತಿಯು ಹೇತುವನ್ನು ಹೇಳುತ್ತದೆ ಎಂಬುದನ್ನು ತಿಳಿಸುವದಕ್ಕೆ ಇದನ್ನು ಹೇಳಿದೆ ಎಂದಾದರೂ ವಿವರಿಸಬಹುದು.

2. ಆರಭ್ಯತೇ ಎಂಬುದಕ್ಕಿಂತ ಈ ಪಾಠವೇ ಮೇಲು.

3. ಅವಸ್ಥಾತ್ರಯಸಂಬಂಧರಾಹಿತ್ಯವನ್ನು.

ಬರಿಯ ದೃಷ್ಟಾಂತಮಾತ್ರವೇ ಉಳಿದಿದೆ, ಅದನ್ನು ಹೇಳೋಣವೆಂದು ಪ್ರಾರಂಭಿಸಿರುತ್ತಾನೆ[1].

## ಸ್ವಪ್ನಜಾಗ್ರತ್ಸಂಚಾರಿಯಾದಾತ್ಮನಿಗೆ ಮೀನಿನ ದೃಷ್ಟಾಂತ

(ಭಾಷ್ಯ)

೨೦೬. ತತ್ ತತ್ರ ಏತಸ್ಮಿನ್ ಯಥಾ ಪ್ರದರ್ಶಿತೇ ಅರ್ಥೇ ದೃಷ್ಟಾಂತೋಽಯಮ್ ಉಪಾದೀಯತೇ। ಯಥಾ ಲೋಕೇ ಮಹಾಮತ್ಸ್ಯಃ ಮಹಾಂಶ್ಚಾಸೌ ಮತ್ಸ್ಯಶ್ಚ ನಾದೇಯೇನ ಸ್ರೋತಸಾ ಅಹಾರ್ಯಃ ಇತ್ಯರ್ಥಃ। ಸ್ರೋತಶ್ಚ ವಿಷ್ಟಂಭಯತಿ ಸ್ವಚ್ಛಂದಚಾರೀ ಉಭೇ ಕೂಲೇ ನದ್ಯಾಃ ಪೂರ್ವಂ ಚ ಅಪರಂ ಚ ಅನುಕ್ರಮೇಣ ಸಂಚರತಿ। ಸಂಚರನ್ನಪಿ ಕೂಲದ್ವಯಂ ತನ್ಮಧ್ಯವರ್ತಿನಾ ಉದಕಸ್ರೋತೋವೇಗೇನ ನ ಪರವಶೀಕ್ರಿಯತೇ। ಏವಮೇವ ಅಯಂ ಪುರುಷಃ ಏತೌ ಉಭೌ ಅಂತೌ ಅನುಸಂಚರತಿ। ಕೌ ತೌ? ಸ್ವಪ್ನಾಂತಂ ಚ ಬುದ್ಧಾಂತಂ ಚ। ದೃಷ್ಟಾಂತಪ್ರದರ್ಶನಫಲಂ ತು ಮೃತ್ಯುರೂಪಃ ಕಾರ್ಯಕರಣಸಂಘಾತಃ ಸಹ ತತ್ಪ್ರಯೋಜಕಾಭ್ಯಾಂ ಕಾಮಕರ್ಮಭ್ಯಾಮ್ ಅನಾತ್ಮಧರ್ಮಃ, ಅಯಂ ಚ ಆತ್ಮಾ ಏತಸ್ಮಾದ್ ವಿಲಕ್ಷಣಃ ಇತಿ ವಿಸ್ತರತೋ ವ್ಯಾಖ್ಯಾತಮ್ ॥

(ಭಾಷ್ಯಾರ್ಥ)

(ತತ್=ತತ್ರ) ಇಲ್ಲಿ, ಎಂದರೆ ಈ ಮೇಲೆ ತಿಳಿಸಿರುವ ವಿಷಯದಲ್ಲಿ ಈ ದೃಷ್ಟಾಂತವನ್ನು ತೆಗೆದುಕೊಂಡಿರುತ್ತದೆ: ಹೇಗೆ ಲೋಕದಲ್ಲಿ ಮಹಾಮತ್ಸ್ಯವು -ದೊಡ್ಡದಾದ ಮೀನಾದ್ದರಿಂದ ಇದು ಮಹಾಮತ್ಸ್ಯವು- ನದಿಯ ಪ್ರವಾಹದಿಂದ ಕೊಚ್ಚಿಕೊಂಡು ಹೋಗುವದಕ್ಕೆ ಆಗದ (ಮೀನು) ಎಂದರ್ಥ. (ಅದು)

---

1. ಜೀವನ ಕರ್ಮವು ಬುದ್ಧ್ಯಾದ್ಯುಪಾಧಿಗಳನ್ನಾಶ್ರಯಿಸಿರುತ್ತದೆ, ಅದರಿಂದ ಭಾವನೆಯು ಬಂದು ಇವನನ್ನು ಅಂಟಿಕೊಂಡಿರುತ್ತದೆ. ಅದ್ದರಿಂದ ಈ ಕಾಮಕರ್ಮಗಳ ವಿವೇಕವನ್ನು ವಿವರಿಸಿದ್ದಾಯಿತು. ಆದರೆ ಅವಿದ್ಯೆಯು ಆತ್ಮವಿಜ್ಞಾನವನ್ನೇ ಆಶ್ರಯಿಸಿಕೊಂಡಿರುತ್ತದೆ; ಆ ವಿಜ್ಞಾನವನ್ನು ವಿಕಾರಗೊಳಿಸಿ ಮಿಥ್ಯಾಜ್ಞಾನಕ್ಕೆ ಕಾರಣವಾಗಿರುತ್ತದೆ. ಅದು ಬುದ್ಧ್ಯಾದಿಗಳಲ್ಲಿ ಸ್ಥೂಲವಾಗಿ ತೋರಿಕೊಳ್ಳುತ್ತದೆ. ಅದ್ದರಿಂದ ಇನ್ನು ಮುಂದೆ ಅವಿದ್ಯಾವಿವೇಕವನ್ನು ಹೇಳಲಾಗುವದು. ಮಹಾಮತ್ಸ್ಯವಾಕ್ಯದಿಂದ ಹಿಡಿದು ಸ್ತ್ರೀವಾಕ್ಯದವರೆಗೂ ಈ ಅವಿದ್ಯೆಯ ವಿವೇಕಾರ್ಥವಾಗಿ- ಎಂದು ಭರ್ತೃಪ್ರಪಂಚರು ಸಂಬಂಧವನ್ನು ಹೇಳಿದ್ದಾರೆ. ಇದನ್ನು ಅನುವಾದಮಾಡಿಕೊಂಡು ೪-೩-೧೧೦ನೆ ರಿಂದ ೧೧೨ರವರೆಗೂ ಖಂಡಿಸಿದೆ. ಅವಿದ್ಯೆಯು ವಿಷಯೇಂದ್ರಿಯದ್ವಾರದಿಂದ ಕಾಮವನ್ನು ಆತ್ಮನಿಗೆ ತಂದು ಅಂಟಿಸುತ್ತದೆ ಎಂಬ ಮತವನ್ನೂ ಅಲ್ಲಿ ಖಂಡಿಸಿದೆ.

ಸ್ವೇಚ್ಛೆಯಿಂದ ಸಂಚರಿಸುತ್ತಾ ಪ್ರವಾಹವನ್ನು ತಡೆದುಕೊಂಡಿರುತ್ತದೆ, ಎರಡು ದಡಗಳನ್ನೂ ನದಿಯ ಈಚಿನ ಮತ್ತು ಆಚೆಯ (ದಡವನ್ನು) ಅನುಕ್ರಮದಿಂದ ಸಂಚರಿಸುತ್ತಿರುವದೋ, (ಹಾಗೆ) ಎರಡು ದಡಗಳನ್ನೂ(ಒಂದೊಂದಾಗಿ ಮುಟ್ಟಿ) ಸಂಚರಿಸುತ್ತಿದ್ದರೂ ಅವುಗಳ ನಡುವೆಯಿರುವ ನೀರಿನ ಪ್ರವಾಹದ ಸೆಳೆತಕ್ಕೆ ಅಧೀನವಾಗಿ ಮಾಡಲ್ಪಡದಿರುವದೋ, ಹಾಗೆಯೇ ಈ ಪುರುಷನು ಈ ಎರಡು ಅಂತಗಳನ್ನೂ- (ಎರಡೆಂದರೆ) ಅವು ಯಾವವು ?- ಸ್ವಪ್ನಾಂತ, ಬುದ್ಧಾಂತ (ಇವೆರಡನ್ನೂ) ಅನುಕ್ರಮವಾಗಿ ಸಂಚರಿಸುತ್ತಿರುತ್ತಾನೆ.

(ಈ) ದೃಷ್ಟಾಂತವನ್ನು ತಿಳಿಸಿರುವವರ ಫಲವಾದರೋ (ಇದು): ಮೃತ್ಯುರೂಪವಾದ ಕಾರ್ಯಕರಣಸಂಘಾತವು ತನ್ನನ್ನು ಪ್ರೇರಿಸುವ ಕಾಮಕರ್ಮಗಳೊಡನೆ ಅನಾತ್ಮಧರ್ಮವೇ (ಆಗಿರುತ್ತದೆ). ಈ ಆತ್ಮನಾದರೋ ಇವಕ್ಕಿಂತ ವಿಲಕ್ಷಣನೇ ಎಂದು ವಿಸ್ತಾರವಾಗಿ ವಿವರಿಸಿದ್ದಾಯಿತು[1].

## ಆತ್ಮನು ನಿತ್ಯಶುದ್ಧಬುದ್ಧಮುಕ್ತಸ್ವಭಾವನು

(ಉಪನಿಷತ್ತು)

**ತದ್ಯಥಾಽಸ್ಮಿನ್ನಾಕಾಶೇ ಶ್ಯೇನೋ ವಾ ಸುಪರ್ಣೋ ವಾ ವಿಪರಿಪತ್ಯ ಶ್ರಾನ್ತಃ ಸಗ್ಂಹತ್ಯ ಪಕ್ಷೌ ಸಲ್ಲಯಾಯೈವ ಧ್ರಿಯತ ಏವಮೇವಾಯಂ ಪುರುಷ ಏತಸ್ಮಾ ಅನ್ತಾಯ ಧಾವತಿ ಯತ್ರ ಸುಪ್ತೋ ನ ಕಂಚನ ಕಾಮಂ ಕಾಮಯತೇ ನ ಕಂಚನ ಸ್ವಪ್ನಂ ಪಶ್ಯತಿ　　॥ ೧೯ ॥**

೧೯. ಅದು ಹೇಗೆಂದರೆ (ಹೇಗೆ) ಈ ಆಕಾಶದಲ್ಲಿ ಶ್ಯೇನವಾಗಲಿ ಸುಪರ್ಣವಾಗಲಿ ಹಾರಾಡಿ ಬಳಲಿ ರೆಕ್ಕೆಗಳನ್ನು ಕೂಡಿಸಿಕೊಂಡು ಗೂಡಿಗೆಂದೇ ಧಾರಣೆಮಾಡಿಕೊಳ್ಳುವದೋ, ಹಾಗೆಯೇ ಈ ಪುರುಷನು ಎಲ್ಲಿ ಸುಪ್ತನಾದರೆ ಯಾವ ಕಾಮವನ್ನೂ ಕಾಮಿಸುವದಿಲ್ಲವೋ ಯಾವ ಸ್ವಪ್ನವನ್ನೂ ಕಾಣುವದಿಲ್ಲವೋ (ಆ) ಈ ಅಂತಕ್ಕೆ ಓಡಿಬರುವನು.

---

1. ವಿಜ್ಞಾನವು ಭೌತಿಕವೊ, ಜ್ಞಾತೃನಿಷ್ಠವೊ ?- ಎಂಬ ಸಂಶಯವನ್ನು ಪರಿಹರಿಸಿ ಜ್ಞಾತೃವು ಎರಡವಸ್ಥೆಗಳಲ್ಲಿಯೂ ಬೇರೆ ಎಂಬುದನ್ನು ತಿಳಿಸುವದಕ್ಕೆ ಮತ್ಸ್ಯದೃಷ್ಟಾಂತ ಎಂದು ಭರ್ತೃಪ್ರಪಂಚರ ವ್ಯಾಖ್ಯಾನ. ಸ್ವಪ್ನದಲ್ಲಿ ಜ್ಞಾನವು ಭೌತಿಕವಲ್ಲ, ದೇವತಾಕೃತವೂ ಅಲ್ಲ- ಎಂದು ಅವರು ಸ್ಥಾಪಿಸಿರುತ್ತಾರೆ ೩-೪-೧೧೧೬ರಿಂದ ೧೧೪೬; ಇಲ್ಲಿ ದೇವತಾಶಂಕೆಯೂ ವ್ಯರ್ಥವೆಂದು ವಾರ್ತಿಕ. ೩-೪-೧೧೪೭.

## ಕಂಡಿಕೆಯ ಸಂಬಂಧ

(ಭಾಷ್ಯ)

೨೦೭. ಅತ್ರ ಚ ಸ್ಥಾನತ್ರಯಾನುಸಂಚಾರೇಣ ಸ್ವಯಂಜ್ಯೋತಿಷ ಆತ್ಮನಃ ಕಾರ್ಯಕರಣಸಂಘಾತವ್ಯತಿರಿಕ್ತಸ್ಯ ಕಾಮಕರ್ಮಭ್ಯಾಂ ವಿವಿಕ್ತತಾ ಉಕ್ತಾ । ಸ್ವತೋ ನಾಯಂ ಸಂಸಾರಧರ್ಮವಾನ್, ಉಪಾಧಿನಿಮಿತ್ತಮೇವ ತು ಅಸ್ಯ ಸಂಸಾರಿತ್ವಮ್ ಅವಿದ್ಯಾಧ್ಯಾರೋಪಿತಮ್ ಇತ್ಯೇಷ ಸಮುದಾಯಾರ್ಥ ಉಕ್ತಃ । ತತ್ರ ಚ ಜಾಗ್ರತ್ಸ್ವಪ್ನಸುಷುಪ್ತಸ್ಥಾನಾನಾಂ ತ್ರಯಾಣಾಂ ವಿಪ್ರಕೀರ್ಣರೂಪ ಉಕ್ತಃ, ನ ಪುಞ್ಜೀಕೃತ್ಯ ಏಕತ್ರ ದರ್ಶಿತಃ । ಯಸ್ಮಾತ್ ಜಾಗರಿತೇ ಸಸಙ್ಗಃ ಸಮೃತ್ಯುಃ ಸಕಾರ್ಯಕರಣಸಂಘಾತಃ ಉಪಲಕ್ಷ್ಯತೇ ಅವಿದ್ಯಯಾ । ಸ್ವಪ್ನೇ ತು ಕಾಮಸಂಯುಕ್ತೋ ಮೃತ್ಯುರೂಪವಿನಿರ್ಮುಕ್ತ ಉಪಲಕ್ಷ್ಯತೇ ।[1] ಸುಷುಪ್ತೇ[2] ಪುನಃ ಸಂಪ್ರಸನ್ನೋಽಸಙ್ಗೋ ಭವತೀತಿ ಅಸಙ್ಗತಾಪಿ ದೃಶ್ಯತೇ । ಏಕವಾಕ್ಯತಯಾ ತು ಉಪಸಂಹ್ರಿಯಮಾಣಂ ಫಲಂ ನಿತ್ಯಮುಕ್ತಬುದ್ಧಶುದ್ಧ[3] ಸ್ವಭಾವತಾ ಅಸ್ಯ ನೈಕತ್ರ ಪುಞ್ಜೀಕೃತ್ಯ ಪ್ರದರ್ಶಿತಾ ಇತಿ ತತ್ಪ್ರದರ್ಶನಾಯ ಕಣ್ಡಿಕಾ ಆರಭ್ಯತೇ । ಸುಷುಪ್ತೇ ಹಿ ಏವಂರೂಪತಾ ಅಸ್ಯ ವಕ್ಷ್ಯಮಾಣಾ । "ತದ್ವಾ ಅಸ್ಯೈತದತಿಚ್ಛನ್ದಾ ಅಪಹತಪಾಪ್ಮಾಽಭಯಂ ರೂಪಮ್" (೪-೩-೨೧) ಇತಿ ॥

(ಭಾಷ್ಯಾರ್ಥ)

ಇಲ್ಲಿ ಮೂರು ಅವಸ್ಥೆಗಳಲ್ಲಿಯೂ ಒಂದೊಂದಾಗಿ ಸಂಚರಿಸುತ್ತಿರುವದರಿಂದ ಸ್ವಯಂಜ್ಯೋತಿಯಾಗಿರುವ ಆತ್ಮನು ಕಾರ್ಯಕರಣಗಳಿಗಿಂತ ವ್ಯತಿರಿಕ್ತನಾಗಿರುವನಾಗಿ ಕಾಮಕರ್ಮಗಳಿಂದ ರಹಿತನಾಗಿರುವನೆಂದು ಹೇಳಿದ್ದಾಯಿತು. ಇವನು ತಾನುತಾನು ಸಂಸಾರಧರ್ಮವುಳ್ಳವನಲ್ಲ, ಇವನಿಗೆ ಉಪಾಧಿನಿಮಿತ್ತದಿಂದಲೇ ಅವಿದ್ಯಾಧ್ಯಾರೋಪಿತವಾದ ಸಂಸಾರಿತ್ವ(ವಿರುತ್ತದೆ) ಎಂಬೀ ಒಟ್ಟರ್ಥವನ್ನು ಹೇಳಿದ್ದಾಯಿತು. ಇವುಗಳೊಳಗೆ ಎಚ್ಚರ, ಕನಸು, ತನಿನಿದ್ರೆ- ಎಂಬ ಮೂರಕ್ಕೂ ಬಿಡಿಬಿಡಿಯಾಗಿ (ಆತ್ಮ)ಸ್ವರೂಪವನ್ನು ತಿಳಿಸಿದ್ದಾಯಿತು. ಅವು

---

1. 'ಉಪಲಭ್ಯತೇ' ಎಂಬ ಪಾಠಾಂತರಕ್ಕಿಂತ ಇದೇ ಮೇಲು.

2 'ಇದರ ಹಿಂದೆ ಸುಷುಪ್ತೇ ಪುನರ್ಬುದ್ಧಾನ್ತಮಾಗತೋ ಬುದ್ಧಾನ್ತಾಚ್ಚ' ಎಂಬೀ ಮಾತುಗಳು ಆ॥ ಪಾಠದಲ್ಲಿ ಹೆಚ್ಚಾಗಿವೆ. 'ಸುಷುಪ್ತೇ' ಎಂಬಿದರ ಮುಂದೆ ಪುನಃ ಎಂದಿರುವ ಪಾಠವನ್ನೇ ನಾವು ಆದರಿಸಿದ್ದೇವೆ.

3. 'ನಿತ್ಯಶುದ್ಧಬುದ್ಧಮುಕ್ತಸ್ವಭಾವತಾ' ಎಂಬುದು ಭಾಷ್ಯಕಾರರು ಮಿಕ್ಕ ಕಡೆಗಳಲ್ಲಿ ಒಪ್ಪಿರುವ ಅನುಕ್ರಮ ; ಇಲ್ಲಿಯೂ ಹಾಗೆಯೇ ಮೊದಲಿದ್ದು ಲೇಖಕರಿಂದ ಮಾರ್ಪಟ್ಟಿದೆಯೋ ಅಥವಾ ಹೀಗೆಯೇ ಇಲ್ಲಿ ಬರೆದಿತ್ತೋ ತಿಳಿಯದು.

ಗಳನ್ನು ಒಟ್ಟುಗೂಡಿಸಿ (ಆತ್ಮಸ್ವರೂಪವನ್ನು) ಒಂದು ಕಡೆಯಲ್ಲಿ ತಿಳಿಸಿರುವದಿಲ್ಲ. ಹೇಗೆಂದರೆ ಎಚ್ಚರದಲ್ಲಿ ಸಂಗವುಳ್ಳವನಾಗಿ ಮೃತ್ಯುವುಳ್ಳವನಾಗಿ ಕಾರ್ಯಕರಣಸಂಘಾತವುಳ್ಳವನಾಗಿ (ಇರುವನೆಂದು) ಅವಿದ್ಯೆಯಿಂದ ತೋರುತ್ತಿರುತ್ತಾನೆ ; ಕನಸಿನಲ್ಲಾದರೆ ಕಾಮದಿಂದೊಡಗೂಡಿದವನಾಗಿ ಮೃತ್ಯುರೂಪಗಳಿಂದ ಬಿಡುಗಡೆಯನ್ನು ಹೊಂದಿ (ಇರುವನೆಂದು) ತೋರುತ್ತಿರುತ್ತಾನೆ ; ತನಿನಿದ್ರೆಯಲ್ಲಾದರೋ ಸಂಪ್ರಸನ್ನನಾಗಿ ಅಸಂಗನಾಗಿರುತ್ತಾನಾಗಿ (ಇವನಿಗೆ) ಅಸಂಗತ್ವವೂ ಕಾಣಿಸುತ್ತಿರುವದು. ಆದರೆ (ಇವುಗಳನ್ನು ಒಟ್ಟುಗೂಡಿಸಿದರೆ) ಏಕವಾಕ್ಯತೆಯಿಂದ ಉಪಸಂಹಾರಮಾಡಬೇಕಾಗಿರುವ, ಈ (ಆತ್ಮನು) ನಿತ್ಯಮುಕ್ತನೂ (ನಿತ್ಯ) ಬುದ್ಧನೂ (ನಿತ್ಯ)ಶುದ್ಧನೂ ಆಗಿರುವ ಸ್ವಭಾವದವನೆಂಬ ಫಲವನ್ನು ಒಂದು ಕಡೆಯಲ್ಲಿ ಒಟ್ಟುಗೂಡಿಸಿ ತಿಳಿಸಿರುವದಿಲ್ಲ. ಆದ್ದರಿಂದ ಅದನ್ನು ತಿಳಿಸುವದಕ್ಕಾಗಿ (ಈ) ಕಂಡಿಕೆಯನ್ನು ಆರಂಭಿಸಿರುತ್ತದೆ. ಸುಷುಪ್ತಿಯಲ್ಲಲ್ಲವೆ, ಇವನಿಗೆ ಇಂಥ ಸ್ವರೂಪವಿರುವದೆಂದು ಮುಂದೆ "ಆ ಇವನ ರೂಪವು ಅತಿಚ್ಛಂದವಾದದ್ದು, ಅಪಹತಪಾಪ್ಮವಾದದ್ದು, ಅಭಯವಾದದ್ದು" (೪-೩-೨೧) ಎಂದು ಹೇಳಿರುವದು ?[1]

## ಸುಷುಪ್ತಿಯಲ್ಲಾಗುವ ವಿಲಕ್ಷಣಸ್ವರೂಪಪ್ರಾಪ್ತಿಗೆ ದೃಷ್ಟಾಂತ

(ಭಾಷ್ಯ)

೨೧೮. ಯಸ್ಮಾದೇವಂರೂಪಂ ವಿಲಕ್ಷಣಂ ಸುಷುಪ್ತಂ ಪ್ರವಿವಿಕ್ಷತಿ। ತತ್ ಕಥಮಿತ್ಯಾಹ। ದೃಷ್ಟಾನ್ತೇನಾಸ್ಯಾರ್ಥಸ್ಯ ಪ್ರಕಟೀಭಾವೋ ಭವತೀತಿ ತತ್ರ ದೃಷ್ಟಾನ್ತ ಉಪಾದೀಯತೇ। ತದ್ ಯಥಾ ಅಸ್ಮಿನ್ ಆಕಾಶೇ ಭೌತಿಕೇ ಶ್ಯೇನೋ ವಾ ಸುಪರ್ಣೋ ವಾ। ಸುಪರ್ಣಶಬ್ದೇನ ಕ್ಷಿಪ್ರಃ ಶ್ಯೇನ ಉಚ್ಯತೇ। ಯಥಾ ಆಕಾಶೇ ಅಸ್ಮಿನ್ ವಿಹೃತ್ಯ ವಿಪರಿಪತ್ಯ ಶ್ರಾನ್ತಃ ನಾನಾಪರಿಪತನಲಕ್ಷ

---

1. ಕಾರ್ಯಕರಣಗಳೆಂಬ ಮೃತ್ಯುರೂಪಗಳು, ಕರ್ಮಾವಿದ್ಯಾದಿಗಳೆಂಬ ರೂಪದ ಮೃತ್ಯು ; ಕಾರ್ಯಕರಣಸಂಬಂಧನೆಂಬ ಸಂಗ- ಇವುಗಳು ಆತ್ಮನಿಗೆ ಇಲ್ಲ ಎಂಬುದನ್ನು ಅವಸ್ಥೆಗಳನ್ನು ಒಂದೊಂದಾಗಿ ಬಿಡಿಸಿ ಹೇಳಿದ್ದರಿಂದ ತೋರಿಸಿದ್ದಾಯಿತು ಆದರೆ ಆತ್ಮನು ನಿತ್ಯಶುದ್ಧಬುದ್ಧಮುಕ್ತಸ್ವಭಾವನು ಎಂಬುದನ್ನು ಯಾವ ಒಂದು ವಾಕ್ಯದಲ್ಲಿಯೂ ಉಪಸಂಹರಮಾಡಿ ತೋರಿಸಿರುವದಿಲ್ಲ. ಸುಷುಪ್ತಿಯಲ್ಲಿ ಆತ್ಮನಿಗೆ ಇಂಥ ಸ್ವರೂಪವಿದೆ ಎಂದು ತೋರಿಸಬೇಕಾಗಿದೆ.

ಚೇನ ಕರ್ಮಣಾ ಪರಿಖಿನ್ನಃ ಸಂಹತ್ಯ ಪಕ್ಷೌ ಸಂಗಮಯ್ಯ ಸಂಪ್ರಸಾರ್ಯ ಪಕ್ಷೌ ಸಮ್ಯಗ್ ಲೀಯತೇ ಅಸ್ಮಿನ್ ಇತಿ ಸಲ್ಲಯೋ ನೀಡಃ। ನೀಡಾಯೈವ ಧ್ರಿಯತೇ ಸ್ವಾತ್ಮನೈವ ಧಾರ್ಯತೇ ಸ್ವಯಮೇವ। ಯಥಾ ಅಯಂ ದೃಷ್ಟಾನ್ತಃ, ಏವಮೇವ ಅಯಂ ಪುರುಷಃ ಏತಸ್ಮೈ[1] ಅನ್ತಾಯ ಧಾವತಿ। ಅನ್ತಶಬ್ದವಾಚ್ಯಸ್ಯ ವಿಶೇಷಣಮ್- ಯತ್ರ ಯಸ್ಮಿನ್ ಅನ್ತೇ ಸುಪ್ತೋ ನ ಕಂಚನ ನ ಕಂಚಿದಪಿ ಕಾಮಂ ಕಾಮಯತೇ। ತಥಾ ಚ ನ ಕಂಚನ ಸ್ವಪ್ನಂ ಪಶ್ಯತಿ। 'ನ ಕಂಚನ ಕಾಮಮ್' ಇತಿ ಸ್ವಪ್ನಬುದ್ಧಾನ್ತಯೋಃ ಅವಿಶೇಷೇಣ ಸರ್ವಃ ಕಾಮಃ ಪ್ರತಿಷಿಧ್ಯತೇ। 'ಕಂಚನ' ಇತ್ಯವಿಶೇಷಿತಾಭಿಧಾನಾತ್। ತಥಾ 'ನ ಕಂಚನ ಸ್ವಪ್ನಮ್' ಇತಿ। ಜಾಗರಿತೇಽಪಿ ಯದ್ದರ್ಶನಮ್ ತದಪಿ ಸ್ವಪ್ನಂ ಮನ್ಯತೇ ಶ್ರುತಿಃ। ಅತ ಆಹ 'ನ ಕಂಚನ ಸ್ವಪ್ನಂ ಪಶ್ಯತಿ' ಇತಿ। ತಥಾ ಚ ಶ್ರುತ್ಯನ್ತರಮ್ "ತಸ್ಯ ತ್ರಯ ಆವಸಥಾ ಸ್ತ್ರಯಃ ಸ್ವಪ್ನಾಃ" (ಐ. ೩-೧೨) ಇತಿ। ಯಥಾ ದೃಷ್ಟಾನ್ತೇ ಪಕ್ಷಿಣಃ ಪರಿಪತನಜಶ್ರಮಾಪನುತ್ತಯೇ ಸ್ವನೀಡೋಪಸರ್ಪಣಮ್ ಏವಂ ಜಾಗ್ರತ್ಸ್ವಪ್ನಯೋಃ ಕಾರ್ಯಕರಣಸಂಯೋಗಜಕ್ರಿಯಾಫಲೈಃ ಸಂಯುಜ್ಯಮಾನಸ್ಯ ಪಕ್ಷಿಣಃ ಪರಿಪತನಜ ಇವ ಶ್ರಮೋ ಭವತಿ। ತಚ್ಛ್ರಮಾಪನುತ್ತಯೇ ಸ್ವಾತ್ಮನೋ ನೀಡಮ್ ಆಯತನಮ್ ಸರ್ವಸಂಸಾರಧರ್ಮವಿಲಕ್ಷಣಂ ಸರ್ವಕ್ರಿಯಾಕಾರಕಫಲಾಯಾಸಶೂನ್ಯಂ ಸ್ವಮಾತ್ಮಾನಂ ಪ್ರವಿಶತಿ ॥

(ಭಾಷ್ಯಾರ್ಥ)

ಏಕೆಂದರೆ ಇಂಥ ವಿಲಕ್ಷಣವಾದ[2] ಸುಷುಪ್ತವನ್ನು (ಆತ್ಮನು) ಸೇರಲಿರುತ್ತಾನೆ. ಅದು ಹೇಗೆ ? ಎಂದರೆ ಶ್ರುತಿ ಹೇಳುತ್ತದೆ. ಈ ಅರ್ಥವು ಪ್ರಕಟವಾಗುವದು ದೃಷ್ಟಾಂತದಿಂದಲೇ ಆಗುತ್ತದೆ ಎಂದು ಇದಕ್ಕೆ[3] (ಒಂದು) ದೃಷ್ಟಾಂತವನ್ನು ತೆಗೆದುಕೊಂಡಿರುತ್ತದೆ.

ಅದು (ಹೇಗೆಂದರೆ) : ಹೀಗೆ ಈ ಭೌತಿಕವಾದ ಆಕಾಶದಲ್ಲಿ ಶ್ಯೇನವಾಗಲಿ ಸುಪರ್ಣವಾಗಲಿ- ಸುಪರ್ಣ ಎಂಬ ಶಬ್ದದಿಂದ ವೇಗವಾಗಿ (ಹಾರುವ) ಶ್ಯೇನವನ್ನು ಹೇಳಿದೆ. ಹೇಗೆ ಈ ಆಕಾಶದಲ್ಲಿ (ಶ್ಯೇನವು ಅಥವಾ ಸುಪರ್ಣವು)-

---

1. 'ಏತಸ್ಯಾ ಏತಸ್ಮೈ' ಎಂಬ ಆ॥ಪಾಠವು ಅಚ್ಚಿನ ತಪ್ಪು ; ಏತಸ್ಮಾ ಏತಸ್ಮೈ ಎಂಬ ಪಾಠದಲ್ಲಿ 'ಏತಸ್ಮಾ' ಬೇಕಿಲ್ಲ. ಮೂಲದಲ್ಲಿ ಏತಸ್ಮಾ ಎಂದು ಸಂಧಿಮಾಡಿರುವದನ್ನೇ ಭಾಷ್ಯದಲ್ಲಿ ಏತಸ್ಮೈ ಎಂದು ತೋರಿಸಿದೆ.

2. ನಿತ್ಯಶುದ್ಧಬುದ್ಧಸ್ವರೂಪದ ಆತ್ಮನಿರುವ.

3 ತನ್ನ ಸ್ವರೂಪವನ್ನೇ ಸುಷುಪ್ತಿಯಲ್ಲಿ ಸೇರುತ್ತಾನೆಂಬುದಕ್ಕೆ.

**ಹಾರಾಡಿ ಬಗೆಬಗೆಯಾಗಿ ಹಾರಿಕೊಂಡಿದ್ದು ಬಳಲಿ ಬಗೆಬಗೆಯ ಹಾರುವಿಕೆಯ ರೂಪವ ಕರ್ಮದಿಂದ ಆಯಾಸವನ್ನು ಹೊಂದಿ ರೆಕ್ಕೆಗಳನ್ನು ಕೂಡಿಸಿಕೊಂಡು ರೆಕ್ಕೆಗಳನ್ನು ಹೊಂದಿಸಿಕೊಂಡು ಸೇರಿಸಿಕೊಂಡು ಗೂಡಿಗೇ– ಚೆನ್ನಾಗಿ ಇದರಲ್ಲಿ ಚೆನ್ನಾಗಿ ಅಡಗಿಕೊಂಡಿರಬಹುದಾದ್ದರಿಂದ ಗೂಡನ್ನ (ಮೂಲದಲ್ಲಿ) 'ಸಲ್ಲಯ' ಎಂದು ಕರೆದಿದೆ. (ಆ) ಗೂಡಿಗೆಂದೇ ಧಾರಣೆಮಾಡಿಕೊಳ್ಳುವದೋ ತಾನೇ ತನ್ನನ್ನೇ ಧರಿಸಿಕೊಂಡು ಬರುವದೋ[1] ಈ ದೃಷ್ಟಾಂತವು ಹೇಗೋ ಹಾಗೆ ಈ ಪುರುಷನು ಈ ಅಂತಕ್ಕೆ ಓಡಿಬರುವನು.**

ಅಂತಶಬ್ದವಾಚ್ಯವಾದ (ಸುಷುಪ್ತಿಗೆ ಇದು) ವಿಶೇಷಣವು. ಎಲ್ಲಿ ಯಾವ ಅಂತದಲ್ಲಿ ಸುಪ್ತನಾದರೆ[2] ಯಾವ ಯಾವದೊಂದು ಕಾಮವನ್ನೂ ಬಯಸುವದಿಲ್ಲವೋ ಮತ್ತು ಯಾವ ಸ್ವಪ್ನವನ್ನೂ ಕಾಣುವದಿಲ್ಲವೋ– 'ಯಾವದೊಂದು ಕಾಮವನ್ನು' ಎಂದು ಎಚ್ಚರಕನಸುಗಳಲ್ಲಿರುವ ಎಲ್ಲಾ ಕಾಮಗಳನ್ನೂ ಅಲ್ಲಗಳೆದಿರುತ್ತದೆ; ಏಕೆಂದರೆ ಯಾವದೊಂದು ಎಂದು ಸಾಮಾನ್ಯವಾಗಿ (ಎಲ್ಲಾ ಕಾಮಗಳನ್ನೂ ಇಲ್ಲಿ) ಹೇಳಿರುತ್ತದೆ. ಹೀಗೆಯೇ ಯಾವದೊಂದು ಕನಸನ್ನೂ (ಎಂದು ಸಾಮಾನ್ಯವಾಗಿ ಹೇಳಿರುತ್ತದೆ). **ಎಚ್ಚರದಲ್ಲಿಯೂ ಕಾಣುತ್ತಾನಲ್ಲ, ಅದೂ ಸ್ವಪ್ನವೆಂದೇ ಶ್ರುತಿಯ ಮತವಾಗಿರುತ್ತದೆ; ಆದ್ದರಿಂದ ಯಾವ ಸ್ವಪ್ನವನ್ನೂ ಕಾಣುವದಿಲ್ಲವೋ (ಎಂದಿರುತ್ತದೆ)**[3]. ಆದ್ದರಿಂದಲೇ ಬೇರೊಂದು ಶ್ರುತಿಯಲ್ಲಿ "ಅವನಿಗೆ ಮೂರು ಅವಸಥಗಳು, ಮೂರು ಸ್ವಪ್ನಗಳು" (ಐ. ೩-೧೨) ಎಂದಿದೆ[4].

**ಹೇಗೆ ದೃಷ್ಟಾಂತದಲ್ಲಿ ಪಕ್ಷಿಯು ಹಾರಾಡಿದ ಆಯಾಸವನ್ನು ಪರಿಹರಿಸಿಕೊಳ್ಳುವದಕ್ಕಾಗಿ ತನ್ನ ಗೂಡಿನಬಳಿಗೆ ಬರುತ್ತದೆಯೋ, ಹಾಗೆಯೇ ಜಾಗ್ರತ್ಸ್ವಪ್ನಗಳಲ್ಲಿ ಕಾರ್ಯಕರಣಗಳ ಸಂಯೋಗದಿಂದಾದ ಕ್ರಿಯಾಫಲಗಳಿಂದೊಡಗೂಡುವ (ಆತ್ಮನಿಗೆ) ಪಕ್ಷಿಗೆ ಹಾರಾಡಿದ್ದರಿಂದಾಗುವಂತೆ ಶ್ರಮವಾಗುತ್ತದೆ. ಆ ಶ್ರಮವನ್ನು ಹೋಗಲಾಡಿಸಿಕೊಳ್ಳುವದಕ್ಕಾಗಿ ತನ್ನ ಗೂಡಾದ ಯಾವ ಸಂಸಾರಧರ್ಮಗಳೂ**

---

1. 'ಧ್ರಿಯತೇ' ಎಂಬುದು ಕರ್ಮಕರ್ತರಿಪ್ರಯೋಗವೆಂದು ಭಾವ.

2. ಎಲ್ಲಾ ಅವಸ್ಥೆಗಳಲ್ಲಿಯೂ ಸುಪ್ತನಾಗಿರುತ್ತಾನೆ. ಅಜ್ಞಾನನಿದ್ರೆಯಿಂದೊಡಗೂಡಿರುತ್ತಾನೆ; ಆದ್ದರಿಂದ ಸುಷುಪ್ತಿಯಲ್ಲಿ ಸುಪ್ತನಾದಾಗ ಈ ವಿಶೇಷನೆಂದಿದೆ.

3. ಸುಷುಪ್ತಿಯಲ್ಲಿ ಏನನ್ನೂ ಕಾಣುವದಿಲ್ಲವೆಂದೇ ಅರ್ಥ.

4. ಮೂರು ಅವಸ್ಥೆಗಳಲ್ಲಿಯೂ ನಿದ್ರೆಯಿದೆ ಎಂಬುದಕ್ಕೆ ಆಧಾರವಾದ ವಚನವಿದು. ಎಚ್ಚರಕನಸುಗಳೆಂಬ ನಿದ್ರೆಗಳಲ್ಲಿ ಮತ್ತೊಂದನ್ನು ಕಾಣುತ್ತಾನೆ, ಸುಷುಪ್ತಿಯಲ್ಲಿ ಕಾಣುವದಿಲ್ಲ.

**ಇಲ್ಲದ ಯಾವ ಕ್ರಿಯಾಕಾರಕಫಲಗಳ ಆಯಾಸವೂ ಇಲ್ಲದ ತನ್ನ ಸ್ವರೂಪವನ್ನು ಸೇರಿಕೊಳ್ಳುತ್ತಾನೆ[1].**

## ಅವಿದ್ಯೆಯ ತತ್ತ್ವದ ನಿರ್ಧಾರಣೆ

(ಉಪನಿಷತ್ತು)

**ತಾ ವಾ ಅಸ್ಯೈತಾ ಹಿತಾ ನಾಮ ನಾಡ್ಯೋ ಯಥಾ ಕೇಶಃ ಸಹಸ್ರಧಾ ಭಿನ್ನಸ್ತಾವತಾಣಿಮ್ನಾ ತಿಷ್ಠನ್ತಿ ಶುಕ್ಲಸ್ಯ ನೀಲಸ್ಯ ಪಿಙ್ಗಲಸ್ಯ ಹರಿತಸ್ಯ ಲೋಹಿತಸ್ಯ ಪೂರ್ಣಾ ಅಥ ಯತ್ರೈನಂ ಘ್ನನ್ತೀವ ಜಿನನ್ತೀವ ಹಸ್ತೀವ ವಿಚ್ಛಾಯಯತಿ ಗರ್ತಮಿವ ಪತತಿ ಯದೇವ ಜಾಗ್ರದ್ಭಯಂ ಪಶ್ಯತಿ ತದತ್ರಾವಿದ್ಯಯಾ ಮನ್ಯತೇಽಥ ಯತ್ರ ದೇವ ಇವ ರಾಜೇವಾಹಮೇವೇದಗ್ಂ ಸರ್ವೋಽಸ್ಮೀತಿ ಮನ್ಯತೇ ಸೋಽಸ್ಯ ಪರಮೋ ಲೋಕಃ ॥ ೨೦ ॥**

೨೦. ಅವನಿಗೆ ಈ ಹಿತವೆಂಬ ನಾಡಿಗಳು ಕೂದಲೆಳೆಯು ಸಾವಿರಪಾಲಾಗಿ ಒಡೆದುಕೊಂಡರೆ ಎಷ್ಟೋ ಅಷ್ಟು ಸೂಕ್ಷ್ಮತೆಯಿಂದಿರುತ್ತವೆ; ಬಿಳಿಯ, ನೀಲವಾದ, ಕಂದು(ಬಣ್ಣ)ದ, ಹಸುರಾದ, ಕೆಂಪಾದ (ರಸಗಳಿಂದ) ತುಂಬಿರುತ್ತವೆ. ಇನ್ನು ಎಲ್ಲಿ ಇವನನ್ನು ಕೊಲ್ಲುವಂತೆ ಇರುವರೋ, ಗೆಲ್ಲುವಂತೆ ಇರುವರೋ, ಆನೆಯು ಅಟ್ಟಿಕೊಂಡು ಬರುವಂತಿರುವದೋ, ಗುಂಡಿಗೆ ಬೀಳುವಂತಿರುವನೋ ಎಚ್ಚರದಲ್ಲಿ ಯಾವ ಭಯವನ್ನು ಕಾಣುತ್ತಿರುವನೋ ಅದನ್ನೇ ಇಲ್ಲಿ ಅವಿದ್ಯೆಯಿಂದ ಭಾವಿಸಿಕೊಳ್ಳುತ್ತಿರುವನೋ (ಅದು ಕೀಳುಸ್ಥಿತಿಯು). ಇನ್ನು ಎಲ್ಲಿ ದೇವತೆಯಂತೆ, ರಾಜನಂತೆ, ಇದೆಲ್ಲವೂ ನಾನೇ ಆಗಿರುವೆನು ಎಂದು ಭಾವಿಸಿಕೊಳ್ಳುವನೋ ಅದೇ ಇವನ ಪರಮಲೋಕವು.

## ಕಂಡಿಕೆಯ ಸಂಬಂಧ

(ಭಾಷ್ಯ)

೨೧೯. ಯದಿ ಅಸ್ಯ ಅಯಂ ಸ್ವಭಾವಃ ಸರ್ವಸಂಸಾರಧರ್ಮಶೂನ್ಯತಾ ಪರೋಪಾಧಿನಿಮಿತ್ತಂ ಚ ಅಸ್ಯ ಸಂಸಾರಧರ್ಮಿತ್ವಮ್ । ಯನ್ನಿಮಿತ್ತಂ

---

1. ಜಾಗ್ರತ್ಸ್ವಪ್ನಗಳಲ್ಲಿ ಆತ್ಮನಿಗೆ ದ್ವೈತಾದ್ವೈತರೂಪವಿದೆ. ಸುಷುಪ್ತಿಯಲ್ಲಿ ಅದ್ವೈತರೂಪವಿದೆ-ಎಂದು ವಿಂಗಡಿಸಿ ಈ ಕಂಡಿಕೆಗೆ ಭರ್ತೃಪ್ರಪಂಚರು ಅರ್ಥವನ್ನು ಬರೆದಿದ್ದರೆಂದು ವಾರ್ತಿಕದಿಂದ ಗೊತ್ತಾಗುತ್ತದೆ. ಆತ್ಮನು ಸಮಸ್ತವ್ಯಸ್ತರೂಪನೆಂಬ ಅವರ ಮತವನ್ನು ಅನುವಾದಮಾಡಿ ವಾರ್ತಿಕ. ೪-೩-೧೧೮೪ರಿಂದ ೧೨೦೪ರವರೆಗೆ ಖಂಡಿಸಿದೆ.

ಚಾಸ್ಯ ಪರೋಪಾಧಿಕೃತಂ ಸಂಸಾರಧರ್ಮಿತ್ವಮ್ ಸಾ ಚಾವಿದ್ಯಾ । ತಸ್ಯಾ ಅವಿದ್ಯಾಯಾಃ ಕಿಂ ಸ್ವಾಭಾವಿಕತ್ವಮ್ ಆಹೋಸ್ವಿತ್ ಕಾಮುಕರ್ಮಾದಿವತ್ ಆಗನ್ತುಕತ್ವಮ್ ? ಯದಿ ಚ ಆಗನ್ತುಕತ್ವಮ್, ತತೋ ವಿಮೋಕ್ಷ ಉಪಪದ್ಯತೇ । ತಸ್ಯಾಶ್ಚ ಆಗನ್ತುಕತ್ವೇ ಕೋಪಪತ್ತಿಃ ? ಕಥಂ ವಾ ನಾತ್ಮಧರ್ಮೋಽವಿದ್ಯಾ ? ಇತಿ ಸರ್ವಾನರ್ಥಬೀಜಭೂತಾಯಾ ಅವಿದ್ಯಾಯಾಃ ಸತತ್ತ್ವಾವಧಾರಣಾರ್ಥಂ ಪರಾ ಕಣ್ಡಿಕಾ ಆರಭ್ಯತೇ ॥

(ಭಾಷ್ಯಾರ್ಥ)

ಯಾವ ಸಂಸಾರಧರ್ಮವೂ ಇಲ್ಲವೆಂಬುದು ಇವನ ಸ್ವಭಾವವಾದರೆ, ಈ (ಆತ್ಮ)ನಿಗೆ ಮತ್ತೊಂದು ಉಪಾಧಿಯಿಂದಲೇ ಸಂಸಾರವೆಂಬ ಧರ್ಮವುಂಟಾಗಿದ್ದರೆ, ಮತ್ತೊಂದು ಉಪಾಧಿಯ ನಿಮಿತ್ತದಿಂದಲೇ ಸಂಸಾರವೆಂಬ ಧರ್ಮವುಂಟಾಗಿರುವದಕ್ಕೆ ಯಾವದು ನಿಮಿತ್ತವೋ ಅದು ಅವಿದ್ಯೆಯೇ ಆಗಿದ್ದರೆ, ಆ ಅವಿದ್ಯೆಯು ಸ್ವಾಭಾವಿಕವೊ, ಅಥವಾ ಕಾಮುಕರ್ಮಾದಿಗಳಂತೆ ಆಗಂತುಕವೊ ? (ಅದು) ಆಗಂತುಕವೆಂದಾದರೆ ಆಗ ಮೋಕ್ಷವೆಂಬುದು ಹೊಂದುತ್ತದೆ ಆ (ಅವಿದ್ಯೆಯು) ಆಗಂತುಕವೆಂಬುದಕ್ಕೆ ಉಪಪತ್ತಿ ಯಾವದು ? ಅವಿದ್ಯೆಯು ಆತ್ಮನ ಧರ್ಮವಲ್ಲವೆಂಬುದಾದರೂ ಹೇಗೆ ?– ಎಂದು ಎಲ್ಲಾ ಅನರ್ಥಗಳಿಗೂ ಕಾರಣವಾಗಿರುವ ಅವಿದ್ಯೆಯ (ನಿಜವಾದ) ತತ್ತ್ವವನ್ನು ಗೊತ್ತುಪಡಿಸುವದಕ್ಕಾಗಿ ಮುಂದಿನ ಕಂಡಿಕೆಯನ್ನು ಪ್ರಾರಂಭಿಸಿರುತ್ತದೆ.

## ಕನಸಿನಲ್ಲಿ ಕಾಣುವ ವಿದ್ಯಾವಿದ್ಯಾಫಲಗಳು

(ಭಾಷ್ಯ)

೨೧೦. ತಾ ವೈ ಅಸ್ಯ ಶಿರಃಪಾಣ್ಯಾದಿಲಕ್ಷಣಸ್ಯ ಪುರುಷಸ್ಯ ಏತಾಃ ಹಿತಾ ನಾಮ ನಾಡ್ಯಃ ಯಥಾ ಕೇಶಃ ಸಹಸ್ರಧಾ ಭಿನ್ನಃ ತಾವತಾ ತಾವತ್ಪರಿಮಾಣೇನ ಅಣಿಮ್ನಾ ಅಣುತ್ವೇನ ತಿಷ್ಠನ್ತಿ । ತಾಶ್ಚ ಶುಕ್ಲಸ್ಯ ರಸಸ್ಯ ನೀಲಸ್ಯ ಪಿಙ್ಗಲಸ್ಯ ಹರಿತಸ್ಯ ಲೋಹಿತಸ್ಯ ಪೂರ್ಣಾಃ । ಏತೈಃ ಶುಕ್ಲತ್ವಾದಿಭಿಃ ರಸವಿಶೇಷೈಃ ಪೂರ್ಣಾ ಇತ್ಯರ್ಥಃ । ಏತೇ ಚ ರಸಾನಾಂ ವರ್ಣವಿಶೇಷಾಃ ವಾತಪಿತ್ತಶ್ಲೇಷ್ಮಣಾಮ್ ಇತರೇತರಸಂಯೋಗವೈಷಮ್ಯವಿಶೇಷಾತ್ ವಿಚಿತ್ರಾ ಬಹವಶ್ಚ ಭವನ್ತಿ । ತಾಸು ಏವಂವಿಧಾಸು ನಾಡೀಷು ಸೂಕ್ಷ್ಮಾಸು ವಾಲಾಗ್ರಸಹಸ್ರಭೇದಪರಿಮಾಣಾಸು ಶುಕ್ಲಾದಿರಸಪೂರ್ಣಾಸು ಸಕಲದೇಹವ್ಯಾಪಿನೀಷು ಸಪ್ತದಶಕಂ ಲಿಙ್ಗಂ ವರ್ತತೇ । ತದಾಶ್ರಿತಾಃ ಸರ್ವಾ ವಾಸನಾಃ ಉಚ್ಚಾವಚ

ಸಂಸಾರಧರ್ಮಾನುಭವಜನಿತಾಃ । ತಲ್ಲಿಙ್ಗಂ ವಾಸನಾಶ್ರಯಂ ಸೂಕ್ಷ್ಮತ್ವಾತ್ ಸ್ವಚ್ಛಂ ಸ್ಫಟಿಕಮಣಿಕಲ್ಪಂ ನಾಡೀಗತರಸೋಪಾಧಿಸಂಸರ್ಗವಶಾತ್ ಧರ್ಮಾಧರ್ಮಪ್ರೇರಿತೋದ್ಭೂತವೃತ್ತಿವಿಶೇಷಂ ಸ್ತ್ರೀರಥಹಸ್ತ್ಯಾದ್ಯಾಕಾರವಿಶೇಷೈಃ ವಾಸನಾಭಿಃ ಪ್ರತ್ಯವಭಾಸತೇ । ಅಥೈವಂ ಸತಿ ಯತ್ರ ಯಸ್ಮಿನ್ ಕಾಲೇ ಕೇಚನ ಶತ್ರವಃ. ಅನ್ಯೇ ವಾ ತಸ್ಕರಾಃ ಮಾಮ್ ಆಗತ್ಯ ಘ್ನನ್ತಿ ಇತಿ ಮೃಷೈವ ವಾಸನಾನಿಮಿತ್ತಃ ಪ್ರತ್ಯಯಃ ಅವಿದ್ಯಾಖ್ಯೋ ಜಾಯತೇ, ತದೇತತ್ ಉಚ್ಯತೇ ಏನಂ ಸ್ವಪ್ನದೃಶಂ ಘ್ನನ್ತೀವ ಇತಿ । ತಥಾ ಜಿನನ್ತೀವ ವಶೀಕುರ್ವನ್ತೀವ । ನ ಕೇಚನ ಘ್ನನ್ತಿ ನಾಪಿ ವಶೀಕುರ್ವನ್ತಿ ಕೇವಲಂ ತು ಅವಿದ್ಯಾವಾಸನೋದ್ಭವನಿಮಿತ್ತಂ ಭ್ರಾನ್ತಿಮಾತ್ರಮ್ । ತಥಾ ಹಸ್ತೀವ ಏನಂ ವಿಚ್ಛಾಯಯತಿ ವಿಚ್ಛಾದಯತಿ ವಿದ್ರಾವಯತಿ । ಧಾವಯತೀವ ಇತ್ಯರ್ಥಃ । ಗರ್ತಮಿವ ಪತತಿ। ಗರ್ತಂ ಜೀರ್ಣಕೂಪಾದಿಕಮಿವ ಪತನ್ತಮ್ ಆತ್ಮಾನಮ್ ಉಪಲಕ್ಷಯತಿ । ತಾದೃಶೀ ಹಿ ಅಸ್ಯ ಮೃಷಾ ವಾಸನಾ ಉದ್ಭವತಿ ಅತ್ಯನ್ತನಿಕೃಷ್ಟಾ ಅಧರ್ಮೋದ್ಭಾಸಿತಾನ್ತಃಕರಣವೃತ್ತ್ಯಾಶ್ರಯಾ ದುಃಖಸ್ವರೂಪತ್ವಾತ್ । ಕಿಂ ಬಹುನಾ? ಯದೇವ ಜಾಗ್ರದ್ ಭಯಂ ಪಶ್ಯತಿ ಹಸ್ತ್ಯಾದಿಲಕ್ಷಣಮ್ ತದೇವ ಭಯರೂಪಮ್ ಅತ್ರ ಅಸ್ಮಿನ್ ಸ್ವಪ್ನೇ ವಿನ್ದೈವ ಹಸ್ತ್ಯಾದಿರೂಪಂ ಭಯಮ್ ಅವಿದ್ಯಾವಾಸನಯಾ ಮೃಷೈವ ಉದ್ಭೂತಯಾ ಮನ್ಯತೇ । ಅಥ ಪುನಃ ಯತ್ರ ಅವಿದ್ಯಾ ಅಪಕೃಷ್ಯಮಾಣಾ ವಿದ್ಯಾ ಚ ಉತ್ಕೃಷ್ಯಮಾಣಾ ಕಿಂವಿಷಯಾ ಕಿಂಲಕ್ಷಣಾ ಚೇತಿ ? ಉಚ್ಯತೇ । ಅಥ ಪುನಃ ಯತ್ರ ಯಸ್ಮಿನ್ ಕಾಲೇ ದೇವ ಇವ ಸ್ವಯಂ ಭವತಿ । ದೇವತಾವಿಷಯಾ ವಿದ್ಯಾ ಯದಾ ಉದ್ಭೂತಾ ಜಾಗರಿತಕಾಲೇ ತದುದ್ಭೂತಯಾ[1] ವಾಸನಯಾ ದೇವಮಿವ ಆತ್ಮಾನಂ ಮನ್ಯತೇ ಸ್ವಪ್ನೇಽಪಿ । ತದುಚ್ಯತೇ ದೇವ ಇವ । ರಾಜೇವ । ರಾಜ್ಯಸ್ಥೋಽಭಿಷಿಕ್ತಃ ಸ್ವಪ್ನೇಽಪಿ 'ರಾಜಾಹಮ್' ಇತಿ ಮನ್ಯತೇ ರಾಜವಾಸನಾವಾಸಿತಃ। ಏವಮ್ ಅತ್ಯನ್ತಪ್ರಕ್ಷೀಯಮಾಣಾ ಅವಿದ್ಯಾ ಉದ್ಭೂತಾ ಚ ವಿದ್ಯಾ ಸರ್ವಾತ್ಮವಿಷಯಾ ಯದಾ ತದಾ[2] ಸ್ವಪ್ನೇಽಪಿ ತದ್ಭಾವಭಾವಿತಃ 'ಅಹಮೇವೇದಂ (ಸರ್ವಮ್)[3] ಸರ್ವೋಽಸ್ಮಿ' ಇತಿ ಮನ್ಯತೇ । ಸ ಯಃ ಸರ್ವಾತ್ಮಭಾವಃ ಸೋಽಸ್ಯ ಆತ್ಮನಃ ಪರಮೋ ಲೋಕಃ ಪರಮ ಆತ್ಮಭಾವಃ ಸ್ವಾಭಾ

---

1. 'ತದಾ ಉದ್ಭೂತಯಾ'–ಎಂಬ ಅಚ್ಚಿನ ಪಾಠಕ್ಕಿಂತ ಇದು ಮೇಲು.

2. 'ಯದಾ ಜಾಗ್ರದವಸ್ಥಾಯಾಂ ತದಾ' ಎಂಬ ಪಾಠವೂ ಉಂಟು; 'ಯದಾ ಯದಾ' ಎಂಬ ಅಚ್ಚಿನ ಪಾಠವು ಸರಿಯಲ್ಲ.

3. ಉಪನಿಷತ್ತಿಗನುಸಾರವಾಗಿ 'ಅಹಮೇವೇದಂ' ಎಂದಿಷ್ಟೇ ಸಾಕಾದರೂ 'ಸರ್ವಮ್' ಎಂಬ ಮಾತು ಅಧ್ಯಾಹೃತವಾಗಿರುವಂತೆಯೇ ಅನ್ವಯಿಸಿಕೊಳ್ಳಬೇಕಾಗಿದೆ.

ವಿಕಃ। ಯತ್ತು ಸರ್ವಾತ್ಮಭಾವಾತ್ ಅರ್ವಾಕ್ ವಾಲಾಗ್ರಮಾತ್ರಮಪಿ ಅನ್ಯತ್ವೇನ ದೃಶ್ಯತೇ 'ನಾಹಮಸ್ಮಿ' ಇತಿ, ತದವಸ್ಥಾ ಅವಿದ್ಯಾ। ತಯಾ ಅವಿದ್ಯಯಾ ಯೇ ಪ್ರತ್ಯುಪಸ್ಥಾಪಿತಾಃ ಅನಾತ್ಮಭಾವಾ ಲೋಕಾಃ, ತೇ ಅಪರಮಾಃ ಸ್ಥಾವರಾನ್ತಾಃ। ತಾನ್ ಸಂವ್ಯವಹಾರವಿಷಯಾನ್ ಲೋಕಾನ್ ಅಪೇಕ್ಷ್ಯ. ಅಯಂ ಸರ್ವಾತ್ಮಭಾವಃ ಸಮಸ್ತಃ ಅನನ್ತರೋಽಬಾಹ್ಯಃ। ಸೋಽಸ್ಯ ಪರಮೋ ಲೋಕಃ। ತಸ್ಮಾತ್ ಅಪಕೃಷ್ಯಮಾಣಾಯಾಮ್ ಅವಿದ್ಯಾಯಾಂ ವಿದ್ಯಾಯಾಂ ಚ ಕಾಷ್ಠಾಂಗತಾಯಾಂ ಸರ್ವಾತ್ಮಭಾವೋ ಮೋಕ್ಷಃ। ಯಥಾ ಸ್ವಯಂ ಜ್ಯೋತಿಷ್ಟ್ವಂ ಸ್ವಪ್ನೇ ಪ್ರತ್ಯಕ್ಷತ ಉಪಲಭ್ಯತೇ ತದ್ವತ್ ವಿದ್ಯಾಫಲಮ್ ಉಪಲಭ್ಯತೇ ಇತ್ಯರ್ಥಃ। ತಥಾ ಅವಿದ್ಯಾಯಾಮಪಿ ಉತ್ಕೃಷ್ಯಮಾಣಾಯಾಂ ತಿರೋಧೀಯಮಾನಾಯಾಂ ಚ ವಿದ್ಯಾಯಾಮ್ ಅವಿದ್ಯಾಯಾಃ ಫಲಂ ಪ್ರತ್ಯಕ್ಷತ ಏವ ಉಪಲಭ್ಯತೇ 'ಅಥ ಯತ್ರೈನಂ ಘ್ನನ್ತೀವ ಜೀವನ್ತೀವ' ಇತಿ ॥

(ಭಾಷ್ಯಾರ್ಥ)

ಈ ತಲೆ ಕೈ ಮುಂತಾದವುಗಳ ರೂಪದ ಪುರುಷನಿಗೆ ಆ ಇವೇ ಹಿತ ಎಂಬ ನಾಡಿಗಳು[1] ಕೂದಲೆಳೆಯು ಸಾವಿರವಾಲಾಗಿ ಒಡೆದುಕೊಂಡರೆ ಎಷ್ಟೋ ಅಷ್ಟು, ಅಷ್ಟು ಅಳತೆಯಿಂದೊಡಗೂಡಿದ ಸೂಕ್ಷ್ಮತೆಯಿಂದ ಸೂಕ್ಷ್ಮವಾಗಿ ಇರುತ್ತವೆ. ಮತ್ತು ಅವು ಬಿಳಿಯ, ನೀಲವಾದ, ಕಂದು(ಬಣ್ಣ)ದ, ಹಸುರಾದ, ಕೆಂಪಾದ (ರಸಗಳಿಂದ) ತುಂಬಿರುತ್ತವೆ[2]; ಈ ಬಿಳಿಯದೇ ಮುಂತಾಗಿರುವ ಬೇರೆಬೇರೆಯ ರಸಗಳಿಂದ ತುಂಬಿರುತ್ತವೆ ಎಂದರ್ಥ. ರಸಗಳ ಈ ಬೇರೆ ಬೇರೆಯ ಬಣ್ಣಗಳು ವಾತ, ಪಿತ್ತ, ಶ್ಲೇಷ್ಮ -(ಇವು)ಗಳು ಒಂದಕ್ಕೊಂದು ಬೆರೆತುಕೊಂಡಿರುವದರಲ್ಲಾದ ಹೆಚ್ಚುಕಡಿಮೆಯಿಂದ ಬಗೆಬಗೆಯಾಗಿಯೂ ಅನೇಕವಾಗಿಯೂ ಇರುತ್ತವೆ. (ಹೀಗೆ) ಸೂಕ್ಷ್ಮವಾಗಿ ಕೂದಲೆಳೆಯ ತುದಿಯ ಸಾವಿರದಂಶದಷ್ಟು ಪರಿಮಾಣವುಳ್ಳ ಬಿಳಿಯದೇ ಮುಂತಾದ ರಸಗಳಿಂದ ತುಂಬಿ, ದೇಹದಲ್ಲೆಲ್ಲ ವ್ಯಾಪಿಸಿಕೊಂಡಿರುವ ಆ ಇಂಥ ನಾಡಿಗಳಲ್ಲಿ ಹದಿನೇಳ

1. ನಾಡಿಗಳಲ್ಲಿರುವ ರಸಗಳ ವೈಚಿತ್ರ್ಯದಿಂದ ಆತ್ಮನಿಗೆ ಆಯಾ ಭೋಗದ ಅಧ್ಯಾಸವಾಗುತ್ತದೆ ಎಂದು ಹೇಳುವದಕ್ಕೆ ಇಲ್ಲಿ ನಾಡಿಗಳನ್ನು ಹೇಳಿದೆ; ಬುದ್ಧಿಯ ಜ್ಞಾನವು ಜಾಗ್ರತ್ಸ್ವಪ್ನಗಳಲ್ಲಿ ವಿಕಾಸವಾಗುತ್ತದೆ, ಸುಷುಪ್ತಿಯಲ್ಲಿ ಸಂಕುಚಿತವಾಗುತ್ತದೆ ಎಂದು ತಿಳಿಸುವದಕ್ಕೆ ೨-೧-೧೯ರಲ್ಲಿ ನಾಡಿಗಳನ್ನು ಹೇಳಿದೆ, ತೈಜಸನ ಆಹಾರವು ಪ್ರವಿವಿಕ್ತಾಹಾರತರವೆಂಬುದನ್ನು ತಿಳಿಸುವದಕ್ಕೆ ೪-೨-೩ರಲ್ಲಿ ಹೇಳಿದೆ. ಹೀಗೆ ಮೂರು ಸಲ ನಾಡಿಗಳನ್ನು ಹೇಳಿರುವದರಲ್ಲಿ ಪುನರುಕ್ತಿಯಿಲ್ಲ- ಎಂದು ವಾರ್ತಿಕ. ೪-೩-೧೨೧೬ರಿಂದ ೧೨೨೮.

2. ವಾತರಸದಿಂದ ಕೂಡಿದ್ದರೆ ಕೆಂಪು, ಪಿತ್ತದಿಂದ ಕೂಡಿದ್ದರೆ ನೀಲ-ಎಂದು ಮುಂತಾಗಿ ಸುಶ್ರುತಾದಿಗ್ರಂಥಗಳಲ್ಲಿ ಹೇಳಿದೆ.

ವಯವದ[1] ಲಿಂಗವು ಇದ್ದುಕೊಂಡಿರುತ್ತದೆ. ಹೆಚ್ಚಿನ ಮತ್ತು ಕಡಿಮೆಯ ಸಂಸಾರಧರ್ಮಗಳನ್ನು ಅನುಭವಿಸಿದ್ದರಿಂದುಂಟಾದ ವಾಸನೆಗಳೆಲ್ಲವೂ ಆ (ಲಿಂಗ)ವನ್ನು ಆಶ್ರಯಿಸಿಕೊಂಡಿರುವವು. ವಾಸನೆಗಳಿಗೆ ಆಶ್ರಯವಾಗಿರುವ ಆ ಲಿಂಗವು ಸೂಕ್ಷ್ಮವಾಗಿರುವದರಿಂದ ಸ್ಫಟಿಕಮಣಿಯಂತೆ ಸ್ವಚ್ಛವಾಗಿದ್ದು ನಾಡಿಗಳಲ್ಲಿರುವ ರಸಗಳೆಂಬ ಉಪಾಧಿಗಳ ಸಂಬಂಧದಿಂದ ಧರ್ಮಾಧರ್ಮಗಳಿಂದ ಪ್ರೇರಿತವಾಗಿ ಮೇಲಕ್ಕೆದ್ದುಕೊಂಡು ಆಯಾ ವೃತ್ತಿಗಳಿಂದ ಹೆಂಗಸರು, ಗಾಡಿಗಳು, ಆನೆಗಳು —ಮುಂತಾದ ಬೇರೆಬೇರೆಯ ಆಕಾರಗಳುಳ್ಳ ವಾಸನೆಗಳಾಗಿ ತೋರಿಕೊಳ್ಳುತ್ತದೆ.

ಇನ್ನು ಹೀಗಿರುವಲ್ಲಿ ಎಲ್ಲಿ ಯಾವ ಕಾಲದಲ್ಲಿ 'ಕೆಲವರು ಶತ್ರುಗಳೋ ಅಥವಾ ಬೇರೆಯವರಾದ ಕಳ್ಳರೋ, 'ನನ್ನನ್ನು ಬಂದು ಕೊಲ್ಲುತ್ತಾರೆ', ಎಂದು ಸುಳ್ಳಾಗಿಯೇ ವಾಸನೆಗಳ ನಿಮಿತ್ತದಿಂದ ಅವಿದ್ಯೆ ಎಂಬ ಪ್ರತ್ಯಯವು ಉಂಟಾಗುತ್ತದೆಯೋ ಅದನ್ನು 'ಈ ಕನಸುಕಾಣುವವನನ್ನು ಕೊಲ್ಲುವಂತಿರುವರೋ' ಎಂದು (ಶ್ರುತಿಯಲ್ಲಿ) ಹೇಳಿದೆ. ಹೀಗೆಯೇ ಗೆಲ್ಲುವಂತೆ, ವಶಗೊಳಿಸುವಂತೆ ಇರುವರೋ (ಎಂದರ್ಥ). ಯಾರೊಬ್ಬರೂ ಕೊಲ್ಲುವದಿಲ್ಲ, ವಶಗೊಳಿಸಿಕೊಳ್ಳುವದೂ ಇಲ್ಲ, ಆದರೆ ಬರಿಯ ಅವಿದ್ಯಾವಾಸನೆಯು ಹುಟ್ಟಿಕೊಂಡ ನಿಮಿತ್ತದಿಂದ ಭ್ರಾಂತಿಮಾತ್ರವೇ (ಅದು). ಹೀಗೆಯೇ ಇವನನ್ನು ಆನೆಯು (ವಿಚ್ಛಾಯಯತಿ= ವಿಚ್ಛಾದಯತಿ) ಅಟ್ಟಿಸಿಕೊಂಡು ಬರುವಂತಿರುತ್ತದೆ, ಬೆರಸಿಕೊಂಡುಬರುತ್ತದೆ, (ಎಂಬಂತೆ) ಓಡಿಸಿಕೊಂಡು ಬರುವಂತೆ (ಇರುತ್ತದೆ) ಎಂದರ್ಥ. ಗುಂಡಿಗೆ ಬೀಳುವಂತಿರುವನೋ, ಗುಂಡಿಗೆ ಎಂದರೆ ಹಾಳು ಹಗೇವು ಮುಂತಾದದ್ದರೊಳಕ್ಕೆ ಬೀಳುವಂತೆ ತನ್ನನ್ನು ಕಾಣುತ್ತಾನೋ. ಇವನಿಗೆ ಅಧರ್ಮದಿಂದ ತೋರಿಕೊಳ್ಳುವ ಅಂತಃಕರಣವೃತ್ತಿಗಳನ್ನು ಆಶ್ರಯಿಸಿರುವ ಅಂಥ ಅತ್ಯಂತ ಕೀಳಾದ ಹುಸಿವಾಸನೆಯು ಎದ್ದುಕೊಳ್ಳುತ್ತದೆ (ಎಂದು ತಿಳಿಯಬೇಕು), ಏಕೆಂದರೆ (ಅದು) ಅತ್ಯಂತದುಃಖರೂಪವಾಗಿರುತ್ತದೆ. ಹೆಚ್ಚು ಹೇಳಿದ್ದರಿಂದೇನು ? ಎಚ್ಚರದಲ್ಲಿ ಯಾವ ಆನೆಯೇ ಮುಂತಾದ ಭಯವನ್ನು ಕಾಣುತ್ತಾನೋ ಅದೇ ಭಯರೂಪವೇ ಇಲ್ಲಿ ಎಂದರೆ ಈ ಸ್ವಪ್ನದಲ್ಲಿ ಆನೆಯೇ ಮುಂತಾದ ರೂಪದ ಭಯವನ್ನೇ, ಸುಳ್ಳುಸುಳ್ಳಾಗಿಯೇ ಎದ್ದುಕೊಂಡಿರುವ ಅವಿದ್ಯಾವಾಸನೆಯಿಂದ ಭಾವನೆಮಾಡಿಕೊಳ್ಳುತ್ತಾನೋ (ಅದು ತೀರ ಕೀಳು ಸ್ಥಿತಿಯು).

---

1. ಪಂಚಭೂತಗಳು, ದಶೇಂದ್ರಿಯಗಳು, ಪ್ರಾಣ, ಅಂತಃಕರಣ–ಇವು ಹದಿನೇಳ ವಯವಗಳು. ಆ|| ಟೀ||

ಇನ್ನು ಹೀಗಲ್ಲದೆ ಎಲ್ಲಿ ಅವಿದ್ಯೆಯು ಕಡಿಮೆಯಾಗಿ ವಿದ್ಯೆಯು ಹೆಚ್ಚಾಗಿರುವದೋ (ಅಲ್ಲಿ ವಿದ್ಯೆಯು) ಯಾವ ವಿಷಯವಾದದ್ದು, ಯಾವ ಸ್ವರೂಪದ್ದು ಎಂದರೆ (ಶ್ರುತಿ) ಹೇಳುತ್ತದೆ : ಇನ್ನು ಹೀಗಲ್ಲದೆ ಎಲ್ಲಿ ಯಾವ ಕಾಲದಲ್ಲಿ ತಾನು ದೇವತೆಯಂತೆ ಆಗಿರುತ್ತಾನೋ, ದೇವತೆಯ ವಿಷಯವಾದ ವಿದ್ಯೆಯು ಜಾಗರಿತಕಾಲದಲ್ಲಿ ಯಾವಾಗ ಉಂಟಾಗಿರುವದೋ, ಆಗ (ಅದರಿಂದ) ಎದ್ದುಕೊಂಡ ವಾಸನೆಯಿಂದ ತಾನು ದೇವತೆಯೆಂದೇ ಕನಸಿನಲ್ಲಿಯೂ ಭಾವಿಸಿಕೊಳ್ಳುತ್ತಾನೆ. ಅದನ್ನೇ 'ದೇವತೆಯಂತೆ' ಎಂದಿದೆ. ರಾಜನಂತೆ, ರಾಜ್ಯದಲ್ಲಿದ್ದು ಅಭಿಷಿಕ್ತನಾದವನ. ಕನಸಿನಲ್ಲಿಯೂ ನಾನು ರಾಜನು ಎಂದು ರಾಜವಾಸನೆಯಿಂದ ವಾಸಿತನಾಗಿ ಭಾವಿಸಿಕೊಳ್ಳುತ್ತಾನೆ. ಹೀಗೆ ಅತ್ಯಂತವಾಗಿ ಅವಿದ್ಯೆಯು ಸವೆದುಹೋಗಲು ಸರ್ವಾತ್ಮವಿಷಯವಿದ್ಯೆಯೂ ಯಾವಾಗ ಎದ್ದುಕೊಳ್ಳುವದೋ ಆಗ ಕನಸಿನಲ್ಲಿಯೂ ಅದೇ ಭಾವನೆಯಿಂದ ಭಾವಿತನಾಗಿ 'ನಾನೇ ಇದೆ(ಲ್ಲವೂ), ಸರ್ವನಾಗಿರುತ್ತೇನೆ' ಎಂದು ಭಾವಿಸಿಕೊಳ್ಳುತ್ತಾನೆ. ಆ ಸರ್ವಾತ್ಮಭಾವವಿದೆಯಲ್ಲ, ಅದು ಈ ಆತ್ಮನ ಪರಮಲೋಕವು, ಸ್ವಾಭಾವಿಕವಾದ ಹೆಚ್ಚಿನ ಆತ್ಮಭಾವವು[1] ಆದರೆ ಯಾವದು ಸರ್ವಾತ್ಮಭಾವಕ್ಕಿಂತ ಈಚಿನ ಯಾವದೊಂದು ಕೂದಲೆಳೆಯ ತುದಿಯಷ್ಟೇ ಆದರೂ (ಇದು) ನಾನಲ್ಲ ಎಂದು ತೋರುತ್ತದೆಯೋ ಅವಿದ್ಯೆಯು ಆ ಅವಸ್ಥೆಯಲ್ಲಿರುತ್ತದೆ. ಆ ಅವಿದ್ಯೆಯಿಂದ ಮುಂದೊಡ್ಡಲಾದ ತಾನಲ್ಲವೆಂದು (ಕಾಣುವ) ಲೋಕಗಳಿವೆಯಲ್ಲ, ಸ್ಥಾವರಾಂತವಾದ ಅವು ಅಪರವುಗಳು[2], ವ್ಯವಹಾರದ ವಿಷಯವಾದ ಆ ಲೋಕಗಳಿಗೆ ಹೋಲಿಸಿದಾಗ[3] ಈ ಸರ್ವಾತ್ಮಭಾವವು ಸಮಸ್ತವಾಗಿ, ಒಳಗಿಲ್ಲದೆ ಹೊರಗಿಲ್ಲದೆ ಇರುವದು. ಅದೇ ಇವನ ಪರಮಲೋಕವು. ಆದ್ದರಿಂದ ಅವಿದ್ಯೆಯು ಕಡಿಮೆಯಾಗಿ ವಿದ್ಯೆಯು ತೀರ (ಹೆಚ್ಚಿನ) ತುದಿಯನ್ನು ಮುಟ್ಟಿದಾಗ (ಆಗುವ) ಸರ್ವಾತ್ಮಭಾವನಾದ ಮೋಕ್ಷವು- ಹೇಗೆ ಸ್ವಯಂಜ್ಯೋತಿಷ್ಟ್ವವು ಸ್ವಪ್ನದಲ್ಲಿ ಪ್ರತ್ಯಕ್ಷವಾಗಿ ಕಾಣಬರುತ್ತದೆಯೋ ಹಾಗೆಯೇ (ಈ)- ವಿದ್ಯಾಫಲವೂ (ಪ್ರತ್ಯಕ್ಷವಾಗಿ) ಕಾಣಬರುತ್ತದೆ ಎಂದರ್ಥ. ಇದರಂತೆ ಅವಿದ್ಯೆಯೂ ಹೆಚ್ಚಾಗಿ ವಿದ್ಯೆಯು ಮರೆಯಾಗಿರುವಲ್ಲಿ ಅವಿದ್ಯೆಯ ಫಲವೂ (ಸ್ವಪ್ನ

---

1. ಆತ್ಮಸ್ವರೂಪವು.

2. ಏಕೆಂದರೆ ಅವಿದ್ಯಾಕೃತವಾದ ವ್ಯವಹಾರದಲ್ಲಿ ಮಾತ್ರ ತೋರುವ ಲೋಕಗಳು, ಇವು ಅವಿದ್ಯಾವಸ್ಥೆಯಲ್ಲಿ ನಾನು ಎಂದು ತೋರಿದರೂ ವಿದ್ಯೆಯಿಂದ ನಾನಲ್ಲ ಎಂದು ಬಾಧಿತವಾಗುವವು, ಆದ್ದರಿಂದ ಅದು ಸ್ವಾಭಾವಿಕಾತ್ಮರೂಪವಲ್ಲ

3. ಅಸ್ವಾಭಾವಿಕವಾದವುಗಳಿಗೆ ಹೋಲಿಸಿ ಸರ್ವಾತ್ಮಭಾವವನ್ನು ಪರಮ, ಸ್ವಾಭಾವಿಕ ಎಂದಿದೆಯೇ ಹೊರತು ಆ ಲೋಕಗಳು ನಿಜವಾಗಿವೆಯೆಂದೂ ಇದು ಅವಕ್ಕಿಂತ ಹೆಚ್ಚಿನ ಲೋಕವೆಂದೂ ಅಭಿಪ್ರಾಯವಿಲ್ಲ- ಎಂದು ಭಾವ.

ದಲ್ಲಿ) 'ಇನ್ನು ಎಲ್ಲಿ ಇವನನ್ನು ಕೊಲ್ಲುವಂತಿರುವರೋ ಗೆಲ್ಲುವಂತೆಯೂ' ಎಂದು (ಹೇಳಿದಂತೆ) ಪ್ರತ್ಯಕ್ಷವಾಗಿಯೇ ತೋರುತ್ತಿರುತ್ತದೆ.

## ಅವಿದ್ಯಾತತ್ತ್ವ

(ಭಾಷ್ಯ)

೨೧೧. ತೇ ಏತೇ ವಿದ್ಯಾವಿದ್ಯಾಕಾರ್ಯೇ ಸರ್ವಾತ್ಮಭಾವಃ ಪರಿಚ್ಛಿನ್ನಾತ್ಮಭಾವಶ್ಚ । ವಿದ್ಯಯಾ ಶುದ್ಧಯಾ ಸರ್ವಾತ್ಮಾ ಭವತಿ । ಅವಿದ್ಯಯಾ ಚ ಅಸರ್ವೋ ಭವತಿ । ಅನ್ಯತಃ ಕುತಶ್ಚಿತ್ ಪ್ರವಿಭಕ್ತೋ ಭವತಿ । ಯತಃ ಪ್ರವಿಭಕ್ತೋ ಭವತಿ ತೇನ ವಿರುಧ್ಯತೇ । ವಿರುದ್ಧತ್ವಾತ್ ಹನ್ಯತೇ ಜೀಯತೇ ವಿಚ್ಛಾದ್ಯತೇ ಚ ಅಸರ್ವವಿಷಯತ್ವೇ ಚ ಭಿನ್ನತ್ವಾತ್ ಏತದ್ ಭವತಿ । ಸಮಸ್ತಸ್ತು ಸನ್ ಕುತೋ ಭಿದ್ಯತೇ ಯೇನ ವಿರುಧ್ಯೇತ ? ವಿರೋಧಾಭಾವೇ ಕೇನ ಹನ್ಯತೇ ಜೀಯತೇ ವಿಚ್ಛಾದ್ಯತೇ ಚ ? ಅತ ಇದಮ್ ಅವಿದ್ಯಾಯಾಃ ಸತತ್ತ್ವಮ್ ಉಕ್ತಂ ಭವತಿ । ಸರ್ವಾತ್ಮಾನಂ ಸನ್ತಮ್ ಅಸರ್ವಾತ್ಮತ್ವೇನ ಗ್ರಾಹಯತಿ । ಆತ್ಮನೋಽನ್ಯದ್ ವಸ್ತ್ವನ್ತರಮ್ ಅವಿದ್ಯಮಾನಂ ಪ್ರತ್ಯುಪಸ್ಥಾಪಯತಿ । (ಆತ್ಮಾನಮ್ ಅಸರ್ವಮಾಪಾದಯತಿ ।)[1] ತತಸ್ತದ್ವಿಷಯಃ ಕಾಮೋ ಭವತಿ ಯತೋ ಭಿದ್ಯತೇ । ಕಾಮತಃ ಕ್ರಿಯಾಮ್ ಉಪಾದತ್ತೇ । ತತಃ ಫಲಮ್ । ತದೇತದುಕ್ತಮ್, ವಕ್ಷ್ಯಮಾಣಂ ಚ "ಯತ್ರ ಹಿ ದ್ವೈತಮಿವ ಭವತಿ ತದಿತರ ಇತರಂ ಪಶ್ಯತಿ" (೨-೪-೧೪) ಇತ್ಯಾದಿ ॥

(ಭಾಷ್ಯಾರ್ಥ)

ಸರ್ವಾತ್ಮಭಾವ, ಪರಿಚ್ಛಿನ್ನಾತ್ಮಭಾವ- ಎಂಬೀ ಎರಡೂ ವಿದ್ಯಾವಿದ್ಯೆಗಳ ಕಾರ್ಯಗಳು. ಶುದ್ಧವಾದ ವಿದ್ಯೆಯಿಂದ ಸರ್ವಾತ್ಮನಾಗುತ್ತಾನೆ, ಅವಿದ್ಯೆಯಿಂದಾದರೆ ಅಸರ್ವನಾಗುತ್ತಾನೆ; ಯಾವದಾದರೂ ಮತ್ತೊಂದರಿಂದ ವಿಂಗಡವಾಗಿರುತ್ತಾನೆ; ಯಾವದರಿಂದ ವಿಂಗಡವಾಗಿರುತ್ತಾನೋ ಅದಕ್ಕೆ ವಿರುದ್ಧವಾಗಿರುತ್ತಾನೆ, ವಿರುದ್ಧವಾಗಿರುವದರಿಂದ (ಆ ಮತ್ತೊಂದರಿಂದ) ಕೊಲ್ಲಲ್ಪಡುತ್ತಾನೆ, ವಶಗೊಳಿಸಲ್ಪಡುತ್ತಾನೆ, ಓಡಿಸಲ್ಪಡುತ್ತಾನೆ. (ತಾನು) ಅಸರ್ವನೆಂಬ ವಿಷಯದಲ್ಲಿ (ತಾನು ಮತ್ತೊಂದಕ್ಕಿಂತ) ಭಿನ್ನನಾಗಿರುವದರಿಂದ ಇದು ಆಗುತ್ತದೆ. ಸರ್ವನೇ ಆಗಿದ್ದರೋ ಯಾವದಕ್ಕಿಂತ ಭಿನ್ನವಾಗಿದ್ದು ಅದಕ್ಕೆ ವಿರುದ್ಧನಾಗಿದ್ದಾನು ? ವಿರೋಧವಿಲ್ಲದಮೇಲೆ ಏತರಿಂದ ಕೊಲ್ಲಲ್ಪಟ್ಟಾನು, ವಶಗೊಳಿಸಲ್ಪಟ್ಟಾನು, ಅಥವಾ ಓಡಿಸಲ್ಪಟ್ಟಾನು ? ಆದ್ದರಿಂದ ಇದು

---

1 ಈ ವಾಕ್ಯವಿಲ್ಲದಿದ್ದರೂ ಆಗುತ್ತದೆ. ಅನುವಾದದ ಟಿಪ್ಪಣಿಯನ್ನು ನೋಡಿ.

ಅವಿದ್ಯೆಯ ತತ್ತ್ವವೆಂದು ಹೇಳಿದಂತೆ ಆಯಿತು. (ಅದು) ಸರ್ವಾತ್ಮನಾಗಿರುವ (ಆತ್ಮನನ್ನು) ಅಸರ್ವಾತ್ಮನೆಂದು ತಿಳಿಯುವಂತೆ ಮಾಡುತ್ತದೆ; ತನಗಿಂತ ಬೇರೆಯಾದ ಮತ್ತೊಂದು ವಸ್ತುವು ಇಲ್ಲದಿದ್ದರೂ (ಅದನ್ನು) ತಂದು ಮುಂದೊಡ್ಡುತ್ತದೆ. (ತನ್ನನ್ನು ಅಸರ್ವನೆಂದು ಮಾಡಿಬಿಡುತ್ತದೆ).[1] ಆಮೇಲೆ ಯಾವದರಿಂದ (ತಾನು) ಭಿನ್ನನಾಗಿರುವನೋ ಅದರ ವಿಷಯದ ಕಾಮವುಂಟಾಗುತ್ತದೆ; ಕಾಮದಿಂದ ಕ್ರಿಯೆಯನ್ನು ಕೈಕೊಳ್ಳುತ್ತಾನೆ; ಅದರಿಂದ ಫಲ(ವುಂಟಾಗುತ್ತದೆ).
ಆ ಇದನ್ನು ಹಿಂದೆ (೨-೪-೧೪) ಹೇಳಿಯೂ ಇದೆ, ಮುಂದೆ "ಎಲ್ಲಿ ದ್ವೈತದಂತೆ ಇರುವದೋ ಅಲ್ಲಿ ಒಬ್ಬನು ಮತ್ತೊಬ್ಬನನ್ನು ಕಾಣುತ್ತಾನೆ" (೪-೫-೧೫) ಎಂದು ಮುಂತಾಗಿ ಹೇಳುವದೂ ಆಗುವದು.

## ಅವಿದ್ಯೆಯು ಆತ್ಮನ ಸ್ವಾಭಾವಿಕಧರ್ಮವಲ್ಲ

(ಭಾಷ್ಯ)

೨೧೨. ಇದಮ್ ಅವಿದ್ಯಾಯಾಃ ಸತತ್ತ್ವಂ (ಸಹ?)[2] ಕಾರ್ಯೇಣ ಪ್ರದರ್ಶಿತಮ್ । ವಿದ್ಯಾಯಾಶ್ಚ ಕಾರ್ಯಂ ಸರ್ವಾತ್ಮಭಾವಃ ಪ್ರದರ್ಶಿತಃ ಅವಿದ್ಯಾಯಾ ವಿಪರ್ಯಯೇಣ । ಸಾ ಚ ಅವಿದ್ಯಾ ನಾಽಽತ್ಮನಃ ಸ್ವಾಭಾವಿಕೋ ಧರ್ಮಃ । ಯಸ್ಮಾತ್ ವಿದ್ಯಾಯಾಮ್ ಉತ್ಕೃಷ್ಯಮಾಣಾಯಾಂ ಸ್ವಯಮ್ ಅಪಚೀಯಮಾನಾ ಸತೀ ಕಾಷ್ಠಾಂ ಗತಾಯಾಂ ವಿದ್ಯಾಯಾಂ ಪರಿನಿಷ್ಠಿತೇ ಸರ್ವಾತ್ಮಭಾವೇ ಸರ್ವಾತ್ಮನಾ ನಿವರ್ತತೇ । ರಜ್ಜ್ವಾಮಿವ ಸರ್ಪಜ್ಞಾನಂ ರಜ್ಜುನಿಶ್ಚಯೇ । ತಚ್ಚೋಕ್ತಮ್ "ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್ ತತ್ಕೇನ ಕಂ ಪಶ್ಯೇತ್"[3] (೨-೪-೧೪) ಇತ್ಯಾದಿ । ತಸ್ಮಾತ್ ನಾಽಽತ್ಮಧರ್ಮೋಽವಿದ್ಯಾ । ನ ಹಿ ಸ್ವಾಭಾವಿಕಸ್ಯ ಉಚ್ಛಿತ್ತಿಃ ಕದಾಚಿದಪಿ ಉಪಪದ್ಯತೇ ಸವಿತುರಿವ ಔಷ್ಣ್ಯಪ್ರಕಾಶಯೋಃ । ತಸ್ಮಾತ್ ತಸ್ಯಾ ಮೋಕ್ಷಃ ಉಪಪದ್ಯತೇ ॥

---

1. ಈ ವಾಕ್ಯವು ಇಲ್ಲಿ ಬೇಕಿಲ್ಲವೆಂದು ತೋರುತ್ತದೆ, ಏಕೆಂದರೆ ಇದರ ಅಭಿಪ್ರಾಯವು 'ಸರ್ವಾತ್ಮಾನಂ ಸನ್ತಮ್ ಅಸರ್ವಾತ್ಮತ್ವೇನ ಗ್ರಾಹಯತಿ' ಎಂಬ ವಾಕ್ಯದಲ್ಲಿ ಆಗಲೆ ಬಂದಿದೆ, ಮುಂದಿನ ವಾಕ್ಯವು ಇದರೊಡನೆ ಸರಳವಾಗಿ ಅನ್ವಯಿಸುವದೂ ಇಲ್ಲ.

2 ಈ ಶಬ್ದವು ಇಲ್ಲಿ ಬೇಕೆಂದು ತೋರುವದಿಲ್ಲ.

3. ಇಲ್ಲಿ 'ಉಕ್ತಮ್' ಎಂದಿರುವದರಿಂದ ಜಿಘ್ರೇತ್ ಎಂದು ಪಾಠವಿರಬೇಕಾಗಿತ್ತೆಂದು ತೋರುತ್ತದೆ; ಅಥವಾ 'ತತ್ಕೇನ ಕಂ ಜಿಘ್ರೇತ್' ಎಂಬ ವಾಕ್ಯವನ್ನು ಬಿಟ್ಟು ಮುಂದಿನ ವಾಕ್ಯವನ್ನು ಉದಾಹರಿಸಿದೆ ಎಂದು ಭಾವಿಸಬೇಕು. ಅಥವಾ ಇದು ಮಾಧ್ಯಂದಿನಪಾಠದ ಪರಾಮರ್ಶವೆಂದಾದರೂ ಭಾವಿಸಬಹುದು.

(ಭಾಷ್ಯಾರ್ಥ)

ಇದೇ ಅವಿದ್ಯೆಯ ತತ್ತ್ವವೆಂದು ಕಾರ್ಯದಿಂದ[1] ತಿಳಿಸಿಕೊಟ್ಟಿದ್ದಾಯಿತು. ಅವಿದ್ಯೆಯ (ಕಾರ್ಯಕ್ಕೆ) ವಿಪರೀತವಾಗಿ ವಿದ್ಯೆಯ ಕಾರ್ಯವು ಸರ್ವಾತ್ಮಭಾವವೆಂಬುದನ್ನು ತಿಳಿಸಿದ್ದಾಯಿತು. **ಈ ಅವಿದ್ಯೆಯು ಆತ್ಮನ ಸ್ವಾಭಾವಿಕಧರ್ಮವಲ್ಲ[2] ; ಏಕೆಂದರೆ ವಿದ್ಯೆಯು ಹೆಚ್ಚಿಕೊಂಡರೆ ತಾನು ಕಡಿಮೆಯಾಗುತ್ತಾಬಂದು ವಿದ್ಯೆಯು ಕೊನೆಯನ್ನು ಮುಟ್ಟಲು ಸರ್ವಾತ್ಮಭಾವವು ಸಿದ್ಧವಾಗಲಾಗಿ (ಅದು)- ಹಗ್ಗವೆಂಬ ನಿಶ್ಚಯವಾಗಲು ಹಗ್ಗದಲ್ಲಿ ಹಾವೆಂಬ ಅರಿವು ತೊಲಗುವಂತೆ- ಸಂಪೂರ್ಣವಾಗಿ ತೊಲಗುತ್ತದೆ.[3]** ಇದನ್ನು "ಎಲ್ಲಿಯಾದರೆ ಇವನಿಗೆ ಎಲ್ಲವೂ ಆತ್ಮನೇ ಆಯಿತೋ ಅಲ್ಲಿ ಏತರಿಂದ ಏನನ್ನು ಕಂಡಾನು ?...." (೨-೪-೧೪)[4] ಎಂದು ಹಿಂದೆ ಹೇಳಿದ್ದಾಗಿದೆ. ಆದ್ದರಿಂದ ಅವಿದ್ಯೆಯು ಆತ್ಮಧರ್ಮವಲ್ಲ , ಏಕೆಂದರೆ ಸ್ವಾಭಾವಿಕವಾದದ್ದು ನಾಶವಾಗುವದೆಂಬುದು ಸೂರ್ಯನ ಬಿಸಿಬೆಳಕುಗಳಿಗೆ (ನಾಶವಾಗುವದೆಂಬಂತೆ) ಎಂದಿಗೂ ಹೊಂದುವದಿಲ್ಲ. ಆದ್ದರಿಂದ ಅದರಿಂದ ಬಿಡುಗಡೆಯಾಗುವದೆಂಬುದು ಸಾಧ್ಯವಾಗಿರುತ್ತದೆ.

## ಸುಷುಪ್ತಾತ್ಮನ ಪರಮಾರ್ಥಸ್ವರೂಪ

(ಉಪನಿಷತ್ತು)

**ತದ್ವಾ ಅಸ್ಯೈತದತಿಚ್ಛನ್ದಾ ಅಪಹತಪಾಪ್ಮಾಭಯಗ್ಂ ರೂಪಮ್ । ತದ್ಯಥಾ ಪ್ರಿಯಯಾ ಸ್ತ್ರಿಯಾ ಸಂಪರಿಷ್ವಕ್ತೋ ನ ಬಾಹ್ಯಂ ಕಿಂಚನ ವೇದ ನಾನ್ತರಮೇವಮೇವಾಯಂ ಪುರುಷಃ**

---

1. ಕಾರ್ಯದಿಂದ ಅವಿದ್ಯೆಯ ತತ್ತ್ವವನ್ನು ಹೇಳಿದ್ದಾಯಿತು -ಎಂದರ್ಥ. ಅವಿದ್ಯಾಸ್ವರೂಪವನ್ನೇನೂ ಇಲ್ಲಿ ಹೇಳಿಲ್ಲವಾದ್ದರಿಂದ ಕಾರ್ಯದೊಡನೆ ಎಂದು ಕನ್ನಡಿಸು ಸರಿಯಾಗುವದಿಲ್ಲ. ಆದ್ದರಿಂದಲೇ ನಾವು ಸಹ ಎಂಬ ಶಬ್ದವು ಅನವಶ್ಯವೆಂದು ಅಭಿಪ್ರಾಯಪಟ್ಟಿರುತ್ತೇವೆ.

2. ಹಿಂದೆ ಅವಿದ್ಯೆಯು ಸ್ವಾಭಾವಿಕವೊ, ಕಾಮಕರ್ಮಾದಿಗಳಂತೆ ಆಗಂತುಕವೊ ? -ಎಂದು (ಭಾ. ಭಾ. ೨೦ರಲ್ಲಿ) ವಿಚಾರಕ್ಕೆ ತೆಗೆದುಕೊಂಡದ್ದರ ತೀರ್ಮಾನವಿದು. ಅಲ್ಲಿ ಆಗಂತುಕವೆಂದರೆ ಮತ್ತೊಂದರಿಂದ ಬಂದದ್ದು ಎಂಬ ಅಭಿಪ್ರಾಯವೇನೂ ಇಲ್ಲ, ಆತ್ಮನ ಸ್ವಾಭಾವಿಕಧರ್ಮವಲ್ಲ ಎಂದೇ ಅರ್ಥ.

3. ವಿದ್ಯೆ, ಅವಿದ್ಯೆ- ಇವುಗಳಲ್ಲಿ ಪರಿಮಾಣತಾರತಮ್ಯವುಂಟೆಂದೇನೂ ಅಭಿಪ್ರಾಯವಿಲ್ಲ. ಸೂ.ಭಾ. ೩-೪-೫೨ (ಭಾ.ಭಾ. ೪೯೯)ನ್ನು ನೋಡಿ. ಹೆಚ್ಚಿನ ವಿದ್ಯೆ ಎಂದರೆ ಪರಮಾತ್ಮನೇ ನಾನೆಂಬ ನಿಶ್ಚಯ, ಆಗ ಅವಿದ್ಯೆಯು ಆತ್ಯಂತಿಕವಾಗಿ ತೊಲಗುವದು. ಉಪಾಸನಾದಿವಿದ್ಯೆಗಳುಂಟಾದಾಗ ಇನ್ನೂ ಅವಿದ್ಯೆ ಇದ್ದೇ ಇರುವದು- ಎಂಬುದಿಷ್ಟೇ ಅಭಿಪ್ರೇತ.

4. ಮೂಲವಾಕ್ಯದ ಟಿಪ್ಪಣಿಯನ್ನು ನೋಡಿ.

**ಪ್ರಾಜ್ಞೇನಾತ್ಮನಾ ಸಂಪರಿಷ್ವಕ್ತೋ ನ ಬಾಹ್ಯಂ ಕಿಂಚನ ವೇದ ನಾನ್ತರಂ ತದ್ವಾ ಅಸ್ಯೈತದಾಪ್ತಕಾಮಮಾತ್ಮಕಾಮಮಕಾಮಗ್ಂ ರೂಪಗ್ಂ ಶೋಕಾನ್ತರಮ್ ॥ ೨೧ ॥**

೨೧. ಇವನಿಗೆ ಅದೇ ಅತಿಚ್ಛಂದವಾದ, ಅಪಹತಪಾಪ್ಮವಾದ ಅಭಯವಾದ ರೂಪವು. ಅದು (ಹೇಗೆಂದರೆ) ಹೇಗೆ ಪ್ರಿಯಳಾದ ಸ್ತ್ರೀಯೊಡನೆ ಆಲಿಂಗಿತನಾಗಿ ಹೊರಗಿನ ಯಾವದನ್ನೂ ಅರಿಯದಿರುವನೋ ಒಳಗಿನ (ಯಾವದನ್ನೂ ಹೇಗೆ ಅರಿಯ)ದಿರುವನೋ, ಹಾಗೆಯೇ ಈ ಪುರುಷನು ಪ್ರಾಜ್ಞನಾದ ಆತ್ಮನಿಂದ ಆಲಿಂಗಿತನಾಗಿ ಹೊರಗಿನದೇನನ್ನೂ ಅರಿಯದಿರುವನು, ಒಳಗಿನ (ಯಾವದನ್ನೂ ಅರಿಯ)ದಿರುವನು. ಅದೇ ಇವನಿಗೆ ಆಪ್ತಕಾಮವೂ ಆತ್ಮಕಾಮವೂ ಅಕಾಮವೂ ಶೋಕಾಂತರವೂ ಆದ ರೂಪವು.

## ಸುಷುಪ್ತಿಯಲ್ಲಿ ಅವಿದ್ಯಾಕಾಮಕರ್ಮಗಳಿಲ್ಲದ ರೂಪ

(ಭಾಷ್ಯ)

೨೧೩. ಇದಾನೀಂ ಯೋಽಸೌ ಸರ್ವಾತ್ಮಭಾವೋ ಮೋಕ್ಷೋ ವಿದ್ಯಾಫಲಂ ಕ್ರಿಯಾಕಾರಕಫಲಶೂನ್ಯಮ್, ಸ ಪ್ರತ್ಯಕ್ಷತೋ ನಿರ್ದಿಶ್ಯತೇ ಯತ್ರ ಅವಿದ್ಯಾಕಾಮಕರ್ಮಾಣಿ ನ ಸನ್ತಿ । ತದೇತತ್ ಪ್ರಸ್ತುತಂ "ಯತ್ರ ಸುಪ್ತೋ ನ ಕಂಚನ ಕಾಮಂ ಕಾಮಯತೇ ನ ಕಂಚನ ಸ್ವಪ್ನಂ ಪಶ್ಯತಿ'' (೪-೩-೧೯) ಇತಿ । ತದ್ವಾ[1] ಅಸ್ಯ ರೂಪಮ್ ಯಃ ಸರ್ವಾತ್ಮಭಾವಃ "ಸೋಽಸ್ಯ ಪರಮೋ ಲೋಕಃ" (೪-೩-೨೦) ಇತ್ಯುಕ್ತಃ ತತ್, ಅತಿಚ್ಛನ್ದಾಃ । ಅತಿಚ್ಛನ್ದಮ್ ಇತ್ಯರ್ಥಃ । ರೂಪಪರತ್ವಾತ್ । ಛನ್ದಃ ಕಾಮಃ । ಅತಿಗತಶ್ಛನ್ದೋ ಯಸ್ಮಾತ್ ರೂಪಾತ್ ತತ್ ಅತಿಚ್ಛನ್ದಂ ರೂಪಮ್ । ಅನ್ಯೋಽಸೌ ಸಾನ್ತಶ್ಛನ್ದಃಶಬ್ದಃ ಗಾಯತ್ರ್ಯಾದಿಚ್ಛನ್ದೋವಾಚೀ । ಅಯಂ ತು ಕಾಮವಚನಃ । ಅತಃ ಸ್ವರಾನ್ತ ಏವ । ತಥಾಪಿ ಅತಿಚ್ಛನ್ದಾ ಇತಿ ಪಾಠಃ ಸ್ವಾಧ್ಯಾಯಧರ್ಮೋ ದ್ರಷ್ಟವ್ಯಃ । ಅಸ್ತಿ ಚ ಲೋಕೇ ಕಾಮವಚನಃ ಪ್ರಯುಕ್ತಃ ಛನ್ದಃಶಬ್ದಃ 'ಸ್ವಚ್ಛನ್ದಃ', 'ಪರಚ್ಛನ್ದಃ' ಇತ್ಯಾದೌ । ಅತಃ ಅತಿಚ್ಛನ್ದಮ್ ಇತ್ಯೇವಮ್ ಉಪನೇಯಮ್ ಕಾಮವರ್ಜಿತಮೇತದ್ರೂಪಮ್ ಇತ್ಯಸ್ಮಿನ್ನರ್ಥೇ । ತಥಾ ಅಪಹತಪಾಪ್ಮ । ಪಾಪ್ಮಶಬ್ದೇನ ಧರ್ಮಾಧರ್ಮಾವುಚ್ಯೇತೇ । "ಪಾಪ್ಮಭಿಃ ಸಂಸೃಜ್ಯತೇ....

1. "ತದೇತದ್ ವಾ" ಎಂಬ ಪಾಠದಲ್ಲಿ ಏತದ್ ಎಂಬುದು ಭಾಷ್ಯಕಾರರು ಸೇರಿಸಿಕೊಂಡದ್ದೆಂದು ಎಣಿಸಬೇಕಾಗುವದು.

ಪಾಪ್ಮನೋ ವಿಜಹಾತಿ'' (೪-೩-೮) ಇತ್ಯುಕ್ತತ್ವಾತ್ । ಅಪಹತಪಾಪ್ಮ । ಧರ್ಮಾಧರ್ಮವರ್ಜಿತಮ್ ಇತ್ಯೇತತ್ । ಕಿಂ ಚ ಅಭಯಮ್ । ಭಯಂ ಹಿ ನಾಮ ಅವಿದ್ಯಾಕಾರ್ಯಮ್ । ಅವಿದ್ಯಯಾ ಭಯಂ ಮನ್ಯತೇ (೪-೩-೨೦) ಇತಿ ಹಿ ಉಕ್ತಮ್ । ತತ್ ಕಾರ್ಯದ್ವಾರೇಣ ಕಾರಣಪ್ರತಿಷೇಧೋಽಯಮ್ । ಅಭಯಂ ರೂಪಮಿತಿ । ಅವಿದ್ಯಾವರ್ಜಿತಮ್ ಇತ್ಯೇತತ್ । ಯದೇತತ್ ವಿದ್ಯಾಫಲಂ ಸರ್ವಾತ್ಮಭಾವಃ ತದೇತತ್ ಅತಿಚ್ಛನ್ದಾಪಹತಪಾಪ್ಮಾಭಯಂ ರೂಪಂ ಸರ್ವಸಂಸಾರಧರ್ಮವರ್ಜಿತಮ್ । ಅತೋಽಭಯಂ ರೂಪಮೇತತ್ । ಇದಂ ಚ ಪೂರ್ವಮೇವ ಉಪನ್ಯಸ್ತಮ್ ಅತೀತಾನನ್ತರಬ್ರಾಹ್ಮಣಸಮಾಪ್ತೌ "ಅಭಯಂ ವೈ ಜನಕ ಪ್ರಾಪ್ತೋಽಸಿ'' (೪-೨-೪) ಇತ್ಯಾಗಮತಃ । ಇಹ ತು ತರ್ಕತಃ ಪ್ರಪಞ್ಚಿತಮ್, ದರ್ಶಿತಾಗಮಾರ್ಥಪ್ರತ್ಯಯದಾರ್ಢ್ಯಾಯ ॥

(ಭಾಷ್ಯಾರ್ಥ)

**ಈಗ ಸರ್ವಾತ್ಮಭಾವ(ರೂಪ)ವಾದ ಮೋಕ್ಷವೆಂಬ ಕ್ರಿಯಾಕಾರಕ ಫಲಶೂನ್ಯವಾದ ವಿದ್ಯಾಫಲವಿದೆಯಲ್ಲ, ಅದನ್ನು ಪ್ರತ್ಯಕ್ಷವಾಗಿ ತೋರಿಸಲಾಗುತ್ತದೆ ; ಅಲ್ಲಿ ಅವಿದ್ಯಾಕಾಮಕರ್ಮಗಳು ಇರುವದೇ ಇಲ್ಲ.**[1] ಇದನ್ನೇ "ಎಲ್ಲಿ ಸಿದ್ರಿಸಿದವನು ಯಾವ ಕಾಮವನ್ನೂ ಕಾಮಿಸುವದಿಲ್ಲವೋ ಯಾವ ಸ್ವಪ್ನವನ್ನೂ ಕಾಣುವದಿಲ್ಲವೋ'' (೪-೩-೧೯) ಎಂದು (ಈ) ಮೊದಲು ಹೇಳಿರುವದು. ಅದೇ ಇವನ ರೂಪವು– ''ಅದು ಇವನ ಪರಮ ಲೋಕವು" (೪-೩-೨೦) ಎಂದು ಹಿಂದೆ ಸರ್ವಾತ್ಮಭಾವವನ್ನು ಹೇಳಲಾಗಿದೆಯಲ್ಲ, ಅದೇ (ಅತಿಚ್ಛನ್ದಾಃ=ಅತಿಚ್ಛನ್ದಮ್) ಅತಿಚ್ಛನ್ದವಾದದ್ದು ಎಂದು ಅರ್ಥ. (ಅತಿಚ್ಛನ್ದಾಃ ಎಂಬ ಪುಲ್ಲಿಂಗವನ್ನು ನಪುಂಸಕವಾಗಿ ಮಾಡಿಕೊಳ್ಳಬೇಕು) ; ಏಕೆಂದರೆ ಅದು ರೂಪಕ್ಕೆ (ವಿಶೇಷಣವಾಗಿ) ಸೇರಿರುತ್ತದೆ. ಛನ್ದವೆಂದರೆ ಕಾಮವು , ಯಾವ ರೂಪದಿಂದ ಛಂದವು ಬಿಟ್ಟುಹೋಗಿರುವದೋ ಅದು ಅತಿಚ್ಛಂದವಾದ ರೂಪವು. ಸಕಾರಾಂತವಾಗಿ ಗಾಯತ್ರ್ಯಾದಿಚ್ಛಂದಸ್ಸುಗಳನ್ನು ಹೇಳುವ ಆ ಛಂದಃಶಬ್ದವು ಬೇರೆ ; ಆದರೆ ಇದು ಕಾಮವನ್ನು ಹೇಳುವ (ಶಬ್ದ)ವಾದ್ದರಿಂದ ಸ್ವರಾಂತವೇ. ಹೀಗಿದ್ದರೂ 'ಅತಿಚ್ಛನ್ದಾಃ' ಎಂದು (ಮೂಲದಲ್ಲಿ ಸಕಾರಾಂತವಾಗಿ) ಪಠಿಸಿರುವದು ವೈದಿಕಪ್ರಯೋಗವೆಂದು ತಿಳಿಯಬೇಕು. ಲೋಕದಲ್ಲಿ 'ಸ್ವಚ್ಛನ್ದಃ' (ಸ್ವೇಚ್ಛೆ), 'ಪರಚ್ಛನ್ದಃ' (ಪರೇಚ್ಛೆ) –ಮುಂತಾದವುಗಳಲ್ಲಿ ಕಾಮವನ್ನು ಹೇಳುವದಕ್ಕೆ ಪ್ರಯೋಗವಾಗಿರುವ ಛಂದಶಬ್ದವೂ ಇದೆ. ಆದ್ದರಿಂದ ಈ ರೂಪವು ಕಾಮರಹಿತವಾದದ್ದು ಎಂಬರ್ಥವನ್ನು

---

1. ಸುಷುಪ್ತಿಯಲ್ಲಿ ಅವಿದ್ಯಾಕಾಮಕರ್ಮಗಳಿಲ್ಲವೆಂಬುದನ್ನು ಅನುಭವಕ್ಕೆ ಹೊಂದಿಸಿ ತಿಳಿಸಲಾಗುತ್ತದೆ.

(ಕೊಡುವದಕ್ಕಾಗಿ) 'ಅತಿಚ್ಛನ್ದಮ್' ಎಂದಿಂತು (ಅತಿಚ್ಛನ್ದಾಃ ಎಂಬಿದನ್ನು) ರೂಪಾಂತರಮಾಡಿಕೊಳ್ಳಬೇಕು.

ಹೀಗೆಯೇ ಅಪಹತಪಾಪ್ಮ(ವಾದದ್ದು) ಪಾಪ್ಮಶಬ್ದದಿಂದ ಧರ್ಮಾಧರ್ಮಗಳನ್ನು ಹೇಳಿರುತ್ತದೆ; ಏಕೆಂದರೆ ಹಿಂದೆ "ಪಾಪ್ಮಭಿಃ ಸಂಸೃಜ್ಯತೇ . ಪಾಪ್ಮನೋ ವಿಜಹಾತಿ" (೪-೩-೮) ಪಾಪ್ಮಗಳಿಂದ ಕೂಡಿಕೊಂಡಿರುತ್ತಾನೆ .... ಪಾಪ್ಮಗಳನ್ನು ಬಿಡುತ್ತಾನ ಎಂದು (ಈ ಅರ್ಥದಲ್ಲಿ ಪಾಪ್ಮಶಬ್ದವನ್ನು) ಪ್ರಯೋಗಿಸಿರುತ್ತದೆ. (ಆದ್ದರಿಂದ) ಅಪಹತಪಾಪ್ಮ ಎಂದರೆ ಧರ್ಮಾಧರ್ಮಗಳಿಲ್ಲದ್ದು ಎಂದು ಅಭಿಪ್ರಾಯ.

ಮತ್ತು ಅಭಯ(ವಾದದ್ದು). ಭಯವೆಂಬುದು ಅವಿದ್ಯೆಯ ಕಾರ್ಯವೇ. 'ಅವಿದ್ಯೆಯಿಂದ ಭಯವನ್ನು ಭಾವಿಸಿಕೊಳ್ಳುತ್ತಾನೆ' (೪-೩-೨೦) ಎಂದಲ್ಲವೆ, ಹಿಂದೆ ಹೇಳಿದೆ? ಆದ್ದರಿಂದ ಇದು (ಭಯವೆಂಬ) ಕಾರ್ಯದ ಮೂಲಕ ಕಾರಣ(ವಾದ ಅವಿದ್ಯೆಯನ್ನು) ಅಲ್ಲಗಳೆದದ್ದು. ಅಭಯವಾದ ರೂಪವು ಎಂದರೆ ಅವಿದ್ಯಾರಹಿತವಾದದ್ದು ಎಂದರ್ಥ. ಸರ್ವಾತ್ಮಭಾವವೆಂಬ ಈ ವಿದ್ಯಾಫಲವಿದೆಯಲ್ಲ, ಆ ಇದು ಅತಿಚ್ಛಂದವೂ ಅಪಹತಪಾಪ್ಮವೂ ಅಭಯರೂಪವೂ ಆದದ್ದು. ಯಾವ ಸಂಸಾರಧರ್ಮವೂ ಇಲ್ಲವಾದದ್ದು, ಆದ್ದರಿಂದ ಇದು ಅಭಯರೂಪವು. ಇದನ್ನು (ಇದರ) ಹಿಂದೆಯೇ ಇರುವ ಬ್ರಾಹ್ಮಣದ ಕೊನೆಯಲ್ಲಿ "ಜನಕನೆ, ಅಭಯವನ್ನು ಹೊಂದಿರುತ್ತೀಯೆ" (೪-೨-೪) ಎಂದು ಆಗಮದಿಂದ[1] ಹೇಳಲಾಗಿರುತ್ತದೆ. ಆದರೆ ಹಿಂದೆ ತಿಳಿಸಿರುವ ಆಗಮಾರ್ಥವನ್ನು ಗಟ್ಟಿಗೊಳಿಸುವದಕ್ಕಾಗಿ ತರ್ಕದಿಂದ (ಅದನ್ನೇ) ವಿವರಿಸಿ ಹೇಳಿರುತ್ತದೆ.[2]

## ಸುಷುಪ್ತಿಯಲ್ಲಿ ವಿಶೇಷಜ್ಞಾನವಿಲ್ಲದಿರುವದಕ್ಕೆ ಏಕತ್ವವು ಕಾರಣ

(ಭಾಷ್ಯ)

೨೧೪. ಅಯಮಾತ್ಮಾ ಸ್ವಯಂ ಚೈತನ್ಯಜ್ಯೋತಿಃಸ್ವಭಾವಃ ಸರ್ವಂ ಸ್ವೇನ ಚೈತನ್ಯಜ್ಯೋತಿಷಾ ಅವಭಾಸಯತಿ ಸ ಯತ್ ತತ್ರ ಕಿಂಚಿತ್ ಪಶ್ಯತಿ ರಮತೇ, ಚರತಿ, ಜಾನಾತಿ ಚ ಇತ್ಯುಕ್ತಮ್ । ಸ್ಥಿತಂ ಚೈತತ್ ನ್ಯಾಯತಃ ನಿತ್ಯಂ ಸ್ವರೂಪಂ ಚೈತನ್ಯಜ್ಯೋತಿಷ್ಟ್ವಮ್ ಆತ್ಮನಃ । ಸ ಯದ್ಯಾತ್ಮಾ ಅತ್ರ ಅವಿನಷ್ಟಃ ಸ್ವೇನೈವ ರೂಪೇಣ ವರ್ತತೇ ಕಸ್ಮಾತ್ 'ಅಯಮಹಮಸ್ಮಿ'

---

1. ಉಪದೇಶಪ್ರಧಾನವಾಕ್ಯದಿಂದ.

2. ಆಗಮದಿಂದ ಹೇಳಿದ್ದನ್ನು ಕಾಮಕರ್ಮಗಳಿಲ್ಲದ್ದರಿಂದ ಅಭಯವಾಗಿದೆ ಎಂಬ ತರ್ಕದಿಂದ ಗಟ್ಟಿಗೊಳಿಸಿದೆ ಎಂದಭಿಪ್ರಾಯ.

ಇತ್ಯಾತ್ಮಾನಂ ವಾ ಬಹಿರ್ವಾ 'ಇಮಾನಿ ಭೂತಾನಿ' ಇತಿ ಜಾಗ್ರತ್ಸ್ವಪ್ನಯೋರಿವ ನ ಜಾನಾತೀತಿ ? ಅತ್ರೋಚ್ಯತೇ। ಶೃಣು ಅತ್ರ ಅಜ್ಞಾನಹೇತುಮ್। ಏಕತ್ವಮೇವ ಅಜ್ಞಾನಹೇತುಃ। ತತ್ ಕಥಮಿತಿ ? ಉಚ್ಯತೇ। ದೃಷ್ಟಾನ್ತೇನ ಹಿ ಪ್ರತ್ಯಕ್ಷೀಭವತಿ ವಿವಕ್ಷಿತೋಽರ್ಥಃ ಇತ್ಯಾಹ। ತತ್ ತತ್ರ ಯಥಾ ಲೋಕೇ ಪ್ರಿಯಯಾ ಇಷ್ಟಯಾ ಸ್ತ್ರಿಯಾ ಸಂಪರಿಷ್ವಕ್ತಃ ಸಮ್ಯಕ್ಪರಿಷ್ವಕ್ತಃ ಕಾಮಯನ್ತ್ಯಾ ಕಾಮುಕಃ ಸನ್ ನ ಬಾಹ್ಯಮ್ ಆತ್ಮನಃ ಕಿಂಚನ ಕಿಂಚದಪಿ ವೇದ ಮತ್ತೋಽನ್ಯದ್ ವಸ್ತು ಇತಿ। ನ ಚ ಆನ್ತರಮ್ ಅಯಮಹಮಸ್ಮಿ ಸುಖೀ ದುಃಖೀ ವಾ ಇತಿ। ಅಪರಿಷ್ವಕ್ತಸ್ತು ತಯಾ ಪ್ರವಿಭಕ್ತೋ ಜಾನಾತಿ ಸರ್ವಮೇವ ಬಾಹ್ಯಮ್ ಆಭ್ಯನ್ತರಂ ಚ। ಪರಿಷ್ವಙ್ಗೋತ್ತರಕಾಲಂ ತು ಏಕತ್ವಾಪತ್ತೇಃ ನ ಜಾನಾತಿ। ಏವಮೇವ ಯಥಾ ದೃಷ್ಟಾನ್ತಃ, ಅಯಂ ಪುರುಷಃ ಕ್ಷೇತ್ರಜ್ಞಃ ಭೂತಮಾತ್ರಾಸಂಸರ್ಗತಃ ಸೈನ್ಧವಖಿಲ್ಯವತ್ ಪ್ರವಿಭಕ್ತಃ ಜಲಾದೌ ಚನ್ದ್ರಾದಿಪ್ರತಿಬಿಮ್ಬವತ್ ಕಾರ್ಯಕರಣೇ ಇಹ ಪ್ರವಿಷ್ಟಃ ಸೋಽಯಂ ಪುರುಷಃ ಪ್ರಾಜ್ಞೇನ ಪರಮಾರ್ಥೇನ ಸ್ವಾಭಾವಿಕೇನ ಸ್ವೇನ ಆತ್ಮನಾ ಪರೇಣ ಜ್ಯೋತಿಷಾ ಸಂಪರಿಷ್ವಕ್ತಃ ಸಮ್ಯಕ್ಪರಿಷ್ವಕ್ತಃ ಏಕೀಭೂತಃ ನಿರನ್ತರಃ ಸರ್ವಾತ್ಮಾ ನ ಬಾಹ್ಯಂ ಕಿಂಚನ ವಸ್ತ್ವನ್ತರಮ್ ನಾಪಿ ಆನ್ತರಮ್ ಆತ್ಮನಿ ಅಯಮಹಮಸ್ಮಿ ಸುಖೀ ದುಃಖೀ ವಾ ಇತಿ ವೇದ। ತತ್ರ ಚೈತನ್ಯಜ್ಯೋತಿಃ ಸ್ವಭಾವತ್ವೇ ಕಸ್ಮಾತ್ ಇಹ ನ ಜಾನಾತೀತಿ ಯದಪ್ರಾಕ್ಷೀಃ ತತ್ರ ಅಯಂ ಹೇತುರ್ಮಯೋಕ್ತಃ ಏಕತ್ವಮ್ ಯಥಾ ಸ್ತ್ರೀಪುಂಸಯೋಃ ಸಂಪರಿಷ್ವಕ್ತಯೋಃ। ತತ್ರ ಅರ್ಥಾತ್ ನಾನಾತ್ವಂ ವಿಶೇಷವಿಜ್ಞಾನಹೇತುಃ ಇತ್ಯುಕ್ತಂ ಭವತಿ। ನಾನಾತ್ವೇ ಚ ಕಾರಣಮ್ ಆತ್ಮನೋ ವಸ್ತ್ವನ್ತರಸ್ಯ ಪ್ರತ್ಯುಪಸ್ಥಾಪಿಕಾ ಅವಿದ್ಯಾ ಇತ್ಯುಕ್ತಮ್। ತತ್ರ ಚ ಅವಿದ್ಯಾಯಾಃ ಯದಾ ಪ್ರವಿವಿಕ್ತೋ ಭವತಿ ತದಾ ಸರ್ವೇಣ ಏಕತ್ವಮೇವ ಅಸ್ಯ ಭವತಿ। ತತಶ್ಚ ಜ್ಞಾನಜ್ಞೇಯಾದಿಕಾರಕವಿಭಾಗೇ ಅಸತಿ ಕುತೋ ವಿಶೇಷವಿಜ್ಞಾನಪ್ರಾದುರ್ಭಾವಃ ಕಾಮೋ ವಾ ಸಂಭವತಿ ಸ್ವಾಭಾವಿಕೇ ಸ್ವರೂಪಸ್ಥೇ ಆತ್ಮಜ್ಯೋತಿಷಿ ?

(ಭಾಷ್ಯಾರ್ಥ)

ಈ ಆತ್ಮನು ಸ್ವಯಂಚೈತನ್ಯಜ್ಯೋತಿಯ ಸ್ವಭಾವವುಳ್ಳವನಾಗಿದ್ದು ಎಲ್ಲವನ್ನೂ- ಅಲ್ಲಿ ಏನೇನನ್ನು ಕಾಣುತ್ತಾನೋ, ರಮಿಸುತ್ತಾನೋ ಸಂಚರಿಸುತ್ತಾನೋ, ಅರಿಯುತ್ತಾನೋ (ಅದೆಲ್ಲವನ್ನೂ)- ತನ್ನ ಚೈತನ್ಯಜ್ಯೋತಿಯಿಂದ ಬೆಳಗುತ್ತಿರುತ್ತಾನೆ ಎಂದು ಹೇಳಲಾಗಿರುತ್ತದೆ, ಈ ಚೈತನ್ಯಜ್ಯೋತಿಯಾಗಿರುವದೆಂಬ ನಿತ್ಯಸ್ವರೂಪವು ನ್ಯಾಯದಿಂದಲೂ ಸ್ಥಾಪಿತವಾಗಿರುತ್ತದೆ.[1] ಆ ಆತ್ಮನು

1. ಹಿಂದಿನ ಗ್ರಂಥಭಾಗದಲ್ಲಿ ಆಗಮೋಪಪತ್ತಿಗಳಿಂದ ತಿಳಿಸಿಕೊಟ್ಟದ್ದಾಗಿದೆ ಎಂದರ್ಥ.

ಇಲ್ಲಿ ನಾಶವಾಗದೆ ತನ್ನ ರೂಪದಿಂದಲೇ ಇರುತ್ತಾನಾದರೆ, 'ನಾನು ಇಂಥವನು' ಎಂದು ತನ್ನನ್ನಾಗಲಿ, 'ಇವು (ಇಂಥ) ಭೂತಗಳು' ಎಂದು ಹೊರಗಾಗಲಿ ಎಚ್ಚರ ಕನಸುಗಳಲ್ಲಿ ತಿಳಿಯುವಹಾಗೆ ಏಕೆ ತಿಳಿಯುವದಿಲ್ಲ?[1] ಎಂದರೆ ಇದಕ್ಕೆ (ಶ್ರುತಿ) ಹೇಳುತ್ತದೆ.

ಇಲ್ಲಿ ಅರಿಯದಿರುವದಕ್ಕೆ ಕಾರಣವನ್ನು (ಹೇಳುತ್ತೇನೆ) ಕೇಳು. ಏಕತ್ವವೇ ಅರಿಯದಿರುವದಕ್ಕೆ ಕಾರಣವು. ಅದು ಹೇಗೆ? ಎಂದರೆ ಹೇಳುತ್ತೇನೆ. ವಿವಕ್ಷಿತವಾದ ಅರ್ಥವು ದೃಷ್ಟಾಂತದಿಂದಲ್ಲವೆ, ಪ್ರತ್ಯಕ್ಷವಾಗುತ್ತದೆ ಎಂದು (ದೃಷ್ಟಾಂತವನ್ನು) ಹೇಳುತ್ತಾನೆ. (ತತ್=ತತ್ರ) ಅಲ್ಲಿ ಹೇಗೆ ಲೋಕದಲ್ಲಿ ಪ್ರಿಯಳಾದ (ತನಗೆ) ಬೇಕಾದವಳಾದ (ತನ್ನನ್ನು) ಕಾಮಿಸುತ್ತಿರುವ ಸ್ತ್ರೀಯಿಂದ (ಸಂಪರಿಷ್ವಕ್ತಃ=ಸಮ್ಯಕ್ ಪರಿಷ್ವಕ್ತಃ) ಚೆನ್ನಾಗಿ ಆಲಿಂಗಿತನಾಗಿರುವ ಕಾಮುಕನಾದವನು ತನ್ನ ಹೊರಗೆ ಮತ್ತೇನನ್ನೂ 'ನನಗಿಂತ (ಬೇರೆಯಾದದ್ದು) ಮತ್ತೊಂದು ಇದೆ' ಎಂದು ಅರಿಯದಿರುವನೋ, ಒಳಗಿನದನ್ನೂ 'ನಾನು ಇಂಥವನು, ಸುಖಿಯು ಅಥವಾ ದುಃಖಿಯು' ಎಂದೂ ಅರಿಯದಿರುವನೋ; ಆಲಿಂಗಿತನಾಗಿಲ್ಲದೆ ಆಕೆಯಿಂದ ವಿಂಗಡವಾಗಿರುವಾಗಲಾದರೋ ಹೊರಗಿನದನ್ನೂ ಒಳಗಿನದನ್ನೂ ಎಲ್ಲವನ್ನೂ ಅರಿಯುತ್ತಿರುತ್ತಾನೋ, ಆಲಿಂಗನೆಯಾದ ಮುಂದಿನ ಕಾಲದಲ್ಲಾದರೋ ಒಂದಾಗಿಬಿಟ್ಟಿರುವದರಿಂದ ಅರಿಯದೆ ಇರುತ್ತಾನೋ, ಹಾಗೆಯೇ (ಈ) ದೃಷ್ಟಾಂತದಂತೆಯೇ ಈ ಪುರುಷನು, ಭೂತಮಾತ್ರೆಗಳ ಸಂಸರ್ಗದಿಂದ ಉಪ್ಪಿನ ಹರಳಿನಂತೆ ವಿಂಗಡವಾಗಿದ್ದುಕೊಂಡಿರುವ (ಈ) ಕ್ಷೇತ್ರಜ್ಞನು, ನೀರು ಮುಂತಾದದ್ದರಲ್ಲಿ ಚಂದ್ರನೇ ಮುಂತಾದದ್ದರ ಪ್ರತಿಬಿಂಬದಂತೆ ಈ ಕಾರ್ಯಕರಣದಲ್ಲಿ ಪ್ರವಿಷ್ಟನಾಗಿರುವ ಆ ಈ ಪುರುಷನು, ಪ್ರಾಜ್ಞನೆಂಬ ಪರಮಾರ್ಥವಾದ ಸ್ವಾಭಾವಿಕವಾದ[2] ತನ್ನ ಆತ್ಮನಾದ ಹೆಚ್ಚಿನ ಜ್ಯೋತಿಯಿಂದ (ಸಂಪರಿಷ್ವಕ್ತಃ=ಸಮ್ಯಕ್ ಪರಿಷ್ವಕ್ತಃ) ಚೆನ್ನಾಗಿ ಆಲಿಂಗಿತನಾಗಿ ಒಂದಾಗಿ ಕಡಿವಡೆಯದಿರುವ ಸರ್ವಾತ್ಮನಾಗಿ ಹೊರಗಿನ ಮತ್ತೊಂದು ಯಾವ ವಸ್ತುವನ್ನೇ ಆಗಲಿ ಒಳಗಿನ ತನ್ನ ಸ್ವರೂಪದಲ್ಲಿ ನಾನು ಇಂಥವನು, ಸುಖಿ ಅಥವಾ ದುಃಖಿ ಎಂದಾಗಲಿ ಅರಿಯದೆ ಇರುವನು. **ಚೈತನ್ಯಜ್ಯೋತಿಯ ಸ್ವಭಾವದವನೇ ಆಗಿದ್ದರೆ ಇಲ್ಲಿ ಏತಕ್ಕೆ ಅರಿಯುವದಿಲ್ಲ?– ಎಂದು ಈ ವಿಷಯದಲ್ಲಿ ಕೇಳಿದೆಯಷ್ಟೆ, ಅದಕ್ಕೆ (ಪರಸ್ಪರಾ)ಲಿಂಗಿತರಾಗಿರುವ**

---

1. ಅರಿವು ಅವನ ಸ್ವಭಾವವೇ ಆದರೆ ತಿಳಿಯಬೇಕಲ್ಲವೆ?

2. ತನ್ನ ಸ್ವರೂಪವೇ ಆಗಿರುವ ನಿತ್ಯಚೈತನ್ಯರೂಪವಾದ; ಪ್ರಾಜ್ಞ ಶಬ್ದಕ್ಕೆ ಸರ್ವಜ್ಞತ್ವರೂಪವಾದ ಪ್ರಜ್ಞೆಯು ಸ್ವರೂಪವಾಗಿರುವದು ಎಂದೇ ಅರ್ಥ. ಸೂ.ಭಾ. ೧-೩-೪೨ (ಭಾ. ಭಾ. ೩೨೯), ಮಾಂ. ಭಾ. ೫. (ಭಾ. ಭಾ. ೧೭)– ಇವನ್ನು ನೋಡಿ. ಪ್ರಾಯೇಣ ಅಜ್ಞಃ ಎಂಬ ಈಚಿನ ವೇದಾಂತಿಗಳ ವ್ಯುತ್ಪತ್ತಿಕ್ರಮಕ್ಕೆ ಭಾಷ್ಯದ ಆಧಾರವಿಲ್ಲ.

ಸ್ತ್ರೀಪುರುಷರಂತೆ ಏಕವಾಗಿರುವ ಇದೇ ಹೇತುವೆಂದು ನಾನು ಹೇಳಿರುತ್ತೇನೆ. ಇಲ್ಲಿ ನಾನಾತ್ವವೇ ವಿಶೇಷವಿಜ್ಞಾನಕ್ಕೆ ಕಾರಣವು ಎಂದು ಆರ್ಥಿಕವಾಗಿ ಹೇಳಿದಂತೆ ಆಯಿತು. ನಾನಾತ್ವಕ್ಕೆ ಕಾರಣವು ಆತ್ಮನಿಗಿಂತ ಬೇರೆಯಾದ ಮತ್ತೊಂದು ವಸ್ತುವನ್ನು ತಂದೊಡ್ಡುವ ಅವಿದ್ಯೆಯೇ ಎಂದು ಹೇಳಿದ್ದಾಗಿದೆ. ಹೀಗಿರುವಲ್ಲಿ ಅವಿದ್ಯೆಯಿಂದ ಯಾವಾಗ ವಿಂಗಡವಾಗುವನೋ, ಆಗ ಇವನಿಗೆ ಎಲ್ಲದರೊಡನೆಯೂ ಏಕತ್ವವೇ ಉಂಟಾಗುತ್ತದೆ ಹೀಗಿರುವಲ್ಲಿ ಜ್ಞಾನ, ಜ್ಞೇಯ- ಮುಂತಾದ ಕಾರಕಗಳ ವಿಭಾಗವು ಇಲ್ಲದಿರುವಾಗ ಸ್ವಾಭಾವಿಕವಾದ ಸ್ವರೂಪದಲ್ಲಿಯೇ ನಿಂತಿರುವ ಆತ್ಮಜ್ಯೋತಿಯಲ್ಲಿ ವಿಶೇಷವಿಜ್ಞಾನವು ಎಲ್ಲಿಂದ ಬಂದೀತು, ಕಾಮವಾವರೂ (ಎಲ್ಲಿಂದ ಬಂದೀತು) ?[1]

## ಆತ್ಮನ ತಾತ್ತ್ವಿಕಸ್ವರೂಪ

(ಭಾಷ್ಯ)

೨೧೫. ಯಸ್ಮಾದೇವಂ ಸರ್ವೈಕತ್ವಮೇವಾಸ್ಯ ರೂಪಮ್, ಅತಃ ತದ್ವಾ ಅಸ್ಯ ಆತ್ಮನಃ ಸ್ವಯಂಜ್ಯೋತಿಃಸ್ವಭಾವಸ್ಯ ಏತದ್ರೂಪಮ್ ಆಪ್ತಕಾಮಮ್ । ಯಸ್ಮಾತ್ ಸಮಸ್ತಮೇತತ್ ತಸ್ಮಾತ್ ಆಪ್ತಾಃ ಕಾಮಾಃ ಅಸ್ಮಿನ್ ರೂಪೇ ತದಿದಮ್ ಆಪ್ತಕಾಮಮ್ । ಯಸ್ಯ ಹಿ ಅನ್ಯತ್ವೇನ ಪ್ರವಿಭಕ್ತಃ ಕಾಮಃ ತತ್ ಅನಾಪ್ತಕಾಮಂ ಭವತಿ । ಯಥಾ ಜಾಗರಿತಾವಸ್ಥಾಯಾಂ ದೇವದತ್ತಾದಿರೂಪಮ್ । ನ ತ್ವಿದಂ ತಥಾ ಕುತಶ್ಚಿತ್ ಪ್ರವಿಭಜ್ಯತೇ। ಅತಃ ತತ್ ಆಪ್ತಕಾಮಂ ಭವತಿ । ಕಿಮನ್ಯಸ್ಮಾತ್ ವಸ್ತ್ವನ್ತರಾತ್ ನ ಪ್ರವಿಭಜ್ಯತೇ ಆಹೋಸ್ವಿತ್ ಆತ್ಮೈವ ತದ್ ವಸ್ತ್ವನ್ತರಮ್ ? ಅತ ಆಹ । ನಾನ್ಯದಸ್ತಿ ಆತ್ಮನಃ । ಕಥಮ್ ? ಯತಃ ಆತ್ಮಕಾಮಮ್, ಆತ್ಮೈವ ಕಾಮಾ ಯಸ್ಮಿನ್ ರೂಪೇ । ಅನ್ಯತ್ರ ಪ್ರವಿಭಕ್ತಾ ಇವ ಅನ್ಯತ್ವೇನ ಕಾಮ್ಯಮಾನಾಃ ಯಥಾ ಜಾಗ್ರತ್ಸ್ವಪ್ನಯೋಃ ತಸ್ಯ ಆತ್ಮೈವ । ಅನ್ಯತ್ವಪ್ರತ್ಯುಪಸ್ಥಾಪಕ

1. ಇಲ್ಲಿ ಅವಿದ್ಯೆಯಿಂದ ನಾನಾತ್ವವೆಂದೂ ನಾನಾತ್ವವಿದ್ದರೇ ವಿಶೇಷಜ್ಞಾನವೆಂದೂ ಹೇಳಿ ಅವಿದ್ಯೆಯಿಲ್ಲದ್ದರಿಂದಲೇ ಏಕತ್ವವಿರುವದರಿಂದ ನಾನು, ಮತ್ತೊಬ್ಬರು- ಎಂಬ ಬಿಡಿಯರಿವು ಆಗದೆ ಇದೆ ಎಂದು ಸುಸ್ಪಷ್ಟವಾಗಿ ಹೇಳಿರುವದನ್ನು ಲಕ್ಷ್ಯದಲ್ಲಿಡಬೇಕು. ಹೀಗೆಯೇ ಸೂ. ಭಾ. ೩-೨-೭ (ಭಾ.ಭಾ. ೨೬೬)ರಲ್ಲಿ ಹೇಳಿದೆ. ಆತ್ಮೈಕತ್ವವು ಸ್ವಭಾವವಾಗಿದ್ದರೂ ಸುಷುಪ್ತಿಯಲ್ಲಿ ಜೀವನು ಸ್ವರೂಪದಲ್ಲಿಯೇ ನಿಲ್ಲುತ್ತಾನೆಂಬುದೂ ಜಾಗ್ರತ್ಸ್ವಪ್ನಗಳ ವ್ಯವಹಾರದೃಷ್ಟಿಯಿಂದಲೇ ಆಗಿದೆ ಎಂದೂ ಆ ಸೂತ್ರಭಾಷ್ಯದಲ್ಲಿ ಹೇಳಿದೆ. ಸುಷುಪ್ತಿಯಲ್ಲಿಯೂ ಅವಿದ್ಯೆಯಿದೆ ಎಂಬ ವ್ಯಾಖ್ಯಾನಪ್ರಸ್ಥಾನವು ಈ ಭಾಷ್ಯಕ್ಕೂ ವೇದಾಂತಸಿದ್ಧಾಂತಕ್ಕೂ ವಿರುದ್ಧವೆಂಬುದು ಇದರಿಂದ ಸ್ಫುಟವಾಗುತ್ತದೆ.

ಹೇತೋಃ ಅವಿದ್ಯಾಯಾಃ ಅಭಾವಾತ್ । ಆತ್ಮಕಾಮಮ್, ಅತ ಏವ ಅಕಾಮಮ್ ಏತದ್ರೂಪಮ್ । ಕಾಮ್ಯವಿಷಯಾಭಾವಾತ್ । ಶೋಕಾನ್ತರಂ ಶೋಕಚ್ಛಿದ್ರಮ್, ಶೋಕಶೂನ್ಯಮ್ ಇತ್ಯೇತತ್ । ಶೋಕಮಧ್ಯಮ್ ಇತಿ ವಾ । ಸರ್ವಥಾಪಿ ಅಶೋಕಮೇತದ್ರೂಪಮ್ ಶೋಕವರ್ಜಿತಮ್ ಇತ್ಯರ್ಥಃ ॥

(ಭಾಷ್ಯಾರ್ಥ)

ಹೀಗೆ ಸರ್ವೈಕತ್ವವೇ ಇವನ ರೂಪವಷ್ಟೆ, ಆದ್ದರಿಂದ ಸ್ವಯಂಜ್ಯೋತಿಃಸ್ವಭಾವನಾದ ಈ ಆತ್ಮನ ಈ ರೂಪವು ಆಪ್ತಕಾಮವು. ಇದು ಎಲ್ಲವೂ ಆಗಿರುವದಷ್ಟೆ, ಆದ್ದರಿಂದ ಈ ರೂಪದಲ್ಲಿ (ಎಲ್ಲಾ) ಕಾಮಗಳೂ ಆಪ್ತವಾಗಿರುತ್ತವೆ; (ಆದ್ದರಿಂದ) ಆ ಇದು ಆಪ್ತಕಾಮವು. ಯಾವದಕ್ಕೆ ಕಾಮವು ಬೇರೆಯಾಗಿ ವಿಂಗಡವಾಗಿರುವದೋ ಅದು ಅನಾಪ್ತಕಾಮವಾಗಿರುತ್ತದೆ; ಉದಾಹರಣೆಗೆ ಎಚ್ಚರದವಸ್ಥೆಯಲ್ಲಿರುವ ದೇವದತ್ತನೇ ಮುಂತಾದ ರೂಪವು (ಅನಾಪ್ತಕಾಮವು). ಆದರೆ ಇದು ಹಾಗೆ ಏತರಿಂದಲೂ ವಿಂಗಡವಾಗಿರುವದಿಲ್ಲ. ಆದ್ದರಿಂದ ಇದು ಆಪ್ತಕಾಮವಾಗಿರುತ್ತದೆ.

ಮತ್ತೊಂದು ವಸ್ತುವಿನಿಂದ ಇದು ವಿಂಗಡವಾಗಿರುವದಿಲ್ಲವೊ, ಅಥವಾ ಆ ಮತ್ತೊಂದು ವಸ್ತುವು ತಾನೇ (ಆಗಿರುವದೊ) ? ಎಂದರೆ ಅದಕ್ಕೆ (ಶ್ರುತಿ) ಹೇಳುತ್ತದೆ. ತನಗಿಂತ ಬೇರೊಂದು ಇರುವದಿಲ್ಲ. ಏಕೆಂದರೆ ಆತ್ಮಕಾಮವು, ಈ ರೂಪದಲ್ಲಿ ಕಾಮಗಳು ಆತ್ಮನೇ ಆಗಿರುತ್ತವೆ. ಎಚ್ಚರಕನಸುಗಳಲ್ಲಿರುವಂತೆ ಮಿಕ್ಕ (ಅವಸ್ಥೆ)ಗಳಲ್ಲಿ ಬೇರೆ ಎಂದು ವಿಂಗಡವಾಗಿರುವಂತಿದ್ದು ಕಾಮಿಸಲ್ಪಡುವ ಕಾಮಗಳು ಇವನಿಗೆ ಆತ್ಮನೇ; ಏಕೆಂದರೆ ಮತ್ತೊಂದೆಂದು ಮುಂದೊಡ್ಡುವದಕ್ಕೆ ಹೇತುವಾದ ಅವಿದ್ಯೆಯು ಇಲ್ಲಿಲ್ಲ[1]. (ಹೀಗೆ) ಆತ್ಮಕಾಮವು, ಆದ್ದರಿಂದಲೇ ಈ ರೂಪವು ಅಕಾಮವು; ಏಕೆಂದರೆ ಕಾಮಿಸುವ ವಿಷಯವೇ (ಇಲ್ಲಿ) ಇರುವದಿಲ್ಲ.

(ಇದು) ಶೋಕಾಂತರವು, ಶೋಕದ ರಂಧ್ರವು ಎಂದರೆ ಇದು ಶೋಕವಿಲ್ಲದ್ದು ಎಂದು ಅಭಿಪ್ರಾಯ. ಅಥವಾ ಶೋಕದ ಕೇಂದ್ರವು[2] (ಎಂದು

---

1. 'ಅವಿದ್ಯಾಯಾ ಅಭಾವಾತ್' ಎಂಬ ಸ್ಪಷ್ಟವಾದ ಭಾಷ್ಯಕ್ಕೆ ವಿರುದ್ಧವಾಗಿ ಟೀಕೆಯಲ್ಲಿ ಸುಷುಪ್ತಿಯಲ್ಲಿ ಅವಿದ್ಯೆಯಿದೆ, ಆದರೆ ಅಭಿವ್ಯಕ್ತವಾಗಿಲ್ಲ ಎಂದು ಬರೆದಿರುವದು ಶ್ರೌತಸಿದ್ಧಾಂತವನ್ನರಿಯದ್ದರಿಂದ ಸುಷುಪ್ತ್ಯವಿದ್ಯಾಸಿರಾಕರಣಭಾಷ್ಯಗಳನ್ನೆಲ್ಲ ಹೀಗೆ ಈಚಿನ ವ್ಯಾಖ್ಯಾನಕಾರರು ಹೇಗೋ ತೇಲಿಸುವದಕ್ಕೆ ವ್ಯರ್ಥಪ್ರಯಾಸವನ್ನು ವಹಿಸಿರುತ್ತಾರೆ.

2. ಶೋಕದ ನಡುವೆಯಿರುವದು, ಎಂದರೆ ಶೋಕವನ್ನು ಹೊರಚಪ್ಪುಮಾಡಿಕೊಂಡು ಅದರ ಅಂಟಿಲ್ಲದೆ ಇರತಕ್ಕದ್ದು ಎಂದರ್ಥ.

ಶೋಕಾಂತರಶಬ್ದಕ್ಕೆ ಅರ್ಥ). ಹೇಗೇ ಆಗಲಿ, ಈ ರೂಪವು ಅಶೋಕವು, ಶೋಕವಿಲ್ಲದ್ದು[1] ಎಂದರ್ಥ.

## ಸುಷುಪ್ತರೂಪವು ಪಾಪಪುಣ್ಯರಹಿತವಾದದ್ದು

(ಉಪನಿಷತ್ತು)

**ಅತ್ರ ಪಿತಾಽಪಿತಾ ಭವತಿ ಮಾತಾಽಮಾತಾ ಲೋಕಾ ಅಲೋಕಾ ದೇವಾ ಅದೇವಾ ವೇದಾ ಅವೇದಾಃ । ಅತ್ರ ಸ್ತೇನೋಽಸ್ತೇನೋ ಭವತಿ ಭ್ರೂಣಹಾಽಭ್ರೂಣಹಾ ಚಾಣ್ಡಾಲೋಽಚಾಣ್ಡಾಲಃ ಪೌಲ್ಕಸೋಽಪೌಲ್ಕಸಃ ಶ್ರಮಣೋಽಶ್ರಮಣಸ್ತಾಪಸೋಽತಾಪಸೋಽನನ್ವಾಗತಂ ಪುಣ್ಯೇನಾಽನನ್ವಾಗತಂ ಪಾಪೇನ ತೀರ್ಣೋ ಹಿ ತದಾ ಸರ್ವಾಞ್ಛೋಕಾನ್ ಹೃದಯಸ್ಯ ಭವತಿ ॥ ೨೨ ॥**

೨೨. ಇಲ್ಲಿ ತಂದೆಯು ತಂದೆಯಲ್ಲದವನಾಗುವನು, ತಾಯಿಯು ತಾಯಿಯಲ್ಲದವಳಾಗುವಳು, ಲೋಕಗಳು ಲೋಕಗಳಲ್ಲ(ದವಾಗುವವು), ದೇವತೆಗಳು ದೇವತೆಗಳಲ್ಲ(ದವರಾಗುವರು), ವೇದಗಳು ವೇದಗಳಲ್ಲ(ದವಾಗುವವು) ; ಇಲ್ಲಿ ಕಳ್ಳನು ಕಳ್ಳನಲ್ಲ(ವಾಗುವನು), ಭ್ರೂಣಘ್ನನು ಭ್ರೂಣಘ್ನನಲ್ಲ(ವಾಗುವನು), ಚಾಂಡಾಲನು ಚಾಂಡಾಲನಲ್ಲ(ವಾಗುವನು), ಪೌಲ್ಕಸನು ಪೌಲ್ಕಸನಲ್ಲ(ವಾಗುವನು), ಶ್ರಮಣನು ಶ್ರಮಣನಲ್ಲ(ವಾಗುವನು), ತಾಪಸನು ತಾಪಸನಲ್ಲ(ವಾಗುವನು. ಇದು) ಪುಣ್ಯದಿಂದ ಅನುಗತವಾಗಿರುವದಿಲ್ಲ, ಪಾಪದಿಂದ ಅನುಗತವಾಗಿರುವದಿಲ್ಲ ; ಏಕೆಂದರೆ ಆಗ ಅವನು ಹೃದಯದ ಶೋಕಗಳನ್ನೆಲ್ಲ ದಾಟಿರುವನು.

## ಕಂಡಿಕೆಯ ಸಂಬಂಧ

(ಭಾಷ್ಯ)

೨೧೬. ಪ್ರಕೃತಃ ಸ್ವಯಂಜ್ಯೋತಿರಾತ್ಮಾ ಅವಿದ್ಯಾಕಾಮಕರ್ಮವಿನಿರ್ಮುಕ್ತಃ ಇತ್ಯುಕ್ತಮ್ । ಅಸಙ್ಗತ್ವಾದಾತ್ಮನಃ, ಆಗನ್ತುಕತ್ವಾಚ್ಚ ತೇಷಾಮ್ ।

---

1. ಅಂತರಶಬ್ದಕ್ಕೆ ಛಿದ್ರವೆಂಬರ್ಥವನ್ನು ಇಟ್ಟುಕೊಂಡರೂ ಮಧ್ಯವೆಂಬರ್ಥವನ್ನು ಇಟ್ಟುಕೊಂಡರೂ ಶೋಕವಿಲ್ಲದ್ದು ಎಂದೇ ಅರ್ಥ. ಅಶೋಕಾನ್ತರಮ್ ಎಂಬ ಮಾ॥ ಪಾಠದಲ್ಲಂತೂ ತನ್ನೊಳಗೆ ಯಾವ ಶೋಕವೂ ಇಲ್ಲದ್ದು ಎಂಬರ್ಥವು ಸ್ಫುಟವಾಗಿಯೇ ಕಾಣುತ್ತದೆ.

ತತ್ರ ಏವಮ್ ಆಶಙ್ಕಾ ಜಾಯತೇ; ಚೈತನ್ಯಸ್ವಭಾವತ್ವೇ ಸತ್ಯಪಿ ಏಕೀಭಾವಾತ್ ನ ಜಾನಾತಿ ಸ್ತ್ರೀಪುಂಸಯೋರಿವ ಸಂಪರಿಷ್ವಕ್ತಯೋಃ ಇತ್ಯುಕ್ತಮ್। ತತ್ರ ಪ್ರಾಸಙ್ಗಿಕಮೇತದುಕ್ತಮ್। ಕಾಮಕರ್ಮಾದಿವತ್ ಸ್ವಯಂಜ್ಯೋತಿಷ್ಟ್ವಮಪಿ ಅಸ್ಯಾಽಽತ್ಮನೋ ನ ಸ್ವಭಾವಃ; ಯಸ್ಮಾತ್ ಸಂಪ್ರಸಾದೇ ನೋಪಲಭ್ಯತೇ ಇತ್ಯಾಶಙ್ಕಾಯಾಮ್ ಪ್ರಾಪ್ತಾಯಾಂ ತನ್ನಿರಾಕರಣಾಯ ಸ್ತ್ರೀಪುಂಸಯೋ ರ್ದೃಷ್ಟಾನ್ತೋಪಾದಾನೇನ ವಿದ್ಯಮಾನಸ್ಯೈವ ಸ್ವಯಂಜ್ಯೋತಿಷ್ಟ್ವಸ್ಯ ಸುಷುಪ್ತೇ ಅಗ್ರಹಣಮ್ ಏಕೀಭಾವಾದ್ ಹೇತೋಃ, ನ ತು ಕಾಮಕರ್ಮಾದಿ ವತ್ ಆಗನ್ತುಕಮ್ ಇತ್ಯೇತತ್ ಪ್ರಾಸಙ್ಗಿಕಮ್ ಅಭಿಧಾಯ ಯತ್ ಪ್ರಕೃತಂ ತದೇವಾನುಪ್ರವರ್ತಯತಿ। ಅತ್ರ ಚೈತತ್ ಪ್ರಕೃತಮ್ ಅವಿದ್ಯಾ ಕಾಮಕರ್ಮವಿನಿರ್ಮುಕ್ತಮೇವ ತದ್ರೂಪಮ್, ಯತ್ಸುಷುಪ್ತೇ ಆತ್ಮನೋ ಗೃಹ್ಯತೇ ಪ್ರತ್ಯಕ್ಷತಃ ಇತಿ॥

(ಭಾಷ್ಯಾರ್ಥ)

ಪ್ರಕೃತನಾಗಿರುವ ಸ್ವಯಂಜ್ಯೋತಿಯಾದ ಆತ್ಮನು ಅವಿದ್ಯಾಕಾಮ ಕರ್ಮವಿನಿರ್ಮುಕ್ತನು; ಏಕೆಂದರೆ ಆತ್ಮನು ಅಸಂಗನಾಗಿರುತ್ತಾನೆ, ಅವು ಆಗಂತುಕವಾಗಿವೆ[1] ಎಂದು ಹೇಳಲಾಯಿತು. ಇಲ್ಲಿ ಹೀಗೆಂಬ ಆಶಂಕೆಯುಂ ಟಾಗುತ್ತದೆ: ಚೈತನ್ಯವು (ಇವನ) ಸ್ವಭಾವವಾದರೂ (ಪರಸ್ಪರವಾಗಿ) ಆಲಿಂಗಿತ ರಾಗಿರುವ ಸ್ತ್ರೀಪುರುಷರಂತೆ ಒಂದಾಗಿರುವದರಿಂದ (ಏನನ್ನೂ) ಅರಿಯದಿರು ತ್ತಾನೆ ಎಂದು ಹೇಳಿತಲ್ಲ, ಅದು ಪ್ರಾಸಂಗಿಕವಾಗಿ ಹೇಳಿದ್ದು. ಕಾಮಕರ್ಮ ಗಳೇ ಮುಂತಾವುಗಳಂತೆ ಸ್ವಯಂಜ್ಯೋತಿಷ್ಟ್ವವೂ ಈ ಆತ್ಮನ ಸ್ವಭಾವವಲ್ಲ, ಏಕೆಂದರೆ ಸುಷುಪ್ತಿಯಲ್ಲಿ (ಅದು) ಕಂಡುಬರುವದಿಲ್ಲ ಎಂಬ ಈ ಆಶಂಕೆಯು ಬಂದೊದಗಲಾಗಿ[2] ಅದನ್ನು ತಳ್ಳಿಹಾಕುವದಕ್ಕಾಗಿ ಸ್ತ್ರೀಪುರುಷರ ದೃಷ್ಟಾಂತ ವನ್ನು ತೆಗೆದುಕೊಂಡು, ಇದ್ದುಕೊಂಡಿರುವ ಸ್ವಯಂಜ್ಯೋತಿಷ್ಟ್ವವನ್ನೇ ಸುಷುಪ್ತಿಯಲ್ಲಿ ಗ್ರಹಿಸದೆ ಇರುವದು ಏಕೀಭಾವವೆಂಬ ಹೇತುವಿನಿಂದಲೇ ಹೊರತು ಕಾಮಕರ್ಮಾದಿಗಳಂತೆ ಆಗಂತುಕವಾಗಿರುವದರಿಂದಲ್ಲ ಎಂಬುದನ್ನು ಪ್ರಾಸಂಗಿಕವಾಗಿ[3] ಹೇಳಿ, ಪ್ರಕೃತವಾಗಿತ್ತಲ್ಲ ಅದನ್ನೇ (ಈಗ) ಮುಂದುವರಿಸ ಲಾಗುತ್ತದೆ. ಇಲ್ಲಿ ಇದೇ ಪ್ರಕೃತವಾಗಿರುತ್ತದೆ; (ಯಾವದೆಂದರೆ) **ಸುಷುಪ್ತಿಯಲ್ಲಿ ಪ್ರತ್ಯಕ್ಷವಾಗಿ ಕಾಣಬರುತ್ತದೆಯಲ್ಲ, ಆ ಆತ್ಮನ**

---

1. ಆತ್ಮನ ಸ್ವಭಾವವಲ್ಲದಿದ್ದರೂ ಮತ್ತೊಂದು ಉಪಾಧಿಯಿಂದ ತೋರುತ್ತವೆ.
2. ಹೀಗೆಂಬ ಆಶಂಕೆಯುಂಟಾಗುತ್ತದೆ ಎಂದು ಹೇಳಿದ್ದು ಇದೇ ಆಶಂಕೆ.
3. ಕಾಮಕರ್ಮಗಳಂತೆ ಸ್ವಯಂಜ್ಯೋತಿಷ್ಟ್ವವೂ ಆಗಂತುಕವೆಂದಾಗಲಿ ಎಂಬ ಪ್ರಸಂಗಾಗತವಾದ ಶಂಕೆಯನ್ನು ಪರಿಹರಿಸುವದಕ್ಕಾಗಿ.

ರೂಪವು ಅವಿದ್ಯಾಕಾಮಕರ್ಮರಹಿತವಾದದ್ದೇ ಎಂಬುದು.[1]

## ಸುಷುಪ್ತರೂಪವು ಕರ್ಮನಿರ್ಮುಕ್ತವಾಗಿದೆ

(ಭಾಷ್ಯ)

೨೧೭. ತದೇತದ್ ಯಥಾಭೂತಮೇವಾಭಿಹಿತಮ್ ಸರ್ವಸಂಬನ್ಧಾತೀತಮೇತದ್ರೂಪಮ್ ಇತಿ । ಯಸ್ಮಾತ್ ಅತ್ರ ಏತಸ್ಮಿನ್ ಸುಷುಪ್ತಸ್ಥಾನೇ ಅತಿಚ್ಛನ್ದಾಪಹತಪಾಪ್ಮಾಭಯಮ್ ಏತದ್ರೂಪಮ್ ತಸ್ಮಾತ್ ಅತ್ರ ಪಿತಾ ಜನಕಃ । ತಸ್ಯ ಚ ಜನಯಿತೃತ್ವಾತ್ ಯತ್ ಪಿತೃತ್ವಂ ಪುತ್ರಂ ಪ್ರತಿ ತತ್ಕರ್ಮನಿಮಿತ್ತಮ್ । ತೇನ ಚ ಕರ್ಮಣಾ ಅಯಮ್ ಅಸಂಬದ್ಧಃ ಅಸ್ಮಿನ್ ಕಾಲೇ। ತಸ್ಮಾತ್ ಪಿತಾಪುತ್ರಸಂಬನ್ಧನಿಮಿತ್ತಾತ್ ಕರ್ಮಣೋ ವಿನಿರ್ಮುಕ್ತತ್ವಾತ್ ಪಿತಾಽಪಿ ಅಪಿತಾ ಭವತಿ । ತಥಾ ಪುತ್ರೋಽಪಿ ಪಿತುರಪುತ್ರೋ ಭವತಿ ಇತಿ ಸಾಮರ್ಥ್ಯಾದ್ ಗಮ್ಯತೇ । ಉಭಯೋರ್ಹಿ ಸಂಬನ್ಧನಿಮಿತ್ತಂ ಕರ್ಮ । ತದಯಮ್ ಅತಿಕ್ರಾನ್ತೋ ವರ್ತತೇ । "ಅಪಹತಪಾಪ್ಮಾ" (೪-೩-೨೧) ಇತಿ ಹಿ ಉಕ್ತಮ್ । ತಥಾ ಮಾತಾ ಅಮಾತಾ । ಲೋಕಾಃ ಕರ್ಮಣಾ ಜೇತವ್ಯಾಃ ಜಿತಾಶ್ಚ । ತತ್ಕರ್ಮಸಂಬನ್ಧಾಭಾವಾತ್ ಲೋಕಾ ಅಲೋಕಾಃ । ತಥಾ ದೇವಾಃ ಕರ್ಮಾಙ್ಗಭೂತಾಃ ತತ್ಕರ್ಮಸಂಬನ್ಧಾತ್ಯಯಾತ್ ದೇವಾ ಅದೇವಾಃ । ತಥಾ ವೇದಾಃ ಸಾಧ್ಯಸಾಧನಸಂಬನ್ಧಾಭಿಧಾಯಕಾಃ ಮನ್ತ್ರಲಕ್ಷಣಾಶ್ಚ ಅಭಿಧಾಯಕತ್ವೇನ ಕರ್ಮಾಙ್ಗಭೂತಾಃ ಅಧೀತಾ ಅಧ್ಯೇತವ್ಯಾಶ್ಚ ಕರ್ಮನಿಮಿತ್ತಮೇವ ಸಂಬಧ್ಯನ್ತೇ ಪುರುಷೇಣ । ತತ್ಕರ್ಮಾತಿಕ್ರಮಣಾತ್ ಏತಸ್ಮಿನ್ ಕಾಲೇ ವೇದಾ ಅಪಿ ಅವೇದಾಃ ಸಂಪದ್ಯನ್ತೇ । ನ ಕೇವಲಂ ಶುಭಕರ್ಮಸಂಬನ್ಧಾತೀತಃ ಕಿಂ ತರ್ಹಿ ಅಶುಭೈರಪಿ ಅತ್ಯನ್ತಘೋರೈಃ ಕರ್ಮಭಿಃ ಅಸಂಬದ್ಧ ಏವಾಯಂ ವರ್ತತೇ ಇತ್ಯೇತಮರ್ಥಮ್ ಆಹ । ಅತ್ರ ಸ್ತೇನೋ ಬ್ರಾಹ್ಮಣಸುವರ್ಣಹರ್ತಾ ಭ್ರೂಣಘ್ನಾ ಸಹ ಪಾಠಾತ್ ಅವಗಮ್ಯತೇ । ಸ ತೇನ ಘೋರೇಣ ಕರ್ಮಣಾ ಏತಸ್ಮಿನ್ ಕಾಲೇ ವಿನಿರ್ಮುಕ್ತೋ ಭವತಿ । ಯೇನಾಯಂ ಕರ್ಮಣಾ ಮಹಾಪಾತಕೀ ಸ್ತೇನ ಉಚ್ಯತೇ । ತಥಾ ಭ್ರೂಣಹಾ ಅಭ್ರೂಣಹಾ । ತಥಾ ಚಾಣ್ಡಾಲಃ । ನ ಕೇವಲಂ ಪ್ರತ್ಯುತ್ಪನ್ನೇನೈವ ಕರ್ಮಣಾ ವಿನಿರ್ಮುಕ್ತಃ । ಕಿಂ ತರ್ಹಿ ಸಹಜೇನಾಪಿ ಅತ್ಯನ್ತನಿಕೃಷ್ಟಜಾತಿ

---

1. ಅತಿಚ್ಛಂದವಾಕ್ಯದಲ್ಲಿ ಇದೇ ಪ್ರಕೃತವಾದದ್ದು, ಸ್ವಯಂಜ್ಯೋತಿಷ್ಟ್ವವು ಆತ್ಮನ ಸ್ವಭಾವವೇ ಎಂಬುದಲ್ಲ. ಇಲ್ಲಿ ಅವಿದ್ಯಾದಿಗಳು ಸುಷುಪ್ತಾತ್ಮನಲ್ಲಿರುವದಿಲ್ಲವೆಂದು ಪ್ರತ್ಯಕ್ಷವಾಗಿ ತಿಳಿದುಬರುತ್ತದೆ ಎಂಬ ವಾಕ್ಯವನ್ನು ಕಡೆಗಣಿಸಿ ಎಚ್ಚತ್ತವನ ಪರಾಮರ್ಶದಿಂದ ಗೊತ್ತಾಗುತ್ತದೆ– ಎಂದು ಟೀಕೆಯಲ್ಲಿ ಬರೆದಿರುವದು ಪ್ರತ್ಯಕ್ಷಶಬ್ದಕ್ಕೆ 'ಅನುಭವ'ವೆಂದರ್ಥವೆಂಬುದನ್ನು ಮರೆತದ್ದರಿಂದ.

ಪ್ರಾಪಕೇಣಾಪಿ ವಿನಿರ್ಮುಕ್ತ ಏವಾಯುವರ್ । ಚಣ್ಡಾಲೋ[1] ನಾಮ ಶೂದ್ರೇಣ ಬ್ರಾಹ್ಮಣ್ಯಾಮ್ ಉತ್ಪನ್ನಃ । ಚಣ್ಡಾಲ ಏವ ಚಾಣ್ಡಾಲಃ । ಸಜಾತಿನಿಮಿತ್ತೇನ ಕರ್ಮಣಾ ಅಸಂಬದ್ಧತ್ವಾತ್ ಅಚಾಣ್ಡಾಲೋ ಭವತಿ । ಪೌಲ್ಕಸಃ । ಪುಲ್ಕಸ ಏವ ಪೌಲ್ಕಸಃ । ಶೂದ್ರೇಣೈವ ಕ್ಷತ್ರಿಯಾಯಾಮ್ ಉತ್ಪನ್ನಃ । ಸೋಽಪಿ ಅಪುಲ್ಕಸೋ ಭವತಿ । ತಥಾ ಆಶ್ರಮಲಕ್ಷಣೈಶ್ಚ ಕರ್ಮಭಿಃ ಅಸಂಬದ್ಧೋ ಭವತೀತ್ಯುಚ್ಯತೇ । ಶ್ರಮಣಃ ಪರಿವ್ರಾಡ್ ಯತ್ಕರ್ಮನಿಮಿತ್ತೋ ಭವತಿ ಸ ತೇನ ವಿನಿರ್ಮುಕ್ತತ್ವಾತ್ ಅಶ್ರಮಣಃ । ತಥಾ ತಾಪಸೋ ವಾನಪ್ರಸ್ಥಃ, ಅತಾಪಸಃ । ಸರ್ವೇಷಾಂ ವರ್ಣಾಶ್ರಮಾದೀನಾಮ್ ಉಪಲಕ್ಷಣಾರ್ಥಮ್ ಉಭಯೋರ್ಗ್ರಹಣಮ್ । ಕಿಂ ಬಹುನಾ ? ಅನನ್ವಾಗತಮ್ । ನಾನ್ವಾಗತಮ್ ಅನನ್ವಾಗತಮ್ । ಅಸಂಬದ್ಧಮ್ ಇತ್ಯೇತತ್ । ಪುಣ್ಯೇನ ಶಾಸ್ತ್ರವಿಹಿತೇನ ಕರ್ಮಣಾ । ತಥಾ ಪಾಪೇನ ವಿಹಿತಾಕರಣಪ್ರತಿಷಿದ್ಧಕ್ರಿಯಾಲಕ್ಷಣೇನ । ರೂಪಪರತ್ವಾತ್ ನಪುಂಸಕಲಿಙ್ಗಮ್ । 'ಅಭಯಂ ರೂಪಮ್' (೪-೩-೨೧) ಇತಿ ಹಿ ಅನುವರ್ತತೇ ॥

(ಭಾಷ್ಯಾರ್ಥ)

ಈ (ಸುಷುಪ್ತ)ರೂಪವು ಯಾವ ಸಂಬಂಧವೂ ಇಲ್ಲದ್ದು ಎಂದು (ಹೇಳಿತಲ್ಲ), ಆ ಇದು ಯಥಾರ್ಥವಾದದ್ದನ್ನೇ ಹೇಳಿದ್ದು. ಏಕೆಂದರೆ ಇಲ್ಲಿ, ಈ ಸುಷುಪ್ತಾವಸ್ಥೆಯಲ್ಲಿ (ಇರುವ) ಈ ರೂಪವು ಅತಿಚ್ಛಂದವೂ, ಅಪಹತಪಾಪ್ಮವೂ, ಅಭಯವೂ (ಆಗಿದೆಯಲ್ಲ), ಆದ್ದರಿಂದಲೇ. ಇಲ್ಲಿ ತಂದೆಯು ಎಂದರೆ ಜನಕನು ಅವನು ಹುಟ್ಟಿಸುವವನಾದ್ದರಿಂದ ಮಗನ ವಿಷಯದಲ್ಲಿ ಅವನ ಪಿತೃತ್ವವೆಂಬುದಿದೆಯಲ್ಲ, (ಅದು) ಆ ಕರ್ಮನಿಮಿತ್ತವಾದದ್ದು ; ಆದರೆ ಆ ಕರ್ಮಕ್ಕೆ ಈ ಕಾಲದಲ್ಲಿ ಅವನು ಸಂಬದ್ಧನಾಗಿರುವದಿಲ್ಲ. ಆದ್ದರಿಂದ ತಂದೆಮಕ್ಕಳೆಂಬ ಸಂಬಂಧಕ್ಕೆ ನಿಮಿತ್ತವಾದ ಕರ್ಮದಿಂದ ಬಿಡುಗಡೆಯಾಗಿರುವದರಿಂದ ತಂದೆಯು-ತಂದೆಯಲ್ಲದವನಾಗುವನು. ಇದರಂತೆ ಮಗನೂ ತಂದೆಗೆ ಪುತ್ರನಲ್ಲದೆ ಹೋಗುವನು ಎಂದು ಅರ್ಥವಶದಿಂದಲೇ ಗೊತ್ತಾಗುತ್ತದೆ. ಇಬ್ಬರಿಗೂ ಸಂಬಂಧಕ್ಕೆ ನಿಮಿತ್ತವು ಕರ್ಮವಲ್ಲವೆ ? ಅದನ್ನು ಇವನು ದಾಟಿರುತ್ತಾನೆ. "ಅಪಹತಪಾಪ್ಮವು" (೪-೩-೨೧) ಎಂದಲ್ಲವೆ, ಹಿಂದೆ ಹೇಳಿರುತ್ತದೆ? ಇದರಂತೆ ತಾಯಿ ತಾಯಿಯಲ್ಲ(ದವಳಾಗುವಳು).

ಲೋಕಗಳು ಕರ್ಮದಿಂದ ಗೆದ್ದುಕೊಳ್ಳಬೇಕಾಗಿರುವ ಮತ್ತು (ಹಿಂದೆ) ಗೆದ್ದುಕೊಂಡಿರುವ (ಲೋಕಗಳು)- ಆ ಕರ್ಮದ ಸಂಬಂಧವನ್ನೂ ಮೀರಿರುವದ

1. ಅಚ್ಚಿನ ಪುಸ್ತಕದಲ್ಲಿ ಚಾಣ್ಡಾಲಃ ಎಂದು ಇರುವದನ್ನು ಚಣ್ಡಾಲಃ ಎಂದು ತಿದ್ದಿಕೊಂಡಿದೆ.

ರಿಂದ (ಈಗ) ಲೋಕಗಳು-ಲೋಕಗಳಲ್ಲ(ವಾಗುವವು). ಇದರಂತೆ ಕರ್ಮಾಂಗ ಭೂತರಾದ ದೇವತೆಗಳು- ಆ ಕರ್ಮಸಂಬಂಧವನ್ನು ಮೀರಿರುವದರಿಂದ ದೇವತೆಗಳು- ದೇವತೆಗಳಲ್ಲ(ವಾಗುವರು). ಇದರಂತೆ ವೇದಗಳು- ಸಾಧ್ಯ ಸಾಧನಸಂಬಂಧವನ್ನು ಹೇಳುವ (ಬ್ರಾಹ್ಮಣಗಳು) ಮತ್ತು (ಕರ್ಮಾಂಗವನ್ನು) ತಿಳಿಸುವದರಿಂದ ಕರ್ಮಾಂಗವಾಗಿರುವ ಮಂತ್ರಲಕ್ಷಣಗಳಾಗಿರುವ (ವೇದಗಳು ಈಗಾಗಲೆ) ಅಧ್ಯಯನಮಾಡಿದವಾಗಿರಲಿ ಮುಂದೆ ಅಧ್ಯಯನಮಾಡತಕ್ಕವಾಗಿ ರಲಿ, ಕರ್ಮದ ನಿಮಿತ್ತದಿಂದಲೇ ಪುರುಷನಿಗೆ ಸಂಬದ್ಧವಾಗಿರುತ್ತವೆ. ಆ ಕರ್ಮವನ್ನು ಮೀರಿರುವದರಿಂದ ಈ ಕಾಲದಲ್ಲಿ ವೇದಗಳುಕೂಡ- ಅವೇದ ಗಳಾಗಿಬಿಡುತ್ತವೆ

ಕೇವಲ ಶುಭಕರ್ಮಗಳ ಸಂಬಂಧವನ್ನು ಮೀರಿರುತ್ತಾನೆಂಬುದು ಮಾತ್ರ ವೇ ಅಲ್ಲ, ಮತ್ತೇನೆಂದರೆ ಅತ್ಯಂತ ಘೋರವಾದ ಅಶುಭಕರ್ಮಗಳಿಗೂ ಸಂಬದ್ಧನಲ್ಲದೆಯೇ ಈ (ಸುಷುಪ್ತನು) ಇರುತ್ತಾನೆ ಎಂಬೀ ಅರ್ಥವನ್ನು (ಶ್ರುತಿ) ಹೇಳುತ್ತಿದೆ. ಇಲ್ಲಿ ಕಳ್ಳನು, ಬ್ರಾಹ್ಮಣನ ಚಿನ್ನವನ್ನು ಕದ್ದವನು ; ಭ್ರೂಣ ಘ್ನನ ಜೊತೆಯಲ್ಲಿ ಹೇಳಿರುವದರಿಂದ (ಕಳ್ಳನೆಂಬುದಕ್ಕೆ ಇದೇ ಅರ್ಥವೆಂದು) ಗೊತ್ತಾಗುತ್ತದೆ[1]. ಅವನು ಯಾವ ಕರ್ಮದಿಂದ ಮಹಾಪಾತಕಿಯಾದ ಕಳ್ಳ ನೆನಿಸಿರುವನೋ ಆ ಘೋರಕರ್ಮದಿಂದಲೂ ಈ ಕಾಲದಲ್ಲಿ ಬಿಡುಗಡೆಯಾಗು ತ್ತಾನೆ. ಇದರಂತೆ ಭ್ರೂಣಘ್ನನು, ಭ್ರೂಣಘ್ನನಲ್ಲದೆಹೋಗುತ್ತಾನೆ. ಇದರಂತೆ ಚಾಂಡಾಲನು. ಬರಿಯ (ಈಗ ಹೊಸದಾಗಿ) ಉಂಟಾದ ಕರ್ಮದಿಂದ ಮಾತ್ರವೇ ಮುಕ್ತನಾಗಿರುತ್ತಾನೆಂದಲ್ಲ, ಮತ್ತೇನೆಂದರೆ ಸಹಜವಾಗಿ ಅತ್ಯಂತ ನಿಕೃಷ್ಟವಾದ ಜನ್ಮವನ್ನು ಪಡೆಯಿಸುವ (ಕರ್ಮ)ದಿಂದಲೂ ಇವನು ಮುಕ್ತನೇ (ಆಗಿರುತ್ತಾನೆ). ಚಂಡಾಲನೆಂದರೆ ಶೂದ್ರನಿಂದ ಬ್ರಾಹ್ಮಣಸ್ತ್ರೀಯಲ್ಲಿ ಹುಟ್ಟಿದವನು[2] , ಚಂಡಾಲನೇ ಚಾಂಡಾಲನು (ಎಂದು ಸ್ವಾರ್ಥಪ್ರತ್ಯಯವು ಸೇರಿ ವ್ಯುತ್ಪನ್ನವಾಗಿದೆ). ಅವನು (ಆ) ಜಾತಿನಿಮಿತ್ತವಾದ ಕರ್ಮಕ್ಕೆ ಸಂಬದ್ಧನಾಗದೆ ಇರುವದರಿಂದ ಚಾಂಡಾಲನಲ್ಲದೆ ಹೋಗುವನು. ಪೌಲ್ಕಸನು -ಶೂದ್ರನಿಂದಲೇ ಕ್ಷತ್ರಿಯಸ್ತ್ರೀಯಲ್ಲಿ ಹುಟ್ಟಿದವನು (ಪುಲ್ಕಸನು), ಪುಲ್ಕಸನೇ

---

1. ಬ್ರಹ್ಮಹತ್ಯೆ, ಸುರಾಪಾನ, ಸ್ವರ್ಣಸ್ತೇಯ, ಗುರುತಲ್ಪಗಮನ- ಇವು ಮಹಾ ಪಾತಕಗಳು ; ಇವುಗಳನ್ನು ಮಾಡುವವರ ಸಂಸರ್ಗವೂ ಮಹಾಪಾತಕವೇ. ಮನು. ೧೧-೫೪. ಶ್ರೇಷ್ಠಬ್ರಾಹ್ಮಣನನ್ನು ಕೊಂದವನನ್ನೇ ಇಲ್ಲಿ ಭ್ರೂಣಘ್ನನೆಂದಿವೆ ಎಂದು ವಾರ್ತಿಕ. ೪-೩-೧೩೬೨.

2 ಚಾಂಡಾಲ, ಪುಲ್ಕಸ- ಎಂಬಿವು ಪ್ರತಿಲೋಮವಾಗಿ ಹುಟ್ಟಿದವರ ಜಾತಿಗಳಿಗೆ ಉಪಲಕ್ಷಣ.

ಪೌಲ್ಕಸನು (ಎಂದು ಸ್ವಾರ್ಥಪ್ರತ್ಯಯವು ಬಂದು ವ್ಯುತ್ಪನ್ನವಾದ ಶಬ್ದವಿದು). (ಪುಲ್ಕಸನು)ಕೂಡ– ಪುಲ್ಕಸನಲ್ಲದೆ ಹೋಗುವನು.

ಇದರಂತೆ ಆಶ್ರಮಕ್ಕೆ ಸೇರಿದ ಕರ್ಮಗಳಿಂದ (ಇವನು) ಸಂಬದ್ಧನಲ್ಲದೆ ಇರುತ್ತಾನೆ ಎಂದು (ಶ್ರುತಿ) ಹೇಳುತ್ತಿದೆ. ಶ್ರಮಣನು, ಯಾವ ಕರ್ಮದಿಂದ ಪರಿವ್ರಾಜಕನಾಗಿರುವನೋ ಆವನು ಆ ಕ ರ್ಮ ದಿಂ ದ ಮುಕ್ತನಾಗಿರುವ ಕಾರಣ, ಶ್ರಮಣನಲ್ಲದೆ (ಇರುವನು). ಹೀಗೆಯೇ ತಾಪಸನು, ಎಂದರೆ ವಾನಪ್ರಸ್ಥನು, ತಾಪಸನಲ್ಲದೆ (ಇರುವನು). ಎಲ್ಲಾ ವರ್ಣಾಶ್ರಮಾದಿಗಳಿಗೂ ಉಪಲಕ್ಷಣವಾಗಿ (ಈ) ಎರಡನ್ನೂ (ಇಲ್ಲಿ) ತೆಗೆದುಕೊಂಡಿದೆ.

ಹೆಚ್ಚುಹೇಳಿದ್ದರಿಂದೇನು ? ಅನನ್ವಾಗತನಾದ– ಅನುಗತನಲ್ಲದೆ ಇರುವದು ಅನನ್ವಾಗತವು, ಅಸಂಬದ್ಧವು ಎಂದರ್ಥ.– ಪುಣ್ಯಕ್ಕೆ, ಶಾಸ್ತ್ರವಿಹಿತವಾದ ಕರ್ಮಕ್ಕೆ (ಸಂಬದ್ಧವಾಗದ), ಹೀಗೆಯೇ ಪಾಪಕ್ಕೆ, ವಿಹಿತವಾದದ್ದನ್ನು ಮಾಡದಿರುವದು, ಪ್ರತಿಷಿದ್ಧವಾದದ್ದನ್ನು ಮಾಡುವದು ಎಂಬ (ಪಾಪಕ್ಕೆ ಅಸಂಬದ್ಧವಾದ ಎಂದರ್ಥ. ಇದು) ರೂಪಕ್ಕೆ ಸೇರಿದ (ವಿಶೇಷಣ)ವಾದ್ದರಿಂದ ನಪುಂಸಕಲಿಂಗವಾಗಿದೆ. 'ಅಭಯಂ ರೂಪಮ್' ಎಂದಲ್ಲವೆ, (ಹಿಂದಿನ ಕಂಡಿಕೆಯಿಂದ) ಅನುವೃತ್ತಿಯಾಗಿದೆ ?[1]

## ಸುಷುಪ್ತರೂಪವು ಕಾಮರಹಿತವಾದದ್ದು

(ಭಾಷ್ಯ)

೨೧೮. ಕಿಂ ಪುನರಸಂಬದ್ಧತ್ವೇ ಕಾರಣಮಿತಿ ? ತದ್ಧೇತುರುಚ್ಯತೇ । ತೀರ್ಣಃ ಅತಿಕ್ರಾನ್ತಃ ಹಿ ಯಸ್ಮಾತ್ ಏವಂರೂಪಃ ತದಾ ತಸ್ಮಿನ್ ಕಾಲೇ ಸರ್ವಾನ್ ಶೋಕಾನ್ । ಶೋಕಾಃ ಕಾಮಾಃ । ಇಷ್ಟವಿಷಯಪ್ರಾರ್ಥನಾ ಹಿ ತದ್ವಿಷಯವಿಯೋಗೇ ಶೋಕತ್ವಮಾಪದ್ಯತೇ । ಇಷ್ಟಂ ಹಿ ವಿಷಯಮ್ ಅಪ್ರಾಪ್ತಂ ವಿಯುಕ್ತಂ ಚ ಉದ್ದಿಶ್ಯ ಚಿನ್ತಯಾನಸ್ತದ್ಗುಣಾನ್ ಸಂತಪ್ಯತೇ ಪುರುಷಃ । ಅತಃ ಶೋಕಃ, ಅರತಿಃ[2], ಕಾಮಃ ಇತಿ ಪರ್ಯಾಯಾಃ । ಯಸ್ಮಾತ್ ಸರ್ವಕಾಮಾತೀತೋ ಹಿ ಅತ್ರ ಅಯಂ ಭವತಿ । "ನ ಕಂಚನ ಕಾಮಂ ಕಾಮಯತೇ" (೪-೩-೧೯) 'ಅತಿಚ್ಛನ್ದಾಃ' (೪-೩-೨೦) ಇತಿ ಹಿ

---

1. ಸುಷುಪ್ತರೂಪವು ಅವಿದ್ಯಾಕಾಮಕರ್ಮಗಳಿಗೆ ಸಂಬಂಧವಿಲ್ಲದ್ದು ಎಂಬ ಪ್ರಕೃತವಿಷಯವನ್ನು ಮುಂದುವರಿಸಿ ವಿವರಿಸುವದಕ್ಕೆ ಈ ಕಂಡಿಕೆ ಬಂದಿದೆ. ಈವರೆಗೆ ಆ ರೂಪದಲ್ಲಿ ಕರ್ಮದ ಸಂಬಂಧವಿಲ್ಲವೆಂಬುದನ್ನು ವಿವರಿಸಿ ಹೇಳಿದ್ದಾಯಿತು.

2. ಅಚ್ಚಿನಲ್ಲಿರುವ 'ರತಿಃ' ಎಂಬುದನ್ನು ಹೀಗೆಂದು ತಿದ್ದಿಕೊಂಡಿದೆ.

ಉಕ್ತಮ್। ತತ್ಪ್ರಕ್ರಿಯಾಪತಿತೋಽಯಂ ಶೋಕಶಬ್ದಃ ಕಾಮವಚನ ಏವ ಭವಿತುಮರ್ಹತಿ। ಕಾಮಶ್ಚ ಕರ್ಮಹೇತುಃ। ವಕ್ಷ್ಯತಿ ಹಿ "ಸ ಯಥಾಕಾಮೋ ಭವತಿ ತತ್ಕ್ರತುರ್ಭವತಿ ಯತ್ಕ್ರತುರ್ಭವತಿ ತತ್ಕರ್ಮ ಕುರುತೇ" (೪-೪-೫) ಇತಿ। ಅತಃ ಸರ್ವಕಾಮಾತಿತೀರ್ಣತ್ವಾತ್ ಯುಕ್ತಮುಕ್ತಮ್ 'ಅನನ್ವಾಗತಂ ಪುಣ್ಯೇನ' ಇತ್ಯಾದಿ ॥

(ಭಾಷ್ಯಾರ್ಥ)

(ಹೀಗೆ ಪಾಪಪುಣ್ಯಗಳ) ಸಂಬಂಧವಿಲ್ಲದಿರುವದಕ್ಕೆ ಕಾರಣವಾದರೂ ಏನು ? ಎಂದರೆ ಅದಕ್ಕೆ ಕಾರಣವನ್ನು (ಶ್ರುತಿ) ಹೇಳುತ್ತಿದೆ. (ಹಿ=ಯಸ್ಮಾತ್) ಏಕೆಂದರೆ ಇಂಥ ರೂಪದವನು : ಆಗ ಆ ಕಾಲದಲ್ಲಿ ಎಲ್ಲಾ ಶೋಕಗಳನ್ನೂ ದಾಟಿ(ರುತ್ತಾನೆ), ಮೀರಿ(ರುತ್ತಾನೆ). ಶೋಕಗಳೆಂದರೆ ಕಾಮಗಳು. ತನಗೆ ಇಷ್ಟವಾದ ವಿಷಯವನ್ನು ಬೇಕೆನ್ನುವದೇ ಅಲ್ಲವೆ, ಆ ವಿಷಯವು ಕೈಬಿಟ್ಟು ಹೋದರೆ ಶೋಕವಾಗಿ ಪರಿಣಮಿಸುತ್ತದೆ ? ಇಷ್ಟವಾದ ವಿಷಯವು ದೊರಕದಿದ್ದರೆ ಮತ್ತು ಕೈತಪ್ಪಿಹೋದರೆ (ಅವನ್ನು) ಕುರಿತು, ಅದರ ಗುಣಗಳನ್ನು ಚಿಂತಿಸಿಕೊಳ್ಳುತ್ತಾ- ಮನುಷ್ಯನು ಸಂತಪಿಸುತ್ತಿರುವನಲ್ಲವೆ ? "ಆದ್ದರಿಂದ ಶೋಕ, ಅರತಿ,[1] ಕಾಮ- ಎಂಬಿವು ಪರ್ಯಾಯ(ಶಬ್ದಗಳು). ಇಲ್ಲಿ ಇವನು (ಹೀಗೆ) ಸರ್ವಕಾಮಾತೀತನಾಗಿರುತ್ತಾನಷ್ಟೆ- "ಯಾವ ಕಾಮವನ್ನೂ ಕಾಮಿಸದಿರುವನೋ" (೪-೩-೧೯), "ಅತಿಚ್ಛಂದವಾದ" (೪-೩-೨೦) ಎಂದಲ್ಲವೆ, ಹಿಂದೆ ಹೇಳಿದೆ ? ಆ ಪ್ರಕರಣಕ್ಕೆ ಸೇರಿದ್ದಾದ್ದರಿಂದ ಈ ಶೋಕಶಬ್ದವು ಕಾಮವಾಚಕವೇ ಆಗಿರಬೇಕು. ಕಾಮವೇ ಕರ್ಮಕ್ಕೆ ಹೇತು. "ಅವನು ಎಂಥ ಕಾಮವುಳ್ಳವನಾಗಿರುತ್ತಾನೋ ಅಂಥ ಕ್ರತುವುಳ್ಳವನಾಗಿರುತ್ತಾನೆ,[2] ಎಂಥ ಕ್ರತುವುಳ್ಳವನಾಗಿರುತ್ತಾನೋ ಅಂಥ ಕರ್ಮವನ್ನು ಮಾಡುತ್ತಾನೆ" (೪-೪-೫) ಎಂದು ಮುಂದೆ ಹೇಳಲಾಗುವದಲ್ಲವೆ ? ಆದ್ದರಿಂದ ಎಲ್ಲಾ ಕಾಮಗಳನ್ನೂ ದಾಟಿರುವದರಿಂದ "ಪುಣ್ಯದಿಂದ ಅನುಗತವಾಗಿರುವದಿಲ್ಲ" ಎಂದು ಮುಂತಾಗಿ ಹೇಳಿರುವದು ಸರಿಯೇ (ಆಗಿದೆ).

## ಕಾಮವು ಹೃದಯಕ್ಕೆ ಸೇರಿದ್ದು

(ಭಾಷ್ಯ)

೨೧೯. ಹೃದಯಸ್ಯ। ಹೃದಯಮ್ ಇತಿ ಪುಣ್ಡರೀಕಾಕಾರೋ ಮಾಂಸಪಿಣ್ಡಃ। ತತ್ಸ್ಥಮ್ ಅನ್ತಃಕರಣಂ ಬುದ್ಧಿರ್ಹೃದಯಮ್ ಇತ್ಯುಚ್ಯತೇ।

1. ೩-೫-೧ (ಭಾ ಭಾ. ೫೫) ರಲ್ಲಿ ಶೋಕಶಬ್ದದ ವಿವರಣೆಯ ಭಾಷ್ಯವನ್ನು ನೋಡಿದರೆ 'ಅರತಿಃ'-ಎಂಬ ಪಾಠವೇ ಸರಿ ಎಂದು ಸ್ಪಷ್ಟವಾಗುತ್ತದೆ.

2 ನಿಶ್ಚಯವನ್ನು ಮಾಡಿಕೊಳ್ಳುತ್ತಾನೆ.

ತಾತ್ಸ್ಥ್ಯಾತ್ ಮಞ್ಚಕ್ರೋಶನವತ್ । ಹೃದಯಸ್ಯ ಬುದ್ಧೇಃ ಯೇ ಶೋಕಾಃ । ಬುದ್ಧಿಸಂಶ್ರಯಾ ಹಿ ತೇ । ಕಾಮಃ ಸಂಕಲ್ಪೋ ವಿಚಿಕಿತ್ಸಾ- ಇತ್ಯಾದಿ ಸರ್ವಂ ಮನ ಏವ (೧-೫-೩) ಇತ್ಯುಕ್ತತ್ವಾತ್ । ವಕ್ಷ್ಯತಿ ಚ "ಕಾಮಾ ಯೇಽಸ್ಯ ಹೃದಿ ಶ್ರಿತಾಃ" (೪-೪-೭) ಇತಿ । ಆತ್ಮಸಂಶ್ರಯಭ್ರಾನ್ತ್ಯಪನೋದಾಯ ಹಿ ಇದಂ ವಚನಮ್ 'ಹೃದಿ ಶ್ರಿತಾಃ', 'ಹೃದಯಸ್ಯ ಶೋಕಾಃ'[1] ಇತಿ ಚ । ಹೃದಯ ಕರಣಸಂಬನ್ಧಾತೀತಶ್ಚಾಯಮ್ ಅಸ್ಮಿನ್ ಕಾಲೇ । "ಅತಿಕ್ರಾಮತಿ ಮೃತ್ಯೋಃ ರೂಪಾಣಿ"(೪-೩-೭) ಇತಿ ಹಿ ಉಕ್ತಮ್ । ಹೃದಯಕರಣಸಂಬನ್ಧಾತೀತತ್ವಾತ್ ತತ್ಸಂಶ್ರಯಕಾಮಸಂಬನ್ಧಾತೀತೋ ಭವತೀತಿ ಯುಕ್ತತರಂ ವಚನಮ್ ॥

(ಭಾಷ್ಯಾರ್ಥ)

'ಹೃದಯದ' (ಶೋಕಗಳನ್ನು ಎಂಬುದರ ಅಭಿಪ್ರಾಯವಿದು) : ಹೃದಯ ವೆಂಬುದು ಕಮಲದಾಕಾರದ ಮಾಂಸದ ಮುದ್ದೆಯು. ಅದರಲ್ಲಿರುವ ಅಂತಃ ಕರಣವಾದ ಬುದ್ಧಿಯನ್ನು (ಇಲ್ಲಿ) ಹೃದಯವೆಂದಿದೆ. ಏಕೆಂದರೆ (ಬುದ್ಧಿಯು) ಆ (ಹೃದಯ)ದಲ್ಲಿದೆ ; 'ಮಂಚಿಕೆಗಳು ಕೂಗುತ್ತಿವೆ'[2] ಎಂಬಂತೆಯೇ (ಈ ಪ್ರಯೋಗವು). ಹೃದಯದ ಎಂದರೆ ಬುದ್ಧಿಯ ಶೋಕಗಳಿವೆಯಲ್ಲ (ಅವನ್ನು ದಾಟಿರುತ್ತಾನೆ ಎಂದರ್ಥ). ಆ (ಶೋಕಗಳು) ಬುದ್ಧಿಯನ್ನೇ ಆಶ್ರಯಿಸಿರು ತ್ತವೆ, ಏಕೆಂದರೆ ಕಾಮವು, ಸಂಕಲ್ಪವು, ಸಂಶಯವು ಮುಂತಾದದ್ದೆಲ್ಲವೂ ಮನಸ್ಸೇ ಎಂದು (೧-೫-೩) ಹಿಂದೆ ಹೇಳಿರುತ್ತದೆ. "ಇವನ ಹೃದಯವನ್ನು ಆಶ್ರಯಿಸಿರುವ ಕಾಮಗಳಿವೆಯಲ್ಲ," (೪-೪-೭) ಎಂದು ಮುಂದೆ ಹೇಳಿಯೂ ಇದೆ. (ಕಾಮಗಳು) ಆತ್ಮನನ್ನಾಶ್ರಯಿಸಿಕೊಂಡಿವೆ ಎಂಬ ಭ್ರಾಂತಿಯನ್ನು ಕಳೆಯುವದಕ್ಕಲ್ಲವೆ, 'ಹೃದಯವನ್ನಾಶ್ರಯಿಸಿರುವ (ಕಾಮಗಳು)', ಮತ್ತು 'ಹೃದಯದ ಶೋಕಗಳು' ಎಂಬೀ ವಚನವು (ಬಂದಿರುವದು) ? ಇದಲ್ಲದೆ ಈ (ಸುಷುಪ್ತಿ)ಕಾಲದಲ್ಲಿ ಇವನು ಹೃದಯವೆಂಬ ಕರಣದ ಸಂಬಂಧವನ್ನು ಮೀರಿರುತ್ತಾನೆ, 'ಮೃತ್ಯುವಿನ ರೂಪಗಳನ್ನು ಮೀರಿರುತ್ತಾನೆ' (೪-೩-೭) ಎಂದಲ್ಲವೆ, ಹಿಂದೆ ಹೇಳಿದೆ ? (ಹೀಗೆ) ಹೃದಯವೆಂಬ ಕರಣದ ಸಂಬಂಧವನ್ನು ಮೀರಿರುವದರಿಂದ ಅದನ್ನಾಶ್ರಯಿಸಿಕೊಂಡಿರುವ ಕಾಮಗಳ ಸಂಬಂಧವನ್ನು ಮೀರಿರುವನಾಗುತ್ತಾನೆ ಎಂಬ ವಚನವು ಯುಕ್ತತರವಾಗುತ್ತದೆ[3].

---

1. ಇದು ಶೋಕಾನ್ ಎಂದಿರಬೇಕೆಂದು ತೋರುತ್ತದೆ.

2. ಮಂಚಿಕೆಗಳ ಮೇಲಿರುವವರು ಹಕ್ಕಿ, ದನ- ಮುಂತಾದವುಗಳನ್ನು ಹೆದರಿಸು ವದಕ್ಕೆ ಕೂಗುತ್ತಿರುವಲ್ಲಿ ಮಂಚಿಕೆಗಳು ಕೂಗುತ್ತವೆ ಎಂಬಂತೆ ಹೃದಯದಲ್ಲಿರುವ ಬುದ್ಧಿಯು ಎಂಬರ್ಥದಲ್ಲಿ ಹೃದಯವು ಎಂದಿದೆ.

3. ಹೃದಯದ ಸಂಬಂಧವೇ ಇಲ್ಲದಿರುವಲ್ಲಿ ಹೃದಯದಲ್ಲಿರುವ ಕಾಮವೆಲ್ಲಿಂದ ಬಂದೀತು ? -ಎಂದು ಹೇಳುವದು ಯುಕ್ತತರ; ಆತ್ಮದಲ್ಲಿದ್ದರೆ ಹಾಗೆ ಹೇಳುವದು ಯುಕ್ತವೇ ಆಗುವದಿಲ್ಲ.

# ಕಾಮವು ಆತ್ಮಾಶ್ರಿತವೆಂಬ ಭರ್ತೃಪ್ರಪಂಚಮತದ ಚರ್ಚೆ

## ಭರ್ತೃಪ್ರಪಂಚರ ಮತವು ಶ್ರುತಿವಿರುದ್ಧ

(ಭಾಷ್ಯ)

೨೨೦. ಯೇ ತು ವಾದಿನಃ ಹೃದಿ ಶ್ರಿತಾಃ ಕಾಮಾ ವಾಸನಾಶ್ಚ ಹೃದಯ ಸಂಬನ್ಧಿನಮ್ ಆತ್ಮಾನಮ್ ಉಪಸೃಪ್ಯ ಉಪಶ್ಲಿಷ್ಯನ್ತಿ, ಹೃದಯವಿಯೋಗೇಽಪಿ ಚ ಆತ್ಮನಿ ಅವತಿಷ್ಠನ್ತೇ ಪುಟತೈಲಸ್ಥ ಇವ ಪುಷ್ಪಾದಿಗನ್ಧಃ ಇತ್ಯಾಚಕ್ಷತೇ, ತೇಷಾಂ "ಕಾಮಃ ಸಂಕಲ್ಪೋ ..."(೧-೫-೩), "ಹೃದಯೇ ಹ್ಯೇವ ರೂಪಾಣಿ" (೩-೯-೨೦), "ಹೃದಯಸ್ಯ ಶೋಕಾಃ" ಇತ್ಯಾದೀನಾಂ ವಚನಾನಾಮ್ ಆನರ್ಥಕ್ಯಮೇವ । ಹೃದಯಕರಣೋತ್ಪಾದ್ಯತ್ವಾತ್ ಇತಿ ಚೇತ್ । ನ । "ಹೃದಿ ಶ್ರಿತಾಃ" (೪-೪-೭) ಇತಿ ವಿಶೇಷಣಾತ್ । ನ ಹಿ ಹೃದಯಸ್ಯ ಕರಣ ಮಾತ್ರತ್ವೇ 'ಹೃದಿ ಶ್ರಿತಾಃ' ಇತಿ ವಚನಂ ಸಮಞ್ಜಸಮ್, "ಹೃದಯೇ ಹ್ಯೇವ ರೂಪಾಣಿ ಪ್ರತಿಷ್ಠಿತಾನಿ" (೩-೯-೨೦) ಇತಿ ಚ । ಆತ್ಮವಿಶುದ್ಧೇಶ್ಚ ವಿವಕ್ಷಿತ ತ್ವಾತ್ ಹೃಚ್ಛ್ರಯಣವಚನಂ ಯಥಾರ್ಥಮೇವ ಯುಕ್ತಮ್ । 'ಧ್ಯಾಯತೀವ ಲೇಲಾಯತೀವ' (೪-೩-೭) ಇತಿ ಶ್ರುತೇರನ್ಯಾರ್ಥಾಸಂಭವಾತ್ । 'ಕಾಮಾ ಯೇಽಸ್ಯ ಹೃದಿ ಶ್ರಿತಾಃ' ಇತಿ ವಿಶೇಷಣಾತ್ ಆತ್ಮಾಶ್ರಯಾ ಅಪಿ ಸನ್ತಿ ಇತಿ ಚೇತ್ । ನ । ಅನಾಶ್ರಿತಾಪೇಕ್ಷತ್ವಾತ್ । ನಾತ್ರ ಆಶ್ರಯಾನ್ತರಮ್ ಅಪೇಕ್ಷ್ಯ ಯೇ ಹೃದಿ ಇತಿ ವಿಶೇಷಣಮ್, ಕಿಂ ತರ್ಹಿ ಯೇ ಹೃದ್ಯನಾಶ್ರಿತಾಃ, ಕಾಮಾಃ ತಾನ್ ಅಪೇಕ್ಷ್ಯ ವಿಶೇಷಣಮ್ । ಯೇ ತು ಅಪ್ರರೂಢಾಃ ಭವಿಷ್ಯನ್ತೋ[1] ಭೂತಾಶ್ಚ ಪ್ರತಿಪಕ್ಷತೋ ನಿವೃತ್ತಾಃ ತೈ ನೈವ ಹೃದಿ ಶ್ರಿತಾಃ । ಸಂಭಾವ್ಯನ್ತೇ ಚ ತೇ । ಅತೋ ಯುಕ್ತಂ ತಾನಪೇಕ್ಷ್ಯ ವಿಶೇಷಣಮ್ ಯೇ ಪ್ರರೂಢಾ ವರ್ತಮಾನಾ ಹೃದಯೇ[2] ತೇ ಸರ್ವೇ ಪ್ರಮುಚ್ಯನ್ತೇ ಇತಿ । ತಥಾಪಿ ವಿಶೇಷಣಾನರ್ಥಕ್ಯಮ್ ಇತಿ ಚೇತ್ । ನ । ತೇಷು ಯತ್ನಾಧಿಕ್ಯಾತ್ ಹೇಯಾರ್ಥತ್ವಾತ್ । ಇತರಥಾ ಅಶ್ರುತಮ್ ಅನಿಷ್ಟಂ ಚ ಕಲ್ಪಿತಂ ಸ್ಯಾತ್ ಆತ್ಮಾಶ್ರಯತ್ವಂ ಕಾಮಾನಾಮ್ । "ನ ಕಂಚನ ಕಾಮಂ ಕಾಮಯತೇ" (೪-೩-೧೯) ಇತಿ ಪ್ರಾಪ್ತಪ್ರತಿಷೇಧಾತ್ ಆತ್ಮಾಶ್ರಯತ್ವಂ ಕಾಮಾನಾಂ ಶ್ರುತ ಮೇವೇತಿ ಚೇತ್ । ನ । "ಸಧೀಃ ಸ್ವಪ್ನೋ ಭೂತ್ವಾ" (೪-೩-೭) ಇತಿ ಪರನಿಮಿತ್ತತ್ವಾತ್ ಕಾಮಾಶ್ರಯತ್ವಪ್ರಾಪ್ತೇಃ । ಅಸಙ್ಗವಚನಾಚ್ಚ । ನ ಹಿ ಕಾಮಾಶ್ರಯತ್ವೇ ಅಸಙ್ಗವಚನಮ್ ಉಪಪದ್ಯತೇ । ಸಙ್ಗಶ್ಚ ಕಾಮಃ

1. 'ಭವಿಷ್ಯಾಃ' ಎಂದು ಆ॥ ಪಾಠ.
2. ವಿಷಯೇ ಎಂಬ ಅಚ್ಚಿನ ಪಾಠವನ್ನು ಹೀಗೆ ತಿದ್ದಿಕೊಂಡಿದೆ.

ಇತ್ಯವೋಚಾಮ । "ಆತ್ಮಕಾಮಃ"[1] (೪-೩-೨೧) ಇತಿ ಶ್ರುತೇಃ ಆತ್ಮ ವಿಷಯೋಽಸ್ಯ ಕಾಮೋ ಭವತಿ ಇತಿ ಚೇತ್ । ನ ವ್ಯತಿರಿಕ್ತಕಾಮಾಭಾವಾರ್ಥ ತ್ವಾತ್ ತಸ್ಯಾಃ ॥

(ಭಾಷ್ಯಾರ್ಥ)

ಆದರೆ ಯಾವ ವಾದಿಗಳು ಹೃದಯದಲ್ಲಿ ಆಶ್ರಯಿಸಿಕೊಂಡಿರುವ ಕಾಮ ಗಳೂ ವಾಸನೆಗಳೂ ಹೃದಯಕ್ಕೆ ಸಂಬದ್ಧನಾಗಿರುವ ಆತ್ಮನ ಬಳಿಗೆ ಬಂದು (ಅವನಿಗೆ) ಅಂಟಿಕೊಳ್ಳುತ್ತವೆ, ಹೃದಯವನ್ನು ಬಿಟ್ಟಗಲಿದವೇಲೂ ಹೂವು ಮುಂತಾದವುಗಳ ವಾಸನೆಯು ಪುಟಿಕೆಯಲ್ಲೂ ತೈಲದಲ್ಲಿಯೂ ಇರುವಂತೆ ಆತ್ಮ ನಲ್ಲಿ ನಿಂತುಕೊಂಡಿರುತ್ತವೆ[2]- ಎಂದು ಹೇಳುತ್ತಾರೋ ಅವರಿಗೆ "ಕಾಮವು, ಸಂಕಲ್ಪವು (ಮುಂತಾದದ್ದೆಲ್ಲವೂ ಮನಸ್ಸೇ)" (೧-೫-೩) "ಹೃದಯದಲ್ಲಲ್ಲವೆ, ರೂಪಗಳು (ಪ್ರತಿಷ್ಠಿತವಾಗಿರುತ್ತವೆ) ?" (೩-೯-೨೦), "ಹೃದಯದ ಶೋಕ ಗಳು"- ಎಂಬಿವೇ ಮುಂತಾದ ವಚನಗಳು ವ್ಯರ್ಥವೇ (ಆಗುವವು)[3].

(ಭರ್ತೃಪ್ರಪಂಚರ ಆಕ್ಷೇಪ):- ಹೃದಯವೆಂಬ ಕರಣದಿಂದ (ಕಾಮವು) ಉಂಟಾಗುವದರಿಂದ (ಈ ವಚನಗಳು) ಸಾರ್ಥಕವಾಗಿವೆ[4]. ಎಂದರೆ ?

(ಸಿದ್ಧಾಂತಿ) :- ಹಾಗಲ್ಲ. ಏಕೆಂದರೆ 'ಹೃದಯದಲ್ಲಿ ಆಶ್ರಯಿಸಿಕೊಂಡಿ ರುವ" (೪-೪-೭) ಎಂಬ ವಿಶೇಷಣವಿದೆ , ಹೃದಯವು ಬರಿಯ ಕರಣವಾಗಿ ದ್ದರೆ 'ಹೃದಯದಲ್ಲಿ ಆಶ್ರಯಿಸಿಕೊಂಡಿರುವ' ಎಂಬ ವಚನವು ಸಮಂಜಸ ವಾಗಲಾರದಷ್ಟೆ ? "ಹೃದಯದಲ್ಲಿಯೇ ಅಲ್ಲವೆ, ರೂಪಗಳು ಪ್ರತಿಷ್ಠಿತವಾಗಿರು ತ್ತವೆ" (೩-೯-೨೦) ಎಂಬುದೂ (ಸಮಂಜಸವಾಗಲಾರದಷ್ಟೆ?[5] ಇದಲ್ಲದೆ (ಇಲ್ಲಿ)

---

1. 'ಆತ್ಮಕಾಮಮ್' ಎಂದಿದ್ದರೆ ಚೆನ್ನಾಗಿರುವದು; ಇಲ್ಲದಿದ್ದರೆ ಶ್ರುತಿಯ ಅರ್ಥ ವಿದೆಂದು ಹೇಳಬೇಕಾಗುವದು.

2. ಇದು ಭರ್ತೃಪ್ರಪಂಚರ ಮತ. ಈ ಮತವನ್ನು ೨-೩-೬ (ಭಾ.ಭಾ. ೩೪೩) ರಲ್ಲಿ ಅನುವಾದಮಾಡಿಕೊಂಡು (ಭಾ. ಭಾ. ೩೪೪ರಲ್ಲಿ) ಖಂಡಿಸಿರುವದನ್ನು ನೋಡಿ.

3. ಇವೆಲ್ಲವೂ ಕಾಮಗಳಿಗೆ ಹೃದಯವೇ ಆಶ್ರಯವೆಂದು ಸಾರುತ್ತಿವೆ. ಹೃದಯಸ್ಯ ಶೋಕಾನ್ ಎಂದು ಭಾಷ್ಯಮೂಲವಿದ್ದರೆ ಶೋಕಗಳನ್ನು ಎಂದು ತಿದ್ದಿಕೊಳ್ಳಬೇಕು. ಆಗ 'ಸರ್ವಾಞ್ಛೋಕಾನ್ ಹೃದಯಸ್ಯ' ಎಂಬಿದರ ಪರಾಮರ್ಶವೆಂದು ಸ್ಫುಟವಾಗುತ್ತದೆ.

4. ಆತ್ಮನಲ್ಲಿ ಅವು ಇರುವದಿಲ್ಲ ಎಂಬುದೇನೂ ಇಲ್ಲ, ಹೃದಯದಿಂದ ಉಂಟಾಗಿ ಬಂದು ಆತ್ಮನಲ್ಲಿರುತ್ತವೆ.

5. ಹೃದಯದಿಂದುಂಟಾಗುವದಾದರೆ ಆಶ್ರಯಿಸಿಕೊಂಡಿರುವ ಎಂಬ ವಿಶೇಷಣವು ಹೊಂದುವದಿಲ್ಲ. ಹೃದಯದಿಂದ ಉಂಟಾಗಿರುವ ಎಂದು ಶ್ರುತಿ ಇರಬೇಕಾಗುವದು. ಆತ್ಮನಲ್ಲಿಯೂ ಇದ್ದರೆ 'ಹೃದಯದಲ್ಲಿಯೇ' ಎಂಬ ಅವಧಾರಣೆಯು ಹೊಂದಲಾರದು. 'ಆತ್ಮನನ್ನು ಆಶ್ರಯಿಸಿಕೊಂಡಿರುವ' ಎಂದು ಶ್ರುತಿಯಿರಬೇಕಾಗುವದು.

ಆತ್ಮವಿಶುದ್ಧಿಯನ್ನು ಹೇಳಬೇಕೆಂದಿರುವದರಿಂದಲೂ (ಕಾಮವು) ಹೃದಯ ವನ್ನು ಆಶ್ರಯಿಸಿದೆ ಎಂಬ ವಚನವು ನಿಜವಾದ (ಅಕ್ಷರಾ)ರ್ಥವನ್ನೇ (ತಿಳಿಸು ತ್ತದೆ) ಎನ್ನುವದು ಯುಕ್ತವು[1]. "ಧ್ಯಾನಮಾಡುವವನಂತೆಯೂ ಸಂಚರಿಸುವವ ನಂತೆಯೂ (ಇರುತ್ತಾನೆ)" (೪-೩-೭) ಎಂಬ ಶ್ರುತಿಗೆ ಮತ್ತೊಂದು ಅರ್ಥವು ಆಗುವಂತಿಲ್ಲವಾದ್ದರಿಂದಲೂ (ಹೀಗೆಂದು ಒಪ್ಪಬೇಕು)[2].

(ಭರ್ತೃಪ್ರಪಂಚ) :- "ಇವನ ಹೃದಯದಲ್ಲಿ ಆಶ್ರಯಿಸಿಕೊಂಡಿರುವ ಕಾಮಗಳು" (೪-೪-೭) ಎಂಬ ವಿಶೇಷಣವಿರುವದರಿಂದ ಆತ್ಮನನ್ನಾಶ್ರಯಿಸಿ ಕೊಂಡಿರುವ (ಕಾಮ)ಗಳೂ ಇವೆ (ಎಂದಾಗುತ್ತದೆ)[3].

(ಸಿದ್ಧಾಂತಿ):- ಹಾಗಲ್ಲ, ಏಕೆಂದರೆ ಆಶ್ರಯಿಸಿಲ್ಲದ (ಕಾಮಗಳ) ಅಪೇಕ್ಷೆ ಯಿಂದ (ಹೀಗೆಂದು ಹೇಳಿದೆ. ಇದರ ವಿವರ): "ಹೃದಯದಲ್ಲಿ (ಆಶ್ರಯಿಸಿ) ರುವವಲ್ಲ" ಎಂದು ಹೇಳಿರುವ ವಿಶೇಷಣವು ಮತ್ತೊಂದು ಆಶ್ರಯವನ್ನು ಅಪೇ ಕ್ಷಿಸಿ (ಹೇಳಿದ್ದಲ್ಲ) ; ಮತ್ತೇನೆಂದರೆ ಹೃದಯದಲ್ಲಿ ಆಶ್ರಯಿಸಿಕೊಂಡಿಲ್ಲವಲ್ಲ, ಆ ಕಾಮಗಳ ಅಪೇಕ್ಷೆಯಿಂದ (ಹೇಳಿದ) ವಿಶೇಷಣ(ವದು). ಬೆಳೆದುಕೊಳ್ಳದೆ ಇರುವ, ಮುಂದೆ ಆಗಲಿರುವ ಮತ್ತು ಹಿಂದೆ ಆಗಿಹೋಗಿರುವ, ಪ್ರತಿಪಕ್ಷತ್ವ ವನ್ನು ನೀಗಿಕೊಂಡಿರುವವಲ್ಲ[4], ಅವು ಹೃದಯದಲ್ಲಿ ಆಶ್ರಯಿಸಿಕೊಂಡಿರು ವದೇ ಇಲ್ಲ. ಅವೂ ಸಂಭಾವಿತವಾದ (ಕಾಮಗಳೇ), ಆದ್ದರಿಂದ ಅವುಗಳ ಅಪೇಕ್ಷೆಯಿಂದ "ಯಾವವು ಬೆಳೆದುಕೊಂಡು ಹೃದಯದಲ್ಲಿ ಈಗ ಇದ್ದು ಕೊಂಡಿರುವವೋ ಅವೆಲ್ಲವೂ (ಯಾವಾಗ) ಬಿಡುಗಡೆಯಾಗುವವೋ" ಎಂದು ವಿಶೇಷಣವನ್ನು (ಹಾಕುವದು) ಯುಕ್ತವೇ (ಆಗಿರುತ್ತದೆ).

---

1. ಹೃದಯದ ಮೂಲಕವಾಗಿ ಬಂದು ಆತ್ಮನಲ್ಲಿಯೂ ಅಂಟಿಕೊಳ್ಳುವದೇ ನಿಜ ವಾದರೆ ಈ ಪ್ರಕರಣದಲ್ಲಿ ಆತ್ಮನು ವಿಶುದ್ಧನೆಂಬುದನ್ನು ಗೊತ್ತುಪಡಿಸಿದಂತೆ ಆಗುವದೇ ಇಲ್ಲ.

2. ಬುದ್ಧಿಯ ಸಾದೃಶ್ಯದಿಂದ ಆತ್ಮನು ಯೋಚಿಸುವಂತಿರುತ್ತಾನೆ, ಕೆಲಸಮಾಡು ವಂತಿರುತ್ತಾನೆ ಎಂದು ಈ ಶ್ರುತಿಯಲ್ಲಿ ತಾತ್ಪರ್ಯದಿಂದ ಹೇಳಿದೆ ; ಈ ವಚನಕ್ಕೆ ಆತ್ಮನಲ್ಲಿ ಯೂ ಕಾಮಕರ್ಮಗಳಿರುವವೆಂದು ಅರ್ಥಮಾಡುವದಕ್ಕಾಗುವದೇ ಇಲ್ಲ.

3. ಹೃದಯದಲ್ಲಿ ಆಶ್ರಯಿಸಿರುವ ಕಾಮಗಳು, ಹೃದಯದ ಮೂಲಕ ಆತ್ಮನನ್ನಾ ಶ್ರಯಿಸಿಕೊಂಡಿರುವ ಕಾಮಗಳು-ಎಂದು ಕಾಮಗಳು ಎರಡು ವಿಧವೆಂಬುದನ್ನು 'ಹೃದಿ' ಎಂಬ ವಿಶೇಷಣವು ಸೂಚಿಸುತ್ತದೆ ಎಂದು ಭಾವ.

4. ವರ್ತಮಾನಕಾಮಗಳೇ ನಮಗೆ ಪ್ರತಿಪಕ್ಷವಾಗಿರುತ್ತವೆ; ಭೂತಭವಿಷ್ಯತ್ಕಾಮ ಗಳಲ್ಲ. ಪ್ರತಿಪಕ್ಷತಃ ಎಂದರೆ ವಿಷಯದೋಷದರ್ಶನದಿಂದ ಎಂಬ ಟೀಕೆಗಿಂತ ನಮ್ಮ ವ್ಯಾಖ್ಯಾನವೇ ಮೇಲೆಂದು ತೋರುತ್ತದೆ, ಏಕೆಂದರೆ ಹೇಗೆ ಹೋಗಿದ್ದರೂ ಕಾಮಗಳು ಹೋಗಿಯೇ ಇರುತ್ತವೆ.

(ಭರ್ತೃಪ್ರಪಂಚ) :- ಹೀಗಾದರೂ (ಈ) ವಿಶೇಷಣವು ವ್ಯರ್ಥವೇ[1] (ಆಗುವದಲ್ಲ) !

(ಸಿದ್ಧಾಂತಿ) :- ಹಾಗಲ್ಲ. ಏಕೆಂದರೆ ಹೆಚ್ಚಿನ ಪ್ರಯತ್ನದಿಂದ ಅವುಗಳನ್ನು ಬಿಡಬೇಕು ಎಂಬುದಕ್ಕಾಗಿ (ವಿಶೇಷಣವು ಬೇಕಾಗಿದೆ). ಹೀಗಲ್ಲದಿದ್ದರೆ[2] ಶ್ರುತಿಯಲ್ಲಿ ಹೇಳದ, ಅನಿಷ್ಟವೂ ಆಗಿರುವ, ಕಾಮಗಳು ಆತ್ಮನನ್ನಾಶ್ರಯಿಸಿವೆ ಎಂಬುದನ್ನು ಕಲ್ಪಿಸಿದಂತೆ ಆಗುವದು.

(ಭರ್ತೃಪ್ರಪಂಚ):- 'ಯಾವ ಕಾಮವನ್ನು ಕಾಮಿಸುವದಿಲ್ಲವೋ' (೪-೩-೧೯) ಎಂದು ಬಂದೊದಗಿದ (ಕಾಮವನ್ನೇ) ಇಲ್ಲವೆಂದಿರುವದರಿಂದ ಕಾಮಗಳು ಆತ್ಮಾಶ್ರಯವೆಂಬುದು ಶ್ರುತಿಯಲ್ಲಿ ಹೇಳಿದ್ದೇ[3].

(ಸಿದ್ಧಾಂತಿ):- ಹಾಗಲ್ಲ. "ಬುದ್ಧಿಯಿಂದೊಡಗೂಡಿ ಸ್ವಪ್ನವಾಗಿ" (೪-೩-೭) ಎಂದು ಮತ್ತೊಂದು (ಉಪಾಧಿಯ) ನಿಮಿತ್ತದಿಂದಲೇ ಕಾಮವು ಬಂದೊದಗಿರುತ್ತದೆ[4]. ಅಸಂಗನೆಂದು (೪-೩-೧೫) ಹೇಳಿರುವದರಿಂದಲೂ (ಹೀಗೆಂದು ಒಪ್ಪಬೇಕು), ಕಾಮಗಳಿಗೆ ಆಶ್ರಯನಾಗಿದ್ದರೆ (ಆತ್ಮನು) ಅಸಂಗನೆಂಬುದು ಹೊಂದಲಾರದಷ್ಟೆ. ಸಂಗವೆಂದರೆ ಕಾಮವೇ ಎಂದು ಹಿಂದೆ (೪-೩-೧೬) ಹೇಳಿಯೂ ಇರುತ್ತೇವೆ.

(ಭರ್ತೃಪ್ರಪಂಚ):- 'ಆತ್ಮಕಾಮ' (೪-೩-೨೧) ಎಂದು ಶ್ರುತಿಯಿರುವದರಿಂದ ಇವನಿಗೆ ಆತ್ಮವಿಷಯವಾದ ಕಾಮವಿರುತ್ತದೆ ಎಂದರೋ[5] ?

---

1. ಹೃದಯವನ್ನಾಶ್ರಯಿಸಿರುವ ಕಾಮಗಳು ವರ್ತಮಾನಕಾಮಗಳಾದರೆ ತಾನೆ ಏನು ? ಇದನ್ನೇಕೆ ಶ್ರುತಿ ಹೇಳಬೇಕು ?_ ಎಂದು ಆಕ್ಷೇಪ.

2. ಕಾಮಕ್ಕೆ ಆಶ್ರಯಾಂತರವನ್ನೇ ಒಪ್ಪಬೇಕೆಂಬ ಪಕ್ಷದಲ್ಲಿ ಎಂದರ್ಥ.

3. ಶ್ರುತಿಯಲ್ಲಿ ಹೇಳದೆ ಇರುವದನ್ನು ನಾವು ಕಲ್ಪಿಸಿಲ್ಲ; ಏಕೆಂದರೆ ಜಾಗ್ರತ್ಸ್ವಪ್ನಗಳಲ್ಲಿ ಆತ್ಮನಿಗೆ ಕಾಮವಿರುತ್ತದೆಯಲ್ಲ, ಅದು ಸುಷುಪ್ತಿಯಲ್ಲಿರುವದಿಲ್ಲ ಎಂದು ಶ್ರುತಿಯು ಅಲ್ಲಗಳೆದಿದೆ.

4. ಸ್ವಪ್ನದಲ್ಲಿ ಬುದ್ಧಿ ಎಂಬ ಉಪಾಧಿಯಿಂದ ಕಾಮವು ತೋರುತ್ತದೆ ಎಂದು ಶ್ರುತಿಯು ಹೇಳಿದೆ. ಆದ್ದರಿಂದ ಆತ್ಮನಿಗೆ ಎಲ್ಲಿಯೂ ಸ್ವತಃ ಕಾಮವಿರುವದಿಲ್ಲ. ಆದ್ದರಿಂದ ನೀವು ಶ್ರುತಿಯಲ್ಲಿ ಹೇಳದಿರುವದನ್ನೇ ಕಲ್ಪಿಸಿದಂತಾಯಿತು ಎಂದು ಭಾವ. ಇಲ್ಲಿ ಉದಾಹರಿಸಿರುವ 'ಸಧೀಃ' ಎಂಬುದು 'ಸ ಹಿ' ಎಂಬುದಕ್ಕೆ ಬದಲಾಗಿರುವ ಮಾಧ್ಯಂದಿನಪಾಠ.

5. ಸುಷುಪ್ತಾತ್ಮನ ರೂಪವು 'ಆತ್ಮಕಾಮವಾಗಿರುತ್ತದೆ' ಎಂದು ಶ್ರುತಿಯಲ್ಲಿದೆ; ಆದ್ದರಿಂದ ಮತ್ತೊಂದು ವಿಷಯದ ಕಾಮವಿಲ್ಲದಿದ್ದರೂ ಆತ್ಮವಿಷಯಕಕಾಮವುಂಟೆಂದಾಯಿತು.

(ಸಿದ್ಧಾಂತಿ):- ಹಾಗಲ್ಲ. ಏಕೆಂದರೆ ಆ (ಶ್ರುತಿಗೆ) ಮತ್ತೊಂದು ಕಾಮ ವಿಲ್ಲವೆಂದು ಅರ್ಥ[1].

## ವೈಶೇಷಿಕಾದಿಗಳ ತರ್ಕವು ತರ್ಕಾಭಾಸಮಾತ್ರ

(ಭಾಷ್ಯ)

೨೨೧. ವೈಶೇಷಿಕಾದಿತನ್ತ್ರನ್ಯಾಯೋಪಪನ್ನಮ್ ಆತ್ಮನಃ ಕಾಮಾದ್ಯಾಶ್ರಯತ್ವಮ್ ಇತಿ ಚೇತ್ । ನ । "ಹೃದಿ ಶ್ರಿತಾಃ" (೪-೪-೭) ಇತ್ಯಾದಿವಿಶೇಷಶ್ರುತಿವಿರೋಧಾತ್ ಅನಪೇಕ್ಷ್ಯಾಃ ತಾ ವೈಶೇಷಿಕಾದಿತನ್ತ್ರೋಪಪತ್ತಯಃ । ಶ್ರುತಿವಿರೋಧೇ ನ್ಯಾಯಾಭಾಸತ್ವೋಪಗಮಾತ್ । ಸ್ವಯಂಜ್ಯೋತಿಷ್ಟ್ವಬಾಧನಾಚ್ಚ । ಕಾಮಾದೀನಾಂ ಚ ಸ್ವಪ್ನೇ ಕೇವಲದೃಶಿಮಾತ್ರವಿಷಯತ್ವಾತ್ ಸ್ವಯಂಜ್ಯೋತಿಷ್ಟ್ವಂ ಸಿದ್ಧಂ ಸ್ಥಿತಂ ಚ ಬಾಧ್ಯೇತ । ಆತ್ಮಸಮವಾಯಿತ್ವೇ ದೃಶ್ಯತ್ವಾನುಪಪತ್ತೇಃ ಚಕ್ಷುರ್ಗತವಿಶೇಷವತ್ । ದ್ರಷ್ಟುರ್ಹಿ ದೃಶ್ಯಮ್ ಅರ್ಥಾನ್ತರಭೂತಮ್ ಇತಿ ದ್ರಷ್ಟುಃ ಸ್ವಯಂಜ್ಯೋತಿಷ್ಟ್ವಂ ಸಿದ್ಧಮ್ । ತದ್ ಬಾಧಿತಂ ಸ್ಯಾತ್ ಯದಿ ಕಾಮಾದ್ಯಾಶ್ರಯತ್ವಂ ಪರಿಕಲ್ಪ್ಯೇತ ॥

(ಭಾಷ್ಯಾರ್ಥ)

(ಭರ್ತೃಪ್ರಪಂಚ) :- ವೈಶೇಷಿಕಾದಿಗಳ ಶಾಸ್ತ್ರ(ದಲ್ಲಿರುವ) ಯುಕ್ತಿಗಳಿಂದ ಆತ್ಮನು ಕಾಮಾದಿಗಳಿಗೆ ಆಶ್ರಯನಾಗಿರುವನೆಂಬುದು ಹೊಂದುತ್ತದೆಯಲ್ಲ !

(ಸಿದ್ಧಾಂತಿ) :- ಹಾಗಲ್ಲ "ಹೃದಯದಲ್ಲಿ ಆಶ್ರಯಿಸಿಕೊಂಡಿರುವ (ಕಾಮಗಳು)" (೪-೪-೭) ಎಂಬುದೇ ಮುಂತಾದ ವಿಶೇಷ(ರೂಪದ)[2] ಶ್ರುತಿಗಳಿಗೆ ವಿರುದ್ಧವಾಗಿರುವದರಿಂದ ಆ ವೈಶೇಷಿಕರೇ ಮುಂತಾದವರ ಶಾಸ್ತ್ರದ ಯುಕ್ತಿಗಳನ್ನು ಆದರಿಸತಕ್ಕದ್ದಲ್ಲ. ಏಕೆಂದರೆ (ಅವು) ಶ್ರುತಿಗೆ ವಿರುದ್ಧವಾಗಿರುವದರಿಂದ ಯುಕ್ತ್ಯಾಭಾಸವೇ ಎಂದು ಒಪ್ಪಬೇಕಾಗುತ್ತದೆ. ಸ್ವಯಂಜ್ಯೋತಿಷ್ಟ್ವವನ್ನು ಬಾಧಿಸುವದರಿಂದಲೂ (ಅವು ಯುಕ್ತ್ಯಾಭಾಸಗಳೇ. ಹೇಗೆಂದರೆ) ಕಾಮವೇ ಮುಂತಾದವುಗಳು ಸ್ವಪ್ನದಲ್ಲಿ ಬರಿಯ ದೃಗ್ರೂಪ(ನಾದ ಆತ್ಮನಿಗೆ) ವಿಷಯ

---

1. 'ಆತ್ಮಕಾಮವು' ಎಂದರೆ ಆತ್ಮನೇ ಕಾಮಗಳಾಗಿರುವದು. ಆತ್ಮನಿಗಿಂತ ವ್ಯತಿರಿಕ್ತವಾದ ಕಾಮಗಳು ಇರುವದೇ ಇಲ್ಲವೆಂಬುದು ಶ್ರುತಿಯ ಅರ್ಥ. ಸುಷುಪ್ತಿಯಲ್ಲಿ ಆತ್ಮವಿಷಯದ ಕಾಮವಿರುವದು ಯಾರ ಅನುಭವದಲ್ಲಿಯೂ ಇಲ್ಲ.

2. ಹೃದಯಕ್ಕೇ ಕಾಮಾದಿಗಳು ಸೇರಿವೆ ಎಂದು ವಿಶೇಷವನ್ನು ಪ್ರಮಾಣಭೂತವಾದ ಶ್ರುತಿಯು ಹೇಳುತ್ತಿರುವಲ್ಲಿ 'ಕಾಮಾದಿಗಳಿಗೆ ಯಾವದಾದರೊಂದು ಆಶ್ರಯವಿರಬೇಕು' ಎಂಬ ಸಾಮಾನ್ಯರೂಪವಾದ ಯುಕ್ತಿಯು ಆತ್ಮನಲ್ಲಿ ಕಾಮವಿದೆ ಎಂಬುದಕ್ಕೆ ಆಧಾರವಾಗಲಾರದು.

ವಾಗಿರುವದರಿಂದ ಸ್ವಯಂಜ್ಯೋತಿಷ್ಟ್ವವು ಸಿದ್ಧವಾಗಿ ನಿಂತಿರುತ್ತದೆ[1] (ಯಿಲ್ಲ, ಆದು) ಬಾಧಿತವಾಗಬೇಕಾಗುತ್ತದೆ.

ಏಕೆಂದರೆ ಆತ್ಮಸಂಬದ್ಧವಾಗಿದ್ದರೆ (ಅದು) ದೃಶ್ಯವಾಗುವದು ಹೊಂದುವದೇ ಇಲ್ಲ; (ಉದಾಹರಣೆಗೆ) ಚಕ್ಷುಸ್ಸಿನಲ್ಲಿರುವ ವಿಶೇಷವು (ಹೇಗೆ ಅದಕ್ಕೇ ದೃಶ್ಯವಾಗಲಾರದೋ) ಹಾಗೆ[2]. ದ್ರಷ್ಟೃವಿಗೆ ದೃಶ್ಯವು ಬೇರೆಯಾದ ಪದಾರ್ಥವಾಗಿರುತ್ತದೆಯಾದ್ದರಿಂದ ದ್ರಷ್ಟೃವು ಸ್ವಯಂಜ್ಯೋತಿಯಾಗಿರುತ್ತಾನೆಂಬುದು ಸಿದ್ಧವಾಗಿರುತ್ತದೆ, ಕಾಮಾದಿಗಳಿಗೆ (ಆತ್ಮನು) ಆಶ್ರಯನೆಂದು ಕಲ್ಪಿಸುವದಾದರೆ ಆ (ಸ್ವಯಂಜ್ಯೋತಿಷ್ಟ್ವವು) ಬಾಧಿತವಾದೀತು[3].

## ಭರ್ತೃಪ್ರಪಂಚಮತವು ಶಾಸ್ತ್ರಾರ್ಥಕ್ಕೇ ವಿರುದ್ಧವಾಗಿರುತ್ತದೆ

(ಭಾಷ್ಯ)

೨೨೨. ಸರ್ವಶಾಸ್ತ್ರಾರ್ಥವಿಪ್ರತಿಷೇಧಾಚ್ಚ । ಪರಸ್ಯ ಏಕದೇಶಕಲ್ಪನಾಯಾಂ ಕಾಮಾದ್ಯಾಶ್ರಯತ್ವೇ ಚ ಸರ್ವಶಾಸ್ತ್ರಾರ್ಥಜಾತಂ[4] ಕುಪ್ಯೇತ । ಏತಚ್ಚ ವಿಸ್ತರೇಣ ಚತುರ್ಥೇ ಅವೋಚಾಮ । ಮಹತಾ ಹಿ ಪ್ರಯತ್ನೇನ ಕಾಮಾದ್ಯಾಶ್ರಯತ್ವಕಲ್ಪನಾಃ ಪ್ರತಿಷೇದ್ಧವ್ಯಾಃ ಆತ್ಮನಃ ಪರೇಣ ಏಕತ್ವ

---

1. ಸ್ಥಿತಂ ಚ ಎಂಬಿದರ ಅನುವಾದವಿದು. ಸಿದ್ಧವಾಗಿದೆ ಎಂದರೆ ಶ್ರುತಿಯಿಂದ ನಿರ್ಣಯವಾಗಿದೆ; ನಿಂತಿರುತ್ತದೆ ಎಂದರೆ ಅನುಮಾನದಿಂದಲೂ ನಿಲ್ಲುತ್ತದೆ ಎಂದರ್ಥ ಎಂದು ಆ॥ ಟೀ॥

2. ಕಣ್ಣಿನಲ್ಲಿರುವ ಕಪ್ಪು ಆದೇ ಕಣ್ಣಿಗೆ ಕಾಣಿಸದಿರುವಂತೆ ಆತ್ಮನ ಧರ್ಮವಾದ ಕಾಮವು ಆತ್ಮನಿಗೆ ಕಾಣಿಸಬಾರದಾಗುವದು.

3. ಇಲ್ಲಿ 'ಸ್ವಯಂಜ್ಯೋತಿಷ್ಟ್ವವು ಸಿದ್ಧವಾಗಿರುತ್ತದೆ' ಎಂದಿಷ್ಟೇ ಹೇಳಿದೆ; 'ನಿಂತಿರುತ್ತದೆ' (ಸ್ಥಿತಂ ಚ) ಎಂಬುದರ ವಿವರಣೆ ಇಲ್ಲಿ ಕಂಡುಬರುವದಿಲ್ಲ. ಆದ್ದರಿಂದ 'ಸ್ಥಿತಂ ಚ' ಎಂಬುದನ್ನು ಯಾರೋ ಹೆಚ್ಚಾಗಿ ಭಾಷ್ಯಕ್ಕೆ ಸೇರಿಸಿರಬೇಕೆಂದು ತೋರುತ್ತದೆ. 'ಯಾವದು ಯಾವದರೊಡನೆ ಸಂಬದ್ಧವಾಗಿರುವದೋ ಅದು ಅದಕ್ಕೆ ದೃಶ್ಯವಲ್ಲ; ಹೀಗೆಯೇ ಕಾಮಾದಿಗಳು ಆತ್ಮಸಂಬದ್ಧವಾದರೆ ಅವು ದೃಶ್ಯವಾಗಲಾರವು. ಹೀಗೆ ದೃಶ್ಯತ್ವಬಲದಿಂದಲೇ ಸ್ವಯಂಜ್ಯೋತಿಷ್ಟ್ವವನ್ನು ಸಾಧಿಸಿದೆ; ಆದ್ದರಿಂದ ಅವನ್ನು ಬಾಧಿಸಿದರೆ ಈ ಅನುಮಾನವೂ ಬಾಧಿತವಾದೀತು' ಎಂಬ ಟೀಕೆಯೂ ಸರಿಯಲ್ಲ. ಏಕೆಂದರೆ ಶ್ರುತಿಯು ಅನುಮಾನದಿಂದ ಸ್ವಯಂಜ್ಯೋತಿಷ್ಟ್ವವನ್ನು ಸಾಧಿಸಿದೆ ಎಂಬುದು ಸರಿಯಲ್ಲ. ಸ್ವಯಂಜ್ಯೋತಿಷ್ಟ್ವಶ್ರುತಿಯು ನ್ಯಾಯೋಪಬೃಂಹಿತವಾಗಿರುವದರಿಂದ ಅದನ್ನು ಬಾಧಿಸುವದು ಸರಿಯಲ್ಲ ಎಂಬುದೇ ಭಾಷ್ಯಾಶಯ.

4. ಇಲ್ಲಿ ಜಾತಮ್ ಎಂಬ ಶಬ್ದವು ಬೇಕೆ? -ಎಂಬುದು ವಿಚಾರಣೀಯ; ಅನುವಾದವನ್ನೂ ಅದರ ಟಿಪ್ಪಣಿಯನ್ನೂ ನೋಡಿ.

ಶಾಸ್ತ್ರಾರ್ಥಸಿದ್ಧೇಃ ।[1] ತತ್ಕಲ್ಪನಾಯಾಂ ಪುನಃ ಕ್ರಿಯಮಾಣಾಯಾಂ ಶಾಸ್ತ್ರಾರ್ಥ ಏವ ಬಾಧಿತಃ ಸ್ಯಾತ್ । ಯಥಾ ಇಚ್ಛಾದೀನಾಮ್ ಆತ್ಮಧರ್ಮತ್ವಂ ಕಲ್ಪಯನ್ತೋ ವೈಶೇಷಿಕಾ ನೈಯಾಯಿಕಾಶ್ಚ ಉಪನಿಷಚ್ಛಾಸ್ತ್ರಾರ್ಥೇನ ನ ಸಂಗಚ್ಛನ್ತೇ, ತಥಾ ಇಯಮಪಿ ಕಲ್ಪನಾ ಉಪನಿಷಚ್ಛಾಸ್ತ್ರಾರ್ಥಬಾಧನಾತ್ ನಾದರಣೀಯಾ ॥

(ಭಾಷ್ಯಾರ್ಥ)

ಸಕಲಶಾಸ್ತ್ರಕ್ಕೂ ವಿರುದ್ಧವಾಗಿರುವದರಿದಲೂ (ಇದನ್ನು ಒಪ್ಪತಕ್ಕದ್ದಲ್ಲ). ಜೀವನು ಪರ(ಮಾತ್ಮನ) ಏಕದೇಶವೆಂದು ಕಲ್ಪಿಸಿದರೆ, (ಅವನು) ಕಾಮಾದಿಗಳಿಗೆ ಆಶ್ರಯನೆಂದೂ ಕಲ್ಪಿಸಿದರೆ ಸಕಲಶಾಸ್ತ್ರದ ಅರ್ಥಸಮೂಹವೇ ವಿರುದ್ಧವಾಗುವದು[2]. ಇದನ್ನು ನಾಲ್ಕನೆಯ (ಅಧ್ಯಾಯ)ದಲ್ಲಿ[3] ವಿಸ್ತಾರವಾಗಿ ಹೇಳಿರುತ್ತೇವೆ. **ಆತ್ಮನು ಪರ(ಮಾತ್ಮನೊಡನೆ) ಒಂದಾಗಿರುವನೆಂಬ ಶಾಸ್ತ್ರಾರ್ಥವು ಸಿದ್ಧಿಯಾಗಬೇಕಾದರೆ (ಅವನು) ಕಾಮಾದಿಗಳಿಗೆ ಆಶ್ರಯನೆಂಬ ಕಲ್ಪನೆಗಳನ್ನು ಮಹಾಪ್ರಯತ್ನದಿಂದ ಅಲ್ಲಗಳೆಯಬೇಕಲ್ಲವೆ? ಆದರೆ ಆ ಕಲ್ಪನೆಯನ್ನೇ ಮತ್ತೆ ಮಾಡುವದಾದರೆ (ಈ) ಶಾಸ್ತ್ರಾರ್ಥವೇ ಬಾಧಿತವಾಗುವದು.** ಹೇಗೆ ಇಚ್ಛೆ ಮುಂತಾದವುಗಳು ಆತ್ಮನ ಧರ್ಮವೇ ಎಂದು ಕಲ್ಪಿಸುವ ವೈಶೇಷಿಕರೂ ನೈಯಾಯಿಕರೂ ಉಪನಿಷತ್ತೆಂಬ ಶಾಸ್ತ್ರಾರ್ಥಕ್ಕೆ ಹೊಂದಿಕೆಯಾಗದೆ ಇರುವರೋ ಹಾಗೆಯೇ ಈ ಕಲ್ಪನೆಯೂ ಉಪನಿಷತ್ತೆಂಬ ಶಾಸ್ತ್ರದರ್ಥವನ್ನು ಬಾಧಿಸುತ್ತಿರುವದರಿಂದ (ಇದನ್ನು) ಆದರಿಸತಕ್ಕದ್ದಲ್ಲ.

## ಸುಷುಪ್ತಾತ್ಮನು ಚಿದ್ರೂಪನಾದರೂ ಅರಿಯದಿರಲು ಕಾರಣ

(ಉಪನಿಷತ್ತು)

**ಯದ್ವೈ ತನ್ನ ಪಶ್ಯತಿ ಪಶ್ಯನ್ ವೈ ತನ್ನ ಪಶ್ಯತಿ ನ ಹಿ ದ್ರಷ್ಟುರ್ದೃಷ್ಟೇರ್ವಿಪರಿಲೋಪೋ ವಿದ್ಯತೇಽವಿನಾಶಿತ್ವಾತ್ । ನ ತು ತದ್ದ್ವಿತೀಯಮಸ್ತಿ ತತೋಽನ್ಯದ್ ವಿಭಕ್ತಂ ಯತ್ ಪಶ್ಯೇತ್ ॥**

---

1. 'ಸಿದ್ಧಯೇ' ಎಂಬ ಪಾಠಾಂತರವು ಬೇಕಿಲ್ಲ, ಇದನ್ನೇ ಹೇತುಪಂಚಮಿಯಾಗಿ ಭಾವಿಸಬಹುದಾಗಿದೆ.

2 ನಿರವಯವತ್ವಪ್ರತ್ಯಗೇಕತ್ವಾದಿಗಳೇ ಶಾಸ್ತ್ರಾರ್ಥಜಾತವೆಂದು ಟೀಕೆ. ಆದರೆ ಆತ್ಮಪರೈಕತ್ವವೇ ಶಾಸ್ತ್ರಾರ್ಥವೆಂದು ಮುಂದೆ ಭಾಷ್ಯದಲ್ಲಿ ವಿವರಿಸಿದೆ.

3. ಆತ್ಮನು ಬ್ರಹ್ಮದ ಏಕದೇಶವೆಂದೂ ಸಂಸಾರಿಯೆಂದೂ ಕಲ್ಪಿಸುವದು ಶ್ರುತಿವಿರುದ್ಧವೆಂದು ೨-೧-೨೦ (ಭಾ. ಭಾ. ೩೧೭, ೩೧೮)ರಲ್ಲಿ ತೋರಿಸಿದೆ.

೨೩. ಅಲ್ಲಿ ಕಾಣುವದಿಲ್ಲವೆಂಬುದಿದೆಯಲ್ಲ, ಕಾಣುವವನಾಗಿಯೇ ಅಲ್ಲಿ ಕಾಣುವದಿಲ್ಲ; ದ್ರಷ್ಟೃವಿನ ದೃಷ್ಟಿಗೆ ವಿಪರಿಲೋಪವೇ ಇಲ್ಲ, ಏಕೆಂದರೆ ಅದು ವಿನಾಶಿಯಲ್ಲ. ಆದರೆ ಯಾವದನ್ನು ಕಾಣಬಹುದೋ ಆ ಎರಡನೆಯದು ತನಗಿಂತ ಬೇರೆಯಾಗಿ ವಿಂಗಡವಾಗಿ ಇರುವದಿಲ್ಲ.

## ಕಂಡಿಕೆಯ ಸಂಬಂಧ

(ಭಾಷ್ಯ)

೨೨೩. ಸ್ತ್ರೀಪುಂಸಯೋರಿವ ಏಕತ್ವಾತ್ ನ ಪಶ್ಯತಿ ಇತ್ಯುಕ್ತಮ್ ಸ್ವಯಂಜ್ಯೋತಿಃ ಇತಿ ಚ। ಸ್ವಯಂಜ್ಯೋತಿಷ್ಟ್ವಂ ನಾಮ ಚೈತನ್ಯಾತ್ಮಸ್ವಭಾವತಾ। ಯದಿ ಹಿ ಅಗ್ನ್ಯುಷ್ಣತ್ವಾದಿವತ್ ಚೈತನ್ಯಾತ್ಮಸ್ವಭಾವ ಆತ್ಮಾ, ಸ ಕಥಮ್ ಏಕತ್ವೇಽಪಿ ಸ್ವಭಾವಂ[1] ಜಹ್ಯಾತ್ ನ ಜಾನೀಯಾತ್? ಅಥ ನ ಜಹಾತಿ ಕಥಮಿಹ ಸುಷುಪ್ತೇ ನ ಪಶ್ಯತಿ? ವಿಪ್ರತಿಷಿದ್ಧಮೇತತ್ ಚೈತನ್ಯಮ್ ಆತ್ಮಸ್ವಭಾವಃ[2] ನ ಜಾನಾತಿ ಚೇತಿ ॥

(ಭಾಷ್ಯಾರ್ಥ)

'ಸ್ತ್ರೀಪುರುಷರಂತೆ ಒಂದಾಗಿರುವದರಿಂದ ಕಾಣದೆ ಇರುತ್ತಾನೆ' (೪-೩-೨೧) ಎಂದು ಹೇಳಿದ್ದಾಗಿದೆ, '(ಇವನು) ಸ್ವಯಂಜ್ಯೋತಿ(ಯಾಗಿರುತ್ತಾನೆ)' (೩-೧೪-೧೪) ಎಂದೂ (ಹೇಳಿದ್ದಾಗಿದೆಯಷ್ಟೆ), ಸ್ವಯಂಜ್ಯೋತಿ ಎಂದರೆ ಚೈತನ್ಯಾತ್ಮನ ಸ್ವಭಾವದಿಂದಿರುವದು. ಆತ್ಮನು ಬೆಂಕಿಯು ಬಿಸಿಯೇ ಮುಂತಾದದ್ದರಂತೆ ಚೈತನ್ಯಾತ್ಮನ ಸ್ವಭಾವದವನೇ ಆಗಿದ್ದರೆ, ಅವನು ಒಂದಾಗಿದ್ದರೂ ಹೇಗೆ ಸ್ವಭಾವವನ್ನು ಬಿಟ್ಟಾನು, ಅರಿಯದೆ ಇದ್ದಾನು? ಹಾಗಿಲ್ಲದೆ (ಸ್ವಭಾವವನ್ನು) ಬಿಡುವದಿಲ್ಲವಾದರೆ, ಈ ಸುಷುಪ್ತಿಯಲ್ಲಿ ಅರಿಯದೆ ಇರುವನೇಕೆ? ಚೈತನ್ಯವು ಆತ್ಮನ ಸ್ವಭಾವವು[3], ಆದರೂ ಅರಿಯುವದಿಲ್ಲ- ಎಂಬುದು ಪರಸ್ಪರವಿರುದ್ಧ(ವಲ್ಲವೆ)!

## ಆತ್ಮನು ಕಾಣುವ ಸ್ವಭಾವದವನೇ

(ಭಾಷ್ಯ)

೨೨೪. ನ ವಿಪ್ರತಿಷಿದ್ಧಮ್। ಉಭಯಮಪ್ಯೇತತ್ ಉಪಪದ್ಯತ ಏವ। ಕಥಮ್? ಯದ್ವೈ ಸುಷುಪ್ತೇ ತತ್ ನ ಪಶ್ಯತಿ ಪಶ್ಯನ್ ವೈ ತತ್ ತತ್ರ

1. ಇದರ ಹಿಂದಿನ 'ಹಿ' ಹೆಚ್ಚೆಂದು ಬಿಟ್ಟಿದೆ.

2. 'ಚೈತನ್ಯಾತ್ಮಸ್ವಭಾವಃ' ಎಂದಿದ್ದರೆ ಚೆನ್ನಾಗಿರುತ್ತಿತ್ತೆಂದು ತೋರುತ್ತದೆ.

3 'ಚೈತನ್ಯಾತ್ಮಸ್ವಭಾವಃ' ಎಂದಿದ್ದರೆ ಚೈತನ್ಯಾತ್ಮನ ಸ್ವಭಾವದವನು ಎಂದು ಕನ್ನಡಿಸಿಕೊಳ್ಳಬೇಕು.

ಪಶ್ಯನ್ನೇವ ನ ಪಶ್ಯತಿ। ಯತ್ ತತ್ರ ಸುಷುಪ್ತೇ ನ ಪಶ್ಯತೀತಿ ಜಾನೀಷೇ ತನ್ನ ತಥಾ ಗೃಹ್ಣೀಯಾಃ। ಕಸ್ಮಾತ್ ? ಪಶ್ಯನ್ ವೈ ಭವತಿ ತತ್ರ। ನನ್ವೇವಂ ನ ಪಶ್ಯತೀತಿ ಸುಷುಪ್ತೇ ಜಾನೀಮಃ, ಯತೋ ನ ಚಕ್ಷುರ್ವಾ, ಮನೋ ವಾ ದರ್ಶನೇ ಕರಣಂ ವ್ಯಾಪೃತಮಸ್ತಿ। ವ್ಯಾಪೃತೇಷು ಹಿ ದರ್ಶನಶ್ರವಣಾದಿಷು ಪಶ್ಯತೀತಿ ವ್ಯವಹಾರೋ ಭವತಿ, ಶೃಣೋತಿ ಇತಿ ವಾ। ನ ಚ ವ್ಯಾಪೃತಾನಿ ಕರಣಾನಿ ಪಶ್ಯಾಮಃ। ತಸ್ಮಾತ್ ನ ಪಶ್ಯತ್ಯೇವಾಯಮ್। ನ ಹಿ। ಕಿಂ ತರ್ಹಿ ಪಶ್ಯನ್ನೇವ ಭವತಿ। ಕಥಮ್ ? ನ ಹಿ ಯಸ್ಮಾತ್ ದ್ರಷ್ಟುಃ ದೃಷ್ಟಿಕರ್ತುಃ ಯಾ ದೃಷ್ಟಿಃ ತಸ್ಯಾ ದೃಷ್ಟೇಃ ವಿಪರಿಲೋಪಃ ವಿನಾಶಃ ಸ ನ ವಿದ್ಯತೇ। ಯಥಾ ಅಗ್ನೇರೌಷ್ಣ್ಯಂ ಯಾವದಗ್ನಿಭಾವಿ ತಥಾ ಽಯಂ ಚಾತ್ಮಾ ದ್ರಷ್ಟಾ ಅವಿನಾಶೀ, ಅತೋ ಅವಿನಾಶಿತ್ವಾತ್ ಆತ್ಮನೋ ದೃಷ್ಟಿರಪಿ ಅವಿನಾಶಿನೀ। ಯಾವದ್ದ್ರಷ್ಟೃಭಾವಿನೀ ಹಿ ಸಾ ॥

(ಭಾಷ್ಯಾರ್ಥ)

ವಿರುದ್ಧವಲ್ಲ. (ಈ) ಎರಡೂ ಆಗಲೇಬಹುದು. ಹೇಗೆಂದರೆ, ಸುಷುಪ್ತಿಯಲ್ಲಿ ಕಾಣುವದಿಲ್ಲ ಎಂಬುದಿದೆಯಲ್ಲ, (ತತ್= ತತ್ರ) ಅಲ್ಲಿ ಕಾಣುವವನಾಗಿಯೇ ಕಾಣುತ್ತಿರುವದಿಲ್ಲ ಆ ಸುಷುಪ್ತಿಯಲ್ಲಿ (ಅವನು) ಕಾಣುವದಿಲ್ಲ ಎಂದು ಭಾವಿಸಿರುವೆಯಷ್ಟೆ, ಹಾಗೆ ಅದನ್ನು ಗ್ರಹಿಸದಿರು. ಏಕೆಂದರೆ ಅಲ್ಲಿ ಅವನು ಕಾಣುವವನಾಗಿಯೇ ಇರುತ್ತಾನೆ.

(ಆಕ್ಷೇಪ) :- ಹೀಗಾದರೆ ಸುಷುಪ್ತಿಯಲ್ಲಿ ಕಾಣುವದಿಲ್ಲ ಎಂದೇ ಭಾವಿಸುತ್ತೇವೆ. ಏಕೆಂದರೆ ಕಾಣುವದಕ್ಕೆ ಕರಣವಾದ ಚಕ್ಷುರಿಂದ್ರಿಯವಾಗಲಿ ಮನಸ್ಸಾಗಲಿ (ಅಲ್ಲಿ) ವ್ಯಾಪಾರಮಾಡುತ್ತಿರುವದಿಲ್ಲ. ದರ್ಶನಶ್ರವಣಾದಿ(ಕರಣ)ಗಳು ವ್ಯಾಪಾರಮಾಡುತ್ತಿದ್ದರಲ್ಲವೆ- ಕಾಣುತ್ತಾನೆ ಎಂಬ ವ್ಯವಹಾರವಾಗಲಿ ಕೇಳುತ್ತಾನೆ ಎಂಬ ವ್ಯವಹಾರವಾಗಲಿ ಆಗುತ್ತದೆ? ಆದರೆ (ಅಲ್ಲಿ) ಕರಣಗಳು ವ್ಯಾಪಾರಮಾಡುತ್ತಿರುವದು ಕಂಡುಬರುವದಿಲ್ಲ. ಆದ್ದರಿಂದ ಇವನು ಕಾಣುವದೇ ಇಲ್ಲ.

(ಪರಿಹಾರ) :- ಹಾಗಲ್ಲವೇ ಅಲ್ಲ. ಮತ್ತೇನೆಂದರೆ ಕಾಣುವವನಾಗಿಯೇ ಇರುತ್ತಾನೆ. ಹೇಗೆಂದರೆ (ಹಿ= ಯಸ್ಮಾತ್) ದ್ರಷ್ಟೃವಿನ, ದೃಷ್ಟಿಕರ್ತೃವಿನ ದೃಷ್ಟಿಯಿದೆಯಲ್ಲ, ಆ ದೃಷ್ಟಿಗೆ ವಿಪರಿಲೋಪವು ಎಂದರೆ ವಿನಾಶವು, ಅದು ಇರುವದಿಲ್ಲ. ಹೇಗೆ ಬೆಂಕಿಯ ಬಿಸಿಯು ಬೆಂಕಿಯಿರುವವರೆಗೂ ಇರುತ್ತದೆಯೋ ಹಾಗೆಯೇ (ಇದು). ಈ ಆತ್ಮನೆಂಬ ದ್ರಷ್ಟೃವೋ, ಅವಿನಾಶಿಯು ; ಆದ್ದರಿಂದ- (ಇವನು) ಅವಿನಾಶಿಯಾಗಿರುವದರಿಂದ- ಆತ್ಮನ ದೃಷ್ಟಿಯೂ ಅವಿನಾಶಿಯಾದದ್ದು ; ಏಕೆಂದರೆ ದ್ರಷ್ಟೃವಿರುವವರೆಗೂ ಅದು ಇರತಕ್ಕದ್ದು.

# ಆತ್ಮನ ದೃಷ್ಟಿಯು ಅವಿನಾಶಿ ಎಂಬ ಬಗ್ಗೆ ಆಕ್ಷೇಪಸಮಾಧಾನಗಳು

(ಭಾಷ್ಯ)

೨೨೫. ನನು ವಿಪ್ರತಿಷಿದ್ಧಮಿದಮ್ ಅಭಿಧೀಯತೇ ದ್ರಷ್ಟುಃ ಸಾ ದೃಷ್ಟಿಃ, ನ ವಿಪರಿಲುಪ್ಯತೇ ಇತಿ ಚ। ದೃಷ್ಟಿಶ್ಚ ದ್ರಷ್ಟ್ರಾ ಕ್ರಿಯತೇ। ದೃಷ್ಟಿಕರ್ತೃತ್ವಾದ್ ಹಿ ದ್ರಷ್ಟಾ ಇತ್ಯುಚ್ಯತೇ। ಕ್ರಿಯಮಾಣಾ ಚ ದ್ರಷ್ಟ್ರಾ ದೃಷ್ಟಿಃ ನ ವಿಪರಿಲುಪ್ಯತೇ ಇತಿ ಚ ಅಶಕ್ಯಂ ವಕ್ತುಮ್। ನನು ನ ವಿಪರಿಲುಪ್ಯತ ಇತಿ ವಚನಾತ್ ಅವಿನಾಶಿನೀ ಸ್ಯಾತ್। ನ। ವಚನಸ್ಯ ಜ್ಞಾಪಕತ್ವಾತ್। ನ ಹಿ ನ್ಯಾಯಪ್ರಾಪ್ತೋ ವಿನಾಶಃ ಕೃತಕಸ್ಯ ವಚನಶತೇನಾಪಿ ವಾರಯಿತುಂ ಶಕ್ಯತೇ। ವಚನಸ್ಯ ಯಥಾಪ್ರಾಪ್ತಾರ್ಥಜ್ಞಾಪಕತ್ವಾತ್। ನೈಷ ದೋಷಃ। ಆದಿತ್ಯಾದಿಪ್ರಕಾಶಕತ್ವವತ್ ದರ್ಶನೋಪಪತ್ತೇಃ। ಯಥಾ ಆದಿತ್ಯಾದಯಃ ನಿತ್ಯಪ್ರಕಾಶಸ್ವಭಾವಾ ಏವ ಸನ್ತಃ ಸ್ವಾಭಾವಿಕೇನ ನಿತ್ಯೇನೈವ ಪ್ರಕಾಶೇನ ಪ್ರಕಾಶಯನ್ತಿ। ನ ಹಿ ಅಪ್ರಕಾಶಾತ್ಮನಃ ಸನ್ತಃ ಪ್ರಕಾಶಂ ಕುರ್ವನ್ತಃ ಪ್ರಕಾಶಯನ್ತಿ ಇತ್ಯುಚ್ಯನ್ತೇ, ಕಿಂ ತರ್ಹಿ ಸ್ವಭಾವೇನೈವ ನಿತ್ಯೇನ ಪ್ರಕಾಶೇನ। ತಥಾ ಅಯಮಪಿ ಆತ್ಮಾ ಅವಿಪರಿಲುಪ್ತಸ್ವಭಾವಯಾ ದೃಷ್ಟ್ಯಾ ನಿತ್ಯಯಾ ದ್ರಷ್ಟಾ ಇತ್ಯುಚ್ಯತೇ। ಗೌಣಂ ತರ್ಹಿ ದ್ರಷ್ಟೃತ್ವಮ್। ನ। ಏವಮೇವ ಮುಖ್ಯತ್ವೋಪಪತ್ತೇಃ। ಯದಿ ಹಿ ಅನ್ಯಥಾಽಪಿ ಆತ್ಮನೋ ದ್ರಷ್ಟೃತ್ವಂ ದೃಷ್ಟಮ್, ತದಾ ಅಸ್ಯ ದ್ರಷ್ಟೃತ್ವಸ್ಯ ಗೌಣತ್ವಮ್। ನ ತು ಆತ್ಮನೋಽನ್ಯೋ ದರ್ಶನಪ್ರಕಾರೋಽಸ್ತಿ. ತದೇವಮೇವ ಮುಖ್ಯಂ ದ್ರಷ್ಟೃತ್ವಮ್ ಉಪಪದ್ಯತೇ ನಾನ್ಯಥಾ। ಯಥಾ ಆದಿತ್ಯಾದೀನಾಂ ಪ್ರಕಾಶಯಿತೃತ್ವಂ ನಿತ್ಯೇನೈವ ಸ್ವಾಭಾವಿಕೇನ ಅಕ್ರಿಯಮಾಣೇನ ಪ್ರಕಾಶೇನ. ತದೇವ ಚ ಪ್ರಕಾಶಯಿತೃತ್ವಂ ಮುಖ್ಯಮ್। ಪ್ರಕಾಶಯಿತೃತ್ವಾನ್ತರಾನುಪಪತ್ತೇಃ। ತಸ್ಮಾತ್ ನ ದ್ರಷ್ಟುರ್ದೃಷ್ಟಿರ್ವಿಪರಿಲುಪ್ಯತ ಇತಿ ನ ವಿಪ್ರತಿಷೇಧಗನ್ಧೋಽಪ್ಯಸ್ತಿ। ನನು ಅನಿತ್ಯಕ್ರಿಯಾಕರ್ತೃವಿಷಯೇ ಏವ ತೃಚ್ಪ್ರತ್ಯಯಾನ್ತಸ್ಯ ಶಬ್ದಸ್ಯ ಪ್ರಯೋಗೋ ದೃಷ್ಟಃ, ಯಥಾ ಛೇತ್ತಾ ಭೇತ್ತಾ ಗನ್ತಾ ಇತಿ। ತಥಾ ದ್ರಷ್ಟಾ ಇತ್ಯತ್ರಾಪಿ ಇತಿ ಚೇತ್। ನ। ಪ್ರಕಾಶಯಿತಾ ಇತಿ ದೃಷ್ಟತ್ವಾತ್। ಭವತು ಪ್ರಕಾಶಕೇಷು। ಅನ್ಯಥಾ ಅಸಂಭವಾತ್। ನ ತು ಆತ್ಮನಿ ಇತಿ ಚೇತ್। ನ। ದೃಷ್ಟ್ಯವಿಪರಿಲೋಪಶ್ರುತೇಃ। ಪಶ್ಯಾಮಿ. ನ ಪಶ್ಯಾಮಿ ಇತ್ಯನುಭವದರ್ಶನಾತ್ ನ, ಇತಿ ಚೇತ್। ನ। ಕರಣವ್ಯಾಪಾರವಿಶೇಷಾಪೇಕ್ಷತ್ವಾತ್। ಉದ್ಧೃತಚಕ್ಷುಷಾಂ ಚ ಸ್ವಪ್ನೇ ಆತ್ಮದೃಷ್ಟೇರವಿಪರಿಲೋಪದರ್ಶನಾತ್। ತಸ್ಮಾತ್ ಅವಿಪರಿಲುಪ್ತಸ್ವಭಾವೈವ ಆತ್ಮನೋ ದೃಷ್ಟಿಃ। ಅತಃ ತಯಾ ಅವಿಪರಿಲುಪ್ತಯಾ ದೃಷ್ಟ್ಯಾ ಸ್ವಯಂಜ್ಯೋತಿಃಸ್ವಭಾವಯಾ ಪಶ್ಯನ್ನೇವ ಭವತಿ ಸುಷುಪ್ತೇ ॥

(ಭಾಷ್ಯಾರ್ಥ)

(ಆಕ್ಷೇಪ) :- ಆ ದೃಷ್ಟಿಯು ದ್ರಷ್ಟೃವಿನದು, ವಿಪರಿಲೋಪವೂ ಆಗುವದಿಲ್ಲ -ಎಂದು ಹೇಳುವದು (ತಾನಗೆತಾನೇ) ವಿರುದ್ಧವಲ್ಲವೆ ? ದೃಷ್ಟಿ ಎಂಬುದು ದ್ರಷ್ಟೃವಿನಿಂದ ಮಾಡಲ್ಪಡುತ್ತದೆ ; ದೃಷ್ಟಿಯನ್ನು ಮಾಡುವದರಿಂದಲೇ ಅಲ್ಲವೆ, ದ್ರಷ್ಟೃವೆನಿಸುತ್ತಾನೆ[1] ? (ಹೀಗೆ) ದೃಷ್ಟಿಯು ದ್ರಷ್ಟೃವಿನಿಂದ ಮಾಡಲ್ಪಡುತ್ತಲೂ ಇದೆ ನಾಶವಾಗುವದೂ ಇಲ್ಲ ಎಂದು ಹೇಳುವದು ಆಗಲಾರದು.

(ಏಕದೇಶಿ) :- '(ದೃಷ್ಟಿಯು) ವಿಪರಿಲೋಪವಾಗುವದಿಲ್ಲ' ಎಂದು ವಚನವಿರುವದರಿಂದ (ಅದು) ಅವಿನಾಶಿ ಎಂದಾಗಬಹುದಲ್ಲ !

(ಆಕ್ಷೇಪ) :- ಹಾಗಲ್ಲ. ಏಕೆಂದರೆ ವಚನವು ಜ್ಞಾಪಕವಾಗಿರುತ್ತದೆ. (ಇದರ ವಿವರ): **ಯುಕ್ತಿಯಿಂದ ಸಿದ್ಧವಾಗಿರುವ ಕೃತಕ(ವಸ್ತುವಿನ) ವಿನಾಶವನ್ನು ನೂರು ವಚನಗಳಿಂದಲೂ ತಪ್ಪಿಸುವದಕ್ಕೆ ಆಗಲೇ ಆರದು ; ಏಕೆಂದರೆ ವಚನವು ತಾನೇ ಬಂದೊದಗಿರುವ ಅರ್ಥವನ್ನೇ ಜ್ಞಾಪಿಸುವದಾಗಿರುತ್ತದೆ[2].**

(ಸಿದ್ಧಾಂತಿ) :- ಇದೇನೂ ದೋಷವಲ್ಲ. ಏಕೆಂದರೆ ಸೂರ್ಯನೇ ಮುಂತಾದವರಿಗೆ (ಇರುವ) ಪ್ರಕಾಶಕತ್ವದಂತೆ (ಆತ್ಮನಿಗೂ) ನೋಟವು ಇರಬಹುದಾಗಿದೆ. (ಇದರ ವಿವರ) : ಹೇಗೆ ಸೂರ್ಯನೇ ಮುಂತಾದವರು ನಿತ್ಯಪ್ರಕಾಶದ ಸ್ವರೂಪರೇ ಆಗಿದ್ದರೂ (ತಮ್ಮ) ಸ್ವಭಾವವೇ ಆಗಿರುವ ನಿತ್ಯವಾದ ಪ್ರಕಾಶದಿಂದಲೇ ಬೆಳಗುತ್ತಿರುವರೋ—(ಅವರು ಮೊದಲು) ಪ್ರಕಾಶಾತ್ಮರಲ್ಲದೆ ಇದ್ದು (ಆಮೇಲೆ) ಬೆಳಗುವವರಾಗಿರುವದರಿಂದೇನೂ 'ಬೆಳಗುತ್ತಾರೆ' ಎನ್ನುವದಿಲ್ಲವಷ್ಟೆ ? ಮತ್ತೇನೆಂದರೆ ಸ್ವಭಾವವಾಗಿರುವ ನಿತ್ಯವಾದ ಪ್ರಕಾಶದಿಂದಲೇ (ಹಾಗೆ ಎನಿಸಿಕೊಳ್ಳುತ್ತಾರೆ) —ಹೀಗೆಯೇ ಈ ಆತ್ಮನೂ ವಿಪರಿಲೋಪವಾಗದ ಸ್ವಭಾವವುಳ್ಳ ನಿತ್ಯವಾದ ದೃಷ್ಟಿಯಿಂದ ದ್ರಷ್ಟೃ ಎನಿಸಿಕೊಳ್ಳುತ್ತಾನೆ[3].

(ಆಕ್ಷೇಪ) :- ಹಾಗಾದರೆ (ಇವನ) ದ್ರಷ್ಟೃತ್ವವು ಗೌಣವೆಂದಾಯಿತು !

---

1. ೩-೪-೨ (ಭಾ. ಭಾ. ೪೭)ರಲ್ಲಿ 'ದೃಷ್ಟೇರ್ದ್ರಷ್ಟಾರಮ್' ಎಂಬಲ್ಲಿ ಇದೇ ಭರ್ತೃಪ್ರಪಂಚರ ಮತವನ್ನು ಅನುವಾದಮಾಡಿಕೊಂಡಿದೆ. ಅದು ಸರಿಯಲ್ಲವೆಂಬುದನ್ನು ತೋರಿಸುವದಕ್ಕಾಗಿ ಮತ್ತೆ ಇಲ್ಲಿ ಈ ಆಕ್ಷೇಪವನ್ನು ಎಬ್ಬಿಸಿದೆ.

2. ದೃಷ್ಟಿಕರ್ತೃವೆಂದರೆ ನೋಡುವವನು ; ನೋಟವು ಹೊಸದಾಗಿ ಉಂಟಾಗುವದಾದರೆ ಅದು ಹೋಗಲೇಬೇಕು. ಆದ್ದರಿಂದ ವಚನವು ಅದನ್ನು ನಿತ್ಯವಾಗಿ ಮಾಡಲಾರದು. ಆದಕಾರಣ ವಚನವು ಹೇಳುವ ನಿತ್ಯದೃಷ್ಟಿ ಯಾವದೆಂಬುದನ್ನು ಅನುಭವಕ್ಕೆ ಹೊಂದಿಸಿ ಹೇಳಬೇಕು ಎಂದು ಭಾವ.

3. ಹೊಸದಾಗಿ ಉಂಟಾಗುವ ದೃಷ್ಟಿಯಿಂದೇನೂ ದ್ರಷ್ಟೃವೆನಿಸಿರುವದಿಲ್ಲ.

(ಪರಿಹಾರ) :– ಹಾಗಲ್ಲ. ಏಕೆಂದರೆ ಹೀಗೇ (ದ್ರಷ್ಟೃತ್ವವು) ಮುಖ್ಯ ವೆಂಬುದು ಹೊಂದುತ್ತದೆ. (ಇದರ ವಿವರ) : ಆತ್ಮನಿಗೆ ಬೇರೊಂದು ಬಗೆಯಲ್ಲಿ ಯೂ ದ್ರಷ್ಟೃತ್ವ(ವಿರುವದು) ಕಂಡಿದ್ದರೆ, ಆಗ ಈ ದ್ರಷ್ಟೃತ್ವವು ಗೌಣವೆಂದು (ಆಗುತ್ತಿತ್ತು). ಆದರೆ ಆತ್ಮನಿಗೆ ಮತ್ತೊಂದು ದರ್ಶನಪ್ರಕಾರವೇ ಇಲ್ಲ; ಆದ್ದರಿಂದ ಹೀಗೆಯೇ ಮುಖ್ಯದ್ರಷ್ಟೃತ್ವವು ಹೊಂದುತ್ತದೆಯೇ ಹೊರತು ಮತ್ತೊಂದು ಬಗೆಯಿಂದಲ್ಲ. ಹೇಗೆ ಸೂರ್ಯಾದಿಗಳು ಬೆಳಗುವವರೆಂಬುದು (ಅವರಿಗೆ) ಸ್ವಭಾವವಾಗಿರುವ (ಹೊಸದಾಗಿ) ಉಂಟುಮಾಡಲ್ಪಡದಿರುವ ಬೆಳಕಿ ನಿಂದಲೇ ಆಗಿರುವದರೋ, ಆ ಪ್ರಕಾಶಯಿತೃತ್ವವೇ ಮುಖ್ಯವೂ (ಆಗಿರುವದೋ) ಏಕೆಂದರೆ ಮತ್ತೊಂದು ಬಗೆಯ ಪ್ರಕಾಶಯಿತೃತ್ವವೇ ಇರುವದಿಲ್ಲವಷ್ಟೆ– (ಹಾಗೆಯೇ ಇದು)[1]. ಆದ್ದರಿಂದ ದ್ರಷ್ಟೃವಿನ ದೃಷ್ಟಿಯು ವಿಪರಿಲೋಪ ವಾಗುವದಿಲ್ಲ ಎಂಬಲ್ಲಿ ವಿರೋಧದ ವಾಸನೆಯು ಕೂಡ ಇರುವದಿಲ್ಲ.

(ಆಕ್ಷೇಪ) :– ಅನಿತ್ಯವಾದ ಕ್ರಿಯೆಗೆ ಕರ್ತೃವಾಗಿರುವ ಕರ್ತೃವಿನ ವಿಷಯದಲ್ಲಿ ಮಾತ್ರವೇ ತೃಚ್ಪ್ರತ್ಯಯಾಂತವಾದ (ಶಬ್ದವನ್ನು) ಪ್ರಯೋಗಿಸು ವದು ಕಂಡಿದೆಯಲ್ಲ! ಉದಾಹರಣೆಗೆ ಛೇತ್ತಾ (ಕತ್ತರಿಸುವವನು), ಭೇತ್ತಾ (ಒಡೆಯುವವನು), ಗನ್ತಾ (ಹೋಗುವವನು) –ಈ ಶಬ್ದಗಳನ್ನು ಹಾಗೆ ಪ್ರಯೋಗಿಸುತ್ತಾರಲ್ಲ!

(ಪರಿಹಾರ) :– ಹಾಗಲ್ಲ. ಏಕೆಂದರೆ ಪ್ರಕಾಶಯಿತಾ ಎಂದೂ ಪ್ರಯೋ ಗಿಸಿರುವದು ಕಂಡುಬಂದಿರುತ್ತದೆ[2].

(ಆಕ್ಷೇಪ) :– ಬೇರೊಂದು ಬಗೆಯಲ್ಲಿ ಸಂಭವಿಸುವಂತಿಲ್ಲವಾದ್ದರಿಂದ ಪ್ರಕಾಶಕ(ವಸ್ತುಗಳಲ್ಲಿ ಹೀಗೆಯೇ) ಆಗಲಿ[3], ಆದರ ಆತ್ಮನ ವಿಷಯಕ್ಕೆ ಇದು (ಬೇಡ)[4]!

(ಪರಿಹಾರ) :– ಹಾಗಲ್ಲ. ಏಕೆಂದರೆ (ಆತ್ಮನ) ದೃಷ್ಟಿಯು ವಿಪರಿ ಲೋಪವಾಗುವದಿಲ್ಲವೆಂಬ ಶ್ರುತಿಯಿದೆ.

---

1. ಸೂ. ಭಾ. ದಲ್ಲಿ ೧–೧–೫ (ಭಾ. ಭಾ. ೬೯) ಸರ್ವಜ್ಞತ್ವವಿಚಾರಕ್ಕೆ ಇದೇ ಉದಾಹರಣೆಯನ್ನು ಕೊಟ್ಟಿರುವದನ್ನು ನೋಡಿ.

2. ಅದು ಅನಿತ್ಯಕ್ರಿಯೆಯ ಕರ್ತೃವಿನ ವಿಷಯವಲ್ಲ; ಆದ್ದರಿಂದ ತೃಚ್ ಪ್ರತ್ಯಯಾಂತಕ್ಕೆ ಅನಿತ್ಯಕ್ರಿಯೆಯೇ ಬೇಕೆಂಬ ನಿಯಮವೇನೂ ಇಲ್ಲ.

3. ನಿತ್ಯಕ್ರಿಯೆಯ ಕರ್ತೃವನ್ನೇ ತೃಚ್ಪ್ರತ್ಯಯಾಂತಶಬ್ದದಿಂದ ಹೇಳಿವೆ ಯೆಂದಾಗಲಿ.

4. ಏಕೆಂದರೆ ಆತ್ಮನಿಗೆ ಕಾಣುವದು, ಕಾಣದಿರುವದು– ಎರಡೂ ಇವೆ ಎಂದು ಭಾವ.

(ಆಕ್ಷೇಪ) :- 'ಕಾಣುತ್ತೇನೆ, ಕಾಣುತ್ತಿಲ್ಲ' ಎಂಬ ಅನುಭವವಿರುವದರಿಂದ (ಇದು ಸರಿ)ಯಲ್ಲ[1].

(ಪರಿಹಾರ) :- ಹಾಗಲ್ಲ. ಏಕೆಂದರೆ (ಈ ಅನುಭವವು) ಕರಣವ್ಯಾಪಾರದ (ಒಂದು) ಪ್ರಕಾರವನ್ನು ಅಪೇಕ್ಷಿಸಿ (ಆಗುತ್ತದೆ)[2]. ಕಣ್ಣು ಕಳೆದುಕೊಂಡವರಿಗೆ ಕನಸಿನಲ್ಲಿ ಆತ್ಮದೃಷ್ಟಿಯು ವಿಪರಿಲೋಪವಾಗದೆ ಇರುವದೂ ಕಂಡುಬರುತ್ತದೆ[3]. ಆದ್ದರಿಂದ ಆತ್ಮನ ದೃಷ್ಟಿಯು ವಿಪರಿಲೋಪವಾಗದ ಸ್ವಭಾವದ್ದೇ. ಆದ್ದರಿಂದ ಆ ಅವಿಪರಿಲುಪ್ತವಾದ ಸ್ವಯಂಜ್ಯೋತಿಸ್ಸ್ವಭಾವವಾದ ದೃಷ್ಟಿಯಿಂದ (ಆತ್ಮನು) ಸುಷುಪ್ತಿಯಲ್ಲಿ ನೋಡುವವನಾಗಿಯೇ (ಇರುತ್ತಾನೆ).

## ಸುಷುಪ್ತಿಯಲ್ಲಿ ಕಾಣದಿರುವದಕ್ಕೆ ಕಾರಣ

(ಭಾಷ್ಯ)

೨೨೬. ಕಥಂ ತರ್ಹಿ ನ ಪಶ್ಯತೀತಿ ? ಉಚ್ಯತೇ। ನ ತು ತದಸ್ತಿ। ಕಿಂ ತತ್ ? ದ್ವಿತೀಯಂ ವಿಷಯಭೂತಮ್। ಕಿಂವಿಶಿಷ್ಟಮ್ ? ತತೋ ದ್ರಷ್ಟುಃ ಅನ್ಯತ್ ಅನ್ಯತ್ವೇನ ವಿಭಕ್ತಂ ಯತ್ ಪಶ್ಯೇತ್ ಯತ್ ಉಪಲಭೇತ। ಯದ್ ಹಿ ತದ್ ವಿಶೇಷದರ್ಶನಕಾರಣಮ್ ಅನ್ತಃಕರಣಂ ಚಕ್ಷುಃ ರೂಪಂ ಚ, ತದ್ ಅವಿದ್ಯಯಾ ಅನ್ಯತ್ವೇನ ಪ್ರತ್ಯುಪಸ್ಥಾಪಿತಮಾಸೀತ್। ತತ್ ಏತಸ್ಮಿನ್ ಕಾಲೇ ಏಕೀಭೂತಮ್। ಆತ್ಮನಃ ಪರೇಣ ಪರಿಷ್ವಙ್ಗಾತ್। ದ್ರಷ್ಟುರ್ಹಿ ಪರಿಚ್ಛಿನ್ನಸ್ಯ ವಿಶೇಷದರ್ಶನಾಯ ಕರಣಾನಿ ಅನ್ಯತ್ವೇನ ವ್ಯವತಿಷ್ಠನ್ತೇ। ಅಯಂ ತು[4] ಸರ್ವಾತ್ಮನಾ ಸಂಪರಿಷ್ವಕ್ತಃ ಸ್ವೇನ ಪರೇಣ ಪ್ರಾಜ್ಞೇನ ಆತ್ಮನಾ ಪ್ರಿಯಯೇವ ಪುರುಷಃ। ತೇನ ನ ಪೃಥಕ್ತ್ವೇನ ವ್ಯವಸ್ಥಿತಾನಿ ಕರಣಾನಿ[5] ವಿಷಯಾಶ್ಚ। ತದಭಾವಾತ್ ವಿಶೇಷದರ್ಶನಂ ನಾಸ್ತಿ। ಕರಣಾದಿಕೃತಂ ಹಿ ತತ್ ನಾತ್ಮಕೃತಮ್। ಆತ್ಮಕೃತಮಿವ ಪ್ರತ್ಯವಭಾಸತೇ। ತಸ್ಮಾತ್ ತತ್ಕೃತೇಯಂ ಭ್ರಾನ್ತಿಃ ಆತ್ಮನೋ ದೃಷ್ಟಿಃ ಪರಿಲುಪ್ಯತ ಇತಿ ॥

---

1 ಶ್ರುತಿಯು ಪ್ರತ್ಯಕ್ಷವಿರುದ್ಧವಾದ್ದರಿಂದ ಅದನ್ನು ಅನಾದರಮಾಡಬೇಕು ಎಂದು ಭಾವ.

2. ಮನಸ್ಸಹಕೃತವಾದ ಚಕ್ಷುರಿಂದ್ರಿಯದ ವ್ಯಾಪಾರದ ನಿಮಿತ್ತದಿಂದ ಈ ಅನುಭವವಾಗುತ್ತದೆ ; ಸ್ವತಃ ಆತ್ಮನಿಗೆ ಕಾಣುವದಿಲ್ಲ ಎಂಬ ಅನುಭವವಿಲ್ಲ ಎಂದು ಭಾವ.

3. ಆತ್ಮದೃಷ್ಟಿಯು ಸ್ವಪ್ನದಲ್ಲಿಯೂ ಇರುವದರಿಂದ ನಿತ್ಯ, ಕರಣದ ದೃಷ್ಟಿಯು ಅನಿತ್ಯ -ಹೀಗೆ ಎರಡು ಬಗೆಯ ದೃಷ್ಟಿಗಳಿವೆ ಎಂದರ್ಥ. ಈ ವಿಷಯಕ್ಕೆ ೧-೪-೧೦ (ಭಾ. ಭಾ. ೧೬೧), ೩-೪-೨ (ಭಾ. ಭಾ. ೪೮)- ಇವನ್ನೂ ನೋಡಿರಿ.

4. ಇದರ ಮುಂದಿರುವ 'ಸ್ವೇನ' ಎಂಬ ಮಾತು ಅನವಶ್ಯವೆಂದು ಬಿಟ್ಟುಬಿಟ್ಟಿದೆ.

5 ಈ ಬಹುವಚನವು ಹಿಂದೆಯೂ 'ಕರಣಾನಿ ಅನ್ಯತ್ವೇನ ವ್ಯವತಿಷ್ಠನ್ತೇ' ಎಂಬ ಬಹುವಚನಪಾಠವೇ ಸಾಧುವೆಂದು ತಿಳಿಸುತ್ತದೆ.

(ಭಾಷ್ಯಾರ್ಥ)

(ಪ್ರಶ್ನೆ):- ಹಾಗಾದರೆ (ಇಲ್ಲಿ) ಕಾಣುವದಿಲ್ಲವೆಂಬುದು ಹೇಗೆ (ಆಗುತ್ತದೆ) ?

(ಉತ್ತರ):- ಹೇಳುತ್ತೇವೆ. ಆದರೆ ಅದು ಇಲ್ಲ, ಅದು ಯಾವದು ? ಎಂದರೆ ಎರಡನೆಯದು, ವಿಷಯವಾದದ್ದು. ಎಂಥದ್ದು ? ಎಂದರೆ ತನಗಿಂತ, ದ್ರಷ್ಟೃವಿಗಿಂತ ಬೇರೆಯಾಗಿ ಬೇರೆಯಾಗಿದ್ದು ವಿಂಗಡಿಸಿಕೊಂಡಿರುವದು[1] (ಇಲ್ಲ, ಹಾಗಿದ್ದಿದ್ದರೆ) ಅದನ್ನು ಕಾಣಬಹುದಾಗಿತ್ತು, ಅರಿಯಬಹುದಾಗಿತ್ತು. **ವಿಶೇಷವನ್ನು ಕಾಣುವದಕ್ಕೆ ಕಾರಣವಾದ ಆ ಅಂತಃಕರಣ, ಚಕ್ಷುಸ್ಸು, ಮತ್ತು ರೂಪ- ಎಂಬುದಿದೆಯಲ್ಲ, ಅದನ್ನು (ಜಾಗ್ರತ್ಸ್ವಪ್ನಗಳಲ್ಲಿ) ಅವಿದ್ಯೆಯಿಂದ ಮತ್ತೊಂದೆಂದು ಮುಂದೊಡ್ಡಲಾಗಿತ್ತು. ಅದು ಈ ಕಾಲದಲ್ಲಿ ಆತ್ಮನು ಪರ(ಮಾತ್ಮ)ನಿಂದ ಆಲಿಂಗಿತನಾಗಿರುವದರಿಂದ ಒಂದಾಗಿ ಬಿಟ್ಟಿರುತ್ತದೆ.** (ಇದರ ವಿವರ): ದ್ರಷ್ಟೃವು ಪರಿಚ್ಛಿನ್ನನಾಗಿರುವದರಿಂದ ವಿಶೇಷವನ್ನು ಕಾಣುವದಕ್ಕಾಗಿ ಕರಣಗಳು ಬೇರೆಯಾಗಿದ್ದುಕೊಂಡಿರುತ್ತವೆ. ಆದರೆ ಇವನು ತನ್ನದೇ ಆದ, ಸರ್ವಾತ್ಮನಾದ ಪರಮಾತ್ಮನಾದ ಪ್ರಾಜ್ಞಾತ್ಮನ (ರೂಪದೊಡನೆ), ಪುರುಷನು ಪ್ರಿಯಳಿಂದ (ಆಲಿಂಗಿತನಾಗಿರು)ವಂತೆ, ಆಲಿಂಗಿತನಾಗಿಬಿಟ್ಟಿರುತ್ತಾನೆ[2]. ಆದರಿಂದ ಕರಣಗಳೂ ವಿಷಯಗಳೂ ಬೇರೆಯಾಗಿ ಇರುವದಿಲ್ಲ. ಅವು ಇಲ್ಲದ್ದರಿಂದ ವಿಶೇಷದ ದರ್ಶನವು (ಇಲ್ಲಿ) ಇರುವದಿಲ್ಲ. ಏಕೆಂದರೆ ಅದು ಕರಣವೇ ಮುಂತಾದವುಗಳಿಂದಾಗತಕ್ಕದ್ದೇ ಹೊರತು ಆತ್ಮನಿಂದಾಗತಕ್ಕದ್ದಲ್ಲ. (ಆದರೂ) ಆತ್ಮನಿಂದಾದಂತೆ ತೋರುತ್ತಿರುತ್ತದೆ. ಆದ್ದರಿಂದ ಆತ್ಮನ ದೃಷ್ಟಿಯು ಪರಿಲೋಪವಾಗುತ್ತದೆ ಎಂಬೀ ಭ್ರಾಂತಿಯು ಇದರಿಂದಾದದ್ದು[3].

## ಘ್ರಾಣಾದಿಕರಣವ್ಯಾಪಾರಗಳಿಲ್ಲದಿರುವದಕ್ಕೆ ದ್ವಿತೀಯಾಭಾವವೇ ಕಾರಣ

(ಉಪನಿಷತ್ತು)

**ಯದ್ವೈ ತನ್ನ ಜಿಘ್ರತಿ ಜಿಘ್ರನ್ ವೈ ತನ್ನ ಜಿಘ್ರತಿ ನ ಹಿ ಘ್ರಾತುರ್ಘ್ರಾತೇರ್ವಿಪರಿಲೋಪೋ ವಿದ್ಯತೇಽವಿನಾಶಿತ್ವಾತ್ ನ ತು ತದ್ದ್ವಿತೀಯಮಸ್ತಿ ತತೋಽನ್ಯದ್ವಿಭಕ್ತಂ ಯಜ್ಜಿಘ್ರೇತ್ ॥**

---

1. ಆತ್ಮನಿಗಿಂತ ವಿಲಕ್ಷಣವಾಗಿರುವ ಅನಾತ್ಮವು; ತನ್ನೊಳಗೆ ವಿಂಗಡವಿರುವದು ವಿಭಕ್ತವು. ಆತ್ಮನಿಗಿಂತ ಬೇರೆಯಾಗಿ ವಿಂಗಡವಾಗಿರುವ ಅಂತಃಕರಣ, ಚಕ್ಷುಸ್ಸು, ರೂಪ, -ಮುಂತಾದವುಗಳು ಈಗ ಇರುವದಿಲ್ಲ ಎಂದು ಅಭಿಪ್ರಾಯ -ಎಂದು ವಾರ್ತಿಕ.

2. ತನ್ನ ಸ್ವರೂಪವಾದ ಸರ್ವಾತ್ಮಭಾವವನ್ನು ಪಡೆದುಕೊಂಡುಬಿಟ್ಟಿರುತ್ತಾನೆ.

3. ಅಂತಃಕರಣದಿಂದಾಗುವದನ್ನು ಆತ್ಮನಿಂದಾದದ್ದು ಎಂದು ತಿಳಿದುಕೊಂಡದ್ದರಿಂದಾದದ್ದು.

ಯದ್ವೈ ತನ್ನ ರಸಯತೇ ರಸಯನ್ ವೈ ತನ್ನ ರಸಯತೇ ನ ಹಿ ರಸಯಿತೂ ರಸಯತೇರ್ವಿಪರಿಲೋಪೋ ವಿದ್ಯತೇಽವಿನಾಶಿತ್ವಾನ್ನ ತು ತದ್ದ್ವಿತೀಯಮಸ್ತಿ ತತೋಽನ್ಯದ್ವಿಭಕ್ತಂ ಯದ್ ರಸಯೇತ್ ॥ ೨೫ ॥

ಯದ್ವೈ ತನ್ನ ವದತಿ ವದನ್ ವೈ ತನ್ನ ವದತಿ ನ ಹಿ ವಕ್ತುರ್ವಕ್ತೇರ್ವಿಪರಿಲೋಪೋ ವಿದ್ಯತೇಽವಿನಾಶಿತ್ವಾನ್ನ ತು ತದ್ದ್ವಿತೀಯಮಸ್ತಿ ತತೋಽನ್ಯದ್ವಿಭಕ್ತಂ ಯದ್ ವದೇತ್ ॥ ೨೬ ॥

ಯದ್ವೈ ತನ್ನ ಶೃಣೋತಿ ಶೃಣ್ವನ್ ವೈ ತನ್ನ ಶೃಣೋತಿ ನ ಹಿ ಶ್ರೋತುಃ ಶ್ರುತೇರ್ವಿಪರಿಲೋಪೋ ವಿದ್ಯತೇಽವಿನಾಶಿತ್ವಾನ್ನ ತು ತದ್ದ್ವಿತೀಯಮಸ್ತಿ ತತೋಽನ್ಯದ್ವಿಭಕ್ತಂ ಯಚ್ಛೃಣುಯಾತ್ ॥ ೨೭ ॥

ಯದ್ವೈ ತನ್ನ ಮನುತೇ ಮನ್ವಾನೋ ವೈ ತನ್ನ ಮನುತೇ ನ ಹಿ ಮನ್ತುರ್ಮತೇರ್ವಿಪರಿಲೋಪೋ ವಿದ್ಯತೇಽವಿನಾಶಿತ್ವಾನ್ನ ತು ತದ್ದ್ವಿತೀಯಮಸ್ತಿ ತತೋಽನ್ಯದ್ವಿಭಕ್ತಂ ಯನ್ಮನ್ವೀತ ॥ ೨೮ ॥

ಯದ್ವೈ ತನ್ನ ಸ್ಪೃಶತಿ ಸ್ಪೃಶನ್ ವೈ ತನ್ನ ಸ್ಪೃಶತಿ ನ ಹಿ ಸ್ಪ್ರಷ್ಟುಃ ಸ್ಪೃಷ್ಟೇರ್ವಿಪರಿಲೋಪೋ ವಿದ್ಯತೇಽವಿನಾಶಿತ್ವಾನ್ನ ತು ತದ್ದ್ವಿತೀಯಮಸ್ತಿ ತತೋಽನ್ಯದ್ವಿಭಕ್ತಂ ಯತ್ ಸ್ಪೃಶೇತ್ ॥ ೨೯ ॥

ಯದ್ವೈ ತನ್ನ ವಿಜಾನಾತಿ ವಿಜಾನನ್ ವೈ ತನ್ನ ವಿಜಾನಾತಿ ನ ಹಿ ವಿಜ್ಞಾತುರ್ವಿಜ್ಞಾತೇರ್ವಿಪರಿಲೋಪೋ ವಿದ್ಯತೇಽವಿನಾಶಿತ್ವಾನ್ನ ತು ತದ್ದ್ವಿತೀಯಮಸ್ತಿ ತತೋಽನ್ಯದ್ ವಿಭಕ್ತಂ ಯದ್ ವಿಜಾನೀಯಾತ್ ॥ ೩೦ ॥

೨೪. ಅಲ್ಲಿ ಮೂಸುವದಿಲ್ಲವೆಂಬುದಿದೆಯಲ್ಲ, ಮೂಸುವವನಾಗಿಯೇ ಅಲ್ಲಿ ಮೂಸುವದಿಲ್ಲ; ಮೂಸುವವನ ಮೂಸುವಿಕೆಗೆ ವಿಪರಿಲೋಪವೇ ಇಲ್ಲ, ಏಕೆಂದರೆ (ಅದು) ವಿನಾಶಿಯಲ್ಲ. ಆದರೆ ಯಾವದನ್ನು ಮೂಸಬಹುದೋ ಆ ಎರಡನೆಯದು ತನಗಿಂತ ಬೇರೆಯಾಗಿ ವಿಂಗಡವಾಗಿ ಇರುವದಿಲ್ಲ.

೨೫. ಅಲ್ಲಿ ಸವಿಯುವದಿಲ್ಲವೆಂಬುದಿದೆಯಲ್ಲ, ಸವಿಯುವವನಾಗಿಯೇ ಅಲ್ಲಿ ಸವಿಯುವದಿಲ್ಲ; ಸವಿಯುವವನ ಸವಿಯುವಿಕೆಗೆ ವಿಪರಿಲೋಪವೇ ಇಲ್ಲ, ಏಕೆಂದರೆ (ಅದು) ವಿನಾಶಿಯಲ್ಲ. ಆದರೆ

ಯಾವದನ್ನು ನವಿಯಬಹುದೋ ಆ ಎರಡನೆಯದು ತನಗಿಂತ ಬೇರೆಯಾಗಿ ವಿಂಗಡವಾಗಿ ಇರುವದಿಲ್ಲ.

೨೬. ಅಲ್ಲಿ ಮಾತಾಡುವದಿಲ್ಲವೆಂಬುದಿದೆಯಲ್ಲ, ಮಾತಾಡುವವನಾಗಿಯೇ ಅಲ್ಲಿ ಮಾತಾಡುವದಿಲ್ಲ, ಮಾತಾಡುವವನ ಮಾತಾಡುವಿಕೆಗೆ ವಿಪರಿಲೋಪವೇ ಇಲ್ಲ, ಏಕೆಂದರೆ (ಅದು) ವಿನಾಶಿಯಲ್ಲ. ಆದರೆ ಯಾವದನ್ನು ಮಾತಾಡಬಹುದೋ ಆ ಎರಡನೆಯದು ತನಗಿಂತ ಬೇರೆಯಾಗಿ ವಿಂಗಡವಾಗಿ ಇರುವದಿಲ್ಲ.

೨೭. ಅಲ್ಲಿ ಕೇಳುವದಿಲ್ಲವೆಂಬುದಿದೆಯಲ್ಲ, ಕೇಳುವವನಾಗಿಯೇ ಅಲ್ಲಿ ಕೇಳುವದಿಲ್ಲ ; ಕೇಳುವವನ ಕೇಳ್ವಿಗೆ ವಿಪರಿಲೋಪವೇ ಇಲ್ಲ, ಏಕೆಂದರೆ (ಅದು) ವಿನಾಶಿಯಲ್ಲ, ಆದರೆ ಯಾವದನ್ನು ಕೇಳಬಹುದೋ ಆ ಎರಡನೆಯದು ತನಗಿಂತ ಬೇರೆಯಾಗಿ ವಿಂಗಡವಾಗಿ ಇರುವದಿಲ್ಲ.

೨೮. ಅಲ್ಲಿ ಮನನಮಾಡುವದಿಲ್ಲವೆಂಬುದಿದೆಯಲ್ಲ, ಮನನಮಾಡುವವನಾಗಿಯೇ ಅಲ್ಲಿ ಮನನಮಾಡುವದಿಲ್ಲ ; ಮನನಮಾಡುವವನ ಮತಿಗೆ ವಿಪರಿಲೋಪವೇ ಇಲ್ಲ, ಏಕೆಂದರೆ (ಅದು) ವಿನಾಶಿಯಲ್ಲ. ಆದರೆ ಯಾವದನ್ನು ಮನನಮಾಡಬಹುದೋ ಆ ಎರಡನೆಯದು ತನಗಿಂತ ಬೇರೆಯಾಗಿ ವಿಂಗಡವಾಗಿ ಇರುವದಿಲ್ಲ.

೨೯. ಅಲ್ಲಿ ಸೋಂಕುವದಿಲ್ಲವೆಂಬುದಿದೆಯಲ್ಲ, ಸೋಂಕುವವನಾಗಿಯೇ ಅಲ್ಲಿ ಸೋಂಕುವದಿಲ್ಲ ; ಸೋಂಕುವವನ ಸೋಂಕಿಗೆ ವಿಪರಿಲೋಪವೇ ಇಲ್ಲ, ಏಕೆಂದರೆ (ಅದು) ವಿನಾಶಿಯಲ್ಲ. ಆದರೆ ಯಾವದನ್ನು ಸೋಂಕಬಹುದೋ ಆ ಎರಡನೆಯದು ತನಗಿಂತ ಬೇರೆಯಾಗಿ ವಿಂಗಡವಾಗಿ ಇರುವದಿಲ್ಲ.

೩೦. ಅಲ್ಲಿ ಅರಿಯುವದಿಲ್ಲವೆಂಬುದಿದೆಯಲ್ಲ, ಅರಿಯುವವನಾಗಿಯೇ ಅಲ್ಲಿ ಅರಿಯುವದಿಲ್ಲ ; ಅರಿಯುವವನ ಅರಿವಿಗೆ ವಿಪರಿಲೋಪವೇ ಇಲ್ಲ, ಏಕೆಂದರೆ (ಅದು) ವಿನಾಶಿಯಲ್ಲ. ಆದರೆ ಯಾವದನ್ನು ಅರಿಯಬಹುದೋ ಆ ಎರಡನೆಯದು ತನಗಿಂತ ಬೇರೆಯಾಗಿ ವಿಂಗಡವಾಗಿ ಇರುವದಿಲ್ಲ.

# ಮೂವತ್ತನೆಯ ಕಂಡಿಕೆಯುವರೆಗಿನ ಗ್ರಂಥದ ತಾತ್ಪರ್ಯ

(ಭಾಷ್ಯ)

೨೨೭. ಸಮಾನಮನ್ಯತ್। ಯದ್ವೈ ತನ್ನ ಜಿಘ್ರತಿ। ಯದ್ವೈ ತನ್ನ ರಸಯತೇ। ಯದ್ವೈ ತನ್ನ ವದತಿ। ಯದ್ವೈ ತನ್ನ ಶೃಣೋತಿ। ಯದ್ವೈ ತನ್ನ ಮನುತೇ। ಯದ್ವೈ ತನ್ನ ಸ್ಪೃಶತಿ। ಯದ್ವೈ ತನ್ನ ವಿಜಾನಾತಿ। ಮನನವಿಜ್ಞಾನಯೋಃ ದೃಷ್ಟ್ಯಾದಿಸಹಕಾರಿತ್ವೇಽಪಿ ಸತಿ ಚಕ್ಷುರಾದಿನಿರಪೇಕ್ಷೋ ಭೂತಭವಿಷ್ಯದ್ವರ್ತಮಾನವಿಷಯವ್ಯಾಪಾರೋ ವಿದ್ಯತೇ ಇತಿ ಪೃಥಗ್ಗ್ರಹಣಮ್ ॥

(ಭಾಷ್ಯಾರ್ಥ)

'ಅಲ್ಲಿ ಮೂಸುವದಿಲ್ಲವೆಂಬುದಿದೆಯಲ್ಲ', 'ಅಲ್ಲಿ ಸವಿಯುವದಿಲ್ಲವೆಂಬುದಿದೆಯಲ್ಲ', 'ಅಲ್ಲಿ ಮಾತಾಡುವದಿಲ್ಲವೆಂಬುದಿದೆಯಲ್ಲ', 'ಅಲ್ಲಿ ಕೇಳುವದಿಲ್ಲವೆಂಬುದಿದೆಯಲ್ಲ', 'ಅಲ್ಲಿ ಮನನಮಾಡುವದಿಲ್ಲವೆಂಬುದಿದೆಯಲ್ಲ', 'ಅಲ್ಲಿ ಮುಟ್ಟುವದಿಲ್ಲವೆಂಬುದಿದೆಯಲ್ಲ', 'ಅಲ್ಲಿ ಅರಿಯುವದಿಲ್ಲವೆಂಬುದಿದೆಯಲ್ಲ' -ಎಂಬ ಮಿಕ್ಕ (ಕಂಡಿಕೆಗಳ ಭಾಗವು) ಸಮಾನವಾಗಿರುತ್ತದೆ. ಮನನ, ವಿಜ್ಞಾನ- ಇವುಗಳು ದೃಷ್ಟಿಯೇ ಮುಂತಾದವುಗಳಿಗೆ ಸಹಕಾರಿಗಳಾಗಿರುವವಾದರೂ ಚಕ್ಷುರಾದಿಗಳ ಬಯಕೆಯಿಲ್ಲದೆ ಭೂತಭವಿಷ್ಯದ್ವರ್ತಮಾನವಿಷಯಗಳಲ್ಲಿ ವ್ಯಾಪಾರವೂ ಇದೆ[1]ಯಾದ್ದರಿಂದ (ಅವನ್ನು) ದೃಷ್ಟ್ಯಾದಿಗಳನ್ನಲ್ಲದೆ ಬೇರೆಯಾಗಿಯೂ ತೆಗೆದುಕೊಂಡು (ಶ್ರುತಿಯಲ್ಲಿ) ಹೇಳಿರುತ್ತದೆ.

## ಚರ್ಚೆ: ಆತ್ಮನ ದೃಷ್ಟ್ಯಾದಿಗಳು ಪರಸ್ಪರಭಿನ್ನವೋ, ಅಭಿನ್ನವೋ?

### ಭರ್ತೃಪ್ರಪಂಚಮತ: ದೃಷ್ಟ್ಯಾದಿಗಳು ಬೇರೆಬೇರೆ

(ಭಾಷ್ಯ)

೨೨೮. ಕಿಂ ಪುನಃ ದೃಷ್ಟ್ಯಾದೀನಾಮ್ ಅಗ್ನೇಃ ಔಷ್ಣ್ಯಪ್ರಕಾಶನಜ್ವಲನಾದಿವತ್ ಧರ್ಮಭೇದಃ, ಆಹೋಸ್ವಿತ್ ಅಭಿನ್ನಸ್ಯೈವ ಧರ್ಮಸ್ಯ ಪರೋಪಾಧಿನಿಮಿತ್ತಂ ಧರ್ಮಾನ್ಯತ್ವಮಿತಿ। ಅತ್ರ ಕೇಚಿದ್ ವ್ಯಾಚಕ್ಷತೇ। (ಆತ್ಮ) ವಸ್ತುನಃ[2] ಸ್ವತ ಏವೈಕತ್ವಂ ನಾನಾತ್ವಂ ಚ ಯಥಾ ಗೋಃ ಗೋದ್ರವ್ಯತಯಾ ಏಕತ್ವಮ್, ಸಾಸ್ನಾದೀನಾಂ ಧರ್ಮಾಣಾಂ ಪರಸ್ಪರತೋ ಭೇದಃ। ಯಥಾ

---

1. ಚಕ್ಷುರಾದಿಗಳು ಎದುರಿಗಿರುವದನ್ನು ಮಾತ್ರವೇ ತಿಳಿಸುತ್ತವೆ, ಅವುಗಳ ವ್ಯಾಪಾರಕ್ಕೂ ಮನನವಿಜ್ಞಾನಗಳು ಬೇಕು. ಆದರೆ ಮನನವಿಜ್ಞಾನಗಳು ಸ್ವತಂತ್ರವಾಗಿಯೂ ವ್ಯಾಪಾರಮಾಡುತ್ತವೆ; ಅವುಗಳ ವಿಷಯವು ಮೂರು ಕಾಲದಲ್ಲಿ ಯಾವದೊಂದರಲ್ಲಾದರೂ ಇರಬಹುದು.

2. ಇಲ್ಲಿ ಆತ್ಮಶಬ್ದವು ಭಾಷ್ಯದಲ್ಲಿತ್ತೆ ಎಂಬುದು ವಿಚಾರಣೀಯವಾಗಿದೆ.

ಸ್ಥೂಲೇಷು ಏಕತ್ವಂ ನಾನಾತ್ವಂ ಚ ತಥಾ ನಿರವಯವೇಷು ಅಮೂರ್ತ ವಸ್ತುಷು ಏಕತ್ವಂ ನಾನಾತ್ವಂ ಚ ಅನುಮೇಯಮ್। ಸರ್ವತ್ರಾವ್ಯಭಿಚಾರ ದರ್ಶನಾತ್। ಆತ್ಮನೋಽಪಿ ತದ್ವದೇವ ದೃಷ್ಟ್ಯಾದೀನಾಂ ಪರಸ್ಪರಂ ನಾನಾತ್ವಮ್, ಆತ್ಮನಾ ಚೈಕತ್ವಮಿತಿ ॥

(ಭಾಷ್ಯಾರ್ಥ)

(ಪ್ರಶ್ನೆ) :- (ಈ) ದೃಷ್ಟಿ ಮುಂತಾದವುಗಳು ಬೆಂಕಿಯ ಬಿಸಿ, ಬೆಳಗುವದು, ಉರಿಯುವದು- ಮುಂತಾದವುಗಳಂತೆ ಬೇರೆಬೇರೆ ಧರ್ಮಗಳೊ, ಅಥವಾ ಅಭಿನ್ನವಾಗಿಯೇ ಇದ್ದುಕೊಂಡಿರುವ ಧರ್ಮಕ್ಕೆ ಬೇರೆಬೇರೆಯ ಧರ್ಮವಾಗಿ ಕಾಣುವದು ಮತ್ತೊಂದು ಉಪಾಧಿಯ ನಿಮಿತ್ತವೊ[1] ?

(ಭರ್ತೃಪ್ರಪಂಚರ ಉತ್ತರ) :- ಇಲ್ಲಿ ಕೆಲವರು ವ್ಯಾಖ್ಯಾನಮಾಡಿರುವದು ಹೇಗೆಂದರೆ, (ಆತ್ಮ)ವಸ್ತುವಿಗೆ ಏಕತ್ವವೂ ನಾನಾತ್ವವೂ ಸ್ವತಂತ್ರವಾಗಿಯೇ ಇರುತ್ತದೆ.[2] ಉದಾಹರಣೆಗೆ ಗೋವಿಗೆ ಗೋದ್ರವ್ಯರೂಪದಿಂದ ಏಕತ್ವವಿದೆ ; ಗಂಗೆದೊಗಲು ಮುಂತಾದ ಧರ್ಮಗಳು ಒಂದಕ್ಕೊಂದು ಭಿನ್ನವಾಗಿರುತ್ತವೆ[3] ಸ್ಥೂಲವಸ್ತುಗಳಲ್ಲಿ ಹೇಗೆ ಏಕತ್ವವೂ ನಾನಾತ್ವವೂ ಇರುವದೋ ಹಾಗೆಯೇ ಅವಯವರಹಿತವಾದ ಅಮೂರ್ತವಸ್ತುಗಳಲ್ಲಿಯೂ ಏಕತ್ವವೂ ನಾನಾತ್ವವೂ (ಇದೆ ಎಂದು) ಅನುಮಾನಿಸಬಹುದಾಗಿರುತ್ತದೆ. ಏಕೆಂದರೆ (ಏಕತ್ವನಾನಾತ್ವವು) ಎಲ್ಲಿಯೂ ವ್ಯಭಿಚರಿತವಾಗಿರುವದಿಲ್ಲ. ಹೀಗೆಯೇ ಆತ್ಮನ ದೃಷ್ಟಿ ಮುಂತಾದವುಗಳಿಗೂ ಪರಸ್ಪರವಾಗಿ ನಾನಾತ್ವವಿದೆ, ಆತ್ಮರೂಪದಿಂದ ಏಕತ್ವವೂ ಇದೆ.[4]

---

1. ಇಲ್ಲಿ ಮೂಲದಲ್ಲಿರುವಂತೆಯೇ ಕನ್ನಡಿಸಿದೆ. 'ಅಗ್ನೇಃ ಔಷ್ಣ್ಯಪ್ರಕಾಶನ ಜ್ವಲನಾದಿವತ್' ಎಂಬುದು 'ಅಭಿನ್ನಸ್ಯೈವ' ಎಂಬುದಕ್ಕೇ ಅನ್ವಯಿಸುವಂತೆ ಇದ್ದರೆ ಬೆಂಕಿಯ ಬಿಸಿ, ಬೆಳಕು, ಉರಿ- ಇವುಗಳ (ಉಪಾಧಿಯಿಂದ ಬೇರೆಬೇರೆ ಧರ್ಮಗಳಾಗಿ ತೋರು)ವಂತೆ ಅಭಿನ್ನವಾಗಿಯೇ ಇರುವ ಧರ್ಮವು ಮತ್ತೊಂದು ಉಪಾಧಿಯಿಂದ ಬೇರೆ ಬೇರೆಯಾಗಿ ತೋರುವದೊ ? -ಎಂಬರ್ಥವು ಸರಳವಾಗಿ ಆಗುತ್ತದೆ

2. ಯಾವ ವಸ್ತುವಾದರೂ ಏಕತ್ವನಾನಾತ್ವರೂಪವಾಗಿರುತ್ತದೆ, ಭಿನ್ನಾಭಿನ್ನಾತ್ಮಕವಾಗಿದೆ- ಎಂಬುದು ಭರ್ತೃಪ್ರಪಂಚರ ಮತ.

3. ಆದ್ದರಿಂದ ಗೋವುಭಿನ್ನಾಭಿನ್ನವಾಗಿರುತ್ತದೆ. ಏಕಾನೇಕಾತ್ಮಕ, ಭಿನ್ನಾಭಿನ್ನಾತ್ಮಕ, ದ್ವೈತಾದ್ವೈತಾತ್ಮಕ, ಸಮಸ್ತವ್ಯಸ್ತಾತ್ಮಕ, ನಾನಾರಸ- ಇವೆಲ್ಲ ಒಂದೇ ಅರ್ಥದ ಶಬ್ದಗಳು.

4. ಆತ್ಮನು ದ್ವೈತಾದ್ವೈತರೂಪನಾಗಿರುತ್ತಾನಾದರೂ ಚಿದ್ರೂಪವು ಅವನಲ್ಲಿರುವದರಿಂದ 'ಪಶ್ಯನ್ವೈ' ಎಂದಿದೆ; ದೃಷ್ಟಿಯು ನಿತ್ಯಾತ್ಮನ ಧರ್ಮವಾದ್ದರಿಂದ ಅವಕ್ಕೆ ಲೋಪವೂ ಇಲ್ಲ. ಆದರೂ ದ್ವೈತಾದ್ವೈತಾತ್ಮಕನಾದ ಆತ್ಮನಿಗಿಂತ ಬೇರೆಯಾದ ದ್ರಷ್ಟವ್ಯವು ಇರುವದಿಲ್ಲವಾದ್ದರಿಂದ 'ನ ಪಶ್ಯತಿ' ಎಂದಿದೆ -ಎಂಬುದು ಭರ್ತೃಪ್ರಪಂಚರು 'ಯದ್ವೈ ತನ್ನ ಪಶ್ಯತಿ'- ಎಂಬ ಶ್ರುತಿಗೆ ಮಾಡಿರುವ ವ್ಯಾಖ್ಯಾನ. ವಾರ್ತಿಕ ೪-೩-೧೫೩೭ ರಿಂದ ೧೫೬೫ರವರೆಗೆ ಇದರ ವಿವರಣೆಯಿದೆ ; ಅಲ್ಲಿಂದ ಮುಂದಕ್ಕೆ ಅದರ ಖಂಡನೆಯಿದೆ.

## ಭರ್ತೃಪ್ರಪಂಚಮತವು ಶ್ರುತಿವಿರುದ್ಧ

(ಭಾಷ್ಯ)

೨೭. ನ। ಅನ್ಯಪರತ್ವಾತ್। ನ ಹಿ ದೃಷ್ಟ್ಯಾದಿಧರ್ಮಭೇದಪ್ರದರ್ಶನಪರಮಿದಂ ವಾಕ್ಯಮ್ 'ಯದ್ವೈ ತತ್' ಇತ್ಯಾದಿ। ಕಿಂ ತರ್ಹಿ? ಯದಿ ಚೈತನ್ಯಾತ್ಮಜ್ಯೋತಿಃ ಕಥಂ ನ ಜಾನಾತಿ ಸುಷುಪ್ತೇ? ನೂನಮ್ ಅತೋ ನ ಚೈತನ್ಯಾತ್ಮಜ್ಯೋತಿಃ ಇತ್ಯೇವಮ್ ಆಶಙ್ಕಾಪ್ರಾಪ್ತೌ ತನ್ನಿರಾಕರಣಾಯ ಏತದಾರಬ್ಧಮ್ 'ಯದ್ವೈ ತತ್' ಇತ್ಯಾದಿ। ಯದಸ್ಯ ಜಾಗ್ರತ್ಸ್ವಪ್ನಯೋಃ ಚಕ್ಷುರಾದ್ಯನೇಕೋಪಾಧಿದ್ವಾರಂ ಚೈತನ್ಯಾತ್ಮಜ್ಯೋತಿಃಸ್ವಾಭಾವ್ಯಮ್ ಉಪಲಕ್ಷಿತಂ ದೃಷ್ಟ್ಯಾದ್ಯಭಿಧೇಯವ್ಯವಹಾರಾಪನ್ನಮ್ ಸುಷುಪ್ತೇ ಉಪಾಧಿಭೇದವ್ಯಾಪಾರನಿವೃತ್ತೌ ಅನುದ್ಭಾಸ್ಯಮಾನತ್ವಾತ್ ಅನುಪಲಕ್ಷ್ಯಮಾಣಸ್ವಭಾವಮಪಿ ಉಪಾಧಿಭೇದೇನ ಭಿನ್ನಮಿವ ಯಥಾಪ್ರಾಪ್ತಾನುವಾದೇನೈವ ವಿದ್ಯಮಾನವದುಚ್ಯತೇ[1]। ತತ್ರ ದೃಷ್ಟ್ಯಾದಿಧರ್ಮಭೇದಕಲ್ಪನಾ ವಿವಕ್ಷಿತಾರ್ಥಾನಭಿಜ್ಞತಯಾ। ಸೈನ್ಧವಘನವತ್ ಪ್ರಜ್ಞಾನೈಕರಸಘನಶ್ರುತಿವಿರೋಧಾಚ್ಚ। "ವಿಜ್ಞಾನಮಾನನ್ದಂ ಬ್ರಹ್ಮ" (೩-೯-೨೮), "ಸತ್ಯಂ ಜ್ಞಾನಮ್" (ತೈ ೨-೧), "ಪ್ರಜ್ಞಾನಂ ಬ್ರಹ್ಮ" (ಐ. ೫-೩)- ಇತ್ಯಾದಿಶ್ರುತಿಭ್ಯಶ್ಚ ॥

(ಭಾಷ್ಯಾರ್ಥ)

ಹಾಗಲ್ಲ, ಏಕೆಂದರೆ (ಶ್ರುತಿಯು) ಅನ್ಯಪರವಾಗಿರುತ್ತದೆ. (ಇದರ ವಿವರ): 'ಯದ್ವೈ ತತ್' ಎಂಬಿದೇ ಮುಂತಾದ ಈ ವಾಕ್ಯವು ದೃಷ್ಟ್ಯಾದಿಧರ್ಮಗಳು ಬೇರೆ ಬೇರೆ ಎಂದು ಹೇಳುವದರಲ್ಲಿ ತಾತ್ಪರ್ಯವುಳ್ಳದ್ದಲ್ಲ[2]; ಮತ್ತೇನೆಂದರೆ (ಆತ್ಮನು) ಚೈತನ್ಯಸ್ವರೂಪವಾದ ಜ್ಯೋತಿಯುಳ್ಳವನಾದರೆ ಸುಷುಪ್ತಿಯಲ್ಲಿ ಅರಿಯದೆ ಇರುವನಲ್ಲ, (ಅದು) ಹೇಗೆ (ಯುಕ್ತವಾಗುತ್ತದೆ)? ಆದ್ದರಿಂದ (ಇವನು) ಚೈತನ್ಯಾತ್ಮಜ್ಯೋತಿಯಲ್ಲವೆಂಬುದೇ ನಿಜ -ಎಂದಿಂತು ಆಶಂಕೆಯು ಬಂದೊದಗಲು ಅದನ್ನು ತಳ್ಳಿಹಾಕುವದಕ್ಕಾಗಿ 'ಯದ್ವೈ ತತ್' ಎಂದು ಮುಂತಾಗಿರುವ ಈ (ವಾಕ್ಯದ) ಪ್ರಾರಂಭವಾಗಿರುತ್ತದೆ. ಎಚ್ಚರ ಕನಸುಗಳಲ್ಲಿ ಚಕ್ಷುಸ್ಸೇ ಮುಂತಾದ ಅನೇಕ ಉಪಾಧಿಗಳ ಮೂಲಕವಾಗಿ ಕಂಡುಬರುವ ಈ ಆತ್ಮನ ಚೈತನ್ಯಾತ್ಮಜ್ಯೋತಿಃಸ್ವಾಭಾವ್ಯವು ದೃಷ್ಟಿಯೇ ಮುಂತಾದ (ಶಬ್ದಗಳಿಂದ) ಕರೆಯಿಸಿಕೊಳ್ಳುವ ವ್ಯವಹಾರವನ್ನು ಪಡೆಯುತ್ತದೆ

1. 'ವಿದ್ಯಮಾನತ್ವಮುಚ್ಯತೇ' ಎಂಬ ಅಚ್ಚಿನ ಪಾಠವನ್ನು ಹೀಗೆ ತಿದ್ದಿಕೊಂಡಿದೆ.

2. ಶ್ರುತಿಯು ಆತ್ಮನು ಚೈತನ್ಯಸ್ವರೂಪನೇ ಎಂಬಿದನ್ನು ತೋರಿಸಿಕೊಡುವದಕ್ಕೆ ಹೊರಟಿದೆ; ಆದ್ದರಿಂದ ದೃಷ್ಟ್ಯಾದಿಗಳು ಬೇರೆಬೇರೆ ಎಂಬುದಕ್ಕೆ ಈ ವಾಕ್ಯವು ಪ್ರಮಾಣವಲ್ಲ.

ಯಷ್ಟೆ, (ಅದು) ಸುಷುಪ್ತಿಯಲ್ಲಿ (ಆ) ಬೇರೆಬೇರೆಯ ಉಪಾಧಿಗಳ ವ್ಯಾಪಾರವು ನಿಂತುಹೋಗಲು ಪ್ರಕಾಶಿತವಾಗದ್ದರಿಂದ (ಆ) ಸ್ವಭಾವವು ಕಾಣದೆ ಇದ್ದರೂ ಉಪಾಧಿಭೇದದಿಂದ ಭಿನ್ನವಾಗಿಯೇ ಇರುವಂತೆ (ಮೊದಲು) ಪ್ರಾಪ್ತವಾಗಿದ್ದದ್ದನ್ನೇ ಅನುವಾದಮಾಡಿಕೊಂಡೇ (ಆಗಲೂ) ಇದ್ದುಕೊಂಡಿರುವಂತೆ ಉಕ್ತವಾಗಿರುತ್ತದೆ.[1] ಹೀಗಿರುವಲ್ಲಿ ದೃಷ್ಟ್ಯಾದಿಧರ್ಮಗಳು ಬೇರೆ ಬೇರೆ ಎಂದು ಕಲ್ಪಿಸಿರುವದು (ಶ್ರುತಿಯಲ್ಲಿ) ವಿವಕ್ಷಿತವಾದ ಅರ್ಥವನ್ನು ಅರಿತುಕೊಳ್ಳದ್ದರಿಂದ.[2]

ಉಪ್ಪಿನ ಹರಳಿನಂತೆ ಪ್ರಜ್ಞಾನವೆಂಬ ಏಕರಸವಾದ ಗಟ್ಟಿಯೆಂದು (ಆತ್ಮನನ್ನು ತಿಳಿಸುವ) ಶ್ರುತಿಗೆ (೨-೪-೧೧) ವಿರುದ್ಧವಾದ್ದರಿಂದಲೂ (ಈ ಮತವು ಶ್ರುತಿವಿರುದ್ಧ). "ವಿಜ್ಞಾನವೂ ಆನಂದವೂ (ಆದದ್ದು ಬ್ರಹ್ಮವು)" (೩-೯-೨೮), "ಸತ್ಯವೂ ಜ್ಞಾನವೂ (ಅನಂತವೂ ಆದದ್ದು ಬ್ರಹ್ಮವು)" (ತೈ.೨-೧), "ಪ್ರಜ್ಞಾನವೇ ಬ್ರಹ್ಮವು" (ಐ. ೫-೩) -ಇವೇ ಮುಂತಾದ ಶ್ರುತಿಗಳಿಂದಲೂ (ಬ್ರಹ್ಮವು ಚೈತನ್ಯಮಾತ್ರವೆಂದು ಸಿದ್ಧವಾಗಿರುತ್ತದೆ).

## ಆತ್ಮನು ಚಿನ್ಮಾತ್ರನೆಂಬುದಕ್ಕೆ ಯುಕ್ತಿಯ ಬೆಂಬಲವಿದೆ

(ಭಾಷ್ಯ)

೨೩೦. ಶಬ್ದಪ್ರವೃತ್ತೇಶ್ಚ। ಲೌಕಿಕೀ ಚ ಶಬ್ದಪ್ರವೃತ್ತಿಃ 'ಚಕ್ಷುಷಾ ರೂಪಂ ವಿಜಾನಾತಿ, ಶ್ರೋತ್ರೇಣ ಶಬ್ದಂ ವಿಜಾನಾತಿ, ರಸನೇನ ಅನ್ನಸ್ಯ ರಸಂ ವಿಜಾನಾತಿ ಇತಿ ಚ ಸರ್ವತ್ರೈವ ಚ[3] ದೃಷ್ಟ್ಯಾದಿಶಬ್ದಾಭಿಧೇಯಾನಾಂ ವಿಜ್ಞಾನಶಬ್ದವಾಚ್ಯತಾಮೇವ ದರ್ಶಯತಿ, ಶಬ್ದಪ್ರವೃತ್ತಿಶ್ಚ ಪ್ರಮಾಣಮ್। ದೃಷ್ಟಾನ್ತೋಪಪತ್ತೇಶ್ಚ। ಯಥಾ ಹಿ ಲೋಕೇ ಸ್ವಚ್ಛಸ್ವಾಭಾವ್ಯಯುಕ್ತಃ ಸ್ಫಟಿಕಃ ತನ್ನಿಮಿತ್ತಮೇವ ಕೇವಲಂ ಹರಿತನೀಲಲೋಹಿತಾದ್ಯುಪಾಧಿಭೇದಸಂಯೋಗಾತ್ ತದಾಕಾರತ್ವಂ ಭಜತೇ। ನ ಚ ಸ್ವಚ್ಛಸ್ವಾಭಾವ್ಯವ್ಯತಿರೇಕೇಣ ಹರಿತನೀಲಲೋಹಿತಾದಿಲಕ್ಷಣಾ ಧರ್ಮಭೇದಾಃ ಸ್ಫಟಿಕಸ್ಯ ಕಲ್ಪಯಿತುಂ

---

1. ಚಕ್ಷುಸ್ಸು, ಘ್ರಾಣ, ರಸನೆ, ವಾಕ್ಕು, ಶ್ರವಣ, ಮನಸ್ಸು, ತ್ವಕ್ಕು, ವಿಜ್ಞಾನ -ಎಂಬ ಉಪಾಧಿಗಳಿಂದ ಚೈತನ್ಯವೊಂದೇ ದೃಷ್ಟಿ ಮುಂತಾದ ಬೇರೆಬೇರೆಯ ಹೆಸರುಗಳಿಂದ ವ್ಯವಹೃತವಾಗಿರುತ್ತದೆ ; ಆ ಉಪಾಧಿಗಳಿಲ್ಲದ್ದರಿಂದ ಆ ಹೆಸರುಗಳಿಗೆ ಕಾರಣವಿಲ್ಲದಿದ್ದರೂ ಎಚ್ಚರಕನಸುಗಳಲ್ಲಿದ್ದ ಆ ದೃಷ್ಟ್ಯಾದಿಗಳು ಈಗಲೂ ಚಿದ್ರೂಪದಿಂದ ಇರುತ್ತವೆ-ಎಂದು ತಿಳಿಸುವದಕ್ಕಾಗಿ ಅದೇ ಹೆಸರುಗಳನ್ನು ಅನುವಾದಮಾಡಿಕೊಂಡಿರುತ್ತದೆ.

2. ದೃಷ್ಟ್ಯಾದಿಗಳನ್ನು ಅನುವಾದಮಾಡಿಕೊಂಡಿದೆ, ಆತ್ಮನು ಚಿನ್ಮಾತ್ರಸ್ವರೂಪನೆಂಬುದೇ ವಿವಕ್ಷಿತವಾಗಿದೆ - ಎಂಬುದನ್ನರಿಯದೆ ಭರ್ತೃಪ್ರಪಂಚರು ದೃಷ್ಟ್ಯಾದಿಗಳು ನಿಜವಾಗಿಯೂ ಆತ್ಮನಲ್ಲಿದ್ದುಕೊಂಡಿರುತ್ತವೆ ಎಂದು ಭಾವಿಸಿ ಶಬ್ದಪ್ರಯೋಗಮಾತ್ರದಿಂದ ಮೋಸಹೋಗಿರುತ್ತಾರೆ ಎಂದು ಭಾವ.

3. ಇದು ಇಲ್ಲದಿದ್ದರೂ ಆಗುತ್ತದೆ.

ಶಕ್ಯನ್ತೇ। ತಥಾ ಚಕ್ಷುರಾದ್ಯುಪಾಧಿಭೇದಸಂಯೋಗಾತ್ ಪ್ರಜ್ಞಾನಘನಸ್ವಭಾವಸ್ಯೈವ ಆತ್ಮಜ್ಯೋತಿಷೋ ದೃಷ್ಟ್ಯಾದಿಶಕ್ತಿಭೇದಃ ಉಪಲಕ್ಷ್ಯತೇ। ಪ್ರಜ್ಞಾನಘನಸ್ಯ ಸ್ವಚ್ಛಸ್ವಾಭಾವ್ಯಾತ್ ಸ್ಫಟಿಕಸ್ವಚ್ಛಸ್ವಾಭಾವ್ಯವತ್। ಸ್ವಯಂಜ್ಯೋತಿಷ್ಟ್ವಾಚ್ಚ। ಯಥಾ ಚ ಆದಿತ್ಯಾದಿಜ್ಯೋತಿರವಭಾಸ್ಯಭೇದೈಃ ಸಂಯುಜ್ಯಮಾನಂ ಹರಿತನೀಲಪೀತಲೋಹಿತಾದಿಭೇದೈರವಿಭಾಜ್ಯಂ ತದಾಕಾರಾಭಾಸಂ ಭವತಿ। ತಥಾ ಚ ಕೃತ್ಸ್ನಂ ಜಗದವಭಾಸಯತ್ ಚಕ್ಷುರಾದೀನಿ ಚ ತದಾಕಾರಂ ಭವತಿ। ತಥಾ ಚೋಕ್ತಮ್ "ಆತ್ಮನೈವಾಯಂ ಜ್ಯೋತಿಷಾಽಽಸ್ತೇ ." (೪-೩-೬) ಇತ್ಯಾದಿ ॥

(ಭಾಷ್ಯಾರ್ಥ)

ಶಬ್ದಪ್ರವೃತ್ತಿಯಿಂದಲೂ (ಇದು ಸಿದ್ಧವಾಗುತ್ತದೆ). ಲೌಕಿಕಶಬ್ದಪ್ರವೃತ್ತಿಯೂ 'ಕಣ್ಣಿನಿಂದ ರೂಪವನ್ನು ಅರಿತುಕೊಳ್ಳುತ್ತಾನೆ' ; 'ಕಿವಿಯಿಂದ ಶಬ್ದವನ್ನು ಅರಿತುಕೊಳ್ಳುತ್ತಾನೆ,' 'ನಾಲಗೆಯಿಂದ ಅನ್ನದ ಸವಿಯನ್ನು ಅರಿತುಕೊಳ್ಳುತ್ತಾನೆ'- ಎಂದು ಎಲ್ಲೆಲ್ಲಿಯೂ ದೃಷ್ಟಿಯೇ ಮುಂತಾದ ಶಬ್ದಗಳಿಂದ ಕರೆಯಿಸಿಕೊಳ್ಳುವ (ಪದಾರ್ಥಗಳನ್ನು) ವಿಜ್ಞಾನ (ಅರಿವು) ಎಂಬ ಶಬ್ದದಿಂದಲೇ ಕರೆಯಿಸಿಕೊಳ್ಳತಕ್ಕವುಗಳೆಂದು ತಿಳಿಸುತ್ತದೆ [1] ಶಬ್ದಪ್ರವೃತ್ತಿಯೂ (ಒಂದು) ಪ್ರಮಾಣವೇ (ಅಷ್ಟೆ)

ದೃಷ್ಟಾಂತವು ಹೊಂದುವದರಿಂದಲೂ (ಹೀಗೆಂದು ತಿಳಿಯಬೇಕು)[2] ಹೇಗೆ ಲೋಕದಲ್ಲಿ ಸ್ವಚ್ಛವಾದ ಸ್ವಾಭಾವ್ಯದಿಂದ ಕೂಡಿದ ಸ್ಫಟಿಕವು ಬರಿಯ ಆ ಕಾರಣದಿಂದಲೇ ಹಸುರು, ನೀಲ, ಕೆಂಪು -ಮುಂತಾದ (ಬಣ್ಣದ) ಉಪಾಧಿಗಳ ಸಂಯೋಗದಿಂದ ಆ ಆಕಾರವನ್ನು ಹೊಂದುತ್ತಿರುವದೋ. (ಈ) ಸ್ವಚ್ಛವಾದ ಸ್ವಾಭಾವ್ಯವೇ ಅಲ್ಲದೆ ಹಸುರು, ನೀಲ, ಕೆಂಪು -ಮುಂತಾದ ರೂಪದ ಬೇರೆಬೇರೆ ಧರ್ಮಗಳೂ ಸ್ಫಟಿಕಕ್ಕೆ (ಇವೆ ಎಂದು) ಕಲ್ಪಿಸುವದಕ್ಕೆ ಆಗುವದಿಲ್ಲವೋ, ಹಾಗೆಯೇ **ಚಕ್ಷುಸ್ಸೇ ಮುಂತಾದ ಬೇರೆಬೇರೆಯ ಉಪಾಧಿಗಳ ಸಂಯೋಗದಿಂದ ಪ್ರಜ್ಞಾನಘನದ ಸ್ವಭಾವವುಳ್ಳದ್ದೇ ಆಗಿರುವ ಆತ್ಮಜ್ಯೋತಿಗೆ ದೃಷ್ಟಿಯೇ ಮುಂತಾದ ಬೇರೆಬೇರೆಯ ಶಕ್ತಿಯು[3] ಕಾಣಿಸಿಕೊಳ್ಳು**

1. ದೃಷ್ಟ್ಯಾದಿಗಳೆಲ್ಲ ಅರಿವೇ ಎಂಬುದಕ್ಕೆ ಈ ಶಬ್ದಪ್ರಯೋಗವೊಂದು ಆಧಾರವು ಎಂದು ಭಾವ. ಶ್ರುತಿಯೂ ಹೀಗೆಯೇ ಹೇಳುತ್ತದೆ. ಕ. ೨-೧-೩, ಛಾಂ.ಭಾ. ೮-೧೨-೫. 'ಯದ್ವೈತನ್ನ ಸ್ಪೃಶತಿ' ಎಂಬ ಪರ್ಯಾಯದಲ್ಲಿ 'ವಿಜಾನನ್ವೈ' ಎಂದು ಮಾಧ್ಯಂದಿನ ಪಾಠವಿರುವದೂ ಇದಕ್ಕೆ ಬೆಂಬಲವಾಗಿದೆ ಎಂದು ತಿಳಿಯಬೇಕು.

2. ಒಂದೇ ವಸ್ತುವು ಅನೇಕರೂಪದಿಂದ ತೋರಬಹುದೆಂಬುದಕ್ಕೆ ದೃಷ್ಟಾಂತವಿಲ್ಲ ಎಂಬ ಭರ್ತೃಪ್ರಪಂಚರ ಆಕ್ಷೇಪಕ್ಕೆ ಪರಿಹಾರವಿದು.

3. ಬೇರೆಬೇರೆಯಾಗಿ ಭ್ರಾಂತಿಯಿಂದ ತೋರಿಕೊಳ್ಳುವ ಸ್ವಭಾವವು ಎಂದರ್ಥ. ಈ ಶಕ್ತಿಯು ಆತ್ಮನಿಗಿಂತ ಭಿನ್ನವೆಂದು ಭಾವಿಸಬಾರದು.

**ತ್ತದೆ; ಏಕೆಂದರೆ ಪ್ರಜ್ಞಾನಘನನಾದ (ಆತ್ಮನಿಗೆ) ಸ್ಫಟಿಕವು ಸ್ವಚ್ಛ ಸ್ವಭಾವದ್ದಾಗಿರುವಂತೆಯೇ ಸ್ವಚ್ಛವಾದ ಸ್ವಾಭಾವ್ಯವಿರುತ್ತದೆ.**

ಸ್ವಯಂಜ್ಯೋತಿಯಾಗಿರುವದರಿಂದಲೂ (ಹೀಗೆ. ಇದರ ವಿವರ): ಸೂರ್ಯನ ಬೆಳಕು ಬೆಳಗಲ್ಪಡತಕ್ಕ ಬೇರೆಬೇರೆಯ (ವಸ್ತುಗಳೊಡನೆ ಸಂಯುಕ್ತವಾಗುವಾಗ ಹಸುರು, ನೀಲ, ಹಳದಿ, ಕೆಂಪು –ಮುಂತಾದ ಬೇರೆ ಬೇರೆಯ (ಬಣ್ಣಗಳಿಂದ) ವಿಂಗಡವಾಗದೆ ಆ ಆಕಾರವಾಗಿರುವಂತೆಯೇ ಇರುವದೋ[1] ಹಾಗೆಯೇ (ಆತ್ಮಚೈತನ್ಯವು) ಇಡಿಯ ಜಗತ್ತನ್ನೂ ಚಕ್ಷುರಾದಿಗಳನ್ನೂ ಬೆಳಗುವದಾಗಿ ಆಯಾ ಆಕಾರವುಳ್ಳದ್ದಾಗಿರುತ್ತದೆ ಆದ್ದರಿಂದಲೇ (ಶ್ರುತಿಯಲ್ಲಿ) "ಆತ್ಮವೆಂಬ ಜ್ಯೋತಿಯಿಂದಲೇ ಕುಳಿತುಕೊಳ್ಳುತ್ತಾನೆ ..." (೪-೩-೬) ಎಂದು ಹೇಳಿರುತ್ತದೆ.

## ಆತ್ಮನು ಅನೇಕಾತ್ಮಕನೆಂಬುದು ಯುಕ್ತಿವಿರುದ್ಧ

(ಭಾಷ್ಯ)

೨೩೧. ನ ಚ ನಿರವಯವೇಷು ಅನೇಕಾತ್ಮಕತಾ ಶಕ್ಯತೇ ಕಲ್ಪಯಿತುಮ್। ದೃಷ್ಟಾನ್ತಾಭಾವಾತ್। ಯದಪಿ ಆಕಾಶಸ್ಯ ಸರ್ವಗತತ್ವಾದಿಧರ್ಮಭೇದಃ ಪರಿಕಲ್ಪ್ಯತೇ, ಪರಮಾಣ್ವಾದೀನಾಂ ಚ ಗನ್ಧರಸಾದ್ಯನೇಕಗುಣವತ್ತ್ವಮ್[2], ತದಪಿ ನಿರೂಪ್ಯಮಾಣಂ ಪರೋಪಾಧಿನಿಮಿತ್ತಮೇವ ಭವತಿ। ಆಕಾಶಸ್ಯ ತಾವತ್ ಸರ್ವಗತತ್ವಂ ನಾಮ ನ ಸ್ವತೋ ಧರ್ಮೋಽಸ್ತಿ। ಸರ್ವೋಪಾಧಿಸಂಶ್ರಯಾದ್ ಹಿ ಸರ್ವತ್ರ ಸ್ವೇನ ರೂಪೇಣ ಸತ್ತ್ವಮ್ ಅಪೇಕ್ಷ್ಯ ಸರ್ವಗತತ್ವವ್ಯವಹಾರಃ। ನ ತು ಆಕಾಶಃ ಕ್ವಚಿದ್ಗತೋ ವಾ ಅಗತೋ ವಾ ಸ್ವತಃ। ಗಮನಂ ಹಿ ನಾಮ ದೇಶಾನ್ತರಸ್ಥಸ್ಯ ದೇಶಾನ್ತರೇಣ ಸಂಯೋಗಕಾರಣಮ್। ಸಾ ಚ ಕ್ರಿಯಾ ನೈವಾವಿಶೇಷೇ ಸಂಭವತಿ। ಏವಂ ಧರ್ಮಭೇದಾ ನೈವ ಸನ್ತ್ಯಾಕಾಶೇ। ತಥಾ ಪರಮಾಣ್ವಾದಾವಪಿ। ಪರಮಾಣುರ್ನಾಮ ಪೃಥಿವ್ಯಾ ಗನ್ಧಘನಾಯಾಃ ಪರಮಸೂಕ್ಷ್ಮೋಽವಯವೋ ಗನ್ಧಾತ್ಮಕ ಏವ ನ ತಸ್ಯ ಪುನರ್ಗನ್ಧವತ್ತ್ವಂ ನಾಮ ಶಕ್ಯತೇ ಕಲ್ಪಯಿತುಮ್। ಅಥ ತಸ್ಯೈವ ರಸಾದಿಮತ್ತ್ವಂ ಸ್ಯಾದಿತಿ ಚೇತ್। ನ। ತತ್ರಾಪಿ ಅಬಾದಿಸಂಸರ್ಗನಿಮಿತ್ತತ್ವಾತ್। ತಸ್ಮಾತ್ ನ ನಿರವಯವಸ್ಯ ಅನೇಕಧರ್ಮವತ್ತ್ವೇ ದೃಷ್ಟಾನ್ತೋಽಸ್ತಿ।

---

1 ವಸ್ತುಗಳಿಗೆ ಬೇರೆಬೇರೆಯ ಬಣ್ಣವು ಸ್ವಭಾವದಿಂದಿದ್ದು ಸೂರ್ಯನ ಬೆಳಕು ಅವುಗಳನ್ನು ಬೆಳಗುವಾಗ ಆಯಾ ಬಣ್ಣದ ರೂಪದಿಂದಲೇ ತೋರಿಕೊಳ್ಳುವದೆಂಬ ವ್ಯವಹಾರದೃಷ್ಟಿಯಿಂದ ಕೊಟ್ಟ ದೃಷ್ಟಾಂತವಿದು.

2. 'ಗುಣತ್ವಂ' ಎಂಬ ಪಾಠವೂ ಆಗಬಹುದು; ಆದರೆ ಈ ಪಾಠಕ್ಕೆ ಸ್ಫುಟವಾಗಿ ಅರ್ಥವಾಗುತ್ತದೆ.

ಏತೇನ ದೃಗಾದಿಶಕ್ತಿಭೇದಾನಾಂ ಪೃಥಕ್ಚಕ್ಷೂರೂಪಾದಿಭೇದೇನ ಪರಿಣಾಮಭೇದ ಕಲ್ಪನಾ ಪರಮಾತ್ಮನಿ ಪ್ರತ್ಯುಕ್ತಾ ॥

(ಭಾಷ್ಯಾರ್ಥ)

ನಿರವಯವ(ಪದಾರ್ಥ)ಗಳಲ್ಲಿಯೂ ಅನೇಕಾತ್ಮಕತ್ವವನ್ನು ಕಲ್ಪಿಸುವದಕ್ಕೆ ಆಗುವದಿಲ್ಲ; ಏಕೆಂದರೆ (ಇದಕ್ಕೆ) ದೃಷ್ಟಾಂತವಿರುವದಿಲ್ಲ.[1] ಆಕಾಶಕ್ಕೆ ಸರ್ವಗತತ್ವವೇ ಮುಂತಾದ ಅನೇಕ ಧರ್ಮಗಳಿರುವವೆಂದೂ ಪರಮಾಣ್ವಾದಿಗಳಲ್ಲಿ ಗಂಧರಸಗಳೇ ಮುಂತಾದ ಅನೇಕಗುಣವತ್ತ್ವವಿದೆಯೆಂದೂ ಕಲ್ಪಿಸುತ್ತೇವೆನ್ನುತ್ತೀರಲ್ಲ, ಅದೂ ಪರೀಕ್ಷಿಸಿದರೆ ಮತ್ತೊಂದು ಉಪಾಧಿನಿಮಿತ್ತದಿಂದಲೇ (ತೋರತಕ್ಕದ್ದೆಂದು) ಆಗುವದು. ಮೊದಲನೆಯದಾಗಿ ಆಕಾಶಕ್ಕೆ ಸರ್ವಗತತ್ವವೆಂಬ ಧರ್ಮವು ಸ್ವಂತವಾಗಿ ಇರುವದಿಲ್ಲ. ಎಲ್ಲಾ ಉಪಾಧಿಗಳನ್ನೂ ಆಶ್ರಯಿಸಿಯಲ್ಲವೆ, ಎಲ್ಲೆಲ್ಲಿಯೂ ತನ್ನ ರೂಪದಿಂದ (ಆಕಾಶವು) ಇರುತ್ತದೆ ಎಂಬದರ ಅಪೇಕ್ಷೆಯಿಂದ (ಅದು) ಸರ್ವಗತವೆಂದು ವ್ಯವಹರಿಸುವದು? (ಇಷ್ಟೇ ಹೊರತು) ಆಕಾಶವು ತಾನುತಾನು ಎಲ್ಲಿಗೂ ಗತವಾಗಿಯಾಗಲಿ ಅಗತವಾಗಿಯಾಗಲಿ ಇರುವದಿಲ್ಲ. ಏಕೆಂದರೆ ಗಮನವೆಂಬುದು ಒಂದು ದೇಶದಲ್ಲಿರುವ (ವಸ್ತುವು) ಮತ್ತೊಂದು ದೇಶಕ್ಕೆ ಸಂಯೋಗವಾಗುವದಕ್ಕೆ ಕಾರಣವಷ್ಟೆ. ಆದರೆ ಆ ಕ್ರಿಯೆ ನಿರ್ವಿಶೇಷವಾದ (ಆಕಾಶದಲ್ಲಿ) ಸಂಭವಿಸುವದೇ ಇಲ್ಲ. ಹೀಗಿರುವದರಿಂದ ಆಕಾಶದಲ್ಲಿ ಬೇರೆಬೇರೆಯ ಧರ್ಮಗಳು ಇರುವದಿಲ್ಲವೆಂದಾಯಿತು. ಹೀಗೆಯೇ ಪರಮಾಣ್ವಾದಿಗಳಲ್ಲಿಯೂ (ಇರುವದಿಲ್ಲ. ಹೇಗೆಂದರೆ), ಪರಮಾಣು ಎಂದರೆ ಗಂಧದ ಗಟ್ಟಿಯಾದ[2] ಪೃಥಿವಿಯ ತೀರ ಸೂಕ್ಷ್ಮವಾದ ಅವಯವವು; (ಅದು) ಗಂಧಸ್ವರೂಪವಾಗಿಯೇ (ಇರುತ್ತದೆ, ಇಷ್ಟೇ ಹೊರತು) ಅದಕ್ಕೆ ಗಂಧವತ್ತ್ವ ಎಂಬ (ಧರ್ಮವನ್ನು) ಕಲ್ಪಿಸುವದು ಆಗಲಾರದು.[3] ಇನ್ನು ಇದೇ (ಪರಮಾಣು)ವಿಗೇ ರಸಾದಿಮತ್ತ್ವವೂ ಇರಬಹುದಲ್ಲ? ಎಂದರೆ ಹಾಗಲ್ಲ,

---

1. ಆತ್ಮನು ನಿರವಯವನಾದರೂ ಭಿನ್ನಾಭಿನ್ನರೂಪನಾಗಿರುತ್ತಾನೆ. ಅವನಲ್ಲಿ ಅನೇಕ ಧರ್ಮಗಳಿರಬಹುದು -ಎಂಬುದನ್ನು ಅನುಮಾನದಿಂದ ಕಲ್ಪಿಸಬಹುದೆಂದು ಭರ್ತೃಪ್ರಪಂಚರ ಮತ. ಆದರೆ ಈ ಅನುಮಾನಕ್ಕೆ ದೃಷ್ಟಾಂತವೇ ಇಲ್ಲ ಎಂದಭಿಪ್ರಾಯ. ಆತ್ಮನು ಅನುಮೇಯನಲ್ಲವೆಂಬ ಪರಮಸಿದ್ಧಾಂತವನ್ನೂ ಇಲ್ಲಿ ಗ್ರಹಿಸಬೇಕು.

2. ಬರಿಯ ಗಂಧವೇ ಆಗಿರುವ.

3. ಪೃಥಿವೀಪರಮಾಣು, ಅದಕ್ಕಿರುವ ಗಂಧವತ್ತ್ವ- ಇವು ಬೇರೆಬೇರೆಯೆಂಬುದಕ್ಕೆ ಪ್ರಮಾಣವಿಲ್ಲ; ಆದ್ದರಿಂದ ಆತ್ಮನು, ಅವನಲ್ಲಿರುವ ದೃಷ್ಟಿ- ಇವು ಬೇರೆಬೇರೆ ಎಂಬುದೇ ಮೊದಲು ಸಿದ್ಧಿಸುವದಿಲ್ಲ ಎಂದು ಭಾವ. ಗುಣಗುಣಿಭೇದನಿರಾಕರಣೆಗೆ ಸೂ. ಭಾ. ೨-೨-೧೭ (ಭಾ. ಭಾ. ೩೫)ನ್ನು ನೋಡಿ.

ಏಕೆಂದರೆ ಆ ರಸಾದಿಗಳು ಅಪ್ಪು ಮುಂತಾದವುಗಳ ಸಂಬಂಧದಿಂದ ಆದದ್ದು.[1] ಆದ್ದರಿಂದ ನಿರವಯವವಾದ (ವಸ್ತು)ವಿಗೆ ಅನೇಕ ಧರ್ಮಗಳಿರುವವೆಂಬುವಕ್ಕೆ ದೃಷ್ಟಾಂತವಿಲ್ಲ.[2]

ಇದರಿಂದ ಪರಮಾತ್ಮನಲ್ಲಿ ಬೇರೆಬೇರೆಯಾಗಿರುವ ದೃಗಾದಿಶಕ್ತಿಗಳು ಒಂದೊಂದೂ ಚಕ್ಷುಸ್ಸು, ರೂಪ- ಮುಂತಾದ ರೂಪದಲ್ಲಿ ಬೇರೆಬೇರೆಯ ಪರಿಣಾಮ(ವನ್ನು ಹೊಂದುವವೆಂದು) ಕಲ್ಪಿಸಿರುವದನ್ನು ತಿರಸ್ಕರಿಸಿ(ದಂತೆ ಆಯಿತು).[3]

## ಜಾಗ್ರತ್ಸ್ವಪ್ನಗಳಲ್ಲಿರುವ ವಿಶೇಷಜ್ಞಾನವು ಆವಿದ್ಯಕ

(ಉಪನಿಷತ್ತು)

**ಯತ್ರ ವಾ ಅನ್ಯದಿವ ಸ್ಯಾತ್ ತತ್ರಾನ್ಯೋಽನ್ಯತ್ ಪಶ್ಯೇದನ್ಯೋಽನ್ಯಜ್ಜಿಘ್ರೇದನ್ಯೋಽನ್ಯದ್ರಸಯೇದನ್ಯೋಽನ್ಯದ್ವದೇದನ್ಯೋಽನ್ಯಚ್ಛೃಣುಯಾದನ್ಯೋಽನ್ಯನ್ಮನ್ವೀತಾನ್ಯೋಽನ್ಯತ್ ಸ್ಪೃಶೇದನ್ಯೋಽನ್ಯದ್ವಿಜಾನೀಯಾತ್ ॥ ೩೧ ॥**

೩೧. ಎಲ್ಲಿಯಾದರೆ ಮತ್ತೊಂದರಂತೆ ಇರುವದೋ ಅಲ್ಲಿ ಒಬ್ಬನು ಮತ್ತೊಂದನ್ನು ಕಂಡಾನು, ಒಬ್ಬನು ಮತ್ತೊಂದನ್ನು ಮೂಸಿಯಾನು, ಒಬ್ಬನು ಮತ್ತೊಂದನ್ನು ಸವಿದಾನು, ಒಬ್ಬನು ಮತ್ತೊಂದನ್ನು ಹೇಳಿಯಾನು, ಒಬ್ಬನು ಮತ್ತೊಂದನ್ನು ಕೇಳಿಯಾನು, ಒಬ್ಬನು ಮತ್ತೊಂದನ್ನು ಮನನಮಾಡಿಯಾನು, ಒಬ್ಬನು ಮತ್ತೊಂದನ್ನು ಸೋಂಕಿಯಾನು, ಒಬ್ಬನು ಮತ್ತೊಂದನ್ನು ಅರಿತಾನು.

---

1. ಒಂದೊಂದು ಭೂತದ ಪರಮಾಣುವಿನಲ್ಲಿ ಒಂದೊಂದೇ ಗುಣವಿರುತ್ತದೆ, ಇನ್ನೊಂದರ ಸಂಪರ್ಕದಿಂದ ಅದರ ಗುಣವೂ ತೋರಿಕೊಳ್ಳುತ್ತದೆ. ಇಷ್ಟೇ ಹೊರತು ಒಂದಕ್ಕೆ ಅನೇಕಧರ್ಮಗಳಿರುವದೆಂಬುದಿಲ್ಲ –ಎಂದು ಅಭಿಪ್ರಾಯ ಸೂ.ಭಾ. ೨–೩–೨೯ (ಭಾ. ಭಾ. ೧೩೭).

2. ದೃಷ್ಟಾಂತವಿಲ್ಲದ್ದರಿಂದ ಆತ್ಮನೂ ಏಕಾನೇಕರೂಪನೆಂಬ ಅನುಮಾನವು ನಿಲ್ಲುವದಿಲ್ಲ ಎಂದು ಭಾವ.

3. ಆತ್ಮನ ದೃಕ್ಛಕ್ತಿಯು ಚಕ್ಷುಸ್ಸು ಮತ್ತು ರೂಪ– ಇವುಗಳಾಗಿ ಪರಿಣಮಿಸುತ್ತದೆ; ಶ್ರವಣಶಕ್ತಿಯು ಶ್ರೋತ್ರ ಮತ್ತು ಶಬ್ದ– ಇವುಗಳಾಗಿ ಪರಿಣಮಿಸುತ್ತವೆ– ಎಂದು ಮುಂತಾಗಿ ಭರ್ತೃಪ್ರಪಂಚರು ಕಲ್ಪಿಸಿದ್ದರು. ಆತ್ಮನಲ್ಲಿ ಅನೇಕ ಶಕ್ತಿಗಳಿರುವದರಿಂದ ಆದರಿಂದ ಜಗತ್ತಿನ ಉತ್ಪತ್ತ್ಯಾದಿಗಳಾಗುವವು ಎಂಬ ಸೂ. ಭಾ. ೪–೩–೧೪ (ಭಾ. ಭಾ. ೫೮೩)ರಲ್ಲಿ ಕಾಣುವ ಪೂರ್ವಪಕ್ಷವು ಇವರದೇ ಇರಬಹುದೆ ? –ಎಂಬುದು ವಿಚಾರಣೀಯವಾಗಿದೆ.

# ಆತ್ಮನಿಗೆ ವಿಶೇಷವಿಜ್ಞಾನವು ಸ್ವಾಭಾವಿಕವಲ್ಲ

(ಭಾಷ್ಯ)

೨೩೨. ಜಾಗ್ರತ್ಸ್ವಪ್ನಯೋರಿವ ಯದ್ ವಿಜಾನೀಯಾತ್ ತತ್ ದ್ವಿತೀಯಂ ಪ್ರವಿಭಕ್ತಮ್ ಅನ್ಯತ್ವೇನ ನಾಸ್ತಿ ಇತ್ಯುಕ್ತಮ್। ಅತಃ ಸುಷುಪ್ತೇ ನ ವಿಜಾನಾತಿ ವಿಶೇಷಮ್। ನನು ಯದಿ ಅಸ್ಯ ಅಯಮೇವ ಸ್ವಭಾವಃ ಕಿಂ ನಿಮಿತ್ತಮ್ ಅಸ್ಯ ವಿಶೇಷವಿಜ್ಞಾನಂ ಸ್ವಭಾವಪರಿತ್ಯಾಗೇನ ? ಅಥ ವಿಶೇಷ ವಿಜ್ಞಾನಮೇವ ಅಸ್ಯ ಸ್ವಭಾವಃ ಕಸ್ಮಾತ್ ಏಷ ವಿಶೇಷಂ ನ ವಿಜಾನಾತಿ ಇತಿ? ಉಚ್ಯತೇ ಶೃಣು। ಯತ್ರ ಯಸ್ಮಿನ್ ಜಾಗರಿತೇ ಸ್ವಪ್ನೇ ವಾ ಅನ್ಯದಿವ ಆತ್ಮನೋ ವಸ್ತ್ವನ್ತರಮಿವ ಅವಿದ್ಯಯಾ ಪ್ರತ್ಯುಪಸ್ಥಾಪಿತಂ ಭವತಿ ತತ್ರ ತಸ್ಮಾತ್ ಅವಿದ್ಯಾಪ್ರತ್ಯುಪಸ್ಥಾಪಿತಾತ್ ಅನ್ಯೋಽನ್ಯಮಿವ ಆತ್ಮಾನಂ ಮನ್ಯಮಾನಃ ಅಸತ್ಯಾತ್ಮನಃ ಪ್ರವಿಭಕ್ತೇ ವಸ್ತ್ವನ್ತರೇ ಅಸತಿ ಚ ಆತ್ಮನಿ ತತಃ ಪ್ರವಿಭಕ್ತೇ ಅನ್ಯಃ ಅನ್ಯತ್ ಪಶ್ಯೇತ್ ಉಪಲಭೇತ, ತಚ್ಚ ದರ್ಶಿತಂ ಸ್ವಪ್ನೇ ಪ್ರತ್ಯಕ್ಷತಃ "ಘ್ನನ್ತೀವ ಜಿನನ್ತೀವ" (೪-೩-೨೦) ಇತಿ। ತಥಾ ಅನ್ಯೋಽನ್ಯತ್ ಜಿಘ್ರೇತ್, ರಸಯೇತ್, ವದೇತ್, ಶೃಣುಯಾತ್, ಮನ್ವೀತ, ಸ್ಪೃಶೇತ್, ವಿಜಾನೀಯಾತ್ ಇತಿ ॥

(ಭಾಷ್ಯಾರ್ಥ)

(ಆಕ್ಷೇಪ).- ಜಾಗ್ರತ್ಸ್ವಪ್ನಗಳಲ್ಲಿರುವಂತೆ ಯಾವದನ್ನು ಅರಿತುಕೊಳ್ಳಬಹುದೋ ಆ ಎರಡನೆಯದು ಮತ್ತೊಂದಾಗಿ ವಿಂಗಡಿಸಿಕೊಂಡು (ಇಲ್ಲಿ) ಇರುವದಿಲ್ಲ ಎಂದು ಹೇಳಿದ್ದಾಯಿತು. ಆದ್ದರಿಂದ ಸುಷುಪ್ತಿಯಲ್ಲಿ ವಿಶೇಷವನ್ನು ಅರಿಯುವದಿಲ್ಲ (ಎಂದು ಹೇಳಲಾಯಿತು). ಇದೇ ಇವನಿಗೆ ಸ್ವಭಾವವಾದರೆ (ಈ) ಸ್ವಭಾವವನ್ನು ಬಿಟ್ಟು ವಿಶೇಷವನ್ನು ಅರಿಯುವದು ಇವನಿಗೆ ಏತಕ್ಕೆ (ಬರುತ್ತದೆ)? ಹೀಗಲ್ಲದೆ ವಿಶೇಷವನ್ನು ಅರಿಯುವದೇ ಇವನ ಸ್ವಭಾವವಾದರೆ, ಇವನು (ಇಲ್ಲಿ) ವಿಶೇಷವನ್ನು ಏತಕ್ಕೆ ಅರಿಯುವದಿಲ್ಲ ?

(ಪರಿಹಾರ):- ಹೇಳುತ್ತೇನೆ, ಕೇಳು. ಎಲ್ಲಿಯಾದರೆ. ಯಾವ ಎಚ್ಚರದಲ್ಲಿ ಅಥವಾ ಕನಸಿನಲ್ಲಿ ಮತ್ತೊಂದರಂತೆ, ಆತ್ಮನಿಗಿಂತ ಬೇರೆಯಾದ ವಸ್ತುವಿನಂತೆ ಅವಿದ್ಯೆಯಿಂದ ಮುಂದೊಡ್ಡಲಾಗಿರುವದೋ ಅಲ್ಲಿ ಆ ಅವಿದ್ಯೆಯು ಮುಂದೊಡ್ಡಿರುವ (ವಸ್ತು)ವಿಗಿಂತ ಬೇರೆಯೆಂದು ತನ್ನನ್ನು ಭಾವಿಸಿಕೊಂಡಿರುವ- ಒಬ್ಬನು, ತನಗಿಂತ ವಿಂಗಡವಾಗಿರುವ ಮತ್ತೊಂದು ವಸ್ತುವು ಇಲ್ಲದಿದ್ದರೂ ಅದಕ್ಕಿಂತ ತಾನೂ ವಿಂಗಡವಾಗಿಲ್ಲದಿದ್ದರೂ- ಒಬ್ಬನು ಮತ್ತೊಂದನ್ನು ಕಂಡಾನು, ಅರಿತಾನು. ಇದನ್ನು ಸ್ವಪ್ನದಲ್ಲಿ "ಕೊಲ್ಲುವಂತಿರುತ್ತಾರೆ, ಗೆಲ್ಲು

ವಂತಿರುತ್ತಾರೆ" (೪-೩-೨೦) ಎಂದು ಪ್ರತ್ಯಕ್ಷವಾಗಿ[1] (ಹಿಂದೆ) ತೋರಿಸಿರುತ್ತದೆ. ಹೀಗೆಯೇ (ಅಲ್ಲಿ) ಒಬ್ಬನು ಮತ್ತೊಂದನ್ನು 'ಮೂಸಿಯಾನು', 'ಸವಿದಾನು', 'ಹೇಳಿಯಾನು', 'ಕೇಳಿಯಾನು', 'ಮನನಮಾಡಿಯಾನು', 'ಸೋಂಕಿಯಾನು', 'ಅರಿತಾನು'- (ಎಂಬಿವಕ್ಕೂ ಅರ್ಥಮಾಡಿಕೊಳ್ಳಬೇಕು).

## ಸುಷುಪ್ತಿಯಲ್ಲಿ ಆತ್ಮನಿಗೆ ಸಿಕ್ಕುವದು ಪರಮಾನಂದವು

(ಉಪನಿಷತ್ತು)

**ಸಲಿಲ ಏಕೋ ದ್ರಷ್ಟಾಽದ್ವೈತೋ ಭವತ್ಯೇಷ ಬ್ರಹ್ಮಲೋಕಃ ಸಮ್ರಾಡಿತಿ ಹೈನಮನುಶಶಾಸ ಯಾಜ್ಞವಲ್ಕ್ಯ ಏಷಾಽಸ್ಯ ಪರಮಾ ಗತಿರೇಷಾಽಸ್ಯ ಪರಮಾ ಸಂಪದೇಷೋಽಸ್ಯ ಪರಮೋ ಲೋಕ ಏಷೋಽಸ್ಯ ಪರಮ ಆನನ್ದ ಏತಸ್ಯೈವಾನನ್ದಸ್ಯಾನ್ಯಾನಿ ಭೂತಾನಿ ಮಾತ್ರಾಮುಪಜೀವನ್ತಿ ॥ ೩೨ ॥**

೩೨. 'ನೀರು, ಏಕನು, ಅದ್ವೈತನಾದ ದ್ರಷ್ಟೃವಾಗುವನು. ಸಮ್ರಾಜನೆ, ಇದೇ ಬ್ರಹ್ಮಲೋಕವು' ಎಂದು ಯಾಜ್ಞವಲ್ಕ್ಯನು ಅನುಶಾಸನಮಾಡಿದನು. 'ಇದೇ ಇವನಿಗೆ ಪರಮಗತಿ, ಇದೇ ಇವನಿಗೆ ಪರಮಸಂಪತ್ತು, ಇದೇ ಇವನಿಗೆ ಪರಮಲೋಕವು, ಇದೇ ಇವನಿಗೆ ಪರಮಾನಂದವು ; ಈ ಆನಂದದ ಮಾತ್ರೆಯನ್ನೇ ಮಿಕ್ಕ ಭೂತಗಳು ಉಪಜೀವಿಸಿಕೊಂಡಿರುತ್ತವೆ.'

## ಸುಷುಪ್ತಿಸ್ಥಿತಿಯ ಹೆಚ್ಚುಗಾರಿಕೆ

(ಭಾಷ್ಯ)

**೨೩೩. ಯತ್ರ ಪುನಃ ಸಾ ಅವಿದ್ಯಾ ಸುಷುಪ್ತೇ ವಸ್ತ್ವನ್ತರಪ್ರತ್ಯುಪಸ್ಥಾಪಿಕಾ ಶಾನ್ತಾ ತೇನ ಅನ್ಯತ್ವೇನ ಅವಿದ್ಯಾಪ್ರವಿಭಕ್ತಸ್ಯ ವಸ್ತುನೋಽಭಾವಾತ್ ತತ್ ಕೇನ ಕಂ ಪಶ್ಯೇತ್, ಜಿಘ್ರೇತ್, ವಿಜಾನೀಯಾದ್ ವಾ ? ಅತಃ ಸ್ವೇನೈವ ಹಿ ಪ್ರಾಜ್ಞೇನ ಆತ್ಮನಾ ಸ್ವಯಂಜ್ಯೋತಿಃಸ್ವಭಾವೇನ ಸಂಪರಿಷ್ವಕ್ತಃ ಸಮಸ್ತಃ ಸಂಪ್ರಸನ್ನಃ ಆಪ್ತಕಾಮಃ ಆತ್ಮಕಾಮಃ ಸಲಿಲವದ್ ಸ್ವಚ್ಛೀಭೂತಃ । ಸಲಿಲ ಇವ ಸಲಿಲಃ । ಏಕಃ ದ್ವಿತೀಯಸ್ಯ ಅಭಾವಾತ್ ।**

---

1. ಅನುಭವಾನುಸಾರವಾಗಿ ಎಂದರ್ಥ ; ಕನಸಿನಲ್ಲಿ ಎರಡನೆಯದಿಲ್ಲದಿದ್ದರೂ ಇದ್ದಂತೆ ಕಾಣುವದು ಎಲ್ಲರಿಗೂ ಪ್ರತ್ಯಕ್ಷವಾಗಿರುತ್ತದೆ.

ಅವಿದ್ಯಯಾ ಹಿ ದ್ವಿತೀಯಃ ಪ್ರವಿಭಜ್ಯತೇ। ಸಾ ಚ ಶಾನ್ತಾ ಅತ್ರ। ಅತಃ ಏಕಃ। ದ್ರಷ್ಟಾ ದೃಷ್ಟೇಃ ಅವಿಪರಿಲುಪ್ತತ್ವಾತ್ ಆತ್ಮಜ್ಯೋತಿಃಸ್ವಭಾವಾಯಾಃ। ಅದ್ವೈತಃ। ದ್ರಷ್ಟವ್ಯಸ್ಯ ದ್ವಿತೀಯಸ್ಯ ಅಭಾವಾತ್। ಏತತ್ ಅಮೃತಮ್ ಅಭಯಮ್ ಏಷ ಬ್ರಹ್ಮಲೋಕಃ। ಬ್ರಹ್ಮೈವ ಲೋಕಃ ಬ್ರಹ್ಮಲೋಕಃ। ಪರ ಏವಾಯಮ್। ಅಸ್ಮಿನ್ ಕಾಲೇ ವ್ಯಾವೃತ್ತಕಾರ್ಯಕರಣೋಪಾಧಿಭೇದಃ ಸ್ವೇ ಆತ್ಮಜ್ಯೋತಿಷಿ ಶಾನ್ತಸರ್ವಸಂಬನ್ಧೋ ವರ್ತತೇ। ಹೇ ಸಮ್ರಾಟ್, ಇತಿ ಹ ಏನಂ ಹ ಏನಂ ಜನಕಮ್ ಅನುಶಶಾಸ, ಅನುಶಿಷ್ಟವಾನ್ ಯಾಜ್ಞವಲ್ಕ್ಯಃ ಇತಿ ಶ್ರುತಿವಚನಮೇತತ್। ಕಥಂ ಚ[1] ಅನುಶಶಾಸ ? ಏಷಾ ಅಸ್ಯ ವಿಜ್ಞಾನಮಯಸ್ಯ ಪರಮಾ ಗತಿಃ। ಯಾಸ್ತು ಅನ್ಯಾ ದೇಹಗ್ರಹಣಲಕ್ಷಣಾ ಬ್ರಹ್ಮಾದಿಸ್ತಮ್ಬಪರ್ಯನ್ತಾ ಅವಿದ್ಯಾಕಲ್ಪಿತಾಃ ತಾ ಗತಯೋ ಅತೋಽಪರಮಾಃ ಅವಿದ್ಯಾವಿಷಯತ್ವಾತ್। ಇಯಂ ತು ದೇವತ್ವಾದಿಗತೀನಾಂ ಕರ್ಮವಿದ್ಯಾಸಾಧ್ಯಾನಾಂ ಪರಮಾ ಉತ್ತಮಾ। ಯಃ ಸಮಸ್ತಾತ್ಮಭಾವಃ, ಯತ್ರ ನಾನ್ಯತ್ ಪಶ್ಯತಿ ನಾನ್ಯಚ್ಛೃಣೋತಿ ನಾನ್ಯದ್ ವಿಜಾನಾತಿ ಇತಿ। ಏಷೈವ ಚ ಪರಮಾ ಸಂಪತ್। ಸರ್ವಾಸಾಂ ಸಂಪದಾಂ ವಿಭೂತೀನಾಮ್ ಇಯಂ ಪರಮಾ। ಸ್ವಾಭಾವಿಕತ್ವಾತ್ ಅಸ್ಯಾಃ। ಕೃತಕಾ ಹಿ ಅನ್ಯಾಃ ಸಂಪದಃ। ತಥಾ ಏಷೋಽಸ್ಯ ಪರಮೋ ಲೋಕಃ। ಯೇ ಅನ್ಯೇ ಕರ್ಮಫಲಾಶ್ರಯಾ ಲೋಕಾಃ ತೇ ಅಸ್ಮಾತ್ ಅಪರಮಾಃ। ಅಯಂ ತು ನ ಕೇನಚನ ಕರ್ಮಣಾ ಮೀಯತೇ। ಸ್ವಾಭಾವಿಕತ್ವಾತ್। ಏಷೋಽಸ್ಯ ಪರಮೋ ಲೋಕಃ। ತಥಾ ಏಷೋಽಸ್ಯ ಪರಮ ಆನನ್ದಃ। ಯಾನಿ ಅನ್ಯಾನಿ ವಿಷಯೇನ್ದ್ರಿಯಸಂಬನ್ಧಜನಿತಾನಿ ಆನನ್ದಜಾತಾನಿ ತಾನ್ಯಪೇಕ್ಷ್ಯ ಏಷಃ ಅಸ್ಯ ಪರಮ ಆನನ್ದಃ। ನಿತ್ಯತ್ವಾತ್। "ಯೋ ವೈ ಭೂಮಾ ತತ್ಸುಖಮ್" (ಛಾಂ. ೭–೨೩–೧) ಇತಿ ಶ್ರುತ್ಯನ್ತರಾತ್। ಯತ್ರ ಅನ್ಯತ್ ಪಶ್ಯತಿ ಅನ್ಯದ್ ವಿಜಾನಾತಿ ತದಲ್ಪಂ ಮರ್ತ್ಯಮ್ ಅಮುಖ್ಯಂ ಸುಖಮ್। ಇದಂ ತು ತದ್ವಿಪರೀತಮ್। ಅತ ಏವ ಏಷೋಽಸ್ಯ ಪರಮ ಆನನ್ದಃ। ಏತಸ್ಯೈವ ಆನನ್ದಸ್ಯ ಮಾತ್ರಾಂ ಕಲಾಮ್ ಅವಿದ್ಯಾಪ್ರತ್ಯುಪಸ್ಥಾಪಿತಾಂ ವಿಷಯೇನ್ದ್ರಿಯಸಂಬನ್ಧಕಾಲವಿಭಾವ್ಯಾಮ್, ಅನ್ಯಾನಿ ಭೂತಾನಿ ಉಪಜೀವನ್ತಿ। ಕಾನಿ ತಾನಿ ? ತತ ಏವಾನನ್ದಾತ್ ಅವಿದ್ಯಯಾ ಪ್ರವಿಭಜ್ಯಮಾನಸ್ವರೂಪಾಣಿ ಅನ್ಯತ್ವೇನ। ತಾನಿ ಬ್ರಹ್ಮಣಃ ಪರಿಕಲ್ಪ್ಯಮಾನಾನಿ ಅನ್ಯಾನಿ ಸನ್ತಿ ಉಪಜೀವನ್ತಿ ಭೂತಾನಿ ವಿಷಯೇನ್ದ್ರಿಯಸಂಪರ್ಕದ್ವಾರೇಣ ವಿಭಾವ್ಯಮಾನಾಮ್ ॥

---

1. 'ಕಥಂ ವಾ' ಎಂಬ ಅಚ್ಚಿನ ಪಾಠಕ್ಕಿಂತ ಇದು ಮೇಲು. ಅನುವಾದದ ಟಿಪ್ಪಣಿಯನ್ನು ನೋಡಿ.

(ಭಾಷ್ಯಾರ್ಥ)

ಆದರೆ ಎಲ್ಲಿ, (ಯಾವ) ನಿದ್ರೆಯಲ್ಲಿ, ಮತ್ತೊಂದು ವಸ್ತುವನ್ನು ಮುಂದೊಡ್ಡುವ ಆ ಅವಿದ್ಯೆಯು ಶಾಂತವಾಗುವದೋ, ಅದರಿಂದ[1] ಮತ್ತೊಂದೆಂದು ಅವಿದ್ಯೆಯಿಂದ ವಿಂಗಡವಾಗಿದ್ದ ವಸ್ತುವು ಇಲ್ಲವಾಗಿರುವದರಿಂದ, ಅಲ್ಲಿ ಏತರಿಂದ ಯಾರನ್ನು ಕಂಡಾನು, ಮೂಸಿಯಾನು, .. ಅಥವಾ ಅರಿತಾನು[2]? ಆದ್ದರಿಂದ ತನ್ನದೇ ಆಗಿರುವ ಸ್ವಯಂಜ್ಯೋತಿಃಸ್ವಭಾವದ ಪ್ರಾಜ್ಞಸ್ವರೂಪದಿಂದ ಆಲಿಂಗಿತನಾಗಿ[3], ಸಮಸ್ತನೂ ಸಂಪ್ರಸನ್ನನೂ ಆಗಿ[4] ಆಪ್ತಕಾಮನೂ ಆತ್ಮಕಾಮನೂ ಆಗಿರುತ್ತಾನೆ.[5]

ನೀರಿನಂತೆ ಸ್ವಚ್ಛನಾಗಿರುತ್ತಾನೆ. (ಆದ್ದರಿಂದ ಇಲ್ಲಿ) ನೀರಿನಂತೆ (ತಿಳಿಯಾಗಿರುವದರಿಂದ ಇವನು) ನೀರು (ಎನಿಸುವೆ). ಏಕನು, ಏಕೆಂದರೆ ಎರಡನೆಯದಿಲ್ಲ. ಅವಿದ್ಯೆಯಿಂದಲ್ಲವೆ, ಎರಡನೆಯದು ಪ್ರವಿಭಕ್ತವಾಗಿರುತ್ತದೆ? ಆದರೆ ಅದು ಇಲ್ಲಿ ಶಾಂತವಾಗಿರುತ್ತದೆ ಆದ್ದರಿಂದ ಒಬ್ಬನೇ (ಆಗಿರುತ್ತಾನೆ). ಏಕೆಂದರೆ ಆತ್ಮಜ್ಯೋತಿಯ ಸ್ವರೂಪವಾದ ದೃಷ್ಟಿಯು ವಿಪರಿಲುಪ್ತವಾಗದೆ (ಇರುತ್ತದೆ).[6] ಅದ್ವೈತನಾದ (ದ್ರಷ್ಟೃ), ಏಕೆಂದರೆ ಕಾಣಬಹುದಾದ ಎರಡನೆಯದು (ಇಲ್ಲಿ) ಇರುವದಿಲ್ಲ.[7] ಇದು ಅಮೃತವೂ ಅಭಯವೂ (ಆದ ಸ್ವರೂಪವು).[8]

---

1 ಹೀಗೆ ಅವಿದ್ಯೆಯು ಶಾಂತವಾದ್ದರಿಂದ.

2 ೪-೫-೧೫ರ ಸೂಚನೆ ಆದ್ದರಿಂದ ಅವಿದ್ಯಾಕೃತವಾದ ವಿಶೇಷಜ್ಞಾನವು ಅವಿದ್ಯೆಯಿಲ್ಲದ ಈ ಅವಸ್ಥೆಯಲ್ಲಿರಲು ಕಾರಣವಿಲ್ಲ.

3. ೪-೩-೨೧ರ ಸೂಚನೆ ಪ್ರಾಜ್ಞಸ್ವರೂಪವು ತನ್ನ ಆತ್ಮನೇ ಆಗಿರುವದರಿಂದ ವಿಶೇಷವಿಜ್ಞಾನವಿಲ್ಲದಿರುವದೇ ಇವನ ಸ್ವಭಾವವು ಎಂದು ಭಾವ

4. ಛಾಂ. ೮-೧೧-೧ರ ಸೂಚನೆ. ಇಲ್ಲಿ ಸರ್ವಕರಣರಹಿತನೂ ಸ್ವಚ್ಛಸ್ವಭಾವನೂ ಆಗಿರುತ್ತಾನೆ ಎಂದರ್ಥ.

5. ೪-೩-೨೧ರ ಸೂಚನೆ.　　6. ೪-೩-೨೩ರ ಸೂಚನೆ.

7. ಏಕೋ ದ್ರಷ್ಟಾ ಎಂಬುದನ್ನು ಏಕಃ ಅದ್ರಷ್ಟಾ– ಎಂದೂ ಬಿಡಿಸಿಕೊಳ್ಳಬಹುದೆಂದು ಟೀಕೆ. ಇದು ಸರಿಯಲ್ಲ; ಏಕೆಂದರೆ 'ಒಬ್ಬನೇ ದ್ರಷ್ಟೃ' ಎಂಬುದು ಹೇಗೆ? ಎಂಬ ಆಕ್ಷೇಪಕ್ಕೆ ಉತ್ತರವಾಗಿ ಆತ್ಮಜ್ಯೋತಿಯೇ ದೃಷ್ಟಿಯು, ಆದ್ದರಿಂದ ಅವನು ದ್ರಷ್ಟೃ, ಆದರೆ ದ್ರಷ್ಟವ್ಯವಿಲ್ಲದ್ದರಿಂದ ಒಬ್ಬನೇ ದ್ರಷ್ಟೃ ಎಂದಿದೆ ಎಂಬ ಸಮಾಧಾನಭಾಷ್ಯವು ಬಂದಿದೆ.

8. ಛಾಂ. ೮-೧೨-೧ರ ಸೂಚನೆ. ಇಲ್ಲಿ ವಿಶೇಷಜ್ಞಾನವಿಲ್ಲದ್ದರಿಂದ ಇವನೇ ನಷ್ಟವಾದಂತೆ ಕಾಣುವದಲ್ಲ ಎಂಬ ಭಯವನ್ನು ಮುಂದೆ ಛಾಂ. ೮-೧೨-೧ರಲ್ಲಿ ಪರಿಹರಿಸಿದೆ. ಮರ್ತ್ಯವಾದ ಕಾರ್ಯಕರಣಗಳ ಅಭಿಮಾನರೂಪವಾದ ಅವಿದ್ಯೆಯೇ ವಿಶೇಷವಿಜ್ಞಾನಕ್ಕೆ ಹೇತು. ಅದು ಇಲ್ಲದಮಾತ್ರದಿಂದ ತನ್ನ ಚೈತನ್ಯಸ್ವರೂಪವೇನೂ ನಾಶವಾಗಿರುವದಿಲ್ಲ. ಆದ್ದರಿಂದ ಇದು ಅಮೃತವೂ ಅಭಯವೂ ಆಗಿದೆ.

ಇದೇ ಬ್ರಹ್ಮಲೋಕವು; ಬ್ರಹ್ಮವೆಂಬ ಲೋಕವು ಬ್ರಹ್ಮಲೋಕವು. ಇವನು ಪರ(ಮಾತ್ಮನೇ ಎಂದರ್ಥ). ಈ (ಸುಷುಪ್ತಿ)ಕಾಲದಲ್ಲಿ ಕಾರ್ಯ, ಕರಣ- ಮುಂತಾದ (ಯಾವ) ಭೇದವೂ ಇಲ್ಲದೆ ತನ್ನ ಆತ್ಮಜ್ಯೋತಿಯಲ್ಲಿಯೇ ಯಾವ ಸಂಬಂಧವೂ ಇಲ್ಲದೆ ಇರುತ್ತಾನೆ (ಎಂದರ್ಥ).[1]

ಎಲೈ ಸಮ್ರಾಜನೆ, (ಇತಿ ಹ=ಏವಂ ಹ) ಹೀಗೆಂದು ಈ ಜನಕನಿಗೆ ಯಾಜ್ಞವಲ್ಕ್ಯನು ಅನುಶಾಸನವನ್ನು ಮಾಡಿದನು, ತಿಳಿಸಿಕೊಟ್ಟನು- ಎಂಬಿದು ಶ್ರುತಿವಚನವು.

ಮತ್ತು[2] ಹೇಗೆ ಅನುಶಾಸನಮಾಡಿದನು? ಎಂದರೆ, ಇದೇ ಈ ವಿಜ್ಞಾನಮಯನಿಗೆ ಪರಮಗತಿಯು. ಆದರೆ ದೇಹಧಾರಣವನ್ನು ಮಾಡುವ ರೂಪದ ಮಿಕ್ಕ ಬ್ರಹ್ಮಾದಿಸ್ತಂಬಪರ್ಯಂತವಾದ ಅವಿದ್ಯಾಕಲ್ಪಿತಗತಿಗಳಿರುವವಲ್ಲ, ಆ ಗತಿಗಳು ಇದಕ್ಕಿಂತ ಕೀಳಾದವುಗಳು, ಏಕೆಂದರೆ (ಅವು) ಅವಿದ್ಯಾವಿಷಯವಾಗಿರುತ್ತವೆ. ಆದರೆ ಎಲ್ಲಿ ಮತ್ತೊಂದನ್ನು ಕಾಣದಿರುತ್ತಾನೋ ಮತ್ತೊಂದನ್ನು ಕೇಳದೆ ಇರುತ್ತಾನೋ, ಮತ್ತೊಂದನ್ನು ಅರಿಯದೆ ಇರುತ್ತಾನೋ[3] ಆ ಸಮಸ್ತಾತ್ಮಭಾವವೆಂಬ ಈ (ಗತಿ)ಯಾದರೋ ಕರ್ಮ, ಉಪಾಸನೆ- ಇವುಗಳಿಂದ ಸಾಧ್ಯವಾಗುವ ದೇವತಾಭಾವವೇ ಮುಂತಾದವುಗಳಿಗಿಂತ ಪರಮವು, ಉತ್ತಮವಾದದ್ದು

ಇದೇ ಪರಮಸಂಪತ್ತು. ಎಲ್ಲಾ ಸಂಪತ್ತುಗಳೊಳಗೆ ವಿಭೂತಿಗ(ಳೊಳಗೆಲ್ಲ) ಇದು ಹೆಚ್ಚಿನದು; ಏಕೆಂದರೆ ಇದು ಸ್ವಾಭಾವಿಕವಾದದ್ದು. ಮಿಕ್ಕ ಸಂಪತ್ತುಗಳು ಕೃತಕವಲ್ಲವೆ[4] ?

ಇದರಂತೆ ಇದೇ ಇವನಿಗೆ ಪರಮಲೋಕವು; ಕರ್ಮಫಲಕ್ಕೆ ಆಶ್ರಯವಾಗಿರುವ ಮಿಕ್ಕ ಲೋಕಗಳಿವೆಯಲ್ಲ, ಅವು ಇದಕ್ಕಿಂತ ಕೀಳಾಗಿರುವ

---

1. ಪಿತಾಪುತ್ರಾದಿಸಂಬಂಧನಿಮಿತ್ತವಾದ ಕಾಮವಾಗಲಿ, ಕಾಮದ ಸಂಬಂಧವಾಗಲಿ ಇಲ್ಲಿರುವದಿಲ್ಲ ಎಂದು ಹಿಂದೆ ೪-೩-೨೨ರಲ್ಲಿ ಹೇಳಿದ್ದರ ಸೂಚನೆಯಿದು.

2. 'ಕಥಂ ವಾ' ಎಂಬ ಅಚ್ಚಿನ ಪಾಠಕ್ಕೆ 'ಹೇಗೆ ಅನುಶಾಸನಮಾಡಿದನು ?' ಎಂದು ಅನುವಾದ. ಅದು ಮುಂದಿನ ಅನುಶಾಸನಭಾಗಕ್ಕೆ ಮಾತ್ರ ಅನ್ವಯಿಸುತ್ತದೆಯಾದ್ದರಿಂದಲೂ ಹಿಂದೆ ಹೇಳಿರುವ ಸಲಿಲತ್ವಾದಿರೂಪವನ್ನು ಅನುಶಾಸನಮಾಡಿರುವವನೂ ಯಾಜ್ಞವಲ್ಕ್ಯನೇ ಆಗಿರುವದರಿಂದಲೂ ನಾವು 'ಕಥಂ ಚ' ಎಂಬ ಪಾಠವನ್ನು ಇಟ್ಟುಕೊಂಡಿರುತ್ತೇವೆ.

3. ಸುಷುಪ್ತಿಯಲ್ಲಿ ಪರಿಚ್ಛಿನ್ನನಾಗಿರುವದಿಲ್ಲ. ದೇಹಧಾರಣಮಾಡುವ ರೂಪದಿಂದ ಪಡೆಯುವ ಸ್ಥಿತಿಯದಲ್ಲ; ಅದು ಅದ್ವೈತಸ್ಥಿತಿಯು, ನಿತ್ಯಪ್ರಾಪ್ತವಾದದ್ದು.

4. ಅವು ಕರ್ಮದಿಂದ ಸಂಪಾದಿಸಿಕೊಳ್ಳತಕ್ಕವು; ಆದ್ದರಿಂದ ನಾಶವಾಗತಕ್ಕವು. ಆದರೆ ಇದು ತನ್ನ ಸ್ವಭಾವಕ್ಕೇ ಸೇರಿದ್ದಾದ್ದರಿಂದ ನಿತ್ಯವಾದದ್ದು.

(ಲೋಕಗಳು); ಆದರೆ ಇದು ಯಾವ ಕರ್ಮದಿಂದಲೂ ಪರಿಚ್ಛಿನ್ನವಾಗಿರುವದಿಲ್ಲ.[1] ಏಕೆಂದರೆ (ಇದು ಇವನ) ಸ್ವಭಾವವೇ ಆಗಿದೆ; (ಆದ್ದರಿಂದ) ಇದು ಇವನ ಪರಮಲೋಕವು.

ಹೀಗೆಯೇ ಇದೇ ಇವನ ಪರಮಾನಂದವು; ವಿಷಯೇಂದ್ರಿಯಗಳ ಸಂಬಂಧದಿಂದ ಉಂಟಾಗುವ ಮಿಕ್ಕ ಆನಂದಸಮೂಹಗಳಿವೆಯಲ್ಲ, ಅವಕ್ಕೆ ಹೋಲಿಸಿದರೆ ಇದೇ ಇವನ ಪರಮಾನಂದವು; ಏಕೆಂದರೆ (ಇದು) ನಿತ್ಯವಾಗಿದೆ. "ಯಾವದು ಭೂಮವೋ ಅದು ಸುಖವು" (ಛಾಂ ೭-೨೩-೧) ಎಂಬ ಮತ್ತೊಂದು ಶ್ರುತಿಯಿಂದ (ಇದು ಸಿದ್ಧವಾಗುತ್ತದೆ).[2] ಎಲ್ಲಿ ಮತ್ತೊಂದನ್ನು ಕಾಣುತ್ತಾನೋ, ಮತ್ತೊಂದನ್ನು ಅರಿಯುತ್ತಾನೋ ಅದು ಅಲ್ಪವು, ಮರ್ತ್ಯವು, ಅಮುಖ್ಯವಾದ ಸುಖವು[3] ಆದರೆ ಇದು ಅದಕ್ಕೆ ವಿಪರೀತವಾಗಿರುತ್ತದೆ. ಆದ್ದರಿಂದಲೇ ಇದು ಇವನ ಪರಮಾನಂದವು. ಇದೇ ಆನಂದದ ಮಾತ್ರೆಯನ್ನು, ಅವಿದ್ಯೆಯು ತಂದು ಮುಂದೊಡ್ಡುವ[4], ವಿಷಯೇಂದ್ರಿಯಸಂಬಂಧದಕಾಲದಲ್ಲಿ (ಮಾತ್ರ) ತೋರುವ (ಇದರ ಒಂದು) ಕಲೆಯನ್ನು, ಮಿಕ್ಕ ಭೂತಗಳು ಉಪಜೀವಿಸಿಕೊಂಡಿರುತ್ತವೆ. ಆ (ಭೂತಗಳು) ಯಾವವು? **ಇದೇ ಆನಂದದಿಂದ ಅವಿದ್ಯೆಯಿಂದ ವಿಂಗಡಿಸಲ್ಪಟ್ಟ ಸ್ವರೂಪವುಳ್ಳವುಗಳಾಗಿ ಬ್ರಹ್ಮಕ್ಕಿಂತ ಅನ್ಯವೆಂದು ಪರಿಕಲ್ಪಿಸಲ್ಪಡುವ ಬೇರೆಯ ಭೂತಗಳಿರುವವಲ್ಲ, (ಅವು) ವಿಷಯೇಂದ್ರಿಯಗಳ ಸಂಪರ್ಕದ ದ್ವಾರದಿಂದ ಅನುಭವಿಸಲ್ಪಡುವ (ಆನಂದದ ಕಲೆಯನ್ನು) ಉಪಜೀವಿಸಿಕೊಂಡಿರುತ್ತವೆ[5].**

---

1. ಆದರೆ ಇದು ಯಾವ ಕರ್ಮದಿಂದಲೂ ಹೊಸದಾಗಿ ಪಡೆಯುವ ಫಲವಲ್ಲ; ಆದ್ದರಿಂದ ಅನಿತ್ಯವಲ್ಲ-ಎಂದರ್ಥ.

2. ಭೂಮದಲ್ಲಿ ಎರಡನೆಯ ಯಾವದೊಂದನ್ನೂ ಕಾಣುವದಿಲ್ಲ; ಸುಷುಪ್ತಸ್ಥಿತಿಯು ಅಂಥದ್ದು.

3. ಛಾಂ. ೭-೨೪-೧ರ ವಾಕ್ಯಶೇಷದಲ್ಲಿ ಈ ಅಭಿಪ್ರಾಯವಿದೆ. ಆದ್ದರಿಂದ ದ್ವೈತವನ್ನು ಕಂಡು ಪಡೆಯುವ ಜಾಗ್ರತ್ಸ್ವಪ್ನಗಳ ಸುಖವು ಮರ್ತ್ಯವಾದದ್ದು ಎಂದಾಯಿತು.

4. ಆನಂದವು ಬ್ರಹ್ಮದ ಸ್ವರೂಪವೇ ಆಗಿರುವದರಿಂದ ಅದು ನಿರವಯವವಾಗಿರುತ್ತದೆ, ಹೀಗಿರುವಲ್ಲಿ ಅದರ ಮಾತ್ರೆಯನ್ನು ಎಂದರೆ ಅವಯವವನ್ನು ಇತರ ಭೂತಗಳು ಅನುಭವಿಸುತ್ತವೆಯೆಂಬುದು ಹೇಗೆ?-ಎಂಬ ಶಂಕೆಗೆ ಪರಿಹಾರವಿದು.

5. ಎಲ್ಲಾ ಪ್ರಾಣಿಗಳೂ ಪರಮಾರ್ಥದೃಷ್ಟಿಯಲ್ಲಿ ಆನಂದರೂಪವಾದ ಬ್ರಹ್ಮವೇ ಆಗಿರುತ್ತಿದ್ದರೂ ಅವಿದ್ಯೆಯಿಂದ ಆಯಾ ಕಾರ್ಯಕರಣಸಂಘಾತವನ್ನೇ ತಾವೆಂದು ತಿಳಿದುಕೊಂಡಿರುತ್ತವೆಯಾಗಿ ಅವಕ್ಕೆ ತಮಗಿಂತ ಅನ್ಯವಾದ ಆನಂದವು ವಿಷಯೇಂದ್ರಿಯಸಂಪರ್ಕದಿಂದ ಬರಬೇಕೆಂಬ ತಪ್ಪುಭಾವನೆಯಿರುತ್ತದೆ. ಈ ಅವಿದ್ಯೆಯ ಫಲವಾಗಿ ಅವು ವಿಷಯಸಂಪರ್ಕವನ್ನು ಸಂಪಾದಿಸಿಕೊಂಡೇ ಅಲ್ಪಕಾಲದಲ್ಲಿ ತೋರುವ ಆಯಾ ಆನಂದಕಲೆಯನ್ನು ಅನುಭವಿಸಬೇಕಾಗಿದೆ ಎಂದರ್ಥ.

## ಆನಂದಮಾತ್ರೆಗಳಿಂದ ಪರಮಾನಂದವನ್ನು ಅರಿತುಕೊಳ್ಳುವ ಬಗೆ

(ಉಪನಿಷತ್ತು)

**ಸ ಯೋ ಮನುಷ್ಯಾಣಾಗ್ಂ ರಾದ್ಧಃ ಸಮೃದ್ಧೋ ಭವತ್ಯನ್ಯೇಷಾಮಧಿಪತಿಃ ಸರ್ವೈರ್ಮಾನುಷ್ಯಕೈರ್ಭೋಗೈಃ ಸಂಪನ್ನತಮಃ ಸ ಮನುಷ್ಯಾಣಾಂ ಪರಮ ಆನನ್ದೋಽಥ ಯೇ ಶತಂ ಮನುಷ್ಯಾಣಾಮಾನನ್ದಾಃ ಸ ಏಕಃ ಪಿತೃಣಾಂ ಜಿತಲೋಕಾನಾಮಾನನ್ದೋಽಥ ಯೇ ಶತಂ ಪಿತೃಣಾಂ ಜಿತಲೋಕಾನಾಮಾನನ್ದಾಃ ಸ ಏಕೋ ಗನ್ಧರ್ವಲೋಕ ಆನನ್ದೋಽಥ ಯೇ ಶತಂ ಗನ್ಧರ್ವಲೋಕ ಆನನ್ದಾಃ ಸ ಏಕಃ ಕರ್ಮದೇವಾನಾಮಾನನ್ದೋ ಯೇ ಕರ್ಮಣಾ ದೇವತ್ವಮಭಿಸಂಪದ್ಯನ್ತೇಽಥ ಯೇ ಶತಂ ಕರ್ಮದೇವಾನಾಮಾನನ್ದಾಃ ಸ ಏಕ ಆಜಾನದೇವಾನಾಮಾನನ್ದೋ ಯಶ್ಚ ಶ್ರೋತ್ರಿಯೋಽವೃಜಿನೋಽಕಾಮಹತೋಽಥ ಯೇ ಶತಮಾಜಾನದೇವಾನಾಮಾನನ್ದಾಃ ಸ ಏಕಃ ಪ್ರಜಾಪತಿಲೋಕ ಆನನ್ದೋ ಯಶ್ಚ ಶ್ರೋತ್ರಿಯೋಽವೃಜಿನೋಽಕಾಮಹತೋಽಥ ಯೇ ಶತಂ ಪ್ರಜಾಪತಿಲೋಕ ಆನನ್ದಾಃ ಸ ಏಕೋ ಬ್ರಹ್ಮಲೋಕ ಆನನ್ದೋ ಯಶ್ಚ ಶ್ರೋತ್ರಿಯೋಽವೃಜಿನೋಽಕಾಮಹತೋಽಥೈಷ ಏವ ಪರಮ ಆನನ್ದಃ ಏಷ ಬ್ರಹ್ಮಲೋಕಃ ಸಮ್ರಾಡಿತಿ ಹೋವಾಚ ಯಾಜ್ಞವಲ್ಕ್ಯಃ ಸೋಽಹಂ ಭಗವತೇ ಸಹಸ್ರಂ ದದಾಮ್ಯತ ಊರ್ಧ್ವಂ ವಿಮೋಕ್ಷಾಯೈವ ಬ್ರೂಹೀತ್ಯತ್ರ ಹ ಯಾಜ್ಞವಲ್ಕ್ಯೋ ಬಿಭಯಾಂಚಕಾರ ಮೇಧಾವೀ ರಾಜಾ ಸರ್ವೇಭ್ಯೋ ಮಾಽನ್ತೇಭ್ಯ ಉದರೌತ್ಸೀದಿತಿ ॥ ೩೩ ॥**

೩೩. ಯಾವನು ಮನುಷ್ಯರಲ್ಲಿ ರಾದ್ಧನಾಗಿ ಸಮೃದ್ಧನಾಗಿ ಮಿಕ್ಕವರ ಅಧಿಪತಿಯೂ ಎಲ್ಲಾ ಮಾನುಷ್ಯಕಭೋಗಗಳಿಂದಲೂ ಸಂಪನ್ನತಮನಾಗಿರುವನೋ, ಅವನು ಮನುಷ್ಯರ ಪರಮಾನಂದವು. ಇನ್ನು ಮನುಷ್ಯರ ನೂರು ಆನಂದಗಳಿರುವವಲ್ಲ, ಅದು ಒಂದು ಜಿತಲೋಕರಾದ ಪಿತೃಗಳ ಆನಂದವು; ಇನ್ನು ಜಿತಲೋಕರಾದ ಪಿತೃಗಳ ನೂರು ಆನಂದಗಳಿರುವವಲ್ಲ, ಅದು ಗಂಧರ್ವಲೋಕದಲ್ಲಿರುವ ಒಂದು ಆನಂದವು. ಇನ್ನು ಗಂಧರ್ವಲೋಕದಲ್ಲಿರುವ ನೂರು ಆನಂದಗಳಿರು

ವವಲ್ಲ, ಅದು ಒಂದು- ಕರ್ಮದಿಂದ ಯಾರು ದೇವತ್ವವನ್ನು ಪಡೆದು ಕೊಂಡಿರುವರೋ (ಆ)- ಕರ್ಮದೇವತೆಗಳ ಆನಂದವು. ಇನ್ನು ಕರ್ಮದೇವತೆಗಳ ನೂರು ಆನಂದಗಳಿರುವವಲ್ಲ, ಅದು ಒಂದು ಆಜಾನದೇವತೆಗಳ ಆನಂದವು ; ಯಾವನು ಶ್ರೋತ್ರಿಯನೂ ಅವೃಜಿನನೂ ಅಕಾಮಹತನೂ (ಆಗಿರುವನೋ ಅವನ ಆನಂದವೂ ಆಗಿದೆ). ಇನ್ನು ಆಜಾನದೇವತೆಗಳ ನೂರು ಆನಂದಗಳಿರುವವಲ್ಲ, ಅದು ಒಂದು ಪ್ರಜಾಪತಿಲೋಕದಲ್ಲಿರುವ ಆನಂದವು ; ಯಾವನು ಶ್ರೋತ್ರಿಯನೂ ಅವೃಜಿನನೂ ಅಕಾಮಹತನೂ (ಆಗಿರುವನೋ ಅವನ ಆನಂದವೂ ಆಗಿರುವದು). ಇನ್ನು ಪ್ರಜಾಪತಿಲೋಕದಲ್ಲಿರುವ ನೂರು ಆನಂದಗಳಿರುವವಲ್ಲ, ಅದು ಒಂದು ಬ್ರಹ್ಮಲೋಕದಲ್ಲಿರುವ ಆನಂದವು ; ಯಾವನು ಶ್ರೋತ್ರಿಯನೂ ಅವೃಜಿನನೂ ಅಕಾಮಹತನೂ (ಆಗಿರುವನೋ ಅವನ ಆನಂದವೂ ಆಗಿರುವದು). ಇನ್ನು ಇದೇ ಪರಮಾನಂದವು, ಇದೇ ಬ್ರಹ್ಮಲೋಕವಯ್ಯ, ಸಮ್ರಾಜನೆ- ಎಂದು ಯಾಜ್ಞವಲ್ಕ್ಯನು ನುಡಿದನು. "ಆ ನಾನು ಭಗವಂತನಾದ ನಿನಗೆ ಸಾವಿರ (ಗೋಗಳನ್ನು) ಕೊಡುತ್ತೇನೆ, ಇನ್ನುಮೇಲೆ ವಿಮೋಕ್ಷಕ್ಕೇ ಹೇಳು!" ಇಲ್ಲಿ ಯಾಜ್ಞವಲ್ಕ್ಯನು 'ಮೇಧಾವಿಯಾದ ರಾಜನು ಎಲ್ಲಾ ಅಂತಗಳಿಂದಲೂ ಕಟ್ಟಿಹಾಕಿರುತ್ತಾನೆ' ಎಂದು ಭಯಪಟ್ಟನು.

## ಕಂಡಿಕೆಯ ಸಂಬಂಧ

(ಭಾಷ್ಯ)

೨೩೪. ಯಸ್ಯ ಪರಮಾನನ್ದಸ್ಯ ಮಾತ್ರಾ ಅವಯವಾಃ ಬ್ರಹ್ಮಾದಿಭಿರ್ಮನುಷ್ಯಪರ್ಯನ್ತೈಃ ಭೂತೈಃ ಉಪಜೀವ್ಯನ್ತೇ ತದಾನನ್ದಮಾತ್ರಾದ್ವಾರೇಣ ಮಾತ್ರಿಣಂ ಪರಮಾನನ್ದಮ್ ಅಧಿಜಿಗಮಯಿಷನ್ ಆಹ ಸೈನ್ಧವಲವಣಶಕಲೈರಿವ ಲವಣಶೈಲಮ್ ॥

(ಭಾಷ್ಯಾರ್ಥ)

ಯಾವ ಪರಮಾನಂದದ ಮಾತ್ರೆಗಳನ್ನು, ಅವಯವಗಳನ್ನು, ಬ್ರಹ್ಮನೇ ಮೊದಲಾಗಿ ಮನುಷ್ಯರವರೆಗಿನ ಭೂತಗಳು ಉಪಜೀವಿಸಿಕೊಂಡಿರುವವೋ ಆ ಆನಂದಮಾತ್ರೆಗಳ ದ್ವಾರದಿಂದ ಮಾತ್ರಿಯಾದ ಪರಮಾನಂದವನ್ನು ಸೈಂಧವ ಲವಣದ ಚೂರುಗಳಿಂದ ಉಪ್ಪಿನಬೆಟ್ಟವನ್ನು (ತಿಳಿಸಿಕೊಡು)ವಂತೆ ತಿಳಿಸಿಕೊಡುವದಕ್ಕಾಗಿ (ಯಾಜ್ಞವಲ್ಕ್ಯನು) ಹೇಳುತ್ತಿದಾನೆ.

# ಮನುಷ್ಯನ ಪರಮಾನಂದಮಾತ್ರೆ

(ಭಾಷ್ಯ)

೨೩೫. ಸ ಯಃ ಕಶ್ಚಿತ್ ಮನುಷ್ಯಾಣಾಂ ಮಧ್ಯೇ ರಾದ್ಧಃ ಸಂಸಿದ್ಧಃ, ಅವಿಕಲಃ । ಸಮಗ್ರಾವಯವ ಇತ್ಯರ್ಥಃ । ಸಮೃದ್ಧಃ ಉಪಭೋಗಕರಣೈಃ ಸಂಪನ್ನೋ ಭವತಿ । ಕಿಂ ಚ ಅನ್ಯೇಷಾಂ ಸಮಾನಜಾತೀಯಾನಾಮ್ ಅಧಿಪತಿಃ ಸ್ವತನ್ತ್ರಃ ಪತಿಃ, ನ ಮಾಣ್ಡಲಿಕಃ । ಸರ್ವೈಃ ಸಮಸ್ತೈಃ ಮಾನುಷ್ಯಕೈಃ ಇತಿ ದಿವ್ಯೋಪಭೋಗೋಪಕರಣನಿವೃತ್ತ್ಯರ್ಥಮ್ । ಮನುಷ್ಯಾಣಾಮೇವ ಯಾನಿ ಭೋಗೋಪಕರಣಾನಿ ತೈಃ ಸಂಪನ್ನಾನಾಮಪಿ ಅತಿಶಯೇನ ಸಂಪನ್ನಃ ಸಂಪನ್ನತಮಃ । ಸ ಮನುಷ್ಯಾಣಾಂ ಪರಮ ಆನನ್ದಃ । ತತ್ರ ಆನನ್ದಾನನ್ದಿನೋಃ ಅಭೇದನಿರ್ದೇಶಾತ್ ನಾರ್ಥಾನ್ತರಭೂತತ್ವಮ್ ಇತ್ಯೇತತ್ । ಪರಮಾನನ್ದಸ್ಯೈವೇಯಂ ವಿಷಯವಿಷಯ್ಯಾಕಾರೇಣ ಮಾತ್ರಾ ಪ್ರಸ್ತುತಾ ಇತಿ ಹಿ ಉಕ್ತಮ್ "ಯತ್ರ ವಾ ಅನ್ಯದಿವ ಸ್ಯಾತ್"(೪-೩-೩೧) ಇತ್ಯಾದಿವಾಕ್ಯೇನ। ತಸ್ಮಾತ್ ಯುಕ್ತೋಽಯಂ ಸ[1] ಪರಮಾನನ್ದಃ ಇತಿ ಅಭೇದನಿರ್ದೇಶಃ। ಯುಧಿಷ್ಠಿರಾದಿತುಲ್ಯೋ ರಾಜಾ ಅತ್ರೋದಾಹರಣಮ್ ॥

(ಭಾಷ್ಯಾರ್ಥ)

ಮನುಷ್ಯರೊಳಗೆ ಯಾವನೇ ಆಗಲಿ ರಾದ್ಧನೂ ಎಂದರೆ ಸಂಸಿದ್ಧನೂ, ಅಂಗವೈಕಲ್ಯವಿಲ್ಲದವನೂ, ಸಮಗ್ರವಾದ ಅವಯವಗಳುಳ್ಳವನೂ ಎಂದರ್ಥ. ಸಮೃದ್ಧನೂ ಉಪಭೋಗಗಳ ಉಪಕರಣಸಂಪತ್ತುಳ್ಳವನೂ ಆಗಿರುವನೋ. ಮತ್ತು ಮಿಕ್ಕವರ, (ಉಳಿದ) ತನ್ನ ಸಮಾನಜಾತಿಯವರ ಅಧಿಪತಿಯೂ ಸ್ವತಂತ್ರಪತಿಯೂ ಆಗಿರುವನೋ, ಮಾಂಡಲಿಕ(ರಾಜ)ನಲ್ಲವೋ(ಎಂದರ್ಥ). ಎಲ್ಲಾ ಸಮಸ್ತವಾದ 'ಮಾನುಷ್ಯಕವಾದ'- ಎಂಬ (ವಿಶೇಷಣವನ್ನು ಹಾಕಿರುವದು) ದಿವ್ಯವಾದ ಉಪಕರಣಗಳನ್ನು ತೊಲಗಿಸುವದಕ್ಕಾಗಿ. ಮನುಷ್ಯರವೇ ಆಗಿರುವ-ಭೋಗೋಪಕರಣಗಳಿರುವವಲ್ಲ, ಅವುಗಳಿಂದ ಸಂಪನ್ನತಮನಾಗಿರುವನೋ-ಸಂಪನ್ನರಾಗಿರುವವರಲ್ಲೆಲ್ಲ ಮಿಗಿಲಾಗಿ ಸಂಪನ್ನನು, ಸಂಪನ್ನತಮನು, (ಹಾಗೆ ಯಾವನು ಸಂಪನ್ನನಾಗಿರುವನೋ) ಅವನು ಮನುಷ್ಯರ ಪರಮಾನಂದವು. ಇಲ್ಲಿ ಆನಂದಾನಂದಿಗಳು ಬೇರೆಬೇರೆಯಾಗಿರುವದಿಲ್ಲ-ಎಂದು ತಾತ್ಪರ್ಯ, ಏಕೆಂದರೆ (ಅವನ್ನು) ಅಭೇದದಿಂದ ನಿರ್ದೇಶಮಾಡಿರುತ್ತದೆ.[2]

---

1. ಸ ಎಂಬ ಮಾತಿರುವ ಪಾಠವೇ ಮೇಲು.

2. ಅವನು, ಆ ಮನುಷ್ಯನು, ಎಂಬುದು ಆನಂದಿವಚನ; ಪರಮಾನಂದವು ಎಂಬುದು ಆನಂದವಚನ ಅವನು ಆನಂದವು ಎಂಬ ಅಭೇದನಿರ್ದೇಶವು ಹೇಗೆ ಸರಿ?- ಎಂದರೆ ಆನಂದಿಯಾದ ಮನುಷ್ಯನಿಗೂ ಅವನ ಆನಂದಕ್ಕೂ ನಿಜವಾಗಿ ಭೇದವಿಲ್ಲ ಎಂಬ ಅಭಿಪ್ರಾಯದಿಂದ ಹೀಗೆ ನಿರ್ದೇಶಿಸಿದೆ ಎಂದು ಉತ್ತರ. 'ಮನುಷ್ಯರ ಪರಮಾನಂದವು' ಎಂದರೆ ಮನುಷ್ಯನಿಗೆ ಲಭ್ಯವಾಗಿರುವ ತೀರಹೆಚ್ಚಿನ ಆನಂದಮಾತ್ರೆಯು.

'ಯತ್ರ ವಾ ಅನ್ಯದಿವ ಸ್ಯಾತ್' (೪-೩-೩೧) ಮುಂತಾದ ವಾಕ್ಯದಿಂದ ಪರಮಾನಂದದ ಮಾತ್ರೆಯೇ ಈ ವಿಷಯವಿಷಯಿಗಳ ಆಕಾರದಿಂದ ಹೊರಹೊಟರುತ್ತದೆ ಎಂದಲ್ಲವೆ, ಉಕ್ತವಾಗಿತ್ತು ? ಆದ್ದರಿಂದ 'ಅವನು ಪರಮಾನಂದವು' ಎಂದು ಅಭೇದದಿಂದ ನಿರ್ದೇಶ(ಮಾಡಿರುವದು) ಯುಕ್ತವಾಗಿರುತ್ತದೆ. ಯುಧಿಷ್ಠಿರನೇ ಮೊದಲಾದವರಿಗೆ ಸಮಾನನಾದ ರಾಜನು[1] ಇಲ್ಲಿ ಉದಾಹರಣೆ (ಯಾಗಿರುತ್ತಾನೆ).

## ಪಿತ್ರಾದಿಯಾದ ಆನಂದಮಾತ್ರಾಪರ್ಯಾಯಗಳಿಗೆ ಅವತರಣಿಕೆ

(ಭಾಷ್ಯ)

೨೩೬. ದೃಷ್ಟಂ ಮನುಷ್ಯಾನನ್ದಮ್ ಆದಿಂ ಕೃತ್ವಾ ಶತಗುಣೋತ್ತರೋತ್ತರಕ್ರಮೇಣ ಉನ್ನೀಯ ಪರಮಾನನ್ದಂ ಯತ್ರ ಭೇದೋ ನಿವರ್ತತೇ ತಮ್ ಅಧಿಗಮಯತಿ । ಅತ್ರ ಅಯಮ್ ಆನನ್ದಃ ಶತಗುಣೋತ್ತರೋತ್ತರಕ್ರಮೇಣ ವರ್ಧಮಾನಃ ಯತ್ರ ವೃದ್ಧಿಕಾಷ್ಠಾಮ್ ಅನುಭವತಿ, ಯತ್ರ ಗಣಿತಭೇದೋ ನಿವರ್ತತೇ, ಅನ್ಯದರ್ಶನಶ್ರವಣಮನನಾಭಾವಾತ್, ತಂ ಪರಮಾನನ್ದಂ ವಿವಕ್ಷನ್ ಆಹ ॥

(ಭಾಷ್ಯಾರ್ಥ)

(ನಾವು ಇಲ್ಲಿ) ಕಂಡಿರುವ ಮನುಷ್ಯಾನಂದವನ್ನು ಮೊದಲುಮಾಡಿಕೊಂಡು ನೂರರಷ್ಟು ಹೆಚ್ಚುಹೆಚ್ಚಾಗುವ ಕ್ರಮದಿಂದ ಪರಮಾನಂದವನ್ನು ಊಹಿಸಿ- ಯಾವ (ಪರಮಾನಂದ)ದಲ್ಲಿ (ಎಲ್ಲಾ) ಭೇದವೂ ತೊಲಗಿರುತ್ತದೆಯೋ ಅದನ್ನು (ಶ್ರುತಿ) ತಿಳಿಸುತ್ತಿದೆ. ಇಲ್ಲಿ ಈ ಆನಂದವು ನೂರರಷ್ಟು ಹೆಚ್ಚುಹೆಚ್ಚಾಗುವ ಕ್ರಮದಿಂದ ಬೆಳೆಯುತ್ತಾ ಎಲ್ಲಿ ಬೆಳೆವಣಿಗೆಯ ಪರಮಾವಧಿಯನ್ನು ಮುಟ್ಟುತ್ತದೆಯೋ, ಎಲ್ಲಿ ಗಣಿತವಿಶೇಷವು ಇಲ್ಲವಾಗಿರುವದೋ[2], ಮತ್ತೊಂದನ್ನು ಕಾಣುವದೂ ಕೇಳುವದೂ ಮನನಮಾಡುವದೂ ಇಲ್ಲವಾಗುವದೋ, ಆ ಪರಮಾನಂದವನ್ನು ಹೇಳಬೇಕೆಂದು ಹೇಳುತ್ತಿದಾನೆ.

---

1. ಅಥರ್ವದಿಂದ ರಾಜನಾದವನಿಗೆ ಮನುಷ್ಯಾನಂದದ ಪರಮಾವಧಿಯು ದಕ್ಕದು ಎಂಬುದನ್ನು ಸೂಚಿಸುವದಕ್ಕಾಗಿ ಈ ಉದಾಹರಣೆಯನ್ನು ಕೊಟ್ಟಿದೆ. ತೈ. ಭಾ. ೨-೮ (ಭಾ. ಭಾ. ೧೯೮) ನೋಡಿ.
2. ಇಂತಿಷ್ಟೆಂದು ಲೆಕ್ಕಮಾಡಿ ಹೇಳುವದಕ್ಕೆ ಬರುವದಿಲ್ಲವೋ.

## ಪಿತ್ರಾದ್ಯಾನಂದಗಳ ತಾರತಮ್ಯ

(ಭಾಷ್ಯ)

೨೩೭. ಅಥ ಯೇ ಮನುಷ್ಯಾಣಾಮ್ ಏವಂಪ್ರಕಾರಾಃ ಶತಮ್ ಆನನ್ದಭೇದಾಃ ಸ ಏಕಃ ಪಿತೃಣಾಮ್ । ತೇಷಾಂ ವಿಶೇಷಣಮ್ ಜಿತಲೋಕಾನಾಮಿತಿ । ಶ್ರಾದ್ಧಾದಿಕರ್ಮಭಿಃ ಪಿತೄನ್ ತೋಷಯಿತ್ವಾ ತೇನ ಕರ್ಮಣಾ ಜಿತೋ ಲೋಕೋ ಯೇಷಾಂ ತೇ ಜಿತಲೋಕಾಃ ಪಿತರಃ । ತೇಷಾಂ ಪಿತೃಣಾಂ ಜಿತಲೋಕಾನಾಂ ಮನುಷ್ಯಾನನ್ದಶತಗುಣೀಕೃತಪರಿಮಾಣಃ ಏಕ ಆನನ್ದೋ ಭವತಿ । ಸೋಽಪಿ ಶತಗುಣೀಕೃತೋ ಗನ್ಧರ್ವಲೋಕೇ ಏಕ ಆನನ್ದೋ ಭವತಿ । ಸ ಚ ಶತಗುಣೀಕೃತಃ ಕರ್ಮದೇವಾನಾಮ್ ಏಕ ಆನನ್ದಃ । ಅಗ್ನಿಹೋತ್ರಾದಿ ಶ್ರೌತಕರ್ಮಣಾ ಯೇ ದೇವತ್ವಂ ಪ್ರಾಪ್ನುವನ್ತಿ ತೇ ಕರ್ಮದೇವಾಃ । ತಥೈವ ಆಜಾನದೇವಾನಾಮ್ ಏಕ ಆನನ್ದಃ । ಆಜಾನತ ಏವ ಉತ್ಪತ್ತಿತ ಏವ ಯೇ ದೇವಾಃ ತೇ ಆಜಾನದೇವಾಃ । ಯಶ್ಚ ಶ್ರೋತ್ರಿಯಃ । ಅಧೀತವೇದಃ, ಅವೃಜಿನಃ– ವೃಜಿನಂ ಪಾಪಮ್, ತದ್ರಹಿತಃ – ಯಥೋಕ್ತಕಾರೀ ಇತ್ಯರ್ಥಃ ಅಕಾಮಹತಃ ವೀತತೃಷ್ಣಃ ಆಜಾನದೇವೇಭ್ಯೋಽರ್ವಾಕ್ ಯಾವನ್ತೋ ವಿಷಯಾಃ ತೇಷು । ತಸ್ಯ ಚ ಏವಂಭೂತಸ್ಯ ಆಜಾನದೇವೈಃ ಸಮಾನಃ ಆನನ್ದಃ ಇತ್ಯೇತತ್ ಅನ್ವಾಕೃಷ್ಯತೇ । ಚಶಬ್ದಾತ್ । ತಚ್ಛತಗುಣೀಕೃತ ಪರಿಮಾಣಃ ಪ್ರಜಾಪತಿಲೋಕೇ ಏಕ ಆನನ್ದಃ ವಿರಾಟ್ಶರೀರೇ । ತಥಾ ತದ್ವಿಜ್ಞಾನವಾನ್ ಶ್ರೋತ್ರಿಯಃ, ಅಧೀತವೇದಶ್ಚ । ಅವೃಜಿನಃ ಇತ್ಯಾದಿ ಪೂರ್ವವತ್ । ತಚ್ಛತಗುಣೀಕೃತಪರಿಮಾಣಃ ಏಕ ಆನನ್ದೋ ಬ್ರಹ್ಮಲೋಕೇ ಹಿರಣ್ಯಗರ್ಭಾತ್ಮನಿ । ಯಶ್ಚೇತ್ಯಾದಿ ಪೂರ್ವವದೇವ ॥

(ಭಾಷ್ಯಾರ್ಥ)

ಇನ್ನು ಮನುಷ್ಯರ ಈ ಪ್ರಕಾರದ ನೂರು ಆನಂದವಿಶೇಷಗಳಿರುವವಲ್ಲ, ಅದು ಒಂದು ಪಿತೃಗಳ– ಆ (ಪಿತೃಗಳಿಗೆ) ಜಿತಲೋಕವಾದ ಎಂಬುದು ವಿಶೇಷಣವು. ಶ್ರಾದ್ಧಾದಿಕರ್ಮಗಳಿಂದ ಪಿತೃಗಳನ್ನು ತುಷ್ಟಿಗೊಳಿಸಿ ಆ ಕರ್ಮದಿಂದ ಯಾರು (ಆ) ಲೋಕವನ್ನು ಜಯಿಸಿಕೊಂಡಿರುವರೋ ಅವರು ಜಿತಲೋಕರಾದ ಪಿತೃಗಳು, ಆ ಜಿತಲೋಕಪಿತೃಗಳ– ಮನುಷ್ಯಾನಂದದ ನೂರರಷ್ಟು ಪರಿಮಾಣದ ಒಂದು ಆನಂದವಾಗುತ್ತದೆ.[1] ಅದೂ ನೂರರಷ್ಟಾದರೆ ಗಂಧರ್ವ

1. ಇಲ್ಲಿ ಹಿಂದಿನ ಆನಂದದ ನೂರರಷ್ಟು ಮುಂದಿನದು –ಎಂಬ ಗಣಿತದಲ್ಲಿ ತಾತ್ಪರ್ಯವಿಲ್ಲ ; ಬ್ರಹ್ಮಾನಂದವು ಇವೆಲ್ಲಕ್ಕೂ ಹೆಚ್ಚಿನದು ಎಂಬುದೇ ಮುಖ್ಯವಾಗಿ ವಿವಕ್ಷಿತ. ಆದ್ದರಿಂದ ಇಲ್ಲಿರುವ ಶತಗುಣೋತ್ತರಾನಂದಗಳ ಪಾರಕ್ರಮಕ್ಕೂ ತೈತ್ತಿರೀಯದ (೨–೮)ರ ಪಾರಕ್ರಮಕ್ಕೂ ಹೆಚ್ಚುಕಡಿಮೆಯಿದೆಯಲ್ಲ ಎಂಬ ಚಿಂತೆಯನ್ನು ಮನಸ್ಸಿಗೆ ಹತ್ತಿಸಿಕೊಳ್ಳಬಾರದು.

ಲೋಕದಲ್ಲಿ ಒಂದು ಆನಂದವಾಗುವದು. ಅದು ನೂರರಷ್ಟಾದರೆ ಕರ್ಮ ದೇವತೆಗಳ ಒಂದು ಆನಂದವು ; ಅಗ್ನಿಹೋತ್ರವೇ ಮುಂತಾದ ಶ್ರೌತಕರ್ಮ ದಿಂದ ಯಾರು ದೇವತ್ವವನ್ನು ಪಡೆಯುತ್ತಾರೋ ಅವರು ಕರ್ಮದೇವತೆಗಳು. ಮತ್ತು ಹಾಗೆಯೇ (ಅದರ ನೂರರಷ್ಟಾದರೆ) ಆಜಾನದೇವತೆಗಳ ಒಂದು ಆನಂದವು, ಆಜಾನದಿಂದ ಎಂದರೆ ಹುಟ್ಟಿನಿಂದಲೇ ಯಾರು ದೇವತೆಗಳಾಗಿರು ವರೋ ಅವರು ಆಜಾನದೇವತೆಗಳು. ಮತ್ತು ಯಾವ ಶ್ರೋತ್ರಿಯನೂ ಎಂದರೆ ವೇದವನ್ನು ಅಧ್ಯಯನಮಾಡಿದವನೂ ಅವೃಜಿನನೂ- ವೃಜಿನವೆಂದರೆ ಪಾಪವು, ಅದಿಲ್ಲದವನೂ- (ಶಾಸ್ತ್ರ)ದಲ್ಲಿ ಹೇಳಿರುವಂತೆ ಮಾಡುವವನೂ ಎಂದರ್ಥ ; ಅಕಾಮಹತನೂ ಎಂದರೆ ಆಜಾನದೇವತೆಗಳ ಈಚೆಗೆ ಎಷ್ಟು ವಿಷಯಗಳಿರುವವೋ (ಅವುಗಳಲ್ಲಿ) ಆಶೆಯಿಲ್ಲದವನೂ (ಆಗಿರುವನೋ) ಇಂಥ ಅವನಿಗೂ ಆಜಾನದೇವತೆಗಳಿಗೆ ಸಮಾನವಾದ ಆನಂದವು ಎಂಬಿದನ್ನು ಚಶಬ್ದದಿಂದ ಅನುಷಂಗಮಾಡಿಕೊಳ್ಳಬೇಕು.

ಅವರ ನೂರರಷ್ಟು ಪರಿಮಾಣದ ಆನಂದವು ಪ್ರಜಾಪತಿಲೋಕದಲ್ಲಿ ಎಂದರೆ ವಿರಾಟ್ಛರೀರದಲ್ಲಿ. ಹೀಗೆಯೇ ಆ (ವಿರಾಜನ) ವಿಜ್ಞಾನವುಳ್ಳವನೂ 'ಶ್ರೋತ್ರಿಯನೂ ಎಂದರೆ ಅಧ್ಯಯನಮಾಡಿದವನೂ ಅವೃಜಿನನೂ' ಎಂದು ಮುಂತಾಗಿರುವ (ಗ್ರಂಥಕ್ಕೆ) ಹಿಂದಿನಂತೆ (ಅರ್ಥ). ಅದರ ನೂರರಷ್ಟು ಪರಿಮಾಣದ ಒಂದು ಆನಂದವು ಬ್ರಹ್ಮಲೋಕದಲ್ಲಿ ಎಂದರೆ ಹಿರಣ್ಯಗರ್ಭಾತ್ಮ ನಲ್ಲಿ. 'ಮತ್ತು ಯಾವನು' ಎಂಬಿದೇ ಮುಂತಾದ ಗ್ರಂಥವನ್ನು ಮೊದಲಿನಂತೆ ಯೇ (ವ್ಯಾಖ್ಯಾನಮಾಡಿಕೊಳ್ಳಬೇಕು).

## ಪರಮಾನಂದ

(ಭಾಷ್ಯ)

೨೩೮. ಅತಃಪರಂ ಗಣಿತನಿವೃತ್ತಿಃ। ಏಷ ಪರಮ ಆನನ್ದ ಇತ್ಯುಕ್ತಿಃ। ಯಸ್ಯ ಚ ಪರಮಾನನ್ದಸ್ಯ ಬ್ರಹ್ಮಲೋಕಾದ್ಯಾನನ್ದಾಃ ಮಾತ್ರಾಃ ಉದಧೇರಿವ ವಿಪ್ರುಷಃ। ಏವಂ ಶತಗುಣೋತ್ತರೋತ್ತರವೃದ್ಧ್ಯುಪೇತಾಃ ಆನನ್ದಾಃ ಯತ್ರ ಏಕತಾಂ ಯಾನ್ತಿ । ಯಶ್ಚ ಶ್ರೋತ್ರಿಯಪ್ರತ್ಯಕ್ಷಃ, ಅಥ ಏಷ ಏವ ಸಂಪ್ರ ಸಾದಲಕ್ಷಣಃ ಪರಮ ಆನನ್ದಃ। ತತ್ರ ಹಿ ನಾನ್ಯತ್ ಪಶ್ಯತಿ ನಾನ್ಯಚ್ಛೃಣೋತಿ (ನಾನ್ಯದ್ವಿಜಾನಾತಿ)[1] ಅತೋ ಭೂಮಾ ಭೂಮತ್ವಾತ್ ಅಮೃತಃ। ಇತರೇ ತದ್ವಿಪರೀತಾಃ ॥

---

1. ಇದು ಕೆಲವು ಪಾಠಗಳಲ್ಲಿ ಮಾತ್ರ ಇದೆ.

(ಭಾಷ್ಯಾರ್ಥ)

ಇನ್ನು ಮುಂದೆ ಗಣಿತವು ಇಲ್ಲ.[1] ಇದೇ ಪರಮಾನಂದವು ಎಂದು (ಹಿಂದೆ) ಹೇಳಿರುವದು.[2] ಬ್ರಹ್ಮಲೋಕಾದಿಗಳ ಆನಂದಗಳು –ಸಮುದ್ರಕ್ಕೆ ಹನಿಗಳಂತೆ– ಆ ಪರಮಾನಂದಕ್ಕೆ ಮಾತ್ರೆಗಳಾಗಿರುತ್ತವೆ. **ಹೀಗೆ ನೂರರಷ್ಟು ಮುಂದುಮುಂದಕ್ಕೆ ಹೆಚ್ಚಿರುವ ಆನಂದಗಳು (ಎಲ್ಲವೂ) ಎಲ್ಲಿ ಒಂದಾಗಿಬಿಟ್ಟಿರುವವೋ, ಮತ್ತು ಯಾವದು ಶ್ರೋತ್ರಿಯನಿಗೆ ಪ್ರತ್ಯಕ್ಷ (ವಾಗಿ ಕಾಣಬಂದಿರುವದೋ), ಇನ್ನು ಆ ಸಂಪ್ರಸಾದವೆಂಬ ಆನಂದವೇ. ಅಲ್ಲಿ ಮತ್ತೊಂದನ್ನು ಕಾಣುವದಿಲ್ಲ, ಮತ್ತೊಂದನ್ನು ಕೇಳುವದಿಲ್ಲ, (ಮತ್ತೊಂದನ್ನು ಅರಿಯುವದಿಲ್ಲ) ; ಆದ್ದರಿಂದ (ಅದು) ಭೂಮವು, ಭೂಮವಾಗಿರುವದರಿಂದ ಅಮೃತವು. ಮಿಕ್ಕ ಆನಂದಗಳು ಅದಕ್ಕೆ ವಿಪರೀತವಾಗಿರುತ್ತವೆ.**[3]

## ಶ್ರೋತ್ರಿಯತ್ವಾದಿವಾಕ್ಯದ ತಾತ್ಪರ್ಯ

(ಭಾಷ್ಯ)

೨೩೯. ಅತ್ರ ಚ ಶ್ರೋತ್ರಿಯತ್ವಾವೃಜಿನತ್ವೇ ತುಲ್ಯೇ। ಅಕಾಮಹತತ್ವಕೃತೋ ವಿಶೇಷಃ ಆನನ್ದಶತಗುಣವೃದ್ಧಿಹೇತುಃ । ಅತ್ರೈತಾನಿ ಸಾಧನಾನಿ ಶ್ರೋತ್ರಿಯತ್ವಾವೃಜಿನತ್ವಾಕಾಮಹತತ್ವಾನಿ ತಸ್ಯ ತಸ್ಯ ಆನನ್ದಸ್ಯ ಪ್ರಾಪ್ತೌ ಅರ್ಥಾತ್ ಅಭಿಹಿತಾನಿ। ಯಥಾ ಕರ್ಮಾಣಿ ಅಗ್ನಿಹೋತ್ರಾದೀನಿ ದೇವಾನಾಂ[4] ದೇವತ್ವಪ್ರಾಪ್ತೌ। ತತ್ರ ಚ ಶ್ರೋತ್ರಿಯತ್ವಾವೃಜಿನತ್ವಲಕ್ಷಣೇ ಕರ್ಮಣೀ ಅಧರಭೂಮಿಷ್ವಪಿ ಸಮಾನೇ ಇತಿ ನೋತ್ತರಾನನ್ದಪ್ರಾಪ್ತಿಸಾಧನೇ ಅಭ್ಯುಪೇಯೇತೇ। ಅಕಾಮಹತತ್ವಂ ತು ವೈರಾಗ್ಯತಾರತಮ್ಯೋಪಪತ್ತೇಃ ಉತ್ತರೋತ್ತರಭೂಮ್ಯಾನನ್ದಪ್ರಾಪ್ತಿಸಾಧನಮ್ ಇತ್ಯವಗಮ್ಯತೇ॥

(ಭಾಷ್ಯಾರ್ಥ)

ಮತ್ತು ಇಲ್ಲಿ (ಹೇಳಿರುವ ಶ್ರೋತ್ರಿಯತ್ವಾದಿಗಳಲ್ಲಿ) ಶ್ರೋತ್ರಿಯತ್ವ, ಅವೃಜಿನತ್ವ–ಇವು ಸಮಾನವಾಗಿಯೇ ಇರುತ್ತವೆ; (ಆದರೆ) ಅಕಾಮಹತತ್ವದಿಂದಾದ ವಿಶೇಷವು ಆನಂದವು ನೂರರಷ್ಟು ಹೆಚ್ಚಾಗುವದಕ್ಕೆ ಕಾರಣ(ವಾಗಿರುತ್ತದೆ). ಇಲ್ಲಿ ಆಯಾ ಆನಂದವನ್ನು ಪಡೆದುಕೊಳ್ಳುವದಕ್ಕೆ ಶ್ರೋತ್ರಿಯತ್ವ,

1. ಇಂತಿಷ್ಟೆಂಬ ಲೆಕ್ಕವಿಲ್ಲ. ನಿರ್ವಿಶೇಷವಾದ ಅಪರಿಚ್ಛಿನ್ನಾನಂದವೇ.
2. ಹಿಂದಿನ ಕಂಡಿಕೆಯಲ್ಲಿ ಹೇಳಿದ್ದು.
3. ಅಲ್ಪವೂ ಮರ್ತ್ಯವೂ ಆಗಿರುತ್ತವೆ
4. ಈ ಮಾತು ಅವಶ್ಯವಿಲ್ಲವೆಂದು ಕಾಣುತ್ತದೆ.

ಅವೃಜಿನತ್ವ, ಅಕಾಮಹತತ್ವ-ಎಂಬಿವು, ಅಗ್ನಿಹೋತ್ರಾದಿಗಳು (ದೇವತೆಗಳಿಗೆ)[1] ದೇವತ್ವವನ್ನು ಪಡೆದುಕೊಳ್ಳುವದಕ್ಕೆ ಹೇಗೋ ಹಾಗೆ, ಸಾಧನಗಳು ಎಂದು ಅರ್ಥವಶದಿಂದ ಹೇಳಿದಂತೆ (ಆಗಿರುತ್ತದೆ). ಇವುಗಳಲ್ಲಿ ಶ್ರೋತ್ರಿಯತ್ವ, ಅವೃಜಿನತ್ವ -ಎಂಬ ರೂಪದ ಕರ್ಮಗಳು ಕೆಳಗಿನ ಭೂಮಿಕೆಗಳಲ್ಲಿಯೂ ಸಮಾನವಾಗಿರುತ್ತವೆಯಾಗಿ (ಅವು) ಮುಂದಿನ ಆನಂದವನ್ನು ಪಡೆದುಕೊಳ್ಳುವದಕ್ಕೆ ಸಾಧನಗಳೆಂದು ಒಪ್ಪಬೇಕಾದದ್ದಿಲ್ಲ. ಆದರೆ ಅಕಾಮಹತತ್ವವು ಮಾತ್ರ, ವೈರಾಗ್ಯದಲ್ಲಿ ತಾರತಮ್ಯವು ಇರಬಹುದಾದ್ದರಿಂದ ಮುಂದುಮುಂದಿನ ಭೂಮಿಕೆಯ ಆನಂದಕ್ಕೆ ಸಾಧನವು ಎಂದು ನಿಶ್ಚಯವಾಗುತ್ತದೆ.

## ಪರಮಾನಂದವು ವಿರಕ್ತಶ್ರೋತ್ರಿಯನಿಗೆ ತೋರತಕ್ಕದ್ದು

(ಭಾಷ್ಯ)

೨೪೦. ಸ ಏಷ ಪರಮ ಆನನ್ದೋ ವಿತೃಷ್ಣಶ್ರೋತ್ರಿಯಪ್ರತ್ಯಕ್ಷೋಽಧಿಗತಃ । ತಥಾ ಚ ವೇದವ್ಯಾಸಃ– "ಯಚ್ಚ ಕಾಮಸುಖಂ ಲೋಕೇ ಯಚ್ಚ ದಿವ್ಯಂ ಮಹತ್ಸುಖಮ್ । ತೃಷ್ಣಾಕ್ಷಯಸುಖಸ್ಯೈತೇ ನಾರ್ಹತಃ ಷೋಡಶೀಂ ಕಲಾಮ್ ॥" (ಮೋ. ಧ. ೧೭೭-೫೦) ಇತಿ । ಏಷ ಬ್ರಹ್ಮಲೋಕಃ ಹೇ ಸಮ್ರಾಟ್ ಇತಿ ಹೋವಾಚ ಯಾಜ್ಞವಲ್ಕ್ಯಃ ॥

(ಭಾಷ್ಯಾರ್ಥ)

ಆ ಈ ಪರಮಾನಂದವು ವಿರಕ್ತನಾದ ಶ್ರೋತ್ರಿಯನಿಗೆ ಪ್ರತ್ಯಕ್ಷವಾಗಿರುತ್ತದೆ ಎಂದು ಗೊತ್ತುಮಾಡಿದ್ದಾಯಿತು. ಹೀಗೆಂದೇ ವೇದವ್ಯಾಸರು: "ಲೋಕದಲ್ಲಿ ಯಾವದು ಕಾಮಸುಖವೋ, ಮತ್ತು ಯಾವದು ಸ್ವರ್ಗದಲ್ಲಿ ಹೆಚ್ಚಿನ ಸುಖವೋ, ಈ (ಎರಡೂ) ತೃಷ್ಣೆಯು ತೀರಿಹೋದ ಸುಖದ ವೀಸುಪಾಲನ್ನು ಕೂಡ ಬಾಳುವವಾಗಿಲ್ಲ" (ಮೋ. ಧ. ೧೭೭-೫೦). ಎಲೈ ಸಮ್ರಾಜನೆ, ಇದೇ ಬ್ರಹ್ಮಲೋಕವು ಎಂದು ಯಾಜ್ಞವಲ್ಕ್ಯನು ನುಡಿದನು.

## ಜನಕನ ಉತ್ತರವೂ ಯಾಜ್ಞವಲ್ಕ್ಯನ ಭಯವೂ

(ಭಾಷ್ಯ)

೨೪೧. ಸೋಽಹಮ್ ಏವಮನುಶಿಷ್ಟಃ ಭಗವತೇ ತುಭ್ಯಂ ಸಹಸ್ರಂ ದದಾಮಿ ಗವಾಮ್ । ಅತ ಊರ್ಧ್ವಂ ವಿಮೋಕ್ಷಾಯೈವ ಬ್ರೂಹಿ ಇತಿ

1. ದೇವತೆಗಳಿಗೆ ದೇವತ್ವವು ಬಂದಿರುವದಕ್ಕೆ ಮನುಷ್ಯರಾಗಿದ್ದಾಗ ಮಾಡಿದ ಅಗ್ನಿಹೋತ್ರಾದಿಗಳು ಕಾರಣವಾಗಿರುವಂತೆ ಶ್ರೋತ್ರಿಯತ್ವಾದಿಗಳು ಆಯಾ ಆನಂದದ ಪ್ರಾಪ್ತಿಗೆ ಕಾರಣ ಎಂದರ್ಥ.

ವ್ಯಾಖ್ಯಾತಮೇತತ್ । ಅತ್ರ ಹ ವಿಮೋಕ್ಷಾಯ ಇತ್ಯಸ್ಮಿನ್ ವಾಕ್ಯೇ ಯಾಜ್ಞವಲ್ಕ್ಯೋ ಬಿಭಯಾಂಚಕಾರ ಭೀತವಾನ್ । ಯಾಜ್ಞವಲ್ಕ್ಯಸ್ಯ ಭಯಕಾರಣಮ್ ಆಹ ಶ್ರುತಿಃ । ನ ಯಾಜ್ಞವಲ್ಕ್ಯೋ ವಕ್ತೃತ್ವಸಾಮರ್ಥ್ಯಾಭಾವಾತ್ ಭೀತವಾನ್ ಅಜ್ಞಾನಾದ್ ವಾ, ಕಿಂ ತರ್ಹಿ ಮೇಧಾವೀ ರಾಜಾ ಸರ್ವೇಭ್ಯೋ ಮಾ ಮಾಮ್ ಅನ್ತೇಭ್ಯಃ ಪ್ರಶ್ನನಿರ್ಣಯಾವಸಾನೇಭ್ಯಃ ಉದರೌತ್ಸೀತ್ ಅವೃಣೋತ್, ಅವರೋಧಂ ಕೃತವಾನ್ ಇತ್ಯರ್ಥಃ । ಯದ್ಯತ್ ಮಯಾ ನಿರ್ಣೀತಂ ಪ್ರಶ್ನರೂಪಂ ವಿಮೋಕ್ಷಾರ್ಥಮ್, ತತ್ತತ್ ಏಕದೇಶತ್ವೇನೈವ ಕಾಮಪ್ರಶ್ನಸ್ಯ ಗೃಹೀತ್ವಾ ಪುನಃಪುನರ್ಮಾಂ ಪರ್ಯನುಯುಙ್ಕ್ತ ಏವ । ಮೇಧಾವಿತ್ವಾತ್ ಇತ್ಯೇತದ್ ಭಯಕಾರಣಮ್, ಸರ್ವಂ ಮದೀಯಂ ವಿಜ್ಞಾನಂ ಕಾಮಪ್ರಶ್ನವ್ಯಾಜೇನ ಉಪಾದಿತ್ಸತೀತಿ ॥

(ಭಾಷ್ಯಾರ್ಥ)

ಹೀಗೆ (ನಿಮ್ಮ) ಅನುಶಾಸನವನ್ನು ಪಡೆದಿರುವ ಆ ನಾನು ಭಗವಂತನಾದ ನಿನಗೆ ಸಾವಿರ ಗೋವುಗಳನ್ನು ಕೊಡುತ್ತೇನೆ. 'ಇನ್ನುಮೇಲೆ ವಿಮೋಕ್ಷಕ್ಕಾಗಿಯೇ ಹೇಳು' ಎಂಬಿದನ್ನು (ಹಿಂದೆಯೇ) ವ್ಯಾಖ್ಯಾನಮಾಡಿದ್ದಾಗಿದೆ

ಇಲ್ಲಿ, ವಿಮೋಕ್ಷಕ್ಕಾಗಿ ಎಂಬೀ ವಾಕ್ಯದ (ವಿಷಯ)ದಲ್ಲಿ ಯಾಜ್ಞವಲ್ಕ್ಯನು ಭಯಪಟ್ಟನು ಹೆದರಿದನು, ಯಾಜ್ಞವಲ್ಕ್ಯನ ಹೆದರಿಕೆಗೆ ಕಾರಣವನ್ನು ಶ್ರುತಿ ಹೇಳುತ್ತಿದೆ: ಯಾಜ್ಞವಲ್ಕ್ಯನು ಹೇಳುವ ಸಾಮರ್ಥ್ಯವಿಲ್ಲದ್ದರಿಂದಾಗಲಿ ತಿಳಿಯದ್ದರಿಂದಾಗಲಿ ಹೆದರಲಿಲ್ಲ. ಮತ್ತೇನೆಂದರೆ, ಜಾಣನಾದ ರಾಜನು (ಮಾ=ಮಾಮ್) ಎಲ್ಲಾ ಅಂತಗಳಿಂದಲೂ ಪ್ರಶ್ನೆಯ ಕೊನೆಯ ನಿರ್ಣಯಗಳಿಂದಲೂ ಕಟ್ಟಿಹಾಕಿರುತ್ತಾನೆ ಬಂಧಿಸಿರುತ್ತಾನೆ, ನಿರ್ಬಂಧಿಸಿರುತ್ತಾನೆ ಎಂದರ್ಥ. ಯಾವಯಾವ ಪ್ರಶ್ನೆಯ ರೂಪವನ್ನು ನಾನು ವಿಮೋಕ್ಷೆಗೆಂದು ನಿರ್ಣಯಿಸಿ ಹೇಳಿದೆನೋ ಆದದನ್ನು (ತನ್ನ) ಕಾಮಪ್ರಶ್ನೆಯ ಒಂದು ಭಾಗವೆಂದೇ ಗ್ರಹಿಸಿ ಜಾಣನಾದ್ದರಿಂದ ಮತ್ತೆಮತ್ತೆ ನನ್ನನ್ನು ಪ್ರಶ್ನಿಸುತ್ತಲೇ ಇರುತ್ತಾನೆ, ನನ್ನ ವಿಜ್ಞಾನವನ್ನೆಲ್ಲ ಕಾಮಪ್ರಶ್ನೆಯ ನೆಪದಿಂದ ತೆಗೆದುಕೊಳ್ಳಲಿಚ್ಛಿಸುತ್ತಿದಾನೆ- ಎಂಬಿದು ಭಯಕಾರಣವು.

## ಸಂಸಾರವ್ಯವಹಾರಪ್ರದರ್ಶನಕ್ಕೆ ಅವತರಣಿಕೆ

(ಉಪನಿಷತ್ತು)

**ಸ ವಾ ಏಷ ಏತಸ್ಮಿನ್ ಸ್ವಪ್ನಾನ್ತೇ ರತ್ವಾ ಚರಿತ್ವಾ ದೃಷ್ಟ್ವೈವ ಪುಣ್ಯಂ ಚ ಪಾಪಂ ಚ ಪುನಃ ಪ್ರತಿನ್ಯಾಯಂ ಪ್ರತಿಯೋನ್ಯಾದ್ರವತಿ ಬುದ್ಧಾನ್ತಾಯೈವ ॥೩೪॥**

೩೪. ಆ ಇವನು ಈ ಸ್ವಪ್ನಾಂತದಲ್ಲಿ ರಮಿಸಿ ಚರಿಸಿ ಪುಣ್ಯವನ್ನೂ ಪಾಪವನ್ನೂ ಕಾಣುತ್ತಲೇ (ಇದ್ದು) ಮತ್ತೆ ಪ್ರತಿನ್ಯಾಯವಾಗಿ ಪ್ರತಿಯೋನಿಯಾಗಿ ಬುದ್ಧಾಂತಕ್ಕೇ ಓಡಿಬರುವನು.

## ಮುಂದಿನ ಗ್ರಂಥಭಾಗದ ಸಂಬಂಧ

(ಭಾಷ್ಯ)

೨೪೨. ಅತ್ರ ವಿಜ್ಞಾನಮಯಃ ಸ್ವಯಂಜ್ಯೋತಿರಾತ್ಮಾ ಸ್ವಪ್ನೇ (೪-೩-೯) ಪ್ರದರ್ಶಿತಃ । ಸ್ವಪ್ನಾನ್ತಬುದ್ಧಾನ್ತಸಂಚಾರೇಣ ಕಾರ್ಯಕರಣವ್ಯತಿರಿಕ್ತತಾ ಕಾಮಕರ್ಮಪ್ರವಿವೇಕಶ್ಚ ಅಸಙ್ಗತಯಾ ಮಹಾಮತ್ಸ್ಯದೃಷ್ಟಾನ್ತೇನ (೪-೩-೧೮) ಪ್ರದರ್ಶಿತಃ । ಪುನಶ್ಚ ಅವಿದ್ಯಾಕಾರ್ಯಂ ಸ್ವಪ್ನ ಏವ 'ಘ್ನನ್ತೀವ' (೪-೩-೨೦) ಇತ್ಯಾದಿನಾ ಪ್ರದರ್ಶಿತಮ್ । ಅರ್ಥಾತ್ ಅವಿದ್ಯಾಯಾಃ ಸತತ್ತ್ವಂ ನಿರ್ಧಾರಿತಮ್ ಅತದ್ಧರ್ಮಾಧ್ಯಾರೋಪಣರೂಪತ್ವಮ್ ಅನಾತ್ಮಧರ್ಮತ್ವಂ ಚ । ತಥಾ ವಿದ್ಯಾಯಾಶ್ಚ ಕಾರ್ಯಂ ಪ್ರದರ್ಶಿತಂ ಸರ್ವಾತ್ಮಭಾವಃ ಸ್ವಪ್ನ ಏವ ಪ್ರತ್ಯಕ್ಷತಃ 'ಸರ್ವೋಽಸ್ಮೀತಿ ಮನ್ಯತೇ ಸೋಽಸ್ಯ ಪರಮೋ ಲೋಕಃ' (೪-೩-೨೦) ಇತಿ । ತತ್ರ ಚ ಸರ್ವಾತ್ಮಭಾವಃ ಸ್ವಭಾವೋಽಸ್ಯ, ಏವಮ್ ಅವಿದ್ಯಾಕಾಮಕರ್ಮಾದಿಸರ್ವಸಂಸಾರಧರ್ಮಸಂಬನ್ಧಾತೀತಂ ರೂಪಮ್ ಅಸ್ಯ ಸಾಕ್ಷಾತ್ ಸುಷುಪ್ತೇ ಗೃಹ್ಯತೇ ಇತ್ಯೇತತ್ (೪-೩-೨೧,೨೨) ವಿಜ್ಞಾಪಿತಮ್ । ಸ್ವಯಂಜ್ಯೋತಿರಾತ್ಮಾ ಏಷ ಪರಮ ಆನನ್ದಃ ಏಷ ವಿದ್ಯಾಯಾ ವಿಷಯಃ । ಸ ಏಷ ಪರಮಃ ಸಂಪ್ರಸಾದಃ ಸುಖಸ್ಯ ಚ ಪರಾ ಕಾಷ್ಠಾ (೪-೩-೩೨, ೩೩) ಇತ್ಯೇತತ್ ಏವಮನ್ತೇನ ಗ್ರನ್ಥೇನ ವ್ಯಾಖ್ಯಾತಮ್ । ತಚ್ಚೈತತ್ ಸರ್ವಂ ವಿಮೋಕ್ಷಪದಾರ್ಥಸ್ಯ ದೃಷ್ಟಾನ್ತಭೂತಂ ಬನ್ಧನಸ್ಯ ಚ । ತೇ ಚೈತೇ ಮೋಕ್ಷಬನ್ಧನೇ ಸಹೇತುಕೇ ಸಪ್ರಪಞ್ಚೇ ನಿರ್ದಿಷ್ಟೇ ವಿದ್ಯಾವಿದ್ಯಾಕಾರ್ಯೇ । ತತ್ ಸರ್ವಂ ದೃಷ್ಟಾನ್ತಭೂತಮೇವ ಇತಿ ತದ್ದಾರ್ಷ್ಟಾನ್ತಿಕಸ್ಥಾನೀಯೇ ಮೋಕ್ಷಬನ್ಧನೇ ಸಹೇತುಕೇ ಕಾಮಪ್ರಶ್ನಾರ್ಥಭೂತೇ ತ್ವಯಾ ವಕ್ತವ್ಯೇ ಇತಿ ಪುನಃ ಪರ್ಯನುಯುಙ್ಕ್ತೇ ಜನಕಃ 'ಅತ ಊರ್ಧ್ವಂ ವಿಮೋಕ್ಷಾಯೈವ ಬ್ರೂಹಿ' ಇತಿ । ತತ್ರ ಮಹಾಮತ್ಸ್ಯವತ್ ಸ್ವಪ್ನಬುದ್ಧಾನ್ತೌ ಅಸಙ್ಗಃ ಸಂಚರತಿ ಏಕ ಆತ್ಮಾ ಸ್ವಯಂಜ್ಯೋತಿಃ ಇತ್ಯುಕ್ತಮ್ । ಯಥಾ ಚಾಸೌ ಕಾರ್ಯಕರಣಾನಿ ಮೃತ್ಯುರೂಪಾಣಿ ಪರಿತ್ಯಜನ್ ಉಪಾದದಾನಶ್ಚ ಮಹಾಮತ್ಸ್ಯವತ್ ಸ್ವಪ್ನಬುದ್ಧಾನ್ತೌ ಅನುಸಂಚರತಿ । ತಥಾ ಜಾಯಮಾನೋ ಮ್ರಿಯಮಾಣಶ್ಚ ತೈರೇವ ಮೃತ್ಯುರೂಪೈಃ ಸಂಯುಜ್ಯತೇ ವಿಯುಜ್ಯತೇ ಚ । "ಉಭೌ ಲೋಕಾವನುಸಂಚರತಿ" (೪-೩-೭) ಇತಿ ಸಂಚರಣಂ ಸ್ವಪ್ನಬುದ್ಧಾನ್ತಾನುಸಂಚಾರಸ್ಯ

ದಾರ್ಷ್ಟಾನ್ತಿಕತ್ವೇನ ಸೂಚಿತಮ್। ತದಿಹ ವಿಸ್ತರೇಣ ಸನಿಮಿತ್ತಂ ಸಂಚರಣಂ ವರ್ಣಯಿತವ್ಯಮ್ ಇತಿ ತದರ್ಥೋಽಯಮ್ ಆರಮ್ಭಃ। ತತ್ರ ಚ ಬುದ್ಧಾನ್ತಾತ್ ಸ್ವಪ್ನಾನ್ತಮ್ ಅಯಮಾತ್ಮಾ ಅನುಪ್ರವೇಶಿತಃ (೪-೩-೧೭)। ತಸ್ಮಾತ್ ಸಂಪ್ರಸಾದಸ್ಥಾನಂ ಮೋಕ್ಷದೃಷ್ಟಾನ್ತಭೂತಮ್। ತತಃ ಪ್ರಚ್ಯಾವ್ಯ ಬುದ್ಧಾನ್ತೇ ಸಂಸಾರವ್ಯವಹಾರಃ ಪ್ರದರ್ಶಯಿತವ್ಯಃ ಇತಿ ತೇನಾಸ್ಯ ಸಂಬನ್ಧಃ॥

(ಭಾಷ್ಯಾರ್ಥ)

ಇಲ್ಲಿ ವಿಜ್ಞಾನಮಯನಾದ ಆತ್ಮನು ಸ್ವಪ್ನದಲ್ಲಿ ಸ್ವಯಂಜ್ಯೋತಿಯೆಂದು (೪-೩-೯) ತಿಳಿಸಲಾಯಿತು. ಸ್ವಪ್ನಾಂತಬುದ್ಧಾಂತಗಳನ್ನು (ಸೇರುತ್ತಾ ಒಂದರಿಂದೊಂದಕ್ಕೆ) ಸಂಚರಿಸುತ್ತಿರುವವರಿಂದ ಕಾರ್ಯಕರಣಗಳಿಗಿಂತ ವ್ಯತಿರಿಕ್ತನಾಗಿರುವನೆಂದೂ ಅಸಂಗನಾಗಿರುವದರಿಂದ ಕಾಮಕರ್ಮರಹಿತನೆಂದೂ ಮಹಾಮತ್ಸ್ಯದೃಷ್ಟಾಂತದಿಂದ (೪-೩-೧೮) ತಿಳಿಸಲಾಯಿತು. ಮತ್ತೆ ಅವಿದ್ಯೆಯ ಕಾರ್ಯವನ್ನು ಸ್ವಪ್ನದಲ್ಲಿಯೇ 'ಕೊಲ್ಲುವಂತಿರುತ್ತಾರೆ' (೪-೩-೨೦) ಎಂದು ಮುಂತಾಗಿರುವದರಿಂದ ತಿಳಿಸಿದ್ದಾಯಿತು. ಅವಿದ್ಯೆಯು ಅದರದ್ದಲ್ಲದ ಧರ್ಮವನ್ನು ಅಧ್ಯಾರೋಪಮಾಡುವ ಸ್ವರೂಪದ್ದು, ಆತ್ಮನ ಧರ್ಮವಲ್ಲ- ಎಂದು ಅವಿದ್ಯೆಯ ತತ್ತ್ವವನ್ನು ಅರ್ಥವಶದಿಂದ ತಿಳಿಸಿದ್ದಾಯಿತು. ಹೀಗೆಯೇ ವಿದ್ಯೆಯ ಕಾರ್ಯವಾದ ಸರ್ವಾತ್ಮಭಾವವನ್ನು ಸ್ವಪ್ನದಲ್ಲಿಯೇ 'ಸರ್ವವೂ ಆಗಿರುವೆನೆಂದು ಎಣಿಸುತ್ತಾನೆ; ಇದು ಇವನ ಪರಮಲೋಕವು' (೪-೩-೨೦) ಎಂದು ಪ್ರತ್ಯಕ್ಷವಾಗಿ ತಿಳಿಸಿದ್ದಾಯಿತು. ಇಲ್ಲಿ ಸರ್ವಾತ್ಮಭಾವವು ಈ (ಆತ್ಮನಿಗೆ) ಸ್ವಭಾವವೆಂಬುದೂ ಹೀಗೆಯೇ ಅವಿದ್ಯಾಕಾಮಕರ್ಮಗಳೇ ಮುಂತಾದ ಎಲ್ಲಾ ಸಂಸಾರಧರ್ಮಸಂಬಂಧಗಳನ್ನು ಮೀರಿರುವ ರೂಪವು ಇವನದು ಎಂಬುದೂ ಸಾಕ್ಷಾತ್ತಾಗಿ ಸುಷುಪ್ತಿಯಲ್ಲಿ ತಿಳಿಯಬರುತ್ತದೆ (೪-೩-೨೧,೨೨) ಎಂಬುದನ್ನು ತಿಳಿಸಿದ್ದಾಯಿತು. ಸ್ವಯಂಜ್ಯೋತಿಯಾದ ಈ ಆತ್ಮನು ಪರಮಾನಂದವು, ಇದೇ ವಿದ್ಯೆಗೆ ವಿಷಯವು, ಇದು ಹೆಚ್ಚಿನ ಸಂಪ್ರಸಾದ(ಸ್ವರೂಪವು) ಸುಖದ ಕೊನೆಯ ಹಂತವು (೪-೩-೩೨,೩೩) ಎಂಬುದು ಇಲ್ಲಿಯವರೆಗಿನ ಗ್ರಂಥದಿಂದ ವಿವರಿಸಲ್ಪಟ್ಟಿರುತ್ತದೆ.

ಆ ಇದೆಲ್ಲವೂ ಮೋಕ್ಷಪದಾರ್ಥಕ್ಕೂ ಬಂಧನಕ್ಕೂ ದೃಷ್ಟಾಂತವಾಗಿರುತ್ತದೆ. ಆ ಈ ಮೋಕ್ಷಬಂಧನಗಳೆಂಬ ವಿದ್ಯಾವಿದ್ಯೆಗಳ ಕಾರ್ಯಗಳನ್ನು ಕಾರಣಸಹಿತವಾಗಿ ವಿಸ್ತಾರವಾಗಿ ತಿಳಿಸಿದ್ದಾಗಿರುತ್ತದೆ. ಅದೆಲ್ಲವೂ ದೃಷ್ಟಾಂತವೇ ಆಗಿರುವದರಿಂದ ಅವಕ್ಕೆ ದಾರ್ಷ್ಟಾಂತಿಕಸ್ಥಾನದಲ್ಲಿರುವ ಮೋಕ್ಷಬಂಧನಗಳನ್ನು ಕಾರಣಸಹಿತವಾಗಿ- (ಅವೇ ನನ್ನ) ಕಾಮಪ್ರಶ್ನೆಯ ಅರ್ಥವಾಗಿರುವದರಿಂದ-

ನೀನು ಹೇಳಬೇಕು ಎಂದು ಜನಕನು ಮತ್ತೂ- 'ಇನ್ನು ಮೇಲೆ ವಿಮೋಕ್ಷಕ್ಕೇ ಹೇಳು' ಎಂದು ಕೇಳುತ್ತಿದ್ದಾನೆ.[1]

ಇಲ್ಲಿ ದೊಡ್ಡ ಮೀನಿನಂತೆ ಸ್ವಪ್ನಬುದ್ಧಾಂತಗಳನ್ನು ಅಸಂಗನೂ ಏಕನೂ ಸ್ವಯಂಜ್ಯೋತಿಯೂ[2] ಆದ ಆತ್ಮನು ಸಂಚರಿಸುತ್ತಾನೆ ಎಂದು (ಹಿಂದೆ) ಹೇಳಿದೆ. ಹೇಗೆ ಇವನು ಕಾರ್ಯಕರಣಗಳೆಂಬ ಮೃತ್ಯುರೂಪಗಳನ್ನು ಬಿಡುತ್ತಲೂ ತೆಗೆದುಕೊಳ್ಳುತ್ತಲೂ ದೊಡ್ಡ ಮೀನಿನಂತೆ ಸ್ವಪ್ನಬುದ್ಧಾಂತಗಳನ್ನು ಅನುಕ್ರಮವಾಗಿ ಸಂಚರಿಸುತ್ತಿರುವನೋ ಹಾಗೆ ಹುಟ್ಟುವಾಗಲೂ ಸಾಯುವಾಗಲೂ ಅದೇ ಮೃತ್ಯುರೂಪಗಳಿಂದ ಸಂಯುಕ್ತನೂ ವಿಯುಕ್ತನೂ ಆಗುತ್ತಿರುತ್ತಾನೆ. "ಎರಡು ಲೋಕಗಳನ್ನೂ ಅನುಸಂಚಾರಮಾಡುತ್ತಿರುತ್ತಾನೆ" (೪-೩-೭) ಎಂದು (ಈ) ಸಂಚಾರವನ್ನು ಸ್ವಪ್ನಬುದ್ಧಾಂತಗಳ ಅನುಸಂಚಾರಕ್ಕೆ ದಾರ್ಷ್ಟಾಂತಿಕವಾಗಿ (ಅಲ್ಲಿ) ಸೂಚಿಸಿರುತ್ತದೆ. ಆದ್ದರಿಂದ ಇಲ್ಲಿ ವಿಸ್ತಾರವಾಗಿ ಸಕಾರಣವಾಗಿ ಸಂಚಾರವನ್ನು ವರ್ಣಿಸಬೇಕಾಗಿರುವದರಿಂದ ಅದಕ್ಕಾಗಿ ಈ (ಗ್ರಂಥಭಾಗವನ್ನು) ಆರಂಭಿಸಿರುತ್ತದೆ.

ಮತ್ತು ಅಲ್ಲಿ ಈ ಆತ್ಮನನ್ನು ಬುದ್ಧಾಂತದಿಂದ ಸ್ವಪ್ನಾಂತವನ್ನು ಹೊಗುವಂತೆ (ಮಾಡಿ) ಹೇಳಿರುತ್ತದೆ, ಅದರಿಂದ ಮೋಕ್ಷಕ್ಕೆ ದೃಷ್ಟಾಂತವಾಗಿರುವ ಸಂಪ್ರಸಾದಸ್ಥಾನವನ್ನು (ಹೊಗುವಂತೆ ಮಾಡಿ ತಿಳಿಸಿದೆ. ಈಗ) ಅಲ್ಲಿಂದ ಜಾರಿಸಿ ಬುದ್ಧಾಂತದಲ್ಲಿ (ಇವನಿಗೆ ಆಗುವ) ಸಂಸಾರವ್ಯವಹಾರವನ್ನು ತಿಳಿಸಬೇಕಾಗಿರುತ್ತದೆ ಎಂಬುದು ಆ (ಗ್ರಂಥಕ್ಕೂ) ಇದಕ್ಕೂ ಇರುವ ಸಂಬಂಧವು.[3]

## ಕಂಡಿಕೆಯ ಅರ್ಥ

(ಭಾಷ್ಯ)

೨೪೩. ಸ ವೈ ಬುದ್ಧಾನ್ತಾತ್ ಸ್ವಪ್ನಾನ್ತಕ್ರಮೇಣ ಸಂಪ್ರಸನ್ನ ಏಷಃ

---

1. ಇಲ್ಲಿ ಜನಕನು ತಪ್ಪುತಿಳಿವಳಿಕೆಯಿಂದ ಕೇಳುತ್ತಿದ್ದಾನೆ -ಎಂದು ಆ|| ಟೀಕೆಯಲ್ಲಿದೆ ಆದರೆ ಇದಕ್ಕೆ ಭಾಷ್ಯಾಧಾರವಿಲ್ಲ, ಬ್ರಹ್ಮಾಸ್ಮಿ ಎಂದು ಆಗಮದಿಂದ ಅರಿತುಕೊಳ್ಳುವದರಿಂದಾಗುವ ಮೋಕ್ಷವೇ ಸುಷುಪ್ತಿಗೆ ದಾರ್ಷ್ಟಾಂತಿಕವು. ಅದನ್ನು ಹೇಳುವದು ಉಳಿದಿದೆ - ಎಂದು ವಾರ್ತಿಕದಲ್ಲಿ ಸ್ಪಷ್ಟವಾಗಿ ಹೇಳಿಯೂ ಇದೆ. ಅಲ್ಲಿ ಟೀಕೆಯಲ್ಲಿಯೂ ಇದನ್ನು ಒಪ್ಪಿದೆ.

2. ಎರಡವಸ್ಥೆಗಳನ್ನೂ ಅನುಸಂಚರಿಸುತ್ತಿರುವದರಿಂದ ಅವುಗಳ ಹಂಗು ಆತ್ಮನಿಗೆ ಇಲ್ಲ ; ಎರಡವಸ್ಥೆಗಳಲ್ಲಿಯೂ ಅವನೊಬ್ಬನೇ, ತನ್ನ ಬೆಳಕಿನಿಂದಲೇ ಎರಡನ್ನೂ ಬೆಳಗುತ್ತಿರುತ್ತಾನೆ -ಎಂದು ಸಿದ್ಧವಾಗುತ್ತದೆ.

3. ಸುಷುಪ್ತಿಯಲ್ಲಿರುವ ಪರಮಾತ್ಮಸ್ವರೂಪವನ್ನು ಅರಿತಿರುವವನಿಗೆ ಯಾವ ಸಂಸಾರವೂ ಇಲ್ಲವಾದರೂ ಜಾಗ್ರದಭಿಮಾನವಿರುವವನಿಗೆ ಸಂಸಾರವಾಗುತ್ತಿರುವದು ; ಅದು ಹೇಗೆಂಬುದನ್ನು ತಿಳಿಸುವದಕ್ಕೆ ಮತ್ತೆ ಆತ್ಮನು ಸುಷುಪ್ತಿಯಿಂದ ಎಚ್ಚರಕ್ಕೆ ಬರುತ್ತಾನೆಂದು ಹೇಳಿದೆ.

ಏತಸ್ಮಿನ್ ಸಂಪ್ರಸಾದೇ ಸ್ಥಿತ್ವಾ ತತಃ ಪುನರೇಪತ್ ಪ್ರಚ್ಯುತಃ ಸ್ವಪ್ನಾನ್ತೇ 'ರತ್ವಾ ಚರಿತ್ವಾ' ಇತ್ಯಾದಿ ಪೂರ್ವವತ್। ಬುದ್ಧಾನ್ತಾಯೈವ ಆದ್ರವತಿ ॥

(ಭಾಷ್ಯಾರ್ಥ)

ಬುದ್ಧಾಂತದಿಂದ ಸ್ವಪ್ನಾಂತಕ್ರಮದಿಂದ ಸಂಪ್ರಸನ್ನನಾದನಲ್ಲ, ಆ ಇವನು ಈ ಸಂಪ್ರಸಾದದಲ್ಲಿ ಇದ್ದು ಅದರಿಂದ ಮತ್ತೆ ಒಂದಿಷ್ಟು ಜಾರಿ ಸ್ವಪ್ನಾಂತದಲ್ಲಿ 'ರಮಿಸಿ ಸಂಚರಿಸಿ ...' ಮುಂತಾದದ್ದನ್ನು ಹಿಂದಿನ (೧೭ನೆಯ ಕಂಡಿಕೆಯಂತೆ ವ್ಯಾಖ್ಯಾನಮಾಡಿಕೊಳ್ಳಬೇಕು)– ಬುದ್ಧಾಂತಕ್ಕೇ ಬರುತ್ತಾನೆ.

## ಸಂಸಾರ: ಮೇಲುಸಿರಿಡುವಾಗ ಉತ್ಕ್ರಾಂತಿಗೆ ಆರಂಭ

(ಉಪನಿಷತ್ತು)

**ತದ್ಯಥಾಽನಃ ಸುಸಮಾಹಿತಮುತ್ಸರ್ಜದ್ ಯಾಯಾದೇವ ಮೇವಾಯಂ ಶಾರೀರ ಆತ್ಮಾ ಪ್ರಾಜ್ಞೇನಾತ್ಮನಾಽನ್ವಾರೂಢ ಉತ್ಸರ್ಜನ್ ಯಾತಿ ಯತ್ರೈತದೂರ್ಧ್ವೋಚ್ಛ್ವಾಸೀ ಭವತಿ ॥**

೩೫. ಇಲ್ಲಿ ಹೇಗೆ ಬಂಡಿಯು ಸುಸಮಾಹಿತವಾಗಿ ಗಡಗಡ ಎನ್ನುತ್ತಾ ಹೋಗುತ್ತದೆಯೋ ಹೀಗೆಯೇ ಈ ಶಾರೀರನಾದ ಆತ್ಮನು ಯಾವಾಗ ಹೀಗೆ ಮೇಲುಸಿರಿಡುವವನಾಗುವನೋ ಆಗ ಪ್ರಾಜ್ಞನಾದ ಆತ್ಮನಿಂದ ಅನ್ವಾರೂಢನಾಗಿ ಗಡಗಡ ಎನ್ನುತ್ತಾ ಹೋಗುತ್ತಾನೆ.

(ಭಾಷ್ಯ)

೨೪೪. ಇತ ಆರಭ್ಯ ಅಸ್ಯ ಸಂಸಾರೋ ವರ್ಣ್ಯತೇ। ಯಥಾ ಅಯಮಾತ್ಮಾ ಸ್ವಪ್ನಾನ್ತಾದ್ ಬುದ್ಧಾನ್ತಮಾಗತಃ, ಏವಮ್ ಅಯಮಸ್ಮಾದ್ ದೇಹಾದ್ ದೇಹಾನ್ತರಂ ಪ್ರತಿಪತ್ಸ್ಯತ ಇತ್ಯಾಹ ಅತ್ರ ದೃಷ್ಟಾನ್ತಮ್। ತತ್ ತತ್ರ ಯಥಾ ಲೋಕೇ ಅನಃ ಶಕಟಂ ಸುಸಮಾಹಿತಂ ಸುಷ್ಠು ಭೃಶಂ ವಾ ಸಮಾಹಿತಂ ಭಾಣ್ಡೋಪಸ್ಕರಣೇನ ಊಲೂಖಲಮುಸಲಶೂರ್ಪಪಿಠರಾದಿನಾ ಅನ್ನಾದ್ಯೇನ ಚ ಸಂಪನ್ನಮ್, ಸಂಭಾರೇಣ ಆಕ್ರಾನ್ತಮ್ ಇತ್ಯರ್ಥಃ। ತಥಾ ಭಾರಾಕ್ರಾನ್ತಂ ಸತ್ ಉತ್ಸರ್ಜತ್ ಶಬ್ದಂ ಕುರ್ವತ್ ಯಥಾ ಯಾಯಾತ್ ಗಚ್ಛೇತ್ ಶಾಕಟಿಕೇನ ಅಧಿಷ್ಠಿತಂ ಸತ್। ಏವಮೇವ ಯಥಾ ಉಕ್ತೋ ದೃಷ್ಟಾನ್ತಃ ಅಯಂ ಶಾರೀರಃ ಶರೀರೇ ಭವಃ। ಕೋಽಸೌ? ಆತ್ಮಾ ಲಿಙ್ಗೋಪಾಧಿಃ। ಯಃ ಸ್ವಪ್ನಬುದ್ಧಾನ್ತಾವಿವ ಜನ್ಮಮರಣಾಭ್ಯಾಂ ಪಾಪ್ಮಸಂಸರ್ಗವಿಯೋಗಲಕ್ಷಣಾಭ್ಯಾಮ್ ಇಹಲೋಕಪರಲೋಕೌ ಅನುಸಂಚರತಿ। ಯಸ್ಯ ಚ[1] ಉತ್ಕ್ರಾಮಣಮ್

1. ಚಶಬ್ದಯುಕ್ತವಾದ ಪಾಠವೇ ಉತ್ತಮ.

ಅನು ಪ್ರಾಣಾದ್ಯುತ್ಕ್ರಮಣಮ್। ಸ ಪ್ರಾಜ್ಞೇನ ಪರೇಣ ಆತ್ಮನಾ ಸ್ವಯಂ ಜ್ಯೋತಿಃಸ್ವಭಾವೇನ ಅನ್ವಾರೂಢಃ ಅಧಿಷ್ಠಿತಃ, ಅವಭಾಸ್ಯಮಾನಃ। ತಥಾ ಚೋಕ್ತಮ್ "ಆತ್ಮನೈವಾಯಂ ಜ್ಯೋತಿಷಾಽಽಸ್ತೇ ಪಲ್ಯಯತೇ" (೪-೩-೬) ಇತಿ। ಉತ್ಸರ್ಜನ್ ಯಾತಿ। ತತ್ರ ಚೈತನ್ಯಾತ್ಮಜ್ಯೋತಿಷಾ ಭಾಸ್ಯೇ ಲಿಙ್ಗೇ ಪ್ರಾಣಪ್ರಧಾನೇ ಗಚ್ಛತಿ ತದುಪಾಧಿರಪ್ಯಾತ್ಮಾ ಗಚ್ಛತೀವ। ತಥಾ ಚ ಶ್ರುತ್ಯನ್ತರಮ್ "ಕಸ್ಮಿನ್ನ್ವಹಮ್" (ಪ್ರ. ೬-೩) ಇತ್ಯಾದಿ, "ಧ್ಯಾಯತೀವ" (೪-೩-೭) ಇತಿ ಚ। ಅತ ಏವೋಕ್ತಮ್ 'ಪ್ರಾಜ್ಞೇನಾತ್ಮನಾಽನ್ವಾರೂಢಃ' ಇತಿ। ಅನ್ಯಥಾ ಪ್ರಾಜ್ಞೇನೈಕೀಭೂತಃ ಶಕಟವತ್ ಕಥಮುತ್ಸರ್ಜನ್ ಯಾತಿ? ತೇನ ಲಿಙ್ಗೋಪಾಧಿರಾತ್ಮಾ ಉತ್ಸರ್ಜನ್ ಮರ್ಮಸು ನಿಕೃತ್ಯಮಾನೇಷು ದುಃಖವೇದನಯಾ ಆರ್ತಃ ಶಬ್ದಂ ಕುರ್ವನ್ ಯಾತಿ ಗಚ್ಛತಿ। ತತ್ ಕಸ್ಮಿನ್ ಕಾಲೇ ಇತಿ? ಉಚ್ಯತೇ। ಯತ್ರ ಏತದ್ ಭವತಿ। ಏತತ್ ಇತಿ ಕ್ರಿಯಾವಿಶೇಷಣಮ್। ಊರ್ಧ್ವೋಚ್ಛ್ವಾಸೀ। ಯತ್ರ ಊರ್ಧ್ವೋಚ್ಛ್ವಾಸಿತ್ವಮ್ ಅಸ್ಯ ಭವತಿ ಇತ್ಯರ್ಥಃ। ದೃಶ್ಯಮಾನಸ್ಯಾಪಿ ಅನುವದನಂ ವೈರಾಗ್ಯಹೇತೋಃ। ಈದೃಶಃ ಕಷ್ಟಃ ಖಲು ಅಯಂ ಸಂಸಾರಃ, ಯೇನ ಉತ್ಕ್ರಾನ್ತಿಕಾಲೇ ಮರ್ಮಸು ಉತ್ಕೃತ್ಯಮಾನೇಷು ಸ್ಮೃತಿಲೋಪಃ ದುಃಖವೇದನಾರ್ತಸ್ಯ ಪುರುಷಾರ್ಥಸಾಧನಪ್ರತಿಪತ್ತೌ ಚ ಅಸಾಮರ್ಥ್ಯಂ ಪರವಶೀಕೃತಚಿತ್ತಸ್ಯ। ತಸ್ಮಾತ್ ಯಾವತ್ ಇಯಮ್ ಅವಸ್ಥಾ ನಾಽಽಗಮಿಷ್ಯತಿ ತಾವದೇವ ಪುರುಷಾರ್ಥಸಾಧನಕರ್ತವ್ಯತಾಯಾಮ್ ಅಪ್ರಮತ್ತೋ ಭವೇತ್ ಇತ್ಯಾಹ ಕಾರುಣ್ಯಾತ್ ಶ್ರುತಿಃ॥

(ಭಾಷ್ಯಾರ್ಥ)

ಇಲ್ಲಿಂದ ಮೊದಲುಮಾಡಿ ಇವನಿಗೆ ಸಂಸಾರ(ವಾಗುವ ಬಗೆಯನ್ನು) ವರ್ಣಿಸಲಾಗುತ್ತದೆ. ಹೇಗೆ ಈ ಆತ್ಮನು ಸ್ವಪ್ನಾಂತದಿಂದ ಬುದ್ಧಾಂತಕ್ಕೆ ಬಂದನೋ ಹಾಗೆಯೇ ಇವನು ಈ ದೇಹದಿಂದ ಮತ್ತೊಂದು ದೇಹವನ್ನು ಪಡೆಯುವನು ಎಂದು ಇದಕ್ಕೆ ದೃಷ್ಟಾಂತವನ್ನು ಹೇಳುತ್ತಿದಾನೆ (ತತ್= ತತ್ರ) ಇಲ್ಲಿ ಲೋಕದಲ್ಲಿ ಹೇಗೆ ಬಂಡಿಯು ಚಕಡಿಯು ಸುಸಮಾಹಿತವಾಗಿ ಎಂದರೆ ಚೆನ್ನಾಗಿ ಅಥವಾ ಹೆಚ್ಚಾಗಿ ಭರ್ತಿಯಾಗಿ ಪಾತ್ರೆಯ ಸಾಮಾನುಗಳಿಂದಲೂ ಒರಳು, ಒನಕೆ, ಮೊರ, ತಪ್ಪಲೆ- ಮುಂತಾದವುಗಳಿಂದಲೂ ಉಣ್ಣುವ ಅನ್ನದಿಂದಲೂ ಕೂಡಿ ಸಂಭಾರದಿಂದ ತುಂಬಿ ಎಂದರ್ಥ. ಹಾಗೆ ಭಾರದಿಂದ ತುಂಬಿಕೊಂಡು ಗಡಗಡ ಎನ್ನುತ್ತಾ ಸದ್ದುಮಾಡುತ್ತಾ ಬಂಡಿಯುವನು ಮೇಲೆ ಇದ್ದುಕೊಂಡಿರಲು, ಹೇಗೆ ಹೋಗುತ್ತದೆಯೋ ಮುನ್ನಡೆಯುತ್ತದೆಯೋ, ಹಾಗೆಯೇ ಈ ಹೇಳಿದಂತೆಯೇ, ಈ ಶಾರೀರನು, ಶರೀರದಲ್ಲಿರುವವನು– ಇವನು ಯಾರು? ಸ್ವಪ್ನಬುದ್ಧಾಂತಗಳಂತೆ ಪಾಪದ ಸಂಬಂಧ ಮತ್ತು ವಿಯೋಗ (ಈ) ರೂಪವಾಗಿರುವ ಜನ್ಮಮರಣಗಳಿಂದ ಇಹಲೋಕಪರಲೋಕಗಳನ್ನು ಅನುಕ್ರಮ

ವಾಗಿ ಸಂಚರಿಸತ್ತಾನಲ್ಲ, ಇವನ ಉತ್ಕ್ರಾಂತಿಯಾಗುತ್ತಲೂ ಪ್ರಾಣಾದಿಗಳೂ ಉತ್ಕ್ರಾಂತವಾಗುವವಲ್ಲ, ಆ ಲಿಂಗೋಪಾಧಿಯಾದ (ಆತ್ಮನು)[1] — ಪ್ರಾಜ್ಞನಾದ, ಸ್ವಯಂಜ್ಯೋತಿಃಸ್ವಭಾವವುಳ್ಳ ಪರಮಾತ್ಮನಿಂದ[2] ಅನ್ವಾರೂಢನಾಗಿ, ಅವನನ್ನು ಮೇಲಿಟ್ಟುಕೊಂಡು, (ಅವನಿಂದ) ಬೆಳಗಲ್ಪಡುವವನಾಗಿ[3] (ಎಂದರ್ಥ). ಆದ್ದರಿಂದಲೇ "ಇವನು ಆತ್ಮನೆಂಬ ಜ್ಯೋತಿಯಿಂದಲೇ ಕುಳ್ಳಿರುತ್ತಾನೆ, ಮುಂದಕ್ಕೆ ಹೋಗುತ್ತಾನೆ." (೪-೩-೬) ಎಂದು ಹಿಂದೆ ಹೇಳಿರುವದು. (ಹೀಗೆ ಬೆಳಗಲ್ಪಡುವವನಾಗಿ) ಗಡಗಡಶಬ್ದವನ್ನು ಮಾಡುತ್ತಾ ಹೋಗುತ್ತಾನೆ. ಇಲ್ಲಿ ಚೈತನ್ಯಾತ್ಮಜ್ಯೋತಿಯಿಂದ ಬೆಳಗಲ್ಪಡುವ ಪ್ರಾಣಪ್ರಧಾನವಾದ[3] ಲಿಂಗವು ಹೋಗುವಾಗ ಅದನ್ನು ಉಪಾಧಿಯಾಗುಳ್ಳ ಆತ್ಮನೂ ಹೋಗುವಂತೆ (ತೋರುತ್ತಾನೆ). ಹಾಗೆಂದು "ಯಾವದು (ಉತ್ಕ್ರಾಂತವಾದರೆ) ನಾನೂ (ಉತ್ಕ್ರಾಂತನಾಗುವೆನೋ)" (೬-೩) ಎಂದು ಮುಂತಾಗಿರುವ ಮತ್ತೊಂದು ಶ್ರುತಿಯು ಹೇಳುತ್ತದೆ[4], "ಧ್ಯಾನಮಾಡುವವನಂತೆ ಇರುತ್ತಾನೆ, (ಅಲುಗಾಡುವವನಂತೆ ಇರುತ್ತಾನೆ)" (೪-೩-೭) ಎಂದೂ (ಹಿಂದೆ ಹೇಳಿರುತ್ತದೆ).[5] ಆದ್ದರಿಂದಲೇ (ಇಲ್ಲಿ) 'ಪ್ರಾಜ್ಞನಾದ ಆತ್ಮನಿಂದ ಅನ್ವಾರೂಢನಾಗಿ' ಎಂದು ಹೇಳಿದೆ. ಹೀಗಲ್ಲದಿದ್ದರೆ ಪ್ರಾಜ್ಞನೊಡನೆ ಒಂದಾದವನು ಚಕಡಿಯ ಹಾಗೆ ಹೇಗೆತಾನೆ ಶಬ್ದವನ್ನು ಮಾಡುತ್ತಾಹೋದಾನು[6] ? ಆದ್ದ

---

1. ಶಾರೀರಶಬ್ದವು ಶರೀರದಲ್ಲಿರುವವನು ಅಥವಾ ಶರೀರಕ್ಕೊಡೆಯನು ಎಂದಿಷ್ಟೇ ತಿಳಿಸುತ್ತದೆಯಾದರೂ ಪ್ರಕೃತದಲ್ಲಿ ಶರೀರನೆಂದರೆ ಲಿಂಗಶರೀರವನ್ನೇ ತೆಗೆದುಕೊಳ್ಳಬೇಕು ಎಂದು ಭಾವ. ಆತ್ಮಾ ಲಿಙ್ಗೋಪಾಧಿಃ ಎಂಬುದಕ್ಕೆ ನಾವು ಲಿಂಗೋಪಾಧಿಯಾದ ಆತ್ಮನು ಎಂಬರ್ಥವನ್ನು ಮಾಡಿದೇವೆ, ಆತ್ಮನು ಎಂದರೆ ಲಿಂಗೋಪಾಧಿಯು ಎಂಬರ್ಥವನ್ನೇ ವಾರ್ತಿಕದಲ್ಲಿ ತೆಗೆದಿದೆ. ಪರಮಾರ್ಥದೃಷ್ಟಿಯಿಂದ ಇವೇ ಸರಿಯಾದರೂ ಸಂಸಾರವರ್ಣನೆಗೆ ಅಜ್ಞರ ಆತ್ಮನಿಗೇ ಉತ್ಕ್ರಾಂತಿಯನ್ನು ಹೇಳುವದು ಯುಕ್ತವೆಂದು ನಮಗೆ ತೋರುತ್ತದೆ.

2. ೪-೩-೨೧, ೪-೩-೩೫ -ಇವುಗಳಲ್ಲಿ ಹೇಳಿರುವ ಪ್ರಾಜ್ಞಶಬ್ದವು ನಿತ್ಯಪ್ರಜ್ಞಪ್ತಿಸ್ವರೂಪನಾದ ಪರಮಾತ್ಮನನ್ನೇ ಹೇಳುತ್ತದೆ ಎಂಬುದನ್ನು ಸೂ. ಭಾ. ೧-೩-೪೨ (ಭಾ. ಭಾ. ೩೨೯)ರಲ್ಲಿ ನಿಶ್ಚಯಿಸಿದೆ.

3. ಉತ್ಕ್ರಮಣಕ್ರಿಯೆಗೆ ಕ್ರಿಯಾತ್ಮಕವಾದ ಪ್ರಾಣವು ಅವಶ್ಯ, ಆದ್ದರಿಂದ ಚಿದಾಭಾಸವಾದ ಪ್ರಾಣಪ್ರಧಾನಲಿಂಗದ ಗಮನದಿಂದ ಜೀವನೂ ಹೋಗುತ್ತಾನೆ ಎಂದಿದೆ ಎಂದು ಅಭಿಪ್ರಾಯ.

4. ಈ ಶ್ರುತಿಯಲ್ಲಿ ಪ್ರಾಣದ ಉತ್ಕ್ರಾಂತಿಯಿಂದಲೇ ಆತ್ಮನಿಗೆ ಉತ್ಕ್ರಾಂತಿ ಎಂದು ಹೇಳಿದೆ.

5. ಈ ವಾಕ್ಯದಲ್ಲಿ ಆತ್ಮನಿಗೆ ಸ್ವತಃ ಧ್ಯಾನವಿಲ್ಲ, ಚಲನವೂ ಇಲ್ಲ ; ಉಪಾಧಿಯಿಂದಲೇ ಧ್ಯಾನಚಲನಗಳು ಎಂದು ಹೇಳಿದೆ.

6. ನಿರುಪಾಧಿಕನಾದ ಆತ್ಮನಿಗೆ ಶಬ್ದವಾಗಲಿ ಗಮನವಾಗಲಿ ಸಂಭವಿಸುವದಿಲ್ಲವಷ್ಟೆ ಎಂದರ್ಥ.

ರಿಂದ ಲಿಂಗೋಪಾಧಿಯಾದ ಆತ್ಮನು ಗಡಗಡ ಎನ್ನುತ್ತಾ, ಎಂದರೆ ಮರ್ಮಗಳು ಕಿತ್ತುಕೊಂಡುಹೋಗುತ್ತಿರುವದರಿಂದ ದುಃಖದ ವೇದನೆಯಿಂದ ಸಂಕಟಪಡುತ್ತಾ ಶಬ್ದವನ್ನು ಮಾಡುತ್ತಾ ಹೋಗುತ್ತಾನೆ ಮುನ್ನಡೆಯುತ್ತಾನೆ.

ಇದು ಯಾವ ಕಾಲದಲ್ಲಿ ? ಎಂದರೆ ಹೇಳುತ್ತಾನೆ: ಯಾವಾಗ ಹೀಗಾಗುತ್ತದೆಯೋ-(ಮೂಲದಲ್ಲಿರುವ) ಏತತ್ (ಹೀಗೆ) ಎಂಬುದು ಕ್ರಿಯಾವಿಶೇಷಣವು. (ಹೀಗೆ ಯಾವಾಗ) ಉರ್ಧ್ವೋಚ್ಛ್ವಾಸಿಯಾಗುವನೋ (ಯಾವಾಗ) ಮೇಲುಸಿರಿಡುವದು ಇವನಿಗೆ ಉಂಟಾಗುವದೋ ಎಂದರ್ಥ. (**ಉಸಿರಿಡುವದು) ಕಂಡೇ ಇದೆಯಾದರೂ (ಇದನ್ನು) ಅನುವಾದಮಾಡಿಕೊಂಡಿರುವದು ವೈರಾಗ್ಯಕ್ಕಾಗಿ. ಈ ಸಂಸಾರವು ಇಂಥ ಕಷ್ಟವಾಗಿರುತ್ತದೆಯಲ್ಲವೆ ? ಇದರಿಂದ ಉತ್ಕ್ರಾಂತಿಕಾಲದಲ್ಲಿ ಮರ್ಮಗಳು ಕಿತ್ತುಕೊಂಡುಹೋಗುತ್ತಿರಲು ದುಃಖದ ವೇದನೆಯಿಂದ ಸಂಕಟಪಡುತ್ತಿರುವದರಿಂದ ಸ್ಮೃತಿಯು ತಪ್ಪಿಬಿಡುತ್ತದೆ, ಚಿತ್ತವು ಪರವಶವಾಗಿಬಿಡುವದರಿಂದ ಪುರುಷಾರ್ಥಕ್ಕೆ ಸಾಧನವನ್ನು ಅರಿತುಕೊಳ್ಳಲು ಸಾಮರ್ಥ್ಯವೂ ಇರುವದಿಲ್ಲ. ಆದ್ದರಿಂದ ಈ ಅವಸ್ಥೆಯು ಬಾರದೆ ಇರುವದರೊಳಗೇ ಪುರುಷಾರ್ಥದ ಸಾಧನವನ್ನು ಮಾಡುವದರಲ್ಲಿ ಅಪ್ರಮತ್ತನಾಗಬೇಕು ಎಂದು ಶ್ರುತಿಯು ಕರುಣೆಯಿಂದ ಹೇಳುತ್ತಿದೆ.**

## ಈ ಶರೀರವನ್ನು ಬಿಟ್ಟು ಮತ್ತೊಂದು ಶರೀರವನ್ನು ಸೇರುವ ಪ್ರಕಾರ

(ಉಪನಿಷತ್ತು)

**ಸ ಯತ್ರಾಯಮಣಿಮಾನಂ ನ್ಯೇತಿ ಜರಯಾ ವೋಪತಪತಾ ವಾಽಣಿಮಾನಂ ನಿಗಚ್ಛತಿ ತದ್ಯಥಾಽಽಮ್ರಂ ವೋದುಮ್ಬರಂ ವಾ ಪಿಪ್ಪಲಂ ವಾ ಬನ್ಧನಾತ್ ಪ್ರಮುಚ್ಯತ ಏವಮೇವಾಯಂ ಪುರುಷ ಏಭ್ಯೋಽಙ್ಗೇಭ್ಯಃ ಸಂಪ್ರಮುಚ್ಯ ಪುನಃ ಪ್ರತಿನ್ಯಾಯಂ ಪ್ರತಿಯೋನ್ಯಾದ್ರವತಿ ಪ್ರಾಣಾಯೈವ ॥ ೩೬ ॥**

೩೬. ಯಾವಾಗ ಇವನು ಬಡಕಲಾಗುವನೋ, ಮುಪ್ಪಿನಿಂದಾಗಲಿ ಉಪತಪಿಸುವದರಿಂದಾಗಲಿ ಬಡಕಲಾಗುವನೋ, ಆಗ ಹೇಗೆ ಮಾವು, ಅಥವಾ ಅತ್ತಿಯ (ಹಣ್ಣು), ಅಥವಾ ಅರಳಿಯ (ಹಣ್ಣು) ಬಂಧನದಿಂದ ಬಿಟ್ಟುಕೊಳ್ಳುವದೋ, ಹಾಗೆಯೇ ಈ ಪುರುಷನು ಈ ಅಂಗಗಳಿಂದ ಬಿಟ್ಟುಕೊಂಡು ಮತ್ತೂ ಪ್ರತಿನ್ಯಾಯವಾಗಿ ಪ್ರತಿಯೋನಿಯಾಗಿ ಪ್ರಾಣಕ್ಕಾಗಿಯೇ ಓಡಿಬರುತ್ತಾನೆ.

## ಶರೀರವನ್ನು ಬಿಡುವದು ಯಾವಾಗ?

(ಭಾಷ್ಯ)

೨೪೫. ತದಸ್ಯ ಊರ್ಧ್ವೋಚ್ಛ್ವಾಸಿತ್ವಂ ಕಸ್ಮಿನ್ ಕಾಲೇ, ಕಿಂನಿಮಿತ್ತಮ್, ಕಥಮ್, ಕಿಮರ್ಥಂ ವಾ ಸ್ಯಾದಿತಿ ? ಏತದುಚ್ಯತೇ। ಸೋಽಯಂ ಪ್ರಾಕೃತಃ ಶಿರಃಪಾಣ್ಯಾದಿಮಾನ್ ಪಿಣ್ಡಃ, ಯತ್ರ ಯಸ್ಮಿನ್ ಕಾಲೇ, ಅಯಮ್ ಅಣಿಮಾನಮ್ ಅಣೋರ್ಭಾವಮ್, ಅಣುತ್ವಮ್। ಕಾರ್ಶ್ಯಮ್ ಇತ್ಯರ್ಥಃ। ನ್ಯೇತಿ ನಿಗಚ್ಛತಿ। ಕಿಂನಿಮಿತ್ತಮ್ ? ಜರಯಾ ವಾ ಸ್ವಯಮೇವ ಕಾಲಪಕ್ವಫಲವತ್ ಜೀರ್ಣಃ ಕಾರ್ಶ್ಯಂ ಗಚ್ಛತಿ। ಉಪತಪತೀತಿ ಉಪತಪನ್ ಜ್ವರಾದಿರೋಗಃ। ತೇನ ಉಪತಪತಾ ವಾ। ಉಪತಪ್ಯಮಾನೋ ಹಿ ರೋಗೇಣ ವಿಷಮಾಗ್ನಿತಯಾ ಅನ್ನಂ ಭುಕ್ತಂ ನ ಜರಯತಿ। ತತೋಽನ್ನರಸೇನ ಅನುಪಚೀಯಮಾನಃ ಪಿಣ್ಡಃ ಕಾರ್ಶ್ಯಮ್ ಆಪದ್ಯತೇ। ತದುಚ್ಯತೇ ಉಪತಪತಾ ವಾ ಇತಿ। ಅಣಿಮಾನಂ ನಿಗಚ್ಛತಿ। ಯದಾ ಅತ್ಯನ್ತಕಾರ್ಶ್ಯಂ ಪ್ರತಿಪನ್ನೋ ಜರಾದಿನಿಮಿತ್ತೈಃ ತದಾ ಊರ್ಧ್ವೋಚ್ಛ್ವಾಸೀ ಭವತಿ। ಯದಾ ಊರ್ಧ್ವೋಚ್ಛ್ವಾಸೀ ತದಾ ಭೃಶಾಹಿತ ಸಂಭಾರಶಕಟವತ್ ಉತ್ಸರ್ಜನ್ ಯಾತಿ। ಜರಾಭಿಭವೋ ರೋಗಾದಿಪೀಡನಂ ಕಾರ್ಶ್ಯಾಪತ್ತಿಶ್ಚ ಶರೀರವತಃ ಅವಶ್ಯಂಭಾವಿನ ಏತೇ ಅನರ್ಥಾಃ ಇತಿ ವೈರಾಗ್ಯಾಯ ಇದಮ್ ಉಚ್ಯತೇ ॥

(ಭಾಷ್ಯಾರ್ಥ)

ಅವನು ಮೇಲುಸಿರಿಡುವದು ಯಾವ ಕಾಲದಲ್ಲಿ ? ಯಾವ ಕಾರಣದಿಂದ ? ಹೇಗೆ? ಯಾವ ಫಲಕ್ಕಾಗಿ ಆಗುವದು ? ಎಂದರೆ ಇದನ್ನು (ಈಗ) ಹೇಳಲಾಗುತ್ತದೆ.

ಆ ಈ ಪ್ರಾಕೃತವಾದ ತಲೆಕೈಗಳು-ಮುಂತಾದವುಗಳುಳ್ಳ ಶರೀರವು ಯಾವಾಗ ಯಾವ ಕಾಲದಲ್ಲಿ, ಇದು- (ಮೂಲದಲ್ಲಿರುವ) ಅಣಿಮಾನಮ್ ಎಂಬುದಕ್ಕೆ ಅಣುವಿನ ಭಾವವನ್ನು, ಅಣುತ್ವವನ್ನು -ಬಡಕಲಾಗುವಿಕೆಯನ್ನು ಎಂದರ್ಥ. (ಅದನ್ನು ಯಾವಾಗ) (ನ್ಯೇತಿ=ನಿಗಚ್ಛತಿ) ಹೊಂದುವದೋ (ಎಂದರ್ಥ). ಯಾವ ಕಾರಣದಿಂದ (ಹೊಂದುತ್ತದೆ) ? ಮುಪ್ಪಿನಿಂದಲಾದರೂ ಕಾಲದಲ್ಲಿ ಪಕ್ವವಾದ ಹಣ್ಣಿನಂತೆ ಮುದಿಯಾಗಿ ಬಡಕಲಾಗುತ್ತದೆ. ಅಥವಾ ಆ ಉಪತಪಿಸುವದರಿಂದ ಉಪತಾಪವೆನಿಸುವದು, ಜ್ವರವೇ ಮುಂತಾದ ರೋಗವು ; ಉಪತಪಿಸುವ (ರೋಗ)ದಿಂದಲಾದರೂ (ಬಡಕಲಾಗುತ್ತದೆ). ಏಕೆಂದರೆ ರೋಗದಿಂದ ಉಪತಪ್ತನಾದವನಿಗೆ ಅಗ್ನಿಯು ವಿಷಮವಾಗುವದರಿಂದ ಉಂಡ ಅನ್ನವು ಜೀರ್ಣವಾಗುವದಿಲ್ಲ; ಅದರಿಂದ ಶರೀರವು ಅನ್ನರಸದಿಂದ ಬೆಳೆಯದೆ ಬಡಕಲಾಗು-

ತ್ತದೆ. ಇದನ್ನು 'ಉಪತಪಿಸುವದರಿಂದಲಾಗಲಿ' ಎಂದಿದೆ. (ಉಪತಪಿಸುವ ರೋಗದಿಂದಾಗಲಿ) ಬಡಕಲಾಗುತ್ತದೆಯೋ–ಯಾವಾಗ ಮುಪ್ಪು ಮುಂತಾದ ನಿಮಿತ್ತಗಳಿಂದ ಅತ್ಯಂತವಾಗಿ ಬಡಕಲಾಗುವನೋ, ಆಗ ಮೇಲುಸಿರಿಡುವವನಾಗುವನು, ಯಾವಾಗ ಮೇಲುಸಿರಿಡುವನೋ ಆಗ ಹೆಚ್ಚಾಗಿ ಭರ್ತಿಮಾಡಿರುವ ಸಂಭಾರವುಳ್ಳ ಚಕಡಿಯುಹಾಗೆ ಶಬ್ದವನ್ನು ಮಾಡುತ್ತಾ ಹೋಗುತ್ತಾನೆ. **ಮುಪ್ಪು ಬಂದಡಸುವದೂ, ಬೇನೆಯೇ ಮುಂತಾದವುಗಳು ಪೀಡಿಸುವದೂ, ಬಡಕಲಾಗುವದೂ– ಈ ಅನರ್ಥಗಳು ಶರೀರಿಗೆ ಅವಶ್ಯವಾಗಿ ಆಗಿಯೇತೀರುವವಾದ್ದರಿಂದ ಇದನ್ನು (ಇಲ್ಲಿ) ವೈರಾಗ್ಯಕ್ಕಾಗಿ ಹೇಳಿರುತ್ತದೆ.**

## ಶರೀರತ್ಯಾಗಕ್ಕೆ ದೃಷ್ಟಾಂತವೂ ಫಲವೂ

(ಭಾಷ್ಯ)

೨೪೬. ಯದಾ ಅಸೌ ಉತ್ಸರ್ಜನ್ ಯಾತಿ ತದಾ ಕಥಂ ಶರೀರಂ ವಿಮುಞ್ಚತೀತಿ ದೃಷ್ಟಾನ್ತ ಉಚ್ಯತೇ। ತತ್ ತತ್ರ ಯಥಾ ಆಮ್ರಂ ವಾ ಫಲಮ್, ಉದುಮ್ಬರಂ ವಾ[1] ಪಿಪ್ಪಲಂ ವಾ ಫಲಮ್। ವಿಷಮಾನೇಕದೃಷ್ಟಾನ್ತೋಪಾದಾನಂ ಮರಣಸ್ಯ ಅನಿಯತನಿಮಿತ್ತತ್ವಖ್ಯಾಪನಾರ್ಥಮ್। ಅನಿಯತಾನಿ ಹಿ ಮರಣಸ್ಯ ನಿಮಿತ್ತಾನಿ ಅಸಂಖ್ಯಾತಾನಿ ಚ। ಏತದಪಿ ವೈರಾಗ್ಯಾರ್ಥಮೇವ। ಯಸ್ಮಾತ್ ಅಯಮ್ ಅನೇಕಮರಣನಿಮಿತ್ತವಾನ್, ತಸ್ಮಾತ್ ಸರ್ವದಾ ಮೃತ್ಯೋರಾಸ್ಯೇ ವರ್ತತ ಇತಿ। ಬನ್ಧನಾತ್ ಬಧ್ಯತೇ ಯೇನ ವೃನ್ತೇನ ಸಹ ಸ ಬನ್ಧನಕಾರಣೋ ರಸಃ। ಯಸ್ಮಿನ್ ವಾ ಬಧ್ಯತ ಇತಿ ವೃನ್ತಮೇವ ಉಚ್ಯತೇ ಬನ್ಧನಮ್[2]। ತಸ್ಮಾತ್ ರಸಾದ್ ವೃನ್ತಾದ್ವಾ ಬನ್ಧನಾತ್ ಪ್ರಮುಚ್ಯತೇ ವಾತಾದ್ಯನೇಕನಿಮಿತ್ತಮ್। ಏವಮೇವ ಅಯಂ ಪುರುಷಃ ಲಿಙ್ಗಾತ್ಮಾ ಲಿಙ್ಗೋಪಾಧಿಃ ಏಭ್ಯೋಽಙ್ಗೇಭ್ಯಃ ಚಕ್ಷುರಾದಿದೇಹಾವಯವೇಭ್ಯಃ ಸಂಪ್ರಮುಚ್ಯ ಸಮ್ಯಕ್ ನಿರ್ಲೇಪೇನ ಪ್ರಮುಚ್ಯ। ನ ಸುಪ್ತಿಗಮನ[3]ಕಾಲೇ ಇವ ಪ್ರಾಣೇನ ರಕ್ಷನ್, ಕಿಂ ತರ್ಹಿ ಸಹ ವಾಯುನಾ ಉಪಸಂಹೃತ್ಯ ॥

(ಭಾಷ್ಯಾರ್ಥ)

ಯಾವಾಗ ಇವನು ಶಬ್ದವನ್ನು ಮಾಡುತ್ತಾ ಹೋಗುತ್ತಾನೋ ಆಗ ಶರೀರವನ್ನು ಹೇಗೆ ಬಿಡುತ್ತಾನೆ ? ಎಂದರೆ (ಅದಕ್ಕೆ) ದೃಷ್ಟಾಂತವನ್ನು ಹೇಳ

1. ಇಲ್ಲಿ 'ಫಲಮ್' ಎಂದು ಹೆಚ್ಚಾಗಿ ವಾ॥ ಪಾಠದಲ್ಲಿದೆ.
2. ಇಲ್ಲೊಂದು ಇತಿ ಇದ್ದರೆ ಚೆನ್ನಾಗಿರುತ್ತೆನಿಸುತ್ತದೆ.
3. ಸುಷುಪ್ತ ಎಂಬುದನ್ನು ಸುಪ್ತಿ ಎಂದು ತಿದ್ದಿಕೊಂಡಿದೆ. ಅನುವಾದದ ಟಿಪ್ಪಣಿಯನ್ನು ನೋಡಿ.

ಲಾಗುತ್ತದೆ. (ತತ್ =ವತ್ರ) ಇಲ್ಲಿ ಹೇಗೆ ಮಾವಿನಹಣ್ಣಾಗಲಿ, ಅತ್ತಿಯ ಅಥವಾ ಅರಳಿಯ ಹಣ್ಣಾಗಲಿ- ಬೇರೆಬೇರೆಯ ತರದ ಅನೇಕ ದೃಷ್ಟಾಂತ ಗಳನ್ನು[1] ತೆಗೆದುಕೊಂಡಿರುವದು ಸಾವಿಗೆ ಗೊತ್ತಾದ (ಒಂದೇ) ನಿಮಿತ್ತವಿಲ್ಲ ಎಂದು ತಿಳಿಸಿಕೊಡುವದಕ್ಕಾಗಿ, ಸಾವಿಗೆ ನಿಮಿತ್ತಗಳು ಇಂಥವೇ ಎಂದು ಗೊತ್ತಿರುವದಿಲ್ಲ, ಲೆಕ್ಕವಿಲ್ಲದಷ್ಟು ಇವೆ, ಅಲ್ಲವೆ? ಇದನ್ನು ವೈರಾಗ್ಯ ಕ್ಕಾಗಿಯೇ -**ಇವನಿಗೆ ಅನೇಕ ಮರಣನಿಮಿತ್ತಗಳಿವೆಯಷ್ಟೆ, ಆದ್ದರಿಂದ ಯಾವಾಗಲೂ ಮೃತ್ಯುವಿನ ಬಾಯಿಯಲ್ಲಿಯೇ ಇರುತ್ತಾನೆ ಎಂದು- (ವೈರಾಗ್ಯವನ್ನು ಹೊಂದುವದಕ್ಕಾಗಿಯೇ ಹೇಳಿದೆ.)** ಬಂಧನದಿಂದ: ಯಾವ ರಸದಿಂದ (ಹಣ್ಣು) ತೊಟ್ಟಿಗೆ ಕಟ್ಟುಬಿದ್ದಿರುವದೋ ಆ ಕಟ್ಟಿಗೆ ಕಾರಣ ವಾದ ರಸವು (ಬಂಧನವು); ಅಥವಾ ಯಾವದರಲ್ಲಿ (ಹಣ್ಣು) ಕಟ್ಟುಬಿದ್ದಿರು ವದೋ (ಅದು) ಎಂದು ತೊಟ್ಟನ್ನೇ ಬಂಧನವೆಂದಿದೆಯಾದರೂ ಹೇಳ ಬಹುದು). ಆ ಬಂಧನದಿಂದ, ರಸದಿಂದ ಅಥವಾ ತೊಟ್ಟಿನಿಂದ, ಗಾಳಿಯೇ ಮುಂತಾದ ಅನೇಕ ಕಾರಣಗಳಿಂದ (ಹೇಗೆ) ಬಿಟ್ಟುಕೊಳ್ಳುವದೋ ಹಾಗೆಯೇ ಈ ಪುರುಷನು, ಲಿಂಗಾತ್ಮನು, ಲಿಂಗವೆಂಬ ಉಪಾಧಿಯುಳ್ಳವನಾಗಿ ಈ ಅಂಗ ಗಳಿಂದ, ಕಣ್ಣೇ ಮುಂತಾದ ದೇಹದ ಅವಯವಗಳಿಂದ ಬಿಟ್ಟುಕೊಂಡು (ಮೂಲದಲ್ಲಿರುವ ಸಂಪ್ರಮುಚ್ಯ ಎಂಬಲ್ಲಿ 'ಸಂ' ಎಂಬಿದರ ಅಭಿಪ್ರಾಯ ವೇನೆಂದರೆ) ಚೆನ್ನಾಗಿ, ಸ್ವಲ್ಪವೂ ಉಳಿಯದಂತೆ ಬಿಟ್ಟುಕೊಂಡು, ಕನಸಿಗೆ[2] ಹೋಗುವಾಗಿನಂತೆ (ದೇಹವನ್ನು) ಪ್ರಾಣದಿಂದ ರಕ್ಷಿಸಿಕೊಂಡಲ್ಲ, ಮತ್ತೇ ನೆಂದರೆ ಪ್ರಾಣದೊಡನೆಯೇ ಉಪಸಂಹಾರಮಾಡಿಕೊಂಡು[3] (ಎಂದರ್ಥ)

---

1. ಮಾವು ತೊಟ್ಟಿನಿಂದಲೇ ಬೀಳುತ್ತದೆ, ಅತ್ತಿಯಹಣ್ಣು ತೊಟ್ಟಿನ ಸಮೇತ ಬೀಳುತ್ತದೆ, ಅರಳಿಯ ಹಣ್ಣೋ ಎಂದರೆ ಪಕ್ವವಾದ ಮೇಲೂ ಮತ್ತೆ ಯಾವದೋ ಒಂದು ನಿಮಿತ್ತದಿಂದ ಬೀಳುತ್ತದೆ ಹೀಗೆಯೇ ಈ ಪುರುಷನು ಬಗೆಬಗೆಯ ನಿಮಿತ್ತಗಳಿಂದ ದೇಹತ್ಯಾಗಮಾಡುತ್ತಾನೆ. ವಾರ್ತಿಕ ೧೯೭೭, ೧೯೭೨.

2. ಮೂಲದಲ್ಲಿ 'ಸುಷುಪ್ತಗಮನಕಾಲೇ' ಎಂದಿರುವದು 'ಸುಪ್ತಿಗಮನಕಾಲೇ' ಎಂಬುದಕ್ಕೆ ಬದಲು ಬರೆದವರ ಕೈತಪ್ಪಿನಿಂದ ಬಿದ್ದಿರಬೇಕು, ಏಕೆಂದರೆ ೪-೩-೧೩ರಲ್ಲಿ ಇವನ್ನು ಸ್ವಪ್ನದ ವಿಷಯಕ್ಕೇ ಹೇಳಿದೆ. ವಾರ್ತಿಕದಲ್ಲಿಯೂ ಆ॥ ಟೀಕೆಯಲ್ಲಿಯೂ ಇಲ್ಲಿ ಸ್ವಪ್ನವನ್ನೇ ಪರಾಮರ್ಶಿಸಿದೆ. ಆದ್ದರಿಂದ ಇಲ್ಲಿ 'ಸುಪ್ತಿ' ಎಂದರೆ ಕನಸಿನ ನಿದ್ರೆಗೆ ಹೋಗುವವನಂತೆ- ಎಂದೇ ಅರ್ಥಮಾಡುವದು ದೃಷ್ಟಾಂತದಾರ್ಷ್ಟಾಂತಿಕಗಳಿಗೆ ಹೊಂದಿಕೆ ಮಾಡಿದಂತೆ ಆಗುತ್ತದೆ.

3. ಪ್ರಾಣವನ್ನು ಹಿಂದೆ ಬಿಟ್ಟು ಕನಸಿಗೆ ಹೋಗುತ್ತಾನೆ, ಆದರೆ ಪ್ರಾಣಸಹಿತ ನಾಗಿಯೇ ಈಗ ದೇಹಾಂತರಕ್ಕೆ ಹೋಗುತ್ತಾನೆ.

# ಮತ್ತೆಮತ್ತೆ ಶರೀರಾಂತರಗ್ರಹಣವು ಪ್ರಾಣವ್ಯವಸ್ಥೆಗೆ

(ಭಾಷ್ಯ)

೨೪೭. ಪುನಃ ಪ್ರತಿನ್ಯಾಯಮ್ । ಪುನಃಶಬ್ದಾತ್ ಪೂರ್ವಮಪಿ ಅಯಂ ದೇಹಾದ್ ದೇಹಾನ್ತರಮ್ ಅಸಕೃತ್ ಗತವಾನ್, ಯಥಾ ಸ್ವಪ್ನ ಬುದ್ಧಾನ್ತೌ ಪುನಃಪುನರ್ಗಚ್ಛತಿ ತಥಾ ಪುನಃ ಪ್ರತಿನ್ಯಾಯಂ ಪ್ರತಿಗಮನಂ ಯಥಾಗತಮ್ ಇತ್ಯರ್ಥಃ । ಪ್ರತಿಯೋನಿ ಯೋನಿಂ ಯೋನಿಂ ಪ್ರತಿ ಕರ್ಮ ಶ್ರುತಾದಿವಶಾತ್ ಆದ್ರವತಿ । ಕಿಮರ್ಥಮ್ ? ಪ್ರಾಣಾಯೈವ । ಪ್ರಾಣ ವ್ಯೂಹಾಯೈವ ಇತ್ಯರ್ಥಃ । ಸಪ್ರಾಣ ಏವ ಹಿ ಗಚ್ಛತಿ । ತತಃ ಪ್ರಾಣಾಯೈವ ಇತಿ ವಿಶೇಷಣಮ್ ಅನರ್ಥಕಮ್ । ಪ್ರಾಣವ್ಯೂಹಾಯ ಹಿ ಗಮನಂ ದೇಹಾತ್ ದೇಹಾನ್ತರಂ ಪ್ರತಿ । ತೇನ ಹಿ ಅಸ್ಯ ಕರ್ಮಫಲೋಪಭೋಗಾರ್ಥಸಿದ್ಧಿಃ ನ ಪ್ರಾಣಸತ್ತಾಮಾತ್ರೇಣ । ತಸ್ಮಾತ್ ತಾದರ್ಥ್ಯಾರ್ಥಂ ಯುಕ್ತಂ ವಿಶೇಷಣಂ ಪ್ರಾಣವ್ಯೂಹಾಯ ಇತಿ ॥

(ಭಾಷ್ಯಾರ್ಥ)

'ಮತ್ತೆ ಪ್ರತಿನ್ಯಾಯವಾಗಿ' ಎಂದು 'ಮತ್ತೆ'ಶಬ್ದವನ್ನು (ಪ್ರಯೋಗಿಸಿರು)ವದರಿಂದ ಹಿಂದೆಯೂ ಹಲವು ಬಾರಿ ಇವನು (ಒಂದು) ದೇಹದಿಂದ ಇನ್ನೊಂದು ದೇಹವನ್ನು ಸೇರಿದ್ದನು, ಸ್ವಪ್ನಾಂತಬುದ್ಧಾಂತಗಳನ್ನು ಹೇಗೆ ಮತ್ತೆ ಮತ್ತೆ ಸೇರುತ್ತಾನೋ ಹಾಗೆ (ಸೇರಿದ್ದನು ಎಂದು ಭಾವ. ಈಗ) ಮತ್ತೆ ಪ್ರತಿನ್ಯಾಯವಾಗಿ ಪ್ರತಿಗಮನವಾಗಿ ಹೇಗೆ ಹೋಗಿದ್ದನೋ ಹಾಗೆಯೇ ಎಂದರ್ಥ; ಪ್ರತಿಯೋನಿಯಾಗಿ ಒಂದೊಂದು ಯೋನಿಗೂ ಕರ್ಮ, ಜ್ಞಾನ- ಮುಂತಾದದ್ದರ[1] ವಶದಿಂದ ಓಡಿಬರುತ್ತಾನೆ. ಏತಕ್ಕೋಸ್ಕರ (ಬೇರೊಂದು ಯೋನಿಗೆ ಬರುತ್ತಾನೆ) ? ಪ್ರಾಣಕ್ಕಾಗಿಯೇ, ಎಂದರೆ ಪ್ರಾಣವನ್ನು ವಿಂಗಡಿಸಿ ಕೊಳ್ಳುವದಕ್ಕಾಗಿಯೇ ಎಂದರ್ಥ. ಪ್ರಾಣದಿಂದೊಡಗೂಡಿಯೇ ಅಲ್ಲವೆ, ಹೋಗುತ್ತಾನೆ[2] ? ಆದ್ದರಿಂದ 'ಪ್ರಾಣಕ್ಕಾಗಿಯೇ' ಎಂಬ ವಿಶೇಷಣವು (ಇಲ್ಲಿ) ವ್ಯರ್ಥವು. ಪ್ರಾಣವನ್ನು ವಿಂಗಡಿಸಿಕೊಳ್ಳುವದಕ್ಕಲ್ಲವೆ, (ಒಂದು) ದೇಹದಿಂದ ಮತ್ತೊಂದು ದೇಹಕ್ಕೆ ಹೋಗುವದು ? ಅದರಿಂದಲೇ ಇವನಿಗೆ ಕರ್ಮದ ಫಲವನ್ನು ಉಪಭೋಗಿಸುವದೆಂಬ ಪ್ರಯೋಜನವು ಸಿದ್ಧಿಸುವದೇ ಹೊರತು ಬರಿಯ ಪ್ರಾಣದ ಇರವಿನಿಂದಲೇ ಅಲ್ಲ. ಆದ್ದರಿಂದ ಆ ಅರ್ಥವನ್ನು

1. ಮುಂತಾದದ್ದು ಎಂದರೆ ಪೂರ್ವಪ್ರಜ್ಞೆ ಎಂಬ ವಾಸನೆ. ಮುಂದೆ ೪-೪-೨ರಲ್ಲಿ ಇವನ್ನು ಹೇಳಿದೆ.

2. ಮುಖ್ಯಪ್ರಾಣ, ಇಂದ್ರಿಯಗಳು, ಮನಸ್ಸು, ದೇಹಕ್ಕೆ ಬೇಕಾದ ಭೂತಸೂಕ್ಷ್ಮಗಳು- ಇಷ್ಟನ್ನೂ ತೆಗೆದುಕೊಂಡೇ ದೇಹಾಂತರಕ್ಕೆ ಹೋಗುತ್ತಾನೆಂದು ಸೂ.ಭಾ. ೩-೧-೧ (ಭಾ ಭಾ. ೨೧೨, ೨೧೪) ರಲ್ಲಿ ನಿರ್ಣಯಿಸಿದೆ.

ಕೊಡುವದಕ್ಕಾಗಿ "ಪ್ರಾಣವನ್ನು ವಿಂಗಡಿಸಿಕೊಳ್ಳುವದಕ್ಕಾಗಿ" ಎಂಬ ವಿಶೇಷಣವು ಯುಕ್ತವಾಗಿರುತ್ತದೆ.[1]

## ಸಂಸಾರಿಯನ್ನು ಭೋಗಸಾಮಗ್ರಿಗಳು ನಿರೀಕ್ಷಿಸಿಕೊಂಡಿರುವವು

(ಉಪನಿಷತ್ತು)

**ತದ್ಯಥಾ ರಾಜಾನಮಾಯಾನ್ತಮುಗ್ರಾಃ ಪ್ರತ್ಯೇನಸಃ ಸೂತಗ್ರಾಮಣ್ಯೋಽನ್ನೈಃ ಪಾನೈರಾವಸಥೈಃ ಪ್ರತಿಕಲ್ಪನ್ತೇಽಯಮಾಯಾತ್ಯಯಮಾಗಚ್ಛತೀತ್ಯೇವಗ್ಂ ಹೈವಂವಿದಗ್ಂ ಸರ್ವಾಣಿ ಭೂತಾನಿ ಪ್ರತಿಕಲ್ಪನ್ತ ಇದಂ ಬ್ರಹ್ಮಾಯಾತೀದಮಾಗಚ್ಛತೀತಿ ॥ ೩೭ ॥**

೩೭. ಇಲ್ಲಿ ಹೇಗೆ ಬರುತ್ತಿರುವ ರಾಜನನ್ನು ಪ್ರತ್ಯೇನಸರಾದ ಉಗ್ರರೂ ಸೂತಗ್ರಾಮಣ್ಯರೂ 'ಇವನು ಬರುತ್ತಾನೆ, ಇಗೋ ಬರುತ್ತಾನೆ' ಎಂದು ಅನ್ನ, ಪಾನ, ವಾಸಸ್ಥಾನ- ಇವುಗಳಿಂದ ಸಿದ್ಧರಾಗಿರುವರೋ, ಹಾಗೆಯೇ ಹೀಗೆಂದರಿತಿರುವನನ್ನು ಸರ್ವ ಭೂತಗಳೂ 'ಇಗೋ ಬ್ರಹ್ಮವು ಬರುತ್ತದೆ, ಇಗೋ ಬರುತ್ತದೆ' ಎಂದು ಸಿದ್ಧವಾಗಿರುತ್ತವೆ.

## ದೇಹಾಂತರವು ಕರ್ಮಫಲಭೋಗಕ್ಕಾಗಿ ಸಿದ್ಧವಾಗಿರುತ್ತದೆ

(ಭಾಷ್ಯ)

೨೪೮. ತತ್ರ ಅಸ್ಯ । ಇದಂ ಶರೀರಂ ಪರಿತ್ಯಜ್ಯ ಗಚ್ಛತಃ, ನಾನ್ಯಸ್ಯ ದೇಹಾನ್ತರಸ್ಯ ಉಪಾದಾನೇ ಸಾಮರ್ಥ್ಯಮಸ್ತಿ । ದೇಹೇನ್ದ್ರಿಯವಿಯೋಗಾತ್। ನ ಚ ಅನ್ಯೇ ಅಸ್ಯ ಭೃತ್ಯಸ್ಥಾನೀಯಾ ಗೃಹಮಿವ ರಾಜ್ಞೇ ಶರೀರಾನ್ತರಂ

1. 'ಸಂಪ್ರಮುಚ್ಯ' ಎಂಬಲ್ಲಿ ಬೇರೆಬೇರೆಯ ಸ್ಥಾನಗಳಲ್ಲಿರುವ ಕರಣಗಳನ್ನು ಒಂದುಗೂಡಿಸಿಕೊಂಡು ಎಂಬಿದನ್ನು 'ಸಮ್' ಎಂಬ ಉಪಸರ್ಗವು ಹೇಳುತ್ತದೆ; ಸ್ವಪ್ನದಲ್ಲಿ ಪ್ರಾಣವನ್ನು ಬಿಟ್ಟುಹೋಗಿರುತ್ತಾನೆ, ಇಲ್ಲಿ ಪ್ರಾಣದೊಡನೆಯೇ ಹೋಗುತ್ತಾನೆ ಎಂಬಿದನ್ನು 'ಪ್ರ' ಎಂಬಿದು ಹೇಳುತ್ತದೆ; ಆಯಾ ಸ್ಥಾನಗಳಲ್ಲಿ ಕರಣಗಳನ್ನು ವಿಂಗಡಿಸಿಟ್ಟುಕೊಳ್ಳದಿದ್ದರೆ ಕರ್ಮಗಳನ್ನು ಮಾಡುವದಕ್ಕೆ ಸಾಮರ್ಥ್ಯವಿರುವದಿಲ್ಲವಾದ್ದರಿಂದ ಪ್ರಾಣಕ್ಕೇ ಎಂದರೆ ಕರಣಗಳನ್ನು ವಿಂಗಡಿಸಿಕೊಳ್ಳುವದಕ್ಕೆ ಎಂದೇ ಅರ್ಥ - ಎಂದು ವಾರ್ತಿಕ ೧೯೪೫, ೧೯೪೬, ೧೯೫೩.

ಕೃತ್ವಾ ಪ್ರತೀಕ್ಷಮಾಣಾ ವಿದ್ಯನ್ತೇ। ಅಥೈವಂ ಸತಿ ಕಥಮ್ ಅಸ್ಯ ಶರೀರಾನ್ತರೋಪಾದಾನಮಿತಿ? ಉಚ್ಯತೇ । ಸರ್ವಂ ಹಿ ಅಸ್ಯ ಜಗತ್ ಸ್ವಕರ್ಮಫಲೋಪಭೋಗಸಾಧನತ್ವಾಯ ಉಪಾತ್ತಮ್। ಸ್ವಕರ್ಮಫಲೋಪಭೋಗಾಯ ಚ ಅಯಂ ಪ್ರವೃತ್ತೋ ದೇಹಾದ್ ದೇಹಾನ್ತರಂ ಪ್ರತಿಪಿತ್ಸುಃ। ತಸ್ಮಾತ್ ಸರ್ವಮೇವ ಜಗತ್ ಸ್ವಕರ್ಮಣಾ ಪ್ರಯುಕ್ತಂ ತತ್ಕರ್ಮಫಲೋಪಭೋಗಯೋಗ್ಯಂ ಸಾಧನಂ ಕೃತ್ವಾ ಪ್ರತೀಕ್ಷತ ಏವ। "ಕೃತಂ ಲೋಕಂ ಪುರುಷೋಽಭಿಜಾಯತೇ" (ಶತ. ಬ್ರಾ. ೬–೨–೨–೨೭) ಇತಿ ಶ್ರುತೇಃ। ಯಥಾ ಸ್ವಪ್ನಾಜ್ಜಾಗರಿತಂ ಪ್ರತಿಪಿತ್ಸೋಃ ॥

(ಭಾಷ್ಯಾರ್ಥ)

(ಆಕ್ಷೇಪ) :– ಇಲ್ಲಿ ಈ ಶರೀರವನ್ನು ಬಿಟ್ಟುಹೋಗುತ್ತಿರುವ ಇವನಿಗೆ ಮತ್ತೊಂದು ದೇಹವನ್ನು ತೆಗೆದುಕೊಳ್ಳುವದಕ್ಕೆ ಶಕ್ತಿಯಿರುವದಿಲ್ಲ; ಏಕೆಂದರೆ (ಅದಕ್ಕೆ ಬೇಕಾದ) ದೇಹೇಂದ್ರಿಯಗಳು ಇರುವದಿಲ್ಲ. ಆಳುಗಳಂತೆ ಇರುವ ಮತ್ತೊಬ್ಬರು ಯಾರೂ– ಅರಸನಿಗೆ ಮನೆಯನ್ನು (ಮಾಡಿಕೊಂಡಿರುವವರಂತೆ)– ಮತ್ತೊಂದು ಶರೀರವನ್ನು ಮಾಡಿಕೊಂಡು (ಇವನನ್ನು) ಎದುರು ನೋಡುತ್ತಾ ಇರುವದೂ ಇಲ್ಲ. ಇನ್ನು ಹೀಗಿರುವಲ್ಲಿ ಇವನು ಮತ್ತೊಂದು ಶರೀರವನ್ನು ತೆಗೆದುಕೊಳ್ಳುವದು ಹೇಗೆ ?

(ಪರಿಹಾರ) :– (ಇದಕ್ಕೆ) ಹೇಳುತ್ತೇವೆ. ಇವನಿಗೆ ತನ್ನ ಕರ್ಮದ ಫಲವನ್ನು ಉಪಭೋಗಿಸುವದಕ್ಕೆ ಸಾಧನವಾಗಿರಲೆಂದು ಇಡಿಯ ಜಗತ್ತೇ ಸ್ವೀಕೃತವಾಗಿರುತ್ತದೆಯಲ್ಲವೆ? ಇವನು ತನ್ನ ಕರ್ಮಫಲವನ್ನು ಉಪಭೋಗಿಸುವದಕ್ಕಾಗಿಯೇ (ಈ) ದೇಹದಿಂದ ಮತ್ತೊಂದು ದೇಹವನ್ನು ಪಡೆಯಬೇಕೆಂದು ಹೊರಟಿರುತ್ತಾನೆ.[1] ಆದ್ದರಿಂದ ಇಡಿಯ ಜಗತ್ತೇ ಇವನ ಕರ್ಮದಿಂದ ಪ್ರೇರಿತವಾಗಿ ಇವನ ಕರ್ಮಫಲದ ಉಪಭೋಗಕ್ಕೆ ತಕ್ಕ ಸಾಧನವನ್ನು ಮಾಡಿಕೊಂಡು ನಿರೀಕ್ಷಿಸುತ್ತಲೇ ಇರುತ್ತದೆ.[2] "ಮಾಡಿರುವ ಲೋಕದಲ್ಲಿಯೇ ಪುರುಷನು ಹುಟ್ಟುತ್ತಾನೆ"[3] (ಶತ. ಬ್ರಾ. ೬–೨–೨–೨೭) ಎಂಬ ಶ್ರುತಿಯಿಂದ (ಹೀಗೆಂದು ತಿಳಿಯಬಹುದಾಗಿದೆ).

---

1. ಒಂದೊಂದು ಶರೀರಕ್ಕೂ ಹಿಂದೆ ಮಾಡಿದ ಕರ್ಮಭಾಗದ ಫಲವನ್ನು ಅನುಭವಿಸುವದಕ್ಕೆ ಬರುತ್ತಾನೆ.

2. ಹೀಗಿದ್ದರೂ ದೇಹಕ್ಕೆ ಬೇಕಾದ ಭೂತಸೂಕ್ಷ್ಮಗಳನ್ನು ತೆಗೆದುಕೊಂಡೇ ಹೋಗುತ್ತಾನೆ; ಅವುಗಳಿಂದಲೇ ಹೊಸ ದೇಹವಾಗುತ್ತದೆ. ಮುಂದೆ ೪–೪–೪ನ್ನು ನೋಡಿ.

3. ಮೊದಲೇ ನಿರ್ಮಿತವಾಗಿರುವ ದೇಹದಲ್ಲಿಯೇ ಹುಟ್ಟುತ್ತಾನೆ ಎಂದರ್ಥ.

# ಸಂಸಾರಿಯನ್ನು ಭೋಗಸಾಮಗ್ರಿಗಳು ನಿರೀಕ್ಷಿಸುವದಕ್ಕೆ ದೃಷ್ಟಾಂತ

(ಭಾಷ್ಯ)

೨೪೯. ತತ್ಕಥಮ್ ಇತಿ ಲೋಕಪ್ರಸಿದ್ಧೋ ದೃಷ್ಟಾನ್ತಃ ಉಚ್ಯತೇ । ತತ್ ತತ್ರ ಯಥಾ ರಾಜಾನಂ ರಾಜ್ಯಾಭಿಷಿಕ್ತಮ್ ಆಯಾನ್ತಂ ಸ್ವರಾಷ್ಟ್ರೇ ಉಗ್ರಾಃ ಜಾತಿವಿಶೇಷಾಃ ಕ್ರೂರಕರ್ಮಾಣೋ ವಾ । ಪ್ರತ್ಯೇನಸಃ ಪ್ರತಿ ಪ್ರತಿ ಏನಸಿ ಪಾಪಕರ್ಮಣಿ ನಿಯುಕ್ತಾಃ ಪ್ರತ್ಯೇನಸಃ । ತಸ್ಕರಾದಿದಣ್ಡನಾದೌ ನಿಯುಕ್ತಾಃ । ಸೂತಾಶ್ಚ ಗ್ರಾಮಣ್ಯಶ್ಚ ಸೂತಗ್ರಾಮಣ್ಯಃ । ಸೂತಾಃ ವರ್ಣ ಸಂಕರಜಾತಿವಿಶೇಷಾಃ, ಗ್ರಾಮಣ್ಯಃ ಗ್ರಾಮನೇತಾರಃ । ತೇ ಪೂರ್ವಮೇವ ರಾಜ್ಞ ಆಗಮನಂ ಬುದ್ಧ್ವಾ ಅನ್ನೈಃ ಭೋಜ್ಯಭಕ್ಷ್ಯಾದಿಪ್ರಕಾರೈಃ ಪಾನೈಃ ಮದಿರಾದಿಭಿಃ ಆವಸಥೈಶ್ಚ ಪ್ರಾಸಾದಾದಿಭಿಃ ಪ್ರತಿಕಲ್ಪನ್ತೇ ನಿಷ್ಪನ್ನೈರೇವ ಪ್ರತೀಕ್ಷನ್ತೇ ಅಯಂ ರಾಜಾ ಆಯಾತಿ, ಅಯಮ್ ಆಗಚ್ಛತಿ– ಇತಿ ಏವಂ ವದನ್ತಃ । ಯಥಾ ಅಯಂ ದೃಷ್ಟಾನ್ತಃ ಏವಂ ಹ ಏವಂವಿದಂ ಕರ್ಮಫಲಸ್ಯ ವೇದಿತಾರಂ ಸಂಸಾರಿಣಮ್ ಇತ್ಯರ್ಥಃ । ಕರ್ಮಫಲಂ ಹಿ ಪ್ರಸ್ತುತಮ್ । ತತ್ ಏವಂಶಬ್ದೇನ ಪರಾಮೃಶ್ಯತೇ । ಸರ್ವಾಣಿ ಭೂತಾನಿ ಶರೀರಕರ್ತೄಣಿ ಕರಣಾನುಗ್ರಹೀತೄಣಿ ಚ ಆದಿತ್ಯಾದೀನಿ, ತತ್ಕರ್ಮಪ್ರಯುಕ್ತಾನಿ ಕೃತೈರೇವ ಕರ್ಮಫಲೋಪಭೋಗಸಾಧನೈಃ ಪ್ರತೀಕ್ಷನ್ತೇ । ಇದಂ ಬ್ರಹ್ಮ ಭೋಕ್ತೃ ಕರ್ತೃ ಚ ಅಸ್ಮಾಕಮ್ ಆಯಾತಿ । ತಥಾ ಇದಮ್ ಆಗಚ್ಛತಿ ಇತಿ ಏವ ಮೇವ ಚ ಕೃತ್ವಾ ಪ್ರತೀಕ್ಷನ್ತೇ ಇತ್ಯರ್ಥಃ ॥

(ಭಾಷ್ಯಾರ್ಥ)

ಅದು ಹೇಗೆ ಎಂಬುದನ್ನು (ತಿಳಿಸುವದಕ್ಕೆ) ಲೋಕದಲ್ಲಿ ಪ್ರಸಿದ್ಧವಾಗಿ ರುವ ದೃಷ್ಟಾಂತವನ್ನು ಹೇಳಲಾಗುತ್ತದೆ. (ತತ್= ತತ್ರ) ಇಲ್ಲಿ ಹೇಗೆ ರಾಜ್ಯಾಭಿಷಿಕ್ತನಾದ ರಾಜನು ತನ್ನ ರಾಷ್ಟ್ರದಲ್ಲಿ ಬರುತ್ತಿರುವಾಗ ಉಗ್ರರು (ಉಗ್ರರೆಂಬ) ಒಂದಾನೊಂದು ಜಾತಿಯವರು, ಅಥವಾ ಕ್ರೂರಕರ್ಮದಲ್ಲಿ (ನಿಯುಕ್ತರಾದವರು), ಪ್ರತ್ಯೇನಸರಾದ (ಉಗ್ರರು)– ಒಂದೊಂದು ಏನಸ್ಸಿನ ವಿಷಯದಲ್ಲಿಯೂ (ಪ್ರತಿಯೊಂದು) ಪಾಪಕರ್ಮದಲ್ಲಿಯೂ (ಶಿಕ್ಷಿಸುವದ ಕ್ಕೆಂದು) ನಿಯುಕ್ತರಾದವರಾದ್ದರಿಂದ ಪ್ರತ್ಯೇನಸರಾದವರು ಎಂದಿದೆ– ಕಳ್ಳರೇ ಮುಂತಾದವರನ್ನು ದಂಡಿಸುವದೇ ಮುಂತಾದ (ಕರ್ಮದಲ್ಲಿ) ನಿಯುಕ್ತರಾದ ವರು (ಎಂದರ್ಥ) ; ಸೂತಗ್ರಾಮಣ್ಯರು ಎಂದರೆ ಸೂತರೂ ಗ್ರಾಮಣ್ಯರೂ

ಸೂತರೆಂಬುವರು ವರ್ಣಸಂಕರ(ದಿಂದ ಹುಟ್ಟಿದ) ಒಂದಾನೊಂದು ಜಾತಿಯವರು[1], ಗ್ರಾಮಣ್ಯರು ಎಂದರೆ ಊರಿಗೆ ನಾಯಕರು–[2] ಇವರು ರಾಜನು ಬರುತ್ತಿದ್ದಾನೆಂಬುದನ್ನು ಮೊದಲೇ ತಿಳಿದುಕೊಂಡು ಅನ್ನಗಳಿಂದಲೂ ಎಂದರೆ ಭೋಜ್ಯ, ಭಕ್ಷ್ಯ ಮುಂತಾದವುಗಳಿಂದಲೂ, ಪಾನಗಳಿಂದಲೂ ಎಂದರೆ ಮದ್ಯವೇ ಮುಂತಾದವುಗಳಿಂದಲೂ ; ವಾಸಸ್ಥಾನಗಳಿಂದಲೂ ಎಂದರೆ ಉಪ್ಪರಿಗೆಯ ಮನೆ ಮುಂತಾದವುಗಳಿಂದಲೂ (ಕೂಡಿ) ಸಿದ್ಧರಾಗಿರುವರೋ ಮೊದಲೇ ಸಜ್ಜಾಗಿರುವ (ಅನ್ನಾ)ದಿಗಳಿಂದೊಡಗೂಡಿ ಕಾಯುತ್ತಿರುವರೋ, 'ಇಗೋ ರಾಜನು ಬರುತ್ತಾನೆ, ಇಗೊ ಬರುತ್ತಾನೆ' – ಎಂದಿಂತು ಹೇಳಿಕೊಳ್ಳುತ್ತಾ (ಅವನ ಬರವನ್ನೇ) ನಿರೀಕ್ಷಿಸಿಕೊಂಡಿರುವರೋ, ಈ ದೃಷ್ಟಾಂತವು ಹೇಗೋ ಹಾಗೆಯೇ ಹೀಗೆಂದರಿತಿರುವವನನ್ನು ಕರ್ಮಫಲವನ್ನು ಬಲ್ಲ[3] ಸಂಸಾರಿಯನ್ನು ಎಂದರ್ಥ. ಕರ್ಮಫಲವಲ್ಲವೆ, ಇಲ್ಲಿ ಪ್ರಸ್ತುತವಾಗಿದೆ[4] ? ಅದನ್ನೇ ಏವಂ (ಹೀಗೆ) ಎಂಬ ಶಬ್ದದಿಂದ ಪರಾಮರ್ಶಿಸಿರುತ್ತದೆ. (ಅವನನ್ನು) ಸರ್ವಭೂತಗಳೂ ಎಂದರೆ ಶರೀರವನ್ನುಂಟುಮಾಡುವ (ಭೂತಗಳೂ) ಕರಣಕ್ಕೆ ಅನುಗ್ರಾಹಕರಾದ ಆದಿತ್ಯಾದಿಗಳೂ ಅವನ ಕರ್ಮದಿಂದ ಪ್ರೇರಿತರಾಗಿ (ಮೊದಲೇ) ಮಾಡಿರುವ ಕರ್ಮಫಲದ ಉಪಭೋಗದ ಸಾಧನಗಳಿಂದ ಕಾದುಕೊಂಡಿರುವರು ; 'ಇಗೊ, ಬ್ರಹ್ಮವು, ಭೋಕ್ತೃವೂ ಕರ್ತೃವೂ ಆದ[5] (ಈ) ನಮ್ಮ (ಬ್ರಹ್ಮವು) ಬರುತ್ತಿದೆ, ಇಗೊ, ಬ್ರಹ್ಮವು ಬರುತ್ತಿದೆ' ಎಂದು ಹೀಗೆಯೇ (ಮನಸ್ಸಿನಲ್ಲಿ) ಮಾಡಿಕೊಂಡು ಕಾದುಕೊಂಡಿರುವರು ಎಂದರ್ಥ.

---

1. ಬ್ರಾಹ್ಮಣಿಯಲ್ಲಿ ಕ್ಷತ್ರಿಯನಿಂದ ಹುಟ್ಟಿದವನು ಸೂತನು, ರಥವನ್ನು ನಡೆಸುವ ಉದ್ಯೋಗದವರು ಎಂದು ವಾರ್ತಿಕ.

2. ಪಟೇಲರು ಮುಂತಾದವರಿರಬಹುದು. ಸೇನಾಪತಿಗಳು ಎಂದು ವಾರ್ತಿಕ.

3. ನನ್ನ ಕರ್ಮಕ್ಕೆ ಫಲವಾಗುವದು ಎಂಬ ವಾಸನೆಯಿಂದಲೇ ಸಂಸಾರಿಯು ಕರ್ಮವನ್ನು ಮಾಡಿರುತ್ತಾನೆ.

4. ಈ ಉತ್ಕ್ರಾಂತಿಮಾರ್ಗವನ್ನು ಉಪಾಸನೆಮಾಡುವವನೇನೂ ಪ್ರಕೃತವಾಗಿಲ್ಲ ಎಂದರ್ಥ. ವಾರ್ತಿಕದಲ್ಲಿ ಹೀಗೆಂದು ಉಪಾಸನೆಮಾಡಬೇಕೆಂಬ ಪ್ರಾಸಂಗಿಕವಿಧಿಯನ್ನೂ ಅಂಗೀಕರಿಸಿದೆ.

5. ಕರ್ತೃಭೋಕ್ತೃವನ್ನೇ ಇಲ್ಲಿ ಬ್ರಹ್ಮವು ಎಂದಿದೆ ಎಂದು ಅಭಿಪ್ರಾಯ ; ಇವನು ನಿಜವಾಗಿ ಬ್ರಹ್ಮವೇ ಆದರೂ ಹೀಗೆ ಕರ್ತೃವಾಗಿ ಅಲೆಯುತ್ತಿರುವನು. ಇವನಿಗೆ ಬ್ರಹ್ಮಜ್ಞಾನವಾಗಲಿ ಎಂಬ ಕನಿಕರದಿಂದ ಶ್ರುತಿಯು ಬ್ರಹ್ಮಶಬ್ದವನ್ನು ಪಯೋಗಿಸಿದೆ ಎಂದು ವಾರ್ತಿಕ.

## ಪ್ರಾಣಗಳೆಲ್ಲವೂ ಮರಣಕಾಲದಲ್ಲಿ ಜೀವನನ್ನು ಹಿಂಬಾಲಿಸುವವು

(ಉಪನಿಷತ್ತು)

**ತದ್ಯಥಾ ರಾಜಾನಂ ಪ್ರಯಿಯಾಸನ್ತಮುಗ್ರಾಃ ಪ್ರತ್ಯೇನಸಃ ಸೂತಗ್ರಾಮಣ್ಯೋಽಭಿಸಮಾಯನ್ತ್ಯೇವಮೇವೇಮಮಾತ್ಮಾನ ಮನ್ತಕಾಲೇ ಸರ್ವೇ ಪ್ರಾಣಾ ಅಭಿಸಮಾಯಾನ್ತಿ ಯತ್ರೈತ ದೂರ್ಧ್ವೋಚ್ಛ್ವಾಸೀ ಭವತಿ ॥ ೩೮ ॥**

೩೮. ಇಲ್ಲಿ ಹೇಗೆ ಹೊರಟುಹೋಗಲಿರುವ ರಾಜನನ್ನು ಪ್ರತ್ಯೇನಸರಾದ ಉಗ್ರರೂ ಸೂತಗ್ರಾಮಣ್ಯರೂ ಬಳಿಸಾರುವರೋ ಹಾಗೆಯೇ ಈ ಆತ್ಮನನ್ನು ಯಾವಾಗ ಹೀಗೆ ಮೇಲುಸಿರಿಡುವವನಾಗುತ್ತಾನೋ (ಆ) ಅಂತಕಾಲದಲ್ಲಿ ಪ್ರಾಣಗಳೆಲ್ಲವೂ ಬಳಿಸಾರುವವು.

## ಕಂಡಿಕೆಯ ಸಂಬಂಧವೂ ವ್ಯಾಖ್ಯಾನವೂ

(ಭಾಷ್ಯ)

೨೫೦. ತಮ್ ಏವಂ ಜಿಗಮಿಷುಂ ಕೇ ಸಹ ಗಚ್ಛನ್ತಿ ? ಯೇ ವಾ ಗಚ್ಛನ್ತಿ, ತೇ ಕಿಂ ತತ್ಕ್ರಿಯಾಪ್ರಣುನ್ನಾಃ, ಆಹೋಸ್ವಿತ್ ತತ್ಕರ್ಮವಶಾತ್ ಸ್ವಯಮೇವ ಗಚ್ಛನ್ತಿ ಪರಲೋಕಶರೀರಕರ್ತೄಣಿ ಚ ಭೂತಾನೀತಿ ? ಅತ್ರೋಚ್ಯತೇ ದೃಷ್ಟಾನ್ತಃ। ತದ್ ಯಥಾ ರಾಜಾನಂ ಪ್ರಯಿಯಾಸನ್ತಂ ಪ್ರಕರ್ಷೇಣ ಯಾತುಮಿಚ್ಛನ್ತಮ್ ಉಗ್ರಾಃ ಪ್ರತ್ಯೇನಸಃ ಸೂತಗ್ರಾಮಣ್ಯಃ ತಂ ಯಥಾ ಅಭಿಸಮಾಯನ್ತಿ ಆಭಿಮುಖ್ಯೇನ ಸಮಾಯಾನ್ತಿ ಏಕೀಭಾವೇನ ತಮ್ ಅಭಿಮುಖಾ ಆಯನ್ತಿ, ಅನಾಜ್ಞಪ್ತಾ ಏವ ರಾಜ್ಞಾ ಕೇವಲಂ ತಜ್ಜಿಗಮಿಷಾಭಿಜ್ಞಾಃ, ಏವಮೇವ ಇಮಮಾತ್ಮಾನಂ ಭೋಕ್ತಾರಮ್ ಅನ್ತಕಾಲೇ ಮರಣಕಾಲೇ ಸರ್ವೇ ಪ್ರಾಣಾಃ ವಾಗಾದಯಃ ಅಭಿಸಮಾಯಾನ್ತಿ। ಯತ್ರೈತದೂರ್ಧ್ವೋಚ್ಛ್ವಾಸೀ ಭವತಿ ಇತಿ ವ್ಯಾಖ್ಯಾತಮ್ ॥

(ಭಾಷ್ಯಾರ್ಥ)

ಹೀಗೆ ಹೊರಟುಹೋಗಲಿರುವ ಈ (ಜೀವನ) ಜೊತೆಯಲ್ಲಿ ಯಾರು ಹೋಗುವರು ? (ಜೊತೆಯಲ್ಲಿ) ಹೋಗುವವರಿದ್ದಾರಲ್ಲಾ, ಅವರು ಅವನ ಕ್ರಿಯೆಯಿಂದ ಪ್ರೇರಿತರಾಗಿ ಹೋಗುವರೊ, ಅಥವಾ ಅವನ ಕರ್ಮದ ವಶದಿಂದ

ತಾವೇ ಹೋಗುವರೊ ? ಮತ್ತೊಂದು ಜನ್ಮದ ಶರೀರವನ್ನು ಮಾಡುವ ಭೂತಗಳು (ಹೇಗೆ) ? –ಎಂದರೆ ಇದಕ್ಕೆ ದೃಷ್ಟಾಂತವನ್ನು ಹೇಳಲಾಗುತ್ತದೆ.

ಇಲ್ಲಿ ಹೊರಟುಹೋಗಲಿರುವ, ರಾಜನನ್ನು, ಪ್ರತ್ಯೇನಸರಾದ ಉಗ್ರರೂ ಸೂತಗ್ರಾಮಣ್ಯರೂ ರಾಜನು ಅವರಿಗೆ ಅಪ್ಪಣೆಮಾಡದೆ ಇದ್ದರೂ, ಅವನು ಹೊರಡಲಿಚ್ಛಿಸುತ್ತಾನೆಂದಿಷ್ಟೇ ತಿಳಿದಿದ್ದರೂ ಅವನನ್ನು ಹೇಗೆ ಬಳಿಸಾರುವರೋ (ಅಭಿಸಮಾಯನ್ತಿ ಎಂದರೆ) ಎದುರಿಗೆ ಬಂದು ಸಂಗತರಾಗುವರೋ, ಒಂದಾಗಿ ಅವನೆದುರಿಗೆ ಬರುವರೋ (ಎಂದರ್ಥ) , ಹಾಗೆಯೇ ಈ ಆತ್ಮನನ್ನು ಭೋಕ್ತೃವನ್ನು ಅಂತಕಾಲದಲ್ಲಿ ಸಾಯುವ ಕಾಲದಲ್ಲಿ ಪ್ರಾಣಗಳೆಲ್ಲವೂ ಎಂದರೆ ವಾಗಾದಿಗಳು, ಬಳಿಸಾರುವವು. 'ಯಾವಾಗ ಹೀಗೆ ಮೇಲುಸಿರಿಡುವವನಾಗುತ್ತಾನೋ' ಎಂಬುದನ್ನು ಹಿಂದೆಯೇ[1] ವ್ಯಾಖ್ಯಾನಮಾಡಿದ್ದಾಗಿದೆ.

---

1. ೪-೩-೩೫ರ ಭಾಷ್ಯ (ಪೂ. ಭಾ. ೩೪೪) ದಲ್ಲಿ

# ಮೂರನೆಯ ಬ್ರಾಹ್ಮಣದ ಸಾರ

ಹಿಂದಿನ ಬ್ರಾಹ್ಮಣದಲ್ಲಿ ಆಗಮಪ್ರಧಾನವಾಗಿ ತಿಳಿಸಿದ ಆತ್ಮಸ್ವರೂಪವನ್ನೇ ಈ ಬ್ರಾಹ್ಮಣದಲ್ಲಿ ಅವಸ್ಥಾತ್ರಯಪರೀಕ್ಷೆಯ ಮೂಲಕವಾಗಿ ಉಪಪತ್ತಿಯಿಂದ ನಿರ್ಧರಿಸಿರುತ್ತದೆ.

೧. ಯಾಜ್ಞವಲ್ಕ್ಯನು ಜನಕನ ಬಳಿಗೆ ಬಂದಾಗ ಮಾತಾಡುವದಿಲ್ಲವೆಂದೇ ಬಗೆದಿದ್ದನು. ಆದರೆ ಅಗ್ನಿಹೋತ್ರದ ವಿಷಯದಲ್ಲಿ ಹಿಂದೆ ಜನಕಯಾಜ್ಞವಲ್ಕ್ಯರಿಗೆ ಆಗಿದ್ದ ಸಂವಾದದ ಸಂದರ್ಭದಲ್ಲಿ ಯಾಜ್ಞವಲ್ಕ್ಯನು ಕೊಟ್ಟಿದ್ದ ಕಾಮಪ್ರಶ್ನೆಯ ವರವನ್ನು ಉಪಯೋಗಿಸಿಕೊಂಡು ಜನಕನೇ ಈಗ ಮುನಿಯನ್ನು ಪ್ರಶ್ನಿಸಿದನು.

೨-೬. ಅವರಿಬ್ಬರಿಗೂ ನಡೆದ ಸಂಭಾಷಣೆಯ ಸಾರವಿದು: 'ಯಾಜ್ಞವಲ್ಕ್ಯನೆ, ಈ ಪುರುಷನಿಗ ಬೆಳಕು ಯಾವದು?' ಆದಿತ್ಯನೇ ಬೆಳಕು, ಆದಿತ್ಯನ ಬೆಳಕಿನಿಂದಲೇ ಇವನು ವ್ಯವಹಾರವನ್ನು ಮಾಡುತ್ತಾನೆ. 'ಇದು ಸರಿ. ಆದರ ಆದಿತ್ಯನು ಅಸ್ತವಾದಾಗ?' ಚಂದ್ರನೇ. 'ಸೂರ್ಯಚಂದ್ರರಿಬ್ಬರೂ ಮುಳುಗಿದಾಗಲೂ?' ಬೆಂಕಿಯೇ. 'ಬೆಂಕಿಯು ಆರಿರುವಾಗ?' ವಾಕ್ಕೇ ಬಳಕು. ಆದ್ದರಿಂದಲೇ ಕತ್ತಲೆಯಲ್ಲಿ ವಾಕ್ಕಿನ ಉಚ್ಚಾರವನ್ನನುಸರಿಸಿ ವ್ಯವಹರಿಸುತ್ತಾನೆ. 'ಆದಿತ್ಯಾದಿಗಳೂ ವಾಕ್ಕೂ ಇಲ್ಲದಾಗಲೊ?' ಆಗ ಆತ್ಮನೇ ಬೆಳಕು. ಆತ್ಮನೆಂಬ ಬೆಳಕಿನಿಂದಲೇ ಕೂರುವದು, ನಡೆಯುವದು, ಕೆಲಸವನ್ನು ಮಾಡುವದು- ಮುಂತಾದ ವ್ಯವಹಾರವೆಲ್ಲ ಸಾಗುತ್ತದೆ.

೭-೧೪. 'ಆತ್ಮನೆಂದರೆ ಯಾರು?' ಪ್ರಾಣಗಳ ನಡುವೆ ಈ ವಿಜ್ಞಾನಮಯನಾಗಿ ಹೃದಯದಲ್ಲಿರುವ ಬೆಳಕಿನ ರೂಪದ ಪುರುಷನೇ ಆತ್ಮನು. ಅವನು ಅಂತಃಕರಣಸಾದೃಶ್ಯವನ್ನು ಹೊಂದಿ ಎರಡು ಲೋಕಗಳನ್ನೂ ಸಂಚರಿಸುತ್ತಿರುವನು, ಯೋಚಿಸುವವನಂತೆಯೂ ಚಲಿಸುವವನಂತೆಯೂ ಕಾಣಿಸುತ್ತಿರುವನು. ಅವನು ಹೀಗೆಯೇ ಸ್ವಪ್ನವನ್ನು ಹೊಂದಿ ಈ ಜಾಗ್ರಲ್ಲೋಕವನ್ನು ಮೀರಿ ಕಾರ್ಯಕರಣಗಳೆಂಬ ಮೃತ್ಯುರೂಪಗಳನ್ನು ದಾಟುತ್ತಾನೆ, ಹೀಗೆಯೇ ಹುಟ್ಟುವಾಗ ಶರೀರವನ್ನು ಪಡದು ಧರ್ಮಾಧರ್ಮಗಳ ಸಂಪರ್ಕವನ್ನು ಹೊಂದುತ್ತಾನೆ, ಸಾಯುವಾಗ ಅವುಗಳನ್ನು ಬಿಡುವನು

ಇವನಿಗೆ ಈ ಲೋಕ, ಪರಲೋಕ -ಎಂದು ಎರಡೇ ಸ್ಥಾನಗಳು. ಇವನು ಸ್ವಪ್ನವೆಂಬ ಸಂಧ್ಯಸ್ಥಾನದಲ್ಲಿದ್ದುಕೊಂಡು ಇವೆರಡನ್ನೂ ಕಾಣುತ್ತಿರುತ್ತಾನೆ. ಸ್ವಪ್ನದಲ್ಲಿ ಇವನ ವಿದ್ಯಾಕರ್ಮಪೂರ್ವಪ್ರಜ್ಞೆಗಳಿಗೆ ಅನುಗುಣವಾಗಿ ಆಯಾ ದೃಶ್ಯಗಳು ಕಾಣಿಸುತ್ತವೆ. ಜಾಗ್ರತ್ತಿನ ವಾಸನೆಯನ್ನು ತೆಗೆದುಕೊಂಡು ಸ್ವಪ್ನದೃಶ್ಯಗಳನ್ನು ನಿರ್ಮಿಸಿಕೊಳ್ಳುತ್ತಾನಾದ್ದರಿಂದ ಅವನ್ನೆಲ್ಲ ಬೆಳಗುತ್ತಿರುವ ಇವನು ಅಲ್ಲಿ ಸ್ವಯಂಜ್ಯೋತಿ ಎಂಬುದು ಸ್ಪಷ್ಟವಾಗಿ ಕಾಣಿಸುತ್ತದೆ. ಸ್ವಪ್ನದಲ್ಲಿ ತೋರುವ ರಥಾದಿಗಳು ಯಾವವೂ ನಿಜವಾಗಿ ಅಲ್ಲಿರುವದಿಲ್ಲ; ಅವೆಲ್ಲ ಇವನ ವಾಸನಾಮಯವಾದ ಕಲ್ಪನೆಗಳೇ. ಹೀಗೆ ಸುಪ್ತವಾಗಿರುವ ಆ ದೃಶ್ಯಗಳನ್ನು ತಾನು ಸುಪ್ತನಾಗದೆ ನೋಡುತ್ತಲೇ ಇರುತ್ತಾನೆ. ಪ್ರಾಣದಿಂದ ಜಾಗ್ರಚ್ಛರೀರವನ್ನು ರಕ್ಷಿಸಿ

ಕೊಂಡು, ತಾನು ಮಾತ್ರ ಅದನ್ನು ಬಿಟ್ಟು ತಾನೊಬ್ಬನೇ ಸ್ವೇಚ್ಛೆಯಿಂದ ಸ್ವಪ್ನಪ್ರಪಂಚದಲ್ಲಿ ಸಂಚರಿಸುತ್ತಿರುತ್ತಾನೆ. ಅಲ್ಲಿ ಅವನು ಬಗೆಬಗೆಯ ರೂಪಗಳನ್ನು ಮಾಡಿಕೊಂಡು ಬಗಬಗೆಯಿಂದ ವಿಹರಿಸುತ್ತಿರುವನಾದರೂ ಇಂಥ ಸ್ವಯಂಜ್ಯೋತಿಯನ್ನು ಲೋಕದ ಜನರು ಯಾರೂ ಅರಿತುಕೊಳ್ಳಲಾರದೆ ಇರುವರು.

ಹೀಗೆನ್ನಲು ಜನಕನು ಇದನ್ನು ಕೇಳಿ ಸಂತುಷ್ಟನಾಗಿ ‹ನಿನಗೆ ಸಾವಿರ ಗೋವುಗಳನ್ನು ಕೊಟ್ಟಿರುವೆನು ; ಇನ್ನುಮುಂದಕ್ಕೆ ವಿಮೋಕ್ಷಕ್ಕೆ ಬೇಕಾದ ಜ್ಞಾನವನ್ನೇ ಹೇಳು'' ಎಂದು ಕೇಳಿಕೊಂಡನು.

೧೫. ಈ ಆತ್ಮನಿಗೆ ಮೃತ್ಯುರೂಪವಾದ ಕಾರ್ಯಕರಣಗಳಿಲ್ಲವೆಂಬುದು ಮಾತ್ರವೇ ಅಲ್ಲ; ಇವನಿಗೆ ಮೃತ್ಯುವಿನ ಸಂಪರ್ಕವೂ ಇಲ್ಲವೆಂಬುದು ಸ್ವಪ್ನದ ಪರೀಕ್ಷೆಯಿಂದ ಗೊತ್ತಾಗುತ್ತದೆ. ಏಕೆಂದರೆ ಸುಷುಪ್ತಿಯಿಂದ ಸ್ವಪ್ನಕ್ಕೆ ಬಂದಾಗ ಅಲ್ಲಿ ಪುಣ್ಯಪಾಪಗಳನ್ನು ಇವನು ನೋಡುತ್ತಿರುವನೇ ಹೊರತು ಕರ್ಮವನ್ನೇನೂ ಮಾಡುತ್ತಿರುವದಿಲ್ಲ. ಇದು ಹೇಗೆ ಗೊತ್ತೆಂದರೆ ಅವನು ಸ್ವಪ್ನದಲ್ಲಿ ಮಾಡುವಂತೆ ಕಂಡದ್ದು ಯಾವದೂ ಎಚ್ಚರಕ್ಕೆ ಬಂದಾಗ ಅವನಿಗೆ ಅಂಟಿಕೊಂಡುಬಂದಿರುವದಿಲ್ಲ, ಇವನು ಅಸಂಗನಾಗಿರುವದೇ ಇದಕ್ಕೆ ಕಾರಣ. ಆದ್ದರಿಂದ ಇವನು ಅಮೃತನು.

ಹೀಗೆನ್ನಲು ಜನಕನು ಸಂತುಷ್ಟನಾಗಿ ‹ನಿನಗೆ ಸಾವಿರ ಗೋವುಗಳನ್ನು ಕೊಟ್ಟಿರುವೆನು. ಇನ್ನು ಮುಂದಕ್ಕೆ ವಿಮೋಕ್ಷಕ್ಕೆ ಬೇಕಾದ ಜ್ಞಾನವನ್ನೇ ಹೇಳು'' ಎಂದು ಕೇಳಿಕೊಂಡನು.

೧೬. ಸ್ವಪ್ನದಲ್ಲಿ ಇವನಿಗೆ ಕರ್ಮವಿಲ್ಲದಿದ್ದರೂ ಕಾಮವಾದರೂ ಇದೆಯಲ್ಲವೆ ? ಎಂದರೆ ಅದೂ ಇಲ್ಲ, ಏಕೆಂದರೆ ಸ್ವಪ್ನದಿಂದ ಮತ್ತೂ ಎಚ್ಚತ್ತಾಗ ಆ ಕಾಮದ ದೋಷಗಳು ಅವನಿಗೆ ಅಂಟಿಕೊಂಡು ಬರಬೇಕಾಗಿತ್ತು. ಆದ್ದರಿಂದ ಇವನು ಅಸಂಗನೆಂದು ಹೇಳಿದ್ದು ಸರಿಯೇ.

ಹೀಗೆನ್ನಲು ಜನಕನು ಸಂತುಷ್ಟನಾಗಿ ‹ನಿನಗೆ ಸಾವಿರ ಗೋವುಗಳನ್ನು ಕೊಟ್ಟಿರುವೆನು ಇನ್ನುಮುಂದಕ್ಕೆ ವಿಮೋಕ್ಷಕ್ಕೆ ಬೇಕಾದ ಜ್ಞಾನವನ್ನೇ ಹೇಳು !'' ಎಂದು ಕೇಳಿಕೊಂಡನು.

೧೭-೧೮. ಹೇಗೆ ಸ್ವಪ್ನದ ಸಂಗವು ಇವನಿಗೆ ಇಲ್ಲವೋ ಹಾಗೆಯೇ ಜಾಗ್ರತ್ತಿನ ಸಂಗವೂ ಇವನಿಗೆ ಇಲ್ಲ. ಏಕೆಂದರೆ ಇವನು ಮತ್ತೆ ಸ್ವಪ್ನಕ್ಕೆ ಬಂದಾಗ ಜಾಗ್ರತ್ತಿನ ಸಂಗದಿಂದಾದ ಯಾವ ದೋಷವೂ ಇವನಿಗೆ ಅಂಟಿರುವದಿಲ್ಲ. ಅಂತೂ ಹೀಗೆ ಈ ಆತ್ಮನು ನದಿಯ ಪ್ರವಾಹದ ಸೆಳೆತಕ್ಕೆ ಕಟ್ಟುಬೀಳದೆ ಒಂದು ದಡದಿಂದ ಮತ್ತೊಂದು ದಡಕ್ಕೆಹೋಗಿ ಬರುತ್ತಿರುವ ದೊಡ್ಡಮೀನಿನಂತೆ ಜಾಗ್ರತ್ತು, ಸ್ವಪ್ನ – ಇವುಗಳಲ್ಲಿ ಒಂದರಿಂದ ಒಂದಕ್ಕೆ ಹೋಗಿಬರುತ್ತಿರುತ್ತಾನೆ. ಆದ್ದರಿಂದ ಆತ್ಮನು ಸರ್ವಥಾ ಅಸಂಗನೇ ಎಂದಾಯಿತು.

೧೯-೨೦. ಇನ್ನು ಸುಷುಪ್ತಿಯ ವಿಚಾರ. ಗಿಡುಗನೋ ಸುಪರ್ಣವೋ ಆಕಾಶದಲ್ಲಿ ಹಾರಾಡುತ್ತಿದ್ದು ಬಳಲಿದಾಗ ರೆಕ್ಕೆಗಳನ್ನು ಮುದುರಿಕೊಂಡು ತನ್ನ ಗೂಡಿಗೇ ಬಂದು ಸೇರಿಕೊಳ್ಳುವಂತೆ ಜಾಗ್ರತ್ಸ್ವಪ್ನಗಳಲ್ಲಿ ತನಗಾದ ಶ್ರಮವನ್ನು ಪರಿಹರಿಸಿಕೊಳ್ಳುವದಕ್ಕಾಗಿ ಸುಷುಪ್ತಿಗೆ ಓಡಿಬರುತ್ತಾನೆ. ಆದ್ದರಿಂದ ಇವನು ಸರ್ವಕ್ರಿಯಾಕಾರಕಫಲಶೂನ್ಯಸ್ವಭಾವದವನು ಎಂದಾಯಿತು, ಜಾಗ್ರತ್ಸ್ವಪ್ನಗಳಲ್ಲಿ ಇವನಿಗೆ ತೋರುವ ಸಂಸಾರಧರ್ಮತ್ವವು ಅವಿದ್ಯಕವೆಂದೇ ಆಯಿತು.

ಸ್ವಪ್ನದಲ್ಲಿ ಇವನಿಗೆ ಅವಿದ್ಯೆಯು ಹೆಚ್ಚಾಗಿರುವಾಗ ಯಾರೋ ತನ್ನನ್ನು ಹೊಡೆಯು ವದಕ್ಕೆ ಬಂದಂತೆ, ಮೇಲೆ ಬಿದ್ದಂತೆ, ತೋರುವದು, ಆನೆಯು ಅಟ್ಟಿಕೊಂಡು ಬಂದಂತೆ ಯೂ ತಾನು ಗುಂಡಿಗೆ ಬಿದ್ದಂತೆಯೂ ಕಾಣುವದು ಹೀಗೆಯೇ ಎಚ್ಚರದಲ್ಲಾಗುವ ಭಯವೆಲ್ಲವೂ ಇಲ್ಲಿ ಕಾಣಿಸಿಕೊಳ್ಳುವದು. ಆದರೆ ಅವಿದ್ಯೆಯು ಕಡಿಮೆಯಾಗುತ್ತಾ ಬಂದಂತೆ ತಾನು ದೇವತೆಯಾಗಿರುವಂತೆಯೂ ರಾಜನಾಗಿರುವಂತೆಯೂ ಸರ್ವಾತ್ಮನಾಗಿರು ವಂತೆಯೂ ತೋರುವದು. ಇವುಗಳಲ್ಲಿ ಸರ್ವಾತ್ಮಭಾವವೇ ಪರಮಭೋಗವು. ಹೀಗೆ ಅವಿದ್ಯೆಯು ಹೆಚ್ಚುಕಡಿಮೆಯಾಗುತ್ತಿರುವದರಿಂದಲೂ ವಿದ್ಯೆಯಿಂದ ಸಂಪೂರ್ಣವಾಗಿ ತೊಲಗುವದರಿಂದಲೂ ಅವಿದ್ಯೆಯು ಆತ್ಮಧರ್ಮವಲ್ಲವೆಂದಾಯಿತು.

೨೧-೩೩. ಸುಷುಪ್ತಿಯಲ್ಲಿ ಯಾವ ಕಾಮವೂ ಇರುವದಿಲ್ಲ, ಧರ್ಮಾಧರ್ಮಗಳಿರು ವದಿಲ್ಲ, ಅವಿದ್ಯೆಯಿರುವದಿಲ್ಲ. ಒಬ್ಬನು ತನ್ನ ಪ್ರಿಯೆಯಿಂದ ಆಲಿಂಗಿತನಾಗಿರುವಾಗ ಒಳಗಾಗಲಿ ಹೊರಗಾಗಲಿ ಏನನ್ನೂ ಅರಿಯದಿರುವಂತೆ ಈ ಜೀವನು ಪ್ರಾಜ್ಞಾತ್ಮನಿಂದ ಆಲಿಂಗಿತನಾಗಿ ಒಂದಾಗಿರುವದರಿಂದ ಇಲ್ಲಿ ಏನನ್ನೂ ಅರಿಯದಿರುವನು. ಇದು ಯಾವ ಕಾಮವೂ ಶೋಕವೂ ಇಲ್ಲದ ಸ್ಥಿತಿಯು. ಇಲ್ಲಿ ತಂದೆ, ತಾಯಿ, ಲೋಕ, ದೇವ, ವೇದ- ಮುಂತಾದ ಸತ್ಕರ್ಮಸಂಬದ್ಧವಾದದ್ದು ಯಾವದೂ ಇರುವದಿಲ್ಲ, ಸ್ವರ್ಣಸ್ತೇಯ, ಭ್ರೂಣಹತ್ಯ, ಚಂಡಾಲತ್ವ, ಪುಲ್ಕಸತ್ವ -ಮುಂತಾದ ಅಶುಭಕರ್ಮಸಂಬಂಧವಾದದ್ದೂ ಇರುವದಿಲ್ಲ. ಯಾವ ವರ್ಣಾಶ್ರಮಧರ್ಮವೂ ಅಂಟಿರುವದಿಲ್ಲ. ಪಾಪಪುಣ್ಯಗಳು ಹಿಂಬಾಲಿ ಸಿರುವದಿಲ್ಲ ; ಹೃದಯಸಂಬದ್ಧವಾದ ಎಲ್ಲಾ ಶೋಕಗಳನ್ನೂ ಇವನು ದಾಟಿರುತ್ತಾನೆ.

ಇಲ್ಲಿ ಇವನು ಏನನ್ನೂ ನೋಡುವದಿಲ್ಲ, ಮೂಸುವದಿಲ್ಲ, ಸವಿಯುವದಿಲ್ಲ, ಮಾತಾಡು ವದಿಲ್ಲ, ಕೇಳುವದಿಲ್ಲ, ಮನನಮಾಡುವದಿಲ್ಲ, ಮುಟ್ಟುವದಿಲ್ಲ, ಅರಿಯುವದಿಲ್ಲ. ಆಗ ಇವನಿಗೆ ಅರಿಯುವ ಶಕ್ತಿಯಿರುವದಿಲ್ಲವೆಂದೇನೂ ಅಭಿಪ್ರಾಯವಲ್ಲ, ಏಕೆಂದರೆ ಅರಿವೇ ಇವನ ಸ್ವಭಾವವಾಗಿರುತ್ತದೆ. ಆದರೆ ಅರಿಯುವದಕ್ಕೆ ಬೇಕಾದ ಕರಣವಾಗಲಿ ಅದರಿಂದ ರಿಯಬೇಕಾದ ವಿಷಯವಾಗಲಿ ಇವನ ಸ್ವರೂಪಕ್ಕಿಂತ ಬಿಂಗಡವಾಗಿ ಬೇರೆಯಾಗಿರುವದಿಲ್ಲ. ಎಲ್ಲಿ ಮತ್ತೊಂದು ಇರುವಂತೆ ಅವಿದ್ಯೆಯಿಂದ ತೋರುವದೋ ಆ ಎಚ್ಚರಕನಸುಗಳಲ್ಲಿ ಬೇರೆಯಾಗಿದ್ದುಕೊಂಡು ತನಗಿಂತ ಬೇರೆಯಾಗಿ ತೋರುವ ಮತ್ತೊಂದನ್ನು ಅರಿಯಬಹು ದಾಗಿರುತ್ತದೆ; ಆದರೆ ಇಲ್ಲಿ ಎಲ್ಲವೂ ಒಂದೇ ಆಗಿಬಿಟ್ಟಿರುವದರಿಂದ ಹಾಗಾಗುವಂತಿರು ವದಿಲ್ಲ. ತಿಳಿನೀರಿನಂತೆ ಸ್ವಚ್ಛನಾಗಿ, ಅದ್ವೈತನಾದ ದ್ರಷ್ಟೃವಾಗಿರುತ್ತಾನೆ. ಇದೇ ಬ್ರಹ್ಮ ಲೋಕವು, ಇದೇ ಜೀವನ ಪರಮಗತಿಯು, ಇದೇ ಇವನಿಗೆ ಪರಮಸಂಪತ್ತು, ಇದೇ ಇವನ ಪರಮಲೋಕವು, ಇದೇ ಇವನ ಪರಮಾನಂದವು. ಇದರ ಅಂಶವನ್ನೇ ಮಿಕ್ಕ ಪರಿಚ್ಛಿನ್ನಭೂತಗಳು ಉಪಜೀವಿಸಿಕೊಂಡಿರುವವು. ಮನುಷ್ಯರು, ಪಿತೃಗಳು, ಗಂಧರ್ವರು, ಕರ್ಮದೇವತೆಗಳು, ಆಜಾನದೇವತೆಗಳು, ಪ್ರಜಾಪತಿಲೋಕ, ಬ್ರಹ್ಮಲೋಕ - ಇವು ಗಳಲ್ಲಿರುವ ಆನಂದಗಳು ಒಂದಕ್ಕಿಂತ ಒಂದು ನೂರ್ಮಡಿಯಾಗಿರುವವು. ಇವುಗಳಲ್ಲಿ ಕೆಳಗಿನ ಮಟ್ಟದ ಆನಂದಗಳಲ್ಲಿ ವಿರಕ್ತನಾಗಿ ಶ್ರೋತ್ರಿಯನೂ ಪಾಪರಹಿತನೂ ಆಗಿರುವವನಿಗೆ ಮೇಲುಮೇಲಿನ ಆನಂದಗಳು ಅನುಭವಕ್ಕೆ ಬರುವವು. ಆದರೆ ಈಗ ನಾನು ಹೇಳಿರುವ ಸೌಷುಪ್ತಾನಂದವೆಂಬ ಪರಮಾನಂದವೇ ಎಲ್ಲಕ್ಕೂ ಮಿಗಿಲಾದದ್ದು ; ಇದೇ ಬ್ರಹ್ಮಲೋಕವು.

ಹೀಗೆನ್ನಲು ಜನಕನು ಸಂತುಷ್ಟನಾಗಿ 'ನಿನಗೆ ಸಾವಿರಗೋವುಗಳನ್ನು ಕೊಟ್ಟಿರುವೆನು, ಇನ್ನುಮುಂದಕ್ಕೆ ವಿಮೋಕ್ಷಕ್ಕೆ ಬೇಕಾದ ಜ್ಞಾನವನ್ನೇ ಹೇಳು' ಎಂದನು. ರಾಜನು

ಕಾಮಪ್ರಶ್ನೆಯ ನೆಪದಿಂದ ನನ್ನ ವಿದ್ಯೆಯನ್ನೆಲ್ಲ ಸೆಳೆದುಕೊಳ್ಳುತ್ತಿದಾನಲ್ಲ- ಎಂದು ಯಾಜ್ಞವಲ್ಕ್ಯನಿಗೆ ಈಗ ಭಯವಾಯಿತು.

೩೪-೩೮. ಈಗ ಈ ಜಾಗ್ರದಾದ್ಯವಸ್ಥೆಗಳಿಗೆ ದಾರ್ಷ್ಟಾಂತಿಕವಾಗಿ ಬಂಧಮೋಕ್ಷಗಳನ್ನು ತಿಳಿಸುವೆನು ಕೇಳು ಎಂದು ಯಾಜ್ಞವಲ್ಕ್ಯನು ಪ್ರಾರಂಭಿಸಿದನು. ಹಿಂದೆ ಹೇಳಿದಂತೆ ಸ್ವಪ್ನಾವಸ್ಥೆಯಲ್ಲಿ ಬಗೆಬಗೆಯಾಗಿ ವಿಹರಿಸಿದ ಜೀವನು ಎಚ್ಚರಕ್ಕೆ ಬರುತ್ತಾನಷ್ಟೆ. ಅಲ್ಲಿ ಯಾವಾಗ ಅವನಿಗೆ ಮೇಲುಸಿರಿಡುವದೋ ಆಗ ಸಾಮಾನುಗಳನ್ನು ತುಂಬಿದ ಬಂಡಿಯು ಶಬ್ದಮಾಡುತ್ತಾ ಬಂಡಿಯವನು ಮೇಲಿರಲು ಮುನ್ನಡೆಯುವಂತೆ ಪ್ರಾಜ್ಞಾತ್ಮನು ಮೇಲಿರಲು ಈ ಆತ್ಮನೂ ಶಬ್ದವಮಾಡುತ್ತಾ ಮುನ್ನಡೆಯುವನು. ಮಾವಿನಹಣ್ಣು, ಅತ್ತಿಯಹಣ್ಣು, ಅರಳಿಹಣ್ಣು- ಮುಂತಾದವುಗಳು ಪಕ್ವವಾದಾಗ ಬಗೆಬಗೆಯ ನಿಮಿತ್ತಗಳಿಂದ ಕಳಚಿ ಬೀಳುವಂತೆ ಇವನು ಮುಪ್ಪಿನಿಂದಲೋ ಬೇನೆ ಮುಂತಾದದ್ದರಿಂದಲೋ ಬಡಕಲಾಗಿ ಕೈಕಾಲುಗಳನ್ನು ಬಿಟ್ಟು ಮತ್ತೊಂದು ಶರೀರಕ್ಕೆ ಹೋಗುವನು. ಇವನ ಕರ್ಮದಿಂದ ಪ್ರೇರಿತವಾದ ಭೂತಗಳೂ ದೇವತೆಗಳೂ ರಾಜನ ಆಗಮನವನ್ನು ಪರೀಕ್ಷಿಸುತ್ತಿರುವ ಭೃತ್ಯರಂತೆ ಕೂಡಲೆ ಅಲ್ಲಿಗೆ ಬಂದು ದೇಹವನ್ನೇರ್ಪಡಿಸುವವು. ಇವನು ಮರಣವೇಳೆಯಲ್ಲಿ ಯಾವ ಕ್ರಿಯೆಯನ್ನೂ ಮಾಡದಿದ್ದರೂ ಕರ್ಮಪ್ರೇರಿತವಾದ ಕರಣಗಳೆಲ್ಲವೂ ಭೂತಮಾತ್ರೆಗಳೂ, ಇವನ ಹಿಂದೆಯೇ ರಾಜನು ಹೊರಟರೆ ಭೃತ್ಯರು ತಾವೇ ಅರಿತುಕೊಂಡು ಜೊತೆಯಲ್ಲಿರುವಂತೆ, ಜೊತೆಯಲ್ಲಿಯೇ ಬಂದಿರುವವು.

ಮಿಕ್ಕ ಸಂಸಾರದ ಪ್ರಕಾರವೂ ಮೋಕ್ಷಸ್ವರೂಪವೂ ಮುಂದಿನ ಬ್ರಾಹ್ಮಣದಲ್ಲಿ ವರ್ಣಿತವಾಗಿರುತ್ತವೆ.

---

# ನಾಲ್ಕನೆಯ ಅಧ್ಯಾಯ-ನಾಲ್ಕನೆಯ ಬ್ರಾಹ್ಮಣ

(ಸಂಸಾರಮೋಕ್ಷಗಳ ವರ್ಣನೆ ಮುಂದುವರಿದದ್ದು)

## ಮುಂದಿನ ಗ್ರಂಥದ ಸಂಬಂಧ

(ಭಾಷ್ಯ)

೨೫೧. ಸ ಯತ್ರಾಯಮಾತ್ಮಾ। ಸಂಸಾರೋಪವರ್ಣನಂ ಪ್ರಸ್ತುತಮ್ । ತತ್ರ "ಅಯಂ ಪುರುಷ ಏಭ್ಯೋಽಙ್ಗೇಭ್ಯಃ ಸಂಪ್ರಮುಚ್ಯ" (೪-೩-೩೬) ಇತ್ಯುಕ್ತಮ್ । ತತ್ಸಂಪ್ರಮೋಕ್ಷಣಂ ಕಸ್ಮಿನ್ ಕಾಲೇ ಕಥಂ ವಾ ಇತಿ ಸವಿಸ್ತರಂ ಸಂಸರಣಂ ವರ್ಣಯಿತವ್ಯಮ್ ಇತ್ಯಾರಭ್ಯತೇ ॥

(ಭಾಷ್ಯಾರ್ಥ)

'ಸ ಯತ್ರಾಯಮಾತ್ಮಾ' (ಎಂಬ ಬ್ರಾಹ್ಮಣವು ಆರಂಭವಾಗಿದೆ). ಸಂಸಾರದ ಉಪವರ್ಣನೆಯು ಪ್ರಾರಂಭವಾಗಿರುತ್ತದೆ. ಅಲ್ಲಿ 'ಈ ಪುರುಷನು ಈ ಅಂಗಗಳಿಂದ ಬಿಟ್ಟುಕೊಂಡು ' (೪-೩-೩೬) ಎಂದು ಹೇಳಿದೆಯಷ್ಟೆ. ಆ ಬಿಟ್ಟುಕೊಳ್ಳುವದೆಂಬುದು ಯಾವ ಕಾಲದಲ್ಲಿ, ಮತ್ತು ಹೇಗೆ? -ಎಂದು ವಿಸ್ತಾರವಾಗಿ ಸಂಸರಣವನ್ನು ವರ್ಣಿಸೋಣವೆಂದು (ಮುಂದಿನ ಗ್ರಂಥವನ್ನು) ಆರಂಭಿಸಿರುತ್ತದೆ.

## ಉತ್ಕ್ರಾಂತಿಕಾಲಕ್ಕೆ ಜೀವನು ಪ್ರಾಣಗಳೊಡನೆ ಹೃದಯವನ್ನು ಸೇರಿಕೊಳ್ಳುತ್ತಾನೆ

(ಉಪನಿಷತ್ತು)

**ಸ ಯತ್ರಾಯಮಾತ್ಮಾಽಬಲ್ಯಂ ನ್ಯೇತ್ಯ ಸಂಮೋಹಮಿವ ನ್ಯೇತ್ಯಥೈನಮೇತೇ ಪ್ರಾಣಾ ಅಭಿಸಮಾಯಾನ್ತಿ ಸ ಏತಾಸ್ತೇಜೋಮಾತ್ರಾಃ ಸಮಭ್ಯಾದದಾನೋ ಹೃದಯಮೇವಾನ್ವವಕ್ರಾಮತಿ ಸ ಯತ್ರೈಷ ಚಾಕ್ಷುಷಃ ಪುರುಷಃ ಪರಾಙ್ಪರ್ಯಾವರ್ತತೇಽಥಾರೂಪಜ್ಞೋ ಭವತಿ ॥೧॥**

೧. ಈ ಆತ್ಮನು ಯಾವಾಗ ಅಬಲ್ಯವನ್ನು ಹೊಂದಿ ಸಮ್ಮೋಹವನ್ನೇ ಹೊಂದಿದವನಂತಾಗುವನೋ ಆಗ ಇವನ ಬಳಿಗೆ ಈ ಪ್ರಾಣ

ಗಳು ಬರುವವು. ಅವನು ಈ ತೇಜೋಮಾತ್ರೆಗಳನ್ನು ಚೆನ್ನಾಗಿ ತೆಗೆದುಕೊಂಡವನಾಗಿ ಹೃದಯವನ್ನೇ ಬಂದು ಸೇರುತ್ತಾನೆ. ಈ ಚಾಕ್ಷುಷಪುರುಷನು ಯಾವಾಗ ಹೊರಕ್ಕೆ, ಎಲ್ಲಾ ಕಡೆಯಿಂದಲೂ, ತಿರುಗುವನೋ ಆಗ ಇವನು ಅರೂಪಜ್ಞನಾಗುವನು.

## ಜೀವನು ಅಂಗಗಳಿಂದ ಬಿಟ್ಟುಕೊಳ್ಳುವದು ಯಾವಾಗ?

(ಭಾಷ್ಯ)

೨೬೨ ಸೋಽಯಮಾತ್ಮಾ ಪ್ರಸ್ತುತಃ ಯತ್ರ ಯಸ್ಮಿನ್ ಕಾಲೇ ಅಬಲ್ಯಮ್ ಅಬಲಭಾವಂ ನಿ ಏತ್ಯ ಗತ್ವಾ । ಯದ್ದೇಹಸ್ಯ ದೌರ್ಬಲ್ಯಂ ತದಾತ್ಮನ ಏವ ದೌರ್ಬಲ್ಯಮ್ ಇತ್ಯುಪಚರ್ಯತೇ 'ಅಬಲ್ಯಂ ನೇತ್ಯ' ಇತಿ । ನ ಹಿ ಅಸೌ ಸ್ವತಃ ಅಮೂರ್ತತ್ವಾತ್ ಅಬಲಭಾವಂ ಗಚ್ಛತಿ। ತಥಾ ಸಂಮೋಹಮಿವ। ಸಂಮೂಢತಾ ಸಂಮೋಹಃ, ವಿವೇಕಾಭಾವಃ । ಸಂಮೂಢತಾಮಿವ ನ್ಯೇತಿ ನಿಗಚ್ಛತಿ । ನ ಚಾಸ್ಯ ಸ್ವತಃ ಸಂಮೋಹಃ ಅಸಂಮೋಹಃ ವಾ ಅಸ್ತಿ। ನಿತ್ಯಚೈತನ್ಯಜ್ಯೋತಿಃಸ್ವಭಾವತ್ವಾತ್ । ತೇನ ಇವಶಬ್ದಃ ಸಂಮೋಹಮಿವ ನ್ಯೇತಿ ಇತಿ । ಉತ್ಕ್ರಾನ್ತಿಕಾಲೇ ಹಿ ಕರಣೋಪಸಂಹಾರನಿಮಿತ್ತೋ ವ್ಯಾಕುಲೀಭಾವ ಆತ್ಮನ ಇವ ಲಕ್ಷ್ಯತೇ ಲೌಕಿಕೈಃ । ತಥಾ ಚ ವಕ್ತಾರೋ ಭವನ್ತಿ ಸಂಮೂಢಃ, ಸಂಮೂಢೋಽಯಮ್ ಇತಿ । ಅಥವಾ ಉಭಯತ್ರ ಇವಶಬ್ದಪ್ರಯೋಗೋ ಯೋಜ್ಯಃ, ಅಬಲ್ಯಮಿವ ನ್ಯೇತ್ಯ, ಸಂಮೋಹಮಿವ ನ್ಯೇತಿ ಇತಿ । ಉಭಯಸ್ಯ ಪರೋಪಾಧಿನಿಮಿತ್ತತ್ವಾವಿಶೇಷಾತ್ । ಸಮಾನಕರ್ತೃಕನಿರ್ದೇಶಾಚ್ಚ। ಅಥಾಸ್ಮಿನ್ ಕಾಲೇ ಏತೇ ಪ್ರಾಣಾಃ ವಾಗಾದಯಃ ಏನಮ್ ಆತ್ಮಾನಮ್ ಅಭಿಸಮಾಯನ್ತಿ । ತದಾ ಅಸ್ಯ ಶಾರೀರಸ್ಯ ಆತ್ಮನಃ ಅಙ್ಗೇಭ್ಯಃ ಸಂಪ್ರಮೋಕ್ಷಣಮ್ ॥

(ಭಾಷ್ಯಾರ್ಥ)

ಈ ಪ್ರಕೃತನಾಗಿರುವ ಆತ್ಮನು ಯಾವಾಗ ಯಾವ ಕಾಲದಲ್ಲಿ ಅಬಲ್ಯವನ್ನು ಅಬಲಭಾವವನ್ನು (ನಿ ಏತ್ಯ = ಗತ್ವಾ) ಹೊಂದಿ – ದೇಹದ ದೌರ್ಬಲ್ಯವಿದೆಯಲ್ಲ, ಅದನ್ನು ಆತ್ಮನ ದೌರ್ಬಲ್ಯವೇ ಎಂದು 'ಅಬಲ್ಯವನ್ನು ಹೊಂದಿ' ಎಂದು ಉಪಚಾರಕ್ಕೆ ಕರೆದಿದೆ;[1] ಏಕೆಂದರೆ ಇವನು ಅಮೂರ್ತನಾಗಿರುವದರಿಂದ ಸ್ವತಃ ಅಬಲತ್ವವನ್ನು ಹೊಂದಲಾರನು. ಹೀಗೆಯೇ – ಸಂಮೋಹವನ್ನು (ಹೊಂದಿ)ದಂತೆ ; ಸಂಮೂಢನಾಗುವದು ಸಂಮೋಹವು, ವಿವೇಕವಿಲ್ಲವಾಗುವದು ; (ಈ) ಸಂಮೋಹವನ್ನು ಹೊಂದಿದಂತಾಗುವನೋ (ಎಂದರ್ಥ). ಇವ

1. ಗೌಣವೃತ್ತಿಯಿಂದ ಆತ್ಮನಿಗೆ ದೌರ್ಬಲ್ಯವನ್ನು ಹೇಳಿದೆ.

ನಿಗೆ ತನ್ನಲ್ಲಿಯೇ ಸಂಮೋಹವಾಗಲಿ ಅಸಂಮೋಹವಾಗಲಿ ಇರುವದಿಲ್ಲ; ಏಕೆಂದರೆ ನಿತ್ಯಚೈತನ್ಯಜ್ಯೋತಿಯು ಇವನ ಸ್ವಭಾವವಾಗಿರುತ್ತದೆ, ಆದ್ದರಿಂದ (ಸಂಮೋಹಮಿವ ನ್ಯೇತಿ =) ಸಂಮೋಹವನ್ನು ಹೊಂದಿದಂತಾಗುವನೋ ಎಂದು (ಇವ) ಅಂತೆ ಎಂಬ ಶಬ್ದವನ್ನು (ಪ್ರಯೋಗಿಸಿದೆ). ಉತ್ಕ್ರಾಂತಿಕಾಲದಲ್ಲಿ ಕರಣಗಳ ಉಪಸಂಹಾರವಾಗುವ ನಿಮಿತ್ತದಿಂದಾದ (ಅಂತಃಕರಣದ) ವ್ಯಾಕುಲೀಭಾವವು ಆತ್ಮನಿಗೆ ಆದಂತೆ ಲೋಕದ ಜನರಿಗೆ ತೋರುತ್ತದೆ ಆದ್ದರಿಂದ 'ಸಂಮೂಢನಾದನು', 'ಇವನು ಸಂಮೂಢನಾದನು' -ಎಂದು ಹೇಳುತ್ತಿರುತ್ತಾರೆ. ಅಥವಾ ಈ ಎರಡು ಕಡೆಗಳಲ್ಲಿಯೂ (ಇವ) ಅಂತೆ ಎಂಬ ಶಬ್ದವನ್ನು ಪ್ರಯೋಗಿಸಿದಂತೆ 'ಅಬಲ್ಯವನ್ನು ಹೊಂದಿದಂತೆ ಸಂಮೋಹವನ್ನು ಹೊಂದಿದಂತಾಗುವನೋ' ಎಂದು ಸಂಬಂಧಿಸಿಕೊಳ್ಳಬೇಕು. ಏಕೆಂದರೆ ಈ ಎರಡೂ ಮತ್ತೊಂದು ಉಪಾಧಿಯಿಂದ ಆಗಿದೆ ಎಂಬುದು ಸಮಾನವಾಗಿದೆ. (ಹೊಂದಿ, ಸಂಮೋಹವನ್ನು ಹೊಂದಿದನಂತೆ) ಎಂದು ಸಮಾನಕರ್ತೃಕವಾಗಿ (ಇವನ್ನು) ತಿಳಿಸಿರುವದರಿಂದಲೂ (ಹೀಗೆ ಸಂಬಂಧಿಸಿಕೊಳ್ಳಬೇಕೆಂದಾಗುತ್ತದೆ)[1] ಆಗ ಈ ಕಾಲದಲ್ಲಿ ಈ ವಾಗಾದಿಪ್ರಾಣಗಳು ಈ ಆತ್ಮನನ್ನು ಬಳಿಸಾರುತ್ತವೆ; ಆಗ ಈ ಶಾರೀರಾತ್ಮನಿಗೆ ಅಂಗಗಳಿಂದ ಬಿಟ್ಟುಕೊಳ್ಳುವದೆಂಬುದು (ಆಗುತ್ತದೆ).

## ಪ್ರಾಣಗಳು ಆತ್ಮನ ಬಳಿಗೆ ಬರುವ ಪ್ರಕಾರ

(ಭಾಷ್ಯ)

೨೫೩. ಕಥಂ ಪುನಃ ಸಂಪ್ರಮೋಕ್ಷಣಮ್ ? ಕೇನ ವಾ ಪ್ರಕಾರೇಣ ಆತ್ಮಾನಮ್ ಅಭಿನಮಾಯನ್ತಿ ಇತಿ ? ಉಚ್ಯತೇ । ಸ ಆತ್ಮಾ ಏತಾಃ ತೇಜೋಮಾತ್ರಾಃ । ತೇಜಸೋ ಮಾತ್ರಾಃ ತೇಜೋಮಾತ್ರಾಃ ತೇಜೋಽವಯವಾಃ ರೂಪಾದಿಪ್ರಕಾಶಕತ್ವಾತ್ ಚಕ್ಷುರಾದೀನಿ ಕರಣಾನಿ ಇತ್ಯರ್ಥಃ । ತಾ ಏತಾಃ ಸಮಭ್ಯಾದದಾನಃ ಸಮ್ಯಗ್ ನಿರ್ಲೇಪೇನ ಅಭ್ಯಾದದಾನಃ ಆಭಿಮುಖ್ಯೇನ ಆದದಾನಃ ಸಂಹರಮಾಣಃ । ತತ್ಸ್ವಪ್ನಾಪೇಕ್ಷಯಾ ವಿಶೇಷಣಂ ಸಮ್ ಇತಿ । ನ ತು ಸ್ವಪ್ನೇ ನಿರ್ಲೇಪೇನ ಸಮ್ಯಗಾದಾನಮ್ । ಅಸ್ತಿ ತು ಆದಾನಮಾತ್ರಮ್ । "ಗೃಹೀತಾ ವಾಗ್ಗೃಹೀತಂ ಚಕ್ಷುಃ" (೨-೧-೧೭), "ಅಸ್ಯ ಲೋಕಸ್ಯ ಸರ್ವಾವತೋ ಮಾತ್ರಾಮುಪಾದಾಯ" (೪-೩-೯), "ಶುಕ್ರಮಾದಾಯ" (೪-೩-೧೧) ಇತ್ಯಾದಿವಾಕ್ಯೇಭ್ಯಃ । ಹೃದಯಮೇವ ಪುಣ್ಡರೀಕಾಕಾರಮ್[2] ಅನ್ವವಕ್ರಾಮತಿ ಅನ್ವಾಗಚ್ಛತಿ । ಹೃದಯೇ ಅಭಿವ್ಯಕ್ತವಿಜ್ಞಾನೋ ಭವತಿ

---

1. ಈ ಪಕ್ಷದಲ್ಲಿ ಇವಶಬ್ದದಿಂದಲೇ ಆತ್ಮನಿಗೆ ಅಬಲತ್ವವಾಗಲಿ ಸಂಮೋಹವಾಗಲಿ ಇಲ್ಲವೆಂಬುದು ಸ್ಪಷ್ಟವಾಗುತ್ತದೆ ಎಂದು ಭಾವ ; ಅಬಲತ್ವವೂ ಸಂಮೋಹವೂ ಗೌಣವೆನ್ನುವದಕ್ಕಿಂತ ಮಿಥ್ಯೆಯೆನ್ನುವದೇ ಯುಕ್ತವೆಂದು ಭಾವ.

2 ಪುಣ್ಡರೀಕಾಕಾಶಮ್ ಎಂಬ ಪಾಠಕ್ಕಿಂತ ಇದೇ ಮೇಲು.

ಇತ್ಯರ್ಥಃ । ಬುದ್ಧ್ಯಾಧಿವಿಕ್ಷೇಪೋಪಸಂಹಾರೇ ಸತಿ । ನ ಹಿ ತಸ್ಯ ಸ್ವತಶ್ಚಲನಂ ವಿಕ್ಷೇಪೋಪಸಂಹಾರಾದಿವಿಕ್ರಿಯಾ ವಾ । "ಧ್ಯಾಯತೀವ ಲೇಲಾಯತೀವ" (೪-೩-೭) ಇತ್ಯುಕ್ತತ್ವಾತ್ । ಬುದ್ಧ್ಯಾದ್ಯುಪಾಧಿದ್ವಾರೈವ ಹಿ ಸರ್ವವಿಕ್ರಿಯಾ ಅಧ್ಯಾರೋಪ್ಯತೇ ತಸ್ಮಿನ್ ॥

(ಭಾಷ್ಯಾರ್ಥ)

(ಪ್ರಶ್ನೆ) :– ಹಾಗಾದರೆ (ಇವನು ಅವಯವಗಳಿಂದ) ಬಿಟ್ಟುಕೊಳ್ಳುವದು ಹೇಗೆ? (ಕರಣಗಳು) ಯಾವ ಪ್ರಕಾರದಿಂದ ಆತ್ಮನನ್ನು ಬಂದು ಸೇರುತ್ತವೆ?

(ಉತ್ತರ) :– ಹೇಳುತ್ತೇವೆ. ಆ ಆತ್ಮನು ಈ ತೇಜೋಮಾತ್ರೆಗಳನ್ನು–ತೇಜಸ್ಸಿನ ಮಾತ್ರೆಗಳನ್ನು, ತೇಜಸ್ಸಿನ ಅವಯವಗಳನ್ನು; ರೂಪವೇ ಮುಂತಾದವುಗಳನ್ನು ಬೆಳಗುವದರಿಂದ (ಇವು ತೇಜೋಮಾತ್ರೆಗಳು)[1] – ಚಕ್ಷುರಾದಿಕರಣಗಳನ್ನು ಎಂದರ್ಥ. ಆ ಈ (ತೇಜೋಮಾತ್ರೆಗಳನ್ನು), (ಸಮಭ್ಯಾದದಾನಃ) ಚೆನ್ನಾಗಿ ಸ್ವಲ್ಪವೂ ಉಳಿಯದಂತೆ (ಅಭ್ಯಾದದಾನಃ=ಆಭಿಮುಖ್ಯೇನ ಆದದಾನಃ) ತನ್ನ ಕಡೆಗೆ ತೆಗೆದುಕೊಂಡು, ಸಂಹರಿಸಿಕೊಂಡು (ಎಂದರ್ಥ). ಸಮ್ ಎಂಬ ಈ ವಿಶೇಷಣವು ಸ್ವಪ್ನದ ಅಪೇಕ್ಷೆಯಿಂದ (ಹೇಳಿದ್ದು); (ಏಕೆಂದರೆ) ಸ್ವಪ್ನದಲ್ಲಿ ಸ್ವಲ್ಪವೂ ಉಳಿಯದಂತೆ ಚೆನ್ನಾಗಿ ತೆಗೆದುಕೊಳ್ಳುವದಿಲ್ಲ[2]. ಆದರೆ ತೆಗೆದುಕೊಳ್ಳುವದೇನೋ ಇದೆ; (ಏಕೆಂದರೆ) "ವಾಕ್ಕು ಗೃಹೀತವಾಗುತ್ತದೆ. ಚಕ್ಷುಸ್ಸು ಗೃಹೀತವಾಗುತ್ತದೆ" (೨-೧-೧೭), "ಈ ಸರ್ವಾವಂತವಾದ ಲೋಕದ ಮಾತ್ರೆಯನ್ನು ತೆಗೆದುಕೊಂಡು" (೪-೩-೯), "ಶುಕ್ರವನ್ನು ತೆಗೆದುಕೊಂಡು" (೪-೩-೧೦) ಎಂದು ಮುಂತಾಗಿರುವ ವಾಕ್ಯಗಳಿಂದ (ಇದು ಸಿದ್ಧವಾಗುತ್ತದೆ).

ಹೃದಯವನ್ನೇ ಪುಂಡರೀಕಾಕಾರವಾದ (ಹೃದಯವನ್ನೇ)[3] ಬಂದು ಸೇರು

---

1. ತೇಜಸ್ಸೆಂದರೆ ಸತ್ತ್ವವು, ಅಥವಾ ಪಿತ್ತವು ಎಂದು ವಾರ್ತಿಕ. ಚಕ್ಷುರಾದಿಗಳು ವಿಷಯಗಳನ್ನು ಬೆಳಗುವವರಿಂದ ತೇಜಸ್ಸು ಎಂದು ಅವನ್ನು ಕರೆದಿವೆಯೇ ಹೊರತು ಅವು ಆತ್ಮಚೈತನ್ಯರೂಪವಾದ ತೇಜಸ್ಸಿನ ವಿಕಾರವೆಂಬ ಅಭಿಪ್ರಾಯದಿಂದಲ್ಲ. ಅವೆಲ್ಲ ಭೌತಿಕವಾದ ತೇಜಸ್ಸುಗಳೇ ಎಂದಭಿಪ್ರಾಯ.

2. ಹಿಂದೆ ೪-೩-೩೬ರಲ್ಲಿ 'ಸಂಪ್ರಮುಚ್ಯ' ಎಂಬ ಮಾತಿಗೆ (ಭಾ. ಭಾ. ೨೪೭) ಮಾಡಿರುವ ವ್ಯಾಖ್ಯಾನದಂತೆಯೇ ಇದನ್ನು ಅರಿಯಬೇಕು. ದೇಹದಿಂದ ದೇಹಾಂತರಕ್ಕೆ ಹೋಗುವದು ಜಾಗ್ರತ್ತಿನಿಂದ ಸ್ವಪ್ನಕ್ಕೆ ಹೋದಂತೆ ಎಂಬ ದೃಷ್ಟಾಂತದಲ್ಲಿ ಸ್ವಲ್ಪ ವೈಷಮ್ಯವೂ ಇದೆ. ಏಕೆಂದರೆ ಇಲ್ಲಿ ಸಂಪೂರ್ಣವಾಗಿ ದೇಹವನ್ನು ಬಿಡುತ್ತಾನೆ, ಕರಣಗಳನ್ನು ಸಂಪೂರ್ಣವಾಗಿ ಸೆಳೆದುಕೊಳ್ಳುತ್ತಾನೆ.

3. ಹೃದಯದಲ್ಲಿ ಅಂತಃಕರಣವೂ ಕರಣಗಳೂ ಒಂದುಗೂಡಿರುತ್ತವೆ ಎಂದರ್ಥ. ಹೃದಯಾಕಾಶವೆಂಬ ಪಾಠವು ಪರಮಾತ್ಮನೆಂಬರ್ಥವನ್ನು ಕೊಡುವದರಿಂದ ಸರಿಯಲ್ಲ. ಅಥವಾ ಆ ಪಾಠದಲ್ಲಿ ಹೃದಯದೊಳಗಿನ ರಂಧ್ರವನ್ನೇ ಎಂದು ಅರ್ಥ. ಮುಂದೆ ಭಾ. ಭಾ. ೨೫೫ರಲ್ಲಿ ಹೃದಯದಲ್ಲಿರುವ ಲಿಂಗಾತ್ಮನನ್ನೇ ಕರಣಜಾತವೆಲ್ಲವೂ ಬಂದು ಸೇರುತ್ತವೆ ಎಂದಿರುವದನ್ನು ನೋಡಿ.

ತ್ತಾನೆ, ಅನುಕ್ರಮದಿಂದ ಬಂದುಸೇರಿಕೊಳ್ಳುತ್ತಾನೆ. ಬುದ್ಧಿಯೇ ಮುಂತಾದವುಗಳ ವಿಕ್ಷೇಪದ ಉಪಸಂಹಾರವಾಗಲು, ಹೃದಯದಲ್ಲಿ (ಇವನ) ಅರಿವು[1] ಅಭಿವ್ಯಕ್ತವಾಗುತ್ತದೆ ಎಂದರ್ಥ. ಆ (ಆತ್ಮನಿಗೆ) ಸ್ವಂತವಾದ ಚಲನವಾಗಲಿ ವಿಕ್ಷೇಪವನ್ನು ಉಪಸಂಹಾರಮಾಡಿಕೊಳ್ಳುವದೇ ಮುಂತಾದ ಕ್ರಿಯೆಯಾಗಲಿ ಇರುವದಿಲ್ಲವಷ್ಟೆ; ಏಕೆಂದರೆ "ಧ್ಯಾನಮಾಡುವವನಂತಿರುತ್ತಾನೆ, ಚಲಿಸುವವನಂತಿರುತ್ತಾನೆ" (೪-೩-೭) ಎಂದು (ಹಿಂದೆ) ಹೇಳಲಾಗಿದೆ. ಬುದ್ಧಿಯೇ ಮುಂತಾದ ಉಪಾಧಿಗಳ ಮೂಲಕವಾಗಿಯೇ ಅಲ್ಲವೆ, ಅವನಲ್ಲಿ ಪ್ರತಿಯೊಂದು ವಿಕಾರವನ್ನೂ ಅಧ್ಯಾರೋಪಮಾಡಿರುವದು[2]?

## ದೇವತೆಗಳು ಕರಣಗಳನ್ನು ಬಿಟ್ಟುಹೋಗುವಾಗ ಅವನ್ನು ಲಿಂಗಾತ್ಮನು ತೆಗೆದುಕೊಳ್ಳುತ್ತಾನೆ

(ಭಾಷ್ಯ)

೨೫೪. ಕದಾ ಪುನಸ್ತಸ್ಯ ತೇಜೋಮಾತ್ರಾಭ್ಯಾದಾನಮಿತಿ ? ಉಚ್ಯತೇ। ಸ ಯತ್ರ ಏಷ ಚಕ್ಷುಷಿ ಭವಃ ಚಾಕ್ಷುಷಃ ಪುರುಷ ಆದಿತ್ಯಾಂಶೋ ಭೋಕ್ತುಃ ಕರ್ಮಣಾ ಪ್ರಯುಕ್ತಃ ಯಾವದ್ ದೇಹಧಾರಣಂ ತಾವತ್ ಚಾಕ್ಷುಷೋಽನುಗ್ರಹಂ ಕುರ್ವನ್ ವರ್ತತೇ। ಮರಣಕಾಲೇ ತು ಅಸ್ಯ ಚಕ್ಷುರನುಗ್ರಹಂ ಪರಿತ್ಯಜತಿ ಸ್ವಮ್ ಆದಿತ್ಯಾತ್ಮಾನಂ ಪ್ರತಿಪದ್ಯತೇ। ತದೇತದುಕ್ತಮ್ "ಯತ್ರಾಸ್ಯ ಪುರುಷಸ್ಯ ಮೃತಸ್ಯಾಗ್ನಿಂ ವಾಗಪ್ಯೇತಿ ವಾತಂ ಪ್ರಾಣಶ್ಚಕ್ಷುರಾದಿತ್ಯಮ್" (೩-೨-೧೩) ಇತ್ಯಾದಿ। ಪುನಃ ದೇಹಗ್ರಹಣಕಾಲೇ ಸಂಶ್ರಯಿಷ್ಯತಿ[3]। ತಥಾ ಸ್ವಪ್ಸ್ಯತಃ ಪ್ರಬುಧ್ಯತಶ್ಚ। ತದೇತದಾಹ। ಚಾಕ್ಷುಷಃ ಪುರುಷೋ ಯತ್ರ ಯಸ್ಮಿನ್ ಕಾಲೇ ಪರಾಙ್ ಪರ್ಯಾವರ್ತತೇ। ಪರಿ ಸಮನ್ತಾತ್ ಪರಾಙ್ ವ್ಯಾವರ್ತತೇ ಇತಿ। ಅಥ ಅತ್ರ ಅಸ್ಮಿನ್ ಕಾಲೇ ಅರೂಪಜ್ಞೋ ಭವತಿ ಮುಮೂರ್ಷುಃ ರೂಪಂ ನ ಜಾನಾತಿ। ತದಾ ಅಯಮಾತ್ಮಾ ಚಕ್ಷುರಾದಿ ತೇಜೋಮಾತ್ರಾಃ ಸಮಭ್ಯಾದದಾನೋ ಭವತಿ ಸ್ವಪ್ನಕಾಲ ಇವ ॥

(ಭಾಷ್ಯಾರ್ಥ)

(ಪ್ರಶ್ನೆ):- ಅವನು ತೇಜೋಮಾತ್ರೆಗಳನ್ನು ತೆಗೆದುಕೊಳ್ಳುವದು ಯಾವಾಗ?

---

1. ಈ ಅರಿವಿನ ಸ್ವಭಾವವನ್ನು ಮುಂದಿನ ಕಂಡಿಕೆಯಲ್ಲಿ ವಿವರಿಸಿದೆ.

2. ಚಕ್ಷುರಾದಿಗಳ ಮೂಲಕವೇ ನೋಟವೇ ಮುಂತಾದವನ್ನೂ ಹಸ್ತಾದಿಗಳ ಮೂಲಕವೇ ತೆಗೆದುಕೊಳ್ಳುವದೇ ಮುಂತಾದವನ್ನೂ ಬುದ್ಧಿಯ ಮೂಲಕವೇ ಚಾಂಚಲ್ಯ, ಏಕಾಗ್ರತೆ ಮುಂತಾದವನ್ನೂ ಆತ್ಮನಲ್ಲಿ ಅಧ್ಯಾರೋಪಿಸುತ್ತಾರೆ.

3. 'ಸಂಶ್ರಯಿಷ್ಯನ್ತಿ' ಎಂಬ ಅಚ್ಚಿನ ಪುಸ್ತಕದ ಪಾಠವನ್ನು ಹೀಗೆ ತಿದ್ದಿಕೊಂಡಿದೆ. ಅನುವಾದದ ಟಿಪ್ಪಣಿಯನ್ನು ನೋಡಿ.

(ಉತ್ತರ):- ಇದನ್ನು ಹೇಳಲಾಗುತ್ತದೆ. ಯಾವಾಗ ಈ ಚಕ್ಷುಸ್ಸಿನಲ್ಲಿರುವ ಚಾಕ್ಷುಷನಾದ ಪುರುಷನು- ಆದಿತ್ಯಾಂಶ(ನಾದ ಪುರುಷನು), ಭೋಕ್ತೃವಿನ ಕರ್ಮದಿಂದ ಪ್ರೇರಿತನಾಗಿ ದೇಹವನ್ನು ಧರಿಸಿರುವವರೆಗೂ ಚಕ್ಷುಸ್ಸಿಗೆ ಅನುಗ್ರಹವನ್ನು ಮಾಡುತ್ತಾ ಇದ್ದುಕೊಂಡಿರುತ್ತಾನೆ. ಆದರೆ ಸಾಯುವ ಕಾಲದಲ್ಲಿ ಇವನಿಗೆ ಚಕ್ಷುಸ್ಸಿಗೆ ಅನುಗ್ರಹಮಾಡುವದನ್ನು ಬಿಟ್ಟುಬಿಡುತ್ತಾನೆ, ತನ್ನ ಆದಿತ್ಯಸ್ವರೂಪವನ್ನು ಸೇರಿಕೊಳ್ಳುತ್ತಾನೆ. ಆ ಇದನ್ನೇ "ಯಾವಾಗ ಈ ಮೃತನಾದ ಪುರುಷನ ವಾಕ್ಕು ಅಗ್ನಿಯನ್ನು ಸೇರಿಕೊಳ್ಳುವದೋ, ಪ್ರಾಣವು ವಾಯುವನ್ನು (ಸೇರಿಕೊಳ್ಳುವದೋ), ಚಕ್ಷುಸ್ಸು ಆದಿತ್ಯನನ್ನು (ಸೇರಿಕೊಳ್ಳುವದೋ)" (೩-೨-೧೩) ಎಂದು ಮುಂತಾಗಿ ಹೇಳಿತ್ತು[1]. ಮತ್ತೆ (ಹೊಸ) ದೇಹವನ್ನು ತೆಗೆದುಕೊಳ್ಳುವ ಕಾಲಕ್ಕೆ (ಆದಿತ್ಯಾಂಶವು) ಚಕ್ಷುಸ್ಸನ್ನು ಆಶ್ರಯಿಸುವದು[2]. ಸ್ವಪ್ನವನ್ನು ಕಾಣುವವನಿಗೂ (ಮತ್ತೆ) ಏಳುವವನಿಗೂ ಹೀಗೆಯೇ (ತಿಳಿಯಬೇಕು)[3]. ಆ ಇದನ್ನು ಹೇಳುತ್ತಾನೆ: ಚಾಕ್ಷುಷಪುರುಷನು ಯಾವಾಗ -ಯಾವ ಕಾಲದಲ್ಲಿ ಹೊರಕ್ಕೆ ಹಿಂತಿರುಗುವನೋ (ಪರಿ=ಸಮನ್ತಾತ್) ಎಲ್ಲಾ ಕಡೆಯಿಂದಲೂ ಹೊರಕ್ಕೆ ತಿರುಗಿಹೋಗುವನೋ[4] (ಅಥ= ಅತ್ರ) ಆಗ ಆ ಕಾಲದಲ್ಲಿ ಅರೂಪಜ್ಞನಾಗುವನು, ಸಾಯುವವನು ರೂಪವನ್ನು ಅರಿಯದೆ ಇರುವನು[5]. ಆಗ ಈ ಆತ್ಮನು ಚಕ್ಷುಸ್ಸೇ ಮುಂತಾದ ತೇಜೋಮಾತ್ರೆಗಳನ್ನು ಸ್ವಪ್ನಕಾಲದಲ್ಲಿ ಹೇಗೋ ಹಾಗೆ ತನ್ನ ಕಡೆಗೆ ತೆಗೆದುಕೊಂಡವನಾಗುವನು[6].

---

1. ವಾಕ್ಕೇ ಆದಿತ್ಯನನ್ನು ಸೇರಿಕೊಳ್ಳುವವೆಂದೇನೂ ಆ ಶ್ರುತಿಯ ಅರ್ಥವಲ್ಲ ; ಸೂ. ಭಾ. ೩-೧-೪ನ್ನು ನೋಡಿ.

2. ಇಲ್ಲಿ ದೇವತೆಯೇ ಪ್ರಕೃತವಾದ್ದರಿಂದ 'ಸಂಶ್ರಯಿಷ್ಯತಿ' ಎಂದೇ ಇರಬೇಕು. 'ಸಂಶ್ರಯಿಷ್ಯನ್ತಿ' ಎಂಬ ಪಾಠವನ್ನು ಅಂಗೀಕರಿಸಿ ಆ॥ ಟೀಕೆಯಲ್ಲಿ "ವಾಗಾದಯಃ ತತ್ತದ್ದೇವತಾಧಿಷ್ಠಿತಾಃ ಯಥಾಸ್ಥಾನಮ್" ಎಂದು ವಿವರಿಸಿದೆ. ಇದು ಭಾಷ್ಯಕ್ಕೆ ಸರಳವಾಗಿ ಅನ್ವಯಿಸುವದಿಲ್ಲ. ಕರ್ಮಾಕ್ಷಿಪ್ತವಾಗಿ ಮತ್ತೆ ಆದಿತ್ಯದೇವತೆಯು ಇವನ ಚಕ್ಷುಸ್ಸಿಗೆ ಅನುಗ್ರಾಹಕವಾಗುವದು ಎಂಬುದು ಸರಳವಾದ ಅರ್ಥ.

3. ಇವನು ಸ್ವಪ್ನಕ್ಕೆ ಹೋಗುವಾಗ ಆಯಾ ದೇವತೆಯು ಅನುಗ್ರಾಹಕತ್ವವನ್ನು ಬಿಡುವದು, ಎಚ್ಚರವಾಗುತ್ತಲೂ ಅನುಗ್ರಹಿಸುವದು ಎಂದರ್ಥ.

4. ಅನುಗ್ರಾಹಕತ್ವವನ್ನು ಬಿಟ್ಟುಬಿಟ್ಟು ಆದಿತ್ಯನನ್ನು ಸೇರಿಕೊಳ್ಳುವನೋ ಎಂದರ್ಥ.

5. ಕರಣಗಳಿಗೆ ಸ್ವತಃ ತಿಳಿಯುವ ಶಕ್ತಿಯಿರುವದಿಲ್ಲ, ದೇವತಾನುಗ್ರಹದಿಂದಲೇ ಅರಿಯುವವು. ಸೂ. ಭಾ. ೨-೪-೧೪ (ಭಾ. ಭಾ. ೧೯೭) ಇಲ್ಲಿ ಕರಣವೂ ಬೇರೆಯಾಗಿ ಉಳಿದಿರುವದಿಲ್ಲ ; ಮುಂದಿನ ಕಂಡಿಕೆಯನ್ನು ನೋಡಿ.

6. (೫೧೩ನೆಯ ಪುಟದ) ಭಾ. ಭಾ. ೨೫೩೭ ಸಮಭ್ಯಾದದಾನಃ ಎಂಬುದರ ಭಾಷ್ಯಾನುವಾದದ ಟಿಪ್ಪಣಿಯನ್ನು ನೋಡಿ.

## ಉತ್ಕ್ರಾಂತಿಕ್ರಮವೂ ಜೊತೆಯಲ್ಲಿರುವ ಸಂಭಾರವೂ

(ಉಪನಿಷತ್ತು)

**ಏಕೀಭವತಿ ನ ಪಶ್ಯತೀತ್ಯಾಹುರೇಕೀಭವತಿ ನ ಜಿಘ್ರತೀತ್ಯಾಹುರೇಕೀಭವತಿ ನ ರಸಯತ ಇತ್ಯಾಹುರೇಕೀಭವತಿ ನ ವದತೀತ್ಯಾಹುರೇಕೀಭವತಿ ನ ಶೃಣೋತೀತ್ಯಾಹುರೇಕೀಭವತಿ ನ ಮನುತ ಇತ್ಯಾಹುರೇಕೀಭವತಿ ನ ಸ್ಪೃಶತೀತ್ಯಾಹುರೇಕೀಭವತಿ ನ ವಿಜಾನಾತೀತ್ಯಾಹುಸ್ತಸ್ಯ ಹೈತಸ್ಯ ಹೃದಯಸ್ಯಾಗ್ರಂ ಪ್ರದ್ಯೋತತೇ ತೇನ ಪ್ರದ್ಯೋತೇನೈಷ ಆತ್ಮಾ ನಿಷ್ಕ್ರಾಮತಿ ಚಕ್ಷುಷ್ಟೋ ವಾ ಮೂರ್ಧ್ನೋ ವಾಽನ್ಯೇಭ್ಯೋ ವಾ ಶರೀರದೇಶೇಭ್ಯಸ್ತಮುತ್ಕ್ರಾಮನ್ತಂ ಪ್ರಾಣೋಽನೂತ್ಕ್ರಾಮತಿ ಪ್ರಾಣಮನೂತ್ಕ್ರಾಮನ್ತಗ್ᳱ ಸರ್ವೇ ಪ್ರಾಣಾ ಅನೂತ್ಕ್ರಾಮನ್ತಿ ಸವಿಜ್ಞಾನೋ ಭವತಿ ಸವಿಜ್ಞಾನಮೇವಾನ್ವವಕ್ರಾಮತಿ । ತಂ ವಿದ್ಯಾಕರ್ಮಣೀ ಸಮನ್ವಾರಭೇತೇ ಪೂರ್ವಪ್ರಜ್ಞಾ ಚ ॥ ೨ ॥**

೨. ಒಂದಾಗುತ್ತದೆ, (ಇವನು) ಕಾಣುತ್ತಿಲ್ಲ ಎನ್ನುವರು; ಒಂದಾಗುವದು, ಮೂಸುತ್ತಿಲ್ಲ ಎನ್ನುವರು; ಒಂದಾಗುತ್ತದೆ, ಸವಿಯುತ್ತಿಲ್ಲ ಎನ್ನುವರು; ಒಂದಾಗುತ್ತದೆ, ಮಾತಾಡುತ್ತಿಲ್ಲ ಎನ್ನುವರು; ಒಂದಾಗುತ್ತದೆ, ಕೇಳುತ್ತಿಲ್ಲ ಎನ್ನುವರು. ಒಂದಾಗುತ್ತದೆ, ಮನನ ಮಾಡುತ್ತಿಲ್ಲ ಎನ್ನುವರು; ಒಂದಾಗುತ್ತದೆ, ಮುಟ್ಟುತ್ತಿಲ್ಲ ಎನ್ನುವರು; ಒಂದಾಗುತ್ತದೆ, ಅರಿಯುತ್ತಿಲ್ಲ ಎನ್ನುವರು. ಆ ಇವನ ಹೃದಯದ ತುದಿಯು ಹೊಳೆಯುತ್ತದೆ, ಆ ಬೆಳಕಿನಿಂದ ಈ ಆತ್ಮನು ಕಣ್ಣಿನಿಂದಲಾಗಲಿ, ನೆತ್ತಿಯಿಂದಲಾಗಲಿ ಮಿಕ್ಕ (ಯಾವದಾದರೂ) ಶರೀರದೇಶಗಳಿಂದಲಾಗಲಿ ಹೊರಕ್ಕೆ ಹೊರಡುತ್ತಾನೆ. (ಹಾಗೆ) ಉತ್ಕ್ರಾಂತನಾದ ಅವನನ್ನು ಪ್ರಾಣನು ಅನುಸರಿಸಿ ಉತ್ಕ್ರಾಂತನಾಗುವನು, ಉತ್ಕ್ರಾಂತನಾದ ಪ್ರಾಣನನ್ನು ಅನುಸರಿಸಿ ಎಲ್ಲಾ ಪ್ರಾಣಗಳೂ ಉತ್ಕ್ರಾಂತವಾಗುವವು. ಸವಿಜ್ಞಾನನಾಗುತ್ತಾನೆ, ಸವಿಜ್ಞಾನವಾಗಿಯೇ ಅನುಸರಿಸಿ ಹೋಗಿ ಸೇರುತ್ತಾನೆ. ಅವನನ್ನು ವಿದ್ಯಾಕರ್ಮಗಳೂ ಪೂರ್ವಪ್ರಜ್ಞೆಯೂ ಬೆಂಬಿಡಿಯುವವು.

## ಕರಣಗಳ ವ್ಯಾಪಾರವು ನಿಂತುಹೋಗುವಿಕೆ

(ಭಾಷ್ಯ)

೨೫೫. ಏಕೀಭವತಿ ಕರಣಂ[1] ಸ್ವೇನ ಲಿಙ್ಗಾತ್ಮನಾ। ತದಾ ಏನಂ ಪಾರ್ಶ್ವಸ್ಥಾ ಆಹುಃ ನ ಪಶ್ಯತೀತಿ। ತಥಾ ಘ್ರಾಣದೇವತಾನಿವೃತ್ತೌ ಘ್ರಾಣಮ್ ಏಕೀಭವತಿ ಲಿಙ್ಗಾತ್ಮನಾ। ತದಾ ನ ಜಿಘ್ರತಿ ಇತ್ಯಾಹುಃ। ಸಮಾನಮ್ ಅನ್ಯತ್। ಜಿಹ್ವಾಯಾಂ ಸೋಮೋ ವರುಣೋ ವಾ ದೇವತಾ। ತನ್ನಿವೃತ್ತ್ಯಪೇಕ್ಷಯಾ ನ ರಸಯತ ಇತ್ಯಾಹುಃ। ತಥಾ ನ ವದತಿ। ನ ಶೃಣೋತಿ। ನ ಮನುತೇ, ನ ಸ್ಪೃಶತಿ, ನ ವಿಜಾನಾತಿ ಇತ್ಯಾಹುಃ। ತದಾ ಉಪಲಕ್ಷ್ಯತೇ ದೇವತಾನಿವೃತ್ತಿಃ ಕರಣಾನಾಂ ಚ ಹೃದಯೇ ಏಕೀಭಾವಃ॥

(ಭಾಷ್ಯಾರ್ಥ)

ಕರಣ(ವಾದ ಕಣ್ಣು)[2] ತನ್ನ ಲಿಂಗಾತ್ಮನೊಡನೆ ಒಂದಾಗುತ್ತದೆ[3]. ಆಗ ಇವನನ್ನು ಪಕ್ಕದಲ್ಲಿರುವವರು (ಇವನು) ಕಾಣಲಾರನು ಎನ್ನುವರು. ಇದರಂತೆ ಘ್ರಾಣದೇವತೆಯು ಹಿಂತಿರುಗಲು ಘ್ರಾಣವು ಲಿಂಗಾತ್ಮನಲ್ಲಿ ಒಂದಾಗುವದು. ಆಗ (ಇವನು) ಮೂಸಲಾರನು ಎನ್ನುವರು. ಮಿಕ್ಕದ್ದೆಲ್ಲವೂ (ಇದಕ್ಕೆ) ಸಮಾನವಾಗಿ (ವ್ಯಾಖ್ಯಾನಮಾಡತಕ್ಕದ್ದಾಗಿದೆ). ಜಿಹ್ವೇಂದ್ರಿಯಕ್ಕೆ ಸೋಮನೋ, ವರುಣನೋ ದೇವತೆ; ಆ (ದೇವತೆ)ಯು ಹಿಂತಿರುಗಿದ್ದರಿಂದ (ಇವನು) ಸವಿಯಲಾರನು ಎನ್ನುವರು. ಹೀಗೆಯೇ ಮಾತಾಡಲಾರನು, ಕೇಳಲಾರನು, ಮನನಮಾಡಲಾರನು, ಮುಟ್ಟಲಾರನು, ಅರಿಯಲಾರನು ಎನ್ನುವರು. ಆಗ ದೇವತೆಗಳು ಬಿಟ್ಟುಹೋದರೆಂದೂ, ಕರಣಗಳು ಹೃದಯದಲ್ಲಿ ಒಂದಾದವೆಂದೂ ತಿಳಿಯಬೇಕು.[4]

---

1. ಕರಣಜಾತಮ್ ಎಂಬುದನ್ನು ಹೀಗೆ ತಿದ್ದಿಕೊಂಡಿದೆ.

2. ಇಲ್ಲಿ ಚಕ್ಷುಸ್ಸುಮಾತ್ರವೇ ಪ್ರಕೃತವಾಗಿದೆ; ಆದ್ದರಿಂದ 'ಜಾತಮ್' ಎಂಬುದು ಬೇಕಿಲ್ಲ.

3. ಆದಿತ್ಯಾಂಶವು ಆದಿತ್ಯನಲ್ಲಿ ಸೇರಿದಂತೆಯೇ ಲಿಂಗದ ಅಂಶವಾದ ಚಕ್ಷುಸ್ಸು ಲಿಂಗದಲ್ಲಿ ಬೆರೆತುಹೋಗುವದು. ಆದ್ದರಿಂದಲೇ ಆಗ ಕಣ್ಣು ಕಾಣಿಸುವದಿಲ್ಲ.

4. ಕಾಣದಿರುವದು, ಕೇಳದಿರುವದು- ಮುಂತಾದವು ದೇವತೆಯು ಹೊರಟುಹೋದದ್ದಕ್ಕೂ ಕರಣವು ಲಿಂಗದಲ್ಲಿ ಒಂದಾದದ್ದಕ್ಕೂ ಗುರುತು ಎಂದರ್ಥ. ಇಲ್ಲಿ ಹೇಳಿರುವ ಕ್ರಮದಿಂದಲೇ ಕರಣಗಳ ವ್ಯಾಪಾರವು ನಿಲ್ಲುವದಿಲ್ಲ; ಯಾವ ಕ್ರಮದಲ್ಲಾದರೂ ನಿಲ್ಲಬಹುದು.

# ಹೃದಯಾಗ್ರದ ಬೆಳಕಿನಿಂದ ಆತ್ಮನು ಹೊರಹೊರಡುತ್ತಾನೆ

(ಭಾಷ್ಯ)

೨೫೬. ತತ್ರ ಹೃದಯೇ ಉಪಸಂಹೃತೇಷು ಕರಣೇಷು ಯಃ ಅನ್ತರ್ವ್ಯಾಪಾರಃ ಸ ಕಥ್ಯತೇ। ತಸ್ಯ ಹ ಏತಸ್ಯ ಪ್ರಕೃತಸ್ಯ ಹೃದಯಸ್ಯ ಹೃದಯಚ್ಛಿದ್ರಸ್ಯ ಇತ್ಯೇತತ್। ಅಗ್ರಂ ನಾಡೀಮುಖಂ ನಿರ್ಗಮನದ್ವಾರಂ ಪ್ರದ್ಯೋತತೇ ಸ್ವಪ್ನಕಾಲ ಇವ ಸ್ವೇನ ಭಾಸಾ ತೇಜೋಮಾತ್ರಾದಾನಕೃತೇನ ಸ್ವೇನೈವ ಜ್ಯೋತಿಷಾ ಆತ್ಮನೈವ ಚ। ತೇನ ಆತ್ಮಜ್ಯೋತಿಷಾ ಪ್ರದ್ಯೋತೇನ ಹೃದಯಾಗ್ರೇಣ ಏಷ ಆತ್ಮಾ ವಿಜ್ಞಾನಮಯಃ ಲಿಙ್ಗೋಪಾಧಿಃ ನಿರ್ಗಚ್ಛತಿ ನಿಷ್ಕ್ರಾಮತಿ। ತಥಾ[1] ಆಥರ್ವಣೇ "ಕಸ್ಮಿನ್ನ್ವಹಮುತ್ಕ್ರಾನ್ತ ಉತ್ಕ್ರಾನ್ತೋ ಭವಿಷ್ಯಾಮಿ ಕಸ್ಮಿನ್ ವಾ ಪ್ರತಿಷ್ಠಿತೇ ಪ್ರತಿಷ್ಠಾಸ್ಯಾಮಿ ಇತಿ ಸ ಪ್ರಾಣಮಸೃಜತ" (ಪ್ರ.೬-೩) ಇತಿ। ತತ್ರ ಚ ಆತ್ಮಚೈತನ್ಯಜ್ಯೋತಿಃ ಸರ್ವದಾ ಅಭಿವ್ಯಕ್ತತರಮ್। ತದುಪಾಧಿದ್ವಾರಾ ಹಿ ಆತ್ಮನಿ ಜನ್ಮಮರಣಗಮನಾಗಮನಾದಿಸರ್ವವಿಕ್ರಿಯಾಲಕ್ಷಣಃ ಸಂವ್ಯವಹಾರಃ। ತದಾತ್ಮಕಂ ಹಿ ದ್ವಾದಶವಿಧಂ ಕರಣಂ ಬುದ್ಧ್ಯಾದಿ। ತತ್ ಸೂತ್ರಮ್, ತಜ್ಜೀವನಮ್, ಸೋಽನ್ತರಾತ್ಮಾ ಜಗತಸ್ತಸ್ಥುಷಶ್ಚ ॥

(ಭಾಷ್ಯಾರ್ಥ)

ಇಲ್ಲಿ ಕರಣಗಳು ಹೃದಯದಲ್ಲಿ ಉಪಸಂಹಾರವಾಗಲು[2] ಒಳಗೆ (ಆಗುವ) ವ್ಯಾಪಾರವುಂಟಲ್ಲ, ಅದನ್ನು (ಈಗ) ಹೇಳಲಾಗುತ್ತದೆ. ಆ ಇದರ ಎಂದರೆ ಪ್ರಕೃತವಾದ ಹೃದಯದ, ಹೃದಯರಂಧ್ರದ ಎಂದು ಅಭಿಪ್ರಾಯ; (ಇದರ) ಅಗ್ರವನ್ನು ಎಂದರೆ ನಾಡಿಯ ಬಾಯಿ ಎಂಬ ಹೊರಡುವ ದ್ವಾರವು ತೇಜೋಮಾತ್ರೆಗಳನ್ನು ತೆಗೆದುಕೊಂಡದ್ದರಿಂದಾದ ತನ್ನ ಬೆಳಕಿನಿಂದಲೂ ತನ್ನದೇ ಆದ ಜ್ಯೋತಿಯಿಂದಲೂ ಎಂದರೆ ಆತ್ಮನಿಂದಲೂ ಸ್ವಪ್ನಕಾಲದಲ್ಲಿ ಹೇಗೋ[3] ಹಾಗೆಯೇ ಬೆಳಗುತ್ತದೆ.[4] ಅದರಿಂದ ಎಂದರೆ ಆತ್ಮಜ್ಯೋತಿಯಿಂದ ಬೆಳಗಿದ (ಆ) ಹೃದಯದ ತುದಿಯಿಂದ ಈ ಲಿಂಗೋಪಾಧಿಯಾದ ವಿಜ್ಞಾನಮಯಾತ್ಮನು ಹೊರಹೊರಡುತ್ತಾನೆ, ಹೊರಕ್ಕೆ ಹೊರಟುಬರುತ್ತಾನೆ. ಆದ್ದರಿಂದಲೇ **ಆಥರ್ವಣದಲ್ಲಿ** "ಯಾವದು ಉತ್ಕ್ರಾಂತವಾದರೆ ನಾನು ಉತ್ಕ್ರಾಂತನಾಗುವೆನೋ, ಅಥವಾ ಯಾವದು ನಿಂತಿದ್ದರೆ ನಿಂತಿರುವೆನೋ (ಎಂದು ಯೋಚಿಸಿ)

---

1. ಇದರ ಮುಂದೊಂದು 'ಚ' ಇದ್ದು ಬಿಟ್ಟುಹೋಗಿರಬಹುದೆಂದು ಕಾಣುತ್ತದೆ.

2. ಲಿಂಗದಲ್ಲಿ ಒಂದಾಗಲು.

3. ಕರಣಗಳಿಂದ ತೆಗೆದುಕೊಂಡ ವಾಸನೆಯನ್ನು ಭಾಸ (ಬೆಳಕು) ಎಂದಿದೆ; ಆತ್ಮನ ಚೈತನ್ಯವನ್ನು ಜ್ಯೋತಿ ಎಂದಿದೆ. ೪-೩-೯ (ಭಾ. ಭಾ. ೧೮೬)ನೋಡಿ.

4. ಇಲ್ಲಿ ಬೆಳಗುವದೆಂದರೆ ಮುಂದಿನ ಲೋಕದ ನಿರೀಕ್ಷಣೆಯ ವಾಸನೆಯೇ ಎಂದು ವಾರ್ತಿಕ (೪-೪-೭೮).

ಅವನು ಪ್ರಾಣವನ್ನು ಸೃಜಿಸಿದನು" (ಪ್ರ. ೬-೩) ಎಂದಿದೆ.[1] ಆ (ಲಿಂಗ)ದಲ್ಲಿ ಆತ್ಮಚೈತನ್ಯಜ್ಯೋತಿಯು ಯಾವಾಗಲೂ ಹೆಚ್ಚಾಗಿ ಅಭಿವ್ಯಕ್ತವಾಗಿರುತ್ತದೆ.[2] ಆ ಉಪಾಧಿಯ ಮೂಲಕವೇ ಅಲ್ಲವೆ, ಆತ್ಮನಲ್ಲಿ ಹುಟ್ಟು, ಸಾವು, ಹೋಗು, ಬರವು -ಮುಂತಾದ ಎಲ್ಲಾ ವಿಕ್ರಿಯೆಗಳ ರೂಪವಾದ ವ್ಯವಹಾರವೂ (ಆಗಿರುವದು)[3] ? ಬುದ್ಧಿಯೇ ಮುಂತಾದ ಹನ್ನೆರಡು ವಿಧವಾಗಿರುವ ಕರಣವೂ ಆ (ಲಿಂಗದ) ಸ್ವರೂಪವೇ ಆಗಿರುತ್ತದೆ.[4] ಅದೇ ಸೂತ್ರವು,[5] ಅದೇ ಜೀವನವು,[6] ಅದೇ ಜಂಗಮಕ್ಕೂ ಸ್ಥಾವರಕ್ಕೂ ಅಂತರಾತ್ಮನು.[7]

## ಜೀವನ ನಿಷ್ಕ್ರಮಣಮಾರ್ಗಗಳು

(ಭಾಷ್ಯ)

೨೫೭. ತೇನ ಪ್ರದ್ಯೋತೇನ ಹೃದಯಾಗ್ರಪ್ರಕಾಶೇನ ನಿಷ್ಕ್ರಮಮಾಣಃ ಕೇನ ಮಾರ್ಗೇಣ ನಿಷ್ಕ್ರಾಮತೀತಿ? ಉಚ್ಯತೇ। ಚಕ್ಷುಷ್ಟೋ ವಾ। ಆದಿತ್ಯಲೋಕಪ್ರಾಪ್ತಿನಿಮಿತ್ತಂ ಜ್ಞಾನಂ ಕರ್ಮ ವಾ ಯದಿ ಸ್ಯಾತ್। ಮೂರ್ಧ್ನೋ ವಾ ಬ್ರಹ್ಮಲೋಕಪ್ರಾಪ್ತಿನಿಮಿತ್ತಂ ಚೇತ್। ಅನ್ಯೇಭ್ಯೋ ವಾ ಶರೀರದೇಶೇಭ್ಯಃ ಶರೀರಾವಯವೇಭ್ಯಃ । ಯಥಾಕರ್ಮ ಯಥಾಶ್ರುತಮ್ ॥

(ಭಾಷ್ಯಾರ್ಥ)

ಆ ಬೆಳಕಿನಿಂದ ಹೃದಯದ ತುದಿಯಲ್ಲಾಗುವ ಪ್ರಕಾಶದಿಂದ ಹೊರಡು (ವಾಗ ಇವನು) ಯಾವ ಮಾರ್ಗದಿಂದ ಹೊರಡುತ್ತಾನೆ? ಎಂದರೆ ಹೇಳುತ್ತಾನೆ. ಕಣ್ಣಿನಿಂದಾಗಲಿ, ಆದಿತ್ಯಲೋಕವನ್ನು ಪಡೆಯುವದಕ್ಕೆ ನಿಮಿತ್ತ

---

1. ಲಿಂಗದ ವ್ಯಾಪಾರವು ಪ್ರಾಣಪ್ರಧಾನವಾಗಿದೆ.

2. ಏಕೆಂದರೆ ಅದು ಸ್ವಚ್ಛವಾಗಿರುತ್ತದೆ.

3. ಸ್ವತಃ ಆತ್ಮನಿಗೆ ಜನ್ಮಾದಿಗಳಿಲ್ಲ. ಪ್ರ. ಭಾ. ೪-೫ (ಭಾ. ಭಾ. ೬೨). ಮಾಂ. ಕಾ. ಭಾ. ೩-೩ (ಭಾ. ಭಾ. ೧೩೨), ೩-೪ (ಭಾ. ಭಾ. ೧೩೩), ೩-೯ (ಭಾ. ಭಾ. ೧೪೬).

4. ಅದ್ದರಿಂದ 'ನೋಡುತ್ತಾನೆ' ಮುಂತಾದ ವ್ಯವಹಾರವೂ ಅದರ ಮೂಲಕವೇ ಆಗಿರುತ್ತದೆ -ಎಂದು ಭಾವ. ಐ. ಭಾ. ೩-೧ (ಭಾ. ಭಾ. ೮೩), ೩-೨ (ಭಾ. ಭಾ. ೮೪).

5. ಸಮಷ್ಟಿಪ್ರಾಣವು, ೩-೭-೨ರ ಭಾಷ್ಯವನ್ನು ನೋಡಿ.

6. ಇದು ಯಾವದರ ಪರಾಮರ್ಶವೆಂಬುದು ತಿಳಿಯಲಿಲ್ಲ. ಜಗತ್ತು ಜೀವಿಸುತ್ತಿದೆಯೆಂಬುದು ಲಿಂಗವಿದೆ ಎಂಬುದಕ್ಕೆ ಒಂದು ಪ್ರಮಾಣವು ಎಂದು ಆ॥ ಟೀ॥.

7. ಸರ್ವಭೂತಗಳಲ್ಲಿ ದ್ರಷ್ಟೃ, ಶ್ರೋತೃ -ಮುಂತಾದ ರೂಪದಿಂದ ತೋರಿಕೊಳ್ಳುವ ಕರಣಾತ್ಮನು. ಸ್ಥೂಲಶರೀರಕ್ಕೂ ಆತ್ಮನಿಗೂ ನಡುವೆ ಇರುವದರಿಂದ ಅಂತರಾತ್ಮನೆಂದಿದೆ. ಮುಂ. ಭಾ. ೨-೧-೪ (ಭಾ. ಭಾ. ೬೨) ನೋಡಿ.

ವಾದ ಜ್ಞಾನವಾಗಲಿ, ಕರ್ಮವಾಗಲಿ ಇದ್ದರೆ (ಈ ದ್ವಾರ) ; ನೆತ್ತಿಯಿಂದ ಲಾಗಲಿ, ಬ್ರಹ್ಮಲೋಕಪ್ರಾಪ್ತಿಗೆ ನಿಮಿತ್ತವಾದ (ಜ್ಞಾನಕರ್ಮಗಳಿದ್ದರೆ ಈ ದ್ವಾರ); ಅಥವಾ ಮಿಕ್ಕ ಬೇರೆಯ ಶರೀರದೇಶಗಳಿಂದಲಾಗಲಿ ಎಂದರೆ ಶರೀರಾವಯವಗಳಿಂದಲಾಗಲಿ ಕರ್ಮಕ್ಕನುಗುಣವಾಗಿಯೂ ಜ್ಞಾನಕ್ಕನುಗುಣವಾಗಿಯೂ[1] (ನಿಷ್ಕ್ರಾಂತನಾಗುತ್ತಾನೆ).

## ಜೀವನೊಡನೆ ಪ್ರಾಣಕರಣಗಳೂ ಹೊರಡುತ್ತವೆ

(ಭಾಷ್ಯ)

೨೫೮. ತಂ ವಿಜ್ಞಾನಾತ್ಮಾನಮ್ ಉತ್ಕ್ರಾಮನ್ತಂ ಪರಲೋಕಾಯ ಪ್ರಸ್ಥಿತಮ್, ಪರಲೋಕಾಯ ಉದ್ಭೂತಾಕೂತಮ್ ಇತ್ಯರ್ಥಃ । ಪ್ರಾಣಃ ಸರ್ವಾಧಿಕಾರಿಸ್ಥಾನೀಯಃ ರಾಜ್ಞ ಇವ ಅನೂತ್ಕ್ರಾಮತಿ । ತಂ ಚ ಪ್ರಾಣಮ್ ಅನೂತ್ಕ್ರಾಮನ್ತಂ ವಾಗಾದಯಃ ಸರ್ವೇ ಪ್ರಾಣಾಃ ಅನೂತ್ಕ್ರಾಮನ್ತಿ । ಯಥಾಪ್ರಧಾನಾನ್ವಾಚಿಖ್ಯಾಸಾ ಇಯಮ್, ನ ತು ಕ್ರಮೇಣ ಸಾರ್ಥವತ್ ಗಮನಮ್ ಇಹ ವಿವಕ್ಷಿತಮ್ ॥

(ಭಾಷ್ಯಾರ್ಥ)

ಆ ವಿಜ್ಞಾನಾತ್ಮನು ಉತ್ಕ್ರಾಂತನಾಗಲು, ಪರಲೋಕಕ್ಕಾಗಿ ಹೊರಟಿರುವಲ್ಲಿ, ಪರಲೋಕಕ್ಕಾಗಿ ಎದ್ದುಕೊಂಡ ಸಂಕಲ್ಪವುಳ್ಳವನಾಗಿರುವಲ್ಲಿ ಎಂದರ್ಥ ; (ಅವನನ್ನು) ಅನುಸರಿಸಿ ಪ್ರಾಣನು, ಅರಸನಿಗೆ ಹೇಗೋ ಹಾಗೆ ಸರ್ವಾಧಿಕಾರಿಯಂತಿರುವ ಪ್ರಾಣನು, ಉತ್ಕ್ರಾಂತನಾಗುವನು ; ಮತ್ತು ಆ ಪ್ರಾಣನು ಉತ್ಕ್ರಾಂತನಾಗಲು (ಅವನನ್ನು) ಅನುಸರಿಸಿ ವಾಕ್ಕೇ ಮುಂತಾದ ಎಲ್ಲಾ ಪ್ರಾಣಗಳೂ ಉತ್ಕ್ರಾಂತವಾಗುವವು. ಇದು ಪ್ರಾಮುಖ್ಯವನ್ನನುಸರಿಸಿ ಹೇಳಬೇಕೆಂದಿರುವದೇ ಹೊರತು ಇಲ್ಲಿ ಸಾರ್ಥದಂತೆ ಕ್ರಮವಾಗಿ[2] ಹೋಗುವರೆಂದೇನೂ ಹೇಳಹೊರಟಿರುವದಿಲ್ಲ.

---

1. ಕ. ೨-೨-೭ರ ಸೂಚನೆ. ಯಾವ ಲೋಕಕ್ಕೆ ಹೋಗಬೇಕಾಗಿದೆಯೋ ಅದಕ್ಕನುಗುಣವಾದ ಕರಣಾದಿಮಾರ್ಗದಿಂದ ಹೋಗುತ್ತಾನೆ ಎಂದು ಅಭಿಪ್ರಾಯ. ಸಗುಣ ಬ್ರಹ್ಮೋಪಾಸಕನು ಮಾತ್ರ ಮೂರ್ಧಸ್ಥಾನದಿಂದಲೇ ಹೊರಡುತ್ತಾನೆ. ಸೂ. ಭಾ. ೪-೨-೧೭ನ್ನು ನೋಡಿ.

2. ಜೀವನು ಮುಖ್ಯನು, ಅವನ ತರುವಾಯ ಮುಖ್ಯಪ್ರಾಣವು, ಅವನ ತರುವಾಯ ಮಿಕ್ಕ ಕರಣಗಳು -ಎಂದು ಪ್ರಾಮುಖ್ಯವನ್ನು ತಿಳಿಸುವದಕ್ಕೆ ಹೇಳಿದ್ದೇ ಹೊರತು ಜೀವನ ಹಿಂದೆ ಪ್ರಾಣದ ಉತ್ಕ್ರಾಂತಿ, ಅದಾದಬಳಿಕ ಮಿಕ್ಕ ಪ್ರಾಣಗಳ ಉತ್ಕ್ರಾಂತಿ - ಎಂದು ವರ್ತಕರ ವಾಹನಗಳು ಒಂದರಹಿಂದೊಂದು ಹೊರಡುವಂತೆ ಕ್ರಮಕ್ರಮವಾಗಿ ಆಗುವದೆಂದೇನೂ ಇಲ್ಲಿ ವಿವಕ್ಷಿತವಲ್ಲ ಎಂದು ಅಭಿಪ್ರಾಯ. ಉತ್ಕ್ರಾಂತಿಕ್ರಮದ ವಿಚಾರವನ್ನು ಸೂ. ಭಾ. ೪-೨-೧ರಿಂದ ೬ರವರೆಗೆ ವರ್ಣಿಸಿದೆ.

# ಉತ್ಕ್ರಾಂತಿಕಾಲದಲ್ಲುಂಟಾಗುವ ವಿಜ್ಞಾನ

(ಭಾಷ್ಯ)

೨೫. ತದಾ ಏಷ ಆತ್ಮಾ ಸವಿಜ್ಞಾನೋ ಭವತಿ ಸ್ವಪ್ನೇ ಇವ ವಿಶೇಷ ವಿಜ್ಞಾನವಾನ್ ಭವತಿ ಕರ್ಮವಶಾತ್ ನ ಸ್ವತನ್ತ್ರಃ। ಸ್ವಾತನ್ತ್ರ್ಯೇಣ ಹಿ ಸವಿಜ್ಞಾನತ್ವೇ ಸರ್ವಃ ಕೃತಕೃತ್ಯಃ ಸ್ಯಾತ್ । ನೈವ ತು ತತ್ ಲಭ್ಯತೇ। ಅತ ಏವ ಆಹ ವ್ಯಾಸಃ "ಸದಾ ತದ್ಭಾವಭಾವಿತಃ" (ಗೀ ೮-೬) ಇತಿ। ಕರ್ಮಣಾ ತು ಉದ್ಭಾವ್ಯಮಾನೇನ ಅನ್ತಃಕರಣವೃತ್ತಿವಿಶೇಷಾಶ್ರಿತವಾಸನಾತ್ಮಕವಿಶೇಷವಿಜ್ಞಾನೇನ ಸರ್ವೋ ಲೋಕಃ ಏತಸ್ಮಿನ್ ಕಾಲೇ ಸವಿಜ್ಞಾನೋ ಭವತಿ। ಸವಿಜ್ಞಾನಮೇವ ಚ ಗನ್ತವ್ಯಮ್ ಅನ್ವವಕ್ರಾಮತಿ ಅನುಗಚ್ಛತಿ ವಿಶೇಷವಿಜ್ಞಾನೋದ್ಭಾಸಿತಮೇವ ಇತ್ಯರ್ಥಃ । ತಸ್ಮಾತ್ ತತ್ಕಾಲೇ ಸ್ವಾತನ್ತ್ರ್ಯಾರ್ಥಂ ಯೋಗಧರ್ಮಾನುಸೇವನಂ ಪರಿಸಂಖ್ಯಾನಾಭ್ಯಾಸಶ್ಚ ವಿಶಿಷ್ಟಪುಣ್ಯೋಪಚಯಶ್ಚ ಶ್ರದ್ಧಧಾನೈಃ ಪರಲೋಕಾರ್ಥಿಭಿಃ ಅಪ್ರಮತ್ತೈಃ ಕರ್ತವ್ಯಃ ಇತಿ ಸರ್ವಶಾಸ್ತ್ರಾಣಾಂ ಯತ್ನತೋ ವಿಧೇಯೋಽರ್ಥಃ ದುಶ್ಚರಿತಾಚ್ಚ ಉಪರಮಣಮ್ । ನ ಹಿ ತತ್ಕಾಲೇ ಶಕ್ಯತೇ ಕಿಂಚಿತ್ ಸಂಪಾದಯಿತುಮ್ । ಕರ್ಮಣಾ ನೀಯಮಾನಸ್ಯ ಸ್ವಾತನ್ತ್ರ್ಯಾಭಾವಾತ್। "ಪುಣ್ಯೋ ವೈ ಪುಣ್ಯೇನ ಕರ್ಮಣಾ ಭವತಿ ಪಾಪಃ ಪಾಪೇನ" (೩-೨-೧೩) ಇತ್ಯುಕ್ತಮ್ । ಏತಸ್ಯ ಹಿ ಅನರ್ಥಸ್ಯ ಉಪಶಮೋಪಾಯವಿಧಾನಾಯ ಸರ್ವಶಾಖೋಪನಿಷದಃ ಪ್ರವೃತ್ತಾಃ । ನ ಹಿ ತದ್ವಿಹಿತೋಪಾಯಾನುಸೇವನಂ ಮುಕ್ತ್ವಾ ಆತ್ಯನ್ತಿಕಃ ಅಸ್ಯ ಅನರ್ಥಸ್ಯ ಉಪಶಮೋಪಾಯೋಽಸ್ತಿ । ತಸ್ಮಾತ್ ಅತ್ರೈವ ಉಪನಿಷದ್ವಿಹಿತೋಪಾಯೇ ಯತ್ನಪರೈರ್ಭವಿತವ್ಯಮ್ ಇತ್ಯೇಷ ಪ್ರಕರಣಾರ್ಥಃ ॥

(ಭಾಷ್ಯಾರ್ಥ)

ಆಗ ಈ ಆತ್ಮನು ಸವಿಜ್ಞಾನನಾಗುತ್ತಾನೆ, ವಿಶೇಷವಿಜ್ಞಾನವುಳ್ಳವನಾಗುತ್ತಾನೆ. (ಇದು) ಕರ್ಮವಶದಿಂದಲೇ ಹೊರತು ಸ್ವತಂತ್ರ(ನಾಗಿ ಸವಿಜ್ಞಾನನಾಗು)ವದಿಲ್ಲ. ಏಕೆಂದರೆ ಸ್ವತಂತ್ರನಾಗಿಯೇ ಸವಿಜ್ಞಾನನಾಗಿದ್ದರೆ ಪ್ರತಿಯೊಬ್ಬನೂ ಕೃತಕೃತ್ಯನಾದಾನು. ಆದರೆ ಅದು ದೊರೆಯುವದೇ ಇಲ್ಲ. ಆದ್ದರಿಂದಲೇ **ವ್ಯಾಸರು** (ಹೀಗೆಂದಿರುತ್ತಾರೆ) : "ಯಾವಾಗಲೂ ಅದರ ಭಾವದಿಂದ ಭಾವಿತನಾಗಿದ್ದವನು (ಅಂತಕಾಲದಲ್ಲಿ ಯಾವ ಭಾವವನ್ನು ಸ್ಮರಿಸುತ್ತಿರುವನೋ ಅದನ್ನೇ ಪಡೆಯುತ್ತಾನೆ)". (ಗೀ. ೮-೬) ಕರ್ಮದಿಂದ ಎದ್ದುಕೊಳ್ಳುವ ಅಂತಃಕರಣವೃತ್ತಿವಿಶೇಷವನ್ನು ಆಶ್ರಯಿಸಿಕೊಂಡಿರುವ ವಾಸನಾತ್ಮಕವಾದ ವಿಶೇಷವಿಜ್ಞಾನದಿಂದಲೇ ಪ್ರತಿಯೊಬ್ಬನೂ ಈ ಕಾಲವಲ್ಲಿ

ಸವಿಜ್ಞಾನನಾಗುತ್ತಾನೆ. ಸವಿಜ್ಞಾನವಾಗಿಯೇ ಗಂತವ್ಯವನ್ನು ಸೇರಿಕೊಳ್ಳು ತ್ತಾನೆ, (ಆ) ವಿಶೇಷವಿಜ್ಞಾನವು ತೋರಿಸಿದ್ದನ್ನೇ (ಸೇರಿಕೊಳ್ಳುತ್ತಾನೆ) ಎಂದರ್ಥ. ಆದ್ದರಿಂದ ಆ ಕಾಲದಲ್ಲಿ (ವಿಜ್ಞಾನದಲ್ಲಿ) ಸ್ವತಂತ್ರನಾಗಿರು ವದಕ್ಕಾಗಿ ಯೋಗಧರ್ಮಗಳನ್ನು ಸೇವಿಸುವದು, ಪರಿಸಂಖ್ಯಾನದ ಅಭ್ಯಾಸ,[1] ವಿಶಿಷ್ಟವಾದ ಪುಣ್ಯವನ್ನು ಕೂಡಿಹಾಕಿಕೊಳ್ಳುವದು -(ಇವುಗಳನ್ನು) ಶ್ರದ್ಧೆಯುಳ್ಳ ಪರಲೋಕಾರ್ಥಿಗಳು ಪ್ರಮಾದ ರಹಿತರಾಗಿ ಮಾಡಬೇಕು. ಸರ್ವಶಾಸ್ತ್ರಗಳೂ ಯತ್ನದಿಂದ (ಈ) ಅರ್ಥ ವನ್ನು ವಿಧಿಸಿರುತ್ತವೆ.[2] ಕೆಟ್ಟ ನಡತೆಯನ್ನು ಬಿಡುವದನ್ನೂ (ಅಭ್ಯಾಸ ಮಾಡಬೇಕು ಎಂದೂ ವಿಧಿಸಿರುತ್ತವೆ). ಆ (ಉತ್ಕ್ರಾಂತಿ)ಕಾಲದಲ್ಲಿ ಏನನ್ನೂ ಸಂಪಾದಿಸಿಕೊಳ್ಳುವದಕ್ಕೆ ಆಗುವದೇ ಇಲ್ಲ, ಏಕಂದರೆ ಕರ್ಮವು (ಅವನನ್ನು) ಕರೆದೊಯ್ಯುತ್ತಿರುವದರಿಂದ (ಆಗ ಯಾವ) ಸ್ವಾತಂತ್ರ್ಯವೂ ಇರುವದಿಲ್ಲ. "ಪುಣ್ಯಕರ್ಮದಿಂದ ಒಳ್ಳೆಯವನೇ ಆಗುವನು, ಪಾಪದಿಂದ ಕೆಟ್ಟವನಾಗುವನು" (೩-೨-೧೩) ಎಂದು ಹಿಂದೆ ಹೇಳಿಯೂ ಇದೆ.[3] ಈ ಅನರ್ಥವು ನಾಶವಾಗುವದಕ್ಕಾಗಿ ಉಪಾಯವನ್ನು ತಿಳಿಸುವದಕ್ಕೆ ಸರ್ವಶಾಖೆಗಳ ಉಪನಿಷತ್ತುಗಳೂ ಹೊರಟಿರುತ್ತವೆ. ಏಕೆಂದರೆ ಆ (ಉಪನಿಷತ್ತು)ಗಳಲ್ಲಿ ವಿಹಿತವಾಗಿರುವ ಉಪಾಯವನ್ನು ಸೇವನೆ ಮಾಡುವದನ್ನು ಬಿಟ್ಟರೆ ಈ ಅನರ್ಥವನ್ನು ಆತ್ಯಂತಿಕವಾಗಿ ನಾಶ ಗೊಳಿಸುವ ಉಪಾಯವು ಇಲ್ಲವೇ ಇಲ್ಲ. ಆದ್ದರಿಂದ ಇಲ್ಲಿಯೇ ಉಪ ನಿಷತ್ತುಗಳಲ್ಲಿ ವಿಹಿತವಾಗಿರುವ ಉಪಾಯವನ್ನು (ಮಾಡುವದ)ರಲ್ಲಿ ಯತ್ನಪರರಾಗಬೇಕು ಎಂಬುದು (ಈ) ಪ್ರಕರಣದ ಅರ್ಥವು.[4]

---

1. ಯೋಗಧರ್ಮಗಳೆಂದರೆ ಯಮನಿಯಮಾದಿಗಳು, ಪರಿಸಂಖ್ಯಾನವೆಂದರೆ ಧ್ಯಾನ.

2. ಈ ವಾಕ್ಯವು ಯಾವದಕ್ಕೆ ಅನ್ವಯಿಸಬೇಕೆಂದು ಸ್ಪಷ್ಟವಾಗಿ ತಿಳಿಯುವದಿಲ್ಲ. ಪುಣ್ಯರಾಶಿಯನ್ನು ಕೂಡಿಸಿಕೊಳ್ಳಬೇಕೆಂಬುದನ್ನೇ ವಿಧಿಕಾಂಡವು ತಾತ್ಪರ್ಯದಿಂದ ತಿಳಿಸು ತ್ತದೆ ಎಂದು ಆ॥ ಟೀ॥. ಹಿಂದೆ ಹೇಳಿರುವ ಯೋಗಧರ್ಮಾನುಷ್ಠಾನಾದಿಗಳಿಗೂ ಇದನ್ನು ಅನ್ವಯಿಸಬಹುದಾಗಿದೆ.

3. ವೇದದಲ್ಲಿಯೂ ಸ್ಮೃತಿಗಳಲ್ಲಿಯೂ ವಿಹಿತವಾಗಿರುವದನ್ನು ಮಾಡುವದೂ ಪ್ರತಿಷಿದ್ಧವಾದದ್ದನ್ನು ಬಿಡುವದೂ ಅಂತಕಾಲದಲ್ಲಿ ಉತ್ತಮಜ್ಞಾನವು ಸ್ವತಂತ್ರದಿಂದ ಉಂಟಾಗುವದಕ್ಕೇ.

4. ಕರ್ಮಕಾಂಡದರ್ಥದ ಅನುಷ್ಠಾನದಿಂದ ಆತ್ಯಂತಿಕವಾಗಿ ಧರ್ಮಾಧರ್ಮಗಳ ಫಲೋಪಭೋಗರೂಪವಾದ ಅನರ್ಥವು ನಾಶವಾಗಲಾರದು ; ಉಪನಿಷತ್ತಿನಲ್ಲಿ ಹೇಳಿರುವ ಮುಕ್ತಿ[illegible]ಣವಾದ ಜ್ಞಾನೋಪಾಸನೆಗಳ ಸಂಪಾದನೆಯಿಂದಲೇ ಅದು ಸಾಧ್ಯ.

## ಉತ್ಕ್ರಾಂತನಾದವನಿಗೆ ವಿದ್ಯಾಕರ್ಮಪೂರ್ವಪ್ರಜ್ಞೆಗಳೇ ಸಂಭಾರ

(ಭಾಷ್ಯ)

೨೬೦. ಶಕಟವತ್ ಸಂಭೃತಸಂಭಾರಃ ಉತ್ಸರ್ಜನ್ ಯಾತಿ ಇತ್ಯುಕ್ತಮ್। ಕಿಂ ಪುನಸ್ತಸ್ಯ ಪರಲೋಕಾಯ ಪ್ರವೃತ್ತಸ್ಯ ಪಥಿ ಅದನಂ ಶಾಕಟಿಕಸಂಭಾರಸ್ಥಾನೀಯಮ್, ಗತ್ವಾ ವಾ ಪರಲೋಕಂ ಯದ್ ಭುಙ್ಕ್ತೇ ಶರೀರಾದ್ಯಾರಮ್ಭಕಂ ಚ ಯತ್ ತತ್ ಕಿಮಿತಿ? ಉಚ್ಯತೇ। ತಂ ಪರಲೋಕಾಯ ಗಚ್ಛನ್ತಮ್ ಆತ್ಮಾನಂ ವಿದ್ಯಾಕರ್ಮಣೀ ವಿದ್ಯಾ ಚ ಕರ್ಮ ಚ ವಿದ್ಯಾಕರ್ಮಣೀ। ವಿದ್ಯಾ ಸರ್ವಪ್ರಕಾರಾ ವಿಹಿತಾ ಪ್ರತಿಷಿದ್ಧಾ ಚ, ಅವಿಹಿತಾ ಅಪ್ರತಿಷಿದ್ಧಾ ಚ। ತಥಾ ಕರ್ಮ ವಿಹಿತಂ ಪ್ರತಿಷಿದ್ಧಂ ಚ, ಅವಿಹಿತಮ್ ಅಪ್ರತಿಷಿದ್ಧಂ ಚ। ಸಮನ್ವಾರಭೇತೇ ಸಮ್ಯಕ್ ಅನ್ವಾರಭೇತೇ ಅನ್ವಾಲಭೇತೇ ಅನುಗಚ್ಛತಃ। ಪೂರ್ವಪ್ರಜ್ಞಾ ಚ ಪೂರ್ವಾನುಭೂತವಿಷಯಾ ಪ್ರಜ್ಞಾ ಪೂರ್ವಪ್ರಜ್ಞಾ ಅತೀತಕರ್ಮಫಲಾನುಭವವಾಸನಾ ಇತ್ಯರ್ಥಃ। ಸಾ ಚ ವಾಸನಾ ಅಪೂರ್ವಕರ್ಮಾರಮ್ಭೇ ಕರ್ಮವಿಪಾಕೇ ಚ ಅಙ್ಗಂ ಭವತಿ। ತೇನ ಅಸಾವಪಿ ಅನ್ವಾರಭತೇ। ನ ಹಿ ತಯಾ ವಾಸನಯಾ ವಿನಾ ಕರ್ಮ ಕರ್ತುಂ ಫಲಂ ಚ ಉಪಭೋಕ್ತುಂ ಶಕ್ಯತೇ। ನ ಹಿ ಅನಭ್ಯಸ್ತೇ ವಿಷಯೇ ಕೌಶಲಮ್ ಇನ್ದ್ರಿಯಾಣಾಂ ಭವತಿ। ಪೂರ್ವಾನುಭೂತ[1]ವಾಸನಾಪ್ರವೃತ್ತಾನಾಂ ತು ಇನ್ದ್ರಿಯಾಣಾಮ್ ಇಹ ಅಭ್ಯಾಸಮನ್ತರೇಣ ಕೌಶಲಮ್ ಉಪಪದ್ಯತೇ। ದೃಶ್ಯತೇ ಚ ಕೇಷಾಂಚಿತ್ ಕಾಸುಚಿತ್ ಕ್ರಿಯಾಸು ಚಿತ್ರಕರ್ಮಾದಿಲಕ್ಷಣಾಸು ವಿನೈವ ಇಹಾಭ್ಯಾಸೇನ ಜನ್ಮತ ಏವ ಕೌಶಲಂ ಕಾಸುಚಿತ್ ಅತ್ಯನ್ತಸೌಕರ್ಯಯುಕ್ತಾಸ್ವಪಿ ಅಕೌಶಲಂ ಕೇಷಾಂಚಿತ್। ತಥಾ ವಿಷಯೋಪಭೋಗೇಷು ಸ್ವಭಾವತ ಏವ ಕೇಷಾಂಚಿತ್ ಕೌಶಲಾಕೌಶಲೇ ದೃಶ್ಯೇತೇ। ತಚ್ಚೈತತ್ ಸರ್ವಂ ಪೂರ್ವಪ್ರಜ್ಞೋದ್ಭವಾನುದ್ಭವನಿಮಿತ್ತಮ್। ತೇನ ಪೂರ್ವಪ್ರಜ್ಞಯಾ ವಿನಾ ಕರ್ಮಣಿ ವಾ ಫಲೋಪಭೋಗೇ ವಾ ನ ಕಸ್ಯಚಿತ್ ಪ್ರವೃತ್ತಿರುಪಪದ್ಯತೇ। ತಸ್ಮಾತ್ ಏತತ್ ತ್ರಯಂ ಶಾಕಟಿಕಸಂಭಾರಸ್ಥಾನೀಯಂ ಪರಲೋಕಪಥ್ಯದನಂ ವಿದ್ಯಾಕರ್ಮಪೂರ್ವಪ್ರಜ್ಞಾಖ್ಯಮ್। ಯಸ್ಮಾತ್ ವಿದ್ಯಾಕರ್ಮಣೀ ಪೂರ್ವಪ್ರಜ್ಞಾ ಚ ದೇಹಾನ್ತರಪ್ರತಿಪತ್ತ್ಯುಪಭೋಗಸಾಧನಮ್। ತಸ್ಮಾತ್ ವಿದ್ಯಾಕರ್ಮಾದಿ ಶುಭಮೇವ ಸಮಾಚರೇತ್ ಯಥಾ ಇಷ್ಟದೇಹಸಂಯೋಗೋಪಭೋಗೌ ಸ್ಯಾತಾಮ್ ಇತಿ ಪ್ರಕರಣಾರ್ಥಃ॥

(ಭಾಷ್ಯಾರ್ಥ)

ಬಂಡಿಯಂತೆ ಸಂಭಾರವನ್ನು ಭರ್ತಿಮಾಡಿಕೊಂಡು ಶಬ್ದಮಾಡುತ್ತಾ ಹೋಗುತ್ತಾನೆ ಎಂದು ಹಿಂದೆ[2] ಹೇಳಿದೆಯಷ್ಟೆ. (ಹೀಗೆ) ಪರಲೋಕಕ್ಕೆ

---

1. ಪೂರ್ವಾನುಭವ ಎಂದು ಅ॥ ಪಾಠ. 2. ೪-೩-೩೫ರಲ್ಲಿ

ಹೊರಟಿರುವ ಆವನಿಗೆ ಬಂಡಿಯ ಸಂಭಾರದಂತೆ ಇರುವ ದಾರಿಯಲ್ಲಿ ತಿನ್ನುವ (ಬುತ್ತಿ)ಯೂ ಹೋಗಿ ಪರಲೋಕದಲ್ಲಿ ಭೋಗಿಸುತ್ತಾನಲ್ಲ (ಅದೂ), ಮತ್ತು (ಹೊಸ) ಶರೀರವೇ ಮುಂತಾದವುಗಳಿಗೆ ಕಾರಣವಾಗಿರುವದಲ್ಲ ಅದೂ ಯಾವದು ? ಎಂದರೆ ಹೇಳುತ್ತಿದಾನೆ.

ಆ ಪರಲೋಕಕ್ಕೆ ಹೋಗುತ್ತಿರುವ ಆತ್ಮನನ್ನು ವಿದ್ಯಾಕರ್ಮಗಳು- ವಿದ್ಯೆಯೂ ಕರ್ಮವೂ ವಿದ್ಯಾಕರ್ಮಗಳು. (ಇಲ್ಲಿ) ವಿದ್ಯೆ ಎಂದರೆ ವಿಹಿತವಾದದ್ದು, ಪ್ರತಿಷಿದ್ಧವಾದದ್ದು, ಅವಿಹಿತವಾದದ್ದು, ಅಪ್ರತಿಷಿದ್ಧವಾದದ್ದು (ಈ) ಎಲ್ಲಾ ಪ್ರಕಾರದ್ದು. ಹೀಗೆಯೇ ಕರ್ಮವೆಂದರೆ ವಿಹಿತವಾದದ್ದು, ಪ್ರತಿಷಿದ್ಧವಾದದ್ದು, ಅವಿಹಿತವಾದದ್ದು, ಮತ್ತು ಅಪ್ರತಿಷಿದ್ಧವಾದದ್ದು.[1] (ಇವು)- (ಸಮನ್ವಾರಭೇತೇ ಎಂದರೆ) ಚೆನ್ನಾಗಿ ಅನ್ವಾರಂಭಣಮಾಡುವವು; ಅನ್ವಾರಂಭಣ ಮಾಡುತ್ತವೆ ಎಂದರೆ ಬೆಂಬಿಡಿಯುತ್ತವೆ, ಹಿಂದೆಯೇ ಬರುತ್ತವೆ (ಎಂದರ್ಥ). ಮತ್ತು ಪೂರ್ವಪ್ರಜ್ಞೆಯೂ- ಪೂರ್ವಪ್ರಜ್ಞೆ ಎಂದರೆ ಹಿಂದೆ ಅನುಭವಿಸಿದ ವಿಷಯದ ಪ್ರಜ್ಞೆ, ಹಿಂದೆ ಆಗಿಹೋಗಿರುವ ಕರ್ಮಫಲಾನುಭವವಾಸನೆ ಎಂದರ್ಥ. ಆ (ವಾಸನೆಯೂ)- ಹೊಸ ಕರ್ಮವನ್ನು ಆರಂಭಿಸುವದಕ್ಕೂ ಕರ್ಮವು ವಿಪಾಕವಾಗುವದಕ್ಕೂ ಅಂಗವಾಗಿರುತ್ತದೆ. ಆದ್ದರಿಂದ ಅದೂ— ಬೆಂಬಿಡಿಯುತ್ತದೆ. ಏಕೆಂದರೆ ಆ ವಾಸನೆಯಿಲ್ಲದೆ ಕರ್ಮವನ್ನು ಮಾಡುವದಕ್ಕಾಗಲಿ ಫಲವನ್ನು ಉಪಭೋಗಿಸುವದಕ್ಕಾಗಲಿ ಆಗುವದೇ ಇಲ್ಲ ಅಭ್ಯಾಸ ಮಾಡದೆ ಇದ್ದ ವಿಷಯದಲ್ಲಿ ಇಂದ್ರಿಯಗಳ ಕೌಶಲವು ಇರುವದೇ ಇಲ್ಲವಷ್ಟೆ.[2] ಆದರೆ ಹಿಂದಿನ ಅನುಭವದ ವಾಸನೆಯಿಂದ ಇಂದ್ರಿಯಗಳು ಮುಂದಕ್ಕೆ ಬಂದರೆ ಇಲ್ಲಿ ಅಭ್ಯಾಸವಿಲ್ಲದೆಯೇ ಕೌಶಲವು ಉಂಟಾಗಬಹುದಾಗಿದೆ. ಕೆಲವರಿಗೆ ಚಿತ್ರಕರ್ಮವೇ ಮುಂತಾದವುಗಳಂಥ ಕೆಲವು ಕ್ರಿಯೆಗಳಲ್ಲಿ ಹುಟ್ಟಿದಾಗಿನಿಂದಲೂ ಇಲ್ಲಿ ಅಭ್ಯಾಸಮಾಡದೆಯೇ ಕೌಶಲವಿರುವದು ಕಂಡೂಬರುತ್ತದೆ ;

---

1. "ವಿಹಿತವಿದ್ಯೆ ಎಂದರೆ ಧ್ಯಾನರೂಪವಾದದ್ದು, ಪ್ರತಿಷಿದ್ಧವಾದದ್ದು ನಗ್ನಸ್ತ್ರೀದರ್ಶನಾದಿರೂಪವಾದದ್ದು, ಅವಿಹಿತವಾದದ್ದು ಘಟಾದಿವಿಷಯಕವಾದದ್ದು, ಅಪ್ರತಿಷಿದ್ಧ ದಾರಿಯಲ್ಲಿ ಬಿದ್ದಿರುವ ಕಡ್ಡಿ ಮುಂತಾದದ್ದರ ವಿಷಯ ; ಹೀಗೆಯೇ ವಿಹಿತಕರ್ಮವೆಂದರೆ ಯಾಗಾದಿ, ಪ್ರತಿಷಿದ್ಧವೆಂದರೆ ಬ್ರಹ್ಮಹತ್ಯಾದಿ, ಅವಿಹಿತವು ಗಮನಾದಿ, ಅಪ್ರತಿಷಿದ್ಧವು ರೆಪ್ಪೆಬಡಿಯುವದೇ ಮುಂತಾದದ್ದು" ಆ||ಟೀ||. ಬ್ರಹ್ಮಜ್ಞಾನವೊಂದು ಹೊರತು ಮಿಕ್ಕಜ್ಞಾನವೆಲ್ಲ, ಜ್ಞಾನಸಾಮಾನ್ಯವೇ, ವಿದ್ಯೆ ; ವಾಙ್ಮನಃಕಾಯಸಾಧ್ಯವಾದ ಕ್ರಿಯೆಯೆಲ್ಲ ಕರ್ಮ- ಎಂದು ವಾರ್ತಿಕ (೧೧೪, ೧೧೫) ವಿದ್ಯಾಕರ್ಮಗಳಿಗೆ ಮತ್ತೊಂದು ಅರ್ಥವನ್ನು ಸೂ. ಭಾ. ೩-೪-೫ (ಭಾ.ಭಾ. ೪೪೨), ೩-೪-೧ (ಭಾ.ಭಾ. ೪೪೮)- ಇವುಗಳಲ್ಲಿ ಕಾಣಬಹುದು. ಇದು ಸಂಸಾರವಿಷಯವಾದ್ದರಿಂದ ಇಲ್ಲಿ ಭಾಷ್ಯಕಾರರು ಕೊಟ್ಟಿರುವದೇ ಹೆಚ್ಚು ಸಮಂಜಸವೆಂಬುದನ್ನು ಹೇಳಬೇಕಾದದ್ದಿಲ್ಲ.

2 ಯೋ. ಭಾ. ೨-೧೫.

ಅತ್ಯಂತಸೌಲಭ್ಯವಿರುವ ಕೆಲವು (ಕ್ರಿಯೆಗಳಲ್ಲಿಯೂ) ಕೆಲವರಿಗೆ ಕೌಶಲವಿರುವದಿಲ್ಲ. ಹೀಗೆಯೇ ವಿಷಯೋಪಭೋಗಗಳಲ್ಲಿಯೂ ಕೆಲಕೆಲವರಿಗೆ ಸ್ವಭಾವದಿಂದಲೇ ಕೌಶಲಾಕೌಶಲಗಳಿರುವದು ಕಂಡುಬರುತ್ತದೆ. ಇದೆಲ್ಲವೂ ಪೂರ್ವಪ್ರಜ್ಞೆಯು ಎದ್ದುಕೊಳ್ಳುವದು, (ಅಥವಾ) ಎದ್ದುಕೊಳ್ಳದಿರುವದು (ಇದರ) ನಿಮಿತ್ತದಿಂದಾದದ್ದು. ಆದ್ದರಿಂದ ಪೂರ್ವಪ್ರಜ್ಞೆಯಿಲ್ಲದೆ ಕರ್ಮದಲ್ಲಾಗಲಿ ಫಲೋಪಭೋಗದಲ್ಲಾಗಲಿ ಯಾವನೊಬ್ಬನಿಗೂ ಪ್ರವೃತ್ತಿಯಾಗುವಂತಿರುವದಿಲ್ಲ. **ಆದ್ದರಿಂದ ವಿದ್ಯಾಕರ್ಮಪೂರ್ವಪ್ರಜ್ಞೆಗಳೆಂಬ ಈ ಮೂರೂ ಪರಲೋಕದ ಮಾರ್ಗಕ್ಕೆ ಬುತ್ತಿಯು, ಬಂಡಿಯುವನ ಸಂಭಾರದಂತೆ (ಇರತಕ್ಕದ್ದು).**[1] **(ಹೀಗೆ) ವಿದ್ಯಾಕರ್ಮಗಳೂ ಪೂರ್ವಪ್ರಜ್ಞೆಯೂ ಮತ್ತೊಂದು ದೇಹವನ್ನು ಪಡೆದುಕೊಳ್ಳುವದಕ್ಕೂ ಉಪಭೋಗಕ್ಕೂ ಸಾಧನವಷ್ಟೆ, ಆದ್ದರಿಂದ ಇಷ್ಟವಾದ ದೇಹದ ಪ್ರಾಪ್ತಿ, ಉಪಭೋಗ-ಇವುಗಳುಂಟಾಗುವದಕ್ಕಾಗಿ ಒಳ್ಳೆಯ ವಿದ್ಯಾಕರ್ಮಾದಿಗಳನ್ನೇ ಮಾಡುತ್ತಿರಬೇಕು- ಎಂಬುದು (ಈ) ಪ್ರಕರಣದ ಅರ್ಥವು.**

## ದೇಹಾಂತರಕ್ಕೆ ಹೋಗುವದಕ್ಕೆ ದೃಷ್ಟಾಂತ

(ಉಪನಿಷತ್ತು)

**ತದ್ಯಥಾ ತೃಣಜಲಾಯುಕಾ ತೃಣಸ್ಯಾನ್ತಂ ಗತ್ವಾಽನ್ಯಮಾಕ್ರಮಮಾಕ್ರಮ್ಯಾತ್ಮಾನಮುಪಸಗ್ಂಹರತ್ಯೇವಮೇವಾಯಮಾತ್ಮೇದಗ್ಂ ಶರೀರಂ ನಿಹತ್ಯಾವಿದ್ಯಾಂ ಗಮಯಿತ್ವಾಽನ್ಯಮಾಕ್ರಮಮಾಕ್ರಮ್ಯಾಽಽತ್ಮಾನಮುಪಸಂಹರತಿ ॥ ೩ ॥**

೩. ಹೇಗೆ ತೃಣಜಲಾಯುಕವು (ಒಂದು) ಕಡ್ಡಿಯ ಕೊನೆಯನ್ನು ಸೇರಿ ಮತ್ತೊಂದು ಆಕ್ರಮವನ್ನು ಆಕ್ರಮಿಸಿ ತನ್ನನ್ನು ಎಳೆದುಕೊಳ್ಳುತ್ತದೆಯೋ, ಹಾಗೆಯೇ ಈ ಆತ್ಮನು ಈ ಶರೀರವನ್ನು ಕೆಳಕ್ಕೆಸೆದು ಅವಿದ್ಯೆಯನ್ನು ಹೊಂದಿಸಿ ಮತ್ತೊಂದು ಆಕ್ರಮವನ್ನು ಆಕ್ರಮಿಸಿ ತನ್ನನ್ನು ಎಳೆದುಕೊಳ್ಳುತ್ತಾನೆ.

---

1. ಇವು ಮೂರರಲ್ಲಿ ವಿದ್ಯೆಯು ಲೋಕಾಂತರವನ್ನು ಗೊತ್ತುಮಾಡಿ ಉಂಟುಮಾಡತಕ್ಕದ್ದು, ಕರ್ಮವು ವಿಕಾರಗೊಳಿಸತಕ್ಕದ್ದು; ಪೂರ್ವಪ್ರಜ್ಞೆಯು ಇವೆರಡನ್ನೂ ಒಯ್ಯತಕ್ಕದ್ದು. ಪೂರ್ವಪ್ರಜ್ಞೆಯಿಲ್ಲದೆ ಅವೆರಡೂ ಉಂಟಾಗಲೇ ಅರವು; ವಿದ್ಯಾಕರ್ಮಗಳಿಂದ ಮತ್ತೆ ಭಾವನಾರೂಪವಾದ ಪೂರ್ವಪ್ರಜ್ಞೆಯುಂಟಾಗುವದು. ಹೀಗೆ ವಿದ್ಯಾಕರ್ಮಗಳಿಗೂ ಪೂರ್ವಪ್ರಜ್ಞೆಗೂ ಪರಸ್ಪರಕಾರ್ಯಕಾರಣಭಾವವಿರುತ್ತದೆ. ವಾರ್ತಿಕ ೧೨೩, ೧೨೪, ೧೨೫.

# ಚರ್ಚೆ : ಪ್ರಾಣಗಳು ಅನಂತವೋ, ಪರಿಚ್ಛಿನ್ನವೋ ?

(ಭಾಷ್ಯ)

೨೬೧. ಏವಂ ವಿದ್ಯಾದಿಸಂಭಾರಸಂಭೃತೋ ದೇಹಾನ್ತರಂ ಪ್ರತಿಪದ್ಯಮಾನಃ ಮುಕ್ತ್ವಾ ಪೂರ್ವಂ ದೇಹಂ ಪಕ್ಷೀವ ವೃಕ್ಷಾನ್ತರಂ ದೇಹಾನ್ತರಂ ಪ್ರತಿಪದ್ಯತೇ । ಅಥವಾ ಆತಿವಾಹಿಕೇನ ಶರೀರಾನ್ತರೇಣ ಕರ್ಮಫಲಜನ್ಮದೇಶಂ ನೀಯತೇ । ಕಿಂ ಚ ಅತ್ರಸ್ಥಸ್ಯೈವ ಸರ್ವಗತಾನಾಂ ಕರಣಾನಾಂ ವೃತ್ತಿಲಾಭೋ ಭವತಿ, ಆಹೋಸ್ವಿತ್ ಶರೀರಸ್ಥಸ್ಯ ಸಂಕುಚಿತಾನಿ ಕರಣಾನಿ ಮೃತಸ್ಯ ಭಿನ್ನಘಟಪ್ರದೀಪಪ್ರಕಾಶವತ್ ಸರ್ವತೋ ವ್ಯಾಪ್ಯ ಪುನರ್ದೇಹಾನ್ತರಾರಮ್ಭೇ ಸಂಕೋಚಮ್ ಉಪಗಚ್ಛನ್ತಿ । ಕಿಂ ಚ ಮನೋಮಾತ್ರಂ ವೈಶೇಷಿಕಸಮಯ ಇವ ದೇಹಾನ್ತರಾರಮ್ಭದೇಶಂ ಪ್ರತಿಗಚ್ಛತಿ ಕಿಂ ವಾ ಕಲ್ಪಾನ್ತರಮೇವ ವೇದಾನ್ತಸಮಯೇ ಇತಿ ? ಉಚ್ಯತೇ । "ತ ಏತೇ ಸರ್ವ ಏವ ಸಮಾಃ ಸರ್ವೇಽನನ್ತಾಃ" (೧-೫-೧೩) ಇತಿ ಶ್ರುತೇಃ ಸರ್ವಾತ್ಮಕಾನಿ ತಾವತ್ ಕರಣಾನಿ । ಸರ್ವಾತ್ಮಕಪ್ರಾಣಸಂಶ್ರಯಾಚ್ಚ । ತೇಷಾಮ್ ಆಧ್ಯಾತ್ಮಿಕಾಧಿಭೌತಿಕಪರಿಚ್ಛೇದಃ ಪ್ರಾಣಿಕರ್ಮಜ್ಞಾನಭಾವನಾನಿಮಿತ್ತಃ । ಅತಃ ತದ್ವಶಾತ್ ಸ್ವಭಾವತಃ ಸರ್ವಗತಾನಾಮ್ ಅನನ್ತಾನಾಮಪಿ ಪ್ರಾಣಾನಾಂ ಕರ್ಮಜ್ಞಾನವಾಸನಾನುರೂಪೇಣೈವ ದೇಹಾನ್ತರಾರಮ್ಭವಶಾತ್ ಪ್ರಾಣಾನಾಂ ವೃತ್ತಿಃ ಸಂಕುಚತಿ ವಿಕಸತಿ ಚ । ತಥಾ ಚೋಕ್ತಮ್ "ಸಮಃ ಪ್ಲುಷಿಣಾ ಸಮೋ ಮಶಕೇನ ಸಮೋ ನಾಗೇನ ಸಮ ಏಭಿಸ್ತ್ರಿಭಿರ್ಲೋಕೈಃ ಸಮೋಽನೇನ ಸರ್ವೇಣ" (೧-೩-೨೨) ಇತಿ । ತಥಾ ಚೇದಂ ವಚನಮ್ ಅನುಕೂಲಮ್ "ಸ ಯೋ ಹೈತಾನನನ್ತಾನುಪಾಸ್ತೇ" (೧-೫-೧೩) ಇತ್ಯಾದಿ । "ತಂ ಯಥಾ ಯಥೋಪಾಸತೇ" (೧೦-೫-೨-೨೦) ಇತಿ ಚ ॥

(ಭಾಷ್ಯಾರ್ಥ)

ಹೀಗೆ ವಿದ್ಯೆಯೇ ಮುಂತಾದ ಸಂಭಾರಗಳನ್ನು ತುಂಬಿಕೊಂಡು ಹಿಂದಿನ ದೇಹವನ್ನು ಬಿಟ್ಟು ಮತ್ತೊಂದು ದೇಹವನ್ನು ಪಡೆಯುವಾಗ ಪಕ್ಷಿಯು ಮತ್ತೊಂದು ಮರವನ್ನು ಸೇರುವಂತೆ ಮತ್ತೊಂದು ದೇಹವನ್ನು ಪಡೆದುಕೊಳ್ಳುತ್ತಾನೆಯೆ,[1] ಅಥವಾ ಆತಿವಾಹಿಕವಾದ[2] ಮತ್ತೊಂದು ಶರೀರದಿಂದ ಕರ್ಮಫಲವುಂಟಾಗುವ ಸ್ಥಳಕ್ಕೆ ಒಯ್ಯಲ್ಪಡುತ್ತಾನೆಯೆ ? ಮತ್ತು ಇಲ್ಲಿಯೇ ಅವನು ಇದ್ದುಕೊಂಡಿದ್ದು ಸರ್ವಗತವಾಗಿರುವ ಕರಣಗಳ ವೃತ್ತಿಲಾಭವು

1. ಜೈನರ ಕಲ್ಪನೆಯಿದು.
2 ಜೀವನನ್ನೊಯ್ಯುವ. ಇದು ದೇವತಾವಾದಿಗಳ ಮತವೆಂದು ಟೀಕೆ.

ಆಗುವದೊ, ಅಥವಾ ಶರೀರದಲ್ಲಿರುವಾಗ ಸಂಕುಚಿತವಾಗಿದ್ದ ಕರಣಗಳು ಸತ್ತವನಿಗೆ ಒಡೆದ ಗಡಿಗೆಯೊಳಗಿನ ದೀಪದ ಬೆಳಕಿನಂತೆ¹ ಎಲ್ಲಾ ಕಡೆಯಲ್ಲಿಯೂ ವ್ಯಾಪಿಸಿಕೊಂಡು ಮತ್ತೆ ಮತ್ತೊಂದು ದೇಹವುಂಟಾಗಲು ಸಂಕೋಚವಾಗುವವೊ? ಇನ್ನೂ ಒಂದು (ಮಾತು). ವೈಶೇಷಿಕರು ಹೇಳುವಂತೆ ಮನಸ್ಸು ಮಾತ್ರವೇ ದೇಹಾಂತರವು ಉಂಟಾಗುವ ಸ್ಥಲಕ್ಕೆ ಹೋಗುವದೊ, ಅಥವಾ ವೇದಾಂತಸಮಯದಲ್ಲಿ ಬೇರೆಯೇ ಕಲ್ಪನೆಯೋ?

ಇದಕ್ಕೆ ಹೇಳುತ್ತೇವೆ. "ಆ ಇವು ಎಲ್ಲವೂ ಸಮವಾ(ಗಿರುತ್ತವೆ), ಎಲ್ಲವೂ ಅನಂತಗಳೇ" (೧-೫-೧೩) ಎಂಬ ಶ್ರುತಿಯ ಪ್ರಮಾಣದಿಂದ ಕರಣಗಳು ಸರ್ವಾತ್ಮಕವಾಗಿರುವವಷ್ಟೆ; ಸರ್ವಾತ್ಮಕನಾದ ಪ್ರಾಣನನ್ನು ಆಶ್ರಯಿಸಿರುವದರಿಂದಲೂ (ಅವು ಸರ್ವಾತ್ಮಕವಾಗಿರಬೇಕಷ್ಟೆ). ಅವುಗಳು ಆಧ್ಯಾತ್ಮಿಕ, ಆಧಿಭೌತಿಕ- ಎಂದು ಪರಿಚ್ಛಿನ್ನವಾಗಿರುವದು ಪ್ರಾಣಿಗಳ ಕರ್ಮ, ಜ್ಞಾನ, ಮತ್ತು ಭಾವನೆ- ಇವುಗಳ ನಿಮಿತ್ತದಿಂದ. ಆದ್ದರಿಂದ ಅವುಗಳ ವಶದಿಂದ ಸ್ವಭಾವದಿಂದಲೇ ಪ್ರಾಣಗಳು ಸರ್ವಗತವೂ ಅನಂತವೂ ಆಗಿದ್ದರೂ ಕರ್ಮಜ್ಞಾನವಾಸನೆಗಳಿಗನುಗುಣವಾಗಿಯೇ ದೇಹಾಂತರವುಂಟಾಗುವದರಿಂದ ಪ್ರಾಣಗಳ ವೃತ್ತಿಯೂ ಸಂಕುಚಿತವಾಗುತ್ತದೆ, ಮತ್ತು ವಿಕಾಸವಾಗುತ್ತದೆ. ಆದ್ದರಿಂದಲೇ "ಗೆದ್ದಲಿಗೆ ಸಮ, ಸೊಳ್ಳೆಗೆ ಸಮ, ಆನೆಗೆ ಸಮ, ಈ ಮೂರು ಲೋಕಗಳಿಗೂ ಸಮ, ಇದೆಲ್ಲಕ್ಕೂ ಸಮನು" (೧-೩-೨೨) ಎಂದು ಹಿಂದೆ ಹೇಳಿರುತ್ತದೆ. ಹೀಗಾದರೆ "ಯಾವನು ಇವುಗಳು ಅನಂತವೆಂದು ಉಪಾಸನೆ ಮಾಡುತ್ತಾನೋ ಅವನು ." (೧-೫-೧೩) ಎಂಬ ಮತ್ತು "ಅವನನ್ನು ಹೇಗೆ ಹೇಗೆ ಉಪಾಸನೆಮಾಡುವರೋ (ಹಾಗೆ ಹಾಗೇ ಆಗುವದು)" (ಶತ. ಬ್ರಾ. ೧೦-೫-೨-೨೦) ಎಂಬೀ ವಚನವೂ ಅನುಕೂಲವಾಗುತ್ತದೆ.²

## ಪೂರ್ವಪ್ರಜ್ಞೆಯು ದೇಹಾಂತರವನ್ನುಂಟುಮಾಡುವದಕ್ಕೆ ದೃಷ್ಟಾಂತ

(ಭಾಷ್ಯ)

೨೬೨. ತತ್ರ ವಾಸನಾ ಪೂರ್ವಪ್ರಜ್ಞಾಖ್ಯಾ ವಿದ್ಯಾಕರ್ಮತನ್ತ್ರಾ ಜಲೂಕಾವತ್ ಸಂತತ್ಯೈವ ಸ್ವಪ್ನಕಾಲೇ ಇವ ಕರ್ಮಕೃತಂ ದೇಹಾತ್ ದೇಹಾ

---

1. ಸಾಂಖ್ಯಾದಿಗಳ ಮತವೆಂದು ಟೀಕೆ.

2. ಈ ಪಕ್ಷವನ್ನು ಸೂ. ಭಾ. ೩-೧-೧ರಲ್ಲಿ ತಿರಸ್ಕರಿಸಿರುವಂತೆ ತೋರುತ್ತದೆ. ಭಾಮತೀ, ನ್ಯಾಯನಿರ್ಣಯ- ಮುಂತಾದ ಟೀಕೆಗಳಲ್ಲಿ ಇದನ್ನು ಸಾಂಖ್ಯಮತವೆಂದು ಕರೆದಿದೆ. ಈ ವಿಷಯಕ್ಕೆ ಈ ಉಪನಿಷತ್ತಿನ ಒಂದನೆಯ ಸಂಪುಟದ ಪೀಠಿಕೆಯ ೧೪ನೆಯ ಪುಟವನ್ನು ನೋಡಿ.

ನ್ತರಮ್ ಆರಭತೇ ಹೃದಯಸ್ಥೈವ। ಪುನರ್ದೇಹಾನ್ತರಾರಮ್ಭೇ ದೇಹಾನ್ತರಂ ಪೂರ್ವಾಶ್ರಯಂ ವಿಮುಞ್ಚತಿ ಇತ್ಯೇತಸ್ಮಿನ್ ಅರ್ಥೇ ದೃಷ್ಟಾನ್ತ ಉಪಾದೀಯತೇ । ತತ್ ತತ್ರ ದೇಹಾನ್ತರಸಂಚಾರೇ ಇದಂ ನಿದರ್ಶನಮ್ । ಯಥಾ ಯೇನ ಪ್ರಕಾರೇಣ ತೃಣಜಲಾಯುಕಾ ತೃಣಜಲೂಕಾ ತೃಣಸ್ಯಾನ್ತಮ್ ಅವಸಾನಂ ಗತ್ವಾ ಪ್ರಾಪ್ಯ ಅನ್ಯಂ ತೃಣಾನ್ತರಮ್ ಆಕ್ರಮಮ್ । ಆಕ್ರಮ್ಯತ ಇತಿ ಆಕ್ರಮಃ। ತಮ್ ಆಕ್ರಮಮ್। ಆಕ್ರಮ್ಯ ಆಶ್ರಿತ್ಯ ಆತ್ಮಾನಮ್ ಆತ್ಮನಃ ಪೂರ್ವಾವಯವಮ್ ಉಪಸಂಹರತಿ ಅನ್ತ್ಯಾವಯವಸ್ಥಾನೇ । ಏವಮೇವಾಯಮ್ ಆತ್ಮಾ ಯಃ ಪ್ರಕೃತಃ ಸಂಸಾರೀ ಇದಂ ಶರೀರಂ ಪೂರ್ವೋಪಾತ್ತಂ ನಿಹತ್ಯ ಸ್ವಪ್ನಂ ಪ್ರತಿಪಿತ್ಸುರಿವ ಪಾತಯಿತ್ವಾ ಅವಿದ್ಯಾಂ ಗಮಯಿತ್ವಾ ಅಚೇತನಂ ಕೃತ್ವಾ ಸ್ವಾತ್ಮೋಪಸಂಹಾರೇಣ ಅನ್ಯಮ್ ಆಕ್ರಮಂ ತೃಣಾನ್ತರಮಿವ ತೃಣಜಲೂಕಾ ಶರೀರಾನ್ತರಂ ಗೃಹೀತ್ವಾ[1] ಪ್ರಸಾರಿತಯಾ ವಾಸನಯಾ ಆತ್ಮಾನಮ್ ಉಪಸಂಹರತಿ। ತತ್ರ ಆತ್ಮಭಾವಮ್ ಆರಭತೇ ಯಥಾ ಸ್ವಪ್ನೇ ದೇಹಾನ್ತರಸ್ಥ ಏವ ಶರೀರಾರಮ್ಭದೇಶೇ[2] ಆರಭ್ಯಮಾಣೇ ದೇಹೇ ಜಙ್ಗಮೇ ಸ್ಥಾವರೇ ವಾ। ತತ್ರ ಚ ಕರ್ಮವಶಾತ್ ಕರಣಾನಿ ಲಬ್ಧವೃತ್ತೀನಿ ಸಂಹನ್ಯನ್ತೇ ಬಾಹ್ಯಂ ಚ ಕುಶವೃತ್ತಿಕಾಸ್ಥಾನೀಯಂ ಶರೀರಮ್ ಆರಭ್ಯತೇ। ತತ್ರ ಚ ಕರಣವ್ಯೂಹಮ್ ಅಪೇಕ್ಷ್ಯ ವಾಗಾದ್ಯನುಗ್ರಹಾಯ ಅಗ್ನ್ಯಾದಿದೇವತಾಃ ಸಂಶ್ರಯನ್ತೇ। ಏಷ ದೇಹಾನ್ತರಾರಮ್ಭವಿಧಿಃ ॥

(ಭಾಷ್ಯಾರ್ಥ)

ಇಲ್ಲಿ ವಿದ್ಯಾಕರ್ಮಗಳಿಗೆ ಅಧೀನವಾಗಿರುವ ಪೂರ್ವಪ್ರಜ್ಞೆ ಎಂಬ ವಾಸನೆಯು ಜಿಗಣೆಯಂತೆ ವಿಚ್ಛೇದವಿಲ್ಲದಂತೆಯೇ, ಕನಸಿನಲ್ಲಿ ಹೇಗೋ ಹಾಗೆ, ಹೃದಯದಲ್ಲಿಯೇ ಇದ್ದುಕೊಂಡು (ಈ) ದೇಹಕ್ಕಿಂತ ಬೇರೆಯಾದ ದೇಹವನ್ನು ಉಂಟುಮಾಡಿಕೊಳ್ಳುತ್ತದೆ, ಮತ್ತೆ (ಆ) ದೇಹಾಂತರವುಂಟಾಗಲು ಮತ್ತೊಂದು ದೇಹವೆಂಬ ಹಿಂದಿನ ಆಶ್ರಯವನ್ನು ಬಿಡುತ್ತದೆ ಎಂಬೀ ಅರ್ಥದಲ್ಲಿ (ಈ) ದೃಷ್ಟಾಂತವನ್ನು ತೆಗೆದುಕೊಡಿರುತ್ತದೆ.

(ತತ್ =ತತ್ರ) ಇಲ್ಲಿ ದೇಹಾಂತರಕ್ಕೆ ಸಂಚಾರಮಾಡುವ (ವಿಷಯ)ದಲ್ಲಿ ಇದು ದೃಷ್ಟಾಂತವು ಹೇಗೆ, ಯಾವ ಪ್ರಕಾರದಿಂದ ತೃಣಜಲಾಯುಕವು ಎಂದರೆ

1. ಇದರ ಹಿಂದೆ ಆಕ್ರಮ್ಯ ಎಂಬ ಮಾತು ಬಿಟ್ಟುಹೋಗಿರಬೇಕೆಂದು ತೋರುತ್ತದೆ.

2. ಈ ವಾ॥ ಪಾಠವನ್ನೇ ನಾವು ಇಟ್ಟುಕೊಂಡಿದ್ದೇವೆ. 'ಸ್ವಪ್ನದೇಹಾನ್ತರಸ್ಥ ಇವ (ಅಥವಾ ಏವ)' ಎಂಬ ಅ॥ ಪಾಠವಾಗಲಿ 'ಸ್ವಪ್ನೇ ದೇಹಾನ್ತರಮಾರಭತೇ ಸ್ವಪ್ನದೇಹಾನ್ತರಸ್ಯ ಶರೀರಾರಮ್ಭದೇಹೇ' ಎಂಬ ಆ॥ ಪಾಠವಾಗಲಿ ಸರಿಯಾಗಿ ಅನ್ವಯಿಸುವದಿಲ್ಲ. ಯಥಾ ಸ್ವಪ್ನೇ ದೇವೋಽಹಮ್ ಇತ್ಯಭಿಮನ್ಯಮಾನೋ ದೇಹಾನ್ತರಸ್ಥ ಏವ ಭವತಿ ತಥಾ ಉತ್ಕ್ರಾನ್ತಾವಪಿ- ಎಂಬ ಆ॥ ಟೀಕೆಯು ವಾ॥ ಪಾಠಕ್ಕೆ ಅನುಗುಣವಾಗಿದೆ.

ತೃಣಜಲೂಕವು (ಜಿಗಣೆಯು) ಕಡ್ಡಿಯ ಕೊನೆಯನ್ನು ಸೇರಿ ಮುಟ್ಟಿ ಮತ್ತೊಂದು ಕಡ್ಡಿ ಎಂಬ ಆಕ್ರಮವನ್ನು – ಆಕ್ರಮವೆಂದರೆ ಆಕ್ರಮಿಸಿಕೊಳ್ಳಲ್ಪಡತಕ್ಕದ್ದು. ಆ ಆಕ್ರಮವನ್ನು – ಆಕ್ರಮಿಸಿ ಆಶ್ರಯಿಸಿ ತನ್ನನ್ನು ತನ್ನ ಮೊದಲಿನ ಅವಯವವನ್ನು ಕೊನೆಯ ಅವಯವದ ಸ್ಥಾನಕ್ಕೆ ಎಳೆದುಕೊಳ್ಳುವದೋ, ಹಾಗೆಯೇ ಈ ಪ್ರಕೃತನಾದ ಸಂಸಾರಿಯಾಗಿರುವನಲ್ಲ, ಈ ಆತ್ಮನು ಮೊದಲು ತೆಗೆದುಕೊಂಡ ಈ ಶರೀರವನ್ನು ಕೆಳಕ್ಕೆಸೆದು, ಸ್ವಪ್ನವನ್ನು ಪಡೆಯಲಿರುವಾಗ. ಹೇಗೋ ಹಾಗೆಯೇ, ಕೆಡಹಿ ಅವಿದ್ಯೆಯನ್ನು ಹೊಂದಿಸಿ ತನ್ನನ್ನು ಉಪಸಂಹಾರಮಾಡಿಕೊಳ್ಳುವದರಿಂದ (ಅದನ್ನು) ಅಚೇತನವಾಗಿ ಮಾಡಿ ಮತ್ತೊಂದು ಆಕ್ರಮವನ್ನು– ತೃಣಜಲೂಕವು ಮತ್ತೊಂದು ಕಡ್ಡಿಯನ್ನು ಹೇಗೋ ಹಾಗೆ– ಮತ್ತೊಂದು ಶರೀರವನ್ನು, ಮುಂದಕ್ಕೆ ಚಾಚಿದ ವಾಸನೆಯಿಂದ[1] (ಆಕ್ರಮಿಸಿ) ತೆಗೆದುಕೊಂಡು ತನ್ನನ್ನು ಎಳೆದುಕೊಳ್ಳುತ್ತಾನೆ. ಅದರಲ್ಲಿ ತಾನೆಂಬ ಭಾವವನ್ನು ಮಾಡಿಕೊಳ್ಳುತ್ತಾನೆ– ಕನಸಿನಲ್ಲಿ ಹೇಗೆ ದೇಹಾಂತರದಲ್ಲಿದ್ದುಕೊಂಡೇ (ಹೊಸ) ಶರೀರವು ಉಂಟಾಗುವ ಸ್ಥಳದಲ್ಲಿ (ತಾನೆಂಬ ಭಾವವನ್ನು ಮಾಡಿಕೊಳ್ಳುತ್ತಾನೋ, ಹಾಗೆಯೇ ಇಲ್ಲಿಯೂ) ಹೊಸದಾಗಿ) ಉಂಟಾಗುವ ಜಂಗಮ ಅಥವಾ ಸ್ಥಾವರದೇಹದಲ್ಲಿ ತಾನೆಂಬ ಭಾವವನ್ನು ಮಾಡಿಕೊಳ್ಳುತ್ತಾನೆ. ಅಲ್ಲಿ ಕರ್ಮವಶದಿಂದ ಕರಣಗಳು ವೃತ್ತಿಯನ್ನು ಪಡೆದುಕೊಂಡು ಸಂಹತವಾಗುತ್ತವೆ , ಹೊರಗಿನ ಹುಲ್ಲುಮಣ್ಣುಗಳಂತಿರುವ ಶರೀರವೂ ಉಂಟಾಗುತ್ತದೆ. ಮತ್ತು ಅಲ್ಲಿ ಕರಣಗಳು (ಬೇರೆಬೇರೆಯಾಗಿ) ವಿಂಗಡವಾದಂತೆ ವಾಗಾದಿಗಳ ಅನುಗ್ರಹಕ್ಕಾಗಿ ಅಗ್ನಿಯೇ ಮುಂತಾದ ದೇವತೆಗಳು (ಬಂದು) ಆಶ್ರಯಿಸಿಕೊಳ್ಳುತ್ತಾರೆ, ಇದೇ ದೇಹಾಂತರವು ಉಂಟಾಗುವ ಪ್ರಕಾರವು.

## ಹೊಸದೇಹಕ್ಕೆ ಉಪಾದಾನ

(ಉಪನಿಷತ್ತು)

**ತದ್ಯಥಾ ಪೇಶಸ್ಕಾರೀ ಪೇಶಸೋ ಮಾತ್ರಾಮುಪಾದಾಯಾನ್ಯನ್ನವತರಂ ಕಲ್ಯಾಣತರಗ್ಂ ರೂಪಂ ತನುತ ಏವಮೇವಾಯ**

---

1. ಈ ಜಲೂಕದೃಷ್ಟಾಂತವು ದೇಹಾಂತರಗ್ರಹಣವಾದಮೇಲೆಯೇ ಈ ದೇಹವನ್ನು ಆತ್ಮನು ಬಿಡುತ್ತಾನೆ, ಸ್ಥೂಲದೇಹವಿಶಿಷ್ಟನಾಗಿಯೇ ಪರಲೋಕಕ್ಕೆ ಹೋಗುತ್ತಾನೆ –ಎಂಬ ಪೌರಾಣಿಕಪ್ರಕ್ರಿಯೆಯನ್ನು ಖಂಡಿಸುವದಕ್ಕೆ ಎಂದು ಆ|| ಟೀ||. ಸೂತ್ರಭಾಷ್ಯದಲ್ಲಿಯೂ ಇಲ್ಲಿಯೂ ವಾಸನೆಯು ಮುಂದಿನ ಶರೀರವನ್ನು ಕಲ್ಪಿಸಿಕೊಳ್ಳುವದೇ ದೇಹಾಂತರಪ್ರಾಪ್ತಿಯು ; ದೇಹಾಂತರಪ್ರಾಪ್ತಿಯಾದಮೇಲೆಯೇ ಈ ದೇಹವನ್ನು ಬಿಡುತ್ತಾನೆಂಬುದೇನೂ ವಿವಕ್ಷಿತವಲ್ಲ ಎಂಬ ಅಭಿಪ್ರಾಯವು ಅಡಗಿದೆ. ಆದ್ದರಿಂದ ಲಿಂಗಶರೀರದೊಡನೆ ದೇಹಾಂತರಕ್ಕೆ ಹೋಗುತ್ತಾನೆ ಎಂಬುದೇ ಕೊನೆಯ ಸಿದ್ಧಾಂತವಾಯಿತು –ಎಂದು ಟೀಕೆಗಳಲ್ಲಿದೆ. ಈ ವಿಚಾರವನ್ನು ವಿಮರ್ಶಕರು ಇನ್ನಷ್ಟು ಪರಿಶೀಲಿಸಬೇಕಾಗಿದೆ.

**ಮಾತ್ರೇದಗ್ಂ ಶರೀರಂ ನಿಹತ್ಯಾವಿದ್ಯಾಂ ಗಮಯಿತ್ವಾಽನ್ಯನ್ನವತರಂ ಕಲ್ಯಾಣತರಗ್ಂ ರೂಪಂ ಕುರುತೇ ಪಿತ್ರ್ಯಂ ವಾ ಗಾನ್ಧರ್ವಂ ವಾ ದೈವಂ ವಾ ಪ್ರಾಜಾಪತ್ಯಂ ವಾ ಬ್ರಾಹ್ಮಂ ವಾಽನ್ಯೇಷಾಂ ವಾ ಭೂತಾನಾಮ್ ॥ ೪ ॥**

೪. ಹೇಗೆ ಪೇಶಸ್ಕಾರಿಯು ಪೇಶಸ್ಸಿನ ಮಾತ್ರೆಯನ್ನು ತೆಗೆದುಕೊಂಡು ಮತ್ತೊಂದು ಇನ್ನೂ ಹೊಸದಾದ ಇನ್ನೂ ಕಲ್ಯಾಣವಾದ ರೂಪವನ್ನು ಮಾಡಿಕೊಳ್ಳುತ್ತಾನೋ ಹಾಗೆಯೇ ಈ ಆತ್ಮನು ಈ ಶರೀರವನ್ನು ಕೆಳಕ್ಕೆಸೆದು ಅವಿದ್ಯೆಯನ್ನು ಹೊಂದಿಸಿ ಮತ್ತೊಂದು ಇನ್ನೂ ಹೊಸದಾದ ಇನ್ನೂ ಕಲ್ಯಾಣವಾದ ರೂಪವನ್ನು ಮಾಡಿಕೊಳ್ಳುತ್ತಾನೆ, ಪಿತ್ರ್ಯವೋ ಗಾಂಧರ್ವವೋ ದೈವವೋ ಪ್ರಾಜಾಪತ್ಯವೋ ಬ್ರಾಹ್ಮವೋ ಅಥವಾ ಬೇರೆಯ ಭೂತಗಳದ್ದೋ (ದೇಹಾಂತರವನ್ನು ಮಾಡಿಕೊಳ್ಳುತ್ತಾನೆ).

## ಎಂದಿನ ಪಂಚಭೂತಗಳಿಂದಲೇ ಹೊಸದೇಹ

(ಭಾಷ್ಯ)

೨೬೩. ತತ್ರ ದೇಹಾನ್ತರಾರಮ್ಭೇ, ನಿತ್ಯೋಪಾತ್ತಮೇವ ಉಪಾದಾನಮ್ ಉಪಮೃದ್ಯ ಉಪಮೃದ್ಯ ದೇಹಾನ್ತರಮ್ ಆರಭತೇ ಆಹೋಸ್ವಿತ್ ಅಪೂರ್ವಮೇವ ಪುನಃ ಪುನಃ ಆದತ್ತೇ ಇತಿ ? ಅತ್ರೋಚ್ಯತೇ ದೃಷ್ಟಾನ್ತಃ । ತತ್ ತತ್ರ ಏತಸ್ಮಿನ್ ಅರ್ಥೇ । ಯಥಾ ಪೇಶಸ್ಕಾರೀ ಪೇಶಃ ಸುವರ್ಣಮ್ ; ತತ್ಕರೋತಿ ಇತಿ ಪೇಶಸ್ಕಾರೀ ಸುವರ್ಣಕಾರಃ ಪೇಶಸಃ ಸುವರ್ಣಸ್ಯ ಮಾತ್ರಾಮ್ ಅಪಾದಾಯ ಅಪಚ್ಛಿದ್ಯ ಗೃಹೀತ್ವಾ ಅನ್ಯತ್ ಪೂರ್ವಸ್ಮಾತ್ ರಚನಾವಿಶೇಷಾತ್ ನವತರಮ್ ಅಭಿನವತರಮ್ । ಕಲ್ಯಾಣಾತ್ ಕಲ್ಯಾಣತರಂ ರೂಪಂ ತನುತೇ ನಿರ್ಮಿನೋತಿ । 'ಏವಮೇವಾಯಮಾತ್ಮಾ' ಇತ್ಯಾದಿ ಪೂರ್ವವತ್, ನಿತ್ಯೋಪಾತ್ತಾನ್ಯೇವ ಪೃಥಿವ್ಯಾದೀನಿ ಆಕಾಶಾನ್ತಾನಿ ಪಞ್ಚ ಭೂತಾನಿ ಯಾನಿ "ದ್ವೇ ವಾವ ಬ್ರಹ್ಮಣೋ ರೂಪೇ" (೨-೩-೧) ಇತಿ ಚತುರ್ಥೇ ವ್ಯಾಖ್ಯಾತಾನಿ ಪೇಶಸ್ಥಾನೀಯಾನಿ ತಾನ್ಯೇವ ಉಪಮೃದ್ಯ ಉಪಮೃದ್ಯ ಅನ್ಯದನ್ಯಚ್ಚ ದೇಹಾನ್ತರಂ ನವತರಂ ಕಲ್ಯಾಣತರಂ ರೂಪಂ ಸಂಸ್ಥಾನವಿಶೇಷಂ ದೇಹಾನ್ತರಮ್ ಇತ್ಯರ್ಥಃ । ಕುರುತೇ । ಪಿತ್ರ್ಯಂ ವಾ ಪಿತೃಭ್ಯೋ ಹಿತಮ್ । ಪಿತೃಲೋಕೋಪಭೋಗಯೋಗ್ಯಮ್ ಇತ್ಯರ್ಥಃ । ಗಾನ್ಧರ್ವಂ ಗನ್ಧರ್ವಾಣಾಮ್ ಉಪಭೋಗಯೋಗ್ಯಮ್, ತಥಾ ದೇವಾನಾಂ ದೈವಮ್ । ಪ್ರಜಾಪತೇಃ ಪ್ರಾಜಾಪತ್ಯಮ್ । ಬ್ರಹ್ಮಣ ಇದಂ ಬ್ರಾಹ್ಮಂ ವಾ । ಯಥಾ

ಕರ್ಮ ಯಥಾಶ್ರುತಮ್ ಅನ್ಯೇಷಾಂ ವಾ ಭೂತಾನಾಂ ಸಂಬನ್ಧಿ ಶರೀರಾನ್ತರಮ್ । ಕುರುತೇ ಇತ್ಯಭಿಸಂಬಧ್ಯತೇ ॥

(ಭಾಷ್ಯಾರ್ಥ)

ಈ ದೇಹಾಂತರವುಂಟಾಗುವಲ್ಲಿ ಯಾವಾಗಲೂ ತೆಗೆದುಕೊಂಡೇ ಇರುವ ಉಪಾದಾನವನ್ನು ಮುರಿದುಮುರಿದು ಮತ್ತೊಂದು ದೇಹವನ್ನು ಮಾಡಿಕೊಳ್ಳುವನೊ, ಅಥವಾ ಹೊಸ (ಉಪಾದಾನ)ವನ್ನೇ ಮತ್ತೆಮತ್ತೆ ತೆಗೆದುಕೊಳ್ಳುವನೊ? ಎಂದರೆ ಇದಕ್ಕೆ (ತತ್= ತತ್ರ) ಇಲ್ಲಿ ಈ ವಿಷಯದಲ್ಲಿ ದೃಷ್ಟಾಂತವನ್ನು ಹೇಳಲಾಗುತ್ತದೆ. ಹೇಗೆ ಪೇಶಸ್ಕಾರಿಯು - ಪೇಶವೆಂದರೆ ಚಿನ್ನವು, ಅದನ್ನು ಮಾಡುವವನಾದ್ದರಿಂದ ಪೇಶಸ್ಕಾರಿ(ಯೆನಿಸುವ) ಅಕ್ಕಸಾಲಿಗನು ಪೇಶದ ಎಂದರೆ ಚಿನ್ನದ ಅಂಶವನ್ನು ತೆಗೆದುಕೊಂಡು,ಕತ್ತರಿಸಿಕೊಂಡು,ತೆಗೆದುಕೊಂಡು, ಮತ್ತೊಂದು ಮೊದಲಿನ ಆಕಾರವಿಶೇಷಕ್ಕಿಂತ ಇನ್ನೂ ಹೊಸದಾದ, ಹೊಚ್ಚ ಹೊಸದನ್ನು, ಕಲ್ಯಾಣಕ್ಕಿಂತಲೂ ಇನ್ನೂ ಕಲ್ಯಾಣವಾದ ರೂಪವನ್ನು ಮಾಡಿಕೊಳ್ಳುತ್ತಾನೋ, ನಿರ್ಮಿಸಿಕೊಳ್ಳುತ್ತಾನೋ 'ಹೀಗೆಯೇ ಈ ಆತ್ಮನು' ಎಂದು ಮುಂತಾಗಿರುವದನ್ನು ಮೊದಲಿನಂತೆ ವ್ಯಾಖ್ಯಾನಮಾಡಿಕೊಳ್ಳಬೇಕು.

ಎಂದಿಗೂ ತೆಗೆದುಕೊಂಡೇ ಇರುವ ಪೃಥಿವಿಯು ಮೊದಲಾಗಿ ಆಕಾಶದವರೆಗಿನ ಪಂಚಭೂತಗಳನ್ನು— "ಬ್ರಹ್ಮದ ರೂಪಗಳು ಎರಡೇ" (೨-೩-೧) ಎಂದು ನಾಲ್ಕನೆಯ ಅಧ್ಯಾಯದಲ್ಲಿ ವಿವರಿಸಿಹೇಳಿತ್ತಲ್ಲ. (ದೃಷ್ಟಾಂತದ) ಚಿನ್ನದಂತಿರುವ ಅವನ್ನೇ ಮುರಿದುಮುರಿದು ಮತ್ತೊಂದು ದೇಹಾಂತರವನ್ನು ಇನ್ನೂ ಹೊಸದಾಗಿರುವ ಇನ್ನೂ ಚೆನ್ನಾಗಿರುವ ಆಕಾರವಿಶೇಷವನ್ನು, ಎಂದರೆ ದೇಹಾಂತರವನ್ನು ಎಂದರ್ಥ. (ಅದನ್ನು) ಮಾಡಿಕೊಳ್ಳುತ್ತಾನೆ. ಪಿತ್ರ್ಯವೋ ಪಿತೃಗಳಿಗೆ ತಕ್ಕದ್ದಾದ, ಪಿತೃಲೋಕದಲ್ಲಿ ಉಪಭೋಗಕ್ಕೆ ತಕ್ಕ ಎಂದರ್ಥ. ಗಾಂಧರ್ವವನ್ನೋ ಎಂದರೆ ಗಂಧರ್ವರಿಗೆ ಉಪಭೋಗಕ್ಕೆ ತಕ್ಕ; ಹೀಗೆಯೇ ದೇವತೆಗಳ (ಉಪಭೋಗಕ್ಕೆ ತಕ್ಕದ್ದು) ದೈವವು ; ಪ್ರಜಾಪತಿಗೆ (ತಕ್ಕದ್ದು) ಪ್ರಾಜಾಪತ್ಯವು; (ಅದನ್ನೇ) ಬ್ರಹ್ಮನದಾದ್ದರಿಂದ ಅದು ಬ್ರಾಹ್ಮವು, (ಅದನ್ನೋ) ಕರ್ಮಕ್ಕನುಗುಣವಾಗಿ ಜ್ಞಾನಕ್ಕೆ ಅನುಗುಣವಾಗಿ ಮತ್ತೆ ಯಾವ ಭೂತಗಳಿಗೆ ಸಂಬಂಧಿಯಾದದ್ದನ್ನೋ- (ಇಂಥ) ದೇಹಾಂತರವನ್ನು ಮಾಡಿಕೊಳ್ಳುತ್ತಾನೆ' ಎಂದು ಸಂಬಂಧಿಸಿಕೊಳ್ಳಬೇಕು.

## ಕಾಮಕ್ರತುಕರ್ಮಗಳಿಗನುಗುಣವಾದ ಫಲ

(ಉಪನಿಷತ್ತು)

**ಸ ವಾ ಅಯಮಾತ್ಮಾ ಬ್ರಹ್ಮ ವಿಜ್ಞಾನಮಯೋ ಮನೋಮಯಃ ಪ್ರಾಣಮಯಶ್ಚಕ್ಷುರ್ಮಯಃ ಶ್ರೋತ್ರಮಯಃ**

**ಪೃಥಿವೀಮಯ ಆಪೋಮಯೋ ವಾಯುಮಯ ಆಕಾಶ ಮಯಸ್ತೇಜೋಮಯೋಽತೇಜೋಮಯಃ ಕಾಮಮಯೋಽ ಕಾಮಮಯಃ ಕ್ರೋಧಮಯೋಽಕ್ರೋಧಮಯೋ ಧರ್ಮ ಮಯೋಽಧರ್ಮಮಯಃ ಸರ್ವಮಯಸ್ತದ್ಯದೇತದಿದಂ ಮಯೋಽದೋಮಯ ಇತಿ ಯಥಾಕಾರೀ ಯಥಾಚಾರೀ ತಥಾ ಭವತಿ ಸಾಧುಕಾರೀ ಸಾಧುರ್ಭವತಿ ಪಾಪಕಾರೀ ಪಾಪೋ ಭವತಿ ಪುಣ್ಯಃ ಪುಣ್ಯೇನ ಕರ್ಮಣಾ ಭವತಿ ಪಾಪಃ ಪಾಪೇನ । ಅಥೋ ಖಲ್ವಾಹುಃ ಕಾಮಮಯ ಏವಾಯಂ ಪುರುಷ ಇತಿ ಸ ಯಥಾ ಕಾಮೋ ಭವತಿ ತತ್ಕ್ರತುರ್ಭವತಿ ಯತ್ಕ್ರತುರ್ಭವತಿ ತತ್ಕರ್ಮ ಕುರುತೇ ಯತ್ಕರ್ಮ ಕುರುತೇ ತದಭಿಸಂಪದ್ಯತೇ ॥ ೫ ॥**

೫. ಆ ಈ ಆತ್ಮನೇ ಬ್ರಹ್ಮವು. ವಿಜ್ಞಾನಮಯನು, ಮನೋಮಯನು, ಪ್ರಾಣಮಯನು, ಚಕ್ಷುರ್ಮಯನು, ಶ್ರೋತ್ರಮಯನು, ಪೃಥಿವೀಮಯನು, ಆಪೋಮಯನು, ವಾಯುಮಯನು, ಆಕಾಶ ಮಯನು, ತೇಜೋಮಯನು, ಅತೇಜೋಮಯನು, ಕಾಮ ಮಯನು, ಅಕಾಮಮಯನು, ಕ್ರೋಧಮಯನು, ಅಕ್ರೋಧ ಮಯನು; ಧರ್ಮಮಯನು, ಅಧರ್ಮಮಯನು, ಸರ್ವಮಯನು. ಇದಂಮಯನು, ಅದೋಮಯನು- ಎಂಬರಲ್ಲ, ಅದು. ಎಂಥ ಕರ್ಮ ದವನೋ, ಎಂಥ ಚರಣದವನೋ ಹಾಗೆ ಆಗುವನು; ಸಾಧುಕಾರಿ ಯಾದವನು ಸಾಧುವಾಗುವನು, ಪಾಪಕಾರಿಯಾದವನು ಪಾಪನಾಗು ವನು. ಪುಣ್ಯದಿಂದ ಒಳ್ಳೆಯವನಾಗುವನು, ಪಾಪದಿಂದ ಕೆಟ್ಟವ ನಾಗುವನು. ಮತ್ತೂ ಹೇಳುತ್ತಾರೇನೆಂದರೆ ಈ ಪುರುಷನು ಕಾಮ ಮಯನೇ; ಅವನು ಎಂಥ ಕಾಮದವನೋ ಅಂಥ ಕ್ರತುವಿನವ ನಾಗುವನು, ಎಂಥ ಕ್ರತುವಿನವನೋ ಅಂಥ ಕರ್ಮವನ್ನು ಮಾಡು ವನು, ಎಂಥ ಕರ್ಮವನ್ನು ಮಾಡುವನೋ ಅದನ್ನೇ ಸೇರುವನು.

## ಬಂಧಕವಾದ ಉಪಾಧಿಗಳು

(ಭಾಷ್ಯ)

೨೬೪. ಯೇ ಅಸ್ಯ ಬನ್ಧನಸಂಜ್ಞಕಾಃ ಉಪಾಧಿಭೂತಾಃ, ಯೈಃ **ಸಂಯುಕ್ತಸ್ತನ್ಮಯೋಽಯಮ್ ಇತಿ ವಿಭಾವ್ಯತೇ, ತೇ ಪದಾರ್ಥಾಃ ಪುಞ್ಜೀ ಕೃತ್ಯ ಇತ್ಯೇಕತ್ರ ಪ್ರತಿನಿರ್ದಿಶ್ಯನ್ತೇ । ಸ ವಾ ಅಯಂ ಯ ಏವಂ ಸಂಸರತಿ**

ಆತ್ಮಾ, ಬ್ರಹ್ಮೈವ ಪರ ಏವ ಯೋಽಶನಾಯಾದ್ಯತೀತಃ। ವಿಜ್ಞಾನಮಯಃ। ವಿಜ್ಞಾನಂ ಬುದ್ಧಿಃ, ತೇನ ಉಪಲಕ್ಷ್ಯಮಾಣಸ್ತನ್ಮಯಃ। "ಕತಮ ಆತ್ಮೇತಿ ಯೋಽಯಂ ವಿಜ್ಞಾನಮಯಃ ಪ್ರಾಣೇಷು" (೪-೩-೭) ಇತಿ ಹಿ ಉಕ್ತಮ್। ವಿಜ್ಞಾನಮಯಃ ವಿಜ್ಞಾನಪ್ರಾಯಃ। ಯಸ್ಮಾತ್ ತದ್ಧರ್ಮತ್ವಮಸ್ಯ ವಿಭಾವ್ಯತೇ "ಧ್ಯಾಯತೀವ ಲೇಲಾಯತೀವೇತಿ" (೪-೩-೭)। ತಥಾ ಮನೋಮಯಃ ಮನಃಸಂನಿಕರ್ಷಾತ್ ಮನೋಮಯಃ। ತಥಾ ಪ್ರಾಣಮಯಃ। ಪ್ರಾಣಃ ಪಞ್ಚವೃತ್ತಿಃ। ತನ್ಮಯಃ ಯೇನ ಚೇತನಶ್ಚಲತೀವ ಲಕ್ಷ್ಯತೇ। ತಥಾ ಚಕ್ಷುರ್ಮಯಃ। ರೂಪದರ್ಶನಕಾಲೇ। ಏವಂ ಶ್ರೋತ್ರಮಯಃ। ಶಬ್ದಶ್ರವಣಕಾಲೇ। ಏವಂ ತಸ್ಯ ತಸ್ಯೇನ್ದ್ರಿಯಸ್ಯ ವ್ಯಾಪಾರೋದ್ಭವೇ ತತ್ತನ್ಮಯೋ ಭವತಿ। ಏವಂ ಬುದ್ಧಿಪ್ರಾಣದ್ವಾರೇಣ ಚಕ್ಷುರಾದಿಕರಣಮಯಃ ಸನ್ ಶರೀರಾರಮ್ಭಕಪೃಥಿವ್ಯಾದಿಭೂತಮಯೋ ಭವತಿ। ತತ್ರ ಪಾರ್ಥಿವಶರೀರಾರಮ್ಭೇ ಪೃಥಿವೀಮಯೋ ಭವತಿ। ತಥಾ ವರುಣಾದಿಲೋಕೇಷು ಆಪ್ಯಶರೀರಾರಮ್ಭೇ ಆಪೋಮಯೋ ಭವತಿ। ತಥಾ ವಾಯವ್ಯಶರೀರಾರಮ್ಭೇ ವಾಯುಮಯೋ ಭವತಿ। ತಥಾ ಆಕಾಶಶರೀರಾರಮ್ಭೇ ಆಕಾಶಮಯೋ ಭವತಿ। ಏವಮ್ ಏತಾನಿ ತೈಜಸಾನಿ ದೇವಶರೀರಾಣಿ। ತೇಷು ಆರಭ್ಯಮಾಣೇಷು ತನ್ಮಯಃ, ತೇಜೋಮಯೋ ಭವತಿ। ಅತೋ ವ್ಯತಿರಿಕ್ತಾನಿ ಪಶ್ವಾದಿಶರೀರಾಣಿ ನರಕಪ್ರೇತಾದಿಶರೀರಾಣಿ ಚ ಅತೇಜೋಮಯಾನಿ। ತಾನ್ಯಪೇಕ್ಷ್ಯ ಆಹ ಅತೇಜೋಮಯಃ ಇತಿ। ಏವಂ ಕಾರ್ಯಕರಣಸಂಘಾತಮಯಃ ಸನ್ ಆತ್ಮಾ ಪ್ರಾಪ್ತವ್ಯಂ ವಸ್ತ್ವನ್ತರಂ ಪಶ್ಯನ್ ಇದಂ ಮಯಾ ಪ್ರಾಪ್ತಮ್ ಅದೋ ಮಯಾ ಪ್ರಾಪ್ತವ್ಯಮ್ ಇತ್ಯೇವಂ ವಿಪರೀತಪ್ರತ್ಯಯಃ ತದಭಿಲಾಷಃ ಕಾಮಮಯೋ ಭವತಿ। ತಸ್ಮಿನ್ ಕಾಮೇ ದೋಷಂ ಪಶ್ಯತಃ ತದ್ವಿಷಯಾಭಿಲಾಷಪ್ರಶಮೇ ಚಿತ್ತಂ ಪ್ರಸನ್ನಮ್ ಅಕಲುಷಂ ಶಾನ್ತಂ ಭವತಿ। ತನ್ಮಯೋಽಕಾಮಮಯಃ। ಏವಂ ತಸ್ಮಿನ್ ವಿಹತೇ ಕಾಮೇ ಕೇನಚಿತ್ ಸ ಕಾಮಃ ಕ್ರೋಧತ್ವೇನ ಪರಿಣಮತೇ ತೇನ ತನ್ಮಯೋ ಭವನ್ ಕ್ರೋಧಮಯಃ। ಸ ಕ್ರೋಧಃ ಕೇನಚಿತ್ ಉಪಾಯೇನ ನಿವರ್ತಿತೋ ಯದಾ ಭವತಿ ತದಾ ಪ್ರಸನ್ನಮ್ ಅನಾಕುಲಂ ಚಿತ್ತಂ ಸತ್ ಅಕ್ರೋಧ ಉಚ್ಯತೇ। ತೇನ ತನ್ಮಯಃ। ಏವಂ ಕಾಮಕ್ರೋಧಾಭ್ಯಾಮ್ ಅಕಾಮಾಕ್ರೋಧಾಭ್ಯಾಂ ಚ ತನ್ಮಯೋ ಭೂತ್ವಾ ಧರ್ಮಮಯಃ ಅಧರ್ಮಮಯಶ್ಚ ಭವತಿ। ನ ಹಿ ಕಾಮಕ್ರೋಧಾದಿಭಿರ್ವಿನಾ ಧರ್ಮಾದಿಪ್ರವೃತ್ತಿರುಪಪದ್ಯತೇ। "ಯದ್ಯದ್ಧಿ ಕುರುತೇ ಕರ್ಮ[1] ತತ್ತತ್ ಕಾಮಸ್ಯ

---

1. ಕರ್ಮ ಎಂಬುದಕ್ಕೆ ಅಚ್ಚಿನ ಪುಸ್ತಕದಲ್ಲಿ 'ಕಿಂಚಿತ್' ಎಂದಿದೆ. ವಾರ್ತಿಕದಲ್ಲಿ 'ಜನ್ತುಃ' ಎಂದಿದೆ.

ಚೇಷ್ಟಿತಮ್" (ಮನು ೨-೪) ಇತಿ ಸ್ಮರಣಾತ್। ಧರ್ಮಮಯೋಽಧರ್ಮ ಮಯಶ್ಚ ಭೂತ್ವಾ ಸರ್ವಮಯೋ ಭವತಿ। ಸಮಸ್ತಂ ಧರ್ಮಾಧರ್ಮಯೋಃ ಕಾರ್ಯಂ ಯಾವತ್ ಕಿಂಚಿದ್ ವ್ಯಾಕೃತಮ್, ತತ್ಸರ್ವಂ ಧರ್ಮಾಧರ್ಮ ಯೋಃ ಫಲಮ್। ತತ್ ಪ್ರತಿಪದ್ಯಮಾನಸ್ತನ್ಮಯೋ ಭವತಿ ॥

(ಭಾಷ್ಯಾರ್ಥ)

ಇವನಿಗೆ ಬಂಧನಗಳೆಂಬ ಹೆಸರಿನ ಉಪಾಧಿಗಳಾಗಿರುವವಲ್ಲ, ಅವು ಗಳೊಡನೆ ಕೂಡಿಕೊಂಡಾಗ ಅವನು ತನ್ಮಯನೆಂದೇ ತೋರುತ್ತಿರುತ್ತಾನಷ್ಟೆ, ಆ ಪದಾರ್ಥಗಳನ್ನು ಒಟ್ಟುಗೂಡಿಸಿ ಇಲ್ಲಿ ಒಂದೇ ಕಡೆಯಲ್ಲಿ ತಿಳಿಸಲಾಗು ತ್ತದೆ.

ಹೀಗೆ ಸಂಸಾರದಲ್ಲಿ ತೊಳಲುತ್ತಿರುವನಲ್ಲ, ಆ ಈ ಆತ್ಮನು ಬ್ರಹ್ಮವೇ, ಹಸಿವು- ಮುಂತಾದವುಗಳನ್ನು ಮೀರಿರುವ ಪರ(ಮಾತ್ಮ)ನೇ. ವಿಜ್ಞಾನ ಮಯನು; ವಿಜ್ಞಾನವೆಂದರೆ ಬುದ್ಧಿಯು, ಅದರಿಂದ ಉಪಲಕ್ಷಿತನಾಗುವವ ನಾದ್ದರಿಂದ ತನ್ಮಯನು. "ಆತ್ಮನು ಯಾರು? ಎಂದರೆ ಪ್ರಾಣಗಳೊಳಗೆ ಈ ವಿಜ್ಞಾನಮಯನಿದಾನಲ್ಲ" (೪-೩-೭) ಎಂದಲ್ಲವೆ, ಹಿಂದೆ ಹೇಳಿದೆ? ವಿಜ್ಞಾನ ಮಯನೆಂದರೆ ವಿಜ್ಞಾನಪ್ರಾಯನು, ಏಕೆಂದರೆ "ಧ್ಯಾನಮಾಡುತ್ತಿರುವವ ನಂತಿರುವನು, ಚಲಿಸುತ್ತಿರುವವನಂತಿರುವನು" (೪-೩-೭) ಎಂದು ಅದರ ಧರ್ಮವೇ ಇವನಿಗಿರುವಂತೆ ಕಾಣುತ್ತದೆ[1]. ಹೀಗೆಯೇ ಮನಸ್ಸಿನ ಸಾಮೀಪ್ಯ ದಿಂದ ಮನೋಮಯನು. ಹೀಗೆಯೇ ಪ್ರಾಣಮಯನು, ಪ್ರಾಣವೆಂದರೆ ಐದು ವೃತ್ತಿಗಳಿರುವ (ವಾಯು); ತನ್ಮಯನು. (ಹೀಗೆ ಪ್ರಾಣಮಯನಾಗಿರು)ವದ ರಿಂದ ಚೇತನವು ಚಲಿಸುವಂತೆ ಕಾಣಿಸುತ್ತದೆ. ಹೀಗೆಯೇ ರೂಪವನ್ನು ಕಾಣುವ ಕಾಲದಲ್ಲಿ ಚಕ್ಷುರ್ಮಯನು. ಹೀಗೆಯೇ ಶಬ್ದವನ್ನು ಕೇಳುವ ಕಾಲದಲ್ಲಿ ಶ್ರೋತ್ರಮಯನು. ಹೀಗೆ ಆಯಾ ಇಂದ್ರಿಯದ ವ್ಯಾಪಾರವು ಎದ್ದುಕೊಂಡಿರು ವಾಗ ಆಯಾ (ಇಂದ್ರಿಯ)ಮಯನಾಗಿರುತ್ತಾನೆ.

ಹೀಗೆ ಬುದ್ಧಿಪ್ರಾಣಗಳ ಮೂಲಕವಾಗಿ ಚಕ್ಷುರಾದಿಕರಣಮಯನಾಗಿ (ಆಯಾ) ಶರೀರವನ್ನುಂಟುಮಾಡುವ ಪೃಥಿವ್ಯಾದಿಭೂತಮಯನಾಗಿರುತ್ತಾನೆ.

---

1. ಇಲ್ಲಿ ಉದಾಹೃತವಾಗಿರುವ ಶ್ರುತಿಯಲ್ಲಿಯೂ (ಭಾ. ಭಾ. ೧೭೧) ವಿಜ್ಞಾನ ಮಯಶಬ್ದದ ವಿವರಣೆಯನ್ನೂ ೨-೧-೧೬ರಲ್ಲಿರುವ ವಿಜ್ಞಾನಮಯಶಬ್ದದ ವಿವರಣೆ ಯನ್ನೂ ನೋಡಿ. ವಿಜ್ಞಾನಮಯನೆಂದರೆ ಪರಮಾತ್ಮವಿಜ್ಞಾನದ ವಿಕಾರವು ಎಂಬ ಭರ್ತೃ ಪ್ರಪಂಚಮತವು ಈ ಶ್ರುತಿಗೆ ವಿರುದ್ಧವೆಂದು ಆಚಾರ್ಯರು ಅಲ್ಲಲ್ಲಿ ಹೇಳಿರುತ್ತಾರೆ.

ಇವುಗಳಲ್ಲಿ ಪಾರ್ಥಿವಶರೀರವು ಉಂಟಾಗುವಾಗ ಪೃಥಿವೀಮಯನಾಗಿರುತ್ತಾನೆ. ಹೀಗೆಯೇ ವರುಣಾದಿಲೋಕಗಳಲ್ಲಿ ಅಪ್ಪಿನ ಶರೀರವು ಉಂಟಾಗುವಾಗ ಆಪೋಮಯನಾಗಿರುತ್ತಾನೆ. ಹೀಗೆಯೇ ವಾಯುವಿನ ಶರೀರವಾಗುವಾಗ ವಾಯುಮಯನಾಗಿರುತ್ತಾನೆ. ಹೀಗೆಯೇ ಆಕಾಶಶರೀರವು ಉಂಟಾಗುವಾಗ ಆಕಾಶಮಯನಾಗಿರುತ್ತಾನೆ. ಹೀಗೆ ಈ ದೇವಶರೀರಗಳು (ಎಲ್ಲವೂ) ತೈಜಸವಾಗಿರುತ್ತವೆ ; ಇವು ಉಂಟಾಗುವಾಗ ತನ್ಮಯನು, ತೇಜೋಮಯನಾಗಿರುತ್ತಾನೆ. ಇದಕ್ಕೆ ವ್ಯತಿರಿಕ್ತವಾಗಿರುವ ಪಶ್ವಾದಿಗಳ ಶರೀರಗಳೂ ನರಕಪ್ರೇತಗಳೇ ಮುಂತಾದವುಗಳ ಶರೀರಗಳೂ ಅತೇಜೋಮಯವಾಗಿರುತ್ತವೆ ; ಅವುಗಳನ್ನಿಟ್ಟುಕೊಂಡು ಅತೇಜೋಮಯನು ಎಂದಿದೆ.

**ಈ ರೀತಿಯಲ್ಲಿ ಕಾರ್ಯಕರಣಸಂಘಾತಮಯನಾಗಿ ಆತ್ಮನು (ತಾನು) ಪಡೆದುಕೊಳ್ಳಬೇಕಾಗಿರುವ ಮತ್ತೊಂದು ವಸ್ತುವನ್ನು ಕಾಣುತ್ತಿರುವದರಿಂದ "ಇದನ್ನು ನಾನು ಪಡೆದುಕೊಂಡಿರುವೆನು, ಅದನ್ನು ನಾನು ಪಡೆಯಬೇಕು" ಎಂಬ ತಪ್ಪುತಿಳಿವಳಿಕೆಯುಳ್ಳವನಾಗಿ ಅದರ ಅಭಿಲಾಷೆಯುಳ್ಳವನಾಗಿ ಕಾಮಮಯನಾಗುತ್ತಾನೆ. ಆ ಕಾಮದಲ್ಲಿ ದೋಷವನ್ನು ಕಂಡು ಅದರ ವಿಷಯದ ಅಭಿಲಾಷೆಯು ಇಲ್ಲವಾದರೆ ಚಿತ್ತವು ತಿಳಿಯಾಗಿ ಯಾವ ಕಲ್ಮಷವೂ ಇಲ್ಲದೆ ಶಾಂತವಾಗುತ್ತದೆ ; ತನ್ಮಯನಾದಾಗ ಅಕಾಮಮಯ(ನೆನಿಸುತ್ತಾನೆ).** ಹೀಗೆಯೇ ಆ ಕಾಮಕ್ಕೆ ಏತರಿಂದಲಾದರೂ ಅಡ್ಡಿಯಾದರೆ ಆ ಕಾಮವು ಕ್ರೋಧವಾಗಿ ಪರಿಣಮಿಸುತ್ತದೆ ; ಅದರಿಂದ ತನ್ಮಯನಾಗಿ ಕ್ರೋಧಮಯ (ನೆನಿಸುತ್ತಾನೆ). ಆ ಕ್ರೋಧವು ಯಾವದಾದರೂ ಒಂದು ಉಪಾಯದಿಂದ ತೊಲಗಿದರೆ ಆಗ ಚಿತ್ತವು ತಿಳಿಯಾಗಿ ಗಡಿಬಿಡಿಯಿಲ್ಲದೆ (ಇರುವಾಗ) ಅಕ್ರೋಧ ಎನಿಸುವದು ಅದರಿಂದ ಆ (ಅಕ್ರೋಧ)ಮಯ(ನಾಗುವನು).

ಹೀಗೆ ಕಾಮಕ್ರೋಧಗಳಿಂದಲೂ ಅಕಾಮಾಕ್ರೋಧಗಳಿಂದಲೂ ಆಯಾ (ಕಾಮಾದಿ)ಮಯನಾಗಿ ಧರ್ಮಮಯನೂ ಅಧರ್ಮಮಯನೂ ಆಗುತ್ತಾನೆ. ಕಾಮಕ್ರೋಧಗಳಿಲ್ಲದೆ ಧರ್ಮಾದಿಗಳ ಪ್ರವೃತ್ತಿಯು ಆಗಲಾರದಷ್ಟೆ ? ಏಕೆಂದರೆ "ಯಾವ ಯಾವ ಕರ್ಮವನ್ನು ಮಾಡುತ್ತಾನೋ ಅದದು ಕಾಮದ ವ್ಯಾಪಾರವೇ" (ಮನು. ೨-೨) ಎಂದು ಸ್ಮೃತಿಯಲ್ಲಿದೆ.

ಧರ್ಮಮಯನೂ ಅಧರ್ಮಮಯನೂ ಆಗಿ ಸರ್ವಮಯನಾಗುವನು, ವ್ಯಾಕೃತವಾಗಿ ಯಾವದೊಂದಿಷ್ಟಿರುವದೋ ಅದೆಲ್ಲವೂ ಧರ್ಮಾಧರ್ಮಗಳ ಫಲವೇ ; ಅವುಗಳನ್ನು ಪಡೆದುಕೊಂಡಾಗ ತನ್ಮಯನೇ ಆಗುವನು.

## ಪುಣ್ಯಾಪುಣ್ಯಗಳೇ ಸಂಸಾರಕ್ಕೆ ಹೇತು

(ಭಾಷ್ಯ)

೨೬೫. ಕಿಂ ಬಹುನಾ ? ತದೇತತ್ ಸಿದ್ಧಮಸ್ಯ ಯದಯಮ್ ಇದಂಮಯಃ ಗೃಹ್ಯಮಾಣವಿಷಯಾದಿಮಯಃ । ತಸ್ಮಾತ್ ಅಯಮ್ ಅದೋಮಯಃ । ಅದಃ ಇತಿ ಪರೋಕ್ಷಂ ಕಾರ್ಯೇಣ ಗೃಹ್ಯಮಾಣೇನ ನಿರ್ದಿಶ್ಯತೇ । ಅನನ್ತಾ ಹಿ ಅನ್ತಃಕರಣೇ ಭಾವನಾವಿಶೇಷಾಃ । ನೈವ ತೇ ವಿಶೇಷತೋ ನಿರ್ದೇಷ್ಟುಂ ಶಕ್ಯನ್ತೇ । ತಸ್ಮಿನ್ ತಸ್ಮಿನ್ ಕ್ಷಣೇ ಕಾರ್ಯತೋಽವಗಮ್ಯನ್ತೇ ಇದಮಸ್ಯ ಹೃದಿ ವರ್ತತೇ, ಅದೋಽಸ್ಯ ಇತಿ । ತೇನ ಗೃಹ್ಯಮಾಣಕಾರ್ಯೇಣ ಇದಂಮಯತಯಾ ನಿರ್ದಿಶ್ಯತೇ, ಪರೋಕ್ಷೋಽನ್ತಃಸ್ಥೋ ವ್ಯವಹಾರೋಽಯಮ್ ಇದಾನೀಮ್ ಅದೋಮಯಃ ಇತಿ । ಸಂಕ್ಷೇಪತಸ್ತು ಯಥಾ ಕರ್ತುಂ ಯಥಾ ವಾ ಚರಿತುಂ ಶೀಲಮಸ್ಯ ಸೋಽಯಂ ಯಥಾಕಾರೀ ಯಥಾಚಾರೀ ಸ ತಥಾ ಭವತಿ । ಕರಣಂ ನಾಮ ನಿಯತಾ ಕ್ರಿಯಾ ವಿಧಿಪ್ರತಿಷೇಧಾದಿಗಮ್ಯಾ, ಚರಣಂ ನಾಮ ಅನಿಯತಮ್ ಇತಿ ವಿಶೇಷಃ । ಸಾಧುಕಾರೀ ಸಾಧುರ್ಭವತೀತಿ ಯಥಾಕಾರೀ ಇತ್ಯಸ್ಯ ವಿಶೇಷಣಮ್ । ಪಾಪಕಾರೀ ಪಾಪೋ ಭವತಿ ಇತಿ ಚ ಯಥಾಚಾರೀ ಇತ್ಯಸ್ಯ । ತಾಚ್ಛೀಲ್ಯಪ್ರತ್ಯಯೋಪಾದಾನಾತ್ ಅತ್ಯನ್ತತಾತ್ಪರ್ಯತೈವ ತನ್ಮಯತ್ವಮ್, ನ ತು ತತ್ಕರ್ಮಮಾತ್ರೇಣ ಇತ್ಯಾಶಙ್ಕ್ಯ ಆಹ । ಪುಣ್ಯಃ ಪುಣ್ಯೇನ ಕರ್ಮಣಾ ಭವತಿ ಪಾಪಃ ಪಾಪೇನ ಇತಿ । ಪುಣ್ಯಪಾಪಕರ್ಮಮಾತ್ರೇಣೈವ ತನ್ಮಯತಾ ಸ್ಯಾತ್ ನ ತು ತಾಚ್ಛೀಲ್ಯಮ್ ಅಪೇಕ್ಷ್ಯತೇ[1] । ತಾಚ್ಛೀಲ್ಯೇ ತು ತನ್ಮಯತ್ವಾತಿಶಯಃ ಇತಿ ಅಯಂ ವಿಶೇಷಃ । ತತ್ರ ಕಾಮಕ್ರೋಧಾದಿಪೂರ್ವಕಪುಣ್ಯಾಪುಣ್ಯಕಾರಿತಾ ಸರ್ವಮಯತ್ವೇ ಹೇತುಃ ಸಂಸಾರಸ್ಯ ಕಾರಣಮ್, ದೇಹಾದ್ ದೇಹಾನ್ತರಸಂಚಾರಸ್ಯ ಚ । ಏತತ್ಪ್ರಯುಕ್ತೋ ಹಿ ಅನ್ಯದನ್ಯತ್ ದೇಹಾನ್ತರಮ್ ಉಪಾದತ್ತೇ । ತಸ್ಮಾತ್ ಪುಣ್ಯಾಪುಣ್ಯೇ ಸಂಸಾರಸ್ಯ ಕಾರಣಮ್ । ಏತದ್ವಿಷಯೌ ಹಿ ವಿಧಿಪ್ರತಿಷೇಧೌ । ಅತ್ರ ಶಾಸ್ತ್ರಸ್ಯ ಸಾಫಲ್ಯಮ್ ಇತಿ ॥

(ಭಾಷ್ಯಾರ್ಥ)

ಹೆಚ್ಚು ಹೇಳಿದ್ದರಿಂದೇನು ? ಇವನು ಇದಂಮಯನು ಎಂದರೆ (ಈಗ ಇಲ್ಲಿ) ಗ್ರಹಿಸುತ್ತಿರುವ ವಿಷಯವೇ ಮುಂತಾದವುಗಳ ಸ್ವರೂಪನಾಗಿರುತ್ತಾನೆ ,

---

1. 'ಅಪೇಕ್ಷತೇ' ಎಂಬ ಅಚ್ಚಿನ ಪಾಠವನ್ನು ಹೀಗೆಂದು ತಿದ್ದಿಕೊಂಡಿದೆ.

ಆದ್ದರಿಂದ[1] ಇವನು ಅದೋಮಯನು. ಅದಃ (ಅದು) ಎಂದು (ಈಗ) ಇಲ್ಲಿ ಗ್ರಹಿಸುತ್ತಿರುವ ಕಾರ್ಯದಿಂದ ಪರೋಕ್ಷವಾದದ್ದನ್ನು ತಿಳಿಸಿದೆ[2]. (ಇದರ ವಿವರ): ಅಂತಃಕರಣದಲ್ಲಿರುವ ಬೇರೆಬೇರೆಯ ಭಾವನೆಗಳು ಅನಂತವಷ್ಟೆ; (ಆದ್ದರಿಂದ) ಅವನ್ನು ವಿಶೇಷ(ರೂಪ)ದಿಂದ ತಿಳಿಸುವದಕ್ಕೆ ಆಗುವದೇ ಇಲ್ಲ. ಆಯಾ ಕ್ಷಣದಲ್ಲಿ ಗ್ರಹಿಸುವ ಕಾರ್ಯದಿಂದ 'ಇದು ಇವನ ಹೃದಯದಲ್ಲಿರುತ್ತದೆ, ಅದು ಇವನ ಹೃದಯದಲ್ಲಿರುತ್ತದೆ' ಎಂದು ನಿಶ್ಚಯವಾಗುತ್ತದೆ ಆದ್ದರಿಂದ (ಈಗ ನಾವು) ಗ್ರಹಿಸುತ್ತಿರುವ ಕಾರ್ಯದಿಂದ ಇದಂಮಯನೆಂದೂ ಪರೋಕ್ಷವಾದ ಒಳಗಿನ ವ್ಯವಹಾರವನ್ನು ಅವನು ಈಗ ಅದೋಮಯನೆಂದೂ ಹೇಳಲಾಗಿದೆ[3]. ಸಾಕ್ಷೇಪವಾಗಿ (ಹೇಳಿದರೆ ಇವನು) ಎಂಥ ಕರ್ಮದವನೋ ಎಂಥ ಚರಣದವನೋ ಎಂದರೆ ಹೇಗೆ ಮಾಡುವದು ಅಥವಾ ಹೇಗೆ ಆಚರಿಸುವದು ಅವನ ಸ್ವಭಾವವೋ, ಅವನು ಅಂಥವನೇ ಆಗುವನು ಕರಣವೆಂದರೆ ವಿಧಿಪ್ರತಿಷೇಧಗಳಿಂದ ಗೊತ್ತುಮಾಡಬಹುದಾದ ನಿಯತವಾದ ಕರ್ಮವು; ಚರಣವೆಂದರೆ ಅನಿಯತವಾದ (ಕರ್ಮವು) ಎಂಬುದು (ಇವೆರಡಕ್ಕೂ) ವಿಶೇಷಣವು[4]. ಸಾಧುಕಾರಿಯಾದವನು ಸಾಧುವಾಗುವನು ಎಂಬುದು ಎಂಥ ಕರ್ಮದವನೋ ಎಂಬುದಕ್ಕೆ ವಿಶೇಷಣವು; ಪಾಪಕಾರಿಯಾದವನು ಪಾಪನಾಗುವನು ಎಂಬುದು ಎಂಥ ಚರಣವುಳ್ಳವನೋ ಎಂಬುದಕ್ಕೆ (ವಿಶೇಷಣವು)[5].

(ಇಲ್ಲಿ) ತಾಚ್ಛೀಲ್ಯಪ್ರತ್ಯಯವನ್ನು[6] ತೆಗೆದುಕೊಂಡು (ಪ್ರಯೋಗಿಸಿರು)ವದರಿಂದ ಅತ್ಯಂತವಾಗಿ ತಾತ್ಪರ್ಯವುಳ್ಳವನಾಗಿರುವದೇ ತನ್ಮಯತ್ವವೇ,

---

1. ಇದಂಮಯನಾಗಿರುವದರಿಂದ.

2 ಪ್ರತ್ಯಕ್ಷವಾಗಿರುವ ಕರ್ಮದಿಂದ ಪರೋಕ್ಷವಾಗಿರುವ ಭಾವನೆಯನ್ನು ಕಲ್ಪಿಸಿ ತಿಳಿಸಿದೆ ಎಂದರ್ಥ ಎಂದು ವಾರ್ತಿಕ.

3. ಇದನ್ನು ವಾರ್ತಿಕಾನುಸಾರವಾಗಿ ಅನುವಾದಮಾಡಿದೆ. ಹೊರಗೆ ಕಾಣುವ ಕಾರ್ಯದಿಂದ ಒಳಗಿನ ಭಾವವನ್ನು ಕಲ್ಪಿಸಿ ಈಗ ಇಂಥಿಂಥ ಭಾವವುಳ್ಳವನಾಗಿದಾನೆ ಎಂದು ನಿರ್ಣಯಿಸಬೇಕಾಗಿದೆ ಎಂಬುದು 'ಇದಂಮಯಃ ಅದೋಮಯಃ' ಎಂಬುದರ ಅಭಿಪ್ರಾಯ. ಇಲ್ಲಿ ಭಾಷ್ಯಶಯ್ಯೆಯು ಏನೋ ಹೆಚ್ಚುಕಡಿಮೆಯಾಗಿದ್ದರೂ ಇರಬಹುದು.

4. ಕರಣಚರಣಗಳ ವಿಷಯಕ್ಕೆ ಸೂ. ಭಾ. ೩-೧-೯,೧೦ (ಭಾ. ಭಾ. ೨೩೧,೨೩೨) ಇವನ್ನು ನೋಡಿ. ಇಲ್ಲಿ ಶಾಸ್ತ್ರಶಿಷ್ಟಾಚಾರಾನುಗುಣವಾದದ್ದನ್ನು ಕರ್ಮವೆಂದೂ ವ್ಯವಸ್ಥೆಯಿಲ್ಲದ್ದು ಚರಣವೆಂದೂ ಭೇದವನ್ನು ಹೇಳಿರುವದಕ್ಕೆ ಯಾವ ಆಧಾರವಿದೆಯೋ ತಿಳಿಯದು.

5. ಸಾಧುಕಾರೀ ಪಾಪಕಾರೀ -ಎಂದು ಎರಡು ಕಡೆಯಲ್ಲಿಯೂ 'ಕಾರೀ' ಎಂದೇ ಇರುವಲ್ಲಿ ಈ ವಿಶೇಷವು ಹೇಗೆ ಸಿದ್ಧವಾಗುತ್ತದೆಯೆಂಬುದು ತಿಳಿಯಲಿಲ್ಲ.

6. ಅದೇ ಸ್ವಭಾವವುಳ್ಳವನು ಎಂಬುದನ್ನು 'ಸಾಧುಕಾರೀ', 'ಪಾಪಕಾರೀ' -ಎಂಬಲ್ಲಿರುವ ಪ್ರತ್ಯಯವು ತಿಳಿಸುವದು.

ಹೊರತು ಆ ಕರ್ಮ(ವನ್ನು ಮಾಡಿದ) ಮಾತ್ರದಿಂದ (ತನ್ಮಯತ್ವವಿ)ಲ್ಲ ಎಂದು ಆಶಂಕಿಸಿ (ಹೇಳುತ್ತಾನೆ). ಪುಣ್ಯಕರ್ಮದಿಂದ ಒಳ್ಳೆಯವನಾಗುತ್ತಾನೆ, ಪಾಪ (ಕರ್ಮ)ದಿಂದ ಕೆಟ್ಟವನಾಗುತ್ತಾನೆ ಎಂದಿದೆ. ಪುಣ್ಯಪಾಪಗಳನ್ನು ಮಾಡಿದ ಮಾತ್ರದಿಂದಲೇ ತನ್ಮಯನಾಗುವನೇ ಹೊರತು ಅವಕ್ಕೆ ತಾಚ್ಛೀಲ್ಯವೇನೂ ಬೇಕಾಗುವದಿಲ್ಲ; ತಾಚ್ಛೀಲ್ಯವೇ (ಇದ್ದ)ರೋ ತನ್ಮಯತ್ವದಲ್ಲಿ ಹೆಚ್ಚಿಗೆ(ಯಾಗುತ್ತದೆ) ಎಂಬುದು ವಿಶೇಷವು. ಇಲ್ಲಿ **ಕಾಮಕ್ರೋಧಾದಿಪೂರ್ವಕವಾಗಿ ಪುಣ್ಯಾಪುಣ್ಯಗಳನ್ನು ಮಾಡುವದು ಸರ್ವಮಯನಾಗುವದಕ್ಕೆ ಕಾರಣವು, ಸಂಸಾರಕ್ಕೆ (ಇದೇ) ಕಾರಣವು; (ಒಂದು) ದೇಹದಿಂದ ಮತ್ತೊಂದು ದೇಹಕ್ಕೆ ಹೋಗುವದಕ್ಕೂ (ಇದೇ ಕಾರಣವು). ಏಕೆಂದರೆ ಇದರಿಂದ ಪ್ರೇರಿತನಾಗಿಯೇ ಮತ್ತೊಂದು ದೇಹಾಂತರವನ್ನು ತೆಗೆದುಕೊಳ್ಳುತ್ತಿರುತ್ತಾನೆ. ಆದ್ದರಿಂದ ಪುಣ್ಯಾಪುಣ್ಯಗಳು ಸಂಸಾರಕ್ಕೆ ಕಾರಣವು. ಇವುಗಳ ವಿಷಯವಾಗಿಯಲ್ಲವೆ, ವಿಧಿಪ್ರತಿಷೇಧಗಳು (ಹೊರಟಿರುವದು)? ಇವುಗಳ (ವಿಷಯದಲ್ಲಿಯೇ) ಶಾಸ್ತ್ರವು ಸಾರ್ಥಕವಾಗಿರುತ್ತದೆ[1].**

## ಪರಮಸಿದ್ಧಾಂತ: ಕಾಮವೇ ಸಂಸಾರಿತ್ವಕ್ಕೆ ಮುಖ್ಯಕಾರಣ

(ಭಾಷ್ಯ)

೨೬೬. ಅಥೋ ಅಪಿ ಅನ್ಯೇ ಬನ್ಧಮೋಕ್ಷಕುಶಲಾ ಖಲ್ವಾಹುಃ । ಸತ್ಯಮ್ ಕಾಮಾದಿಪೂರ್ವಕೇ ಪುಣ್ಯಾಪುಣ್ಯೇ ಶರೀರಗ್ರಹಣಕಾರಣಮ್, ತಥಾಪಿ ಕಾಮಪ್ರಯುಕ್ತೋ ಹಿ ಪುರುಷಃ ಪುಣ್ಯಾಪುಣ್ಯೇ ಕರ್ಮಣೀ ಉಪಚಿನೋತಿ। ಕಾಮಪ್ರಹಾಣೇ ತು ಕರ್ಮ ವಿದ್ಯಮಾನಮಪಿ ಪುಣ್ಯಾಪುಣ್ಯೋಪಚಯಕರಂ ನ ಭವತಿ। ಉಪಚಿತೇ ಅಪಿ ಪುಣ್ಯಾಪುಣ್ಯೇ ಕರ್ಮಣೀ ಕಾಮಶೂನ್ಯೇ ಫಲಾರಮ್ಭಕೇ ನ ಭವತಃ। ತಸ್ಮಾತ್ ಕಾಮ ಏವ ಸಂಸಾರಸ್ಯ ಮೂಲಮ್। ತಥಾ ಚೋಕ್ತಮ್ ಆಥರ್ವಣೇ "ಕಾಮಾನ್ ಯಃ ಕಾಮಯತೇ ಮನ್ಯಮಾನಃ ಸ ಕಾಮಭಿರ್ಜಾಯತೇ ತತ್ರ ತತ್ರ" (ಮುಂ. ೩-೨-೨) ಇತಿ। ತಸ್ಮಾತ್ ಕಾಮಮಯ ಏವಾಯಂ ಪುರುಷಃ। ಯದನ್ಯಮಯತ್ವಂ ತದಕಾರಣಂ ವಿದ್ಯಮಾನಮಪಿ ಇತ್ಯತೋಽವಧಾರಯತಿ 'ಕಾಮಮಯ ಏವ' ಇತಿ। ಯಸ್ಮಾತ್ ಸ ಚ ಕಾಮಮಯಃ ಸನ್ ಯಾದೃಶೇನ ಕಾಮೇನ ಯಥಾಕಾಮೋ ಭವತಿ। ತತ್ಕ್ರತುರ್ಭವತಿ। ಸ ಕಾಮಃ ಈಷದಭಿಲಾಷಮಾತ್ರೇಣ ಅಭಿವ್ಯಕ್ತೋ ಯಸ್ಮಿನ್ ವಿಷಯೇ ಭವತಿ ಸಃ ಅವಿಹನ್ಯಮಾನಃ ಸ್ಫುಟೀಭವನ್

---

1. ಪುಣ್ಯಪಾಪಗಳು ಪ್ರಯೋಜಕ, ವಿಜ್ಞಾನಾದಿಗಳು ಪ್ರಯೋಜ್ಯ, ಆದ್ದರಿಂದ ಪುಣ್ಯಪಾಪಗಳೇ ಮುಖ್ಯಕಾರಣ ಎಂದು ಭಾವ.

ಕ್ರತುತ್ವಮ್ ಆಪದ್ಯತೇ। ಕ್ರತುರ್ನಾಮ ಅಧ್ಯವಸಾಯಃ ನಿಶ್ಚಯಃ, ಯದ
ನನ್ತರಾ ಕ್ರಿಯಾ ಪ್ರವರ್ತತೇ। ಯತ್ಕ್ರತುರ್ಭವತಿ ಯಾದೃಕ್ಕಾಮಕಾರ್ಯೇಣ
ಕ್ರತುನಾ ಯಥಾರೂಪಃ ಕ್ರತುರಸ್ಯ ಸೋಽಯಂ ಯತ್ಕ್ರತುರ್ಭವತಿ ತತ್ಕರ್ಮ
ಕುರುತೇ। ಯದ್ವಿಷಯಃ ಕ್ರತುಃ, ತತ್ಫಲನಿರ್ವೃತ್ತಯೇ ಯದ್ ಯೋಗ್ಯಂ
ಕರ್ಮ ತತ್ ಕುರುತೇ ನಿರ್ವರ್ತಯತಿ। ಯತ್ ಕರ್ಮ ಕುರುತೇ ತತ್
ಅಭಿಸಂಪದ್ಯತೇ, ತದೀಯಂ ಫಲಮ್ ಅಭಿಸಂಪದ್ಯತೇ। ತಸ್ಮಾತ್ ಸರ್ವ
ಮಯತ್ವೇ ಅಸ್ಯ ಸಂಸಾರಿತ್ವೇ ಚ ಕಾಮ ಏವ ಹೇತುರಿತಿ ॥

(ಭಾಷ್ಯಾರ್ಥ)

(ಅಥೋ= ಅಪಿ) ಇನ್ನು ಕೆಲವರು ಬಂಧಮೋಕ್ಷ(ವಿಷಯದಲ್ಲಿ) ಜಾಣ
ರಾದವರು (ಹೀಗೆಂದು) ಹೇಳುವರು : ನಿಜ, ಕಾಮಾದಿಪೂರ್ವಕವಾದ ಪುಣ್ಯಾ
ಪುಣ್ಯಗಳು ಶರೀರವನ್ನು ತೆಗೆದುಕೊಳ್ಳುವದಕ್ಕೆ ಕಾರಣವೇ; ಆದರೂ ಕಾಮ
ಪ್ರೇರಿತನಾಗಿಯಲ್ಲವೆ, ಪುರುಷನು ಪುಣ್ಯಾಪುಣ್ಯಕರ್ಮಗಳನ್ನು ರಾಶಿಹಾಕಿ
ಕೊಳ್ಳುತ್ತಾನೆ ? **ಕಾಮವು ನಾಶವಾದರೋ ಕರ್ಮವು ಇದ್ದರೂ ಪುಣ್ಯಾ
ಪುಣ್ಯಗಳ ರಾಶಿಹಾಕುವದಾಗುವದಿಲ್ಲ, ಪುಣ್ಯಾಪುಣ್ಯಕರ್ಮಗಳು ರಾಶಿ
ಯಾದರೂ ಕಾಮರಹಿತವಾದರೆ ಫಲವನ್ನುಂಟುಮಾಡುವವಾಗು
ವದಿಲ್ಲ; ಆದ್ದರಿಂದ ಕಾಮವೇ ಈಸಂಸಾರಕ್ಕೆ ಮೂಲವು**[1]. ಆದ್ದರಿಂದಲೇ
ಆಥರ್ವಣದಲ್ಲಿ "ಯಾವನು ಕಾಮಗಳನ್ನೇ ಯೋಚಿಸುತ್ತಾ ಕಾಮಿಸುತ್ತಿರು
ವನೋ ಅವನು ಕಾಮಗಳಿಂದ ಅಲ್ಲಲ್ಲಿ ಹುಟ್ಟುತ್ತಿರುವನು" (ಮುಂ. ೩-೨-೨)
ಎಂದು ಹೇಳಿದೆ. ಆದ್ದರಿಂದ ಈ ಪುರುಷನು ಕಾಮಮಯನೇ; ಇನ್ನು ಅನ್ಯ
ಮಯನಾಗಿರುವನಲ್ಲ, ಅದು ಇದ್ದರೂ ಕಾರಣವಲ್ಲವಾದ್ದರಿಂದ '(ಈ ಪುರುಷನು)
ಕಾಮಮಯನೇ' ಎಂದು ಅವಧಾರಣೆಮಾಡಿರುತ್ತದೆ. (ಹೀಗೆ) ಅವನು ಕಾಮ
ಮಯನಾಗಿದ್ದುಕೊಂಡು ಎಂಥ ಕಾಮದಿಂದ ಹೇಗೆ ಕಾಮವುಳ್ಳವನಾಗಿರು
ತ್ತಾನೋ ತತ್ಕ್ರತುವಾಗುತ್ತಾನೆ. ಆ ಕಾಮವು ಒಂದಿಷ್ಟು ಅಭಿಲಾಷಮಾತ್ರ
ವಾಗಿ ಅಭಿವ್ಯಕ್ತವಾಗಿ ಯಾವ ವಿಷಯದಲ್ಲಾಗುವದೋ ಅದಕ್ಕೆ ಅಡ್ಡಿಯಿಲ್ಲ
ದಿದ್ದರೆ ಸ್ಫುಟವಾಗಿ ಕ್ರತುವಾಗುವದು. ಕ್ರತು ಎಂದರೆ ಅಧ್ಯವಸಾಯವು,
ನಿಶ್ಚಯವು; ಇದು(ಉಂಟಾದ) ಬಳಿಕವೇ ಕ್ರಿಯೆಯು ಉಂಟಾಗುವದು. ಎಂಥ
ಕ್ರತುವುಳ್ಳವನಾಗುವನೋ— ಎಂಥ ಕಾಮಕಾರ್ಯವಾದ ಕ್ರತುವಿನಿಂದ ಆ

1. ಈ ಕಾಮಕ್ಕೆ ಅವಿದ್ಯೆಯೇ ಕಾರಣ, ಆದ್ದರಿಂದ ಅವಿದ್ಯಾಕಾಮಕರ್ಮಗಳು ಒಂದರಿಂದೊಂದು ಪ್ರಯುಕ್ತವಾಗಿ ಸಂಸಾರಕ್ಕೆ ಕಾರಣವು. ಇಲ್ಲಿ ಅವಿದ್ಯೆಯು ಪ್ರವರ್ತಕ ಬೀಜಮಾತ್ರವೇ, ಕಾಮವೇ ಮುಖ್ಯವಾಗಿ ಪ್ರವರ್ತಕವು ಎಂಬ ೧-೪-೧೭ (ಭಾ. ಭಾ. ೧೯೪) ಭಾಷ್ಯವಾಕ್ಯವನ್ನು ನೆನಪಿಗೆ ತಂದುಕೊಳ್ಳಬೇಕು.

ಇವನು ಹೇಗಿರುವ ಕ್ರತುವುಳ್ಳವನೋ (ಎಂಬಿದನ್ನು ತಿಳಿಸುವದಕ್ಕೆ) 'ಯತ್ಕ್ರತು'ವೆಂದಿದೆ. (ಎಂಥ ಕ್ರತುವುಳ್ಳವನೋ) ತತ್ಕರ್ಮವನ್ನು ಮಾಡುತ್ತಾನೆ; ಕ್ರತುವು ಯಾವ ವಿಷಯದಲ್ಲಿಯೋ ಆ ಫಲವು ಉಂಟಾಗುವದಕ್ಕೆ ಯಾವ ಕರ್ಮವು ಯೋಗ್ಯವೋ ಅದನ್ನು ಮಾಡುತ್ತಾನೆ, ನೆರವೇರಿಸುತ್ತಾನೆ. ಯಾವ ಕರ್ಮವನ್ನು ಮಾಡುತ್ತಾನೋ ಅದನ್ನು ಪಡೆದುಕೊಳ್ಳುತ್ತಾನೆ, ಅದರ ಫಲವನ್ನು ಪಡೆದುಕೊಳ್ಳುತ್ತಾನೆ. ಆದ್ದರಿಂದ ಇವನು ಸರ್ವಮಯನಾಗುವದಕ್ಕೂ ಸಂಸಾರದಲ್ಲಿ ತೊಳಲುವದಕ್ಕೂ ಕಾಮವೇ ಹೇತುವಾಗಿದೆ[1].

## ಸಂಸಾರದ ಸ್ವರೂಪವೂ ಮೋಕ್ಷಸ್ವರೂಪವೂ

(ಉಪನಿಷತ್ತು)

**ತದೇಷ ಶ್ಲೋಕೋ ಭವತಿ। ತದೇವ ಸಕ್ತಃ ಸಹ ಕರ್ಮಣೈತಿ ಲಿಙ್ಗಂ ಮನೋ ಯತ್ರ ನಿಷಕ್ತಮಸ್ಯ। ಪ್ರಾಪ್ಯಾನ್ತಂ ಕರ್ಮಣಸ್ತಸ್ಯ ಯತ್ಕಿಂಚೇಹ ಕರೋತ್ಯಯಮ್ । ತಸ್ಮಾಲ್ಲೋಕಾತ್ ಪುನರೈತ್ಯಸ್ಮೈ ಲೋಕಾಯ ಕರ್ಮಣ ಇತಿ ನು ಕಾಮಯಮಾನೋಽಥಾಕಾಮಯಮಾನೋ ಯೋಽಕಾಮೋ ನಿಷ್ಕಾಮ ಆಪ್ತಕಾಮ ಆತ್ಮಕಾಮೋ ನ ತಸ್ಯ ಪ್ರಾಣಾ ಉತ್ಕ್ರಾಮನ್ತಿ ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ ॥೬॥**

೬. ಇಲ್ಲಿ ಈ ಶ್ಲೋಕವಿರುತ್ತದೆ: "ಇವನ ಲಿಂಗವಾದ ಮನಸ್ಸು ಎಲ್ಲಿ ನಿಷಕ್ತವಾಗಿರುವದೋ ಸಕ್ತನಾದವನು ಅದನ್ನೇ ಕರ್ಮದೊಡನೆ ಹೋಗಿ(ಸೇರು)ವನು. ಇಲ್ಲಿ ಯಾವಯಾವ ಕರ್ಮವನ್ನು ಮಾಡುವನೋ ಅದರ ಅಂತವನ್ನು ಪಡೆದುಕೊಂಡು ಆ ಲೋಕದಿಂದ ಮತ್ತೆ ಈ ಲೋಕಕ್ಕೆ ಕರ್ಮಕ್ಕಾಗಿ ಬರುವನು." ಇಂತಲ್ಲವೆ, ಕಾಮಿಸುವವನು? ಇನ್ನು ಕಾಮಿಸದೆ ಇರುವವನು: ಯಾವನು ಅಕಾಮನೋ, ನಿಷ್ಕಾಮನೋ, ಆಪ್ತಕಾಮನೋ ಆತ್ಮಕಾಮನೋ ಅವನ ಪ್ರಾಣಗಳು ಉತ್ಕ್ರಾಂತವಾಗುವದಿಲ್ಲ, (ಅವನು) ಬ್ರಹ್ಮವೇ ಆಗಿದ್ದು ಬ್ರಹ್ಮದಲ್ಲಿ ಸೇರಿಹೋಗುವನು.

---

1. ಇದೇ ಪರಮಸಿದ್ಧಾಂತವು; ಬರಿಯ ಕರ್ಮಗಳೇ ಸಂಸಾರಕ್ಕೆ ಹೇತುವೆಂದು ತಿಳಿಯಬಾರದು ಎಂದಭಿಪ್ರಾಯ. ಕರ್ಮವೇ ಹೇತುವೆಂಬುದು ಪೂರ್ವಪಕ್ಷವೆಂದು ಪಾರ್ತಿಕ, ಅದು ಪೂರ್ಣಸತ್ಯವಲ್ಲವೆಂಬ ಅಭಿಪ್ರಾಯದಿಂದ ಅಲ್ಲಿ ಹಾಗೆ ಹೇಳಿದೆ.

# ಕಾಮಿಯ ಸಂಸಾರ

(ಭಾಷ್ಯ)

೨೬೭. ತತ್ ತಸ್ಮಿನ್ನರ್ಥೇ ಏಷ ಶ್ಲೋಕಃ ಮನ್ತ್ರೋಽಪಿ ಭವತಿ। ತದೇವ ಏತಿ ತದೇವ ಗಚ್ಛತಿ ಸಕ್ತಃ ಆಸಕ್ತಃ, ತತ್ರೋದ್ಭೂತಾಭಿಲಾಷಃ ಸನ್ ಇತ್ಯರ್ಥಃ। ಕಥಮೇತಿ? ಸಹ ಕರ್ಮಣಾ ಯತ್ಕರ್ಮಫಲಾಸಕ್ತಃ ಸನ್ ಅಕರೋತ್ ತೇನ ಕರ್ಮಣಾ ಸಹೈವ ತತ್ ಏತಿ ತತ್ಫಲಮ್ ಏತಿ। ಕಿಂ ತತ್? ಲಿಙ್ಗಂ ಮನಃ। ಮನಃಪ್ರಧಾನತ್ವಾತ್ ಲಿಙ್ಗಸ್ಯ ಮನೋ ಲಿಙ್ಗಮಿತ್ಯುಚ್ಯತೇ। ಅಥವಾ ಲಿಙ್ಗ್ಯತೇ ಅವಗಮ್ಯತೇ, ಅವಗಚ್ಛತಿ ಯೇನ, ತಲ್ಲಿಙ್ಗಮ್। ತನ್ಮನಃ ಯತ್ರ ಯಸ್ಮಿನ್ ನಿಷಕ್ತಂ ನಿಶ್ಚಯೇನ ಸಕ್ತಮ್ ಉದ್ಭೂತಾಭಿಲಾಷಮ್ ಅಸ್ಯ ಸಂಸಾರಿಣಃ। ತದಭಿಲಾಷೋ ಹಿ ತತ್ಕರ್ಮ ಕೃತವಾನ್। ತಸ್ಮಾತ್ ತನ್ಮನೋಽಭಿಷಙ್ಗವಶಾದೇವ[1] ಅಸ್ಯ ತೇನ ಕರ್ಮಣಾ ತತ್ಫಲಪ್ರಾಪ್ತಿಃ। ತೇನ ಏತತ್ ಸಿದ್ಧಂ ಭವತಿ ಕಾಮೋ ಮೂಲಂ ಸಂಸಾರಸ್ಯ ಇತಿ। ಅತಃ ಉಚ್ಛಿನ್ನ ಕಾಮಸ್ಯ ವಿದ್ಯಮಾನಾನ್ಯಪಿ ಕರ್ಮಾಣಿ ಬ್ರಹ್ಮವಿದಃ, ವನ್ಧ್ಯ[2]ಪ್ರಸವಾನಿ ಭವನ್ತಿ। "ಪರ್ಯಾಪ್ತಕಾಮಸ್ಯ ಕೃತಾತ್ಮನಸ್ತ್ವಿ[3]ಹೈವ ಸರ್ವೇ ಪ್ರವಿಲೀಯನ್ತಿ ಕಾಮಾಃ" (ಮುಂ.೩-೨-೨) ಇತಿ ಶ್ರುತೇಃ। ಕಿಂಚ ಪ್ರಾಪ್ಯ ಅನ್ತಂ ಕರ್ಮಣಃ ಪ್ರಾಪ್ಯ ಭುಕ್ತ್ವಾ ಅನ್ತಮ್ ಅವಸಾನಮ್। ಯಾವತ್ ಕರ್ಮಣಃ ಫಲ ಪರಿಸಮಾಪ್ತಿಂ ಕೃತ್ವಾ ಇತ್ಯರ್ಥಃ। ಕಸ್ಯ ಕರ್ಮಣೋಽನ್ತಂ ಪ್ರಾಪ್ಯೇತಿ? ಉಚ್ಯತೇ। ತಸ್ಯ ಯತ್ಕಿಂಚ ಕರ್ಮ ಇಹ ಅಸ್ಮಿನ್ ಲೋಕೇ ಕರೋತಿ ನಿರ್ವರ್ತಯತಿ ಅಯಮ್, ತಸ್ಯ ಕರ್ಮಣಃ ಫಲಂ ಭುಕ್ತ್ವಾ ಅನ್ತಂ ಪ್ರಾಪ್ಯ ತಸ್ಮಾತ್ ಲೋಕಾತ್ ಪುನಃ ಐತಿ ಆಗಚ್ಛತಿ ಅಸ್ಮೈ ಲೋಕಾಯ ಕರ್ಮಣೇ। ಅಯಂ ಹಿ ಲೋಕಃ ಕರ್ಮಪ್ರಧಾನಃ। ತೇನಾಹ ಕರ್ಮಣ ಇತಿ। ಪುನಃ ಕರ್ಮಕರಣಾಯ ಪುನಃ ಕರ್ಮ ಕೃತ್ವಾ ಫಲಾಸಙ್ಗವಶಾತ್ ಪುನರಮುಂ ಲೋಕಂ ಯಾತಿ। ಇತಿ ಏವಮ್। ಇತಿ ನು ಏವಂ ನು ಕಾಮಯಮಾನಃ ಸಂಸರತಿ॥

(ಭಾಷ್ಯಾರ್ಥ)

ಇಲ್ಲಿ ಎಂದರೆ ಈ ಅರ್ಥದಲ್ಲಿ ಈ ಶ್ಲೋಕವು ಮಂತ್ರವುಕೂಡ ಇರುತ್ತದೆ. ಅದನ್ನೇ ಹೋಗಿ(ಸೇರು)ವನು, ಅದನ್ನೇ ಸೇರಿಕೊಳ್ಳುವನು, ಸಕ್ತನಾದವನು,

---

1. ವಾರ್ತಿಕದಲ್ಲಿ 'ಅಭಿಷ್ವಙ್ಗ' ಎಂದಿದೆ. ಇಲ್ಲಿಯೂ ಅದೇ ಶಬ್ದವೇ ಇತ್ತೋ, ಅಥವಾ ಅಭಿಷಙ್ಗ ಎಂಬಿದೇ ಸರಿಯೋ ತಿಳಿಯದು.

2. ವನ್ಧ್ಯ ಎಂಬ ಸದೀರ್ಘ (ಆ॥ ವಾ॥) ಪಾಠವು ಅನವದ್ಯ.

3. 'ಕೃತಾತ್ಮನಶ್ಚ' ಎಂಬ ಪಾಠವೂ ಉಂಟು; ಆದರೆ ಮುಂಡಕದಲ್ಲಿ ಕೃತಾತ್ಮನಸ್ತು ಎಂದೇ ಇದೆ.

ಆಸಕ್ತನಾಗಿ ಎಂದರೆ ಅದರಲ್ಲಿ ಎದ್ದುಕೊಂಡ ಅಭಿಲಾಷೆಯುಳ್ಳವನಾಗಿ ಎಂದರ್ಥ. ಹೇಗೆ ಹೋಗಿ (ಸೇರು)ವನು ? ಕರ್ಮದೊಡನೆ, ಫಲದಲ್ಲಿ ಆಸಕ್ತನಾಗಿ ಯಾವ ಕರ್ಮವನ್ನು ಮಾಡಿದ್ದನೋ ಆ ಕರ್ಮದೊಡನೆಯೇ ಆ ಫಲವನ್ನು ಹೋಗಿ (ಸೇರು)ವನು. ಆ (ಫಲವು) ಯಾವದು ? ಲಿಂಗವಾದ ಮನಸ್ಸು- ಲಿಂಗ (ಶರೀರ)ಕ್ಕೆ ಮನಸ್ಸೇ ಪ್ರಧಾನವಾಗಿರುವದರಿಂದ ಮನಸ್ಸನ್ನು ಲಿಂಗವೆಂದಿರುತ್ತದೆ ; ಅಥವಾ ಯಾವದರಿಂದ (ಲಿಙ್ಗ್ಯತೇ= ಅವಗಮ್ಯತೇ) ಅರಿಯಲಾಗುತ್ತದೆಯೋ, (ಯಾವದರಿಂದ) ಗೊತ್ತುಮಾಡಿಕೊಳ್ಳುತ್ತಾನೋ ಅದು ಲಿಂಗವು. ಈ ಸಂಸಾರಿಯ ಆ ಮನಸ್ಸು- ಎಲ್ಲಿ ಯಾವದರಲ್ಲಿ ನಿಷಕ್ತವಾಗಿತ್ತೋ ನಿಶ್ಚಯವಾಗಿತ್ತೋ ಎದ್ದುಕೊಂಡ ಅಭಿಲಾಷೆಯುಳ್ಳದಾಗಿತ್ತೋ (ಅದನ್ನು ಎಂದರ್ಥ). ಆದರ ಅಭಿಲಾಷೆಯುಳ್ಳವನಾಗಿಯಲ್ಲವೆ, ಆ ಕರ್ಮವನ್ನು ಮಾಡಿದನು ? ಆದ್ದರಿಂದ ಆ ಮನಸ್ಸಿನ ಆಸಕ್ತಿಯ ವಶದಿಂದಲೇ ಇವನಿಗೆ ಆ ಕರ್ಮದಿಂದ ಆ ಫಲದ ಪ್ರಾಪ್ತಿ(ಯಾಗುವದು). ಇದರಿಂದ ಇದು ಸಿದ್ಧವಾಯಿತು. (ಏನೆಂದರೆ), ಕಾಮವೇ ಸಂಸಾರಕ್ಕೆ ಮೂಲವು. **ಆದ್ದರಿಂದ ಕಾಮವು ನಾಶವಾದ ಬ್ರಹ್ಮಜ್ಞಾನಿಗೆ ಕರ್ಮಗಳಿದ್ದರೂ ನಿಷ್ಫಲವಾಗುವವು**[1]. "ಸಂಪೂರ್ಣವಾಗಿ ಆಪ್ತಕಾಮನಾದ ಕೃತಾತ್ಮನಿಗಾದರೋ ಇಲ್ಲಿಯೇ ಸರ್ವಕಾಮಗಳೂ ಪ್ರವಿಲಯವಾಗುವವು" (ಮುಂ.೩-೨-೨) ಎಂಬ ಶ್ರುತಿಯಿಂದ (ಇದು ಸಿದ್ಧವಾಗುತ್ತದೆ). ಮತ್ತು ಕರ್ಮದ ಅಂತವನ್ನು ಪಡೆದು- ಅಂತವು ಎಂದರೆ ಕೊನೆಯಾಗುವವರೆಗೂ ಪಡೆದು ಎಂದರೆ ಭೋಗಿಸಿ ಕರ್ಮದ ಫಲವನ್ನು ಮುಗಿಸಿಕೊಂಡು ಎಂದರ್ಥ. ಯಾವ ಕರ್ಮದ ಅಂತವನ್ನು ಪಡೆದು ? ಎಂದರೆ ಹೇಳುತ್ತಾನೆ. ಇಲ್ಲಿ, ಈ ಲೋಕದಲ್ಲಿ ಯಾವಯಾವ ಕರ್ಮವನ್ನು ಮಾಡಿರುತ್ತಾನೋ ಅನುಷ್ಠಾನಮಾಡಿದ್ದಾನೋ, ಆ ಕರ್ಮದ ಫಲವನ್ನು ಭೋಗಿಸಿ ಅಂತವನ್ನು ಪಡೆದು, ಆ ಲೋಕದಿಂದ ಮರಳಿ ಈ ಲೋಕಕ್ಕೆ ಕರ್ಮಕ್ಕಾಗಿ ಬರುತ್ತಾನೆ. ಈ ಲೋಕವು ಕರ್ಮಪ್ರಧಾನವಲ್ಲವೆ[2] ? ಆದ್ದರಿಂದ ಕರ್ಮಕ್ಕಾಗಿ ಎಂದು ಹೇಳಿರುತ್ತಾನೆ. ಮತ್ತೆ ಕರ್ಮವನ್ನು ಮಾಡುವದಕ್ಕೆ (ಬರುತ್ತಾನೆ), ಮತ್ತೂ ಕರ್ಮವನ್ನು ಮಾಡಿ ಫಲಾಸಕ್ತಿಯ ವಶದಿಂದ ಮತ್ತೆ ಆ ಲೋಕಕ್ಕೆ ಹೋಗುತ್ತಾನೆ ; ಇಂತು, ಹೀಗೆ. ಇಂತಲ್ಲವೆ, ಹೀಗಲ್ಲವೆ, ಕಾಮಿಸುವವನು ಸಂಸಾರದಲ್ಲಿ ತೊಳಲುತ್ತಿರುತ್ತಾನೆ ?

---

1. ಕರ್ಮಕ್ಕೆ ಫಲವನ್ನು ಕೊಡುವ ಶಕ್ತಿಯೇನೋ ಇದೆಯಾದರೂ ಜ್ಞಾನದ ಕಾರಣದಿಂದ ಆ ಶಕ್ತಿಗೆ ಪ್ರತಿಬಂಧವಾಗುತ್ತದೆ, ಸಗುಣವಿದ್ಯೆಯಲ್ಲಿಯೇ ಕರ್ಮವು ನಿಷ್ಫಲವಾಗುತ್ತದೆ, ಅಕರ್ತಾಪ್ರತ್ಯಗಾತ್ಮಜ್ಞಾನದಿಂದ ನಿರ್ಗುಣವಿದ್ಯೆಯಲ್ಲಿ ನಾಶವಾಗುವದೆಂಬುದಂತೂ ಸ್ವತಃಸಿದ್ಧ ಎಂದು ಸೂ. ಭಾ. ೪-೧-೧೪ (ಭಾ. ಭಾ. ೫೨೮, ೫೨೯).

2. ಗೀ. ಭಾ. ೪-೧೨ (ಭಾ. ಭಾ. ೨೪೧ ನೋಡಿ).

# ಅಕಾಮಿಗೆ ಮುಕ್ತಿ

(ಭಾಷ್ಯ)

೨೬೮. ಯಸ್ಮಾತ್ ಕಾಮಯಮಾನ ಏವ ಏವಂ ಸಂಸರತಿ ಅಥ ತಸ್ಮಾತ್ ಅಕಾಮಯಮಾನಃ ನ ಕ್ವಚಿತ್ ಸಂಸರತಿ। ಫಲಾಸಕ್ತಸ್ಯ ಹಿ ಗತಿರುಕ್ತಾ। ಅಕಾಮಸ್ಯ ಹಿ ಕ್ರಿಯಾನುಪಪತ್ತೇಃ ಅಕಾಮಯಮಾನೋ ಮುಚ್ಯತ ಏವ । ಕಥಂ ಪುನರಕಾಮಯಮಾನೋ ಭವತಿ। ಯೋಽಕಾಮೋ ಭವತಿ ಅಸೌ ಅಕಾಮಯಮಾನಃ। ಕಥಮ್ ಅಕಾಮತೇತಿ? ಉಚ್ಯತೇ। ಯೋ ನಿಷ್ಕಾಮಃ, ಯಸ್ಮಾತ್ ನಿರ್ಗತಾಃ ಕಾಮಾಃ ಸೋಽಯಂ ನಿಷ್ಕಾಮಃ। ಕಥಂ ಕಾಮಾ ನಿರ್ಗಚ್ಛನ್ತಿ? ಯ ಆಪ್ತಕಾಮೋ ಭವತಿ। ಆಪ್ತಾಃ ಕಾಮಾಃ ಯೇನ ಸ ಆಪ್ತಕಾಮಃ। ಕಥಮ್ ಆಪ್ಯನ್ತೇ ಕಾಮಾಃ। ಆತ್ಮಕಾಮತ್ವೇನ। ಯಸ್ಯ ಆತ್ಮೈವ ನಾನ್ಯಃ ಕಾಮಯಿತವ್ಯೋ ವಸ್ತ್ವನ್ತರಭೂತಃ ಪದಾರ್ಥೋ ಭವತಿ। ಆತ್ಮೈವ ಅನನ್ತರೋಽಬಾಹ್ಯಃ ಕೃತ್ಸ್ನಃ ಪ್ರಜ್ಞಾನಘನ ಏಕರಸಃ, ನೋರ್ಧ್ವಂ ನ ತಿರ್ಯಗ್ ನಾಧ ಆತ್ಮನೋಽನ್ಯತ್ ಕಾಮಯಿತವ್ಯಂ ವಸ್ತ್ವನ್ತರಮ್। ಯಸ್ಯ ಸರ್ವಮಾತ್ಮೈವಾಭೂತ್ ತತ್ ಕೇನ ಕಂ ಪಶ್ಯೇತ್, ಶೃಣುಯಾತ್, ಮನ್ವೀತ, ವಿಜಾನೀಯಾದ್ವಾ? ಏವಂ ವಿಜಾನನ್ ಕಂ ಕಾಮಯೇತ? ಜ್ಞಾಯಮಾನೋ ಹಿ ಅನ್ಯತ್ವೇನ ಪದಾರ್ಥಃ ಕಾಮಯಿತವ್ಯೋ ಭವತಿ। ನ ಚಾಸೌ ಅನ್ಯಃ ಬ್ರಹ್ಮವಿದ ಆಪ್ತಕಾಮಸ್ಯಾಸ್ತಿ। ಯ ಏವ ಆತ್ಮ ಕಾಮತಯಾ ಆಪ್ತಕಾಮಃ ಸ ನಿಷ್ಕಾಮಃ, ಅಕಾಮಃ, ಅಕಾಮಯಮಾನಶ್ಚ ಇತಿ ಮುಚ್ಯತೇ। ನ ಹಿ ಯಸ್ಯ ಆತ್ಮೈವ ಸರ್ವಂ ಭವತಿ ತಸ್ಯಾನಾತ್ಮಾ ಕಾಮಯಿತವ್ಯೋಽಸ್ತಿ। ಅನಾತ್ಮಾ ಚ ಅನ್ಯಃ ಕಾಮಯಿತವ್ಯಃ। ಸರ್ವಂ ಚ ಆತ್ಮೈವಾಭೂತ್ ಇತಿ ವಿಪ್ರತಿಷಿದ್ಧಮ್। ಸರ್ವಾತ್ಮದರ್ಶಿನಃ ಕಾಮಯಿತವ್ಯಾಭಾವಾತ್ ಕರ್ಮಾನುಪಪತ್ತಿಃ ॥

(ಭಾಷ್ಯಾರ್ಥ)

ಕಾಮಿಸುವವನೇ ಹೀಗೆ ಸಂಸಾರದಲ್ಲಿ ತೊಳಲುತ್ತಾನಷ್ಟೆ, ಇನ್ನು (ಅಥ= ತಸ್ಮಾತ್) ಆದ್ದರಿಂದ[1] ಕಾಮಿಸದೆ ಇರುವವನು ಎಲ್ಲಿಗೂ ಹೋಗುವದೇ ಇಲ್ಲ. ಫಲಾಸಕ್ತನಾದವನಿಗಲ್ಲವೆ, ಗತಿಯನ್ನು ಹೇಳಿದ್ದು? ಆದ್ದರಿಂದ ಅಕಾಮನಾದವನಿಗೆ ಕ್ರಿಯೆಯೇ ಹೊಂದುವದಿಲ್ಲವಾದ್ದರಿಂದ ಕಾಮಿಸದೆ ಇರುವವನು ಮುಕ್ತನೇ ಆಗುತ್ತಾನೆ.

ಇನ್ನು ಕಾಮಿಸದವನಾಗುವದು ಹೇಗೆ? ಎಂದರೆ ಯಾವನು ಅಕಾಮನಾಗಿರುತ್ತಾನೋ ಅವನು ಕಾಮಿಸದವನು. ಅಕಾಮತ್ವವುಂಟಾಗುವದು

1 ಅಥ ಎಂದರೆ ಇಲ್ಲಿ ಆದ್ದರಿಂದ ಎಂದೇ ಅರ್ಥ; ಇನ್ನುಮೇಲೆ ಎಂದರ್ಥವಲ್ಲ.

ಹೇಗೆ? ಎಂದರೆ ಹೇಳುತ್ತೇವೆ. ಯಾವನು ನಿಷ್ಕಾಮನೋ, ಯಾವನಿಂದ ಕಾಮಗಳು ಬಿಟ್ಟುಹೋಗಿರುವವೋ (ಅವನು ಅಕಾಮನಾಗುವನು). ಕಾಮಗಳು ಹೇಗೆ ಬಿಟ್ಟುಹೋಗುತ್ತವೆ ? ಯಾವನು ಆಪ್ತಕಾಮನಾಗುವನೋ, ಯಾವನಿಗೆ ಕಾಮಗಳು ದೊರಕಿರುವವೋ, ಅವನು ಆಪ್ತಕಾಮನು ; (ಅವನನ್ನು ಕಾಮಗಳು ಬಿಟ್ಟುಹೋಗುತ್ತವೆ). ಕಾಮಗಳು ದೊರಕುವದು ಹೇಗೆ ? ಆತ್ಮಕಾಮನಾಗುವದರಿಂದ ; ಯಾವನಿಗೆ ಆತ್ಮನೇ ಹೊರತು ಮತ್ತೊಂದು ಕಾಮಿಸಬೇಕಾದ ವಸ್ತ್ವಂತರವಾದ ಪದಾರ್ಥವು ಇರುವದಿಲ್ಲವೋ[1], 'ಆತ್ಮನೊಬ್ಬನೇ ಒಳಗಿಲ್ಲದೆ, ಹೊರಗಿಲ್ಲದೆ, ಸಂಪೂರ್ಣವಾಗಿ, ಪ್ರಜ್ಞಾನಘನನಾಗಿ'[2] ಏಕರಸನಾಗಿರುವನೋ, (ಯಾವನಿಗೆ) ಮೇಲಾಗಲಿ, ಅಡ್ಡಡ್ಡವಾಗಿಯಾಗಲಿ, ಕೆಳಕ್ಕಾಗಲಿ, ಮತ್ತೊಂದು ಕಾಮಯಿತವ್ಯವಾದ ವಸ್ತ್ವಂತರವೇ ಇರುವದಿಲ್ಲವೋ,[3] ಯಾವನಿಗೆ ಎಲ್ಲವೂ ಆತ್ಮನೇ ಆಗಿರುವದೋ ಅಲ್ಲಿ (ಅವನು) ಏತರಿಂದ ಯಾರನ್ನು ಕಂಡಾನು, ಕೇಳಿಯಾನು, ಮನನಮಾಡಿಯಾನು, ಅಥವಾ ಅರಿತಾನು[4] ? ಹೀಗೆಂದು ಅರಿತುಕೊಂಡವನು ಯಾವದನ್ನು ಕಾಮಿಸಿಯಾನು? ಅರಿತ ಮತ್ತೊಂದು ಪದಾರ್ಥವಲ್ಲವೆ, ಕಾಮಯಿತವ್ಯವಾಗುವದು ? ಆದರೆ (ಆ) ಮತ್ತೊಂದು (ಪದಾರ್ಥವೆಂಬುದು) ಆಪ್ತಕಾಮನಾದ ಬ್ರಹ್ಮಜ್ಞಾನಿಗೆ ಇರುವದೇ ಇಲ್ಲ. (ಹೀಗೆ) ಯಾವನು ಆತ್ಮಕಾಮನಾಗಿರುವದರಿಂದ ಆಪ್ತಕಾಮನೋ, ಅವನೇ ನಿಷ್ಕಾಮನೂ, ಅಕಾಮನೂ, ಕಾಮಿಸದಿರುವವನೂ (ಆಗಿರುತ್ತಾ)ನಾದ್ದರಿಂದ ಮುಕ್ತನಾಗುತ್ತಾನೆ. ಯಾವನಿಗೆ ಎಲ್ಲವೂ ಆತ್ಮನೇ ಆಗಿರುವದೋ ಅವನಿಗೆ ಕಾಮಿಸಬೇಕಾದ ಅನಾತ್ಮವು ಇರುವದಿಲ್ಲವಷ್ಟೆ. ಬೇರೆಯಾಗಿರುವ ಅನಾತ್ಮವು ಕಾಮಯಿತವ್ಯವಾಗಿಯೂ ಇದೆ, ಎಲ್ಲವೂ ಆತ್ಮನೂ ಆಗಿದೆ-ಎನ್ನುವದು (ತನಗೆ ತಾನೇ) ವಿರುದ್ಧವಾಗಿರುತ್ತದೆ. ಸರ್ವವೂ ಆತ್ಮನೇ ಎಂದು ಕಂಡುಕೊಂಡಿರುವವನಿಗೆ ಕಾಮಿಸಬೇಕಾದದ್ದು ಇಲ್ಲದಿರುವದರಿಂದ ಕರ್ಮವು ಹೊಂದುವದೇ ಇಲ್ಲ.

---

1. ಆತ್ಮನಿಗಿಂತ ಬೇರೆಯಾದ ದ್ವಿತೀಯವಸ್ತುವಿಲ್ಲದವನೇ ಆಪ್ತಕಾಮನು ; ಏಕೆಂದರೆ ಅವನಲ್ಲಿ ಎಲ್ಲಾ ಕಾಮ್ಯವಸ್ತುಗಳೂ ಒಂದಾಗಿರುವವು. ಆಪ್ತಕಾಮನಿಗೆ ಯಾವ ಕಾಮವೂ ಉಂಟಾಗುವದಿಲ್ಲವಾದ್ದರಿಂದ ಅವನು ನಿಷ್ಕಾಮನು. ಕಾಮವೇ ಉಂಟಾಗದವನಿಗೆ ಕಾಮ್ಯವಾದ ವಸ್ತುವೆಂಬುದೇ ಇಲ್ಲವಾದ್ದರಿಂದ ಅವನು ಅಕಾಮನು ಎಂದು ಅಭಿಪ್ರಾಯ. ಇಲ್ಲಿ ಅಕಾಮನೆಂಬ ಮಾತಿನಿಂದ ಬಾಹ್ಯಕಾಮ್ಯವಸ್ತುವಿಗೆ ಅಭಾವವನ್ನೂ ನಿಷ್ಕಾಮನೆಂಬ ಮಾತಿನಿಂದ ಅಂತಃಕರಣದಲ್ಲಾಗುವ ಕಾಮವೃತ್ತಿಗಳ ಅಭಾವವನ್ನೂ ಹೇಳಿದೆಯೆಂದು ತಿಳಿಯಬೇಕು.

2. ೪-೫-೧೦ರ ಸೂಚನೆ. 3. ತೈ. ನಾ. ೨ರ ಸೂಚನೆ.

4 ೪-೫-೧೫ನ ಸೂಚನೆ.

# ಪ್ರತ್ಯವಾಯಪರಿಹಾರಕ್ಕಾಗಿ ಬ್ರಹ್ಮಜ್ಞಾನಿಯೂ ಕರ್ಮವನ್ನು ಮಾಡಬೇಕೆಂಬವರ ಪಕ್ಷದ ಖಂಡನೆ

(ಭಾಷ್ಯ)

೨೬೯. ಯೇ ತು ಪ್ರತ್ಯವಾಯಪರಿಹಾರಾರ್ಥಂ ಕರ್ಮ ಕಲ್ಪಯನ್ತಿ ಬ್ರಹ್ಮವಿದೋಽಪಿ, ತೇಷಾಂ ನಾಽಽತ್ಮೈವ ಸರ್ವಂ ಭವತಿ । ಪ್ರತ್ಯವಾಯಸ್ಯ ಜಿಹಾಸಿತವ್ಯಸ್ಯ ಆತ್ಮನೋಽನ್ಯಸ್ಯ ಅಭಿಪ್ರೇತತ್ವಾತ್ । ಯೇನ ಚ ಅಶನಾಯಾದ್ಯತೀತಃ ನಿತ್ಯಂ ಪ್ರತ್ಯವಾಯಾಸಂಬದ್ಧಃ ವಿದಿತ ಆತ್ಮಾ, ತಂ ವಯಂ ಬ್ರಹ್ಮವಿದಂ ಬ್ರೂಮಃ । ನಿತ್ಯಮೇವ ಅಶನಾಯಾದ್ಯತೀತಮ್ ಆತ್ಮಾನಂ ಪಶ್ಯತಿ (ಯಸ್ಮಾಚ್ಚ)[1] ಜಿಹಾಸಿತವ್ಯಮ್ ಅನ್ಯಮ್ ಉಪಾದೇಯಂ ವಾ ಯೋ ನ ಪಶ್ಯತಿ ತಸ್ಯ ಕರ್ಮ ನ ಶಕ್ಯತ ಏವ ಸಂಬನ್ಧುಮ್ । ಯಸ್ತು ಅಬ್ರಹ್ಮವಿತ್ ತಸ್ಯ ಭವತ್ಯೇವ ಪ್ರತ್ಯವಾಯಪರಿಹಾರಾರ್ಥಂ ಕರ್ಮ ಇತಿ ನ ವಿರೋಧಃ । ಅತಃ ಕಾಮಾಭಾವಾತ್ ಅಕಾಮಯಮಾನಃ ನ ಜಾಯತೇ, ಮುಚ್ಯತ ಏವ ॥

(ಭಾಷ್ಯಾರ್ಥ)

ಆದರೆ **ಯಾರು**[2] **ಪ್ರತ್ಯಯವಾಯಪರಿಹಾರಕ್ಕಾಗಿ ಬ್ರಹ್ಮಜ್ಞಾನಿಗೂ ಕರ್ಮವನ್ನು ಕಲ್ಪಿಸುತ್ತಾರೋ** ಅವರಿಗೆ ಎಲ್ಲವೂ ಆತ್ಮನೇ ಆಗಿರುವದಿಲ್ಲ; ಏಕೆಂದರೆ ಆತ್ಮನಿಗೆ ಅನ್ಯವಾಗಿ ಪ್ರತ್ಯವಾಯವೆಂಬ ತಪ್ಪಿಸಿಕೊಳ್ಳಬೇಕಾದದ್ದು ಇದೆ (ಎಂದು ಅವರ) ಅಭಿಪ್ರಾಯವಾಗಿರುತ್ತದೆ. **ಯಾವನು ಹಸಿವು ಮುಂತಾದವುಗಳನ್ನು ಮೀರಿರುವ ಎಂದೆಂದಿಗೂ ಪ್ರತ್ಯವಾಯಕ್ಕೆ ಸಂಬದ್ಧನಲ್ಲದ ಆತ್ಮನನ್ನು ಅರಿತುಕೊಂಡಿರುವನೋ ಅವನನ್ನೇ ನಾವು ಬ್ರಹ್ಮಜ್ಞಾನಿ ಎಂದು ಹೇಳುತ್ತೇವೆ.**[3] **ನಿತ್ಯವೂ ಹಸಿವು ಮುಂತಾದವುಗಳನ್ನು ಮೀರಿರುವ ಆತ್ಮನನ್ನು ಕಾಣುತ್ತಾ, ತಪ್ಪಿಸಿಕೊಳ್ಳಬೇಕಾಗಿರುವ ಅಥವಾ ತೆಗೆದುಕೊಳ್ಳಬೇಕಾಗಿರುವ ಮತ್ತೊಂದನ್ನು ಯಾವನು ಕಾಣುತ್ತಿಲ್ಲವೋ, ಅವನಿಗೆ ಕರ್ಮವನ್ನು ಸಂಬಂಧಿಸುವದಕ್ಕೆ ಆಗುವದೇ ಇಲ್ಲ.** ಆದರೆ ಯಾವನು ಬ್ರಹ್ಮಜ್ಞಾನಿಯಲ್ಲವೋ,

1. ಈ ಮಾತು ಇಲ್ಲದಿದ್ದರೂ ಸಾಗುತ್ತದೆ.

2. ಇವರು ಯಾರೆಂಬುದು ತಿಳಿಯಲಿಲ್ಲ. ಕರ್ಮಜ್ಞಾನಸಮುಚ್ಚಯವಾದಿಗಳಿವರು ಎಂದು ಮಾತ್ರ ಹೇಳಬಹುದು. ಕರ್ಮವಾದಿಗಳೂ ಹೀಗೆಂದು ಹೇಳುತ್ತಿದ್ದರು. ಗೀ. ಭಾ. ೧೮-೬೬ (ಭಾ. ಭಾ. ೫೮೭).

3. ಜ್ಞಾನಿಗೆ ಪ್ರತ್ಯವಾಯವಿಲ್ಲವೆಂಬುದಕ್ಕೆ ಗೀ. ಭಾ. ೩-೧೮ (ಭಾ. ಭಾ. ೧೭೫) ನೋಡಿ.

ಅವನಿಗೆ ಪ್ರತ್ಯವಾಯವನ್ನು ತಪ್ಪಿಸಿಕೊಳ್ಳುವದಕ್ಕಾಗಿ ಕರ್ಮವು ಇದ್ದೇ ಇರುತ್ತದೆ[1] ಯಾವದ್ದರಿಂದ (ಅಲ್ಲಿ) ಯಾವ ವಿರೋಧವೂ ಇರುವದಿಲ್ಲ.[2] ಆದ್ದರಿಂದ ಕಾಮಗಳಿಲ್ಲದಿರುವದರಿಂದ ಕಾಮಿಸದೆ ಇರುವ (ಜ್ಞಾನಿಯು) ಹುಟ್ಟುವದಿಲ್ಲ, ಮುಕ್ತನಾಗಿಯೇ ಇರುತ್ತಾನೆ.

## ಅಕಾಮಿಯ ಪ್ರಾಣಗಳು ಉತ್ಕ್ರಾಂತವಾಗುವದಿಲ್ಲ

(ಭಾಷ್ಯ)

೨೬೦. ತಸ್ಯ ಏವಮ್ ಅಕಾಮಯಮಾನಸ್ಯ ಕರ್ಮಾಭಾವೇ ಗಮನಕಾರಣಾಭಾವಾತ್ ಪ್ರಾಣಾ ವಾಗಾದಯಃ ನೋತ್ಕ್ರಾಮನ್ತಿ ನೋರ್ಧ್ವಂ ಕ್ರಾಮನ್ತಿ ದೇಹಾತ್। ಸ ಚ ವಿದ್ವಾನ್ ಆಪ್ತಕಾಮಃ ಆತ್ಮಕಾಮತಯಾ ಇಹೈವ ಬ್ರಹ್ಮಭೂತಃ। ಸರ್ವಾತ್ಮನೋ ಹಿ ಬ್ರಹ್ಮಣೋ ದೃಷ್ಟಾನ್ತತ್ವೇನ ಪ್ರದರ್ಶಿತಮ್ ಏತದ್ರೂಪಮ್ "ತದ್ವಾ ಅಸ್ಯೈತದಾಪ್ತಕಾಮಮಾತ್ಮಕಾಮಮಕಾಮಂ ರೂಪಮ್" (೪-೩-೨೧) ಇತಿ। ತಸ್ಯ ಹಿ ದಾರ್ಷ್ಟಾನ್ತಿಕಭೂತೋಽಯಮರ್ಥಃ ಉಪಸಂಹ್ರಿಯತೇ "ಅಥಾಕಾಮಯಮಾನಃ" ಇತ್ಯಾದಿನಾ। ಸ ಕಥಮ್ ಏವಂಭೂತೋ ವಿದ್ವಾನ್ ಮುಚ್ಯತ ಇತಿ? ಉಚ್ಯತೇ। ಯೋ ಹಿ ಸುಷುಪ್ತಾವಸ್ಥಮಿವ ನಿರ್ವಿಶೇಷಮ್ ಅದ್ವೈತಮ್ ಅಲುಪ್ತಚಿದ್ರೂಪಜ್ಯೋತಿಃಸ್ವಭಾವಮ್ ಆತ್ಮಾನಂ ಪಶ್ಯತಿ ತಸ್ಯೈವ ಅಕಾಮಯಮಾನಸ್ಯ ಕರ್ಮಾಭಾವೇ ಗಮನಕಾರಣಾಭಾವಾತ್ ಪ್ರಾಣಾ ವಾಗಾದಯಃ ನೋತ್ಕ್ರಾಮನ್ತಿ। ಕಿಂ ತು ವಿದ್ವಾನ್ ಸ ಇಹೈವ ಬ್ರಹ್ಮ ಯದ್ಯಪಿ ದೇಹವಾನಿವ ಲಕ್ಷ್ಯತೇ ಸ ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ ॥

(ಭಾಷ್ಯಾರ್ಥ)

ಹೀಗೆ ಕಾಮಿಸದೆ ಇರುವ ಅವನಿಗೆ ಕರ್ಮವಿಲ್ಲದ್ದರಿಂದ ಗಮನಕ್ಕೆ ಕಾರಣವಿಲ್ಲದ್ದರಿಂದ[3] ಪ್ರಾಣಗಳು ವಾಗಾದಿಗಳು, ಉತ್ಕ್ರಾಂತವಾಗುವದಿಲ್ಲ,

---

1. ಅವನೂ ತನ್ನ ಕರ್ಮವನ್ನು ಮಾಡದೆ ಇರುವದರಿಂದ ಪ್ರತ್ಯವಾಯವಾದೀತೇ ಹೊರತು ಮತ್ತೊಬ್ಬನ ಕರ್ಮವನ್ನು ಮಾಡದಿದ್ದರೆ ಪ್ರತ್ಯವಾಯವಿಲ್ಲ. ಆದ್ದರಿಂದ ಗೃಹಸ್ಥಾಶ್ರಮದ ಕರ್ಮಗಳನ್ನು ಮಾಡದಿದ್ದರೆ ಸಂನ್ಯಾಸಿಗೆ ಪ್ರತ್ಯವಾಯವಿಲ್ಲ. ಗೀ. ಭಾ. ೩-೧ (ಭಾ. ಭಾ ೧೪೨), ಸೂ. ಭಾ. ೩-೪-೨೦, (ಭಾ. ಭಾ. ೪೬೦).

2. ಇದು ಕರ್ಮವನ್ನು ಮಾಡದಿದ್ದರೆ ಪ್ರತ್ಯವಾಯವಾಗುವದೆಂದು ಒಪ್ಪಿ ಹೇಳಿದ್ದು, ಆದರೆ ಕರ್ಮಾಭಾವದಿಂದ ಪ್ರತ್ಯವಾಯವು ಯಾರಿಗೂ ಆಗಲಾರದು ಎಂಬ ಪರಮಸಿದ್ಧಾಂತವನ್ನು ಗೀ. ಭಾ. ೩-೧ (ಭಾ. ಭಾ. ೧೪೨), ೪-೧೮ (ಭಾ. ಭಾ. ೨೬೨) ತೈ. ಭಾ ಅವ. (ಭಾ. ಭಾ. ೭)- ಇವುಗಳಲ್ಲಿ ಪ್ರತಿಪಾದಿಸಿದೆ.

3. ಗಮನಕ್ಕೆ ಕಾರಣವು ಕರ್ಮವು ಎಂಬುದನ್ನು 'ತದೇವ ಸಕ್ತಃ' ಎಂಬ ವಾಕ್ಯದಲ್ಲಿ ಹೇಳಿದೆ.

ದೇಹವನ್ನು ಬಿಟ್ಟು ಮೇಲಕ್ಕೆ ಹೋಗುವದಿಲ್ಲ.[1] ಆ ಜ್ಞಾನಿಯು ಆಪ್ತಕಾಮನು, ಆತ್ಮಕಾಮನಾಗಿರುವದರಿಂದ ಇಲ್ಲಿಯೇ ಬ್ರಹ್ಮವಾಗಿರುತ್ತಾನೆ. **ಸರ್ವಾತ್ಮವಾದ ಬ್ರಹ್ಮಕ್ಕೆ ದೃಷ್ಟಾಂತವಾಗಿಯಲ್ಲವೆ, "ಆ ಇವನಿಗೆ ಇದೇ ಆಪ್ತಕಾಮವೂ ಆತ್ಮಕಾಮವೂ ಅಕಾಮವೂ ಆದ ರೂಪವು" (೪-೩-೨೧) ಎಂದು ಈ ರೂಪವನ್ನು ತಿಳಿಸಿಕೊಟ್ಟಿದ್ದು? ಅದಕ್ಕೆ ದಾರ್ಷ್ಟಾಂತಿಕವಾಗಿಯಲ್ಲವೆ, "ಅಥಾಕಾಮಯಮಾನಃ (ಇನ್ನು ಕಾಮಿಸದೆ ಇರುವವನು)" ಎಂದು ಮುಂತಾಗಿರುವ (ಗ್ರಂಥ)ದಿಂದ ಈ ಅರ್ಥವನ್ನು ಉಪಸಂಹಾರಮಾಡಿದೆ?**[2] ಹೀಗಿರುವ ಅವನು ಹೇಗೆ ಮುಕ್ತನಾಗುತ್ತಾನೆ ? ಎಂದರೆ ಹೇಳುತ್ತೇನೆ. ಯಾವನು ಸುಷುಪ್ತಾವಸ್ಥೆಯಲ್ಲಿರುವಂತೆಯೇ ಆತ್ಮನು ನಿರ್ವಿಶೇಷನಾಗಿಯೂ ಅದ್ವೈತನಾಗಿಯೂ ಲೋಪವಾಗದ ಚಿದ್ರೂಪವಾದ ಜ್ಯೋತಿಯ ಸ್ವಭಾವದನೂ ಆಗಿರುವನೆಂದು ಅರಿತಿರುತ್ತಾನೋ, ಅವನು ಕಾಮಿಸದವನಾದ್ದರಿಂದ ಕರ್ಮವು ಇಲ್ಲವಾಗಲು ಗಮನಕ್ಕೆ ಕಾರಣವಿಲ್ಲದ್ದರಿಂದ (ಅವನ) ವಾಗಾದಿಪ್ರಾಣಗಳೇ ಉತ್ಕ್ರಾಂತವಾಗುವದಿಲ್ಲ. ಮತ್ತೇನೆಂದರೆ ಜ್ಞಾನಿಯಾದ ಅವನು ದೇಹವಂತನಂತೆ ಕಾಣಿಸುತ್ತಿದ್ದರೂ ಇಲ್ಲಿಯೇ ಬ್ರಹ್ಮವು; ಅವನು ಬ್ರಹ್ಮವೇ ಆಗಿದ್ದು ಬ್ರಹ್ಮದಲ್ಲಿ ಸೇರಿಹೋಗುವನು.

## ಚರ್ಚೆ: ಬ್ರಹ್ಮದಲ್ಲಿ ಸೇರಿಹೋಗುತ್ತಾನೆಂಬುದರ ಅಭಿಪ್ರಾಯವೇನು ?

### ಜ್ಞಾನಿಗೆ ಸತ್ತಬಳಿಕ ಬೇರೊಂದು ಸ್ವಭಾವವುಂಟಾಗುವದಿಲ್ಲ

(ಭಾಷ್ಯ)

೨೭೧. ಯಸ್ಮಾತ್ ನ ಹಿ[3] ತಸ್ಯ ಅಬ್ರಹ್ಮತ್ವಪರಿಚ್ಛೇದಹೇತವಃ ಕಾಮಾಃ ಸನ್ತಿ ತಸ್ಮಾತ್ ಇಹೈವ ಬ್ರಹ್ಮೈವ ಸನ್ ಬ್ರಹ್ಮಾಪ್ಯೇತಿ ನ ಶರೀರಪಾತೋತ್ತರಕಾಲಮ್ । ನ ಹಿ ವಿದುಷೋ ಮೃತಸ್ಯ ಭಾವಾನ್ತರಾಪತ್ತಿಃ, ಜೀವ

---

1. ಅಜ್ಞಾನಿಗೆ ದೇಹಾಂತರಗ್ರಹಣಕ್ಕಾಗಿ ದೇಹವನ್ನು ಬಿಟ್ಟು ಪ್ರಾಣಗಳು ಹೋಗುತ್ತವೆ ಎಂದು ಹೇಳಿತ್ತಷ್ಟೆ, ಜ್ಞಾನಿಗೆ ಹಾಗೆ ಹೋಗುವದಿಲ್ಲ ಎಂದು ಇಲ್ಲಿ ಹೇಳಿದೆ; ಆದ್ದರಿಂದಲೇ ಹಿಂದೆ ೩-೨-೧೧ರಲ್ಲಿ ದೇಹವು ಉಬ್ಬಿಕೊಂಡು ಸತ್ತುಬಿದ್ದಿರುತ್ತದೆ ಎಂದು ವರ್ಣಿಸಿದೆ. ಸೂ. ಭಾ. ೪-೨-೧೩ (ಭಾ. ಭಾ. ೫೫೪) ನೋಡಿ.

2. ಇಲ್ಲಿಯವರೆಗೆ ಹೇಳಿದ ದೇಹಾಂತರಪ್ರಾಪ್ತಿಪ್ರಕಾರವೆಂಬ ಸಂಸಾರಬಂಧವು, ಎಚ್ಚರದಿಂದ ಕನಸಿಗೆ ಹೋಗುವದಕ್ಕೆ ದಾರ್ಷ್ಟಾಂತಿಕವು, ಈಗ ಹೇಳಿರುವ ಮೋಕ್ಷವು ಸುಷುಪ್ತಸ್ಥಿತಿಗೆ ದಾರ್ಷ್ಟಾಂತಿಕವು.

3. ಇದು 'ಯಸ್ಮಾತ್ ನ' ಎಂದಿಷ್ಟೇ ಇದ್ದರೂ ಸಾಗುತ್ತಿತ್ತು.

ತೋಽನ್ಯೋ ಭಾವಃ । ದೇಹಾನ್ತರಪ್ರತಿಸಂಧಾನಾಭಾವಮಾತ್ರೇಣೈವ ತು ಬ್ರಹ್ಮಾಪ್ಯೇತಿ ಇತ್ಯುಚ್ಯತೇ। ಭಾವಾನ್ತರಾಪತ್ತೌ ಹಿ ಮೋಕ್ಷಸ್ಯ ಸರ್ವೋಪನಿಷದ್ವಿವಕ್ಷಿತೋಽರ್ಥಃ ಆತ್ಮೈಕತ್ವಾಖ್ಯಃ ಸ[1] ಬಾಧಿತೋ ಭವೇತ್ । ಕರ್ಮಹೇತುಕಶ್ಚ ಮೋಕ್ಷಃ ಪ್ರಾಪ್ನೋತಿ ನ ಜ್ಞಾನನಿಮಿತ್ತಃ ಇತಿ । ಸ ಚಾನಿಷ್ಟಃ । ಅನಿತ್ಯತ್ವಂ ಚ ಮೋಕ್ಷಸ್ಯ ಪ್ರಾಪ್ನೋತಿ । ನ ಹಿ ಕ್ರಿಯಾನಿರ್ವೃತ್ತೋಽರ್ಥೋ ನಿತ್ಯೋ ದೃಷ್ಟಃ । ನಿತ್ಯಶ್ಚ ಮೋಕ್ಷೋಽಭ್ಯುಪಗಮ್ಯತೇ । "ಏಷ ನಿತ್ಯೋ ಮಹಿಮಾ" (೪-೪-೨೩) ಇತಿ ಮನ್ತ್ರವರ್ಣಾತ್ । ನ ಚ ಸ್ವಾಭಾವಿಕಾತ್ ಸ್ವಭಾವಾದನ್ಯತ್ ನಿತ್ಯಂ ಕಲ್ಪಯಿತುಂ ಶಕ್ಯಮ್ । ಸ್ವಾಭಾವಿಕಶ್ಚೇತ್ ಅಗ್ನ್ಯೌಷ್ಣ್ಯವದಾತ್ಮನಃ ಸ್ವಭಾವಃ । ಸ ನ ಶಕ್ಯತೇ ಪುರುಷವ್ಯಾಪಾರಾನುಭಾವೀ ಇತಿ ವಕ್ತುಮ್ । ನ ಹಿ ಅಗ್ನೇರೌಷ್ಣ್ಯಂ ಪ್ರಕಾಶೋ ವಾ ಅಗ್ನಿವ್ಯಾಪಾರಾನನ್ತರಾನುಭಾವೀ। ಅಗ್ನಿವ್ಯಾಪಾರಾನುಭಾವೀ ಸ್ವಾಭಾವಿಕಶ್ಚ ಇತಿ ವಿಪ್ರತಿಷಿದ್ಧಮ್ । ಜ್ವಲನವ್ಯಾಪಾರಾನುಭಾವಿತ್ವಮ್ ಉಷ್ಣಪ್ರಕಾಶಯೋಃ ಇತಿ ಚೇತ್ । ನ । ಅನ್ಯೋಪಲಬ್ಧಿವ್ಯವಧಾನಾಪಗಮಾಭಿವ್ಯಕ್ತ್ಯಪೇಕ್ಷತ್ವಾತ್ । ಜ್ವಲನಾದಿಪೂರ್ವಕಮ್ ಅಗ್ನಿಃ ಉಷ್ಣಪ್ರಕಾಶಗುಣಾಭ್ಯಾಮ್ ಅಭಿವ್ಯಜ್ಯತೇ । ತನ್ನಾಗ್ನ್ಯಪೇಕ್ಷಯಾ ಕಿಂ ತರ್ಹಿ ಅನ್ಯದೃಷ್ಟೇಃ ಅಗ್ನೇರೌಷ್ಣ್ಯಪ್ರಕಾಶೌ ಧರ್ಮೌ ವ್ಯವಹಿತೌ ಕಸ್ಯಚಿದ್ ದೃಷ್ಟ್ಯಾ ತು ಅಸಂಬಧ್ಯಮಾನೌ ಜ್ವಲನಾಪೇಕ್ಷಯಾ ವ್ಯವಧಾನಾಪಗಮೇ ದೃಷ್ಟೇರಭಿವ್ಯಜ್ಯೇತೇ । ತದಪೇಕ್ಷಯಾ ಭ್ರಾನ್ತಿರುಪಜಾಯತೇ ಜ್ವಲನಪೂರ್ವಕೌ ಏತೌ ಉಷ್ಣಪ್ರಕಾಶೌ ಧರ್ಮೌ ಜಾತೌ ಇತಿ । ಯದಿ ಉಷ್ಣಪ್ರಕಾಶಯೋರಪಿ ಸ್ವಾಭಾವಿಕತ್ವಂ ನ ಸ್ಯಾತ್, ಯಃ ಸ್ವಾಭಾವಿಕೋಽಗ್ನೇರ್ಧರ್ಮಃ, ತಮ್ ಉದಾಹರಿಷ್ಯಾಮಃ । ನ ಚ ಸ್ವಾಭಾವಿಕೋ ಧರ್ಮ ಏವ ನಾಸ್ತಿ ಪದಾರ್ಥಾನಾಮ್ ಇತಿ ಶಕ್ಯಂ ವಕ್ತುಮ್ ॥

(ಭಾಷ್ಯಾರ್ಥ)

**ಅಬ್ರಹ್ಮತ್ವಕ್ಕೂ ಪರಿಚ್ಛೇದಕ್ಕೂ ಕಾರಣವಾಗಿರುವ ಕಾಮಗಳು ಅವನಿಗಿರುವದಿಲ್ಲವಷ್ಟೆ, ಆದ್ದರಿಂದ ಇಲ್ಲಿಯೇ ಬ್ರಹ್ಮವೇ ಆಗಿದ್ದುಕೊಂಡು ಬ್ರಹ್ಮದಲ್ಲಿ ಸೇರಿಹೋಗುವನೇ ಹೊರತು ಶರೀರವು ಬಿದ್ದುಹೋದ ಬಳಿಕ (ಬ್ರಹ್ಮ)ವಾಗುವದಿಲ್ಲ. ಜ್ಞಾನಿಗೆ ಸತ್ತ ಬಳಿಕ ಮತ್ತೊಂದು ಸ್ವಭಾವವುಂಟಾಗುವದೆಂದೂ ಬದುಕಿರುವಾಗ ಮತ್ತೊಂದು ಸ್ವಭಾವವಿರುವದೆಂದೂ (ಹೇಳು)ವದಕ್ಕಿಲ್ಲವಷ್ಟೆ ಮತ್ತೊಂದು ದೇಹಾಂತರವನ್ನು ಪಡೆಯುವದಿಲ್ಲ ಎಂಬಿಷ್ಟುಮಾತ್ರದಿಂದಲೇ ಬ್ರಹ್ಮದಲ್ಲಿ ಸೇರಿಹೋಗುತ್ತಾನೆ ಎಂದಿದೆ.**

---

1. ಈ ಮಾತಿಲ್ಲದಿದ್ದರೂ ಸಾಗುತ್ತಿತ್ತು

ಏಕೆಂದರೆ ಮೋಕ್ಷವು ಭಾವಾಂತರವನ್ನು ಹೊಂದುವದೆಂದಾದರೆ ಆತ್ಮೈಕತ್ವವೆಂಬ ಸರ್ವೋಪನಿಷತ್ತುಗಳಿಗೂ ವಿವಕ್ಷಿತವಾಗಿರುವ ಅರ್ಥವಿದೆಯಲ್ಲ, ಅದು ಬಾಧಿತವಾಗುವದು. ಮೋಕ್ಷವು ಕರ್ಮವೆಂಬ ಕಾರಣದಿಂದ ಆಗತಕ್ಕದ್ದೆಂದೂ ಆಗುವದು, ಜ್ಞಾನವೆಂಬ ಕಾರಣದಿಂದ ಆಗುವದೆಂದಾಗುವದಿಲ್ಲ; ಅದು (ಯಾರಿಗೂ) ಇಷ್ಟವಲ್ಲ.[1] ಮೋಕ್ಷವು ಅನಿತ್ಯವೆಂದೂ ಆಗುತ್ತದೆ.[2] ಏಕೆಂದರೆ ಕ್ರಿಯೆಯಿಂದ ಉಂಟಾದ ಅರ್ಥವು ನಿತ್ಯವಾಗಿರುವದು ಕಂಡು ಬರುವದಿಲ್ಲ. ಆದರೆ ಮೋಕ್ಷವು ನಿತ್ಯವೆಂದೇ (ವೇದಾಂತಿಗಳು) ಒಪ್ಪಿರುತ್ತಾರೆ; ಏಕೆಂದರೆ "ಇದು (ಬ್ರಾಹ್ಮಣನ) ನಿತ್ಯವಾದ ಮಹಿಮೆಯು" (೪-೪-೨೩) ಎಂದು ಮಂತ್ರವರ್ಣವಿರುತ್ತದೆ. ಸ್ವಾಭಾವಿಕವಾದ ಸ್ವಭಾವಕ್ಕಿಂತಲೂ ಮತ್ತೊಂದು ನಿತ್ಯವಾಗಿರುವದೆಂದು ಕಲ್ಪಿಸುವದಕ್ಕೆ ಆಗಲೂ ಆರದು. ಆತ್ಮನ ಸ್ವಭಾವವು ಬೆಂಕಿಯ ಬಿಸಿಯಂತೆ ಸ್ವಾಭಾವಿಕವಾದರೆ, ಅದು ಪುರುಷನ ವ್ಯಾಪಾರವಾದ ಬಳಿಕ ಉಂಟಾಗುವದೆಂದು ಹೇಳುವದಕ್ಕಾಗುವದಿಲ್ಲ. ಬೆಂಕಿಯ ಬಿಸಿಯಾಗಲಿ ಬೆಳಕಾಗಲಿ ಬೆಂಕಿಯ ವ್ಯಾಪಾರವಾದ ಬಳಿಕ ಉಂಟಾಗುವದಲ್ಲವಷ್ಟೆ? ಬೆಂಕಿಯ ವ್ಯಾಪಾರವಾದ ಬಳಿಕವೇ ಉಂಟಾಗುತ್ತದೆ, ಸ್ವಾಭಾವಿಕವೂ ಆಗಿದೆ –ಎಂಬುದು (ತನಗೆ ತಾನೇ) ವಿರುದ್ಧವು.

(ಆಕ್ಷೇಪ) :– ಉರಿಯುವದೆಂಬ ವ್ಯಾಪಾರವಾದ ಬಳಿಕವೇ ಬಿಸಿಬೆಳಕುಗಳು ಉಂಟಾಗತಕ್ಕವು(ಗಳಲ್ಲವೆ) ?

(ಪರಿಹಾರ) :– ಹಾಗಲ್ಲ. ಏಕೆಂದರೆ (ಅವು) ಮತ್ತೊಬ್ಬನ ಅರಿವಿಗೆ ಇರುವ ವ್ಯವಧಾನವನ್ನು ಕಳೆದು ಆಗುವ ಅಭಿವ್ಯಕ್ತಿಯನ್ನು ಬಯಸುತ್ತವೆ. (ಇದರ ವಿವರ): ಉರಿಯುವದೇ ಮುಂತಾದದ್ದಾದ ಬಳಿಕ ಬೆಂಕಿಯು ಬಿಸಿ, ಬೆಳಕುಗಳೆಂಬ ಗುಣಗಳಿಂದ ಅಭಿವ್ಯಕ್ತವಾಗುತ್ತದೆಯಷ್ಟೆ, ಅದು ಬೆಂಕಿಯ ಅಪೇಕ್ಷೆಯಿಂದಲ್ಲ.[3] ಮತ್ತೇನೆಂದರೆ ಮತ್ತೊಬ್ಬನ ದೃಷ್ಟಿಗೆ ಬೆಂಕಿಯ ಬಿಸಿಬೆಳಕುಗಳೆಂಬ ಧರ್ಮಗಳು ವ್ಯವಹಿತವಾಗಿರುತ್ತವೆ; ಯಾರೊಬ್ಬರ ದೃಷ್ಟಿಗೂ ಸಂಬದ್ಧವಲ್ಲದೆ ಇದ್ದು, ಉರಿಯುವದೆಂಬುದರ ಅಪೇಕ್ಷೆಯಿಂದ (ಆ) ಮರೆಯು ಹೋಗಲು ದೃಷ್ಟಿಗೆ ಅಭಿವ್ಯಕ್ತವಾಗುತ್ತದೆ. ಇದರ ಅಪೇಕ್ಷೆಯಿಂದ

---

1. ವೇದಾಂತಿಗಳು ಉಪನಿಷತ್ಪ್ರಾಮಾಣ್ಯವನ್ನು ತಪ್ಪಿಸುವದಕ್ಕೆ ಎಂದಿಗೂ ಒಪ್ಪರು.

2. ಶಾಸ್ತ್ರವಿರೋಧವೇ ಅಲ್ಲದೆ ಯುಕ್ತಿವಿರೋಧವೂ ಮೋಕ್ಷವು ಭಾವಾಂತರಾಪತ್ತಿ ಎನ್ನುವವರ ಪಕ್ಷಕ್ಕೆ ಹತ್ತುತ್ತದೆ ಎಂದು ಭಾವ.

3. ಬೆಂಕಿಗೆ ಯಾವಾಗಲೂ ಬಿಸಿಬೆಳಕುಗಳು ಇದ್ದೇ ಇರುತ್ತವೆ ; ಅವು ಮತ್ತೊಬ್ಬರಿಗೆ ತೋರದೆ ಇರಬಹುದು. ಅಷ್ಟೆ.

ಉರಿಯುವದಾದಬಳಿಕ ಈ ಬಿಸಿಬೆಳಕುಗಳೆಂಬ ಧರ್ಮಗಳು ಉಂಟಾದವು ಎಂಬ ಭ್ರಾಂತಿಯುಂಟಾಗುತ್ತದೆ. ಬಿಸಿಬೆಳಕುಗಳೂ (ಬೆಂಕಿಗೆ) ಸ್ವಾಭಾವಿಕ (ಧರ್ಮ)ವಲ್ಲವೆನ್ನುವದಾದರೆ, ಬೆಂಕಿಗೆ ಯಾವದು ಸ್ವಾಭಾವಿಕಧರ್ಮವೋ ಅದನ್ನು ಉದಾಹರಿಸುವೆವು. ಪದಾರ್ಥಗಳಿಗೆ ಸ್ವಾಭಾವಿಕವಾದ ಧರ್ಮವೇ ಇಲ್ಲ ಎಂದು ಹೇಳುವದಕ್ಕಾಗಲಾರದಷ್ಟೆ.[1]

## ಮೋಕ್ಷವು ಅಭಾವಸ್ವರೂಪವಲ್ಲ

(ಭಾಷ್ಯ)

೨೭೨. ನ ಚ ನಿಗಡಭಙ್ಗ ಇವ ಅಭಾವಭೂತೋ ಮೋಕ್ಷೋ ಬನ್ಧನನಿವೃತ್ತಿಃ (ಇತಿ)[2] ಉಪಪದ್ಯತೇ। ಪರಮಾತ್ಮೈಕತ್ವಾಭ್ಯುಪಗಮಾತ್। "ಏಕಮೇವಾದ್ವಿತೀಯಮ್" (ಛಾಂ. ೬-೨-೧) ಇತಿ ಶ್ರುತೇಃ। ನ ಚಾನ್ಯೋ ಬದ್ಧೋಽಸ್ತಿ ಯಸ್ಯ ನಿಗಡನಿವೃತ್ತಿವತ್ ಬನ್ಧನನಿವೃತ್ತಿರ್ಮೋಕ್ಷಃ ಸ್ಯಾತ್। ಪರಮಾತ್ಮವ್ಯತಿರೇಕೇಣ ಅನ್ಯಸ್ಯಾಭಾವಂ ವಿಸ್ತರೇಣ ಅವಾದಿಷ್ಮ। ತಸ್ಮಾತ್ ಅವಿದ್ಯಾನಿವೃತ್ತಿಮಾತ್ರೇ ಮೋಕ್ಷವ್ಯವಹಾರಃ ಇತಿ ಚ ಅವೋಚಾಮ ಯಥಾ ರಜ್ಜ್ವಾದೌ ಸರ್ಪಾದ್ಯಜ್ಞಾನನಿವೃತ್ತೌ ಸರ್ಪಾದಿನಿವೃತ್ತಿಃ ॥

(ಭಾಷ್ಯಾರ್ಥ)

ಬೇಡಿಯನ್ನು ಕತ್ತರಿಸಿಹಾಕುವಂತೆ, ಮೋಕ್ಷವು ಅಭಾವಭೂತವಾದ ಬಂಧನನಿವೃತ್ತಿಯೇ ಎಂಬುದೂ ಹೊಂದುವದಿಲ್ಲ.[3] ಏಕೆಂದರೆ ಪರಮಾತ್ಮನೊಬ್ಬನೇ (ಪರಮಾರ್ಥವೆಂದು) "ತನಗೆ ರಡನೆಯದಿಲ್ಲದ ಒಂದೇ" (ಛಾಂ. ೬-೨-೧) ಎಂಬ ಶ್ರುತಿ(ಪ್ರಮಾಣ)ದಿಂದ ಒಪ್ಪಿರುತ್ತೇವೆ.[4] (ಪರಮಾತ್ಮನಿಗಿಂತ) ಬೇರೆಯಾದ ಬದ್ಧನೂ ಇರುವದಿಲ್ಲ, (ಹಾಗಿದ್ದಿದ್ದರೆ) ಅವನಿಗೆ ಬಂಧನ

---

1. ಬೆಂಕಿಗೆ ಸ್ವಾಭಾವಿಕವಾದ ಧರ್ಮವಿದ್ದರಲ್ಲವೆ, ಆತ್ಮನ ಸ್ವಭಾವವು ಮೊದಲೂ ಮೋಕ್ಷದಲ್ಲಿಯೂ ಇರುತ್ತದೆ ಎಂದು ಹೇಳುವದು ?- ಎಂಬ ಶಂಕೆಗೆ ಉತ್ತರವಿದು. ಪದಾರ್ಥಗಳು ಬೇರೆಬೇರೆಯಾಗಿರುವದಕ್ಕೆ ಅವುಗಳ ಸ್ವಭಾವವೇ ಕಾರಣವೆನ್ನಬೇಕಷ್ಟೆ ? -ಎಂಬುದು ಭಾವ.

2. ಈ ಮಾತು ಇಲ್ಲಿದ್ದರೆ ಚೆನ್ನಾಗಿರುತ್ತದೆ ಎಂತ ಕಾಣುತ್ತದೆ.

3. ಅಭಾವವು ನಿತ್ಯವಾಗಿರುವದರಿಂದ ದುಃಖಧ್ವಂಸವೇ ಮೋಕ್ಷವು ಎಂದು ಹೇಳುವ ತಾರ್ಕಿಕರ ಪಕ್ಷದ ಖಂಡನೆಯಿದು.

4. ತಾರ್ಕಿಕರ ಪಕ್ಷವು ಶ್ರುತಿವಿರುದ್ಧ. ಏಕೆಂದರೆ ಪರಮಾರ್ಥವಾಗಿ ಆತ್ಮನು ನಿತ್ಯಮುಕ್ತನಾದ ಪರಮಾತ್ಮನೇ ಆಗಿರುತ್ತಾನೆಂದು ಶ್ರುತಿಯಿದೆ.

ನಿವೃತ್ತಿಯಾಗುವದೇ ಮೋಕ್ಷವು ಎಂದಾಗಬಹುದಿತ್ತು.[1] ಪರಮಾತ್ಮನಿಗಿಂತ ಬೇರೆಯಾದ (ಆತ್ಮನು) ಮತ್ತೊಬ್ಬನಿಲ್ಲವೆಂಬುದನ್ನು ವಿಸ್ತಾರವಾಗಿ ಹೇಳಿರುತ್ತೇವೆ[2]. ಆದ್ದರಿಂದ ಹಗ್ಗವೇ ಮುಂತಾದವುಗಳಲ್ಲಿ ಹಾವು ಎಂದು ಮುಂತಾಗಿರುವ ಅಜ್ಞಾನವು ತೊಲಗಲು ಹಾವು ಮುಂತಾದವುಗಳು ತೊಲಗುವಂತೆ **ಅವಿದ್ಯೆಯು ನಿವೃತ್ತಿಯನ್ನೇ ಮೋಕ್ಷವೆಂದು ವ್ಯವಹರಿಸುತ್ತಾರೆ** ಎಂದೂ ಹೇಳಿರುತ್ತೇವೆ[3].

## ಮೋಕ್ಷದಲ್ಲಿ ಹೊಸ ವಿಜ್ಞಾನಾನಂದಗಳು ತೋರಿಕೊಳ್ಳುವವು ಎಂಬುದೂ ಸರಿಯಲ್ಲ

(ಭಾಷ್ಯ)

೨೭೩. ಯೋಽಪಿ ಆಚಕ್ಷತೇ ಮೋಕ್ಷೇ ವಿಜ್ಞಾನಾನ್ತರಮ್ ಆನನ್ದಾನ್ತರಂ ಚ ಅಭಿವ್ಯಜ್ಯತ ಇತಿ । ತೈರ್ವಕ್ತವ್ಯೋಽಭಿವ್ಯಕ್ತಿಶಬ್ದಾರ್ಥಃ । ಯದಿ ತಾವತ್ ಲೌಕಿಕ್ಯೇವ ಉಪಲಬ್ಧಿವಿಷಯವ್ಯಾಪ್ತಿಃ ಅಭಿವ್ಯಕ್ತಿಶಬ್ದಾರ್ಥಃ, ತತೋ ವಕ್ತವ್ಯಮ್ ಕಿಂ ವಿದ್ಯಮಾನಮ್ ಅಭಿವ್ಯಜ್ಯತೇ ಅವಿದ್ಯಮಾನಂ ವಾ ಇತಿ[4] । ವಿದ್ಯಮಾನಂ ಚೇತ್ ಯಸ್ಯ ಮುಕ್ತಸ್ಯ ತತ್ ಅಭಿವ್ಯಜ್ಯತೇ ತಸ್ಯ ಆತ್ಮಭೂತಮೇವ ತದಿತಿ ಉಪಲಬ್ಧಿವ್ಯವಧಾನಾನುಪಪತ್ತೇಃ ನಿತ್ಯಾಭಿವ್ಯಕ್ತತ್ವಾತ್ ಮುಕ್ತಸ್ಯ ಅಭಿವ್ಯಜ್ಯತ ಇತಿ ವಿಶೇಷವಚನಮ್ ಅನರ್ಥಕಮ್ । ಅಥ ಕದಾಚಿದೇವ ಅಭಿವ್ಯಜ್ಯತೇ ಉಪಲಬ್ಧಿವ್ಯವಧಾನಾತ್ ಅನಾತ್ಮಭೂತಂ ತತ್ ಇತಿ ಅನ್ಯತೋಽಭಿವ್ಯಕ್ತಿಪ್ರಸಙ್ಗಃ । ತಥಾ ಚ ಅಭಿವ್ಯಕ್ತಿಸಾಧನಾಪೇಕ್ಷತಾ। ಉಪಲಬ್ಧಿಸಮಾನಾಶ್ರಯತ್ವೇ ತು ವ್ಯವಧಾನಕಲ್ಪನಾನುಪಪತ್ತೇಃ ಸರ್ವದಾ ಅಭಿವ್ಯಕ್ತಿಃ ಅನಭಿವ್ಯಕ್ತಿರ್ವಾ । ನ ತು ಅನ್ತರಾಲಕಲ್ಪನಾಯಾಂ ಪ್ರಮಾಣಮಸ್ತಿ । ನ ಚ ಸಮಾನಾಶ್ರಯಾಣಾಮ್ ಏಕಸ್ಯ ಆತ್ಮಭೂತಾನಾಂ ಧರ್ಮಾಣಾಮ್ ಇತರೇತರವಿಷಯವಿಷಯಿತ್ವಂ ಸಂಭವತಿ । ವಿಜ್ಞಾನಸುಖಯೋಶ್ಚ

---

1. ಈಶ್ವರನು ನಿತ್ಯಮುಕ್ತನಾದರೂ ಜೀವನು ಬದ್ಧನಾಗಿದ್ದು ಮುಕ್ತನಾಗಬಹುದಲ್ಲ ! –ಎಂಬ ಶಂಕೆಗೆ ಪರಿಹಾರವಿದು.

2. ೩-೭-೩೩, ೩-೮-೧೧ –ಇವುಗಳನ್ನೂ ಇವುಗಳ ಭಾಷ್ಯವನ್ನೂ ನೋಡಿ.

3. ಅವಿದ್ಯಾನಿವೃತ್ತಿಯೇ ಬ್ರಹ್ಮಪ್ರಾಪ್ತಿ ಎಂದು ೧-೪-೧೧ (ಭಾ. ಭಾ. ೧೭೦) ರಲ್ಲಿ ಹೇಳಿದೆ. 'ಇತಿ ಚಾವೋಚಾಮ' ಎಂದಿದ್ದರೆ ಈ ಅನುವಾದ ; ಇತಿ –ಎಂದಿಷ್ಟೇ ಮೂಲಭಾಷ್ಯದಲ್ಲಿದ್ದರೂ ಇದ್ದಿರಬಹುದು. ಹಗ್ಗದ ಹಾವು ಮುಂತಾದವುಗಳು ನಿಜವಾಗಿ ತೊಲಗಬೇಕಾದದ್ದು ಹೇಗಿಲ್ಲವೋ ಹಾಗೆ ಬಂಧವು ನಿಜವಾಗಿ ತೊಲಗಬೇಕಾದದ್ದೇನೂ ಇಲ್ಲ, ಅಜ್ಞಾನವೊಂದು ತೊಲಗಿದರಾಯಿತು ಎಂದು ಭಾವ.

4. 'ಇತಿ ವಾ' ಎಂಬ ಅಚ್ಚಿನ ಪಾಠವನ್ನು ಹೀಗೆ ತಿದ್ದಿಕೊಂಡಿದೆ.

ಪ್ರಾಗ್ ಅಭಿವ್ಯಕ್ತೇಃ ಸಂಸಾರಿತ್ವಮ್ ಅಭಿವ್ಯಕ್ತ್ಯುತ್ತರಕಾಲಂ ಚ ಮುಕ್ತತ್ವಂ ಯಸ್ಯ ಸೋಽನ್ಯಃ ಪರಸ್ಮಾತ್ ನಿತ್ಯಾಭಿವ್ಯಕ್ತಜ್ಞಾನಸುಖಸ್ವರೂಪಾತ್[1] । ಅತ್ಯನ್ತವೈಲಕ್ಷಣ್ಯಾತ್ ಶೈತ್ಯಮಿವ ಔಷ್ಣ್ಯಾತ್ । ಪರಮಾತ್ಮಭೇದಕಲ್ಪನಾಯಾಂ ಚ ವೈದಿಕಃ ಕೃತಾನ್ತಃ ಪರಿತ್ಯಕ್ತಃ ಸ್ಯಾತ್ ॥

(ಭಾಷ್ಯಾರ್ಥ)

**ಮೋಕ್ಷದಲ್ಲಿ ಮತ್ತೊಂದು ವಿಜ್ಞಾನವೂ ಮತ್ತೊಂದು ಆನಂದವೂ ಅಭಿವ್ಯಕ್ತವಾಗುತ್ತದೆ ಎಂದು ಯಾರು ಹೇಳುತ್ತಾರೋ**[2] ಅವರು ಅಭಿವ್ಯಕ್ತಿ ಎಂಬ ಶಬ್ದದ ಅರ್ಥವನ್ನು ತಿಳಿಸಬೇಕಾಗುತ್ತದೆ. ಮೊದಲನೆಯದಾಗಿ ಲೋಕಪ್ರಸಿದ್ಧವಾಗಿರುವ ಅರಿವು ವಿಷಯವನ್ನು ವ್ಯಾಪಿಸುವದೇ ಅಭಿವ್ಯಕ್ತಿ ಶಬ್ದದ ಅರ್ಥವಾದರೆ, ಆಗ (ಮೊದಲು) ಇದ್ದುಕೊಂಡಿರುವದೇ ಅಭಿವ್ಯಕ್ತವಾಗುವದೊ, (ಮೊದಲು) ಇಲ್ಲದ್ದು ಅಭಿವ್ಯಕ್ತವಾಗುವದೊ ?– ಎಂಬುದನ್ನು ಹೇಳಬೇಕಾಗುವದು. ಇದ್ದುಕೊಂಡಿರುವದೇ ಆದರೆ, ಯಾವ ಮುಕ್ತನಿಗೆ ಅದು ಅಭಿವ್ಯಕ್ತವಾಗುತ್ತದೆಯೋ ಅವನಿಗೆ ಅದು ಸ್ವರೂಪವೇ ಆಗಿರುವದರಿಂದ (ಅವನ) ಅರಿವಿಗೆ ವ್ಯವಧಾನವು ಹೊಂದದೆ ಇರುವದರಿಂದ ಯಾವಾಗಲೂ ಅಭಿವ್ಯಕ್ತವೇ ಆಗಿರಬೇಕಾಯಿತಾಗಿ ಮುಕ್ತನಿಗೆ ಅಭಿವ್ಯಕ್ತವಾಗುತ್ತದೆ ಎಂದು ವಿಶೇಷವಾಗಿ ಹೇಳಿದ್ದು ವ್ಯರ್ಥವಾಗುವದು.[3] ಇನ್ನು ಯಾವಾಗಲೋ (ಅದು) ಅಭಿವ್ಯಕ್ತವಾಗುವದಾದರೆ, (ಆಗ) ಅರಿವಿಗೆ ವ್ಯವಧಾನವಿರುವದರಿಂದ ಅದು ಅನಾತ್ಮರೂಪವಾದದ್ದೇ ಆಗಿರುವದರಿಂದ ಮತ್ತೊಂದರಿಂದ ಅಭಿವ್ಯಕ್ತವಾಗಬೇಕೆಂದಾಗುವದು ; ಹಾಗಾದರೆ (ಅದರ) ಅಭಿವ್ಯಕ್ತಿಗೆ ಸಾಧನವು ಬೇಕೆಂದಾಗುವದು.[4] ಅರಿವಿನ ಆಶ್ರಯವೇ (ಅದಕ್ಕೂ) ಆಶ್ರಯವೆಂದಾದರೆ (ಅರಿವಿಗೆ) ವ್ಯವ

---

1. 'ನಿತ್ಯಾಭಿವ್ಯಕ್ತಜ್ಞಾನಸ್ವರೂಪಾತ್' ಎಂಬುದಕ್ಕಿಂತ ಈ ಪಾಠವೇ ಮೇಲು.

2. ಇವರು ಯಾರೆಂಬುದು ತಿಳಿಯಲಿಲ್ಲ.

3. ತನ್ನ ಸ್ವರೂಪವಾದದ್ದು ತನಗೆ ಅವ್ಯವಹಿತವಾಗಿಯೇ ಇರುತ್ತದೆ ; ಆದ್ದರಿಂದ ಅದನ್ನು ಮೊದಲು ಅರಿಯದೆ ಇರಲು ಕಾರಣವಿಲ್ಲ ; ಆಮೇಲೆಯೇ ಅರಿಯುವದಕ್ಕೂ ಕಾರಣವಿಲ್ಲ.

4. ಇಲ್ಲದೆ ಇದ್ದದ್ದು ಹೊಸದಾಗಿ ಅಭಿವ್ಯಕ್ತವಾಗುತ್ತದೆ ಎಂಬ ಪಕ್ಷದಲ್ಲಿ ಮೊದಲು ತನ್ನ ಅರಿವಿಗೆ ಕಾಣದೆ ಇದ್ದವಸ್ತು ಆಗ ತೋರುತ್ತದೆ ಎಂದಂತಾಗುವದು. ಯಾವದು ತನಗೆ ಕಾಣದೆ ಇತ್ತೋ ಅದು ತನ್ನ ಸ್ವರೂಪವಲ್ಲವೆಂದೂ ಆಗುವದು. ಆಗ ಅದನ್ನು ತಾನು ಮೊದಲು ಅರಿವಿನ ಸಾಧನವಿಲ್ಲದೆ ಕಾಣಲಿಲ್ಲವೆಂದಾಯಿತಾದ್ದರಿಂದ ಆ ಸಾಧನವೂ ಮೋಕ್ಷದಲ್ಲಿ ಹೊಸದಾಗಿ ಉಂಟಾಗುವದೆಂದಾಗುವದು. ಮೋಕ್ಷದಲ್ಲಿ ಅರಿವಿನ ಸಾಧನವಾದ ಕರಣವೂ ಇವೆಯೆಂದರೆ ಮೋಕ್ಷಕ್ಕೂ ಸಂಸಾರಕ್ಕೂ ಹೆಚ್ಚುಕಡಿಮೆಯಿಲ್ಲದೆಹೋಗುವದು ಎಂದು ಅಭಿಪ್ರಾಯ.

ಧಾನವನ್ನು ಕಲ್ಪಿಸುವದು ಹೊಂದುವದಿಲ್ಲವಾಗಿ ಯಾವಾಗಲೂ (ಅದರ) ಅಭಿವ್ಯಕ್ತಿಯೋ ಅನಭಿವ್ಯಕ್ತಿಯೋ ಆಗಬೇಕಾಗುವದು[1] ; ಇಷ್ಟೇ ಹೊರತು (ಇವೆರಡರ) ನಡುವೆ (ಮತ್ತೊಂದು ಪ್ರಕಾರವನ್ನು) ಕಲ್ಪಿಸುವದಕ್ಕೆ[2] ಪ್ರಮಾಣ ವಿಲ್ಲ. ಇದೂ ಅಲ್ಲದೆ ಒಂದೇ ಆಶ್ರಯದಲ್ಲಿರುವ ಒಬ್ಬಸಿಗೇ ಸ್ವರೂಪವಾಗಿ ರುವ ಧರ್ಮಗಳು ಒಂದಕ್ಕೊಂದು ವಿಷಯವಿಷಯಿಭಾವದಿಂದ (ಇರುವ) ವೆಂಬುದೂ ಹೊಂದುವದಿಲ್ಲ.[3]

ವಿಜ್ಞಾನಾನಂದಗಳು ಅಭಿವ್ಯಕ್ತವಾಗುವ ಮುಂಚೆ ಸಂಸಾರಿಯೂ (ಅವು) ಅಭಿವ್ಯಕ್ತವಾದಮೇಲಿನ ಕಾಲದಲ್ಲಿ ಮುಕ್ತನೂ ಆಗಿರುವನಲ್ಲ, ಆ (ಆತ್ಮನು) ಎಂದೆಂದಿಗೂ ಅಭಿವ್ಯಕ್ತವಾಗಿರುವ ಜ್ಞಾನವುಳ್ಳ ಪರಮಾತ್ಮನಿಗಿಂತ ಬೇರೆಯೇ (ಎಂದಾಗುವದು) ; ಏಕೆಂದರೆ ತಂಪು ಬಿಸಿಗಿಂತ (ಅತ್ಯಂತವಿಲಕ್ಷಣವಾ)ಗಿರು ವಂತೆ (ಅವನು ಪರಮಾತ್ಮನಿಗಿಂತ) ಅತ್ಯಂತವಿಲಕ್ಷಣನಾಗಿರುತ್ತಾನೆ. (ಹೀಗೆ) ಪರಮಾತ್ಮನಿಗೂ (ಜೀವನಿಗೂ) ಭೇದವೇ ಎಂದು ಕಲ್ಪಿಸಿದರೋ ವೈದಿಕ ಸಿದ್ಧಾಂತವನ್ನೇ ಬಿಟ್ಟುಬಿಟ್ಟಂತೆ ಆಗುವದು.

## ಆತ್ಮನಲ್ಲಿ ಮುಕ್ತಾಮುಕ್ತತ್ವಾದಿವಿಶೇಷವೇ ಇಲ್ಲ

(ಭಾಷ್ಯ)

೨೭೪. ಮೋಕ್ಷಸ್ಯ ಇದಾನೀಮಿವ ನಿರ್ವಿಶೇಷತ್ವೇ ತದರ್ಥಾಧಿಕ ಯತ್ನಾನುಪಪತ್ತಿಃ, ಶಾಸ್ತ್ರವೈಯರ್ಥ್ಯಂ ಚ ಪ್ರಾಪ್ನೋತಿ ಇತಿ ಚೇತ್ । ನ । ಅವಿದ್ಯಾಭ್ರಮಾಪೋಹಾರ್ಥತ್ವಾತ್ । ನ ಹಿ ವಸ್ತುತೋ ಮುಕ್ತಾಮುಕ್ತತ್ವ ವಿಶೇಷೋಽಸ್ತಿ । ಆತ್ಮನೋ ನಿತ್ಯೈಕರೂಪತ್ವಾತ್ । ಕಿಂ ತು ತದ್ವಿಷಯಾ

---

1. ಅರಿವಿಗೆ ಆಶ್ರಯವು ತಾನು, ಹೊಸವಿಜ್ಞಾನಾನಂದಗಳಿಗೂ ಆಶ್ರಯವು ತಾನು (ಆ ವಿಜ್ಞಾನಾನಂದಗಳು ಅನಾತ್ಮವಲ್ಲ) ಎಂದರೆ, ಅವುಗಳನ್ನು ಮೊದಲು ಅರಿಯದೆ ಇದ್ದು ಆಮೇಲೆ ಅರಿಯುವದಕ್ಕೆ ಕಾರಣವೇ ಇಲ್ಲ. ಅರಿಯದೆಯೇ ಇರಬೇಕು, ಇಲ್ಲವೆ ಅರಿಯು ತ್ತಲೇ ಇರಬೇಕು ಎಂದರ್ಥ. ವಿಜ್ಞಾನವು ಅಭಿವ್ಯಕ್ತವಾಗುವದೆಂಬುದಕ್ಕೆ ಅರ್ಥವೇ ಇಲ್ಲ , ಏಕೆಂದರೆ ವಿಜ್ಞಾನವನ್ನು ಅರಿಯುವ ಮತ್ತೊಂದು ವಿಜ್ಞಾನವೇ ಇರುವದಿಲ್ಲ –ಎಂದು ವಾರ್ತಿಕ (೩೩೮)ದಲ್ಲಿ ಹೇಳಿರುವದನ್ನೂ ಇಲ್ಲಿ ಸೇರಿಸಿಕೊಳ್ಳಬಹುದು.

2. ಈಗ ಅನಭಿವ್ಯಕ್ತಿ, ಆಮೇಲೆ ಅಭಿವ್ಯಕ್ತಿ ಎಂಬ ಪ್ರಕಾರವನ್ನು ಕಲ್ಪಿಸು ವದಕ್ಕೆ ಎಂದರ್ಥ.

3. ಆತ್ಮನಲ್ಲಿರುವ ಅರಿವಿಗೆ ಆತ್ಮನ ಸುಖವು ವಿಷಯವಾಗಿರುವದೆಂಬುದು ಹೊಂದು ವದೇ ಇಲ್ಲ. ಆದ್ದರಿಂದ ಆನಂದವು ಆತ್ಮನ ಸ್ವರೂಪವಲ್ಲವೆಂದೇ ಆಗುತ್ತದೆ ಎಂದು ಭಾವ. ಮೋಕ್ಷದಲ್ಲಿ ಆತ್ಮನ ಆನಂದವು ವಿಜ್ಞಾನಕ್ಕೆ ವಿಷಯವಾಗಬಹುದೆಂಬುದನ್ನು ಹಿಂದೆ ೩-೯ರ ಕೊನೆಯಲ್ಲಿರುವ ಚರ್ಚೆಯಲ್ಲಿ (ಭಾ. ಭಾ. ೧೩೮ರಲ್ಲಿ) ಖಂಡಿಸಿದೆ.

ಅವಿದ್ಯಾ ಅಪೋಹ್ಯತೇ ಶಾಸ್ತ್ರೋಪದೇಶಜನಿತವಿಜ್ಞಾನೇನ। ಪ್ರಾಕ್ ತದುಪ
ದೇಶಪ್ರಾಪ್ತೇಃ ತದರ್ಥಶ್ಚ ಪ್ರಯತ್ನ ಉಪಪದ್ಯತ ಏವ। ಅವಿದ್ಯಾವತಃ
ಅವಿದ್ಯಾನಿವೃತ್ತ್ಯನಿವೃತ್ತಿಕೃತೋ ವಿಶೇಷ ಆತ್ಮನಃ ಸ್ಯಾತ್ ಇತಿ ಚೇತ್।
ನ। ಅವಿದ್ಯಾಕಲ್ಪನಾವಿಷಯತ್ವಾಭ್ಯುಪಗಮಾತ್ ರಜ್ಜೂಷರಶುಕ್ತಿಕಾಗಗನಾ
ನಾಂ ಸರ್ಪೋದಕರಜತಮಲಿನತ್ವಾದಿವತ್ ಅದೋಷಃ ಇತ್ಯವೋಚಾಮ।
ತಿಮಿರಾತಿಮಿರದೃಷ್ಟಿವತ್ ಅವಿದ್ಯಾಕರ್ತೃತ್ವಾಕರ್ತೃತ್ವಕೃತಃ ಆತ್ಮನೋ
ವಿಶೇಷಃ ಸ್ಯಾತ್ ಇತಿ ಚೇತ್। ನ। "ಧ್ಯಾಯತೀವ ಲೇಲಾಯತೀವ"
(೪-೩-೭) ಇತಿ ಸ್ವತಃ ಅವಿದ್ಯಾಕರ್ತೃತ್ವಸ್ಯ ಪ್ರತಿಷಿದ್ಧತ್ವಾತ್। ಅನೇಕ
ವ್ಯಾಪಾರಸಂನಿಪಾತಜನಿತತ್ವಾಚ್ಚ ಅವಿದ್ಯಾಭ್ರಮಸ್ಯ। ವಿಷಯತ್ವೋಪಪತ್ತೇಶ್ಚ।
ಯಸ್ಯ ಚ ಅವಿದ್ಯಾಭ್ರಮಃ ಘಟಾದಿವದ್ವಿವಿಕ್ತೋ ಗೃಹ್ಯತೇ ಸ ನಾವಿದ್ಯಾ
ಭ್ರಮವಾನ್। 'ಅಹಂ ನ ಜಾನೇ ಮುಗ್ಧೋಽಸ್ಮಿ' ಇತಿ ಪ್ರತ್ಯಯದರ್ಶನಾತ್
ಅವಿದ್ಯಾಭ್ರಮವತ್ತ್ವಮೇವ ಇತಿ ಚೇತ್। ನ। ತಸ್ಯಾಪಿ ವಿವೇಕಗ್ರಹಣಾತ್।
ನ ಹಿ ಯೋ ಯಸ್ಯ ವಿವೇಕೇನ ಗ್ರಹೀತಾ ಸ ತಸ್ಮಿನ್ ಭ್ರಾನ್ತಃ ಇತ್ಯುಚ್ಯತೇ।
ತಸ್ಯ ಚ ವಿವೇಕಗ್ರಹಣಮ್, ತಸ್ಮಿನ್ನೇವ ಚ ಭ್ರಮಃ ಇತಿ ವಿಪ್ರತಿಷಿದ್ಧಮ್।
'ನ ಜಾನೇ ಮುಗ್ಧೋಽಸ್ಮಿ' ಇತಿ ದೃಶ್ಯತ ಇತಿ ಬ್ರವೀಷಿ। ತದ್ದರ್ಶಿನಶ್ಚ
ಅಜ್ಞಾನಂ ಮುಗ್ಧರೂಪತಾ ದೃಶ್ಯತ ಇತಿ ಚ, ದರ್ಶನಸ್ಯ[1] ವಿಷಯೋ ಭವತಿ,
ಕರ್ಮತಾಮ್ ಆಪದ್ಯತ ಇತಿ। ತತ್ ಕಥಂ ಕರ್ಮಭೂತಂ ಸತ್ ಕರ್ತೃ
ಸ್ವರೂಪದೃಶಿವಿಶೇಷಣಮ್ ಅಜ್ಞಾನಮುಗ್ಧತೇ ಸ್ಯಾತಾಮ್? ಅಥ ದೃಶಿ
ವಿಶೇಷಣತ್ವಂ ತಯೋಃ, ಕಥಂ ಕರ್ಮ ಸ್ಯಾತಾಮ್, ದೃಶಿನಾ ವ್ಯಾಪ್ಯೇತೇ?
ಕರ್ಮ ಹಿ ಕರ್ತೃಕ್ರಿಯಯಾ ವ್ಯಾಪ್ಯಮಾನಂ ಭವತಿ। ಅನ್ಯಚ್ಚ ವ್ಯಾಪ್ಯಮ್
ಅನ್ಯದ್ ವ್ಯಾಪಕಮ್ ನ ತೇನೈವ ತದ್ ವ್ಯಾಪ್ಯತೇ। ವದ ಕಥಮ್ ಏವಂ
ಸತಿ ಅಜ್ಞಾನಮುಗ್ಧತೇ ದೃಶಿವಿಶೇಷಣೇ ಸ್ಯಾತಾಮ್। ನ ಚ ಅಜ್ಞಾನವಿವೇಕ
ದರ್ಶೀ ಅಜ್ಞಾನಮ್ ಆತ್ಮನಃ ಕರ್ಮಭೂತಮ್ ಉಪಲಭಮಾನಃ ಉಪಲಬ್ಧೃ
ಧರ್ಮತ್ವೇನ ಗೃಹ್ಣಾತಿ, ಶರೀರೇ ಕಾರ್ಶ್ಯರೂಪಾದಿವತ್। ತಥಾ[2] ಸುಖ
ದುಃಖೇಚ್ಛಾಪ್ರಯತ್ನಾದೀನ್ ಸರ್ವೋ ಲೋಕೋ ಗೃಹ್ಣಾತಿ ಇತಿ ಚೇತ್।
ತಥಾಽಪಿ ಗ್ರಹೀತುರ್ಲೋಕಸ್ಯ ವಿವಿಕ್ತತೈವಾಭ್ಯುಪಗತಾ ಸ್ಯಾತ್। ನ
ಜಾನೇಽಹಂ ತ್ವದುಕ್ತಮ್, ಮುಗ್ಧ ಏವ ಇತಿ ಚೇತ್। ಭವತ್ವಜ್ಞೋ ಮುಗ್ಧಃ
ಯಸ್ತ್ವೇವಮ್। ದರ್ಶೀ ತಂ ಜ್ಞಮ್ ಅಮುಗ್ಧಂ ಪ್ರತಿಜಾನೀಮಹೇ ವಯಮ್।

---

1. 'ತದ್ದರ್ಶನಸ್ಯ' ಎಂದೂ ಪಾಠವಿದೆ; ತತ್ ಬೇಕಿಲ್ಲವೆಂದು ಕಾಣುತ್ತದೆ.
2. ಅಚ್ಚಿನ ಮೂಲದಲ್ಲಿ ಈ ಪದವನ್ನು ಹಿಂದಿನ ವಾಕ್ಯಕ್ಕೆ ಸೇರಿಸಿದೆ; ಇದು ಇಲ್ಲದಿದ್ದರೂ ಸಾಗುತ್ತದೆ, ಇದ್ದರೆ ಇದನ್ನು ಈ ವಾಕ್ಯಕ್ಕೆ ಸೇರಿಸುವದೇ ಮೇಲು.

ತಥಾ ವ್ಯಾಸೇನೋಕ್ತಮ್ ಇಚ್ಛಾದಿ ಕೃತ್ಸ್ನಂ ಕ್ಷೇತ್ರಂ ಕ್ಷೇತ್ರೀ ಪ್ರಕಾಶಯತಿ (ಗೀ ೧೩-೬,೩೦) ಇತಿ । "ಸಮಂ ಸರ್ವೇಷು ಭೂತೇಷು ತಿಷ್ಠನ್ತಂ ಪರಮೇಶ್ವರಮ್ । ವಿನಶ್ಯತ್ಸ್ವವಿನಶ್ಯನ್ತಮ್" (ಗೀ. ೧೩-೨೭) ಇತ್ಯಾದಿ ಶತಶಃ (ಉಕ್ತಮ್)[1] । ತಸ್ಮಾತ್ ನಾಽಽತ್ಮನಃ ಸ್ವತೋ ಬದ್ಧಮುಕ್ತಜ್ಞಾನಾಜ್ಞಾನಕೃತೋ ವಿಶೇಷೋಽಸ್ತಿ । ಸರ್ವದಾ ಸಮೈಕರಸಸ್ವಾಭಾವ್ಯಾಭ್ಯುಪಗಮಾತ್ ॥

(ಭಾಷ್ಯಾರ್ಥ)

(ಆಕ್ಷೇಪ) :– ಮೋಕ್ಷವು ಈಗಿನಂತೆಯೇ ನಿರ್ವಿಶೇಷವಾಗಿದ್ದರೆ[2] ಅದಕ್ಕಾಗಿ ಹೆಚ್ಚಿನ ಯತ್ನವನ್ನು (ಮಾಡುವದು) ಹೊಂದುವದಿಲ್ಲ; ಶಾಸ್ತ್ರವು ವ್ಯರ್ಥವೆಂದೂ ಆಗುವದಲ್ಲ[3] !

(ಪರಿಹಾರ) :– ಹಾಗಲ್ಲ. ಏಕೆಂದರೆ (ಅದು) ಅವಿದ್ಯಾಭ್ರಮವನ್ನು ತೊಲಗಿಸುವದಕ್ಕಾಗಿ (ಹೊರಡಬಹುದಾಗಿದೆ. ಇದರ ವಿವರ) : **ವಸ್ತುವಿನಲ್ಲಿಯೇ ಮುಕ್ತತ್ವ, ಅಮುಕ್ತತ್ವ–ಎಂಬ ವಿಶೇಷವೇನೂ ಇಲ್ಲವೇ ಇಲ್ಲ ; ಏಕೆಂದರೆ ಆತ್ಮನು ಯಾವಾಗಲೂ ಒಂದೇ ರೂಪದಲ್ಲಿರುತ್ತಾನೆ. ಆದರೆ ಆ (ಆತ್ಮವಸ್ತುವಿನ) ವಿಷಯದ ಅವಿದ್ಯೆಯು ಶಾಸ್ತ್ರೋಪದೇಶದಿಂದ ಹುಟ್ಟುವ ವಿಜ್ಞಾನದಿಂದ ತೊಲಗಿಸಲ್ಪಡುತ್ತದೆ,[4] ಆ ಉಪದೇಶವನ್ನು ಪಡೆದುಕೊಳ್ಳುವ ಮುಂಚೆ ಅದಕ್ಕಾಗಿ ಪ್ರಯತ್ನವನ್ನು (ಮಾಡುವದೂ) ಹೊಂದಿಯೇ ಹೊಂದುತ್ತದೆ.**

(ಆಕ್ಷೇಪ) :– ಅವಿದ್ಯಾವಂತನಾದ (ಆತ್ಮನಿಗೆ) ಅವಿದ್ಯೆಯು ತೊಲಗುವದು, ತೊಲಗದಿರುವದು– ಇವುಗಳಿಂದಾದ ವಿಶೇಷವು ಉಂಟಾಗಬಹುದಷ್ಟೆ[5] ?

---

1. ಈ ಮಾತು ಇಲ್ಲದಿದ್ದರೂ ಸಾಗುತ್ತದೆ.

2. ಆತ್ಮನು ಈಗಲೂ ನಿರ್ವಿಶೇಷನಾಗಿದ್ದು ಮೋಕ್ಷದಲ್ಲಿಯೂ ನಿರ್ವಿಶೇಷನಾಗಿದ್ದರೆ ಮೋಕ್ಷದಲ್ಲಿ ಯಾವ ಹೆಚ್ಚುಗಾರಿಕೆಯೂ ಇರಲಾರದು ಎಂದು ಭಾವ.

3. ಇದ್ದೇ ಇರುವದರ ಪ್ರಾಪ್ತಿಗೆ ಯಾರೂ ಯತ್ನವನ್ನು ಮಾಡಲಾರರು ; ಇದನ್ನೇ ತಿಳಿಸಿಕೊಡುವದಕ್ಕೆ ಸರ್ವಜ್ಞಕಲ್ಪವಾದ ಶಾಸ್ತ್ರವು ಪ್ರವರ್ತಿಸಲೂ ಆರದು ಎಂದರ್ಥ.

4. ಒಂದು ವಸ್ತುವಿನ ಜ್ಞಾನದಿಂದ ಅದರ ವಿಷಯದ ಅವಿದ್ಯೆಯು ತೊಲಗಿದ ಮಾತ್ರದಿಂದ ವಸ್ತುವಿನಲ್ಲಿ ಯಾವ ವಿಶೇಷವೂ ಆಗಲಾರದಷ್ಟೆ ? ಎಂದು ಭಾವ. ಸೂ.ಭಾ. ೧-೪-೬, (ಭಾ. ಭಾ. ೩೫೧) ನೋಡಿ. ಇದನ್ನೇ ಅವಿದ್ಯಾನಿವೃತ್ತ್ಯನಿವೃತ್ತಿಗಳ ವಿಷಯದ ಚರ್ಚೆಯಿಂದ ಮುಂದೆಯೂ ಸ್ಪಷ್ಟಪಡಿಸಲಾಗುತ್ತದೆ.

5. ಈಗ ಅವಿದ್ಯಾವಿಷಯನಾಗಿರುತ್ತಾನೆ, ಮುಕ್ತಿಯಲ್ಲಿ ಅವನ ವಿಷಯದ ಅವಿದ್ಯೆಯು ತೊಲಗಿರುತ್ತದೆ– ಎಂಬ ವಿಶೇಷವನ್ನು ಕಲ್ಪಿಸಬಹುದಲ್ಲವೆ ? –ಎಂದು ಆಕ್ಷೇಪ.

(ಪರಿಹಾರ) :- ಹಾಗಲ್ಲ. ಏಕೆಂದರೆ (ಇದು) ಅವಿದ್ಯಾಕಲ್ಪನೆಯ ವಿಷಯವೆಂದು (ನಾವು) ಇಟ್ಟುಕೊಂಡಿರುತ್ತೇವೆ. ಹಗ್ಗ, ಚೌಳುನೆಲ, ಕಪ್ಪೆಯ ಚಿಪ್ಪು, ಆಕಾಶ- ಇವು ಹಾವು, ನೀರು, ಬೆಳ್ಳಿ, ತಳವು ಮಲಿನವಾಗಿರುವದು- ಮುಂತಾದ (ರೂಪ)ವುಳ್ಳವೆಂಬುದು ಹೇಗೋ (ಹಾಗೆಯೇ ಇಲ್ಲಿ ಯಾವ) ದೋಷವೂ ಇಲ್ಲ ಎಂದು ಹೇಳಿರುತ್ತೇವೆ.[1]

(ಆಕ್ಷೇಪ) :- ಕಣ್ಣುಪರೆಯಿರುವದು, ಪರೆಯಿಲ್ಲದಿರುವದು- (ಇವುಗಳಿಂದ) ದೃಷ್ಟಿಗೆ ಹೇಗೋ ಹಾಗೆ ಅವಿದ್ಯೆಯ ಕರ್ತೃತ್ವ, ಅಕರ್ತೃತ್ವ- ಇವುಗಳಿಂದಾದ ವಿಶೇಷವು ಆತ್ಮನಿಗೆ ಉಂಟಾಗಬಹುದಲ್ಲ ![2]

(ಪರಿಹಾರ) :- ಹಾಗಲ್ಲ. ಏಕೆಂದರೆ "ಧ್ಯಾನಮಾಡುವವನಂತಿರುತ್ತಾನೆ, ಚಲಿಸುವವನಂತಿರುತ್ತಾನೆ" (೪-೩-೭) ಎಂದು ಸ್ವತಃ (ಆತ್ಮನಲ್ಲಿ) ಅವಿದ್ಯಾಕರ್ತೃತ್ವವಿಲ್ಲವೆಂದು (ಶ್ರುತಿಯಲ್ಲಿ) ಹೇಳಿದೆ.[3] ಅವಿದ್ಯಾಭ್ರಾಂತಿಯು ಅನೇಕ ವ್ಯಾಪಾರಗಳು ಒಟ್ಟುಗೂಡಿಯೇ ಉಂಟಾಗುವದರಿಂದಲೂ (ಹೀಗೆಂದು ತಿಳಿಯಬೇಕು).[4] (ಅವಿದ್ಯೆಯು) ವಿಷಯವಾಗಿರುವದೆಂಬುದು ಯುಕ್ತವಾಗಿರುವದರಿಂದಲೂ (ಹೀಗೆ. ಇದರ ವಿವರ). ಯಾವನಿಗೆ ಅವಿದ್ಯಾಭ್ರಮೆಯು ಗಡಿಗೆ ಮುಂತಾದವುಗಳಂತೆ ಬೆಂಗಡವಾಗಿ (ವಿಷಯವಾಗಿ) ತೋರುತ್ತಿರುವದೋ ಅವನು ಅವಿದ್ಯಾಭ್ರಮೆಯುಳ್ಳವನಲ್ಲ(ವಷ್ಟೆ) ?

---

1. ೩-೫-೧ (ಭಾ. ಭಾ. ೫೪)ನ್ನು ನೋಡಿ. ಅಧ್ಯಾರೋಪದಿಂದ ಅವಿದ್ಯೆಯನ್ನೂ ಅವಿದ್ಯಾನಿವೃತ್ತಿಯನ್ನೂ ಕಲ್ಪಿಸಲಾಗುತ್ತದೆ, ವಸ್ತುದೃಷ್ಟಿಯಿಂದ ಅವಿದ್ಯೆಯೂ ಇಲ್ಲ, ಅವಿದ್ಯಾನಿವೃತ್ತಿಯೂ ಇಲ್ಲ ಹಗ್ಗದಲ್ಲಿ ಕಲ್ಪಿಸಿದ ಹಾವು ಕಲ್ಪನೆಯ ಕಾಲಕ್ಕೂ ಇರುವದೇ ಇಲ್ಲ. ಇನ್ನು ಅದು ಜ್ಞಾನದಿಂದ ನಿವೃತ್ತಿಯಾಗುವದೆಂಬುದು ಹೇಗೆತಾನೆ ನಿಜವಾದೀತು ?

2. ಆತ್ಮನು ಅವಿದ್ಯೆಗೆ ಈಗ ಆಶ್ರಯನು, ಕಣ್ಣುಪರೆಬಂದಿರುವವನಿಗೆ ಪರೆ ಹೋದಂತೆ ಮುಕ್ತಿಯಲ್ಲಿ ಅವಿದ್ಯೆಯನ್ನು ಕಳೆದುಕೊಳ್ಳುತ್ತಾನೆ -ಎಂಬ ವಿಶೇಷವಾದರೂ ಉಂಟಲ್ಲ ! ಆ ಅವಿದ್ಯೆಯಿಂದತಾನೆ, ಅವಿದ್ಯಾನಿವೃತ್ತಿಯನ್ನು ಕಲ್ಪಿಸಲಾಗಿದೆ ಎಂದು ನೀವು ಹೇಳುವದು ? ಎಂದು ಭಾವ.

3. ವಿದ್ಯಾವಿದ್ಯೆಗಳು ಅಂತಃಕರಣದ ಧರ್ಮಗಳೆಂದೂ ಅಂತಃಕರಣದ ಅಧ್ಯಾಸದಿಂದಲೇ ಆತ್ಮನಿಗೂ ಅವು ಇರುವಂತೆ ತೋರುವವೆಂದೂ ಈ ಶ್ರುತಿಯು ಹೇಳಿದಂತೆ ಆಗಿದೆ.

4. ಅವಿದ್ಯಾಭ್ರಮೆ ಎಂದರೆ ನಾನು ಸಂಸಾರಿಯು, ಕರ್ತೃಭೋಕ್ತೃರೂಪನು -ಎಂಬ ತಿಳಿವಳಿಕೆ. ಇದು ಆತ್ಮನನ್ನೂ ಅನಾತ್ಮವನ್ನೂ ಅನ್ಯೋನ್ಯವಾಗಿ ಕಲೆಬೆರಕೆಮಾಡಿಕೊಂಡು ಅರಿಯುವದರಿಂದಾಗಿರುತ್ತದೆ. ಇದಕ್ಕೆ ಅಂತಃಕರಣ, ಇಂದ್ರಿಯ - ಇವುಗಳ ವ್ಯಾಪಾರವೂ ಬೇಕು ; ಹೀಗಿರುವಲ್ಲಿ ಇದು ಬರಿಯ ಆತ್ಮನದೇ ಎಂದು ತಿಳಿಯುವದಕ್ಕೆ ಕಾರಣವಿಲ್ಲ ಎಂದು ಅಭಿಪ್ರಾಯ.

(ಆಕ್ಷೇಪ) :- 'ನಾನು ಅರಿಯೆನು, ಮುಗ್ಧನಾಗಿದೇನೆ' ಎಂಬ ಪ್ರತ್ಯಯ (ವಾಗುವದು) ಕಂಡುಬರುವದರಿಂದ ಅವಿದ್ಯಾಭ್ರಮೆಯುಳ್ಳವನೇ ಎಂದರೊ ?

(ಪರಿಹಾರ) :- ಹಾಗಲ್ಲ. ಏಕೆಂದರೆ ಅವನಿಗೂ ಬಿಂಗಡವಾಗಿ ತೋರು ತ್ತಿರುತ್ತದೆ. ಯಾವನು ಯಾವದನ್ನು ಬಿಂಗಡವಾಗಿ ಗ್ರಹಿಸುತ್ತಿರುವನೋ ಅವನು ಅದರ (ವಿಷಯ)ದಲ್ಲಿ ಭ್ರಾಂತನು ಎನಿಸುವದಿಲ್ಲವಷ್ಟೆ ? ಅದನ್ನು ಬಿಂಗಡವಾಗಿ ಅರಿಯುವದು, ಅದರ (ವಿಷಯ)ದಲ್ಲಿಯೇ ಭ್ರಮೆಯೂ (ಇರುವದು)- ಎಂಬುದು ತನಗೆತಾನೇ ವಿರುದ್ಧವಾಗಿರುತ್ತದೆ. "ಅರಿಯೆನು, ಮುಗ್ಧನಾಗಿದೇನೆ" ಎಂದು ಕಂಡುಬರುತ್ತದೆ ಎಂದು ಹೇಳುತ್ತಿರುವೆ, ಅದನ್ನು ಕಂಡವನಿಗೆ ಅಜ್ಞಾನವೂ ಮುಗ್ಧಸ್ವರೂಪವೂ ಕಾಣಬರುತ್ತದೆ ಎಂದೂ (ಹೇಳುತ್ತಿರುವೆ). ದರ್ಶನಕ್ಕೆ ವಿಷಯವಾಗಿರುತ್ತದೆ, ಕರ್ಮತ್ವವನ್ನು ಹೊಂದಿ ರುತ್ತದೆ (ಎನ್ನುತ್ತೀಯೆ), ಹೀಗಿರುವಲ್ಲಿ ಅಜ್ಞಾನಮುಗ್ಧತ್ವಗಳು ಕರ್ಮ ವಾಗಿದ್ದುಕೊಂಡು ಕರ್ತೃಸ್ವರೂಪದ ವಿಶೇಷಣವಾಗುವದು ಹೇಗೆ ?[1] ಹೀಗಲ್ಲದೆ ಅವೆರಡೂ ದೃಕ್ಕಿನ ವಿಶೇಷಣವೇ (ಎನ್ನುವದಾದರೆ ಅವು) ಕರ್ಮವಾಗುವದು ಹೇಗೆ? ದರ್ಶನ(ಕ್ರಿಯೆ)ಯಿಂದ ವ್ಯಾಪ್ತವಾಗಿರುವವೆಂಬುದು ಹೇಗೆ ? ಕರ್ಮವು ಕರ್ತೃವಿನ ಕ್ರಿಯೆಯಿಂದ ವ್ಯಾಪ್ತವಾಗಿರುವದಲ್ಲವೆ ? ವ್ಯಾಪ್ಯವೆಂಬುದೇ ಬೇರೆ, ವ್ಯಾಪಕವೇ ಬೇರೆ ; ತನ್ನಿಂದಲೇ ತಾನು ವ್ಯಾಪ್ತವಾಗಲಾರದು. ಹೀಗಾದರೆ ಅಜ್ಞಾನಮುಗ್ಧತ್ವಗಳು ದೃಕ್ಕಿನ ವಿಶೇಷಣಗಳು ಹೇಗಾದಾವು, ಹೇಳು! ಅಜ್ಞಾನ ವನ್ನು ಬಿಂಗಡವಾಗಿ ಕಾಣುವವನು ಅಜ್ಞಾನವು ತನಗೆ ಕರ್ಮವಾದದ್ದೆಂದು ಅರಿಯುತ್ತಿದ್ದು ಅರಿಯುವ (ತನ್ನ) ಧರ್ಮವೆಂದು ಗ್ರಹಿಸಲೂ ಆರನು, ಶರೀರ ದಲ್ಲಿರುವ ಕೃಶ್ವತ್ವ, ರೂಪ- ಇವುಗಳು (ಅವನ್ನು ಅರಿಯುವವನ ಧರ್ಮವಾಗ ಲಾರ)ದಂತೆಯೇ (ಇದು).

(ಆಕ್ಷೇಪ) :- ಸುಖ, ದುಃಖ, ಇಚ್ಛೆ, ಪ್ರಯತ್ನ- ಮುಂತಾದವುಗಳನ್ನು ಪ್ರತಿಯೊಬ್ಬ ಮನುಷ್ಯನೂ ಹೀಗೆಂದು[2] ಗ್ರಹಿಸುತ್ತಾನಲ್ಲ !

(ಪರಿಹಾರ) :- ಹೀಗಾದರೂ ಗ್ರಹಿಸುವ ಮನುಷ್ಯನು (ಅವಕ್ಕಿಂತ)

---

1. ಅವಿದ್ಯೆಯು ಆತ್ಮನ ಧರ್ಮವಲ್ಲ, ವಿಷಯವಾದ ಅಂತಃಕರಣಧರ್ಮವೇ ಎಂಬುದನ್ನು ಗೀ. ಭಾ. ೧೩-೨ (ಭಾ. ಭಾ. ೨೧೮, ೨೨೮, ೨೨೯)ರಲ್ಲಿಯೂ ತೋರಿಸಿದೆ.

2. ತನ್ನ ಧರ್ಮವೆಂದು ಎಂದರ್ಥ. ಇದು ತಥಾ ಎಂಬುದರ ಅನುವಾದ. ಸುಖ ದುಃಖಾದಿಗಳನ್ನು ತನ್ನ ಧರ್ಮವೆಂದೇ ಎಲ್ಲರೂ ಗ್ರಹಿಸುತ್ತಾರೆ ; ಇದರಂತೆ ಅವಿದ್ಯೆಯೂ ಆತ್ಮಧರ್ಮವಾಗಲಿ- ಎಂದು ಆಕ್ಷೇಪಕನ ಭಾವ. ಇಚ್ಛಾದಿಗಳು ಆತ್ಮನ ಧರ್ಮಗಳೆಂದು ವೈಶೇಷಿಕರ ಮತ.

ವಿಂಗಡವಾಗಿರುತ್ತಾನೆಂದೇ ಒಪ್ಪಿದಂತಾಗುವದು.[1]

(ಆಕ್ಷೇಪ) :- ನೀನು ಹೇಳಿದ್ದನ್ನು ನಾನು ತಿಳಿಯಲಾರೆನು, ಮುಗ್ಧನೇ (ಆಗಿರುವೆನು), ಎಂದರೊ ?

( ಪರಿಹಾರ ) :- ಯಾವನಾದರೆ ಹೀಗೆ ತಿಳಿದುಕೊಂಡಿರುವನೋ (ಅವನು) ಅಜ್ಞನೂ ಮುಗ್ಧನೂ ಆಗಿರಲಿ[2], (ಆದರೂ) ಅವನು ಜ್ಞನು, ಅಮುಗ್ಧನು- ಎಂದೇ ನಾವು ಹೇಳುತ್ತಿದೇವೆ. ಆದ್ದರಿಂದಲೇ ವ್ಯಾಸರು "ಇಚ್ಛೆಯೇ ಮುಂತಾದ ಕ್ಷೇತ್ರವೆಲ್ಲವನ್ನೂ ಕ್ಷೇತ್ರಿಯು ಬೆಳಗುತ್ತಿರುತ್ತಾನೆ" (ಗೀ. ೧೩-೬, ३೦), "ಸರ್ವಭೂತಗಳಲ್ಲಿಯೂ ಸಮನಾಗಿ ಇದ್ದುಕೊಂಡಿರುವ, (ಅವು) ವಿನಾಶವಾದರೂ ವಿನಾಶವಾಗದಿರುವ ಪರಮೇಶ್ವರನನ್ನು (ಯಾವನು ಕಂಡಿರುವನೋ ಅವನೇ ಸರಿಯಾಗಿ ತಿಳಿದವನು)"[3] (೧೩-೨೭) ಎಂದು ನೂರಾರು ಸಲ ಹೇಳಿರುತ್ತಾರೆ.

ಆದ್ದರಿಂದ ಆತ್ಮನಿಗೆ ಸ್ವತಃ ಬುದ್ಧಮುಕ್ತತ್ವಕೃತವಾದ (ಅಥವಾ) ಜ್ಞಾನಾಜ್ಞಾನಕೃತವಾದ (ಯಾವ) ವಿಶೇಷವೂ ಇರುವದಿಲ್ಲ. ಏಕೆಂದರೆ ಅವನು ಯಾವಾಗಲೂ ಸಮನಾಗಿಯೂ ಏಕರಸನಾಗಿಯೂ[4] ಇರುವ ಸ್ವಭಾವದವನೆಂದು (ನಾವು) ಒಪ್ಪಿರುತ್ತೇವೆ.

## ಉಪಸಂಹಾರ: ಬ್ರಹ್ಮಾಸ್ಮೀತಿ ಎಂಬಿದು ಉಪಚಾರಮಾತ್ರವೇ

(ಭಾಷ್ಯ)

೨೭೫. ಯೇ ತು ಅತೋಽನ್ಯಥಾ ಆತ್ಮವಸ್ತು ಪರಿಕಲ್ಪ್ಯ ಬನ್ಧಮೋಕ್ಷಾದಿಶಾಸ್ತ್ರಂ ಚ ಅರ್ಥವಾದಮ್, ಆಪಾದಯನ್ತಿ ತ ಉತ್ಸಹನ್ತೇ ಖೇಽಪಿ

---

1. ಇಚ್ಛಾದಿಗಳನ್ನು ಪ್ರತಿಯೊಬ್ಬನೂ ವಿಷಯವಾಗಿ ಗ್ರಹಿಸುತ್ತಾನೆಂದು ನೀವು ಒಪ್ಪಿರುವದರಿಂದ ವಿಷಯಿಯಾಗಿರುವ ತಾನು ಅದಕ್ಕಿಂತ ವಿಲಕ್ಷಣನೆಂದೇ ಒಪ್ಪಿದಂತಾಗುವದು, ಆದ್ದರಿಂದ ಇಚ್ಛಾದಿಗಳ ದೃಷ್ಟಾಂತದಿಂದ ಅವಿದ್ಯೆಯು ಆತ್ಮನ ಧರ್ಮವೆಂದು ಹೇಳುವದಕ್ಕಾಗುವದಿಲ್ಲ.

2. ಹೀಗೆಂದು ತಿಳಿದುಕೊಂಡಿರುವದೇ ಅಜ್ಞಾನವಲ್ಲದೆ, ಆತ್ಮನಿಗೆ ನಿಜವಾಗಿ ಅಜ್ಞಾನವೆಂಬ ಧರ್ಮವೇನೂ ಇರುವದಿಲ್ಲ ಎಂದರ್ಥ. ಸೂ.ಭಾ. ४-೧-३, (ಭಾ.ಭಾ. ೫೧೦).

3. ಇಚ್ಛೆಯಂತೆ ಜ್ಞಾನಾಜ್ಞಾನಗಳೂ ಕ್ಷೇತ್ರಗಳೇ, ಕ್ಷೇತ್ರಜ್ಞನಾದ ಆತ್ಮನು ಅವೆಲ್ಲವನ್ನೂ ಬೆಳಗುತ್ತಾನೆ- ಎಂಬುದಕ್ಕೆ ಈ ಗೀತಾವಾಕ್ಯಗಳು ಆಧಾರವಾಗಿವೆ.

4. ಒಂದೊಂದವಸ್ಥೆಯಲ್ಲಿ, ಅಥವಾ ಒಂದೊಂದು ಕ್ಷೇತ್ರದಲ್ಲಿ ಒಂದೊಂದು ಬಗೆಯಾಗಿಲ್ಲ- ಎಂಬುದನ್ನು 'ಸಮ' ಎಂಬ ವಿಶೇಷಣದಿಂದ ತಿಳಿಸಿದೆ; ಸ್ವತಃ ತನ್ನಲ್ಲಿ ಯಾವ ವಿಭಾಗವಾಗಲಿ, ಭೇದವಾಗಲಿ ಇಲ್ಲದವನಾದ್ದರಿಂದ ನಿರ್ವಿಶೇಷನು ಎಂಬುದನ್ನು 'ಏಕರಸ' ಎಂಬ ವಿಶೇಷಣದಿಂದ ತಿಳಿಸಿದೆ.

ಶಾಕುನಂ ಪದಂ ದ್ರಷ್ಟುಮ್, ಖಂ ವಾ ಮುಷ್ಟಿನಾ ಆಕ್ರಷ್ಟುಂ ಚರ್ಮವದ್ ವೇಷ್ಟಯಿತುಮ್[1]। ವಯಂ ತು ತತ್ಕರ್ತುಮ್ ಅಶಕ್ತಾಃ ಸರ್ವದಾ ಸಮೈಕ ರಸಮ್ ಅದ್ವೈತಮ್ ಅವಿಕ್ರಿಯಮ್ ಅಜಮ್ ಅಜರಮ್ ಅಮರಮ್ ಅಮೃತಮ್ ಅಭಯಮ್ ಆತ್ಮತತ್ತ್ವಂ ಬ್ರಹ್ಮೈವ ಸ್ಮಃ ಇತ್ಯೇಷ ಸರ್ವ ವೇದಾನ್ತನಿಶ್ಚಿತೋಽರ್ಥಃ ಇತ್ಯೇವಂ ಪ್ರತಿಪದ್ಯಾಮಹೇ । ತಸ್ಮಾತ್ 'ಬ್ರಹ್ಮಾಪ್ಯೇತಿ' ಇತ್ಯುಪಚಾರಮಾತ್ರಮ್ ವಿಪರೀತಗ್ರಹವದ್ದೇಹಸಂತತೇರ್ವಿಚ್ಛೇದ ಮಾತ್ರಂ ವಿಜ್ಞಾನಫಲಮ್ ಅಪೇಕ್ಷ್ಯ ॥

(ಭಾಷ್ಯಾರ್ಥ)

ಯಾರು ಇದಕ್ಕಿಂತ ಬೇರೆಯಾಗಿಯೇ ಆತ್ಮವಸ್ತುವನ್ನು ಪರಿಕಲ್ಪಿಸಿ[2] ಬಂಧ, ಮೋಕ್ಷ – ಮುಂತಾದ ಶಾಸ್ತ್ರವನ್ನೂ ಬರಿಯ ಅರ್ಥವಾದವಾಗಿ ಮಾಡುತ್ತಾರೋ[3] ಅವರು ಆಕಾಶದಲ್ಲಿಯೂ ಹಕ್ಕಿಗಳ ಹೆಜ್ಜೆಯುಗುರುತನ್ನು ಕಾಣಬಲ್ಲವರಾಗುತ್ತಾರೆ, ಅಥವಾ ಆಕಾಶವನ್ನು ಮುಷ್ಟಿಯಿಂದ ಹಿಡಿದೆಳೆದು ಚರ್ಮದಂತೆ ಸುತ್ತುವದಕ್ಕೆ (ಶಕ್ತರಾಗಿರುತ್ತಾರೆ) ಆದರೆ ನಾವು ಅದನ್ನು ಮಾಡಲು ಶಕ್ತರಲ್ಲವಾದ್ದರಿಂದ ಯಾವಾಗಲೂ ಸಮವಾಗಿ ಏಕರಸವಾಗಿ, ಅದ್ವೈತವೂ ನಿರ್ವಿಕಾರವೂ ಜನ್ಮರಹಿತವೂ ಮುಪ್ಪಿಲ್ಲದ್ದೂ ಮರಣವಿಲ್ಲದ್ದೂ ಸಾಯುವ ಸ್ವಭಾವವಿಲ್ಲದ್ದೂ ಅಂಜಿಕೆಯಿಲ್ಲದ್ದೂ ಆದ ಆತ್ಮತತ್ತ್ವವೆಂಬ ಬ್ರಹ್ಮವೇ ಆಗಿದೇವೆ ಎಂಬಿದೇ ಸರ್ವವೇದಾಂತಗಳಲ್ಲಿಯೂ ನಿಶ್ಚಿತವಾಗಿರುವ ಅರ್ಥವು ಎಂದಿಂತು ತಿಳಿಯುತ್ತೇವೆ.

**ಆದ್ದರಿಂದ 'ಬ್ರಹ್ಮದಲ್ಲಿ ಸೇರಿಹೋಗುತ್ತಾನೆ' ಎಂಬಿದು ಬರಿಯ ಉಪಚಾರವು,[4] ತಪ್ಪುತಿಳಿವಳಿಕೆಯುಳ್ಳವನಿಗೆ ದೇಹಸಂತಾನವು ಕಡಿದುಹೋಗುವದೆಂಬ ವಿಜ್ಞಾನದ ಫಲವನ್ನಿಟ್ಟುಕೊಂಡು (ಹೇಳಿದ್ದು).**

---

1. ಈ ಸಾರವೇ ಮೇಲು. ಶ್ವೇ. ೬-೨೦ಕ್ಕೆ ಅನುಗುಣ.

2. ಆತ್ಮವಸ್ತುವು ಬಂಧದಲ್ಲಿ ಒಂದು ಬಗೆಯಾಗಿದ್ದು, ಮೋಕ್ಷದಲ್ಲಿ ಮತ್ತೊಂದು ಬಗೆಯಾಗುವದು; ಮೊದಲು ಬ್ರಹ್ಮಕ್ಕಿಂತ ಬೇರೆಯಾಗಿದ್ದು ಮೋಕ್ಷದಲ್ಲಿ ಬ್ರಹ್ಮದಲ್ಲಿ ಬೆರೆಯುವದು – ಎಂದು ವಿಶೇಷವನ್ನು ಕಲ್ಪಿಸಿ ಎಂದರ್ಥ.

3. ವಸ್ತುವಿನ ಸ್ವಭಾವವು ಬೇರೆಯಾಗುವದಲ್ಲವಾದ್ದರಿಂದ ಬಂಧಮೋಕ್ಷಗಳೇ ಇಲ್ಲವೆಂದಾಗಿ 'ರುದ್ರನು ಅತ್ತನು' ಎಂಬಂತೆ ಅರ್ಥವಿಲ್ಲದ ಸ್ತುತಿಮಾತ್ರವೆಂದು ಕಲ್ಪಿಸಿದವರಾಗುತ್ತಾರೋ ಎಂದರ್ಥ. ಇದು ಅರ್ಥವಾದವೆಂದರೆ ಇದು ಹೊಗಳುವ ಪರಮಾರ್ಥವೇ ಇಲ್ಲವಾದ್ದರಿಂದ ಅರ್ಥವಾದವೂ ಆಗುವಹಾಗಿಲ್ಲ ಎಂದೂ ತಿಳಿಯಬೇಕು. ಸಿದ್ಧಾಂತದಲ್ಲಿ ಪರಮಾರ್ಥವಾಗಿ ಬಂಧವಿಲ್ಲವಾದರೂ ಅವಿದ್ಯೆಯ ದೃಷ್ಟಿಯಿಂದ ಬಂಧಮೋಕ್ಷಗಳುಂಟು. ಶಾಸ್ತ್ರವೂ ಅವಿದ್ಯಾದೃಷ್ಟಿಯಿಂದಲೇ ಪ್ರಮಾಣವಾಗಿ ಪ್ರವೃತ್ತವಾಗುವದರಿಂದ ಇಲ್ಲಿ ಬಂಧ ಮೋಕ್ಷಶಾಸ್ತ್ರವು ಅರ್ಥವಾದವಾಗುವ ದೋಷವು ಪ್ರಸಕ್ತವಾಗುವದಿಲ್ಲ.

4. ನಿಜವಾಗಿ ಬ್ರಹ್ಮದಲ್ಲಿ ಸೇರಿಹೋಗುವದಿಲ್ಲ. ಬ್ರಹ್ಮಸ್ವರೂಪವನ್ನು ಅರಿತುಕೊಂಡದ್ದರಿಂದ ಸಂಸಾರವನ್ನು ಪಡೆಯುವದಿಲ್ಲ– ಎಂದು ಗೌಣಾರ್ಥದಲ್ಲಿ ಪ್ರಯೋಗಿಸಿದೆ.

## ಬಂಧಮೋಕ್ಷಗಳ ವರ್ಣನೆಯ ಸಂಗ್ರಹ

(ಉಪನಿಷತ್ತು)

**ತದೇಷ ಶ್ಲೋಕೋ ಭವತಿ**

**ಯದಾ ಸರ್ವೇ ಪ್ರಮುಚ್ಯನ್ತೇ ಕಾಮಾ ಯೇಽಸ್ಯ ಹೃದಿ ಶ್ರಿತಾಃ।**
**ಅಥ ಮರ್ತ್ಯೋಽಮೃತೋಭವತ್ಯತ್ರ ಬ್ರಹ್ಮ ಸಮಶ್ನುತ ಇತಿ ॥**
**ತದ್ಯಥಾಽಹಿನಿರ್ಲ್ವಯನೀ ವಲ್ಮೀಕೇ ಮೃತಾ ಪ್ರತ್ಯಸ್ತಾ ಶಯೀತೈವಮೇವೇದಗ್ಂ ಶರೀರಗ್ಂ ಶೇತೇಽಥಾಯಮಶರೀರೋಽಮೃತಃ ಪ್ರಾಣೋ ಬ್ರಹ್ಮೈವ ತೇಜ ಏವ ಸೋಽಹಂ ಭಗವತೇ ಸಹಸ್ರಂ ದದಾಮೀತಿ ಹೋವಾಚ ಜನಕೋ ವೈದೇಹಃ ॥ ೭ ॥**

೭. ಇಲ್ಲಿ ಈ ಶ್ಲೋಕವಿರುತ್ತದೆ: "ಯಾವಾಗ ಇವನ ಹೃದಯದಲ್ಲಿ ಆಶ್ರಯಿಸಿಕೊಂಡಿರುವ ಕಾಮಗಳೆಲ್ಲವೂ ಬಿಟ್ಟು ಹೋಗುವವೋ ಆಗ ಮರ್ತ್ಯನು ಅಮೃತನಾಗುತ್ತಾನೆ, ಇಲ್ಲಿಯೇ ಬ್ರಹ್ಮವನ್ನು ಪಡೆದುಕೊಳ್ಳುತ್ತಾನೆ." ಅದು ಹೇಗೆಂದರೆ ಅಹಿನಿರ್ಲ್ವಯನಿಯು ಹುತ್ತದಲ್ಲಿ ಸತ್ತು ಬಿಸುಟಾಗ (ಹೇಗೆ) ಇರುತ್ತದೆಯೋ ಹಾಗೆಯೇ ಈ ಶರೀರವು ಬಿದ್ದಿರುತ್ತದೆ. ಆಗ ಇವನು ಅಶರೀರನೂ ಅಮೃತನೂ ಪ್ರಾಣನೂ ಬ್ರಹ್ಮವೇ, ತೇಜಸ್ಸೇ. "ಆ ನಾನು ಭಗವಂತನಾದ (ನಿನಗೆ) ಸಾವಿರ (ಗೋಗಳನ್ನು) ಕೊಡುತ್ತೇನೆ" ಎಂದು ವೈದೇಹಜನಕನು ಎಂದನು.

## ಮುಂದಿನ ಗ್ರಂಥದ ಸಂಬಂಧ

(ಭಾಷ್ಯ)

**೨೭೬. ಸ್ವಪ್ನಬುದ್ಧಾನ್ತಗಮನದೃಷ್ಟಾನ್ತಸ್ಯ ದಾರ್ಷ್ಟಾನ್ತಿಕಃ ಸಂಸಾರೋ ವರ್ಣಿತಃ। ಸಂಸಾರಹೇತುಶ್ಚ ವಿದ್ಯಾಕರ್ಮಪೂರ್ವಪ್ರಜ್ಞಾ ವರ್ಣಿತಾ। ಯೈಶ್ಚ ಉಪಾಧಿಭೂತೈಃ ಕಾರ್ಯಕರಣಲಕ್ಷಣಭೂತೈಃ[1] ಪರಿವೇಷ್ಟಿತಃ ಸಂಸಾರಿತ್ವಮ್ ಅನುಭವತಿ ತಾನಿ ಚ ಉಕ್ತಾನಿ । ತೇಷಾಂ ಸಾಕ್ಷಾತ್ಪ್ರಯೋಜಕೌ ಧರ್ಮಾಧರ್ಮೌ ಇತಿ ಪೂರ್ವಪಕ್ಷಂ ಕೃತ್ವಾ ಕಾಮ ಏವೇತ್ಯವಧಾರಿತಮ್ । ಯಥಾ ಚ ಬ್ರಾಹ್ಮಣೇನ ಅಯಮರ್ಥೋಽವಧಾರಿತಃ ಏವಂ ಮನ್ತ್ರೇಣಾಪಿ ಇತಿ ಬನ್ಧಂ**

---

1. **ಕಾರ್ಯಕರಣೈಃ ಎಂದಿಷ್ಟೇ ಸಾಕಾಗಿತ್ತು ; ಅಥವಾ ಉಪಾಧಿಭಿಃ ಎಂದಿಷ್ಟೇ ಇದ್ದರೂ ಸಾಕಾಗುತ್ತದೆ.**

ಬನ್ಧಕಾರಣಂ ಚ ಉಕ್ತ್ವಾ ಉಪಸಂಹೃತಂ ಪ್ರಕರಣಮ್ "ಇತಿ ನು ಕಾಮಯಮಾನಃ" (೪-೪-೬) ಇತಿ। "ಅಥಾಕಾಮಯಮಾನಃ" (೪-೪-೬) ಇತ್ಯಾರಭ್ಯ ಸುಷುಪ್ತದೃಷ್ಟಾನ್ತಸ್ಯ ದಾರ್ಷ್ಟಾನ್ತಿಕಭೂತಃ ಸರ್ವಾತ್ಮಭಾವೋ ಮೋಕ್ಷ ಉಕ್ತಃ। ಮೋಕ್ಷಕಾರಣಂ ಚ ಆತ್ಮಕಾಮತಯಾ ಯದಾಪ್ತಕಾಮತ್ವಮುಕ್ತಮ್। ತಚ್ಚ (ಸಾಮರ್ಥ್ಯಾತ್)[1] ನಾತ್ಮಜ್ಞಾನಮನ್ತರೇಣ ಆತ್ಮಕಾಮತಯಾ ಆಪ್ತಕಾಮತ್ವಮ್ ಇತಿ ಸಾಮರ್ಥ್ಯಾತ್ ಬ್ರಹ್ಮವಿದ್ಯೈವ ಮೋಕ್ಷಕಾರಣಮ್ ಇತ್ಯುಕ್ತಮ್। ಅತೋ ಯದ್ಯಪಿ ಕಾಮೋ ಮೂಲಮ್ ಇತ್ಯುಕ್ತಮ್, ತಥಾಪಿ ಮೋಕ್ಷಕಾರಣವಿಪರ್ಯಯೇಣ ಬನ್ಧಕಾರಣಮ್ ಅವಿದ್ಯಾ ಇತ್ಯೇತದಪಿ ಉಕ್ತಮೇವ ಭವತಿ। ಅತ್ರಾಪಿ ಮೋಕ್ಷಃ ಮೋಕ್ಷಸಾಧನಂ ಚ ಬ್ರಾಹ್ಮಣೇನೋಕ್ತಮ್। ತಸ್ಯೈವ ದೃಢೀಕರಣಾಯ ಮನ್ತ್ರ ಉದಾಹ್ರಿಯತೇ ಶ್ಲೋಕಶಬ್ದವಾಚ್ಯಃ ॥

(ಭಾಷ್ಯಾರ್ಥ)

ಸ್ವಪ್ನಾಂತಬುದ್ಧಾಂತಗಳನ್ನು ಹೊಂದುವನೆಂಬ ದೃಷ್ಟಾಂತಕ್ಕೆ ದಾರ್ಷ್ಟಾಂತಿಕವಾದ ಸಂಸಾರವನ್ನು ವರ್ಣಿಸಿದ್ದಾಯಿತು[2]; ಸಂಸಾರಕ್ಕೆ ಕಾರಣವಾದ ವಿದ್ಯೆ, ಕರ್ಮ, ಪೂರ್ವಪ್ರಜ್ಞೆ- (ಎಂಬಿದನ್ನು) ವರ್ಣಿಸಿದ್ದಾಯಿತು.[3] ಯಾವ ಕಾರ್ಯಕರಣರೂಪವಾದ ಉಪಾಧಿಗಳಿಂದ ಸುತ್ತುವರಿಯಲ್ಪಟ್ಟಿರುವದರಿಂದ ಸಂಸಾರಿತ್ವವನ್ನು ಅನುಭವಿಸುತ್ತಾನೋ ಅವುಗಳನ್ನು ಹೇಳಿದ್ದಾಯಿತು.[4] ಅವುಗಳನ್ನು ನೇರಾಗಿ ಪ್ರೇರಿಸತಕ್ಕವು ಧರ್ಮಾಧರ್ಮಗಳು ಎಂಬ ಪೂರ್ವಪಕ್ಷವನ್ನು ಮಾಡಿ ಕಾಮವೇ (ನಿಜವಾಗಿ ಪ್ರೇರಕವು) ಎಂದು ಗೊತ್ತುಪಡಿಸಿದ್ದಾಯಿತು.[5] ಹೇಗೆ ಬ್ರಾಹ್ಮಣದಲ್ಲಿ ಈ ಅರ್ಥವನ್ನು ಗೊತ್ತುಪಡಿಸಲಾಯಿತೋ ಹಾಗೆಯೇ ಮಂತ್ರದಲ್ಲಿಯೂ ಬಂಧವನ್ನೂ ಬಂಧಕಾರಣವನ್ನೂ ಹೇಳಿ (ಈ ಸಂಸಾರ) ಪ್ರಕರಣವನ್ನು "ಇಂತಲ್ಲವೆ, ಕಾಮಿಸುವವನು?" (೪-೪-೬) ಎಂದು ಉಪಸಂಹಾರಮಾಡಿದ್ದಾಯಿತು. "ಇನ್ನು ಕಾಮಿಸದೆ ಇರುವವನು" (೪-೪-೬) ಎಂಬುದರಿಂದ ಹಿಡಿದು ಸುಷುಪ್ತಿಯ ದೃಷ್ಟಾಂತಕ್ಕೆ ದಾರ್ಷ್ಟಾಂತಿಕವಾಗಿರುವ ಸರ್ವಾತ್ಮಭಾವವಾದ ಮೋಕ್ಷವನ್ನು ಹೇಳಿದ್ದಾಯಿತು. **ಮೋಕ್ಷಕ್ಕೆ ಕಾರಣವಾಗಿರುವದು ಆತ್ಮಕಾಮನಾಗಿರುವದರಿಂದ ಆಪ್ತಕಾಮನಾಗಿರುವದು**

1. ಈ 'ಸಾಮರ್ಥ್ಯಾತ್' ಎಂಬ ಶಬ್ದವು ಬೇಕಿಲ್ಲ; ಮುಂದಿರುವ ಸಾಮರ್ಥ್ಯಾತ್ ಎಂಬ ಶಬ್ದವೇ ಸಾಕಾಗಿದೆ.
2. ೪-೩-೩೪ರಿಂದ ೪-೪-೪ರವರೆಗೆ.
3. ೪-೪-೨ರಲ್ಲಿ.
4. ೪-೪-೫ರಲ್ಲಿ ಇವನ್ನು ವರ್ಣಿಸಿದೆ.
5. ೪-೪-೫ರಲ್ಲಿ ಇದನ್ನು ಗೊತ್ತುಪಡಿಸಿದ್ದಾಗಿದೆ.

ಎಂದು ಹೇಳಿತ್ತಲ್ಲ (೪-೪-೬), ಆ ಆತ್ಮಕಾಮನಾಗಿರುವದರಿಂದ ಆಪ್ತ ಕಾಮನಾಗಿರುವದೆಂಬುದು ಆತ್ಮಜ್ಞಾನವಿಲ್ಲದೆ ಆಗಲಾರದಾದ್ದರಿಂದ ಬ್ರಹ್ಮವಿದ್ಯೆಯೇ ಮೋಕ್ಷಕ್ಕೆ ಕಾರಣವು ಎಂದು ಸಾಮರ್ಥ್ಯದಿಂದ[1] ಹೇಳಿದಂತಾಯಿತು. ಹೀಗಿರುವದರಿಂದ ಕಾಮವೇ ಸಂಸಾರಕ್ಕೆ ಮೂಲವು ಎಂದು ಹೇಳಿದೆಯಾದರೂ ಮೋಕ್ಷಕಾರಣಕ್ಕೆ ವಿಪರೀತ ವಾಗಿರುವ ಅವಿದ್ಯೆಯೇ ಬಂಧಕಾರಣವು ಎಂಬಿದನ್ನು ಹೇಳಿದಂತೆಯೇ ಆಗಿರುತ್ತದೆ.[2] ಇದೇ (ಕಂಡಿಕೆ)ಯಲ್ಲಿಯೇ ಮೋಕ್ಷವನ್ನೂ ಮೋಕ್ಷಕ್ಕೆ ಸಾಧನ ವನ್ನೂ ಬ್ರಾಹ್ಮಣದಲ್ಲಿ ಹೇಳಿದೆಯಷ್ಟೆ. ಅದನ್ನೇ ಗಟ್ಟಿಗೊಳಿಸುವದಕ್ಕಾಗಿ ಶ್ಲೋಕ ವೆಂಬ ಶಬ್ದದಿಂದ ಕರೆಯಿಸಿಕೊಳ್ಳುವ ಮಂತ್ರವನ್ನು ಉದಾಹರಿಸಲಾಗುತ್ತದೆ:

## ಕಾಮಗಳೆಲ್ಲವೂ ಹೋದರೆ ಇಲ್ಲಿಯೇ ಅಮೃತತ್ವಪ್ರಾಪ್ತಿ

(ಭಾಷ್ಯ)

೨೭೭. ತತ್ ತಸ್ಮಿನ್ನೇವಾರ್ಥೇ ಏಷ ಶ್ಲೋಕಃ ಮನ್ತ್ರಃ ಭವತಿ। ಯದಾ ಯಸ್ಮಿನ್ ಕಾಲೇ ಸರ್ವೇ ಸಮಸ್ತಾಃ ಕಾಮಾಃ ತೃಷ್ಣಾಪ್ರಭೇದಾಃ ಪ್ರಮುಚ್ಯನ್ತೇ ಆತ್ಮಕಾಮಸ್ಯ ಬ್ರಹ್ಮವಿದಃ ಸಮೂಲತಃ ವಿಶೀರ್ಯನ್ತೇ। ಯೇ ಪ್ರಸಿದ್ಧಾಃ ಲೋಕೇ ಇಹಾಮುತ್ರಾರ್ಥಾಃ ಪುತ್ರವಿತ್ತಲೋಕೈಷಣಾಲಕ್ಷಣಾಃ ಅಸ್ಯ ಪ್ರಸಿದ್ಧಸ್ಯ ಪುರುಷಸ್ಯ ಹೃದಿ ಬುದ್ಧೌ ಶ್ರಿತಾಃ ಆಶ್ರಿತಾಃ। ಅಥ ತದಾ ಮರ್ತ್ಯಃ ಮರಣಧರ್ಮಾ ಸನ್ ಕಾಮವಿಯೋಗಾತ್ ಸಮೂಲತಃ ಅಮೃತೋ ಭವತಿ। ಅರ್ಥಾತ್ ಅನಾತ್ಮವಿಷಯಾಃ ಕಾಮಾಃ ಅವಿದ್ಯಾಲಕ್ಷಣಾಃ ಮೃತ್ಯವಃ ಇತ್ಯೇತತ್ ಉಕ್ತಂ ಭವತಿ। ಅತೋ ಮೃತ್ಯುವಿಯೋಗೇ ವಿದ್ವಾನ್ ಜೀವನ್ನೇವ ಅಮೃತೋ ಭವತಿ। ಅತ್ರ ಅಸ್ಮಿನ್ನೇವ ಶರೀರೇ ವರ್ತಮಾನಃ ಬ್ರಹ್ಮ ಸಮಶ್ನುತೇ ಬ್ರಹ್ಮಭಾವಂ ಮೋಕ್ಷಂ ಪ್ರತಿಪದ್ಯತೇ ಇತ್ಯರ್ಥಃ। ಅತೋ ಮೋಕ್ಷೋ ನ ದೇಶಾನ್ತರಗಮನಾದಿ ಅಪೇಕ್ಷತೇ। ತಸ್ಮಾದ್ ವಿದುಷಃ ನೋತ್ಕ್ರಾಮನ್ತಿ ಪ್ರಾಣಾಃ ಯಥಾವಸ್ಥಿತಾ ಏವ ಸ್ವಕಾರಣೇ ಪುರುಷೇ ಸಮವನೀಯನ್ತೇ। ನಾಮಮಾತ್ರಂ ಹಿ ಅವಶಿಷ್ಯತೇ ಇತ್ಯುಕ್ತಮ್ ॥

---

1. ಮೂಲದಲ್ಲಿ ಅಕಾಮಯಮಾನಃ ಎಂದಿಷ್ಟೇ ಇದೆ; ಆದರೆ ಆತ್ಮಜ್ಞಾನವಾಗು ವವರೆಗೆ ಯಾವದಾದರೊಂದು ಕಾಮವು ಇದ್ದೇ ಇರುತ್ತದೆ. ಆದ್ದರಿಂದ ಕಾಮಿಸದವನು ಎಂದರೆ ಆತ್ಮಜ್ಞಾನಿಯು ಎಂದು ಅರ್ಥವಶದಿಂದ ಲಭಿಸುತ್ತದೆ. ಆದ್ದರಿಂದ ಆತ್ಮಜ್ಞಾನವೇ ಮೋಕ್ಷಕ್ಕೆ ಕಾರಣವೆಂದಂತೆ ಆಯಿತು.

2. ಕಾಮಿಯು ಸಂಸಾರದಲ್ಲಿ ತೊಳಲುತ್ತಾನೆ ಎಂದಿಷ್ಟೇ ಮೂಲದಲ್ಲಿದೆಯಾದರೂ ಕಾಮಕ್ಕೆ ಅವಿದ್ಯೆಯೇ ಕಾರಣವಾದ್ದರಿಂದ ಅವಿದ್ಯೆಯೇ ಸಂಸಾರಕ್ಕೆ ಕಾರಣವೆಂದಂತೆ ಆಯಿತು. ಅವಿದ್ಯೆಯು ಮೂಲಕಾರಣವಾದರೂ ಕರ್ಮದಲ್ಲಿ ಪ್ರವರ್ತಿಸುವಂತೆ ಮಾಡು ವದು ಕಾಮವೇ ಆದ್ದರಿಂದ ಶ್ರುತಿಯಲ್ಲಿ ಕಾಮವೇ ಸಂಸಾರಹೇತುವೆಂದು ವರ್ಣಿಸಿದೆ ಎಂದು ಭಾವ. ೧-೪-೧೭ರ ಭಾಷ್ಯ (ಭಾ.ಭಾ. ೧೯೪)ವನ್ನು ನೋಡಿ.

(ಭಾಷ್ಯಾರ್ಥ)

ಇಲ್ಲಿ ಇದೇ ವಿಷಯದಲ್ಲಿ ಈ ಶ್ಲೋಕವು, ಮಂತ್ರವು, ಇರುತ್ತದೆ. ಯಾವಾಗ ಯಾವ ಕಾಲದಲ್ಲಿ ಎಲ್ಲ ಸಮಸ್ತಕಾಮಗಳೂ ಆಶೆಯ ವಿಶೇಷಗಳೂ ಬಿಟ್ಟುಹೋಗುವವೋ ಆತ್ಮಕಾಮನಾದ ಬ್ರಹ್ಮಜ್ಞಾನಿಗೆ ಸಮೂಲವಾಗಿ[1] ವಿನಾಶವಾಗುವವೋ, ಯಾವ ಲೋಕದಲ್ಲಿ ಪ್ರಸಿದ್ಧವಾಗಿರುವ[2] ಈ ಲೋಕದ ಮತ್ತು ಪರಲೋಕದ ಪ್ರಯೋಜನವುಳ್ಳ ಪುತ್ರೈಷಣೆ, ವಿತ್ತೈಷಣೆ, ಲೋಕೈಷಣೆ- ಎಂಬ ಈ ಪ್ರಸಿದ್ಧನಾಗಿರುವ ಪುರುಷನ[3] ಹೃದಯದಲ್ಲಿ ಬುದ್ಧಿಯಲ್ಲಿ (ಶ್ರಿತಾಃ= ಆಶ್ರಿತಾಃ) ಸೇರಿಕೊಂಡಿರುವ (ಕಾಮಗಳೆಲ್ಲವೂ ಯಾವಾಗ ಬಿಟ್ಟುಹೋಗುವವೋ, (ಅಥ= ತದಾ) ಆಗ ಮರ್ತ್ಯನು ಮರಣಧರ್ಮದವನಾಗಿದ್ದುಕೊಂಡಿರುವ (ಇವನು) ಸಮೂಲವಾಗಿ ಕಾಮವು ಹೋಗಲು ಅಮೃತನಾಗುತ್ತಾನೆ. (ಹೀಗೆ ಹೇಳಿದ್ದರ) ಸಾಮರ್ಥ್ಯದಿಂದ **ಅವಿದ್ಯಾಲಕ್ಷಣವಾದ[4] ಅನಾತ್ಮವಿಷಯಕವಾದ ಕಾಮಗಳೇ ಮೃತ್ಯುಗಳು ಎಂಬಿದನ್ನು ಹೇಳಿದಂತೆ ಆಯಿತು. ಆದ್ದರಿಂದ (ಈ) ಮೃತ್ಯುಗಳು ಬಿಟ್ಟಗಲಲು ಜ್ಞಾನಿಯು ಬದುಕಿರುವಾಗಲೇ ಅಮೃತನಾಗುತ್ತಾನೆ. ಇಲ್ಲಿ ಎಂದರೆ ಇದೇ ಶರೀರದಲ್ಲಿಯೇ[5] ಇದ್ದುಕೊಂಡು ಬ್ರಹ್ಮವನ್ನು ಪಡೆದುಕೊಳ್ಳುತ್ತಾನೆ, ಬ್ರಹ್ಮಭಾವವೆಂಬ ಮೋಕ್ಷವನ್ನು ಪಡೆದುಕೊಳ್ಳುತ್ತಾನೆ.** ಆದ್ದರಿಂದ ಮೋಕ್ಷವು ಮತ್ತೊಂದು ಸ್ಥಲಕ್ಕೆ ಹೋಗಬೇಕಾದದ್ದೇ ಮುಂತಾದದ್ದನ್ನು ಬಯಸುವದಿಲ್ಲ.[6] ಆದ್ದರಿಂದ ಜ್ಞಾನಿಯ ಪ್ರಾಣಗಳು ಉತ್ಕ್ರಾಂತವಾಗುವದಿಲ್ಲ, ಇದ್ದಂತೆಯೇ ಇದ್ದು ತಮ್ಮ ಕಾರಣನಾದ ಪುರುಷನಲ್ಲಿ ಅಡಗಿ ಹೋಗುತ್ತವೆ[7] ಬರಿಯ ನಾಮವೇ ಉಳಿದುಕೊಳ್ಳುತ್ತದೆ (೩-೨-೧೨)

---

1. ಅವಿದ್ಯಾಸಹಿತವಾಗಿ.

2. ತಮಗೆ ಈ ಮೂರು ಏಷಣೆಗಳೂ ಇರುವವೆಂಬುದು ಜನರಿಗೆಲ್ಲ ತಿಳಿದಿದೆ ಎಂದಭಿಪ್ರಾಯ.

3. ಸಂಸಾರಿಯ.

4. ಅವಿದ್ಯೆಯಿಂದಾಗುವ ಎಂಬರ್ಥ.

5. ಸತ್ತಬಳಿಕ ಸ್ವರ್ಗಾದಿಗಳನ್ನು ಪಡೆದುಕೊಳ್ಳುವಂತಲ್ಲದೆ ಎಂದರ್ಥ; ಈಗ ನಿಜವಾಗಿ ಶರೀರವೊಂದಿದೆ ಎಂಬುದೇನೂ ವಿವಕ್ಷಿತವಲ್ಲ.

6. ಏಕೆಂದರೆ ಅದು ನಿತ್ಯಸಿದ್ಧವಾಗಿದೆ; ಪ್ರಾಪ್ಯವಲ್ಲ.

7. ಮಾ. ೪-೨-೬ರ ಸೂಚನೆ. ಅಥವಾ ಈ ಉಪನಿಷತ್ತಿನ ೩-೨-೧೧ರ ಸೂಚನೆ; ಅಲ್ಲಿಯೂ ಮಾಧ್ಯಂದಿನ ಪಾಠದಂತೆ "ಅತ್ರೈವ ಸಮವನೀಯನ್ತೇ" ಎಂದಿದೆ. ಇದ್ದಂತೆಯೇ ಇದ್ದು ಎಂದರೆ ಶರೀರದಲ್ಲಿದ್ದು ಎಂದರ್ಥ.

ಎಂದಲ್ಲವೆ, ಹಿಂದೆ ಹೇಳಿದೆ[1] ?

## ಜ್ಞಾನಿಗೆ ಮತ್ತೆ ದೇಹಗ್ರಹಣವಿಲ್ಲವೆಂಬುದಕ್ಕೆ ದೃಷ್ಟಾಂತ

(ಭಾಷ್ಯ)

೨೭೮. ಕಥಂ ಪುನಃ ಸಮವನೀತೇಷು ಪ್ರಾಣೇಷು ದೇಹೇ ಚ ಸಕಾರಣೇ[2] ಪ್ರಲೀನೇ ವಿದ್ವಾನ್ ಮುಕ್ತಃ ಅತ್ರೈವ ಸರ್ವಾತ್ಮಾ ಸನ್ ವರ್ತಮಾನಃ ಪುನಃ ಪೂರ್ವವತ್ ದೇಹಿತ್ವಂ ಸಂಸಾರಿತ್ವಲಕ್ಷಣಂ ನ ಪ್ರತಿಪದ್ಯತ ಇತಿ ? ಅತ್ರೋಚ್ಯತೇ । ತತ್ ತತ್ರ ಅಯಂ ದೃಷ್ಟಾನ್ತಃ ಯಥಾ ಲೋಕೇ ಅಹಿಃ ಸರ್ಪಃ ತಸ್ಯ ನಿರ್ಲ್ವಯನೀ ನಿರ್ಮೋಕಃ ಸಾ ಅಹಿನಿರ್ಲ್ವಯನೀ ವಲ್ಮೀಕೇ ಸರ್ಪಾಶ್ರಯೇ ವಲ್ಮೀಕಾದೌ ಇತ್ಯರ್ಥಃ । ಮೃತಾ ಪ್ರತ್ಯಸ್ತಾ ಪ್ರಕ್ಷಿಪ್ತಾ ಅನಾತ್ಮಭಾವೇನ ಸರ್ಪೇಣ ಪರಿತ್ಯಕ್ತಾ ಶಯೀತ ವರ್ತೇತ । ಏವಮೇವ ಯಥಾ ಅಯಂ ದೃಷ್ಟಾನ್ತಃ ಇದಂ ಶರೀರಂ ಸರ್ಪಸ್ಥಾನೀಯೇನ ಮುಕ್ತೇನ ಅನಾತ್ಮಭಾವೇನ ಪರಿತ್ಯಕ್ತಂ ಮೃತಮಿವ ಶೇತೇ । ಅಥ (ಅಯಮ್)[3] ಇತರಃ ಸರ್ಪಸ್ಥಾನೀಯಃ ಮುಕ್ತಃ ಸರ್ವಾತ್ಮಭೂತಃ ಸರ್ಪವತ್ ತತ್ರೈವ ವರ್ತಮಾನೋಽಪಿ ಅಶರೀರ ಏವ ನ ಪೂರ್ವವತ್ ಪುನಃ ಸಶರೀರೋ ಭವತಿ । ಕಾಮಕರ್ಮಪ್ರಯುಕ್ತಶರೀರಾತ್ಮಭಾವೇನ ಹಿ ಪೂರ್ವಂ ಸಶರೀರೋ ಮರ್ತ್ಯಶ್ಚ । ತದ್ವಿಯೋಗಾತ್ ಅಥ ಇದಾನೀಮ್ ಅಶರೀರಃ ಅತ ಏವ ಚ ಅಮೃತಃ । ಪ್ರಾಣಃ ಪ್ರಾಣಿತೀತಿ ಪ್ರಾಣಃ । "ಪ್ರಾಣಸ್ಯ ಪ್ರಾಣಮ್" (೪-೪-೧೮) ಇತಿ ಹಿ ವಕ್ಷ್ಯಮಾಣೇ ಶ್ಲೋಕೇ । "ಪ್ರಾಣಬನ್ಧನಂ ಹಿ ಸೋಮ್ಯ ಮನಃ" (ಛಾಂ. ೬-೮-೨) ಇತಿ ಚ ಶ್ರುತ್ಯನ್ತರೇ । ಪ್ರಕರಣವಾಕ್ಯಸಾಮರ್ಥ್ಯಾಚ್ಚ ಪರ ಏವ ಆತ್ಮಾ ಅತ್ರ ಪ್ರಾಣಶಬ್ದವಾಚ್ಯಃ । ಬ್ರಹ್ಮೈವ ಪರಮಾತ್ಮೈವ । ಕಿಂ ಪುನಸ್ತತ್ ? ತೇಜ ಏವ ವಿಜ್ಞಾನಂ ಜ್ಯೋತಿಃ, ಯೇನ ಆತ್ಮಜ್ಯೋತಿಷಾ ಜಗತ್ ಅವಭಾಸ್ಯಮಾನಂ ಪ್ರಜ್ಞಾನೇತ್ರಂ ವಿಜ್ಞಾನಜ್ಯೋತಿಷ್ಮತ್ ಸತ್ ಅವಿಭ್ರಂಶತ್ ವರ್ತತೇ ॥

---

1. ಮುಕ್ತನಿಗೆ ಕೇವಲಪ್ರಾಣಗಳು ಮಾತ್ರವೇ ಬ್ರಹ್ಮದಲ್ಲಿ ಸೇರಿಹೋಗುವದಿಲ್ಲ, ಕಾಮಕರ್ಮಾದಿಗಳೆಲ್ಲವೂ ಸೇರಿಹೋಗುತ್ತವೆ ; ಬರಿಯ ನಾಮವೇ ಉಳಿಯುತ್ತದೆ -ಎಂದು ಅಲ್ಲಿ ಹೇಳಿದೆ. ಆದ್ದರಿಂದ ಇಲ್ಲಿಯೂ ಪ್ರಾಣಗಳು ಎಂದಿರುವದು ಉಪಲಕ್ಷಣವಾಗಿ ಎಂದು ಭಾವ.

2. ಸ್ವಕಾರಣೇ ಎಂಬುದನ್ನು ಹೀಗೆ ತಿದ್ದಿಕೊಂಡಿದೆ ; ಅನುವಾದದ ಟಿಪ್ಪಣಿಯನ್ನು ನೋಡಿ.

3. ಈ ಮಾತು ಮೂಲಭಾಷ್ಯದಲ್ಲಿದ್ದು ಬಿಟ್ಟುಹೋಗಿರಬೇಕು.

(ಭಾಷ್ಯಾರ್ಥ)

(ಪ್ರಶ್ನೆ):– ಪ್ರಾಣಗಳು (ಬ್ರಹ್ಮದಲ್ಲಿ) ಅಡಗಿಹೋಗಲು, ದೇಹವೂ ಕಾರಣಸಹಿತವಾಗಿ[1] ಲಯವಾಗಲು, ಜ್ಞಾನಿಯು ಮುಕ್ತನಾಗಿ ಇಲ್ಲಿಯೇ ಸರ್ವಾತ್ಮನಾಗಿದ್ದುಕೊಂಡು ಮತ್ತೆ ಮುನ್ನಿನಂತೆ ಸಂಸಾರಿತ್ವರೂಪವಾದ ದೇಹಿತ್ವವನ್ನು ಪಡೆಯುವದಿಲ್ಲ ಎಂಬುದು ಹೇಗೆ?[2]

(ಉತ್ತರ):– ಇದಕ್ಕೆ (ಉತ್ತರವನ್ನು) ಹೇಳುತ್ತೇವೆ. (ತತ್= ತತ್ರ) ಇಲ್ಲಿ ಇದು ದೃಷ್ಟಾಂತವು. ಹೇಗೆ ಲೋಕದಲ್ಲಿ– ಅಹಿ ಎಂದರೆ ಹಾವು, ಅದರ ನಿರ್ಲ್ವಯನಿ ಎಂದರೆ ಪೊರೆ. ಆ ಅಹಿನಿರ್ಲ್ವಯನಿಯು, ಹುತ್ತದಲ್ಲಿ ಹಾವಿಗೆ ಆಸರೆಯಾದ ಹುತ್ತವೇ ಮುಂತಾದದ್ದರಲ್ಲಿ[3] ಎಂದರ್ಥ; (ಅದು) ಸತ್ತು ಬಿಸುಟಾಗ ಆಚೆಗೆ ಹಾಕಲ್ಪಟ್ಟಾಗ, (ಇದು) ತಾನಲ್ಲವೆಂದು ಹಾವಿನಿಂದ ಬಿಡಲ್ಪಟ್ಟಾಗ, ಬಿದ್ದುಕೊಂಡಿರುವದೋ (ಹೇಗೆ) ಇದ್ದುಕೊಂಡಿರುವದೋ, ಹಾಗೆಯೇ ಈ ದೃಷ್ಟಾಂತದಂತೆಯೇ, ಈ ಶರೀರವು (ದಾರ್ಷ್ಟಾಂತಿಕದಲ್ಲಿ) ಹಾವಿನಂತಿರುವ ಮುಕ್ತನಿಂದ ತಾನಲ್ಲವೆಂದು ಬಿಡಲ್ಪಟ್ಟು ಸತ್ತಂತೆ ಬಿದ್ದಿರುತ್ತದೆ.[4] ಇನ್ನು[5] ಈ ಮತ್ತೊಬ್ಬನಾದ ಹಾವಿನಂತಿರುವ ಮುಕ್ತನು ಸರ್ವಾತ್ಮನಾಗಿ ಹಾವಿನಂತೆ ಅಲ್ಲಿಯೇ ಇದ್ದರೂ ಅಶರೀರನೇ, ಮೊದಲಿನಂತೆ ಮತ್ತೆ ಸಶರೀರನಲ್ಲ– ಕಾಮ ಕರ್ಮಗಳಿಂದ ಪ್ರೇರಿತವಾದ ಶರೀರಾತ್ಮಭಾವದಿಂದಲೇ ಅಲ್ಲವೆ, ಮೊದಲು

---

1. ಅಜ್ಞಾನಸಹಿತವಾಗಿ ಎಂದರ್ಥ, ಕಾಮವು ಮೂಲವೆಂದಿಷ್ಟೇ ಶ್ರುತಿಯಲ್ಲಿದ್ದರೂ ಬಂಧಕಾರಣವು ಅವಿದ್ಯೆಯೇ ಎಂದೂ ಹೇಳಿದಂತಾಯಿತು ಎಂದು ಭಾ.ಭಾ. ೨೭೬ರಲ್ಲಿ ಹೇಳಿರುವದನ್ನು ಇದು ಸೂಚಿಸುತ್ತದೆ. 'ಸ್ವಕಾರಣೇ' ಎಂಬ ಅಚ್ಚಿನ ಮೂಲವನ್ನು ಸಕಾರಣೇ ಎಂದು ನಾವು ವಾರ್ತಿಕವನ್ನು ಅನುಸರಿಸಿ ತಿದ್ದಿಕೊಂಡಿದೇವೆ.

2. ಇದು ಆಕ್ಷೇಪವಲ್ಲ. ಕಾರ್ಯಕರಣಗಳೆರಡೂ ಅವಿದ್ಯೆಯು ಹೋಗಲು ಬ್ರಹ್ಮದಲ್ಲಿಯೇ ಅಡಗಿಹೋಗುತ್ತವೆ; ಜ್ಞಾನಿಯೂ ಇಲ್ಲಿಯೇ ಬ್ರಹ್ಮವಾಗಿದ್ದು ಬ್ರಹ್ಮದಲ್ಲಿ ಸೇರಿಹೋಗುತ್ತಾನೆ ಎಂದು ಹೇಳಿದಿರಲ್ಲ, ಇದು ಹೇಗೆಂಬುದನ್ನು ಸದೃಷ್ಟಾಂತವಾಗಿ ವಿಶದಪಡಿಸಿರಿ ಎಂದು ಇಲ್ಲಿ ಪ್ರಶ್ನೆಮಾಡಿದೆ ಅಷ್ಟೆ.

3. ಹುತ್ತವೆಂಬುದು ಉಪಲಕ್ಷಣ, ಹಾವಿರುವ ಯಾವ ಸ್ಥಲವಾದರೂ ಆಗಬಹುದು ಎಂದು ಭಾವ.

4. ಹಾವನ್ನು ಬಿಟ್ಟು ಪೊರೆಯು ಬೇರೆಯಾಯಿತು ಎಂಬುದನ್ನು 'ಸತ್ತು' ಎಂಬ ಮಾತು ತಿಳಿಸುತ್ತದೆ; ತನ್ನ ಹತ್ತಿರದಲ್ಲಿಯೇ ಹುತ್ತದಲ್ಲಿದ್ದುಕೊಂಡಿದೆ ಎಂದು ತಿಳಿಸುವದಕ್ಕೆ 'ಬಿಸುಟಾಗ' ಎಂಬ ಮಾತನ್ನು ಉಪಯೋಗಿಸಿದೆ.

5. ಆದ್ದರಿಂದ ಎಂದರ್ಥ, ಸಕಾರಣವಾಗಿ ದೇಹವನ್ನು ಬಿಟ್ಟದ್ದರಿಂದ ಎಂದು ಹೇತುವಿಗೆ ಅಭಿಪ್ರಾಯ– ಎಂದು ವಾರ್ತಿಕ. (ಈ ವಾರ್ತಿಕದ ಆಧಾರದಿಂದಲೇ ಸಕಾರಣೇ ಎಂಬ ಪಾಠವನ್ನು ನಾವು ಅಂಗೀಕರಿಸಿದ್ದು).

ಸಶರೀರನೂ ಮರ್ತ್ಯನೂ ಆಗಿದ್ದನು ? ಅದು ಹೋಗಲು ಇನ್ನು ಈಗ ಅಶರೀರನು[1] ಆದ್ದರಿಂದಲೇ ಅಮೃತನು ಪ್ರಾಣನು : ವ್ಯಾಪಾರವುಳ್ಳವನಾಗಿರುತ್ತಾನೆ[2] (ಪ್ರಾಣಿತಿ) ಆದ್ದರಿಂದ ಪ್ರಾಣನು "ಪ್ರಾಣದ ಪ್ರಾಣವು" (೪-೪-೧೮) ಎಂದಲ್ಲವೆ, ಮುಂದೆ ಹೇಳಲಾಗುವ ಶ್ಲೋಕದಲ್ಲಿದೆ ? "ಸೋಮ್ಯನೆ, ಮನಸ್ಸು (ಎಂಬ ಜೀವನು) ಪ್ರಾಣ (ಎಂಬ ಪರಮಾತ್ಮ)ನಿಗೆ ಕಟ್ಟುಬಿದ್ದಿದಾನಲ್ಲವೆ ?" (ಛಾಂ. ೬-೮-೨) ಎಂದು ಮತ್ತೊಂದು ಶ್ರುತಿಯಲ್ಲಿಯೂ ಇದೆ ಪ್ರಕರಣವಾಕ್ಯಗಳ ಬಲದಿಂದಲೂ[3] ಇಲ್ಲಿ ಪರಮಾತ್ಮನೇ ಪ್ರಾಣಶಬ್ದವಾಚ್ಯ( ನು ಎಂದು ತಿಳಿಯಬೇಕು), ಬ್ರಹ್ಮವೇ[4], ಪರಮಾತ್ಮನೇ. ಆ ಬ್ರಹ್ಮವು ಯಾವದು ? ತೇಜಸ್ಸೇ, ವಿಜ್ಞಾನವೆಂಬ ಬೆಳಕೇ ; ಯಾವ ಆತ್ಮಜ್ಯೋತಿಯಿಂದ ಬೆಳಗುತ್ತಿರುವ ಜಗತ್ತು ಪ್ರಜ್ಞಾನೇತ್ರವಾಗಿ[5] ವಿಜ್ಞಾನವೆಂಬ ಬೆಳಕುಳ್ಳದ್ದಾಗಿ ದಾರಿತಪ್ಪದೆ ಇರುತ್ತದೆಯೋ (ಆ ಬೆಳಕೇ).[6]

---

1. ಹಾವಿಗೆ ಬಿಟ್ಟಪೊರೆಯಲ್ಲಿ ಅಭಿಮಾನವಿಲ್ಲದಂತೆಯೇ ಜ್ಞಾನಿಗೆ ಸ್ಥೂಲಸೂಕ್ಷ್ಮಶರೀರಗಳಲ್ಲಿ ಅಭಿಮಾನವಿರುವದಿಲ್ಲ. ಆದ್ದರಿಂದ ಅಶರೀರನೇ ಎಂದಭಿಪ್ರಾಯ ಹೀಗೆ ಅವಿದ್ಯಾಪರಿಹಾರದಿಂದ ಅಶರೀರನಾಗಿರುವದರಿಂದ ಇಲ್ಲಿಯೇ ಬ್ರಹ್ಮನಾಗಿದ್ದುಕೊಂಡಿರುತ್ತಾನೆ ಎಂದೆವು ಎಂದರ್ಥ. ಮತ್ತೆ ಶರೀರವನ್ನು ಪಡೆಯುವದಿಲ್ಲ ಎಂಬುದಕ್ಕೆ ಹಾವು ಹುತ್ತದಲ್ಲಿ ಬಿದ್ದಿರುವ ಶರೀರದಲ್ಲಿ ಮತ್ತೆ ನಾನೆಂಬ ಅಭಿಮಾನವನ್ನು ಪಡೆಯುವದಿಲ್ಲ ಎಂಬುದು ದೃಷ್ಟಾಂತವು ಇಲ್ಲಿ ಅಶರೀರ ಎಂಬುದು ಸ್ಥೂಲಸೂಕ್ಷ್ಮಶರೀರಗಳೆರಡನ್ನೂ ಹೇಳುತ್ತದೆ, ಮಾಧ್ಯಂದಿನಪಾಠದಲ್ಲಿ ಅನಸ್ಥಿಕ ಎಂದು ಸ್ಥೂಲಶರೀರವನ್ನು ಬೇರೆಯಾಗಿ ನಿಷೇಧಿಸಿ, ಅಶರೀರ ಎಂಬುದರಿಂದ ಸೂಕ್ಷ್ಮಶರೀರವನ್ನು ಹೇಳಿದೆ. ದೃಷ್ಟಾಂತದಲ್ಲಿ ಪೊರೆಯು ಬೇರೆಯಾಗಿ ಬಿದ್ದಿರುವಂತೆ ದಾರ್ಷ್ಟಾಂತಿಕದಲ್ಲಿ ಶರೀರವೂ ಬೇರೆಯಾಗಿವೆ ಎಂಬುದೇನೂ ವಿವಕ್ಷಿತವಲ್ಲ, ಜ್ಞಾನಬಾಧಿತವಾಗಿರುತ್ತದೆ ಎಂದೇ ಅರ್ಥ -ಎಂದು ವಾರ್ತಿಕ

2. ಪ್ರಾಣದ ವ್ಯಾಪಾರಕ್ಕೂ ಇರುವಿಕೆಗೂ ಪರಮಾತ್ಮನೇ ಕಾರಣನು

3. ಇದು ಬ್ರಹ್ಮದ ಪ್ರಕರಣವು, ಏಕೆಂದರೆ ಆತ್ಮನು ಬ್ರಹ್ಮವೇ ಎಂಬುದನ್ನು ಹೇಳುವದಕ್ಕೆ ಬಂದಿದೆ, ಈ ವಾಕ್ಯವೂ ಬ್ರಹ್ಮವನ್ನೇ ತಿಳಿಸುತ್ತದೆ. ಆದ್ದರಿಂದ ಪ್ರಾಣನೆಂದರೆ ಪರಮಾತ್ಮನೇ ಎಂದರ್ಥ. ಪ್ರಾಣನೆಂದರೆ ಸಾಕ್ಷಿಯು, ಬ್ರಹ್ಮರೂಪನಾದ ಪ್ರಾಣನು (ಸಾಕ್ಷಿಯು) ಎಂದು ಸಮಾನಾಧಿಕರಣವಾಗಿ ಹೇಳುವ ವಾಕ್ಯವಿದು -ಎಂದು ವಾರ್ತಿಕ.

4. ಸಂಸಾರಿಯಲ್ಲ, ಏಕೆಂದರೆ ಶರೀರಪ್ರಾಣಗಳಿಲ್ಲದ ಆತ್ಮನಿವನು.

5. ಆತ್ಮನ ಪ್ರಜ್ಞೆ (ಚೈತನ್ಯ) ಎಂಬ ಮುಂದಾಳು ತೋರಿಸಿದ ಹಾದಿಯಲ್ಲಿ ನಡೆಯುತ್ತಾ, ಅಥವಾ ಆತ್ಮನ ಪ್ರಜ್ಞೆ ಎಂಬ ಕಣ್ಣನ್ನು ಪಡೆದುಕೊಂಡು ಎಂದರ್ಥ. ಐ ಭಾ. ೩-೧ (ಭಾ.ಭಾ. ೮೭) ನೋಡಿ.

6. ಸರ್ವಸ್ವತಂತ್ರಚೈತನ್ಯವಾಗಿರುವವನಿಗೆ ಸಂಸಾರಿತ್ವವೆಲ್ಲಿಯದು ?

# ಜನಕನು ಮೋಕ್ಷನಿರ್ಣಯಕ್ಕಾಗಿ ಗೋಸಹಸ್ರದಾನವನ್ನು ಕೊಟ್ಟಿದ್ದು

(ಭಾಷ್ಯ)

೨೭೯. ಯಃ ಕಾಮಪ್ರಶ್ನೋ ವಿಮೋಕ್ಷಾರ್ಥೋ ಯಾಜ್ಞವಲ್ಕ್ಯೇನ ವರೋ ದತ್ತೋ ಜನಕಾಯ, ಸಹೇತುಕೋ ಬನ್ಧಮೋಕ್ಷಾದಿಲಕ್ಷಣಃ ದೃಷ್ಟಾನ್ತದಾರ್ಷ್ಟಾನ್ತಿಕಭೂತಃ, ಸ ಏಷ ನಿರ್ಣೀತಃ ಸವಿಸ್ತರಃ ಜನಕಯಾಜ್ಞವಲ್ಕ್ಯಾಖ್ಯಾಯಿಕಾರೂಪಧಾರಿಣ್ಯಾ ಶ್ರುತ್ಯಾ। ಸಂಸಾರವಿಮೋಕ್ಷೋಪಾಯ ಉಕ್ತಃ ಪ್ರಾಣಿಭ್ಯಃ। ಇದಾನೀಂ ಶ್ರುತಿಃ ಸ್ವಯಮೇವಾಹ ವಿದ್ಯಾನಿಷ್ಕ್ರಯಾರ್ಥಂ ಜನಕೇನ ಏವಮುಕ್ತಮ್ ಇತಿ। ಕಥಮ್ ? ಸೋಽಹಮ್ ಏವಂ ವಿಮೋಕ್ಷಿತಸ್ತ್ವಯಾ ಭಗವತೇ ತುಭ್ಯಂ ವಿದ್ಯಾನಿಷ್ಕ್ರಯಾರ್ಥಂ ಸಹಸ್ರಂ ದದಾಮಿ ಇತಿ ಹ ಏವಂ ಕಿಲ ಉವಾಚ ಉಕ್ತವಾನ್ ಜನಕೋ ವೈದೇಹಃ ॥

(ಭಾಷ್ಯಾರ್ಥ)

ಯಾಜ್ಞವಲ್ಕ್ಯನು ವಿಮೋಕ್ಷವೆಂಬ ಪ್ರಯೋಜನವುಳ್ಳ ಕಾಮಪ್ರಶ್ನವೆಂಬ ವರವನ್ನು ಜನಕನಿಗೆ ಕೊಟ್ಟಿದ್ದನಷ್ಟೆ[1], ಆ ಈ ದೃಷ್ಟಾಂತದಾರ್ಷ್ಟಾಂತಿಕಸ್ವರೂಪವಾದ[2] ಹೇತುಸಹಿತವಾದ ಬಂಧಮೋಕ್ಷಾರ್ಥಗಳ ರೂಪವಾದ[3] (ಕಾಮಪ್ರಶ್ನೆ)ಯನ್ನು ಜನಕಯಾಜ್ಞವಲ್ಕ್ಯರ ಕಥೆಯ ರೂಪವನ್ನು ಧರಿಸಿಕೊಂಡ ಶ್ರುತಿಯಿಂದ[4] ವಿಸ್ತಾರವಾಗಿ ನಿರ್ಣಯಿಸಲಾಯಿತು. ಜೀವರಿಗೆ ಸಂಸಾರದಿಂದ ಬಿಡುಗಡೆಯಾಗುವದಕ್ಕೆ ಉಪಾಯವನ್ನು ಹೇಳಿದ್ದಾಯಿತು. ಈಗ ವಿದ್ಯೆಯ ನಿಷ್ಕ್ರಯಕ್ಕಾಗಿ ಜನಕನು ಹೀಗೆಂದನು ಎಂದು ಶ್ರುತಿಯು ತಾನೇ[5] ಹೇಳು

---

1. ಯಾಜ್ಞವಲ್ಕ್ಯನು ಕಾಮಪ್ರಶ್ನವೆಂಬ ವರವನ್ನು ಕೊಟ್ಟಿದ್ದನು. ಆ ವರವನ್ನು 'ವಿಮೋಕ್ಷಕ್ಕೇ ಹೇಳು'' ಎಂದು ಮೋಕ್ಷಪ್ರಶ್ನವನ್ನು ನಿರ್ಣಯಿಸುವವರೆಗೂ ಮತ್ತೆ ಮತ್ತೆ ಕೇಳುವದಕ್ಕೆ ಉಪಯೋಗಿಸಿಕೊಂಡನು. ಅವನ ಪ್ರಶ್ನೆಗೆ ಇದೇ ಪ್ರಯೋಜನವಾಯಿತು.

2. ಜಾಗ್ರತ್ಸ್ವಪ್ನಾಂತಗಳನ್ನು ಅನುಕ್ರಮವಾಗಿ ಸಂಚರಿಸುವದೆಂಬ ದೃಷ್ಟಾಂತ, ದೇಹದಿಂದ ದೇಹಾಂತರವನ್ನು ಪಡೆಯುವದೆಂಬ ದಾರ್ಷ್ಟಾಂತಿಕ, ಸುಷುಪ್ತಿಪ್ರಾಪ್ತಿ ಎಂಬ ದೃಷ್ಟಾಂತ, ಮೋಕ್ಷಪ್ರಾಪ್ತಿ ಎಂಬ ದಾರ್ಷ್ಟಾಂತಿಕ– ಈ ರೂಪದಲ್ಲಿ ಯಾಜ್ಞವಲ್ಕ್ಯನು ವಿವರಿಸಿರುತ್ತಾನೆ.

3. ಸಂಸಾರರೂಪವಾದ ಬಂಧ, ಅದಕ್ಕೆ ಹೇತುವಾದ ಕಾಮ; ಮೋಕ್ಷವೆಂಬ ಸರ್ವಾತ್ಮಭಾವಪ್ರಾಪ್ತಿ, ಅದಕ್ಕೆ ಹೇತುವಾದ ಜ್ಞಾನಮೂಲಕ ಕಾಮಪರಿಹಾರ– ಈ ರೂಪದ.

4. ಶ್ರುತಿಯು ತನಗಿಂತ ಹಿಂದೆ ನಡೆದ ಒಂದು ಸಂವಾದವನ್ನು ವಿವರಿಸಿಲ್ಲ, ಏಕೆಂದರೆ ಅದು ನಿತ್ಯ; ಆದ್ದರಿಂದ ಈ ಸಂವಾದವನ್ನು ತಾನೇ ಕಲ್ಪಿಸಿದೆ ಎಂದು ಭಾವ.

5 ಶ್ರುತಿರೂಪದಿಂದಲೇ ಎಂದರ್ಥ.

ತ್ತಿದೆ. ಹೇಗೆ(ಂದು ಹೇಳಿದನು) ? ಎಂದರೆ, 'ನೀನು ಹೀಗೆ (ನನ್ನನ್ನು) ವಿಮುಕ್ತನಾಗಿ ಮಾಡಿರುವೆಯಷ್ಟೆ, ಆ ನಾನು ಭಗವಂತನಾದ ನಿನಗೆ ವಿದ್ಯೆಯ ನಿಷ್ಕ್ರಯಕ್ಕಾಗಿ (ಗೋ)ಸಹಸ್ರವನ್ನು ಕೊಡುತ್ತಿದೇನೆ- ಎಂದಿಂತು ಜನಕ ವೈದೇಹನು ಎಂದನು, ಎಂದು ಹೇಳಿದನು.

## ಚರ್ಚೆ : ಮೋಕ್ಷವನ್ನು ಹೇಳಿದಾಗಲೆ ಜನಕನು ಸರ್ವಸ್ವವನ್ನೂ ಕೊಡಲಿಲ್ಲವೇಕೆ ?

### ಕೆಲವರ ಅಭಿಪ್ರಾಯ : ಜನಕನಿಗೆ ಇನ್ನೂ ಶ್ರವಣೇಚ್ಛೆಯಿದೆ

(ಭಾಷ್ಯ)

೨೮೦. ಅತ್ರ ಕಸ್ಮಾದ್ ವಿಮೋಕ್ಷಪದಾರ್ಥೇ ನಿರ್ಣೀತೇ ವಿದೇಹರಾಜ್ಯಮ್ ಆತ್ಮಾನಮೇವ ಚ ನ ನಿವೇದಯತಿ, ಏಕದೇಶೋಕ್ತಾವಿವ ಸಹಸ್ರಮೇವ ದದಾತಿ ? ತತ್ರ ಕೋಽಭಿಪ್ರಾಯ ಇತಿ ? ಅತ್ರ ಕೇಚಿತ್ ವರ್ಣಯನ್ತಿ । ಅಧ್ಯಾತ್ಮವಿದ್ಯಾರಸಿಕೋ ಜನಕಃ ಶ್ರುತಮಪಿ ಅರ್ಥಂ ಪುನರ್ಮನ್ತ್ರೈಃ ಶುಶ್ರೂಷತಿ । ಅತೋ ನ ಸರ್ವಮೇವ ನಿವೇದಯತಿ । ಶ್ರುತ್ವಾ ಅಭಿಪ್ರೇತಂ ಯಾಜ್ಞವಲ್ಕ್ಯಾತ್ ಪುನಃ ಅನ್ತೇ ನಿವೇದಯಿಷ್ಯಾಮಿ ಇತಿ ಹಿ ಮನ್ಯತೇ । ಯದಿ ಚ ಅತ್ರೈವ ಸರ್ವಂ ನಿವೇದಯಾಮಿ ನಿವೃತ್ತಾಭಿಲಾಷೋಽಯಂ ಶ್ರವಣಾತ್ ಇತಿ ಮತ್ವಾ ಶ್ಲೋಕಾನ್ ನ ವಕ್ಷ್ಯತಿ ಇತಿ ಚ ಭಯಾತ್ ಸಹಸ್ರದಾನಂ ಶುಶ್ರೂಷಾಲಿಙ್ಗಜ್ಞಾಪನಾಯ ಇತಿ ॥

(ಭಾಷ್ಯಾರ್ಥ)

(ಪ್ರಶ್ನೆ) :- ಇಲ್ಲಿ ವಿಮೋಕ್ಷವೆಂಬ ಪದಾರ್ಥವನ್ನು ಗೊತ್ತುಪಡಿಸಿರುವಲ್ಲಿ ವಿದೇಹರಾಜ್ಯವನ್ನೂ ತನ್ನನ್ನುಕೂಡ ಏತಕ್ಕೆ ಒಪ್ಪಿಸಿರುವದಿಲ್ಲ ? ಒಂದು ಭಾಗವನ್ನು (ಯಾಜ್ಞವಲ್ಕ್ಯನು) ಹೇಳಿದ್ದರಲ್ಲಿ ಹೇಗೋ ಹಾಗೆ ಸಾವಿರ (ಗೋ) ಗಳನ್ನೇ ಕೊಟ್ಟಿರುತ್ತಾನೇಕೆ ? ಇಲ್ಲಿ (ಅವನ) ಅಭಿಪ್ರಾಯವೇನು ?

(ಕೆಲವರ ಉತ್ತರ):- ಇಲ್ಲಿ ಕೆಲವರು[1] ಹೇಳಿರುವದೇನೆಂದರೆ, ಅಧ್ಯಾತ್ಮವಿದ್ಯೆಯಲ್ಲಿ ರಸಿಕನಾಗಿರುವ ಜನಕನು (ತಾನು) ಶ್ರವಣಮಾಡಿರುವ ಅರ್ಥವನ್ನೂ ಮತ್ತೆ ಮಂತ್ರಗಳ (ರೂಪ)ದಿಂದ ಕೇಳಬಯಸಿರುತ್ತಾನೆ; ಆದ್ದರಿಂದ ಎಲ್ಲವನ್ನೂ ಒಪ್ಪಿಸಿಬಿಟ್ಟಿರುವದಿಲ್ಲ. ಯಾಜ್ಞವಲ್ಕ್ಯನಿಂದ (ತನ್ನ) ಅಭಿಪ್ರೇತ

1. ಇವರು ಯಾರೆಂಬುದು ಟೀಕೆಯಿಂದಲಾಗಲಿ ವಾರ್ತಿಕದಿಂದಲಾಗಲಿ ವ್ಯಕ್ತವಾಗಿಲ್ಲ. ಭರ್ತೃಪ್ರಪಂಚರಿಗಿಂತ ಇವರು ಬೇರೆಯವರಿರಬಹುದೆ ? -ಎಂಬುದು ವಿಚಾರಣೀಯವಾಗಿದೆ.

ವಾದ (ಮಂತ್ರ)ಗಳನ್ನು ಶ್ರವಣಮಾಡಿದ ಬಳಿಕ (ಎಲ್ಲವನ್ನೂ) ಒಪ್ಪಿಸಿಬಿಡುವೆನು[1] ಎಂದೇ (ಅವನ) ಮತವು. ಮತ್ತು ಇಲ್ಲಿಯೇ ಎಲ್ಲವನ್ನೂ ಒಪ್ಪಿಸಿಬಿಡುವೆನಾದರೆ ಇವನಿಗೆ ಶ್ರವಣದ ಅಭಿಲಾಷೆಯು ಹೋಗಿಬಿಟ್ಟಿದೆ ಎಂದು ಭಾವಿಸಿ ಶ್ಲೋಕಗಳನ್ನು ಹೇಳದೆ ಇರಬಹುದು ಎಂಬ ಅಂಜಿಕೆಯಿಂದಲೂ ಶ್ರವಣೇಚ್ಛೆಯ ಗುರುತನ್ನು ತಿಳಿಸುವದಕ್ಕಾಗಿ ಸಾವಿರ (ಗೋಗಳ) ದಾನ(ವನ್ನು ಮಾತ್ರ ಮಾಡಿರುತ್ತಾನೆ) ಎಂದು (ಅವರ ಮತ).

## ಸಿದ್ಧಾಂತ: ಆತ್ಮಜ್ಞಾನಾಂಗವಾದ ಸಂನ್ಯಾಸವನ್ನು ಹೇಳತಕ್ಕದ್ದಿದೆ

(ಭಾಷ್ಯ)

೨೮೧. ಸರ್ವಮಪ್ಯೇತತ್ ಅಸತ್ । ಪುರುಷಸ್ಯೇವ ಪ್ರಮಾಣಭೂತಾಯಾಃ ಶ್ರುತೇಃ ವ್ಯಾಜಾನುಪಪತ್ತೇಃ । ಅರ್ಥಶೇಷೋಪಪತ್ತೇಶ್ಚ । ವಿಮೋಕ್ಷಪದಾರ್ಥೇ ಉಕ್ತೇಽಪಿ ಆತ್ಮಜ್ಞಾನಸಾಧನೇ, ಆತ್ಮಜ್ಞಾನಶೇಷಭೂತಃ ಸರ್ವೈಷಣಾಪರಿತ್ಯಾಗಃ ಸಂನ್ಯಾಸಾಖ್ಯೋ ವಕ್ತವ್ಯಃ ಅರ್ಥಶೇಷೋ ವಿದ್ಯತೇ । ತಸ್ಮಾತ್ ಶ್ಲೋಕಮಾತ್ರಶುಶ್ರೂಷಾಕಲ್ಪನಾ ಅನೃಜ್ವೀ । ಅಗತಿಕಾ ಹಿ ಗತಿಃ ಪುನರುಕ್ತಾರ್ಥಕಲ್ಪನಾ । ಸಾ ಚ ಅಯುಕ್ತಾ ಸತ್ಯಾಂ ಗತೌ । ನ ಚ ತತ್ ಸ್ತುತಿಮಾತ್ರಮ್ ಇತ್ಯವೋಚಾಮ । ನನು ಏವಂ ಸತಿ "ಅತ ಊರ್ಧ್ವಂ ವಿಮೋಕ್ಷಾಯೈವ" ಇತಿ ವಕ್ತವ್ಯಮ್ । ನೈಷ ದೋಷಃ । ಆತ್ಮಜ್ಞಾನವತ್ ಅಪ್ರಯೋಜಕಃ ಸಂನ್ಯಾಸಃ ಪಕ್ಷೇ ಪ್ರತಿಪತ್ತಿಕರ್ಮವತ್ ಇತಿ ಹಿ ಮನ್ಯತೇ । "ಸಂನ್ಯಾಸೇನ ತನುಂ ತ್ಯಜೇತ್ ( ? ) ಇತಿ ಸ್ಮೃತೇಃ । ಸಾಧನತ್ವಪಕ್ಷೇಽಪಿ ನ 'ಅತ ಊರ್ಧ್ವಂ ವಿಮೋಕ್ಷಾಯೈವ' ಇತಿ ಪ್ರಶ್ನಮರ್ಹತಿ । ಮೋಕ್ಷಸಾಧನಭೂತಾತ್ಮಜ್ಞಾನಪರಿಪಾಕಾರ್ಥತ್ವಾತ್ ॥

(ಭಾಷ್ಯಾರ್ಥ)

ಇದೊಂದೂ ಸರಿಯಲ್ಲ. ಏಕೆಂದರೆ ಪ್ರಮಾಣವಾಗಿರುವ ಶ್ರುತಿಗೆ ಮನುಷ್ಯನಂತೆ (ಯಾವ) ಕಾಪಟ್ಯವೂ ಹೊಂದುವದಿಲ್ಲ.[2] (ಹೇಳತಕ್ಕದ್ದು) ಉಳಿದಿದೆ ಎಂಬುದೂ ಹೊಂದುತ್ತಿದೆಯಾದ್ದರಿಂದಲೂ (ಹೀಗೆಂದು ತಿಳಿಯಬೇಕು. ಇದರ ವಿವರ) : ಆತ್ಮಜ್ಞಾನವೆಂಬ ಸಾಧನವುಳ್ಳ ವಿಮೋಕ್ಷಪದಾರ್ಥವನ್ನು ಹೇಳಿದ್ದರೂ ಆತ್ಮಜ್ಞಾನಕ್ಕೆ ಅಂಗವಾಗಿರುವ ಸಂನ್ಯಾಸವೆಂಬ ಸರ್ವೈಷಣಾ

1. ಮುಂದೆ ೩೩ನೆಯ ಶ್ಲೋಕದ ಕೊನೆಯಲ್ಲಿ ಒಪ್ಪಿಸುವನು.

2. ಮನುಷ್ಯರು ಮನಸ್ಸಿನೊಳಗೊಂದು ಇದ್ದರೂ ಅದನ್ನು ಮುಚ್ಚಿ ಹೊರಗೊಂದನ್ನು ಹೇಳಬಹುದು ; ಆದರೆ ಜನಕನನ್ನು ನೆಪಮಾಡಿಕೊಂಡು ಹೇಳುವ ಅಪೌರುಷೇಯಶ್ರುತಿಯು ಹೀಗೆ ಹೇಳಲಾರದು ಎಂದರ್ಥ.

ಪರಿತ್ಯಾಗವನ್ನು ಹೇಳಬೇಕಾದದ್ದಿದೆ; (ಆ) ವಿಷಯವು ಉಳಿದಿರುತ್ತದೆ[1] ಆದ್ದರಿಂದ ಬರಿಯ ಶ್ಲೋಕಗಳನ್ನು ಕೇಳಲಿಚ್ಛೆ(ಯಿರುವದರಿಂದ ಸರ್ವಸ್ವವನ್ನೂ ಕೊಡಲಿಲ್ಲ) ಎಂಬ ಕಲ್ಪನೆಯು ಸರಳವಾದದ್ದಲ್ಲ. ಏಕೆಂದರೆ ಮತ್ತೆ (ಆನೇ) ವಿಷಯವನ್ನು ಹೇಳಲಾಗಿದ ಎಂದು ಕಲ್ಪಿಸುವದು ಗತ್ಯಂತರವಿಲ್ಲದ ಗತಿಯಲ್ಲವೆ? ಆದರೆ ಗತ್ಯಂತರವಿರುವಲ್ಲಿ ಆ (ಕಲ್ಪನೆಯನ್ನು ಮಾಡುವದು) ಯುಕ್ತವಲ್ಲ. ಈ (ಸಂನ್ಯಾಸವನ್ನು ಹೇಳಿರುವದು) ಬರಿಯ ಸ್ತುತಿಯಲ್ಲ ಎಂದು (ಹಿಂದೆ)[2] ಹೇಳಿಯೇ ಇರುತ್ತೇವೆ.[3]

(ಆಕ್ಷೇಪ) :– ಹೀಗಾದರೆ 'ಇನ್ನು ಮೇಲೆ ವಿಮೋಕ್ಷಕ್ಕಾಗಿಯೇ (ಹೇಳು) !' ಎಂದು ಕೇಳಬೇಕಲ್ಲ[4] !

(ಪರಿಹಾರ) :– ಇದು ತಪ್ಪಲ್ಲ. ಆತ್ಮಜ್ಞಾನದಂತೆ ಸಂನ್ಯಾಸವು (ಮೋಕ್ಷಕ್ಕೆ) ಪ್ರಯೋಜಕವಲ್ಲ[5], (ಈ) ಪಕ್ಷದಲ್ಲಿ (ಅದು) ಪ್ರತಿಪತ್ತಿ ಕರ್ಮದಂತೆ (ಇದೆ)[6] ಎಂದೇ (ಜನಕನು) ಭಾವಿಸಿರುತ್ತಾನೆ. ಏಕೆಂದರೆ "ಸಂನ್ಯಾಸದಿಂದ ಶರೀರವನ್ನು ಬಿಡಬೇಕು" ( ? ) ಎಂದು

---

1. ಸಂನ್ಯಾಸವನ್ನು ಹೇಳಿದೆಯಲ್ಲ! –ಎಂದು ಆಕ್ಷೇಪಿಸಿಕೊಂಡು ಶಮಾದಿಸಹಿತ ಸಂನ್ಯಾಸವನ್ನು ಹೇಳಬೇಕಾದದ್ದಿದೆ ಎಂಬರ್ಥವನ್ನು ಟೀಕೆಯಲ್ಲಿ ತೆಗೆದಿದೆ. ಸಂನ್ಯಾಸವನ್ನು ಹೇಳಿದರೆ ಅದಕ್ಕೆ ಬೇಕಾದ ಶಮಾದಿಗಳು ತಾನೇ ಬರುತ್ತವೆ ಎಂಬ ದೃಷ್ಟಿಯಿಂದ ಆಚಾರ್ಯರು ಇಲ್ಲಿ ವಿಷಯವನ್ನು ಎತ್ತಿ ಹೇಳಿಲ್ಲ ಇಲ್ಲಿ ಜ್ಞಾನಕ್ಕೆ ಬೇಕಾದ ಸಾಧನಗಳೆಲ್ಲವನ್ನೂ ಸಂಗ್ರಹಿಸಿ ಹೇಳಲಾಗಿದೆ ಎಂಬುದೇನೊ ನಿಜವೇ
2. ೩-೫-೧ ಭಾ ಭಾ. ಟಿಲರಲ್ಲಿ
3. ಶ್ಲೋಕದಲ್ಲಿ ಹಿಂದೆ ಹೇಳಿದ ವಿಷಯವನ್ನೇ ಹೇಳಿರುವದರಿಂದ ಅದಕ್ಕಾಗಿ ಜನಕನು ಸರ್ವಸ್ವದಾನವನ್ನು ಮಾಡಲಿಲ್ಲ ಎಂದು ಕಲ್ಪಿಸುವದು ಅಯುಕ್ತ –ಎಂದು ಹಿಂದೆ ಹೇಳಿತ್ತು. ಹಾಗಾದರೂ ವಿದ್ಯಾಸ್ತುತಿಗಾಗಿ ಸಂನ್ಯಾಸವನ್ನು ಹೇಳಿರಬಹುದಲ್ಲ! –ಎಂಬ ಶಂಕೆಗೆ ಸಮಾಧಾನವಿದು. ಅನುಷ್ಠೇಯವಾದದ್ದನ್ನು ಸ್ತುತಿಗಾಗಿ ಹೇಳಿದೆ ಎಂಬುದು ಯುಕ್ತವಲ್ಲ, ಇಲ್ಲಿ ಸಾಧನಗಳನ್ನೆಲ್ಲ ಹೇಳುವದೇ ಉದ್ದೇಶವೂ ಆಗಿದೆ.
4. ಏಕೆಂದರೆ ಇನ್ನೂ ಹೇಳತಕ್ಕದ್ದು ಉಳಿದದೆ; ಆದ್ದರಿಂದ ಅದನ್ನು ಕೇಳಬೇಕು.
5. ನೇರಾದ ಹೇತುವಲ್ಲ; ಜ್ಞಾನದಿಂದಲೇ ಮುಕ್ತಿಯಾಗುತ್ತದೆ, ಸಂನ್ಯಾಸವು ಜ್ಞಾನದ ಫಲ.
6. ಯಜಮಾನನು ಜಿಂಕೆಯ ಕೊಂಬಿನಿಂದ ತುರಿಸಿಕೊಳ್ಳಬೇಕು ಎಂದು ವಿಧಿ; ಆದಾದಮೇಲೆ ಅದನ್ನು ಚಾತ್ವಾಲವೆಂಬ ಗುಂಡಿಯಲ್ಲಿ ಹಾಕಿಬಿಡಬೇಕು ಎಂದು ವೇದದಲ್ಲಿದೆ. ಹೀಗೆ ಎಲ್ಲಿಯಾದರೂ ಹಾಕಿಬಿಡುವದು ತಾನೇ ಪ್ರಾಪ್ತವಾದದ್ದನ್ನು ಗುಂಡಿಯಲ್ಲಿ ಹಾಕಬೇಕೆಂದು ಹೇಳಿರುವ ಕರ್ಮವು ಪ್ರತಿಪತ್ತಿಕರ್ಮವು, ಆ ಕರ್ಮವು ಮತ್ತೆ ಏತಕ್ಕೂ ಸಾಧನವಾಗಿ ವಿಹಿಸಿದ್ದಲ್ಲ. ಇದರಂತೆ ಆತ್ಮಜ್ಞಾನದಿಂದಲೇ ಸಂನ್ಯಾಸವು ಪ್ರಾಪ್ತವಾಗಿದೆ.

**ಸ್ಮೃತಿಯಿದೆ.[1] (ಇದು) ಸಾಧನವೆಂಬ ಪಕ್ಷದಲ್ಲಿಯೂ (ಇದು) 'ಇನ್ನು ಮುಂದೆ ನಿನಗೆ ಮೋಕ್ಷಕ್ಕೇ ಹೇಳು!' ಎಂಬ ಪ್ರಶ್ನೆಗೆ ತಕ್ಕದ್ದಲ್ಲ. ಏಕೆಂದರೆ ಮೋಕ್ಷಕ್ಕೆ ಸಾಧನವಾಗಿರುವ ಆತ್ಮಜ್ಞಾನದ ಪರಿಪಾಕಕ್ಕಾಗಿ (ಮಾಡ ತಕ್ಕದ್ದಾಗಿದೆ).[2]**

## ಆತ್ಮಕಾಮನಾದ ಜ್ಞಾನಿಗೇ ಮೋಕ್ಷ

(ಉಪನಿಷತ್)

**ತದೇತೇ ಶ್ಲೋಕಾ ಭವನ್ತಿ —**

**ಅಣುಃ ಪನ್ಥಾ ವಿತತಃ ಪುರಾಣೋ**
**ಮಾಗ್ಂ ಸ್ಪೃಷ್ಟೋಽನುವಿತ್ತೋ ಮಯೈವ ।**
**ತೇನ ಧೀರಾ ಅಪಿಯನ್ತಿ ಬ್ರಹ್ಮವಿದಃ**
**ಸ್ವರ್ಗಂ ಲೋಕಮಿತ ಊರ್ಧ್ವಂ ವಿಮುಕ್ತಾಃ ॥ ೮ ॥**

೮. ಇಲ್ಲಿ ಈ ಶ್ಲೋಕಗಳಿರುತ್ತವೆ: ಅಣುವಾದ ವಿತತವಾದ ಪುರಾಣವಾದ ಮಾರ್ಗವು ನನ್ನನ್ನು ಮುಟ್ಟಿರುತ್ತದೆ, ನನ್ನಿಂದಲೇ ಅರಿಯಲ್ಪಟ್ಟಿರುತ್ತದೆ. ಆ (ಮಾರ್ಗ)ದಿಂದ ಧೀರರಾದ ಬ್ರಹ್ಮಜ್ಞಾನಿಗಳು ವಿಮುಕ್ತರಾಗಿ ಸ್ವರ್ಗಲೋಕವನ್ನು ಇನ್ನುಮೇಲೆ ಸೇರುವರು.

## ಬ್ರಹ್ಮವಿದ್ಯಾಫಲವು ತನಗೇ ಅನುಭವಕ್ಕೆ ಬರುತ್ತದೆ

(ಭಾಷ್ಯ)

೨೮೨. ಆತ್ಮಕಾಮಸ್ಯ[3] ಬ್ರಹ್ಮವಿದೋ ಮೋಕ್ಷಃ ಇತ್ಯೇತಸ್ಮಿನ್ ಅರ್ಥೇ ಮನ್ತ್ರಬ್ರಾಹ್ಮಣೋಕ್ತೇ ವಿಸ್ತರಪ್ರತಿಪಾದಕಾ ಏತೇ ಶ್ಲೋಕಾ ಭವನ್ತಿ । ಅಣುಃ ಸೂಕ್ಷ್ಮಃ ಪನ್ಥಾಃ । ದುರ್ವಿಜ್ಞೇಯತ್ವಾತ್ । ವಿತತಃ ವಿಸ್ತೀರ್ಣಃ । ವಿಸ್ಪಷ್ಟತರಣಹೇತುತ್ವಾದ್ವಾ 'ವಿತರಃ' ಇತಿ । ಪಾಠಾನ್ತರಾತ್[4] । ಮೋಕ್ಷಸಾಧನಃ

---

1. ಈ ಸ್ಮೃತಿ ಯಾವದೆಂಬುದು ತಿಳಿಯಲಿಲ್ಲ, ಸಂನ್ಯಾಸವು ಪ್ರತಿಪತ್ತಿಕರ್ಮದಂತೆಯೇ ಹೊರತು ಮೋಕ್ಷಕ್ಕಲ್ಲ ಎಂಬುದಕ್ಕೆ ಇದೂ ಪ್ರಮಾಣವೆಂದು ಭಾವ.

2. ಜ್ಞಾನವು ಪಕ್ವವಾಗಿ ಹುಟ್ಟುವದಕ್ಕೆ ಸಂನ್ಯಾಸವೂ ಅಂತರಂಗಸಾಧನ, ಆದ್ದರಿಂದ ವಿವಿದಿಷಾಸಂನ್ಯಾಸವು ಜ್ಞಾನಕ್ಕೇ ಹೊರತು ಮೋಕ್ಷಕ್ಕಲ್ಲ. ಈ ದೃಷ್ಟಿಯಿಂದಲೂ ಜನಕನು ಕೇಳಬೇಕಾದದ್ದಿಲ್ಲವೆಂದು ಭಾವ. ಜ್ಞಾನಪರಿಪಾಕದ ವಿಷಯಕ್ಕೆ ಗೀ. ಭಾ. ೧೮-೫೫ (ಭಾ. ಭಾ. ೫೩೬) ನೋಡಿ

3. ಆಪ್ತಕಾಮಸ್ಯ ಎಂಬ ಪಾಠವೂ ಉಂಟು.

4. ಅನುವಾದದ ಟಿಪ್ಪಣಿಯನ್ನು ನೋಡಿ.

ಜ್ಞಾನಮಾರ್ಗಃ। ಪುರಾಣಃ ಚಿರನ್ತನಃ । ನಿತ್ಯಶ್ರುತಿಪ್ರಕಾಶಿತತ್ವಾತ್। ನ ತಾರ್ಕಿಕಬುದ್ಧಿಪ್ರಭವಕುದೃಷ್ಟಿಮಾರ್ಗವತ್ ಅರ್ವಾಕ್ಕಾಲಿಕಃ। ಮಾಂ ಸ್ಪೃಷ್ಟಃ। ಮಯಾ ಲಬ್ಧಃ ಇತ್ಯರ್ಥಃ। ಯೋ ಹಿ ಯೇನ ಲಭ್ಯತೇ ಸ ತಂ ಸ್ಪೃಶತೀವ ಸಂಬಧ್ಯತೇ। ತೇನ ಅಯಂ ಬ್ರಹ್ಮವಿದ್ಯಾಲಕ್ಷಣಃ ಮೋಕ್ಷಮಾರ್ಗಃ ಮಯಾ ಲಬ್ಧತ್ವಾತ್ ಮಾಂ ಸ್ಪೃಷ್ಟಃ ಇತ್ಯುಚ್ಯತೇ। ನ ಕೇವಲಂ ಮಯಾ ಲಬ್ಧಃ, ಕಿಂ ತು ಅನುವಿತ್ತೋ ಮಯೈವ । ಅನುವೇದನಂ ನಾಮ ವಿದ್ಯಾಯಾಃ ಪರಿಪಾಕಾಪೇಕ್ಷಯಾ ಫಲಾವಸಾನತಾ ನಿಷ್ಠಾ, ಪ್ರಾಪ್ತಿಃ। ಭುಜೇರಿವ ತೃಪ್ತ್ಯವಸಾನತಾ। ಪೂರ್ವಂ ತು ಜ್ಞಾನಪ್ರಾಪ್ತಿಃ ಸಂಬನ್ಧಮಾತ್ರಮೇವ[1] ಇತಿ ವಿಶೇಷಃ। ಕಿಮ್ ಅಸಾವೇವ ಮನ್ತ್ರದೃಗೇಕಃ ಬ್ರಹ್ಮವಿದ್ಯಾಫಲಂ ಪ್ರಾಪ್ತಃ ನಾನ್ಯಃ ಪ್ರಾಪ್ತವಾನ್ ? ಯೇನ ಅನುವಿತ್ತೋ ಮಯೈವ ಇತ್ಯವಧಾರಯತಿ। ನೈಷ ದೋಷಃ। ಅಸ್ಯಾಃ ಫಲಮ್ ಆತ್ಮಸಾಕ್ಷಿಕಮ್ ಅನುತ್ತಮಮ್ ಇತಿ ಬ್ರಹ್ಮವಿದ್ಯಾಯಾಃ ಸ್ತುತಿಪರತ್ವಾತ್। ಏವಂ ಹಿ ಕೃತಾರ್ಥಾಭಿಮಾನಕರಮ್[2] ಆತ್ಮಪ್ರತ್ಯಯಸಾಕ್ಷಿಕಮ್ ಆತ್ಮಜ್ಞಾನಮ್ ಕಿಮತಃಪರಮ್ ಅನ್ಯತ್ ಸ್ಯಾತ್ ಇತಿ ಬ್ರಹ್ಮವಿದ್ಯಾಂ ಸ್ತೌತಿ। ನ ತು ಪುನರನ್ಯೋ ಬ್ರಹ್ಮವಿತ್ ತತ್ಫಲಂ ನ ಪ್ರಾಪ್ನೋತೀತಿ। "ತದ್ಯೋ ಯೋ ದೇವಾನಾಮ್" (೧-೪-೧೦) ಇತಿ ಸರ್ವಾರ್ಥಶ್ರುತೇಃ। ತದೇವ ಆಹ- ತೇನ ಬ್ರಹ್ಮವಿದ್ಯಾಮಾರ್ಗೇಣ ಧೀರಾಃ ಪ್ರಜ್ಞಾವನ್ತಃ। ಅನ್ಯೇಽಪಿ ಬ್ರಹ್ಮವಿದಃ ಇತ್ಯರ್ಥಃ।. ಅಪಿಯನ್ತಿ ಅಪಿಗಚ್ಛನ್ತಿ ಬ್ರಹ್ಮವಿದ್ಯಾಫಲಂ ಮೋಕ್ಷಂ ಸ್ವರ್ಗಂ ಲೋಕಮ್ । ಸ್ವರ್ಗಲೋಕಶಬ್ದಃ ತ್ರಿವಿಷ್ಟಪವಾಚ್ಯಪಿ ಸನ್ ಇಹ ಪ್ರಕರಣಾತ್ ಮೋಕ್ಷಾಭಿಧಾಯಕಃ। ಇತಃ ಅಸ್ಮಾತ್ ಶರೀರಪಾತಾದ್ ಊರ್ಧ್ವಂ ಜೀವನ್ತ ಏವ ವಿಮುಕ್ತಾಃ ಸನ್ತಃ॥

(ಭಾಷ್ಯಾರ್ಥ)

ಆತ್ಮಕಾಮನಾದ[3] ಬ್ರಹ್ಮಜ್ಞಾನಿಗೆ ಮೋಕ್ಷ(ವಾಗುವದು) ಎಂದು ಮಂತ್ರಬ್ರಾಹ್ಮಣಗಳಲ್ಲಿ ಹೇಳಿರುವ ಈ ವಿಷಯದಲ್ಲಿ ವಿಸ್ತರಿಸಿ ತಿಳಿಸುವದಕ್ಕೆ ಈ ಶ್ಲೋಕಗಳುಂಟು :

ಅಣುವಾದ ಎಂದರೆ ಸೂಕ್ಷ್ಮವಾದ, ಏಕೆಂದರೆ (ಇದು) ತಿಳಿಯುವದಕ್ಕೆ ಕಷ್ಟವಾದದ್ದು. ವಿತತವಾದ ಎಂದರೆ ಹರಡಿಕೊಂಡಿರುವ; ಅಥವಾ 'ವಿತರಃ'

---

1. ಜ್ಞಾನಪ್ರಾಪ್ತಿಸಂಬನ್ಧಮಾತ್ರಮೇವ—ಎಂಬ ಅಚ್ಚಿನ ಪಾಠವನ್ನು ತಿದ್ದಿ ಹೀಗೆ ಎರಡು ಪದಗಳಾಗಿ ವಿಂಗಡಿಸಿಕೊಂಡಿದೆ.

2. 'ಕೃತಾರ್ಥಾತ್ಮ' ಎಂಬಲ್ಲಿ ಆತ್ಮ ಹೆಚ್ಚು.

3 ಆಪ್ತಕಾಮನಾಗುವದಕ್ಕೆ ಆತ್ಮಕಾಮನಾಗಿ ಬೇಕೆಂದು ಶ್ರುತಿಯಲ್ಲಿ ಹೇಳಿದ್ದು[illegible] ಅನುಸರಿಸಿದೆ; ಆಪ್ತಕಾಮಃ ಎಂಬ ಪಾಠವಲ್ಲಂತೂ ಸ್ಪಷ್ಟವಾಗಿಯೇ ಇದೆ.

ಎಂಬ ಪಾಠವಿರುವದರಿಂದ ವಿಸ್ಪಷ್ಟವಾಗಿ ದಾಟುವದಕ್ಕೆ ಕಾರಣವಾಗಿರುವದರಿಂದ ವಿತರವಾದ ಎಂದೂ (ವ್ಯಾಖ್ಯಾನಮಾಡಬಹುದು).[1] ಪುರಾಣವಾದ ಎಂದರೆ ಹಳೆಯದಾದ ; ಏಕೆಂದರೆ (ಇದು) ನಿತ್ಯವಾದ ಶ್ರುತಿಯಿಂದ ಪ್ರಕಾಶಿತವಾದದ್ದು, ತಾರ್ಕಿಕರ ಬುದ್ಧಿ(ಮಾತ್ರ)ದಿಂದ ಹುಟ್ಟಿರುವ ಕುದೃಷ್ಟಿಯ[2] ಮಾರ್ಗಗಳಂತೆ ಈಚಿನ ಕಾಲದಲ್ಲಿ (ಪ್ರಕಾಶಿತವಾದದ್ದಲ್ಲ). (ಇಂಥ) ಮಾರ್ಗವು, ಮೋಕ್ಷಸಾಧನವಾದ ಜ್ಞಾನಮಾರ್ಗವು ನನ್ನನ್ನು ಮುಟ್ಟಿರುತ್ತದೆ, ನನಗೆ ಸಿಕ್ಕಿರುತ್ತದೆ ಎಂದರ್ಥ. ಯಾವದು ಯಾವನಿಗೆ ಸಿಕ್ಕಿರುತ್ತದೆಯೋ ಅದು ಅವನನ್ನು ಮುಟ್ಟುತ್ತದೆಯೋ ಎಂಬಂತೆ (ಅವನಿಗೆ) ಸಂಬದ್ಧವಾಗುತ್ತದೆ. ಆದ್ದರಿಂದ ಈ ಬ್ರಹ್ಮವಿದ್ಯಾಸ್ವರೂಪವಾದ ಮೋಕ್ಷಮಾರ್ಗವು ನನಗೆ ಸಿಕ್ಕಿರುವದರಿಂದ ನನ್ನನ್ನು ಮುಟ್ಟಿರುತ್ತದೆ ಎಂದಿರುತ್ತೇನೆ.

ನನಗೆ ಸಿಕ್ಕಿದೆ ಎಂಬುದಿಷ್ಟೇ ಅಲ್ಲ, ಮತ್ತೇನೆಂದರೆ ನನ್ನಿಂದಲೇ ಅರಿಯಲ್ಪಟ್ಟಿರುತ್ತದೆ. **ಅನುವೇದನವು ಎಂದರೆ ವಿದ್ಯೆಯು ಪರಿಪಾಕವಾದ್ದರಿಂದ ಫಲದಲ್ಲಿ ಕೊನೆಗಾಣುವದು, ನಿಷ್ಠೆಯು, ಪ್ರಾಪ್ತಿಯು; ಊಟವು ತೃಪ್ತಿಯಲ್ಲಿ ಕೊನೆಗಾಣುವಂತೆ(ಯೇ ಇದು). ಇದಕ್ಕೆ ಮೊದಲೋ ಎಂದರೆ ಜ್ಞಾನದ ಪ್ರಾಪ್ತಿ ಎಂದರೆ (ಜ್ಞಾನದ) ಬರಿಯ ಸಂಬಂಧವೇ.**[3]

(ಆಕ್ಷೇಪ) :- ಈ ಮಂತ್ರದ್ರಷ್ಟೃವಾದ (ಋಷಿ)ಯೊಬ್ಬನೇ ಬ್ರಹ್ಮವಿದ್ಯೆಯ ಫಲವನ್ನು ಪಡೆದನೆ, ಮತ್ತೊಬ್ಬನು ಪಡೆದುಕೊಳ್ಳಲಿಲ್ಲವೆ? 'ನನ್ನಿಂದಲೇ ಅರಿಯಲ್ಪಟ್ಟಿದೆ' ಎಂದು ಒತ್ತಿ ಹೇಳುತ್ತಿದಾನಲ್ಲ!

(ಪರಿಹಾರ) :- ಇದೇನೂ ತಪ್ಪಲ್ಲ ಏಕೆಂದರೆ ಇದರ ಫಲವು ಆತ್ಮಸಾಕ್ಷಿಕವಾದದ್ದು[4], (ಇದಕ್ಕಿಂತ) ಹೆಚ್ಚಿನದಿಲ್ಲ, ಎಂದು ಬ್ರಹ್ಮವಿದ್ಯೆಯನ್ನು

---

1. ಯಥಾಶ್ರುತವಾಗಿ ಕನ್ನಡಿಸಿದ್ದಿದು. 'ವಿಸ್ಪಷ್ಟತರಣಹೇತುರ್ವಾ, ವಿತರಃ ಇತಿ ಪಾಠಾನ್ತರಾತ್' ಎಂದಿದ್ದರೆ ಸರಳವಾಗಿ ಅನ್ವಯವಾಗುತ್ತಿತ್ತು.

2. ಮನು. ೧೨-೯೫ ಸೂಚನೆ.

3. ತನ್ನ ಅನುಭವರೂಪವಾದ ನಿಶ್ಚಯದಲ್ಲಿ ಕೊನೆಗಾಣುವದೇ ಜ್ಞಾನದ ನಿಷ್ಠೆ ; ಚಿತ್ತವಿಶುದ್ಧಿ, ಅಮಾನಿತ್ವಾದಿಗಳು, ಇವುಗಳಿಂದುಂಟಾದ ಜ್ಞಾನವು ಸರ್ವಕರ್ಮಸಂನ್ಯಾಸದಿಂದ ಪರಿಪಕ್ವವಾಗುವದು. ಗೀ. ಭಾ. ೧೮-೫೫ (ಭಾ. ಭಾ. ೫೬೬)ನ್ನು ನೋಡಿ. ಸಂನ್ಯಾಸವು ಜ್ಞಾನಪರಿಪಾಕಕ್ಕೆ ಅಂಗವೆಂದು ಇಲ್ಲಿಯೂ ಹಿಂದೆ ಭಾ. ಭಾ. ೨೮೧ರಲ್ಲಿ ಹೇಳಿದೆ. ಬರಿಯ ಜ್ಞಾನವು ಎಂದರೆ ಶಾಸ್ತ್ರಾಚಾರ್ಯರಿಂದ ಬಂದದ್ದು; ಇದು ತನ್ನ ಅನುಭವಕ್ಕೂ ಬಂದದ್ದು ಎಂದು ಭಾವ. ಅನುವೇದನ, ಸ್ವಸಂವೇದ್ಯತಾಪಾದನ -ಇವು ಪರ್ಯಾಯಗಳು, ಛಾಂ. ಭಾ. ೮-೭-೧ನ್ನು ನೋಡಿ.

4. ಆತ್ಮಸಾಕ್ಷಿಕ, ಆತ್ಮಪ್ರತ್ಯಯಿಕ -ಮುಂತಾದವುಗಳು ಸ್ವಾನುಭವಗಮ್ಯ ಎಂಬುದನ್ನು ತಿಳಿಸುವ ಶಬ್ದಗಳು. ಗೀ. ಭಾ. ೧೩-೩೪ (ಭಾ. ಭಾ. ೩೦೧)ನ್ನು ನೋಡಿ.

ಹೊಗಳುವದರಲ್ಲಿ (ಈ ವಾಕ್ಯಕ್ಕೆ) ತಾತ್ಪರ್ಯವಿದೆ. **ಹೀಗೆ ಆತ್ಮಜ್ಞಾನವು ಕೃತಾರ್ಥನೆಂಬ ಅಭಿಮಾನವನ್ನುಂಟುಮಾಡತಕ್ಕದ್ದು, ತನ್ನ ಅರಿವೇ (ಇದಕ್ಕೆ) ಸಾಕ್ಷಿ, ಇದಕ್ಕಿಂತಲೂ ಹೆಚ್ಚಿನದು ಮತ್ತೆ ಯಾವದಿದ್ದೀತು? –ಎಂದು ಬ್ರಹ್ಮವಿದ್ಯೆಯನ್ನು ಹೊಗಳಿರುತ್ತಾನೆ.** ಇಷ್ಟೇ ಹೊರತು ಮತ್ತೊಬ್ಬ ಬ್ರಹ್ಮಜ್ಞಾನಿಯು ಅದರ ಫಲವನ್ನು ಪಡೆದುಕೊಳ್ಳುವದಿಲ್ಲವೆಂದಿಲ್ಲ. ಏಕೆಂದರೆ "ಅಲ್ಲಿ ದೇವತೆಗಳಲ್ಲಿ ಯಾವಯಾವನು (ಅರಿತನೋ ಅವನೇ ಅದಾದನು)" (೧–೪–೧೦) ಎಂದು ಶ್ರುತಿಯಲ್ಲಿ ಎಲ್ಲರಿಗೂ (ಅದರ ಫಲವನ್ನು ಹೇಳಿರುತ್ತದೆ).

ಅದನ್ನೇ (ಶ್ರುತಿಯು) ಹೇಳುತ್ತಿದೆ: ಅದರಿಂದ, (ಆ) ಬ್ರಹ್ಮವಿದ್ಯಾ ಮಾರ್ಗದಿಂದ ಧೀರರು ಎಂದರೆ ಜ್ಞಾನವುಳ್ಳವರು, ಬೇರೆಯ ಬ್ರಹ್ಮಜ್ಞಾನಿಗಳೂ ಎಂದರ್ಥ. (ವಿಮುಕ್ತರಾಗಿ, ಎಂದರೆ) **ಬದುಕಿರುವಾಗಲೇ ವಿಮುಕ್ತ ರಾಗಿದ್ದವರೇ ಇನ್ನುಮೇಲೆ ಈ ಶರೀರವು ಬಿದ್ದ ಬಳಿಕ ಬ್ರಹ್ಮವಿದ್ಯೆಯ ಫಲವಾದ ಮೋಕ್ಷವೆಂಬ ಸ್ವರ್ಗಲೋಕವನ್ನು ಸೇರುವರು, ಸೇರಿ ಕೊಳ್ಳುವರು.**[1] ಸ್ವರ್ಗಲೋಕ ಎಂಬ ಶಬ್ದವು ಮೂರನೆಯ ಲೋಕ ವನ್ನು ಹೇಳುವ (ಶಬ್ದ)ವಾಗಿದ್ದರೂ ಇಲ್ಲಿ ಪ್ರಕರಣ(ವಶ)ದಿಂದ ಮೋಕ್ಷ ವಾಚಕವು.[2]

(ಉಪನಿಷತ್ತು)

**ತಸ್ಮಿಞ್ಛುಕ್ಲಮುತ ನೀಲಮಾಹುಃ ಪಿಙ್ಗಲಂ ಹರಿತಂ ಲೋಹಿತಂ ಚ ।**
**ಏಷ ಪನ್ಥಾ ಬ್ರಹ್ಮಣಾ ಹಾನುವಿತ್ತಸ್ತೇನೈತಿ ಬ್ರಹ್ಮವಿತ್**
**ಪುಣ್ಯಕೃತ್ತೈಜಸಶ್ಚ ॥ ೯ ॥**

೯. ಅದರ ವಿಷಯದಲ್ಲಿ ಬಿಳಿಯದೆಂದೂ ನೀಲವೆಂದೂ ಕಂದುಬಣ್ಣವೆಂದೂ ಹಸುರೆಂದೂ ಕೆಂಪೆಂದೂ ಹೇಳುವರು. ಈ ಮಾರ್ಗವು ಬ್ರಾಹ್ಮಣನಿಂದ ಅನುವಿತ್ತವಾಗಿರುತ್ತದೆ; ಬ್ರಹ್ಮ ಜ್ಞಾನಿಯೂ ಪುಣ್ಯವನ್ನು ಮಾಡಿದವನೂ ತೈಜಸನೂ ಈ (ಮಾರ್ಗ) ದಿಂದ ಹೋಗುತ್ತಾನೆ.

---

1. ಬ್ರಹ್ಮವೇ ಆಗಿದ್ದು, ಬ್ರಹ್ಮವನ್ನು ಸೇರಿಕೊಳ್ಳುವನು ಎಂದು ೪–೪–೬ರಲ್ಲಿ ಹೇಳಿದ್ದರ ಅಭಿಪ್ರಾಯವು ಇದು.

2. ಏಕೆಂದರೆ ಈ ಪ್ರಕರಣವು ಮೋಕ್ಷವನ್ನು ವರ್ಣಿಸುವದಕ್ಕೆಂದೇ ಬಂದಿದೆ, ಸ್ವರ್ಗವನ್ನಲ್ಲ.

# ಮೋಕ್ಷಮಾರ್ಗದ ವಿಷಯಕ್ಕೆ ಉಪಾಸಕರ ಮತಭೇದ

(ಭಾಷ್ಯ)

೫೮೩. ತಸ್ಮಿನ್ ಮೋಕ್ಷಸಾಧನಮಾರ್ಗೇ ವಿಪ್ರತಿಪತ್ತಿರ್ಮುಮುಕ್ಷೂಣಾಮ್। ಕಥಮ್ ? ತಸ್ಮಿನ್ ಶುಕ್ಲಂ ಶುದ್ಧಂ ವಿಮಲಮ್ ಆಹುಃ ಕೇಚಿನ್ಮುಮುಕ್ಷವಃ। ನೀಲಮನ್ಯೇ, ಪಿಙ್ಗಲಮನ್ಯೇ ಹರಿತಂ ಲೋಹಿತಂ ಚ ಯಥಾದರ್ಶನಮ್। ನಾಡ್ಯಸ್ತು ಏತಾಃ ಸುಷುಮ್ನಾದ್ಯಾಃ ಶ್ಲೇಷ್ಮಾದಿರಸಸಂಪೂರ್ಣಾಃ "ಶುಕ್ಲಸ್ಯ ನೀಲಸ್ಯ ಪಿಙ್ಗಲಸ್ಯ" (೪-೩-೨೦) ಇತ್ಯಾದ್ಯುಕ್ತತ್ವಾತ್। ಆದಿತ್ಯಂ ವಾ ಮೋಕ್ಷಮಾರ್ಗಮ್ ಏವಂವಿಧಂ ಮನ್ಯನ್ತೇ। "ಏಷ ಶುಕ್ಲ ಏಷ ನೀಲಃ" (ಛಾಂ. ೮-೬-೧) ಇತ್ಯಾದಿಶ್ರುತ್ಯನ್ತರಾತ್। ದರ್ಶನಮಾರ್ಗಸ್ಯ ಚ ಶುಕ್ಲಾದಿವರ್ಣಾಸಂಭವಾತ್। ಸರ್ವಥಾಽಪಿ ತು ಪ್ರಕೃತಾದ್ ಬ್ರಹ್ಮವಿದ್ಯಾಮಾರ್ಗಾತ್ ಅನ್ಯ ಏವ ಏತೇ ಶುಕ್ಲಾದಯಃ। ನನು ಶುಕ್ಲಃ ಶುದ್ಧೋಽದ್ವೈತಮಾರ್ಗಃ। ನ। ನೀಲಪೀತಾದಿ[1] ಶಬ್ದೈಃ ವರ್ಣವಾಚಕೈಃ ಸಹ ಅನುದ್ರವಣಾತ್। ಯಾನ್ ಶುಕ್ಲಾದೀನ್ ಯೋಗಿನಃ ಮೋಕ್ಷಪಥಾನ್ ಆಹುಃ ನ ತೇ ಮೋಕ್ಷಮಾರ್ಗಾಃ। ಸಂಸಾರವಿಷಯಾ ಏವ ಹಿ ತೇ। "ಚಕ್ಷುಷ್ಟೋ ವಾ ಮೂರ್ಧ್ನೋ ವಾಽನ್ಯೇಭ್ಯೋ ವಾ ಶರೀರದೇಶೇಭ್ಯಃ" (೪-೪-೨) ಇತಿ ಶರೀರದೇಶಾತ್ ನಿಃಸರಣಸಂಬನ್ಧಾತ್। ಬ್ರಹ್ಮಾದಿಲೋಕಪ್ರಾಪಕಾ ಹಿ ತೇ ॥

(ಭಾಷ್ಯಾರ್ಥ)

ಈ ಮೋಕ್ಷಸಾಧನಮಾರ್ಗದ (ವಿಷಯ)ದಲ್ಲಿ ಮುಮುಕ್ಷುಗಳಿಗೆ ವಿರುದ್ಧವಾದ ಅಭಿಪ್ರಾಯಗಳಿರುತ್ತವೆ. ಹೇಗೆಂದರೆ, ಅದರ ವಿಷಯದಲ್ಲಿ ಕೆಲವರು ಮುಮುಕ್ಷುಗಳು ಬಿಳಿಯದು, ಶುದ್ಧವಾದದ್ದು ನಿರ್ಮಲವಾದದ್ದು -ಎನ್ನುವರು, ಮತ್ತೆ ಕೆಲವರು ನೀಲವೆನ್ನುವರು, ಇನ್ನು ಕೆಲವರು ಕಂದುಬಣ್ಣದ್ದು (ಎನ್ನುವರು), ಹಸುರು, ಕೆಂಪು ಎಂದೂ ಅವರವರ ಉಪಾಸನೆಗನುಗುಣವಾಗಿ ಹೇಳುತ್ತಾರೆ.

ಆದರೆ ಇವು ಶ್ಲೇಷ್ಮವೇ ಮುಂತಾದ ರಸಗಳಿಂದ ತುಂಬಿರುವ ಸುಷುಮ್ನೆ ಮುಂತಾದ ನಾಡಿಗಳೇ; ಏಕೆಂದರೆ "ಬಿಳಿಯ, ನೀಲವಾದ, ಕಂದುಬಣ್ಣದ (ರಸದಿಂದ ತುಂಬಿದ)" (೪-೩-೨೦) ಎಂದು ಮುಂತಾಗಿ ಹಿಂದೆ ಹೇಳಿರುತ್ತದೆ.[2] ಅಥವಾ ಮೋಕ್ಷಮಾರ್ಗವಾಗಿರುವ ಸೂರ್ಯನನ್ನು ಇಂಥವನೆಂದು ತಿಳಿಯುತ್ತಾರೆ (ಎಂದಾದರೂ ವ್ಯಾಖ್ಯಾನಮಾಡಬಹುದು) ; ಏಕೆಂದರೆ "ಇವನೇ

1. ಇದು ಹರಿತಾದಿ ಎಂದಿರಬೇಕೆ? ಅನುವಾದದ ಟಿಪ್ಪಣಿಯನ್ನು ನೋಡಿ.

2. ಅದ್ದರಿಂದ ನಾಡಿಯಿಂದ ಉಪಾಸಕರು ಹೋಗುವ ಮಾರ್ಗಗಳಿವು ಎಂದು ಭಾವ.

ಬಿಳಿಯುವನು, ಇವನೇ ನೀಲನು " (೮-೬-೧) ಎಂದು ಮುಂತಾಗಿ ಬೇರೊಂದು ಶ್ರುತಿಯಿದೆ.[1] ಮತ್ತು ಜ್ಞಾನಮಾರ್ಗಕ್ಕೆ ಬಿಳಿಯುಬಣ್ಣವೇ ಮುಂತಾದದ್ದಿರುವದು ಸಂಭವಿಸುವದಿಲ್ಲ. ಹೇಗೇ ಆಗಲಿ[2] ಪ್ರಕೃತವಾಗಿರುವ ಬ್ರಹ್ಮವಿದ್ಯಾಮಾರ್ಗಕ್ಕಿಂತ ಈ ಶುಕ್ಲಾದಿ(ಮಾರ್ಗ)ಗಳು ಬೇರೆಯೇ (ಸರಿ).

(ಆಕ್ಷೇಪ) :- (ಇಲ್ಲಿ) ಬಿಳಿಯುದು ಎಂದರೆ ಶುದ್ಧವಾದ ಅದ್ವೈತ ಮಾರ್ಗವಲ್ಲವೆ ?

(ಪರಿಹಾರ) :- ಹಾಗಲ್ಲ. ಏಕೆಂದರೆ ನೀಲ, ಹಳದಿ -ಮುಂತಾದ ಬಣ್ಣವನ್ನು ಹೇಳುವ ಶಬ್ದಗಳೊಡನೆ ಇದನ್ನು ಹೇಳಿದೆ.[3]

ಶುಕ್ಲವೇ ಮುಂತಾದ ಮೋಕ್ಷಮಾರ್ಗಗಳೆಂದು ಯೋಗಿಗಳು[4] ಹೇಳುತ್ತಿರುವರಲ್ಲ, ಅವು ಮೋಕ್ಷಮಾರ್ಗಗಳಲ್ಲ ; ಅವು ಸಂಸಾರವಿಷಯದ (ಮಾರ್ಗ) ಗಳೇ (ಆಗಿರುತ್ತವೆ). ಏಕೆಂದರೆ "ಕಣ್ಣಿನಿಂದಲೋ, ನೆತ್ತಿಯಿಂದಲೋ, ಅಥವಾ ಬೇರೆಯ ಶರೀರಪ್ರದೇಶಗಳಿಂದಲೋ (ಹೊರಡುತ್ತಾನೆ)" (೪-೪-೨) ಎಂದು ಶರೀರದ ಅವಯವಗಳಿಂದ ಹೊರಡುವನೆಂದು (ಶರೀರ)ಸಂಬಂಧವನ್ನು ಹೇಳಿರುತ್ತದೆ[5], ಅವು ಬ್ರಹ್ಮ(ಲೋಕವೇ) ಮುಂತಾದ ಲೋಕಗಳನ್ನು ದೊರಕಿಸುವವಾಗಿರುತ್ತವಲ್ಲವೆ[6] ?

---

1. 'ಏಷ ಶುಕ್ಲಃ' ಎಂಬುದು ಛಾಂದೋಗ್ಯದಲ್ಲಿಲ್ಲ , ಲೇಖಕರ ಪ್ರಮಾದದಿಂದ ಈ ಮಾತು ಬಂದು ಸೇರಿದೆಯೋ ಅಥವಾ ಉಪಲಕ್ಷಣವೆಂದು ಆಚಾರ್ಯರು ಸೇರಿಸಿಕೊಂಡಿದ್ದಾರೋ ತಿಳಿಯಲಿಲ್ಲ.

2 ಈ ಎರಡರಲ್ಲಿ ಯಾವ ವ್ಯಾಖ್ಯಾನವನ್ನೇ ಹಿಡಿದರೂ.

3. ಆದ್ದರಿಂದ ಇದು ಶುಕ್ಲವರ್ಣದ ರಸದಿಂದ ಕೂಡಿದ ನಾಡಿಯನ್ನೇ ಹೇಳಬೇಕು ಎಂದರ್ಥ. 'ಪೀತಸ್ಯ' ಎಂಬುದು ಮೂಲದಲ್ಲಿಲ್ಲ ; ಹರಿತ ಎಂಬುದಕ್ಕೆ ಬರೆದವರ ಕೈತಪ್ಪಿನಿಂದ ಬಿದ್ದಿರಬಹುದೆ ?

4. ಉಪಾಸಕರು ಎಂದರ್ಥ.

5. ಪ್ರಕೃತಮಾರ್ಗದಲ್ಲಿ ಪ್ರಾಣಗಳು ಶರೀರವನ್ನು ಬಿಟ್ಟುಹೋಗುವದಿಲ್ಲ, ಇಲ್ಲಿಯೇ ಬ್ರಹ್ಮದಲ್ಲಿ ಸೇರಿಹೋಗುತ್ತವೆ ಎಂದಿದೆ. ಆದ್ದರಿಂದ ಶುಕ್ಲಾದಿಗಳು ಈ ಮಾರ್ಗಕ್ಕಿಂತ ಭಿನ್ನವೇ ಎಂದರ್ಥ. ಹಿಂದಿನ (೪-೪-೨) ಕಂಡಿಕೆಗೇ ಸಂಬಂಧಪಟ್ಟಿರುವದರಿಂದ ಭಾಷ್ಯದಲ್ಲಿ ಹೇಳಿರುವ ಯೋಗಿಗಳು ಉಪಾಸಕರೆಂಬುದು ಸ್ಪಷ್ಟ ; ಇಲ್ಲಿ ಯೋಗತಂತ್ರದ ಪರಾಮರ್ಶವೇನೂ ಇಲ್ಲ.

6. ಯಾವ ಲೋಕಕ್ಕೆ ಹೋಗಬೇಕೋ ಅದಕ್ಕನುಗುಣವಾದ ಅವಯವದಿಂದ ಉತ್ಕ್ರಾಂತನಾಗಿ ಹೋಗುತ್ತಾನೆ. ನೆತ್ತಿಯಿಂದ ಹೋಗುವವನು ಬ್ರಹ್ಮಲೋಕಕ್ಕೆ ಹೋಗುತ್ತಾನೆ ಎಂದು ೪-೪-೨ರ ಭಾಷ್ಯದಲ್ಲಿ ವಿವರಿಸಿದೆ. ಶರೀರವನ್ನು ಬಿಡುವದು, ಆಯಾ ಲೋಕಕ್ಕೆ ಹೋಗುವದು- ಎಂಬ ರೂಪದ ಗತಿಗೆ ಶುಕ್ಲಾದಿಗಳು ಮಾರ್ಗಗಳೇ ಹೊರತು ಪ್ರಕೃತವಾದ ಮೋಕ್ಷಕ್ಕಲ್ಲ ಎಂದರ್ಥ.

# ಜ್ಞಾನಮಾರ್ಗದಿಂದಲೇ ಮೋಕ್ಷ

(ಭಾಷ್ಯ)

೨೮೪ ತಸ್ಮಾತ್ ಅಯಮೇವ ಮೋಕ್ಷಮಾರ್ಗಃ, ಯ ಆತ್ಮಕಾಮತ್ವೇನ ಆಪ್ತಕಾಮತಯಾ ಸರ್ವಕಾಮಕ್ಷಯೇ ಗಮನಾನುಪಪತ್ತೌ ಪ್ರದೀಪನಿರ್ವಾಣವತ್ ಚಕ್ಷುರಾದೀನಾಂ ಕಾರ್ಯಕರಣಾನಾಮ್ ಅತ್ರೈವ ಸಮವನಯಃ ಇತಿ ಏಷ ಜ್ಞಾನಮಾರ್ಗಃ ಪನ್ಥಾಃ ಬ್ರಹ್ಮಣಾ ಪರಮಾತ್ಮಸ್ವರೂಪೇಣೈವ ಬ್ರಾಹ್ಮಣೇನ ತ್ಯಕ್ತಸರ್ವೈಷಣೇನ ಅನುವಿತ್ತಃ। ತೇನ ಬ್ರಹ್ಮವಿದ್ಯಾಮಾರ್ಗೇಣ ಬ್ರಹ್ಮವಿತ್ ಅನ್ಯೋಽಪಿ ಏತಿ। ಕೀದೃಶೋ ಬ್ರಹ್ಮವಿತ್ ತೇನೈತಿ ಇತಿ ? ಉಚ್ಯತೇ। ಪೂರ್ವಂ ಪುಣ್ಯಕೃದ್ ಭೂತ್ವಾ ಪುನಸ್ತ್ಯಕ್ತಪುತ್ರಾದ್ಯೇಷಣಃ ಪರಮಾತ್ಮತೇಜಸಿ ಆತ್ಮಾನಂ ಸಂಯೋಜ್ಯ ತಸ್ಮಿನ್ ಅಭಿನಿರ್ವೃತ್ತಸ್ತೈಜಸಶ್ಚ। ಆತ್ಮಭೂತ ಇಹೈವ ಇತ್ಯರ್ಥಃ। ಈದೃಶೋ ಬ್ರಹ್ಮವಿತ್ ತೇನ ಮಾರ್ಗೇಣೈತಿ ॥

(ಭಾಷ್ಯಾರ್ಥ)

**ಆದ್ದರಿಂದ ಆತ್ಮಕಾಮನಾದ್ದರಿಂದ ಆಪ್ತಕಾಮನಾಗಿ ಸರ್ವಕಾಮಗಳೂ ಕ್ಷಯವಾಗಲು (ಎಲ್ಲಿಗೂ) ಹೋಗುವದೆಂಬುದು ಹೊಂದುವದಿಲ್ಲವಾದ್ದರಿಂದ[1] ದೀಪವು ಆರಿಹೋಗುವಂತೆ.[2] ಚಕ್ಷುಸ್ಸೇ ಮುಂತಾದ ಕಾರ್ಯಕರಣಗಳು ಇಲ್ಲಿಯೇ (ಬ್ರಹ್ಮದಲ್ಲಿ) ಸೇರಿಹೋಗುವದೆಂಬ ಇದೇ ಮೋಕ್ಷಮಾರ್ಗವು.**

ಈ ಜ್ಞಾನಮಾರ್ಗವೆಂಬ ದಾರಿಯು ಬ್ರಾಹ್ಮಣನಿಂದ ಎಂದರೆ ಎಲ್ಲಾ ಏಷಣೆಗಳನ್ನೂ ತ್ಯಾಗಮಾಡಿರುವ ಪರಮಾತ್ಮಸ್ವರೂಪನೇ ಆಗಿರುವ ಬ್ರಾಹ್ಮಣನಿಂದ[3] ಅರಿಯಲ್ಪಟ್ಟಿರುತ್ತದೆ. ಆ ಬ್ರಹ್ಮವಿದ್ಯಾಮಾರ್ಗದಿಂದ ಬೇರೆಯ ಬ್ರಹ್ಮಜ್ಞಾನಿಯೂ ಹೋಗುತ್ತಾನೆ.[4] ಎಂಥ ಬ್ರಹ್ಮಜ್ಞಾನಿಯು ಅದರಿಂದ ಹೋಗು

---

1. ಕಾಮಕರ್ಮಗಳಿಂದಲೇ ಜೀವನು ಮತ್ತೊಂದು ದೇಹಕ್ಕೆ ಹೋಗುತ್ತಾನೆ ; ಆದರೆ ಜ್ಞಾನಿಗೆ ಇಲ್ಲಿಯೇ ಅವು ಬ್ರಹ್ಮದಲ್ಲಿ ಒಂದಾಗಿಬಿಟ್ಟಿರುತ್ತವೆ.

2. ದೀಪವು ಆರಿಹೋದಾಗ ಅವ್ಯಕ್ತತೇಜಸ್ಸಿನಲ್ಲಿ ಸೇರಿಕೊಳ್ಳುವಂತೆ ಎಂದರ್ಥ. ಮುಂ. ಭಾ. ೩-೨-೬ (ಭಾ. ಭಾ. ೧೧೮) ನೋಡಿ.

3 ಮೂಲದಲ್ಲಿರುವ 'ಬ್ರಹ್ಮಣಾ' ಎಂಬ ಮಾತು ಬರಿಯ ಬ್ರಾಹ್ಮಣನನ್ನು ಹೇಳುವದಿಲ್ಲ, ಬ್ರಹ್ಮಾಭಿನ್ನನಾದ ಬ್ರಾಹ್ಮಣನನ್ನು ಹೇಳುತ್ತದೆ ಎಂದು ಭಾವ 'ಬ್ರಹ್ಮೈವ ಸನ್' ಎಂಬುದರ ಪರಾಮರ್ಶವಿದು.

4. ಹಿಂದಿನ ಕಂಡಿಕೆಯಲ್ಲಿ 'ಮಯ್ಯೈವ' ಎಂಬ ಮಾತಿಗೆ ನಾನೊಬ್ಬನೇ ಅರಿತೆನು ಎಂಬರ್ಥವಿಲ್ಲವೆಂಬುದಕ್ಕೆ ಇದೊಂದು ಲಿಂಗವೆಂದು ಭಾವ.

ತ್ತಾನೆ ? ಎಂದರೆ ಹೇಳಲಾಗುತ್ತದೆ **ಮೊದಲು ಪುಣ್ಯವನ್ನು ಮಾಡಿದವನಾಗಿ, ಆಮೇಲೆ ಪುತ್ರೈಷಣೆ ಮುಂತಾದ ಏಷಣೆಗಳನ್ನು ತ್ಯಾಗಮಾಡಿ, ಪರಮಾತ್ಮನೆಂಬ ತೇಜಸ್ಸಿನಲ್ಲಿ ತನ್ನನ್ನು ಸೇರಿಸಿಕೊಂಡು, ಅದರಲ್ಲಿಯೇ ಒಂದಾಗಿಬಿಟ್ಟು ತೈಜಸನಾಗಿರುತ್ತಾನಲ್ಲ,[1] ಇಲ್ಲಿಯೇ ಆತ್ಮನಾಗಿಬಿಟ್ಟಿರುವನಲ್ಲ ಎಂದರ್ಥ; ಇಂಥ ಬ್ರಹ್ಮಜ್ಞಾನಿಯು ಆ ಮಾರ್ಗದಿಂದ ಹೋಗುತ್ತಾನೆ.**[2]

## ಪುಣ್ಯವನ್ನು ಮಾಡಿದವನು ಎಂದರೆ ಹೇಗೆ?

(ಭಾಷ್ಯ)

ಇಹ ನ ಪುನಃ ಪುಣ್ಯಾದಿಸಮುಚ್ಚಯಕಾರಿಣೋ ಗ್ರಹಣಮ್ । ವಿರೋಧಾತ್ ಇತ್ಯವೋಚಾಮ । "ಅಪುಣ್ಯಪುಣ್ಯೋಪರಮೇ ಯಂ ಪುನರ್ಭವನಿರ್ಭಯಾಃ । ಶಾನ್ತಾಃ ಸಂನ್ಯಾಸಿನೋ ಯಾನ್ತಿ ತಸ್ಮೈ ಮೋಕ್ಷಾತ್ಮನೇ ನಮಃ ॥" (ಶಾ. ಧ. ೪೭-೫೫) ಇತಿ (ಚ) ಸ್ಮೃತೇಃ[3] "ತ್ಯಜ ಧರ್ಮಮಧರ್ಮಂ ಚ" (ಮೋ. ಧ. ೩೨೯-೪೦) ಇತ್ಯಾದಿಪುಣ್ಯಾಪುಣ್ಯತ್ಯಾಗೋಪದೇಶಾತ್ । "ನಿರಾಶಿಷಮನಾರಮ್ಭಂ ನಿರ್ನಮಸ್ಕಾರಮಸ್ತುತಿಮ್ । ಅಕ್ಷೀಣಂ ಕ್ಷೀಣಕರ್ಮಾಣಂ ತಂ ದೇವಾ ಬ್ರಾಹ್ಮಣಂ ವಿದುಃ" (ಮೋ. ಧ. ೨೬೩-೩೪) "ನೈತಾದೃಶಂ ಬ್ರಾಹ್ಮಣಸ್ಯಾಸ್ತಿ ವಿತ್ತಂ ಯಥೈಕತಾ ಸಮತಾ ಸತ್ಯತಾ ಚ । ಶೀಲಂ ಸ್ಥಿತಿರ್ದಣ್ಡನಿಧಾನಮಾರ್ಜವಂ ತತಸ್ತತಶ್ಚೋಪರಮಃ ಕ್ರಿಯಾಭ್ಯಃ ॥" (ಮೋ. ಧ. ೧೭೫-೩೭) ಇತ್ಯಾದಿಸ್ಮೃತಿಭ್ಯಶ್ಚ । ಉಪದೇಕ್ಷ್ಯತಿ ಚ ಇಹಾಪಿ ತು "ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ ನ ವರ್ಧತೇ ಕರ್ಮಣಾ ನೋ ಕನೀಯಾನ್" (೪-೪-೨೩) ಇತಿ ಕರ್ಮಪ್ರಯೋಜನಾಭಾವೇ ಹೇತುಮ್ ಉಕ್ತ್ವಾ "ತಸ್ಮಾದೇವಂವಿಚ್ಛಾನ್ತೋ ದಾನ್ತಃ" (೪-೪-೨೩) ಇತ್ಯಾದಿನಾ ಸರ್ವಕ್ರಿಯೋಪರಮಮ್ । ತಸ್ಮಾತ್ ಯಥಾವ್ಯಾಖ್ಯಾತಮೇವ ಪುಣ್ಯಕೃತ್ತ್ವಮ್ ॥

(ಭಾಷ್ಯಾರ್ಥ)

ಇಷ್ಟೇ ಹೊರತು ಪುಣ್ಯಾದೇ ಮುಂತಾದ (ಸಾಧನ)ಗಳನ್ನು ಸಮುಚ್ಚಯದಿಂದ ಮಾಡುವವನನ್ನು (ಇಲ್ಲಿ) ಗ್ರಹಿಸಬೇಕಾದದ್ದಿಲ್ಲ ; ಏಕೆಂದರೆ (ಜ್ಞಾನ

---

1. ತೈಜಸನೆಂದರೆ ಧ್ಯಾನಯೋಗಿಯಾದವನು ಎಂಬ ಮತ್ತೊಂದರ್ಥವನ್ನು ವಾರ್ತಿಕ ೫೮೧ರಲ್ಲಿ ಹೇಳಿದೆ.

2. ಬ್ರಹ್ಮವನ್ನು ಪಡೆಯುತ್ತಾನೆ ಎಂದರ್ಥ ; ಜ್ಞಾನದಿಂದ ಹೋಗುವದೆಂಬುದು ವಾಚ್ಯಾರ್ಥಗ್ರಹಣವನ್ನು ಮಾಡಿದರೆ ಆಗುವದಿಲ್ಲವಾದ್ದರಿಂದ ಹಿಂದೆ ಹೇಳಿದಂತೆ 'ಬ್ರಹ್ಮಾಪ್ಯೇತಿ' ಎಂಬುದು ಮುಂದೆ ದೇಹಗ್ರಹಣವಿಲ್ಲವೆಂಬುದನ್ನು ತಿಳಿಸಿರುವಂತೆ ಇಲ್ಲಿಯೂ ಬ್ರಹ್ಮವನ್ನು ಸೇರಿ ಅಲ್ಲಿಯೇ ಇದ್ದುಬಿಡುತ್ತಾನೆ ಎಂಬರ್ಥದಲ್ಲಿಯೇ 'ಹೋಗುತ್ತಾನೆ' ಎಂದಿದೆ ಎಂದು ತಿಳಿಯಬೇಕು.

3. 'ಇತಿ' ಎಂದಿಷ್ಟೇ ಇದ್ದರೂ ಸಾಕು.

ಕರ್ಮಗಳಿಗೆ) ವಿರೋಧವಿದೆ ಎಂದು ಹಿಂದೆ ಹೇಳಿರುತ್ತೇವೆ.[1] "ಅಪುಣ್ಯವೂ ಪುಣ್ಯವೂ ಇಲ್ಲವಾಗಲು ಯಾವಾತನನ್ನು ಪುನರ್ಜನ್ಮದ ಅಂಜಿಕೆಯಿಲ್ಲದ ಶಾಂತರಾದ ಸಂನ್ಯಾಸಿಗಳು ಪಡೆದುಕೊಳ್ಳುವರೋ ಆ ಮೋಕ್ಷಾತ್ಮನಿಗೆ ನಮಸ್ಕಾರ !" (ಮ.ಹ.ಭಾ.ಶಾ.ಧ ೪೭-೫೫) ಎಂದು ಸ್ಮೃತಿಯಿರುವದರಿಂದಲೂ "ಧರ್ಮವನ್ನೂ ಬಿಡು, ಅಧರ್ಮವನ್ನು ಬಿಡು" (ಮೋ ಧ ೩೨೯-೪೦) ಎಂದು ಮುಂತಾಗಿ ಪುಣ್ಯಪಾಪಗಳನ್ನು ತ್ಯಜಿಸಬೇಕೆಂದು ಉಪದೇಶಿಸಿರುವದರಿಂದಲೂ "ಯಾವನ ಆಶೆಯೂ ಇಲ್ಲದ, ಯಾವ ಕರ್ಮವೂ ಇಲ್ಲದ, ನಮಸ್ಕಾರವಿಲ್ಲದ, ಸ್ತುತಿಯಿಲ್ಲದ, ಕ್ಷೀಣನಾಗದಿರುವ, ಕರ್ಮಗಳು ಕ್ಷಯವಾಗಿರುವವನು (ಯಾವನೋ) ಅವನನ್ನೇ ದೇವತೆಗಳು ಬ್ರಾಹ್ಮಣನೆಂದು ತಿಳಿಯುತ್ತಾರೆ." (ಮೋ.ಧ. ೨೬೩-೩೪) "ಒಂಟಿಯಾಗಿರುವದು, (ಸರ್ವರಲ್ಲಿಯೂ) ಸಮಬುದ್ಧಿಯುಳ್ಳವನಾಗಿರುವದು, ಸತ್ಯವನ್ನು ನುಡಿಯುವದು, ಒಳ್ಳೆಯ ನಡತೆ, ಸ್ಥಿರಚಿತ್ತನಾಗಿರುವದು, ಹಿಂಸೆಮಾಡದೆ ಇರುವದು, ಸರಳತನ, ಕ್ರಿಯೆಗಳನ್ನು ಆಗಾಗಲೇ ಬಿಡುತ್ತಿರುವದು- ಇಂಥ ಧನವು ಬ್ರಾಹ್ಮಣನಿಗೆ ಮತ್ತೊಂದಿಲ್ಲ" (ಮೋ.ಧ. ೧೭೫-೩೭) ಮುಂತಾದ ಸ್ಮೃತಿಗಳಿಂದಲೂ (ಇದು ಸಿದ್ಧವಾಗುತ್ತದೆ).[2] ಇಲ್ಲಿಯೂ "ಇದೇ ಬ್ರಾಹ್ಮಣನ ನಿತ್ಯವಾದ ಮಹಿಮೆಯು ; (ಇದು) ಕರ್ಮದಿಂದ ಬೆಳೆಯುವದಿಲ್ಲ. ಕುಂದುವದೂ ಇಲ್ಲ (೪-೪-೨೩) ಎಂದು (ಇಲ್ಲಿ) ಕರ್ಮಕ್ಕೆ (ಯಾವ) ಪ್ರಯೋಜನವೂ ಇಲ್ಲವೆಂಬುದಕ್ಕೆ ಕಾರಣವನ್ನು ಹೇಳಿ "ಆದ್ದರಿಂದ ಹೀಗೆಂದರಿತವನು ಶಾಂತನೂ ದಾಂತನೂ (ಆಗಿ ತನ್ನಲ್ಲಿಯೇ ಆತ್ಮನನ್ನು ಕಂಡುಕೊಳ್ಳುವನು)" (೪-೪-೨೩) ಎಂದು ಮುಂತಾದ (ವಚನದಿಂದ) ಎಲ್ಲಾ ಕ್ರಿಯೆಗಳೂ ನಿಂತುಹೋಗುವವೆಂಬುದನ್ನು[3] ಮುಂದೆ ಉಪದೇಶಿಸಲಾಗುವದು. ಆದ್ದರಿಂದ (ನಾವು) ವ್ಯಾಖ್ಯಾನಮಾಡಿರುವಂತೆಯೇ ಪುಣ್ಯವನ್ನು ಮಾಡಿದವನು (ಎಂಬುದನ್ನು ತಿಳಿಯಬೇಕು).

## ಪುಣ್ಯಕೃತ್ ಎಂಬುದಕ್ಕೆ ವ್ಯಾಖ್ಯಾಂತರ

(ಭಾಷ್ಯ)

೨೮೬. ಅಥವಾ ಯೋ ಬ್ರಹ್ಮವಿತ್ ತೇನೈತಿ, ಸ ಪುಣ್ಯಕೃತ್ ತೈಜಸಶ್ಚ

1. ೩-೨-೧೮ ಅನತರಣಿಕೆಯ (ಭಾ.ಭಾ. ೧೬)ರಿಂದ ಇದು ವ್ಯಕ್ತವಾಗಿದೆ. ಇಲ್ಲಿ ಹೇಳಿರುವ ಸಮುಚ್ಚಯವಾದಿಗಳು ಭರ್ತೃಪ್ರಪಂಚರೊ, ಅಥವಾ ಬೇರೊಬ್ಬರೊ_ ಎಂಬುದು ವಾರ್ತಿಕದಲ್ಲಾಗಲಿ ಟೀಕೆಯಲ್ಲಾಗಲಿ ಸ್ಪಷ್ಟವಾಗಿಲ್ಲ

2. ಈ ಸ್ಮೃತಿಗಳು ಕರ್ಮಾಭಾವವನ್ನೇ ಹೇಳುತ್ತವೆ.

3. ಈ ವಾಕ್ಯದಲ್ಲಿ ಉಪರತಃ, ಎಲ್ಲಾ ಏಷಣೆಗಳನ್ನೂ ಬಿಟ್ಟಿರುವವನು ಎಂಬ ವಿಶೇಷಣವೂ ಇದೆ. ಏಷಣೆಯಿಲ್ಲದೆ ಯಾವ ಕರ್ಮವೂ ಇಲ್ಲವೆಂಬುದು ಸ್ಪಷ್ಟ.

**ಇತಿ ಬ್ರಹ್ಮವಿತ್ಸ್ತುತಿರೇಷಾ । ಪುಣ್ಯಕೃತಿ ತೈಜಸೇ ಚ ಯೋಗಿನಿ ಮಹಾಭಾಗ್ಯಂ ಪ್ರಸಿದ್ಧಂ ಲೋಕೇ । ತಾಭ್ಯಾಮ್ ಅತೋ ಬ್ರಹ್ಮವಿತ್ ಸ್ತೂಯತೇ । ಪ್ರಖ್ಯಾತ ಮಹಾಭಾಗ್ಯತ್ವಾತ್ ಲೋಕೇ ॥**

(**ಭಾಷ್ಯಾರ್ಥ**)

**ಅಥವಾ ಆ ಮಾರ್ಗದಿಂದ ಹೋಗುವವನಲ್ಲ, ಆ ಬ್ರಹ್ಮಜ್ಞಾನಿಯೇ ಪುಣ್ಯವನ್ನು ಮಾಡಿದವನೂ ತೈಜಸನೂ (ಆಗಿರುತ್ತಾನೆ) ಎಂದು ಬ್ರಹ್ಮಜ್ಞಾನಿಯ ಸ್ತುತಿಯಿದು (ಎಂದಾದರೂ ವ್ಯಾಖ್ಯಾನಮಾಡಬಹುದು). ಪುಣ್ಯವನ್ನು ಮಾಡಿದ (ಕರ್ಮಿ)ಯಲ್ಲಿಯೂ ತೈಜಸನಾದ ಯೋಗಿಯಲ್ಲಿಯೂ[1] ಮಹಾಭಾಗತ್ವವು ಲೋಕದಲ್ಲಿ ಪ್ರಸಿದ್ಧ(ವಾಗಿದೆ), ಅವರು ಮಹಾಭಾಗ್ಯವಂತರೆಂದು ಪ್ರಸಿದ್ಧರಾಗಿರುವದರಿಂದ ಅವರ (ಸ್ವರೂಪದವನೆಂಬು)ದರಿಂದ ಬ್ರಹ್ಮಜ್ಞಾನಿಯನ್ನು ಹೊಗಳಿದೆ.[2]**

## ಕರ್ಮಕಾಂಡದ ಫಲಕ್ಕಿಂತ ಮೋಕ್ಷವು ಹೆಚ್ಚಿನದು

(**ಉಪನಿಷತ್ತು**)

**ಅನ್ಧಂ ತಮಃ ಪ್ರವಿಶನ್ತಿ ಯೇಽವಿದ್ಯಾಮುಪಾಸತೇ ।**
**ತತೋ ಭೂಯ ಇವ ತೇ ತಮೋ ಯ ಉ ವಿದ್ಯಾಯಾಗ್ಂ ರತಾಃ ॥**

೧೦. ಯಾರು ಅವಿದ್ಯೆಯನ್ನು ಉಪಾಸನೆಮಾಡುತ್ತಾರೋ ಅವರು ಅಂಧಂತಮಸ್ಸನ್ನು ಹೊಗುವರು ; ಯಾರು ವಿದ್ಯೆಯಲ್ಲಿ ರತರಾಗಿರುವರೋ ಅವರು ಅದಕ್ಕಿಂತೆ ಇನ್ನೂ ಹೆಚ್ಚಿನದೇ ಆದ ತಮಸ್ಸನ್ನು (ಹೊಗುವರು).

## ಕರ್ಮವೇದವಿದ್ಯೆಗಳ ನಿಂದೆಯಿಂದ ಮೋಕ್ಷಸ್ತುತಿ

(**ಭಾಷ್ಯ**)

**೨೮೭ ಅನ್ಧಮ್ ಅದರ್ಶನಾತ್ಮಕಂ ತಮಃ ಸಂಸಾರನಿಯಾಮಕಂ ಪ್ರವಿಶನ್ತಿ ಪ್ರತಿಪದ್ಯನ್ತೇ । ಕೇ ? ಯೇ ಅವಿದ್ಯಾಂ ವಿದ್ಯಾತೋಽನ್ಯಾಂ**

---

**1. ತೇಜೋರೂಪವಾದ ಬ್ರಹ್ಮವನ್ನು ಉಪಾಸನೆಮಾಡಿ ಸಾಕ್ಷಾತ್ಕಾರಮಾಡಿಕೊಂಡವನಲ್ಲಿಯೂ ಎಂದರ್ಥ. ಹಿಂದಿನ ಕಂಡಿಕೆಯ ಭಾಷ್ಯದಲ್ಲಿರುವ ಯೋಗಶಬ್ದದಂತೆಯೇ ಇದನ್ನೂ ತಿಳಿಯಬೇಕು.**

**2. ಬ್ರಹ್ಮಜ್ಞಾನವನ್ನು ಯೋಗವೆಂದೂ ಯಜ್ಞವೆಂದೂ ತಪಸ್ಸೆಂದೂ ಗೀತೆಯಲ್ಲಿ ಹೊಗಳಿರುವದನ್ನು ಇಲ್ಲಿ ಮನದಂದುಕೊಳ್ಳಬಹುದು.**

ಸಾಧ್ಯಸಾಧನಲಕ್ಷಣಾಮ್ ಉಪಾಸತೇ ಕರ್ಮ ಅನುವರ್ತನ್ತೇ ಇತ್ಯರ್ಥಃ । ತತಃ ತಸ್ಮಾದಪಿ ಭೂಯ ಇವ ಬಹುತರಮಿವ ತಮಃ ಪ್ರವಿಶನ್ತಿ । ಕೇ ? ಯ ಉ ವಿದ್ಯಾಯಾಮ್ ಅವಿದ್ಯಾವಸ್ತುಪ್ರತಿಪಾದಿಕಾಯಾಂ ಕರ್ಮಾರ್ಥಾಯಾಂ ತ್ರಯ್ಯಾಮೇವ ವಿದ್ಯಾಯಾಂ ರತಾಃ ಅಭಿರತಾಃ । ವಿಧಿಪ್ರತಿಷೇಧಪರ ಏವ ವೇದೋ ನಾನ್ಯೋಽಸ್ತಿ ಇತಿ । ಉಪನಿಷದರ್ಥಾನಪೇಕ್ಷಿಣಃ ಇತ್ಯರ್ಥಃ ॥

(ಭಾಷ್ಯಾರ್ಥ)

ಅಂಧವಾದ ಅಜ್ಞಾನರೂಪವಾದ ಸಂಸಾರವನ್ನು ಗೊತ್ತಾಗಿ ನಿಲ್ಲಿಸುವ, ತಮಸ್ಸನ್ನು ಹೊಗುವರು. ಯಾರು ? ಎಂದರೆ ಯಾರು ಅವಿದ್ಯೆಯನ್ನು ಎಂದರೆ ವಿದ್ಯೆಗಿಂತ ಬೇರೆಯಾದ ಸಾಧ್ಯಸಾಧನರೂಪವಾದದ್ದನ್ನು ಉಪಾಸನೆ ಮಾಡುತ್ತಾರೋ, ಕರ್ಮವನ್ನೇ ಅನುಸರಿಸುತ್ತಾರೋ[1] (ಅವರು) ಎಂದರ್ಥ. ಮತ್ತು ಅದಕ್ಕಿಂತ ಆ (ತಮಸ್ಸಿ)ಗಿಂತಲೂ ಹೆಚ್ಚಿನದೇ ಆದ ಇನ್ನೂ ಬಹಳವಾದ ತಮಸ್ಸನ್ನು ಹೊಗುವರು. ಯಾರು ? ಎಂದರೆ ಯಾರು ವಿದ್ಯೆಯಲ್ಲಿಯೇ ಅವಿದ್ಯಾವಸ್ತುವನ್ನೇ ತಿಳಿಸುವ ಕರ್ಮಾರ್ಥವಾದ ತ್ರಯೀವಿದ್ಯೆಯಲ್ಲಿಯೇ ರತರಾಗಿರುವರೋ ಅಭಿರತರಾಗಿರುವರೋ (ಅವರು), ವಿಧಿನಿಷೇಧಪರವಾದದ್ದೇ ವೇದವು, ಮತ್ತೊಂದಿಲ್ಲ ಎಂದು ಉಪನಿಷತ್ತಿನ ವಸ್ತುವನ್ನು ಲೆಕ್ಕಿಸದೆ ಇರುವವರು[2] ಎಂದರ್ಥ.

## ಅಜ್ಞಾನದ ದುಷ್ಪರಿಣಾಮ

(ಉಪನಿಷತ್ತು)

**ಅನನ್ದಾ ನಾಮ ತೇ ಲೋಕಾ ಅನ್ಧೇನ ತಮಸಾಽಽವೃತಾಃ ।**
**ತಾಗ್ಂಸ್ತೇ ಪ್ರೇತ್ಯಾಭಿಗಚ್ಛನ್ತ್ಯವಿದ್ವಾಗ್ಂಸೋಽಬುಧೋ ಜನಾಃ ॥**

1. ಕರ್ಮವು ಕ್ರಿಯಾಕಾರಕಫಲರೂಪವಾದ ಅವಿದ್ಯೆಯ ಆಧಾರದಿಂದಲೇ ಹುಟ್ಟುವದರಿಂದ ಅದನ್ನು ಅವಿದ್ಯೆಯೆಂದಿದೆ ; ಅವಿದ್ಯೆಯಲ್ಲಿಯೇ ನಿಂತಿರುವವರಿಗೆ ಅವಿದ್ಯೆಯೇ ಫಲ. 'ಯೇ ಸಂಭೂತಿಮುಪಾಸತೇ' ಎಂಬ ಮಾಧ್ಯಂದಿನಪಾಠದ ಸಂಭೂತಿಗೂ ಅವಿದ್ಯೆಯೆಂದೇ ಅರ್ಥ, ಏಕೆಂದರೆ ಅವಿದ್ಯೆಯಿಂದಲೇ ಹುಟ್ಟು ಎಂದು ವಾರ್ತಿಕ ೬೦೧.

2. 'ವೇದವೆಂದರೆ ಪುರುಷಾರ್ಥಕ್ಕೆ ಸಾಧನವು ; ಅಭ್ಯುದಯರೂಪವಾದ ಸ್ವರ್ಗಾದಿಗಳನ್ನು ತಿಳಿಸುವ ಕರ್ಮಕಾಂಡವೇ ವೇದವು, ಆತ್ಮವಸ್ತುಪ್ರತಿಪಾದಕವಾದದ್ದು ಅರ್ಥವಾದವೇ' ಎಂದು ಉಪನಿಷದ್ವಿದ್ಯೆಯನ್ನು ಕಡೆಗಣಿಸಿ ಕರ್ಮಕಾಂಡವಿದ್ಯೆಯಲ್ಲಿಯೇ ನಿಂತಿರುವವರಿಗೆ ಎಂದಿಗೂ ಮೋಕ್ಷವಿಲ್ಲ ; ಅದ್ದರಿಂದ ಅವರು ಹೆಚ್ಚಿನ ಅಂಧತಮಸ್ಸನ್ನು ಹೊಗುವರು ಎಂದಿದೆ. ಇಲ್ಲಿ ನಿಂದೆಯಲ್ಲಿ ತಾತ್ಪರ್ಯವಿಲ್ಲ ; ಮೋಕ್ಷವು ಅಂಧತಮಸ್ಸಿನಿಂದ ಬೇರೆಯಾಗಿದ್ದು ನಿತ್ಯಪ್ರಕಾಶವಾದ ಜ್ಯೋತೀರೂಪವಾದದ್ದು ಎಂದು ಅದನ್ನು ಹೊಗಳುವದೇ ಕಂಡಿಕೆಯ ಉದ್ದೇಶ.

೧೧. ಅವಿದ್ವಾಂಸರೂ ಅಬುಧರೂ ಆದ ಜನರು (ಇಲ್ಲಿಂದ) ಹೋಗಿ ಅನಂದವೆಂಬ ಅಂಧತಮಸ್ಸಿನಿಂದ ಆವೃತವಾಗಿರುವ ಆ ಲೋಕಗಳನ್ನು ಪಡೆಯುವರು.

## ಅವಿದ್ಯೆಯಿಂದ ಪರಮಾನಂದವು ದೊರಕದು

(ಭಾಷ್ಯ)

**೨೮೮.** ಯದಿ ತೇ ಅದರ್ಶನಲಕ್ಷಣಂ ತಮಃ ಪ್ರವಿಶನ್ತಿ ಕೋ ದೋಷಃ ಇತಿ ? ಉಚ್ಯತೇ । ಅನನ್ದಾಃ ಅನಾನನ್ದಾಃ ಅಸುಖಂ ನಾಮ ತೇ ಲೋಕಾಃ ತೇನ ಅನ್ಧೇನ ಅದರ್ಶನಲಕ್ಷಣೇನ ತಮಸಾ ಆವೃತಾಃ ವ್ಯಾಪ್ತಾಃ ತೇ ತಸ್ಯ ಅಜ್ಞಾನತಮಸೋ ಗೋಚರಾಃ । ತಾನ್ ತೇ ಪ್ರೇತ್ಯ ಮೃತ್ವಾ ಅಭಿಗಚ್ಛನ್ತಿ ಅಭಿಯಾನ್ತಿ । ಕೇ ? ಯೇ ಅವಿದ್ವಾಂಸಃ । ಕಿಂ ಸಾಮಾನ್ಯೇನ ಅವಿದ್ವತ್ತಾಮಾತ್ರೇಣ ? ನೇತ್ಯುಚ್ಯತೇ । ಅಬುಧಃ । ಬುಧೇಃ ಅವಗಮನಾರ್ಥಸ್ಯ ಧಾತೋಃ ಕ್ವಿಪ್ಪ್ರತ್ಯಯಾನ್ತಸ್ಯ ರೂಪಮ್ । ಆತ್ಮಾವಗಮವರ್ಜಿತಾಃ ಇತ್ಯರ್ಥಃ । ಜನಾಃ ಪ್ರಕೃತಾ[1] ಏವ । ಜನನಧರ್ಮಿಣೋ ವಾ ಇತ್ಯೇತತ್ ॥

(ಭಾಷ್ಯಾರ್ಥ)

ಅವರು ಅಜ್ಞಾನಸ್ವರೂಪವಾದ ತಮಸ್ಸನ್ನು ಹೊಗುವರಾದರೆ, ದೋಷವೇನು ? ಎಂದರೆ ಹೇಳುತ್ತಾನೆ. ಅನಂದ, ಅನಾನಂದ, ಅಸುಖ- ಎಂಬ ಆ ಲೋಕಗಳನ್ನು, ಆ ಅಂಧವಾದ ಅಜ್ಞಾನಸ್ವರೂಪವಾದ ತಮಸ್ಸಿನಿಂದ ಆವೃತವಾಗಿರುವ ಮುಚ್ಚಲ್ಪಟ್ಟಿರುವ (ಲೋಕಗಳನ್ನು), ಅವರು, ಆ ಅಜ್ಞಾನ ತಮಸ್ಸಿಗೆ ವಿಷಯರಾದವರು, ಅವನ್ನು ಅವರು (ಇಲ್ಲಿಂದ) ಹೋಗಿ, ಸತ್ತಮೇಲೆ ಪಡೆಯುವರು, ಸೇರುವರು. ಯಾರು ? ಎಂದರೆ ಯಾರು ಅವಿದ್ವಾಂಸರೋ. (ಅಜ್ಞಾನಿಗಳೋ ಅವರು). ಬರಿಯ ಅಜ್ಞಾನಮಾತ್ರದಿಂದ (ಆ ಲೋಕಗಳನ್ನು ಸೇರುವ)ರೇನು ? ಎಂದರೆ, ಹಾಗಲ್ಲ ಎನ್ನುತ್ತಾನೆ : ಅಬುಧರು. ಅರಿಯುವದೆಂಬರ್ಥದ ಬುಧ್ ಎಂಬ ಧಾತುವಿಗೆ ಕ್ವಿಪ್‌ಪ್ರತ್ಯಯವು ಕೊನೆಯಲ್ಲಿದ್ದು (ಅಬುಧಃ ಎಂಬ) ರೂಪ(ವಾಗಿದೆ). ಆತ್ಮಜ್ಞಾನವಿಲ್ಲದವರು ಎಂದರ್ಥ.[2] ಜನರು ಎಂದರೆ ಪ್ರಕೃತರಾದ (ಅಜ್ಞಾನಿಗಳೇ) ; ಅಥವಾ

---

1. ಪ್ರಾಕೃತಾ ಏವ ಎಂಬುದಕ್ಕಿಂತ ಈ ಪಾಠವೇ ಮೇಲು.

2. ಆತ್ಮನ ವಿಷಯದಲ್ಲಿ ತಪ್ಪಾಗಿ ತಿಳಿದುಕೊಂಡಿರುವವರು ಎಂದರ್ಥ. ಈ ಭಾ. ೩ (ಭಾ. ಭಾ. ೯)ನ್ನು ನೋಡಿ.

(ಜನರು ಎಂದರೆ) ಜನನವೆಂಬ ಧರ್ಮವುಳ್ಳವರು ಎಂದೂ (ವ್ಯಾಖ್ಯಾನ ಮಾಡಬಹುದು).[1]

## ಪರಮಾತ್ಮವಿಜ್ಞಾನದ ಫಲ

(ಉಪನಿಷತ್ತು)

**ಆತ್ಮಾನಂ ಚೇದ್ವಿಜಾನೀಯಾದಯಮಸ್ಮೀತಿ ಪೂರುಷಃ ।**
**ಕಿಮಿಚ್ಛನ್ ಕಸ್ಯ ಕಾಮಾಯ ಶರೀರಮನುಸಂಜ್ವರೇತ್ ॥ ೧೨ ॥**

೧೨. (ಇಗೋ) ಇವನೇ ನಾನು ಎಂದು ಪುರುಷನು ಆತ್ಮನನ್ನು ಅರಿತುಕೊಂಡನಾದರೆ, ಏನನ್ನು ಇಚ್ಛಿಸುವವನಾಗಿ, ಯಾರ ಕಾಮಕ್ಕಾಗಿ, ಶರೀರವನ್ನನುಸರಿಸಿ ಸಂಜ್ವರಿತನಾದಾನು ?

## ಆತ್ಮವಿಜ್ಞಾನದಿಂದ ಸರ್ವದುಃಖನಾಶ

(ಭಾಷ್ಯ)

೨೮೯ ಆತ್ಮಾನಂ ಸ್ವಂ ಪರಂ ಸರ್ವಪ್ರಾಣಿಮನೀಷಿತಜ್ಞಂ ಹೃತ್ಸ್ಥಮ್ ಅಶನಾಯಾದಿಧರ್ಮಾತೀತಂ ಚೇತ್ ಯದಿ ವಿಜಾನೀಯಾತ್ ಸಹಸ್ರೇಷು ಕಶ್ಚಿತ್ । 'ಚೇತ್' ಇತಿ ಆತ್ಮವಿದ್ಯಾಯಾ ದುರ್ಲಭತ್ವಂ ದರ್ಶಯತಿ । ಕಥಮ್ ಅಯಂ ಪರಃ ಆತ್ಮಾ ಸರ್ವಪ್ರಾಣಿಪ್ರತ್ಯಯಸಾಕ್ಷೀ ಯೋ ನೇತಿ ನೇತಿ ಇತ್ಯಾದ್ಯುಕ್ತೋ ಯಸ್ಮಾನ್ನಾನ್ಯೋಽಸ್ತಿ ದ್ರಷ್ಟಾ ಶ್ರೋತಾ ಮನ್ತಾ ವಿಜ್ಞಾತಾ ಸಮಃ ಸರ್ವಭೂತಸ್ಥಃ ನಿತ್ಯಶುದ್ಧಬುದ್ಧಮುಕ್ತಸ್ವಭಾವಃ ಅಸ್ಮಿ ಭವಾಮಿ ಇತಿ। ಪೂರುಷಃ ಪುರುಷಃ। ಸ ಕಿಮ್ ಇಚ್ಛನ್ ತತ್ಸ್ವರೂಪವ್ಯತಿರಿಕ್ತಮ್ ಅನ್ಯದ್ ವಸ್ತು ಫಲಭೂತಂ ಕಿಮಿಚ್ಛನ್ । ಕಸ್ಯ ವಾ ಅನ್ಯಸ್ಯ ಆತ್ಮನೋ ವ್ಯತಿರಿಕ್ತಸ್ಯ ಕಾಮಾಯ ಪ್ರಯೋಜನಾಯ । ನ ಹಿ ತಸ್ಯ ಆತ್ಮನ ಏಷ್ಟವ್ಯಂ ಫಲಮ್ । ನ ಚಾಪಿ ಆತ್ಮನೋಽನ್ಯೋಽಸ್ತಿ ಯಸ್ಯ ಕಾಮಾಯ ಇಚ್ಛತಿ । ಸರ್ವಸ್ಯ ಆತ್ಮಭೂತತ್ವಾತ್ । ಅತಃ ಕಿಮಿಚ್ಛನ್ ಕಸ್ಯ ಕಾಮಾಯ ಶರೀರಮ್ ಅನುಸಂಜ್ವರೇತ್ ಭ್ರಂಶೇತ್ ? ಶರೀರೋಪಾಧಿಕೃತದುಃಖಮ್ ಅನು ದುಃಖೀ ಸ್ಯಾತ್ । ಶರೀರತಾಪಮ್ ಅನುತಪ್ಯೇತ । ಅನಾತ್ಮದರ್ಶಿನೋ ಹಿ ತದ್ವ್ಯತಿರಿಕ್ತವಸ್ತ್ವನ್ತ

---

1 ಜನರು ಎಂಬ ಸಾಮಾನ್ಯವಾಚಕಕ್ಕೆ ಪ್ರಕರಣಬಲದಿಂದ ವಿಶೇಷಾರ್ಥದಲ್ಲಿ ಪರ್ಯವಸಾನವೆಂದು ಮೊದಲನೆಯ ವ್ಯಾಖ್ಯಾನ; ಜನೀ ಪ್ರಾದುರ್ಭಾವೇ ಎಂಬ ಧಾತುವಿನಿಂದ ಈ ಶಬ್ದಕ್ಕೆ ವ್ಯುತ್ಪತ್ತಿಯನ್ನು ಹೇಳಿದರೆ ಅಜ್ಞಾನಿಗಳೆಂಬರ್ಥವು ಬರುವನೆಂದು ಎರಡನೆಯ ವ್ಯಾಖ್ಯಾನ.

ರೇಪ್ಸೋಃ[1] । ಮಮೇದಂ ಸ್ಯಾತ್, ಪುತ್ರಸ್ಯೇದಮ್, ಭಾರ್ಯಾಯಾ ಇದಮ್ ಇತ್ಯೇವಮ್ ಈಹಮಾನಃ ಪುನಃ ಪುನಃ ಜನನಮರಣಪ್ರಬನ್ಧಾರೂಢ ಶರೀರರೋಗಮನುರುಜ್ಯತೇ । ಸರ್ವಾತ್ಮದರ್ಶಿನಸ್ತು ತದಸಂಭವಃ ಇತ್ಯೇತದಾಹ ॥

(ಭಾಷ್ಯಾರ್ಥ)

ತನ್ನ ಆತ್ಮನನ್ನು, ಸರ್ವಪ್ರಾಣಿಗಳ ಮನಸ್ಸಿನ (ಯೋಚನೆ)ಯನ್ನೂ ಬಲ್ಲ, ಹೃದಯದಲ್ಲಿಯೇ ಇರುವ, ಹಸಿವು ಮುಂತಾದ ಧರ್ಮಗಳನ್ನು ಮೀರಿರುವ,[2] ಪರಮನಾದ (ಆತ್ಮನನ್ನು), ಸಾವಿರ (ಜನ)ರಲ್ಲಿ ಒಬ್ಬನು ಅರಿತುಕೊಂಡರೆ.[3] ಚೇತ್ (ರೆ) ಎಂಬುದು ಆತ್ಮಜ್ಞಾನವು ಸಿಕ್ಕುವದು ಕಷ್ಟ ಎಂಬುದನ್ನು ತಿಳಿಸುತ್ತದೆ. ಹೇಗೆ (ತಿಳಿದುಕೊಂಡರೆ) ? ಎಂದರೆ, ಈ ಸರ್ವಜೀವರ ಪ್ರತ್ಯಯಗಳಿಗೂ ಸಾಕ್ಷಿಯಾಗಿರುವ,[4] ನೇತಿ ನೇತಿ ಎಂದು ಮುಂತಾಗಿ ತಿಳಿಸಿದೆಯಲ್ಲ, ಅವನಿಗಿಂತ ಮತ್ತೊಬ್ಬ ದ್ರಷ್ಟೃವಾಗಲಿ ಶ್ರೋತೃವಾಗಲಿ ಮಂತೃವಾಗಲಿ ವಿಜ್ಞಾತೃವಾಗಲಿ ಇಲ್ಲ(ವೆಂದು ತಿಳಿಸಿದೆ)ಯಲ್ಲ, ಸಮನೂ, ಸರ್ವಪ್ರಾಣಿಗಳಲ್ಲಿಯೂ ಇರುವ ನಿತ್ಯಶುದ್ಧಬುದ್ಧಮುಕ್ತಸ್ವಭಾವನಾಗಿರುವನಲ್ಲ[5], (ಆ ಈ) ಪರಮಾತ್ಮನು (ಅಸ್ಮಿ= ಭವಾಮಿ) ನಾನಾಗಿರುವೆನು ಎಂದು (ಪೂರುಷಃ= ಪುರುಷಃ) ಪುರುಷನು (ತಿಳಿದುಕೊಂಡರೆ ಎಂದರ್ಥ). ಅವನು ಏನನ್ನು ಇಚ್ಛಿಸುವವನಾಗಿ—ಆ ಸ್ವರೂಪಕ್ಕಿಂತ ಬೇರೆಯಾಗಿರುವ ಮತ್ತೊಂದು ಫಲವಾಗಿರುವ ವಸ್ತು ಯಾವದನ್ನು ಇಚ್ಛಿಸುವವನಾಗಿ— ಅಥವಾ ತನಗಿಂತ ವ್ಯತಿರಿಕ್ತನಾದ ಯಾವನ ಕಾಮಕ್ಕಾಗಿ, ಪ್ರಯೋಜನಕ್ಕಾಗಿ (ಎಂದರ್ಥ). **ಏಕೆಂದರೆ ಆ ಆತ್ಮನಿಗೆ ಇಚ್ಛಿಸಬೇಕಾದ ಫಲವಿಲ್ಲ; ಆತ್ಮನಿಗಿಂತ ಬೇರೆಯಾಗಿ ಮತ್ತೊಬ್ಬನೂ ಇರುವದಿಲ್ಲ. ಹಾಗಿದ್ದರಲ್ಲವೆ, ಅವನ ಕಾಮಕ್ಕಾಗಿ ಇಚ್ಛಿಸುತ್ತಾನೆ ?**– ಏಕೆಂದರೆ ಎಲ್ಲವೂ ಆತ್ಮನಾಗಿಬಿಟ್ಟಿರುತ್ತದೆ. ಆದ್ದರಿಂದ ಏನನ್ನು ಇಚ್ಛಿಸುವವನಾಗಿ, ಯಾರ ಕಾಮಕ್ಕಾಗಿ, ಶರೀರವನ್ನನುಸರಿಸಿ ಜ್ವರಿತನಾದಾನು ? ಶರೀರವೆಂಬ ಉಪಾಧಿಯಿಂದಾದ ದುಃಖ

---

1. ಅನುವಾದದ ಟಿಪ್ಪಣಿಯನ್ನು ನೋಡಿ.

2. ಈ ವಿಶೇಷಣಗಳು ಪರಮಾತ್ಮನೇ ತಾನೆಂದು ತಿಳಿಯಬೇಕೆಂಬುವನ್ನು ಸೂಚಿಸುವದಕ್ಕೆ ಬಂದಿವೆ.

3. ಗೀ. ೭–೧೯ ಸೂಚನೆ.

4. ಈ ವಿಶೇಷಣದಿಂದ ಆತ್ಮನ ಏಕತ್ವವೂ ಅಸಂಗತ್ವವೂ ನಿತ್ಯತ್ವವೂ ಚೈತನ್ಯಸ್ವರೂಪವೂ ಸಿದ್ಧವಾಗುತ್ತದೆ.

5 ಇಲ್ಲಿಯವರೆಗೆ ಹೇಳಿರುವ ಧರ್ಮಗಳೆಲ್ಲ ಪರಮಾತ್ಮನವೆಂದು ಈ ಉಪನಿಷತ್ತಿನಲ್ಲಿ ಹಿಂದೆ ತಿಳಿಸಿದೆ.

ವನ್ನು ಅನುಸರಿಸಿ ದುಃಖಿಯಾದಾನು ? ಶರೀರತಾಪವನ್ನನುಸರಿಸಿ (ತಾನೂ) ಅನುತಪಿಸಿಯಾನು ? ಆತ್ಮದರ್ಶಿಯಲ್ಲದವನಿಗಲ್ಲವೆ, ಆ (ಸ್ವರೂಪಕ್ಕಿಂತ) ಬೇರೆಯಾಗಿರುವ ಮತ್ತೊಂದು ವಸ್ತುವನ್ನು ಪಡೆಯಬೇಕೆನ್ನುತ್ತಿರುವದರಿಂದ (ಇದು ಸಂಭವಿಸುತ್ತದೆ) ? "ಇದು ನನಗೆ ಆಗಬೇಕು ; ಮಗನಿಗೆ ಇದು, ಹೆಂಡತಿಗೆ ಇದು" ಎಂದು ಪ್ರಯತ್ನಿಸುತ್ತಿರುವದರಿಂದ (ಅವನು) ಮತ್ತೆಮತ್ತೆ ಹುಟ್ಟುಹೊಂದುಗಳ ಸಾಲನ್ನು ಏರಿ ಶರೀರದ ರೋಗವನ್ನು ಅನುಸರಿಸಿ ನರಳುತ್ತಾನೆ.[1] ಆದರೆ ಸರ್ವಾತ್ಮದರ್ಶಿಗೆ ಇದು ಸಂಭವಿಸುವದಿಲ್ಲ ಎಂಬಿದನ್ನು (ಇಲ್ಲಿ) ಹೇಳಿರುತ್ತಾನೆ.[2]

## ಆತ್ಮಜ್ಞಾನಿಯು ಸರ್ವಶ್ರೇಷ್ಠನು

(ಉಪನಿಷತ್ತು)

**ಯಸ್ಯಾನುವಿತ್ತಃ ಪ್ರತಿಬುದ್ಧ ಆತ್ಮಾಽ**
**ಸ್ಮಿನ್ ಸನ್ದೇಹ್ಯೇ ಗಹನೇ ಪ್ರವಿಷ್ಟಃ ।**
**ಸ ವಿಶ್ವಕೃತ್ ಸ ಹಿ ಸರ್ವಸ್ಯ ಕರ್ತಾ**
**ತಸ್ಯ ಲೋಕಃ ಸ ಉ ಲೋಕ ಏವ ॥ ೧೩ ॥**

೧೩. ಯಾವನಿಗೆ ಈ ಸಂದೇಹ್ಯವಾದ ಗಹನದಲ್ಲಿ ಹೊಕ್ಕಿರುವ ಆತ್ಮನು ಅನುವಿತ್ತನೋ ಪ್ರತಿಬುದ್ಧನೋ, ಅವನೇ ವಿಶ್ವಕರ್ತನು, ಅವನೇ ಎಲ್ಲದರ ಕರ್ತನು. ಅವನದೇ ಲೋಕವು, ಮತ್ತು ಅವನೇ ಲೋಕವೂ (ಆಗಿರುತ್ತಾನೆ).

## ಅದ್ವಿತೀಯಪರಮಾತ್ಮನೇ ನಾನು ಎಂದು ಅನುಸಂಧಾನಮಾಡಬೇಕು

(ಭಾಷ್ಯ)

೨೯೦ ಕಿಂಚ ಯಸ್ಯ ಬ್ರಾಹ್ಮಣಸ್ಯ ಅನುವಿತ್ತಃ ಅನುಲಬ್ಧಃ ಪ್ರತಿಬುದ್ಧಃ ಸಾಕ್ಷಾತ್ಕೃತಃ । ಕಥಮ್ ? ಅಹಮಸ್ಮಿ ಪರಂ ಬ್ರಹ್ಮ ಇತ್ಯೇವಂ

---

1. ವ್ಯಾಖ್ಯಾನಾನುಸಾರವಾಗಿ ಪಾಠವನ್ನು ಇಟ್ಟುಕೊಂಡು ಕನ್ನಡಿಸಿದೆ. "ಅನಾತ್ಮದರ್ಶೀ ಹಿ ತದ್ವ್ಯತಿರಿಕ್ತವಸ್ತ್ವನ್ತರೇಪ್ಸುಃ" ಎಂದು ಪಾಠವಿದ್ದರೆ ಏಕೆಂದರೆ ಆತ್ಮದರ್ಶಿಯಲ್ಲದವನು ಆ ಸ್ವರೂಪಕ್ಕಿಂತ ಬೇರೆಯಾದ ಮತ್ತೊಂದು ವಸ್ತುವನ್ನು ಪಡೆಯಬೇಕೆಂದು . . ಎಂದು ಪ್ರಯತ್ನಿಸುತ್ತಾ ಮತ್ತೆಮತ್ತೆ ಹುಟ್ಟುಹೊಂದುಗಳ ಸಾಲನ್ನೇರಿ ಶರೀರರೋಗವನ್ನನುಸರಿಸಿ (ತಾನೂ) ನರಳುತ್ತಿರುತ್ತಾನೆ-ಎಂದು ಸರಳವಾಗಿ ಅನ್ವಯವಾಗುವಂತೆ ಕನ್ನಡಿಸಬಹುದಾಗುತ್ತದೆ.

2. ಆತ್ಮಜ್ಞಾನಿಗೆ ಆತ್ಮಕ್ಕಿಂತ ವ್ಯತಿರಿಕ್ತವಾದ ಶರೀರವಾಗಲಿ, ಕಾಮವಾಗಲಿ, ಶರೀರರೂಪದಿಂದ ತಾಪವಾಗಲಿ ಸಂಭವಿಸುವದಿಲ್ಲ ಎಂದರ್ಥ.

ಪ್ರತ್ಯಗಾತ್ಮತ್ವೇನ ಅವಗತ ಆತ್ಮಾ ಅಸ್ಮಿನ್ ಸಂದೇಹ್ಯೇ ಸಂದೇಹೇ ಅನೇಕಾನರ್ಥಸಂಕಟೋಪಚಯೇ ಗಹನೇ ವಿಷಮೇ ಅನೇಕಶತಸಹಸ್ರವಿವೇಕವಿಜ್ಞಾನಪ್ರತಿಪಕ್ಷೇ ವಿಷಮೇ ಪ್ರವಿಷ್ಟಃ । ನ ಯಸ್ಯ ಬ್ರಾಹ್ಮಣಸ್ಯ ಅನುವಿತ್ತಃ ಪ್ರತಿಬೋಧೇನ ಇತ್ಯರ್ಥಃ । ಸ ವಿಶ್ವಕೃತ್, ವಿಶ್ವಸ್ಯ ಕರ್ತಾ । ಕಥಂ ವಿಶ್ವಕೃತ್ತ್ವಂ ತಸ್ಯ ? ಕಿಂ ವಿಶ್ವಕೃದಿತಿ ನಾಮ ? ಇತ್ಯಾಶಙ್ಕ್ಯ ಆಹ । ಸ ಹಿ ಯಸ್ಮಾತ್ ಸರ್ವಸ್ಯ ಕರ್ತಾ ನ ನಾಮಮಾತ್ರಮ್ । ನ ಕೇವಲಂ ವಿಶ್ವಕೃತ್ ಪರಪ್ರಯುಕ್ತಃ ಸನ್, ಕಿಂ ತರ್ಹಿ ತಸ್ಯ ಲೋಕಃ ಸರ್ವಃ । ಕಿಮನ್ಯೋ ಲೋಕಃ, ಅನ್ಯೋಽಸೌ ಇತಿ ? ಉಚ್ಯತೇ । ಸ ಉ ಲೋಕ ಏವ । ಲೋಕಶಬ್ದೇನ ಆತ್ಮಾ ಉಚ್ಯತೇ । ತಸ್ಯ ಸರ್ವ ಆತ್ಮಾ, ಸ ಚ ಸರ್ವಸ್ಯ ಆತ್ಮಾ ಇತ್ಯರ್ಥಃ । ಯ ಏಷ ಬ್ರಾಹ್ಮಣೇನ ಪ್ರತ್ಯಗಾತ್ಮಾ ಪ್ರತಿಬುದ್ಧತಯಾ ಅನುವಿತ್ತಃ ಆತ್ಮಾ ಅನರ್ಥಸಂಕಟೇ ಗಹನೇ ಪ್ರವಿಷ್ಟಃ ಸ ನ ಸಂಸಾರೀ ಕಿಂ ತು ಪರ ಏವ। ಯಸ್ಮಾತ್ ವಿಶ್ವಸ್ಯ ಕರ್ತಾ ಸರ್ವಸ್ಯ ಆತ್ಮಾ, ತಸ್ಯ ಚ ಸರ್ವ ಆತ್ಮಾ । ಏಕ ಏವ ಅದ್ವಿತೀಯಃ ಪರ ಏವಾಽಸ್ಮೀತಿ ಅನುಸಂಧಾತವ್ಯಃ ಇತಿ ಶ್ಲೋಕಾರ್ಥಃ ॥

(ಭಾಷ್ಯಾರ್ಥ)

ಮತ್ತು ಯಾವ ಬ್ರಾಹ್ಮಣನಿಗೆ (ಆತ್ಮನು) ಅನುವಿತ್ತನೋ ಅನುಲಬ್ಧನೋ,[1] ಪ್ರತಿಬುದ್ಧಃ ಸಾಕ್ಷಾತ್ಕೃತ(ನಾಗಿರುವ)ನೋ,[2] ಹೇಗೆ ? ಎಂದರೆ, 'ನಾನೇ ಪರಬ್ರಹ್ಮವು' ಎಂದಿಂತು ಪ್ರತ್ಯಗಾತ್ಮನಾಗಿಯೇ (ಆತ್ಮನು) ಅರಿಯಲ್ಪಟ್ಟಿರುವನೋ. ಈ (ಸಂದೇಹ್ಯೇ= ಸಂದೇಹೇ) ಸಂದಿಗ್ಧವಾದ, ಅನೇಕ ಅನರ್ಥಗಳು ಸೇರಿರುವ ರಾಶಿಯಾಗಿರುವ ಗಹನವಾದ, ಎಂದರೆ ಕಷ್ಟವಾಗಿರುವ, ಅನೇಕ ಶತಸಹಸ್ರ(ಸಾಖ್ಯೆಯ) ವಿವೇಕವಿಜ್ಞಾನದ ಪ್ರತಿಪಕ್ಷಗಳಿರುವುದರಿಂದ ಕಷ್ಟವಾಗಿರುವ, (ಈ ಶರೀರದಲ್ಲಿ) ಹೊಕ್ಕಿರುವನಲ್ಲ, ಆ (ಆತ್ಮನು) ಯಾವ ಬ್ರಾಹ್ಮಣನಿಗೆ ಪ್ರತಿಬೋಧದಿಂದ ಅನುವಿತ್ತನಾಗಿರುವನೋ ಎಂದರ್ಥ ಆ (ಬ್ರಾಹ್ಮಣನು) ವಿಶ್ವಕರ್ತೃ, ಎಲ್ಲಕ್ಕೂ ಕರ್ತನು (ಅವನು) ವಿಶ್ವಕರ್ತೃವೆಂಬುದು ಹೇಗೆ ? ಅವನಿಗೆ ವಿಶ್ವಕರ್ತನೆಂದು ಹೆಸರೊ ? ಎಂದು ಆಶಂಕಿಸಿ (ಉತ್ತರವನ್ನು) ಹೇಳುತ್ತಾನೆ : (ಹಿ= ಯಸ್ಮಾತ್) ಏಕೆಂದರೆ ಅವನು ಎಲ್ಲಕ್ಕೂ ಕರ್ತನು, ಬರಿಯ (ಆ) ಹೆಸರಿ(ನವ)ನಲ್ಲ. ಸುಮ್ಮನೆ ಮತ್ತೊಬ್ಬರ ಪ್ರೇರಣೆಯಿಂದ ವಿಶ್ವಕರ್ತನಾಗಿರುವನೆಂದಲ್ಲ, ಮತ್ತೇನೆಂದರೆ ಅವನಿಗೆ ಪ್ರತಿಯೊಬ್ಬನೂ ಲೋಕವು. ಲೋಕವೆಂದರೆ ಬೇರೆ, ಇವನು ಬೇರೆ ಎಂದೇನು ? ಎಂದರೆ ಹೇಳುತ್ತಾನೆ. ಮತ್ತು ಅವನು ಲೋಕವೂ (ಆಗಿರು

---

1 ಶಾಸ್ತ್ರಾಚಾರ್ಯರ ಉಪದೇಶವನ್ನನುಸರಿಸಿ ಅರಿತುಕೊಂಡಿರುವವನೋ.

2 ಅನುಭವದಿಂದ ಅರಿತಿದಾನೆ. ಬರಿಯ ಹೇಳಿಕೆಯಿಂದಲ್ಲ ಎಂದರ್ಥ.

ತ್ತಾನೆ. ಇಲ್ಲಿ) ಲೋಕಶಬ್ದದಿಂದ ಆತ್ಮನನ್ನು ಹೇಳಿದೆ.[1] **ಅವನಿಗೆ ಪ್ರತಿಯೊಬ್ಬನೂ ಆತ್ಮನು, ಮತ್ತು ಅವನೂ ಪ್ರತಿಯೊಬ್ಬನಿಗೂ ಆತ್ಮನು ಎಂದರ್ಥ.** ಅನರ್ಥಗಳ ಗುಂಪಿನಿಂದ ಕೂಡಿದ ಗಹನದಲ್ಲಿ ಪ್ರವಿಷ್ಟನಾಗಿರುವ ಯಾವ ಈ ಪ್ರತ್ಯಗಾತ್ಮನು ಬ್ರಾಹ್ಮಣನು ಪ್ರತಿಬುದ್ಧನಾದ್ದರಿಂದ (ಅವನಿಗೆ) ಅನುವಿತ್ತ(ನಾಗಿರುವನೋ) ಅವನು ಸಂಸಾರಿಯಲ್ಲ, ಮತ್ತೇನೆಂದರೆ ಪರ(ಮಾತ್ಮ)ನೇ ; ಏಕೆಂದರೆ (ಇವನು) ಎಲ್ಲಕ್ಕೂ ಕರ್ತನು, ಪ್ರತಿಯೊಬ್ಬನಿಗೂ ಆತ್ಮನು ಮತ್ತು ಅವನಿಗೆ (ಪ್ರತಿಯೊಬ್ಬನೂ ಆತ್ಮನು. **ತನಗೆರಡನೆಯದಿಲ್ಲದ ಒಬ್ಬನೇ ಆಗಿರುವ ಪರಮಾತ್ಮನೇ ಆಗಿರುವನು ಎಂದು ಅನುಸಂಧಾನಮಾಡಬೇಕು- ಎಂಬುದು ಶ್ಲೋಕಾರ್ಥವು.**[2]

## ಬ್ರಹ್ಮಜ್ಞಾನದಿಂದ ಲಾಭ, ಅಜ್ಞಾನದಿಂದ ನಷ್ಟ

(ಉಪನಿಷತ್ತು)

**ಇಹೈವ ಸನ್ತೋಽಥ ವಿದ್ಮಸ್ತದ್ವಯಂ**
**ನ ಚೇದವೇದಿರ್ಮಹತೀ ವಿನಷ್ಟಿಃ ।**
**ಯೇ ತದ್ವಿದುರಮೃತಾಸ್ತೇ ಭವ**
**ನ್ತ್ಯಥೇತರೇ ದುಃಖಮೇವಾಪಿ ಯನ್ತಿ** ॥ ೧೪ ॥

೧೪. ಇಲ್ಲಿಯೇ ಇದ್ದುಕೊಂಡು ಅದನ್ನು ನಾವು ಈಗ ಅರಿತುಕೊಂಡಿರುತ್ತೇವಲ್ಲ! ಇಲ್ಲದೆಹೋಗಿದ್ದರೆ, ಅವೇದಿಯಾಗಿ(ರುತ್ತಿದ್ದೆನು), ದೊಡ್ಡ ವಿನಾಶ(ವಾಗುತ್ತಿತ್ತು). ಯಾರು ಅದನ್ನು ಅರಿಯುವರೋ ಅವರು ಅಮೃತರಾಗುವರು, ಇನ್ನು ಮಿಕ್ಕವರು ದುಃಖವನ್ನೇ ಸೇರುವರು.

## ಜ್ಞಾನವನ್ನು ಇಲ್ಲಿಯೇ ಸಂಪಾದಿಸಿಕೊಳ್ಳಬೇಕು

(ಭಾಷ್ಯ)

೫೯೧ ಕಿಂಚ ಇಹೈವ ಅನೇಕಾನರ್ಥಸಂಕುಲೇ ಸನ್ತಃ ಭವನ್ತಃ ಅಜ್ಞಾನದೀರ್ಘನಿದ್ರಾಮೋಹಿತಾಃ ಸನ್ತಃ ಕಥಂಚಿದಿವ ಬ್ರಹ್ಮತತ್ತ್ವಮ್

---

1. ಆತ್ಮನೆಂಬ ಲೋಕವನ್ನೇ ಉಪಾಸನೆಮಾಡಬೇಕು- ಎಂಬ ಶ್ರುತಿಗೆ ಅನುಸಾರವಾಗಿ ಆತ್ಮನನ್ನೇ ಲೋಕವೆಂದಿದೆ.

2. ನಾನು ಸಂಸಾರಿಯೆಂದು ತೋರುತ್ತಿದ್ದರೂ ಅದ್ವಿತೀಯಬ್ರಹ್ಮವೇ ಎಂದು ಅರಿತುಕೊಳ್ಳಬೇಕೆಂದು ತಿಳಿಸುವದಕ್ಕೇ ಸಂದೇಹವಾದ ಗಹನವಲ್ಲಿ ಪ್ರವಿಷ್ಟನಾದ ಆತ್ಮನನ್ನು ಅರಿತುಕೊಂಡವನೇ ಕೃತಕೃತ್ಯನು ಎಂದು ಹೇಳಿದೆ

ಆತ್ಮತ್ವೇನ । ಅಥ ವಿದ್ಮಃ ವಿಜಾನೀಮಃ । ತತ್ ಏತದ್ ಬ್ರಹ್ಮ ಪ್ರಕೃತಮ್ । ಅಹೋ ವಯಂ ಕೃತಾರ್ಥಾಃ ಇತ್ಯಭಿಪ್ರಾಯಃ । ಯದೇತದ್ ಬ್ರಹ್ಮ ವಿಜಾನೀಮಃ ತನ್ನ ಚೇದ್ ವಿದಿತವನ್ತೋ ವಯಮ್ । ವೇದನಂ ವೇದಃ, ವೇದೋಽಸ್ಯ ಅಸ್ತಿ ಇತಿ ವೇದೀ। ವೇದೀ ಏವ ವೇದಿಃ । ನ ವೇದಿಃ ಅವೇದಿಃ । ತತಃ ಅಹಮ್ ಅವೇದಿಃ ಸ್ಯಾಮ್ । ಯದ್ಯವೇದಿಃ ಸ್ಯಾಮ್, ಕೋ ದೋಷಃ ಸ್ಯಾತ್ ? ಮಹತೀ ಅನನ್ತಪರಿಮಾಣಾ ಜನ್ಮಮರಣಾದಿಲಕ್ಷಣಾ ವಿನಷ್ಟಿಃ ವಿನಶನಮ್ । ಅಹೋ ವಯಮ್ ಅಸ್ಮಾತ್ ಮಹತೋ ವಿನಶನಾತ್ ನಿರ್ಮುಕ್ತಾಃ ಯದ್ ಅದ್ವಯಂ ಬ್ರಹ್ಮ ವಿದಿತವನ್ತಃ ಇತ್ಯರ್ಥಃ । ಯಥಾ ಚ ವಯಂ ಬ್ರಹ್ಮ ವಿದಿತ್ವಾ ಅಸ್ಮಾತ್ ವಿನಶನಾತ್ ವಿಪ್ರಮುಕ್ತಾಃ ಏವಂ (ಯೇ)[1] ತದ್ ವಿದುಃ ಅಮೃತಾಸ್ತೇ ಭವನ್ತಿ । (ಅಥ)[2] ಯೇ ಪುನಃ ನೈವಂ ಬ್ರಹ್ಮ ವಿದುಃ ತೇ ಇತರೇ ಬ್ರಹ್ಮವಿದ್ಭ್ಯೋಽನ್ಯೇ । ಅಬ್ರಹ್ಮವಿದಃ ಇತ್ಯರ್ಥಃ । ದುಃಖಮೇವ ಜನ್ಮಮರಣಾದಿಲಕ್ಷಣಮೇವ ಅಪಿಯನ್ತಿ ಪ್ರತಿಪದ್ಯನ್ತೇ । ನ ಕದಾಚಿದಪಿ ಅವಿದುಷಾಂ ತತೋ ವಿನಿವೃತ್ತಿಃ ಇತ್ಯರ್ಥಃ । ದುಃಖಮೇವ ಹಿ ತ ಆತ್ಮತ್ವೇನ ಉಪಗಚ್ಛನ್ತಿ ॥

(ಭಾಷ್ಯಾರ್ಥ)

ಮತ್ತು ಇಲ್ಲಿಯೇ ಅನೇಕವಾದ ಅನರ್ಥಗಳಿಂದ ಕೂಡಿರುವ (ಜನ್ಮದಲ್ಲಿಯೇ) ಇದ್ದುಕೊಂಡು ಇರುವವರಾಗಿ, ಅಜ್ಞಾನವೆಂಬ ದೀರ್ಘನಿದ್ರೆಯಿಂದ ಮೋಹಿತರಾಗಿದ್ದವರಾಗಿ[3] ಹೇಗೋ ಬ್ರಹ್ಮತತ್ತ್ವವನ್ನು ಈಗ (ನಮ್ಮ) ಆತ್ಮವೆಂದು ಅರಿತುಕೊಂಡಿರುತ್ತೇವಲ್ಲ, ಅನುಭವಕ್ಕೆ ತಂದುಕೊಂಡೆವಲ್ಲ! ಅದನ್ನು ಎಂದರೆ ಈ ಪ್ರಕೃತವಾದ ಬ್ರಹ್ಮತತ್ತ್ವವನ್ನು (ಅನುಭವಕ್ಕೆ ತಂದುಕೊಂಡೆವಲ್ಲ), ಆಹಾ ! ನಾವೇ ಧನ್ಯರು ಎಂದು ಅಭಿಪ್ರಾಯ.

ಯಾವ ಈ ಬ್ರಹ್ಮವನ್ನು ಅನುಭವಕ್ಕೆ ತಂದುಕೊಂಡಿರುವೆವೋ, ಅದನ್ನು ನಾವು ಅರಿತುಕೊಳ್ಳದೆ ಇದ್ದಿದ್ದರೆ- (ಅವೇದಿಯಾಗುತ್ತಿದ್ದೆನು) ; ವೇದ ಎಂದರೆ ಅರಿಯುವದು, ವೇದವು ಇರುವವರಿಂದ ಇವನು ವೇದಿಯು ; ವೇದೀ ಎಂಬುದನ್ನೇ ವೇದಿ (ಎಂದಿದೆ). ವೇದಿಯಲ್ಲದವನು ಅವೇದಿಯು- ಆಗ ನಾನು

1. ಈ ಮಾತು ಮೂಲಭಾಷ್ಯದಲ್ಲಿದ್ದು ಬರೆಯುವವರ ಪ್ರಮಾದದಿಂದ ಬಿಟ್ಟು ಹೋಗಿರಬಹುದು.

2. ಅಥ ಎಂಬ ಈ ಮಾತೂ ಬಿಟ್ಟುಹೋಗಿರಬೇಕು.

3 ಅವಿದ್ಯಾನಿದ್ರೆಯಿಂದ ಸಂಸಾರದ ಕನಸನ್ನು ಅನಾದಿಕಾಲದಿಂದ ಕಾಣುತ್ತಿದ್ದವರು ಎಂದರ್ಥ ಮಾಂ. ಕಾ. ಭಾ. ೧-೧೬ (ಭಾ.ಭಾ. ೫೩)ನ್ನು ನೋಡಿ.

ಅವೇದಿಯಾಗಿರುತ್ತಿದ್ದೆನು.[1] ಅವೇದಿಯಾಗಿದ್ದರೆ ಯಾವ ದೋಷವಾಗುತ್ತಿತ್ತು ? (ಎಂದರೆ ಹೇಳುತ್ತಾನೆ) : ಹೆಚ್ಚಿನ ಅನಂತಪರಿಮಾಣದ[2] ಜನ್ಮಮರಣರೂಪವಾದ, ವಿನಾಶವು, ಕೇಡು ಆಗುತ್ತಿತ್ತು. ಆಹಾ ! ನಾವು ಈ ದೊಡ್ಡ ಕೇಡಿನಿಂದ ಬಿಡುಗಡೆಯಾದೆವಲ್ಲ ! ಏಕೆಂದರೆ ಅದ್ವಯವಾದ ಬ್ರಹ್ಮವನ್ನು ಅರಿತುಕೊಂಡಿರುತ್ತೇವೆ, ಎಂದರ್ಥ.

ಮತ್ತು ನಾವು ಹೇಗೆ ಬ್ರಹ್ಮವನ್ನು ಅರಿತುಕೊಂಡು ಈ ಕೇಡಿನಿಂದ ವಿಮುಕ್ತರಾದೆವೋ, ಹೀಗೆಯೇ ಯಾರು ಅದನ್ನು ಅರಿತುಕೊಳ್ಳುವರೋ ಅವರು ಅಮೃತರಾಗುವರು, ಆದರೆ ಯಾರು ಬ್ರಹ್ಮವನ್ನು ಅರಿತುಕೊಳ್ಳದೆ ಇರುವರೋ, ಆ ಮಿಕ್ಕವರು ಬ್ರಹ್ಮಜ್ಞಾನಿಗಳಿಗಿಂತ ಬೇರೆಯವರು, ಬ್ರಹ್ಮಜ್ಞಾನಿಗಳಲ್ಲದವರು ಎಂದರ್ಥ, (ಅವರು) ದುಃಖವನ್ನೇ ಜನ್ಮಮರಣಾದಿಸ್ವರೂಪವಾದ (ಸಂಸಾರ)ವನ್ನೇ ಸೇರುವರು, ಪಡೆಯುವರು. ಅಜ್ಞಾನಿಗಳಿಗೆ ಎಂದಿಗೂ ಅದರಿಂದ ತಪ್ಪಿಸಿಕೊಳ್ಳುವದು (ಆಗ)ಲಾರದು ಎಂದರ್ಥ. ದುಃಖವನ್ನೇ ಅಲ್ಲವೆ, ಅವರು (ತಮ್ಮ) ಸ್ವರೂಪವೆಂದು ಇಟ್ಟುಕೊಂಡಿರುತ್ತಾರೆ ?

## ಪರಮಾತ್ಮಜ್ಞಾನದಿಂದ ಅಭಯ, ಶುಭದೃಷ್ಟಿ

(ಉಪನಿಷತ್ತು)

**ಯದೈತಮನುಪಶ್ಯತ್ಯಾತ್ಮಾನಂ ದೇವಮಞ್ಜಸಾ ।**
**ಈಶಾನಂ ಭೂತಭವ್ಯಸ್ಯ ನ ತತೋ ವಿಜುಗುಪ್ಸತೇ ॥ ೧೫ ॥**

೧೫. ಯಾವಾಗ ಭೂತಭವ್ಯಕ್ಕೆ ಈಶಾನನಾದ ಆತ್ಮನಾದ ದೇವನನ್ನು ಸ್ಪಷ್ಟವಾಗಿ ಅನುದರ್ಶನಮಾಡಿಕೊಳ್ಳುವನೋ (ಆಗ) ಅವನಿಂದ ಕಾಪಾಡಿಕೊಳ್ಳಲಿಚ್ಛಿಸುವದಿಲ್ಲ (ಅಥವಾ ಆಗ ಏನನ್ನೂ ನಿಂದಿಸುವದಿಲ್ಲ).

## ಆತ್ಮಾನುದರ್ಶನದ ಫಲ

(ಭಾಷ್ಯ)

೨೯೨ ಯದಾ ಪುನಃ ಏತಮ್ ಆತ್ಮಾನಮ್ ಕಥಂಚಿತ್ ಪರಮ

---

1 ಇಲ್ಲಿ ಏಕವಚನವಾಗಲಿ ಬಹುವಚನವಾಗಲಿ ವಿವಕ್ಷಿತವಲ್ಲ ; ಆತ್ಮಜ್ಞಾನವಿಲ್ಲದಿದ್ದರೆ ಸಂಸಾರದಲ್ಲಿಯೇ ನರಳಬೇಕಾಗುತ್ತಿತ್ತು ಎಂಬುದರಲ್ಲಿ ತಾತ್ಪರ್ಯ. ಅನ್ವಯಕ್ಕೆ ಬಹುವಚನವೇ ಎಲ್ಲಾ ಕಡೆಯಲ್ಲಿರುವದು ಸರಳವಾಗುವದೆಂದು ಆಚಾರ್ಯರು ಮುಂದೆ ಹಾಗೆಯೇ ಬಹುವಚನವನ್ನು ತೋರಿಸಿರುತ್ತಾರೆ.

2. ಸಂಸಾರವು ಕಾಲದಲ್ಲಿ ಅನಾದಿಯೂ ಅನಂತವೂ ಆಗಿರುತ್ತದೆ; ಆದರೂ ಅದು ಅಸತ್ಯವಾದ್ದರಿಂದ ಜ್ಞಾನದಿಂದ ಬಾಧಿತವಾಗಬಹುದು.

ಕಾರುಣಿಕಂ ಕಂಚಿತ್ ಆಚಾರ್ಯಂ ಪ್ರಾಪ್ಯ ತತೋ ಲಬ್ಧಪ್ರಸಾದಃ ಸನ್ ಅನು ಪಶ್ಚಾತ್ ಪಶ್ಯತಿ ಸಾಕ್ಷಾತ್ಕರೋತಿ ಸ್ವಮ್ ಆತ್ಮಾನಂ ದೇವಂ ದ್ಯೋತನವನ್ತಮ್ । ದಾತಾರಂ ವಾ ಸರ್ವಪ್ರಾಣಿಕರ್ಮಫಲಾನಾಂ ಯಥಾಕರ್ಮಾನುರೂಪಮ್ । ಅಞ್ಜಸಾ ಸಾಕ್ಷಾತ್ । ಈಶಾನಂ ಸ್ವಾಮಿನಂ ಭೂತಭವ್ಯಸ್ಯ, ಕಾಲತ್ರಯಸ್ಯ ಇತ್ಯೇತತ್ । ನ ತತಃ ತಸ್ಮಾದೀಶಾನಾದ್ ದೇವಾತ್ ಆತ್ಮಾನಂ ವಿಶೇಷೇಣ ಜುಗುಪ್ಸತೇ ಗೋಪಾಯಿತುಮ್ ಇಚ್ಛತಿ । ಸರ್ವೋ ಹಿ ಲೋಕಃ ಈಶ್ವರಾದ್ ಗುಪ್ತಿಮ್ ಇಚ್ಛತಿ ಭೇದದರ್ಶೀ । ಅಯಂ ತು ಏಕತ್ವದರ್ಶೀ ನ ಬಿಭೇತಿ ಕುತಶ್ಚನ । ಅತಃ ನ ತದಾ ವಿಜುಗುಪ್ಸತೇ । ಯದಾ ಈಶಾನಂ ದೇವಮ್ ಅಞ್ಜಸಾ ಆತ್ಮತ್ವೇನ ಪಶ್ಯತಿ ನ ತದಾ ನಿನ್ದತಿ ವಾ ಕಂಚಿತ್ । ಸರ್ವಮ್ ಆತ್ಮಾನಂ ಹಿ ಪಶ್ಯತಿ । ಸ ಏವಂ ಪಶ್ಯನ್ ಕಮ್ ಅಸೌ ನಿನ್ದ್ಯೇತ್ ?

(ಭಾಷ್ಯಾರ್ಥ)

ಇನ್ನು ಯಾವಾಗ ಈ ಆತ್ಮನನ್ನು, **ಹೇಗೋ ಪರಮಕಾರುಣಿಕನಾದ ಯಾವನಾದರೊಬ್ಬ ಆಚಾರ್ಯನನ್ನು ಸೇರಿ ಅವನಿಂದ ಪ್ರಸಾದವನ್ನು ಹೊಂದಿದವನಾಗಿ, (ಅನು) ಆ ಬಳಿಕ (ಪಶ್ಯತಿ) ತನ್ನ ಆತ್ಮನನ್ನು ಸಾಕ್ಷಾತ್ಕಾರಮಾಡಿಕೊಳ್ಳುವನೋ,**[1] ದೇವನು ಪ್ರಕಾಶವಂತನಾದ, ಅಥವಾ ಸರ್ವಪ್ರಾಣಿಗಳ ಕರ್ಮಗಳ ಫಲಗಳನ್ನು ಅವರವರ ಕರ್ಮಕ್ಕೆ ಕೊಡುವವನೆಂದು ಸ್ಪಷ್ಟವಾಗಿ ಸಾಕ್ಷಾತ್ತಾಗಿ (ಕಂಡುಕೊಳ್ಳುವನೋ), ಭೂತಭವ್ಯಕ್ಕೆ ಕಾಲತ್ರಯಕ್ಕೆ ಎಂದರ್ಥ ಈಶಾನನೆಂದು ಒಡೆಯನೆಂದು (ಕಂಡುಕೊಳ್ಳುವನೋ), (ಆಗ) ಅವನಿಂದ ಆ ಈಶಾನನಾದ ದೇವನಿಂದ ತನ್ನನ್ನು ವಿಶೇಷವಾಗಿ (ಜುಗುಪ್ಸತೇ= ಗೋಪಾಯಿತುಮಿಚ್ಛತಿ) ಕಾಪಾಡಿಕೊಳ್ಳಲಿಚ್ಛಿಸುವದಿಲ್ಲ. **ಭೇದದರ್ಶಿಯಾದವನು ಪ್ರತಿಯೊಬ್ಬನೂ ಈಶ್ವರನಿಂದ (ಆತ್ಮ)ರಕ್ಷಣೆಯನ್ನು ಬಯಸುತ್ತಾನಲ್ಲವೆ? ಆದರೆ ಇವನು ಏಕತ್ವದರ್ಶಿಯಾದ್ದರಿಂದ ಏತಕ್ಕೂ ಹೆದರುವದಿಲ್ಲ, ಆದ್ದರಿಂದ ಆಗ ಕಾಪಾಡಿಕೊಳ್ಳಲಿಚ್ಛಿಸುವದಿಲ್ಲ.**[2]

---

1. ನೇರಾಗಿ ನಾನೇ ಆ ಪರಮೇಶ್ವರನು ಎಂಬ ಅನುಭವವನ್ನು ಪಡೆದುಕೊಳ್ಳುವನೋ ಎಂದರ್ಥ, ಉಪಾಸನೆಯಿಂದ ಪಡೆಯುವಂತೆ ಸಾಕ್ಷಾತ್ಕಾರಪ್ರತ್ಯಯವನ್ನು ಗಟ್ಟಿಮಾಡಿಕೊಳ್ಳುವನೋ ಎಂಬರ್ಥವಿಲ್ಲ, ಏಕೆಂದರೆ ಆತ್ಮನು ಯಾವಾಗಲೂ ಸಾಕ್ಷಾತ್ತಾಗಿಯೇ ಇರುತ್ತಾನೆ

2. ಸಂಸಾರಿಯೆಂದು ತಾನು ಭಾವಿಸಿಕೊಂಡಿದ್ದ ಆತ್ಮನು ಪರಮೇಶ್ವರನೇ ಎಂದರಿತುಕೊಂಡದ್ದರ ಫಲವಿದು.

ಅಥವಾ ಯಾವಾಗ ಈಶಾನನಾದ ದೇವನನ್ನು ಸ್ಪಷ್ಟವಾಗಿ (ತನ್ನ) ಆತ್ಮನೆಂದು ಕಂಡುಕೊಳ್ಳುತ್ತಾನೋ[1] ಆಗ ಯಾರನ್ನೂ ನಿಂದಿಸುವದಿಲ್ಲ (ಎಂದಾದರೂ ವ್ಯಾಖ್ಯಾನಮಾಡಬಹುದು). ಎಲ್ಲವೂ ಆತ್ಮನೇ ಎಂದಲ್ಲವೆ, ಕಂಡುಕೊಳ್ಳುತ್ತಾನೆ, ಹೀಗೆ ಕಾಣುತ್ತಿರುವಾಗ ಇವನು ಯಾವನನ್ನು ನಿಂದಿಸಿಯಾನು ?

## ಬ್ರಹ್ಮವು ಕಾಲಾತೀತವು

(ಉಪನಿಷತ್ತು)

**ಯಸ್ಮಾದರ್ವಾಕ್ಸಂವತ್ಸರೋಽಹೋಭಿಃ ಪರಿವರ್ತತೇ ।**
**ತದ್ದೇವಾ ಜ್ಯೋತಿಷಾಂ ಜ್ಯೋತಿರಾಯುರ್ಹೋಪಾಸತೇಽಮೃತಮ್ ॥**

೧೬. ಯಾವನಿಗಿಂತ ಈಚೆಗೇ ಸಂವತ್ಸರವು ಅಹಸ್ಸುಗಳಿಂದ ಸುತ್ತುತ್ತಿರುವದೋ, ಜ್ಯೋತಿಗಳಿಗೆಲ್ಲ ಜ್ಯೋತಿಯಾದ ಅಮೃತವಾದ ಅದನ್ನು ದೇವತೆಗಳು ಆಯುಸ್ಸೆಂದು ಉಪಾಸನೆಮಾಡುತ್ತಾರೆ.

## ದೇವತೆಗಳೂ ಬ್ರಹ್ಮವನ್ನು ಆಯುಸ್ಸೆಂದು ಉಪಾಸನೆಮಾಡುವರು

(ಭಾಷ್ಯ)

೫೯೩. ಕಿಂಚ ಯಸ್ಮಾತ್ ಈಶಾನಾತ್ ಅರ್ವಾಕ್ ಯಸ್ಮಾದನ್ಯ ವಿಷಯೇ ಏವ ಇತ್ಯರ್ಥಃ । ಸಂವತ್ಸರಃ ಕಾಲಾತ್ಮಾ ಸರ್ವಸ್ಯ ಜನಿಮತಃ ಪರಿಚ್ಛೇತ್ತಾ, ಯಂ ಅಪರಿಚ್ಛಿನ್ದನ್ ಅರ್ವಾಗೇವ ವರ್ತತೇ ಅಹೋಭಿಃ ಸ್ವಾವಯವೈಃ । ಅಹೋರಾತ್ರೈಃ ಇತ್ಯರ್ಥಃ । ತತ್ ಜ್ಯೋತಿಷಾಂ ಜ್ಯೋತಿಃ ಆದಿತ್ಯಾದಿಜ್ಯೋತಿಷಾಮಪಿ ಅವಭಾಸಕತ್ವಾತ್, ಆಯುಃ ಇತಿ ಉಪಾಸತೇ ದೇವಾಃ ಅಮೃತಂ ಜ್ಯೋತಿಃ । ಅತೋಽನ್ಯತ್ ಮ್ರಿಯತೇ ನ ಹಿ ಜ್ಯೋತಿಃ । ಸರ್ವಸ್ಯ ಹಿ ಏತತ್ ಜ್ಯೋತಿರಾಯುಃ । ಆಯುರ್ಗುಣೇನ ಯಸ್ಮಾದ್ ದೇವಾಃ ತಜ್ಜ್ಯೋತಿರುಪಾಸತೇ ತಸ್ಮಾತ್ ಆಯುಷ್ಮನ್ತಸ್ತೇ । ತಸ್ಮಾತ್ ಆಯುಷ್ಕಾಮೇನ ಆಯುರ್ಗುಣೇನ ಉಪಾಸ್ಯಂ ಬ್ರಹ್ಮ ಇತ್ಯರ್ಥಃ ॥

---

1. ಈಶಾನನೆಂದು ಕಂಡುಕೊಳ್ಳುವನೋ ಎಂದು ಮೊದಲನೆಯ ವಾಕ್ಯದಂತೆ ಅನ್ವಯ, ಈಶಾನನೇ ತನ್ನ ಆತ್ಮನೆಂದು ಎಂದು ಈ ವಾಕ್ಯದಲ್ಲಿ ಸಂಬಂಧ. ತಾತ್ಪರ್ಯದಲ್ಲಿ ಭೇದವಿಲ್ಲ. ಬ್ರಹ್ಮಾತ್ಮೈಕತ್ವವನ್ನು ಕಂಡುಕೊಳ್ಳುವನೋ ಎಂದೇ ಅರ್ಥ.

(ಭಾಷ್ಯಾರ್ಥ)

ಮತ್ತು ಯಾವ ಈಶಾನನಿಗಿಂತ[1] ಈಚೆಗೇ ಯಾವನಿಗಿಂತ ಬೇರೆಯ (ವಸ್ತುವಿನ) ವಿಷಯದಲ್ಲಿಯೇ ಸಂವತ್ಸರನು ಕಾಲರೂಪಿಯಾದ (ಸಂವತ್ಸರನು) ಪ್ರತಿಯೊಂದು ಹುಟ್ಟುಳ್ಳದ್ದನ್ನೂ ಅಳೆಯುವ (ಸಂವತ್ಸರನು), ಯಾವನನ್ನು ಅಳೆಯದೆ[2] ಈಚೆಗೇ ಅಹಸ್ಸುಗಳಿಂದ ತನ್ನ ಅವಯವಗಳಾದ ಅಹೋರಾತ್ರಿಗಳೊಡನೆ ಎಂದರ್ಥ. ಆ ಜ್ಯೋತಿಗಳ ಜ್ಯೋತಿಯನ್ನು, ಏಕೆಂದರೆ (ಅದು) ಆದಿತ್ಯಾದಿಜ್ಯೋತಿಗಳನ್ನು ಬೆಳಗುತ್ತಿರುತ್ತದೆ[3] (ಅದನ್ನು) ದೇವತೆಗಳು ಆಯುಸ್ಸೆಂದು ಉಪಾಸನೆಮಾಡುತ್ತಿರುತ್ತಾರೆ. ಅಮೃತವಾದ (ಆ) ಜ್ಯೋತಿಯನ್ನು (ಉಪಾಸನೆಮಾಡುತ್ತಿರುತ್ತಾರೆ); ಇದಕ್ಕಿಂತ ಬೇರೆಯಾದದ್ದು ಸಾಯುತ್ತದೆ, ಆದರೆ (ಈ) ಜ್ಯೋತಿಯು (ಸಾಯು)ವದಿಲ್ಲ. (ಆದ್ದರಿಂದ ಇದು ಅಮೃತವಾದದ್ದು). ಈ ಜ್ಯೋತಿಯು ಎಲ್ಲರಿಗೂ ಆಯುಸ್ಸಲ್ಲವೆ ? ದೇವತೆಗಳು (ತಮ್ಮ) ಆಯುಸ್ಸೆಂಬ ಗುಣದಿಂದ (ಕೂಡಿದ್ದೆಂದು) ದೇವತೆಗಳು ಅದನ್ನು ಉಪಾಸನೆಮಾಡುತ್ತಾರಷ್ಟೆ. ಅದರಿಂದ ಅವರು ಆಯುಷ್ಮಂತರಾಗಿರುತ್ತಾರೆ.[4] ಆದ್ದರಿಂದ (ದೀರ್ಘವಾದ) ಆಯುಸ್ಸನ್ನು ಬಯಸುವವನು ಬ್ರಹ್ಮವನ್ನು ಆಯುರ್ಗುಣದಿಂದ ಕೂಡಿದ್ದೆಂದು ಉಪಾಸನೆಮಾಡಬೇಕು ಎಂದರ್ಥ.[5]

## ಆತ್ಮನು ಸರ್ವಾಧಾರವಾದ ಅಮೃತಬ್ರಹ್ಮವೇ

(ಉಪನಿಷತ್ತು)

**ಯಸ್ಮಿನ್ ಪಞ್ಚ ಪಞ್ಚಜನಾ ಆಕಾಶಶ್ಚ ಪ್ರತಿಷ್ಠಿತಃ ।**
**ತಮೇವಮನ್ಯ ಆತ್ಮಾನಂ ವಿದ್ವಾನ್ ಬ್ರಹ್ಮಾಮೃತೋಽಮೃತಮ್ ॥೧೭॥**

---

1. ಹಿಂದಿನ ಕಂಡಿಕೆಯಲ್ಲಿ ಹೇಳಿರುವ ಪರಮೇಶ್ವರನಿಗಿಂತ.

2. ಕಟ್ಟುಬೀಳಿಸಿಕೊಳ್ಳಲಾರದೆ ಎಂದರ್ಥ.

3. ಮುಂ. ೨-೨-೧೦ (ಭಾ. ಭಾ. ಟಿ)ನ್ನು ನೋಡಿ. ಸೂರ್ಯಾದಿಜ್ಯೋತಿಗಳಿಂದಾದ ಅಹೋರಾತ್ರಾದಿಗಳು ಹುಟ್ಟಿದ ವಸ್ತುಗಳ ಆಯುಸ್ಸನ್ನು ಅಳೆಯುತ್ತವೆ; ಆದರೆ ಆ ಜ್ಯೋತಿಗಳಿಗೂ ಜ್ಯೋತಿಯಾಗಿರುವವರಿಂದ ಬ್ರಹ್ಮವನ್ನು ಅವುಗಳಿಂದಾದ ಕಾಲವು ಅಳೆಯಲಾರದು, ಅವುಗಳ ಆಯುಸ್ಸನ್ನೇ ಬ್ರಹ್ಮವು ಅಳೆಯುವದಾಗಿದೆ.

4. ಉಪಾಸನೆಗೆ ಅನುಗುಣವಾದ ಫಲವನ್ನೇ ಪಡೆಯುತ್ತಾರೆ, ದೇವತೆಗಳಿಗೆ ಅಮೃತರೆಂಬ ಹೆಸರು ಬಂದಿರುವದು ಈ ಉಪಾಸನೆಯಿಂದಲೇ.

5 ಕಂಡಿಕೆಗೆ ಇದರಲ್ಲಿ ಅವಾಂತರತಾತ್ಪರ್ಯವೇ ಇದೆ; ಮುಖ್ಯತಾತ್ಪರ್ಯವು ಬ್ರಹ್ಮಜ್ಞಾನಿಯು ಕಾಲವನ್ನು ಮೀರುತ್ತಾನೆಂಬುದರಲ್ಲಿದೆ.

೧೭. ಯಾವದರಲ್ಲಿ ಐದು ಪಂಚಜನರೂ ಆಕಾಶವೂ ಪ್ರತಿಷ್ಠಿತವಾಗಿವೆಯೋ, ಅದೇ ಆತ್ಮನೇ ಅಮೃತವಾದ ಬ್ರಹ್ಮವೆಂದು ತಿಳಿಯುತ್ತೇನೆ. ಅರಿತದ್ದರಿಂದ ಅಮೃತನು.

## ಅಜ್ಞಾನವು ಹೋದರೆ ಆತ್ಮನೇ ಅಮೃತಬ್ರಹ್ಮ

(ಭಾಷ್ಯ)

೨೯೪. ಕಿಂ ಚ ಯಸ್ಮಿನ್ ಯತ್ರ ಬ್ರಹ್ಮಣಿ ಪಞ್ಚ ಪಞ್ಚಜನಾಃ ಗನ್ಧರ್ವಾದಯಃ, ಪಞ್ಚೈವ ಸಂಖ್ಯಾತಾಃ –ಗನ್ಧರ್ವಾಃ, ಪಿತರಃ, ದೇವಾಃ, ಅಸುರಾಃ, ರಕ್ಷಾಂಸಿ। ನಿಷಾದಪಞ್ಚಮಾ ವಾ ವರ್ಣಾಃ। ಆಕಾಶಶ್ಚ ಅವ್ಯಾಕೃತಾಖ್ಯಃ। ಯಸ್ಮಿನ್ ಸೂತ್ರಮ್ ಓತಂ ಚ ಪ್ರೋತಂ ಚ। ಯಸ್ಮಿನ್ ಪ್ರತಿಷ್ಠಿತಃ "ಏತಸ್ಮಿನ್ನು ಖಲ್ವಕ್ಷರೇ ಗಾರ್ಗ್ಯಾಕಾಶಃ" (೩-೮-೧೧) ಇತ್ಯುಕ್ತಮ್। ತಮೇವ ಆತ್ಮಾನಮ್ ಅಮೃತಂ ಬ್ರಹ್ಮ ಮನ್ಯೇ ಅಹಮ್। ನ ಚಾಹಮ್ ಆತ್ಮಾನಂ ತತೋಽನ್ಯತ್ವೇನ ಜಾನೇ। ಕಿಂ ತರ್ಹಿ ಅಮೃತೋಽಹಂ ಬ್ರಹ್ಮ ವಿದ್ವಾನ್ ಸನ್। ಅಜ್ಞಾನಮಾತ್ರೇಣ ತು ಮರ್ತ್ಯೋಽಹಮಾಸಮ್, ತದಪಗಮಾತ್ ವಿದ್ವಾನಹಮ್ ಅಮೃತ ಏವ ॥

(ಭಾಷ್ಯಾರ್ಥ)

ಮತ್ತು ಯಾವದರಲ್ಲಿ ಯಾವ ಬ್ರಹ್ಮದಲ್ಲಿ ಐವರು[1] ಪಂಚಜನರು, ಗಂಧರ್ವರೇ ಮುಂತಾದವರು— ಗಂಧರ್ವರು, ಪಿತೃಗಳು, ದೇವತೆಗಳು, ಅಸುರರು, ರಾಕ್ಷಸರು– ಅಥವಾ ನಿಷಾದನೆಂಬ ಐದನೆಯದುಳ್ಳ (ನಾಲ್ಕು) ವರ್ಣಗಳು (ಪ್ರತಿಷ್ಠಿತವಾಗಿರುವವೋ), ಅವ್ಯಾಕೃತವೆಂಬ ಆಕಾಶವೂ, ಸೂತ್ರವು ಯಾವದರಲ್ಲಿ ಓತವೂ ಪ್ರೋತವೂ ಆಗಿದೆಯೋ, "ಎಲೈ ಗಾರ್ಗಿಯೆ, ಇದೇ ಅಕ್ಷರದಲ್ಲಿಯೇ ಆಕಾಶವು (ಓತಪ್ರೋತವಾಗಿದೆ)" (೩-೮-೧೧) ಎಂದು ಹೇಳಿದೆಯಲ್ಲ, (ಅದೂ) ಯಾವದರಲ್ಲಿ ಪ್ರತಿಷ್ಠಿತವಾಗಿದೆಯೋ ಅದೇ ಆತ್ಮನೇ ಅಮೃತವಾದ ಬ್ರಹ್ಮವೆಂದು ನಾನು ತಿಳಿದಿರುವೆನು. ನಾನು ಅದಕ್ಕಿಂತ ಬೇರೆಯೆಂದೂ ನಾನು ತಿಳಿದಿರುವದಿಲ್ಲ, ಮತ್ತೇನೆಂದರೆ ಬ್ರಹ್ಮವನ್ನು ತಿಳಿದಿರುವವನಾಗಿ ನಾನು ಅಮೃತ(ನಾಗಿರುವೆನು); **ಬರಿಯ ಅಜ್ಞಾನದಿಂದ ನಾನು ಮರ್ತ್ಯನಾಗಿದ್ದೆನು. ಅದು ಹೋದದ್ದರಿಂದ ಜ್ಞಾನಿಯಾದ ನಾನು ಅಮೃತನೇ.**

---

1. ಪಂಚಪಂಚಜನರು ಎಂದರೆ ಇಪ್ಪತ್ತೈದು ತತ್ತ್ವಗಳು ಎಂಬ ಸಾಂಖ್ಯರ ಪೂರ್ವಪಕ್ಷವನ್ನು ಸೂ. ಭಾ. ೧-೪-೧೧ರಲ್ಲಿ ಖಂಡಿಸಿದೆ.

## ಬ್ರಹ್ಮವು ಪ್ರಾಣಾದಿಗಳಿಗೂ ಸಾಮರ್ಥ್ಯದಾಯಿ

(ಉಪನಿಷತ್ತು)

**ಪ್ರಾಣಸ್ಯ ಪ್ರಾಣಮುತ ಚಕ್ಷುಷಶ್ಚಕ್ಷುರುತ ಶ್ರೋತ್ರಸ್ಯ ಶ್ರೋತ್ರಂ ಮನಸೋ ಯೇ ಮನೋ ವಿದುಃ । ತೇ ನಿಚಿಕ್ಯುರ್ಬ್ರಹ್ಮ ಪುರಾಣ ಮಗ್ರ್ಯಮ್ ॥ ೧೮ ॥**

೧೮. ಪ್ರಾಣದ ಪ್ರಾಣವು, ಮತ್ತು ಚಕ್ಷುವಿನ ಚಕ್ಷುಸ್ಸು, ಶ್ರೋತ್ರದ ಶ್ರೋತ್ರವು, ಮನಸ್ಸಿಗೆ ಮನಸ್ಸು- (ಎಂದು) ಯಾರು ಅರಿತಿರುವರೋ ಅವರು ಪುರಾಣವಾದ ಅಗ್ರ್ಯವಾದ ಬ್ರಹ್ಮವನ್ನು ಬಲ್ಲವರು.

## ಪ್ರಾಣಾದಿದ್ವಾರದಿಂದ ಆತ್ಮನನ್ನು ಅರಿಯಬೇಕು

(ಭಾಷ್ಯ)

೨೯೫. ಕಿಂ ಚ ತೇನ ಹಿ ಚೈತನ್ಯಾತ್ಮಜ್ಯೋತಿಷಾ ಅವಭಾಸ್ಯಮಾನಃ ಪ್ರಾಣಃ ಆತ್ಮಭೂತೇನ ಪ್ರಾಣಿತಿ । ತೇನ ಪ್ರಾಣಸ್ಯಾಪಿ ಪ್ರಾಣಃ ಸಃ । ತಂ ಪ್ರಾಣಸ್ಯ ಪ್ರಾಣಮ್ । ತಥಾ ಚಕ್ಷುಷೋಽಪಿ ಚಕ್ಷುಃ । ಉತ ಶ್ರೋತ್ರಸ್ಯಾಪಿ ಶ್ರೋತ್ರಮ್ । ಬ್ರಹ್ಮಶಕ್ತ್ಯಧಿಷ್ಠಿತಾನಾಂ ಹಿ ಚಕ್ಷುರಾದೀನಾಂ ದರ್ಶನಾದಿ ಸಾಮರ್ಥ್ಯಮ್, ಸ್ವತಃ ಕಾಷ್ಠಲೋಷ್ಟಸಮಾನಿ ಹಿ ತಾನಿ ಚೈತನ್ಯಾತ್ಮ ಜ್ಯೋತಿಃಶೂನ್ಯಾನಿ । ಮನಸೋಽಪಿ ಮನಃ । ಇತಿ ಯೇ ವಿದುಃ, ಚಕ್ಷುರಾದಿ ವ್ಯಾಪಾರಾನುಮಿತಾಸ್ತಿತ್ವಂ ಪ್ರತ್ಯಗಾತ್ಮಾನಂ ನ ವಿಷಯಭೂತಂ ಯೇ ವಿದುಃ, ತೇ ನಿಚಿಕ್ಯುಃ ನಿಶ್ಚಯೇನ ಜ್ಞಾತವನ್ತಃ ಬ್ರಹ್ಮ ಪುರಾಣಂ ಚಿರನ್ತನಮ್, ಅಗ್ರ್ಯಮ್ ಅಗ್ರೇ ಭವಮ್ । "ತದ್ಯದಾತ್ಮವಿದೋ ವಿದುಃ" (ಮುಂ.೨-೨-೧೦) ಇತಿ ಹಿ ಆಥರ್ವಣೇ ॥

(ಭಾಷ್ಯಾರ್ಥ)

ಮತ್ತು ಚೈತನ್ಯಸ್ವರೂಪವಾದ ಆ ಜ್ಯೋತಿಯಿಂದಲೇ ಅಲ್ಲವೆ, ಬೆಳಗಲ್ಪಟ್ಟು (ತನ್ನ) ಆತ್ಮಭೂತನಾದ (ಅದರಿಂದಲೇ ಅಲ್ಲವೆ), ಪ್ರಾಣವು ಪ್ರಾಣನ (ವ್ಯಾಪಾರ)ವನ್ನು ಮಾಡುತ್ತಿರುವದು ? ಆದರಿಂದ ಆ (ಪರಮಾತ್ಮನು) ಪ್ರಾಣಕ್ಕೂ ಪ್ರಾಣನು ; ಆ ಪ್ರಾಣಕ್ಕೂ ಪ್ರಾಣನು[1] (ಎಂದು) ; ಹೀಗೆಯೇ

---

1. ಈ ಪ್ರಾಣಾದಿಗಳೇ ಪಂಚಜನರು ಎಂದು ಬ್ರ.ಸೂ. ೧-೪-೧೨ರಲ್ಲಿ ಹೇಳಿದೆ. ಇದರಲ್ಲಿ ಸೂತ್ರಕಾರರಿಗೆ ಪರಮತಾತ್ಪರ್ಯವಿಲ್ಲವೆಂತೇ ಭಾಷ್ಯಕಾರರು ೧-೪-೧೨ರ ಭಾಷ್ಯದಲ್ಲಿ (ಭಾ.ಭಾ. ೩೬೩) ಹೇಳಿರುತ್ತಾರೆ.

ಚಕ್ಷುಸ್ಸಿಗೂ ಚಕ್ಷುವು, ಮತ್ತು ಶ್ರೋತ್ರಕ್ಕೂ ಶ್ರೋತ್ರವು (ಎಂದು)- ಬ್ರಹ್ಮಶಕ್ತಿಯಿಂದ ಅಧಿಷ್ಠಿತವಾಗಿಯೇ ಅಲ್ಲವೆ, ಚಕ್ಷುಸ್ಸು ಮುಂತಾದವುಗಳಿಗೆ ನೋಡುವದೇ ಮುಂತಾದ ಸಾಮರ್ಥ್ಯ(ವುಂಟಾಗಿರುವದು)[1] ? ಚೈತನ್ಯಾತ್ಮಜ್ಯೋತಿಯಿಲ್ಲದಿದ್ದರೆ ಅವು ಸ್ವತಃ ಕಟ್ಟಿಗೆ, ಮಣ್ಣುಹೆಂಟೆ- ಮುಂತಾದವುಗಳಿಗೆ ಸಮವೇ ಅಲ್ಲವೆ ?— ಮನಸ್ಸಿಗೂ ಮನಸ್ಸು ಎಂದು ಯಾರು ತಿಳಿಯುವರೋ, **ಚಕ್ಷುರಾದಿಗಳ ವ್ಯಾಪಾರದಿಂದ ಅನುಮಿತನಾದ ಇರವುಳ್ಳ ಪ್ರತ್ಯಗಾತ್ಮನೆಂದು ಯಾರು ಅರಿತಿರುವರೋ**[2], **(ಏತಕ್ಕಾದರೂ) ವಿಷಯನಾಗಿರುವನೆಂದು ಯಾರು ಅರಿತಿರುವದಿಲ್ಲವೋ ಅವರು ಪುರಾಣವಾದ, ಅನಾದಿಯಾದ, ಅಗ್ರ್ಯವಾದ ಮೊದಲೇ ಇದ್ದುಕೊಂಡಿರುವ** ಬ್ರಹ್ಮವನ್ನು ಬಲ್ಲವರು, (ನಿಚಿಕ್ಯುಃ) ನಿಶ್ಚಯವಾಗಿ ಅರಿತಿರುವವರು. "ಅದು ಯಾವದೆಂಬುದನ್ನು ಆತ್ಮವಿದರೇ ಬಲ್ಲರು" (೨-೨-೧೦) ಎಂದಲ್ಲವೆ, **ಆಥರ್ವಣದಲ್ಲಿದೆ ?**[3]

## ಮನಸ್ಸಿನಿಂದಲೇ ಬ್ರಹ್ಮದ ಅನುದರ್ಶನ

(ಉಪನಿಷತ್ತು)

**ಮನಸೈವಾನುದ್ರಷ್ಟವ್ಯಂ ನೇಹ ನಾನಾಸ್ತಿ ಕಿಂಚನ ।**
**ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ ॥ ೧೯ ॥**

೧೯. ಮನಸ್ಸಿನಿಂದಲೇ (ಇದನ್ನು) ಅರಿತುಕೊಳ್ಳಬೇಕು. ಇಲ್ಲಿ ನಾನಾ ಆದದ್ದು ಯಾವದೂ ಇಲ್ಲ. ಯಾವನು ಇಲ್ಲಿ ನಾನಾ ಇರುವಂತೆ ಕಾಣುತ್ತಾನೋ ಅವನು ಮೃತ್ಯುವಿನಿಂದ ಮೃತ್ಯುವನ್ನು ಪಡೆಯುತ್ತಾನೆ.

## ಮನಸ್ಸಿನಿಂದಲೇ ಅದ್ವೈತಬ್ರಹ್ಮವನ್ನು ಅರಿತುಕೊಳ್ಳಬೇಕು

(ಭಾಷ್ಯ)

ತದ್ಬ್ರಹ್ಮದರ್ಶನೇ ಸಾಧನಮ್ ಉಚ್ಯತೇ । ಮನಸೈವ ಪರಮಾರ್ಥ

---

1. ಕರಣಗಳಿಗೆ ಸ್ವತಃ ಚೈತನ್ಯವಿಲ್ಲ, ಆತ್ಮಚೈತನ್ಯದ ಬೆಳಕಿನ ಆಭಾಸವೇ ಅವುಗಳ ಮೂಲಕ ವಿಷಯವನ್ನು ಬೆಳಗುವದು ಎಂದರ್ಥ. ಕೇ. ಭಾ. ೧-೧-೩ನ್ನು ನೋಡಿ

2. ಇಲ್ಲಿ ಅನುಮಾನಕ್ಕೆ ವಿಷಯನೆಂದೇನೂ ಅರ್ಥವಲ್ಲ, ಏಕೆಂದರೆ ಆತ್ಮನು ವಿಷಯನಲ್ಲವೆಂದೇ ಸ್ಪಷ್ಟವಾಗಿ ಇಲ್ಲಿ ಹೇಳಿರುತ್ತದೆ. ಆಯಾ ಅರಿವನ್ನು ನೆಪವಾಗಿ ಮಾಡಿಕೊಂಡು ಆತ್ಮನನ್ನು ತಿಳಿಯಬೇಕೆಂದಿಷ್ಟೇ ಅರ್ಥ. ಕೇ. ಭಾ. ೨-೪ (ಭಾ. ಭಾ. ೫೪)ನೋಡಿ

3. ಪ್ರತ್ಯಗಾತ್ಮನೆಂದು ಅರಿತುಕೊಂಡವರೇ ಬ್ರಹ್ಮವನ್ನು ಅರಿತವರು, ವಿಷಯವಾಗಿ ಅರಿತವರಲ್ಲ ಎಂದು ಈ ಶ್ರುತಿಯಲ್ಲಿ ಹೇಳಿರುತ್ತದೆ.

ಜ್ಞಾನಸಂಸ್ಕೃತೇನ ಆಚಾರ್ಯೋಪದೇಶಪೂರ್ವಕಂ ಚ ಅನುದ್ರಷ್ಟವ್ಯಮ್ । ತತ್ರ ಚ ದರ್ಶನವಿಷಯೇ ಬ್ರಹ್ಮಣಿ ನೇಹ ನಾನಾ ಅಸ್ತಿ ಕಿಂಚನ ಕಿಂಚಿದಪಿ । ಅಸತಿ ನಾನಾತ್ವೇ ನಾನಾತ್ವಮ್ ಅಧ್ಯಾರೋಪಯತಿ ಅವಿದ್ಯಯಾ । ಸಃ ಮೃತ್ಯೋಃ ಮರಣಾತ್ ಮೃತ್ಯುಂ ಮರಣಮ್ ಆಪ್ನೋತಿ । ಕೋಽಸೌ ? ಯಃ ಇಹ ನಾನೇವ ಪಶ್ಯತಿ । ಅವಿದ್ಯಾಧ್ಯಾರೋಪಣವ್ಯತಿರೇಕೇಣ ನಾಸ್ತಿ ಪರಮಾರ್ಥತೋ ದ್ವೈತಮ್ ಇತ್ಯರ್ಥಃ ॥

(ಭಾಷ್ಯಾರ್ಥ)

ಆ ಬ್ರಹ್ಮವನ್ನು ಕಾಣುವದಕ್ಕೆ ಸಾಧನವನ್ನು ಹೇಳಲಾಗುತ್ತದೆ : **ಮನಸ್ಸಿನಿಂದಲೇ ಪರಮಾರ್ಥಜ್ಞಾನದಿಂದ ಸಂಸ್ಕೃತವಾದ (ಮನಸ್ಸಿನಿಂದಲೇ) ಮತ್ತು ಆಚಾರ್ಯೋಪದೇಶಪೂರ್ವಕವಾಗಿಯೇ ಅನುದರ್ಶನಮಾಡಿಕೊಳ್ಳಬೇಕು**[1]. ಮತ್ತು ಆ ದರ್ಶನಕ್ಕೆ ವಿಷಯವಾದ ಬ್ರಹ್ಮದಲ್ಲಿ, ಇಲ್ಲಿ, ನಾನಾತ್ವವು ಯಾವದೂ ಒಂದಿಷ್ಟೂ ಇರುವದಿಲ್ಲ, ನಾನಾತ್ವವು ಇಲ್ಲದೆ ಇದ್ದರೂ ಅವಿದ್ಯೆಯಿಂದ ನಾನಾತ್ವವನ್ನು ಅಧ್ಯಾರೋಪಮಾಡಿಕೊಂಡಿರುತ್ತಾನೆ[2] ಅವನು (ಒಂದು) ಮೃತ್ಯುವಿನಿಂದ ಸಾವಿನಿಂದ (ಇನ್ನೊಂದು) ಮೃತ್ಯುವನ್ನು ಸಾವನ್ನು ಪಡೆಯುತ್ತಾನೆ ಅವನು ಯಾರು ? ಎಂದರೆ ಯಾವನು ಈ (ಬ್ರಹ್ಮದಲ್ಲಿ) ನಾನಾತ್ವವು (ಇರು)ವಂತೆ (ಅವಿದ್ಯೆಯಿಂದ) ಕಾಣುವನೋ ಅವನು. **ಅವಿದ್ಯೆಯಿಂದ ಅಧ್ಯಾರೋಪಮಾಡಿಕೊಂಡಿರುವದೇ ಹೊರತು ಅದಕ್ಕಿಂತ ಬೇರೆಯಾಗಿ ನಿಜವಾಗಿ ದ್ವೈತವು ಇರುವದಿಲ್ಲ ಎಂದರ್ಥ.**

## ಬ್ರಹ್ಮಸ್ವರೂಪ

(ಉಪನಿಷತ್ತು)

**ಏಕಧೈವಾನುದ್ರಷ್ಟವ್ಯಮೇತದಪ್ರಮಯಂ ಧ್ರುವಮ್ ।**
**ವಿರಜಃ ಪರ ಆಕಾಶಾದಜ ಆತ್ಮಾ ಮಹಾನ್ ಧ್ರುವಃ ॥ ೨೦ ॥**

೨೦. ಒಂದು ಬಗೆಯಿಂದಲೇ ಕಾಣತಕ್ಕದ್ದು, ಇದು ಅಪ್ರಮೇಯವೂ ಧ್ರುವವೂ ಆಗಿರುತ್ತದೆ. ಆತ್ಮನು ವಿರಜನು, ಆಕಾಶಕ್ಕಿಂತಲೂ ಆಚೆನವನು, ಅಜನು, ಮಹಾಂತನು, ಧ್ರುವನು.

---

1. ಗೀ. ಭಾ. ೨-೨೧ (ಭಾ.ಭಾ. ೪೦)ನ್ನು ನೋಡಿ.
2. ಅರಿತಮೇಲೆ ಈ ಅವಿದ್ಯೆಯು ತೊಲಗುವದರಿಂದ ನಾನಾತ್ವವು ಒಂದಿಷ್ಟೂ ಇರುವದೇ ಇಲ್ಲ ಎಂದರ್ಥ. ಕ.ಭಾ ೨-೧-೧೧ (ಭಾ.ಭಾ. ೧೧)ನ್ನು ನೋಡಿ.

## ಬ್ರಹ್ಮವನ್ನು ಏಕರಸವಾಗಿಯೇ ಅರಿಯಬೇಕು

(ಭಾಷ್ಯ)

೨೯೭. ಯಸ್ಮಾದೇವಂ ತಸ್ಮಾತ್ ಏಕಧೈವ ಏಕೇನೈವ ಪ್ರಕಾರೇಣ ವಿಜ್ಞಾನಘನೈಕರಸಪ್ರಕಾರೇಣ ಆಕಾಶವತ್ ನಿರನ್ತರೇಣ ಅನುದ್ರಷ್ಟವ್ಯಮ್ । ಯಸ್ಮಾತ್ ಏತದ್ ಬ್ರಹ್ಮ ಅಪ್ರಮಯಮ್ ಅಪ್ರಮೇಯಮ್ । ಸರ್ವೈಕತ್ವಾತ್ । ಅನ್ಯೇನ ಹಿ ಅನ್ಯತ್ ಪ್ರಮೀಯತೇ । ಇದಂ ತು ಏಕಮೇವ, ಅತೋಽಪ್ರಮೇಯಮ್ । ಧ್ರುವಂ ನಿತ್ಯಂ ಕೂಟಸ್ಥಮ್ ಅವಿಚಾಲಿ ಇತ್ಯರ್ಥಃ ॥

(ಭಾಷ್ಯಾರ್ಥ)

ಹೀಗಿರುವದಷ್ಟೆ[1], ಆದ್ದರಿಂದ ಒಂದು ಬಗೆಯಿಂದಲೇ ವಿಜ್ಞಾನಘನವೆಂಬ ಏಕರಸವಾಗಿರುವ ಒಂದೇ ಪ್ರಕಾರದಿಂದಲೇ[2] ಆಕಾಶದಂತೆ ಕಡಿವಡಿಯದ (ಪ್ರಕಾರ)ದಿಂದಲೇ[3] ಅನುದರ್ಶನಮಾಡಿಕೊಳ್ಳಬೇಕು. ಏಕೆಂದರೆ ಈ ಬ್ರಹ್ಮವು (ಅಪ್ರಮಯಮ್ = ಅಪ್ರಮೇಯಮ್) ಅಪ್ರಮೇಯವು; ಏಕೆಂದರೆ ಎಲ್ಲದರೊಡನೆಯೂ ಒಂದಾಗಿರುತ್ತದೆ[4]. (ಇದರ ವಿವರ) : **ಮತ್ತೊಂದರಿಂದಲ್ಲವೆ, ಯಾವದಾದರೊಂದು (ವಸ್ತು) ಪ್ರಮಿತವಾಗುತ್ತದೆ[5] ? ಆದರೆ ಇದು ಒಂದೇ ಆದ್ದರಿಂದ ಅಪ್ರಮೇಯವು.** ಧ್ರುವವು, ನಿತ್ಯವಾದದ್ದು, ಕೂಟಸ್ಥವಾದದ್ದು, ಅಲುಗಾಡದ್ದು[6] ಎಂದರ್ಥ.

## ಬ್ರಹ್ಮವು ಅಪ್ರಮೇಯವಾದರೂ ಜ್ಞೇಯವೆಂಬುದು ಹೇಗೆ?

(ಭಾಷ್ಯ)

೨೯೮. ನನು ವಿರುದ್ಧಮ್ ಇದಮುಚ್ಯತೇ ಅಪ್ರಮೇಯಮ್, ಜ್ಞಾಯತೇ ಇತಿ ಚ । ಜ್ಞಾಯತೇ ಇತಿ ಪ್ರಮಾಣೈರ್ನಿರ್ಮೀಯತೇ ಇತ್ಯರ್ಥಃ ।

---

1. ಬ್ರಹ್ಮವು ನಾನಾತ್ವವಿಲ್ಲದ್ದಷ್ಟೆ.
2. ಸ್ವಗತಭೇದವಿರುವ ನಾನಾರಸವಾದದ್ದಲ್ಲದ್ದೆಂಬ ಪ್ರಕಾರದಿಂದಲೇ ಎಂದರ್ಥ.
3. ಆಕಾಶವು ಎಲ್ಲೆಲ್ಲಿಯೂ ಒಂದೇ, ಅದಕ್ಕೆ ನಡುನಡುವೆ ಅನಾಕಾಶವಾದದ್ದು ಯಾವದೂ ಇರುವದಿಲ್ಲ; ಇದರಂತೆ ವಿಜ್ಞಾನಘನವೇ ಬ್ರಹ್ಮವು, ಅದರ ನಡುವೆ ಅಚೇತನವು ಇಲ್ಲವೇ ಇಲ್ಲ ಎಂದು ಭಾವ.
4. ಬ್ರಹ್ಮವನ್ನು ಬಿಟ್ಟರೆ ಮತ್ತೆ ಯಾವದೊಂದೂ ಬೇರೆಯಿರುವದೇ ಇಲ್ಲ.
5. ಪ್ರಮಾಣವು ಬೇರೆ, ಪ್ರಮೇಯವು ಬೇರೆ; ಆದ್ದರಿಂದ ಪ್ರಮೇಯವು ಪ್ರಮಾಣದಿಂದ ಪ್ರಮಿತವಾಗುತ್ತದೆ. ಆದರೆ ಒಂದೇ ಆಗಿರುವ ಅದ್ವಿತೀಯಬ್ರಹ್ಮದಲ್ಲಿ ಪ್ರಮಾಣಪ್ರಮೇಯವಿಭಾಗವು ಇರುವದಕ್ಕೆ ಕಾರಣವಿಲ್ಲ ಎಂದರ್ಥ.
6. ಯಾವ ವಿಕಾರವೂ ಇಲ್ಲದ್ದು ; ಆದ್ದರಿಂದ ಇದನ್ನು ಅರಿತರೆ ಅಮೃತತ್ವವಾಗುತ್ತದೆ.

ಅಪ್ರಮೇಯಮ್ ಇತಿ ಚ ತತ್ಪ್ರತಿಷೇಧಃ। ನೈಷ ದೋಷಃ। ಅನ್ಯವಸ್ತುವತ್ ಅನಾಗಮಪ್ರಮಾಣಪ್ರಮೇಯತ್ವಪ್ರತಿಷೇಧಾರ್ಥತ್ವಾತ್। ಯಥಾ ಅನ್ಯಾನಿ ವಸ್ತೂನಿ ಆಗಮನಿರಪೇಕ್ಷೈಃ ಪ್ರಮಾಣೈಃ ವಿಷಯೀಕ್ರಿಯನ್ತೇ, ನ ತಥಾ ಏತದ್ ಆತ್ಮತತ್ತ್ವಂ ಪ್ರಮಾಣಾನ್ತರೇಣ ವಿಷಯೀಕರ್ತುಂ ಶಕ್ಯತೇ। ಸರ್ವಸ್ಯ ಆತ್ಮತ್ವೇ ಕೇನ ಕಂ ಪಶ್ಯೇತ್, ವಿಜಾನೀಯಾತ್ ಇತಿ। ಪ್ರಮಾತೃಪ್ರಮಾಣಾದಿ ವ್ಯಾಪಾರಪ್ರತಿಷೇಧೇನೈವ ಆಗಮೋಽಪಿ ವಿಜ್ಞಾಪಯತಿ ನ ತು ಅಭಿಧಾನಾಭಿ ಧೇಯಲಕ್ಷಣವಾಕ್ಯಧರ್ಮಾಙ್ಗೀಕರಣೇನ। ತಸ್ಮಾತ್ ನಾಗಮೇನಾಪಿ ಸ್ವರ್ಗ ಮೇರ್ವಾದಿವತ್ ತತ್ ಪ್ರತಿಪಾದ್ಯತೇ। ಪ್ರತಿಪಾದಯಿತ್ರಾತ್ಮಭೂತಂ ಹಿ ತತ್। ಪ್ರತಿಪಾದಯಿತುಃ ಪ್ರತಿಪಾದನಸ್ಯ ಪ್ರತಿಪಾದ್ಯವಿಷಯತ್ವಾತ್। ಭೇದೇ ಹಿ ಸತಿ ತದ್ ಭವತಿ। ಜ್ಞಾನಂ ಚ ತಸ್ಮಿನ್ ಪರಾತ್ಮಭಾವನಿವೃತ್ತಿರೇವ। ನ ತಸ್ಮಿನ್ ಸಾಕ್ಷಾತ್ ಆತ್ಮಭಾವಃ ಕರ್ತವ್ಯಃ। ವಿದ್ಯಮಾನತ್ವಾತ್ ಆತ್ಮಭಾವಸ್ಯ। ನಿತ್ಯೋ ಹಿ ಆತ್ಮಭಾವಃ ಸರ್ವಸ್ಯ ಅತದ್ವಿಷಯ ಇವ ಪ್ರತ್ಯವಭಾಸತೇ। ತಸ್ಮಾತ್ ಅತದ್ವಿಷಯಾವಭಾಸನಿವೃತ್ತಿವ್ಯತಿರೇಕೇಣ ನ ತಸ್ಮಿನ್ ಆತ್ಮಭಾವೋ ವಿಧೀಯತೇ। ಅನ್ಯಾತ್ಮಭಾವನಿವೃತ್ತೌ ಆತ್ಮಭಾವಃ ಸ್ವಾತ್ಮನಿ ಸ್ವಾಭಾವಿಕೋ ಯಃ ಸ ಕೇವಲೋ ಭವತಿ ಇತಿ ಆತ್ಮಾ ಜ್ಞಾಯತೇ ಇತ್ಯುಚ್ಯತೇ। ಸ್ವತಶ್ಚ ಅಪ್ರಮೇಯಃ, ಪ್ರಮಾಣಾನ್ತರೇಣ ನ ವಿಷಯೀಕ್ರಿಯತೇ ಇತಿ ಉಭಯಮಪಿ ಅವಿರುದ್ಧಮೇವ ॥

(ಭಾಷ್ಯಾರ್ಥ)

(ಆಕ್ಷೇಪ) :– ಅಪ್ರಮೇಯವೂ (ಆಗಿದೆ), ಅರಿಯಲ್ಪಡುತ್ತಲೂ[1] (ಇದೆ) –ಎಂಬಿದು ವಿರುದ್ಧವನ್ನು ಹೇಳಿದ್ದಾಗಲಿಲ್ಲವೆ? (ಏಕೆಂದರೆ), ಅರಿಯಲ್ಪಡುತ್ತದೆ ಎಂದರೆ ಪ್ರಮಾಣಗಳಿಂದ ಗೊತ್ತಾಗುತ್ತದೆ ಎಂದರ್ಥ; ಅಪ್ರಮೇಯವು ಎಂದರೆ ಹಾಗಲ್ಲ(ವೆಂದರ್ಥ).

(ಪರಿಹಾರ) :– ಇದೇನೂ ದೋಷವಲ್ಲ. ಏಕೆಂದರೆ ಬೇರೆಯ ವಸ್ತುಗಳಂತೆ ಆಗಮವಲ್ಲದ ಪ್ರಮಾಣದಿಂದ ಗೊತ್ತಾಗುವದಲ್ಲವೆಂಬುದಕ್ಕಾಗಿ (ಹೀಗೆ ಹೇಳಿರುತ್ತದೆ. ಇದರ ವಿವರ): **ಬೇರೆಯ ವಸ್ತುಗಳು ಹೇಗೆ ಆಗಮವನ್ನು ಬಯಸದ ಪ್ರಮಾಣಗಳಿಂದ[2] ವಿಷಯೀಕೃತವಾಗುವವೋ**

---

1. ಅನುದ್ರಷ್ಟವ್ಯಮ್– ಕಾಣತಕ್ಕದ್ದು, ಅಪ್ರಮೇಯಮ್– ಪ್ರಮೇಯವಲ್ಲ ಎಂದು ಹೇಳಿರುವದು ತನಗೆ ತಾನೇ ವಿರುದ್ಧವಾದ ಮಾತಲ್ಲವೆ ?

2. ಪ್ರತ್ಯಕ್ಷಾದಿಗಳು ಆಗಮವನ್ನು ಬಯಸದೆ ತಮ್ಮತಮ್ಮ ವಿಷಯವನ್ನು ತಿಳಿಸುತ್ತವೆ; ಆದರೆ ಆತ್ಮನನ್ನು ತಿಳಿಸಲಾರವು.

**ಹಾಗೆ ಈ ಆತ್ಮತತ್ತ್ವವು ಮತ್ತೊಂದು ಪ್ರಮಾಣದಿಂದ ವಿಷಯೀಕರಿಸುವದಕ್ಕೆ ಶಕ್ಯವಲ್ಲ. ಎಲ್ಲಕ್ಕೂ (ಇದು) ಆತ್ಮನಾಗಿರುವಲ್ಲಿ ಏತರಿಂದ ಯಾರನ್ನು ಕಂಡಾನು ಅರಿತಾನು[1]? ಆಗಮವಾದರೂ ಪ್ರಮಾತೃ ಪ್ರಮಾಣವೇ ಮುಂತಾದವುಗಳ ವ್ಯಾಪಾರವನ್ನು ಅಲ್ಲಗಳೆಯುವದರಿಂದಲೇ (ಆತ್ಮತತ್ತ್ವವನ್ನು) ತಿಳಿಸಿಕೊಡುತ್ತದೆಯೇ ಹೊರತು ಅಭಿಧಾನ, ಅಭಿಧೇಯ- ಎಂಬ ವಾಕ್ಯಧರ್ಮವನ್ನು[2] ಅಂಗೀಕರಿಸಿ (ತಿಳಿಸಿಕೊಡು)ವದಿಲ್ಲ.** ಆದ್ದರಿಂದ ಆಗಮದಿಂದಲೂ ಇದು ಸ್ವರ್ಗ, ಮೇರು -ಮುಂತಾದವುಗಳಂತೆ ಪ್ರತಿಪಾದಿಸಲ್ಪಡುವದಿಲ್ಲ. ಏಕೆಂದರೆ ಅದು ಪ್ರತಿಪಾದನೆ ಮಾಡುವ (ವಾಕ್ಯದ) ಆತ್ಮನೇ ಆಗಿರುತ್ತದೆ. ಪ್ರತಿಪಾದನೆಮಾಡುವ (ವಾಕ್ಯದ) ಪ್ರತಿಪಾದನೆಗೆ ಪ್ರತಿಪಾದ್ಯವೇ ವಿಷಯವಾಗಿರುತ್ತದೆಯಾದ್ದರಿಂದ (ಪ್ರತಿಪಾದಕ, ಪ್ರತಿಪಾದ್ಯ ಎಂಬ) ಭೇದವಿದ್ದರಲ್ಲವೆ, ಆ (ಪ್ರತಿಪಾದನೆಯು) ಆಗುತ್ತದೆ? ಮತ್ತು **ಆ (ಆತ್ಮವಸ್ತು)ವಿನ (ವಿಷಯ)ದಲ್ಲಿ ಜ್ಞಾನವು ಎಂದರೆ ಮತ್ತೊಂದು ಸ್ವರೂಪದ ಭಾವದ ನಿವೃತ್ತಿಯೇ ಹೊರತು, ಅದರಲ್ಲಿ ನೇರಾಗಿ ಆತ್ಮಭಾವವನ್ನೇನೂ ಉಂಟುಮಾಡಬೇಕಾದದ್ದಿರುವದಿಲ್ಲ; ಏಕೆಂದರೆ ಆತ್ಮಭಾವವು ಇದ್ದೇಇರುತ್ತದೆ[3].** (ಇದರ ವಿವರ): ಪ್ರತಿಯೊಬ್ಬನಿಗೂ ಆತ್ಮತ್ವವೆಂಬುದು ನಿತ್ಯವೇ ಆಗಿದ್ದು ತಾನಲ್ಲದ (ಮತ್ತೊಂದರ) ವಿಷಯವುಳ್ಳದ್ದರಂತೆ ತೋರುತ್ತಿರುತ್ತದೆಯಲ್ಲವೆ[4]? ಆದ್ದರಿಂದ ತಾನಲ್ಲದ

---

1. ಎಲ್ಲವೂ ಆತ್ಮತತ್ತ್ವವೇ ಆಗಿರುವಲ್ಲಿ ಪ್ರಮಾಣಪ್ರಮೇಯವ್ಯವಹಾರವು ಇರಲಾರದೆಂಬುದಕ್ಕೆ ಯುಕ್ತಿಯಿದು; ೨-೪-೧೪ರ ಭಾಷ್ಯ (ಭಾ ಭಾ. ೩೭೭)ವನ್ನು ನೋಡಿ.

2. ವಾಕ್ಯವು ಒಂದಾನೊಂದು ಹೊಸ ಅರ್ಥವನ್ನು ತಿಳಿಸಬೇಕಷ್ಟೆ, ಇದಕ್ಕೆ ಶಬ್ದ, ಅರ್ಥ- ಎಂಬ ಸಂಬಂಧವುಳ್ಳ ಪದಗಳು ಬೇಕಾಗುತ್ತವೆ. ಆದರೆ ಆತ್ಮವಸ್ತುವನ್ನು ಹೀಗೆ ವಾಕ್ಯವು ತಿಳಿಸಲಾರದು, ಏಕೆಂದರೆ ವಾಕ್ಯದಲ್ಲಿರುವ ಪದ, ಅವುಗಳು ಹೇಳುವ ಪದಾರ್ಥ- ಎಲ್ಲಕ್ಕೂ ಇನು ಆತ್ಮನೇ, ಸ್ವರೂಪವೇ ಆಗಿರುತ್ತದೆ. ಆದ್ದರಿಂದ ಶಾಸ್ತ್ರವಾಕ್ಯವು ಮಿಕ್ಕ ವಾಕ್ಯಗಳಂತೆ ತಿಳಿಸುವದಿಲ್ಲ, ಅದಲ್ಲದ್ದನ್ನು ಅಲ್ಲಗಳೆಯುವದರಿಂದ ತಿಳಿಸುತ್ತದೆ. ಆಗಮದ ವಿಷಯಕ್ಕೆ ಪೀಠಿಕೆಯನ್ನು ನೋಡಿ.

3. ಶಾಸ್ತ್ರವು ಆತ್ಮನನ್ನು ವಿಷಯವಾಗಿ ಪ್ರತಿಪಾದನೆಮಾಡದಿದ್ದರೆ ಆತ್ಮವಿಷಯದಲ್ಲಿ ಅದು ಪ್ರಮಾಣವೆಂಬುದಾದರೂ ಹೇಗೆ? -ಎಂದರೆ ದೇಹಾದಿಗಳಲ್ಲಿರುವ ಆತ್ಮಭಾವವನ್ನು ತೊಲಗಿಸುವದರಿಂದಲೇ ಅದು ಪ್ರಮಾಣವೆನಿಸುತ್ತದೆ. ಆತ್ಮನಲ್ಲಿ ಆತ್ಮತ್ವವು ಸ್ವತಃಸಿದ್ಧವಾಗಿರುವದರಿಂದ ಅದನ್ನೇನೂ ಪ್ರತಿಪಾದಿಸಬೇಕಾದದ್ದಿಲ್ಲ ಎಂದು ಭಾವ.

4. ಅನಾತ್ಮದಲ್ಲಿಯೇ ಆತ್ಮತ್ವವಿರುವಂತೆ ಅವಿದ್ಯಾದೃಷ್ಟಿಯವರಿಗೆ ತೋರುತ್ತಿರುತ್ತದೆಯಷ್ಟೆ.

ವಿಷಯವಾಗಿ ತೋರುವಿಕೆಯನ್ನು ತೊಲಗಿಸುವದರ ಹೊರತಾಗಿ ಆ (ಆತ್ಮವಸ್ತು)ವಿನಲ್ಲಿ ಆತ್ಮತ್ವವನ್ನೇನೂ (ಆಗಮವು) ತಿಳಿಸುವದಿಲ್ಲ. ಅನಾತ್ಮಭಾವವು ತೊಲಗಲು, ತನ್ನ ಆತ್ಮನಲ್ಲಿ ಸ್ವಾಭಾವಿಕವಾಗಿರುವ ಆತ್ಮಭಾವವಿದೆಯಲ್ಲ, ಅದೊಂದೇ ಆಗುತ್ತದೆ ಎಂಬ ಕಾರಣದಿಂದ ಆತ್ಮನು (ಆಗಮದಿಂದ) ಅರಿಯಲ್ಪಡುತ್ತಾನೆ ಎಂದು ಹೇಳುತ್ತಾರೆ (ಆತ್ಮನು) ತಾನುತಾನು ಅಪ್ರಮೇಯನೇ, ಮತ್ತೊಂದು ಪ್ರಮಾಣದಿಂದ ವಿಷಯೀಕೃತನಾಗುವನಲ್ಲ- ಎಂಬಿವೆರಡೂ ಅವಿರುದ್ಧವೇ[1].

## ಆತ್ಮಸ್ವರೂಪ

(ಭಾಷ್ಯ)

೨೯೯. ವಿರಜಃ ವಿಗತರಜಃ । ರಜೋ ನಾಮ ಧರ್ಮಾಧರ್ಮಾದಿ ಮಲಮ್, ತದ್ರಹಿತಃ ಇತ್ಯೇತತ್ । ಪರಃ ಪರೋ ವ್ಯತಿರಿಕ್ತಃ, ಸೂಕ್ಷ್ಮಃ, ವ್ಯಾಪೀ ವಾ । ಆಕಾಶಾದಪಿ ಅವ್ಯಾಕೃತಾಖ್ಯಾತ್ । ಅಜಃ ನ ಜಾಯತೇ । ಜನ್ಮಪ್ರತಿಷೇಧಾತ್ ಉತ್ತರೇಽಪಿ ಭಾವವಿಕಾರಾಃ ಪ್ರತಿಷಿದ್ಧಾಃ । ಸರ್ವೇಷಾಂ ಜನ್ಮಾದಿತ್ವಾತ್ । ಆತ್ಮಾ ಮಹಾನ್ ಪರಿಮಾಣತೋ ಮಹತ್ತರಃ ಸರ್ವಸ್ಮಾತ್ । ಧ್ರುವಃ ಅವಿನಾಶೀ ॥

(ಭಾಷ್ಯಾರ್ಥ)

(ಆತ್ಮನು) ವಿರಜನು, ರಜಸ್ಸಿಲ್ಲದವನು , ರಜಸ್ಸು ಎಂದರೆ ಧರ್ಮಾಧರ್ಮಗಳೇ ಮುಂತಾದ ಕಲ್ಮಷವು, ಅದಿಲ್ಲದವನು ಎಂದು ತಾತ್ಪರ್ಯ. ಆಕಾಶಕ್ಕಿಂತಲೂ ಆಚೆನವನು[2]; ಆಚೆನವನೆಂದರೆ ವ್ಯತಿರಿಕ್ತನು, ಸೂಕ್ಷ್ಮನು, ಅಥವಾ ವ್ಯಾಪಿಯು; ಅವ್ಯಾಕೃತವೆಂಬ (ಆಕಾಶಕ್ಕಿಂತಲೂ ಪರನು). ಅಜನು ಹುಟ್ಟುವದಿಲ್ಲ. ಹುಟ್ಟನ್ನು ಇಲ್ಲವೆಂದದ್ದರಿಂದ (ಅದರ) ಮುಂದಿನ

---

1. ಮತ್ತೊಂದು ಆತ್ಮವಲ್ಲ ಎಂದು ತಿಳಿಸಿದ್ದರಿಂದ ಆತ್ಮನಲ್ಲಿಯೇ ಮೊದಲಿಂದಲೂ ಇದ್ದ ಆತ್ಮತ್ವವು ಉಳಿದುಕೊಳ್ಳುತ್ತದೆ; ಇದನ್ನೇ ಆತ್ಮನ ಜ್ಞಾನ ಎಂದು ಕರೆಯುವದು, ವಿಷಯೀಕೃತವಾಗುವದೆಂಬುದನ್ನೇನೂ ಅಲ್ಲ. ಪ್ರತ್ಯಕ್ಷಾದಿಪ್ರಮಾಣಗಳಿಗೆ ಇದು ವಿಷಯವಲ್ಲ ಎಂಬ ಕಾರಣದಿಂದ ಇದನ್ನು ಅಪ್ರಮೇಯ ಎನ್ನುತ್ತಾರೆ. ಆದ್ದರಿಂದ ಶಾಸ್ತ್ರದಿಂದ ಆತ್ಮನನ್ನು ಅರಿಯಬೇಕು, ಅವನು ಪ್ರಮೇಯನಲ್ಲ- ಎಂಬುದು ವ್ಯಾಹತೋಕ್ತಿಯಲ್ಲ ಎಂದರ್ಥ.

2 ಅವ್ಯಾಕೃತವು ಕಾರ್ಯವಾದ ವಿಶ್ವ ಎಲ್ಲಕ್ಕಿಂತಲೂ ಹೆಚ್ಚಿನ ಸೂಕ್ಷ್ಮವ್ಯಾಪಿಯು; ಆತ್ಮತತ್ತ್ವವು ಅದಕ್ಕಿಂತಲೂ ಹೆಚ್ಚಿನದು. ೩-೮-೧೧ನ್ನೂ ಮುಂ ಭಾ ೨-೧-೨ (ಭಾ ಭಾ. ೫೫)ನ್ನೂ ನೋಡಿ.

ಭಾವವಿಕಾರಗಳನ್ನೂ[1] ಇಲ್ಲನೆಂದಂತೆ ಆಯಿತು, ಏಕೆಂದರೆ ಅವೆಲ್ಲಕ್ಕೂ ಹುಟ್ಟೇ ಆದಿ. (ಈ) ಆತ್ಮನು ಮಹಾಂತನು, ಎಲ್ಲಕ್ಕಿಂತಲೂ ಪರಿಮಾಣದಲ್ಲಿ ದೊಡ್ಡವನು, ಧ್ರುವನು, ವಿನಾಶವಿಲ್ಲದವನು[2].

## ಪ್ರಜ್ಞೆಯನ್ನು ಮಾಡಿಕೊಳ್ಳುವದೇ ಗುರಿಯಾಗಿರಲಿ

(ಉಪನಿಷತ್ತು)

**ತಮೇವ ಧೀರೋ ವಿಜ್ಞಾಯ ಪ್ರಜ್ಞಾಂ ಕುರ್ವೀತ ಬ್ರಾಹ್ಮಣಃ ।**
**ನಾನುಧ್ಯಾಯಾದ್ಬಹೂಞ್ಛಬ್ದಾನ್ ವಾಚೋ ವಿಗ್ಲಾಪನಗ್ಂ ಹಿ ತತ್॥**

೨೧. ಧೀರನಾದ ಬ್ರಾಹ್ಮಣನು ಆ (ಆತ್ಮನನ್ನೇ) ಅರಿತುಕೊಂಡು ಪ್ರಜ್ಞೆಯನ್ನು ಮಾಡಿಕೊಳ್ಳಬೇಕು. ಬಹಳ ಶಬ್ದಗಳನ್ನು ಅನುಧ್ಯಾನಮಾಡಬಾರದು, ಏಕೆಂದರೆ ಅದು ವಾಕ್ಕಿಗೆ ವಿಗ್ಲಾಪನವೇ (ಆಗಿದೆ).

## ಜ್ಞಾನಸಾಧನವನ್ನೇ ಅನುಷ್ಠಾನಮಾಡಬೇಕು

(ಭಾಷ್ಯ)

೩೦೦ ತಮ್ ಈದೃಶಮ್ ಆತ್ಮಾನಮೇವ ಧೀರಃ ಧೀಮಾನ್ ವಿಜ್ಞಾಯ ಉಪದೇಶತಃ ಶಾಸ್ತ್ರತಶ್ಚ ಪ್ರಜ್ಞಾಂ ಶಾಸ್ತ್ರಾಚಾರ್ಯೋಪದಿಷ್ಟ ವಿಷಯಾಂ ಜಿಜ್ಞಾಸಾಪರಿಸಮಾಪ್ತಿಕರೀಂ ಕುರ್ವೀತ ಬ್ರಾಹ್ಮಣಃ । ಏವಂ ಪ್ರಜ್ಞಾಕರಣಸಾಧನಾನಿ ಸಂನ್ಯಾಸಶಮದಮೋಪರಮತಿತಿಕ್ಷಾಸಮಾಧಾನಾನಿ ಕುರ್ಯಾತ್ ಇತ್ಯರ್ಥಃ । ನಾನುಧ್ಯಾಯಾತ್ ನಾನುಚಿನ್ತಯೇತ್ ಬಹೂನ್ ಪ್ರಭೂತಾನ್ ಶಬ್ದಾನ್ । ತತ್ರ ಬಹುತ್ವಪ್ರತಿಷೇಧಾತ್ ಕೇವಲಾತ್ಮೈಕತ್ವ ಪ್ರತಿಪಾದಕಾಃ ಸ್ವಲ್ಪಾಃ ಶಬ್ದಾಃ ಅನುಜ್ಞಾಯನ್ತೇ "ಓಮಿತ್ಯೇವಂ ಧ್ಯಾಯಥ ಆತ್ಮಾನಮ್" (ಮುಂ. ೨-೨-೬) "ಅನ್ಯಾ ವಾಚೋ ವಿಮುಞ್ಚಥ" (ಮುಂ. ೨-೨-೫), ಇತಿ ಚಾಥರ್ವಣೇ । ವಾಚಃ ವಿಗ್ಲಾಪನಂ ವಿಶೇಷೇಣ ಗ್ಲಾನಿಕರಂ ಶ್ರಮಕರಂ ಹಿ ಯಸ್ಮಾತ್ ತತ್ ಬಹುಶಬ್ದಾಭಿಧ್ಯಾನಮ್ ಇತಿ ॥

---

1. ಅಸ್ತಿ, ವರ್ಧತೇ– ಮುಂತಾದ ಮುಂದಿನ ಐದು ಭಾವವಿಕಾರಗಳನ್ನು.
2. ಆತ್ಮನು ಅಪ್ರಮೇಯನಾದರೂ ಈ ಸ್ವರೂಪದವನೆಂದು ಶಾಸ್ತ್ರದಿಂದ ತಿಳಿಯ ಬರುತ್ತಾನೆ ಎಂದು ಅಭಿಪ್ರಾಯ.

(ಭಾಷ್ಯಾರ್ಥ)

**ಆ ಇಂಥ ಆತ್ಮನನ್ನೇ ಧೀರನು ವಿವೇಕವಂತನು ಉಪದೇಶದಿಂದಲೂ ಶಾಸ್ತ್ರದಿಂದಲೂ ಅರಿತುಕೊಂಡು ಶಾಸ್ತ್ರಾಚಾರ್ಯರು ಉಪದೇಶ ಮಾಡಿದ ವಿಷಯದ ಜಿಜ್ಞಾಸೆಯ ಪರಿಸಮಾಪ್ತಿಯನ್ನು ಮಾಡುವ ಪ್ರಜ್ಞೆಯನ್ನು[1] ಮಾಡಿಕೊಳ್ಳಬೇಕು. ಇಂಥ ಪ್ರಜ್ಞೆಯನ್ನುಂಟು ಮಾಡುವ ಸಾಧನಗಳಾದ ಸಂನ್ಯಾಸ, ಶಮ, ದಮ, ಉಪರತಿ, ತಿತಿಕ್ಷೆ, ಸಮಾಧಾನ- ಇವುಗಳನ್ನು ಮಾಡಬೇಕು ಎಂದರ್ಥ[2].**

ಬಹುಹೆಚ್ಚಿನ ಶಬ್ದಗಳನ್ನು ಅನುಧ್ಯಾನಮಾಡಬಾರದು, ಅನುಚಿಂತನೆ ಮಾಡಬಾರದು[3]. ಇಲ್ಲಿ (ಶಬ್ದ)ಬಹುತ್ವವನ್ನು ಕೂಡದು ಎಂದಿರುವದರಿಂದ ಕೇವಲ ಆತ್ಮೈಕತ್ವವನ್ನೇ ತಿಳಿಸುವ ಸ್ವಲ್ಪಶಬ್ದಗಳನ್ನು ಆಗಬಹುದೆಂದಂತೆ ಆಯಿತು. "ಓಮ್ ! ಎಂದಿಂತು ಆತ್ಮನನ್ನು ಧ್ಯಾನಿಸಿರಿ !" (ಮುಂ. ೨-೨-೬)[4], "ಮಿಕ್ಕ ಮಾತುಗಳನ್ನು ಬಿಡಿರಿ !"[5] (೨-೨-೫) ಎಂದೂ ಆಥರ್ವಣದಲ್ಲಿ ಹೇಳಿರುತ್ತದೆ. (ಹಿ= ಯಸ್ಮಾತ್) ಏಕೆಂದರೆ, ಅದು (ಆ) ಬಹುಶಬ್ದಗಳ ಅಭಿಧ್ಯಾನವು,

---

1. ಜಿಜ್ಞಾಸೆಯ ಪರಿಸಮಾಪ್ತಿ ಎಂದರೆ ತಿಳಿಯಬೇಕಾದದ್ದೆಲ್ಲವನ್ನೂ ತಿಳಿದಂತೆ ಆಯಿತೆಂಬ ತೀರ್ಮಾನ. ಅದಾಗಬೇಕಾದರೆ ಆತ್ಮಜ್ಞಾನನಿಷ್ಠೆಯಾಗಬೇಕು.

2. ಪ್ರಜ್ಞೆಯನ್ನು ಮಾಡಿಕೊಳ್ಳಬೇಕು ಎಂದು ಕೊನೆಯ ಜ್ಞಾನವನ್ನು ವಿಧಿಸುವದಕ್ಕೆ ಆಗುವಹಾಗಿಲ್ಲವಾದ್ದರಿಂದ ಜ್ಞಾನಪರಿಪಾಕಕ್ಕೆ ಬೇಕಾದ ಸಾಧನಗಳನ್ನು ಅನುಷ್ಠಾನ ಮಾಡಬೇಕು ಎಂದು ವಿಧಿಸಿದೆ ಎಂದು ಭಾವ ಇದು ಸಾಧಕನಿಗೆ ಹೇಳಿದ ಉಪದೇಶವು; ಜ್ಞಾನಿಯ ವಿಷಯದಲ್ಲಿ ಹೇಳಿರುವ ಮತ್ತೊಂದು ಅರ್ಥವನ್ನು ೧-೪-೭ (ಭಾ. ಭಾ. ೧೪೨) ರಲ್ಲಿ ಕಾಣಬಹುದು (೧) ವಿಜ್ಞಾಯ ಎಂದರೆ ಶಾಸ್ತ್ರದಿಂದ ಪರೋಕ್ಷವಾಗಿ ಅರಿತುಕೊಂಡು, ಪ್ರಜ್ಞಾಂ ಕುರ್ವೀತ ಎಂದರೆ ಭಾವನಾಜ್ಞಾನಸಂತತಿಗಳಿಂದ ಸಾಕ್ಷಾತ್ಕಾರಮಾಡಿಕೊಳ್ಳಬೇಕು ಎಂಬ ಭರ್ತೃಪ್ರಪಂಚರ ಮತ; (೨) ವಿಜ್ಞಾಯ ಎಂದರೆ ಶಬ್ದದಿಂದ ಸಂಸೃಷ್ಟಾರ್ಥವನ್ನು ತಿಳಿದು ಆ ವಿಜ್ಞಾನದ ಅಭ್ಯಾಸ ಅಥವಾ ನಿದಿಧ್ಯಾಸನದಿಂದ ಅಸಂಸೃಷ್ಟಾರ್ಥವಾದ ಬ್ರಹ್ಮದ ಅಪರೋಕ್ಷಜ್ಞಾನವನ್ನು ಪಡೆದುಕೊಳ್ಳಬೇಕು ಎಂಬವರ ಮತ, (೩) ವಾಕ್ಯೋತ್ಥವಿಜ್ಞಾನವು ಅನಾದ್ಯಜ್ಞಾನದಿಂದ ಬಾಧಿತವಾಗುವದರಿಂದ, ಅವಿದ್ಯೆಯು ನಿರನ್ವಯವಾಗಿ ನಾಶವಾಗುವವರೆಗೂ ಅಭ್ಯಾಸರೂಪವಾದ ಪ್ರಜ್ಞೆಯನ್ನು ಮಾಡಬೇಕು ಎಂಬವರ ಮತ- ಈ ಮೂರು ಮತಗಳನ್ನೂ ವಾರ್ತಿಕದಲ್ಲಿ ಖಂಡಿಸಿ ಈ ವಾಕ್ಯಕ್ಕೆ ಸ್ವತಂತ್ರವಾಗಿ ಎಂಟು ಬೇರೆಬೇರೆಯ ವ್ಯಾಖ್ಯಾನಗಳನ್ನು ಮಾಡಿದೆ.

3. ಅನಾತ್ಮವಿಷಯಕವಾದ ಶಬ್ದಗಳನ್ನು ಆಡಬಾರದು.

4. ಓಂಕಾರಸ್ವರೂಪಚಿಂತನೆಯನ್ನು ಇಲ್ಲಿ ಉಪದೇಶಿಸಿದೆ.

5. ಕರ್ಮಾದಿರೂಪದ ಅನಾತ್ಮವಿಷಯದ ಇತರ ಶಬ್ದಗಳನ್ನು ಬಿಡಬೇಕೆಂದು ಇಲ್ಲಿ ಹೇಳಿದೆ.

ವಾಕ್ಕಿನ ವಿಗ್ಲಾಪನವು, ವಿಶೇಷವಾಗಿ ಗ್ಲಾನಿಯನ್ನುಂಟುಮಾಡುವದು, ಆಯಾಸವನ್ನುಂಟುಮಾಡುವದೇ (ಆಗಿದೆ)[1].

## ಆತ್ಮವಿಷಯದಲ್ಲಿಯೇ ಸರ್ವವೇದಕ್ಕೂ ವಿನಿಯೋಗ

(ಉಪನಿಷತ್ತು)

**ಸ ವಾ ಏಷ ಮಹಾನಜ ಆತ್ಮಾ ಯೋಽಯಂ ವಿಜ್ಞಾನಮಯಃ ಪ್ರಾಣೇಷು ಯ ಏಷೋಽನ್ತರ್ಹೃದಯ ಆಕಾಶಸ್ತಸ್ಮಿಞ್ಛೇತೇ ಸರ್ವಸ್ಯ ವಶೀ ಸರ್ವಸ್ಯೇಶಾನಃ ಸರ್ವಸ್ಯಾಧಿಪತಿಃ ಸ ನ ಸಾಧುನಾ ಕರ್ಮಣಾ ಭೂಯಾನ್ನೋ ಏವಾಸಾಧುನಾ ಕನೀಯಾನೇಷ ಸರ್ವೇಶ್ವರ ಏಷ ಭೂತಾಧಿಪತಿರೇಷ ಭೂತಪಾಲ ಏಷ ಸೇತು ರ್ವಿಧರಣ ಏಷಾಂ ಲೋಕಾನಾಮಸಂಭೇದಾಯ ತಮೇತಂ ವೇದಾನುವಚನೇನ ಬ್ರಾಹ್ಮಣಾ ವಿವಿದಿಷನ್ತಿ ಯಜ್ಞೇನ ದಾನೇನ ತಪಸಾನಾಶಕೇನೈತಮೇವ ವಿದಿತ್ವಾ ಮುನಿರ್ಭವತಿ । ಏತ ಮೇವ ಪ್ರವ್ರಾಜಿನೋ ಲೋಕಮಿಚ್ಛನ್ತಃ ಪ್ರವ್ರಜನ್ತಿ। ಏತದ್ಧಸ್ಮ ವೈ ತತ್ಪೂರ್ವೇ ವಿದ್ವಾಗ್ಂಸಃ ಪ್ರಜಾಂ ನ ಕಾಮಯನ್ತೇ ಕಿಂ ಪ್ರಜಯಾ ಕರಿಷ್ಯಾಮೋ ಯೇಷಾಂ ನೋಽಯಮಾತ್ಮಾಽಯಂ ಲೋಕಃ ಇತಿ ತೇ ಹ ಸ್ಮ ಪುತ್ರೈಷಣಾಯಾಶ್ಚ ವಿತ್ತೈಷಣಾಯಾಶ್ಚ ಲೋಕೈಷಣಾಯಾಶ್ಚ ವ್ಯುತ್ಥಾಯಾಥ ಭಿಕ್ಷಾಚರ್ಯಂ ಚರನ್ತಿ ಯಾ ಹ್ಯೇವ ಪುತ್ರೈಷಣಾ ಸಾ ವಿತ್ತೈಷಣಾ ಯಾ ವಿತ್ತೈಷಣಾ ಸಾ ಲೋಕೈಷಣೋಭೇ ಹ್ಯೇತೇ ಏಷಣೇ ಏವ ಭವತಃ। ಸ ಏಷ ನೇತಿ ನೇತ್ಯಾತ್ಮಾಽಗೃಹ್ಯೋ ನ ಹಿ ಗೃಹ್ಯತೇಽಶೀರ್ಯೋ ನ ಹಿ ಶೀರ್ಯತೇಽಸಙ್ಗೋ ನ ಹಿ ಸಜ್ಯತೇಽಸಿತೋ ನ ವ್ಯಥತೇ ನ ರಿಷ್ಯತ್ಯೇತಮು ಹೈವೈತೇ ನ ತರತ ಇತ್ಯತಃ ಪಾಪಮ ಕರವಮಿತ್ಯತಃ ಕಲ್ಯಾಣಮಕರವಮಿತ್ಯುಭೇ ಉ ಹ್ಯೇವೈಷ ಏತೇ ತರತಿ ನೈನಂ ಕೃತಾಕೃತೇ ತಪತಃ ॥ ೨೨ ॥**

೨೨. ಪ್ರಾಣಗಳಲ್ಲಿ ಈ ವಿಜ್ಞಾನಮಯನಿರುತ್ತಾನಲ್ಲ, ಆ ಇವನೇ ಮಹಾಂತನಾದ ಅಜನಾದ ಆತ್ಮನು. (ಇವನು) ಹೃದಯದೊಳಗೆ ಈ ಆಕಾಶವಿದೆಯಲ್ಲ, ಅದರಲ್ಲಿ ಇರುತ್ತಿರುವನು. ಪ್ರತಿಯೊಬ್ಬನಿಗೂ

1. ಇಂದ್ರಿಯಕ್ಕೆ ಶ್ರಮಮಾತ್ರವೇ ಆ ಶಬ್ದಗಳ ಫಲವೇ ಹೊರತು ಅವುಗಳಿಂದ ಪರಮಪುರುಷಾರ್ಥವು ಲಭಿಸಲಾರದು ಎಂದು ಅಭಿಪ್ರಾಯ.

ವಶಿಯು, ಪ್ರತಿಯೊಬ್ಬನಿಗೂ ಈಶಾನನು, ಪ್ರತಿಯೊಬ್ಬನಿಗೂ ಅಧಿಪತಿಯು. ಇವನು ಸಾಧುಕರ್ಮದಿಂದ ಹೆಚ್ಚುವವನಲ್ಲ, ಅಸಾಧುಕರ್ಮದಿಂದ ಕುಂದುವವನೂ ಅಲ್ಲ. ಇವನೇ ಸರ್ವೇಶ್ವರನು, ಇವನೇ ಭೂತಾಧಿಪತಿಯು. ಇವನೇ ಭೂತಪಾಲನು, ಈ ಲೋಕಗಳು ಸಂಭಿನ್ನವಾಗದಿರುವದಕ್ಕೆ ತಡೆದುಕೊಂಡಿರುವ ಸೇತು. ಆ ಈತನನ್ನು ಬ್ರಾಹ್ಮಣರು ವೇದಾನುವಚನದಿಂದಲೂ ಯಜ್ಞದಿಂದಲೂ ದಾನದಿಂದಲೂ ಅನಾಶಕವೆಂಬ ತಪಸ್ಸಿನಿಂದಲೂ ತಿಳಿಯಲಿಚ್ಛಿಸುವರು. ಈತನನ್ನೇ ಅರಿತುಕೊಂಡವನು ಮುನಿಯಾಗುವನು. ಈ ಲೋಕವನ್ನೇ ಇಚ್ಛಿಸುವವರಾಗಿ ಪ್ರವ್ರಾಜಿಗಳು ಪ್ರವ್ರಜನಮಾಡುತ್ತಾರೆ. ಇದೇ ಅದು ; ಪೂರ್ವದ ವಿದ್ವಾಂಸರು 'ನಮಗೆ ಇವನೇ ಆತ್ಮನು, ಇವನೇ ಲೋಕವು. ಅಲ್ಲವೆ? (ಆ ನಾವು) ಪ್ರಜೆಯಿಂದ ಏನು ಮಾಡಿಕೊಳ್ಳೋಣ?' ಎಂದು ಪ್ರಜೆಯನ್ನು ಕಾಮಿಸಲಿಲ್ಲವಂತೆ. ಅವರು ಪುತ್ರೈಷಣೆಯಿಂದಲೂ ವಿತ್ತೈಷಣೆಯಿಂದಲೂ ಲೋಕೈಷಣೆಯಿಂದಲೂ ಎದ್ದು ಇನ್ನು ಭಿಕ್ಷಾಚರ್ಯವನ್ನು ಆಚರಿಸಿದರಂತೆ. ಏಕೆಂದರೆ ಯಾವದು ಪುತ್ರೈಷಣೆಯೋ ಅದು ವಿತ್ತೈಷಣೆಯೇ, ಯಾವದು ವಿತ್ತೈಷಣೆಯೋ ಅದು ಲೋಕೈಷಣೆಯೇ, ಇವೆರಡೂ ಏಷಣೆಯೇ ಆಗಿರುತ್ತವೆ. ಆ ಇವನೇ ನೇತಿನೇತಿ ಎಂದ ಆತ್ಮನು. (ಇವನು) ಅಗೃಹ್ಯನು, ಏಕೆಂದರೆ ಗ್ರಹಿಸಲ್ಪಡುವದಿಲ್ಲವಷ್ಟೆ? ಅಶೀರ್ಯನು, ಸವೆಯುವದಿಲ್ಲವಷ್ಟೆ? ಅಸಂಗನು, ಅಂಟಿಕೊಳ್ಳುವದಿಲ್ಲವಷ್ಟೆ? ಅಸಿತನು, ವ್ಯಥೆಪಡುವದಿಲ್ಲ, ಹಿಂಸಿತನಾಗುವದಿಲ್ಲ. ಮತ್ತು ಇವನನ್ನೇ 'ಇದಕ್ಕಾಗಿ ಪಾಪವನ್ನು ಮಾಡಿದೆನು', 'ಇದಕ್ಕಾಗಿ ಕಲ್ಯಾಣವನ್ನು ಮಾಡಿದೆನು' ಎಂಬೀ ಎರಡು ದಾಟುವದಿಲ್ಲ ; ಇವೆರಡನ್ನೂ ಇವನು ದಾಟುತ್ತಾನೆ. ಇವನನ್ನು ಕೃತಾಕೃತಗಳು ತಪಿಸುವದಿಲ್ಲ.

## ಕಂಡಿಕೆಯ ಸಂಬಂಧ

(ಭಾಷ್ಯ)

೩೨೧. **ಸಹೇತುಕೌ ಬನ್ಧಮೋಕ್ಷೌ ಅಭಿಹಿತೌ ಮನ್ತ್ರಬ್ರಾಹ್ಮಣಾಭ್ಯಾಮ್ । ಶ್ಲೋಕೈಶ್ಚ ಪುನರ್ಮೋಕ್ಷಸ್ವರೂಪಂ ವಿಸ್ತರೇಣ ಪ್ರತಿಪಾದಿತಮ್ ।**

ಏವಮ್ ಏತಸ್ಮಿನ್ ಆತ್ಮವಿಷಯೇ ಸರ್ವೋ ವೇದೋ ಯಥೋಪಯುಕ್ತೋ ಭವತಿ ತತ್ ತಥಾ ವಕ್ತವ್ಯಮ್ ಇತಿ ತದರ್ಥೇಯಂ ಕಣ್ಡಿಕಾ ಆರಭ್ಯತೇ ॥

(ಭಾಷ್ಯಾರ್ಥ)

ಕಾರಣಸಹಿತವಾಗಿ ಬಂಧಮೋಕ್ಷಗಳನ್ನು ಮಂತ್ರಬ್ರಾಹ್ಮಣಗಳಿಂದ ತಿಳಿಸಿದ್ದಾಯಿತು. ಮತ್ತೆ ಶ್ಲೋಕಗಳಿಂದ ಮೋಕ್ಷಸ್ವರೂಪವನ್ನು ವಿಸ್ತಾರವಾಗಿ ಪ್ರತಿಪಾದಿಸಿದ್ದೂ ಆಯಿತು. ಹೀಗೆಯೇ ಈ ಆತ್ಮವಿಷಯದಲ್ಲಿ ವೇದವೆಲ್ಲವೂ ಹೇಗೆ ಉಪಯುಕ್ತವಾಗುತ್ತದೆಯೋ ಅದನ್ನು ಹಾಗೆಯೇ ಹೇಳಬೇಕಾಗಿದೆಯಾದ್ದರಿಂದ ಅದಕ್ಕಾಗಿ ಈ ಕಂಡಿಕೆಯನ್ನು ಆರಂಭಿಸಿರುತ್ತದೆ.

## ಇದುವರೆಗೆ ಹೇಳಿದ ಜ್ಞಾನ

(ಭಾಷ್ಯ)

೩೦೨. ತಚ್ಚ ಯಥಾ ಅಸ್ಮಿನ್ ಪ್ರಪಾಠಕೇ ಅಭಿಹಿತಂ ಸಪ್ರಯೋಜನಮ್ ಅನೂದ್ಯ ಅತ್ರೈವ ಉಪಯೋಗಃ ಕೃತ್ಸ್ನಸ್ಯ ವೇದಸ್ಯ ಕಾಮ್ಯರಾಶಿವರ್ಜಿತಸ್ಯ ಇತ್ಯೇವಮರ್ಥ ಉಕ್ತಾರ್ಥಾನುವಾದಃ। ಸ ವಾ ಏಷ ಇತ್ಯಾದಿಃ। ಸ ಇತಿ ಉಕ್ತಪರಾಮರ್ಶಾರ್ಥಃ। ಕೋಽಸೌ ಉಕ್ತಃ ಪರಾಮೃಶ್ಯತೇ ತಂ ಪ್ರತಿನಿರ್ದಿಶತಿ 'ಯ ಏಷ ವಿಜ್ಞಾನಮಯಃ' ಇತಿ। ಅತೀತಾನನ್ತರವಾಕ್ಯೋಕ್ತಸಂಪ್ರತ್ಯಯೋ ಮಾ ಭೂತ್ ಇತಿ 'ಯ ಏಷಃ'। ಕತಮ ಏಷಃ ಇತಿ ? ಉಚ್ಯತೇ। 'ವಿಜ್ಞಾನಮಯಃ ಪ್ರಾಣೇಷು' ಇತಿ। ಉಕ್ತ[1]ವಾಕ್ಯೋಲ್ಲಿಙ್ಗನಂ ಸಂಶಯನಿವೃತ್ತ್ಯರ್ಥಮ್। ಉಕ್ತಂ ಹಿ ಪೂರ್ವಂ ಜನಕಪ್ರಶ್ನಾರಮ್ಭೇ "ಕತಮ ಆತ್ಮೇತಿ ಯೋಽಯಂ ವಿಜ್ಞಾನಮಯಃ ಪ್ರಾಣೇಷು" (೪-೩-೭) ಇತ್ಯಾದಿ। ಏತದುಕ್ತಂ ಭವತಿ। "ಯೋಽಯಂ ವಿಜ್ಞಾನಮಯಃ ಪ್ರಾಣೇಷು" ಇತ್ಯಾದಿನಾ ವಾಕ್ಯೇನ ಪ್ರತಿಪಾದಿತಃ ಸ್ವಯಂಜ್ಯೋತಿರಾತ್ಮಾ ಸ ಏಷಃ, ಕಾಮಕರ್ಮಾವಿದ್ಯಾನಾಮ್ ಅನಾತ್ಮಧರ್ಮತ್ವಪ್ರತಿಪಾದನದ್ವಾರೇಣ ಮೋಕ್ಷಿತಃ ಪರಮಾತ್ಮಭಾವಮ್ ಆಪಾದಿತಃ ಪರ ಏವಾಯಂ ನಾನ್ಯಃ ಇತಿ । ಏಷ ಸ ಸಾಕ್ಷಾತ್ 'ಮಹಾನಜ ಆತ್ಮಾ' ಇತ್ಯುಕ್ತಃ। ಯೋಽಯಂ ವಿಜ್ಞಾನಮಯಃ ಪ್ರಾಣೇಷು ಇತಿ ಯಥಾವ್ಯಾಖ್ಯಾತಾರ್ಥ ಏವ। ಯ ಏಷೋಽನ್ತರ್ಹೃದಯೇ ಹೃದಯಪುಣ್ಡರೀಕಮಧ್ಯೇ ಯ ಏಷ ಆಕಾಶಃ ಬುದ್ಧಿವಿಜ್ಞಾನಸಂಶ್ರಯಃ ತಸ್ಮಿನ್ ಆಕಾಶೇ ಬುದ್ಧಿವಿಜ್ಞಾನಸಹಿತೇ ಶೇತೇ ತಿಷ್ಠತಿ। ಅಥವಾ ಸಂಪ್ರಸಾದಕಾಲೇ

---

1. ಉತ್ತರ ಎಂಬುದು ಅಚ್ಚಿನ ತಪ್ಪೆಂದು ಹಿಡಿದು ಅ॥ ಟೀಕಾನುಸಾರವಾಗಿ 'ಉಕ್ತ' ಎಂದೇ ಬರೆದುಕೊಂಡಿದೆ. ಅ॥ ಪಾಠವು ಹೀಗೆಯೇ ಇದೆ.

ಅನ್ತರ್ಹೃದಯೇ ಯ ಏಷ ಆಕಾಶಃ ಪರ ಏವಾಽಽತ್ಮಾ ನಿರುಪಾಧಿಕೋ ವಿಜ್ಞಾನಮಯಸ್ಯ ಸ್ವಸ್ವಭಾವಃ ತಸ್ಮಿನ್ ಸ್ವಸ್ವಭಾವೇ ಪರಮಾತ್ಮನಿ ಆಕಾಶಾಖ್ಯೇ ಶೇತೇ । ಚತುರ್ಥೇ ಏತದ್ ವ್ಯಾಖ್ಯಾತಮ್ "ಕ್ವೈಷ ತದಾಽಭೂತ್" (೨-೧-೧೬) ಇತ್ಯಸ್ಯ ಪ್ರತಿವಚನತ್ವೇನ ॥

(ಭಾಷ್ಯಾರ್ಥ)

ಈ ಪ್ರಪಾಠಕದಲ್ಲಿ ಹೇಳಿದಂತೆಯೇ ಪ್ರಯೋಜನಸಹಿತವಾದ ಆ (ಆತ್ಮಜ್ಞಾನವನ್ನು) ಅನುವಾದಮಾಡಿಕೊಂಡು ಕಾಮ್ಯರಾಶಿಯನ್ನು ಬಿಟ್ಟರೆ (ಮಿಕ್ಕ) ಇಡಿಯ ವೇದವೂ ಈ (ಆತ್ಮಜ್ಞಾನ)ದಲ್ಲಿಯೇ ಉಪಯೋಗವಾಗುವದು[1] ಎಂಬುದಕ್ಕಾಗಿ ಹಿಂದೆ ಹೇಳಿರುವ ಅರ್ಥವನ್ನು "ಸ ವಾ ಏಷಃ" ಎಂದು ಮುಂತಾಗಿ ಅನುವಾದಮಾಡಿಕೊಂಡಿರುತ್ತದೆ.

ಇಲ್ಲಿ 'ಅವನು' ಎಂಬುದು ಹಿಂದೆ ಹೇಳಿರುವವನನ್ನು ಪರಾಮರ್ಶಮಾಡುವದಕ್ಕೆ. ಹಿಂದೆ ಹೇಳಿದವನನ್ನು ಪರಾಮರ್ಶಿಸಿರುತ್ತದೆ ಎಂದಿರಲ್ಲ, ಅವನು ಯಾವನು ? ಎಂದರೆ ಅವನನ್ನು 'ಯ ಏಷ ವಿಜ್ಞಾನಮಯಃ' ಈ ವಿಜ್ಞಾನಮಯನಿರುತ್ತಾನಲ್ಲ- ಎಂದು ತಿಳಿಸಿರುತ್ತದೆ. ಇದರ ಹಿಂದೆಯೇ ಇರುವ (೪-೪-೨೧) ವಾಕ್ಯದಲ್ಲಿ ಹೇಳಿದ (ಪರಮಾತ್ಮನೆಂಬ) ತಿಳಿವಳಿಕೆ ಆಗದಿರಲೆಂದು ಯ ಏಷಃ- 'ಯಾವ ಇವನು' (ಎಂದಿರುತ್ತದೆ). ಇವನು ಎಂದರೆ ಯಾವನು? ಹೇಳುತ್ತೇವೆ ಪ್ರಾಣಗಳೊಳಗೆ ವಿಜ್ಞಾನಮಯನಿರುತ್ತಾನಲ್ಲ, (ಅವನು). ಹಿಂದೆ ಹೇಳಿರುವ ವಾಕ್ಯವನ್ನೇ ಎತ್ತಿ ಹೇಳಿರುವದು ಸಂಶಯವನ್ನು ಬಗೆಹರಿಸುವದಕ್ಕಾಗಿ [2], (ಇದರ ವಿವರ) : ಹಿಂದೆ 'ಆತ್ಮನೆಂದರೆ ಯಾರು ? ಎಂಬ ಜನಕನ ಪ್ರಶ್ನೆಯ ಆರಂಭದಲ್ಲಿ "ಪ್ರಾಣಗಳಲ್ಲಿ ಈ ವಿಜ್ಞಾನಮಯನಿದಾನಲ್ಲ" (೪-೩-೭) ಎಂದು ಹೇಳಿದೆಯಲ್ಲವೆ ?[3] (ಇಲ್ಲಿ) ಇಷ್ಟನ್ನು ಹೇಳಿದಂತಾಗಿದೆ : 'ವಿಜ್ಞಾನಮಯಃ ಪ್ರಾಣೇಷು' 'ಪ್ರಾಣಗಳಲ್ಲಿರುವ ವಿಜ್ಞಾನಮಯನಿದಾನಲ್ಲ' ಎಂದುಮುಂತಾಗಿರುವ ವಾಕ್ಯದಿಂದ ಪ್ರತಿಪಾದಿತನಾಗಿರುವ ಈ ಸ್ವಯಂಜ್ಯೋತಿಯಾದ ಆತ್ಮನಿದಾನಷ್ಟೆ, ಆ ಇವನನ್ನು ಕಾಮ, ಕರ್ಮ, ಅವಿದ್ಯೆ- ಇವುಗಳು

---

1. ಕರ್ಮಾದಿಗಳು ಸ್ವತಂತ್ರವಾಗಿಯೂ ಉಪಯೋಗವಾಗಿವೆ ; ಆದರೆ ಅವು ಪರಮಾತ್ಮಜ್ಞಾನಕ್ಕೂ ಉಪಯೋಗವಾಗಿರುತ್ತವೆ ಆದ್ದರಿಂದ ಈ ದೃಷ್ಟಿಯಿಂದ ವೇದವೆಲ್ಲವೂ ಜ್ಞಾನಕ್ಕೇ ಉಪಯೋಗವಾಗಿರುತ್ತದೆ ಎಂದು ಇಲ್ಲಿ ತೋರಿಸಲಾಗುತ್ತವೆ ಎಂದು ಭಾವ.

2. ಆ ಸಂಸಾರಿಯಾದ ಆತ್ಮನೇ, ಹಿಂದಿನ ವಾಕ್ಯದಲ್ಲಿರುವವನಲ್ಲ- ಎಂದು ನಿಶ್ಚಿತವಾಗಿ ತಿಳಿಸುವದಕ್ಕಾಗಿ.

3. ಆ ವಿಜ್ಞಾನಮಯನನ್ನೇ ಇಲ್ಲಿ 'ಸ ವಾ ಏಷ' ಎಂದು ಪರಾಮರ್ಶಿಸಿದೆ.

ಆತ್ಮಧರ್ಮವಲ್ಲವೆಂದು ತಿಳಿಸಿಕೊಡುವದರ ಮೂಲಕ (ಅವುಗಳಿಂದ) ಬಿಡಿಸಿ ಪರಮಾತ್ಮಭಾವವನ್ನು ಹೊಂದಿಸಿದ್ದಾಯಿತು, ಇವನು ಪರ(ಮಾತ್ಮನೇ) ಬೇರೆಯಲ್ಲ ಎಂಬುದು (ಅಭಿಪ್ರಾಯ). 'ಮಹಾಂತನು, ಅಜನು, ಆತ್ಮನು' ಎಂದು (೪-೪-೨೦) ಹೇಳಿರುವದು ಸಾಕ್ಷಾತ್ತಾಗಿ ಆ ಇವನನ್ನೇ[1]. 'ಪ್ರಾಣಗಳಲ್ಲಿ ಈ ವಿಜ್ಞಾನಮಯನಿದಾನಲ್ಲ' ಎಂಬುದಕ್ಕೆ ಹಿಂದೆ ವಿವರಿಸಿರುವದೇ ಅರ್ಥವು[2].

ಹೃದಯದೊಳಗೆ ಹೃದಯಕಮಲದೊಳಗೆ ಬುದ್ಧಿವಿಜ್ಞಾನಕ್ಕೆ ಆಶ್ರಯವಾಗಿರುವದಲ್ಲ, ಆ ಬುದ್ಧಿವಿಜ್ಞಾನದೊಡಗೂಡಿದ ಆಕಾಶವಲ್ಲಿ ಇರುತ್ತಿರುವನು, ಇದ್ದುಕೊಂಡಿರುವನು. ಅಥವಾ[3] ಸಂಪ್ರಸಾದಕಾಲವಲ್ಲಿ ಹೃದಯದೊಳಗೆ ಆಕಾಶವಿದೆಯಲ್ಲ, ನಿರುಪಾಧಿಕನಾದ ಪರಮಾತ್ಮನೇ ಆಗಿರುವ ವಿಜ್ಞಾನಮಯನ ಸ್ವಸ್ವಭಾವವಿದೆಯಲ್ಲ, ಆಕಾಶವೆಂಬ ಹೆಸರಿನ ತನ್ನ ಸ್ವಭಾವವೇ ಆಗಿರುವ ಆ ಪರಮಾತ್ಮನಲ್ಲಿ ಇದ್ದುಕೊಂಡಿರುವನು.[4] ಇದನ್ನು ನಾಲ್ಕನೆಯ (ಅಧ್ಯಾಯ)ದಲ್ಲಿ 'ಇವನು ಆಗ ಎಲ್ಲಿದ್ದನು ?' (೨-೧-೧೬) ಎಂಬೀ (ಪ್ರಶ್ನೆಗೆ) ಉತ್ತರವಾಗಿ ವಿವರಿಸಿ ಹೇಳಿರುತ್ತದೆ[5].

## ಆತ್ಮಜ್ಞಾನದ ಫಲ

(ಭಾಷ್ಯ)

೩೦೩. ಸ ಚ ಸರ್ವಸ್ಯ ಬ್ರಹ್ಮೇನ್ದ್ರಾದೇಃ ವಶೀ । ಸರ್ವೋ ಹಿ ಅಸ್ಯ ವಶೇ ವರ್ತತೇ । ಉಕ್ತಂ ಚ "ಏತಸ್ಯ ವಾ ಅಕ್ಷರಸ್ಯ ಪ್ರಶಾಸನೇ–"

---

1. ಈಗ ವಿವರಿಸಿರುವ ಪರಮಾತ್ಮನು ವಿಜ್ಞಾನಮಯನಿಗಿಂತ ಬೇರೆಯಲ್ಲ, ಪರೋಕ್ಷನೂ ಅಲ್ಲ.

2 ಬುದ್ಧಿವಿಜ್ಞಾನೋಪಾಧಿಯಿಂದ ವಿವಿಕ್ತನಾಗನೆ, ಅಲ್ಲಿಯೇ ತೋರುತ್ತಿರುವನಲ್ಲ, ಪ್ರಾಣಗಳಿಗಿಂತ ವ್ಯತಿರಿಕ್ತನಾಗಿರುತ್ತಾನಲ್ಲ, ಆ ಜೀವನು ಎಂಬುವೇ ಆ ವಾಕ್ಯದರ್ಥ. ೪-೩-೭ (ಭಾ. ಭಾ ೧೭೩)ನ್ನು ನೋಡಿ.

3 'ಹೃದ್ಯನ್ತರ್ಜ್ಯೋತಿಃ' (೪-೩-೭) ಎಂದಿದೆಯಲ್ಲ, ಅದನ್ನೇ ಹೃದಯದೊಳಗಿನ ಆಕಾಶದಲ್ಲಿರುವವನು ಎಂದು ಹೇಳಿದೆ ಎಂಬುದು ಮೊದಲನೆಯ ವ್ಯಾಖ್ಯಾನ, ಇಲ್ಲಿ ಆಕಾಶಶಬ್ದಕ್ಕೆ ಪ್ರಸಿದ್ಧವಾದ ಹೃದಯಾಕಾಶವನ್ನೇ ತೆಗೆದುಕೊಂಡಿದೆ. ಇದಕ್ಕಿಂತ ಮುಂದಿನ ವ್ಯಾಖ್ಯಾನವು ಉತ್ತಮವೆಂದು ಸೂಚಿಸುವದಕ್ಕೆ 'ಅಥವಾ' ಎಂದಿದೆ

4. ಹೃದಯಾಕಾಶದಲ್ಲಿರುವನೆಂದು ಹಿಂದೆ ೨-೧-೧೭ (ಭಾ. ಭಾ. ೨೪೯)ರಲ್ಲಿ ಹೇಳಿದ್ದವನು ಇವನೇ ಎಂದರ್ಥ.

5. ಪರಮಾತ್ಮರೂಪಾಕಾಶದಲ್ಲಿರುತ್ತಾನೆ ಎಂದು ಹೇಳಿರುತ್ತದೆಯಷ್ಟೆ; ಅದರ ಪರಾಮರ್ಶವಿದು ಎಂದರ್ಥ. ಜೀವಾತ್ಮನ ಪರಮಾರ್ಥಸ್ವರೂಪವೇ ಪರಮಾತ್ಮನು ಎಂಬುದೇ ಆತ್ಮಜ್ಞಾನವು ಎಂದು ವಾಕ್ಯಾರ್ಥವು.

(೩-೮-೯) ಇತಿ । ನ ಕೇವಲಂ ವಶೀ, ಸರ್ವಸ್ಯ ಈಶಾನಃ ಈಶಿತಾ ಚ ಬ್ರಹ್ಮೇನ್ದ್ರಪ್ರಭೃತೀನಾಮ್ । ಈಶಿತೃತ್ವಂ ಚ ಕದಾಚಿತ್ ಜಾತಿಕೃತಮ್ । ಯಥಾ ರಾಜಕುಮಾರಸ್ಯ ಬಲವತ್ತರಾನಪಿ ಭೃತ್ಯಾನ್ ಪ್ರತಿ । ತದ್ವನ್ಮಾ ಭೂತ್ ಇತ್ಯಾಹ । ಸರ್ವಸ್ಯಾಧಿಪತಿಃ ಅಧಿಷ್ಠಾಯ ಪಾಲಯಿತಾ, ಸ್ವತನ್ತ್ರ ಇತ್ಯರ್ಥಃ । ನ ರಾಜಪುತ್ರವತ್ ಅಮಾತ್ಯಾದಿಭೃತ್ಯತನ್ತ್ರಃ । ತ್ರಯಮಪ್ಯೇತದ್ ವಶಿತ್ವಾದಿ ಹೇತುಹೇತುಮದ್ರೂಪಮ್ । ಯಸ್ಮಾತ್ ಸರ್ವಸ್ಯಾಧಿಪತಿಃ, ತತೋಽಸೌ ಸರ್ವಸ್ಯೇಶಾನಃ । ಯೋ ಹಿ ಯಮ್ ಅಧಿಷ್ಠಾಯ ಪಾಲಯತಿ ಸ ತಂ ಪ್ರತಿ ಈಷ್ಟ ಏವ ಇತಿ ಪ್ರಸಿದ್ಧಮ್ । ಯಸ್ಮಾಚ್ಚ ಸರ್ವಸ್ಯ ಈಶಾನಃ, ತಸ್ಮಾತ್ ಸರ್ವಸ್ಯ ವಶೀ ಇತಿ । ಕಿಂ ಚಾನ್ಯತ್ । ಸ ಏವಂ ಭೂತೋ ಹೃದ್ಯನ್ತರ್ಜ್ಯೋತಿಃ ಪುರುಷೋ ವಿಜ್ಞಾನಮಯಃ, ನ ಸಾಧುನಾ ಶಾಸ್ತ್ರವಿಹಿತೇನ ಕರ್ಮಣಾ ಭೂಯಾನ್ ಭವತಿ, ನ ವರ್ಧತೇ ಪೂರ್ವಾವಸ್ಥಾತಃ ಕೇನಚಿದ್ ಧರ್ಮೇಣ । ನೋ ಏವ ಶಾಸ್ತ್ರಪ್ರತಿಷಿದ್ಧೇನ ಅಸಾಧುನಾ ಕರ್ಮಣಾ ಕನೀಯಾನ್ ಅಲ್ಪತರೋ ಭವತಿ । ಪೂರ್ವಾವಸ್ಥಾತೋ ನ ಹೀಯತೇ ಇತ್ಯರ್ಥಃ । ಕಿಂ ಚ ಸರ್ವೋ ಹಿ ಅಧಿಷ್ಠಾನಪಾಲನಾದಿ ಕುರ್ವನ್ ಪರಾನುಗ್ರಹಪೀಡಾಕೃತೇನ ಧರ್ಮಾಧರ್ಮಾಖ್ಯೇನ ಯುಜ್ಯತೇ । ಅಸ್ಯೈವ ತು ಕಥಂ ತದಭಾವಃ ಇತಿ? ಉಚ್ಯತೇ । ಯಸ್ಮಾತ್ ಏಷ ಸರ್ವೇಶ್ವರಃ ಸನ್ ಕರ್ಮಣೋಽಪಿ ಈಶಿತುಂ ಭವತ್ಯೇವ ಶೀಲಮ್ ಅಸ್ಯ । ತಸ್ಮಾತ್ ನ ಕರ್ಮಣಾ ಸಂಬಧ್ಯತೇ । ಕಿಂ ಚ ಏಷ ಭೂತಾಧಿಪತಿಃ । ಬ್ರಹ್ಮಾದಿಸ್ತಮ್ಬಪರ್ಯನ್ತಾನಾಂ ಭೂತಾನಾಮ್ ಅಧಿಪತಿಃ ಇತಿ ಉಕ್ತಾರ್ಥಂ ಪದಮ್ । ಏಷ (ಭೂತಪಾಲಃ)[1] ಭೂತಾನಾಂ ತೇಷಾಮೇವ ಪಾಲಯಿತಾ ರಕ್ಷಿತಾ । ಏಷ ಸೇತುಃ । ಕಿಂ ವಿಶಿಷ್ಟ ಇತಿ? ಆಹ । ವಿಧರಣಃ ವರ್ಣಾಶ್ರಮಾದಿವ್ಯವಸ್ಥಾಯಾ ವಿಧಾರಯಿತಾ । ತದಾಹ । ಏಷಾಂ ಭೂರಾದೀನಾಂ ಬ್ರಹ್ಮಲೋಕಾನ್ತಾನಾಂ ಲೋಕಾನಾಮ್ ಅಸಂಭೇದಾಯ ಅಸಂಭಿನ್ನಮರ್ಯಾದಾಯೈ ಪರಮೇಶ್ವರೇಣ ಸೇತುವತ್ ಅವಿಧಾರ್ಯಮಾಣಾ ಲೋಕಾಃ ಸಂಭಿನ್ನಮರ್ಯಾದಾಃ ಸ್ಯುಃ । ಅತಃ ಲೋಕಾನಾಮ್ ಅಸಂಭೇದಾಯ ಸೇತುಭೂತೋಽಯಂ ಪರಮೇಶ್ವರೋ ಯಃ ಸ್ವಯಂಜ್ಯೋತಿರಾತ್ಮೈವ । ಏವಂವಿತ್ 'ಸರ್ವಸ್ಯ ವಶೀ' ಇತ್ಯಾದಿ ಬ್ರಹ್ಮವಿದ್ಯಾಯಾಃ ಫಲಮೇತತ್ ನಿರ್ದಿಷ್ಟಮ್ ॥

(ಭಾಷ್ಯಾರ್ಥ)

ಮತ್ತು ಅವನು ಬ್ರಹ್ಮ, ಇಂದ್ರ- ಮೊದಲಾದ ಪ್ರತಿಯೊಬ್ಬನಿಗೂ ವಶಿಯು; ಏಕೆಂದರೆ ಪ್ರತಿಯೊಬ್ಬನೂ ಅವನ ವಶದಲ್ಲಿರುತ್ತಾನೆ. ಈ ಅಕ್ಷರದಲ್ಲಿ

---

1 ಈ ಮಾತು ಮೂಲಭಾಷ್ಯದಲ್ಲಿದ್ದು ಬಿಟ್ಟುಹೋಗಿದೆ ಎಂದು ಕಲ್ಪಿಸಿದೆ.

ಪ್ರಶಾಸನದಲ್ಲಿಯೇ (ಸೂರ್ಯಚಂದ್ರಾದಿಗಳು ಇರುತ್ತಾರೆ)" (೩-೮-೯) ಎಂದು ಹಿಂದೆ ಹೇಳಿಯೂ ಇರುತ್ತದೆ. ಬರಿಯ ವಶಿಯೇ ಅಲ್ಲ, ಪ್ರತಿಯೊಬ್ಬನಿಗೂ ಈಶಾನನು, ಬ್ರಹ್ಮೇಂದ್ರಾದಿಗಳನ್ನು ಆಳುವವನೂ (ಆಗಿರುತ್ತಾನೆ). ಈಶಿತೃತ್ವವು ಒಂದೊಂದು ವೇಳೆ ಜನ್ಮಸಿದ್ಧವಾಗಿರುತ್ತದೆ. ಉದಾಹರಣೆಗೆ ರಾಜಕುಮಾರನಿಗೆ ತನಗಿಂತ ಬಲಯುತರಾದ ಭೃತ್ಯರ ವಿಷಯದಲ್ಲಿಯೂ (ಈಶಿತೃತ್ವವಿರುತ್ತದೆ). ಅದರಂತೆ ಆಗಬಾರದೆಂದು (ಹೀಗೆಂದು) ಹೇಳುತ್ತಾನೆ: ಪ್ರತಿಯೊಬ್ಬನಿಗೂ ಅಧಿಪತಿಯು, ಪಾಲಿಸಿಕೊಂಡು ಕಾಪಾಡುವವನು, ಸ್ವತಂತ್ರನು, ರಾಜಕುಮಾರನಂತೆ ಅಮಾತ್ಯನೇ ಮೊದಲಾದ ಭೃತ್ಯರಿಗೆ ಅಧೀನನಾದವನಲ್ಲ ಎಂದರ್ಥ. ಈ ವಶಿತ್ವನೇ ಮುಂತಾದ ಮೂರೂ ಹೇತುಹೇತುಮಂತಗಳ ರೂಪವಾಗಿರುತ್ತವೆ. (ಹೇಗೆಂದರೆ) ಪ್ರತಿಯೊಬ್ಬನಿಗೂ ಅಧಿಪತಿಯಾಗಿರುತ್ತಾನಷ್ಟೆ, ಆದ್ದರಿಂದ ಇವನು ಪ್ರತಿಯೊಬ್ಬನಿಗೂ ಈಶಾನನು; ಯಾವನು ಯಾವನನ್ನು ಪಾಲಿಸಿಕೊಂಡು ಕಾಪಾಡುತ್ತಿರುವನೋ ಅವನು ಅವನನ್ನು ಆಳುವವನಾಗಿಯೇ ಇರುತ್ತಾನೆ ಎಂಬುದು ಪ್ರಸಿದ್ಧವಲ್ಲವೆ? ಪ್ರತಿಯೊಬ್ಬನಿಗೂ (ಇವನು) ಈಶಾನನಾಗಿರುತ್ತಾನಷ್ಟೆ, ಆದ್ದರಿಂದ ಪ್ರತಿಯೊಬ್ಬನಿಗೂ ವಶಿಯು ಎಂದು (ಹೇತುಹೇತುಮದ್ಭಾವವಿರುತ್ತದೆ).

ಮತ್ತು ಹೀಗಿರುವ ಹೃದಯದೊಳಗಿನ ಜ್ಯೋತಿಯಾಗಿರುವ ಆ ವಿಜ್ಞಾನಮಯಪುರುಷನು ಸಾಧುವಾದ ಶಾಸ್ತ್ರವಿಹಿತವಾದ ಕರ್ಮದಿಂದ ಹೆಚ್ಚಿನವನಾಗುವದಿಲ್ಲ, ಹಿಂದಿನ ಅವಸ್ಥೆಗಿಂತ ಯಾವದಾದರೊಂದು ಹೊಸ ಧರ್ಮ (ಉಂಟಾಗಿ) ಬೆಳೆದುಕೊಳ್ಳುವದಿಲ್ಲ. ಶಾಸ್ತ್ರಪ್ರತಿಷಿದ್ಧವಾದ ಅಸಾಧುಕರ್ಮದಿಂದ ಕುಂದುವವನೂ ಇನ್ನೂ ಸಣ್ಣವನಾಗುವವನೂ ಅಲ್ಲ, ಹಿಂದಿನ ಅವಸ್ಥೆಗಿಂತ ಕಡಿಮೆಯಾಗುವದಿಲ್ಲ ಎಂದರ್ಥ. ಮತ್ತು ಪಾಲಿಸಿಕೊಂಡು ಕಾಪಾಡುವದೇ ಮುಂತಾದದ್ದನ್ನು ಮಾಡುವ ಪ್ರತಿಯೊಬ್ಬನೂ ಮತ್ತೊಬ್ಬರನ್ನು ಅನುಗ್ರಹಿಸುವದು, ನಿಗ್ರಹಿಸುವದು- ಇವುಗಳಿಂದಾದ ಧರ್ಮಾಧರ್ಮಗಳೆಂಬ (ಕರ್ಮಫಲದಿಂದ) ಕೂಡಿದವನಾಗುತ್ತಾನೆ. ಆದರೆ ಇವನೊಬ್ಬನಿಗೇ ಅದಿಲ್ಲವೆಂಬುದು ಹೇಗೆ?- ಎಂದರೆ ಹೇಳುತ್ತಾನೆ. ಏಕೆಂದರೆ ಇವನೇ ಸರ್ವೇಶನಾಗಿರುವದರಿಂದ ಕರ್ಮಕ್ಕೂ ಈಶ್ವರನಾಗಿರುವ ಸ್ವಭಾವವು ಇವನಿಗೆ ಇದ್ದೇ ಇರುತ್ತದೆ, ಆದ್ದರಿಂದ (ಇವನು) ಕರ್ಮಕ್ಕೆ ಸಂಬದ್ಧನಾಗಿರುವದಿಲ್ಲ.

ಮತ್ತು ಇವನೇ ಭೂತಾಧಿಪತಿಯು, ಬ್ರಹ್ಮಾದಿಸ್ತಂಬಪರ್ಯಂತವಾಗ ಭೂತಗಳಿಗೆ ಅಧಿಪತಿಯು; (ಅಧಿಪತಿ) ಎಂಬ ಪದಕ್ಕೆ ಅರ್ಥವನ್ನು ಹೇಳಿದ್ದಾಗಿದೆ. ಇವನೇ (ಭೂತಪಾಲನು), ಅವೇ ಭೂತಗಳನ್ನು ಪಾಲಿಸುವವನು, ಕಾಪಾಡುವವನು. ಇವನೇ ಸೇತುವು. ಎಂಥ (ಸೇತು)? ಎಂದರೆ ಹೇಳುತ್ತಾನೆ:

(ವಿಧರಣ ಎಂದರೆ) ತಡೆದುಕೊಂಡಿರುವ ವರ್ಣಗಳು, ಆಶ್ರಮಗಳು- ಇವುಗಳ ವ್ಯವಸ್ಥೆಯನ್ನು ತಡೆದಿಟ್ಟುಕೊಂಡಿರುವ (ಸೇತು ಎಂದರ್ಥ). ಇದನ್ನೇ (ಮುಂದೆ) ಹೇಳುತ್ತಾನೆ: ಈ ಭೂಲೋಕವು ಮೊದಲಾಗಿ ಬ್ರಹ್ಮಲೋಕದ ವರೆಗಿನ ಲೋಕಗಳು ಸಂಭಿನ್ನವಾಗದಿರುವದಕ್ಕೆ, ತಮ್ಮ ಎಲ್ಲೆಯನ್ನು ಒಡೆದು ಮಿಶ್ರವಾಗದಿರುವದಕ್ಕೆ, (ಸೇತು), ಪರಮೇಶ್ವರನು (ಈ) ಲೋಕಗಳನ್ನು ಸೇತುವಿನಂತೆ ತಡೆದಿಟ್ಟುಕೊಂಡಿರದೆ ಇದ್ದಿದ್ದರೆ (ಇವು) ಎಲ್ಲೆಯನ್ನು ಒಡೆದು ಮಿಶ್ರವಾಗಿಬಿಡುತ್ತಿದ್ದವು. ಆದ್ದರಿಂದ ಲೋಕಗಳು ಸಂಭಿನ್ನವಾಗದಿರುವದಕ್ಕೆ ಈ ಪರಮೇಶ್ವರನು ಸೇತುವಾಗಿರುತ್ತಾನೆ.[1] ಇವನು ಸ್ವಯಂಜ್ಯೋತಿಯಾದ ಆತ್ಮನೇ. ಹೀಗೆಂದು ಅರಿತುಕೊಂಡವನು 'ಪ್ರತಿಯೊಬ್ಬನಿಗೂ ವಶಿಯು' ಎಂದು ಮುಂತಾಗಿ ಬ್ರಹ್ಮವಿದ್ಯೆಯ ಫಲವನ್ನೇ ಇದೆಂದು ( ಇಲ್ಲಿ ) ತಿಳಿಸಿರುತ್ತದೆ.

## ವೇದಕ್ಕೆ ಬ್ರಹ್ಮವಿದ್ಯೆಯಲ್ಲಿಯೇ ಪರಮತಾತ್ಪರ್ಯ

(ಭಾಷ್ಯ)

೩೦೪. "ಕಿಂಜ್ಯೋತಿರಯಂ ಪುರುಷಃ" (೪-೩-೨) ಇತ್ಯೇವಮಾದಿ ಷಷ್ಠಪ್ರಪಾಠಕವಿಹಿತಾಯಾಮ್ ಏತಸ್ಯಾಂ ಬ್ರಹ್ಮವಿದ್ಯಾಯಾಮ್ ಏವಂ ಫಲಾಯಾಂ ಕಾಮ್ಯೈಕದೇಶವರ್ಜಿತಂ ಕೃತ್ಸ್ನಂ ಕರ್ಮಕಾಣ್ಡಂ ತಾದರ್ಥ್ಯೇನ ವಿನಿಯುಜ್ಯತೇ । ತತ್ ಕಥಮಿತಿ ? ಉಚ್ಯತೇ । ತಮೇತಮ್ ಏವಂ ಭೂತಮ್ ಔಪನಿಷದಂ ಪುರುಷಂ ವೇದಾನುವಚನೇನ ಮನ್ತ್ರಬ್ರಾಹ್ಮಣಾಧ್ಯಯನೇನ ನಿತ್ಯಸ್ವಾಧ್ಯಾಯಲಕ್ಷಣೇನ ವಿವಿದಿಷನ್ತಿ ವೇದಿತುಮಿಚ್ಛನ್ತಿ । ಕೇ ? ಬ್ರಾಹ್ಮಣಾಃ । ಬ್ರಾಹ್ಮಣಗ್ರಹಣಮ್ ಉಪಲಕ್ಷಣಾರ್ಥಮ್ । ಅವಿಶಿಷ್ಟೋ ಹಿ ಅಧಿಕಾರಃ ತ್ರಯಾಣಾಂ ವರ್ಣಾನಾಮ್ । ಅಥವಾ ಕರ್ಮಕಾಣ್ಡೇನ ಮನ್ತ್ರಬ್ರಾಹ್ಮಣೇನ ವೇದಾನುವಚನೇನ ವಿವಿದಿಷನ್ತಿ । ಕಥಂ ವಿವಿದಿಷನ್ತೀತಿ ? ಉಚ್ಯತೇ 'ಯಜ್ಞೇನ' ಇತ್ಯಾದಿ ॥

(ಭಾಷ್ಯಾರ್ಥ)

'ಈ ಪುರುಷನು ಯಾವ ಜ್ಯೋತಿಯುಳ್ಳವನು ?' (೪-೩-೨) ಎಂದು ಮೊದಲಾಗಿರುವ ಆರನೆಯ ಪ್ರಪಾಠಕದಲ್ಲಿ ಹೇಳಿರುವ, ಈ ಫಲವುಳ್ಳ ಈ

---

1. ನದಿಯಲ್ಲಿರುವ ಒಡ್ಡು ಬೇರೆಬೇರೆಯ ಕಡೆಯ ನೀರನ್ನು ತಡೆದಿಟ್ಟಿರುವಂತೆ ಪರಮಾತ್ಮನು ಆಯಾ ಲೋಕಗಳಲ್ಲಿ ಆಯಾ ಕರ್ಮಫಲವೇ ಸಿಕ್ಕುವಂತೆ ವ್ಯವಸ್ಥೆಗೊಳಿಸಿರುತ್ತಾನೆ ಎಂದಭಿಪ್ರಾಯ. ಸೂ.ಭಾ. ೩-೨-೩೨ (ಭಾ.ಭಾ. ೩೦೮).

ಬ್ರಹ್ಮವಿದ್ಯೆಯಲ್ಲಿ[1] ಕಾಮ್ಯ ಎಂಬ ಒಂದು ಭಾಗವನ್ನು ಬಿಟ್ಟು[2] (ಮಿಕ್ಕ) ಕರ್ಮಕಾಂಡವೆಲ್ಲವೂ ಅದಕ್ಕಾಗಿಯೇ ವಿನಿಯೋಗವಾಗುವಂತೆ (ಇಲ್ಲಿ ಹೇಳ) ಲಾಗುತ್ತದೆ.[3] ಅದು ಹೇಗೆ? ಎಂದರೆ ಹೇಳುತ್ತಾನೆ: ಆ ಈತನನ್ನು, ಇಂಥ ಔಪನಿಷದಪುರುಷನನ್ನು[4] ವೇದಾನುವಚನದಿಂದಲೂ ಎಂದರೆ ನಿತ್ಯಸ್ವಾಧ್ಯಾಯ ರೂಪವಾದ ಮಂತ್ರಬ್ರಾಹ್ಮಣಗಳ ಅಧ್ಯಯನದಿಂದಲೂ (ಯಜ್ಞಾದಿಗಳಿಂದ ಲೂ) ತಿಳಿಯಲಿಚ್ಛಿಸುವರು, ತಿಳಿದುಕೊಳ್ಳುವದಕ್ಕೆ ಇಚ್ಛಿಸುವರು. ಯಾರು? ಎಂದರೆ ಬ್ರಾಹ್ಮಣರು, (ಇಲ್ಲಿ) ಬ್ರಾಹ್ಮಣರನ್ನು ತೆಗೆದುಕೊಂಡಿರುವದು ಉಪ ಲಕ್ಷಣಕ್ಕಾಗಿ; ಏಕೆಂದರೆ ಮೂರು ವರ್ಣದವರಿಗೂ (ವೇದಾಧ್ಯಯನದಲ್ಲಿ) ಅಧಿಕಾರವು ಸಮಾನವಾಗಿರುತ್ತದೆ. ಅಥವಾ ಕರ್ಮಕಾಂಡವಾದ ಮಂತ್ರ ಬ್ರಾಹ್ಮಣವೆಂಬ ವೇದಾನುವಚನದಿಂದ ತಿಳಿಯಲಿಚ್ಛಿಸುತ್ತಾರೆ; ಹೇಗೆ ತಿಳಿಯ ಲಿಚ್ಛಿಸುತ್ತಾರೆ? ಎಂದರೆ 'ಯಜ್ಞದಿಂದಲೂ' ಎಂದು ಮುಂತಾಗಿ (ಮುಂದೆ) ಹೇಳಿರುತ್ತದೆ.[5]

## ಚರ್ಚೆ: ವೇದಾನುವಚನವೆಂದರೇನು?

### ಭರ್ತೃಪ್ರಪಂಚರ ಮತದ ಖಂಡನೆ

(ಭಾಷ್ಯ)

೩೦೫. ಯೇ ಪುನಃ ಮನ್ತ್ರಬ್ರಾಹ್ಮಣಲಕ್ಷಣೇನ ವೇದಾನುವಚನೇನ ಪ್ರಕಾಶ್ಯಮಾನಂ ವಿವಿದಿಷನ್ತಿ ಇತಿ ವ್ಯಾಚಕ್ಷತೇ, ತೇಷಾಮ್ ಆರಣ್ಯಕಮಾತ್ರ

---

1. ವಿಜ್ಞಾನಮಯನು ನಿಜವಾಗಿ ಪರಮಾತ್ಮನೇ ಎಂಬುದು ವಿದ್ಯೆ, ಅವನು ಎಲ್ಲವನ್ನೂ ವಶದಲ್ಲಿಟ್ಟುಕೊಂಡಿರುವವನು ಎಂದುಮುಂತಾಗಿ ಹೇಳಿದ್ದು ಅದರ ಫಲ.

2. ವೇದದಲ್ಲಿ ಕಾಮ್ಯಕರ್ಮಗಳನ್ನು ಹೇಳಿರುವದು ಅವು ಸಂಸಾರವೆಂಬ ಅನರ್ಥಕ್ಕೆ ಮಾತ್ರ ಕಾರಣವೆಂದು ತಿಳಿಸಿ ಅವನ್ನು ಬಿಡಿಸುವದಕ್ಕೆ; ಅಥವಾ ಕಾಮವನ್ನು ಬಿಟ್ಟು ಅವನ್ನು ವಿವಿದಿಷೆಗಾಗಿ ಮಾಡಬಹುದೆಂಬುದಕ್ಕೆ ಎಂದೂ ವ್ಯಾಖ್ಯಾನಮಾಡಬಹುದು ಎಂದು ವಾರ್ತಿಕ ೧೦೫೧, ೧೦೫೨.

3. ಕರ್ಮಕಾಂಡದಲ್ಲಿ ಕರ್ಮಕ್ಕಾಗಿ ಕರ್ಮವನ್ನು ಹೇಳಿರುತ್ತದೆಯಾದರೂ ಇಲ್ಲಿ ಕರ್ಮವನ್ನು ಜ್ಞಾನಕ್ಕಾಗಿ ವಿನಿಯೋಗಿಸಿರುತ್ತದೆ. ಸೂ. ಭಾ. ೩-೪-೨೬ರಲ್ಲಿ ಆಶ್ರಮ ಕರ್ಮಗಳೂ ಜ್ಞಾನಕ್ಕೆ ಬೇಕೆಂಬುದನ್ನು ನಿರ್ಣಯಿಸಿದೆ.

4. ಉಪನಿಷನ್ಮಾತ್ರದಿಂದ ತಿಳಿಯಬರುವ ಆತ್ಮನನ್ನು ಎಂದರ್ಥ; ಇದನ್ನು ಮುಂದೆ ಆಕ್ಷೇಪಸಮಾಧಾನಗಳಿಂದ ತಿಳಿಸಲಾಗಿದೆ.

5. ವೇದಾನುವಚನದಿಂದ ಎಂದರೆ ನಿತ್ಯಸ್ವಾಧ್ಯಾಯರೂಪಕರ್ಮದಿಂದ ಎಂದು ಮೊದಲನೆಯ ವ್ಯಾಖ್ಯಾನ; ಮಂತ್ರಬ್ರಾಹ್ಮಣರೂಪವಾದ ವೇದಾನುವಚನದಲ್ಲಿ ತಿಳಿಸಿರುವ ಯಜ್ಞಾದಿಗಳನ್ನು ಅನುಷ್ಠಾನಮಾಡುವದರಿಂದ ಎಂದು ಎರಡನೆಯ ವ್ಯಾಖ್ಯಾನ.

ಮೇವ ವೇದಾನುವಚನಂ ಸ್ಯಾತ್ । ನ ಹಿ ಕರ್ಮಕಾಣ್ಡೇನ ಪರಮಾತ್ಮಾ ಪ್ರಕಾಶ್ಯತೇ । "ತಂ ತ್ವೌಪನಿಷದಮ್" (೩-೯-೨೬) ಇತಿ ವಿಶೇಷಶ್ರುತೇಃ । 'ವೇದಾನುವಚನೇನ' ಇತಿ ಚ ಅವಿಶೇಷಿತತ್ವಾತ್ ಸಮಸ್ತಗ್ರಾಹಿ ಇದಂ ವಚನಮ್ । ನ ಚ ತದೇಕದೇಶೋತ್ಸರ್ಗೋ ಯುಕ್ತಃ । ನನು ತ್ವತ್ಪಕ್ಷೇಽಪಿ ಉಪನಿಷದ್ವರ್ಜಮ್ ಇತಿ ಏಕದೇಶತ್ವಂ ಸ್ಯಾತ್ । ನ । ಆದ್ಯವ್ಯಾಖ್ಯಾನೇ ಅವಿರೋಧಾತ್ ಅಸ್ಮತ್ಪಕ್ಷೇ ನೈಷ ದೋಷೋ ಭವತಿ । ಯದಾ ವೇದಾನುವಚನಶಬ್ದೇನ ನಿತ್ಯಃ ಸ್ವಾಧ್ಯಾಯೋ ವಿಧೀಯತೇ ತದಾ ಉಪನಿಷದಪಿ ಗೃಹೀತೈವ ಇತಿ ವೇದಾನುವಚನಶಬ್ದಾರ್ಥೈಕದೇಶೋ ನ ಪರಿತ್ಯಕ್ತೋ ಭವತಿ । ಯಜ್ಞಾದಿಸಹಪಾಠಾಚ್ಚ । ಯಜ್ಞಾದೀನಿ ಕರ್ಮಾಣ್ಯೇವ ಅನುಕ್ರಮಿಷ್ಯನ್ ವೇದಾನುವಚನಶಬ್ದಂ ಪ್ರಯುಙ್ಕ್ತೇ । ತಸ್ಮಾತ್ ಕರ್ಮೈವ ವೇದಾನುವಚನಶಬ್ದೇನ ಉಚ್ಯತೇ ಇತಿ ಗಮ್ಯತೇ । ಕರ್ಮ ಹಿ ನಿತ್ಯಸ್ವಾಧ್ಯಾಯಃ ॥

(ಭಾಷ್ಯಾರ್ಥ)

ಆದರೆ ಯಾರು (ಇಲ್ಲಿ) ಮಂತ್ರಬ್ರಾಹ್ಮಣರೂಪವಾದ ವೇದಾನುವಚನದಿಂದ ಪ್ರಕಾಶಿತನಾಗುವ (ಆತ್ಮನನ್ನು) ತಿಳಿಯಲಿಚ್ಛಿಸುತ್ತಾರೆ ಎಂದು ವ್ಯಾಖ್ಯಾನಮಾಡುವರೋ,[1] ಅವರಿಗೆ ವೇದಾನುವಚನವೆಂದರೆ ಆರಣ್ಯಕಮಾತ್ರವೆಂದಾಗುವದು. ಕರ್ಮಕಾಂಡದಿಂದ ಪರಮಾತ್ಮನು ಪ್ರಕಾಶಿತನಾಗುವದೇ ಇಲ್ಲವಷ್ಟೆ, ಏಕೆಂದರೆ "ಆ ಔಪನಿಷದ(ಪುರುಷನನ್ನು ಕೇಳುತ್ತಿದೇನೆ)" (೩-೯-೨೬) ಎಂದು ವಿಶೇಷ(ವನ್ನು ತಿಳಿಸುವ) ಶ್ರುತಿ (ಯಿರುತ್ತದೆ). ವೇದಾನುವಚನ ಎಂಬುದು ಸಾಮಾನ್ಯವನ್ನು (ಹೇಳು)ವದರಿಂದ ಸಮಸ್ತ(ವೇದ)ವನ್ನೂ ಗ್ರಹಿಸುವ ವಚನವು; (ಆದ್ದರಿಂದ) ಆ (ವೇದದ) ಒಂದು ಭಾಗವನ್ನು ಬಿಡುವದು ಯುಕ್ತವಲ್ಲ.

(ಆಕ್ಷೇಪ) :- ನಿಮ್ಮ ಪಕ್ಷದಲ್ಲಿಯೂ ಉಪನಿಷತ್ತನ್ನು ಬಿಟ್ಟು (ಉಳಿದ ವೇದಾನುವಚನದಿಂದ) ಎಂದು ಒಂದು ಭಾಗವನ್ನೇ (ತೆಗೆದುಕೊಂಡಂತೆ) ಆಗುವದಲ್ಲವೆ?[2]

(ಪರಿಹಾರ) :- ಹಾಗಲ್ಲ. ಏಕೆಂದರೆ ಮೊದಲನೆಯ ವ್ಯಾಖ್ಯಾನದಲ್ಲಿ (ಯಾವ) ವಿರೋಧವೂ ಇಲ್ಲವಾದ್ದರಿಂದ ನಮ್ಮ ಪಕ್ಷದಲ್ಲಿ ಈ ದೋಷವು ಇರು

---

1. ಮಂತ್ರಬ್ರಾಹ್ಮಣಗಳೂ ನೇರಾಗಿ ಆತ್ಮನನ್ನು ತಿಳಿಸುತ್ತವೆ ಎಂಬುದು ಭರ್ತೃಪ್ರಪಂಚರ ಮತ.

2. 'ಯಜ್ಞಾದಿಗಳಿಂದ ತಿಳಿಯಲಿಚ್ಛಿಸುತ್ತಾರೆ' ಎಂದದ್ದರಿಂದ ಉಪನಿಷತ್ತಿನಿಂದಲ್ಲ ಎಂದಾಗುವದಲ್ಲವೆ?

ವದಿಲ್ಲ. (ಇದರ ವಿವರ) : ವೇದಾನುವಚನವೆಂಬ ಶಬ್ದವು ನಿತ್ಯಸ್ವಾಧ್ಯಾಯ ವನ್ನೇ ತಿಳಿಸುತ್ತದೆ ಎಂದು ಯಾವಾಗ (ಇಟ್ಟುಕೊಳ್ಳುವೆವೋ) ಆಗ ಉಪನಿಷ ತ್ತನ್ನು (ಆ ಸ್ವಾಧ್ಯಾಯದಲ್ಲಿ ಸೇರಿಸಿ) ತೆಗೆದುಕೊಂಡಂತೆಯೇ (ಆಗು)ವದರಿಂದ ವೇದಾನುವಚನಶಬ್ದದ ಅರ್ಥದ ಒಂದು ಭಾಗವನ್ನು ಬಿಟ್ಟಂತೆ ಆಗುವದಿಲ್ಲ.[1] ಯಜ್ಞವೇ ಮುಂತಾದವುಗಳೊಡನೆ (ವೇದಾನುವಚನವನ್ನು) ಪಠಿಸಿರುವದ ರಿಂದಲೂ (ಈ ಮತವೇ ಸರಿ, ಇದರ ವಿವರ)[2]: ಯಜ್ಞವೇ ಮುಂತಾದ ಕರ್ಮ ಗಳನ್ನೇ ಒಂದೊಂದಾಗಿ ಮುಂದೆ ಹೇಳಲಿದ್ದೇ (ಇಲ್ಲಿ) ವೇದಾನುವಚನಶಬ್ದವನ್ನು ಪ್ರಯೋಗಿಸಿದೆ; ಆದ್ದರಿಂದ ವೇದಾನುವಚನವೆಂಬ ಶಬ್ದದಿಂದ ಕರ್ಮವನ್ನೇ ಹೇಳಿದೆ ಎಂದು ಗೊತ್ತಾಗುತ್ತದೆ. ನಿತ್ಯಸ್ವಾಧ್ಯಾಯವು ಕರ್ಮವಷ್ಟೆ ?[3]

## ಕರ್ಮಗಳಿಂದ ಜ್ಞಾನಕ್ಕೆ ಆಗುವ ಉಪಕಾರ

(ಭಾಷ್ಯ)

೩೦೬. ಕಥಂ ಪುನಃ ನಿತ್ಯಸ್ವಾಧ್ಯಾಯಾದಿಭಿಃ ಕರ್ಮಭಿಃ, ಆತ್ಮಾನಂ ವಿವಿದಿಷನ್ತಿ ? ನೈವ ಹಿ ತಾನಿ ಆತ್ಮಾನಂ ಪ್ರಕಾಶಯನ್ತಿ ಯಥಾ ಉಪನಿಷದಃ । ನೈಷ ದೋಷಃ । ಕರ್ಮಣಾಂ ವಿಶುದ್ಧಿಹೇತುತ್ವಾತ್ । ಕರ್ಮಭಿಃ ಸಂಸ್ಕೃತಾ ಹಿ ವಿಶುದ್ಧಾತ್ಮಾನಃ ಶಕ್ನುವನ್ತಿ ಆತ್ಮಾನಮ್ ಉಪನಿಷತ್ಪ್ರಕಾಶಿತಮ್ ಅಪ್ರತಿ ಬನ್ಧೇನ ವೇದಿತುಮ್ । ತಥಾ ಹಿ ಆಥರ್ವಣೇ "ವಿಶುದ್ಧಸತ್ತ್ವಸ್ತತಸ್ತು ತಂ ಪಶ್ಯತೇ ನಿಷ್ಕಲಂ ಧ್ಯಾಯಮಾನಃ" (ಮುಂ. ೩–೧–೮) ಇತಿ । ಸ್ಮೃತಿಶ್ಚ "ಜ್ಞಾನಮುತ್ಪದ್ಯತೇ ಪುಂಸಾಂ ಕ್ಷಯಾತ್ ಪಾಪಸ್ಯ ಕರ್ಮಣಃ" (ಮೋ. ಧ. ೨೦೪–೮) ಇತ್ಯಾದಿಃ । ಕಥಂ ಪುನರ್ನಿತ್ಯಾನಿ ಕರ್ಮಾಣಿ ಸಂಸ್ಕಾರಾರ್ಥಾನಿ ಇತ್ಯವಗಮ್ಯತೇ ? "ಸ ಹ ವಾ ಆತ್ಮಯಾಜೀ ಯೋ ವೇದೇದಂ ಮೇಽನೇ ನಾಙ್ಗಂ ಸಂಸ್ಕ್ರಿಯತ ಇದಂ ಮೇಽನೇನಾಙ್ಗಮುಪಧೀಯತೇ" (ಶತ. ಬ್ರಾ ೧೧–೨–೬–೧೩) ಇತ್ಯಾದಿಶ್ರುತೇಃ । ಸರ್ವೇಷು ಚ ಸ್ಮೃತಿಶಾಸ್ತ್ರೇಷು ಕರ್ಮಾಣಿ ಸಂಸ್ಕಾರಾರ್ಥಾನ್ಯೇವ ಆಚಕ್ಷತೇ "ಅಷ್ಟಾಚತ್ವಾರಿಂಶತ್ ಸಂಸ್ಕಾರಾಃ" (ಗೌ. ಧ. ೧–೮–೮ರಿಂದ ೨೨, ೨೪, ೨೫) , ಮೈ. ೮–೮ರಿಂದ ೧೯, ೨೧, ೨೨)[4] ।

---

1. ನಿತ್ಯವೂ ಮಾಡುವ ಅಧ್ಯಯನದಲ್ಲಿ ಉಪನಿಷತ್ತು ಸೇರಿಯೇ ಇದೆ.

2. ಇದೂ ಮೊದಲನೆಯ ವ್ಯಾಖ್ಯಾನಕ್ಕೇ ಸೇರಿದ್ದು ಎಂಬುದು ಸ್ಪಷ್ಟ.

3. ನಿತ್ಯಸ್ವಾಧ್ಯಾಯವೆಂಬುದೂ ಬ್ರಹ್ಮಯಜ್ಞರೂಪವಾದ ಕರ್ಮವೇ ; ಯಜ್ಞಾದಿ ಕರ್ಮಗಳೊಡನೆ ಇದನ್ನು ಹೇಳಿರುವದರಿಂದ ಇದು ಈ ಕರ್ಮವೇ ಎಂಬುದು ಸ್ಪಷ್ಟ ವಾಗಿರುತ್ತದೆ ಎಂದರ್ಥ. ಎರಡನೆಯ ವ್ಯಾಖ್ಯಾನದಲ್ಲಿ ಉಪನಿಷತ್ತುಗಳನ್ನು ವಾಕ್ಯಶೇಷ ದಿಂದ ಗ್ರಹಿಸಬೇಕಾಗುವದು.

4. ಈ ಸ್ಮೃತಿಯು ಗೌತಮಸ್ಮೃತಿಯೊ, ಅಲ್ಲವೊ ? –ಎಂಬುದು ಸಂಶಯಾಸ್ಪದ ವಾಗಿದೆ. ಅನುವಾದದ ಟಿಪ್ಪಣಿಯನ್ನು ನೋಡಿ.

ಇತ್ಯಾದಿಷು। ಗೀತಾಸು ಚ "ಯಜ್ಞೋ ದಾನಂ ತಪಶ್ಚೈವ ಪಾವನಾನಿ ಮನೀಷಿಣಾಮ್" (ಗೀ. ೧೮-೫), "ಸರ್ವೇಽಪ್ಯೇತೇ ಯಜ್ಞವಿದೋ ಯಜ್ಞಕ್ಷಪಿತಕಲ್ಮಷಾಃ" (ಗೀ. ೪-೩೦) ಇತಿ ॥

(ಭಾಷ್ಯಾರ್ಥ)

(ಆಕ್ಷೇಪ) :- ನಿತ್ಯಸ್ವಾಧ್ಯಾಯವೇ ಮುಂತಾದ ಕರ್ಮಗಳಿಂದ (ಆತ್ಮನನ್ನು ತಿಳಿಯಲಿಚ್ಛಿಸುತ್ತಾರೆ ಎಂಬುದು ಹೇಗೆ? ಉಪನಿಷತ್ತುಗಳು (ಆತ್ಮನನ್ನು ತಿಳಿಸುವಂತೆ) ಅವು ಆತ್ಮನನ್ನು ತಿಳಿಸಲೇ ಆರವಲ್ಲ!

(ಪರಿಹಾರ) :- ಇದೇನೂ ದೋಷವಲ್ಲ, ಏಕೆಂದರೆ ಕರ್ಮಗಳು ವಿಶುದ್ಧಿಗೆ ಕಾರಣವಾಗಿರುತ್ತವೆ. (ಇದರ ವಿವರ): ಕರ್ಮಗಳಿಂದ ಸಂಸ್ಕೃತರಾದವರಲ್ಲವೆ, ವಿಶುದ್ಧಾಂತಃಕರಣರಾಗಿ ಉಪನಿಷತ್ಪ್ರಕಾಶಿತವಾಗಿರುವ ಆತ್ಮನನ್ನು ಯಾವ ಅಡ್ಡಿಯೂ[1] ಇಲ್ಲದೆ ಅರಿತುಕೊಳ್ಳಲು ಶಕ್ತರಾಗುತ್ತಾರೆ? ಹಾಗೆಂದಲ್ಲವೆ, "ವಿಶುದ್ಧಸತ್ತ್ವನಾದವನಾದರೋ ಧ್ಯಾನಮಾಡುವವನಾಗಿ ಅದರಿಂದ ನಿಷ್ಕಲನಾದ ಆತನನ್ನು ಕಂಡುಕೊಳ್ಳುವನು" (ಮುಂ. ೩-೧-೮) ಎಂಬ ಆಥರ್ವಣ(ಶ್ರುತಿ)ಯಲ್ಲಿ ಹೇಳಿದೆ? "ಪಾಪಕರ್ಮದ ಕ್ಷಯದಿಂದ ಪುರುಷರಿಗೆ ಜ್ಞಾನವು ಹುಟ್ಟುತ್ತದೆ" (ಮೋ. ಧ. ೨೦೪-೮) ಎಂದು ಸ್ಮೃತಿಯೂ ಇದೆ.

(ಪ್ರಶ್ನೆ) :- ನಿತ್ಯಕರ್ಮಗಳು ಸಂಸ್ಕಾರಕ್ಕಾಗಿ (ವಿಹಿತವಾಗಿವೆ) ಎಂದು ಹೇಗೆ ಗೊತ್ತಾಗುತ್ತದೆ? "ಯಾವನು ಇದರಿಂದ ಈ ಅಂಗವು ಸಂಸ್ಕಾರವಾಗುತ್ತದೆ, ಇದರಿಂದ ಈ ಅಂಗವು ಸರಿಪಡುತ್ತದೆ -ಎಂದು ತಿಳಿಯುತ್ತಾನೋ ಅವನೇ ಆತ್ಮಯಾಜಿಯು" (ಶತ. ಬ್ರಾ. ೧೧-೨-೬-೧೩) ಮುಂತಾದ ಶ್ರುತಿಯಿಂದ (ಇದು ಸಿದ್ಧವಾಗುತ್ತದೆ). ಕರ್ಮಗಳು ಸಂಸ್ಕಾರಕ್ಕಾಗಿಯೇ (ಉಪಯುಕ್ತವಾಗುತ್ತವೆ) ಎಂದು "ನಲವತ್ತೆಂಟು ಸಂಸ್ಕಾರಗಳು" (ಗೌ. ಧ. ೧-೮-೮ರಿಂದ ೨೨, ೨೪, ೨೫; ವೈ. ೮-೮ರಿಂದ ೧೯, ೨೧, ೨೨)[2] ಮುಂತಾದ

1. ಪಾಪದಿಂದ ಅಂತಃಕರಣದಲ್ಲಿ ಕಲ್ಮಷವೂ ಚಾಂಚಲ್ಯವೂ ಉಂಟಾಗಿರುತ್ತದೆ. ಇದೇ ಜ್ಞಾನಕ್ಕೆ ಅಡ್ಡಿ.

2. ಗೌತಮಸ್ಮೃತಿಯಲ್ಲಿ ನಲವತ್ತೆಂಟು ಸಂಸ್ಕಾರಗಳು ಎಂದಿಲ್ಲ; ನಲವತ್ತು ಸಂಸ್ಕಾರಗಳೂ ಎಂಟು ಆತ್ಮಗುಣಗಳೂ ಎಂದು ವಿವರಿಸಿದೆ. ಇವನ್ನೇ ಇಲ್ಲಿ ಪರಾಮರ್ಶಿಸಿದೆ ಎಂದು ಟೀಕೆ. ವಾರ್ತಿಕದಲ್ಲಿ ನಲವತ್ತು ಮತ್ತು ಎಂಟು ಸಂಸ್ಕಾರಗಳು ಎಂದಿದೆ; ಅದಕ್ಕೂ ಟೀಕೆಯ ಅಭಿಪ್ರಾಯವಿದೆಯೆ?- ಎಂಬುದು ವಿಚಾರಣೀಯ. ಸೂ. ಭಾ. ೩-೪-೩೪ (ಭಾ. ಭಾ. ೪೭೮)ರಲ್ಲಿಯೂ 'ಅಷ್ಟಾಚತ್ವಾರಿಂಶತ್' ಎಂದೇ ಪಾಠವಿದೆ.

ಎಲ್ಲಾ ಸ್ಮೃತಿಶಾಸ್ತ್ರಗಳಲ್ಲಿಯೂ ಹೇಳಿರುತ್ತಾರೆ. "ಯಜ್ಞವೂ ದಾನವೂ ತಪಸ್ಸೂ ವಿವೇಕಿಗಳಿಗೆ ಪಾವನವಾಗಿರುತ್ತವೆ" (ಗೀ ೧೮-೫), "ಇವರೆಲ್ಲರೂ ಯಜ್ಞವನ್ನು ಬಲ್ಲವರು, ಯಜ್ಞಗಳಿಂದ ಕಲ್ಮಷವನ್ನು ನೀಗಿಕೊಂಡವರು" (ಗೀ. ೪-೩೦) ಎಂದು ಗೀತೆಗಳಲ್ಲಿಯೂ (ಇದೆ).

## ಯಜ್ಞದಾನತಪಸ್ಸುಗಳಿಂದ ಜ್ಞಾನೋತ್ಪತ್ತಿ

(ಭಾಷ್ಯ)

೩೦೭. 'ಯಜ್ಞೇನ' ಇತಿ । ದ್ರವ್ಯಯಜ್ಞಾ ಜ್ಞಾನಯಜ್ಞಾಶ್ಚ ಸಂಸ್ಕಾರಾರ್ಥಾಃ। ಸಂಸ್ಕೃತಸ್ಯ ಚ ವಿಶುದ್ಧಸತ್ತ್ವಸ್ಯ ಜ್ಞಾನೋತ್ಪತ್ತಿರಪ್ರತಿಬನ್ಧೇನ ಭವಿಷ್ಯತಿ। ಅತೋ ಯಜ್ಞೇನ ವಿವಿದಿಷನ್ತಿ । ದಾನೇನ । ದಾನಮಪಿ ಪಾಪಕ್ಷಯಹೇತುತ್ವಾತ್ ಧರ್ಮವೃದ್ಧಿಹೇತುತ್ವಾಚ್ಚ । ತಪಸಾ । ತಪಃ ಇತಿ ಅವಿಶೇಷೇಣ ಕೃಚ್ಛ್ರಚಾನ್ದ್ರಾಯಣಾದಿಪ್ರಾಪ್ತೌ ವಿಶೇಷಣಮ್ ಅನಾಶಕೇನ ಇತಿ । ಕಾಮಾನಶನಮ್ ಅನಾಶಕಮ್ । ನ ತು ಭೋಜನನಿವೃತ್ತಿಃ। ಭೋಜನನಿವೃತ್ತೌ ಮ್ರಿಯತ ಏವ ನಾಽಽತ್ಮವೇದನಮ್ । ವೇದಾನುವಚನಯಜ್ಞದಾನತಪಃಶಬ್ದೇನ ಸರ್ವಮೇವ ನಿತ್ಯಂ ಕರ್ಮ ಉಪಲಕ್ಷ್ಯತೇ। ಏವಂ ಕಾಮ್ಯವರ್ಜಿತಂ ನಿತ್ಯಂ ಕರ್ಮಜಾತಂ ಸರ್ವಮ್ ಆತ್ಮಜ್ಞಾನೋತ್ಪತ್ತಿದ್ವಾರೇಣ ಮೋಕ್ಷಸಾಧನತ್ವಂ ಪ್ರತಿಪದ್ಯತೇ। ಏವಂ ಕರ್ಮಕಾಣ್ಡೇನ ಅಸ್ಯ ಏಕವಾಕ್ಯತಾವಗತಿಃ ॥

(ಭಾಷ್ಯಾರ್ಥ)

ಯಜ್ಞದಿಂದಲೂ ಎಂಬಲ್ಲಿ ಸಂಸ್ಕಾರಕ್ಕಾಗಿ (ಮಾಡುವ) ದ್ರವ್ಯಯಜ್ಞಗಳನ್ನೂ ಜ್ಞಾನಯಜ್ಞಗಳನ್ನೂ[1] (ತೆಗೆದುಕೊಳ್ಳಬೇಕು). ಸಂಸ್ಕೃತನಾದವನಿಗಾದರೆ ಸತ್ತ್ವವಿಶುದ್ಧಿಯಾಗಿ (ಯಾವ) ಅಡ್ಡಿಯೂ ಇಲ್ಲದೆ ಜ್ಞಾನವುಂಟಾಗುವದು. ಆದ್ದರಿಂದ ಯಜ್ಞದಿಂದಲೂ ತಿಳಿಯಲಿಚ್ಛಿಸುತ್ತಾರೆ (ಎಂದಿದೆ). 'ದಾನದಿಂದಲೂ' (ಎಂದಿದೆಯಷ್ಟೆ); ದಾನವೂ ಪಾಪಕ್ಷಯಕ್ಕೆ ಕಾರಣವಾಗಿರುವದರಿಂದಲೂ ಧರ್ಮವು ವೃದ್ಧಿಯಾಗುವದಕ್ಕೆ ಹೇತುವಾದ್ದರಿಂದಲೂ (ಅದರಿಂದಲೂ ತಿಳಿಯಲಿಚ್ಛಿಸುತ್ತಾರೆ ಎಂದಿದೆ), ತಪಸ್ಸಿನಿಂದಲೂ (ಎಂದಿದೆಯಷ್ಟೆ); ತಪಸ್ಸು ಎಂದರೆ (ಯಾವ) ವಿಶೇಷವೂ ಇಲ್ಲದೆ ಕೃಚ್ಛ್ರ, ಚಾಂದ್ರಾಯಣ- ಮುಂತಾದವುಗಳೂ ಬಂದೊದಗುವದರಿಂದ 'ಅನಾಶಕ' (ತಪಸ್ಸಿನಿಂದಲೂ) ಎಂಬ ವಿಶೇಷಣವನ್ನು (ಹಾಕಿರುತ್ತದೆ). (ಇಲ್ಲಿ) ಅನಾಶಕವೆಂದರೆ ಇಚ್ಛೆ ಬಂದಂತೆ ತಿನ್ನದೆ

---

1. ಉಪಾಸನೆಗಳನ್ನೂ ಎಂದರ್ಥ. ಗೀ. ೪-೧೬ರಿಂದ ೩೦ರವರೆಗಿನ ಯಜ್ಞಗಳನ್ನೂ ಇಲ್ಲಿ ಗ್ರಹಿಸಬಹುದು.

ಇರುವದೇ ಹೊರತು ಭೋಜನವನ್ನೇ ಬಿಡುವದಲ್ಲ; ಏಕೆಂದರೆ ಭೋಜನವನ್ನೇ ಬಿಟ್ಟರೆ ಸತ್ತೇ ಹೋಗುತ್ತಾನೆಯೇ[1] ಹೊರತು, ಆತ್ಮಜ್ಞಾನ(ವೇನೂ ಆಗು)ವದಿಲ್ಲ. ವೇದಾನುವಚನ, ಯಜ್ಞ, ದಾನ, ತಪಸ್ಸು- ಎಂಬ ಮಾತಿನಿಂದ ನಿತ್ಯಕರ್ಮವನ್ನೆಲ್ಲ ಉಪಲಕ್ಷಣದಿಂದ ಹೇಳಿದಂತಾಗಿದೆ. ಹೀಗಿರುವದರಿಂದ ಕಾಮ್ಯ(ಕರ್ಮ)ವನ್ನು ಬಿಟ್ಟು ನಿತ್ಯಕರ್ಮಸಮೂಹವೆಲ್ಲವೂ[2] ಆತ್ಮಜ್ಞಾನವು ಉಂಟಾಗುವ ಮೂಲಕ ಮೋಕ್ಷಸಾಧನತ್ವವನ್ನು ಹೊಂದುತ್ತದೆ. ಈ ರೀತಿಯಲ್ಲಿ ಈ (ಜ್ಞಾನಕಾಂಡ)ಕ್ಕೂ ಕರ್ಮಕಾಂಡಕ್ಕೂ ಏಕವಾಕ್ಯತೆ(ಯಿದೆ ಎಂದು) ನಿಶ್ಚಯವಾಗುತ್ತದೆ.

## ಆತ್ಮಜ್ಞಾನದಿಂದಲೇ ಕೇವಲ ಮುನಿತ್ವ

(ಭಾಷ್ಯ)

೩೦೮. ಏವಂ ಯಥೋಕ್ತೇನ ನ್ಯಾಯೇನ ಏತಮೇವ ಆತ್ಮಾನಂ ವಿದಿತ್ವಾ ಯಥಾಪ್ರಕಾಶಿತಂ ಮುನಿರ್ಭವತಿ । ಮನನಾತ್ ಮುನಿಃ । ಯೋಗೀ ಭವತಿ ಇತ್ಯರ್ಥಃ । ಏತಮೇವ ವಿದಿತ್ವಾ ಮುನಿರ್ಭವತಿ ನಾನ್ಯಮ್ । ನನು ಅನ್ಯವೇದನೇಽಪಿ ಮುನಿತ್ವಂ ಸ್ಯಾತ್ । ಕಥಮ್ ಅವಧಾರ್ಯತೇ ಏತಮೇವ ಇತಿ ? ಬಾಢಮ್, ಅನ್ಯವೇದನೇಽಪಿ ಮುನಿರ್ಭವೇತ್ । ಕಿಂ ತು ಅನ್ಯವೇದನೇ ನ ಮುನಿರೇವ ಸ್ಯಾತ್, ಕಿಂ ತರ್ಹಿ ಕರ್ಮ್ಯಪಿ ಭವೇತ್ ಸಃ । ಏತಂ ತು ಔಪನಿಷದಂ ಪುರುಷಂ ವಿದಿತ್ವಾ ಮುನಿರೇವ ಸ್ಯಾತ್ ನ ತು ಕರ್ಮೀ । ಅತೋಽಸಾಧಾರಣಂ ಮುನಿತ್ವಂ ವಿವಕ್ಷಿತಮ್ ಅಸ್ಯ ಇತಿ ಅವಧಾರಯತಿ 'ಏತಮೇವ' ಇತಿ । ಏತಸ್ಮಿನ್ ಹಿ ವಿದಿತೇ 'ಕೇನ ಕಂ ಪಶ್ಯೇತ್' (೨-೪-೧೩) ಇತ್ಯೇವಂ ಕ್ರಿಯಾಸಂಭವಾತ್ ಮನನಮೇವ ಸ್ಯಾತ್ ॥

(ಭಾಷ್ಯಾರ್ಥ)

ಹೀಗೆ ಮೇಲೆ ಹೇಳಿದ ಪ್ರಕಾರದಿಂದ ಇದೇ ಮೇಲೆ ತಿಳಿಸಿದ ಆತ್ಮನನ್ನೇ ಅರಿತರೇ ಮುನಿಯಾಗುವನು, ಮನನದಿಂದ ಮುನಿಯಾಗುವನು ಯೋಗಿ

1. ಮುಮುಕ್ಷುವು ಯದೃಚ್ಛಾಲಾಭಸಂತುಷ್ಟನಾಗಿ ಯುಕ್ತಾಹಾರನಾಗಿರಬೇಕೆಂಬುದನ್ನು ತಪಃಶಬ್ದವು ಸೂಚಿಸುತ್ತದೆ ಎಂದು ಭಾವ. ಮರಣಾಂತವಾದ ತಪಸ್ಸೂ ಜನ್ಮಾಂತರದಲ್ಲಿ ಫಲವನ್ನು ಕೊಡುತ್ತದೆಯಾದ್ದರಿಂದ ಭೋಜನನಿವೃತ್ತಿಯೂ ಆಗಬಹುದು ಎಂದು ವಾರ್ತಿಕ ೧೦೫೮, ೧೦೫೯.

2. 'ತಮೇತಂ ವೇದಾನುವಚನೇನ ಬ್ರಹ್ಮಚರ್ಯೇಣ ಬ್ರಾಹ್ಮಣಾ ವಿವಿದಿಷನ್ತಿ ಯಜ್ಞೇನ ದಾನೇನ ತಪಸಾಽನಾಶಕೇನ' ಎಂಬ ಮಾಧ್ಯಂದಿನಪಾಠದಲ್ಲಿ ಮೂರು ಆಶ್ರಮಗಳ ಧರ್ಮವನ್ನೂ ಹೇಳಿದೆ; ಮುಂದೆ ಸಂನ್ಯಾಸವನ್ನು ಹೇಳಿದೆ— ಎಂದೂ ಅರ್ಥಮಾಡಬಹುದೆಂತ ವಾರ್ತಿಕ ೧೦೬೪, ೧೦೬೫.

ಯಾಗುವನು[1] ಎಂದರ್ಥ. ಇವನನ್ನೇ ಅರಿತರೆ ಮುನಿಯಾಗುವನು, ಮತ್ತೊಂದನ್ನು ಅರಿತವನಲ್ಲ[2].

(ಆಕ್ಷೇಪ) :- ಮತ್ತೊಂದನ್ನು ಅರಿತರೂ ಮುನಿತ್ವವು ಆಗಬಹುದಲ್ಲ ! ಈತನನ್ನೇ (ಅರಿತವನು ಮುನಿಯಾಗುವನು) ಎಂದು ಅವಧಾರಣೆಮಾಡಿರುವದು ಹೇಗೆ (ಸರಿ) ?

(ಪರಿಹಾರ) :- **ನಿಜ, ಮತ್ತೊಂದನ್ನು ಅರಿತರೂ ಮುನಿಯಾದಾನು. ಆದರೆ ಮತ್ತೊಂದನ್ನು ಅರಿತರೆ ಮುನಿಯೇ ಆಗುವದಿಲ್ಲ, ಮತ್ತೇನೆಂದರೆ ಕರ್ಮಿಯೂ ಆಗಬಹುದು, ಆದರೆ ಈ ಔಪನಿಷದ ಪುರುಷನನ್ನು ಅರಿತರೆ ಮುನಿಯೇ ಆಗುವನೇ ಹೊರತು ಕರ್ಮಿಯಾಗುವದಿಲ್ಲ**[3]. ಆದ್ದರಿಂದ ಅಸಾಧಾರಣವಾದ ಮುನಿತ್ವವು ಇವನಿಗೆ (ಬರುವದು ಎಂದು) ವಿವಕ್ಷಿತವಾಗಿದೆ ಎಂದು (ತಿಳಿಸುವದಕ್ಕೆ) 'ಈತನನ್ನೇ' ಎಂದು ಒತ್ತಿ ಹೇಳಿರುತ್ತಾನೆ; ಈತನನ್ನು ಅರಿತುಕೊಂಡರೆ 'ಏತರಿಂದ ಯಾರನ್ನು ನೋಡಿಯಾನು ?' (೨-೪-೧೪) ಎಂಬೀ ರೀತಿಯಿಂದ ಕ್ರಿಯೆಯೇ ಸಂಭವಿಸುವದಿಲ್ಲವಾದ್ದರಿಂದ ಬರಿಯ ಮನನವೇ ಆಗುವದು.

## ಆತ್ಮಜ್ಞಾನೇಚ್ಛೆಯಿದ್ದವರೇ ಪರಿವ್ರಾಜಕರಾಗಬೇಕು

(ಭಾಷ್ಯ)

೩೦೯. ಕಿಂ ಚ ಏತಮೇವ ಆತ್ಮಾನಂ ಸ್ವಂ ಲೋಕಮ್ ಇಚ್ಛನ್ತಃ ಪ್ರಾರ್ಥಯನ್ತಃ ಪ್ರವ್ರಾಜಿನಃ ಪ್ರವ್ರಜನಶೀಲಾಃ ಪ್ರವ್ರಜನ್ತಿ ಪ್ರಕರ್ಷೇಣ ವ್ರಜನ್ತಿ ಸರ್ವಾಣಿ ಕರ್ಮಾಣಿ ಸಂನ್ಯಸ್ಯನ್ತಿ ಇತ್ಯರ್ಥಃ । ಏತಮೇವ ಲೋಕಮಿಚ್ಛನ್ತಃ । ಇತಿ ಅವಧಾರಣಾತ್ ನ ಬಾಹ್ಯಲೋಕತ್ರಯೇಪ್ಸೂನಾಂ ಪಾರಿವ್ರಾಜ್ಯೇಽಧಿಕಾರಃ ಇತಿ ಗಮ್ಯತೇ । ನ ಹಿ ಗಙ್ಗಾದ್ವಾರಂ ಪ್ರತಿಪಿತ್ಸುಃ ಕಾಶೀದೇಶನಿವಾಸೀ ಪೂರ್ವಾಭಿಮುಖಃ ಪ್ರೈತಿ । ತಸ್ಮಾತ್ ಬಾಹ್ಯಲೋಕತ್ರಯಾರ್ಥಿನಾಂ ಪುತ್ರಕರ್ಮಾಪರಬ್ರಹ್ಮವಿದ್ಯಾಃ ಸಾಧನಮ್ । "ಪುತ್ರೇ

---

1. ಈ ಆತ್ಮನನ್ನು ಅರಿತವನಿಗೆ ಆತ್ಮನ ಅನುಸಂಧಾನವಲ್ಲದೆ ಮತ್ತೇನೂ ಆಗುವದಿಲ್ಲ, ಇವನು ಸರ್ವದಾ ಆತ್ಮಚಿಂತನೆಯುಳ್ಳವನು ಯೋಗಿಯಾಗುವನು ಎಂದರ್ಥ.

2. ಕರ್ಮವನ್ನಾಗಲಿ ಉಪಾಸನೆಯನ್ನಾಗಲಿ ಅರಿತವನಲ್ಲ.

3. ಯಾವ ಕರ್ಮವೂ ಇಲ್ಲದೆ ಆತ್ಮಾನುಸಂಧಾನದಲ್ಲಿಯೇ ನೆಲೆನಿಂತಿರುತ್ತಾನೆ. ಬಾಲ್ಯಪಾಂಡಿತ್ಯಗಳನ್ನು ನಿಃಶೇಷವಾಗಿ ಮಾಡಿಕೊಂಡವನು ಮುನಿಯಾಗುವನು ಎಂದು (೩-೫-೧) ಹಿಂದೆ ಹೇಳಿರುವದನ್ನು ಇಲ್ಲಿ ಮನದಂದುಕೊಳ್ಳಬೇಕು ; ಅನಾತ್ಮಶಬ್ದಗಳನ್ನು ಬಿಟ್ಟು ಮೌನವಾಗಿರುವದರಿಂದಲೂ ಇವರೇ ಮುನಿಗಳು.

ಣಾಯಂ ಲೋಕೋ ಜಯ್ಯೋ ನಾನ್ಯೇನ ಕರ್ಮಣಾ" (೧-೫-೧೬)[1] ಇತ್ಯಾದಿ ಶ್ರುತೇಃ । ಅತಃ ತದರ್ಥಿಭಿಃ ಪುತ್ರಾದಿಸಾಧನಂ ಪ್ರತ್ಯಾಖ್ಯಾಯ ನ ಪಾರಿವ್ರಾಜ್ಯಂ ಪ್ರತಿಪತ್ತುಂ ಯುಕ್ತಮ್ ; ಅತತ್ಸಾಧನತ್ವಾತ್ ಪಾರಿವ್ರಾಜ್ಯಸ್ಯ । ತಸ್ಮಾತ್ ಏತಮೇವ ಲೋಕಮ್ ಇಚ್ಛನ್ತಃ ಪ್ರವ್ರಜನ್ತಿ ಇತಿ ಯುಕ್ತಮ್ ಅವಧಾರಣಮ್ । ಆತ್ಮಲೋಕಪ್ರಾಪ್ತಿರ್ಹಿ ಅವಿದ್ಯಾನಿವೃತ್ತೌ ಸ್ವಾತ್ಮನಿ ಅವಸ್ಥಾನಮೇವ । ತಸ್ಮಾತ್ ಆತ್ಮಾನಂ ಚೇತ್ ಲೋಕಮಿಚ್ಛತಿ ಯಃ[2] ತಸ್ಯ ಸರ್ವಕ್ರಿಯೋಪರಮ ಏವ ಆತ್ಮಲೋಕಸಾಧನಂ ಮುಖ್ಯಮ್ ಅನ್ತರಙ್ಗಮ್ । ಯಥಾ ಪುತ್ರಾದಿರೇವ ಬಾಹ್ಯಲೋಕತ್ರಯಸ್ಯ । ಪುತ್ರಾದಿಕರ್ಮಣಃ ಆತ್ಮಲೋಕಂ ಪ್ರತಿ ಅಸಾಧನತ್ವಾತ್ ಅಸಂಭವೇನ ವಿರುದ್ಧತ್ವಮ್ ಅವೋಚಾಮ । ತಸ್ಮಾತ್ ಆತ್ಮಾನಂ ಲೋಕಮಿಚ್ಛನ್ತಃ ಪ್ರವ್ರಜನ್ತ್ಯೇವ । ಸರ್ವಕ್ರಿಯಾಭ್ಯೋ ನಿವರ್ತೇರನ್ನೇವ ಇತ್ಯರ್ಥಃ । ಯಥಾ ಚ ಬಾಹ್ಯಲೋಕತ್ರಯಾರ್ಥಿನಃ ಪ್ರತಿನಿಯತಾನಿ ಪುತ್ರಾದೀನಿ ಸಾಧನಾನಿ ವಿಹಿತಾನಿ । ಏವಮ್ ಆತ್ಮಲೋಕಾರ್ಥಿನಃ ಸರ್ವೈಷಣಾನಿವೃತ್ತಿಃ ಪಾರಿವ್ರಾಜ್ಯಂ ಬ್ರಹ್ಮವಿದೋ ವಿಧೀಯತ ಏವ ॥

(ಭಾಷ್ಯಾರ್ಥ)

ಮತ್ತು ಈ ಆತ್ಮನೆಂಬ ತಮ್ಮ ಲೋಕವನ್ನು ಇಚ್ಛಿಸುವವರಾಗಿ ಬಯಸುವವರಾಗಿ ಪ್ರವ್ರಾಜಿಗಳು,[3] ಪ್ರವ್ರಜನಮಾಡುವ ಸ್ವಭಾವದವರು ಪ್ರವ್ರಜನ ಮಾಡುತ್ತಾರೆ, ಪ್ರಕರ್ಷದಿಂದ ಹೊರಟುಹೋಗುತ್ತಾರೆ, ಸರ್ವಕರ್ಮಗಳನ್ನೂ ಸಂನ್ಯಾಸಮಾಡುತ್ತಾರೆ[4] ಎಂದರ್ಥ. **'ಈ ಲೋಕವನ್ನೇ ಇಚ್ಛಿಸುವವರಾಗಿ' ಎಂದು ಅವಧಾರಣೆ(ಮಾಡಿರು)ವದರಿಂದ ಹೊರಗಿನ ಮೂರು ಲೋಕಗಳನ್ನು ಇಚ್ಛಿಸುವವರಿಗೆ ಪಾರಿವ್ರಾಜ್ಯದಲ್ಲಿ ಅಧಿಕಾರವಿಲ್ಲ ಎಂದು**

---

1. ಇದು ಶ್ರುತಿಯ ಅರ್ಥಮಾತ್ರವೆಂದು ತೋರುತ್ತದೆ ; ಏಕೆಂದರೆ 'ಸೋಽಯಂ ಮನುಷ್ಯಲೋಕಃ ಪುತ್ರೇಣೈವ ಜಯ್ಯೋ ನಾನ್ಯೇನ ಕರ್ಮಣಾ' ಎಂದೇ ಕಾಣ್ವ ಮಾಧ್ಯಂದಿನಪಾಠಗಳೆರಡೂ ಇವೆ ಆದರೆ ಮುಂದೆ (ಭಾ. ಭಾ. ೩೦೭ರಲ್ಲಿ)ಯೂ 'ಪುತ್ರೇಣೈವಾಯಂ ಲೋಕೋ ಜಯ್ಯೋ ನಾನ್ಯೇನ ಕರ್ಮಣಾ' ಎಂದೇ ಭಾಷ್ಯದಲ್ಲಿ ಉದಾಹೃತವಾಗಿದೆ. ಇದೇಕೆಂಬುದು ವಿಚಾರಣೀಯ.

2. ಇಲ್ಲಿ 'ಚೇತ್' 'ಯಃ' ಎರಡರಲ್ಲಿ ಒಂದು ಹೆಚ್ಚು ; 'ಆತ್ಮಾನಮೇವ ಲೋಕಮಿಚ್ಛತಿ ಯಃ' ಎಂದಿದ್ದರೆ ಇನ್ನೂ ಚೆನ್ನಾಗಿರುವದು.

3. ವಿರಕ್ತರಾದ ಮುಮುಕ್ಷುಗಳು. ಪ್ರವ್ರಾಜಿಗಳು ಎಂಬ ಶಬ್ದವು ತ್ರಿದಂಡಿಗಳಲ್ಲಿಯೇ ಬಹಳ ಪ್ರಸಿದ್ಧವಾಗಿರುವದರಿಂದ ಅವರನ್ನೇ ಇಲ್ಲಿ ಗ್ರಹಿಸಬಹುದು ಎಂದು ವಾರ್ತಿಕ. ೧೦೮೪.

4. ವಾಙ್ಮನಃಕಾಯಗಳ ಕರ್ಮಗಳನ್ನೂ ಬಿಡುತ್ತಾರೆ, ಅವುಗಳಿಂದಾಗಬೇಕಾದ ಫಲವನ್ನೂ ಕಾಮಿಸದೆ ಹೊರಟುಹೋಗುತ್ತಾರೆ ಎಂದರ್ಥ.

**ನಿಶ್ಚಯವಾಗುತ್ತದೆ.**[1] ಗಂಗಾದ್ವಾರವನ್ನು ಸೇರಬೇಕೆನ್ನುವ ಕಾಶೀಪ್ರದೇಶದಲ್ಲಿ ವಾಸಮಾಡಿಕೊಂಡಿರುವವನು ಪೂರ್ವಾಭಿಮುಖವಾಗಿ ಹೊರಡಲಾರನಷ್ಟೆ. ಆದ್ದರಿಂದ ಹೊರಗಿನ ಮೂರು ಲೋಕಗಳು ಬೇಕೆನ್ನುವವರಿಗೆ ಪುತ್ರ, ಕರ್ಮ, ಅಪರಬ್ರಹ್ಮವಿದ್ಯೆ- ಇವೇ ಸಾಧನವು ; ಈ (ಮನುಷ್ಯ)ಲೋಕವು ಪುತ್ರನಿಂದಲೇ ಗೆದ್ದುಕೊಳ್ಳತಕ್ಕದ್ದು, ಮತ್ತೊಂದು ಕರ್ಮದಿಂದಲ್ಲ " (೧-೫-೧೬) ಎಂದು ಮುಂತಾಗಿರುವ ಶ್ರುತಿಯಿಂದ (ಇದು ಸಿದ್ಧವಾಗಿರುತ್ತದೆ). ಆದ್ದರಿಂದ ಅವನ್ನು ಬಯಸುವವರು ಪುತ್ರನೇ ಮುಂತಾದ ಸಾಧನವನ್ನು ಬಿಟ್ಟು ಪರಿವ್ರಾಜ್ಯವನ್ನು ಪಡೆಯತಕ್ಕದ್ದಲ್ಲ , ಏಕೆಂದರೆ ಪಾರಿವ್ರಾಜ್ಯವು ಅದಕ್ಕೆ ಸಾಧನವಲ್ಲ.[2] ಆದ್ದರಿಂದ 'ಈ ಲೋಕವನ್ನೇ ಇಚ್ಛಿಸುವವರಾಗಿ ಪ್ರವ್ರಜನಮಾಡುತ್ತಾರೆ' ಎಂದು ಅವಧಾರಣೆಮಾಡಿರುವದು ಯುಕ್ತವೇ. ಆತ್ಮಲೋಕದ ಪ್ರಾಪ್ತಿ ಎಂದರೆ ಅವಿದ್ಯೆಯು ತೊಲಗಲಾಗಿ ತನ್ನ ಸ್ವರೂಪದಲ್ಲಿಯೇ ನಿಂತುಬಿಡುವದಲ್ಲವೆ ? ಆದ್ದರಿಂದ ಆತ್ಮಲೋಕವನ್ನೇ ಯಾವನು ಇಚ್ಛಿಸುತ್ತಿರುವನೋ ಅವನಿಗೆ ಸರ್ವಕ್ರಿಯೆಗಳನ್ನೂ ಬಿಡುವದೇ ಮುಖ್ಯವಾದ ಅಂತರಂಗಸಾಧನವು ; ಹೊರಗಿನ ಮೂರು ಲೋಕಕ್ಕೆ ಪುತ್ರಾದಿಯೇ ಹೇಗೆ (ಸಾಧನವೋ ಹಾಗೆಯೇ ಇದು) ಏಕೆಂದರೆ ಪುತ್ರಾದಿಕರ್ಮವು ಆತ್ಮಲೋಕಕ್ಕೆ ಸಾಧನವಲ್ಲ. (ಕರ್ಮವು) ಸಂಭವಿಸುವದಿಲ್ಲವಾದ್ದರಿಂದಲೂ ಹೀಗೆ (ಕರ್ಮಕ್ಕೂ ಸಂನ್ಯಾಸಕ್ಕೂ) ವಿರೋಧವಿದೆ ಎಂದು ಆಗಲೆ ಹೇಳಿರುತ್ತೇವೆ.[3] ಆದ್ದರಿಂದ ಆತ್ಮನೆಂಬ ಲೋಕವನ್ನಿಚ್ಛಿಸು

---

1. ಆತ್ಮಲೋಕವೇ ಬೇಕಾದವರು ಮಾತ್ರ ಪುತ್ರಾದಿತ್ಯಾಗವನ್ನು ಮಾಡಬೇಕು, ಮನುಷ್ಯಲೋಕಾದಿಗಳನ್ನು ಇಚ್ಛಿಸುವವರು ಮಾಡತಕ್ಕದ್ದಲ್ಲ ಎಂದು ನಿಶ್ಚಯವಾಯಿತು ಎಂದರ್ಥ.

2. ಮನುಷ್ಯಲೋಕಾದಿಸಾಧ್ಯಗಳಲ್ಲಿಯೂ ಅವುಗಳ ಸಾಧನದಲ್ಲಿಯೂ ವಿರಕ್ತನಾದವನಿಗೇ ಪಾರಿವ್ರಾಜ್ಯದಲ್ಲಿ ಅಧಿಕಾರ ; ಆ ಲೋಕತ್ರಯವೆಂಬ ಸಾಧ್ಯದಲ್ಲಿ ಇಚ್ಛೆಯುಳ್ಳವರಿಗೆ ಪುತ್ರಾದಿಗಳ ಸಂಪಾದನೆಯಲ್ಲಿಯೇ ಅಧಿಕಾರ_ ಎಂದು ಅಭಿಪ್ರಾಯ.

3 ಇದರ ಸಂಸ್ಕೃತಮೂಲಕ್ಕೆ ಯಾವ ಭಾವಾರ್ಥವಿದೆ ಎಂಬುದು ಸ್ಫುಟವಾಗಿಲ್ಲ. ಬರಿಯ ಪುತ್ರಾದಿಗಳು ಆತ್ಮಲೋಕಕ್ಕೆ ಸಾಧನವಲ್ಲದಿದ್ದರೂ ಪಾರಿವ್ರಾಜ್ಯಸಹಿತವಾದ ಪುತ್ರಾದಿಗಳು ಅದಕ್ಕೆ ಸಾಧನವಾಗಬಹುದಲ್ಲ '_ ಎಂಬ ಶಂಕೆಗೆ ಇದು ಪರಿಹಾರವೆಂದು ಟೀಕೆ. ಸರ್ವಕರ್ಮತ್ಯಾಗವು ಯಾರಿಗೆ ಸಂಭವಿಸುವದಿಲ್ಲವೋ ಅವರಿಗೆ ಕರ್ಮಗಳನ್ನು ವಿಧಿಸಿದೆಯಾದ್ದರಿಂದಲೂ ಅವು ಆತ್ಮಲೋಕಕ್ಕೆ ಸಾಧನವಲ್ಲ ಎಂದು ವಾರ್ತಿಕ. ಪಾರಿವ್ರಾಜ್ಯವು ಬಾಹ್ಯತ್ರಯಲೋಕಕ್ಕೂ ಪುತ್ರಾದಿಗಳು ಆತ್ಮಲೋಕಕ್ಕೂ ಸಂಭವಿಸುವದಿಲ್ಲ ಎಂಬುದನ್ನು ಸಾಧನಸಾಧ್ಯಗಳಿಗೆ ವಿರೋಧವಿದೆ ಎಂದು ಗಂಗಾದ್ವಾರಪ್ರಾಪ್ತಿದೃಷ್ಟಾಂತದಿಂದ ಮೇಲೆ ತಿಳಿಸಿರುತ್ತೇವೆ ಎಂಬುದು ಭಾಷ್ಯಕಾರರ ಅಭಿಪ್ರಾಯವಿರಬಹುದೆಂದು ತೋರುತ್ತದೆ. 'ವಿರುದ್ಧತ್ವೇನ ಚಾಸಂಭವಮವೋಚಾಮ' ಎಂದಿದ್ದರೆ ಈ ಅಭಿಪ್ರಾಯವು ಸ್ಫುಟತರವಾಗುತ್ತಿತ್ತು.

ವವರು, ಪ್ರವ್ರಜನಮಾಡಿಯೇ ತೀರುತ್ತಾರೆ, ಎಲ್ಲಾ ಕ್ರಿಯೆಗಳನ್ನೂ ಬಿಟ್ಟೇ ಬಿಡಬೇಕು[1] ಎಂದರ್ಥ. ಹೇಗೆ ಹೊರಗಿನ ಲೋಕತ್ರಯವನ್ನು ಬಯಸುವವರಿಗೆ ಗೊತ್ತಾಗಿ ಪುತ್ರಾದಿಗಳೇ ಸಾಧನವೆಂದು ವಿಹಿತವಾಗಿವೆಯೋ ಹಾಗೆಯೇ ಆತ್ಮಲೋಕಾರ್ಥಿಯಾದ ಬ್ರಹ್ಮವಿದನಿಗೆ[2] ಏಷಣೆಗಳನ್ನು ಬಿಡುವದೆಂಬ ಪಾರಿವ್ರಾಜ್ಯವು ವಿಹಿತವಾಗಿಯೇ ಇರುತ್ತದೆ.

## ಪಾರಿವ್ರಾಜ್ಯವಿಧಿಗೆ ಶೇಷವಾದ ಅರ್ಥವಾದ

(ಭಾಷ್ಯ)

೩೧೦. ಕುತಃ ಪುನಸ್ತೇ ಆತ್ಮಲೋಕಾರ್ಥಿನಃ ಪ್ರವ್ರಜನ್ತ್ಯೇವೇತಿ ? ಉಚ್ಯತೇ । ತತ್ರ ಅರ್ಥವಾದವಾಕ್ಯರೂಪೇಣ ಹೇತುಂ ದರ್ಶಯತಿ । ಏತದ್ ಹ ಸ್ಮ ವೈ ತತ್ । ತದೇತತ್ ಪಾರಿವ್ರಾಜ್ಯೇ ಕಾರಣಮ್ ಉಚ್ಯತೇ । ಹ ಸ್ಮ ವೈ ಕಿಲ ಪೂರ್ವೇ ಅತಿಕ್ರಾನ್ತಕಾಲೀನಾ ವಿದ್ವಾಂಸಃ ಆತ್ಮಜ್ಞಾಃ ಪ್ರಜಾಂ ಕರ್ಮ ಅಪರಬ್ರಹ್ಮವಿದ್ಯಾಂ ಚ । ಪ್ರಜೋಪಲಕ್ಷಿತಂ ಹಿ ತ್ರಯಮೇತದ್ ಬಾಹ್ಯ ಲೋಕತ್ರಯಸಾಧನಂ ನಿರ್ದಿಶ್ಯತೇ 'ಪ್ರಜಾಮ್' ಇತಿ । ಪ್ರಜಾಂ ಕಿಮ್ ? ನ ಕಾಮಯನ್ತೇ । ಪುತ್ರಾದಿಲೋಕತ್ರಯಸಾಧನಂ ನಾನುತಿಷ್ಠನ್ತಿ ಇತ್ಯರ್ಥಃ । ನನು ಅಪರಬ್ರಹ್ಮದರ್ಶನಮ್ ಅನುತಿಷ್ಠನ್ತ್ಯೇವ । ತದ್ಬಲಾದ್ ಹಿ ವ್ಯುತ್ಥಾನಮ್ । ನ । ಅಪವಾದಾತ್ । "ಬ್ರಹ್ಮ ತಂ ಪರಾದಾದ್ಯೋಽನ್ಯತ್ರಾಽಽತ್ಮನೋ ಬ್ರಹ್ಮ ವೇದ......ಸರ್ವಂ ತಂ ಪರಾದಾತ್" (೨-೪-೬) ಇತಿ ಅಪರಬ್ರಹ್ಮದರ್ಶನಮಪಿ ಅಪವದತ್ಯೇವ । ಅಪರಬ್ರಹ್ಮಣೋಽಪಿ ಸರ್ವಮಧ್ಯಾನ್ತರ್ಭಾವಾತ್ । "ಯತ್ರ ನಾನ್ಯತ್ ಪಶ್ಯತಿ" (ಛಾಂ. ೭-೨೪-೧) ಇತಿ ಚ । ಪೂರ್ವಾಪರಬಾಹ್ಯಾನ್ತರದರ್ಶನಪ್ರತಿಷೇಧಾಚ್ಚ "ಅಪೂರ್ವಮನಪರಮನನ್ತರಮಬಾಹ್ಯಮ್" (೨-೫-೧೯) ಇತಿ । "ತತ್ಕೇನ ಕಂ ಪಶ್ಯೇತ್ . ವಿಜಾನೀಯಾತ್" (೨-೪-೧೪) ಇತಿ ಚ । ತಸ್ಮಾತ್ ನಾಽಽತ್ಮದರ್ಶನವ್ಯತಿರೇಕೇಣ ಅನ್ಯದ್ ವ್ಯುತ್ಥಾನಕಾರಣಮ್ ಅಪೇಕ್ಷ್ಯತೇ[3] । ಕಃ ಪುನಸ್ತೇಷಾಮ್

---

1. ಪ್ರವ್ರಜನ್ತಿ ಎಂಬುದು ವರ್ತಮಾನಾಪದೇಶವಾದರೂ ವಿಧಿಯೇ ಎಂದು ಭಾವ. ಇದನ್ನು ಇನ್ನುಮುಂದೆ ವಿಶದಗೊಳಿಸಲಾಗುವದು. ಇಲ್ಲಿ ಏತಮೇವ ಎಂಬಲ್ಲಿರುವ ಏವಕಾರವನ್ನು ಪ್ರವ್ರಜನ್ತಿ ಎಂಬುದಕ್ಕೆ ಹತ್ತಿಸಿ ಆತ್ಮೇಚ್ಛೆಯುಳ್ಳವನು ಸಂನ್ಯಾಸಮಾಡಲೇ ಬೇಕು- ಎಂಬ ಅವಧಾರಣೆಯನ್ನು ಕಲ್ಪಿಸಿದೆ.

2. ಬ್ರಹ್ಮವಿದನಿಗೆ ಎಂಬ ಮಾತಿಗೆ ಬ್ರಹ್ಮಸ್ವರೂಪವನ್ನು ಪರೋಕ್ಷವಾಗಿ ತಿಳಿದು ಅದರ ಸಾಕ್ಷಾತ್ಕಾರಪ್ರಾಪ್ತಿಗೆ ಇಚ್ಛಿಸುತ್ತಿರುವವನಿಗೆ ಎಂಬರ್ಥನ್ನು ಕಲ್ಪಿಸಬೇಕು.

3. 'ಅಪೇಕ್ಷತೇ' ಎಂಬುದಕ್ಕಿಂತ ಈ ಪಾಠವು ಮೇಲು.

ಅಭಿಪ್ರಾಯ ಇತಿ? ಉಚ್ಯತೇ । ಕಿಂ ಪ್ರಯೋಜನಂ ಫಲಂ ಸಾಧ್ಯಂ ಕರಿಷ್ಯಾಮಃ ಪ್ರಜಯಾ ಸಾಧನೇನ? ಪ್ರಜಾ ಹಿ ಬಾಹ್ಯಲೋಕಸಾಧನಂ ನಿರ್ಜ್ಞಾತಾ । ಸ ಚ ಬಾಹ್ಯಲೋಕೋ ನಾಸ್ತಿ ಅಸ್ಮಾಕಮ್ ಆತ್ಮವ್ಯತಿರಿಕ್ತಃ । ಸರ್ವಂ ಹಿ ಅಸ್ಮಾಕಮ್ ಆತ್ಮಭೂತಮೇವ, ಸರ್ವಸ್ಯ ಚ ವಯಮ್ ಆತ್ಮಭೂತಾಃ । ಆತ್ಮಾ ಚ ನಃ ಆತ್ಮತ್ವಾದೇವ ನ ಕೇನಚಿತ್ ಸಾಧನೇನ ಉತ್ಪಾದ್ಯಃ ಆಪ್ಯಃ ವಿಕಾರ್ಯಃ ಸಂಸ್ಕಾರ್ಯೋ ವಾ । ಯದಪಿ ಆತ್ಮನಃ ಸಂಸ್ಕಾರಕಂ ಕರ್ಮ ಇತಿ, ತದಪಿ ಕಾರ್ಯಕರಣಾತ್ಮದರ್ಶನವಿಷಯಮೇವ, "ಇದಂ ಮೇಽನೇನಾಙ್ಗಂ ಸಂಸ್ಕ್ರಿಯತೇ" (ಶತ.ಬ್ರಾ. ೧೧-೨-೬-೧೩) ಇತಿ ಅಙ್ಗಸಂಸ್ಕಾರಶ್ರವಣಾತ್ । ನ ಹಿ ವಿಜ್ಞಾನಘನೈಕರಸಸ್ಯಾನನ್ಯದರ್ಶಿನೋಽಙ್ಗಾಙ್ಗಿಸಂಸ್ಕಾರೋಪಧಾನದರ್ಶನಂ ಸಂಭವತಿ । ತಸ್ಮಾತ್ ನ ಕಿಂಚಿತ್ ಪ್ರಜಾದಿಸಾಧನೈಃ ಕರಿಷ್ಯಾಮಃ । ಅವಿದುಷಾಂ ಹಿ ತತ್ ಪ್ರಜಾದಿಸಾಧನೈಃ ಕರ್ತವ್ಯಂ ಫಲಮ್ । ನ ಹಿ ಮೃಗತೃಷ್ಣಿಕಾಯಾಮ್ ಉದಕಪಾನಾಯ ತದುದಕದರ್ಶೀ ಪ್ರವೃತ್ತಃ ಇತಿ ತತ್ರ ಊಷರಮಾತ್ರಮ್ ಉದಕಾಭಾವಂ ಪಶ್ಯತೋಽಪಿ ಪ್ರವೃತ್ತಿರ್ಯುಕ್ತಾ । ಏವಮ್ ಅಸ್ಮಾಕಮಪಿ ಪರಮಾರ್ಥಾತ್ಮಲೋಕದರ್ಶಿನಾಂ ಪ್ರಜಾದಿಸಾಧನಸಾಧ್ಯೇ ಮೃಗತೃಷ್ಣಿಕಾದಿಸಮೇ ಅವಿದ್ವದ್ದರ್ಶನವಿಷಯೇ ನ ಪ್ರವೃತ್ತಿರ್ಯುಕ್ತಾ ಇತ್ಯಭಿಪ್ರಾಯಃ । ತದೇತತ್ ಉಚ್ಯತೇ । ಯೇಷಾಮ್ ಅಸ್ಮಾಕಂ ಪರಮಾರ್ಥದರ್ಶಿನಾಂ ನಃ ಅಯಮ್ ಆತ್ಮಾ ಅಶನಾಯಾದಿವಿನಿರ್ಮುಕ್ತಃ ಸಾಧ್ವಸಾಧುಭ್ಯಾಮ್ ಅವಿಕಾರ್ಯಃ, ಅಯಂ ಲೋಕಃ ಫಲಮ್ ಅಭಿಪ್ರೇತಮ್ । ನ ಚ ಅಸ್ಯಾಽಽತ್ಮನಃ ಸಾಧ್ಯಸಾಧನಾದಿಸರ್ವಸಂಸಾರಧರ್ಮವಿನಿರ್ಮುಕ್ತಸ್ಯ ಸಾಧನಂ ಕಿಂಚಿತ್ ಏಷಿತವ್ಯಮ್ । ಸಾಧ್ಯಸ್ಯ ಹಿ ಸಾಧನಾನ್ವೇಷಣಾ ಕ್ರಿಯತೇ? ಅಸಾಧ್ಯಸ್ಯ ಸಾಧನಾನ್ವೇಷಣಾಯಾಂ ಹಿ ಜಲಬುದ್ಧ್ಯಾ ಸ್ಥಲ ಇವ ತರಣಂ ಕೃತಂ ಸ್ಯಾತ್, ಖೇ ವಾ ಶಾಕುನಪದಾನ್ವೇಷಣಮ್ । ತಸ್ಮಾತ್ ಏತಮ್ ಆತ್ಮಾನಂ ವಿದಿತ್ವಾ ಪ್ರವ್ರಜೇಯುರೇವ ಬ್ರಾಹ್ಮಣಾಃ ನ ಕರ್ಮ ಆರಭೇರನ್ ಇತ್ಯರ್ಥಃ । ಯಸ್ಮಾತ್ ಪೂರ್ವೇ ಬ್ರಾಹ್ಮಣಾ ಏವಂ ವಿದ್ವಾಂಸಃ ಪ್ರಜಾಮ್ ಅಕಾಮಯಮಾನಾಃ । ತ ಏವಂ ಸಾಧ್ಯಸಾಧನಸಂವ್ಯವಹಾರಂ ನಿನ್ದನ್ತಃ ಅವಿದ್ವದ್ವಿಷಯೋಽಯಮ್ ಇತಿ ಕೃತ್ವಾ ಕಿಂ ಕೃತವನ್ತಃ ಇತಿ? ಉಚ್ಯತೇ । "ತೇ ಹ ಸ್ಮ ಕಿಲ ಪುತ್ರೈಷಣಾಯಾಶ್ಚ ವಿತ್ತೈಷಣಾಯಾಶ್ಚ ಲೋಕೈಷಣಾಯಾಶ್ಚ ವ್ಯುತ್ಥಾಯಾಥ ಭಿಕ್ಷಾಚರ್ಯಂ ಚರನ್ತಿ" ಇತ್ಯಾದಿ ವ್ಯಾಖ್ಯಾತಮ್ ॥

(ಭಾಷ್ಯಾರ್ಥ)

(ಪ್ರಶ್ನೆ) :- ಆ ಆತ್ಮಲೋಕಾರ್ಥಿಗಳು ಪ್ರವ್ರಜನಮಾಡಿಯೇತೀರುವರೆಂಬುದೇಕೆ ?

(ಉತ್ತರ) :- ಹೇಳುತ್ತೇವೆ (ಎಂದು) ಇದಕ್ಕೆ ಅರ್ಥವಾದವಾಕ್ಯದ ರೂಪದಿಂದ ಹೇತುವನ್ನು ತಿಳಿಸುತ್ತಾನೆ[1].

ಇದೇ ಅದು, ಆ ಇದನ್ನು ಪಾರಿವ್ರಾಜ್ಯಕ್ಕೆ ಕಾರಣವಾಗಿ ಹೇಳಲಾಗಿದೆ. (ಹ ಸ್ಮ ವೈ= ಕಿಲ) ಪೂರ್ವದ ಹಿಂದಿನ ಕಾಲದ ವಿದ್ವಾಂಸರು, ಆತ್ಮಜ್ಞರು ಪ್ರಜೆಯನ್ನೂ ಕರ್ಮವನ್ನೂ ಅಪರಬ್ರಹ್ಮವಿದ್ಯೆಯನ್ನೂ- ಏಕೆಂದರೆ ಪ್ರಜೆ ಎಂಬ ಉಪಲಕ್ಷಣದಿಂದ ಹೊರಗಿನ ಈ ಲೋಕತ್ರಯಸಾಧನವನ್ನೂ ಇಲ್ಲಿ 'ಪ್ರಜಾಮ್' ಎಂಬ (ಮಾತಿನಿಂದ) ತಿಳಿಸಿರುತ್ತದೆ-ಪ್ರಜೆಯನ್ನು ಏನು ? ಅದನ್ನು ಕಾಮಿಸ ಲಿಲ್ಲವಂತೆ, ಪುತ್ರನೇ ಮುಂತಾದ ಲೋಕತ್ರಯಸಾಧನವನ್ನು ಅನುಷ್ಠಾನಮಾಡ ಲಿಲ್ಲವಂತೆ ಎಂದರ್ಥ.

(ಆಕ್ಷೇಪ) :-ಅಪರಬ್ರಹ್ಮದ ಉಪಾಸನೆಯನ್ನೂ ಉಪಾಸನೆಮಾಡುತ್ತಲೇ ಇದ್ದರಲ್ಲವೆ? ಅದರ ಬಲದಿಂದಲಲ್ಲವೆ, (ಏಷಣೆಯನ್ನು ಬಿಟ್ಟು) ಎದ್ದದ್ದು[2] ?

(ಪರಿಹಾರ) :- ಹಾಗಲ್ಲ. ಏಕೆಂದರೆ ನಿಂದಿಸಿರುತ್ತದೆ. "ಬ್ರಾಹ್ಮಣ್ಯ ವನ್ನು ಆತ್ಮನಿಗಿಂತ ಬೇರೆಯಾಗಿ ಯಾವನು ಅರಿಯುತ್ತಾನೋ ಅವನನ್ನು ಬ್ರಾಹ್ಮಣ್ಯವು ಹೊರಕ್ಕೆ ದೂಡುವದು . ಯಾವನು ಯಾವದನ್ನೇ ಆಗಲಿ ಆತ್ಮನಿ ಗಿಂತ ಬೇರೆಯಾಗಿ ಅರಿಯುತ್ತಾನೋ, ಅವನನ್ನು ಅದೆಲ್ಲವೂ ಹೊರದೂಡು ವದು" (೨-೪-೬) ಎಂದು ಅಪರಬ್ರಹ್ಮದರ್ಶನವನ್ನು ನಿಂದಿಸಿಯೇ ಇದೆ. ಏಕೆಂದರೆ ಅಪರಬ್ರಹ್ಮವೂ (ಅ) ಎಲ್ಲದರೊಳಗೇ ಸೇರಿರುತ್ತದೆ. "ಎಲ್ಲಿ ಮತ್ತೊಂ ದನ್ನು ಕಾಣುವದಿಲ್ಲವೋ " (ಛಾಂ. ೭-೨೪-೧) ಎಂದೂ (ಎರಡನೆಯದರ ದರ್ಶನವನ್ನು ನಿಂದಿಸಿದೆ). ಹಿಂದಿನದು ಮುಂದಿನದು, ಹೊರಗಿನದು ಒಳಗಿನದು -(ಇವನ್ನು) ಕಾಣುವದನ್ನು "ಅಪೂರ್ವವು, ಅನಪರವು, ಅನಂತರವು, ಅಬಾಹ್ಯವು" (೨-೫-೧೯) ಎಂದು ನಿಷೇಧಿಸಿರುವದರಿಂದಲೂ "ಅಲ್ಲಿ ಏತರಿಂದ ಏನನ್ನು ಕಂಡಾನು ? ... ಅರಿತಾನು ?" (೨-೪-೧೪) ಎಂದೂ (ನಿಂದಿಸಿರು ವದರಿಂದಲೂ ಅಪರಬ್ರಹ್ಮದರ್ಶನವು ಕಾರಣವಲ್ಲ).[3] ಆದ್ದರಿಂದ ಆತ್ಮಜ್ಞಾನ ವನ್ನು ಬಿಟ್ಟರೆ ವ್ಯುತ್ಥಾನಕ್ಕೆ ಮತ್ತೆ ಯಾವ ಕಾರಣವೂ ಬೇಕಿರುವದಿಲ್ಲ.

(ಪ್ರಶ್ನೆ) :- (ಹಾಗೆ ಪ್ರಜಾದಿಗಳನ್ನು ಇಚ್ಛಿಸಲಿಲ್ಲವಲ್ಲ), ಅವರ ಅಭಿ ಪ್ರಾಯವಾದರೂ ಏನು ?

---

1. ಈ ಅರ್ಥವಾದವು ಮೇಲಿನ ವಿಧಿಗೆ ಹೇತುವನ್ನು ತಿಳಿಸುವದರ ಮೂಲಕ ಅದಕ್ಕೆ ಪುಷ್ಟಿಯನ್ನು ಕೊಡುತ್ತದೆ ಎಂದು ಭಾವ.

2. ಮಿಕ್ಕ ಕರ್ಮಗಳನ್ನು ಬಿಟ್ಟರೂ ಸಂನ್ಯಾಸಿಗಳು ಅಪರಬ್ರಹ್ಮದ ಉಪಾಸನೆ ಯನ್ನು ಮಾಡುತ್ತಲೇ ಇರಬೇಕು ; ಅದಕ್ಕಾಗಿಯೇ ಇಲ್ಲಿ ಮಿಕ್ಕ ಏಷಣೆಗಳನ್ನು ತ್ಯಾಗ ಮಾಡಬೇಕೆಂದು ಹೇಳಿದೆ -ಎಂದು ಪೂರ್ವಪಕ್ಷಿಯ ಭಾವ.

3. ಅಪರಬ್ರಹ್ಮದರ್ಶನದಲ್ಲಿ ಉಪಾಸ್ಯೋಪಾಸಕಭೇದವಿರುತ್ತದೆ; ಆದರೆ ಇಲ್ಲಿ ದ್ವಿತೀಯದರ್ಶನವನ್ನು ನಿಷೇಧಿಸಿದೆಯಾದ್ದರಿಂದ ಅಪರಬ್ರಹ್ಮದ ಉಪಾಸನೆಯು ವಿವಕ್ಷಿತವಲ್ಲ ಎಂದು ಭಾವ.

(ಉತ್ತರ) :- ಹೇಳುತ್ತೇವೆ. ಪ್ರಜೆ ಎಂಬ ಸಾಧನದಿಂದ (ನಾವು) ಏನು ಪ್ರಯೋಜನವನ್ನು (ಯಾವ) ಸಾಧ್ಯವಾದ ಫಲವನ್ನು ಮಾಡಿಕೊಳ್ಳೋಣ? ಪ್ರಜೆ ಎಂಬುದು ಹೊರಗಿನ ಲೋಕಕ್ಕೆ ಸಾಧನವೆಂಬುದು ನಿರ್ಣಯವಾಗಿ ಗೊತ್ತಾಗಿದೆ ಆದರೆ ಆ ಹೊರಗಿನ ಲೋಕವು ನಮಗೆ ಆತ್ಮವ್ಯತಿರಿಕ್ತವಾಗಿ ಇರುವದಿಲ್ಲ. ಏಕೆಂದರೆ ನಮಗೆ ಸರ್ವವೂ ಆತ್ಮವೇ ಆಗಿದೆ, ನಾವು ಸರ್ವಕ್ಕೂ ಆತ್ಮಭೂತರಾಗಿರುತ್ತೇವೆ[1]. ಮತ್ತು ಆತ್ಮನು ಆತ್ಮನಾಗಿರುವದರಿಂದಲೇ ಯಾವದೊಂದು ಸಾಧನದಿಂದಲೂ ಉತ್ಪಾದ್ಯನಲ್ಲ, ಆಪ್ಯನಲ್ಲ, ವಿಕಾರ್ಯನಲ್ಲ, ಸಂಸ್ಕಾರ್ಯನೂ ಅಲ್ಲ.[2] ಆತ್ಮಯಾಜಿಗೆ ಸಂಸ್ಕಾರಾರ್ಥವಾಗಿ ಕರ್ಮವು (ಬೇಕು ಎಂದು ಶ್ರುತಿಯಿದೆಯಲ್ಲ), ಅದೂ ಕಾರ್ಯಕರಣ (ರೂಪವಾದ) ಆತ್ಮಜ್ಞಾನದ ವಿಷಯವೇ ಆಗಿರುತ್ತದೆ; ಏಕೆಂದರೆ "ಈ ಕರ್ಮದಿಂದ ಈ ನನ್ನ ಅಂಗವು ಸಂಸ್ಕೃತವಾಗುತ್ತದೆ" (ಶತ. ಬ್ರಾ. ೧೧-೨-೬-೧೩) ಎಂದು ಅಂಗಾಂಗಿತ್ವವೇ ಮುಂತಾದದ್ದನ್ನು (ಆ) ಶ್ರುತಿಯಲ್ಲಿ ಹೇಳಿರುತ್ತದೆ. ವಿಜ್ಞಾನದ ಗಟ್ಟಿಯೇ ಆಗಿ ಏಕರಸವಾಗಿ ನಿರಂತರವಾಗಿರುವ (ಆತ್ಮ)ನನ್ನು ಕಂಡುಕೊಂಡವನಿಗೆ ಅಂಗಾಂಗಿಗಳ ಮತ್ತು ಸಂಸ್ಕಾರ, ಉಪಧಾನ[3]- ಇವುಗಳ ದರ್ಶನವು ಆಗಲಾರದಷ್ಟೆ. ಆದ್ದರಿಂದ ಪ್ರಜೆಯೇ ಮುಂತಾದ ಸಾಧನಗಳಿಂದ (ನಾವು) ಏನನ್ನೂ ಮಾಡಿಕೊಳ್ಳಲಾರೆವು. ಅಜ್ಞರಿಗೇ ಅಲ್ಲವೆ, ಆ ಪ್ರಜಾದಿಸಾಧನಗಳಿಂದ ಮಾಡಿಕೊಳ್ಳಬೇಕಾದ ಫಲವು? ಬಿಸಿಲುಕುದುರೆಯಲ್ಲಿ ನೀರನ್ನು ಕುಡಿಯುವದಕ್ಕೆಂದು ಅದು ನೀರೆಂದು ತಿಳಿದವನು ಹೊರಡುತ್ತಾನೆಂಬ ಕಾರಣದಿಂದ ಅದರಲ್ಲಿ ಚೌಳುನೆಲವೊಂದನ್ನೇ, ನೀರಿನ ಅಭಾವವನ್ನೇ, ಕಂಡವನೂ (ಕುಡಿಯುವದಕ್ಕೆ) ಹೊರಡುವನೆಂಬುದು ಯುಕ್ತವಾಗಲಾರದಷ್ಟೆ? ಹೀಗೆಯೇ ಪರಮಾರ್ಥವಾದ ಆತ್ಮಲೋಕವನ್ನು ಬಯಸುವ ನಮ್ಮಗಳಿಗೂ ಬಿಸಿಲುಕುದುರೆಯೇ ಮುಂತಾದವುಗಳಂತಿರುವ ಪ್ರಜಾದಿಸಾಧನಗಳಿಂದ ಪಡೆದುಕೊಳ್ಳಬೇಕಾಗಿರುವ ಅಜ್ಞರ ತಿಳಿವಿಗೆ ವಿಷಯವಾಗಿರುವ (ಲೋಕತ್ರಯ) ವಿಷಯದಲ್ಲಿ ತೊಡಗುವದು ಯುಕ್ತವಲ್ಲ ಎಂದು ಅಭಿಪ್ರಾಯ.

ಇದನ್ನೇ (ಶ್ರುತಿಯು) ಹೇಳುತ್ತಿದೆ. ನಮಗೆ ಪರಮಾರ್ಥದರ್ಶಿಗಳಾದ ನಮಗೆ ಇವನೇ- ಹಸಿವು ಮುಂತಾದವುಗಳಿಲ್ಲದ[4] ಸಾಧು, ಅಸಾಧು (ಎಂಬ, ಕರ್ಮ)ಗಳಿಂದ ಮಾರ್ಪಡದ[5]. (ಇವನೇ)- ಆತ್ಮನು, ಇವನೇ ಲೋಕವು,

---

1. ೪-೪-೧೩ ತಸ್ಯ ಲೋಕಃ ಎಂಬುದರ ಭಾಷ್ಯ (ಭಾ.ಭಾ. ೨೯೦)ವನ್ನು ನೋಡಿ.

2. ೩-೩-೧ (ಭಾ.ಭಾ. ೩೩)ರಲ್ಲಿ ಕರ್ಮಕ್ಕೆ ಈ ನಾಲ್ಕು ಫಲವೆಂದು ತಿಳಿಸಿದೆ. ತೈ.ಭಾ. ೧-೧೧ (ಭಾ.ಭಾ. ೭೪), ಮುಂ.ಭಾ. ೧-೨-೧೨ (ಭಾ.ಭಾ. ೪೬) ಇವುಗಳನ್ನೂ ನೋಡಿ.

3. ಅಂಗವನ್ನು ಉತ್ತಮಗೊಳಿಸಿಕೊಳ್ಳುವದು.

4. ೩-೫-೧ರ ಸೂಚನೆ.

5. ಭಾ. ಭಾ. ೩೦೩ವನ್ನು ನೋಡಿ.

ಬೇಕಾದ ಫಲವು. ಅಲ್ಲವೆ ? ಆದರೆ ಈ ಸಾಧ್ಯಸಾಧನವೇ ಮುಂತಾದ ಯಾವ ಸಂಸಾರಧರ್ಮವೂ ಇಲ್ಲದ ಆತ್ಮನಿಗೆ ಯಾವದೊಂದು ಸಾಧನವನ್ನೂ ಹುಡುಕ ಬೇಕಾದದ್ದಿರುವದಿಲ್ಲ, ಸಾಧ್ಯಕ್ಕಲ್ಲವೆ, ಸಾಧನವನ್ನು ಹುಡುಕಬೇಕಾದದ್ದು ? ಸಾಧ್ಯವಲ್ಲದ್ದಕ್ಕೂ ಸಾಧನವನ್ನು ಹುಡುಕಿದರೆ ನೀರಿನಿಂದ [illegible] ಮೇಲೂ ದಾಟಿದಂತೆ ಆಗುವದು, ಅಥವಾ ಆಕಾಶದಲ್ಲಿ ಪಕ್ಷಿಗಳ [illegible] ಗುರುತನ್ನು ಹುಡುಕಿದಂತೆ ಆಗುವದು). ಆದ್ದರಿಂದ ಈ ಆತ್ಮನನ್ನು ಅರಿತು ಕೊಂಡರೆ ಬ್ರಾಹ್ಮಣರು ಪ್ರವ್ರಜನವನ್ನೇ ಮಾಡಬೇಕಾದ, ಕರ್ಮವನ್ನು ಮಾಡ ಲಾರಂಭಿಸಲಾರರು ಎಂಬರ್ಥ. ಹಿಂದಿನವರಾದ ಬ್ರಾಹ್ಮಣರು ಹೀಗೆಯೇ ಅರಿತ ವರಾಗಿ ಪ್ರಜೆಯನ್ನು ಬಯಸಲಿಲ್ಲವಲ್ಲ, ಅವರು ಹೀಗೆ ಸಾಧ್ಯಸಾಧನ [illegible] ಸಂವ್ಯವಹಾರವನ್ನು ನಿಂದಿಸುತ್ತಾ ಇದು [illegible] ಮಾಡಿ ಕೊಂಡು ಏನು ಮಾಡಿಯೇವು ? ಎಂದರೆ ಹೇಳುತ್ತಾನೆ [illegible] "ಪುತ್ರೈಷಣೆಯಿಂದಲೂ ವಿತ್ತೈಷಣೆಯಿಂದಲೂ ಲೋಕೈಷಣೆಯಿಂದಲೂ ಬಿಟ್ಟೆದ್ದು ಇನ್ನು ಭಿಕ್ಷಾಚರ್ಯೆಯನ್ನು ಮಾಡುತ್ತಾರೆ" [illegible] ರುವ (ಗ್ರಂಥವನ್ನು) ಹಿಂದೆಯೇ (೩-೫-೧) ವ್ಯಾಖ್ಯಾನಮಾಡಿ [1]

## ಪ್ರವ್ರಜನ್ತಿ ಎಂಬುದು ವಿಧಿಯೇ, ಸ್ತುತಿಯಲ್ಲ

(ಭಾಷ್ಯ)

೩೧೧. ತಸ್ಮಾತ್ ಆತ್ಮಾನಂ ಲೋಕಮಿಚ್ಛನ್ತಃ ಪ್ರವ್ರಜನ್ತಿ, ಪ್ರವ್ರಜೇ ಯುಃ ಇತ್ಯೇಷ ವಿಧಿಃ ಅರ್ಥವಾದೇನ ಸಂಗಚ್ಛತೇ । ನ ಹಿ ಸ ಫಲವಾದಃ ಅಸ್ಯ ಲೋಕಸ್ತುತ್ಯಾಭಿಮುಖ್ಯಮ್ ಉಪಪದ್ಯತೇ । 'ಪ್ರವ್ರಜನ್ತಿ' ಇತ್ಯಸ್ಯ ಅರ್ಥವಾದರೂಪೋ ಹಿ "ಏತದ್ಧಸ್ಮ" ಇತ್ಯಾದಿರುತ್ತರೋ ಗ್ರನ್ಥಃ । ಅರ್ಥವಾದ ಶ್ಚೇತ್ ನಾರ್ಥವಾದಾನ್ತರಮ್ ಅಪೇಕ್ಷೇತ । ಅಪೇಕ್ಷತೇ ತು 'ಏತದ್ಧಸ್ಮ' ಇತ್ಯಾದ್ಯರ್ಥವಾದಂ 'ಪ್ರವ್ರಜನ್ತಿ' ಇತ್ಯೇತತ್ । ಯಸ್ಮಾತ್ ಪೂರ್ವೇ ವಿದ್ವಾಂಸಃ ಪ್ರಜಾದಿಕರ್ಮಭ್ಯೋ ನಿವೃತ್ತಾಃ ಪ್ರವ್ರಜಿತವನ್ತ ಏವ ತಸ್ಮಾತ್ ಅಧು ನಾತನಾ ಅಪಿ ಪ್ರವ್ರಜನ್ತಿ ಪ್ರವ್ರಜೇಯುಃ ಇತಿ । ಏವಂ ಸಂಬಧ್ಯಮಾನಂ ನ ಲೋಕಸ್ತುತ್ಯಭಿಮುಖಂ ಭವಿತುಮರ್ಹತಿ । ವಿಜ್ಞಾನಸಮಾನಕರ್ತೃಕತ್ವೋ ಪದೇಶಾತ್ ಇತ್ಯಾದಿನಾ ಅವೋಚಾಮ । ವೇದಾನುವಚನಾದಿಸಹಪಾಠಾಚ್ಚ । ಯಥಾ ಆತ್ಮವೇದನಸಾಧನತ್ವೇನ ವಿಹಿತಾನಾಂ ವೇದಾನುವಚನಾದೀನಾಂ ಯಥಾರ್ಥತ್ವಮೇವ ನಾರ್ಥವಾದತ್ವಮ್, ತಥಾ ತೈರೇವ ಸಹ ಪಠಿತಸ್ಯ ಪಾರಿವ್ರಾಜ್ಯಸ್ಯ ಆತ್ಮಲೋಕಪ್ರಾಪ್ತಿಸಾಧನತ್ವೇನ ಅರ್ಥವಾದತ್ವಮ್ ಅಯುಕ್ತಮ್ । ಫಲವಿಭಾಗೋಪದೇಶಾಚ್ಚ । 'ಏತಮೇವಾಽಽತ್ಮನಂ ಲೋಕಂ

1 ೩-೫-೧ (ಭಾ. ಭಾ. ೫೪) ರಲ್ಲಿರುವ ವ್ಯಾಖ್ಯಾನವನ್ನು ನೋಡಿ.

ವಿದಿತ್ವಾ' ಇತಿ ಅನ್ಯಸ್ಮಾತ್ ಬಾಹ್ಯಾಲ್ಲೋಕಾತ್ ಆತ್ಮಾನಂ ಫಲಾನ್ತರತ್ವೇನ ಪ್ರವಿಭಜತಿ। ಯಥಾ "ಪುತ್ರೇಣೈವಾಯಂ ಲೋಕೋ ಜಯ್ಯೋ ನಾನ್ಯೇನ ಕರ್ಮಣಾ ಕರ್ಮಣಾ ಪಿತೃಲೋಕಃ" (೧-೫-೧೬) ಇತಿ। ನ ಚ ಪ್ರವ್ರಜನ್ತಿ ಇತ್ಯೇತತ್ ಪ್ರಾಪ್ತವಲ್ಲೋಕಸ್ತುತಿಪರಮ್, ಪ್ರಧಾನವಚ್ಚ ಅರ್ಥವಾದಾಪೇಕ್ಷಂ ಸಕೃತ್ ಶ್ರುತಂ ಸ್ಯಾತ್। ತಸ್ಮಾತ್ ಭ್ರಾನ್ತಿರೇವೈಷಾ ಲೋಕಸ್ತುತಿಪರಮಿತಿ। ನ ಚ ಅನುಷ್ಠೇಯೇನ ಪಾರಿವ್ರಾಜ್ಯೇನ ಸ್ತುತಿರುಪಪದ್ಯತೇ। ಯದಿ ಪಾರಿವ್ರಾಜ್ಯಮ್ ಅನುಷ್ಠೇಯಮಪಿ ಸತ್ ಅನ್ಯಸ್ತುತ್ಯರ್ಥಂ ಸ್ಯಾತ್ ದರ್ಶಪೂರ್ಣಮಾಸಾದೀನಾಮಪಿ ಅನುಷ್ಠೇಯಾನಾಂ ಸ್ತುತ್ಯರ್ಥತಾ ಸ್ಯಾತ್। ನ ಚ ಅನ್ಯತ್ರ ಕರ್ತವ್ಯತಾ ಏತಸ್ಮಾತ್ ವಿಷಯಾತ್ ನಿರ್ಜ್ಞಾತಾ, ಯತ ಇಹ ಸ್ತುತ್ಯರ್ಥೋ ಭವೇತ್। ಯದಿ ಪುನಃ ಕ್ವಚಿದ್ ವಿಧಿಃ ಪರಿಕಲ್ಪ್ಯೇತ ಪಾರಿವ್ರಾಜ್ಯಸ್ಯ ಸ ಇಹೈವ ಮುಖ್ಯೋ ನಾನ್ಯತ್ರ ಸಂಭವತಿ। ಯದಪಿ ಅನಧಿಕೃತವಿಷಯೋ ಪಾರಿವ್ರಾಜ್ಯಂ ಪರಿಕಲ್ಪ್ಯತೇ ತತ್ರ ವೃಕ್ಷಾದ್ಯಾರೋಹಣಾದ್ಯಪಿ ಪಾರಿವ್ರಾಜ್ಯವತ್ ಕಲ್ಪ್ಯೇತ। ಕರ್ತವ್ಯತ್ವೇನ ಅನಿರ್ಜ್ಞಾತತ್ವಾವಿಶೇಷಾತ್। ತಸ್ಮಾತ್ ಸ್ತುತಿತ್ವಗನ್ಧೋಽಪಿ ಅತ್ರ ನ ಶಕ್ಯಃ ಕಲ್ಪಯಿತುಮ್ ॥

(ಭಾಷ್ಯಾರ್ಥ)

ಆದ್ದರಿಂದ ಆತ್ಮನೆಂಬ ಲೋಕವನ್ನು ಇಚ್ಛಿಸುವವರು ಪ್ರವ್ರಜನಮಾಡುತ್ತಾರೆ ಎಂದರೆ ಪ್ರವ್ರಜನಮಾಡಬೇಕು– ಎಂಬೀ ವಿಧಿಯು (ಏತದ್ಧಸ್ಮ ವೈ.... ಎಂಬ) ಅರ್ಥವಾದಕ್ಕೆ ಹೊಂದಿಕೆಯಾಗುತ್ತದೆ. ಅರ್ಥವಾದಸಹಿತವಾದ ಈ (ವಾಕ್ಯ)ಕ್ಕೆ (ಆತ್ಮ)ಲೋಕಸ್ತುತಿಯಲ್ಲಿ ತಾತ್ಪರ್ಯವೆಂಬುದು ಹೊಂದಲಾರದಷ್ಟೆ? (ಇದರ ವಿವರ): 'ಪ್ರವ್ರಜನ್ತಿ' ಎಂಬೀ ವಾಕ್ಯಕ್ಕೆ 'ಏತದ್ಧ ಸ್ಮ' ಎಂದು ಮುಂತಾಗಿರುವ ಮುಂದಿನ ಗ್ರಂಥವು ಅರ್ಥವಾದರೂಪವಾಗಿದೆಯಲ್ಲವೆ[1] ? (ಇದು) ಅರ್ಥವಾದವಾಗಿದ್ದರೆ (ಅ) ಮತ್ತೊಂದು ಅರ್ಥವಾದವನ್ನು ಬಯಸುತ್ತಿರಲಿಲ್ಲ[2] ; ಆದರೆ 'ಏತದ್ಧ ಸ್ಮ' ಎಂದು ಮುಂತಾಗಿರುವ ಅರ್ಥವಾದವನ್ನು 'ಪ್ರವ್ರಜನ್ತಿ' ಎಂಬೀ (ವಾಕ್ಯವು) ಬಯಸುತ್ತಿದೆ. ಪೂರ್ವದ ವಿದ್ವಾಂಸರು ಪ್ರಜಾದಿಕರ್ಮಗಳಿಂದ ಹಿಮ್ಮೆಟ್ಟಿ ಪ್ರವ್ರಜನವನ್ನೇ ಮಾಡಿದರಷ್ಟೆ, ಆದ್ದರಿಂದ ಈಗಿನವರೂ ಪ್ರವ್ರಜನಮಾಡುತ್ತಾರೆ, ಪ್ರವ್ರಜನಮಾಡಬೇಕು ಎಂದು

---

1. ಏಕೆಂದರೆ ಅದು ಪ್ರವ್ರಜನಕ್ಕೆ ಕಾರಣವನ್ನು ಹೇಳುವ ಮೂಲಕ ಪ್ರವ್ರಜನವನ್ನು ಹೊಗಳುವ ವಾಕ್ಯವಾಗಿದೆ.

2. ಅರ್ಥವಾದವು ವಿಧಿಗೆ ಹೊಂದಿಕೊಳ್ಳುವ ಅಧೀನವಾಕ್ಯವೇ ಹೊರತು ತನಗೊಂದು ಅರ್ಥವಾದವನ್ನು ಬಯಸಿಕೊಂಡಿರುವ ಪ್ರಧಾನವಾಕ್ಯವಲ್ಲ.

(ಆಕಾಂಕ್ಷೆಯು ಪೂರ್ಣವಾಗುತ್ತದೆ).[1] ಹೀಗೆ (ಅರ್ಥವಾದದೊಡನೆ) ಸಂಬದ್ಧವಾಗಿರುವ (ಈ ವಾಕ್ಯವು) ಲೋಕಸ್ತುತಿಯಲ್ಲಿ ತಾತ್ಪರ್ಯವುಳ್ಳದ್ದಾಗಲಾರದು.[2] ವಿಜ್ಞಾನಕ್ಕೆ ಇರುವದೇ ಆದ ಕರ್ತವ್ಯವು (ಇದಕ್ಕೆ) ಉಪದಿಷ್ಟವಾಗಿರುವದರಿಂದಲೂ (ಇದು ವಿಧಿಯೇ) ಎಂದು ಮುಂತಾಗಿ ಹಿಂದೆ ಹೇಳಿಯೂ ಇರುತ್ತೇವೆ.[3]

ವೇದಾನುವಚನವೇ ಮುಂತಾದವುಗಳೊಡನೆಯೇ (ಇದನ್ನು) ಹೇಳಿರುವದರಿಂದಲೂ (ಇದು ಅರ್ಥವಾದವಲ್ಲ ಇದರ ವಿವರ) : ಹೇಗೆ ಆತ್ಮಜ್ಞಾನಕ್ಕೆ ಸಾಧನವೆಂದು ವಿಧಿಸಿರುವ ವೇದಾನುವಚನವೇ ಮುಂತಾದವುಗಳು ಯಥಾರ್ಥವಾಗಿಯೇ (ಅನುಷ್ಠೇಯವಾಗಿರುವವೋ), ಅರ್ಥವಾದವಲ್ಲವೋ, ಹಾಗೆ ಅವುಗಳೊಡನೆಯೇ ಪಾರಿವ್ರಾಜ್ಯವೂ ಆತ್ಮಲೋಕಪ್ರಾಪ್ತಿಗೆ ಸಾಧನವೆಂದು ಪಠಿತವಾಗಿರುವದರಿಂದ (ಅದು) ಅರ್ಥವಾದವೆಂಬುದು ಸರಿಯಾಗುವದಿಲ್ಲ.[4] ಫಲವನ್ನು ವಿಂಗಡಿಸಿ ಉಪದೇಶಮಾಡಿರುವದರಿಂದಲೂ (ಹೀಗೆ ಇದರ ವಿವರ) : "ಈ ಆತ್ಮನೆಂಬ ಲೋಕವನ್ನೇ ಅರಿತುಕೊಂಡವನು (ಮುನಿಯಾಗುವನು)" ಎಂದು ಮಿಕ್ಕ ಹೊರಗಿನ ಲೋಕಕ್ಕಿಂತ ಆತ್ಮನು ಬೇರೊಂದು ಫಲವೆಂದು ವಿಂಗಡಿಸಿರುತ್ತದೆ; 'ಪುತ್ರನಿಂದಲೇ ಈ ಲೋಕವು ಗೆದ್ದುಕೊಳ್ಳತಕ್ಕದ್ದೇ ಹೊರತು ಬೇರೆಯ ಕರ್ಮದಿಂದಲ್ಲ, ಕರ್ಮದಿಂದ ಪಿತೃಲೋಕವು' (೧-೫-೧೬)

1. ಪ್ರವ್ರಜನ್ತಿ (ಪ್ರವ್ರಜನಮಾಡುತ್ತಾರೆ) ಎಂಬುದು ವಿಧಿಯೆಂದೂ ಮುಂದಿನ ವಾಕ್ಯವು ಅರ್ಥವಾದವೆಂದೂ ಎಣಿಸಿದರೆ ಈ ಎರಡು ವಾಕ್ಯಗಳಿಗೆ ಹೊಂದಿಕೆಯಾದ ಅರ್ಥವಾಗುವದರಿಂದ ಮೊದಲನೆಯ ವಾಕ್ಯಕ್ಕೆ ಎರಡನೆಯ ವಾಕ್ಯದ ಆಕಾಂಕ್ಷೆಯಿದೆ ಎಂದಾಗುತ್ತದೆ; ಹಾಗಿಲ್ಲದೆ ಮೊದಲನೆಯ ವಾಕ್ಯವೇ ಆತ್ಮಲೋಕವನ್ನು ಹೊಗಳುವ ವಾಕ್ಯವೆಂದರೆ ಮುಂದಿನ ವಾಕ್ಯದ ಬಯಕೆಯೇ ಅದಕ್ಕಿರುತ್ತಿರಲಿಲ್ಲ.

2. ಆತ್ಮಲೋಕವು ಎಂಥ ಹೆಚ್ಚಿನದೆಂದರೆ ಅದನ್ನು ಪಡೆಯುವದಕ್ಕಾಗಿ ಮುಮುಕ್ಷುಗಳು ಕರ್ಮತ್ಯಾಗವನ್ನು ಕೂಡ ಮಾಡುತ್ತಾರೆ– ಎಂದು ಲೋಕಸ್ತುತಿಯಿದು ಎಂದು ಪೂರ್ವಪಕ್ಷಿಯ ಭಾವ. ಅನುಷ್ಠೇಯವಾದ ವೇದಾನುವಚನವೇ ಮುಂತಾದವುಗಳ ಜೊತೆಯಲ್ಲಿ ಹೇಳಿರುವದರಿಂದ ಇದೂ ಅನುಷ್ಠೇಯವೇ ಆಗಿರಬೇಕು, ಬರಿಯ ಸ್ತುತಿಯಲ್ಲ ಎಂದು ಸೂ. ಭಾ. ೩-೪-೧೯ರಲ್ಲಿ ಹೇಳಿದೆ, ಅರ್ಥವಾದದೊಡನೆ ಇರುವದರಿಂದ ಇದು ವಿಧಿಯೇ ಎಂಬ ಹೆಚ್ಚಿನ ಯುಕ್ತಿಯನ್ನು ಇಲ್ಲಿ ಕೊಟ್ಟಿದೆ.

3. ೩-೫-೧ (ಭಾ. ಭಾ. ೫೪)ರಲ್ಲಿ ಜ್ಞಾನವು ಕರ್ತವ್ಯವಾದರೆ ಸಂನ್ಯಾಸವೂ ಕರ್ತವ್ಯವೇ ಆಗಿರಬೇಕೆಂಬ ನ್ಯಾಯವನ್ನು ವಿವರಿಸಿದೆ. ಜ್ಞಾನಿಗೆ ಯಜ್ಞೋಪವೀತಾದಿ ತ್ಯಾಗವು ಅರ್ಥಪ್ರಾಪ್ತವಾದರೂ ಅದನ್ನು ಜ್ಞಾನವಿಧಿಯೇ ತಿಳಿಸಿದ್ದರೂ ವಿಷಣಾತ್ಯಾಗ ವಿಧಿಯು ಗಟ್ಟಿಗೊಳಿಸಬಹುದು ಎಂದೂ ಹೇಳಿದೆ.

4. ಇಲ್ಲಿಯೂ ಜ್ಞಾನಪ್ರಾಪ್ತಿಗಾಗಿ ಅನುಷ್ಠೇಯದೊಡನೆ ಅನನುಷ್ಠೇಯವಾದದ್ದನ್ನು ಹೇಳಲಾಗುವದಿಲ್ಲ ಎಂಬ ನ್ಯಾಯವೇ ಇದೆ.

ಎಂದು ಹೇಗೆ (ಫಲವಿಭಾಗವನ್ನು ಮಾಡಿ ಹೇಳಿದೆಯೋ ಹಾಗೆಯೇ ಇಲ್ಲಿಯೂ ಹೇಳಿದೆ). ಇದಲ್ಲದೆ (ಇಲ್ಲಿ) ಪ್ರವ್ರಜನಮಾಡುತ್ತಾರೆ ಎಂದು ಒಂದೇ ಸಲ ಹೇಳಿರುವದು (ಮೊದಲೇ) ಪ್ರಾಪ್ತವಾಗಿರುವಂತೆ (ಆತ್ಮ)ಲೋಕಸ್ತುತಿಪರವೂ (ತಾನೇ) ಪ್ರಧಾನವಾಗಿದ್ದಂತೆ (ಮತ್ತೊಂದು) ಅರ್ಥವಾದವನ್ನು ಬಯಸುವದೂ ಆಗಿರಲಾರದು.[1] ಆದ್ದರಿಂದ (ಈ ವಾಕ್ಯವು) ಲೋಕಸ್ತುತಿಪರವು ಎಂಬಿದು ಭ್ರಾಂತಿಯೇ.

ಇದಲ್ಲದೆ ಅನುಷ್ಠೇಯವಾದ[2] ಪಾರಿವ್ರಾಜ್ಯದಿಂದ (ಆತ್ಮಲೋಕವನ್ನು) ಹೊಗಳುವರೆಂಬುದೂ ಹೊಂದುವದಿಲ್ಲ. ಪಾರಿವ್ರಾಜ್ಯವು ಅನುಷ್ಠೇಯವಾಗಿದ್ದರೂ ಮತ್ತೊಂದರ ಸ್ತುತಿಗಾಗಿ (ಬಂದದ್ದು) ಎಂದಾದರೆ ಅನುಷ್ಠೇಯವಾಗಿರುವ ದರ್ಶಪೂರ್ಣಮಾಸಾದಿಗಳೂ ಸ್ತುತಿಗಾಗಿ ಬಂದವುಗಳೆಂದಾದೀತು.[3] ಈ ವಿಷಯಕ್ಕಿಂತಲೂ ಬೇರೊಂದು (ಸ್ಥಲ)ದಲ್ಲಿ (ಇದು) ಕರ್ತವ್ಯವೆಂದು (ಮೊದಲೇ) ನಿಶ್ಚಯವಾಗಿರುವದಿಲ್ಲ[4]; ಹಾಗಿದ್ದಿದ್ದರೆ ಇಲ್ಲಿ (ಇದು) ಸ್ತುತ್ಯರ್ಥ (ವಾಗಿ ಬಂದಿದೆ) ಎಂದಾಗಬಹುದಿತ್ತು. ಎಲ್ಲಿಯಾದರೂ ಪಾರಿವ್ರಾಜ್ಯಕ್ಕೆ ವಿಧಿಯನ್ನು ಪರಿಕಲ್ಪನೆಮಾಡಬೇಕಾಗಿದ್ದರೆ, ಆ (ವಿಧಿಯು) ಇಲ್ಲಿಯೇ ಮುಖ್ಯವಾಗಿ ಸಂಭವಿಸುತ್ತದೆಯೇ ಹೊರತು ಮತ್ತೊಂದು (ಕಡೆ)ಯಲ್ಲಿ (ಸಂಭವಿಸು)

---

1. 'ಸಕೃಚ್ಛ್ರುತಂ' ಎಂಬ ಮಾತಿನ ಸ್ವಾರಸ್ಯವನ್ನು ಟೀಕೆಯಲ್ಲಿ ಹೀಗೆ ವಿವರಿಸಿದೆ: "ಪಾರಿವ್ರಾಜ್ಯವನ್ನು ಒಂದೇ ಸಲ ಹೇಳಿದ್ದರೆ ಅವಿವಕ್ಷಿತವೆಂದೋ ಮತ್ತೊಂದರ ಸ್ತುತಿಯೆಂದೋ ಆದೀತು; ಆದರೆ 'ಪ್ರವ್ರಜನ್ತಿ', 'ನ ಕಾಮಯನ್ತೇ', 'ಭಿಕ್ಷಾಚರ್ಯಂ ಚರನ್ತಿ'- ಎಂದು ಮತ್ತೆ ಮತ್ತೆ ಹೇಳಿದ, ಆದ್ದರಿಂದ ಸ್ತುತಿಯಲ್ಲ" ಅಪ್ರಾಪ್ತವಾಗಿದ್ದು ಅಗ್ನಿಹೋತ್ರಾದಿಗಳಂತೆ ಇಲ್ಲಿಯೇ ಮೊದಲನೆಯ ಸಲಕ್ಕೆ ಹೇಳಿರುವ ಪಾರಿವ್ರಾಜ್ಯವನ್ನು ಮತ್ತೊಂದುಕಡೆ ವಿಧಿಸಿರುವಂತೆ ಭಾವಿಸಿ ಇಲ್ಲಿ ಸ್ತುತಿಯೆಂದು ಎಣಿಸುವದಕ್ಕೆ ಬರುವದಿಲ್ಲ ಎಂಬ ಅಭಿಪ್ರಾಯವನ್ನು ನಾವು ತೆಗೆದಿದ್ದೇವೆ. ಈ ಅಭಿಪ್ರಾಯವು ವಾಕ್ಯಶೇಷಕ್ಕೂ ಹೊಂದುಗಡೆಯಾಗಿದೆ. ಅಪ್ರಾಪ್ತವಾಗಿರುವದರಿಂದಲೂ ಸಾರ್ಥವಾದವಾಗಿರುವದರಿಂದಲೂ ಇದು ವಿಧಿಯೇ ಎಂಬುದು ವಾಕ್ಯಾರ್ಥ.

2. ಪಾರಿವ್ರಾಜ್ಯವೆಂದರೆ ಕರ್ಮತ್ಯಾಗರೂಪವೇ ಆದರೂ ಶಮದಮಾದಿಗಳ ಅನುಷ್ಠಾನವೂ ಅವಶ್ಯವಾಗಿರುವದರಿಂದ ಇದನ್ನು ಅನುಷ್ಠೇಯವೆಂದದ್ದು ತಪ್ಪಲ್ಲ. ಅನುಷ್ಠೇಯವಾದ ಪಾರಿವ್ರಾಜ್ಯವು ಸ್ತುತಿಯಾಗಲಾರದೆಂದು ಈ ಮೊದಲೇ ಹೇಳಿಯೇ ಇರುವದನ್ನು ಮತ್ತೆ ಅನ್ವಾರಂಭಣಮಾಡಿರುವದು ಪೂರ್ವಪಕ್ಷದಲ್ಲಿ ಅನಿಷ್ಟಾಂತರವನ್ನು ಹೇಳುವದಕ್ಕೆ.

3. ತಮಗಾಗಿ ತಾವು ವಿಹಿತವಾಗಿರುವ ದರ್ಶಾದಿಗಳು ಸ್ತುತಿಯೆಂಬುದು ನಿಮಗೂ ಅನಿಷ್ಟವೇ ಎಂದು ಭಾವ.

4. ಬೇರೆಯ ಕಡೆಯಲ್ಲಿ ಇದು ವಿಹಿತವಾಗಿಲ್ಲ, ಆತ್ಮಜ್ಞಾನಪ್ರಕರಣದಲ್ಲಿಯೇ ಇದು ವಿಹಿತವಾಗಿರುತ್ತದೆ ಎಂದು ಭಾವ.

ವದಿಲ್ಲ[1]. ಇನ್ನು ಪಾರಿವ್ರಾಜ್ಯವು ಅನಧಿಕೃತವಿಷಯವೆಂದು ಕಲ್ಪಿಸುತ್ತಾರಲ್ಲ, ಆ (ಅನಧಿಕೃತವಿಷಯ)ದಲ್ಲಿ ಮರನೇ ಮುಂತಾದದ್ದನ್ನು ಹತ್ತುವದೇ ಮುಂತಾದದ್ದನ್ನು ಪಾರಿವ್ರಾಜ್ಯದಂತೆಯೇ ಕಲ್ಪಿಸಬಹುದಾಗುವದು ; ಏಕೆಂದರೆ (ಅವರಿಗೆ ಇದು) ಕರ್ತವ್ಯವೆಂದು ನಿಶ್ಚಿತವಾಗಿಲ್ಲವೆಂಬುದು (ಎರಡಕ್ಕೂ) ಸಮಾನವಾಗಿರುತ್ತದೆ.[2] ಆದ್ದರಿಂದ (ಇದು) ಸ್ಮೃತಿಯೆಂಬ ವಾಸನೆಯನ್ನು ಕೂಡ ಇಲ್ಲಿ ಕಲ್ಪಿಸುವದಕ್ಕೆ ಆಗುವಂತಿಲ್ಲ.

## ಆತ್ಮನು ಕರ್ಮದಿಂದ ಪ್ರಾಪ್ಯನಲ್ಲ

(ಭಾಷ್ಯ)

೩೧೨. ಯದಿ ಅಯಮಾತ್ಮಾ ಲೋಕ ಇಷ್ಯತೇ ಕಿಮರ್ಥಂ ತತ್ಪ್ರಾಪ್ತಿಸಾಧನತ್ವೇನ ಕರ್ಮಾಣ್ಯೇವ ನಾಽಽರಭೇರನ್ ? ಕಿಂ ಪಾರಿವ್ರಾಜ್ಯೇನೇತಿ ? ಅತ್ರೋಚ್ಯತೇ। ಅಸ್ಯ ಆತ್ಮಲೋಕಸ್ಯ ಕರ್ಮಭಿರಸಂಬನ್ಧಾತ್। ಯಮ್ ಆತ್ಮಾನಮ್ ಇಚ್ಛನ್ತಃ ಪ್ರವ್ರಜೇಯುಃ, ಸ ಆತ್ಮಾ ಸಾಧನತ್ವೇನ ಫಲತ್ವೇನ ಚ ಉತ್ಪಾದ್ಯತ್ವಾದಿಪ್ರಕಾರಾಣಾಮ್ ಅನ್ಯತಮತ್ವೇನಾಪಿ ಕರ್ಮಭಿರ್ನ ಸಂಬಧ್ಯತೇ। ತಸ್ಮಾತ್ ಸ ಏಷ ನೇತಿನೇತ್ಯಾಽಽತ್ಮಾಽಗೃಹ್ಯೋ ನ ಹಿ ಗೃಹ್ಯತೇ ಇತ್ಯಾದಿಲಕ್ಷಣಃ। ಯಸ್ಮಾದೇವಂಲಕ್ಷಣ ಆತ್ಮಾ ಕರ್ಮಫಲಸಾಧನಾಸಂಬನ್ಧೀ ಸರ್ವಸಂಸಾರಧರ್ಮವಿಲಕ್ಷಣಃ, ಅಶನಾಯಾದ್ಯತೀತಃ, ಅಸ್ಥೂಲಾದಿಧರ್ಮವಾನ್, ಅಜೋಽಜರೋಽಮರೋಽಮೃತೋಽಭಯಃ, ಸೈನ್ಧವಘನವದ್ ವಿಜ್ಞಾನೈಕರಸಸ್ವಭಾವಃ ಸ್ವಯಂಜ್ಯೋತಿರೇಕ ಏವಾದ್ವಯಃ, ಅಪೂರ್ವೋಽನಪರೋಽನನ್ತರೋಽಬಾಹ್ಯಃ ಇತ್ಯೇತತ್ ಆಗಮತಃ ತರ್ಕತಶ್ಚ ಸ್ಥಾಪಿತಮ್, ವಿಶೇಷತಶ್ಚ ಇಹ ಜನಕಯಾಜ್ಞವಲ್ಕ್ಯಸಂವಾದೇಽಸ್ಮಿನ್, ತಸ್ಮಾದೇವಂಲಕ್ಷಣೇ

---

1. ಕರ್ಮಪ್ರಕರಣದಲ್ಲಿ ಕರ್ಮತ್ಯಾಗವಿಧಿಯನ್ನು ಕಲ್ಪಿಸುವದು ತನಗೆ ತಾನೇ ವಿರುದ್ಧ ; ಆದ್ದರಿಂದ ಜ್ಞಾನಕ್ಕೆ ಅನುಗುಣವಾಗಿರುವ ಅದನ್ನು ಇಲ್ಲಿಯೇ ಸ್ವಪ್ರಧಾನವಾಗಿ ವಿಧಿಸಿದೆ ಎಂಬುದು ಯುಕ್ತವೆಂದು ಭಾವ.

2. ತಂ.ವಾ. ೧-೩-೨ ಪು. ೧೯೨ರಲ್ಲಿ ಕುರುಡರು, ಕುಂಟರು ಮುಂತಾದ ಕರ್ಮಾನಧಿಕೃತರು ನೈಷ್ಠಿಕಬ್ರಹ್ಮಚರ್ಯವನ್ನೋ ಪಾರಿವ್ರಾಜ್ಯವನ್ನೋ ಸ್ವೀಕರಿಸಬೇಕಾಗುತ್ತದೆ ಎಂದಿದೆ. ಕರ್ಮಾನಧಿಕೃತರು ಪಾರಿವ್ರಾಜ್ಯವನ್ನು ಸ್ವೀಕರಿಸಬೇಕು ಎಂದಂತೆ ಮರವನ್ನೇರಬೇಕು ಎಂದೇಕೆ ಕಲ್ಪಿಸಬಾರದು ? ಹಾಗೆಂದು ಶಾಸ್ತ್ರದಲ್ಲಿಲ್ಲ, ಎಂದರೆ ಇಲ್ಲಿಯೂ ಹಾಗೆಯೇ ; ಆತ್ಮಲೋಕೇಚ್ಛುಗಳೇ ಪ್ರವ್ರಜನಮಾಡಬೇಕೆಂದಿದೆ, ಕುರುಡರೇ ಮುಂತಾದವರಿಗೆಂದಿಲ್ಲ ಎಂದು ಅಭಿಪ್ರಾಯ. ಇದು ಜಾಬಾಲಶ್ರುತಿಯಲ್ಲಿ ಪ್ರತ್ಯಕ್ಷವಿಹಿತವಾಗಿರುವ ಪ್ರವ್ರಜ್ಯವನ್ನು ಲೆಕ್ಕಕ್ಕೆತೆಗೆದುಕೊಳ್ಳದೆ ಮಾಡಿರುವ ಚರ್ಚೆ ; ಜಾಬಾಲಶ್ರುತಿಯಲ್ಲಿ ಅಧಿಕಾರಿಗಳಿಗೆ ಪಾರಿವ್ರಾಜ್ಯವನ್ನು ವಿಧಿಸಿದಮೇಲೆ ಅನಧಿಕಾರಿಗಳಿಗೆ ಬೇರೆಯಾಗಿಯೇ ಸಂನ್ಯಾಸವನ್ನು ಹೇಳಿದೆ. ಸೂ. ಭಾ. ೩-೪-೨೦ (ಭಾ.ಭಾ ೪೬೧).

ಆತ್ಮನಿ ವಿದಿತೇ ಆತ್ಮತ್ವೇನ ನೈವ ಕರ್ಮಾರಮ್ಭ ಉಪಪದ್ಯತೇ। ತಸ್ಮಾತ್ ಆತ್ಮಾ ನಿರ್ವಿಶೇಷಃ[1] । ನ ಹಿ ಚಕ್ಷುಷ್ಮಾನ್ ಪಥಿ ಪ್ರವೃತ್ತಃ ಅಹನಿ ಕೂಪೇ ಕಣ್ಟಕೇ ವಾ ಪತತಿ । ಕೃತ್ಸ್ನಸ್ಯ ಚ ಕರ್ಮಫಲಸ್ಯ ವಿದ್ಯಾಫಲೇ ಅನ್ತರ್ಭಾವಾತ್ । ನ ಚ ಅಯತ್ನಪ್ರಾಪ್ಯೇ ವಸ್ತುನಿ ವಿದ್ವಾನ್ ಯತ್ನಮ್ ಆತಿಷ್ಠತಿ। "ಅರ್ಕೇ ಚೇನ್ಮಧು ವಿನ್ದೇತ ಕಿಮರ್ಥಂ ಪರ್ವತಂ ವ್ರಜೇತ್। ಇಷ್ಟಸ್ಯಾರ್ಥಸ್ಯ ಸಂಪ್ರಾಪ್ತೌ ಕೋ ವಿದ್ವಾನ್ ಯತ್ನಮಾಚರೇತ್" (?)[2], "ಸರ್ವಂ ಕರ್ಮಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ" (ಗೀ. ೪-೩೩) ಇತಿ ಗೀತಾಸು। ಇಹಾಪಿ ಚ "ಏತಸ್ಯೈವ ಪರಮಾನನ್ದಸ್ಯ ಬ್ರಹ್ಮವಿತ್ಪ್ರಾಪ್ಯಸ್ಯ ಅನ್ಯಾನಿ ಭೂತಾನಿ ಮಾತ್ರಾಮ್ ಉಪಜೀವನ್ತಿ"[3] ಇತ್ಯುಕ್ತಮ್। ಅತೋ ಬ್ರಹ್ಮವಿದಾಂ ನ ಕರ್ಮಾರಮ್ಭಃ ॥

(ಭಾಷ್ಯಾರ್ಥ)

(ಆಕ್ಷೇಪ) :- ಈ ಆತ್ಮನೆಂಬ ಲೋಕವೇ ಬೇಕಾದರೆ, ಅದರ ಪ್ರಾಪ್ತಿಗೆ ಸಾಧನವಾಗಿ ಕರ್ಮಗಳನ್ನೇ ಏಕೆ ಮಾಡಬಾರದು ? ಪಾರಿವ್ರಾಜ್ಯದಿಂದೇನು ?

(ಪರಿಹಾರ) :- ಇದಕ್ಕೆ ಹೇಳುತ್ತೇವೆ. ಏಕೆಂದರೆ ಈ ಆತ್ಮಲೋಕವು ಕರ್ಮಗಳಿಗೆ ಸಂಬಂಧಪಟ್ಟಿರುವದಿಲ್ಲ. ಯಾವ ಆತ್ಮನನ್ನು ಇಚ್ಛಿಸುವವರು ಪ್ರವ್ರಜನಮಾಡಬೇಕೋ, ಆ ಆತ್ಮನು ಸಾಧನವಾಗಿಯಾಗಲಿ, ಫಲವಾಗಿಯಾಗಲಿ ಉತ್ಪಾದ್ಯತ್ವವೇ ಮುಂತಾದ ಪ್ರಕಾರಗಳಲ್ಲಿ ಯಾವದೊಂದಾಗಿಯಾಗಲಿ ಕರ್ಮಗಳಿಗೆ ಸಂಬಂಧಪಟ್ಟಿರುವದಿಲ್ಲ. ಆದ್ದರಿಂದ 'ಆ ಇವನು ನೇತಿ ನೇತಿ (ಹೀಗಲ್ಲ, ಹೀಗಲ್ಲ) ಎಂಬ ಆತ್ಮನು, ಅಗೃಹ್ಯನು; ಗ್ರಹಿಸಲ್ಪಡುವದಿಲ್ಲವಷ್ಟೆ ?' ಎಂದು ಮುಂತಾಗಿರುವ ಸ್ವರೂಪದವನು.[4] ಆತ್ಮನು ಈ ಸ್ವರೂಪದವನು, ಕರ್ಮಫಲಸಾಧನಗಳಿಗೆ ಸಂಬಂಧಪಡದವನು ಯಾವ ಸಂಸಾರಧರ್ಮವೂ (ಇಲ್ಲದ) ವಿಲಕ್ಷಣಸ್ವರೂಪನು, ಹಸಿವು ಮುಂತಾದವುಗಳನ್ನು ಮೀರಿರುವನು[5] ; ಅಸ್ಥೂಲವೇ ಮುಂತಾದ ಧರ್ಮವುಳ್ಳವನು[6] ; ಅಜನು,

---

1. ಈ ವಾಕ್ಯವು ಇಲ್ಲಿ ಬೇಕಿಲ್ಲ; ಅಥವಾ 'ಯಸ್ಮಾತ್ ...' ಎಂದಾದರೂ ಇರಬೇಕು. ಅನುವಾದವನ್ನು ನೋಡಿ.

2. ಈ ಶ್ಲೋಕವನ್ನು ಶಾ. ಭಾ. ೧-೨-೪ರಲ್ಲಿ ಉದಾಹರಿಸಿದೆ; 'ಅರ್ಕೇ' ಎಂಬ ಪಾಠವೇ ಸರಿ ಎಂಬುದು ಅದರಿಂದ ಗೊತ್ತಾಗುತ್ತದೆ.

3. ೪-೩-೩೨ರ ಅರ್ಥವಿದು.

4. ಆತ್ಮನು ನೇತಿ ನೇತಿ ಎಂಬ ರೂಪದವನೆಂಬುದನ್ನು ೨-೩-೬ (ಭಾ. ಭಾ. ೩೪೮), ೩-೯-೨೬ (ಭಾ. ಭಾ. ೧೨೩), ೪-೨-೪ (ಭಾ. ಭಾ. ೧೫೬)-ಇವುಗಳಲ್ಲಿ ಹೇಳಿದೆ. ೩-೯-೨೬ (ಭಾ. ಭಾ. ೧೨೩)ರಲ್ಲಿ ಅಗೃಹ್ಯೋ ನ ಹಿ ಗೃಹ್ಯತೇ ಎಂಬುದೇ ಮುಂತಾದದ್ದರ ಅಕ್ಷರಾರ್ಥವನ್ನೂ ವಿವರಿಸಿದೆ. 5. ೩-೫-೧ರ ಸೂಚನೆ.

6. ೩-೮-೮ರ ಸೂಚನೆ.

ಅಜರನು, ಅಮರನು, ಅಮೃತನು, ಅಭಯನು[1]; ಉಪ್ಪಿನಹರಳಿನಂತೆ ವಿಜ್ಞಾನವೆಂಬ ಒಂದೇ ರಸದ ಸ್ವಭಾವದವನು[2]; ಸ್ವಯಂಜ್ಯೋತಿಯು[3]; ತಾನೊಬ್ಬನೇ ಎರಡನೆಯದಿಲ್ಲದವನು[4], ಅಪೂರ್ವನು, ಅನಪರನು, ಅನಂತ ರನು, ಅಬಾಹ್ಯನು[5] –ಎಂಬಿದನ್ನು ಆಗಮದಿಂದಲೂ ತರ್ಕದಿಂದಲೂ (ಸ್ಥಾಪಿಸ ಲಾಯಿತಷ್ಟೆ[6], ಅದರಲ್ಲಿಯೂ ಇಲ್ಲಿ ಈ ಜನಕಯಾಜ್ಞವಲ್ಕ್ಯಸಂವಾದದಲ್ಲಿ (ಸ್ಥಾಪಿಸಲಾಯಿತಷ್ಟೆ), ಆದ್ದರಿಂದ ಇಂಥ ಆತ್ಮನನ್ನು ತಾನೆಂದು ಅರಿತು ಕೊಂಡರೆ ಕರ್ಮವನ್ನು ಮಾಡುವದೆಂಬುದು ಹೊಂದುವದೇ ಇಲ್ಲ; ಏಕೆಂದರೆ ಆತ್ಮನು ನಿರ್ವಿಶೇಷನಾಗಿರುತ್ತಾನೆ[7] ಕಣ್ಣುಕಾಣಿಸುವವನು ದಾರಿಯಲ್ಲಿ ನಡೆಯುತ್ತಿರುವಾಗ ಹಗಲುಹೊತ್ತಿನಲ್ಲಿಯೇ ಭಾವಿಯಲ್ಲಾಗಲಿ ಮುಳ್ಳಿನ ಮೇಲಾಗಲಿ ಬೀಳಲಾರನಷ್ಟೆ[8]? ಕರ್ಮಫಲವೆಲ್ಲವೂ ಜ್ಞಾನದ ಫಲದಲ್ಲಿ ಅಡಕ ವಾಗಿರುವದರಿಂದಲೂ (ಜ್ಞಾನಿಯು ಕರ್ಮದಲ್ಲಿ ತೊಡಗಲಾರನು). ಯಾವ ಪ್ರಯತ್ನವೂ ಇಲ್ಲದೆ ಸಿಕ್ಕಬಹುದಾದ ವಸ್ತುವಿಗಾಗಿ ತಿಳಿದವನು (ಎಂದಿಗೂ) ಪ್ರಯತ್ನವನ್ನು ಮಾಡಲಾರನು. “ಎಕ್ಕದಗಿಡದಲ್ಲಿಯೇ ಜೇನುತುಪ್ಪವು ಸಿಕ್ಕುವಂತಿದ್ದರೆ, ಬೆಟ್ಟದವರೆಗೆ ಏತಕ್ಕೆ ಹೋದಾನು? ಇಷ್ಟವಾದ ವಸ್ತುವು (ತಾನೇ) ಸಿಕ್ಕಿದರೆ ತಿಳಿದವನು ಯಾವನು ತಾನೆ ಪ್ರಯತ್ನವನ್ನು ಮಾಡಿ ಯಾನು?” (? ಶಾ. ಭಾ. ೧-೨-೪), “ಪಾರ್ಥನೆ, ಕರ್ಮವೆಲ್ಲವೂ ಜ್ಞಾನದಲ್ಲಿ

1. ೪-೪-೨೫ರ ಸೂಚನೆ.
2. ೨-೪-೧೧ರ ಸೂಚನೆ.
3. ೪-೩-೯, ೧೪ರ ಸೂಚನೆ
4. ೪-೩-೩೨ರ ಸೂಚನೆ.
5. ೨-೫-೧೯ರ ಸೂಚನೆ.

6. ಮಧುಕಾಂಡದಲ್ಲಿ ಆತ್ಮಸ್ವರೂಪವನ್ನು ಆಗಮದಿಂದ ತಿಳಿಸಲಾಯಿತು, ಯಾಜ್ಞವಲ್ಕೀಯಕಾಂಡದಲ್ಲಿ ಅದನ್ನೇ ತರ್ಕದಿಂದ ತಿಳಿಸಿದೆ. ಭಾ. ಭಾ. ೧ನ್ನು ನೋಡಿ. ಅದರಲ್ಲಿಯೂ ೪-೨ರಲ್ಲಿ ಜಾಗ್ರತ್ಸ್ವಪ್ನಾದಿದ್ವಾರದಿಂದ ವಿಚಾರಮಾಡಿ ಆತ್ಮಸ್ವರೂಪವನ್ನು ಆಗಮದಿಂದ ತಿಳಿಸಿದ್ದಾಯಿತು, ೪-೩ರಿಂದ ಹಿಡಿದು ಇಲ್ಲಿಯವರೆಗೂ ವಿಶೇಷವಾಗಿ ಮಹಾ ತರ್ಕದಿಂದ ಆತ್ಮಸ್ವರೂಪವನ್ನು ತಿಳಿಸಿದ್ದಾಯಿತು ಎಂದರ್ಥ. ಭಾ ಭಾ. ೧೫೭ನ್ನು ನೋಡಿ. ಮಧುಕಾಂಡದಲ್ಲಿ ಯಾಜ್ಞವಲ್ಕ್ಯಕಾಂಡದಲ್ಲಿ –ಎರಡರಲ್ಲಿಯೂ ಆಗಮೋಪಪತ್ತಿಗಳು ಇದ್ದೇ ಇವೆಯಾದರೂ ಮಧುಕಾಂಡವು ಆಗಮಪ್ರಧಾನ, ಯಾಜ್ಞವಲ್ಕ್ಯಕಾಂಡವು ಉಪಪತ್ತಿ ಪ್ರಧಾನ– ಎಂಬುದೇ ವಿಶೇಷವು. ಪೀಠಿಕೆಯನ್ನು ನೋಡಿರಿ.

7. ‘ತಸ್ಮಾತ್’ ಎಂಬ ಪಾಠವನ್ನೇ ಟೀಕೆಯಲ್ಲಿ ಒಪ್ಪಿ ಆತ್ಮನು ನಿರ್ವಿಶೇಷನೆಂದು ಸಿದ್ಧವಾಯಿತು ಎಂದು ಬರೆದಿದೆ, ಆದರೆ ಅದು ಪ್ರಕೃತವಲ್ಲ, ಜ್ಞಾನಿಯು ಕರ್ಮವನ್ನು ಮಾಡಲಾರನು ಎಂಬುದೇ ಪ್ರಕೃತ. ಆದ್ದರಿಂದ ಅದಕ್ಕೆ ಹೇತುವಾಗಿರಲೆಂದು ನಾವು ಯಸ್ಮಾತ್ ಎಂಬ ಪಾಠವನ್ನು ಒಪ್ಪಿದೇವೆ.

8. ಅಜ್ಞಾನವೆಂಬ ಕತ್ತಲೆಯಲ್ಲಿ ಕ್ರಿಯಾಕಾರಕಫಲಗಳು ಸತ್ಯವಾಗಿ ಕಾಣುತ್ತವೆ ಯಾದರೂ ಜ್ಞಾನಚಕ್ಷುಸ್ಸುಳ್ಳವನು ಅವನ್ನು ಸತ್ಯವೆಂದು ಬಗೆದು ಕರ್ಮದಲ್ಲಿ ತೊಡಗ ಲಾರನು ಎಂದರ್ಥ. ಐ. ಭಾ. ಅವ. ಭಾ. ಭಾ. ೧೩ನ್ನು ನೋಡಿ.

ಕೊನೆಗಾಣುತ್ತದೆ" (ಗೀ. ೪-೩೩) ಎಂದು ಗೀತೆಗಳಲ್ಲಿವೆ. ಇಲ್ಲಿಯೂ 'ಬ್ರಹ್ಮ ಜ್ಞಾನಿಗೆ ಸಿಕ್ಕುವ ಇದೇ ಆನಂದದ ಮಾತ್ರೆಯನ್ನು ಮಿಕ್ಕ ಭೂತಗಳು ಉಪಜೀವಿಸಿಕೊಂಡಿರುತ್ತವೆ' ಎಂದು ಹಿಂದೆ (೪-೩-೩೨ರಲ್ಲಿ) ಹೇಳಿರುತ್ತದೆ. ಆದ್ದರಿಂದ ಬ್ರಹ್ಮಜ್ಞಾನಿಗಳು ಕರ್ಮವನ್ನು ಮಾಡುವದಿಲ್ಲ.[1]

## ಬ್ರಹ್ಮಜ್ಞಾನಿಗೆ ಕರ್ಮಸಂಬಂಧವಿರುವದಿಲ್ಲ

(ಭಾಷ್ಯ)

೪೧೩. ಯಸ್ಮಾತ್ ಸರ್ವೈಷಣಾವಿನಿವೃತ್ತಃ ಸ ಏಷ ನೇತಿನೇತ್ಯಾತ್ಮಾನಮ್ ಆತ್ಮತ್ವೇನ ಉಪಗಮ್ಯ ತದ್ರೂಪೇಣೈವ ವರ್ತತೇ ತಸ್ಮಾತ್ ಏತಮ್ ಏವಂವಿದಮ್ ನೇತಿನೇತ್ಯಾತ್ಮಭೂತಮ್ ಉ ಹ ಏವ ಏತೇ ವಕ್ಷ್ಯಮಾಣೇ ನ ತರತಃ ನ ಪ್ರಾಪ್ನುತಃ। ಇತಿ ಯುಕ್ತಮೇವ ಇತಿ ವಾಕ್ಯಶೇಷಃ। ಕೇ ತೇ ಇತಿ? ಉಚ್ಯತೇ। ಅತಃ ಅಸ್ಮಾತ್ ನಿಮಿತ್ತಾತ್ ಶರೀರಧಾರಣಾದಿಹೇತೋಃ ಪಾಪಮ್ ಅಪುಣ್ಯಂ ಕರ್ಮ ಅಕರವಮ್ ಕೃತವಾನಸ್ಮಿ। ಕಷ್ಟಂ ಖಲು ಮಮ ವೃತ್ತಮ್ ಅನೇನ ಪಾಪೇನ ಕರ್ಮಣಾ ಅಹಂ ನರಕಂ ಪ್ರತಿಪತ್ಸ್ಯೇ ಇತಿ ಯೋಽಯಂ ಪಶ್ಚಾತ್ ಪಾಪಂ ಕರ್ಮ ಕೃತವತಃ ಪರಿತಾಪಃ ಸ ಏನಂ ನೇತಿನೇತ್ಯಾತ್ಮಭೂತಂ ನ ತರತಿ। ತಥಾ ಅತಃ ಕಲ್ಯಾಣಂ ಫಲವಿಷಯಕಾಮಾತ್ ನಿಮಿತ್ತಾತ್ ಯಜ್ಞದಾನಾದಿಲಕ್ಷಣಂ ಪುಣ್ಯಂ ಶೋಭನಂ ಕರ್ಮ ಅಕರವಮ್[2]। ಕೃತವಾನಸ್ಮಿ। ಅತೋಽಹಮ್ ಅಸ್ಯ ಫಲಂ ಸುಖಮ್ ಉಪಭೋಕ್ಷ್ಯೇ ದೇಹಾನ್ತರೇ ಇತ್ಯೇಷೋಽಪಿ ಹರ್ಷಃ ತಂ ನ ತರತಿ। ಉಭೇ ಉ ಹ ಏವೈಷ ಬ್ರಹ್ಮವಿತ್ ಏತೇ ಕರ್ಮಣೀ ತರತಿ ಪುಣ್ಯಪಾಪಲಕ್ಷಣೇ। ಏವಂ ಬ್ರಹ್ಮವಿದಃ ಸಂನ್ಯಾಸಿನಃ ಉಭೇ ಅಪಿ ಕರ್ಮಣೀ ಕ್ಷೀಯೇತೇ ಪೂರ್ವಜನ್ಮನಿ ಕೃತೇ ಯೇ ತೇ, ಇಹ ಜನ್ಮನಿ ಕೃತೇ ಯೇ ತೇ, ಚ। ಅಪೂರ್ವೇ ಚ ನಾರಭ್ಯೇತೇ। ಕಿಂ ಚ ನೈನಂ ಕೃತಾಕೃತೇ ಕೃತಂ ನಿತ್ಯಾನುಷ್ಠಾನಮ್, ಅಕೃತಂ ತಸ್ಯೈವ ಅಕ್ರಿಯಾ। ತೇ ಅಪಿ ಕೃತಾಕೃತೇ ಏನಂ ನ ತಪತಃ। ಅನಾತ್ಮಜ್ಞಂ ಹಿ ಕೃತಂ ಫಲದಾನೇನ ಅಕೃತಂ ಪ್ರತ್ಯವಾಯೋತ್ಪಾದನೇನ ತಪತಃ। ಅಯಂ ತು ಬ್ರಹ್ಮವಿತ್ ಆತ್ಮವಿದ್ಯಾಗ್ನಿನಾ ಸರ್ವಾಣಿ ಕರ್ಮಾಣಿ ಭಸ್ಮೀಕರೋತಿ "ಯಥೈಧಾಂಸಿ ಸಮಿದ್ಧೋಽಗ್ನಿಃ" (ಗೀ. ೪-೩೩) ಇತ್ಯಾದಿ ಸ್ಮೃತೇಃ। ಶರೀರಾರಮ್ಭಕಯೋಸ್ತು ಉಪಭೋಗೇನೈವ ಕ್ಷಯಃ। ಅತೋ ಬ್ರಹ್ಮವಿತ್ ಅಕರ್ಮಸಂಬನ್ಧೀ॥

---

1. ಬ್ರಹ್ಮಜ್ಞಾನಿಗಳು ಏಷಣಾತ್ಯಾಗವನ್ನೇ ಮಾಡುತ್ತಾರೇಕೆಂಬ ಪ್ರಶ್ನೆಗೆ, ತಮ್ಮ ಆತ್ಮನಲ್ಲಿ ಕ್ರಿಯಾಕಾರಕಫಲಗಳ ಸಂಬಂಧವಿಲ್ಲವೆಂದು ಅವರಿಗೆ ನಿಶ್ಚಯವಾಗಿರುವದೇ ಅದಕ್ಕೆ ಕಾರಣ ಎಂದು ಉತ್ತರವನ್ನು ಕೊಟ್ಟಂತಾಯಿತು.

2. ಈ ಮಾತು ಭಾಷ್ಯದಲ್ಲಿದ್ದು ಬಿಟ್ಟುಹೋಗಿರಬೇಕೆಂದು ಸೇರಿಸಿಕೊಂಡಿವೆ.

(ಭಾಷ್ಯಾರ್ಥ)

ಏಷಣೆಗಳನ್ನೆಲ್ಲ ಬಿಟ್ಟಿರುವ ಆ ಇವನು ನೇತಿ ನೇತಿ (ಹೀಗಲ್ಲ, ಹೀಗಲ್ಲ) ಎಂದ ಆತ್ಮನನ್ನೇ ತಾನೆಂದು ನಿಶ್ಚಯಿಸಿಕೊಂಡು ಆ (ಆತ್ಮನ) ರೂಪದಿಂದಲೇ ಇರುತ್ತಾನಷ್ಟೆ, ಆದ್ದರಿಂದ (ಏತಮ್ ಉ ಹ ಏವ) ಇವನನ್ನೇ ಹೀಗೆಂದು ಅರಿತಿರುವ (ಈ) ನೇತಿ ನೇತಿ ಎಂದ ಆತ್ಮನಾಗಿರುವವನನ್ನೇ ಈ ಮುಂದೆ ಹೇಳಲಾಗುವ ಎರಡೂ ದಾಟುವದಿಲ್ಲ. ಬಂದು ಸೇರುವದಿಲ್ಲ- ಎಂಬುದು ಯುಕ್ತವೇ ಎಂದು ವಾಕ್ಯಶೇಷವು. ಇವು ಎಂದರೆ ಯಾವವು? ಎಂದರೆ ಹೇಳುತ್ತಾನೆ 'ಇದಕ್ಕಾಗಿ, ಈ ಕಾರಣದಿಂದ, ಶರೀರವನ್ನು ಇಟ್ಟುಕೊಂಡಿರುವದೇ ಮುಂತಾದ ನಿಮಿತ್ತದಿಂದ, ಪಾಪವನ್ನು ಅಪುಣ್ಯಕರ್ಮವನ್ನು ಮಾಡಿದೆನು, ಮಾಡಿರುತ್ತೇನೆ[1], ಅಯ್ಯೋ ನನ್ನದು (ಎಂಥ) ಕೆಟ್ಟಕೆಲಸವಾಯಿತು! ಈ ಪಾಪದಿಂದ ನಾನು ನರಕಕ್ಕೈದುವೆನಲ್ಲ!'- ಎಂದು ಪಾಪವನ್ನು ಮಾಡಿದವನಿಗೆ ಹಿಂದಿನಿಂದ ಈ ಪರಿತಾಪವಾಗುವದಷ್ಟೆ, ಅದು ಈ ನೇತಿ ನೇತಿ ಎಂಬ ಆತ್ಮರೂಪನಾಗಿರುವ (ಜ್ಞಾನಿಯನ್ನು) ದಾಟುವದಿಲ್ಲ. ಹಾಗೂ 'ಇದಕ್ಕಾಗಿ ಫಲವಿಷಯಕವಾದ ಆಶೆ ಎಂಬ ನಿಮಿತ್ತದಿಂದ ಕಲ್ಯಾಣವನ್ನು ಯಜ್ಞದಾನಾದಿರೂಪವಾದ ಪುಣ್ಯವನ್ನು, ಒಳ್ಳೆಯ ಕರ್ಮವನ್ನು, ಮಾಡಿದೆನು, ಮಾಡಿದವನಾಗಿರುತ್ತೇನೆ; ಆದ್ದರಿಂದ ನಾನು ಇದರ ಫಲವಾದ ಸುಖವನ್ನು ಮತ್ತೊಂದು ದೇಹದಲ್ಲಿ ಅನುಭವಿಸುವೆನು' ಎಂಬೀ ಹರ್ಷವೂ ಅವನನ್ನು ದಾಟುವದಿಲ್ಲ.[2] ಪುಣ್ಯಪಾಪರೂಪವಾಗಿರುವ (ಉಭೇ ಉ ಹ ಏವ) ಈ ಎರಡು ಕರ್ಮಗಳನ್ನೂ ಈ ಬ್ರಹ್ಮಜ್ಞಾನಿಯು ದಾಟಿಬಿಟ್ಟಿರುತ್ತಾನೆ.

ಹೀಗೆ ಬ್ರಹ್ಮಜ್ಞಾನಿಯಾದ ಸಂನ್ಯಾಸಿಗೆ ಹಿಂದಿನ ಜನ್ಮದಲ್ಲಿ ಮಾಡಿದ್ದನಲ್ಲ ಅವು, ಈ ಜನ್ಮದಲ್ಲಿ ಮಾಡಿದ್ದನಲ್ಲ ಅವು- (ಈ) ಎರಡೂ ಕರ್ಮಗಳು ಕ್ಷಯವಾಗಿಬಿಡುತ್ತವೆ; ಹೊಸದಾಗಿ (ಮತ್ತೆ ಪುಣ್ಯಪಾಪ)ಗಳೂ ಉಂಟಾಗುವದಿಲ್ಲ.[3] ಮತ್ತು ಇವನನ್ನು ಕೃತಾಕೃತಗಳು- ಕೃತವೆಂದರೆ ನಿತ್ಯಕರ್ಮವನ್ನು ಮಾಡಿದ್ದು, ಅಕೃತವು ಎಂದರೆ ಅದನ್ನೇ ಮಾಡದೆ ಇರುವದು- ಈ ಕೃತಾಕೃತಗಳೂ ಇವನನ್ನು ತಪಿಸುವದಿಲ್ಲ. ಆತ್ಮಜ್ಞಾನಿಯಲ್ಲದವನನ್ನು ಮಾಡಿದ್ದು (ತನ್ನ) ಫಲವನ್ನು ಕೊಡುವದರಿಂದಲೂ ಮಾಡದೆ ಇದ್ದದ್ದು ಪ್ರತ್ಯವಾಯ

---

1. ಈ ಶರೀರವನ್ನು ರಕ್ಷಿಸಿಕೊಳ್ಳಬೇಕೆಂಬ ಕಾರಣದಿಂದ ಪಾಪವನ್ನು ಮಾಡಿದೆನು ಎಂದರ್ಥ.

2. ಬಂದು ಸೇರುವದಿಲ್ಲ.

3. ಬ್ರ. ಸೂ. ೪-೧-೧೩, ೧೪ ಇವುಗಳ ಭಾಷ್ಯವನ್ನು ನೋಡಿ.

ವನ್ನುಂಟುಮಾಡುವದರಿಂದಲೂ[1] ತಪಿಸುತ್ತವೆಯಲ್ಲವೆ? ಆದರೆ ಈ ಬ್ರಹ್ಮಜ್ಞಾನಿಯಾದರೋ ಆತ್ಮವಿದ್ಯಾಗ್ನಿಯಿಂದ ಸರ್ವಕರ್ಮಗಳನ್ನೂ ಸುಟ್ಟುಹಾಕಿರುತ್ತಾನೆ; ಏಕೆಂದರೆ "ಹೊತ್ತಿಕೊಂಡುರಿಯುವ ಬೆಂಕಿಯು ಹೇಗೆ ಕಟ್ಟಿಗೆಯನ್ನು ಬೂದಿಗೈಯುವದೋ ಹಾಗೆ ಜ್ಞಾನಾಗ್ನಿಯು ಕರ್ಮಗಳನ್ನೆಲ್ಲ (ಬೂದಿಗೈಯುತ್ತದೆ)" (ಗೀ. ೪-೩೭) ಎಂದು ಮುಂತಾದ ಸ್ಮೃತಿ(ಯಿದೆ). ಶರೀರವನ್ನುಂಟುಮಾಡಿರುವ (ಪುಣ್ಯಪಾಪ)ಗಳಾದರೋ ಉಪಭೋಗದಿಂದಲೇ ಕ್ಷಯ(ವಾಗುವವು).[2] ಆದ್ದರಿಂದ ಬ್ರಹ್ಮಜ್ಞಾನಿಯು ಕರ್ಮಕ್ಕೆ ಸಂಬದ್ಧನಾಗಿರುವದಿಲ್ಲ.

## ಬ್ರಹ್ಮಜ್ಞಾನಿಯು ಸರ್ವಥಾ ಕರ್ಮಾಸಂಬದ್ಧನು

(ಉಪನಿಷತ್ತು)

**ತದೇತದೃಚಾಽಭ್ಯುಕ್ತಮ್-**

**ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ**
**ನ ವರ್ಧತೇ ಕರ್ಮಣಾ ನೋ ಕನೀಯಾನ್ ।**
**ತಸ್ಯೈವ ಸ್ಯಾತ್ ಪದವಿತ್ ತಂ ವಿದಿತ್ವಾ**
**ನ ಲಿಪ್ಯತೇ ಕರ್ಮಣಾ ಪಾಪಕೇನೇತಿ ॥**

**ತಸ್ಮಾದೇವಂವಿಚ್ಛಾನ್ತೋ ದಾನ್ತ ಉಪರತಸ್ತಿತಿಕ್ಷುಃ ಸಮಾಹಿತೋ ಭೂತ್ವಾಽಽತ್ಮನ್ಯೇವಾಽಽತ್ಮಾನಂ ಪಶ್ಯತಿ ಸರ್ವಮಾತ್ಮಾನಂ ಪಶ್ಯತಿ ನೈನಂ ಪಾಪ್ಮಾ ತರತಿ ಸರ್ವಂ ಪಾಪ್ಮಾನಂ ತರತಿ ನೈನಂ ಪಾಪ್ಮಾ ತಪತಿ ಸರ್ವಂ ಪಾಪ್ಮಾನಂ ತಪತಿ ವಿಪಾಪೋ ವಿರಜೋಽವಿಚಿಕಿತ್ಸೋ ಬ್ರಾಹ್ಮಣೋ ಭವತ್ಯೇಷ ಬ್ರಹ್ಮಲೋಕಃ ಸಮ್ರಾಡೇನಂ ಪ್ರಾಪಿತೋಽಸೀತಿ ಹೋವಾಚ ಯಾಜ್ಞವಲ್ಕ್ಯಃ ಸೋಽಹಂ ಭಗವತೇ ವಿದೇಹಾನ್ ದದಾಮಿ ಮಾಂ ಚಾಪಿ ಸಹ ದಾಸ್ಯಾಯೇತಿ ॥ ೨೩ ॥**

---

1. ನಿತ್ಯಕರ್ಮವನ್ನು ಮಾಡದೆ ಇರುವಾಗ ಕೆಟ್ಟದ್ದನ್ನು ಏನಾದರೂ ಮಾಡಿಯೇ ತೀರುತ್ತಾನಾದ್ದರಿಂದ ದೋಷವೂ ಉಂಟಾಗುತ್ತದೆ. ಕೃತಾಕೃತೇ ಎಂಬುದಕ್ಕೆ ತೈ. ಭಾ. ೨-೯ರಲ್ಲಿ (ಭಾ. ಭಾ. ೨೨೪) ಬೇರೊಂದರ್ಥವನ್ನು ಮಾಡಿದೆ.

2. ಪ್ರಾರಬ್ಧಕರ್ಮವನ್ನುಳಿದು ಮಿಕ್ಕವುಗಳು ಮಾತ್ರ ನಾಶವಾಗುವವು, ಪ್ರಾರಬ್ಧಕರ್ಮವು ಭೋಗದಿಂದ ಕ್ಷಯವಾಗುತ್ತದೆ ಎಂದು ಬ್ರ. ಸೂ. ೪-೧-೧೫,೧೯ರಲ್ಲಿ ಹೇಳಿದೆ. ಇದೂ ವ್ಯವಹಾರದೃಷ್ಟಿಯಿಂದಲೇ ಹೇಳಿದ್ದು; ಜ್ಞಾನಿಯ ದೃಷ್ಟಿಯಿಂದ ಅವನು ಯಾವಾಗಲೂ ಅಕರ್ತೃವೇ. ಸೂ. ಭಾ. ೪-೧-೧೩, (ಭಾ. ಭಾ. ೫೨೪)ನ್ನು ನೋಡಿ.

೨೩. ಇದು (ಈ) ಋಕ್ಕಿನಿಂದ ಅಭ್ಯುಕ್ತವಾಗಿರುತ್ತದೆ: 'ಇದು ಬ್ರಾಹ್ಮಣನ ನಿತ್ಯವಾದ ಮಹಿಮೆಯು, ಕರ್ಮದಿಂದ ವೃದ್ಧಿಯಾಗುವದಿಲ್ಲ, ಕಿರಿದೂ(ಆಗು)ವದಿಲ್ಲ. ಅದರದ್ದೇ ಪದವನ್ನು ಬಲ್ಲವನಾಗಬೇಕು. ಅದನ್ನು ಅರಿತುಕೊಂಡರೆ ಪಾಪಕರ್ಮದಿಂದ ಲಿಪ್ತನಾಗುವದಿಲ್ಲ. ಆದ್ದರಿಂದ ಹೀಗೆಂದರಿತವನು ಶಾಂತನೂ ದಾಂತನೂ ಉಪರತನೂ ತಿತಿಕ್ಷುವೂ ಸಮಾಹಿತನೂ ಆಗಿ ತನ್ನಲ್ಲಿಯೇ ಆತ್ಮನನ್ನು ಕಂಡುಕೊಳ್ಳುತ್ತಾನೆ. ಪ್ರತಿಯೊಂದನ್ನೂ ಆತ್ಮನನ್ನಾಗಿ ಕಂಡುಕೊಳ್ಳುತ್ತಾನೆ. ಇವನನ್ನು ಪಾಪವು ದಾಟುವದಿಲ್ಲ; ಇವನು ಎಲ್ಲಾ ಪಾಪವನ್ನೂ ದಾಟುತ್ತಾನೆ. ಇವನನ್ನು ಪಾಪವು ತಪಿಸುವದಿಲ್ಲ, ಎಲ್ಲಾ ಪಾಪವನ್ನೂ ತಪಿಸುತ್ತಾನೆ. (ಇವನು) ವಿಪಾಪನೂ ವಿರಜನೂ ಅವಿಚಿಕಿತ್ಸನೂ ಆದ ಬ್ರಾಹ್ಮಣನಾಗಿರುತ್ತಾನೆ. ಇದೇ ಬ್ರಹ್ಮಲೋಕವು ಸಮ್ರಾಜನೆ, ಇದನ್ನು ಪಡೆಯಿಸಿಕೊಂಡಿರುವೆ!- ಎಂದು ಯಾಜ್ಞವಲ್ಕ್ಯನು ನುಡಿದನು. "ಆ ನಾನು ಭಗವಂತನಾದ ನಿನಗೆ ವಿದೇಹ (ರಾಜ್ಯ)ವನ್ನು ಕೊಟ್ಟಿರುತ್ತೇನೆ, ಅದರೊಡನೆ ನನ್ನನ್ನೂ ದಾಸ್ಯಕ್ಕಾಗಿ ಕೊಟ್ಟಿರುತ್ತೇನೆ."

## ಬ್ರಾಹ್ಮಣಾರ್ಥವನ್ನು ತಿಳಿಸುವ ಮಂತ್ರ

(ಭಾಷ್ಯ)

೩೧೪. ತದೇತದ್ ವಸ್ತು ಬ್ರಾಹ್ಮಣೇನೋಕ್ತಮ್ ಋಚಾ ಮನ್ತ್ರೇಣ ಅಭ್ಯನೂಕ್ತಂ ಪ್ರಕಾಶಿತಮ್ । ಏಷಃ ನೇತಿನೇತ್ಯಾದಿಲಕ್ಷಣಃ ನಿತ್ಯೋ ಮಹಿಮಾ। ಅನ್ಯೇ ತು ಮಹಿಮಾನಃ ಕರ್ಮಕೃತಾ ಇತಿ ಅನಿತ್ಯಾಃ। ಅಯಂ ತು ತದ್ವಿಲಕ್ಷಣಃ ಮಹಿಮಾ ಸ್ವಾಭಾವಿಕತ್ವಾತ್ ನಿತ್ಯಃ ಬ್ರಹ್ಮವಿದಃ ಬ್ರಾಹ್ಮಣಸ್ಯ ತ್ಯಕ್ತಸರ್ವೈಷಣಸ್ಯ । ಕುತೋಽಸ್ಯ ನಿತ್ಯತ್ವಮಿತಿ? ಹೇತುಮಾಹ। ಕರ್ಮಣಾ ನ ವರ್ಧತೇ। ಶುಭಲಕ್ಷಣೇನ ಕೃತೇನ ವೃದ್ಧಿಲಕ್ಷಣಾಂ ವಿಕ್ರಿಯಾಂ ನ ಪ್ರಾಪ್ನೋತಿ। ಅಶುಭೇನ ಕರ್ಮಣಾ ನೋ ಕನೀಯಾನ್। ನಾಪಿ ಅಪಕ್ಷಯಲಕ್ಷಣಾಂ ವಿಕ್ರಿಯಾಂ ಪ್ರಾಪ್ನೋತಿ। ಉಪಚಯಾಪಚಾಯಹೇತುಭೂತಾ ಏವ ಹಿ ಸರ್ವಾ ವಿಕ್ರಿಯಾ ಇತಿ ಏತಾಭ್ಯಾಂ ಪ್ರತಿಷಿಧ್ಯನ್ತೇ। ಅತಃ ಅವಿಕ್ರಿಯತ್ವಾತ್ ನಿತ್ಯ ಏಷ ಮಹಿಮಾ । ತಸ್ಮಾತ್ ತಸ್ಯೈವ ಮಹಿಮ್ನಃ ಸ್ಯಾತ್ ಭವೇತ್ ಪದವಿತ್ ಪದಸ್ಯ ವೇತ್ತಾ। ಪದ್ಯತೇ ಗಮ್ಯತೇ ಜ್ಞಾಯತೇ ಇತಿ ಮಹಿಮ್ನಃ ಸ್ವರೂಪಮೇವ ಪದಮ್। ತಸ್ಯ ಪದಸ್ಯ ವೇದಿತಾ। ಕಿಂ ತತ್ಪದ

ವೇದನೇನ ಸ್ಯಾದಿತಿ ? ಉಚ್ಯತೇ। ತಂ ವಿದಿತ್ವಾ ಮಹಿಮಾನಂ ನ ಲಿಪ್ಯತೇ ನ ಸಂಬಧ್ಯತೇ ಕರ್ಮಣಾ ಪಾಪಕೇನ ಧರ್ಮಾಧರ್ಮಲಕ್ಷಣೇನ । ಉಭಯಮಪಿ ಪಾಪಕಮೇವ ವಿದುಷಃ ॥

(ಭಾಷ್ಯಾರ್ಥ)

ಬ್ರಾಹ್ಮಣದಲ್ಲಿ ಉಕ್ತವಾಗಿರುವ ಆ ಈ ವಸ್ತು[1], (ಈ) ಋಕ್ಕಿನಿಂದ ಮಂತ್ರದಿಂದ ಪ್ರಕಾಶಿತವಾಗಿರುತ್ತದೆ: ಇದು ನೇತಿನೇತಿ ಎಂದು ಮುಂತಾಗಿ (ತಿಳಿಸಿರುವ) ಸ್ವಭಾವದ (ಇದು) ನಿತ್ಯವಾದ ಮಹಿಮೆಯು. ಬೇರೆಯ ಮಹಿಮೆಗಳಾದರೋ ಕರ್ಮದಿಂದಾದವುಗಳಾದ್ದರಿಂದ ಅನಿತ್ಯವಾದವುಗಳು; ಆದರೆ ಈ ಮಹಿಮೆಯಾದರೋ ಅವಕ್ಕಿಂತ ಬೇರೆಯ ತರದ್ದು, ಏಕೆಂದರೆ (ಇದು) ಸ್ವಾಭಾವಿಕವಾಗಿರುತ್ತದೆ [2] (ಆದ್ದರಿಂದ ಈ) ಬ್ರಾಹ್ಮಣನ ಏಷಣೆಗಳನ್ನೆಲ್ಲ ತೊರೆದಿರುವ[3] ಬ್ರಹ್ಮಜ್ಞಾನಿಯ (ಮಹಿಮೆಯು) ನಿತ್ಯವಾದದ್ದು.

ಇದು ನಿತ್ಯವೆಂಬುದು ಏತರಿಂದ ? ಎಂದರೆ (ಆದಕ್ಕೆ) ಕಾರಣವನ್ನೂ (ಮಂತ್ರವು) ಹೇಳುತ್ತದೆ. ಕರ್ಮದಿಂದ ವೃದ್ಧಿಯಾಗುವದಿಲ್ಲ; ಪುಣ್ಯರೂಪವಾದ (ಕರ್ಮವನ್ನು) ಮಾಡಿದ್ದರಿಂದ ಬೆಳವಣಿಗೆ ಎಂಬ ಮಾರ್ಪಾಡನ್ನು ಹೊಂದುವದಿಲ್ಲ. ಪಾಪರೂಪವಾದ ಕರ್ಮದಿಂದ ಕಿರಿದೂ (ಆಗುವ)ದಿಲ್ಲ; ಸವೆಯುವದೆಂಬ ಮಾರ್ಪಾಡನ್ನೂ ಹೊಂದುವದಿಲ್ಲ. ಎಲ್ಲಾ ವಿಕ್ರಿಯೆಗಳೂ ಹೆಚ್ಚುವದು, ಕುಂದುವದು- ಎಂಬ ಹೇತುಗಳಿಂದಲೇ ಅಲ್ಲವೆ, ಆಗುವದು ? ಆದ್ದರಿಂದ ಈ ಎರಡು (ವಿಕ್ರಿಯೆಗಳನ್ನು ಇಲ್ಲ)ವೆಂದದ್ದರಿಂದಲೇ (ಅವೆಲ್ಲವನ್ನೂ) ಇಲ್ಲವೆಂದಂತೆ ಆಯಿತು. ಆದ್ದರಿಂದ ಅವಿಕ್ರಿಯವಾಗಿರುವದರಿಂದ ಈ ಮಹಿಮೆಯು ನಿತ್ಯವಾದದ್ದು.

ಆದ್ದರಿಂದ ಇದೇ ಮಹಿಮೆಯ ಪದವನ್ನು ಬಲ್ಲವನು- (ಪದವಿತ್ ಎಂದರೆ) ಪದವನ್ನು ಅರಿತವನು; (ಪದ್ಯತೇ= ಗಮ್ಯತೇ= ಜ್ಞಾಯತೇ) ಅರಿಯಲ್ಪಡುತ್ತದೆಯಾದ್ದರಿಂದ ಮಹಿಮೆಯ ಸ್ವರೂಪವನ್ನೇ ಇಲ್ಲಿ ಪದವೆಂದಿದೆ. (ಅದನ್ನು ಅರಿತವನು) ಆಗಬೇಕು, ಆಗತಕ್ಕದ್ದು.

ಆ ಪದವನ್ನು ಅರಿತುಕೊಳ್ಳುವದರಿಂದ ಏನಾಗುವದು ? ಎಂದರೆ ಹೇಳುತ್ತಾನೆ. ಆ ಮಹಿಮೆಯನ್ನು ಅರಿತುಕೊಂಡರೆ ಪಾಪ(ರೂಪ)ವಾದ ಕರ್ಮ

---

1. ಅರ್ಥವು, ಅಭಿಪ್ರಾಯವು ಎಂದರ್ಥ.
2. ಸ್ವರೂಪಕ್ಕೇ ಸೇರಿದ್ದಾಗಿದೆ.
3. ಬ್ರಾಹ್ಮಣತ್ವವು ಏಷಣಾತ್ಯಾಗದಿಂದಲೇ ಬಂದಿರುತ್ತದೆ. ಇವನು ಆತ್ಮಕಾಮನಾಗಿರುವದರಿಂದ ಆಪ್ತಕಾಮನೂ ಅಕಾಮನೂ ಆಗಿರುತ್ತಾನೆ -ಎಂದರ್ಥ

ದಿಂದ ಲಿಪ್ತನಾಗುವದಿಲ್ಲ; ಧರ್ಮಾಧರ್ಮರೂಪವಾದ (ಕರ್ಮದಿಂದ ಲಿಪ್ತನಾಗುವದಿಲ್ಲ ಎಂದರ್ಥ). (ಈ) ಎರಡೂ ಜ್ಞಾನಿಗೆ ಪಾಪವೇ[1] ಆಗಿರುತ್ತದೆ.

## ಶಾಂತ್ಯಾದಿಸಾಧನಗಳೂ ಸರ್ವಾತ್ಮಜ್ಞಾನವೂ

(ಭಾಷ್ಯ)

೩೧೫. ಯಸ್ಮಾದೇವಮ್ ಅಕರ್ಮಸಂಬನ್ಧೀ ಏಷ ಬ್ರಾಹ್ಮಣಸ್ಯ ಮಹಿಮಾ ನೇತಿನೇತ್ಯಾದಿಲಕ್ಷಣಃ ತಸ್ಮಾತ್ ಏವಂವಿತ್ ಶಾನ್ತಃ ಬಾಹ್ಯೇನ್ದ್ರಿಯವ್ಯಾಪಾರತಃ ಉಪಶಾನ್ತಃ। ತಥಾ ದಾನ್ತಃ ಅನ್ತಃಕರಣತೃಷ್ಣಾತೋ ನಿವೃತ್ತಃ। ಉಪರತಃ ಸರ್ವೈಷಣಾವಿನಿರ್ಮುಕ್ತಃ ಸಂನ್ಯಾಸೀ। ತಿತಿಕ್ಷುಃ ದ್ವಂದ್ವಸಹಿಷ್ಣುಃ, ಸಮಾಹಿತಃ ಇನ್ದ್ರಿಯಾನ್ತಃಕರಣಚಲನರೂಪಾತ್ ವ್ಯಾವೃತ್ಯ ಐಕಾಗ್ರ್ಯರೂಪೇಣ ಸಮಾಹಿತೋ ಭೂತ್ವಾ। ತದೇತದುಕ್ತಂ ಪುರಸ್ತಾತ್– "ಬಾಲ್ಯಂ ಚ ಪಾಣ್ಡಿತ್ಯಂ ಚ ನಿರ್ವಿದ್ಯ" (೩-೫-೧) ಇತಿ। ಆತ್ಮನ್ಯೇವ ಸ್ವೇ ಕಾರ್ಯಕರಣಸಂಘಾತೇ ಆತ್ಮಾನಂ ಪ್ರತ್ಯಕ್ಚೇತಯಿತಾರಂ ಪಶ್ಯತಿ। ತತ್ರ ಕಿಂ ತಾವನ್ಮಾತ್ರಂ ಪರಿಚ್ಛಿನ್ನಮ್ ? ನೇತ್ಯುಚ್ಯತೇ। ಸರ್ವಂ ಸಮಸ್ತಮ್ ಆತ್ಮಾನಮೇವ ಪಶ್ಯತಿ, ನಾನ್ಯತ್ ಆತ್ಮವ್ಯತಿರಿಕ್ತಂ ವಾಲಾಗ್ರಮಾತ್ರಮಪಿ ಅಸ್ತಿ ಇತ್ಯೇವಂ ಪಶ್ಯತಿ। ಮನನಾತ್ ಮುನಿರ್ಭವತಿ ಜಾಗ್ರತ್ಸ್ವಪ್ನಸುಷುಪ್ತಾಖ್ಯಂ ಸ್ಥಾನತ್ರಯಂ ಹಿತ್ವಾ॥

(ಭಾಷ್ಯಾರ್ಥ)

ಹೀಗೆ ನೇತಿನೇತ್ಯಾದಿಸ್ವರೂಪವಾದ, ಬ್ರಾಹ್ಮಣನ ಈ ಮಹಿಮೆಯು ಕರ್ಮಸಂಬಂಧಿಯುಳ್ಳವಲ್ಲ, ಆದ್ದರಿಂದ ಹೀಗೆಂದರಿತವನು ಶಾಂತನೂ ಬಾಹ್ಯೇಂದ್ರಿಯವ್ಯಾಪಾರಗಳನ್ನು ಬಿಟ್ಟು ಉಪಶಾಂತನಾದವನೂ[2]; ಮತ್ತು ದಾಂತನೂ ಅಂತಃಕರಣದಲ್ಲಿರುವ ಆಶೆಯನ್ನು ಬಿಟ್ಟವನೂ, ಉಪರತನೂ

---

1. ಏಕೆಂದರೆ ಎರಡೂ ಸಂಸಾರಕ್ಕೆ ಕಾರಣವಾಗಿವೆ. ಆದ್ದರಿಂದಲೇ ಪುಣ್ಯವನ್ನೂ ಪಾಪವೆಂದು ಶ್ರುತಿಯಲ್ಲಿ ಕರೆದಿರುವದುಂಟು. ಸೂ. ಭಾ. ೪-೧-೧೪ (ಭಾ. ಭಾ. ೫೨೯).

2. ಸಾಮಾನ್ಯವಾಗಿ ದಮವೆಂದರೆ ಬಾಹ್ಯೇಂದ್ರಿಯನಿಗ್ರಹವೆಂದೂ ಶಮವೆಂದರೆ ಅಂತಃಕರಣನಿಗ್ರಹವೆಂದೂ ಪ್ರಸಿದ್ಧಿ. ಗೀ. ಭಾ. ೧೬-೨ (ಭಾ. ಭಾ. ೩೮೬) ಮುಂತಾದ ಕಡೆಯಲ್ಲಿ ಹೀಗೆಂದು ಹೇಳಿಯೂ ಇದೆ. ಆದರೆ ಇಲ್ಲಿಯೂ ಮುಂ. ಭಾ. ೧-೨-೧೩ (ಭಾ. ಭಾ. ೪೮)ರಲ್ಲಿಯೂ ಶಮವೆಂದರೆ ಬಾಹ್ಯೇಂದ್ರಿಯಗಳ ವ್ಯಾಪಾರವನ್ನು ಬಿಡುವದೆಂದೇ ಹೇಳಿದೆ. ಇದೇಕೆಂಬುದು ಪರಿಶೀಲನೀಯವಾಗಿದೆ. ವಾರ್ತಿಕದಲ್ಲಿ ಪಾಠಕ್ರಮಕ್ಕಿಂತ ಅರ್ಥಕ್ರಮವೇ ಬಲವಾದ್ದರಿಂದ 'ದಾನ್ತೋಽಶ್ವಃ,' 'ಶಾನ್ತೋ ಭಿಕ್ಷುಃ' ಇತ್ಯಾದಿಪ್ರಯೋಗಗಳಿಗನುಗುಣವಾಗಿ ಪ್ರಸಿದ್ಧಾರ್ಥವನ್ನೇ ಸ್ವೀಕರಿಸಬೇಕು ಎಂದಿದೆ.

ಎಲ್ಲಾ ಏಷಣೆಗಳನ್ನೂ ಬಿಟ್ಟ ಸಂನ್ಯಾಸಿಯೂ[1] ; ತಿತಿಕ್ಷುವೂ ದ್ವಂದ್ವಗಳನ್ನು ಸಹಿಸಿಕೊಳ್ಳುವ ಸ್ವಭಾವದವನೂ; ಸಮಾಹಿತನೂ ಇಂದ್ರಿಯಾಂತಃಕರಣಗಳ ಚಾಂಚಲ್ಯರೂಪವನ್ನು ಬಿಡಿಸಿಕೊಂಡು ಐಕಾಗ್ರ್ಯರೂಪದಿಂದ ಸಮಾಧಾನ್ನವುಳ್ಳವನೂ[3] –ಇದನ್ನು "ಬಾಲ್ಯವನ್ನೂ ಪಾಂಡಿತ್ಯವನ್ನೂ ಪೂರ ತಿಳಿದು (ಇನು ಮುನಿ)" (೩–೫–೧) ಎಂದು ಹಿಂದೆಯೇ ಹೇಳಿರುತ್ತದೆ[3] –ತನ್ನಲ್ಲಿಯೇ ಎಂದರೆ ತನ್ನ ಕಾರ್ಯಕರಣಸಂಘಾತದಲ್ಲಿಯೇ ಆತ್ಮನನ್ನು ಪ್ರತ್ಯಗ್ರೂಪನಾದ ಚೇತನಯಿತೃವನ್ನು[4] ಕಂಡುಕೊಳ್ಳುತ್ತಾನೆ ಅಲ್ಲಿ ಅಷ್ಟೇ ಪರಿಚ್ಛಿನ್ನನಾಗಿರುವವನನ್ನಾಗಿ (ಕಂಡುಕೊಳ್ಳುತ್ತಾ)ನೇನು ? ಎಂದರೆ ಇಲ್ಲ ಎನ್ನುತ್ತಾನೆ: ಪ್ರತಿಯೊಂದನ್ನೂ ಎಲ್ಲವನ್ನೂ[5] ಆತ್ಮನನ್ನಾಗಿಯೇ ಕಂಡುಕೊಳ್ಳುತ್ತಾನೆ ; **ಆತ್ಮನಿಗಿಂತ ವ್ಯತಿರಿಕ್ತವಾಗಿ ಕೂದಲೆಳೆಯಷ್ಟುಕೂಡ ಮತ್ತೊಂದು ಇರುವದಿಲ್ಲ ಎಂದಿಂತು ಕಂಡುಕೊಳ್ಳುತ್ತಾನೆ; ಎಚ್ಚರ, ಕನಸು, ತನಿನಿದ್ರೆ–**

---

1. ಶಾಂತಿದಾಂತಿಗಳನ್ನು ಹೇಳಿದ್ದರೂ ನಿತ್ಯಕರ್ಮತ್ಯಾಗವು ಹೊಂದುವದಿಲ್ಲವಲ್ಲ ಎಂದು ಉಪರತಿಯನ್ನು ಹೇಳಿದೆ; ಗೃಹಸ್ಥನಿಗೆ ಹೇಗೆ ನಿತ್ಯಕರ್ಮವೋ ಹಾಗೆ ಸರ್ವಕರ್ಮತ್ಯಾಗವೂ ಯತಿಗೆ ಯಾವಜ್ಜೀವವೂ ಅನುಷ್ಠೇಯವೆಂಬುದನ್ನು ಉಪರತಿವಿಧಿಯು ತಿಳಿಸುತ್ತದೆ ಎಂದು ವಾರ್ತಿಕ, ೧೨೨೬, ೧೨೨೭.

2. ಸ್ವತಂತ್ರತೆಯಿಂದ ಮಾಡುವ ಕರ್ಮತ್ಯಾಗವನ್ನು ಶಾಂತ್ಯಾದಿಶಬ್ದಗಳಿಂದ ಹೇಳಿದ್ದಾಯಿತು; ತನಗೆ ಸ್ವಾತಂತ್ರ್ಯವಿಲ್ಲದ ಮನೋರಥವೇ ಮುಂತಾದವುಗಳ ತ್ಯಾಗವನ್ನು ಸಮಾಹಿತನೆಂಬ ಶಬ್ದದಿಂದ ವಿಧಿಸಿದೆ ಎಂದು ವಾರ್ತಿಕ, ೧೨೪೬; ಶಮದಮಾದಿಗಳಿಂದ ಬಾಹ್ಯಾಂತರ್ವಿಷಯೋಪರಾಗವನ್ನು ತಪ್ಪಿಸಿಕೊಂಡು ಆತ್ಮಚಿಂತನೆಯಲ್ಲಿಯೇ ಇರುವದೇ ಸಮಾಧಿಯು ಎಂದು ಅಭಿಪ್ರಾಯ. ಇಲ್ಲಿ ಮಾಧ್ಯಂದಿನಪಾಠದಲ್ಲಿ "ಶ್ರದ್ಧಾವಿತ್ತೋ ಭೂತ್ವಾ" ಎಂದಿದೆ. ಶ್ರದ್ಧೆಯೇ ಅವನಿಗೆ ವಿತ್ತವು, ದೃಷ್ಟಾರ್ಥವಾದ ಭಿಕ್ಷಾಚರಣೆವೇ ಮುಂತಾದವುಗಳಿಗೆ ಬೇಕಾದ ಸಾಧನಗಳಲ್ಲಿಯೂ ವಿತ್ತ–ನನ್ನದು ಎಂಬ–ಬುದ್ಧಿಯು ಇರಬಾರದು ಎಂಬುದು ಅದರ ಭಾವವೆಂದು ವಾರ್ತಿಕ, ೧೨೬೮.

3. ಏಷಣಾತ್ಯಾಗದಿಂದ ಪಾಂಡಿತ್ಯವನ್ನೂ ಸರ್ವವಿಷಯದೃಷ್ಟಿಯನ್ನೂ ತಿರಸ್ಕರಿಸುವದರಿಂದ ಆತ್ಮಜ್ಞಾನಬಲರೂಪವಾದ ಬಾಲ್ಯವನ್ನು ಮುಗಿಸಿಕೊಂಡು ಮುನಿಯಾಗುವನ್ನು ಎಂದು ೩–೫–೧ (ಭಾ. ಭಾ. ೬೨ರಲ್ಲಿ) ಹೇಳಿದ್ದನ್ನು ಹೀಗೆ ಉಪಸಂಹಾರಮಾಡಿದೆ ಎಂದರ್ಥ.

4. ಸಾಕ್ಷಿಚೈತನ್ಯಸ್ವರೂಪವನ್ನು ಎಂದರ್ಥ. ಇಲ್ಲಿ ಕಾಣ್ವಪಾಠದಲ್ಲಿ ಪಶ್ಯತಿ ಎಂದಿದ್ದರೂ ಮಾಧ್ಯಂದಿನದಲ್ಲಿ 'ಪಶ್ಯೇತ್' ಎಂದೇ ಇದೆ. ಜ್ಞಾನವನ್ನು ವಿಧಿಸುವದಾಗದ್ದರಿಂದಲೂ ಮುಂದೆ ಇದನ್ನು ಹೊಗಳಿರುವದರಿಂದಲೂ ಇದು– ಶಮಾದಿಗಳ ವಿಧಿಯೇ ಎಂದು ಸೂ. ಭಾ. ೩–೪–೨೭ (ಭಾ. ಭಾ. ೪೭೦)ರಲ್ಲಿ ನಿರ್ಣಯಿಸಿದೆ.

5. ಕಾರ್ಯಕರಣಪರಿಚ್ಛಿನ್ನವಾಗಿ ತನ್ನ ಆತ್ಮನೆಂದಿಷ್ಟೇ ತಿಳಿಯುವದಿಲ್ಲ, ಸರ್ವವೂ ಆತ್ಮನೇ ಎಂದು ಅರಿತುಕೊಳ್ಳುತ್ತಾನೆ ಎಂದರ್ಥ

**ಎಂಬ ಅವಸ್ಥಾತ್ರಯವನ್ನು ಬಿಟ್ಟು (ತತ್ತ್ವವನ್ನು) ಅರಿತುಕೊಳ್ಳುವದ ರಿಂದ ಮುನಿಯಾಗುತ್ತಾನೆ.**

## ಸಾಧನಗಳಿಂದ ಸಿದ್ಧವಾದ ಜ್ಞಾನದ ಪ್ರಶಂಸೆ

(ಭಾಷ್ಯ)

೩೧೬. ಏವಂ ಪಶ್ಯನ್ತಂ ಬ್ರಾಹ್ಮಣಂ ನೈನಂ ಪಾಪ್ಮಾ ಪುಣ್ಯಪಾಪ ಲಕ್ಷಣಃ ತರತಿ ನ ಪ್ರಾಪ್ನೋತಿ। ಅಯಂ ತು ಬ್ರಹ್ಮವಿತ್ ಸರ್ವಂ ಪಾಪ್ಮಾನಂ ತರತಿ ಆತ್ಮಭಾವೇನೈವ ವ್ಯಾಪ್ನೋತಿ ಅತಿಕ್ರಾಮತಿ। ನೈನಂ ಪಾಪ್ಮಾ ಕೃತಾ ಕೃತಲಕ್ಷಣಃ ತಪತಿ ಇಷ್ಟಫಲಪ್ರತ್ಯವಾಯೋತ್ಪಾದನಾಭ್ಯಾಮ್। ಸರ್ವಂ ಪಾಪ್ಮಾನಮ್ ಅಯಂ ತಪತಿ ಬ್ರಹ್ಮವಿತ್ ಸರ್ವಾತ್ಮದರ್ಶನವಹ್ನಿನಾ ಭಸ್ಮೀ ಕರೋತಿ। ಸ ಏಷ ಏವಂವಿತ್ ವಿಪಾಪಃ ವಿಗತಧರ್ಮಾಧರ್ಮಃ। ವಿರಜಃ ವಿಗತರಜಃ। ರಜಃ ಕಾಮಃ। ವಿಗತಕಾಮಃ। ಅವಿಚಿಕಿತ್ಸಃ ಛಿನ್ನಸಂಶಯಃ। ಅಹಮಸ್ಮಿ ಸರ್ವಾತ್ಮಾ ಪರಂ ಬ್ರಹ್ಮ ಇತಿ ನಿಶ್ಚಿತಮತಿಃ। ಬ್ರಾಹ್ಮಣೋ ಭವತಿ। ಅಯಂ ತು ಏವಂಭೂತಃ ಏತಸ್ಯಾಮ್ ಅವಸ್ಥಾಯಾಂ ಮುಖ್ಯೋ ಬ್ರಾಹ್ಮಣಃ। ಪ್ರಾಗೇತಸ್ಮಾತ್ ಬ್ರಹ್ಮಸ್ವರೂಪಾವಸ್ಥಾನಾತ್ ಗೌಣಮ್ ಅಸ್ಯ ಬ್ರಾಹ್ಮಣ್ಯಮ್॥

(ಭಾಷ್ಯಾರ್ಥ)

ಹೀಗೆಂದು ಅರಿತುಕೊಂಡಿರುವ ಬ್ರಾಹ್ಮಣ(ನಿರುತ್ತಾನಲ್ಲ), ಅವನನ್ನು ಪಾಪ್ಮವು ಪುಣ್ಯಪಾಪ(ಗಳ) ಸ್ವರೂಪವಾದ (ಪಾಪವು), ದಾಟುವದಿಲ್ಲ, ಸೇರು ವದಿಲ್ಲ. ಆದರೆ ಈ ಬ್ರಹ್ಮಜ್ಞಾನಿಯು ಸರ್ವಪಾಪಗಳನ್ನೂ ದಾಟುತ್ತಾನೆ, (ಅವುಗಳಲ್ಲಿ) ತಾನೇ ಎಂಬ ಭಾವನೆಯಿಂದಲೇ[1] ವ್ಯಾಪಿಸಿಕೊಳ್ಳುತ್ತಾನೆ, ಮೀರುತ್ತಾನೆ. ಅವನನ್ನು ಪಾಪವು ಮಾಡಿರುವ ಅಥವಾ ಮಾಡದೆ ಇರುವ ರೂಪವಾದ (ಪಾಪವು)[2] ಇಷ್ಟವಾದ ಫಲವನ್ನೂ ಪ್ರತ್ಯವಾಯವನ್ನೂ ಉಂಟು ಮಾಡುವದರಿಂದ ತಪಿಸುವದಿಲ್ಲ. ಎಲ್ಲಾ ಪಾಪವನ್ನೂ ಆ ಬ್ರಹ್ಮಜ್ಞಾನಿಯು ತಪಿಸುತ್ತಾನೆ; ಸರ್ವಾತ್ಮದರ್ಶನವೆಂಬ ಬೆಂಕಿಯಿಂದ ಬೂದಿಗೈಯುತ್ತಾನೆ. ಆ ಈತನು, ಹೀಗೆಂದರಿತುಕೊಂಡವನು ವಿಪಾಪನು, ಧರ್ಮಾಧರ್ಮಗಳನ್ನು ತೊಲಗಿಸಿಕೊಂಡವನು ; ವಿರಜನು, ರಜಸ್ಸನ್ನು ತೊಲಗಿಸಿಕೊಂಡವನು ; ರಜಸ್ಸೆಂದರೆ ಕಾಮವು, ಕಾಮವನ್ನು ನೀಗಿಕೊಂಡವನು (ಎಂದರ್ಥ). ಅವಿ

---

1. ಪುಣ್ಯಪಾಪಗಳೆರಡೂ ಜ್ಞಾನಿಗೆ ಆತ್ಮನೇ ಆಗಿರುತ್ತವೆ ; ಆದ್ದರಿಂದ ಅವನಿಗೆ ಅವುಗಳ ಕೋಟಲೆ ಇಲ್ಲ. ತೈ. ಭಾ. ೨-೯ (ಭಾ. ಭಾ. ೨೨೪)ನ್ನು ನೋಡಿ.

2. ಮಾಡಬೇಕಾದ ಕರ್ಮವನ್ನು ಮಾಡಿದ್ದು ಅಥವಾ ಬಿಟ್ಟದ್ದು. ಭಾ. ಭಾ. ೩೧೧ನ್ನು ನೋಡಿ.

ಚಿಕಿತ್ಸನು, ಸಂಶಯಗಳನ್ನು ಕತ್ತರಿಸಿಕೊಂಡವನು, ನಾನು ಸರ್ವಾತ್ಮನಾದ ಪರಬ್ರಹ್ಮವೇ ಆಗಿರುವೆನು ಎಂದು ನಿಶ್ಚಯಿಸಿಕೊಂಡಿರುವ ಬುದ್ಧಿಯುಳ್ಳವನು, ಬ್ರಾಹ್ಮಣನಾಗಿರುವನು ; ಇವನೇ ಈ ಅವಸ್ಥೆಯಲ್ಲಿ[1] ಮುಖ್ಯಬ್ರಾಹ್ಮಣನು ಈ ಬ್ರಹ್ಮಸ್ವರೂಪದಲ್ಲಿ ನಿಲ್ಲುವದಕ್ಕಿಂತ ಮುಂಚೆ ಇವನಿಗೆ (ಇದ್ದ) ಬ್ರಾಹ್ಮಣ್ಯವು ಗೌಣವು.[2]

## ಬ್ರಹ್ಮಭೂತನಾದ ಜನಕನು ಸರ್ವಸ್ವವನ್ನೂ ಒಪ್ಪಿಸಿದ್ದು

(ಭಾಷ್ಯ)

೩೧೭. ಏಷ ಬ್ರಹ್ಮಲೋಕಃ। ಬ್ರಹ್ಮೈವ ಲೋಕಃ ಬ್ರಹ್ಮಲೋಕಃ ಮುಖ್ಯಃ ನಿರುಪಚರಿತಃ ಸರ್ವಾತ್ಮಭಾವಲಕ್ಷಣಃ। ಹೇ ಸಮ್ರಾಟ್, ಏನಂ ಬ್ರಹ್ಮಲೋಕಂ ಪರಿಪ್ರಾಪಿತೋಽಸಿ ಅಭಯಂ ನೇತಿನೇತ್ಯಾದಿಲಕ್ಷಣಮ್ ಇತಿ ಹೋವಾಚ ಯಾಜ್ಞವಲ್ಕ್ಯಃ। ಏವಂ ಬ್ರಹ್ಮಭೂತೋ ಜನಕಃ ಯಾಜ್ಞವಲ್ಕ್ಯೇನ ಬ್ರಹ್ಮಭಾವಮುಪಾದಿತಃ ಪ್ರತ್ಯಾಹ। ಸೋಽಹಂ ತ್ವಯಾ ಬ್ರಹ್ಮಭಾವಮ್ ಆಪಾದಿತಃ ಸನ್ ಭಗವತೇ ತುಭ್ಯಂ ವಿದೇಹಾನ್ ದೇಶಾನ್ ಮಮ ರಾಜ್ಯಂ ಸಮಸ್ತಂ ದದಾಮಿ। ಮಾಂ ಚ ಸಹ ವಿದೇಹೈಃ ದಾಸ್ಯಾಯ ದಾಸಕರ್ಮಣೇ ದದಾಮಿ ಇತಿ ಚಶಬ್ದಾತ್ ಸಂಬಧ್ಯತೇ ॥

(ಭಾಷ್ಯಾರ್ಥ)

ಇದೇ ಬ್ರಹ್ಮಲೋಕವು. ಬ್ರಹ್ಮವೇ ಆಗಿರುವ ಲೋಕವು ಮುಖ್ಯ(ವಾದ) ಬ್ರಹ್ಮಲೋಕವು, ನಿರುಪಚರಿತವಾದ ಸರ್ವಾತ್ಮಭಾವರೂಪವಾದ (ಬ್ರಹ್ಮಲೋಕವು).[3] ಎಲೈ ಸಮ್ರಾಜನೆ, (ಈ ಬ್ರಹ್ಮಲೋಕವನ್ನು ಪಡೆಯಿಸಿಕೊಂಡಿರುವೆ ; ಅಭಯವಾದ ನೇತಿನೇತಿ ಮುಂತಾದ ರೂಪದ (ಈ ಲೋಕವನ್ನು ನನ್ನಿಂದ ಪಡೆಯಿಸಿಕೊಂಡಿರುವೆ) ಎಂದು ಯಾಜ್ಞವಲ್ಕ್ಯನು ನುಡಿದನು.

ಹೀಗೆ ಬ್ರಹ್ಮವಾದ ಜನಕನು, ಯಾಜ್ಞವಲ್ಕ್ಯನಿಂದ ಬ್ರಹ್ಮತ್ವವನ್ನು ಹೊಂದಿದವನಾಗಿ (ಹೀಗೆಂದು) ಉತ್ತರವನ್ನಿತ್ತನು : ನಿನ್ನಿಂದ ಬ್ರಹ್ಮಭಾವವನ್ನು

1. ಜ್ಞಾನಾವಸ್ಥೆಯಲ್ಲಿ.

2. ಬ್ರಹ್ಮಸ್ವರೂಪವನ್ನು ಪಡೆಯುವದಕ್ಕೆ ಯೋಗ್ಯನಾದ್ದರಿಂದ ಬ್ರಾಹ್ಮಣನು ಎಂದು ಉಪಚಾರಕ್ಕೆ ಪ್ರಯೋಗಿಸಿದ್ದು.

3. ಬ್ರಹ್ಮವೆಂದರೆ ನಿರುಪಚರಿತವಾಗಿ ದೊಡ್ಡದು, ನಿರ್ವಿಶೇಷನಾದ ಆತ್ಮನು ; ಲೋಕವೆಂದರೆ ದೃಷ್ಟಿಯು ಪ್ರತ್ಯಕ್ಚೈತನ್ಯವು. ಇದೇ ಮುಖ್ಯಾರ್ಥದಲ್ಲಿ ಬ್ರಹ್ಮಲೋಕವು. ಬ್ರಹ್ಮದ ಲೋಕವು ಎಂಬುದು ಮಿಕ್ಕ ಲೋಕಗಳಿಗಿಂತಲೂ ದೊಡ್ಡದೆಂಬ ಕಾರಣದಿಂದ ಬ್ರಹ್ಮಲೋಕವೆನಿಸುವದು.

ಪಡೆಯಿಸಿಕೊಂಡ ಈ ನಾನು ಪೂಜ್ಯನಾದ ನಿನಗೆ ವಿದೇಹದೇಶವೆಂಬ ನನ್ನ ರಾಜ್ಯವನ್ನೆಲ್ಲವನ್ನೂ ಕೊಟ್ಟಿದೇನೆ; (ಈ) ವಿದೇಹ(ರಾಜ್ಯ)ದೊಡನೆ ದಾಸ್ಯಕ್ಕಾಗಿ ಸೇವಾಕರ್ಮಕ್ಕಾಗಿ ನನ್ನನ್ನೂ 'ಕೊಟ್ಟಿದೇನೆ' ಎಂದು ಚಶಬ್ದದಿಂದ ಸಂಬಂಧಿಸ ಬೇಕು.

## ಉಪಸಂಹಾರ

(ಭಾಷ್ಯ)

೩೧೮. ಪರಿಸಮಾಪಿತಾ ಬ್ರಹ್ಮವಿದ್ಯಾ ಸಹ ಸಂನ್ಯಾಸೇನ ಸಾಙ್ಗಾ ಸೇತಿ ಕರ್ತವ್ಯತಾಕಾ । ಪರಿಸಮಾಪ್ತಃ ಪರಮಪುರುಷಾರ್ಥಃ । ಏತಾವತ್ ಪುರುಷೇಣ ಕರ್ತವ್ಯಮ್ । ಏಷಾ ನಿಷ್ಠಾ । ಏಷಾ ಪರಾ ಗತಿಃ । ಏತತ್ ನಿಃಶ್ರೇಯಸಮ್, ಏತತ್ ಪ್ರಾಪ್ಯ ಕೃತಕೃತ್ಯೋ ಬ್ರಾಹ್ಮಣೋ ಭವತಿ, ಏತತ್ ಸರ್ವವೇದಾನು ಶಾಸನಮಿತಿ ॥

(ಭಾಷ್ಯಾರ್ಥ)

ಬ್ರಹ್ಮವಿದ್ಯೆಯನ್ನು ಸಂನ್ಯಾಸವೆಂಬ ಅಂಗದಿಂದ ಕೂಡಿ ಇತಿಕರ್ತವ್ಯತೆ ಯಿಂದೊಡಗೂಡಿ[1] ಮುಗಿಸಿದ್ದಾಯಿತು (ಇದರಿಂದ) ಪರಮಪುರುಷಾರ್ಥ ವನ್ನು ಸಂಪೂರ್ಣವಾಗಿ ಪಡೆದುಕೊಂಡದ್ದಾಯಿತು.[2] ಪುರುಷನು ಮಾಡ ತಕ್ಕದ್ದು ಇಷ್ಟೇ.[3] ಇದೇ (ಕೊನೆಯ) ನಿಲವು, ಇದೇ (ತೀರ) ಹೆಚ್ಚಿನ ಗತಿಯು, ಇದೇ ಹೆಚ್ಚಿನ ಮೇಲ್ಮೆಯು; ಇದನ್ನು ಪಡೆದುಕೊಂಡರೆ ಕೃತಕೃತ್ಯನೂ ಬ್ರಾಹ್ಮಣನೂ ಆಗುತ್ತಾನೆ. ಇದೇ ಸಕಲವೇದಗಳ ಅನುಶಾಸನವು.

## ಬ್ರಹ್ಮಜ್ಞಾನದಿಂದ ದೃಷ್ಟಫಲವೂ ಉಂಟು

(ಉಪನಿಷತ್ತು)

**ಸ ವಾ ಏಷ ಮಹಾನಜ ಆತ್ಮಾಽನ್ನಾದೋ ವಸುದಾನೋ ವಿನ್ದತೇ ವಸು ಯ ಏವಂ ವೇದ ॥ ೨೪ ॥**

೨೪. ಆ ಈ ಮಹಾನ್ ಅಜನಾದ ಆತ್ಮನಿದಾನಲ್ಲ (ಇವನೇ) ಅನ್ನಾದನು, ವಸುದಾನನು. ಯಾವನು ಹೀಗೆಂದು ಅರಿತುಕೊಳ್ಳು ವನೋ ಅವನು ವಸುವನ್ನು ಪಡೆದುಕೊಳ್ಳುತ್ತಾನೆ.

---

1. ಶಾಂತ್ಯಾದಿಗಳು ಇತಿಕರ್ತವ್ಯತೆಗಳು, ಹೀಗೆ ಮಾಡಿದರೆ ಬ್ರಹ್ಮವಿದ್ಯೆಯು ಪರಿಪ್ರಾಪ್ತವಾಗುವದೆಂದು ತಿಳಿಸುವ ಸಾಧನಗಳು.

2. ಇನ್ನು ಮುಂದೆ ಪಡೆದುಕೊಳ್ಳಬೇಕಾದದ್ದೇನೂ ಇರುವದಿಲ್ಲ.

3 ಮೋಕ್ಷವನ್ನು ಪಡೆದುಕೊಳ್ಳತಕ್ಕದ್ದೇ ಪುರುಷನ ಪರಮಕರ್ತವ್ಯ.

# ಬ್ರಹ್ಮಜ್ಞಾನದ ಮತ್ತು ಉಪಾಸನೆಯ ಫಲಗಳು

(ಭಾಷ್ಯ)

೩೧೯. ಯೋಽಯಂ ಜನಕಯಾಜ್ಞವಲ್ಕ್ಯಾಖ್ಯಾಯಿಕಾಯಾಂ ವ್ಯಾಖ್ಯಾತ ಆತ್ಮಾ ಸ ವೈ ಏಷ ಮಹಾನ್ ಅಜ ಆತ್ಮಾ। ಅನ್ನಾದಃ ಸರ್ವಭೂತಸ್ಥಃ ಸರ್ವಾನ್ನಾನಾಮ್ ಅತ್ತಾ। ವಸುದಾನಃ ವಸು ಧನಂ ಸರ್ವಪ್ರಾಣಿಕರ್ಮಫಲಮ್। ತಸ್ಯ ದಾತಾ ಪ್ರಾಣಿನಾಂ ಯಥಾಕರ್ಮ ಫಲೇನ ಯೋಜಯಿತಾ ಇತ್ಯರ್ಥಃ। ತಮೇತಮ್ ಅಜಮ್ ಅನ್ನಾದಂ ವಸುದಾನಮ್ ಆತ್ಮಾನಮ್ ಅನ್ನಾದವಸುದಾನಗುಣಾಭ್ಯಾಂ ಯುಕ್ತಂ ಯೋ ವೇದ, ಸ ಸರ್ವಭೂತೇಷು ಆತ್ಮಭೂತಃ ಅನ್ನಮ್ ಅತ್ತಿ। ವಿನ್ದತೇ ಚ ವಸು ಸರ್ವಂ ಕರ್ಮಫಲಜಾತಂ ಲಭತೇ ಸರ್ವಾತ್ಮತ್ವಾದೇವ ಯ ಏವಂ ಯಥೋಕ್ತಂ ವೇದ। ಅಥವಾ ದೃಷ್ಟಫಲಾರ್ಥಿಭಿರಪಿ ಏವಂಗುಣ ಉಪಾಸ್ಯಃ। ತೇನ ಅನ್ನಾದೋ ವಸೋಶ್ಚ ಲಬ್ಧಾ ದೃಷ್ಟೇನೈವ ಫಲೇನ। ಅನ್ನಾತ್ತೃತ್ವೇನ ಗೋಽಶ್ವಾದಿನಾ ಚ ಅಸ್ಯ ಯೋಗೋ ಭವತಿ ಇತ್ಯರ್ಥಃ ॥

(ಭಾಷ್ಯಾರ್ಥ)

ಈ ಜನಕಯಾಜ್ಞವಲ್ಕ್ಯರ ಕಥೆಯಲ್ಲಿ ವಿವರಿಸಿದ ಆತ್ಮನಿದಾನಲ್ಲ, ಆ ಈತನೇ ಮಹಾನ್ ಅಜನಾದ ಆತ್ಮನು, ಅನ್ನಾದನು ಸರ್ವಪ್ರಾಣಿಗಳಲ್ಲಿಯೂ ಎಲ್ಲಾ ಅನ್ನಗಳನ್ನೂ ತಿನ್ನುವವನು.[1] ವಸುದಾನನು: ವಸುವೆಂದರೆ ಧನವು ಸರ್ವಪ್ರಾಣಿಗಳ ಕರ್ಮಫಲವು, ಅದನ್ನು ಕೊಡುವಾತನು, ಪ್ರಾಣಿಗಳಿಗೆ ಕರ್ಮಾನುಸಾರವಾಗಿ ಫಲವನ್ನು ಕೂಡಿಸುವಾತನು ಎಂದರ್ಥ.[2] ಆ ಈ ಅಜನನ್ನು ಅನ್ನಾದನೂ ವಸುದಾನನೂ ಆದ ಆತ್ಮನೆಂದು, ಅನ್ನಾದವಸುದಾನಗುಣಗಳಿಂದೊಡಗೂಡಿದವನೆಂದು ಯಾವನು ಅರಿತುಕೊಂಡಿರುವನೋ ಅವನು ಸರ್ವಭೂತಗಳಲ್ಲಿಯೂ ಆತ್ಮನಾಗಿದ್ದುಕೊಂಡು ಅನ್ನವನ್ನು ತಿನ್ನುತ್ತಾನೆ; ಮತ್ತು ವಸುವನ್ನು ಎಂದರೆ ಕರ್ಮಗಳ ಫಲವೆಲ್ಲವನ್ನೂ ಪಡೆಯುತ್ತಾನೆ, ಹೀಗೆಂದು ಅರಿತವನು ಸರ್ವಾತ್ಮನಾಗಿರುವದರಿಂದಲೇ (ಅನ್ನವನ್ನು ತಿನ್ನುತ್ತಾನೆ; ಮತ್ತು ವಸುವನ್ನು ಪಡೆಯುತ್ತಾನೆ)[3]

---

1. ಗೀ. ೧೫-೧೪ನ್ನು ನೋಡಿ.

2. ಸೂ. ಭಾ. ೩-೨-೩೮ (ಭಾ.ಭಾ. ೩೧೭)ರಲ್ಲಿ ಕೇವಲಕರ್ಮಕ್ಕೆ ಫಲದಾತೃತ್ವವಿಲ್ಲವೆಂದು ನಿರ್ಣಯಿಸಿದೆ.

3. ಯಾರು ಯಾರು ಯಾವ ಯಾವ ಆಹಾರವನ್ನು ತಿಂದರೂ ಆ ರೂಪದಿಂದ ಅವನೇ ತಿಂದವನಾಗಿರುತ್ತಾನೆ ಎಂದರ್ಥ. ಎಲ್ಲರ ಕರ್ಮಫಲಗಳೂ ಜ್ಞಾನದ ಫಲದಲ್ಲಿಯೇ ಅಡಕವಾಗಿರುವದರಿಂದ (ಗೀ. ೨-೪೬) ವಸುಗಳನ್ನು ಪಡೆಯುತ್ತಾನೆ ಎಂದಿದೆ.

ಅಥವಾ ದೃಷ್ಟವಾದ (ಈ) ಫಲಗಳನ್ನು ಒಯಸುವವರುಕೂಡ (ಪರಮಾತ್ಮನನ್ನು) ಈ ಗುಣವುಳ್ಳವನೆಂದು ಉಪಾಸನೆಮಾಡಬೇಕು. ಆದರಿಂದ ಅನ್ನಾದನೂ ವಸುವನ್ನೂ (ಉಪಾಸಕನು) ಪಡೆದುಕೊಳ್ಳುತ್ತಾನೆ, ಅನ್ನವನ್ನು ತಿನ್ನುವವು[1] ಮತ್ತು ಗೋವು, ಕುದುರೆ -ಮುಂತಾದ (ವಸು) ಎಂಬ ದೃಷ್ಟ ಫಲವೇ[2] ಇವನಿಗೆ ಪ್ರಾಪ್ತವಾಗುತ್ತದೆ ಎಂದರ್ಥ.

## ಬ್ರಹ್ಮಜ್ಞಾನದಿಂದ ಬ್ರಹ್ಮಭಾವ

(ಉಪನಿಷತ್ತು)

**ಸ ವಾ ಏಷ ಮಹಾನಜ ಆತ್ಮಾಽಜರೋಽಮರೋಽಮೃತೋಽಭಯೋ ಬ್ರಹ್ಮಾಽಭಯಂ ವೈ ಬ್ರಹ್ಮಾಽಭಯಗ್ಂ ಹಿ ವೈ ಬ್ರಹ್ಮ ಭವತಿ ಯ ಏವಂ ವೇದ ॥ ೨೫ ॥**

೨೫. ಆ ಈತನೇ ಮಹಾನ್ ಅಜ ಆತ್ಮನು. ಅಜರನು, ಅಮರನು, ಅಮೃತನು, ಅಭಯನು, ಬ್ರಹ್ಮವು. ಬ್ರಹ್ಮವು ಅಭಯವಷ್ಟೆ. ಯಾವನು ಹೀಗೆಂದು ಅರಿತುಕೊಳ್ಳುವನೋ ಅವನು ಅಭಯವಾದ ಬ್ರಹ್ಮವೇ ಆಗುತ್ತಾನೆ.

## ಆರಣ್ಯಕದ ಅರ್ಥಸಂಗ್ರಹ

(ಭಾಷ್ಯ)

೬.೨೦. ಇದಾನೀಂ ಸಮಸ್ತಸ್ಯೈವ ಆರಣ್ಯಕಸ್ಯ ಯೋಽರ್ಥಃ ಉಕ್ತಃ ಸ ಸಮುಚ್ಚಿತ್ಯ ಅಸ್ಯಾಂ ಕಣ್ಡಿಕಾಯಾಂ ನಿರ್ದಿಶ್ಯತೇ ಏತಾವಾನ್ ಸಮಸ್ತಾರಣ್ಯಕಾರ್ಥಃ ಇತಿ। ಸ ವಾ ಏಷ ಮಹಾನ್ ಅಜ ಆತ್ಮಾ। ಅಜರಃ ನ ಜೀರ್ಯತೇ ಇತಿ। ನ ವಿಪರಿಣಮತೇ ಇತ್ಯರ್ಥಃ। ಅಮರಃ ಯಸ್ಮಾಚ್ಚ ಅಜರಃ ತಸ್ಮಾತ್ ಅಮರಃ। ನ ಮ್ರಿಯತೇ ಇತಿ ಅಮರಃ। ಯೋ ಹಿ ಜಾಯತೇ ಜೀರ್ಯತೇ ಚ ಸ ವಿನಶ್ಯತಿ ಮ್ರಿಯತೇ ವಾ। ಅಯಂ ತು ಅಜತ್ವಾತ್ ಅಜರತ್ವಾಚ್ಚ ಅವಿನಾಶೀ ಯತಃ, ಅತ ಏವ ಅಮೃತಃ। ಯಸ್ಮಾತ್ ಜನಿಪ್ರಭೃತಿಭಿಃ ತ್ರಿಭಿರ್ಭಾವವಿಕಾರೈಃ ವರ್ಜಿತಃ ತಸ್ಮಾತ್ ಇತರೈರಪಿ ಭಾವವಿಕಾರೈಸ್ತ್ರಿಭಿಃ

---

1. ದೀಪ್ತಾಗ್ನಿಯಾಗಿರುವದು.

2. ಲೌಕಿಕಫಲಗಳೂ ಬ್ರಹ್ಮದ ಉಪಾಸನೆಯಿಂದ ಆಗುತ್ತವೆ. ೩-೯-೨೮ (ಭಾ. ಭಾ. ೧೩೫)ರಲ್ಲಿ ಹೇಳಿರುವ 'ರಾತಿರ್ದಾತುಃ ಪರಾಯಣಮ್' ಎಂಬಿದರ ಉಪಸಂಹಾರವಿದು.

ತತ್ಕೃತೈಶ್ಚ ಕಾಮಕರ್ಮಮೋಹಾದಿಭಿಃ ಮೃತ್ಯುರೂಪೈಃ ವರ್ಜಿತಃ ಇತ್ಯೇತತ್ । ಅಭಯಃ ಅತ ಏವ । ಯಸ್ಮಾಚ್ಚ ಏವಂ ಪೂರ್ವೋಕ್ತವಿಶೇಷಣಃ ತಸ್ಮಾತ್ ಭಯವರ್ಜಿತಃ । ಭಯಂ (ಚ)[1] ಹಿ ನಾಮ ಅವಿದ್ಯಾಕಾರ್ಯಮ್ । ತತ್ ಕಾರ್ಯಪ್ರತಿಷೇಧೇನ ಭಾವವಿಕಾರಪ್ರತಿಷೇಧೇನ ಚ ಅವಿದ್ಯಾಯಾಃ ಪ್ರತಿಷೇಧಃ ಸಿದ್ಧೋ ವೇದಿತವ್ಯಃ । ಅಭಯಃ । ಆತ್ಮಾ ಏವಂಗುಣವಿಶಿಷ್ಟಃ ಕಿಮಸೌ ? ಬ್ರಹ್ಮ ಪರಿವೃಢಮ್ । ನಿರತಿಶಯಂ ಮಹತ್ ಇತ್ಯರ್ಥಃ। ಅಭಯಂ ವೈ ಬ್ರಹ್ಮ। ಪ್ರಸಿದ್ಧಮೇತತ್ ಲೋಕೇ ಅಭಯಂ ಬ್ರಹ್ಮ ಇತಿ । ತಸ್ಮಾತ್ ಯುಕ್ತಮ್ ಏವಂಗುಣವಿಶಿಷ್ಟ ಆತ್ಮಾ ಬ್ರಹ್ಮೇತಿ । ಯ ಏವಂ ಯಥೋಕ್ತಮ್ ಆತ್ಮಾನಮ್ ಅಭಯಂ ಬ್ರಹ್ಮ ವೇದ ಸಃ ಅಭಯಂ ಹಿ ವೈ ಬ್ರಹ್ಮ ಭವತಿ ॥

(ಭಾಷ್ಯಾರ್ಥ)

ಈಗ ಇಡಿಯ ಆರಣ್ಯಕಕ್ಕೆಲ್ಲ[2] ಅರ್ಥವೆಂದು ಹೇಳಿತ್ತಲ್ಲ, ಅದನ್ನು ಒಟ್ಟುಸೇರಿಸಿ ಇಷ್ಟೇ ಒಟ್ಟು ಆರಣ್ಯಕದ ಅರ್ಥವು ಎಂದು ಈ ಕಂಡಿಕೆಯಲ್ಲಿ ತಿಳಿಸಲಾಗುತ್ತದೆ.

ಆ ಈತನೇ[3] ಮಹಾಂತನೂ ಅಜನೂ ಆದ ಆತ್ಮನು. ಅಜರನು, ಏಕೆಂದರೆ ಜೀರ್ಣವಾಗುವದಿಲ್ಲ ; ವಿಪರಿಣಾಮವನ್ನು ಹೊಂದುವದಿಲ್ಲ ಎಂದರ್ಥ. ಅಮರನು ; ಅಜರನಾಗಿರುತ್ತಾನಲ್ಲ, ಆದ್ದರಿಂದ ಅಮರನು ; ಸಾಯುವದಿಲ್ಲವಾದ್ದರಿಂದ ಅಮರನು.[4] ಯಾವನು ಹುಟ್ಟುತ್ತಾನೋ ಮತ್ತು ಮುಪ್ಪನ್ನು ಹೊಂದುತ್ತಿರುತ್ತಾನೋ ಅವನು ವಿನಾಶವಾಗುತ್ತಾನೆ, ಅಥವಾ ಸಾಯುತ್ತಾನೆ[5] ಅಲ್ಲವೆ ? ಆದರೆ ಇವನಾದರೋ ಅಜನೂ ಅಜರನೂ ಆಗಿರುವದರಿಂದ ವಿನಾಶವಾಗಿರುವದಿಲ್ಲವಷ್ಟೆ, ಅದರಿಂದಲೇ (ಇವನು) ಅಮೃತನು.[6] ಜನ್ಮವೇ ಮುಂತಾದ

1. ಈ ಚಶಬ್ದವು ಬೇಕಿಲ್ಲವೆಂದು ತೋರುತ್ತದೆ.

2. ಮಧು ಮತ್ತು ಯಾಜ್ಞವಲ್ಕ್ಯ –ಈ ಎರಡು ಕಾಂಡಗಳಿಗೂ ಎಂದರ್ಥ.

3. ಸಂಸಾರಿಯಾಗಿ ತೋರುವ ಆತ್ಮನೇ ಎಂದರ್ಥ.

4. ಹುಟ್ಟಿದರೆ ಮುಪ್ಪೂ ಸಾವೂ ಇದ್ದೇ ಇರುತ್ತವೆ ; ಆದರೂ ಶ್ರುತಿಯು ಬಾಯಿಬಿಟ್ಟು ಅವುಗಳನ್ನು ನಿಷೇಧಿಸಿರುವದು ಯಾವ ಭಾವವಿಕಾರವೂ ಇಲ್ಲದವನು ಎಂದು ತಿಳಿಸುವದಕ್ಕೆ.

5. 'ವಿನಶ್ಯತಿ ಮ್ರಿಯತೇ ಚ' ಎಂಬ ಪಾಠದಲ್ಲಿ ವಿನಾಶವಾಗುತ್ತಾನೆ, ಮತ್ತು ಸಾಯುತ್ತಾನೆ ಎಂದು ಅನುವಾದ.

6. ಅಮರವೆಂದರೆ ಪರಿಣಾಮಾತ್ಮಕಮೃತ್ಯುವಿಲ್ಲವೆಂದಿದೆ. ನಿರನ್ವಯವಾದ ನಾಶವಿಲ್ಲದ್ದರಿಂದ ಅಮೃತನೆಂದಿದೆ ಎಂದು ವಾರ್ತಿಕ ೧೩೩೩. ಕಾಮಕರ್ಮಾದಿಗಳೆಂಬ ಮೃತ್ಯುರೂಪಗಳಿಲ್ಲದ ಸ್ವಭಾವವವನು ಎಂದೇ ಅಮೃತಶಬ್ದದ ಅರ್ಥವನ್ನು ಮುಂದಿನ ವಾಕ್ಯದಲ್ಲಿ ತಿಳಿಸಿದೆ.

ಮೂರು ಭಾವವಿಕಾರಗಳೂ ಇಲ್ಲದವನಷ್ಟೆ, ಆದ್ದರಿಂದ ಉಳಿದ ಮೂರು ಭಾವ ವಿಕಾರಗಳೂ ಅವುಗಳಿಂದಾದ ಮೃತ್ಯುರೂಪವಾದ ಕಾಮ, ಕರ್ಮ, ಮೋಹ-ಮುಂತಾದವುಗಳೂ ಇಲ್ಲದವನು ಎಂದು ಅಭಿಪ್ರಾಯ.

ಆದ್ದರಿಂದಲೇ ಅಭಯನು. ಮತ್ತು ಈ ಹಿಂದೆ ಹೇಳಿದ ವಿಶೇಷಣಗಳಿಂದೊಡಗೂಡಿದವನಷ್ಟೆ, ಈ ಕಾರಣದಿಂದ (ಇವನು) ಭಯರಹಿತನು. ಭಯ ಎಂಬುದು ಅವಿದ್ಯೆಯ ಕಾರ್ಯವಲ್ಲವೆ ? ಆದ್ದರಿಂದ ಕಾರ್ಯವನ್ನು ಇಲ್ಲವೆಂದಿರುವದರಿಂದಲೂ ಭಾವವಿಕಾರಗಳು ಇಲ್ಲವೆಂದಿರುವದರಿಂದಲೂ[1] ಅವಿದ್ಯೆಯು ಇಲ್ಲವೆಂದಂತೆ ಆಯಿತೆಂದು ತಿಳಿಯಬೇಕು. (ಆದ್ದರಿಂದ) ಅಭಯನು.

ಈ ಗುಣಗಳಿಂದ ಕೂಡಿದ ಆತ್ಮನಿದಾನಲ್ಲ, ಇವನು ಏನು ? ಎಂದರೆ ಬ್ರಹ್ಮವು, ದೊಡ್ಡದು, ಮಿಗಿಲಿಲ್ಲದಷ್ಟು ಹೆಚ್ಚಿನದು ಎಂದರ್ಥ. ಬ್ರಹ್ಮವು ಅಭಯ ವಲ್ಲವೆ ? ಬ್ರಹ್ಮವು ಅಭಯವಷ್ಟೆ. ಬ್ರಹ್ಮವು ಅಭಯವು ಎಂಬಿದು ಲೋಕದಲ್ಲಿ ಪ್ರಸಿದ್ಧವು.[2] ಆದ್ದರಿಂದ ಈ ಗುಣಗಳಿಂದ ಕೂಡಿದ ಆತ್ಮನು ಬ್ರಹ್ಮವೇ ಎಂಬಿದು ಯುಕ್ತವಾಗಿರುತ್ತದೆ,[3] ಯಾವನು ಈ ಹೇಳಿದ ಆತ್ಮನು ಅಭಯವಾದ ಬ್ರಹ್ಮವೆಂದು ಅರಿತುಕೊಳ್ಳುವನೋ, ಅವನು ಅಭಯವಾದ ಬ್ರಹ್ಮವೇ ಆಗುತ್ತಾನೆ.[4]

## ಉಪನಿಷತ್ತಿನಲ್ಲಿ ತತ್ತ್ವವನ್ನು ತಿಳಿಸಿರುವ ಕ್ರಮ

(ಭಾಷ್ಯ)

೩೨೧. ಏಷ ಸರ್ವಸ್ಯಾ ಉಪನಿಷದಃ ಸಂಕ್ಷಿಪ್ತೋಽರ್ಥಃ ಉಕ್ತಃ । ಏತಸ್ಯೈವಾರ್ಥಸ್ಯ ಸಮ್ಯಕ್ಪ್ರಬೋಧಾಯ ಉತ್ಪತ್ತಿಸ್ಥಿತಿಪ್ರಲಯಾದಿಕಲ್ಪನಾಃ ಕ್ರಿಯಾಕಾರಕಫಲಾಧ್ಯಾರೋಪಣಾ ಚ ಆತ್ಮನಿ ಕೃತಾ । ತದಪೋಹೇನ ಚ ನೇತಿನೇತೀತಿ ಅಧ್ಯಾರೋಪಿತವಿಶೇಷಾಪನಯದ್ವಾರೇಣ ಪುನಸ್ತತ್ತ್ವಮ್

---

1. ಭಾವವಿಕಾರಗಳೂ ಭಯವೂ ಅವಿದ್ಯೆಯಿರುವಲ್ಲಿ ಇದ್ದೇ ಇರುವವು ; ಆದ್ದರಿಂದ ಭಯಾದಿಗಳನ್ನೂ ವಿಕಾರಗಳನ್ನೂ ಇಲ್ಲವೆಂದದ್ದರಿಂದ ಅವಿದ್ಯೆಯಿಲ್ಲವೆಂದೇ ಹೇಳಿದಂತಾಯಿತು ಎಂದರ್ಥ.

2. ತನಗಿಂತ ಹೆಚ್ಚಿನದೊಂದಿದ್ದರೆ ಅದಕ್ಕೆ ಭಯವಿದ್ದೇ ಇರುತ್ತದೆ, ಆದ್ದರಿಂದ ಬ್ರಹ್ಮವು ಎಂದರೆ ಮಿಗಿಲಿಲ್ಲದಷ್ಟು ಹೆಚ್ಚಿನ ತತ್ತ್ವವು ಭಯರಹಿತವೆಂದು ಎಲ್ಲರೂ ಬಲ್ಲರು ಎಂದರ್ಥ.

3. ಅಭಯಾಂತವಾದ ಗುಣಗಳಿದ್ದರೆ ಅದು ಬ್ರಹ್ಮವಾಗಿರಲೇಬೇಕು ; ಏಕೆಂದರೆ ಬ್ರಹ್ಮವಲ್ಲದ್ದಕ್ಕೆ ಈ ಗುಣಗಳಿರಲಾರವು.

4. ಅಜ್ಞಾನದಿಂದಲೇ ಆತ್ಮನಲ್ಲಿ ಭಯಾದಿಗಳಿರುತ್ತವೆ ಎಂದು ಅಭಿಪ್ರಾಯ.

ಆವೇದಿತಮ್ । ಯಥಾ ಏಕಪ್ರಭೃತಿ ಆಪರಾರ್ಧಸಂಖ್ಯಾಸ್ವರೂಪಪರಿಜ್ಞಾನಾಯ ರೇಖಾಧ್ಯಾರೋಪಣಂ ಕೃತ್ವಾ ಏಕೇಯಂ ರೇಖಾ ದಶೇಯಮ್, ಶತೇಯಮ್, ಸಹಸ್ರೇಯಮ್ ಇತಿ ಗ್ರಾಹಯತಿ । ಅವಗಮಯತಿ ಸಂಖ್ಯಾಸ್ವರೂಪಂ ಕೇವಲಮ್, ನ ತು ಸಂಖ್ಯಾಯಾ ರೇಖಾತ್ಮತ್ವಮೇವ । ಯಥಾ ಚ ಅಕಾರಾದೀನಿ ಅಕ್ಷರಾಣಿ ವಿಜಿಗ್ರಾಹಯಿಷುಃ ಪತ್ರಮಷೀರೇಖಾದಿಸಂಯೋಗೋಪಾಯಮ್ ಆಸ್ಥಾಯ ವರ್ಣಾನಾಂ ಸತತ್ತ್ವಮ್ ಆವೇದಯತಿ ನ ಪತ್ರಮಷ್ಯಾದ್ಯಾತ್ಮತಾಮ್ ಅಕ್ಷರಾಣಾಂ ಗ್ರಾಹಯತಿ । ತಥಾ ಚ ಇಹ ಉತ್ಪತ್ತ್ಯಾದ್ಯನೇಕೋಪಾಯಮ್ ಆಸ್ಥಾಯ ಏಕಂ ಬ್ರಹ್ಮತತ್ತ್ವಮ್ ಆವೇದಿತಮ್, ಪುನಸ್ತತ್ಕಲ್ಪಿತೋಪಾಯಜನಿತವಿಶೇಷಪರಿಶೋಧನಾರ್ಥಂ ನೇತಿ ನೇತಿ ಇತಿ ತತ್ತ್ವೋಪಸಂಹಾರಃ ಕೃತಃ । ತದುಪಸಂಹೃತಂ ಪುನಃ ಪರಿಶುದ್ಧಂ ಕೇವಲಮೇವ ಸಫಲಂ ಜ್ಞಾನಮ್ ಅನ್ತೇ ಅಸ್ಯಾಂ ಕಣ್ಡಿಕಾಯಾಮ್ ಇತಿ ॥

(ಭಾಷ್ಯಾರ್ಥ)

ಇಡಿಯ ಉಪನಿಷತ್ತಿನ ಈ ಅರ್ಥವನ್ನು[1] ಸಂಕ್ಷೇಪದಿಂದ ಹೇಳಿದ್ದಾಯಿತು. **ಇದೇ ಅರ್ಥವನ್ನು ಚೆನ್ನಾಗಿ ತಿಳಿಸಿಕೊಡುವದಕ್ಕಾಗಿ[2] ಉತ್ಪತ್ತಿ, ಸ್ಥಿತಿ, ಪ್ರಲಯ–ಮುಂತಾದ ಕಲ್ಪನೆಯನ್ನೂ ಕ್ರಿಯಾಕಾರಕಫಲಗಳ ಅಧ್ಯಾರೋಪಣೆಯನ್ನೂ ಆತ್ಮನಲ್ಲಿ ಮಾಡಲಾಯಿತು ಮತ್ತು ಅದನ್ನು ಅಲ್ಲಗಳೆದು ನೇತಿನೇತಿ (ಹೀಗಲ್ಲ, ಹೀಗಲ್ಲ) ಎಂದು ಅಧ್ಯಾರೋಪಿತವಾದ ವಿಶೇಷವನ್ನು ತೆಗೆದುಹಾಕುವ ಮೂಲಕ ಮತ್ತೆ ತತ್ತ್ವವನ್ನು ತಿಳಿಸಿದ್ದಾಯಿತು.[3]** ಹೇಗೆ ಒಂದು ಮುಂತಾಗಿ ಪರಾರ್ಧದವರೆಗಿನ ಸಂಖ್ಯೆಗಳ ಸ್ವರೂಪವನ್ನು ತಿಳಿಸಿಕೊಡುವದಕ್ಕಾಗಿ ಗೆರೆಯ ಅಧ್ಯಾರೋಪವನ್ನು ಮಾಡಿ[4] ಈ ರೇಖೆಯು ಒಂದು, ಇದು ಹತ್ತು, ಇದು ನೂರು, ಇದು ಸಾವಿರ–ಎಂದು ತಿಳಿಸಿಕೊಡುತ್ತಾನೋ, (ಅದರಿಂದ) ಬರಿಯ ಸಂಖ್ಯಾಸ್ವರೂಪವನ್ನೇ ತಿಳಿಸುತ್ತಾನೆಯೇ ಹೊರತು ಸಂಖ್ಯೆಯು ರೇಖಾರೂಪವೆಂದೇ ಹೇಳಿಕೊಡು

---

1. ಅದ್ವಿತೀಯಬ್ರಹ್ಮತತ್ತ್ವವನ್ನು

2. ಪರಿಜ್ಞಾನಾಯ ಎಂದರೆ ತಿಳಿವಳಿಕೆಗಾಗಿ ಎಂದೇ ಅರ್ಥ ; ಶಿಷ್ಯರಿಗೆ ಈ ಜ್ಞಾನವಾಗುವದಕ್ಕಾಗಿ, ಇದನ್ನು ತಿಳಿಸಿಕೊಡುವದಕ್ಕಾಗಿ ಎಂಬುದು ಅರ್ಥಿಕಾರ್ಥ.

3. ಈ ಕ್ರಮಕ್ಕೆ 'ಅಧ್ಯಾರೋಪಾಪವಾದನ್ಯಾಯ' ಎಂದು ಹೆಸರು. ಗೀ. ಭಾ. ೧೩–೧೩ (ಭಾ. ಭಾ. ೨೫೪)ನ್ನು ನೋಡಿ.

4. ಏಕ, ದಶಕ, ಶತಕ – ಮುಂತಾದ ಸ್ಥಾನಗಳಲ್ಲಿ ಬರೆದಿರುವ ಅಂಕೆಯನ್ನೇ ಒಂದು, ಹತ್ತು, ನೂರು ಎಂದು ಕಲ್ಪಿಸಿ ಎಂದರ್ಥ ; ನಿಜವಾಗಿ ಗೆರೆಯೇನೂ ಸಂಖ್ಯೆಯಲ್ಲ, ಸಂಖ್ಯೆಯೆಂಬುದು ವಸ್ತುಗಳ ಗುಣವು.

ವದಿಲ್ಲವೋ; ಮತ್ತು ಹೇಗೆ ಅಕಾರವೇ ಮುಂತಾದ ಅಕ್ಷರಗಳನ್ನು ಕಲಿಸಿಕೊಡ ಬೇಕೆನ್ನುವವನು ಪತ್ರ, ಮಷಿ, ರೇಖೆ- ಮುಂತಾದವುಗಳ ಸಂಬಂಧವೆಂಬ ಉಪಾಯವನ್ನು ಇಟ್ಟುಕೊಂಡು ವರ್ಣಗಳ ತತ್ತ್ವವನ್ನು[1] ತಿಳಿಸಿಕೊಡು ತ್ತಾನೋ, (ಅಷ್ಟೇ ಹೊರತು) ಅಕ್ಷರಗಳು ಬರಿಯ ಪತ್ರ, ಮಷಿ -ಮುಂತಾದವು ಗಳ ಸ್ವರೂಪವೇ ಎಂದು ತಿಳಿಸಿಕೊಡುವದಿಲ್ಲವೊ, ಹಾಗೆಯೇ ಇಲ್ಲಿಯೂ ಉತ್ಪತ್ತಿಯೇ ಮುಂತಾದ ಅನೇಕ ಉಪಾಯಗಳನ್ನು ಇಟ್ಟುಕೊಂಡು ಒಂದೇ ಬ್ರಹ್ಮತತ್ತ್ವವನ್ನು ತಿಳಿಸಿಕೊಟ್ಟದ್ದಾಯಿತು; ಮತ್ತೆ ಅದರಲ್ಲಿ ಕಲ್ಪಿತವಾದ ಉಪಾಯದಿಂದಾದ ವಿಶೇಷವನ್ನು ಬಿಡಿಸುವದಕ್ಕಾಗಿ ನೇತಿನೇತಿ ಎಂದು ತತ್ತ್ವ ವನ್ನೇ ಉಪಸಂಹಾರಮಾಡಿತು.[2] ಆದ್ದರಿಂದ ಆ ಪರಿಶುದ್ಧವಾದ[3] ಕೇವಲವಾದ[4] ಜ್ಞಾನವನ್ನೇ ಫಲಸಹಿತವಾಗಿ ಕೊನೆಯಲ್ಲಿ ಈ ಕಂಡಿಕೆಯಲ್ಲಿ ಮತ್ತೆ ಉಪಸಂಹಾರಮಾಡಲಾಗಿರುತ್ತದೆ.

---

1. ವರ್ಣಗಳು ಧ್ವನ್ಯಾತ್ಮಕವೇ ಎಂಬ ನಿಜವನ್ನು.

2. ಗೆರೆಯು ಸಂಖ್ಯೆಯಲ್ಲ, ಪತ್ರಾದಿಗಳು ವರ್ಣವಲ್ಲ; ಆದ್ದರಿಂದ ಜ್ಞಾನಕ್ಕೆ ಉಪಾಯವಾಗಿ ಕಲ್ಪಿಸಿಕೊಂಡ ಅವುಗಳನ್ನು ಬಿಡಿಸಿ ನಿಜವಾದ ಸಂಖ್ಯೆಯನ್ನೂ ನಿಜವಾದ ವರ್ಣವನ್ನೂ ತಿಳಿಸಿಕೊಡುವಂತೆ, ಉಪಾಯವಾಗಿ ಕಲ್ಪಿಸಿಕೊಂಡ ಉತ್ಪತ್ತ್ಯಾದಿಗಳನ್ನು ಕ್ರಿಯಾಕಾರಕಫಲಾದಿಗಳನ್ನು ಬಿಡಿಸಿ ಬರಿಯ ನಿರ್ವಿಶೇಷವಾದ ಬ್ರಹ್ಮಾತ್ಮತತ್ತ್ವವನ್ನೇ ನೇತಿನೇತಿ ಎಂದು ತಿಳಿಸಿತ್ತಲ್ಲ, ಅದೊಂದನ್ನೇ ಇಲ್ಲಿ 'ಮಹಾನಜ ..ಅಭಯೋ ಬ್ರಹ್ಮ' ಎಂದು ತಿಳಿಸಿ ಉಪಸಂಹಾರಮಾಡಿದೆ.

3. ಅನಾತ್ಮವಿಲಕ್ಷಣವೂ ನಿರ್ವಿಶೇಷವೂ ಆದ ಆತ್ಮನನ್ನು ತಿಳಿಸುವ.

4. ಕೇವಲವಾದ ಎಂದರೆ ಉತ್ಪತ್ತ್ಯಾದಿಗಳ ಸಂಬಂಧವಿಲ್ಲದ, ಕ್ರಿಯಾದಿಗಳ ಸಂಬಂಧವಿಲ್ಲದ ಎಂದರ್ಥ. ಉಪಾಯದಲ್ಲಿ ತಾತ್ಪರ್ಯವಿಲ್ಲ, ಉಪೇಯವಾದ ಬ್ರಹ್ಮ ಅದರ ಜ್ಞಾನದಿಂದಾಗುವ ಬ್ರಹ್ಮಪ್ರಾಪ್ತಿ ಎಂಬ ಫಲ- ಇವುಗಳಲ್ಲಿಯೇ ತಾತ್ಪರ್ಯ- ಎಂದರ್ಥ. ಮಾಂ. ಕಾ. ೩-೨೬ (ಭಾ. ಭಾ. ೧೭೫) ನೋಡಿ. ಇಲ್ಲಿ ಕೊನೆಯಲ್ಲಿರುವ ಇತಿಶಬ್ದವು ಕಾಂಡದ್ವಯದ ಪ್ರತಿಪಾದನೆಯು ಮುಗಿಯಿತೆಂಬುದನ್ನು ತಿಳಿಸುವದಕ್ಕೆ ಅಥವಾ ಬ್ರಾಹ್ಮಣದ ಸಮಾಪ್ತಿಯನ್ನು ಸೂಚಿಸುವದಕ್ಕೆ.

# ನಾಲ್ಕನೆಯ ಬ್ರಾಹ್ಮಣದ ಸಾರ

**ಕಾಮದಿಂದ ಜನ್ಮಾಂತರಪ್ರಾಪ್ತಿಯೂ ಕಾಮನಾಶದಿಂದ ಬ್ರಹ್ಮಪ್ರಾಪ್ತಿಯೂ ಆಗುವವೆಂದು ಈ ಬ್ರಾಹ್ಮಣದಲ್ಲಿ ಹೇಳಿರುತ್ತದೆ.**

೧-೩. ದೌರ್ಬಲ್ಯದಿಂದ ಮೋಹವನ್ನು ಹೊಂದಿದಂತಾಗುವ ಮರಣಕಾಲದಲ್ಲಿ ಈ ಜೀವನು ಪ್ರಾಣಗಳನ್ನು ಉಪಸಂಹಾರಮಾಡಿಕೊಂಡು ಹೃದಯವನ್ನು ಸೇರುತ್ತಾನೆ. ಆಗ ಕರಣಗಳ ಅಧಿದೇವತೆಗಳ ಅಂಶಗಳು ತಮ್ಮ ತಮ್ಮ ಮೂಲರೂಪವನ್ನು ಸೇರಿಕೊಳ್ಳುವವು; ಕರಣಗಳು ಈ ಲಿಂಗಾತ್ಮನಲ್ಲಿ ಒಂದಾಗಿಬಿಡುವದರಿಂದ ಅವುಗಳ ವ್ಯಾಪಾರವು ನಡೆಯು ವದು ನಿಂತುಹೋಗುವದು. ಇವನ ಹೃದಯದ ಕೊನೆಯು ಹೊಳೆಯುವದು, ಆ ಬೆಳಕಿನ ಸಹಾಯದಿಂದ ಇವನು, ಯಾವ ಲೋಕವನ್ನು ಮುಂದೆ ಮುಟ್ಟಬೇಕೋ ಅದಕ್ಕನುಗುಣ ವಾಗಿ, ಚಕ್ಷುಸ್ಸೇ ಮುಂತಾದ ಕರಣಗಳ ಮೂಲಕ ಹೊರಹೊರಡುತ್ತಾನೆ. ಅವನ ಜೊತೆ ಯಲ್ಲಿ ಪ್ರಾಣವೂ ಮಿಕ್ಕ ಕರಣಗಳೂ ಹೊರಡುವವು. ಆಗ ಇವನಿಗೆ ಒಂದು ಬಗೆಯ ಪರತಂತ್ರವಾದ ವಿಶೇಷಜ್ಞಾನವುಂಟಾಗುವದು; ಜ್ಞಾನಕರ್ಮಸಾಮಾನ್ಯಗಳೂ ಪೂರ್ವ ಪ್ರಜ್ಞೆ ಎಂಬ ವಾಸನೆಯೂ ಇವನನ್ನು ಹಿಂಬಾಲಿಸುವವು.

೩-೪. ಜಿಗಣೆಯು ಒಂದು ಕಡ್ಡಿಯನ್ನು ಬಿಟ್ಟು ಮತ್ತೊಂದು ಕಡ್ಡಿಗೆ ದಾಟಿ ಹೋಗುವಂತೆ, ಇವನು ಮತ್ತೊಂದು ಶರೀರದ ವಾಸನೆಯುಳ್ಳವನಾಗಿ ಈ ಶರೀರ ವನ್ನು ಬಿಟ್ಟು ಇದನ್ನು ನಿಶ್ಶೇಷ್ಟವಾಗಿ ಮಾಡಿ ಮತ್ತೊಂದು ಶರೀರಕ್ಕೆ ಸಾಗುವನು. ಅಕ್ಕ ಸಾಲೆಯು ಅದೇ ಚಿನ್ನದ ಚೂರನ್ನೇ ಉಪಯೋಗಿಸಿಕೊಂಡು ಬೇರೆಬೇರೆಯ ಒಡವೆ ಗಳನ್ನು ಮಾಡಿಕೊಳ್ಳುವಂತೆ ಈ ಜೀವನು ಹೀಗೆಯೇ ತನ್ನ ಕರ್ಮಜ್ಞಾನಗಳಿಗೆ ತಕ್ಕಂತೆ ಅದೇ ಭೂತಮಾತ್ರೆಗಳನ್ನೇ ಉಪಯೋಗಿಸಿಕೊಂಡು ಹೊಸ ಶರೀರಗಳನ್ನು ಮಾಡಿ ಕೊಳ್ಳುತ್ತಿರುವನು.

೫-೬. ಈ ಆತ್ಮನು ಅಸಂಸಾರಿಯಾದ ಬ್ರಹ್ಮವೇ ಆಗಿದ್ದರೂ ಉಪಾಧಿವಶದಿಂದ ವಿಜ್ಞಾನಮಯನೂ ಮನೋಮಯನೂ ಪ್ರಾಣಮಯನೂ ಚಕ್ಷುರಾದೀಂದ್ರಿಯಮಯನೂ ಪೃಥಿವ್ಯಾದಿಶರೀರಮಯನೂ ಕಾಮ, ಅಕಾಮ; ಕ್ರೋಧ, ಅಕ್ರೋಧ; ಧರ್ಮ, ಅಧರ್ಮ -ಇವುಗಳಿಂದ ಆಯಾ ತತ್ತ್ವದ ಪ್ರಾಚುರ್ಯವುಳ್ಳವನೂ ಆಗಿ ಸರ್ವಮಯನಾಗಿರುತ್ತಾನೆ. ತನ್ನ ಕರ್ಮ, ಆಚಾರ-ಇವುಗಳಿಗೆ ತಕ್ಕಂತೆ ಒಳ್ಳೆಯವನೋ ಕೆಟ್ಟವನೋ ಆಗುತ್ತಿರುವನು; ಆದ್ದರಿಂದ ಪುಣ್ಯಪಾಪಗಳೇ ಇವನ ಸಂಸಾರಕ್ಕೆ ಕಾರಣವೆಂದು ಹೇಳಬಹುದಾಗಿ ತೋರು ತ್ತಿರುವದು. ಆದರೆ ಮುಖ್ಯವಾಗಿ ಇವನು ಕಾಮಮಯನೇ ಆಗಿ ಸಂಸಾರದಲ್ಲಿ ತೊಳಲು ತ್ತಿರುತ್ತಾನೆಂಬುದೇ ಸಿದ್ಧಾಂತವು; ಏಕೆಂದರೆ ಕಾಮದಂತೆ ಕ್ರತು, ಕ್ರತುವಿನಂತೆ ಕರ್ಮ, ಕರ್ಮದಂತೆ ಆಯಾ ಫಲದ ಭೋಗ-ಇವುಗಳು ಉಂಟಾಗುತ್ತಿರುವವು. ಆದ್ದರಿಂದ ಸಂಗ್ರಹ ವಾಗಿ ಹೇಳಬೇಕಾದರೆ, ಇವನ ಮನಸ್ಸು ಏತರಲ್ಲಿ ಸಕ್ತವಾಗಿರುವದೋ ಅದನ್ನೇ ಇವನು ಕರ್ಮದೊಡನೆ ಹೋಗಿ ಪಡೆಯುತ್ತಾನೆ; ಆ ಲೋಕದಲ್ಲಿ ಫಲವನ್ನನುಭೋಗಿಸಿದ ಬಳಿಕ ಕರ್ಮವನ್ನು ಮಾಡುವದಕ್ಕೆಂದು ಮತ್ತೆ ಈ ಲೋಕಕ್ಕೆ ಮರಳಿ ಬರುತ್ತಾನೆ. ಇಲ್ಲಿಯ ವರೆಗೆ ಹೇಳಿದ ಸಂಸಾರಕ್ರಮವು ಕಾಮಿಯಾದವನಿಗೆ ಆಗತಕ್ಕದ್ದು.

೬–೭. ಇನ್ನು ಕಾಮಿಸದೆ ಇರುವವನ ವಿಷಯವನ್ನು ಹೇಳಲಾಗುವದು. ಯಾವನು ಆತ್ಮಕಾಮನಾಗಿರುವದರಿಂದ ಆಪ್ತಕಾಮನಾಗಿರುವನೋ ಆದರಿಂದ ಇಚ್ಛೆಗಳೆಲ್ಲವೂ ಹೋಗಿಬಿಡುವದರಿಂದ ಅಕಾಮನೆನಿಸಿರುವನೋ ಅವನ ಪ್ರಾಣಗಳು ಮೇಲಕ್ಕೆ ಹೋಗುವದಿಲ್ಲ. ಅವನು ಈಗಲೂ ಬ್ರಹ್ಮವೇ ಆಗಿದ್ದು ಬ್ರಹ್ಮದಲ್ಲಿಯೇ ಸೇರಿಹೋಗುತ್ತಾನೆ. ಹೀಗೆ ಹೃದಯಾಶ್ರಿತವಾದ ಕಾಮಗಳೆಲ್ಲವೂ ಸಂಪೂರ್ಣವಾಗಿ ತೊಲಗಿಹೋದಾಗ ಮರ್ತ್ಯನು ಅಮೃತನಾಗುವನು, ಇಲ್ಲಿಯೇ ಬ್ರಹ್ಮವನ್ನು ಪಡೆದುಕೊಳ್ಳುವನು. ಪರೆಯನ್ನು ಬಿಟ್ಟ ಹಾವು ಮತ್ತೆ ಹತ್ತಿರವಿದ್ದರೂ ಆ ಪರೆಯಲ್ಲಿ ಹೇಗೆ ಅಭಿಮಾನವನ್ನು ಮಾಡಿಕೊಳ್ಳದೆ ಇರುವದೋ ಹಾಗೆಯೇ ಜ್ಞಾನಿಯೂ ಮುಕ್ತನಾಗಿ ನಿರಭಿಮಾನದಿಂದ ಬಿಟ್ಟ ಶರೀರವು ಸತ್ತಂತೆ ಇದ್ದುಕೊಂಡಿರುವದು ; ಆದರೆ ಅವನು ಮಾತ್ರ ಆ ಶರೀರದಲ್ಲಿಯೇ ಇದ್ದರೂ ಅಶರೀರನೇ. ಈಗ ಅವನು ಪ್ರಾಣಕ್ಕೂ ಪ್ರಾಣನಾಗಿರುವ ಪರಮಾತ್ಮನೇ, ಚೈತನ್ಯಜ್ಯೋತಿಯೇ.

೭–೨೧. ಹೀಗೆಂದು ಯಾಜ್ಞವಲ್ಕ್ಯನು ಹೇಳಲು ಜನಕನು ಈಗಲೂ 'ಸಾವಿರ ಗೋಗಳನ್ನು ಕೊಟ್ಟಿದ್ದೇನೆ' ಎಂದೇ ಹೇಳಿದನು ಯಾಜ್ಞವಲ್ಕ್ಯನು ಆತ್ಮಕಾಮನಿಗೆ ಮೋಕ್ಷವೇ ಫಲವೆಂಬುದನ್ನು ಕೆಲವು ಮಂತ್ರಗಳಿಂದ ಸಂಗ್ರಹಿಸಿ ಹೇಳಿದನು ಅವುಗಳ ಸಾರವಿದು : ಪರಮಸೂಕ್ಷ್ಮವೂ ಚಿರಂತನವಾದ ಜ್ಞಾನಮಾರ್ಗವು ಮುಕ್ತನ ಸ್ವಾನುಭವಕ್ಕೆ ಗೊತ್ತಾಗತಕ್ಕದ್ದು ; ಜ್ಞಾನಿಗಳಾದ ಮುಕ್ತರೆಲ್ಲರೂ ಆ ಮಾರ್ಗದಿಂದ ಬ್ರಹ್ಮವನ್ನು ಪಡೆದುಕೊಳ್ಳುತ್ತಾರೆ. ಶುಕ್ಲನೀಲಾದಿವರ್ಣಗಳ ನಾಡಿಗಳ ಮುಖದಿಂದ ಹೋಗುವ ಉಪಾಸಕರಿಗೆ ಈ ಮಾರ್ಗವು ದೊರಕದು , ಬ್ರಹ್ಮಜ್ಞಾನಿಗೊಬ್ಬನಿಗೇ ದೊರೆಯುತ್ತದೆ. ಅದರಿಂದ ಹೋಗುವ ಬ್ರಹ್ಮಜ್ಞಾನಿಯೇ ನಿಜವಾಗಿ ಪುಣ್ಯವನ್ನು ಮಾಡಿದವನು, ಅವನೇ ನಿಜವಾದ ಉಪಾಸಕನು. ಸಾಧ್ಯಸಾಧನರೂಪವಾದ ಅವಿದ್ಯೆಯನ್ನು ಎಂದರೆ ಕರ್ಮೋಪಾಸನೆಗಳನ್ನು ಅನುಸರಿಸುವವರಿಗೆ ಅಂಧಂತಮಸ್ಸೇ ಗತಿ ; ಉಪನಿಷತ್ತನ್ನು ಕೈಬಿಟ್ಟು ಬರಿಯ ವಿಧಿನಿಷೇಧಪರವಾದ ವೇದವೇ ನಿಜವಾದ ವೇದವೆಂದು ನಂಬುವವರಿಗೆ ಇನ್ನೂ ಹೆಚ್ಚಿನ ಅಂಧಂತಮಸ್ಸೇ ಗತಿ, ಆತ್ಮಜ್ಞಾನವಿಲ್ಲದ ಅಜ್ಞರಿಗೆಲ್ಲ ದುಃಖವೇ ಫಲ. ಈ ಆತ್ಮನೇ ನಾನು ಎಂಬ ಅನುಭವವನ್ನು ಹೊಂದಿರುವ ಪುರುಷನು ಏನನ್ನೂ ಬಯಸುವದಿಲ್ಲ , ಅವನು ಯಾವ ಕಾಮಕ್ಕಾಗಿಯೂ ಶರೀರಾಭಿಮಾನದಿಂದ ಸಂಸಾರದಲ್ಲಿ ತೊಳಲಬೇಕಾದದ್ದಿರುವದಿಲ್ಲ. ಯಾವನಿಗೆ ಈ ಸಂಸಾರಗಹನದಲ್ಲಿ ಪ್ರವಿಷ್ಟನಾಗಿರುವ ಆತ್ಮನೇ ಪರಮಾತ್ಮನೆಂಬ ಅರಿವು ಉಂಟಾಗಿರುವದೋ ಅವನೇ ಸರ್ವಕ್ಕೂ ಕರ್ತನು ; ಅವನು ಎಲ್ಲರಿಗೂ ಆತ್ಮನು, ಎಲ್ಲವೂ ಅವನಿಗೆ ಆತ್ಮವಾಗಿರುವದು. ಈ ಸಂಸಾರದಲ್ಲಿರುವಾಗಲೇ ಬ್ರಹ್ಮತತ್ತ್ವವನ್ನು ತಿಳಿದುಕೊಳ್ಳಬೇಕು , ಇಲ್ಲದಿದ್ದರೆ ಬಹಳ ನಷ್ಟವಾಗುವದು ; ಅದನ್ನು ತಿಳಿದವರೇ ಅಮೃತರಾಗುವರು, ಮಿಕ್ಕವರು ದುಃಖಭಾಜನರಾಗುವರು. ಯಾವಾಗ ಈ ಆತ್ಮನನ್ನೇ ಭೂತಭವ್ಯಕ್ಕೆ ಒಡೆಯನಾದ ದೇವನೆಂದು ಕಂಡುಕೊಳ್ಳುವನೋ ಆಗ ತನ್ನನ್ನು ಕಾಪಾಡಿಕೊಳ್ಳುವದಕ್ಕೆ ತವಕಿಸುವದಿಲ್ಲ, ಏನನ್ನೂ ನಿಂದಿಸುವದಿಲ್ಲ. ಯಾವದಕ್ಕಿಂತ ಬೇರೆಯಾದ ವಿಷಯದಲ್ಲಿಯೇ ಕಾಲವು ವ್ಯಾಪಾರಮಾಡುತ್ತಿರುವದೋ ಆ ಜ್ಯೋತಿಗಳಿಗೆಲ್ಲ ಜ್ಯೋತಿಯಾದ ಪರಮಾತ್ಮನನ್ನು ಆಯುಸ್ಸು ಎಂದು ದೇವತೆಗಳು ಉಪಾಸನೆಮಾಡುತ್ತಿರುವರು ; ಆದ್ದರಿಂದ ಆಯುಷ್ಕಾಮರಾದವರು ಹಾಗೆಂದು ಉಪಾಸನೆಮಾಡಬೇಕು. ಐದುಜನ ಪಂಚಜನರೂ ಅವ್ಯಾಕೃತಾಕಾಶವೂ ಯಾತರಮೇಲೆ ನಿಂತಿರುವವೋ ಆ ಆತ್ಮನೇ ಬ್ರಹ್ಮವೆಂದು ತಿಳಿದವನು ಅಮೃತನಾಗಿರುವನು ಬ್ರಹ್ಮವು ಪ್ರಾಣಕ್ಕೆ ಪ್ರಾಣವೂ ಚಕ್ಷುಸ್ಸಿಗೆ ಚಕ್ಷುಸ್ಸೂ

ಶ್ರೋತ್ರಕ್ಕೆ ಶ್ರೋತ್ರವೂ ಮನಸ್ಸಿಗೆ ಮನಸ್ಸೂ ಆಗಿರುವವೆಂದು ಯಾರು ಅರಿತಿರುವರೋ ಅವರೇ ಪುರಾತನವಾದ ಸರ್ವಕಾರಣವಾದ ಬ್ರಹ್ಮವನ್ನು ಅರಿತವರು. ಸಂಸ್ಕೃತವಾದ ಮನಸ್ಸಿನಿಂದಲೇ ಆ ಬ್ರಹ್ಮವನ್ನು ಅರಿತುಕೊಳ್ಳಬೇಕು. ಅದರಲ್ಲಿ ಒಂದಿಷ್ಟೂ ನಾನಾತ್ವವು ಇರುವದಿಲ್ಲ. ಯಾವನು ಅದರಲ್ಲಿ ನಾನಾತ್ವವಿರುವಂತೆ ಕಾಣುವನೋ ಅವನು ಸಾವಿನಮೇಲೆ ಸಾವನ್ನು ಪಡೆಯುತ್ತಿರುವನು. ಆ ಅಪ್ರಮೇಯವಾದ ಬ್ರಹ್ಮವನ್ನು ಏಕರಸವಾಗಿಯೇ ಕಂಡುಕೊಳ್ಳಬೇಕು, ಧರ್ಮಾಧರ್ಮಾದಿಕಲ್ಮಷವಿಲ್ಲದ್ದು. ಅವ್ಯಾಕೃತಾಕಾಶಕ್ಕಿಂತಲೂ ಸೂಕ್ಷ್ಮವಾದದ್ದು, ಜನ್ಮರಹಿತನಾದ ಮಹಾಂತನಾದ ನಾಶರಹಿತನಾದ ಆತ್ಮನು. ಅವನನ್ನೇ ಜಾಣನಾದವನು ಅರಿತುಕೊಂಡು ಪ್ರಜ್ಞಾಸಾಧನಗಳನ್ನು ಅಳವಡಿಸಿಕೊಳ್ಳಬೇಕು. ಅನಾತ್ಮಪ್ರತಿಪಾದಕವಾದ ಬಹಳ ಶಬ್ದಗಳನ್ನು ಚಿಂತಿಸಬಾರದು; ಏಕೆಂದರೆ ಅದು ವಾಗಿಂದ್ರಿಯಕ್ಕೆ ಆಯಾಸವನ್ನುಂಟುಮಾಡುತ್ತದೆ.

೨೨-೨೩. ಈ ಪ್ರಾಣಗಳ ನಡುವೆ ವಿಜ್ಞಾನಮಯನಾಗಿರುವ ಈ ಆತ್ಮನಿದ್ದಾನಲ್ಲ, ಅವನೇ ಮಹಾಂತನೂ ಅಜನೂ ಆದ ಆತ್ಮನು. ಇವನು ಸುಷುಪ್ತಿಯಲ್ಲಿ ತನ್ನ ಪರಮಾತ್ಮಸ್ವರೂಪದಲ್ಲಿಯೇ ಇರುತ್ತಿರುವನು. ಎಲ್ಲವನ್ನೂ ತನ್ನ ವಶದಲ್ಲಿಟ್ಟುಕೊಂಡಿರುವವನು, ಎಲ್ಲವನ್ನೂ ಆಳುವವನು, ಎಲ್ಲಕ್ಕೂ ಅಧಿಪತಿಯು. ಇವನು ಒಳ್ಳೆಯ ಕರ್ಮದಿಂದ ಹೆಚ್ಚುವದಿಲ್ಲ, ಕೆಟ್ಟ ಕರ್ಮದಿಂದ ಕುಂದುವದಿಲ್ಲ. ಇವನೇ ಸರ್ವೇಶ್ವರನು, ಇವನೇ ಪ್ರಾಣಿಗಳ ಅಧಿಪತಿಯು, ಇವನೇ ಭೂತಗಳನ್ನು ರಕ್ಷಿಸುವಾತನು, ಇವನೇ ಈ ಲೋಕಗಳು ಒಂದರೊಡನೊಂದು ಸಂಕರವಾಗದಂತೆ ತಡೆದಿಟ್ಟಿರುವ ಸೇತು.

ಅಧ್ಯಯನ, ಯಜ್ಞ, ದಾನ, ತಪಸ್ಸು– ಇವುಗಳಿಂದ ಈತನನ್ನು ತಿಳಿಯುವ ಇಚ್ಛೆಯನ್ನು ಸಂಪಾದಿಸಿಕೊಳ್ಳಬೇಕು. ಇವನನ್ನು ಅರಿತರೇ ಮುನಿಯಾಗುವನು. ಈ ಆತ್ಮಲೋಕವನ್ನು ಪಡೆಯಲಿಚ್ಛಿಸುವವರು ಪಾರಿವ್ರಾಜ್ಯವನ್ನು ಹೊಂದಬೇಕು; ಏಕೆಂದರೆ ಅರಿತವರು ಲೋಕತ್ರಯಸಾಧನವಾದ ಪುತ್ರಾದಿಗಳನ್ನು ಬಯಸುವದಿಲ್ಲ.

ಈ ಆತ್ಮನು ಕರ್ಮಕ್ಕೆ ಸಂಬದ್ಧನಲ್ಲ; ಏಕೆಂದರೆ ಇವನು ನೇತಿ ನೇತಿ ಎಂಬ ಸ್ವರೂಪದ ಆತ್ಮನು, ಅಗೃಹ್ಯನು, ಅಶೀರ್ಯನು, ಅಸಂಗನು, ಅಸಿತನು.

ಈ ಆತ್ಮನನ್ನರಿತುಕೊಂಡವನಿಗೆ 'ಪಾಪವನ್ನು ಮಾಡಿದೆನಲ್ಲ', 'ಪುಣ್ಯವನ್ನು ಮಾಡಿದೆನಲ್ಲ'– ಎಂಬ ಪಶ್ಚಾತ್ತಾಪವಾಗಲಿ ಹರ್ಷವಾಗಲಿ ಅಂಟುವದಿಲ್ಲ; ಇವನು ಈ ಎರಡನ್ನೂ ಮೀರುವನು. ಇವನನ್ನು ಮಾಡಿದ ಅಥವಾ ಮಾಡದೆ ಇರುವ ಕರ್ಮಗಳು ತಾಪಗೊಳಿಸುವದಿಲ್ಲ. ಈ ಅಭಿಪ್ರಾಯವನ್ನು ಒಂದು ಮಂತ್ರವು ತಿಳಿಸುತ್ತದೆ: ಇದು ಬ್ರಹ್ಮಜ್ಞಾನಿಯ ನಿತ್ಯಮಹಿಮೆಯು, ಅವನು ಕರ್ಮದಿಂದ ವೃದ್ಧಿಯಾಗುವದಿಲ್ಲ, ಕಡಿಮೆಯಾಗುವದೂ ಇಲ್ಲ. ಆ ಮಹಿಮಾರೂಪಪದವನ್ನು ಅರಿತುಕೊಂಡವನು ಕರ್ಮಲಿಪ್ತನಾಗನು.

೨೪. ಆದ್ದರಿಂದ ಹೀಗೆಂದರಿತವನು ಶಮ, ದಮ, ಉಪರತಿ, ತಿತಿಕ್ಷೆ, ಸಮಾಧಾನ– ಇವುಗಳಿಂದ ತನ್ನಲ್ಲಿಯೇ ಆತ್ಮನನ್ನು ಕಂಡುಕೊಳ್ಳಬೇಕು, ಸರ್ವನನ್ನೂ ಆತ್ಮನಲ್ಲಿ ಕಂಡುಕೊಳ್ಳಬೇಕು.

ಹೀಗೆಂದರಿತವನಿಗೆ ಪುಣ್ಯಪಾಪಗಳು ತಟ್ಟುವದಿಲ್ಲ. ಇವನು ಅವನ್ನು ಮೀರಿರುತ್ತಾನೆ: ಪಾಪವಿಲ್ಲದವನೂ ನಿಷ್ಕಾಮನೂ ನಿಸ್ಸಂಶಯನೂ ಮುಖ್ಯಾರ್ಥದಲ್ಲಿ ಬ್ರಾಹ್ಮಣನೂ ಆಗಿರುತ್ತಾನೆ.

ಸಮ್ರಾಜನೆ, ಇದೇ ನಿಜವಾದ ಬ್ರಹ್ಮವೆಂಬ ಲೋಕವು. ಇದನ್ನು ನೀನು ಈಗ ಪಡೆದಿರುವೆ" ಎಂದು ಯಾಜ್ಞವಲ್ಕ್ಯನು ನುಡಿದನು.

ಆಗ ಜನಕನು "ನಿಜ, ಪಡೆದೆನು. ಈ ವಿದ್ಯೆಗಾಗಿ ತಮಗೆ ವಿದೇಹರಾಜ್ಯವನ್ನೇ ಕೊಟ್ಟಿರುವೆನು, ನಾನೂ ತಮ್ಮ ದಾಸನಾಗಿರುವೆನು" ಎಂದನು.

೨೫. ಈ ಸಂಸಾರ್ಯಾತ್ಮನೇ ಮಹಾಂತನೂ ಅಜನೂ ಆದ ಪರಮಾತ್ಮನು. ಇವನು ಅನ್ನಾದನು, ವಸುದಾನನು ; ಹೀಗೆಂದು ಉಪಾಸನೆಮಾಡಿದವನು ಅನ್ನಾದನಾಗುವನು, ಇಷ್ಟವಾದ ಧನವನ್ನು ಪಡೆಯುವನು. ಈ ಸಂಸಾರ್ಯಾತ್ಮನೇ ನಿಜವಾಗಿ ಮಹಾಂತನೂ ಅಜನೂ ಆದ ಆತ್ಮನು. ಇವನು ಅಜರನು, ಅಮರನು, ಅಮೃತನು, ಅಭಯರೂಪನು, ಬ್ರಹ್ಮವು. ಬ್ರಹ್ಮವು ಅಭಯವಷ್ಟೆ ? ಆದ್ದರಿಂದ ಅದನ್ನು ಅರಿತುಕೊಂಡವನು ಅಭಯಬ್ರಹ್ಮವೇ ಆಗುವನು.

---

# ನಾಲ್ಕನೆಯ ಅಧ್ಯಾಯ-ಐದನೆಯ ಬ್ರಾಹ್ಮಣ

## (ಕಾಂಡದ್ವಯಾರ್ಥದ ಉಪಸಂಹಾರ)

## ಈ ಬ್ರಾಹ್ಮಣದ ಸಂಬಂಧ

(ಭಾಷ್ಯ)

೩೨೨. ಆಗಮಪ್ರಧಾನೇನ ಮಧುಕಾಣ್ಡೇನ ಬ್ರಹ್ಮತತ್ತ್ವಂ ನಿರ್ಧಾರಿತಮ್ । ಪುನಸ್ತಸ್ಯೈವ ಉಪಪತ್ತಿಪ್ರಧಾನೇನ ಯಾಜ್ಞವಲ್ಕೀಯೇನ ಕಾಣ್ಡೇನ ಪಕ್ಷಪ್ರತಿಪಕ್ಷಪರಿಗ್ರಹಂ ಕೃತ್ವಾ ವಿಗೃಹ್ಯವಾದೇನ ವಿಚಾರಿತಮ್। ಶಿಷ್ಯಾಚಾರ್ಯಸಂಬನ್ಧೇನ ಚ ಷಷ್ಠೇ ಪ್ರಶ್ನಪ್ರತಿವಚನನ್ಯಾಯೇನ ಸವಿಸ್ತರಂ ವಿಚಾರ್ಯ ಉಪಸಂಹೃತಮ್, ಅಥೇದಾನೀಂ ನಿಗಮನಸ್ಥಾನೀಯಂ ಮೈತ್ರೇಯೀಬ್ರಾಹ್ಮಣಮ್ ಆರಭ್ಯತೇ । ಅಯಂ ಚ ನ್ಯಾಯಃ ವಾಕ್ಯಕೋವಿದೈಃ ಪರಿಗೃಹೀತಃ "ಹೇತ್ವಪದೇಶಾತ್ ಪ್ರತಿಜ್ಞಾಯಾಃ ಪುನರ್ವಚನಂ ನಿಗಮನಮ್" (ನ್ಯಾ. ಸೂ. ೧-೧-೩೯) ಇತಿ। ಅಥವಾ ಆಗಮಪ್ರಧಾನೇನ ಮಧುಕಾಣ್ಡೇನ ಯತ್ ಅಮೃತತ್ವಸಾಧನಂ ಸಸಂನ್ಯಾಸಮ್ ಆತ್ಮಜ್ಞಾನಮ್ ಅಭಿಹಿತಮ್, ತದೇವ ತರ್ಕೇಣಾಪಿ ಅಮೃತತ್ವಸಾಧನಂ ಸಸಂನ್ಯಾಸಮ್ ಆತ್ಮಜ್ಞಾನಮ್ ಅಧಿಗಮ್ಯತೇ । ತರ್ಕಪ್ರಧಾನಂ ಹಿ ಯಾಜ್ಞವಲ್ಕೀಯಂ ಕಾಣ್ಡಮ್। ತಸ್ಮಾತ್ ಶಾಸ್ತ್ರತರ್ಕಾಭ್ಯಾಂ ನಿಶ್ಚಿತಮೇತತ್ ಯದೇತತ್ ಆತ್ಮಜ್ಞಾನಂ ಸಸಂನ್ಯಾಸಮ್ ಅಮೃತತ್ವಸಾಧನಮ್ ಇತಿ। ತಸ್ಮಾತ್ ಶಾಸ್ತ್ರಶ್ರದ್ಧಾವದ್ಭಿಃ ಅಮೃತತ್ವಪ್ರತಿಪಿತ್ಸುಭಿಃ ಏತತ್ ಪ್ರತಿಪತ್ತವ್ಯಮ್ ಇತಿ।[1] ಆಗಮೋಪಪತ್ತಿಭ್ಯಾಂ ಹಿ ನಿಶ್ಚಿತೋಽರ್ಥಃ ಶ್ರದ್ಧೇಯೋ ಭವತಿ ಅವ್ಯಭಿಚಾರಾತ್ ಇತಿ। ಅಕ್ಷರಾಣಾಂ ತು ಚತುರ್ಥೇ ಯಥಾ ವ್ಯಾಖ್ಯಾತೋಽರ್ಥಃ ತಥಾ ಪ್ರತಿಪತ್ತವ್ಯೋಽತ್ರಾಪಿ। ಯಾನಿ ಅಕ್ಷರಾಣಿ ಅವ್ಯಾಖ್ಯಾತಾನಿ ತಾನಿ ವ್ಯಾಖ್ಯಾಸ್ಯಾಮಃ ॥

(ಭಾಷ್ಯಾರ್ಥ)

ಆಗಮಪ್ರಧಾನವಾದ[2] ಮಧುಕಾಂಡವಲ್ಲಿ ಬ್ರಹ್ಮತತ್ತ್ವವನ್ನು ನಿರ್ಣಯಿಸಲಾಗಿದೆ. ಮತ್ತೆ ಅದನ್ನೇ ಉಪಪತ್ತಿಪ್ರಧಾನವಾದ[3] ಯಾಜ್ಞವಲ್ಕೀಯ

---

1. ಈ ಇತಿಯು ಇಲ್ಲದಿದ್ದರೂ ಸಾಗುತ್ತಿತ್ತು.

2. ಉಪದೇಶಪ್ರಧಾನವಾದ ಎಂದರ್ಥ, ಇದರಲ್ಲಿಯೂ ಯುಕ್ತಿಗಳಿದ್ದರೂ ಯುಕ್ತಿಗೆ ಪ್ರಾಮುಖ್ಯವಿಲ್ಲ.

3. ಯುಕ್ತಿಪ್ರಧಾನವಾದ ಎಂದರ್ಥ. ಇಲ್ಲಿ ಯುಕ್ತಿಯನ್ನು ಶ್ರುತಿಯೇ ತಿಳಿಸಿಕೊಟ್ಟಿದೆಯೆಂದು ತಿಳಿಯಬೇಕು; ಇದರಿಂದ ಆಗಮದಿಂದ ತಿಳಿಸಿದರ್ಥವು ವಿಶದವಾಗುವದು.

ಕಾಂಡದಲ್ಲಿ ಪಕ್ಷಪ್ರತಿಪಕ್ಷಗಳನ್ನು ಇಟ್ಟುಕೊಂಡು ವಿಗೃಹ್ಯವಾದದಿಂದ[1] ವಿಚಾರ ಮಾಡಲಾಯಿತು ; ಶಿಷ್ಯಾಚಾರ್ಯರ ಸಂಬಂಧದಿಂದ ಆರನೆಯ ಅಧ್ಯಾಯ ದಲ್ಲಿ ವಿಸ್ತಾರವಾಗಿ ಪ್ರಶ್ನಪ್ರತಿವಚನನ್ಯಾಯದಿಂದ[2] ವಿಚಾರಮಾಡಿ ಉಪ ಸಂಹರಿಸಲಾಯಿತು. ಇನ್ನು ಈಗ **ನಿಗಮನ**ದಂತಿರುವ ಮೈತ್ರೇಯೀ ಬ್ರಾಹ್ಮಣವನ್ನು ಆರಂಭಿಸಲಾಗಿದೆ. ಈ ನ್ಯಾಯವು ವಾಕ್ಯವನ್ನು ಬಲ್ಲವ ರಿಂದ "ಹೇತುವನ್ನು ತಿಳಿಸಿದಬಳಿಕ ಪ್ರತಿಜ್ಞೆಯನ್ನು ಮತ್ತೆ ಹೇಳುವದು ನಿಗಮ ನವು" (ನ್ಯಾ. ಸೂ. ೧–೧–೩೦) ಎಂಬಲ್ಲಿ ಸ್ವೀಕೃತವಾಗಿರುತ್ತದೆ.[3]

ಅಥವಾ[4] ಆಗಮಪ್ರಧಾನವಾದ ಮಧುಕಾಂಡದಲ್ಲಿ ಅಮೃತತ್ವಕ್ಕೆ ಸಾಧನ ವಾಗಿರುವ ಸಂನ್ಯಾಸಸಹಿತವಾದ ಆತ್ಮಜ್ಞಾನವನ್ನು ಹೇಳಿತ್ತಷ್ಟೆ. ತರ್ಕದಿಂದಲೂ ಅದೇ ಅಮೃತತ್ವಸಾಧನವಾಗಿರುವ ಸಂನ್ಯಾಸಹಿತವಾಗಿರುವ ಆತ್ಮಜ್ಞಾನವನ್ನೇ ತಿಳಿದುಕೊಂಡದ್ದಾಗಿದೆ. ಏಕೆಂದರೆ ಯಾಜ್ಞವಲ್ಕೀಯಕಾಂಡವು ತರ್ಕಪ್ರಧಾನ ವಾಗಿರುತ್ತದೆ. ಆದ್ದರಿಂದ ಸಂನ್ಯಾಸಸಹಿತವಾದ ಈ ಆತ್ಮಜ್ಞಾನವಿದೆಯಲ್ಲ, (ಇದೇ) ಅಮೃತತ್ವಕ್ಕೆ ಸಾಧನವು ಎಂದು ಶಾಸ್ತ್ರತರ್ಕಗಳಿಂದ ಸಿದ್ಧವಾಯಿ

---

1. ಸೋಲಿಸುವ ವಾದ, ಮೂರನೆಯ ಅಧ್ಯಾಯದಲ್ಲಿ ಯಾಜ್ಞವಲ್ಕ್ಯನೊಡನೆ ಬ್ರಾಹ್ಮಣರು ಸೋಲುಗೆಲವುಗಳನ್ನು ಪ್ರಧಾನವಾಗಿಟ್ಟುಕೊಂಡು ಚರ್ಚಿಸಿದರು ಎಂದು ಶ್ರುತಿಯಲ್ಲಿ ಹೇಳಿದೆ. ಇದನ್ನು ತಾರ್ಕಿಕರು ಜಲ್ಪನ್ಯಾಯವೆಂದು ಕರೆಯುತ್ತಾರೆ. ಆದರೆ ಇಲ್ಲಿ ಚರ್ಚೆಗೆ ತರ್ಕವನ್ನು ತೋರಿಸುವದೇ ನಿಜವಾದ ಉದ್ದೇಶವು. ಯಾಜ್ಞವಲ್ಕ್ಯಾದಿ ಗಳು ವಿದ್ಯಾಗರ್ವದಿಂದ ಚರ್ಚಿಸಿದರೆಂದೇನೂ ಅಭಿಪ್ರಾಯವಿಲ್ಲ.

2. ತತ್ತ್ವವನ್ನು ನಿರ್ಣಯಿಸುವ ವಾದಕಥಾರೂಪದಿಂದ ಎಂದರ್ಥ. ಇಲ್ಲಿಯೂ ಯುಕ್ತಿಗಳೇ ಇರುತ್ತವೆಯಾದರೂ ಶಿಷ್ಯಾಚಾರ್ಯರ ಸಂವಾದರೂಪದಲ್ಲಿರುವದು ವಿಶೇಷವು.

3 ಪದಾರ್ಥವಾದ ಅನುಮಾನವನ್ನು ತಿಳಿಸುವ ವಾಕ್ಯದಲ್ಲಿ ಐದು ಅವಯವಗಳಿರು ತ್ತವೆ ; ಪ್ರತಿಜ್ಞಾ, ಹೇತು, ದೃಷ್ಟಾಂತ, ಉಪನಯ, ನಿಗಮನ –ಎಂದು ಅವುಗಳ ಹೆಸರು. ಇಲ್ಲಿ ನಿಗಮನದಂತೆ ಈ ಬ್ರಾಹ್ಮಣವಿದೆ ಎಂದು ಹೇಳಿದೆಯಾದರೂ ಇದು ಅನುಮಾನ ವಾಕ್ಯದ ಅವಯವವಲ್ಲವೆಂಬುದನ್ನು ಹೇಳಬೇಕಾದದ್ದೇ ಇಲ್ಲ.

4. ಮೊದಲನೆಯ ವ್ಯಾಖ್ಯಾನದಂತೆ ಕಾಂಡಗಳೆರಡರಲ್ಲಿಯೂ ನಿರ್ಣಯವಾಗಿ ರುವ ಬ್ರಹ್ಮತತ್ತ್ವವನ್ನು ಇಲ್ಲಿ ಉಪಸಂಹಾರಮಾಡಿದೆ ; ಈ ಎರಡನೆಯ ವ್ಯಾಖ್ಯಾನದಂತೆ ಕಾಂಡಗಳೆರಡರಲ್ಲಿ ಸಂನ್ಯಾಸಸಹಿತವಾದ ಆತ್ಮಜ್ಞಾನವೇಅಮೃತತ್ವಕ್ಕೆ ಸಾಧನವೆಂದು ನಿರ್ಣ ಯಿಸಿದ್ದನ್ನು ಇಲ್ಲಿ ಉಪಸಂಹಾರಮಾಡಿದೆ. ಈ ಎರಡು ವ್ಯಾಖ್ಯಾನಗಳಲ್ಲಿ ವಿಕಲ್ಪವಿಲ್ಲ ; ಆತ್ಮತತ್ತ್ವ, ಅದರ ಜ್ಞಾನ–ಎರಡೂ ಸೇರಿಕೊಂಡೇ ಕಾಂಡದ್ವಯದಲ್ಲಿ ಪ್ರತಿಪಾದಿತವಾಗಿವೆ.

5 ಇಲ್ಲಿ ಶಾಸ್ತ್ರವೆಂದರೆ ಶ್ರುತಿಯೆಂದು ಅರ್ಥವಲ್ಲ ; ಆಗಮ, ಎಂದರೆ ಉಪದೇಶ ಕ್ರಮ, ಎಂದೇ ಅರ್ಥ. ಆಗಮೋಪಪತ್ತಿಗಳ ವಿಷಯಕ್ಕೆ ಪೀಠಿಕೆಯನ್ನು ನೋಡಿ.

ತಪ್ಪೆ, ಆದ್ದರಿಂದ ಅಮೃತತ್ವವನ್ನು ಪಡೆದುಕೊಳ್ಳಬೇಕೆನ್ನುವವರಾಗಿ ಶಾಸ್ತ್ರದಲ್ಲಿ ಶ್ರದ್ಧಾವಂತರಾಗಿರುವವರು ಈ ಜ್ಞಾನವನ್ನು ಪಡೆದುಕೊಳ್ಳಬೇಕು; ಆಗಮೋಪಪತ್ತಿಗಳಿಂದ ನಿಶ್ಚಿತವಾಗಿರುವ ವಿಷಯವು ಮಾರ್ಪಡದೆ ಇರುವದರಿಂದ ನಂಬತಕ್ಕದ್ದಲ್ಲವೆ ?-ಎಂದು (ಉಪಸಂಹಾರಮಾಡಿರುತ್ತದೆ).

ಮಾತುಗಳಿಗೆ ನಾಲ್ಕನೆಯ ಅಧ್ಯಾಯದಲ್ಲಿ[1] ವ್ಯಾಖ್ಯಾನಮಾಡಿರುವಂತೆಯೇ ಅರ್ಥವನ್ನು ಇಲ್ಲಿಯೂ ಗ್ರಹಿಸಬೇಕು. ಅಲ್ಲಿ ವ್ಯಾಖ್ಯಾನಮಾಡದಿರುವ ಮಾತುಗಳಿರುವವಲ್ಲ, ಅವನ್ನು ಇಲ್ಲಿ ಮಾತ್ರ ವಿವರಿಸುವೆವು[2].

## ಪಾರಿವ್ರಾಜ್ಯಕ್ಕೆ ಸಿದ್ಧತೆ

(ಉಪನಿಷತ್ತು)

**ಅಥ ಹ ಯಾಜ್ಞವಲ್ಕ್ಯಸ್ಯ ದ್ವೇ ಭಾರ್ಯೇ ಬಭೂವತುರ್ಮೈತ್ರೇಯೀ ಚ ಕಾತ್ಯಾಯನೀ ಚ ತಯೋರ್ಹ ಮೈತ್ರೇಯೀ ಬ್ರಹ್ಮವಾದಿನೀ ಬಭೂವ ಸ್ತ್ರೀಪ್ರಜ್ಞೈವ ತರ್ಹಿ ಕಾತ್ಯಾಯನ್ಯಥ ಹ ಯಾಜ್ಞವಲ್ಕ್ಯೋಽನ್ಯದ್ವೃತ್ತಮುಪಾಕರಿಷ್ಯನ್ ॥ ೧ ॥**

**ಮೈತ್ರೇಯೀತಿ ಹೋವಾಚ ಯಾಜ್ಞವಲ್ಕ್ಯಃ ಪ್ರವ್ರಜಿಷ್ಯನ್ ವಾ ಅರೇಽಹಮಸ್ಮಾತ್ ಸ್ಥಾನಾದಸ್ಮಿ ಹನ್ತ ತೇಽನಯಾ ಕಾತ್ಯಾಯನ್ಯಾಽನ್ತಂ ಕರವಾಣೀತಿ ॥ ೨ ॥**

೧. ಇನ್ನು (ಹೇಳುತ್ತೇವೆ). ಯಾಜ್ಞವಲ್ಕ್ಯನಿಗೆ ಮೈತ್ರೇಯಿಯೂ ಕಾತ್ಯಾಯನಿಯೂ (ಎಂದು) ಇಬ್ಬರು ಹೆಂಡಿರಿದ್ದರು. ಅವರಲ್ಲಿ ಮೈತ್ರೇಯಿಯು ಬ್ರಹ್ಮವಾದಿನಿಯಾಗಿದ್ದಳು, ಆಗ ಕಾತ್ಯಾ

---

1. ಈ ಭಾಷ್ಯಭಾಗದಲ್ಲಿ ಹೇಳಿರುವ ಅಧ್ಯಾಯಸಂಖ್ಯೆಗಳೆಲ್ಲ ಪ್ರವರ್ಗ್ಯವನ್ನೂ ಸೇರಿಸಿಕೊಂಡು ಎಣಿಸಿದವುಗಳು. ಆದ್ದರಿಂದ ಉಪನಿಷತ್ತಿನ ಒಂದನೆಯ ಅಧ್ಯಾಯವು ಈ ಕ್ರಮದಲ್ಲಿ ಮೂರನೆಯ ಅಧ್ಯಾಯವು; ಎರಡನೆಯ ಅಧ್ಯಾಯವು ಈ ಕ್ರಮದಲ್ಲಿ ನಾಲ್ಕನೆಯ ಅಧ್ಯಾಯವು.

2. ಎರಡನೆಯ ಅಧ್ಯಾಯದಲ್ಲಿಯೂ ನಾಲ್ಕನೆಯ ಅಧ್ಯಾಯದಲ್ಲಿಯೂ ಅದೇ ಮೈತ್ರೇಯೀಬ್ರಾಹ್ಮಣವಿದೆ ಎರಡನೆಯ ಅಧ್ಯಾಯದಲ್ಲಿ ಜ್ಞಾನಾಂಗವಾದ ಸಂನ್ಯಾಸವನ್ನು ವಿಧಿಸುವದಕ್ಕೆ ಕಥೆ ಬಂದಿದೆ ಎಂದು ಭಾಷ್ಯಕಾರರು ಸಂಬಂಧವನ್ನು ತಿಳಿಸಿರುತ್ತಾರೆ; ಆಗಮೋಪಪತ್ತಿಗಳಿಂದ ನಿಶ್ಚಿತವಾದ ಅರ್ಥವನ್ನು ಉಪಸಂಹಾರಮಾಡುವದಕ್ಕೆಂದು ಇಲ್ಲಿ ಹೇಳಿರುತ್ತದೆ- ಎಂದಿರುತ್ತಾರೆ. ಆದ್ದರಿಂದ ಪುನರುಕ್ತಿದೋಷವಿಲ್ಲವೆಂದಂತೆ ಆಯಿತು. ಆದರೆ ಈ ಎರಡು ಕಡೆಗಳಲ್ಲಿ ಪಾಠಾಂತರಗಳಿರುವದೇಕೆಂಬುದಕ್ಕೆ ಕಾರಣವನ್ನು ಆಚಾರ್ಯರು ಬರೆದಿಲ್ಲ. ವಿದ್ವಾಂಸರೇ ನಿರ್ಣಯಿಸಬೇಕಾಗಿದೆ. ಮಾಧ್ಯಂದಿನೋಪನಿಷತ್ತಿನಲ್ಲಿಯೂ ಹೀಗೆಯೇ ಪಾಠಾಂತರಗಳಿವೆ.

ಯನಿಯು ಸ್ತ್ರೀಪ್ರಜ್ಞಳೇ ಆಗಿದ್ದಳು. ಆಗ ಯಾಜ್ಞವಲ್ಕ್ಯನು ಮತ್ತೊಂದು ವೃತ್ತವನ್ನು ಪ್ರಾರಂಭಿಸುವವನಾಗಿ–

೨. ಯಾಜ್ಞವಲ್ಕ್ಯನು "ಎಲೆ ಮೈತ್ರೇಯಿ, ನಾನು ಈ ಸ್ಥಾನದಿಂದ ಹೊರಟುಹೋಗುವವನಿದ್ದೇನೆ. ನಿನಗೂ ಈ ಕಾತ್ಯಾಯಿನಿಗೂ ಅಂತವನ್ನು ಮಾಡುವೆನು!" ಎಂದನು.

## ಯಾಜ್ಞವಲ್ಕ್ಯನು ಹೊರಡುವದಕ್ಕೆ ಅನುವಾದದ್ದು

(ಭಾಷ್ಯ)

೧-೨. ಅಥ ಇತಿ ಹೇತೂಪದೇಶಾನನ್ತರ್ಯಪ್ರದರ್ಶನಾರ್ಥಃ। ಹೇತುಪ್ರಧಾನಾನಿ ಹಿ ವಾಕ್ಯಾನಿ ಅತೀತಾನಿ। ತದನನ್ತರಮ್ ಆಗಮಪ್ರಧಾನೇನ ಪ್ರತಿಜ್ಞಾತೋಽರ್ಥೋ ನಿಗಮ್ಯತೇ ಮೈತ್ರೇಯೀಬ್ರಾಹ್ಮಣೇನ। ಹಶಬ್ದೋ ವೃತ್ತಾವದ್ಯೋತಕಃ। ಯಾಜ್ಞವಲ್ಕ್ಯಸ್ಯ ಋಷೇಃ ಕಿಲ ದ್ವೇ ಭಾರ್ಯೇ ಪತ್ನ್ಯೌ ಬಭೂವತುಃ ಆಸ್ತಾಮ್। ಮೈತ್ರೇಯೀ ಚ ನಾಮತ, ಏಕಾ, ಅಪರಾ ಕಾತ್ಯಾಯನೀ ನಾಮತಃ। ತಯೋಃ ಭಾರ್ಯಯೋಃ ಮೈತ್ರೇಯೀ ಹ ಕಿಲ ಬ್ರಹ್ಮವಾದಿನೀ ಬ್ರಹ್ಮವದನಶೀಲಾ ಬಭೂವ ಆಸೀತ್। ಸ್ತ್ರೀಪ್ರಜ್ಞಾ ಸ್ತ್ರಿಯಾಂ ಯಾ ಉಚಿತಾ ಸಾ ಸ್ತ್ರೀಪ್ರಜ್ಞಾ। ಸೈವ ಯಸ್ಯಾಃ ಪ್ರಜ್ಞಾ ಗೃಹಪ್ರಯೋಜನಾನ್ವೇಷಣಾಲಕ್ಷಣಾ ಸಾ ಸ್ತ್ರೀಪ್ರಜ್ಞೈವ ತರ್ಹಿ ತಸ್ಮಿನ್ ಕಾಲೇ ಆಸೀತ್ ಕಾತ್ಯಾಯನೀ। ಅಥ ಏವಂ ಸತಿ ಹ ಕಿಲ ಯಾಜ್ಞವಲ್ಕ್ಯಃ ಅನ್ಯತ್ ಪೂರ್ವಸ್ಮಾತ್ ಗಾರ್ಹಸ್ಥ್ಯಲಕ್ಷಣಾತ್ ವೃತ್ತಾತ್ ಪಾರಿವ್ರಾಜ್ಯಲಕ್ಷಣಂ ವೃತ್ತಮ್ ಉಪಾಕರಿಷ್ಯನ್ ಉಪಾಚಿಕೀರ್ಷುಃ ಸನ್– ॥

(ಭಾಷ್ಯಾರ್ಥ)

(ಅಥ) ಇನ್ನು ಎಂಬುದು ಹೇತುವನ್ನು ಉಪದೇಶಮಾಡಿದ ಬಳಿಕ ಎಂಬುದನ್ನು ತಿಳಿಸುವದಕ್ಕೆ. ಹಿಂದಿನ ವಾಕ್ಯಗಳು[1] ಹೇತುಪ್ರಧಾನವಾದವುಗಳಷ್ಟೆ[1], ಅವುಗಳಾದ ಬಳಿಕ ಆಗಮಪ್ರಧಾನವಾದ[2] (ಈ) ಮೈತ್ರೇಯೀಬ್ರಾಹ್ಮಣದಿಂದ (ಮೊದಲು) ಪ್ರತಿಜ್ಞೆಮಾಡಿದ್ದ ಅರ್ಥವನ್ನು ಉಪಸಂಹಾರಮಾಡಲಾಗುತ್ತದೆ (ಎಂದರ್ಥ).

---

1. ಹಿಂದಿನ ಬ್ರಾಹ್ಮಣಗಳ ವಾಕ್ಯಗಳಲ್ಲಿ ಹೇತುವೇ ಮುಖ್ಯ, ಆಗಮವೂ ಇದೆ.
2. ಈ ಬ್ರಾಹ್ಮಣದಲ್ಲಿಯೂ ಹೇತುವಿದೆ ಎಂಬಿದನ್ನು ಈ ವಿಶೇಷಣವು ತಿಳಿಸುತ್ತದೆ.

ಹ[1] (ಅಂತೆ) ಎಂಬ (ಮೂಲದಲ್ಲಿರುವ) ಶಬ್ದವು ಹಿಂದೆ (ಆಯಿತು) ಎಂಬುದನ್ನು ತಿಳಿಸುತ್ತದೆ. ಯಾಜ್ಞವಲ್ಕ್ಯಋಷಿಗೆ ಇಬ್ಬರು ಹೆಂಡಿರು (ಬಭೂವತುಃ= ಆಸ್ತಾಮ್) ಇದ್ದರಂತೆ. ಒಬ್ಬಳಿಗೆ ಮೈತ್ರೇಯಿ ಎಂದು ಹೆಸರು; ಇನ್ನೊಬ್ಬಳಿಗೆ ಕಾತ್ಯಾಯನಿ ಎಂದು ಹೆಸರು. ಆ ಹೆಂಡಿರೊಳಗೆ ಮೈತ್ರೇಯಿಯು (ಹ= ಕಿಲ) ಬ್ರಹ್ಮವಾದಿನಿಯಾಗಿ ಬ್ರಹ್ಮವನ್ನು (ಕುರಿತು) ವಾದಮಾಡುವ ಸ್ವಭಾವದವಳು[2] (ಬಭೂವ= ಆಸೀತ್) ಆಗಿದ್ದಳು. ಆಗ ಆ ಕಾಲದಲ್ಲಿ[3] ಕಾತ್ಯಾಯನಿಯು ಸ್ತ್ರೀಪ್ರಜ್ಞಳೇ- ಹೆಂಗಸಿಗೆ ಉಚಿತವಾದ (ಪ್ರಜ್ಞೆ)ಯಿದೆಯಲ್ಲ, ಅದು ಸ್ತ್ರೀಪ್ರಜ್ಞೆಯು; ಆ ಪ್ರಜ್ಞೆಯೇ ಮನೆಗೆ ಬೇಕಾದದ್ದನ್ನು ನೋಡಿಕೊಳ್ಳುವ ರೂಪದ (ಪ್ರಜ್ಞೆಯೇ)[4] ಉಳ್ಳವಳಾದ್ದರಿಂದ ಸ್ತ್ರೀಪ್ರಜ್ಞಳೇ- ಆಗಿದ್ದಳು. ಆಗ ಹೀಗಿರುವಲ್ಲಿ (ಹ= ಕಿಲ) ಯಾಜ್ಞವಲ್ಕ್ಯನು ಹಿಂದೆ (ತಾನು ಅವಲಂಬಿಸಿದ್ದ) ಗಾರ್ಹಸ್ಥ್ಯವೆಂಬ ವೃತ್ತಿಗಿಂತ ಬೇರೆಯಾದ ಪಾರಿವ್ರಾಜ್ಯವೆಂಬ[5] ವೃತ್ತಿಯನ್ನು ಪ್ರಾರಂಭಿಸುವವನಾಗಿ ಪ್ರಾರಂಭಿಸಲಿಚ್ಛಿಸಿ-

## ಮೈತ್ರೇಯಿಗೂ ಕಾತ್ಯಾಯಿನಿಗೂ ಪಾಲುಮಾಡಲೆಳಸಿದ್ದು

(ಭಾಷ್ಯ)

೩೨೪. ಹೇ ಮೈತ್ರೇಯಿ ಇತಿ ಜ್ಯೇಷ್ಠಾಂ ಭಾರ್ಯಾಮ್ ಆಮನ್ತ್ರಯಾ ಮಾಸ। ಆಮನ್ತ್ರ್ಯ ಚ ಉವಾಚ ಹ ಪ್ರವ್ರಜಿಷ್ಯನ್ ಪಾರಿವ್ರಾಜ್ಯಂ ಕರಿಷ್ಯನ್ ವೈ ಅರೇ ಮೈತ್ರೇಯಿ ಅಸ್ಮಾತ್ ಸ್ಥಾನಾತ್ ಗಾರ್ಹಸ್ಥ್ಯಾತ್ ಅಹಮ್ ಅಸ್ಮಿ ಭವಾಮಿ। ಮೈತ್ರೇಯಿ, ಅನುಜಾನೀಹಿ ಮಾಂ ಹನ್ತ ಇಚ್ಛಸಿ ಯದಿ ತೇ ಅನಯಾ ಕಾತ್ಯಾಯನ್ಯಾ ಅನ್ತಂ ಕರವಾಣಿ ಇತ್ಯಾದಿ ವ್ಯಾಖ್ಯಾತಮ್ ॥

---

1. ಈ ಶಬ್ದವನ್ನು ಬಹಳ ಕಡೆಗಳಲ್ಲಿ ನಾವು ಕನ್ನಡಿಸಿಲ್ಲ, ಹಿಂದೆ ನಡೆದದ್ದನ್ನು ತಿಳಿಸುವದಕ್ಕೆ ಸಂಸ್ಕೃತದಲ್ಲಿ ಆಗಾಗ್ಗೆ ಬರುತ್ತಲೇ ಇರುತ್ತದೆ. ಅದರಲ್ಲಿಯೂ ವೇದದಲ್ಲಿಯೂ ಪುರಾಣಗಳಲ್ಲಿಯೂ ಹೆಚ್ಚಾಗಿ ಬರುತ್ತದೆ.

2. ತತ್ತ್ವಾರ್ಥವಿಚಾರವನ್ನು ಮಾಡುವ ಸ್ವಭಾವದವಳು ಎಂದರ್ಥ.

3. ಮುಂದೆ ಅವಳೂ ಬ್ರಹ್ಮವಾದಿನಿಯಾಗಿರಬಹುದೆಂಬುದನ್ನು ಈ ವಿಶೇಷಣವು ಸೂಚಿಸುತ್ತದೆ.

4. ಸ್ತ್ರೀಯರಿಗೆ ಧರ್ಮವು ಗೃಹಿಣಿಯಾಗಿರುವದೇ, ಅದರಿಂದ ಚಿತ್ತಶುದ್ಧಿಯಾದವರು ಬ್ರಹ್ಮವಾದಿನಿಯರೂ ಆಗಬಹುದು. ವೈದಿಕ ಆರ್ಯರು ಸ್ತ್ರೀಯರನ್ನು ಸಾಮಾನ್ಯವಾಗಿ ಹಿಂದುಳಿಸಿಟ್ಟಿದ್ದರೆಂಬ ಅರ್ಥವನ್ನು ಇದರಿಂದ ತೆಗೆಯುವವರ ಕುಕಲ್ಪನೆಗೆ ಇಲ್ಲಿ ಅವಕಾಶವಿಲ್ಲ.

5. ಇನ್ನೊಂದು ವೃತ್ತಿ ಎಂದರೆ ಪಾರಿವ್ರಾಜ್ಯವೇ ಎಂಬುದು ವಾಕ್ಯಶೇಷದಿಂದ ತಿಳಿದುಬರುತ್ತದೆ.

(ಭಾಷ್ಯಾರ್ಥ)

ಎಲೆ ಮೈತ್ರೇಯಿ! ಎಂದು ಹಿರಿಯ[1] ಹೆಂಡತಿಯನ್ನು ಕರೆದನು. ಕರೆದು ಹೀಗೆಂದನು: ಎಲೆ ಮೈತ್ರೇಯಿ, ನಾನು ಈ ಸ್ಥಾನದಿಂದ ಗಾರ್ಹಸ್ಥ್ಯದಿಂದ ಹೊರಟುಹೋಗುವವನು ಪಾರಿವ್ರಾಜ್ಯವನ್ನು ಮಾಡುವವನಾಗಿಯೇ[2] ಇದ್ದೇನೆ, ಇರುತ್ತೇನೆ. ಮೈತ್ರೇಯಿಯೆ, (ಹನ್ತ) ನನಗೆ ಅನುಮತಿಯನ್ನು ಕೊಡು. ಇಚ್ಛಿಸುವೆಯಾದರೆ,[3] 'ನಿನಗೂ ಈ ಕಾತ್ಯಾಯಿನಿಗೂ ಅಂತವನ್ನು ಮಾಡುವೆನು' ಮುಂತಾದದ್ದನ್ನು[4] ವ್ಯಾಖ್ಯಾನಮಾಡಿದ್ದಾಗಿದೆ.

## ವಿತ್ತವು ಮೋಕ್ಷಕ್ಕೆ ಸಾಧನವಲ್ಲ

(ಉಪನಿಷತ್ತು)

**ಸಾ ಹೋವಾಚ ಮೈತ್ರೇಯೀ ಯನ್ನು ಮ ಇಯಂ ಭಗೋಃ ಸರ್ವಾ ಪೃಥಿವೀ ವಿತ್ತೇನ ಪೂರ್ಣಾ ಸ್ಯಾತ್ ಸ್ಯಾಂ ನ್ವಹಂ[5] ತೇನಾಽಮೃತಾಽಽಹೋ ನೇತಿ ನೇತಿ ಹೋವಾಚ ಯಾಜ್ಞವಲ್ಕ್ಯೋ ಯಥೈವೋಪಕರಣವತಾಂ ಜೀವಿತಂ ತಥೈವ ತೇ ಜೀವಿತಗ್ಂ ಸ್ಯಾದಮೃತತ್ವಸ್ಯ ತು ನಾಽಽಶಾಸ್ತಿ ವಿತ್ತೇನೇತಿ ॥**

೩. ಆ ಮೈತ್ರೇಯಿ ಇಂತೆಂದಳು: ಭಗವಂತನೆ, ಈ ಪೃಥ್ವಿಯೆಲ್ಲವೂ ವಿತ್ತದಿಂದ ತುಂಬಿರುವದಾದರೆ, ಅದರಿಂದ ನಾನು ಅಮೃತಳಾದೇನೇನು? ಯಾಜ್ಞವಲ್ಕ್ಯನಿಂತೆಂದನು; ಇಲ್ಲ. ಇಲ್ಲ; ಉಪಕರಣವುಳ್ಳವರಿಗೆ ಜೀವಿತವು ಹೇಗಿ(ರುವದೋ) ಹಾಗೆಯೇ ನಿನ್ನ ಜೀವಿತವೂ ಇದ್ದೀತು. ಆದರೆ ವಿತ್ತದಿಂದ ಅಮೃತತ್ವದ ಆಶೆಯಿಲ್ಲ.

---

1. ಮೈತ್ರೇಯಿಯು ಬ್ರಹ್ಮವಾದಿನಿಯಾಗಿದ್ದದ್ದಲ್ಲದೆ ಹಿರಿಯಳೂ ಆಗಿದ್ದಳು. ಆದ್ದರಿಂದ ಅವಳ ಅನುಮತಿಯನ್ನೇ ಯಾಜ್ಞವಲ್ಕ್ಯನು ಕೇಳಿದನು.

2. ಪ್ರವ್ರಜಿಷ್ಯನ್ —ಎಂಬ ಮಾತು ಪಾರಿವ್ರಾಜ್ಯಕ್ಕಾಗಿ ಮನೆಯನ್ನು ಕೊನೆಯ ಸಲಕ್ಕೆ ಬಿಟ್ಟುಹೋಗುವನೆಂಬರ್ಥದಲ್ಲಿಯೇ ಪ್ರಯುಕ್ತವಾಗುತ್ತದೆ. ಸಂನ್ಯಾಸದ ವಿಷಯಕ್ಕೆ ಪೀಠಿಕೆಯನ್ನು ನೋಡಿ.

3. ಇಲ್ಲಿ 'ಮುಂತಾದದ್ದನ್ನು' ಎಂಬ ಮಾತು ಏನನ್ನು ಸೂಚಿಸುವದೋ ತಿಳಿಯಲಿಲ್ಲ.

4. ೨-೪-೧ರ ಭಾಷ್ಯವನ್ನು (ಛಾ. ಭಾ. ೪೫೪ನ್ನು) ನೋಡಿ.

5. ಸ್ಯಾಂ ನ್ವಹಮ್. ಎಂಬುದಕ್ಕೆ ಹಿಂದೆ 'ಕಥಂ' ಎಂದಿಷ್ಟೇ ಬಂದಿದೆ.

## ವಿತ್ತವು ಜೀವಿತಕ್ಕೇ, ಮೋಕ್ಷಕ್ಕಲ್ಲ

(ಭಾಷ್ಯ)

೩-೫. ಸಾ ಏವಮುಕ್ತ್ವಾ ಉವಾಚ ಮೈತ್ರೇಯೀ। ಸರ್ವಾ ಇಯಂ ಪೃಥಿವೀ ವಿತ್ತೇನ ಪೂರ್ಣಾ ಸ್ಯಾತ್ ನು ಕಿಂ ಸ್ಯಾಂ ಕಿಮಹಂ ವಿತ್ತಸಾಧ್ಯೇನ ಕರ್ಮಣಾ ಅಮೃತಾ ಆಹೋ ನ ಸ್ಯಾಮ್ ಇತಿ? ನ ಇತಿ ಹ ಉವಾಚ ಯಾಜ್ಞವಲ್ಕ್ಯಃ ಇತ್ಯಾದಿ ಸಮಾನಮ್ ಅನ್ಯತ್ ॥

(ಭಾಷ್ಯಾರ್ಥ)

ಹೀಗೆನ್ನಲು ಆ ಮೈತ್ರೇಯಿಯು ಇಂತೆಂದಳು : **ಈ ಪೃಥ್ವಿಯೆಲ್ಲವೂ ವಿತ್ತ**ದಿಂದ ತುಂಬಿದ್ದರೆ, ನಾನೇನು ವಿತ್ತಸಾಧ್ಯವಾದ ಕರ್ಮದಿಂದ ಅಮೃತಳಾದೇನೇನು ? ಯಾಜ್ಞವಲ್ಕ್ಯನು 'ಇಲ್ಲ' ಎಂದು ಉತ್ತರವನ್ನು ಕೊಟ್ಟನು, ಇದೇ ಮುಂತಾದ ಮಿಕ್ಕ (ವಾಕ್ಯವು) ಹಿಂದಿನದಕ್ಕೆ ಸಮಾನವಾಗಿರುತ್ತದೆ.

## ಮೈತ್ರೇಯಿಯು ಅಮೃತತ್ವಕ್ಕೆ ಸಾಧನವನ್ನು ಬೇಡಿದ್ದು

(ಉಪನಿಷತ್ತು)

**ಸಾ ಹೋವಾಚ ಮೈತ್ರೇಯೀ ಯೇನಾಹಂ ನಾಮೃತಾ ಸ್ಯಾಂ ಕಿಮಹಂ ತೇನ ಕುರ್ಯಾಂ ಯದೇವ ಭಗವಾನ್ ವೇದ ತದೇವ ಮೇ ಬ್ರೂಹೀತಿ ॥ ೪ ॥**

೪. ಆ ಮೈತ್ರೇಯಿ ಇಂತೆಂದಳು : ಯಾವದರಿಂದ ನಾನು ಅಮೃತಳಾಗಲಾರೆನೋ, ಅದರಿಂದ ನಾನು ಏನು ಮಾಡಿಕೊಳ್ಳಲಿ ? ಭಗವಂತನೆ, (ನೀನು) ಯಾವದನ್ನು ತಿಳಿದುಕೊಂಡಿರುವೆಯೋ ಅದನ್ನೇ ನನಗೆ ಹೇಳು !

## ಮೈತ್ರೇಯಿಯ ವಿದ್ಯಾಧಿಕಾರ

(ಉಪನಿಷತ್ತು)

**ಸ ಹೋವಾಚ ಯಾಜ್ಞವಲ್ಕ್ಯಃ ಪ್ರಿಯಾ ವೈ ಖಲು ನೋ ಭವತೀ ಸತೀ ಪ್ರಿಯಮವೃಧದ್ ಹನ್ತ ತರ್ಹಿ ಭವತ್ಯೇತದ್[1] ವ್ಯಾಖ್ಯಾಸ್ಯಾಮಿ ತೇ ವ್ಯಾಚಕ್ಷಾಣಸ್ಯ ತು ಮೇ ನಿದಿಧ್ಯಾಸಸ್ವೇತಿ ॥**

೫. ಆ ಯಾಜ್ಞವಲ್ಕ್ಯನಿಂತೆಂದನು : ನಮಗೆ ನೀನು ಪ್ರಿಯಳೇ ಆದ ಸತಿಯಾಗಿದ್ದು ಪ್ರಿಯವನ್ನು ಬೆಳೆಯಿಸಿರುತ್ತೀಯೆ ! ಒಳ್ಳೆಯದು,

1. ಇದಕ್ಕೆ ಬದಲು 'ಪ್ರಿಯಾ ಬತಾರೇ ನಃ ಸತೀ .. ಏಹ್ಯಾಸ್ಸ್ವ' ಎಂದು ಹಿಂದೆ ಪಾಠವಿದೆ.

ಹಾಗಾದರೆ, ಎಲೆ, ನಿನಗೆ ಇದನ್ನು ವಿವರಿಸುವೆನು. ನಾನು ವಿವರಿಸುವದನ್ನು ನಿದಿಧ್ಯಾಸನಮಾಡು !

## ಯಾಜ್ಞವಲ್ಕ್ಯನು ಸಂತುಷ್ಟನಾದದ್ದಕ್ಕೆ ಕಾರಣ

(ಭಾಷ್ಯ)

೩೨೬. ಸ ಹ ಉವಾಚ । ಪ್ರಿಯೈವ ಪೂರ್ವಂ ಖಲು ನಃ ಅಸ್ಮಭ್ಯಂ ಭವತೀ ಸತೀ ಭವನ್ತೀ[1] ಪ್ರಿಯಮೇವ ಅವೃಧತ್ ವರ್ಧಿತವತೀ, ನಿರ್ಧಾರಿತವತೀ ಅಸಿ । ಅತಃ ತುಷ್ಟೋಽಹಮ್ । ಹನ್ತ (ತರ್ಹಿ)[2] ಇಚ್ಛಸಿ ಚೇತ್ ಅಮೃತತ್ವಸಾಧನಂ ಜ್ಞಾತುಮ್, ಹೇ ಭವತಿ, ತೇ ತುಭ್ಯಂ ತತ್ ಅಮೃತತ್ವಸಾಧನಂ ವ್ಯಾಖ್ಯಾಸ್ಯಾಮಿ ॥

(ಭಾಷ್ಯಾರ್ಥ)

ಅವನು ಇಂತೆಂದನು: ಮೊದಲು ನೀನು ಪ್ರಿಯಳೇ (ಸತೀ=ಭವನ್ತೀ) ಆಗಿದ್ದು[3] (ಈಗ) ಪ್ರಿಯವನ್ನೇ ಬೆಳೆಯಿಸಿರುತ್ತೀಯೆ, ಹೆಚ್ಚಿಸಿರುತ್ತೀಯೆ, ನಿಶ್ಚಯಿಸಿದವಳಾಗಿದೀಯೆ. ಆದ್ದರಿಂದ ನಾನು ತುಷ್ಟನಾಗಿರುತ್ತೇನೆ. ಒಳ್ಳೆಯದು, (ಹಾಗಾದರೆ) ಅಮೃತತ್ವಸಾಧನವನ್ನು ಅರಿಯಬೇಕೆಂದು ಇಚ್ಛಿಸುವೆಯಾದರೆ, ಎಲೆ, (ತೇ= ತುಭ್ಯಮ್) ಆ ಅಮೃತತ್ವಸಾಧನವನ್ನು ಹೇಳುತ್ತೇನೆ.

## ಪ್ರಿಯತಮನಾದ ಆತ್ಮನನ್ನೇ ಕಂಡುಕೊಳ್ಳಬೇಕು

(ಉಪನಿಷತ್ತು)

**ಸ ಹೋವಾಚ ನ ವಾ ಅರೇ ಪತ್ಯುಃ ಕಾಮಾಯ ಪತಿಃ ಪ್ರಿಯೋ ಭವತ್ಯಾತ್ಮನಸ್ತು ಕಾಮಾಯ ಪತಿಃ ಪ್ರಿಯೋ ಭವತಿ । ನ ವಾ ಅರೇ ಜಾಯಾಯೈ ಕಾಮಾಯ ಜಾಯಾ ಪ್ರಿಯಾ ಭವತ್ಯಾತ್ಮನಸ್ತು ಕಾಮಾಯ ಜಾಯಾ ಪ್ರಿಯಾ ಭವತಿ । ನ**

---

1. ಇಲ್ಲಿ ಭವನ್ತೀ ಸತೀ ಎಂದಿರುವ ಅಚ್ಚಿನ ಪಾಠವನ್ನು ಹೀಗೆ ತಿದ್ದಿಕೊಂಡಿರುತ್ತೇವೆ.

2. ಈ ಮಾತು ಇಲ್ಲಿದ್ದು ಬಿಟ್ಟುಹೋಗಿರಬೇಕೆಂದು ಕಲ್ಪಿಸಿದೆ.

3. ಭವತೀ ಎಂಬ ಮೊದಲನೆಯ ಮಾತಿಗೆ ನೀನು ಎಂಬರ್ಥವನ್ನೂ ಸತೀ ಎಂಬುದಕ್ಕೆ ಭವನ್ತೀ ಆಗಿದ್ದವಳಾಗಿ ಎಂಬರ್ಥವನ್ನೂ ಕಲ್ಪಿಸುವದೇ ಯುಕ್ತ; ಏಕೆಂದರೆ ಮುಂದೆ ಹೇ ಭವತಿ ಎಂದೇ ಭಾಷ್ಯದಲ್ಲಿದೆ. (ಈ ಕಾರಣದಿಂದಲೇ ನಾವು ಭವನ್ತೀ ಎಂಬ ಪದವನ್ನು 'ಸತೀ' ಆದಮೇಲೆ ಇಟ್ಟುಕೊಂಡಿರುವದು). ಇದಕ್ಕನುಗುಣವಾಗಿ ೨–೪–೪ ಕ್ಕೂ ಆಹಾ ' ನಮಗೆ ಪ್ರಿಯಳೇ ಆಗಿದ್ದು ಪ್ರಿಯವನ್ನು ನುಡಿಯುತ್ತಿದ್ದೀಯೆ ! –ಎಂದು ಅನುವಾದವನ್ನು ಮಾಡಬಹುದು.

ವಾ ಅರೇ ಪುತ್ರಾಣಾಂ ಕಾಮಾಯ ಪುತ್ರಾಃ ಪ್ರಿಯಾ ಭವ ನ್ತ್ಯಾತ್ಮನಸ್ತು ಕಾಮಾಯ ಪುತ್ರಾಃ ಪ್ರಿಯಾ ಭವನ್ತಿ । ನ ವಾ ಅರೇ ವಿತ್ತಸ್ಯ ಕಾಮಾಯ ವಿತ್ತಂ ಪ್ರಿಯಂ ಭವತಿ ಆತ್ಮ ನಸ್ತು ಕಾಮಾಯ ವಿತ್ತಂ ಪ್ರಿಯಂ ಭವತಿ । ನ ವಾ ಅರೇ ಪಶೂನಾಂ ಕಾಮಾಯ ಪಶವಃ ಪ್ರಿಯಾ ಭವನ್ತ್ಯಾತ್ಮನಸ್ತು ಕಾಮಾಯ ಪಶವಃ ಪ್ರಿಯಾ ಭವನ್ತಿ[1] । ನ ವಾ ಅರೇ ಬ್ರಹ್ಮಣಃ ಕಾಮಾಯ ಬ್ರಹ್ಮ ಪ್ರಿಯಂ ಭವತ್ಯಾತ್ಮನಸ್ತು ಕಾಮಾಯ ಬ್ರಹ್ಮ ಪ್ರಿಯಂ ಭವತಿ । ನ ವಾ ಅರೇ ಕ್ಷತ್ರಸ್ಯ ಕಾಮಾಯ ಕ್ಷತ್ರಂ ಪ್ರಿಯಂ ಭವತ್ಯಾತ್ಮನಸ್ತು ಕಾಮಾಯ ಕ್ಷತ್ರಂ ಪ್ರಿಯಂ ಭವತಿ । ನ ವಾ ಅರೇ ಲೋಕಾನಾಂ ಕಾಮಾಯ ಲೋಕಾಃ ಪ್ರಿಯಾ ಭವನ್ತ್ಯಾತ್ಮನಸ್ತು ಕಾಮಾಯ ಲೋಕಾಃ ಪ್ರಿಯಾ ಭವನ್ತಿ । ನ ವಾ ಅರೇ ದೇವಾ ನಾಂ ಕಾಮಾಯ ದೇವಾಃ ಪ್ರಿಯಾ ಭವನ್ತ್ಯಾತ್ಮನಸ್ತು ಕಾಮಾಯ ದೇವಾಃ ಪ್ರಿಯಾ ಭವನ್ತಿ । ನ ವಾ ಅರೇ ವೇದಾ ನಾಂ ಕಾಮಾಯ ವೇದಾಃ ಪ್ರಿಯಾ ಭವನ್ತ್ಯಾತ್ಮನಸ್ತು ಕಾಮಾಯ ವೇದಾಃ ಪ್ರಿಯಾ ಭವನ್ತಿ[2] । ನ ವಾ ಅರೇ ಭೂತಾ ನಾಂ ಕಾಮಾಯ ಭೂತಾನಿ ಪ್ರಿಯಾಣಿ ಭವನ್ತ್ಯಾತ್ಮನಸ್ತು ಕಾಮಾಯ ಭೂತಾನಿ ಪ್ರಿಯಾಣಿ ಭವನ್ತಿ । ನ ವಾ ಅರೇ ಸರ್ವಸ್ಯ ಕಾಮಾಯ ಸರ್ವಂ ಪ್ರಿಯಂ ಭವತ್ಯಾತ್ಮನಸ್ತು ಕಾಮಾಯ ಸರ್ವಂ ಪ್ರಿಯಂ ಭವತಿ । ಆತ್ಮಾ ವಾ ಅರೇ ದ್ರಷ್ಟ ವ್ಯಃ ಶ್ರೋತವ್ಯೋ ಮನ್ತವ್ಯೋ ನಿದಿಧ್ಯಾಸಿತವ್ಯೋ ಮೈತ್ರೇ ಯ್ಯಾತ್ಮನಿ ಖಲ್ವರೇ ದೃಷ್ಟೇ ಶ್ರುತೇ ಮತೇ ವಿಜ್ಞಾತ ಇದಗ್ಂ ಸರ್ವಂ ವಿದಿತಮ್ ॥ ೬ ॥

೬. ಅವನು ಇಂತೆಂದನು: ಎಲೆ, ಪತಿಯ ಕಾಮಕ್ಕಾಗಿ ಪತಿಯು ಪ್ರಿಯನಾಗಿರುವದೇ ಇಲ್ಲ; ಮತ್ತೇನೆಂದರೆ ತನ್ನ ಕಾಮ ಕ್ಕಾಗಿಯೇ ಪತಿಯು ಪ್ರಿಯನಾಗಿರುತ್ತಾನೆ. ಎಲೆ, ಹೆಂಡತಿಯ ಕಾಮಕ್ಕಾಗಿ ಹೆಂಡತಿಯು ಪ್ರಿಯಳಾಗಿರುವದೇ ಇಲ್ಲ; ಮತ್ತೇನೆಂ ದರೆ ತನ್ನ ಕಾಮಕಾಗಿ ಹೆಂಡತಿಯು ಪ್ರಿಯಳಾಗಿರುತ್ತಾಳೆ. ಎಲೆ,

---

1. ಈ ವಾಕ್ಯವು ಹಿಂದಿನ ಪಾಠದಲ್ಲಿಲ್ಲ.
2. ಈ ವಾಕ್ಯವೂ ಹಿಂದಿನ ಪಾಠದಲ್ಲಿಲ್ಲ.

ಮಕ್ಕಳ ಕಾಮಕ್ಕಾಗಿ ಮಕ್ಕಳು ಪ್ರಿಯರಾಗಿರುವದೇ ಇಲ್ಲ ; ಮತ್ತೇನೆಂದರೆ ತನ್ನ ಕಾಮಕ್ಕಾಗಿ ಮಕ್ಕಳು ಪ್ರಿಯರಾಗಿರುತ್ತಾರೆ. ಎಲೆ, ವಿತ್ತದ ಕಾಮಕ್ಕಾಗಿ ವಿತ್ತವು ಪ್ರಿಯವಾಗಿರುವದೇ ಇಲ್ಲ; ಮತ್ತೇನೆಂದರೆ ತನ್ನ ಕಾಮಕ್ಕಾಗಿ ವಿತ್ತವು ಪ್ರಿಯವಾಗಿರುತ್ತದೆ. ಎಲೆ, ಪಶುಗಳ ಕಾಮಕ್ಕಾಗಿ ಪಶುಗಳು ಪ್ರಿಯವಾಗಿರುವದೇ ಇಲ್ಲ ; ಮತ್ತೇನೆಂದರೆ ತನ್ನ ಕಾಮಕ್ಕಾಗಿ ಪಶುಗಳು ಪ್ರಿಯವಾಗಿರುತ್ತವೆ. ಎಲೆ, ಬ್ರಹ್ಮದ ಕಾಮಕ್ಕಾಗಿ ಬ್ರಹ್ಮವು ಪ್ರಿಯವಾಗಿರುವದೇ ಇಲ್ಲ ; ಮತ್ತೇನೆಂದರೆ ತನ್ನ ಕಾಮಕ್ಕಾಗಿ ಬ್ರಹ್ಮವು ಪ್ರಿಯವಾಗಿರುತ್ತದೆ. ಎಲೆ, ಕ್ಷತ್ರದ ಕಾಮಕ್ಕಾಗಿ ಕ್ಷತ್ರವು ಪ್ರಿಯವಾಗಿರುವದೇ ಇಲ್ಲ; ಮತ್ತೇನೆಂದರೆ ತನ್ನ ಕಾಮಕ್ಕಾಗಿ ಕ್ಷತ್ರವು ಪ್ರಿಯವಾಗಿರುತ್ತದೆ. ಎಲೆ, ಲೋಕಗಳ ಕಾಮಕ್ಕಾಗಿ ಲೋಕಗಳು ಪ್ರಿಯವಾಗಿರುವದೇ ಇಲ್ಲ ; ಮತ್ತೇನೆಂದರೆ ತನ್ನ ಕಾಮಕ್ಕಾಗಿ ಲೋಕಗಳು ಪ್ರಿಯವಾಗಿರುತ್ತವೆ. ಎಲ, ದೇವತೆಗಳ ಕಾಮಕ್ಕಾಗಿ ದೇವತೆಗಳು ಪ್ರಿಯರಾಗಿರುವದೇ ಇಲ್ಲ ; ಮತ್ತೇನೆಂದರೆ ತನ್ನ ಕಾಮಕ್ಕಾಗಿ ದೇವತೆಗಳು ಪ್ರಿಯರಾಗಿರುತ್ತಾರೆ. ಎಲೆ, ವೇದಗಳ ಕಾಮಕ್ಕಾಗಿ ವೇದಗಳು ಪ್ರಿಯವಾಗಿರುವದೇ ಇಲ್ಲ ; ತನ್ನ ಕಾಮಕ್ಕಾಗಿ ವೇದಗಳು ಪ್ರಿಯವಾಗಿರುತ್ತವೆ. ಎಲೆ, ಭೂತಗಳ ಕಾಮಕ್ಕಾಗಿ ಭೂತಗಳು ಪ್ರಿಯವಾಗಿರುವದಿಲ್ಲ; ಮತ್ತೇನೆಂದರೆ ತನ್ನ ಕಾಮಕ್ಕಾಗಿ ಭೂತಗಳು ಪ್ರಿಯವಾಗಿರುತ್ತವೆ. ಎಲೆ, ಯಾವದೊಂದೂ ತನ್ನ ಕಾಮಕ್ಕಾಗಿ ಪ್ರಿಯವಾಗಿರುವದಿಲ್ಲ; ಆತ್ಮನ ಕಾಮಕ್ಕಾಗಿಯೇ ಪ್ರತಿಯೊಂದೂ ಪ್ರಿಯವಾಗಿರುತ್ತದೆ. ಎಲೆ, ಮೈತ್ರೇಯಿ, ಆತ್ಮನೇ ಕಂಡುಕೊಳ್ಳತಕ್ಕವನು, ಶ್ರವಣಮಾಡತಕ್ಕವನು, ಮನನಮಾಡತಕ್ಕವನು, ನಿದಿಧ್ಯಾಸನಮಾಡತಕ್ಕವನು ; ಎಲೆ, ಆತ್ಮನನ್ನೇ ಕಂಡುಕೊಂಡರೆ, ಶ್ರವಣಮಾಡಿದರೆ, ಅರಿತುಕೊಂಡರೆ ಇದೆಲ್ಲವೂ ವಿದಿತ(ವಾಗುತ್ತದೆ).

## ಆತ್ಮದರ್ಶನದಿಂದ ಎಲ್ಲವೂ ಜ್ಞಾತವಾಗುವದು

(ಭಾಷ್ಯ)

೩೪೭. ಆತ್ಮನಿ ಖಲ್ವರೇ ಮೈತ್ರೇಯಿ, ದೃಷ್ಟೇ । ಕಥಂ ದೃಷ್ಟೇ **ಆತ್ಮನೀತಿ ? ಉಚ್ಯತೇ । ಪೂರ್ವಮ್ ಆಚಾರ್ಯಾಗಮಾಭ್ಯಾಂ ಶ್ರುತೇ,**

ಪುನಸ್ತರ್ಕೇಣ ಉಪಪತ್ತ್ಯಾ ಮತೇ ವಿಚಾರಿತೇ ; ಶ್ರವಣಂ ತು ಆಗಮ ಮಾತ್ರೇಣ, ಮತೇ ಉಪಪತ್ತ್ಯಾ । ಪಶ್ಚಾತ್ ವಿಜ್ಞಾತೇ ಏವಮೇತತ್ ನಾನ್ಯಥಾ ಇತಿ ನಿರ್ಧಾರಿತೇ । ಕಿಂ ಭವತೀತಿ ? ಉಚ್ಯತೇ ಇದಂ[1] ವಿದಿತಂ ಭವತಿ । ಇದಂ ಸರ್ವಮ್ ಇತಿ ಯತ್ ಆತ್ಮನೋ ಅನ್ಯತ್ । ಆತ್ಮವ್ಯತಿ ರೇಕೇಣ ಅಭಾವಾತ್ ॥

(ಭಾಷ್ಯಾರ್ಥ)

ಎಲೆ ಮೈತ್ರೇಯಿ, ಆತ್ಮನನ್ನು ಕಂಡುಕೊಂಡರೆ— ಆತ್ಮನನ್ನು ಹೇಗೆ ಕಂಡುಕೊಂಡರೆ ? ಎಂದರೆ ಹೇಳುತ್ತೇನೆ : ಮೊದಲು ಆಚಾರ್ಯ, ಆಗಮ[2]– ಇವುಗಳಿಂದ ಶ್ರವಣಮಾಡಿದರೆ, ಮತ್ತೆ ತರ್ಕದಿಂದ ಹೊಂದಿಸಿಕೊಂಡು ಮನನ ಮಾಡಿದರೆ ಎಂದರೆ ವಿಚಾರಮಾಡಿದರೆ, ಶ್ರವಣವಾದರೋ ಆಗಮಮಾತ್ರದಿಂದ; ಉಪಪತ್ತಿಯಿಂದ ಮನನಮಾಡಿದರೆ, ಬಳಿಕ ಅರಿತುಕೊಂಡರೆ ಎಂದರೆ 'ಇದು ಹೀಗೆಯೇ ಮತ್ತೊಂದು ಪ್ರಕಾರವಲ್ಲ' ಎಂದು ನಿಶ್ಚಯಿಸಿಕೊಂಡರೆ— (ಹೀಗೆ ಕಂಡುಕೊಂಡದ್ದರಿಂದ) ಏನು ಆಗುವದು ? ಎಂದರೆ ಹೇಳುತ್ತೇನೆ ; ಇದು (ಎಲ್ಲವೂ) ವಿದಿತ(ವಾಗುತ್ತದೆ). 'ಇದೆಲ್ಲವೂ' ಎಂದರೆ ಆತ್ಮನಿಗಿಂತ ಬೇರೆಯಾದದ್ದು (ಎಂದರ್ಥ); ಆತ್ಮನನ್ನು ಬಿಟ್ಟು (ಅದು ಯಾವದೂ) ಇಲ್ಲದ್ದ ರಿಂದ (ಆತ್ಮನನ್ನು ಅರಿತದ್ದರಿಂದಲೇ ವಿದಿತವಾಗುವದು).

## ಆತ್ಮನಿಗಿಂತ ವ್ಯತಿರಿಕ್ತವಾಗಿ ದ್ವೈತವಿಲ್ಲ

(ಉಪನಿಷತ್ತು)

**ಬ್ರಹ್ಮ ತಂ ಪರಾದಾದ್ ಯೋಽನ್ಯತ್ರಾಽಽತ್ಮನೋ ಬ್ರಹ್ಮ ವೇದ ಕ್ಷತ್ರಂ ತಂ ಪರಾದಾದ್ ಯೋಽನ್ಯತ್ರಾಽಽತ್ಮನಃ ಕ್ಷತ್ರಂ ವೇದ ಲೋಕಾಸ್ತಂ ಪರಾದುರ್ಯೋಽನ್ಯತ್ರಾಽಽತ್ಮನೋ ಲೋಕಾನ್ ವೇದ ದೇವಾಸ್ತಂ ಪರಾದುರ್ಯೋಽನ್ಯತ್ರಾಽಽತ್ಮನೋ ದೇವಾನ್ ವೇದ ವೇದಾಸ್ತಂ ಪರಾದುರ್ಯೋಽನ್ಯತ್ರಾಽಽತ್ಮನೋ ವೇದಾನ್ ವೇದ[3] ಭೂತಾನಿ ತಂ ಪರಾದುರ್ಯೋಽನ್ಯತ್ರಾಽಽತ್ಮನೋ ಭೂತಾನಿ ವೇದ ಸರ್ವಂ ತಂ ಪರಾದಾದ್ ಯೋಽನ್ಯತ್ರಾಽಽತ್ಮನಃ ಸರ್ವಂ ವೇದೇದಂ ಬ್ರಹ್ಮೇದಂ ಕ್ಷತ್ರಮಿಮೇ ಲೋಕಾ ದೇವಾ ಇಮೇ ವೇದಾ ಇಮಾನಿ ಭೂತಾನೀದಗ್ಂ ಸರ್ವಂ ಯದಯ ಮಾತ್ಮಾ ॥ ೭ ॥**

---

1. ಇದರ ಮುಂದೆ 'ಸರ್ವಂ' ಎಂಬ ಮಾತು ಇದ್ದು ಕೈಬಿಟ್ಟುಹೋಗಿರಬಹು ದೆಂದು ಊಹಿಸುವದಕ್ಕೆ ಅವಕಾಶವಿದೆ.

2. ಶಾಸ್ತ್ರ.

3. ಈ ವಾಕ್ಯವು ಹಿಂದಿನ ಪಾಠದಲ್ಲಿಲ್ಲ.

೭. ಯಾವನು ಆತ್ಮನಿಗಿಂತ ಬೇರೆಯಾಗಿ ಬ್ರಹ್ಮವನ್ನು ಅರಿಯುತ್ತಾನೋ, ಅವನನ್ನು ಬ್ರಹ್ಮವು ಹೊರದೂಡುವದು. ಯಾವನು ಆತ್ಮನಿಗಿಂತ ಬೇರೆಯಾಗಿ ಕ್ಷತ್ರವನ್ನು ಅರಿಯುತ್ತಾನೋ, ಅವನನ್ನು ಕ್ಷತ್ರವು ಹೊರದೂಡುವದು. ಯಾವನು ಆತ್ಮನಿಗಿಂತ ಬೇರೆಯಾಗಿ ಲೋಕಗಳನ್ನು ಅರಿಯುತ್ತಾನೋ, ಅವನನ್ನು ಲೋಕಗಳು ಹೊರದೂಡುವವು. ಯಾವನು ಆತ್ಮನಿಗಿಂತ ಬೇರೆಯಾಗಿ ದೇವತೆಗಳನ್ನು ಅರಿಯುತ್ತಾನೋ, ಅವನನ್ನು ದೇವತೆಗಳು ಹೊರದೂಡುವವು. ಯಾವನು ಆತ್ಮನಿಗಿಂತ ಬೇರೆಯಾಗಿ ವೇದಗಳನ್ನು ಅರಿಯುತ್ತಾನೋ, ಅವನನ್ನು ವೇದಗಳು ಹೊರದೂಡುವವು. ಯಾವನು ಭೂತಗಳನ್ನು ಆತ್ಮನಿಗಿಂತ ಬೇರೆಯಾಗಿ ಅರಿಯುತ್ತಾನೋ, ಅವನನ್ನು ಭೂತಗಳು ಹೊರದೂಡುವವು. ಯಾವನು ಯಾವದನ್ನೇ ಆಗಲಿ ಆತ್ಮನಿಗಿಂತ ಬೇರೆಯಾಗಿ ಅರಿಯುತ್ತಾನೋ, ಅವನನ್ನು ಅದೆಲ್ಲವೂ ಹೊರದೂಡುವದು. ಈ ಬ್ರಹ್ಮವು, ಈ ಕ್ಷತ್ರವು, ಈ ಲೋಕಗಳು, ಈ ದೇವತೆಗಳು, ಈ ವೇದಗಳು, ಈ ಭೂತಗಳು, ಈ ಎಲ್ಲವೂ– ಈ ಆತ್ಮನೆಂಬುದೇ.

## ಆತ್ಮವ್ಯತಿರಿಕ್ತವಾಗಿ ಯಾವದೊಂದನ್ನು ನೋಡಿದರೂ ಬಂಧವೇ

(ಭಾಷ್ಯ)

೩೨೮. ತಮ್ ಅಯಥಾರ್ಥದರ್ಶಿನಂ ಪರಾದಾತ್ ಪರಾಕುರ್ಯಾತ್, ಕೈವಲ್ಯಾಸಂಬನ್ಧಿನಂ ಕುರ್ಯಾತ್, ಅಯಮ್ ಅನಾತ್ಮಸ್ವರೂಪೇಣ ಮಾಂ ಪಶ್ಯತಿ ಇತ್ಯಪರಾಧಾತ್ ಇತಿ ಭಾವಃ ॥

(ಭಾಷ್ಯಾರ್ಥ)

ಆ ತಪ್ಪಾಗಿ ತಿಳಿಯುವವನನ್ನು ಹೊರದೂಡುವದು, ತಿರಸ್ಕರಿಸುವದು ; 'ಇವನು ನನ್ನನ್ನು ಅನಾತ್ಮಸ್ವರೂಪದಿಂದ ನೋಡುತ್ತಾನೆ' ಎಂದು (ಆ) ತಪ್ಪಿಗಾಗಿ (ಅವನನ್ನು) ಕೈವಲ್ಯಕ್ಕೆ ಸಂಬಂಧಿಯಲ್ಲದವನನ್ನಾಗಿ ಮಾಡುವದು– ಎಂದು ಭಾವ.

## ಸ್ಥಿತಿಕಾಲದಲ್ಲಿ ಎಲ್ಲವೂ ಚಿದನುಗತವೇ

(ಉಪನಿಷತ್ತು)

**ಸ ಯಥಾ ದುನ್ದುಭೇರ್ಹನ್ಯಮಾನಸ್ಯ ನ ಬಾಹ್ಯಾಞ್ಛಬ್ದಾಞ್ಛಕ್ನುಯಾದ್ ಗ್ರಹಣಾಯ ದುನ್ದುಭೇಸ್ತು ಗ್ರಹಣೇನ ದುನ್ದುಭ್ಯಾಘಾತಸ್ಯ ವಾ ಶಬ್ದೋ ಗೃಹೀತಃ ॥ ೮ ॥**

**ಸ ಯಥಾ ಶಙ್ಖಸ್ಯ ಧ್ಮಾಯಮಾನಸ್ಯ ನ ಬಾಹ್ಯಾಞ್ಛಬ್ದಾಞ್ಛಕ್ನುಯಾದ್ ಗ್ರಹಣಾಯ ಶಙ್ಖಸ್ಯ ತು ಗ್ರಹಣೇನ ಶಙ್ಖಧ್ಮಸ್ಯ ವಾ ಶಬ್ದೋ ಗೃಹೀತಃ ॥ ೯ ॥**

**ಸ ಯಥಾ ವೀಣಾಯೈ ವಾದ್ಯಮಾನಾಯೈ ನ ಬಾಹ್ಯಾಞ್ಛಬ್ದಾಞ್ಛಕ್ನುಯಾದ್ ಗ್ರಹಣಾಯ ವೀಣಾಯೈ ತು ಗ್ರಹಣೇನ ವೀಣಾವಾದಸ್ಯ ವಾ ಶಬ್ದೋ ಗೃಹೀತಃ ॥ ೧೦ ॥**

೮. ಅದು ಹೇಗೆಂದರೆ ದುಂದುಭಿಯನ್ನು ಹೊಡೆಯುತ್ತಿರುವಲ್ಲಿ ಹೊರಚಾಚ್ಚಾದ ಶಬ್ದಗಳನ್ನು ಗ್ರಹಿಸುವದಕ್ಕೆ ಶಕ್ತನಾಗಲಾರನು; ಆದರೆ ದುಂದುಭಿಯವು (ಎಂದು) ಗ್ರಹಿಸುವದರಿಂದ ಅಥವಾ ದುಂದುಭಿಯ ಆಘಾತವನ್ನು (ಗ್ರಹಿಸುವದರಿಂದ) ಶಬ್ದವು ಗೃಹೀತವಾಗುತ್ತದೆ.

೯. ಅದು ಹೇಗೆಂದರೆ ಶಂಖವನ್ನು ಊದುತ್ತಿರುವಲ್ಲಿ ಹೊರಚಾಚ್ಚಾದ ಶಬ್ದಗಳನ್ನು ಗ್ರಹಿಸುವದಕ್ಕೆ ಶಕ್ತನಾಗಲಾರನು ; ಆದರೆ ಶಂಖದವು (ಎಂದು) ಗ್ರಹಿಸುವದರಿಂದ ಅಥವಾ ಶಂಖವನ್ನೂದಿದ್ದನ್ನು ಗ್ರಹಿಸುವದರಿಂದ ಶಬ್ದವು ಗೃಹೀತವಾಗುತ್ತದೆ.

೧೦. ಅದು ಹೇಗೆಂದರೆ ವೀಣೆಯನ್ನು ನುಡಿಸುತ್ತಿರುವಲ್ಲಿ ಹೊರಚಾಚ್ಚಾದ ಶಬ್ದಗಳನ್ನು ಗ್ರಹಿಸುವದಕ್ಕೆ ಶಕ್ತನಾಗಲಾರನು ; ಆದರೆ ವೀಣೆಯವು (ಎಂದು) ಗ್ರಹಿಸುವದರಿಂದ ಅಥವಾ ವೀಣೆಯನ್ನು ನುಡಿಸಿದ್ದನ್ನು (ಗ್ರಹಿಸುವದರಿಂದ) ಶಬ್ದವು ಗೃಹೀತವಾಗುತ್ತದೆ.

## ಉತ್ಪತ್ತಿಕಾಲದಲ್ಲಿಯೂ ಎಲ್ಲವೂ ಬ್ರಹ್ಮವೇ

(ಉಪನಿಷತ್ತು)

**ಸ ಯಥಾಽಽರ್ದ್ರೈಧಾಗ್ನೇರಭ್ಯಾಹಿತಸ್ಯ ಪೃಥಗ್ ಧೂಮಾ ವಿನಿಶ್ಚರನ್ತ್ಯೇವಂ ವಾ ಅರೇಽಸ್ಯ ಮಹತೋ ಭೂತಸ್ಯ ನಿಃಶ್ವಸಿತ**

ಮೇತದ್[1] ಯದೃಗ್ವೇದೋ ಯಜುರ್ವೇದಃ ಸಾಮವೇದೋಽ ಥರ್ವಾಙ್ಗಿರಸ ಇತಿಹಾಸಃ ಪುರಾಣಂ ವಿದ್ಯಾ ಉಪನಿಷದಃ ಶ್ಲೋಕಾಃ ಸೂತ್ರಾಣ್ಯನುವ್ಯಾಖ್ಯಾನಾನಿ ವ್ಯಾಖ್ಯಾನಾನೀ ಷ್ಟಗ್ಂ[2] ಹುತಮಾಶಿತಂ ಪಾಯಿತಮಯಂ ಚ ಲೋಕಃ ಪರಶ್ಚ ಲೋಕಃ ಸರ್ವಾಣಿ ಚ ಭೂತಾನ್ಯಸ್ಯೈವೈತಾನಿ ಸರ್ವಾಣಿ ನಿಃಶ್ವಸಿತಾನಿ ॥ ೧೧ ॥

೧೧. ಅದು ಹೇಗೆಂದರೆ ಹೊತ್ತಿಕೊಂಡ ಹಸಿಯ ಕಟ್ಟಿಗೆಗಳಿಂದೆಬ್ಬಿಸಿದ ಬೆಂಕಿಯಿಂದ ಬೇರೆಬೇರೆಯಾಗಿ ಹೊಗೆಗಳು ಹೊರಟುಬರುತ್ತವೆಯಲ್ಲ, ಹಾಗೆಯೇ ಎಲೆ, ಈ ದೊಡ್ಡಭೂತದ ಕೆಳಉಸಿರು ಇದು. ಯಾವದೆಂದರೆ, ಈ ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಾಂಗಿರಸ್ಸುಗಳು, ಇತಿಹಾಸವು, ಪುರಾಣವು, ವಿದ್ಯೆಗಳು, ಉಪನಿಷತ್ತುಗಳು, ಶ್ಲೋಕಗಳು, ಸೂತ್ರಗಳು, ಅನುವ್ಯಾಖ್ಯಾನಗಳು, ವ್ಯಾಖ್ಯಾನಗಳು, ಇಷ್ಟವು, ಹುತವು, ತಿನ್ನಿಸಿದ್ದು, ಕುಡಿಸಿದ್ದು, ಈ ಲೋಕವೂ, ಪರಲೋಕವೂ, ಸರ್ವಭೂತಗಳೂ- ಇವೆಲ್ಲವೂ ಇದೇ (ಭೂತದ) ಕೆಳಉಸಿರುಗಳು.

## ಇಲ್ಲಿ ಇಷ್ಟಾದಿಗಳನ್ನು ಹೆಚ್ಚಿಗೆ ಹೇಳಿದ್ದಕ್ಕೆ ಕಾರಣ

(ಭಾಷ್ಯ)

೩೭೯. ಚತುರ್ಥೇ ಶಬ್ದನಿಃಶ್ವಾಸೇನೈವ ಲೋಕಾದ್ಯರ್ಥನಿಃಶ್ವಾಸಃ ಸಾಮರ್ಥ್ಯಾತ್ ಉಕ್ತೋ ಭವತಿ ಇತಿ ಪೃಥಙ್ನೋಕ್ತಃ । ಇಹ ತು ಸರ್ವಶಾಸ್ತ್ರಾರ್ಥೋಪಸಂಹಾರಃ ಇತಿ ಕೃತ್ವಾ ಅರ್ಥಪ್ರಾಪ್ತೋಽಪಿ ಅರ್ಥಃ ಸ್ಪಷ್ಟೀಕರ್ತವ್ಯಃ ಇತಿ ಪೃಥಕ್ ಉಚ್ಯತೇ ॥

(ಭಾಷ್ಯಾರ್ಥ)

ನಾಲ್ಕನೆಯ ಅಧ್ಯಾಯದಲ್ಲಿ[3] ಶಬ್ದವು (ಬ್ರಹ್ಮದ) ನಿಃಶ್ವಾಸವೆಂದು (ಹೇಳಿದ್ದ)ರಿಂದಲೇ ಲೋಕವೇ ಮುಂತಾದ ಅರ್ಥವೂ ನಿಃಶ್ವಾಸವೆಂದು ಹೇಳಿದಂತೆ ಆಯಿತೆಂದು[4] (ಈ ಅರ್ಥನಿಃಶ್ವಾಸವನ್ನು) ವಿಂಗಡಿಸಿ ಹೇಳಿರುವದಿಲ್ಲ.

---

1. 'ನಿಃಶ್ವಸಿತಮೇವೈತದ್' ಎಂಬ ಪಾಠಾಂತರವು ಅನೇಕ ಲಿಖಿತಕೋಶಗಳಲ್ಲಿರುವದಾಗಿ ತಿಳಿಯಬರುತ್ತದೆ.

2. 'ಇಷ್ಟಗ್ಂ' ಎಂಬುದರಿಂದ ಹಿಡಿದು ಕೊನೆಯವರೆಗಿನ ವಾಕ್ಯಭಾಗವು ಹಿಂದಿನ ಪಾಠದಲ್ಲಿ ಇಲ್ಲ.

3. ೨-೪-೧೦ರಲ್ಲಿ. 4. ೨-೪-೧೦ರ ಭಾ. ಭಾ. ೩೬೫ನ್ನು ನೋಡಿ.

ಆದರೆ ಇಲ್ಲಿಯಾದರೋ ಸಕಲಶಾಸ್ತ್ರದ ಅರ್ಥವನ್ನೂ ಉಪಸಂಹಾರ(ಮಾಡಬೇಕಾಗಿದೆ) ಎಂದು ಇಟ್ಟುಕೊಂಡು ಸಾಮರ್ಥ್ಯದಿಂದ ಪ್ರಾಪ್ತವಾಗಿರುವ ವಿಷಯವನ್ನೂ ಸ್ಪಷ್ಟೀಕರಿಸಬೇಕು ಎಂದು (ಅದನ್ನು ಬೇರೆಯಾಗಿ) ವಿಂಗಡಿಸಿ ಹೇಳಿರುತ್ತದೆ.[1]

## ಪ್ರಲಯದಲ್ಲಿಯೂ ಎಲ್ಲವೂ ಬ್ರಹ್ಮವೇ

(ಉಪನಿಷತ್ತು)

**ಸ ಯಥಾ ಸರ್ವಸಾಮಪಾಗ್ಂ ಸಮುದ್ರ ಏಕಾಯನಮೇವಗ್ಂ ಸರ್ವೇಷಾಗ್ಂ ಸ್ಪರ್ಶಾನಾಂ ತ್ವಗೇಕಾಯನಮೇವಗ್ಂ ಸರ್ವೇಷಾಂ[2] ಗನ್ಧಾನಾಂ ನಾಸಿಕೇ ಏಕಾಯನಮೇವಗ್ಂ ಸರ್ವೇಷಾಗ್ಂ ರಸಾನಾಂ ಜಿಹ್ವೈಕಾಯನಮೇವಗ್ಂ ಸರ್ವೇಷಾಗ್ಂ ರೂಪಾಣಾಂ ಚಕ್ಷುರೇಕಾಯನಮೇವಗ್ಂ ಸರ್ವೇಷಾಗ್ಂ ಶಬ್ದಾನಾಗ್ಂ ಶ್ರೋತ್ರಮೇಕಾಯನಮೇವಗ್ಂ ಸರ್ವೇಷಾಂ ಸಂಕಲ್ಪಾನಾಂ ಮನ ಏಕಾಯನಮೇವಗ್ಂ ಸರ್ವಾಸಾಂ ವಿದ್ಯಾನಾಗ್ಂ ಹೃದಯಮೇಕಾಯನಮೇವಗ್ಂ ಸರ್ವೇಷಾಂ ಕರ್ಮಣಾಗ್ಂ ಹಸ್ತಾವೇಕಾಯನಮೇವಗ್ಂ ಸರ್ವೇಷಾಮಾನನ್ದಾನಾಮುಪಸ್ಥ ಏಕಾಯನಮೇವಗ್ಂ ಸರ್ವೇಷಾಂ ವಿಸರ್ಗಾಣಾಂ ಪಾಯುರೇಕಾಯನಮೇವಗ್ಂ ಸರ್ವೇಷಾಮಧ್ವನಾಂ ಪಾದಾವೇಕಾಯನಮೇವಗ್ಂ ಸರ್ವೇಷಾಂ ವೇದಾನಾಂ ವಾಗೇಕಾಯನಮ್ ॥ ೧೨ ॥**

೧೨. ಅದು ಹೇಗೆಂದರೆ (ಹೇಗೆ) ಎಲ್ಲಾ ನೀರುಗಳಿಗೂ ಸಮುದ್ರವು ಏಕಾಯನವಾಗಿರುತ್ತದೆಯೋ ಹಾಗೆ ಎಲ್ಲಾ ಸ್ಪರ್ಶಗಳಿಗೂ ತ್ವಕ್ಕು ಏಕಾಯನವು ; ಹಾಗೆಯೇ ಎಲ್ಲಾ ಗಂಧಗಳಿಗೂ ನಾಸಿಕವು ಏಕಾಯನವು ; ಹಾಗೆಯೇ ಎಲ್ಲಾ ರಸಗಳಿಗೂ ಜಿಹ್ವೆಯು ಏಕಾಯನವು ; ಹಾಗೆಯೇ ಎಲ್ಲಾ ರೂಪಗಳಿಗೂ ಚಕ್ಷುಸ್ಸು ಏಕಾಯನವು ; ಹಾಗೆಯೇ ಎಲ್ಲಾ ಶಬ್ದಗಳಿಗೂ ಶ್ರೋತ್ರವು

1. ನಾಮರೂಪಗಳೆರಡೂ ನಿಃಶ್ವಸಿತದಂತೆ ಲೀಲಾನ್ಯಾಯದಿಂದಲೇ ಸೃಷ್ಟವಾಗಿದೆ ಎಂದೂ ಆದ್ದರಿಂದ ಎಲ್ಲವೂ ಚಿದನುಗತವಾಗಿದೆಯೆಂದೂ ಹೇಳಿದಂತೆ ಆಯಿತು.

2. ಕೆಲವು ಲಿಖಿತಕೋಶಗಳಲ್ಲಿ 'ಸರ್ವೇಷಾಂ ರಸಾನಾಂ ಜಿಹ್ವೈಕಾಯನಮೇವಗ್ಂ ಸರ್ವೇಷಾಂ ಗನ್ಧಾನಾಂ ನಾಸಿಕೇ ಏಕಾಯನಮೇವಗ್ಂ ಸರ್ವೇಷಾಂ ರೂಪಾಣಾಂ' ಎಂಬೀ ಕ್ರಮದಲ್ಲಿ ಪಾಠವಿದೆಯೆಂದು ತಿಳಿಯಬಂದಿದೆ.

ಏಕಾಯನವು ; ಹಾಗೆಯೇ ಎಲ್ಲಾ ಸಂಕಲ್ಪಗಳಿಗೂ ಮನಸ್ಸು ಏಕಾಯನವು ; ಹಾಗೆಯೇ ಎಲ್ಲಾ ವಿದ್ಯೆಗಳಿಗೂ ಹೃದಯವು ಏಕಾಯನವು; ಹಾಗೆಯೇ ಎಲ್ಲಾ ಕರ್ಮಗಳಿಗೂ ಹಸ್ತಗಳು ಏಕಾಯನವು ; ಹಾಗೆಯೇ ಎಲ್ಲಾ ಆನಂದಗಳಿಗೂ ಉಪಸ್ಥವು ಏಕಾಯನವು ; ಹಾಗೆಯೇ ಎಲ್ಲಾ ವಿಸರ್ಗಗಳಿಗೂ ಪಾಯುವು ಏಕಾಯನವು ; ಹಾಗೆಯೇ ಎಲ್ಲಾ ನಡೆಗಳಿಗೂ ಪಾದವು ಏಕಾಯನವು ; ಹಾಗೆಯೇ ಎಲ್ಲಾ ವೇದಗಳಿಗೂ ವಾಕ್ಕು ಏಕಾಯನವು.

## ಜ್ಞಾನನಿಮಿತ್ತದಿಂದಾಗುವ ಆತ್ಯಂತಿಕಪ್ರಲಯ

(ಉಪನಿಷತ್ತು)

**ಸ ಯಥಾ ಸೈನ್ಧವಘನೋಽನನ್ತರೋಽಬಾಹ್ಯಃ ಕೃತ್ಸ್ನೋ ರಸಘನ ಏವೈವಂ ವಾ ಅರೇಽಯಮಾತ್ಮಾಽನನ್ತರೋಽಬಾಹ್ಯಃ ಕೃತ್ಸ್ನಃ ಪ್ರಜ್ಞಾನಘನ ಏವೈ[1]ತೇಭ್ಯೋ ಭೂತೇಭ್ಯಃ ಸಮುತ್ಥಾಯ ತಾನ್ಯೇವಾಽನು ವಿನಶ್ಯತಿ ನ ಪ್ರೇತ್ಯ ಸಂಜ್ಞಾಽಸ್ತೀತ್ಯರೇ ಬ್ರವೀಮೀತಿ ಹೋವಾಚ ಯಾಜ್ಞವಲ್ಕ್ಯಃ ॥ ೧೩ ॥**

೧೩. ಅದು ಹೇಗೆಂದರೆ(ಹೇಗೆ) ಉಪ್ಪಿನಹರಳು ಒಳಗಿಲ್ಲದೆ, ಹೊರಗಿಲ್ಲದೆ, ಎಲ್ಲವೂ ರಸದ ಗಟ್ಟಿಯೇ ಆಗಿರುವದೋ[2], ಹೀಗೆಯೇ ಎಲೆ, ಈ ಆತ್ಮನು ಒಳಗಿಲ್ಲದೆ, ಹೊರಗಿಲ್ಲದೆ ಎಲ್ಲವೂ ಪ್ರಜ್ಞಾನಘನವೇ[3] ಈ ಭೂತಗಳಿಂದ ಮೇಲಕ್ಕೆದ್ದು ಅವುಗಳನ್ನೇ ಅನುಸರಿಸಿ

---

1. ಇಲ್ಲಿಯವರೆಗಿನ ಪಾಠವು ಹಿಂದೆ (೨-೪-೧೨) ಹೀಗಿದೆ. 'ಸ ಯಥಾ ಸೈನ್ಧವಖಿಲ್ಯ ಉದಕೇ ಪ್ರಾಸ್ತ ಉದಕಮೇವಾಽನುವಿಲೀಯೇತ ನ ಹಾಸ್ಯೋದ್ಗ್ರಹಣಾಯೇವ ಸ್ಯಾತ್ । ಯತೋ ಯತ ಸ್ತ್ವಾದದೀತ, ಲವಣಮೇವೈವಂ ವಾ ಅರ ಇದಂ ಮಹದ್ಭೂತ ಮನನ್ತಮಪಾರಂ ವಿಜ್ಞಾನಘನ ಏವ'.

2. ಎಲ್ಲೆಲ್ಲಿಯೂ ಉಪ್ಪಿನಸವಿಯೇ ಆಗಿರುವದೋ.

3. ಉಪ್ಪಿನಹರಳಿಗೂ ಆತ್ಮನಿಗೂ ಒಂದು ವಿಶೇಷವಿದೆ. ಹರಳಿಗೆ ಒಳಗು ಹೊರಗುಗಳಿದ್ದರೂ ಎಲ್ಲೆಲ್ಲಿಯೂ ಅದು ಉಪ್ಪಿನರಸದ್ದೇ ಆಗಿರುತ್ತದೆ, ಆದರೆ ಆತ್ಮನಿಗೆ ಒಳಗುಹೊರಗುಗಳಿಲ್ಲ, ಅವನೊಳಗೆ ಚೈತನ್ಯವೊಂದಲ್ಲದೆ ಮತ್ತೆ ಯಾವದೂ ಇರುವದೇ ಇಲ್ಲ. ನಾನಾರಸವಲ್ಲ, ಅಖಂಡೈಕರಸವೇ ಎಂಬುದಕ್ಕೆ ಮಾತ್ರ ದೃಷ್ಟಾಂತವನ್ನು ತೆಗೆದುಕೊಳ್ಳಬೇಕು.

ನಾಶವಾಗುವನು. ಹೊರಟುಹೋದಬಳಿಕ[1] ಅರಿವೇ[2] ಇರುವದಿಲ್ಲ ; ಎಲೆ, ಹೀಗೆಂದು ಹೇಳುತ್ತಿದೇನೆ- ಎಂದು ಯಾಜ್ಞವಲ್ಕ್ಯನು ನುಡಿದನು.

## ಜ್ಞಾನಾವಸ್ಥೆಯಲ್ಲಿ ವಿಶೇಷವಿಜ್ಞಾನವಿರುವದಿಲ್ಲ

(ಭಾಷ್ಯ)

೩೩೦. ಸರ್ವಕಾರ್ಯಪ್ರಲಯೇ ವಿದ್ಯಾನಿಮಿತ್ತೇ ಸೈನ್ಧವಘನವತ್ ಅನನ್ತರಃ, ಅಬಾಹ್ಯಃ ಕೃತ್ಸ್ನಃ ಪ್ರಜ್ಞಾನಘನ ಏಕ ಆತ್ಮಾ ಅವತಿಷ್ಠತೇ[3] ಪೂರ್ವಂ ತು ಭೂತಮಾತ್ರಾಸಂಸರ್ಗವಿಶೇಷಾತ್ ಲಬ್ಧವಿಶೇಷವಿಜ್ಞಾನಃ[4] । ತಸ್ಮಿನ್ ಪ್ರವಿಲಾಪಿತೇ ವಿದ್ಯಯಾ ವಿಶೇಷವಿಜ್ಞಾನೇ ತನ್ನಿಮಿತ್ತೇ ಚ ಭೂತಸಂಸರ್ಗೇ ನ ಪ್ರೇತ್ಯ ಸಂಜ್ಞಾಽಸ್ತೀತಿ ॥

(ಭಾಷ್ಯಾರ್ಥ)

ಜ್ಞಾನನಿಮಿತ್ತದಿಂದ ಕಾರ್ಯವೆಲ್ಲವೂ ಪ್ರಲಯವಾಗಲು ಉಪ್ಪಿನಹರಳಿನಂತೆ ಒಳಗಿಲ್ಲದೆ ಹೊರಗಿಲ್ಲದೆ ಎಲ್ಲವೂ ಅರಿವಿನ ಗಟ್ಟಿಯೇ ಆದ ಆತ್ಮನು ಉಳಿದುಕೊಳ್ಳುತ್ತಾನೆ. ಮೊದಲಾದರೋ ಭೂತಮಾತ್ರೆಗಳ ಆಯಾ ಸಂಬಂಧದಿಂದ ವಿಶೇಷವಿಜ್ಞಾನವನ್ನು[5] ಪಡೆದಿದ್ದನು. ಆ ವಿಶೇಷವಿಜ್ಞಾನವೂ ಅದಕ್ಕೆ ಕಾರಣವಾದ ಭೂತಸಂಬಂಧವೂ ವಿದ್ಯೆಯಿಂದ ಪ್ರವಿಲಯಮಾಡಲ್ಪಟ್ಟಿರುವದರಿಂದ (ಅದನ್ನು ಬಿಟ್ಟು) ಹೊರಟುಹೋದ ಬಳಿಕ (ಆ) ಅರಿವೇ ಇರುವದಿಲ್ಲ[6] ಎಂದು (ಯಾಜ್ಞವಲ್ಕ್ಯನು ನುಡಿದನು)[7].

---

1. ಅವಿದ್ಯೆಯಿಂದ ಎಲ್ಲವನ್ನೂ ಮೀರಿದ ಬಳಿಕ ಎಂದರ್ಥ.

2. ವಿಶೇಷವಿಜ್ಞಾನವು, ಇದು ಇಂಥದ್ದು ಎಂಬ ರೂಪದ ಅರಿವು, ಇರುವದಿಲ್ಲ ಎಂದರ್ಥ.

3. ಮುಂದೆ 'ನೇತರತ್' ಎಂಬ ಪಾಠವು ಕೆಲವು ಕೋಶಗಳಲ್ಲಿ ಅಧಿಕವಾಗಿದೆ ; ಅದು ಬೇಕಿಲ್ಲ.

4. ಇದರ ಮುಂದೆ 'ಸನ್' ಎಂಬ ಪಾಠವನ್ನು ಇಟ್ಟುಕೊಂಡು 'ವ್ಯವಹರತಿ ಇತಿ ಶೇಷಃ' ಎಂದು ಟೀಕೆಯಲ್ಲಿ ಅಧ್ಯಾಹಾರಮಾಡಿಕೊಂಡಿರುತ್ತದೆ. ನಾವು ಸನ್ ಇಲ್ಲದ ಪಾಠವನ್ನೇ ಇಟ್ಟುಕೊಂಡಿರುವದರಿಂದ ಅಧ್ಯಾಹಾರಕ್ಲೇಶವಿಲ್ಲ.

5. ಇದು ಇಂಥದ್ದು ಎಂಬ ಬಿಡಿಯರಿವನ್ನು.

6. ಭೂತಮಾತ್ರಾಸಂಬಂಧವು ಅವಿದ್ಯಾಕಲ್ಪಿತವಾದ್ದರಿಂದ ಆದರಿಂದಾಗುವ ವಿಶೇಷವಿಜ್ಞಾನವೂ ಅವಿದ್ಯಾಕಲ್ಪಿತವೇ ಎಂದು ಭಾವ.

7. ಇದರ ಮುಂದಿನ ವಾಕ್ಯಭಾಗವನ್ನು ಮುಂದಕ್ಕೆ ಅನ್ವಯಿಸಿಕೊಂಡಿದೆ.

## ಜ್ಞಾನಸ್ವರೂಪನಿಗೆ ಜ್ಞಾನವಿರುವದಿಲ್ಲವೆಂಬುದು ಅವಿರುದ್ಧ

(ಉಪನಿಷತ್ತು)

**ಸಾ ಹೋವಾಚ ಮೈತ್ರೇಯ್ಯತ್ರೈವ ಮಾ ಭಗವಾನ್ ಮೋಹಾನ್ತ ಮಾಪೀಪಿಪನ್ನ ವಾ ಅಹಮಿಮಂ ವಿಜಾನಾಮೀತಿ ಸ ಹೋವಾಚ ನ ವಾ ಅರೇಽಹಂ ಮೋಹಂ ಬ್ರವೀಮ್ಯವಿನಾಶೀ ವಾ ಅರೇಽಯಮಾತ್ಮಾಽನುಚ್ಛಿತ್ತಿಧರ್ಮಾ[1] ॥ ೧೪ ॥**

೧೪. ಆ ಮೈತ್ರೇಯಿ ಇಂತೆಂದಳು: ಇಲ್ಲಿಯೇ ಭಗವಂತನಾದ (ನೀನು) ನನ್ನನ್ನು ಮೋಹಸ್ಥಾನವನ್ನು ಪಡೆಯಿಸಿರುತ್ತೀಯೆ. ನಾನು ಇವನನ್ನು ಅರಿಯುತ್ತಲೇ ಇಲ್ಲ. ಅವನಿಂತೆಂದನು: ಎಲೆ, ನಾನು ಮೋಹವನ್ನು ಹೇಳುತ್ತಲೇ ಇಲ್ಲ; ಎಲೆ, ಈ ಆತ್ಮನು ಅವಿನಾಶಿಯೇ, ಅನುಚ್ಛಿತ್ತಿಧರ್ಮನೇ.

## ಆತ್ಮಜ್ಞಾನಸ್ವರೂಪಕ್ಕೆ ನಾಶವಿಲ್ಲ

(ಭಾಷ್ಯ)

೩೩೧. ಏವಂ ಯಾಜ್ಞವಲ್ಕ್ಯೇನ ಉಕ್ತಾ ಸಾ ಹ ಉವಾಚ। ಅತ್ರೈವ ಮಾ ಭಗವಾನ್ ಏತಸ್ಮಿನ್ ವಸ್ತುನಿ- ಪ್ರಜ್ಞಾನಘನ ಏವ, ನ ಪ್ರೇತ್ಯ ಸಂಜ್ಞಾ ಅಸ್ತಿ ಇತಿ- ಮೋಹಾನ್ತಂ ಮೋಹಮಧ್ಯಮ್ ಆಪೀಪಿಪತ್, ಆಪೀ **ಪದತ್, ಅವಗಮಿತವಾನ್ ಅಸಿ। ಸಂಮೋಹಿತವಾನ್ ಅಸಿ ಇತ್ಯರ್ಥಃ। ಅತಃ ನ ವೈ ಅಹಮ್ ಇಮಮ್ ಆತ್ಮಾನಮ್ ಉಕ್ತಲಕ್ಷಣಂ ವಿಜಾನಾಮಿ ವಿವೇಕತಃ ಇತಿ। ಸ ಹ ಉವಾಚ। ನಾಹಂ ಮೋಹಂ ಬ್ರವೀಮಿ। ಅವಿನಾಶೀ ವಾ ಅರೇ ಅಯಮ್ ಆತ್ಮಾ ಯತಃ। ವಿನಂಷ್ಟುಂ ಶೀಲಮ್ ಅಸ್ಯ ಇತಿ ವಿನಾಶೀ। ನ ವಿನಾಶೀ ಅವಿನಾಶೀ। ವಿನಾಶಶಬ್ದೇನ ವಿಕ್ರಿಯಾ। ಅವಿನಾಶೀ ಇತಿ। ಅವಿಕ್ರಿಯ ಆತ್ಮಾ ಇತ್ಯರ್ಥಃ। ಅರೇ ಮೈತ್ರೇಯಿ, ಅಯಮಾತ್ಮಾ ಪ್ರಕೃತಃ ಅನುಚ್ಛಿತ್ತಿಧರ್ಮಾ। ಉಚ್ಛಿತ್ತಿಃ ಉಚ್ಛೇದಃ। ಉಚ್ಛೇದೋಽನ್ತಃ ವಿನಾಶಃ। ಉಚ್ಛಿತ್ತಿಃ ಧರ್ಮಃ ಅಸ್ಯ ಇತಿ ಉಚ್ಛಿತ್ತಿಧರ್ಮಾ। ನ ಉಚ್ಛಿತ್ತಿಧರ್ಮಾ,**

---

1. 'ಸಾ ಹೋವಾಚ ಮೈತ್ರೇಯ್ಯತ್ರೈವ ಮಾ ಭಗವಾನಮೂಮುಹನ್ನ ಪ್ರೇತ್ಯ ಸಂಜ್ಞಾಸ್ತೀತಿ ಸ ಹೋವಾಚ ನ ವಾ ಅರೇಽಹಂ ಮೋಹಂ ಬ್ರವೀಮ್ಯಲಂ ವಾ ಅರೇ ಇದಂ ವಿಜ್ಞಾನಾಯ ॥' ಎಂದು ೨-೪-೧೩ರ ಪಾಠ.

ಅನುಚ್ಛಿತ್ತಿಧರ್ಮಾ । ನಾಪಿ ವಿಕ್ರಿಯಾಲಕ್ಷಣಃ ನಾಪಿ ಉಚ್ಛೇದಲಕ್ಷಣಃ ವಿನಾಶಃ ಅಸ್ಯ ವಿದ್ಯತೇ ಇತ್ಯರ್ಥಃ ॥

(ಭಾಷ್ಯಾರ್ಥ)

ಹೀಗೆಂದು ಯಾಜ್ಞವಲ್ಕ್ಯನು ಹೇಳಲು, ಆಕೆ ಇಂತೆಂದಳು : ಇಲ್ಲಿಯೇ ಈ ವಸ್ತುವಿನಲ್ಲಿಯೇ— 'ಪ್ರಜ್ಞಾನಘನನೇ, ಹೊರಟುಹೋದಬಳಿಕ ಅರಿವು ಇರುವದಿಲ್ಲ' ಎಂದು— ನನ್ನನ್ನು ಭಗವಂತನಾದ (ನೀನು) ಮೋಹಸ್ಥಾನವನ್ನು ಎಂದರೆ ಭ್ರಾಂತಿಯ ಒಳಗನ್ನು (ಅಮೀಮಿಪತ್ = ಆಮೀಪದತ್) ಪಡೆಯಿಸಿರುತ್ತೀಯೆ, ತಿಳಿಸಿರುತ್ತೀಯೆ , ಭ್ರಾಂತಿಯನ್ನುಂಟುಮಾಡಿರುತ್ತೀಯೆ ಎಂದರ್ಥ. ಆದ್ದರಿಂದ ನಾನು ಈ ಮೇಲೆ ಹೇಳಿದ ಲಕ್ಷಣವುಳ್ಳ ಆತ್ಮನನ್ನು ವಿಂಗಡಿಸಿ ಅರಿತುಕೊಳ್ಳದೆಯೇ ಇರುತ್ತೇನೆ.

ಆ (ಯಾಜ್ಞವಲ್ಕ್ಯನು) ಇಂತೆಂದನು: ನಾನು ಮೋಹವನ್ನು ಹೇಳುತ್ತಿಲ್ಲ. ಏಕೆಂದರೆ ಎಲೆ, ಈ ಆತ್ಮನು ಅವಿನಾಶಿಯೇ, ನಾಶವಾಗುವದು ಇವನಿಗೆ ಸ್ವಭಾವವು ಆಗಿರುವದರಿಂದ ವಿನಾಶಿಯು ; ವಿನಾಶಿಯಲ್ಲದವನು ಅವಿನಾಶಿಯು. (ಇಲ್ಲಿ) ವಿನಾಶಶಬ್ದದಿಂದ ವಿಕಾರ(ವನ್ನು ಹೇಳಿರುತ್ತದೆ). ಅವಿನಾಶಿಯು, ಎಂದರೆ ಆತ್ಮನು ಅವಿಕ್ರಿಯನು ಎಂದರ್ಥ. ಎಲೆ ಮೈತ್ರೇಯಿ, ಈ ಪ್ರಕೃತನಾದ ಆತ್ಮನು, ಅನುಚ್ಛಿತ್ತಿಧರ್ಮನೇ- ಉಚ್ಛಿತ್ತಿಯು ಉಚ್ಛೇದವು ; ಉಚ್ಛೇದವು ಎಂದರೆ ಕೊನೆಯು, ವಿನಾಶವು. ಉಚ್ಛಿತ್ತಿ ಎಂಬ ಧರ್ಮವುಳ್ಳವನು ಉಚ್ಛಿತ್ತಿಧರ್ಮನು— (ಹೀಗೆ) ಉಚ್ಛಿತ್ತಿಧರ್ಮನಲ್ಲದವನು ಅನುಚ್ಛಿತ್ತಿಧರ್ಮನೇ. ವಿಕಾರರೂಪವಾದ (ವಿನಾಶ)ವೂ ಇವನಿಗೆ ಇಲ್ಲ, ಉಚ್ಛೇದರೂಪವಾದ ವಿನಾಶವೂ (ಇವನಿಗೆ) ಇಲ್ಲ ಎಂದರ್ಥ.

## ಕ್ರಿಯಾಕಾರಕಫಲವ್ಯವಹಾರವು ಅವಿದ್ಯಾವಸ್ಥೆಯಲ್ಲಿಯೇ, ವಿದ್ಯೆಯಲ್ಲಿಲ್ಲ

(ಉಪನಿಷತ್ತು)

**ಯತ್ರ ಹಿ ದ್ವೈತಮಿವ ಭವತಿ ತದಿತರ ಇತರಂ ಪಶ್ಯತಿ[1] ತದಿತರ ಇತರಂ ಜಿಘ್ರತಿ ತದಿತರ ಇತರಗ್ಂ ರಸಯತೇ[2] ತದಿತರ ಇತರ**

---

1. ಹಿಂದಿನ (೨-೪-೧೪) ಪಾಠದಲ್ಲಿ 'ಜಿಘ್ರತಿ' ಎಂಬುದು ಮೊದಲಿದೆ.

2. ಹಿಂದಿನ ಪಾಠದಲ್ಲಿ ಇಲ್ಲಿ 'ಶೃಣೋತಿ' ಎಂಬುದಿದೆ ; 'ರಸಯತೇ' ಎಂಬುದಿಲ್ಲವೇ ಇಲ್ಲ, 'ತದಿತರ ಇತರಮ್ ಅಭಿವದತಿ' ಎಂಬುದು 'ಶೃಣೋತಿ' ಆದಮೇಲೆ ಇದೆ.

ಮಭಿವದತಿ ತದಿತರ ಇತರಗ್ಂ ಶೃಣೋತಿ ತದಿತರ ಇತರಂ ಮನುತೇ ತದಿತರ ಇತರಗ್ಂ ಸ್ಪೃಶತಿ[1] ತದಿತರ ಇತರಂ ವಿಜಾನಾತಿ ಯತ್ರ ತ್ವಸ್ಯ[2] ಸರ್ವಮಾತ್ಮೈವಾಭೂತ್ ತತ್ಕೇನ ಕಂ ಪಶ್ಯೇತ್[3] ತತ್ ಕೇನ ಕಂ ಜಿಘ್ರೇತ್ ತತ್ಕೇನ ಕಗ್ಂ ರಸಯೇತ್[4] ತತ್ಕೇನ ಕಮಭಿವದೇತ್ ತತ್ಕೇನ ಕಗ್ಂ ಶೃಣುಯಾತ್[5] ತತ್ಕೇನ ಕಂ ಮನ್ವೀತ ತತ್ಕೇನ ಕಗ್ಂ ಸ್ಪೃಶೇತ್[6] ತತ್ಕೇನ ಕಂ ವಿಜಾನೀಯಾದ್ಯೇನೇದಗ್ಂ ಸರ್ವಂ ವಿಜಾನಾತಿ । ತಂ ಕೇನ ವಿಜಾನೀಯಾತ್ ಸ ಏಷ ನೇತಿ ನೇತ್ಯಾತ್ಮಾಽಗೃಹ್ಯೋ ನ ಗೃಹ್ಯತೇಽಶೀರ್ಯೋ ನ ಹಿ ಶೀರ್ಯತೇಽಸಙ್ಗೋ ನ ಹಿ ಸಜ್ಯತೇಽಸಿತೋ ನ ವ್ಯಥತೇ ನ ರಿಷ್ಯತಿ[7] ವಿಜ್ಞಾತಾರಮರೇ[8] ಕೇನ ವಿಜಾನೀಯಾದಿತ್ಯುಕ್ತಾನುಶಾಸನಾಸಿ ಮೈತ್ರೇಯ್ಯೇತಾವದರೇ ಖಲ್ವಮೃತತ್ವಮಿತಿ ಹೋಕ್ತ್ವಾ ಯಾಜ್ಞವಲ್ಕ್ಯೋ ವಿಜಹಾರ[9] ॥ ೧೫ ॥

೧೫. ಏಕೆಂದರೆ ಎಲ್ಲಿ ದ್ವೈತದಂತೆ ಇರುವದೋ ಅಲ್ಲಿ ಒಬ್ಬನು ಇನ್ನೊಂದನ್ನು ಕಾಣುತ್ತಾನೆ, ಅಲ್ಲಿ ಒಬ್ಬನು ಇನ್ನೊಂದನ್ನು ಮೂಸುತ್ತಾನೆ, ಅಲ್ಲಿ ಒಬ್ಬನು ಇನ್ನೊಂದನ್ನು ಸವಿಯುತ್ತಾನೆ, ಅಲ್ಲಿ ಒಬ್ಬನು ಇನ್ನೊಂದನ್ನು ಮಾತಾಡುತ್ತಾನೆ, ಅಲ್ಲಿ ಒಬ್ಬನು ಇನ್ನೊಂ

---

1. ಹಿಂದೆ 'ವಿಜಾನಾತಿ' ಎಂದಿದೆ, 'ತದಿತರ ಇತರಗ್ಂ ಸ್ಪೃಶತಿ' ಎಂಬುದಿಲ್ಲವೇ ಇಲ್ಲ.

2. 'ಯತ್ರ ವಾ ಅಸ್ಯ' ಎಂದು ಹಿಂದಿನ ಪಾಠ.

3. 'ಜಿಘ್ರೇತ್' ಎಂದು ಮೊದಲು ಹಿಂದೆ ಇದೆ.

4. ಇದು ಹಿಂದೆ ಇಲ್ಲ; 'ಜಿಘ್ರೇತ್' ಆದಮೇಲೆಯೇ 'ಪಶ್ಯೇತ್' ಇದೆ.

5. ಹಿಂದಿನ ಪಾಠದಲ್ಲಿ ಈ ವಾಕ್ಯವಾದಮೇಲೆಯೇ 'ತತ್ಕೇನ ಕಮಭಿವದೇತ್' ಎಂಬುದು ಇದೆ. 6. ಹಿಂದೆ ಈ ವಾಕ್ಯವಿಲ್ಲ.

7. 'ಸ ಏಷ ನೇತಿ ನೇತಿ' ಎಂಬಲ್ಲಿ ನ ರಿಷ್ಯತಿ– ಎಂಬವರೆಗಿನ ವಾಕ್ಯಗಳು ಹಿಂದೆ ಇಲ್ಲ.

8. ಇದರ ಹಿಂದೆ 'ಯೇನೇದಂ ಸರ್ವಂ ವಿಜಾನಾತಿ ತಂ ಕೇನ ವಿಜಾನೀಯಾತ್' ಎಂದಿದೆ.

9. 'ಇತ್ಯುಕ್ತಾನುಶಾಸನಾಸಿ' ಎಂಬಲ್ಲಿಂದ ಹಿಡಿದು ಇಲ್ಲಿಯವರೆಗಿನ ವಾಕ್ಯಗಳು ಹಿಂದೆ ಇಲ್ಲ. ಆಚಾರ್ಯರು ಹಿಂದಿನ ಪಾಠದ ವಾಕ್ಯಗಳನ್ನೂ ಮಾಧ್ಯಂದಿನಪಾಠದ ವಾಕ್ಯಗಳನ್ನೂ ಅಲ್ಲಲ್ಲಿ ಗುಣೋಪಸಂಹಾರನ್ಯಾಯದಿಂದ ಕೂಡಿಸಿ ಈ ವಾಕ್ಯಗಳನ್ನು ಉದಾಹರಿಸುವನು೦ಟು

ದನ್ನು ಕೇಳುತ್ತಾನೆ, ಅಲ್ಲಿ ಒಬ್ಬನು ಇನ್ನೊಂದನ್ನು ಆಲೋಚಿಸುತ್ತಾನೆ, ಅಲ್ಲಿ ಒಬ್ಬನು ಇನ್ನೊಂದನ್ನು ಮುಟ್ಟುತ್ತಾನೆ, ಅಲ್ಲಿ ಒಬ್ಬನು ಇನ್ನೊಂದನ್ನು ಅರಿಯುತ್ತಾನೆ. ಆದರೆ ಎಲ್ಲಿ ಇವನಿಗೆ ಎಲ್ಲವೂ ಆತ್ಮನೇ ಆಯಿತೋ ಅಲ್ಲಿ ಏತರಿಂದ ಏನನ್ನು ಕಂಡಾನು ? ಅಲ್ಲಿ ಏತರಿಂದ ಏನನ್ನು ಮೂಸಿಯಾನು ? ಅಲ್ಲಿ ಏತರಿಂದ ಏನನ್ನು ಸವಿದಾನು ? ಅಲ್ಲಿ ಏತರಿಂದ ಏನನ್ನು ಮಾತನಾಡಿಯಾನು ? ಅಲ್ಲಿ ಏತರಿಂದ ಏನನ್ನು ಕೇಳಿಯಾನು ? ಅಲ್ಲಿ ಏತರಿಂದ ಏನನ್ನು ಆಲೋಚಿಸಿಯಾನು? ಅಲ್ಲಿ ಏತರಿಂದ ಏನನ್ನು ಮುಟ್ಟಿಯಾನು ? ಅಲ್ಲಿ ಏತರಿಂದ ಏನನ್ನು ಅರಿತಾನು ? ಯಾವನಿಂದ ಇದೆಲ್ಲವನ್ನೂ ಅರಿಯುತ್ತಾನೋ ಅವನನ್ನು ಏತರಿಂದ ಅರಿತಾನು ? ಆ ಇವನು ನೇತಿ ನೇತಿ (ಹೀಗಲ್ಲ, ಹೀಗಲ್ಲ) ಎಂಬ ಆತ್ಮನು. ಅಗೃಹ್ಯನು, ಗ್ರಹಿಸಲ್ಪಡುವದಿಲ್ಲವಷ್ಟೆ? ಅಶೀರ್ಯನು, ಸವೆಯುವದಿಲ್ಲವಷ್ಟೆ? ಅಸಂಗನು, ಅಂಟಿಸಿಕೊಳ್ಳುವದಿಲ್ಲವಷ್ಟೆ? ಅಸಿತನು ವ್ಯಥೆಪಡುವದಿಲ್ಲ, ಹಿಂಸಿತನಾಗುವದಿಲ್ಲ. ಎಲೆ, ವಿಜ್ಞಾತೃವನ್ನು ಏತರಿಂದ ಅರಿತಾನು? ಮೈತ್ರೇಯಿ, (ಹೀಗೆ) ಉಕ್ತವಾದ ಅನುಶಾಸನವುಳ್ಳವಳಾಗಿರುವೆ. ಎಲೆ, ಇಷ್ಟೇ ಅಮೃತತ್ವವು- ಹೀಗೆಂದು ನುಡಿದು ಯಾಜ್ಞವಲ್ಕ್ಯನು ಹೊರಟುಹೋದನು.

## ಸ ಏಷ ನೇತಿ ನೇತಿ ಎಂಬ ಉಪಸಂಹಾರವಾಕ್ಯದ ತಾತ್ಪರ್ಯ

(ಭಾಷ್ಯ)

೩೩೨ ಚತುರ್ಷ್ವಪಿ ಪ್ರಪಾಠಕೇಷು ಏಕ ಆತ್ಮಾ ತುಲ್ಯೋ ನಿರ್ಧಾರಿತಃ ಪರಂ ಬ್ರಹ್ಮ। ಉಪಾಯವಿಶೇಷಸ್ತು ತಸ್ಯ ಅಧಿಗಮೇ ಅನ್ಯಶ್ಚಾನ್ಯಶ್ಚ। ಉಪೇಯಸ್ತು ಸ ಏವಾಽಽತ್ಮಾ ಯಶ್ಚತುರ್ಥೇ "ಅಥಾತ ಆದೇಶೋ ನೇತಿ ನೇತಿ" (೨-೩-೬) ಇತಿ ನಿರ್ದಿಷ್ಟಃ ಸ ಏವ ಪಞ್ಚಮೇ ಪ್ರಾಣಪಣೋಪನ್ಯಾಸೇನ ಶಾಕಲ್ಯಯಾಜ್ಞವಲ್ಕ್ಯಸಂವಾದೇ ನಿರ್ಧಾರಿತಃ। ಪುನಃ ಪಞ್ಚಮೇ ಸಮಾಪ್ತೌ। ಪುನರ್ಜನಕಯಾಜ್ಞವಲ್ಕ್ಯಸಂವಾದೇ। ಪುನರಿಹ ಉಪನಿಷತ್ಸಮಾಪ್ತೌ। ಚತುರ್ಣಾಮಪಿ ಪ್ರಪಾಠಕಾನಾಮ್ ಏತದಾತ್ಮನಿಷ್ಠತಾ ನಾಽನ್ಯೋಽನ್ತರಾಲೇ ಕಶ್ಚಿದಪಿ ವಿವಕ್ಷಿತೋಽರ್ಥಃ ಇತ್ಯೇತತ್ಪ್ರದರ್ಶನಾಯ ಅನ್ತೇ ಉಪಸಂಹಾರಃ ಸ ಏಷ ನೇತಿ ನೇತ್ಯಾದಿಃ॥

(ಭಾಷ್ಯಾರ್ಥ)

ನಾಲ್ಕು ಪ್ರಪಾಠಕಗಳಲ್ಲಿಯೂ[1] ಒಬ್ಬ ಆತ್ಮನನ್ನೇ ಸಮಾನವಾಗಿ ಪರಬ್ರಹ್ಮವೆಂದು ನಿರ್ಣಯಿಸಲಾಗಿರುತ್ತದೆ. ಆದರೆ (ಅದನ್ನು ತಿಳಿಯುವದಕ್ಕೆ) ಉಪಾಯವು ಮಾತ್ರ ಬೇರೆಬೇರೆಯಾಗಿರುತ್ತದೆ[2]. ಉಪೇಯನಾಗಿರುವವನು ಮಾತ್ರ ಅದೇ ಆತ್ಮನೇ. ನಾಲ್ಕನೆಯ (ಪ್ರಪಾಠಕ)ವಲ್ಲಿ "ಅಥಾತ ಆದೇಶೋ ನೇತಿ ನೇತಿ" (೨-೩-೬) (ಇನ್ನು ಆದ್ದರಿಂದ ಆದೇಶವು 'ಹೀಗಲ್ಲ, ಹೀಗಲ್ಲ') ಎಂದು ತಿಳಿಸಿತ್ತಲ್ಲ, ಅವನನ್ನೇ ಐದನೆಯ (ಪ್ರಪಾಠಕ)ದಲ್ಲಿ ಶಾಕಲ್ಯಯಾಜ್ಞವಲ್ಕ್ಯಸಂವಾದದಲ್ಲಿ (೩-೯-೨೬) ಪ್ರಾಣವನ್ನು ಪಣವಾಗಿ ಮಾಡಿ[3] ನಿಶ್ಚಯಿಸಲಾಯಿತು. ಮತ್ತೆ ಐದನೆಯ (ಪ್ರಪಾಠಕದ) ಕೊನೆಯಲ್ಲಿಯೂ (ನಿಶ್ಚಯಿಸಲಾಯಿತು ೩-೯-೨೮)[4]. ಮತ್ತೆ ಜನಕಯಾಜ್ಞವಲ್ಕ್ಯಸಂವಾದದಲ್ಲಿಯೂ (೪-೨-೪, ೪-೪-೨೨) ಹೀಗೆಂದು ನಿಶ್ಚಯಿಸಲಾಯಿತು. ಮತ್ತೆ ಇಲ್ಲಿ ಉಪನಿಷತ್ತಿನ ಕೊನೆಯಲ್ಲಿಯೂ (ಹೀಗೆಂದೇ ನಿರ್ಣಯಿಸಲಾಗಿದೆ). ನಾಲ್ಕು ಪ್ರಪಾಠಕಗಳಿಗೂ ಈ ಆತ್ಮನಲ್ಲಿಯೇ ತಾತ್ಪರ್ಯವು; ನಡುವೆ ಮತ್ತೆ ಯಾವ ಅರ್ಥವೂ ವಿವಕ್ಷಿತವಾಗಿಲ್ಲ ಎಂಬಿದನ್ನು ತಿಳಿಸುವದಕ್ಕಾಗಿ ಕೊನೆಯಲ್ಲಿ 'ಸ ಏಷ ನೇತಿ ನೇತಿ' (ಆ ಇವನೇ ಹೀಗಲ್ಲ ಹೀಗಲ್ಲ ಎಂದ ಆತ್ಮನು) ಎಂದು ಉಪಸಂಹಾರಮಾಡಿರುತ್ತದೆ.

---

1. ಅಧ್ಯಾಯಗಳನ್ನು ಪ್ರಪಾಠಕಗಳೆಂದೂ ಆಚಾರ್ಯರು ಕರೆದಿರುತ್ತಾರೆ, ಇವನ್ನೂ ಪ್ರವರ್ಗ್ಯದ ಎರಡು ಅಧ್ಯಾಯಗಳನ್ನೂ ಸೇರಿಸಿಯೇ ಭಾಷ್ಯಕಾರರು ಎಣಿಸಿರುತ್ತಾರಾದ್ದರಿಂದ ಅವರು ಭಾಷ್ಯಮಾಡಿರುವ ಮೊದಲನೆಯ ಅಧ್ಯಾಯವು ಆರಣ್ಯಕಕ್ರಮದಿಂದ ಮೂರನೆಯ ಅಧ್ಯಾಯವಾಗುತ್ತದೆ.

2. ಏಕೆಂದರೆ ಉಪಾಯದಲ್ಲಿ ಉಪನಿಷತ್ತಿಗೆ ತಾತ್ಪರ್ಯವಿಲ್ಲ, ಮಾಂ. ಕಾ. ಭಾ. ೩-೨-೬ (ಭಾ. ಭಾ. ೧೭೫).

3. ಈ ಔಪನಿಷದಪುರುಷನನ್ನು ನೀನು ತಿಳಿಸದಿದ್ದರೆ ನಿನ್ನ ತಲೆಯು ಬಿದ್ದುಹೋಗಲಿ! —ಎಂಬ ವಾಕ್ಯದಿಂದ ಸೂಚಿಸಿ.

4. ಇಲ್ಲಿ ನೇತಿ ನೇತಿ ಎಂಬ ವಾಕ್ಯವಿಲ್ಲ; ಟೀಕಾನುಸಾರವಾಗಿ ಇಲ್ಲಿಯೂ ಜ್ಞಾನಿಯ ಆತ್ಮನೇ ಬ್ರಹ್ಮವೆಂದೂ ಅದು ವಿಜ್ಞಾನಾನಂದರೂಪವೆಂದೂ ಹೇಳಿದೆ ಎಂದು ತಿಳಿಯಬೇಕಾಗುತ್ತದೆ. ಆದರೆ ಮೂಲಭಾಷ್ಯದಲ್ಲಿ 'ಸ ಏಷ ಪ್ರಶ್ನಾನ್ತೇ' ಎಂಬುದನ್ನು 'ಸ ಏಷ' ಎಂದಿಷ್ಟೇ ಎಂದು ಇಟ್ಟುಕೊಂಡರೆ ಈ ಕ್ಲೇಶವು ಬರುವದಿಲ್ಲ; ಏಕೆಂದರೆ ಆಗ ಶಾಕಲ್ಯಯಾಜ್ಞವಲ್ಕ್ಯರ ಸಂವಾದವನ್ನೇ ಆ ಅಧ್ಯಾಯಕ್ಕೆ ಕೊನೆ ಎಂದು ಭಾವಿಸಬಹುದು. ಅಥವಾ 'ಪುನಃ ಪ್ರಶ್ನಾನುಪಸಮಾಪ್ತೌ' ಎಂಬ ವಾಕ್ಯವನ್ನೇ ಅಧಿಕವೆಂದಾದರೂ ಕಲ್ಪಿಸಬಹುದು. ವಾರ್ತಿಕದಲ್ಲಿ ಪಂಚಮದಲ್ಲಿ ಎರಡಿಷ್ಟೇ ಇವೆ; ಸಮಾಪ್ತಿಯಲ್ಲಿ ಏನೂ ಇಲ್ಲ.

## ಅಮೃತತ್ವಕ್ಕೆ ಸಸಂನ್ಯಾಸಾತ್ಮಜ್ಞಾನವೇ ಸಾಧನ

(ಭಾಷ್ಯ)

೩೩೩. ಯಸ್ಮಾತ್ ಪ್ರಕಾರಶತೇನಾಽಪಿ ನಿರೂಪ್ಯಮಾಣೇ ತತ್ತ್ವೇ ನೇತಿನೇತ್ಯಾತ್ಮೈವ ನಿಷ್ಠಾ ನಾನ್ಯಾ ಉಪಲಭ್ಯತೇ ತರ್ಕೇಣ ವಾ ಆಗಮೇನ ವಾ, ತಸ್ಮಾತ್ ಏತದೇವ ಅಮೃತತ್ವಸಾಧನಂ ಯದೇತತ್ ನೇತಿನೇತ್ಯಾತ್ಮ ಪರಿಜ್ಞಾನಮ್, ಸರ್ವಸಂನ್ಯಾಸಶ್ಚ ಇತ್ಯೇತಮರ್ಥಮ್ ಉಪಸಂಜಿಹೀರ್ಷನ್ ಆಹ। ಏತಾವತ್ ಏತಾವನ್ಮಾತ್ರಂ ಯದೇತತ್ ನೇತಿನೇತ್ಯದ್ವೈತಾತ್ಮ ದರ್ಶನಮ್ । ಇದಂ ಚ ಅನ್ಯಸಹಕಾರಿಕಾರಣನಿರಪೇಕ್ಷಮೇವ ಅರೇ ಮೈತ್ರೇಯಿ, ಅಮೃತತ್ವಸಾಧನಮ್ । ಯತ್ ಪೃಷ್ಟವತೀ ಅಸಿ "ಯದೇವ ಭಗವಾನ್ ವೇದ ತದೇವ ಮೇ ಬ್ರೂಹಿ" (೪-೫-೪) ಅಮೃತತ್ವಸಾಧನಮ್ ಇತಿ, ತತ್ ಏತಾವದೇವ ಇತಿ ವಿಜ್ಞೇಯಂ ತ್ವಯಾ ಇತಿ ಹ್ಯೇವಂ ಕಿಲ ಅಮೃತತ್ವಸಾಧನಮ್ ಆತ್ಮಜ್ಞಾನಂ ಪ್ರಿಯಾಯೈ ಭಾರ್ಯಾಯೈ ಉಕ್ತ್ವಾ ಯಾಜ್ಞವಲ್ಕ್ಯಃ ಕಿಂ ಕೃತವಾನ್ ? ಯತ್ ಪೂರ್ವಂ ಪ್ರತಿಜ್ಞಾತಂ 'ಪ್ರವ್ರಜಿಷ್ಯನ್ ಅಸ್ಮಿ' (೪-೫-೨) ಇತಿ ತತ್ ಚಕಾರ, ವಿಜಹಾರ । ಪ್ರವ್ರಜಿತವಾನ್ ಇತ್ಯರ್ಥಃ ॥

(ಭಾಷ್ಯಾರ್ಥ)

**ತತ್ತ್ವವನ್ನು ನೂರು ಪ್ರಕಾರದಿಂದ ನೋಡಿದರೂ ನೇತಿ ನೇತಿ ಎಂಬ ಆತ್ಮನೇ ಕೊನೆಯೇ ಹೊರತು ತರ್ಕದಿಂದಲಾಗಲಿ ಆಗಮದಿಂದಾಗಲಿ (ನೋಡಿದಾಗ) ಮತ್ತೆ ಯಾವ (ಕೊನೆಯೂ) ಕಂಡುಬರುತ್ತಿಲ್ಲವಷ್ಟೆ[1] ; ಆದ್ದರಿಂದ ಈ ನೇತಿ ನೇತಿ ಎಂಬ ಆತ್ಮನನ್ನು ಅರಿತುಕೊಳ್ಳುವದು ಮತ್ತು ಸರ್ವ(ಕರ್ಮ)ಸಂನ್ಯಾಸವು[2] ಎಂಬಿದೇ ಅಮೃತತ್ವಕ್ಕೆ ಸಾಧನವು**- ಎಂಬೀ ಅರ್ಥವನ್ನು ಉಪಸಂಹಾರಮಾಡುವದಕ್ಕಾಗಿ (ಹೀಗೆಂದು) ಹೇಳುತ್ತಿದಾನೆ:

**ಇಷ್ಟೇ, ನೇತಿ ನೇತಿ ಎಂಬ ಆತ್ಮನನ್ನು ಕಂಡುಕೊಳ್ಳುವದೆಂಬುದಿದೆಯಲ್ಲ, ಇಷ್ಟುಮಾತ್ರವೇ, ಅಮೃತತ್ವಕ್ಕೆ ಸಾಧನವು, ಎಲೆ ಮೈತ್ರೇಯಿ,**

---

1. ಶ್ರುತಿಯಲ್ಲಿ ಉಪದೇಶಪ್ರಧಾನವಾಗಿಯೂ ತರ್ಕಪ್ರಧಾನವಾಗಿಯೂ ಹೇಳಿರುವದು ನೇತಿನೇತ್ಯಾತ್ಮನನ್ನು ತಿಳಿಸುವದರಲ್ಲಿಯೇ ಕೊನೆಗಂಡಿರುವದರಿಂದ ಮತ್ತೊಂದು ಸಾಧನವಿದೆ ಎಂಬುದನ್ನು ತಳ್ಳಿಹಾಕಿದಂತೆ ಆಯಿತು ಎಂದು ಅಭಿಪ್ರಾಯ.

2. ಏಷಣಾತ್ರಯದ ತ್ಯಾಗವು.

ಇದು ಮತ್ತೊಂದು ಸಹಕಾರಿಕಾರಣವನ್ನು ಬಯಸುವದಲ್ಲ.[1] 'ಭಗವಂತನಾದ (ನೀನು) ಯಾವ ಅಮೃತತ್ವಸಾಧನವನ್ನು ಅರಿತಿರುವೆಯೋ ಅದನ್ನೇ ನನಗೆ ಹೇಳು' (೪-೫-೪) ಎಂದು ಕೇಳಿದೆಯಲ್ಲ, ಅದು ಇಷ್ಟೇ ಎಂದು ನೀನು ತಿಳಿಯಬೇಕು ಎಂದು (ಹ= ಕಿಲ) ಪ್ರಿಯಳಾದ ಹೆಂಡತಿಗೆ[2] ಅಮೃತತ್ವಸಾಧನವನ್ನು ಹೇಳಿ ಯಾಜ್ಞವಲ್ಕ್ಯನು ಏನು ಮಾಡಿದನು ? 'ಪ್ರವ್ರಜನ ಮಾಡಲಿರುವೆನು' (೪-೫-೨) ಎಂದು ಮೊದಲು ಹೇಳಿದ್ದನಲ್ಲ, ಅದನ್ನು ಮಾಡಿದನು; ಹೊರಟುಹೋದನು ಎಂದರೆ ಪ್ರವ್ರಜನವನ್ನು ಮಾಡಿದನು ಎಂದರ್ಥ.[3]

## ಭಾಷ್ಯಾರ್ಥದ ಉಪಸಂಹಾರ

(ಭಾಷ್ಯ)

೩೩೪. ಪರಿಸಮಾಪ್ತಾ ಬ್ರಹ್ಮವಿದ್ಯಾ ಸಂನ್ಯಾಸಪರ್ಯವಸಾನಾ । ಏತಾವಾನ್ ಉಪದೇಶಃ, ಏತತ್ ವೇದಾನುಶಾಸನಮ್, ಏಷಾ ಪರಮನಿಷ್ಠಾ, ಏಷ ಪುರುಷಾರ್ಥಕರ್ತವ್ಯತಾನ್ತಃ ಇತಿ ॥

(ಭಾಷ್ಯಾರ್ಥ)

ಸಂನ್ಯಾಸದಲ್ಲಿ ಕೊನೆಗಾಣುವ[4] ಬ್ರಹ್ಮವಿದ್ಯೆಯು ಮುಗಿಯಿತು. ಇಷ್ಟೇ ಉಪದೇಶವು, ಇದೇ ವೇದದ ಅನುಶಾಸನವು, ಇದೇ ಕೊನೆಯ ನಿಷ್ಠೆ, ಇದೇ ಪುರುಷಾರ್ಥಕ್ಕಾಗಿ ಮಾಡಬೇಕಾದದ್ದರ ಕೊನೆ ಎಂದು (ತಿಳಿಯಬೇಕು).

# ಸಂನ್ಯಾಸವಿಷಯಕ್ಕೆ ಚರ್ಚೆ

## ಚರ್ಚೆಯ ಆವಶ್ಯಕತೆ

(ಭಾಷ್ಯ)

೩೩೫. ಇದಾನೀಂ ವಿಚಾರ್ಯತೇ ಶಾಸ್ತ್ರಾರ್ಥವಿವೇಕಪ್ರತಿಪತ್ತಯೇ ।

---

1. ಜ್ಞಾನಕ್ಕೆ ಅಮೃತತ್ವವನ್ನು ಕೊಡುವದಕ್ಕೆ ಕರ್ಮವೇ ಮೊದಲಾದದ್ದರ ಸಹಾಯವು ಬೇಡ. ಸೂ. ಭಾ. ೩-೪-೧ (ಭಾ. ಭಾ. ೪೩೭)ರಿಂದ ೩-೪-೨೦ (ಭಾ. ಭಾ. ೪೬೧)ರವರೆಗಿನ ಚರ್ಚೆಯನ್ನು ನೋಡಿ. ಈ. ಭಾ. ಭಾ. ೩೦ರಿಂದ ಮುಂದಕ್ಕೆ; ಕೇ. ಭಾ. ಭಾ. ೮೪, ಐ. ಭಾ ದ ಅವತರಣಿಕೆ; ತೈ. ಭಾ. ದ ಶೀಕ್ಷಾವಲ್ಲಿಯ ಉಪಸಂಹಾರದ ಚರ್ಚೆ; ಗೀ. ಭಾ ದ ೧೮-೬೬ರ ಚರ್ಚೆ- ಮೊದಲಾದವುಗಳಲ್ಲಿಯೂ ಇದನ್ನು ನಿರ್ಣಯಿಸಿದೆ.

2. ಪ್ರಿಯಳಾದ ಮೈತ್ರೇಯಿಗೆ ಸರ್ವಜ್ಞಕಲ್ಪರಾದ ಯಾಜ್ಞವಲ್ಕ್ಯರು ಹೇಳಿದ್ದಾದ್ದರಿಂದ ಇದೇ ಅಮೃತತ್ವಸಾಧನವೆಂದು ಭಾವ.

3. ಯಾಜ್ಞವಲ್ಕ್ಯರು ಕೃತಕೃತ್ಯರಾದ್ದರಿಂದ ಅವರಿಗೇನೂ ಕರ್ತವ್ಯಶೇಷವಿರಲಿಲ್ಲ ಎಂದು ಭಾವ. ಪೀಠಿಕೆಯನ್ನು ನೋಡಿ.

4. ಆತ್ಮಜ್ಞಾನಕ್ಕೆ ಆತ್ಯಂತಿಕವಾದ ಏಷಣಾತ್ಯಾಗವೇ ಫಲ; ಆ ಸಂನ್ಯಾಸದಿಂದ ಪಡೆದುಕೊಳ್ಳಬೇಕಾದದ್ದು ಮತ್ತೇನೂ ಇರುವದಿಲ್ಲ.

ಯತಃ ಆಕುಲಾನಿ ಹಿ[1] ವಾಕ್ಯಾನಿ ದೃಶ್ಯನ್ತೇ । "ಯಾವಜ್ಜೀವಮಗ್ನಿಹೋತ್ರಂ ಜುಹುಯಾತ್" ( ? ), "ಯಾವಜ್ಜೀವಂ ದರ್ಶಪೂರ್ಣಮಾಸಾಭ್ಯಾಂ ಯಜೇತ" ( ? ),[2] "ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಗ್ಂ ಸಮಾಃ" (ಈ. ೨), "ಏತದ್ವೈ ಜರಾಮರ್ಯಂ ಸತ್ರಂ ಯದಗ್ನಿಹೋತ್ರಮ್" (ಶತ. ಬ್ರಾ. ೧೨-೪-೧-೧) ಇತ್ಯಾದೀನಿ ಏಕಾಶ್ರಮ್ಯಜ್ಞಾಪಕಾನಿ। ಅನ್ಯಾನಿ ಚ ಆಶ್ರಮಾನ್ತರಪ್ರತಿಪಾದಕಾನಿ ವಾಕ್ಯಾನಿ "ವಿದಿತ್ವಾ ವ್ಯುತ್ಥಾಯ ಪ್ರವ್ರಜನ್ತಿ" (೩-೫-೧), "ಬ್ರಹ್ಮಚರ್ಯಂ ಸಮಾಪ್ಯ ಗೃಹೀ ಭವೇದ್ ಗೃಹಾದ್ ವನೀ ಭೂತ್ವಾ ಪ್ರವ್ರಜೇತ್ । ಯದಿ ವೇತರಥಾ ಬ್ರಹ್ಮಚರ್ಯಾದೇವ ಪ್ರವ್ರಜೇದ್ ಗೃಹಾದ್ವಾ ವನಾದ್ ವಾ" ( ? ಜಾ. ೪ ),[3] ಇತಿ। "ದ್ವಾವೇವ ಪನ್ಥಾನಾವನುನಿಷ್ಕ್ರಾನ್ತತರೌ ಭವತಃ ಕ್ರಿಯಾಪಥಶ್ಚೈವ ಪುರಸ್ತಾತ್ ಸಂನ್ಯಾಸಶ್ಚ । ತಯೋಃ ಸಂನ್ಯಾಸ ಏವಾತಿರೇಚಯತಿ" ( ? )[4] ಇತಿ । "ನ ಕರ್ಮಣಾ ನ ಪ್ರಜಯಾ ಧನೇನ ತ್ಯಾಗೇನೈಕೇಽಮೃತತ್ವಮಾನಶುಃ" (ತೈ. ನಾ. ೧೦-೫) ಇತ್ಯಾದೀನಿ। ತಥಾ ಸ್ಮೃತಯಶ್ಚ "ಬ್ರಹ್ಮಚರ್ಯವಾನ್ ಪ್ರವ್ರಜತಿ" (ಆ. ಧ. ೨-೨೧-೮-೧೦), "ಅವಿಶೀರ್ಣಬ್ರಹ್ಮಚರ್ಯೋ ಯಮಿಚ್ಛೇತ್ ತಮಾವಸೇತ್" (ವ. ೮-೨ ? ), "ತಸ್ಯಾಽಽಶ್ರಮವಿಕಲ್ಪಮೇಕೇ ಬ್ರುವತೇ" (ಗೌ. ಧ. ೩-೧)। ತಥಾ "ವೇದಾನಧೀತ್ಯ ಬ್ರಹ್ಮಚರ್ಯೇಣ ಪುತ್ರಪೌತ್ರಾನಿಚ್ಛೇತ್ ಪಾವನಾರ್ಥಂ ಪಿತೄಣಾಮ್। ಅಗ್ನೀನಾಧಾಯ ವಿಧಿವಚ್ಚೇಷ್ಟ್ವಯಜ್ಞೋ ವನಂ ಪ್ರವಿಶ್ಯಾಥ ಮುನಿರ್ಬುಭೂಷೇತ್" (ಮೋ. ಧ. ೧೭೫-೬),[5] "ಪ್ರಾಜಾಪತ್ಯಾಂ ನಿರೂಪ್ಯೇಷ್ಟಿಂ ಸರ್ವವೇದಸದಕ್ಷಿಣಾಮ್ । ಆತ್ಮನ್ಯಗ್ನೀನ್ ಸಮಾರೋಪ್ಯ ಬ್ರಾಹ್ಮಣಃ ಪ್ರವ್ರಜೇದ್ ಗೃಹಾತ್" (ಮನು. ೬-೩೮) ಇತ್ಯಾದ್ಯಾಃ। ಏವಂ ವ್ಯುತ್ಥಾನವಿಕಲ್ಪಕ್ರಮಯಥೇಷ್ಟಾಶ್ರಮಪ್ರತಿ

---

1. ಈ 'ಹಿ' ಇಲ್ಲದಿದ್ದರೂ ಸಾಗುತ್ತದೆ.

2. ಈ ಎರಡು ಶ್ರುತಿಗಳೂ ಬಹ್ವೃಚಬ್ರಾಹ್ಮಣದಲ್ಲಿವೆ ಎಂದು ಶಾಬರಭಾಷ್ಯ ಜೈ. ಸೂ. ೨-೪-೧ರಲ್ಲಿದೆ ; ಆದರೆ ಅಲ್ಲಿ ಇವು ಇರುವಂತೆ ಕಾಣಲಿಲ್ಲ. 'ಅಗ್ನಿಹೋತ್ರಂ ಜುಹೋತಿ' ಎಂದೇ ಸಾಮಾನ್ಯವಾಗಿ ಪಾಠ.

3. ನಿ॥ ಅಚ್ಚಿನ ಜಾಬಾಲದಲ್ಲಿ ಹೀಗಿದೆ : "ಬ್ರಹ್ಮಚರ್ಯಂ ಪರಿಸಮಾಪ್ಯ ಗೃಹೀ ಭವೇತ್ । ಗೃಹೀ ಭೂತ್ವಾ ವನೀ ಭವೇತ್ । ವನೀ ಭೂತ್ವಾ ಪ್ರವ್ರಜೇತ್ ..." ಸೂ. ಭಾ. ೩-೪-೨೨ರ ಭಾ. ಭಾ. ೪೬೧ರಲ್ಲಿಯೂ ಹೀಗೆಯೇ ಇದೆ. ಇಲ್ಲಿ ಮಾತ್ರ ಪೂರ್ವಾರ್ಧವು ಬೇರೆಯಾಗಿರುವವೇಕೆಂಬುದು ತಿಳಿಯಲಿಲ್ಲ.

4. ಈ ಶ್ರುತಿ ಯಾವನೆಂಬುದು ತಿಳಿಯಲಿಲ್ಲ; ಈ. ಭಾ. ೨ (ಭಾ. ಭಾ. ೭)ರಲ್ಲಿಯೂ ಉದಾಹೃತವಾಗಿದೆ. ಇದು ಶ್ರುತಿಯ ಅರ್ಥವೋ ಸಾಕ್ಷಾಚ್ಛ್ರುತಿಯೋ ವಿಚಾರಣೀಯ.

5. ಅಚ್ಚಿನ ಪಾಠದಲ್ಲಿ ಪುತ್ರಪುತ್ರಾನ್ ಎಂದಿದೆ.

ಪತ್ತಿಪ್ರತಿಪಾದಕಾನಿ ಹಿ ಶ್ರುತಿಸ್ಮೃತಿವಾಕ್ಯಾನಿ ಶತಶಃ ಉಪಲಭ್ಯನ್ತೇ ಇತರೇತರವಿರುದ್ಧಾನಿ। ಆಚಾರಶ್ಚ ತದ್ವಿದಾಮ್ । ವಿಪ್ರತಿಪತ್ತಿಶ್ಚ ಶಾಸ್ತ್ರಾರ್ಥಪ್ರತಿಪತ್ತೄಣಾಂ ಬಹುವಿದಾಮಪಿ। ಅತೋ ನ ಶಕ್ಯತೇ ಶಾಸ್ತ್ರಾರ್ಥೋ ಮನ್ದಬುದ್ಧಿಭಿರ್ವಿವೇಕೇನ ಪ್ರತಿಪತ್ತುಮ್ । ಪರಿನಿಷ್ಠಿತಶಾಸ್ತ್ರನ್ಯಾಯಬುದ್ಧಿಭಿರೇವ ಹಿ ಏಷಾಂ ವಾಕ್ಯಾನಾಂ ವಿಷಯವಿಭಾಗಃ ಶಕ್ಯತೇ ಅವಧಾರಯಿತುಮ್ । ತಸ್ಮಾತ್ ಏಷಾಂ ವಿಷಯವಿಭಾಗಜ್ಞಾಪನಾಯ ಯಥಾಬುದ್ಧಿಸಾಮರ್ಥ್ಯಂ ವಿಚಾರಯಿಷ್ಯಾಮಃ ॥

(ಭಾಷ್ಯಾರ್ಥ)

ಈಗ ಶಾಸ್ತ್ರಾರ್ಥವನ್ನು ವಿಂಗಡಿಸಿ ತಿಳಿದುಕೊಳ್ಳುವದಕ್ಕೆ (ಅನುಕೂಲಿಸುವಂತೆ) ವಿಚಾರಮಾಡಲಾಗುವದು. ಏಕೆಂದರೆ ವಾಕ್ಯಗಳು (ಒಂದಕ್ಕೊಂದು) ವಿರುದ್ಧವಾಗಿ ಕಾಣುತ್ತಿವೆ. "ಬದುಕಿರುವವರೆಗೂ ಅಗ್ನಿಹೋತ್ರವನ್ನು ಹೋಮಮಾಡುತ್ತಿರಬೇಕು" (?), "ಬದುಕಿರುವವರೆಗೂ ದರ್ಶಪೂರ್ಣಮಾಸಗಳಿಂದ ಯಾಗಮಾಡುತ್ತಿರಬೇಕು" (?), "ಇಲ್ಲಿ ಕರ್ಮವನ್ನು ಮಾಡುತ್ತಲೇ ನೂರು ವರ್ಷಗಳು ಬಾಳಲಿಚ್ಛಿಸಬೇಕು" (ಈ. ೨), "ಅಗ್ನಿಹೋತ್ರವೆಂಬುದಿದೆಯಲ್ಲ, ಇದೇ ಮುಪ್ಪುಸಾವುಗಳವರೆಗಿನ ಸತ್ರವು ." (ಶತ. ಬ್ರಾ. ೧೨-೪-೧-೧)-ಇವೇ ಮುಂತಾದವು ಆಶ್ರಮವು ಒಂದೇ ಎಂದು ತಿಳಿಸುತ್ತಿವೆ [1] ಆಶ್ರಮಾಂತರಗಳೂ (ಉಂಟೆಂಬುದನ್ನು) ತಿಳಿಸುವ ಬೇರೆಯ ವಾಕ್ಯಗಳೂ (ಇವೆ): "ಅರಿತುಕೊಂಡು, (ಏಷಣೆಗಳನ್ನು) ಬಿಟ್ಟಿದ್ದು, ಪ್ರವ್ರಜನಮಾಡುತ್ತಾರೆ",[2] "ಬ್ರಹ್ಮಚರ್ಯವನ್ನು ಮುಗಿಸಿ ಗೃಹಸ್ಥನಾಗಬೇಕು ; ಗೃಹಸ್ಥನಾಗಿದ್ದು ಅಲ್ಲಿಂದ ವಾನಪ್ರಸ್ಥನಾಗಿ ಪ್ರವ್ರಜನಮಾಡಬೇಕು ; ಅಥವಾ ಮತ್ತೊಂದು ಬಗೆಯಿಂದಲೂ (ಮಾಡಬಹುದು) : ಬ್ರಹ್ಮಚರ್ಯದಿಂದಲೇ ಪ್ರವ್ರಜನಮಾಡಬಹುದು, ಗೃಹದಿಂದಲಾಗಲಿ ವನದಿಂದಲಾಗಲಿ (ಪ್ರವ್ರಜನಮಾಡಬಹುದು)" (ಜಾ. ೪ ?), ಎಂದೂ, "ಎರಡೇ ಹಾದಿಗಳು ಅನುಕ್ರಮವಾಗಿ ಹೊರಟಿರುತ್ತವೆ, ಕ್ರಿಯೆಯ ಹಾದಿಯೇ ಮೊದಲು, ಸಂನ್ಯಾಸವು (ಆಮೇಲೆ), ಅವುಗಳಲ್ಲಿ ಸಂನ್ಯಾಸವೇ ಹೆಚ್ಚಿನದು"( ? ) ಎಂದೂ[3] "ಕರ್ಮದಿಂದಲ್ಲ, ಪ್ರಜೆಯಿಂದಲ್ಲ, ಧನದಿಂದಲ್ಲ, ತ್ಯಾಗದಿಂದಲೇ ಕೆಲವರು ಅಮೃತತ್ವವನ್ನು ಹೊಂದಿರುತ್ತಾರೆ" (ತೈ. ನಾ. ೧೦-೫) -ಎಂದು ಮುಂತಾದ (ವಚನಗಳು ಇವೆ).

---

1. ಗೃಹಸ್ಥಾಶ್ರಮಕ್ಕಿಂತ ಬೇರೆಯ ಆಶ್ರಮವಿಲ್ಲವೆಂದು ತಿಳಿಸುತ್ತದೆ.
2. ಗಾರ್ಹಸ್ಥ್ಯವಾದ ಬಳಿಕ ಸಂನ್ಯಾಸವಾಗಬಹುದೆಂಬುದಕ್ಕೆ ಪ್ರಮಾಣವಿದು.
3. ಗೃಹಸ್ಥಾಶ್ರಮವು ಅತ್ಯವಶ್ಯವೆಂಬುದೇನೂ ಇಲ್ಲ ಎಂಬುದಕ್ಕೆ ಪ್ರಮಾಣವಿದು.

ಹೀಗೆಯೇ ಸ್ಮೃತಿಗಳೂ (ಒಂದಕ್ಕೊಂದು ವಿರುದ್ಧವಾಗಿವೆ) : "ಬ್ರಹ್ಮಚರ್ಯಾಶ್ರಮವುಳ್ಳವನಾಗಿ ಪ್ರವ್ರಜನಮಾಡಬೇಕು" (ಆ. ಧ.೨-೨೧-೮-೧೦), "ಬ್ರಹ್ಮಚರ್ಯವನ್ನು ಕೆಡಿಸಿಕೊಳ್ಳದೆ ಇರುವವನು (ಮುಂದೆ) ಯಾವ ಆಶ್ರಮದಲ್ಲಿ ಇಚ್ಛೆಯಿರುವದೋ ಅದರಲ್ಲಿರಬೇಕು" (ವ. ೮-೨), "ಅವನಿಗೆ ಆಶ್ರಮ ವಿಕಲ್ಪವನ್ನು ಕೆಲವರು ಹೇಳುತ್ತಾರೆ" (ಗೌ. ಧ. ೩-೧), ಹೀಗೆಯೇ "ಬ್ರಹ್ಮಚರ್ಯದಿಂದಿದ್ದು ವೇದಗಳನ್ನು ಅಧ್ಯಯನಮಾಡಿ ಪುತ್ರರನ್ನೂ ಪೌತ್ರರನ್ನೂ ಪಿತೃಗಳನ್ನೂ ಪಾವನಗೊಳಿಸುವದಕ್ಕಾಗಿ (ಪಡೆಯ)ಲೆಳಸಬೇಕು ; ಅಗ್ನಿಗಳನ್ನು ಆಧಾನಮಾಡಿ ವಿಧಿವತ್ತಾಗಿ ಯಜ್ಞಗಳನ್ನು ಮಾಡಿ ವನವನ್ನು ಪ್ರವೇಶಿಸಿ ಆ ಬಳಿಕ ಮುನಿಯಾಗಲೆಳಸಬೇಕು" (ಮೋ. ಧ ೧೭೫-೬), "ಸರ್ವಸ್ವವನ್ನೂ ದಕ್ಷಿಣೆಯಾಗಿ ಕೊಡುವ ಪ್ರಾಜಾಪತ್ಯೇಷ್ಟಿಯನ್ನು ಮಾಡಿ ತನ್ನಲ್ಲಿಯೇ ಅಗ್ನಿಗಳನ್ನು ಸಮಾರೋಪಮಾಡಿಕೊಂಡು ಬ್ರಾಹ್ಮಣನಾದವನು ಮನೆಯಿಂದ ಪ್ರವ್ರಜನಮಾಡಬೇಕು" (ಮನು. ೬-೩೮)- ಮುಂತಾದ (ವಚನಗಳೂ ಇವೆ).

ಹೀಗೆ ಸಂನ್ಯಾಸಕ್ಕೆ ವಿಕಲ್ಪ, ಕ್ರಮ, (ತನಗೆ) ಇಷ್ಟವಾದಂತೆ ಆಶ್ರಮವನ್ನು ಪಡೆಯುವದು -(ಇವುಗಳನ್ನು) ಹೇಳುವ ನೂರಾರು ಶ್ರುತಿಸ್ಮೃತಿವಾಕ್ಯಗಳು ಒಂದಕ್ಕೊಂದು ವಿರುದ್ಧವಾಗಿ ಕಂಡುಬರುತ್ತಿವೆ. ಅವುಗಳನ್ನು ಬಲ್ಲವರ ಆಚಾರಗಳೂ (ಒಂದಕ್ಕೊಂದು ವಿರುದ್ಧವಾಗಿವೆ) ಶಾಸ್ತ್ರಾರ್ಥವನ್ನು ತಿಳಿದಿರುವವರು, ಹೆಚ್ಚು ತಿಳಿದವರಾದರೂ, ವಿರುದ್ಧವಾಗಿರುವ ಅಭಿಪ್ರಾಯವುಳ್ಳವರಾಗಿರುವದು (ಕಂಡುಬರುತ್ತಿದೆ). ಆದ್ದರಿಂದ ಅಲ್ಪಬುದ್ಧಿಗಳಾದವರಿಗೆ ಶಾಸ್ತ್ರಾರ್ಥವನ್ನು ವಿಂಗಡಿಸಿ ತಿಳಿದುಕೊಳ್ಳುವದು ಶಕ್ಯವಾಗಿರುವದಿಲ್ಲ ಶಾಸ್ತ್ರ, ನ್ಯಾಯ- (ಇವುಗಳಲ್ಲಿ) ನೆಲೆನಿಂತಿರುವ ಬುದ್ಧಿಯುಳ್ಳವರಿಂದಲೇ ಈ ವಾಕ್ಯಗಳಿಗೆ ವಿಷಯಗಳನ್ನು ವಿಂಗಡಿಸಿ ನಿಶ್ಚಯಿಸುವದು ಆದೀತು. ಆದ್ದರಿಂದ ಈ (ವಾಕ್ಯಗಳ) ವಿಷಯಗಳನ್ನು ವಿಂಗಡಿಸಿ ತಿಳಿಸುವದಕ್ಕಾಗಿ (ನಮ್ಮ) ಬುದ್ಧಿಸಾಮರ್ಥ್ಯವಿದ್ದಮಟ್ಟಿಗೆ ವಿಚಾರಮಾಡುವೆವು.

## ಪೂರ್ವಪಕ್ಷ: ವೇದಕ್ಕೆ ಕರ್ಮದಲ್ಲಿಯೇ ತಾತ್ಪರ್ಯ

(ಭಾಷ್ಯ)

೩೩೬. ಯಾವಜ್ಜೀವಶ್ರುತ್ಯಾದಿವಾಕ್ಯಾನಾಮ್ ಅನ್ಯಾರ್ಥಾಸಂಭವಾತ್ ಕ್ರಿಯಾವಸಾನ ಏವ ವೇದಾರ್ಥಃ। "ತಂ ಯಜ್ಞಪಾತ್ರೈರ್ದಹನ್ತಿ" ( ? )[1] ಇತಿ ಅನ್ತ್ಯಕರ್ಮಶ್ರವಣಾತ್ ಜರಾಮರ್ಯಶ್ರವಣಾಚ್ಚ। ಲಿಙ್ಗಾಚ್ಚ 'ಭಸ್ಮಾನ್ತಂ ಶರೀರಮ್' (ಈ. ೧೭) ಇತಿ। ನ ಹಿ ಪಾರಿವ್ರಾಜ್ಯಪಕ್ಷೇ ಭಸ್ಮಾನ್ತತಾ ಶರೀರಸ್ಯ ಸ್ಯಾತ್। ಸ್ಮೃತಿಶ್ಚ। "ನಿಷೇಕಾದಿಶ್ಮಶಾನಾನ್ತೋ ಮನ್ತ್ರೈರ್ಯಸ್ಯೋದಿತೋ ವಿಧಿಃ। ತಸ್ಯ ಶಾಸ್ತ್ರೇಽಧಿಕಾರೋಽಸ್ಮಿಞ್ಜ್ಞೇಯೋ ನಾನ್ಯಸ್ಯ ಕಸ್ಯಚಿತ್॥"

1. ಇದು ಯಾವ ಶ್ರುತಿಯೋ ತಿಳಿಯದು. ಐ. ಭಾ. ಅವ. (ಭಾ. ಭಾ. ೭ ರಲ್ಲಿಯೂ ಉದಾಹೃತವಾಗಿದೆ.

(ಮನು. ೨-೧೬) ಇತಿ। ಸಮನ್ತ್ರಕಂ ಹಿ ಯತ್ ಕರ್ಮ ವೇದೇನ ಇಹ ವಿಧೀಯತೇ ತಸ್ಯ ಶ್ಮಶಾನಾನ್ತತಾಂ ದರ್ಶಯತಿ ಸ್ಮೃತಿಃ। ಅಧಿಕಾರಾಭಾವಪ್ರದರ್ಶನಾಚ್ಚ ಅತ್ಯನ್ತಮೇವ ಶ್ರುತ್ಯಧಿಕಾರಾಭಾವೋಽಕರ್ಮಿಣೋ ಗಮ್ಯತೇ। ಅಗ್ನ್ಯುದ್ವಾಸನಾಪವಾದಾಚ್ಚ "ವೀರಹಾ ವಾ ಏಷ ದೇವಾನಾಂ ಯೋಽಗ್ನಿಮುದ್ವಾಸಯತೇ" (ತೈ. ಸಂ. ೧-೫-೨-೧) ಇತಿ। ನನು ವ್ಯುತ್ಥಾನಾದಿವಿಧಾನಾತ್ ವೈಕಲ್ಪಿಕಂ ಕ್ರಿಯಾವಸಾನತ್ವಂ ವೇದಾರ್ಥಸ್ಯ। ನ। ಅನ್ಯಾರ್ಥತ್ವಾದ್ ವ್ಯುತ್ಥಾನಾದಿಶ್ರುತೀನಾಮ್। "ಯಾವಜ್ಜೀವಮಗ್ನಿಹೋತ್ರಂ ಜುಹೋತಿ"[1] ( ? ), "ಯಾವಜ್ಜೀವಂ ದರ್ಶಪೂರ್ಣಮಾಸಾಭ್ಯಾಂ ಯಜೇತ" (? ) ಇತ್ಯೇವಮಾದೀನಾಂ ಶ್ರುತೀನಾಂ ಜೀವನಮಾತ್ರನಿಮಿತ್ತತ್ವಾದ್ ಯದಾ ನ ಶಕ್ಯತೇ ಅನ್ಯಾರ್ಥತಾ ಕಲ್ಪಯಿತುಮ್, ತದಾ ವ್ಯುತ್ಥಾನಾದಿವಾಕ್ಯಾನಾಂ ಕರ್ಮಾನಧಿಕೃತವಿಷಯತ್ವಸಂಭವಾತ್ । "ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಂ ಸಮಾಃ" (ಈ. ೨) ಇತಿ ಚ ಮನ್ತ್ರವರ್ಣಾತ್। "ಜರಯಾ ವಾ ಹ್ಯೇವಾಸ್ಮಾನ್ಮುಚ್ಯತೇ ಮೃತ್ಯುನಾ ವಾ" (ಶತ. ಬ್ರಾ. ೧೨-೪-೧-೧) ಇತಿ ಚ ಜರಾಮೃತ್ಯುಭ್ಯಾಮ್ ಅನ್ಯತ್ರ ಕರ್ಮವಿಯೋಗಚ್ಛಿದ್ರಾಸಂಭವಾತ್ ಕರ್ಮಣಾಂ[2] ಶ್ಮಶಾನಾನ್ತತ್ವಂ ನ ವೈಕಲ್ಪಿಕಮ್। ಕಾಣಕುಬ್ಜಾದಯೋಽಪಿ ಕರ್ಮಣ್ಯನಧಿಕೃತಾ ಅನುಗ್ರಾಹ್ಯಾ ಏವ ಶ್ರುತ್ಯಾ ಇತಿ ವ್ಯುತ್ಥಾನಾದ್ಯಾಶ್ರಮಾನ್ತರವಿಧಾನಂ ನಾನುಪಪನ್ನಮ್। ಪಾರಿವ್ರಾಜ್ಯಕ್ರಮವಿಧಾನಸ್ಯ ಅನವಕಾಶತ್ವಮ್ ಇತಿ ಚೇತ್। ನ। ವಿಶ್ವಜಿತ್ಸರ್ವಮೇಧಯೋರ್ಯಾವಜ್ಜೀವವಿಧ್ಯಪವಾದತ್ವಾತ್। ಯಾವಜ್ಜೀವಾಗ್ನಿಹೋತ್ರಾದಿವಿಧೇಃ ವಿಶ್ವಜಿತ್ಸರ್ವಮೇಧಯೋರೇವ ಅಪವಾದಃ। ತತ್ರ ಚ ಕ್ರಮಪ್ರತಿಪತ್ತಿಸಂಭವಃ "ಬ್ರಹ್ಮಚರ್ಯಂ ಸಮಾಪ್ಯ ಗೃಹೀ ಭವೇದ್ ಗೃಹಾದ್ ವನೀ ಭೂತ್ವಾ ಪ್ರವ್ರಜೇತ್" (ಜಾ. ೪ ? ) ಇತಿ। ವಿರೋಧಾನುಪಪತ್ತೇಃ। ನ ಹಿ ಏವಂವಿಷಯತ್ವೇ ಪಾರಿವ್ರಾಜ್ಯಕ್ರಮವಿಧಾನವಾಕ್ಯಸ್ಯ ಕಶ್ಚಿದ್ ವಿರೋಧಃ। ಕ್ರಮಪ್ರತಿಪತ್ತೇರನ್ಯವಿಷಯಪರಿಕಲ್ಪನಾಯಾಂ ತು ಯಾವಜ್ಜೀವವಿಧಾನಶ್ರುತಿಃ ಸ್ವವಿಷಯಾತ್ ಸಂಕೋಚಿತಾ ಸ್ಯಾತ್। ಕ್ರಮಪ್ರತಿಪತ್ತೇಸ್ತು ವಿಶ್ವಜಿತ್ಸರ್ವಮೇಧವಿಷಯತ್ವಾತ್ ನ ಕಶ್ಚಿದ್ಬಾಧಃ॥

---

1. 'ಜುಹುಯಾತ್' ಎಂದು ಹಿಂದೆ ಇರುವದು ಬರೆದವರ ಕೈತಪ್ಪಿನಿಂದ ಬಿದ್ದಿರಬಹುದೆ ? ಮಿಕ್ಕ ಭಾಷ್ಯಗಳಲ್ಲಿ 'ಜುಹೋತಿ' ಎಂದೇ ಇದೆ.

2. 'ಕರ್ಮಿಣಾಂ' ಎಂಬುದನ್ನು ಹೀಗೆಂದು ತಿದ್ದಿಕೊಂಡಿದೆ.

(ಭಾಷ್ಯಾರ್ಥ)

ಯಾವಜ್ಜೀವಶ್ರುತಿಯೇ ಮುಂತಾದ ವಾಕ್ಯಗಳಿಗೆ ಮತ್ತೊಂದು ಅರ್ಥವು ಸಂಭವಿಸುವದಿಲ್ಲವಾದ್ದರಿಂದ ವೇದಾರ್ಥವು ಕ್ರಿಯೆಯಲ್ಲಿಯೇ ಕೊನೆಗಂಡಿರುತ್ತದೆ.[1] "ಅವನನ್ನು ಯಜ್ಞಪಾತ್ರೆಗಳೊಡನೆ ಸುಡುತ್ತಾರೆ'' (?) ಎಂದು ಕೊನೆಯ ಕರ್ಮವನ್ನು ಶ್ರುತಿಯಲ್ಲಿ ಹೇಳಿರುವದರಿಂದಲೂ ಮುಪ್ಪುಸಾವಿನವರೆಗೆ (ಅಗ್ನಿಹೋತ್ರ) ಎಂಬ ಶ್ರುತಿಯಿರುವದರಿಂದಲೂ (ಹೀಗೆ). 'ಶರೀರವು ಭಸ್ಮಾಂತವಾಗಲಿ!' (ಈ. ೧೭) ಎಂದು (ಶ್ರುತಿಯ) ಲಿಂಗವೂ ಇದೆ; ಪಾರಿವ್ರಾಜ್ಯವೂ (ವೇದಾರ್ಥ) ಎಂಬ ಪಕ್ಷದಲ್ಲಿ ಶರೀರವು ಭಸ್ಮಾಂತವಾಗಲಾರದಷ್ಟೆ?[2] "ನಿಷೇಕದಿಂದ ಹಿಡಿದು ಶ್ಮಶಾನ(ಕರ್ಮ)ದವರೆಗಿನ (ಕರ್ಮಗಳ) ವಿಧಿಯನ್ನು ಮಂತ್ರಗಳು ಯಾವನಿಗಾಗಿ ಹೇಳಿವೆಯೋ, ಅವನಿಗೆ ಈ (ಧರ್ಮ)ಶಾಸ್ತ್ರದಲ್ಲಿ ಅಧಿಕಾರವೆಂದು ತಿಳಿಯಬೇಕು, ಮತ್ತೆ (ಯಾರೊಬ್ಬನಿಗೂ) ಇಲ್ಲ" (ಮನು. ೨-೧೬) ಎಂದು ಸ್ಮೃತಿಯೂ ಇದೆ. ಸಮಂತ್ರಕವಾಗಿ ಯಾವ ಕರ್ಮವು ವೇದದಲ್ಲಿ ಇಲ್ಲಿ ವಿಹಿತವಾಗಿರುತ್ತದೆಯೋ ಅದು ಶ್ಮಶಾನದವರೆಗೂ (ಇರುವದು) ಎಂದು (ಈ) ಸ್ಮೃತಿಯು ತಿಳಿಸುತ್ತದೆಯಲ್ಲವೆ[3]? (ಈ ಶಾಸ್ತ್ರದಲ್ಲಿ ಮತ್ತೊಬ್ಬನಿಗೆ) ಅಧಿಕಾರವಿಲ್ಲ ಎಂದು ಹೇಳಿರುವದರಿಂದ, ಅಕರ್ಮಿಯಾದವನಿಗೆ ಶ್ರುತಿಯಲ್ಲಿ ಅಧಿಕಾರವಿಲ್ಲ ಎಂದು ನಿಶ್ಚಯವಾಗುತ್ತದೆ. "ಯಾವನು ಅಗ್ನಿಯನ್ನು ಉದ್ವಾಸನಮಾಡುವನೋ, ಅವನು ದೇವತೆಗಳಲ್ಲಿ ವೀರಹತ್ಯೆಯನ್ನು ಮಾಡಿದವನು'' (ತೈ. ಸಂ. ೧-೫-೨-೧) ಎಂದು ಅಗ್ನ್ಯುದ್ವಾಸನೆಯನ್ನು ನಿಂದಿಸಿರುವದರಿಂದಲೂ (ಕರ್ಮದಲ್ಲಿಯೇ ವೇದಕ್ಕೆ ತಾತ್ಪರ್ಯವೆನ್ನಬೇಕು).

(ಆಕ್ಷೇಪ):- ವ್ಯುತ್ಥಾನವೇ ಮುಂತಾದ (ಆಶ್ರಮಗಳನ್ನು) ವಿಧಿಸಿರುವದರಿಂದ ವೇದಾರ್ಥವು ಕ್ರಿಯೆಯಲ್ಲಿಯೇ ಕೊನೆಗಂಡಿರುವದೆಂಬುದು ವಿಕಲ್ಪವೆನ್ನಬಹುದಲ್ಲ![4]

---

1. ತಾತ್ಪರ್ಯವುಳ್ಳದ್ದಾಗಿದೆ; ಕರ್ಮವನ್ನು ಬಿಟ್ಟು ಮತ್ತೊಂದು ಮಾಡಬೇಕಾದದ್ದು ಉಳಿಯುವದಿಲ್ಲ.

2. ಸಂನ್ಯಾಸಿಯನ್ನು ಸುಡುವದಿಲ್ಲ, ಹೂಳುತ್ತಾರೆ, ಆದರೆ ಈ ಶ್ರುತಿಯಲ್ಲಿ ಶರೀರವು ಭಸ್ಮಾಂತವಾಗಲಿ ಎಂದು ಇದೆ. ಇದು ಸಾಯುವವರೆಗೂ ಗೃಹಸ್ಥನೇ ಆಗಿರಬೇಕೆಂಬುದಕ್ಕೆ ಲಿಂಗವು, ಗುರುತು.

3. ಆದ್ದರಿಂದ ನಡುವೆ ಕರ್ಮವನ್ನು ಬಿಡುವದಕ್ಕೆ ಬರುವದಿಲ್ಲ.

4. ಕರ್ಮವನ್ನೂ ವಿಧಿಸಿದೆ, ಸಂನ್ಯಾಸವನ್ನೂ ವಿಧಿಸಿದೆ; ಆದ್ದರಿಂದ ವಿರಕ್ತರಾದವರಿಗೆ ಸಂನ್ಯಾಸಾದಿಗಳು, ಮಿಕ್ಕವರಿಗೆ ಕರ್ಮ -ಎಂದು ವಿಕಲ್ಪವಾಗಬಹುದಲ್ಲವೆ? -ಎಂದರ್ಥ.

(ಪರಿಹಾರ) :- ಹಾಗಲ್ಲ. ಏಕೆಂದರೆ ವ್ಯುತ್ಥಾನವೇ ಮುಂತಾದ ಶ್ರುತಿಗಳಿಗೆ ಬೇರೆಯ ಪ್ರಯೋಜನವಿದೆ. (ಇದರ ವಿವರ): "ಬದುಕಿರುವವರೆಗೂ ಅಗ್ನಿಹೋತ್ರವನ್ನು ಹೋಮಮಾಡುತ್ತಿರಬೇಕು" (?), "ಬದುಕಿರುವವರೆಗೂ ದರ್ಶಪೂರ್ಣಮಾಸಗಳಿಂದ ಯಾಗಮಾಡುತ್ತಿರಬೇಕು" (?) -ಎಂಬಿವೇ ಮುಂತಾದ ಶ್ರುತಿಗಳಿಗೆ ಬದುಕಿರುವದೆಂಬುದೊಂದೇ ನಿಮಿತ್ತವಾಗಿರುವದರಿಂದ ಮತ್ತೊಂದು ಅರ್ಥವನ್ನು ಕಲ್ಪಿಸುವದಾಗುವದಿಲ್ಲವೆಂದು ಯಾವಾಗ (ಆಯಿತೋ) ಆಗ ವ್ಯುತ್ಥಾನಾದಿವಾಕ್ಯಗಳು ಕರ್ಮದಲ್ಲಿ ಅಧಿಕಾರಿಗಳಲ್ಲವವರ ವಿಷಯ ಎಂದಾಗಬಹುದಾಗುತ್ತದೆ. "ಇಲ್ಲಿ ಕರ್ಮಗಳನ್ನು ಮಾಡುತ್ತಲೇ ನೂರುವರ್ಷ ಬಾಳಲು ಇಚ್ಛಿಸಬೇಕು" (ಈ. ೨) ಎಂದು ಮಂತ್ರವರ್ಣವಿರುವದರಿಂದಲೂ "ಮುಪ್ಪಿನಿಂದಾಗಲಿ ಸಾವಿನಿಂದಾಗಲಿ ಈ (ಅಗ್ನಿಹೋತ್ರ)ದಿಂದ ಮುಕ್ತನಾಗುತ್ತಾನೆ" (ಶತ. ಬ್ರಾ. ೧೨-೪-೧-೧) ಎಂದು ಹೇಳಿರುವದರಿಂದ ಮುಪ್ಪುಸಾವುಗಳಲ್ಲದೆ ಮತ್ತೆಲ್ಲಿಯೂ ಕರ್ಮವು ತಪ್ಪುವ ಅವಕಾಶವಿಲ್ಲವಾದ್ದರಿಂದಲೂ ಕರ್ಮಗಳು ಶ್ಮಶಾನದವರಗೂ (ಇರಬೇಕು) ಎಂಬುದು ವೈಕಲ್ಪಿಕವಾಗಲಾರದು. (ಇದಲ್ಲದೆ) ಕರ್ಮದಲ್ಲಿ ಅಧಿಕಾರವಿಲ್ಲದ ಕುರುಡ, ಗುಜ್ಜಾರಿ -ಮುಂತಾದವರನ್ನು ಶ್ರುತಿಯು ಅನುಗ್ರಹಿಸಲೇಬೇಕಷ್ಟೆ, ಆದ್ದರಿಂದ ವ್ಯುತ್ಥಾನವೇ ಮುಂತಾದ ಆಶ್ರಮಾಂತರಗಳನ್ನು ವಿಧಿಸಿರುವದು ಹೊಂದುವದಿಲ್ಲವೆಂಬುದಿಲ್ಲ.[1]

(ಆಕ್ಷೇಪ) :- ಪಾರಿವ್ರಾಜ್ಯವನ್ನು (ಮಾಡುವ) ಕ್ರಮವನ್ನು ವಿಧಿಸಿರುವದಕ್ಕೆ (ಈ ಪಕ್ಷದಲ್ಲಿ) ಅವಕಾಶವಿರುವದಿಲ್ಲವಲ್ಲ ![2]

(ಪರಿಹಾರ) :- ಹಾಗಲ್ಲ ಏಕೆಂದರೆ ವಿಶ್ವಜಿತ್ತು, ಸರ್ವಮೇಧ- ಇವೆರಡೂ ಯಾವಜ್ಜೀವವಿಧಿಗೆ (ಅಪವಾದವಾಗಿರುತ್ತವೆ. ಇದರ ವಿವರ). ಯಾವಜ್ಜೀವವೂ ಅಗ್ನಿಹೋತ್ರಾದಿಗಳನ್ನು (ಮಾಡಬೇಕೆಂಬ) ವಿಧಿಗೆ ವಿಶ್ವಜಿತ್ತು, ಸರ್ವ

---

1. ಕುರುಡನೇ ಮುಂತಾದವರಿಗೆ ಕರ್ಮಾಧಿಕಾರವಿಲ್ಲದ್ದರಿಂದ ಅವರಿಗೆ ಶ್ರುತಿಯಲ್ಲಿ ಪಾರಿವ್ರಾಜ್ಯವೇ ಮುಂತಾದ ಆಶ್ರಮಗಳನ್ನು ವಿಧಿಸಿದೆ , ಅಧಿಕಾರಿಗಳಿಗೆ ಗಾರ್ಹಸ್ಥ್ಯವೇ ಎಂದು ಅಭಿಪ್ರಾಯ. ತಂ. ವಾ. ಜೈ. ಸೂ. ೧-೩-೮ (ಪು. ೧೯೨)ರಲ್ಲಿ ಈ ಪಕ್ಷವನ್ನು ಪ್ರತಿಪಾದಿಸಿದೆ.

2. ಗೃಹಸ್ಥನಾದವನೂ ವಾನಪ್ರಸ್ಥನಾಗಿ ಮುಂದೆ ಪರಿವ್ರಾಜಕನಾಗಬೇಕು- ಎಂದು ಆಶ್ರಮಗಳನ್ನು ಒಂದೊಂದಾಗಿ ಅನುಕ್ರಮದಲ್ಲಿ ವಿಧಿಸಿರುವದು ನಿಮ್ಮ ಪಕ್ಷಕ್ಕೆ ಹೊಂದುವದಿಲ್ಲವಲ್ಲ ! ಆದ್ದರಿಂದ ಕರ್ಮವು ವೈಕಲ್ಪಿಕವಾಗಲಿಲ್ಲವೆ ?- ಎಂದು ಆಕ್ಷೇಪ.

ಮೇಧಗಳೇ ಅಪವಾದವು,[1] ಅಲ್ಲಿ "ಬ್ರಹ್ಮಚರ್ಯವನ್ನು ಮುಗಿಸಿ ಗೃಹಿಯಾಗ ಬೇಕು, ಗೃಹದಿಂದ ವಾನಪ್ರಸ್ಥನಾಗಿ ಪ್ರವ್ರಜನಮಾಡಬೇಕು" (ಜಾ. ೪)[2] ಎಂಬ ಕ್ರಮಪ್ರಾಪ್ತಿಗೆ[3] ಸಂಭವವಿದೆ. ಏಕೆಂದರೆ (ಆಗ ಯಾವ) ವಿರೋಧವೂ ಇರುವದಿಲ್ಲ. (ಇದರ ವಿವರ): ಪಾರಿವ್ರಾಜ್ಯದ ಕ್ರಮವನ್ನು ವಿಧಿಸಿರುವ ವಾಕ್ಯಕ್ಕೆ ಹೀಗೆ ವಿಷಯ(ವನ್ನು ಕಲ್ಪಿಸಿ)ದರೆ ಯಾವ ವಿರೋಧವೂ ಆಗುವದಿಲ್ಲ ವಷ್ಟೆ; ಆದರೆ ಕ್ರಮಪ್ರಾಪ್ತಿಗೆ ಮತ್ತೊಂದು ವಿಷಯವನ್ನು ಕಲ್ಪಿಸಿದರೆ ಯಾವ ಜ್ಜೀವವೂ (ಮಾಡಬೇಕೆಂದು) ವಿಧಿಸಿರುವ ಶ್ರುತಿಯು ತನ್ನ ವಿಷಯವನೂ ತಪ್ಪಿಸಿ ಸಂಕೋಚವನ್ನು ಮಾಡಿದಂತೆ ಆದೀತು.[4] ಕ್ರಮಪ್ರಾಪ್ತಿಯು ವಿಶ್ವ ಜಿತ್ಸರ್ವಮೇಧಗಳ(ನ್ನು ಮಾಡಿದವರ) ವಿಷಯ ಎಂದರೋ ಯಾವ ಬಾಧವೂ ಆಗುವದಿಲ್ಲ.[5]

## ಸಿದ್ಧಾಂತ: ಶಾಸ್ತ್ರಪ್ರಾಮಾಣ್ಯವನ್ನೊಪ್ಪುವವರು ಕರ್ಮಸಂನ್ಯಾಸವನ್ನು ಒಪ್ಪಬೇಕು

(ಭಾಷ್ಯ)

೩೩೭. ನ । ಆತ್ಮಜ್ಞಾನಸ್ಯ ಅಮೃತತ್ವಹೇತುತ್ವಾಭ್ಯುಪಗಮಾತ್ । ಯತ್ ತಾವತ್ "ಆತ್ಮೇತ್ಯೇವೋಪಾಸೀತ" (೧-೪-೭) ಇತ್ಯಾರಭ್ಯ "ಸ ಏಷ

---

1. ಸರ್ವಮೇಧವೆಂಬುದು ಹತ್ತು ರಾತ್ರಿಗಳು ಮಾಡತಕ್ಕದ್ದು (ಶತ. ಬ್ರಾ. ೧೩-೭-೧-೨). ಇವರಲ್ಲಿ ಹತ್ತನೆಯ ರಾತ್ರಿಯಲ್ಲಿ ಮಾಡತಕ್ಕದ್ದು ವಿಶ್ವಜಿತ್ತು (೧೩-೭-೧-೨), ಸಂವತ್ಸರದವರೆಗೆ ಸೋಮಯಾಗವನ್ನು ಮಾಡುವದಕ್ಕೆ ಶಕ್ಯನಿಲ್ಲದಿದ್ದರೆ ವಿಶ್ವಜಿದ್ಯಾಗವನ್ನು ಮಾಡಬೇಕು ಎಂದು ಶತ. ಬ್ರಾ. ೧೨-೨-೫-೧೭ರಲ್ಲಿ ವಿಧಿಸಿದೆ. ಜೈ. ಸೂ. ೪-೩-೧೦ರಿಂದ ಮುಂದಕ್ಕೆ ಮೂರು ಅಧಿಕರಣಗಳಲ್ಲಿ ವಿಶ್ವಜಿತ್ತಿನ ವಿಚಾರವಿದೆ. ಇವುಗಳಲ್ಲಿ ಸರ್ವಸ್ವ ದಕ್ಷಿಣೆಯನ್ನು ಮಾಡಬೇಕಾಗುತ್ತದೆ. ಅಮೇಲೆ ಕರ್ಮಸಾಧನವೇ ಇರುವದಿಲ್ಲವಾದ್ದರಿಂದ ಯಾವಜ್ಜೀವವಿಧಿಯು ಆ ಕರ್ಮಗಳನ್ನು ಮಾಡಿದವರಿಗೆ ಹತ್ತುವದಿಲ್ಲ, ಅದ್ದರಿಂದ ಅವರು ಪಾರಿವ್ರಾಜ್ಯವನ್ನು ಈ ಕ್ರಮದಿಂದ ವಹಿಸಬೇಕೆಂಬುದು ಶ್ರುತಿಯ ಅಭಿಪ್ರಾಯ ವೆಂದು ಕಲ್ಪಿಸುತ್ತೇವೆ-ಎಂದು ಅಭಿಪ್ರಾಯ.

2. ಈ ಶ್ರುತಿಯನ್ನು ಎರಡು ಸಲವೂ ಈ ಅನುಪೂರ್ವಿಯಿಂದಲೇ ಹರಿಸಿರುವದ ರಿಂದ ಇದೇ ಆಚಾರ್ಯರಿಗೆ ಸಮ್ಮತವಾದ ಪಾಠವಿರಬೇಕೆಂದು ಕಲ್ಪಿಸಬೇಕಾಗಿದೆ.

3. ಆಶ್ರಮಗಳನ್ನು ಒಂದೊಂದಾಗಿ ಸ್ವೀಕರಿಸುವದಕ್ಕೆ.

4 ಕರ್ಮವನ್ನು ಮಾಡುವದಕ್ಕೆ ಅಧಿಕಾರವಿರುವವನಿಗೆಲ್ಲ ಯಾವಜ್ಜೀವವಿಧಿಯು ಹತ್ತುತ್ತದೆ; ಆದರೆ ಅವನಿಗೂ ಪಾರಿವ್ರಾಜ್ಯವಿಧಿಯನ್ನೊಪ್ಪಿದರೆ ಯಾವಜ್ಜೀವವಿಧಿಯ ವಿಷಯವನ್ನು ಬಿಟ್ಟು ಅದನ್ನು ಸಂಕೋಚಮಾಡಿದಂತೆ ಆಗುವದು.

5. ಅದ್ದರಿಂದ ಪಾರಿವ್ರಾಜ್ಯಕ್ರಮವಿಧಿಯು ನಿರವಕಾಶವಲ್ಲ; ಸಾವಕಾಶಕ್ಕಿಂತ ನಿರವಕಾಶವು ಬಲವಾಗಿರುತ್ತದೆ.

ನೇತಿ ನೇತಿ" (೪-೫-೧೫) ಇತ್ಯೇತದನ್ತೇನ ಗ್ರನ್ಥೇನ[1] ಉಪಸಂಹೃತಮ್ ಆತ್ಮಜ್ಞಾನಮ್, ತತ್ ಅಮೃತತ್ವಸಾಧನಮ್ ಇತಿ ಅಭ್ಯುಪಗತಂ ಭವತಾ । ತತ್ರ ಏತಾವದೇವ ಅಮೃತತ್ವಸಾಧನಮ್ ಅನ್ಯನಿರಪೇಕ್ಷಮ್ ಇತ್ಯೇತನ್ನ ಮೃಷ್ಯತೇ । ತತ್ರ ಭವನ್ತಂ ಪೃಚ್ಛಾಮಿ । ಕಿಮರ್ಥಮ್ ಆತ್ಮಜ್ಞಾನಂ ಮರ್ಷಯತಿ ಭವಾನ್ ಇತಿ ? ಶೃಣು ತತ್ರ ಕಾರಣಮ್ । ಯಥಾ ಸ್ವರ್ಗಕಾಮಸ್ಯ ಸ್ವರ್ಗಪ್ರಾಪ್ತ್ಯುಪಾಯಮ್ ಅಜಾನತಃ ಅಗ್ನಿಹೋತ್ರಾದಿಸ್ವರ್ಗಪ್ರಾಪ್ತಿಸಾಧನಂ ಜ್ಞಾಪಯತಿ, ತಥಾ ಇಹಾಪಿ ಅಮೃತತ್ವಪ್ರತಿಪಿತ್ಸೋಃ ಅಮೃತತ್ವಪ್ರಾಪ್ತ್ಯುಪಾಯಮ್ ಅಜಾನತಃ "ಯದೇವ ಭಗವಾನ್ ವೇದ, ತದೇವ ಮೇ ಬ್ರೂಹಿ'' (೪-೫-೪) ಇತ್ಯೇವಮ್ ಆಕಾಙ್ಕ್ಷಿತಮ್ ಅಮೃತತ್ವಸಾಧನಮ್ "ಏತಾವದರೇ" (೪-೫-೧೫) ಇತ್ಯೇವಮಾದೌ ವೇದೇನ ಜ್ಞಾಪ್ಯತ ಇತಿ । ಏವಂ ತರ್ಹಿ ಯಥಾ[2] ಯಥಾಜ್ಞಾಪಿತಮ್ ಅಗ್ನಿಹೋತ್ರಾದಿ ಸ್ವರ್ಗಸಾಧನಮ್ ಅಭ್ಯುಪಗಮ್ಯತೇ । ತಥಾ ಇಹಾಪಿ ಆತ್ಮಜ್ಞಾನಂ ಯಥಾ ಜ್ಞಾಪ್ಯತೇ ತಥಾಭೂತಮೇವ ಅಮೃತತ್ವಸಾಧನಮ್ ಆತ್ಮಜ್ಞಾನಮ್ ಅಭ್ಯುಪಗನ್ತುಂ ಯುಕ್ತಮ್ । ತುಲ್ಯಪ್ರಾಮಾಣ್ಯಾತ್ ಉಭಯತ್ರ ॥

(ಭಾಷ್ಯಾರ್ಥ)

ಹಾಗಲ್ಲ. ಏಕೆಂದರೆ ಆತ್ಮಜ್ಞಾನವು ಅಮೃತತ್ವಕ್ಕೆ ಕಾರಣವೆಂದು ಒಪ್ಪಿರುತ್ತೀರಿ. (ಇದರ ವಿವರ) : "ಆತ್ಮನೆಂದೇ ಉಪಾಸನೆಮಾಡಬೇಕು" (೧-೪-೫) ಎಂಬಿದರಿಂದ ಮೊದಲಾಗಿ "ಆ ಇವನೇ ನೇತಿ ನೇತಿ (ಎಂದ ಆತ್ಮನು)" (೪-೫-೧೫) ಎಂಬಿದರವರೆಗೂ ಇರುವ ಗ್ರಂಥದಿಂದ ಉಪಸಂಹಾರವಾಗಿರುವ ಈ ಆತ್ಮಜ್ಞಾನವಿದೆಯಲ್ಲ, ಇದು ಅಮೃತತ್ವಕ್ಕೆ ಸಾಧನವು ಎಂದು ನೀನು ಒಪ್ಪಿರುತ್ತೀಯಷ್ಟೆ![3] ಇಲ್ಲಿ ಇದಿಷ್ಟೇ ಅಮೃತತ್ವಕ್ಕೆ ಸಾಧನವು, (ಇದಕ್ಕೆ) ಮತ್ತೊಂದರ ಅಪೇಕ್ಷೆಯಿಲ್ಲ ಎಂಬಿದನ್ನು (ನೀನು) ಸಹಿಸುವದಿಲ್ಲ. ಇಲ್ಲಿ ನಿನ್ನನ್ನು (ನಾನು) ಕೇಳುವದೇನೆಂದರೆ, ನೀನು ಆತ್ಮಜ್ಞಾನವನ್ನಾದರೂ ಏಕೆ ಸಹಿಸಿರುತ್ತೀಯೆ ?

(ಪೂರ್ವಪಕ್ಷಿ) :- ಅದಕ್ಕೆ ಕಾರಣವನ್ನು ಕೇಳು. ಸ್ವರ್ಗಕಾಮನಾದವನಾಗಿ ಸ್ವರ್ಗಪ್ರಾಪ್ತಿಗೆ ಉಪಾಯವನ್ನು ಅರಿಯದೆ ಇರುವವನಿಗೆ ಹೇಗೆ ಅಗ್ನಿ

---

1. ಇಲ್ಲಿರುವ 'ಯತ್' ಎಂಬುದು ಹೆಚ್ಚಿನದು ಬಿಟ್ಟಿದೆ.

2. ಇನ್ನೊಂದು ಯಥಾಶಬ್ದವು ಇದರ ಹಿಂದೆ ಬಿಟ್ಟಿದೆ ಎಂದು ನಾವು ಅದನ್ನು ಸೇರಿಸಿಕೊಂಡಿರುತ್ತೇವೆ.

3. ಈ ಪೂರ್ವಪಕ್ಷಿಯು ಆತ್ಮಜ್ಞಾನವನ್ನು ಒಪ್ಪಿ, ಕರ್ಮವೂ ಬೇಕು, ಎನ್ನುವವನು ಎಂದು ಇದರಿಂದ ತಿಳಿಯಬೇಕಾಗಿದೆ.

ಹೋತ್ರವೇ ಮುಂತಾದ ಸ್ವರ್ಗಪ್ರಾಪ್ತಿಸಾಧನವನ್ನು (ಶಾಸ್ತ್ರವು) ತಿಳಿಸಿಕೊಡುತ್ತದೆಯೋ, ಹಾಗೆ ಇಲ್ಲಿಯೂ ಅಮೃತತ್ವವನ್ನು ಪಡೆಯಲೆಳಸಿರುವವನಾಗಿ ಅಮೃತತ್ವಪ್ರಾಪ್ತಿಗೆ ಉಪಾಯವನ್ನು ಅರಿಯದೆ ಇರುವವನಿಗೆ "ಭಗವಂತ (ನಾರದ ನೀನು) ಯಾವದನ್ನು ತಿಳಿದಿರುವೆಯೋ ಅದನ್ನೇ ನನಗೆ ಹೇಳು!" (೪-೫-೪) ಎಂದು ಕೇಳಿಕೊಂಡಿರುವ ಅಮೃತತ್ವಸಾಧನವನ್ನು "ಎಲೆ, ಇಷ್ಟೇ (ಅಮೃತತ್ವಸಾಧನವು)" (೪-೫-೧೫) ಎಂಬಿದೇ ಮುಂತಾದ ವಾಕ್ಯದಲ್ಲಿ ವೇದವು ತಿಳಿಸಿಕೊಡುತ್ತದೆ.[1]

(ಸಿದ್ಧಾಂತಿ) :- ಹೀಗಾದರೆ (ಶಾಸ್ತ್ರದಲ್ಲಿ) ತಿಳಿಸಿದಂತೆಯೇ ಅಗ್ನಿಹೋತ್ರಾದಿಗಳನ್ನು ಸ್ವರ್ಗಸಾಧನವೆಂದು ಹೇಗೆ ಒಪ್ಪುತ್ತೀಯೋ ಹಾಗೆಯೇ ಇಲ್ಲಿಯೂ ಆತ್ಮಜ್ಞಾನವನ್ನು ಹೇಗೆ ತಿಳಿಸಿದೆಯೋ ಹಾಗಿರುವ ಆತ್ಮಜ್ಞಾನವೇ[2] ಅಮೃತತ್ವಕ್ಕೆ ಸಾಧನವೆಂದು ಒಪ್ಪುವದು ಯುಕ್ತವು. ಏಕೆಂದರೆ ಎರಡು ಕಡೆಯಲ್ಲಿಯೂ (ಶಾಸ್ತ್ರದ) ಪ್ರಾಮಾಣ್ಯವು ಸಮಾನವಾಗಿರುತ್ತದೆ.[3]

## ಆತ್ಮಜ್ಞಾನವುಂಟಾದರೆ ಕರ್ಮಸಂನ್ಯಾಸವೇ ಪ್ರಾಪ್ತವಾಗುತ್ತದೆ

(ಭಾಷ್ಯ)

೩೩೮. ಯದ್ಯೇವಂ ಕಿಂ ಸ್ಯಾತ್ ? ಸರ್ವಕರ್ಮಹೇತೂಪಮರ್ದಕತ್ವಾತ್ ಆತ್ಮಜ್ಞಾನಸ್ಯ ವಿದ್ಯೋದ್ಭವೇ ಕರ್ಮನಿವೃತ್ತಿಃ ಸ್ಯಾತ್ । ದಾರಾಗ್ನಿಸಂಬದ್ಧಾನಾಂ ತಾವತ್ ಅಗ್ನಿಹೋತ್ರಾದಿಕರ್ಮಣಾಂ ಭೇದಬುದ್ಧಿವಿಷಯಸಂಪ್ರದಾನಕಾರಕಸಾಧ್ಯತ್ವಮ್ । ಅನ್ಯಬುದ್ಧಿಪರಿಚ್ಛೇದ್ಯಾಂ ಹಿ ಅಗ್ನ್ಯಾದಿದೇವತಾಂ ಸಂಪ್ರದಾನಕಾರಕಭೂತಾಮನ್ತರೇಣ ನ ಹಿ ತತ್ ಕರ್ಮ ನಿರ್ವರ್ತ್ಯತೇ । ಯಯಾ ಹಿ ಸಂಪ್ರದಾನಕಾರಕಬುದ್ಧ್ಯಾ ಸಂಪ್ರದಾನಕಾರಕಂ ಕರ್ಮಸಾಧನತ್ವೇನ ಉಪದಿಶ್ಯತೇ ಸಾ ಇಹ ವಿದ್ಯಯಾ ನಿವರ್ತ್ಯತೇ

---

1. ಅದ್ದರಿಂದ ಜ್ಞಾನವನ್ನು ಒಪ್ಪಿರುತ್ತೇನೆ ಎಂದು ಭಾವ. ಇಲ್ಲಿ 'ಏತಾವದರೇ' ಎಂಬುದಕ್ಕೆ ಜ್ಞಾನವು ಇಷ್ಟೇ ಎಂದರ್ಥವೇ ಹೊರತು ಕರ್ಮವು ಬೇಡ ಎಂಬ ಅಭಿಪ್ರಾಯವಿಲ್ಲ; ಏಕೆಂದರೆ ಹಾಗೆ ಅರ್ಥಮಾಡಿದರೆ ಯಾವಜ್ಜೀವವಿಧಿಯು ಬಾಧಿತವಾಗುತ್ತದೆ ಎಂಬುದು ಪೂರ್ವಪಕ್ಷಿಯ ಆಶಯ.

2. ಸಂನ್ಯಾಸಸಹಿತವಾದ ಆತ್ಮಜ್ಞಾನವೇ ಎಂದರ್ಥ; ಏಕೆಂದರೆ ಆತ್ಮಜ್ಞಾನವನ್ನು "ವ್ಯುತ್ಥಾಯಾಥ ಭಿಕ್ಷಾಚರ್ಯಂ ಚರನ್ತಿ", "ಪ್ರವ್ರಜಿಷ್ಯನ್ ವಾ", "ವಿಜಹಾರ"- ಮುಂತಾಗಿ ಸಂನ್ಯಾಸಸಹಿತವಾಗಿಯೇ ಉಪದೇಶಿಸಿದೆ.

3. ಕರ್ಮವಾಕ್ಯವು ಹೇಗೆ ಪ್ರಮಾಣವೋ ಹಾಗೆಯೇ ಜ್ಞಾನವಾಕ್ಯವೂ ಪ್ರಮಾಣವಾಗಿದೆ- ಎಂದರ್ಥ. ಗೀ.ಭಾ. ೨-೨೧ (ಭಾ.ಭಾ. ೪೦)ನ್ನು ನೋಡಿ.

"ಅನ್ಯೋಽಸಾವನ್ಯೋಽಹಮಸ್ಮೀತಿ ನ ಸ ವೇದ" (೧-೪-೧೦), "ದೇವಾಸ್ತಂ ಪರಾದುರ್ಯೋಽನ್ಯತ್ರಾಽಽತ್ಮನೋ ದೇವಾನ್ ವೇದ" (೪-೫-೧೨), "ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ" (೪-೪-೧೦), "ಏಕಧೈವಾನುದ್ರಷ್ಟವ್ಯಮ್" (೪-೪-೨೦), "ಸರ್ವಮಾತ್ಮಾನಂ ಪಶ್ಯತಿ" (೪-೪-೨೩) ಇತ್ಯಾದಿಶ್ರುತಿಭ್ಯಃ । ನ ಚ ದೇಶಕಾಲನಿಮಿತ್ತಾದ್ಯಪೇಕ್ಷತ್ವಮ್ । ವ್ಯವಸ್ಥಿತಾಽಽತ್ಮವಸ್ತುವಿಷಯತ್ವಾತ್ ಆತ್ಮಜ್ಞಾನಸ್ಯ । ಕ್ರಿಯಾಯಾಸ್ತು ಪುರುಷತನ್ತ್ರತ್ವಾತ್ ಸ್ಯಾದ್ ದೇಶಕಾಲನಿಮಿತ್ತಾದ್ಯಪೇಕ್ಷತ್ವಮ್ । ಜ್ಞಾನಂ ತು ವಸ್ತುತನ್ತ್ರತ್ವಾತ್ ನ ದೇಶಕಾಲನಿಮಿತ್ತಾದ್ಯಪೇಕ್ಷ್ಯತೇ । ಯಥಾ 'ಅಗ್ನಿ ರುಷ್ಣಃ ಆಕಾಶೋಽಮೂರ್ತಃ' ಇತಿ । ತಥಾ ಆತ್ಮವಿಜ್ಞಾನಮಪಿ ॥

(ಭಾಷ್ಯಾರ್ಥ)

(ಪ್ರಶ್ನೆ) :- ಹೀಗೆಂದಾದರೆ ಏನಾಗುವದು ?

(ಉತ್ತರ) - ಆತ್ಮಜ್ಞಾನವು ಕರ್ಮಕ್ಕೆ ಹೇತುವಾಗಿರುವದನ್ನೆಲ್ಲ ನಾಶ ಪಡಿಸುವದರಿಂದ ವಿದ್ಯೆಯು ಉಂಟಾದರೆ ಕರ್ಮನಿವೃತ್ತಿಯಾಗುವದು. ಏಕೆಂದರೆ ಮೊದಲನೆಯದಾಗಿ ಹೆಂಡತಿ, ಅಗ್ನಿ- ಇವುಗಳ ಸಂಬಂಧವುಳ್ಳ ಅಗ್ನಿಹೋತ್ರಾದಿ ಕರ್ಮಗಳು, ಭೇದಬುದ್ಧಿಗೆ ವಿಷಯವಾದ ಸಂಪ್ರದಾನಕಾರಕದಿಂದ ಆಗತಕ್ಕ ವುಗಳು. ಮತ್ತೊಂದು ಎಂಬ ಬುದ್ಧಿಯಿಂದಲೇ ತಿಳಿದುಬರುವ ಅಗ್ನಿಯೇ ಮುಂತಾದ ಸಂಪ್ರದಾನಕಾರಕವಾಗಿರುವ ದೇವತೆಯಿಲ್ಲದೆ ಆ ಕರ್ಮವನ್ನು ಮಾಡಲಾಗುವದಿಲ್ಲವಷ್ಟೆ ? **ಯಾವ ಸಂಪ್ರದಾನಕಾರಕಬುದ್ಧಿಯಿಂದ ಸಂಪ್ರದಾನಕಾರಕವಾದ (ದೇವತೆಯು) ಕರ್ಮಕ್ಕೆ ಸಾಧನವೆಂದು (ಶ್ರುತಿಯಲ್ಲಿ) ಉಪದಿಷ್ಟವಾಗಿರುತ್ತದೆಯೋ ಅದು ಇಲ್ಲಿ ವಿದ್ಯೆಯಿಂದ ತೊಲಗಿಸಲ್ಪಡುತ್ತದೆ.**[1] "(ಈ ದೇವತೆಯು) ಬೇರೆ, ನಾನು ಬೇರೆಯಾಗಿ ರುವೆನು ಎಂದು (ಯಾವನು ಉಪಾಸನೆಮಾಡುತ್ತಾನೋ) ಅವನು ಅರಿಯನು" (೧-೪-೧೦), "ಯಾವನು ದೇವತೆಗಳನ್ನು ತನಗಿಂತ ಬೇರೆ ಎಂದು ತಿಳಿಯು ವನೋ ಅವನನ್ನು ದೇವತೆಗಳು ಹೊರದೂಡುವರು" (೪-೫-೧೨), "ಯಾವನು ಇಲ್ಲಿ ನಾನಾ ಇರುವಂತೆ ಕಾಣುವನೋ, ಅವನು ಸಾವಿನಮೇಲೆ ಸಾವನ್ನು ಪಡೆ ಯುವನು" (೪-೪-೧೦), "ಒಂದೇ ಪ್ರಕಾರದಿಂದ ಅನುದರ್ಶನಮಾಡತಕ್ಕದ್ದು" (೪-೪-೨೦), "ಎಲ್ಲವನ್ನೂ ಆತ್ಮನೆಂದು ಕಂಡುಕೊಳ್ಳುತ್ತಾನೆ" (೪-೪-೨೩)- ಎಂದು ಮುಂತಾಗಿರುವ ಶ್ರುತಿಗಳಿಂದ (ಹೀಗೆಂದು ಗೊತ್ತಾಗುತ್ತದೆ).

ಆತ್ಮಜ್ಞಾನಕ್ಕೆ ದೇಶ, ಕಾಲ, ನಿಮಿತ್ತ- ಮುಂತಾದವುಗಳ ಅಪೇಕ್ಷೆ ಯಿರುವದೇ ಇಲ್ಲ, ಏಕೆಂದರೆ (ಅದಕ್ಕೆ) ಸಿದ್ಧವಾಗಿರುವ ಆತ್ಮವಸ್ತುವೇ

[1]. ಆದ್ದರಿಂದ ಜ್ಞಾನವುಂಟಾದಮೇಲೆ ಕರ್ಮವಿರುವಹಾಗಿಲ್ಲ.

ವಿಷಯವಾಗಿರುತ್ತದೆ. ಕ್ರಿಯೆಯೋ ಎಂದರೆ ಪುರುಷತಂತ್ರವಾಗಿರುವದರಿಂದ ದೇಶಕಾಲನಿಮಿತ್ತಾದಿಗಳನ್ನು ಬಯಸುತ್ತದೆ; ಜ್ಞಾನವೋ ವಸ್ತುತಂತ್ರವಾಗಿರುವದರಿಂದ ದೇಶಕಾಲನಿಮಿತ್ತಾದಿಗಳನ್ನು ಬಯಸುವದಿಲ್ಲ.[1] ಉದಾಹರಣೆಗೆ 'ಬೆಂಕಿಯು ಬಿಸಿ', 'ಆಕಾಶವು ಅಮೂರ್ತವು'– ಎಂಬ (ಜ್ಞಾನವು ಹೇಗೆ ದೇಶಕಾಲಾದಿಗಳನ್ನು ಬಯಸುವದಿಲ್ಲವೋ) ಆತ್ಮವಿಜ್ಞಾನವೂ ಹಾಗೆಯೇ (ಬಯಸುವದಿಲ್ಲ).[2]

## ಆತ್ಮಜ್ಞಾನೋಪದೇಶವು ಕರ್ಮವಿಧಿಗೆ ವಿರುದ್ಧವಲ್ಲ

(ಭಾಷ್ಯ)

೩೩೯ ನನು ಏವಂ ಸತಿ ಪ್ರಮಾಣಭೂತಸ್ಯ ಕರ್ಮವಿಧೇರ್ನಿರೋಧಃ ಸ್ಯಾತ್ । ನ ಚ ತುಲ್ಯಪ್ರಮಾಣಯೋಃ ಇತರೇತರನಿರೋಧೋ ಯುಕ್ತಃ । ನ । ಸ್ವಾಭಾವಿಕಭೇದಬುದ್ಧಿಮಾತ್ರನಿರೋಧಕತ್ವಾತ್ । ನ ಹಿ ವಿಧ್ಯನ್ತರನಿರೋಧಕಮ್ ಆತ್ಮಜ್ಞಾನಂ ಸ್ವಾಭಾವಿಕಭೇದಬುದ್ಧಿಮಾತ್ರಂ ನಿರುಣದ್ಧಿ । ತಥಾಽಪಿ ಹೇತ್ವಪಹಾರಾತ್ ಕರ್ಮಾನುಪಪತ್ತೇಃ ವಿಧಿನಿರೋಧ ಏವ ಸ್ಯಾತ್ ಇತಿ ಚೇತ್ । ನ । ಕಾಮಪ್ರತಿಷೇಧಾತ್ ಕಾಮ್ಯಪ್ರವೃತ್ತಿನಿರೋಧವತ್ ಅದೋಷಾತ್ । ಯಥಾ "ಸ್ವರ್ಗಕಾಮೋ ಯಜೇತ" (?) ಇತಿ ಸ್ವರ್ಗಸಾಧನೇ ಯಾಗೇ ಪ್ರವೃತ್ತಸ್ಯ ಕಾಮಪ್ರತಿಷೇಧವಿಧೇಃ ಕಾಮೇ ವಿಹತೇ ಕಾಮ್ಯಯಾಗಾನುಷ್ಠಾನಪ್ರವೃತ್ತಿರ್ನಿರುಧ್ಯತೇ । ನ ಚ ಏತಾವತಾ ಕಾಮ್ಯವಿಧಿರ್ನಿರುದ್ಧೋ ಭವತಿ । ಕಾಮಪ್ರತಿಷೇಧವಿಧಿನಾ ಕಾಮ್ಯವಿಧೇಃ ಅನರ್ಥಕತ್ವಜ್ಞಾನಾತ್ ಪ್ರವೃತ್ತ್ಯನುಪಪತ್ತೇಃ ನಿರುದ್ಧ ಏವ ಸ್ಯಾತ್ ಇತಿ ಚೇತ್ । ಭವತ್ವೇವ ಏವಂ ಕಾಮವಿಧಿನಿರೋಧೋಽಪಿ ಯಥಾ ಕಾಮಪ್ರತಿಷೇಧೇ ಕಾಮ್ಯವಿಧೇಸ್ತಥಾ ।[3] ಏವಂ ಪ್ರಾಮಾಣ್ಯಾನುಪಪತ್ತಿಃ ಇತಿ ಚೇತ್ । ಅನನುಷ್ಠೇಯತ್ವೇ ಅನುಷ್ಠಾತುರಭಾವಾತ್ ಅನುಷ್ಠಾನವಿಧ್ಯಾನರ್ಥಕ್ಯಾತ್ ಅಪ್ರಾಮಾಣ್ಯಮೇವ ಕರ್ಮವಿಧೀನಾಮ್ ಇತಿ ಚೇತ್ । ನ । ಪ್ರಾಕ್ ಆತ್ಮ

---

1. ಜ್ಞಾನಕ್ಕೂ ದೇಶಕಾಲಾದಿವಿಭಾಗವು ಬೇಕಲ್ಲ '– ಎಂಬ ಶಂಕೆಯನ್ನು ಪರಿಹರಿಸುವದಕ್ಕೆ ಹೇಳಿದ ವಾಕ್ಯವಿದೆಂದು ಆ॥ ಟೀ॥ ಯಲ್ಲಿದೆ. ಜ್ಞಾನವು ಎಲ್ಲೆಲ್ಲಿಯೂ ಯಾವಾಗಲೂ ಇದ್ದೇ ಇರುವದರಿಂದಲೂ ಭೇದಬುದ್ಧಿಯನ್ನು ತೊಲಗಿಸಿಯೇ ಅದು ತೋರಿಕೊಳ್ಳುವದರಿಂದಲೂ ಜ್ಞಾನವು ಕರ್ಮಕ್ಕೆ ವಿರುದ್ಧವಾಗಿರುತ್ತದೆ. ಆದ್ದರಿಂದ ಆತ್ಮಜ್ಞಾನವನ್ನೊಪ್ಪಿದರೆ ಸಂನ್ಯಾಸವೇ ಸಿದ್ಧವಾಗುತ್ತದೆ ಎಂದು ಭಾವವೆಂದು ನಮ್ಮ ಅಭಿಪ್ರಾಯ.

2. ಯಾವಾಗಲೂ ಎಲ್ಲೆಲ್ಲಿಯೂ ಇದ್ದೇ ಇರುತ್ತದೆ ಎಂದರ್ಥ.

3. ಈ ಪಾಠವೇ ಸರಳವಾಗಿ ಅನ್ವಯವಾಗುತ್ತದೆ.

ಜ್ಞಾನಾತ್ ಪ್ರವೃತ್ತ್ಯನುಪಪತ್ತೇಃ । ಸ್ವಾಭಾವಿಕಸ್ಯ ಕ್ರಿಯಾಕಾರಕಫಲಭೇದ ವಿಜ್ಞಾನಸ್ಯ ಪ್ರಾಕ್ ಆತ್ಮಜ್ಞಾನಾತ್ ಕರ್ಮಹೇತುತ್ವಮ್ ಉಪಪದ್ಯತ ಏವ । ಯಥಾ ಕಾಮವಿಷಯೇ ಮೋಕ್ಷವಿಜ್ಞಾನೋತ್ಪತ್ತೇಃ ಪ್ರಾಕ್ ಕಾಮ್ಯಕರ್ಮ ಪ್ರವೃತ್ತಿಹೇತುತ್ವಂ ಸ್ಯಾದೇವ ಸ್ವರ್ಗಾದೀಚ್ಛಾಯಾಃ ಸ್ವಾಭಾವಿಕ್ಯಾಃ, ತದ್ವತ್॥

(ಭಾಷ್ಯಾರ್ಥ)

(ಆಕ್ಷೇಪ) :– ಹೀಗೆ ಆದರೆ ಪ್ರಮಾಣವಾಗಿರುವ ಕರ್ಮವಿಧಿಗೆ ಅಡ್ಡಿಯಾಗುತ್ತದೆ. ಸಮಾನವಾಗಿ ಪ್ರಮಾಣವಾಗಿರುವ (ಈ ಎರಡೂ) ಒಂದಕ್ಕೊಂದು ಅಡ್ಡಿಯಾಗುವದು ಸರಿಯಲ್ಲವಲ್ಲವೆ ?[1]

(ಪರಿಹಾರ) :– ಹಾಗಲ್ಲ. ಏಕೆಂದರೆ (ಜ್ಞಾನವು) ಸ್ವಾಭಾವಿಕವಾಗಿರುವ[2] ಭೇದಬುದ್ಧಿಯನ್ನು ಮಾತ್ರ ತಪ್ಪಿಸುತ್ತದೆ. (ಇದರ ವಿವರ) : ಆತ್ಮಜ್ಞಾನವು ಮತ್ತೊಂದು ವಿಧಿಗೆ ಅಡ್ಡಿಮಾಡುವದಿಲ್ಲ, ಸ್ವಾಭಾವಿಕವಾಗಿರುವ ಭೇದಬುದ್ಧಿಯನ್ನು ಮಾತ್ರವೇ ತಪ್ಪಿಸುತ್ತದೆ.

(ಆಕ್ಷೇಪ) :– ಹೀಗಾದರೂ ಹೇತುವನ್ನೇ[3] ತೆಗೆದುಹಾಕುವದರಿಂದ ಕರ್ಮವು ಹೊಂದುವದಿಲ್ಲವಾದ್ದರಿಂದ (ಕರ್ಮ)ವಿಧಿಗೆ ಅಡ್ಡಿಯೇ ಆಗುವದಲ್ಲ !

(ಪರಿಹಾರ) :– ಹಾಗಲ್ಲ. ಏಕೆಂದರೆ ಕಾಮವನ್ನು ಸಲ್ಲದೆನ್ನುವದರಿಂದ ಕಾಮ್ಯ(ಕರ್ಮ)ದಲ್ಲಿ ಪ್ರವೃತ್ತಿಗೆ ಅಡ್ಡಿಯಾಗುವಂತೆಯೇ (ಇದೂ ಆಗಿರುವದರಿಂದ ಯಾವ) ದೋಷವೂ ಇಲ್ಲ (ಇದರ ವಿವರ): "ಸ್ವರ್ಗಕಾಮನಾದವನು ಯಾಗಮಾಡಬೇಕು[4] ಎಂದು ಹೇಳಿದ (ವಿಧಿಯಂತೆ) ಸ್ವರ್ಗಸಾಧನವಾದ ಯಾಗದಲ್ಲಿ ತೊಡಗಿದವನಿಗೆ ಕಾಮವು ಸಲ್ಲದೆನ್ನುವ ವಿಧಿಯಿಂದ ಕಾಮವು ಹೋಗಲು ಕಾಮ್ಯಯಾಗವನ್ನು ಮಾಡುವ ಪ್ರವೃತ್ತಿಯು ನಿಂತುಹೋಗುತ್ತದೆ. ಆದರೆ ಇಷ್ಟುಮಾತ್ರದಿಂದ ಕಾಮ್ಯವಿಧಿಗೆ ಅಡ್ಡಿಯಾಗುವದಿಲ್ಲ.[5]

---

1. ಕರ್ಮವಾಕ್ಯ, ಜ್ಞಾನವಾಕ್ಯ– ಎರಡಕ್ಕೂ ಅವಕಾಶವಿರುವಂತೆ ಅರ್ಥಮಾಡಬೇಕೇ ಹೊರತು ಒಂದಕ್ಕೊಂದು ವಿರುದ್ಧವಾಗಿರುವಂತೆ ಮಾಡಬಾರದು ಎಂದು ಭಾವ.

2. ಭೇದಬುದ್ಧಿಯು ಅಜ್ಞಾನಸ್ವಭಾವದಿಂದಲೇ ಇದ್ದುಕೊಂಡಿರುತ್ತದೆ, ಜ್ಞಾನವು ಬಂದರೆ ಹೋಗುತ್ತದೆ ಎಂದು ತಿಳಿಸುವದಕ್ಕೆ ಸ್ವಾಭಾವಿಕವಾದ ಎಂದು ಹೇಳಿದೆ.

3. ಭೇದಬುದ್ಧಿಯನ್ನೇ ಎಂದರ್ಥ. ಕರ್ಮಕ್ಕೆ ಬೇಕಾದ ಭೇದಬುದ್ಧಿಯನ್ನು ತಪ್ಪಿಸುವ ಆತ್ಮಜ್ಞಾನವು ಕರ್ಮವಿಧಿಗೆ ವಿರುದ್ಧವೇ ಆಗುವದಲ್ಲ ! –ಎಂದು ಆಕ್ಷೇಪ.

4. ಇದು ಯಾವದೊಂದು ಗೊತ್ತಾದ ವಾಕ್ಯವಲ್ಲ; ಸ್ವರ್ಗಕಾಮನು ಮಾಡಬೇಕು ಎಂದು ವಿಧಿಸಿದ ಯಾಗಸಾಮಾನ್ಯದ ವಿಧಿಯನ್ನು ಹೀಗೆ ಹೇಳಿದೆ ಎಂದು ತೋರುತ್ತದೆ.

5. ಏಕೆಂದರೆ ಕಾಮಿಗಳು ಕಾಮ್ಯಕರ್ಮವನ್ನು ಮಾಡುತ್ತಲೇ ಇರುವರು ; ಛಾಂ. ಭಾ. ೨–೨೩–೧ನ್ನು ನೋಡಿ.

(ಆಕ್ಷೇಪ) :- ಕಾಮವು ಸಲ್ಲದೆಂದು (ಹೇಳುವ) ವಿಧಿಯಿಂದ ಕಾಮ್ಯ ವಿಧಿಯು ಅನರ್ಥಕರವೆಂದು ತಿಳಿಯುವದರಿಂದ (ಕಾಮ್ಯಕರ್ಮದಲ್ಲಿ) ಪ್ರವೃತ್ತಿಯುಂಟಾಗಲಾರದಾದ್ದರಿಂದ (ಆ ಕಾಮ್ಯವಿಧಿಗೆ) ಅಡ್ಡಿಯೇ ಆಗುವದಲ್ಲ ![1]

(ಪರಿಹಾರ) :- ಹಾಗಾದರೆ (ಪ್ರಕೃತಜ್ಞಾನವಾಕ್ಯದಿಂದ) ಕರ್ಮವಿಧಿಗೂ ಅಡ್ಡಿಯಾಗಲಿ, ಕಾಮವು ಸಲ್ಲದೆಂಬಾಗ ಕಾಮ್ಯವಿಧಿಗೆ (ಅಡ್ಡಿ) ಹೇಗೆ (ಆಗುವದೋ ಹಾಗೆ ಇಲ್ಲಿಯೂ ಆಗಬಹುದಾಗಿದೆ)[2]

(ಆಕ್ಷೇಪ) :- ಹಾಗಾದರೆ (ವಿಧಿಗಳಿಗೆ) ಪ್ರಾಮಾಣ್ಯವೇ ಇಲ್ಲವಾಗುವದಲ್ಲ ! (ಇದರ ವಿವರ). ಅನುಷ್ಠೇಯವಿಲ್ಲವೆಂದಾಗಲು ಅನುಷ್ಠಾನಮಾಡುವವನೇ ಇಲ್ಲವಾಗುವದರಿಂದ ಅನುಷ್ಠಾನ(ಮಾಡಬೇಕೆಂಬ) ವಿಧಿಯು ವ್ಯರ್ಥವಾಗುವದರಿಂದ ಕರ್ಮವಿಧಿಗಳಿಗೆ ಅಪ್ರಾಮಾಣ್ಯವೇ (ಆಗುವದಲ್ಲ) ![3]

(ಪರಿಹಾರ).- ಹಾಗಲ್ಲ. ಏಕೆಂದರೆ ಆತ್ಮವಿಜ್ಞಾನವಾಗುವದಕ್ಕಿಂತ ಮುಂಚೆ ಪ್ರವೃತ್ತಿಯುಂಟಾಗಬಹುದಾಗಿದೆ. (ಇದರ ವಿವರ): ಸ್ವಾಭಾವಿಕವಾದ ಕ್ರಿಯಾಕಾರಕಫಲಗಳು ಬೇರೆಬೇರೆ (ಇವೆ) ಎಂಬ ಅರಿವು ಆತ್ಮಜ್ಞಾನವಾಗುವದಕ್ಕಿಂತ ಮೊದಲು ಕರ್ಮಗಳಿಗೆ ಹೇತುವಾಗಿರಲೇಬಹುದು. ಹೇಗೆ ಕಾಮವಿಷಯದಲ್ಲಿ (ಕಾಮವು) ದೋಷವೆಂಬ ಅರಿವು ಉಂಟಾಗುವ ಮುಂಚೆ ಕಾಮ್ಯಕರ್ಮಗಳಲ್ಲಿ ತೊಡಗುವದಕ್ಕೆ ಸ್ವಾಭಾವಿಕವಾದ ಸ್ವರ್ಗಾದಿಗಳ ಇಚ್ಛೆಯು ಕಾರಣವಾಗಿಯೇ ಇರುವದೋ, ಹಾಗೆಯೇ (ಇಲ್ಲಿಯೂ ತಿಳಿಯಬೇಕು)[4]

---

1. ಕಾಮವು ಅನರ್ಥಕರವೆಂಬುದು 'ಕಾಮಾತ್ಮನಾಗಿರುವದು 'ಪ್ರಶಸ್ತವಲ್ಲ' ಎಂಬ ಶಾಸ್ತ್ರೋಪದೇಶದಿಂದ ತಿಳಿಯಬರಬಹುದು - ಎಂದರ್ಥ. ಅಥವಾ ಶಾಸ್ತ್ರೋಪದೇಶದಿಂದ ಕಾಮವನ್ನು ಬಿಟ್ಟವನಿಗೆ ಕಾಮ್ಯಕರ್ಮವು ಬೇಕಾಗುವದಿಲ್ಲವಾದ್ದರಿಂದ ವಿಧಿಯು ವ್ಯರ್ಥವಾಗುವದು ಎಂದಾದರೂ ಅರ್ಥಮಾಡಬಹುದು.

2. ನೀವು ಕಾಮ್ಯವಿಧಿಗೆ ಅಡ್ಡಿಯನ್ನು ಒಪ್ಪಿರುವಂತೆ ನಾವೂ ಕರ್ಮಗಳಿಗೆ ಅಡ್ಡಿಯನ್ನು ಒಪ್ಪಿದೇವೆ; ವಿಧಿಗೆ ಅಡ್ಡಿಯನ್ನು ಒಪ್ಪಿದ ದೋಷವು ಇಬ್ಬರಿಗೂ ಸಮವಾಗಿದೆ ಎಂದರ್ಥ.

3. ವಿಧಿಗೆ ಸರ್ವಥಾ ಅಡ್ಡಿಯಾಯಿತು ಎಂಬ ಭ್ರಾಂತಿಯಿಂದ ಮಾಡಿದ ಆಕ್ಷೇಪವಿದು.

4. ವಿಧಿಗೆ ಅವಕಾಶವಿದೆ ಎಂಬುದು ಎರಡು ಪಕ್ಷದಲ್ಲಿಯೂ ಸಮಾನವಾಗಿದೆ. ಇಷ್ಟರಿಂದಲೇ ವಿಧಿಯು ಸಾರ್ಥಕವಾಗಿದೆ. ಕಾಮವಿಲ್ಲದವನಿಗೂ ಕಾಮ್ಯಕರ್ಮವುಂಟೆಂದು ಹೇಗೆ ಹೇಳುವದಕ್ಕೆ ಬರುವದಿಲ್ಲವೋ ಹಾಗೆ ಜ್ಞಾನಿಗೂ ನಿತ್ಯಕರ್ಮವುಂಟೆಂದು ಹೇಳುವದಕ್ಕೆ ಬರುವದಿಲ್ಲ - ಎಂಬುದು ಸಮಾನವಾಗಿದೆ ಎಂದು ಭಾವ.

## ಕರ್ಮವನ್ನು ವಿಧಿಸುವದರಿಂದ ವೇದವು ಅನರ್ಥಕರವಾಗುವದಿಲ್ಲ

(ಭಾಷ್ಯ)

೩೪೦. ತಥಾ ಸತಿ ಅನರ್ಥಾರ್ಥೋ ವೇದಃ ಇತಿ ಚೇತ್ । ನ । ಅರ್ಥಾನರ್ಥಯೋಃ ಅಭಿಪ್ರಾಯತನ್ತ್ರತ್ವಾತ್ । ಮೋಕ್ಷಮೇಕಂ ವರ್ಜಯಿತ್ವಾ ಅನ್ಯಸ್ಯ ಅವಿದ್ಯಾವಿಷಯತ್ವಾತ್ । ಪುರುಷಾಭಿಪ್ರಾಯತನ್ತ್ರೌ ಹಿ ಅರ್ಥಾನರ್ಥೌ । ಮರಣಾದಿಕಾಮ್ಯೇಷ್ಟಿದರ್ಶನಾತ್ ॥

(ಭಾಷ್ಯಾರ್ಥ)

(ಆಕ್ಷೇಪ):- ಹಾಗಾದರೆ ವೇದವು ಅನರ್ಥವೆಂಬ ಫಲಕ್ಕಾಗಿಯೇ (ಕರ್ಮವನ್ನು ವಿಧಿಸಿದೆ ಎಂದಾಗುವದಲ್ಲ) ![1]

(ಪರಿಹಾರ) .- ಹಾಗಲ್ಲ ಏಕೆಂದರೆ ಅರ್ಥವೂ ಅನರ್ಥವೂ (ಅವರವರ) ಅಭಿಪ್ರಾಯಕ್ಕೆ ಅಧೀನವಾಗಿರುತ್ತವೆ[2] ; ಮೋಕ್ಷವೊಂದನ್ನು ಬಿಟ್ಟರೆ ಮಿಕ್ಕದ್ದೆಲ್ಲ ಅವಿದ್ಯಾವಿಷಯವಾಗಿರುತ್ತದೆ.[3] ಅರ್ಥಾನರ್ಥಗಳು ಮನುಷ್ಯರ ಅಭಿಪ್ರಾಯಕ್ಕೇ ವಶವಾಗಿರುತ್ತವೆ, ಏಕೆಂದರೆ ಮರಣವೇ ಮುಂತಾದ ಕಾಮ್ಯೇಷ್ಟಿಗಳು ಕಂಡುಬರುತ್ತವೆ.[4]

---

1. ಅಜ್ಞಾನದಲ್ಲಾಗುವ ಫಲಗಳನ್ನು ಪಡೆಯುವದಕ್ಕೆ ಕರ್ಮಗಳನ್ನು ವಿಧಿಸಿದರೆ ವೇದವು ಪುರುಷಾರ್ಥವನ್ನು ಪಡೆಯುವ ಸಾಧನವನ್ನು ತಿಳಿಸುವದಿಲ್ಲವೆಂದಾಗಿ ಅದಕ್ಕೆ ಅಪ್ರಾಮಾಣ್ಯವು ಬರುವದಲ್ಲ !- ಎಂದು ಆಕ್ಷೇಪ.

2. ಯಾವನಿಗೆ ಯಾವದು ಬೇಕೋ ಅದು ಅರ್ಥವು, ಯಾವದು ಬೇಡವೋ ಅದು ಅನರ್ಥವು; ಅದ್ದರಿಂದ ಧರ್ಮಾರ್ಥಕಾಮಗಳೂ ಅರ್ಥವೆಂದಾಗಬಹುದು ಎಂದು ಅಭಿಪ್ರಾಯ.

3. ಹಾಗಾದರೆ ಮೋಕ್ಷವು ಅಭಿಪ್ರಾಯತಂತ್ರವೆ, ನಿಜವಾಗಿಲ್ಲವೆ ? - ಎಂಬ ಆಕ್ಷೇಪಕ್ಕೆ ಉತ್ತರವಿದು. ಅವಿದ್ಯಾದಶೆಯಲ್ಲಿ ಧರ್ಮಾದಿಗಳು ಪುರುಷಾರ್ಥ, ವಿದ್ಯಾದಶೆಯಲ್ಲಿ ಮೋಕ್ಷವೊಂದೇ ಪುರುಷಾರ್ಥವಾಗಿರುತ್ತದೆ ಎಂದರ್ಥ.

4. ಮಹಾಪ್ರಸ್ಥಾನದಿಂದ ಮರಣವನ್ನು ಹೊಂದುವದಕ್ಕಾಗಿ ಒಂದು ಇಷ್ಟಿಯನ್ನು ಧರ್ಮರಾಯನು ಮಾಡಿದನೆಂದು ಭಾರತದಲ್ಲಿದೆ ಎಂದು ಆ॥ ಟೀ॥. ಇಲ್ಲಿ 'ಮಾರಣಾದಿ' ಎಂಬ ಪಾಠವಿದ್ದರೆ ಅಭಿಚಾರಿಕಕರ್ಮವನ್ನು ಶಾಸ್ತ್ರದಲ್ಲಿ ವಿಧಿಸಿದ್ದರಿಂದ ವೇದಕ್ಕೆ ಹೇಗೆ ಅಪ್ರಾಮಾಣ್ಯವಿಲ್ಲವೋ ಹಾಗೆಯೇ ನಿತ್ಯಕರ್ಮವಿಧಿಗೂ ಆಗಬಹುದು; ಈ ಎರಡು ಸಂದರ್ಭಗಳಲ್ಲಿಯೂ ಪುರುಷಾಭಿಪ್ರಾಯತಂತ್ರವಾಗಿಯೇ ಅರ್ಥಾನರ್ಥಗಳು ನಿಶ್ಚಿತವಾಗಿರುವವು ಎಂದು ಅಭಿಪ್ರಾಯವನ್ನು ಕಲ್ಪಿಸಬೇಕು. ಮೀಮಾಂಸದಲ್ಲಿ ಶ್ಯೇನವಿಧಿಯ ವಿಚಾರವನ್ನು ನೋಡಿರಿ. ಛಾಂ. ಭಾ. ೨-೩-೧ರಲ್ಲಿ ಅಭಿಚಾರಕರ್ಮದ ಪ್ರಸ್ತಾಪವಿದೆ.

## ಪಾರಿವ್ರಾಜ್ಯಸಿದ್ಧಿ

(ಭಾಷ್ಯ)

೩೪೧. ತಸ್ಮಾತ್ ಯಾವತ್ ಆತ್ಮಜ್ಞಾನವಿಧೇರಾಭಿಮುಖ್ಯಂ ತಾವದೇವ ಕರ್ಮವಿಧಯಃ । ತಸ್ಮಾತ್ ನ ಆತ್ಮಜ್ಞಾನಸಹಭಾವಿತ್ವಂ ಕರ್ಮಣಾಮ್ ಇತ್ಯತಃ ಸಿದ್ಧಮ್ ಆತ್ಮಜ್ಞಾನಮೇವ ಅಮೃತತ್ವಸಾಧನಮ್ "ಏತಾವದರೇ ಖಲ್ವಮೃತತ್ವಮ್" (೪-೫-೧೫) ಇತಿ । ಕರ್ಮನಿರಪೇಕ್ಷತ್ವಾತ್ ಜ್ಞಾನಸ್ಯ । ಅತೋ ವಿದುಷಸ್ತಾವತ್ ಪಾರಿವ್ರಾಜ್ಯಂ ಸಿದ್ಧಂ ಸಂಪ್ರದಾನಾದಿಕರ್ಮಕಾರಕಜಾತ್ಯಾದಿಶೂನ್ಯಾವಿಕ್ರಿಯಬ್ರಹ್ಮಾತ್ಮದೃಢಪ್ರತಿಪತ್ತಿಮಾತ್ರೇಣ ವಚನಮನ್ತರೇಣಾಪಿ ಉಕ್ತನ್ಯಾಯತಃ । ತಥಾ ಚ ವ್ಯಾಖ್ಯಾತಮೇತತ್ "ಯೇಷಾಂ ನೋಽಯಮಾತ್ಮಾಽಯಂ ಲೋಕಃ" (೪-೪-೨೨) ಇತಿ ಹೇತುವಚನೇನ ಪೂರ್ವೇ ವಿದ್ವಾಂಸಃ ಪ್ರಜಾಮಕಾಮಯಮಾನಾ ವ್ಯುತ್ತಿಷ್ಠನ್ತೀತಿ ಪಾರಿವ್ರಾಜ್ಯಂ ವಿದುಷಾಮ್ ಆತ್ಮಲೋಕಾವಬೋಧಾದೇವ । ತಥಾ[1] ವಿವಿದಿಷೋರಪಿ ಸಿದ್ಧಂ ಪಾರಿವ್ರಾಜ್ಯಮ್ । "ಏತಮೇವಾಽಽತ್ಮಾನಂ ಲೋಕಮಿಚ್ಛನ್ತಃ ಪ್ರವ್ರಜನ್ತಿ" (೪-೪-೨೨) ಇತಿ ವಚನಾತ್ ॥

(ಭಾಷ್ಯಾರ್ಥ)

ಆದ್ದರಿಂದ ಆತ್ಮಜ್ಞಾನವಿಧಿಯು[2] ನಮ್ಮೆದುರಿಗೆ ಬರುವವರೆಗೇ ಕರ್ಮವಿಧಿಗಳು (ಕೆಲಸಮಾಡುತ್ತವೆ). ಆದ್ದರಿಂದ ಆತ್ಮಜ್ಞಾನದೊಡನೆ ಕರ್ಮಗಳು ಇರಲಾರವಾದ್ದರಿಂದ ಆತ್ಮಜ್ಞಾನವೇ ಅಮೃತತ್ವಕ್ಕೆ ಸಾಧನವು ಎಂದು 'ಎಲೆ, ಇಷ್ಟೇ ಅಮೃತತ್ವವು' (೪-೫-೧೫) ಎಂಬ (ಪ್ರಮಾಣದಿಂದ) ಸಿದ್ಧವಾಯಿತು. ಏಕೆಂದರೆ ಜ್ಞಾನಕ್ಕೆ ಕರ್ಮದ ಅಪೇಕ್ಷೆಯೇನೂ ಇಲ್ಲ. **ಆದ್ದರಿಂದ ಮೊದಲನೆಯದಾಗಿ ಸಂಪ್ರದಾನವೇ ಮುಂತಾದ ಕರ್ಮಕಾರಕಗಳೂ ಜಾತಿಯೇ ಮುಂತಾದವುಗಳೂ[3] ಇಲ್ಲದ ಬ್ರಹ್ಮಾತ್ಮನ ದೃಢಜ್ಞಾನಮಾತ್ರದಿಂದಲೇ ಯಾವ ವಚನವೂ ಇಲ್ಲದೆಯೇ- ಈ (ಮೇಲೆ) ಹೇಳಿದ ನ್ಯಾಯದಿಂದ[4] ಜ್ಞಾನಿಗೆ ಪಾರಿವ್ರಾಜ್ಯವಂತೂ ಸಿದ್ಧ**

1. ಇದರ ಮುಂದಿನ ಚಶಬ್ದವು ಬೇಕಿಲ್ಲವೆಂದು ಬಿಟ್ಟುಬಿಟ್ಟಿದೆ.

2. ಆತ್ಮಜ್ಞಾನೋಪದೇಶಕವಾಕ್ಯವು ಎಂದರ್ಥ.

3. ಜಾತಿ, ವಯಸ್ಸು, ಅವಸ್ಥೆ- ಮುಂತಾದವುಗಳೂ ಕರ್ಮಕ್ಕೆ ಬೇಕು; ಅವು ಯಾವವೂ ಪರಮಾರ್ಥಾತ್ಮನಲ್ಲಿಲ್ಲ.

4. ಜ್ಞಾನವು ಕರ್ಮಹೇತುವಾದ ಕಾರಕಾದಿಗಳನ್ನು ಬಾಧಿಸುತ್ತದೆ ಎಂಬ ನ್ಯಾಯದಿಂದ ಎಂದರ್ಥ. ಶಾಂತ್ಯಾದಿವಚನದಿಂದ ಎಂಬ ಟೀಕೆ ಅಷ್ಟು ಸಮಂಜಸವಲ್ಲವೆಂದು ನಮಗೆ ತೋರುತ್ತದೆ.

ವಾಯಿತು[1]. ಆದ್ದರಿಂದಲೇ "ಯಾವ ನನಗೆ ಇವನೇ ಆತ್ಮನೋ ಇವನೇ ಲೋಕವೋ" (೪-೪-೨೨) ಎಂಬ ಹೇತುವಚನದಿಂದ ಹಿಂದಿನ ಜ್ಞಾನಿಗಳು ಪ್ರಜೆಯನ್ನು ಕಾಮಿಸದೆ ವ್ಯುತ್ಥಾನವನ್ನು ಮಾಡಿದರು- ಎಂದು ಜ್ಞಾನಿಗೆ ಆತ್ಮಲೋಕದ ಜ್ಞಾನಮಾತ್ರದಿಂದಲೇ ಈ ಪಾರಿವ್ರಾಜ್ಯವನ್ನು ವಿವರಿಸಿ ಹೇಳಿದ್ದಾಗಿದೆ[2]. ಇದರಂತೆ ವಿವಿದಿಷುವಿಗೂ ಪಾರಿವ್ರಾಜ್ಯವು ಸಿದ್ಧವಾಯಿತು, ಏಕೆಂದರೆ "ಈ ಆತ್ಮನೆಂಬ ಲೋಕವನ್ನು ಇಚ್ಛಿಸುವವರು ಪ್ರವ್ರಜನಮಾಡುತ್ತಾರೆ" (೪-೪-೨೨) ಎಂಬ ವಚನವಿದೆ[3].

## ಕರ್ಮಗಳ ವಿನಿಯೋಗ

(ಭಾಷ್ಯ)

೩೪೨. ಕರ್ಮಣಾಂ ಚ ಅವಿದ್ವದ್ವಿಷಯತ್ವಮ್ ಅವೋಚಾಮ ಅವಿದ್ಯಾವಿಷಯೇ ಚ ಉತ್ಪತ್ತ್ಯಾಪ್ತಿವಿಕಾರಸಂಸ್ಕಾರಾರ್ಥಾನಿ ಕರ್ಮಾಣಿ ಇತ್ಯತಃ ಆತ್ಮಸಂಸ್ಕಾರದ್ವಾರೇಣ ಆತ್ಮಜ್ಞಾನಸಾಧನತ್ವಮಪಿ ಕರ್ಮಣಾಮ್ ಅವೋಚಾಮ ಯಜ್ಞಾದಿಭಿರ್ವಿವಿದಿಷನ್ತಿ ಇತಿ ॥

(ಭಾಷ್ಯಾರ್ಥ)

ಕರ್ಮಗಳು ಅಜ್ಞರ ವಿಷಯವೆಂದು- ಅವಿದ್ಯೆಯ ವಿಷಯದಲ್ಲಿ ಉತ್ಪತ್ತಿ, ಆಪ್ತಿ, ವಿಕಾರ, ಸಂಸ್ಕಾರ- (ಇವುಗಳನ್ನುಂಟು)ಮಾಡುವದಕ್ಕಾಗಿ ಕರ್ಮಗಳು ಬೇಕಾಗಿರುವದರಿಂದ (ಅವು) ಅಜ್ಞರ ವಿಷಯವೆಂದು- ಹಿಂದೆ ಹೇಳಿರುತ್ತೇವೆ[4]

---

1. ವಚನವಿಲ್ಲದಿದ್ದರೂ ಜ್ಞಾನಸ್ವಭಾವವೇ ಕರ್ಮವಿರುದ್ಧವಾಗಿರುವ ಕಾರಣದಿಂದಲೂ ಕರ್ಮನಿರಪೇಕ್ಷನಾಗಿ ಜ್ಞಾನವು ಮುಕ್ತಿಯನ್ನು ಕೊಡುವದಾದ್ದರಿಂದಲೂ ಸಿದ್ಧವಾಯಿತು ಎಂದರ್ಥ. ವಿದ್ವತ್ಸಂನ್ಯಾಸದ ವಿಷಯಕ್ಕೆ ಈಗಿನವರ ಅಭಿಪ್ರಾಯವನ್ನು ಪೀಠಿಕೆಯಲ್ಲಿ ಚರ್ಚಿಸಿದೆ.

2. ಆದ್ದರಿಂದ ವಚನವೂ ಉಕ್ತನ್ಯಾಯವನ್ನೇ ಬಲಪಡಿಸಿದೆ ಎಂದು ಭಾವ.

3. ಆತ್ಮಪ್ರಾಪ್ತಿಗಾಗಿ ಪ್ರಯತ್ನಿಸುವವರು ಪ್ರವ್ರಜನಮಾಡಬೇಕು ಎಂದು ಶ್ರುತಿಯ ಅರ್ಥ; ಜ್ಞಾನಿಗೆ ಆತ್ಮಜ್ಞಾನದಿಂದ ಸ್ವತಃಸಿದ್ಧವಾಗಿರುವ ಪಾರಿವ್ರಾಜ್ಯವು ಅಜ್ಞಾನಿಗಳಾದ ಮುಮುಕ್ಷುಗಳಿಗೆ ಸಾಧನವೆಂದು ಶ್ರುತಿಯಲ್ಲಿ ವಿಧಿಸಿದೆ. ಇತರಲೋಕಗಳನ್ನು ಬಯಸುವವರು ಮಾಡಬೇಕಾದ ಪ್ರಜಾದ್ಯರ್ಥವಾದ ಸಾಧನಗಳನ್ನು ಅವರು ಬಿಡುವರೆಂಬುದು ಯುಕ್ತವೂ ಆಗಿದೆ ಎಂದರ್ಥ. ವಿವಿದಿಷಾಸಂನ್ಯಾಸದ ವಿಷಯಕ್ಕೆ ಪೀಠಿಕೆಯನ್ನು ನೋಡಿ.

4. ೩-೩-೧ (ಭಾ. ಭಾ ೩೧, ೩೩, ೩೪) ಇವನ್ನು ನೋಡಿ

ಆತ್ಮಸಂಸ್ಕಾರದ ಮೂಲಕ[1] ಕರ್ಮಗಳು ಆತ್ಮಜ್ಞಾನಕ್ಕೆ ಕಾರಣವಾಗಿರುತ್ತವೆ ಎಂದೂ " ಯಜ್ಞವೇ ಮುಂತಾದವುಗಳಿಂದ ತಿಳಿಯಲೆಳಸುತ್ತಾರೆ " ಎಂಬ (ಶ್ರುತಿಯ ಪ್ರಮಾಣದಿಂದ) ಹೇಳಿರುತ್ತೇವೆ[2].

## ಆತ್ಮಜ್ಞಾನಕ್ಕೆ ಪಾರಿವ್ರಾಜ್ಯವು ಪ್ರಶಸ್ತಸಾಧನ

(ಭಾಷ್ಯ)

೩೪೩. ಅಥ ಏವಂ ಸತಿ ಅವಿದ್ವದ್ವಿಷಯಾಣಾಮ್ ಆಶ್ರಮಕರ್ಮಣಾಂ ಬಲಾಬಲವಿಚಾರಣಾಯಾಮ್ ಆತ್ಮಜ್ಞಾನೋತ್ಪಾದನಂ ಪ್ರತಿ ಯಮಪ್ರಧಾನಾನಾಮ್ ಅಮಾನಿತ್ವಾದೀನಾಂ ಮಾನಸಾನಾಂ ಚ ಧ್ಯಾನಜ್ಞಾನವೈರಾಗ್ಯಾದೀನಾಂ ಸಂನಿಪತ್ಯೋಪಕಾರಕತ್ವಮ್ । ಹಿಂಸಾರಾಗದ್ವೇಷಾದಿಬಾಹುಲ್ಯಾತ್ ಬಹುಕ್ಲಿಷ್ಟಕರ್ಮವಿಮಿಶ್ರಿತಾ ಇತರೇ ಇತ್ಯತಃ ಪಾರಿವ್ರಾಜ್ಯಂ ಮುಮುಕ್ಷೂಣಾಂ ಪ್ರಶಂಸನ್ತಿ । "ತ್ಯಾಗ ಏವ ಹಿ ಸರ್ವೇಷಾಮುಕ್ತಾನಾಮಪಿ ಕರ್ಮಣಾಮ್ । ವೈರಾಗ್ಯಂ ಪುನರೇತಸ್ಯ ಮೋಕ್ಷಸ್ಯ ಪರಮೋಽವಧಿಃ ॥" (   ?   ), "ಕಿಂ ತೇ ಧನೇನ ಕಿಮು ಬನ್ಧುಭಿಸ್ತೇ । ಕಿಂ ತೇ ದಾರೈರ್ಬ್ರಾಹ್ಮಣ ಯೋ ಮರಿಷ್ಯಸಿ ॥ ಆತ್ಮಾನಮನ್ವಿಚ್ಛ ಗುಹಾಂ ಪ್ರವಿಷ್ಟಂ । ಪಿತಾಮಹಾಸ್ತೇ ಕ್ವ ಗತಾಃ ಪಿತಾ ಚ ॥" (ಮೋ. ಧ. ೧೭೫-೩೯, ೨೭೭-೩೮)[3] । ಏವಂ ಸಾಂಖ್ಯಯೋಗಶಾಸ್ತ್ರೇಷು ಚ ಸಂನ್ಯಾಸೋ ಜ್ಞಾನಂ ಪ್ರತಿ ಪ್ರತ್ಯಾಸನ್ನ ಉಚ್ಯತೇ । ಕಾಮಪ್ರವೃತ್ತ್ಯಭಾವಾಚ್ಚ । ಕಾಮಪ್ರವೃತ್ತೇರ್ಹಿ ಜ್ಞಾನಪ್ರತಿಕೂಲತಾ ಸರ್ವಶಾಸ್ತ್ರೇಷು ಪ್ರಸಿದ್ಧಾ । ತಸ್ಮಾತ್ ವಿರಕ್ತಸ್ಯ ಮುಮುಕ್ಷೋಃ ವಿನಾಽಪಿ ಜ್ಞಾನೇನ ಬ್ರಹ್ಮಚರ್ಯಾದೇವ ಪ್ರವ್ರಜೇತ್" (ಜಾ. ೪) ಇತ್ಯಾದ್ಯುಪಪನ್ನಮ್॥

(ಭಾಷ್ಯಾರ್ಥ)

**ಇನ್ನು ಹೀಗಿರುವಲ್ಲಿ ಅಜ್ಞರ ವಿಷಯವಾದ ಆಶ್ರಮಕರ್ಮಗಳ ಬಲಾಬಲಗಳನ್ನು ವಿಚಾರಿಸುವಲ್ಲಿ, ಆತ್ಮಜ್ಞಾನವುಂಟಾಗುವದಕ್ಕೆ ಯಮಪ್ರಧಾನವಾಗಿರುವ ಅಮಾನಿತ್ವಾದಿಗಳೂ ಮಾನಸವಾದ ಧ್ಯಾನ**

---

1. ಕಾರ್ಯಕರಣಗಳ ಸಂಸ್ಕಾರದ ಮೂಲಕ ಎಂದರ್ಥ, ೩-೩-೧ (ಭಾ. ಭಾ. ೩೬)ನ್ನು ನೋಡಿ.

2. ೪-೪-೨೨ (ಭಾ. ಭಾ. ೩೦೬)ರಲ್ಲಿ ನಿತ್ಯಕರ್ಮಜ್ಞಾನವೆಲ್ಲವೂ ಸಂಸ್ಕಾರದ ಮೂಲಕ ಜ್ಞಾನಕ್ಕೆ ಹೇತುವೆಂಬುದನ್ನು ಸ್ಪಷ್ಟಪಡಿಸಿದೆ.

3. ಅಚ್ಚಿನ ಮಹಾಭಾರತದಲ್ಲಿ ಎರಡು ಕಡೆಗಳಲ್ಲಿಯೂ ಹೀಗೆ ಪಾಠವಿದೆ; " ಕಿಂ ತೇ ಧನೈರ್ಬಾನ್ಧವೈರ್ವಾಽಪಿ ಕಿಂ ತೇ ॥ "

ಜ್ಞಾನ[1], ವೈರಾಗ್ಯ-ಮುಂತಾದವುಗಳೂ ಸಮೀಪವಾಗಿ ಉಪಕಾರಕವಾಗಿರುತ್ತವೆ; ಹಿಂಸೆ, ರಾಗ, ದ್ವೇಷ - ಮುಂತಾದವುಗಳು ಬಹಳವಾಗಿರುವದರಿಂದ ಮಿಕ್ಕ (ಆಶ್ರಮಗಳು) ಬಹಳ ಕ್ಲಿಷ್ಟಕರ್ಮಗಳಿಂದ[2] ಮಿಶ್ರಿತವಾಗಿರುತ್ತವೆ- ಎಂಬೀ ಕಾರಣದಿಂದ ಮುಮುಕ್ಷುಗಳಿಗೆ ಪಾರಿವ್ರಾಜ್ಯವನ್ನೇ ಹೊಗಳುತ್ತಾರೆ. "(ಶಾಸ್ತ್ರದಲ್ಲಿ) ಹೇಳಿದ್ದರೂ ಎಲ್ಲಾ ಕರ್ಮಗಳನ್ನೂ ಬಿಡುವದೆಂಬ ವೈರಾಗ್ಯವೇ ಈ ಮೋಕ್ಷಕ್ಕೆ ತೀರ ಕೊನೆಯ ಅವಧಿಯು" (   ?   ), "ಎಲೆ, (ಇಷ್ಟರಲ್ಲಿಯೇ) ಸಾಯಲಿರುವ ಬ್ರಾಹ್ಮಣನೆ, ನಿನಗೆ ಧನದಿಂದಾಗಬೇಕಾದದ್ದೇನು? ಬಾಂಧವರಿಂದಾಗಬೇಕಾದದ್ದೇನು? ಹೆಂಡತಿಯಿಂದಾಗಬೇಕಾದದ್ದೇನು? ಗುಹೆಯಲ್ಲಿ ಹೊಕ್ಕಿರುವ ಆತ್ಮನನ್ನು ಹುಡುಕಿಕೊ, ನಿನ್ನ ಅಜ್ಜಂದಿರೂ ತಂದೆಯೂ ಎಲ್ಲಿಗೆ ಹೋದರು? (ಯೋಚನೆಮಾಡು)!" (ಮೋ ಧ. ೧೭೫-೩೮ ೨೭೭-೩೮) ಹೀಗೆಯೇ ಸಾಂಖ್ಯಯೋಗಶಾಸ್ತ್ರಗಳಲ್ಲಿಯೂ ಸಂನ್ಯಾಸವು ಜ್ಞಾನಕ್ಕೆ ಸಮೀಪವಾಗಿರುವದೆಂದು ಹೇಳಿರುತ್ತದೆ[3]. ಕಾಮಪ್ರವೃತ್ತಿಯು ಇಲ್ಲದ್ದರಿಂದಲೂ (ಈ ಆಶ್ರಮವು ಹೆಚ್ಚಿನ ಸಾಧನವು). ಕಾಮದ ಪ್ರವೃತ್ತಿಯು ಜ್ಞಾನಕ್ಕೆ ಪ್ರತಿಕೂಲವೆಂಬುದು ಸರ್ವಶಾಸ್ತ್ರಗಳಲ್ಲಿಯೂ ಪ್ರಸಿದ್ಧವಷ್ಟೆ? ಆದ್ದರಿಂದ ವಿರಕ್ತನಾದ ಮುಮುಕ್ಷುವಿಗೆ ಜ್ಞಾನವಿಲ್ಲದಿದ್ದರೂ (ಸಂನ್ಯಾಸವು) "ಬ್ರಹ್ಮಚರ್ಯದಿಂದಲೇ ಪ್ರವ್ರಜನಮಾಡಬೇಕು" (ಜಾ. ೪) ಮುಂತಾದ (ಪ್ರಮಾಣದಿಂದ) ಹೊಂದುತ್ತದೆ.

---

1. ಇಲ್ಲಿ ಜ್ಞಾನ ಎಂಬ ಮಾತು ಮೂಲದಲ್ಲಿತ್ತೋ ಇಲ್ಲವೋ ಹೇಳುವದಕ್ಕಿಲ್ಲ. ಇದ್ದರೆ ಇಲ್ಲಿ ಜ್ಞಾನಕ್ಕೆ ಬೇಕಾದ ವಿಚಾರ ಎಂದೇ ಅರ್ಥಮಾಡಿಕೊಳ್ಳಬೇಕು; ಏಕೆಂದರೆ ಅಮಾನಿತ್ವಾದಿಗಳೆಂಬ ಜ್ಞಾನಸಾಧನಗಳನ್ನು ಬೇರೆ ಹೇಳಿದೆ. 'ಮಾನಸ' ಎಂಬುದು ಎಲ್ಲ ಸಾಧನಗಳಿಗೂ ವಿಶೇಷಣವೇ, ಏಕೆಂದರೆ ಸಂನ್ಯಾಸಿಗೆ ನಿಯಮಪ್ರಧಾನವಾದ ಕಾಯಿಕ ಕರ್ಮಗಳನ್ನು ಮುಖ್ಯವಾಗಿ ಹೇಳಿಲ್ಲ. ತೈ ಭಾ. ೧-೨೧ (ಭಾ. ಭಾ ೮೩, ೮೫)ನ್ನೂ ಅದರ ಅನುವಾದದ ಟಿಪ್ಪಣಿಯನ್ನೂ ನೋಡಿರಿ. ಐ. ಅವ. ಭಾ. ೧೮ರಲ್ಲಿಯೂ ಹೀಗೆಯೇ ಹೇಳಿದೆ.

2. 'ಪಾಪ' ಮಿಶ್ರಿತವಾಗಿರುತ್ತವೆ ಎಂದು ಆ|| ಟೀ||; ಅವಿದ್ಯಾದಿಕ್ಲೇಶಮಿಶ್ರಿತ ಕರ್ಮಗಳಿಂದ ಕೂಡಿರುತ್ತವೆ ಎಂದೂ ಅರ್ಥಮಾಡಬಹುದೆಂತ ತೋರುತ್ತದೆ. ಯೋ. ಸೂ. ೪-೩೦ ನೋಡಿ.

3. ಯೋಗ. ಸೂ. ೧-೧೫, ೧೬ ಇವುಗಳ ಭಾಷ್ಯವನ್ನು ನೋಡಿರಿ. ಇಲ್ಲಿ ಕರ್ಮತ್ಯಾಗವನ್ನು ಜ್ಞಾನಕ್ಕೆ ಅಂತರಂಗಸಾಧನವಾಗಿ ಸಾಂಖ್ಯಾದಿಗಳೂ ಹೇಳಿದಾರೆ ಎಂಬುದಿಷ್ಟಕ್ಕೇ ಇದನ್ನು ಉದಾಹರಿಸಿದೆ. ಪರಮಾರ್ಥಸಂನ್ಯಾಸವು ಅವರ ಮತದಲ್ಲಿ ಸಾಧ್ಯವೇ ಇಲ್ಲ ಎಂಬುದಕ್ಕೆ ಛಾಂ. ಭಾ. ೨-೨೩-೧ನ್ನು ನೋಡಿ.

# ಪಾರಿವ್ರಾಜ್ಯವು ಅನಧಿಕಾರಿಗಳಿಗೇ ಹೇಳಿದ್ದಲ್ಲ

(ಭಾಷ್ಯ)

೩೪೪. ನನು ಸಾವಕಾಶತ್ವಾತ್ ಅನಧಿಕೃತವಿಷಯಮೇತತ್ ಇತ್ಯುಕ್ತಮ್। ಯಾವಜ್ಜೀವಶ್ರುತ್ಯುಪರೋಧಾತ್। ನೈಷ ದೋಷಃ। ನಿತರಾಂ ಸಾವಕಾಶತ್ವಾತ್ ಯಾವಜ್ಜೀವಶ್ರುತೀನಾಮ್। ಅವಿದ್ವತ್ಸ್ವಾಮಿಕರ್ತವ್ಯತಾಂ ಹಿ ಅಪೇಕ್ಷಾಮ ಸರ್ವಕರ್ಮಣಾಮ್। ನ ತು ನಿರಪೇಕ್ಷಮೇವ ಜೀವನನಿಮಿತ್ತಮೇವ ಕರ್ತವ್ಯಂ ಕರ್ಮ। ಪ್ರಾಯೇಣ ಹಿ ಪುರುಷಾಃ ಕಾಮಬಹುಲಾಃ। ಕಾಮಶ್ಚ ಅನೇಕವಿಷಯಃ, ಅನೇಕ ಕರ್ಮಸಾಧನಸಾಧ್ಯಶ್ಚ। ಅನೇಕಫಲಸಾಧನಾನಿ ಚ ವೈದಿಕಾನಿ ಕರ್ಮಾಣಿ ದಾರಾಗ್ನಿಸಂಬಂಧಿ[1] ಪುರುಷಕರ್ತವ್ಯಾನಿ ಪುನಃಪುನಶ್ಚ ಅನುಷ್ಠೀಯಮಾನಾನಿ ಬಹುಫಲಾನಿ ಕೃಷ್ಯಾದಿವತ್, ವರ್ಷಶತಸಮಾಪ್ತೀನಿ ಚ ಗಾರ್ಹಸ್ಥ್ಯೇ ವಾ ಆರಣ್ಯೇ ವಾ। ಅತಃ ತದಪೇಕ್ಷಯಾ ಯಾವಜ್ಜೀವಶ್ರುತಯಃ, 'ಕುರ್ವನ್ನೇವೇಹ ಕರ್ಮಾಣಿ' (ಈ. ೨) ಇತಿ ಚ ಮನ್ತ್ರವರ್ಣಃ, ತಸ್ಮಿಂಶ್ಚ ಪಕ್ಷೇ ವಿಶ್ವಜಿತ್ಸರ್ವಮೇಧಯೋಃ ಕರ್ಮಪರಿತ್ಯಾಗಃ। ಯಸ್ಮಿಂಶ್ಚ ಪಕ್ಷೇ ಯಾವಜ್ಜೀವಾನುಷ್ಠಾನಮ್ ತದಾ ಶ್ಮಶಾನಾನ್ತತ್ವಂ ಭಸ್ಮಾನ್ತತಾ ಚ ಶರೀರಸ್ಯ। ಇತರವರ್ಣಾಪೇಕ್ಷಯಾ ವಾ ಯಾವಜ್ಜೀವಶ್ರುತಿಃ। ನ ಹಿ ಕ್ಷತ್ರಿಯವೈಶ್ಯಯೋಃ ಪಾರಿವ್ರಾಜ್ಯಪ್ರತಿಪತ್ತಿರಸ್ತಿ। ತಥಾ "ಮನ್ತ್ರೈರ್ಯಸ್ಯೋದಿತೋ ವಿಧಿಃ" (ಮನು. ೨-೧೬), "ಏಕಾಶ್ರಮ್ಯಂ ತ್ವಾಚಾರ್ಯಾಃ" (ಗೌ. ಧ ೧-೩-೩೫) ಇತ್ಯೇವಮಾದೀನಾಂ ಕ್ಷತ್ರಿಯವೈಶ್ಯಾಪೇಕ್ಷತ್ವಮ್। ತಸ್ಮಾತ್ ಪುರುಷಸಾಮರ್ಥ್ಯಜ್ಞಾನವೈರಾಗ್ಯಕಾಮಾದ್ಯಪೇಕ್ಷಯಾ ವ್ಯುತ್ಥಾನವಿಕಲ್ಪಕ್ರಮಪ್ರಾಪ್ತಿಪಾರಿವ್ರಾಜ್ಯಪ್ರತಿಪತ್ತಿಪ್ರಕಾರಾಃ ನ ವಿರುಧ್ಯನ್ತೇ। ಅನಧಿಕೃತಾನಾಂ ಚ ಪೃಥಗ್ವಿಧಾನಾತ್ ಪಾರಿವ್ರಾಜ್ಯಸ್ಯ "ಸ್ನಾತಕೋ ವಾಽಸ್ನಾತಕೋ ವೋತ್ಸನ್ನಾಗ್ನಿರನಗ್ನಿಕೋ ವಾ" (ಜಾ. ೪) ಇತ್ಯಾದಿನಾ। ತಸ್ಮಾತ್ ಸಿದ್ಧಾನ್ಯಾಶ್ರಮಾನ್ತರಾಣಿ ಅಧಿಕೃತಾನಾಮೇವ ॥

(ಭಾಷ್ಯಾರ್ಥ)

(ಆಕ್ಷೇಪ) :- ಈ (ಪಾರಿವ್ರಾಜ್ಯವು) ಸಾವಕಾಶವಾಗಿರುವದರಿಂದ ಅನಧಿಕೃತರ ವಿಷಯವಾಗಿದೆ ಎಂದು ಹೇಳಿದೆವಲ್ಲ[2] ! ಏಕೆಂದರೆ (ಇದು ಸಾರ್ವವಿಷಯಕವಾದರೆ) ಯಾವಜ್ಜೀವಶ್ರುತಿಗಳಿಗೆ ವಿರೋಧ(ವಾಗುತ್ತದೆ).[3]

---

1. ಇದು 'ಸಂಬದ್ಧ' ಎಂದಿದ್ದರೆ ಅರ್ಥವು ಇನ್ನಷ್ಟು ಸ್ಫುಟವಾಗಿರುತ್ತಿತ್ತು.

2. ಭಾ. ಭಾ. ೩೩೬ರಲ್ಲಿ ಹೀಗೆಂದು ಪೂರ್ವಪಕ್ಷಿ ಹೇಳಿರುತ್ತಾನೆ.

3. ಬದುಕಿರುವವರೆಗೂ ಕರ್ಮವನ್ನು ಮಾಡಬೇಕು ಎಂದು ಹೇಳಿ ಕರ್ಮಸಂನ್ಯಾಸವನ್ನು ವಿಧಿಸಿದರೆ ಕರ್ಮವಿಧಿಯು ನಿರವಕಾಶವಾಗುತ್ತದೆಯಲ್ಲ!

(ಪರಿಹಾರ) :- ಹಾಗಲ್ಲ. ಏಕೆಂದರೆ ಯಾವಜ್ಜೀವಶ್ರುತಿಗಳು ಇನ್ನೂ (ಹೆಚ್ಚಾಗಿ) ಸಾವಕಾಶವಾಗಿರುತ್ತವೆ; ಅಜ್ಞರಾದ ಕಾಮಿಗಳೇ ಎಲ್ಲಾ ಕರ್ಮಗಳನ್ನೂ ಮಾಡತಕ್ಕವರು ಎಂದಲ್ಲವೆ, ನಾವು ಹೇಳಿರುವದು[1]? ಕರ್ಮ ಎಂಬುದು (ಮತ್ತೊಂದರ) ಅಪೇಕ್ಷೆಯೇ ಇಲ್ಲದೆ (ಬರಿಯ) ಜೀವನನಿಮಿತ್ತದಿಂದಲೇ ಮಾಡತಕ್ಕದ್ದಲ್ಲ[2]. (ಏಕೆಂದರೆ) ಪುರುಷರು ಬಹುಮಟ್ಟಿಗೆ ಕಾಮಪ್ರಚುರರಾಗಿರುತ್ತಾರಲ್ಲವೆ? (ಈ) ಕಾಮವು ಅನೇಕ (ವಸ್ತು)ಗಳ ವಿಷಯವಾಗಿ (ಇರತಕ್ಕದ್ದು)[3]. ಅನೇಕ ಕರ್ಮಗಳೆಂಬ ಸಾಧನದಿಂದ ಸಾಧಿಸಬೇಕಾದದ್ದು; ವೈದಿಕಕರ್ಮಗಳೂ ಅನೇಕ ಫಲಗಳಿಗೆ ಸಾಧನಗಳಾಗಿರುತ್ತವೆ; (ಇವು) ಹೆಂಡತಿ, ಅಗ್ನಿ -ಇವುಗಳ ಸಂಬಂಧವುಳ್ಳ ಪುರುಷರು[4] ಮಾಡತಕ್ಕವು, ಕೃಷ್ಯಾದಿಗಳಂತೆ ಮತ್ತೆಮತ್ತೆ ಅನುಷ್ಠಾನಮಾಡಿದರೆ ಬಹುಫಲವನ್ನು ಕೊಡುತ್ತವೆ; ನೂರುವರ್ಷಗಳಾದಮೇಲೆ ಗಾರ್ಹಸ್ಥ್ಯದಲ್ಲಿಯೋ ವಾನಪ್ರಸ್ಥದಲ್ಲಿಯೋ ಮುಗಿಯತಕ್ಕವುಗಳಾಗಿರುತ್ತವೆ[5]. ಆದ್ದರಿಂದ ಅದರ ಅಪೇಕ್ಷೆಯಿಂದ ಯಾವಜ್ಜೀವಶ್ರುತಿಗಳು 'ಇಲ್ಲಿ ಕರ್ಮಗಳನ್ನು ಮಾಡುತ್ತಲೇ (ನೂರು ವರ್ಷ ಬದುಕಲಿಚ್ಛಿಸಬೇಕು') (ಈ. ೨ ಎಂದು ಮಂತ್ರವರ್ಣ)ವಿದೆ. ಮತ್ತು ಆ ಪಕ್ಷದಲ್ಲಿ[6] ವಿಶ್ವಜಿತ್ತು, ಸರ್ವಮೇಧ- ಇವುಗಳಾದಮೇಲೆಯೇ ಕರ್ಮತ್ಯಾಗವು (ಪ್ರಾಪ್ತವಾಗುತ್ತದೆ). ಆದರೆ ಯಾವ ಪಕ್ಷದಲ್ಲಿ ಬದುಕಿರುವವರೆಗೂ (ಕರ್ಮವನ್ನು) ಮಾಡುತ್ತಲೇ ಇರುವನೋ[7], ಆಗ (ಅವು) ಶ್ಮಶಾನ(ಕರ್ಮದ)ವರೆಗೂ ಇರುವವು; ಶರೀರವೂ ಭಸ್ಮಾಂತವಾಗುವದು[8].

---

1. ೩೩೯ರಲ್ಲಿ ಐ. ಭಾ. ಭಾ. ೨೨ನ್ನು ನೋಡಿ.

2. ಹಾಗಿದ್ದಿದ್ದರೆ ಎಲ್ಲರೂ ಬದುಕಿರುವವರೆಗೆ ಕರ್ಮಗಳನ್ನು ಮಾಡುತ್ತಲೇ ಇರಬೇಕು ಎಂದಾಗುತ್ತಿತ್ತು.

3. ತೈ. ಭಾ. ೧-೧೧ (ಭಾ ಭಾ. ೮೪)ರಲ್ಲಿಯೂ ಕಾಮಬಾಹುಲ್ಯವಿರುವದರಿಂದ ಕರ್ಮವನ್ನು ಶ್ರುತಿಯಲ್ಲಿ ಬಹಳವಾಗಿ ವಿಧಿಸಿದೆ ಎಂದು ಬರೆದಿದೆ.

4. ಇವುಗಳ ಸಂಬಂಧವಿಲ್ಲದವರಿಗೆ ಕರ್ಮವನ್ನು ವಿಧಿಸಿಯೇ ಇಲ್ಲ, ಆದ್ದರಿಂದ ಕರ್ಮಗಳನ್ನು ಎಲ್ಲರೂ ಮಾಡಬೇಕು ಎಂಬುದು ಸರಿಯಲ್ಲ.

5. ಆದ್ದರಿಂದ ಅಂಥ ಕರ್ಮಗಳನ್ನು ಮಾಡುವದಕ್ಕೆ ಬದುಕಿರುವವರೆಗೂ ಅವನ್ನು ಮಾಡಬೇಕೆಂಬುದು ನ್ಯಾಯ.

6. ಕಾಮಿಗಳಾದ ಅಜ್ಞರಿಗೇ ಕರ್ಮವೆಂಬ ಪಕ್ಷದಲ್ಲಿ

7. ವಿಶ್ವಜಿತ್ಸರ್ವಮೇಧಗಳನ್ನು ಮಾಡದೆ ಇರುವ ಅಜ್ಞರ ವಿಷಯದಲ್ಲಿ.

8. ಮನುಧರ್ಮದಲ್ಲಿ ಹೇಳಿದ ವಚನವು ಅವರಿಗೆ ಸಲ್ಲುತ್ತದೆ, ಗೃಹಸ್ಥರಾದ್ದರಿಂದ ಅವರ ಶರೀರವು ಭಸ್ಮಾಂತವಾಗುತ್ತದೆ ಎಂಬುದೂ ಹೊಂದುತ್ತದೆ.

ಅಥವಾ ಯಾವಜ್ಜೀವಶ್ರುತಿಯು ಮಿಕ್ಕ ವರ್ಣಗಳ ಅಪೇಕ್ಷೆಯಿಂದ ಬಂದಿದೆ (ಎಂದೂ ಹೇಳಬಹುದು. ಏಕೆಂದರೆ): **ಕ್ಷತ್ರಿಯವೈಶ್ಯರಿಗೆ ಪಾರಿವ್ರಾಜ್ಯಪ್ರಾಪ್ತಿಯಿಲ್ಲವಷ್ಟೆ?** ಹಾಗಾದರೆ[1] "ಮಂತ್ರಗಳಿಂದ ಯಾವನಿಗೆ ವಿಧಿಯನ್ನು ಹೇಳಿದೆಯೋ" (ಮನು ೨-೧೬), "ಆಚಾರ್ಯರು ಒಂದೇ ಆಶ್ರಮವೆಂದು (ಹೇಳುತ್ತಾರೆ)" (ಗೌ. ೧-೩-೩೫) –ಇವೇ ಮುಂತಾದ ವಚನಗಳು ಕ್ಷತ್ರಿಯವೈಶ್ಯರ ವಿಷಯಕವಾದದ್ದು (ಎಂದೂ ಹೇಳಬಹುದು).

ಆದ್ದರಿಂದ ಪುರುಷರ ಸಾಮರ್ಥ್ಯ, ಜ್ಞಾನ, ವೈರಾಗ್ಯ, ಕಾಮ– ಮುಂತಾದವುಗಳ ಅಪೇಕ್ಷೆಯಿಂದ ವ್ಯುತ್ಥಾನದ ವಿಕಲ್ಪ, ಪಾರಿವ್ರಾಜ್ಯದ ಕ್ರಮಪ್ರಾಪ್ತಿ– ಈ ಪ್ರಕಾರಗಳು (ಒಂದಕ್ಕೊಂದು) ವಿರುದ್ಧವಾಗಿರುವದಿಲ್ಲ.[2] ಅನಧಿಕಾರಿಗಳಿಗೆ "ಸ್ನಾತಕನಾಗಲಿ, ಅಸ್ನಾತಕನಾಗಲಿ, ಉತ್ಸನ್ನಾಗ್ನಿಯಾಗಲಿ, ಅನಗ್ನಿಯಾಗಲಿ" (ಜಾ. ೪) ಎಂಬುವುಮುಂತಾಗಿರುವ (ಶ್ರುತಿ)ಯಿಂದ ಪಾರಿವ್ರಾಜ್ಯವು ಬೇರೆಯಾಗಿಯೇ ವಿಹಿತವಾಗಿರುವದರಿಂದಲೂ (ವಿರುದ್ಧವಾಗಿರುವದಿಲ್ಲ).[3] ಆದ್ದರಿಂದ[4] (ಗಾರ್ಹಸ್ಥ್ಯವಲ್ಲದೆ) ಬೇರೆಯ ಆಶ್ರಮಗಳೂ ಅಧಿಕಾರಿಗಳಿಗೇ ಸಿದ್ಧವಾದವು.

---

1. ಇದು ಆಚಾರ್ಯರ ಅಭಿಪ್ರಾಯ. ಕ್ಷತ್ರಿಯಾದಿಗಳಿಗೂ ಅಧಿಕಾರವುಂಟು ಎಂದು ವಾರ್ತಿಕ, ೩-೫-೧೮ರ ಮೇಲಿನ ೮೯, ೯೦ –ಈ ವಾರ್ತಿಕಗಳನ್ನು ನೋಡಿ.

2. ಸಾಮರ್ಥ್ಯವೂ ವೈರಾಗ್ಯವೂ ಇದ್ದವರು ಬ್ರಹ್ಮಚರ್ಯದಿಂದಲೇ ಪಾರಿವ್ರಾಜ್ಯವನ್ನು ಹೊಂದಬಹುದು; ಉಳಿದವರು ಕ್ರಮಕ್ರಮವಾಗಿಯೂ ಹೊಂದಬಹುದು ಎಂದಾಗುತ್ತದೆ.

3. ಇಲ್ಲಿ ಪಂಚಮೀವಿಭಕ್ತಿಯಿರುವದರಿಂದ ಹೀಗೆ ಕನ್ನಡಿಸಿದೆ. ವಿರುದ್ಧವಾಗುವದಿಲ್ಲ ಎಂಬುದರ ಬದಲು ಅಧಿಕಾರಿಗಳಿಗೂ ಉಂಟು ಎಂಬ ಅಭಿಪ್ರಾಯವೂ ಇರಬಹುದು.

4. ಯಾವಜ್ಜೀವಾದಿಶ್ರುತಿಗಳು ಸಾವಕಾಶವಾಗಿರುವದರಿಂದಲೂ ಅನಧಿಕಾರಿಗಳಿಗೆ ಬೇರೊಂದು ವಿಧಿಯೂ ಇರುವದರಿಂದಲೂ ಎಂದರ್ಥ.

# ಐದನೆಯ ಬ್ರಾಹ್ಮಣದ ಸಾರ

ಈ ಬ್ರಾಹ್ಮಣವಲ್ಲಿ ಮಧುಮುನಿಕಾಂಡಗಳಲ್ಲಿ ಆಗಮೋಪಪತ್ತಿಗಳಿಂದ ಸಿದ್ಧವಾಗಿರುವ ಬ್ರಹ್ಮತತ್ತ್ವವನ್ನೂ ಸಸಂನ್ಯಾಸಬ್ರಹ್ಮಜ್ಞಾನವನ್ನೂ ಉಪಸಂಹಾರಮಾಡಿರುತ್ತದೆ. ಈ ಬ್ರಾಹ್ಮಣದ ಸಾರವನ್ನು ಒಂದನೆಯ ಸಂಪುಟದ ೬೭೩ನೆಯ ಪುಟದಲ್ಲಿ ವರ್ಣಿಸಿರುವಂತೆ ಊಹಿಸಿಕೊಳ್ಳಬೇಕು. ಇಲ್ಲಿರುವ ವಿಶೇಷವನ್ನು ಮಾತ್ರ ಸಂಕ್ಷಿಪ್ತವಾಗಿ ತಿಳಿಯಿಸುವೆವು.

೧-೪. ಯಾಜ್ಞವಲ್ಕ್ಯನು ಪಾರಿವ್ರಾಜ್ಯವನ್ನು ಪಡೆಯಬೇಕೆಂದು ಜ್ಯೇಷ್ಠಭಾರ್ಯೆಯಾದ ಮೈತ್ರೇಯಿಗೂ ಅವಳ ಸವತಿ ಕಾತ್ಯಾಯನಿಗೂ ತನ್ನ ಧನವನ್ನು ಪಾಲುಮಾಡಿಕೊಡುವದಕ್ಕೆ ಹೋದನು. ಮೈತ್ರೇಯಿಯು ಅದನ್ನೊಲ್ಲದೆ ಅಮೃತತ್ವಸಾಧನವನ್ನೇ ತಿಳಿಸಿಕೊಡಿ ಎಂದಳು.

೫-೭. ಯಾಜ್ಞವಲ್ಕ್ಯನು ತನ್ನ ಪ್ರಿಯಭಾರ್ಯೆಯ ಮಾತಿನಿಂದ ಹರ್ಷಿತನಾಗಿ ಆತ್ಮನೇ ಎಲ್ಲಕ್ಕಿಂತಲೂ ಪ್ರಿಯನಾಗಿರುವದರಿಂದ ಅವನನ್ನೇ ಶ್ರವಣಮನನನಿದಿಧ್ಯಾಸನಗಳಿಂದ ಕಂಡುಕೊಳ್ಳಬೇಕು. ಆತ್ಮನನ್ನು ಅರಿತುಕೊಂಡರೆ ಎಲ್ಲವನ್ನೂ ಅರಿತುಕೊಂಡಂತೆ ಎಂದು ಹೇಳಿ ಯಾವದೇ ಆಗಲಿ ಆತ್ಮನಿಗಿಂತ ವ್ಯತಿರಿಕ್ತವಲ್ಲ, ಎಲ್ಲವೂ ಆತ್ಮನೇ ಎಂಬುದನ್ನು ತಿಳಿಸಿಕೊಟ್ಟನು.

೮-೧೨ ನಗಾರಿ, ಶಂಖ, ವೀಣೆ- ಮುಂತಾದವುಗಳ ಶಬ್ದಗಳ ಸಾಮಾನ್ಯವಿಶೇಷಗಳನ್ನು ಶಬ್ದವೆಂಬ ಸಾಮಾನ್ಯದಲ್ಲಿಯೇ ಅಡಕಮಾಡಿ ಅರಿತುಕೊಳ್ಳಬೇಕಾಗಿರುವಂತೆ ಸ್ಥಿತಿಕಾಲದಲ್ಲಿ ಎಲ್ಲವೂ ತನ್ನಲ್ಲನುಗತವಾಗಿ ಚಿದ್ರೂಪಕ್ಕಿಂತ ಬೇರೆಯಲ್ಲವೆಂದು ಅರಿಯಬೇಕು. ಹಸಿಕಟ್ಟಿಗೆಯ ಬೆಂಕಿಯಿಂದ ಹೊಗೆ, ಕಿಡಿಗಳು - ಮುಂತಾದವುಗಳು ಹೊರಟು ಬರುವಂತೆ ಉತ್ಪತ್ತಿಕಾಲದಲ್ಲಿ ನಾಮರೂಪಗಳೆಲ್ಲವೂ ಬ್ರಹ್ಮದಿಂದಲೇ ಹೊರಟುಬಂದಿರುವವು, ಅದಕ್ಕಿಂತ ಬೇರೆಯಲ್ಲ ಎಂದು ಅರಿಯಬೇಕು. ನೀರುಗಳಿಗೆಲ್ಲ ಸಮುದ್ರವೇ ಅಯನವಾಗಿರುವಂತೆ ಪ್ರಲಯಕಾಲದಲ್ಲಿಯೂ ಎಲ್ಲವೂ ಬ್ರಹ್ಮದಲ್ಲಿಯೇ ಅಡಗುತ್ತದೆ; ಆದ್ದರಿಂದ ಬ್ರಹ್ಮಕ್ಕಿಂತ ಬೇರೆಯಾಗಿಲ್ಲ ಎಂದು ಅರಿಯಬೇಕು.

೧೩-೧೪. ಉಪ್ಪಿನಹರಳು ಎಲ್ಲೆಲ್ಲಿಯೂ ಉಪ್ಪಿನರಸವೇ ಉಳ್ಳದ್ದಾಗಿರುವಂತೆ ಆತ್ಮನು ಎಲ್ಲೆಲ್ಲಿಯೂ ಪ್ರಜ್ಞಾನಘನನೇ ಆಗಿರುತ್ತಾನೆ. ಉಪಾಧಿಗಳಿಂದ ಇವನಿಗೆ ವಿಶೇಷಜ್ಞಾನವು ತೋರಿಕೊಳ್ಳುತ್ತಿರುವದು; ವಿದ್ಯೆಯಿಂದ ಅವನ್ನು ಪ್ರವಿಲಯಮಾಡಿಕೊಂಡರೆ ಯಾವ ವಿಶೇಷಜ್ಞಾನವೂ ಇರುವದಿಲ್ಲ. ಆತ್ಮನ ಚೈತನ್ಯಸ್ವರೂಪವು ಮಾತ್ರ ಎಂದೆಂದಿಗೂ ಅಚ್ಚಳಿಯದೆ ಇರುತ್ತದೆ. ಅವಿದ್ಯೆಯ ದ್ವೈತದಲ್ಲಿ ಮಾತ್ರವೇ ವಿಶೇಷಜ್ಞಾನವಿರುತ್ತದೆ ಎಲ್ಲವೂ ಆತ್ಮನೇ ಆಗಿರುವ ಅದ್ವೈತದಲ್ಲಿ ಹೇಗೆತಾನೆ ವಿಶೇಷಜ್ಞಾನವಿದ್ದೀತು ?

೧೫. ಈ ಚಿನ್ಮಾತ್ರನಾಗಿರುವ ನಿರ್ವಿಶೇಷಾತ್ಮನೇ ನೇತಿನೇತಿ ಎಂದು ಹೇಳಿರುವ ಆತ್ಮನು. ಇವನು ಅಗೃಹ್ಯನು, ಅಶೀರ್ಯನು, ಅಸಂಗನು, ಅಸಿತನು. ಇವನು ಏತಕ್ಕೂ ವಿಷಯನಲ್ಲ, ವಿಜ್ಞಾತೃವಿನ ಸ್ವರೂಪವೇ ಆಗಿರುವದರಿಂದ ಇವನನ್ನು ಏತರಿಂದಲೂ ಅರಿಯುವದಕ್ಕೆ ಆಗಲಾರದು.

೧೬. "ಎಲೆ ಮೈತ್ರೇಯಿ, ನಿನಗೆ ಹೇಳತಕ್ಕದ್ದನ್ನು ಹೇಳಿದ್ದಾಯಿತು. ಈ ನಿರ್ವಿಶೇಷಾತ್ಮಜ್ಞಾನವೊಂದೇ ಅಮೃತತ್ವಕ್ಕೆ ಸಾಧನವು, ಇದಕ್ಕೆ ಮತ್ತೆ ಯಾವ ಸಹಕಾರಿ ಸಾಧನವೂ ಬೇಡ" –ಎಂದು ಹೇಳಿ ಯಾಜ್ಞವಲ್ಕ್ಯನು ಪರಿವ್ರಜನಮಾಡಿಬಿಟ್ಟನು.

---

# ನಾಲ್ಕನೆಯ ಅಧ್ಯಾಯ-ಆರನೆಯ ಬ್ರಾಹ್ಮಣ

(ಮುನಿಕಾಂಡದ ವಂಶ)

**ಅಥ ವಗ್ಂಶಃ ಪೌತಿಮಾಷ್ಯೋ ಗೌಪವನಾದ್ ಗೌಪವನಃ ಪೌತಿಮಾಷ್ಯಾತ್ ಪೌತಿಮಾಷ್ಯೋ ಗೌಪವನಾದ್ ಗೌಪವನಃ ಕೌಶಿಕಾತ್ ಕೌಶಿಕಃ ಕೌಣ್ಡಿನ್ಯಾತ್ ಕೌಣ್ಡಿನ್ಯಃ ಶಾಣ್ಡಿಲ್ಯಾ ಚ್ಛಾಣ್ಡಿಲ್ಯಃ ಕೌಶಿಕಾಚ್ಚ ಗೌತಮಾಚ್ಚ ಗೌತಮಃ ॥ ೧ ॥**

೧. ಈಗ ವಂಶವು : ಪೌತಿಮಾಷ್ಯನು ಗೌಪವನನಿಂದ, ಗೌಪವನನು ಪೌತಿಮಾಷ್ಯನಿಂದ, ಪೌತಿಮಾಷ್ಯನು ಗೌಪವನನಿಂದ; ಗೌಪವನನು ಕೌಶಿಕನಿಂದ, ಕೌಶಿಕನು ಕೌಂಡಿನ್ಯನಿಂದ, ಕೌಂಡಿನ್ಯನು ಶಾಂಡಿಲ್ಯನಿಂದ, ಶಾಂಡಿಲ್ಯನು ಕೌಶಿಕನಿಂದಲೂ ಗೌತಮನಿಂದಲೂ ; ಗೌತಮನು—

**ಆಗ್ನಿವೇಶ್ಯಾದಾಗ್ನಿವೇಶ್ಯೋ ಗಾರ್ಗ್ಯಾದ್ ಗಾರ್ಗ್ಯೋ ಗಾರ್ಗ್ಯಾದ್ ಗಾರ್ಗ್ಯೋ ಗೌತಮಾದ್ ಗೌತಮಃ ಸೈತವಾತ್ ಸೈತವಃ ಪಾರಾಶರ್ಯಾಯಣಾತ್ ಪಾರಾಶರ್ಯಾಯಣೋ ಗಾರ್ಗ್ಯಾಯಣಾದ್ ಗಾರ್ಗ್ಯಾಯಣ ಉದ್ದಾಲಕಾಯನಾದುದ್ದಾಲಕಾಯನೋ ಜಾಬಾಲಾಯನಾಜ್ಜಾಬಾಲಾಯನೋ ಮಾಧ್ಯಂದಿನಾಯನಾನ್ಮಾಧ್ಯಂದಿನಾಯನಃ ಸೌಕರಾಯಣಾತ್ ಸೌಕರಾಯಣಃ ಕಾಷಾಯಣಾತ್ ಕಾಷಾಯಣಃ ಸಾಯಕಾಯನಾತ್ ಸಾಯಕಾಯನಃ ಕೌಶಿಕಾಯನೇಃ ಕೌಶಿಕಾಯನಿಃ ॥ ೨ ॥**

೨. (ಗೌತಮನು)[1] ಆಗ್ನಿವೇಶ್ಯನಿಂದ, ಆಗ್ನಿವೇಶ್ಯನು ಗಾರ್ಗ್ಯನಿಂದ, ಗಾರ್ಗ್ಯನು ಗಾರ್ಗ್ಯನಿಂದ, ಗಾರ್ಗ್ಯನು ಗೌತಮನಿಂದ, ಗೌತಮನು, ಸೈತವನಿಂದ, ಸೈತವನು ಪಾರಾಶರ್ಯಾಯಣನಿಂದ,

---

1. ಹಿಂದಿನ ಮಂತ್ರದಲ್ಲಿರುವ ಈ ಮಾತು ಇಲ್ಲಿಗೆ ಅನ್ವಯವೆಂದು ತೋರಿಸುವದಕ್ಕೆ ಕಂಸದಲ್ಲಿ ಬರೆದುಕೊಂಡಿದೆ.

ಪಾರಾಶರ್ಯಾಯಣನು ಗಾರ್ಗ್ಯಾಯಣನಿಂದ, ಗಾರ್ಗ್ಯಾಯಣನು ಉದ್ದಾಲಕಾಯನನಿಂದ, ಉದ್ದಾಲಕಾಯನನು ಜಾಬಾಲಾಯನನಿಂದ, ಜಾಬಾಲಾಯನನು ಮಾಧ್ಯಂದಿನಾಯನನಿಂದ, ಮಾಧ್ಯಂದಿನಾಯನನು ಸೌಕರಾಯಣನಿಂದ, ಸೌಕರಾಯಣನು ಕಾಷಾಯಣನಿಂದ, ಕಾಷಾಯಣನು ಸಾಯಕಾಯನನಿಂದ, ಸಾಯಕಾಯನನು ಕೌಶಿಕಾಯನಿಯಿಂದ[1] ; ಕೌಶಿಕಾಯನಿಯು—

**ಘೃತಕೌಶಿಕಾದ್ ಘೃತಕೌಶಿಕಃ ಪಾರಾಶರ್ಯಾಯಣಾತ್ ಪಾರಾಶರ್ಯಾಯಣಃ ಪಾರಾಶರ್ಯಾತ್ ಪಾರಾಶರ್ಯೋ ಜಾತೂಕರ್ಣ್ಯಾಜ್ಜಾತೂಕರ್ಣ್ಯ ಆಸುರಾಯಣಾಚ್ಚ ಯಾಸ್ಕಾಚ್ಚಾಸುರಾಯಣಸ್ತ್ರೈವಣೇಸ್ತ್ರೈವಣಿರೌಪಜನ್ಧನೇರೌಪಜನ್ಧನಿರಾಸುರೇರಾಸುರಿರ್ಭಾರದ್ವಾಜಾದ್ ಭಾರದ್ವಾಜ ಆತ್ರೇಯಾದಾತ್ರೇಯೋ ಮಾಣ್ಟೇರ್ಮಾಣ್ಟಿರ್ಗೌತಮಾದ್ ಗೌತಮೋ ಗೌತಮಾದ್ ಗೌತಮೋ ವಾತ್ಸ್ಯಾದ್ ವಾತ್ಸ್ಯಃ ಶಾಣ್ಡಿಲ್ಯಾಚ್ಛಾಣ್ಡಿಲ್ಯಃ ಕೈಶೋರ್ಯಾತ್ ಕಾಪ್ಯಾತ್ ಕೈಶೋರ್ಯಃ ಕಾಪ್ಯಃ ಕುಮಾರಹಾರಿತಾತ್ ಕುಮಾರಹಾರಿತೋ ಗಾಲವಾದ್ ಗಾಲವೋ ವಿದರ್ಭೀಕೌಣ್ಡಿನ್ಯಾದ್ ವಿದರ್ಭೀಕೌಣ್ಡಿನ್ಯೋ ವತ್ಸನಪಾತೋ ಬಾಭ್ರವಾದ್ ವತ್ಸನಪಾದ್ಬಾಭ್ರವಃ ಪಥಃ ಸೌಭರಾತ್ ಪನ್ಥಾಃ ಸೌಭರೋಽಯಾಸ್ಯಾದಾಙ್ಗಿರಸಾದಯಾಸ್ಯ ಆಙ್ಗಿರಸ ಆಭೂತೇಸ್ತ್ವಾಷ್ಟ್ರಾದಾಭೂತಿಸ್ತ್ವಾಷ್ಟ್ರೋ ವಿಶ್ವರೂಪಾತ್ ತ್ವಾಷ್ಟ್ರಾದ್ ವಿಶ್ವರೂಪಸ್ತ್ವಾಷ್ಟ್ರೋಽಶ್ವಿಭ್ಯಾಮಶ್ವಿನೌ ದಧೀಚ ಆಥರ್ವಣಾದ್ ದಧ್ಯಾಙ್ಙಾಥರ್ವಣೋಽಥರ್ವಣೋ ದೈವಾದಥರ್ವಾ ದೈವೋ ಮೃತ್ಯೋಃ ಪ್ರಾಧ್ವಂಸನಾನ್ಮೃತ್ಯುಃ ಪ್ರಾಧ್ವಂಸನಃ ಪ್ರಧ್ವಂಸನಾತ್ ಪ್ರಧ್ವಂಸನ ಏಕರ್ಷೇರೇಕರ್ಷಿರ್ವಿಪ್ರಚಿತ್ತೇರ್ವಿಪ್ರಚಿತ್ತಿರ್ವ್ಯಷ್ಟೇರ್ವ್ಯಷ್ಟಿಃ ಸನಾರೋಃ ಸನಾರುಃ ಸನಾತನಾತ್ ಸನಾತನಃ ಸನಗಾತ್ ಸನಗಃ ಪರಮೇಷ್ಠಿನಃ ಪರಮೇಷ್ಠೀ ಬ್ರಹ್ಮಣೋ ಬ್ರಹ್ಮ ಸ್ವಯಂಭು ಬ್ರಹ್ಮಣೇ ನಮಃ ॥ ೩ ॥**

---

1. ಅಗ್ನಿವೇಶ್ಯನಿಂದ ಇಲ್ಲಿಯವರೆಗೆ ಹಿಂದಿನ ವಂಶಾವಳಿಗೂ ಇದಕ್ಕೂ ಹೆಚ್ಚು ಕಡಿಮೆಯಿದೆ. ಮಿಕ್ಕದ್ದೆಲ್ಲವೂ ಸಮಾನವಾಗಿದೆ.

೩. (ಕೌಶಿಕಾಯನಿಯು) ಘೃತಕೌಶಿಕನಿಂದ, ಘೃತಕೌಶಿಕನು ಪಾರಾಶರ್ಯಾಯಣನಿಂದ, ಪಾರಾಶರ್ಯಾಯಣನು ಪಾರಾಶರ್ಯನಿಂದ, ಪಾರಾಶರ್ಯನು ಜಾತೂಕರ್ಣ್ಯನಿಂದ, ಜಾತೂಕರ್ಣ್ಯನು ಆಸುರಾಯಣನಿಂದಲೂ ಯಾಸ್ಕನಿಂದಲೂ, ಆಸುರಾಯಣನು ತ್ರೈವಣಿಯಿಂದ, ತ್ರೈವಣಿಯು ಔಪಜಂಧನಿಯಿಂದ, ಔಪಜಂಧನಿಯು ಆಸುರಿಯಿಂದ, ಆಸುರಿಯು ಭಾರದ್ವಾಜನಿಂದ, ಭಾರದ್ವಾಜನು ಆತ್ರೇಯನಿಂದ, ಆತ್ರೇಯನು ಮಾಂಟಿಯಿಂದ, ಮಾಂಟಿಯು ಗೌತಮನಿಂದ, ಗೌತಮನು ಗೌತಮನಿಂದ, ಗೌತಮನು ವಾತ್ಸ್ಯನಿಂದ, ವಾತ್ಸ್ಯನು ಶಾಂಡಿಲ್ಯನಿಂದ, ಶಾಂಡಿಲ್ಯನು ಕೈಶೋರ್ಯಕಾಪ್ಯನಿಂದ, ಕೈಶೋರ್ಯಕಾಪ್ಯನು ಕುಮಾರಹಾರಿತನಿಂದ, ಕುಮಾರಹಾರಿತನು ಗಾಲವನಿಂದ, ಗಾಲವನು ವಿದರ್ಭೀಕೌಂಡಿನ್ಯನಿಂದ, ವಿದರ್ಭೀಕೌಂಡಿನ್ಯನು ವತ್ಸನಪಾತ್ ಬಾಭ್ರವನಿಂದ, ವತ್ಸನಪಾತ್ ಬಾಭ್ರವನು ಪಂಥಸೌಭರನಿಂದ ಪಂಥಸೌಭರನು ಅಯಾಸ್ಯ ಆಂಗಿರಸನಿಂದ, ಅಯಾಸ್ಯ ಆಂಗಿರಸನು ಆಭೂತಿತ್ವಾಷ್ಟ್ರನಿಂದ, ಆಭೂತಿತ್ವಾಷ್ಟ್ರನು, ವಿಶ್ವರೂಪತ್ವಾಷ್ಟ್ರನಿಂದ, ವಿಶ್ವರೂಪತ್ವಾಷ್ಟ್ರನು ಅಶ್ವಿನಿಗಳಿಂದ, ಅಶ್ವಿನಿಗಳು ದಧ್ಯಙ್ಙಾಥರ್ವಣನಿಂದ, ದಧ್ಯಙ್ಙಾಥರ್ವಣನು ಅಥರ್ವದೈವನಿಂದ, ಅಥರ್ವದೈವನು, ಮೃತ್ಯುಪ್ರಾಧ್ವಂಸನನಿಂದ, ಮೃತ್ಯುಪ್ರಾಧ್ವಂಸನನು ಪ್ರಧ್ವಂಸನನಿಂದ, ಪ್ರಧ್ವಂಸನನು ಏಕರ್ಷಿಯಿಂದ, ಏಕರ್ಷಿಯು ವಿಪ್ರಚಿತ್ತಿಯಿಂದ, ವಿಪ್ರಚಿತ್ತಿಯು ವ್ಯಷ್ಟಿಯಿಂದ, ವ್ಯಷ್ಟಿಯು ಸನಾರುವಿನಿಂದ, ಸನಾರುವು ಸನಾತನನಿಂದ, ಸನಾತನನು ಸನಗನಿಂದ, ಸನಗನು ಪರಮೇಷ್ಠಿಯಿಂದ, ಪರಮೇಷ್ಠಿಯು ಬ್ರಹ್ಮನಿಂದ, ಬ್ರಹ್ಮವು ಸ್ವಯಂಭು ; ಬ್ರಹ್ಮಕ್ಕೆ ನಮಸ್ಕಾರ !

## ಯಾಜ್ಞವಲ್ಕೀಯಕಾಂಡದ ವಂಶರ್ಷಿಗಳು

(ಭಾಷ್ಯ)

**೩।೪।೫. ಅಥ ಅನನ್ತರಂ ಯಾಜ್ಞವಲ್ಕೀಯಸ್ಯ ಕಾಣ್ಡಸ್ಯ ವಂಶಃ ಆರಭ್ಯತೇ ಯಥಾ ಮಧುಕಾಣ್ಡಸ್ಯ ವಂಶಃ । ವ್ಯಾಖ್ಯಾನಂ ತು ಪೂರ್ವವತ್ । ಬ್ರಹ್ಮ ಸ್ವಯಂಭು । ಬ್ರಹ್ಮಣೇ ನಮ ಓಮಿತಿ ॥**

(ಭಾಷ್ಯಾರ್ಥ)

ಇನ್ನು ಅನಂತರದಲ್ಲಿ[1] ಯಾಜ್ಞವಲ್ಕೀಯ ಕಾಂಡದ ವಂಶವನ್ನು– ಮಧು ಕಾಂಡದ ವಂಶವನ್ನು (ಹೇಳಿದ್ದಂತೆಯೇ)– ಆರಂಭಿಸಿರುತ್ತದೆ. ವ್ಯಾಖ್ಯಾನ ವಾದರೋ ಹಿಂದಿನಂತೆಯೇ.[2] ಬ್ರಹ್ಮವು ಸ್ವಯಂಭು ; ಬ್ರಹ್ಮಕ್ಕೆ ನಮಸ್ಕಾರ ! ಓಮ್ ![3]

---

1. ಬ್ರಹ್ಮಾತ್ಮಸ್ವರೂಪವನ್ನು ಸಾಂಗೋಪಾಂಗವಾಗಿ ಸಫಲವಾಗಿ ಬ್ರಹ್ಮಾತ್ಮಜ್ಞಾನ ವನ್ನು ತಿಳಿಸಿದ ಬಳಿಕ ಎಂದರ್ಥ.

2. ಪಂಚಮ್ಯಂತವಾದ ಹೆಸರು ಗುರುವಿನದು, ಪ್ರಥಮಾಂತವಾದದ್ದು ಶಿಷ್ಯನದು ಎಂದು ವ್ಯಾಖ್ಯಾನ.

3. ಓಮ್ ಇತಿ– ಎಂಬ ಮಾತುಗಳನ್ನು ಮಂಗಲಾರ್ಥವಾಗಿಯೂ ಉಪನಿಷತ್ಸ ಮಾಪ್ತಿಸೂಚಕವಾಗಿಯೂ ಉಪಯೋಗಿಸಿದೆ.

# ಖಿಲಕಾಂಡ

# ಐದನೆಯ ಅಧ್ಯಾಯ-ಒಂದನೆಯ ಬ್ರಾಹ್ಮಣ

( ಓಂಕಾರೋಪಾಸನೆ )

## ಖಿಲಕಾಂಡದ ಸಂಬಂಧ

(ಭಾಷ್ಯ)

೩೪೭. ಪೂರ್ಣಮದಃ ಇತ್ಯಾದಿ ಖಿಲಕಾಣ್ಡಮ್ ಆರಭ್ಯತೇ। ಅಧ್ಯಾಯ ಚತುಷ್ಟಯೇನ ಯದೇವ ಸಾಕ್ಷಾತ್ ಅಪರೋಕ್ಷಾದ್ ಬ್ರಹ್ಮ ಯ ಆತ್ಮಾ ಸರ್ವಾನ್ತರಃ, ನಿರುಪಾಧಿಕಃ ಅಶನಾಯಾದ್ಯತೀತಃ ನೇತಿನೇತೀತಿ ವ್ಯಪದೇಶ್ಯೋ ನಿರ್ಧಾರಿತಃ, ಯದ್ವಿಜ್ಞಾನಂ ಕೇವಲಮ್ ಅಮೃತತ್ವಸಾಧನಮ್, ಅಧುನಾ ತಸ್ಯೈವ ಆತ್ಮನಃ ಸೋಪಾಧಿಕಸ್ಯ ಶಬ್ದಾರ್ಥಾದಿವ್ಯವಹಾರವಿಷಯಾಪನ್ನಸ್ಯ ಪುರಸ್ತಾತ್ ಅನುಕ್ತಾನಿ ಉಪಾಸನಾನಿ ಕರ್ಮಭಿರವಿರುದ್ಧಾನಿ ಪ್ರಕೃಷ್ಟಾಭ್ಯುದಯಸಾಧನಾನಿ ಕ್ರಮಮುಕ್ತಿಭಾಞ್ಜಿ ಚ ಯಾನಿ[1] ತಾನಿ ವಕ್ತವ್ಯಾನಿ ಇತಿ ಪರಃ ಸಂದರ್ಭಃ। ಸರ್ವೋಪಾಸನಶೇಷತ್ವೇನ ಓಂಕಾರಃ ದಮಂ ದಾನಂ ದಯಾಮ್ ಇತ್ಯೇತಾನಿ ಚ ವಿಧಿತ್ಸಿತಾನಿ ॥

(ಭಾಷ್ಯಾರ್ಥ)

'ಪೂರ್ಣಮದಃ' ಮುಂತಾಗಿರುವ ಖಿಲಕಾಂಡವನ್ನು[2] ಆರಂಭಿಸಿರುತ್ತದೆ (ಹಿಂದಿನ) ನಾಲ್ಕು ಅಧ್ಯಾಯ(ಗಳ ಭಾಗ)ದಲ್ಲಿ ಯಾವ ಸಾಕ್ಷಾದಪರೋಕ್ಷ ಬ್ರಹ್ಮವನ್ನು, ಯಾವ ಸರ್ವಾಂತರನಾದ ಆತ್ಮನನ್ನು, ಹಸಿವು ಮುಂತಾದವು ಗಳನ್ನು ಮೀರಿ ನೇತಿನೇತಿ (ಹೀಗಲ್ಲ, ಹೀಗಲ್ಲ) ಎಂದು ಹೇಳಬೇಕಾಗಿರುವ, ನಿರುಪಾಧಿಕನಾದ (ಯಾವ ಆತ್ಮನ ಸ್ವರೂಪವನ್ನು) ನಿರ್ಧರಿಸಲಾಗಿದೆಯೋ (ಮತ್ತು) ಯಾವ (ಆತ್ಮನ) ವಿಜ್ಞಾನವು ತಾನೊಂದೇ ಅಮೃತತ್ವಕ್ಕೆ ಸಾಧನವು (ಎಂದು ನಿಶ್ಚಯಿಸಲಾಗಿದೆಯೋ),[3] ಸೋಪಾಧಿಕನಾಗಿ, ಶಬ್ದಾರ್ಥವೇ

---

1. ಈ ಶಬ್ದವಿರುವ ಪಾಠವೇ ಮೇಲು.
2. ಉಳಿದಿರುವ ವಿಷಯಗಳನ್ನೆಲ್ಲ ಪರಿಶಿಷ್ಟವಾಗಿ ತಿಳಿಸಿರುವುದರಿಂದ ಇದಕ್ಕೆ ಖಿಲಕಾಂಡವೆಂದು ಹೆಸರು.
3. ಇದಿಷ್ಟೇ ಪರಮತಾತ್ಪರ್ಯದಿಂದ ಉಪನಿಷತ್ತಿನಲ್ಲಿ ಹೇಳಿರುವ ಆತ್ಮಜ್ಞಾನವು.

ಮುಂತಾದ ವ್ಯವಹಾರಕ್ಕೆ ವಿಷಯನಾಗಿರುವ ಅದೇ ಆತ್ಮನಿಗೆ[1] ಈಗ ಹಿಂದೆ ಹೇಳದೆ ಇರುವ, ಕರ್ಮಗಳಿಗೆ ವಿರುದ್ಧವಲ್ಲದವೂ ತೀರ ಹೆಚ್ಚಿನ ಅಭ್ಯುದಯಕ್ಕೆ ಸಾಧನಗಳಾಗಿರುವವೂ, ಕ್ರಮಮುಕ್ತಿಗೆ ಕಾರಣವಾದವೂ[2] (ಆಗಿರುವ) ಉಪಾಸನೆಗಳಿವೆಯಲ್ಲ, ಅವನ್ನು ಹೇಳಬೇಕೆಂದು ಮುಂದಿನ ಸಂದರ್ಭವು (ಬಂದಿರುತ್ತದೆ). ಉಪಾಸನೆಗಳಿಗೆಲ್ಲ ಶೇಷವಾಗಿ ಓಂಕಾರವನ್ನೂ,[3] ದಮವನ್ನೂ ದಾನವನ್ನೂ ದಯೆಯನ್ನೂ (ಕಲಿಯಬೇಕು ಎಂದು) ಇವನ್ನೂ ವಿಧಿಸಬೇಕೆಂದೆಳಸಿರುತ್ತದೆ.

## ಓಂಕಾರೋಪಾಸನೆ

(ಉಪನಿಷತ್ತು)

**ಪೂರ್ಣಮದಃ ಪೂರ್ಣಮಿದಂ ಪೂರ್ಣಾತ್ ಪೂರ್ಣಮುದಚ್ಯತೇ ।**
**ಪೂರ್ಣಸ್ಯ ಪೂರ್ಣಮಾದಾಯ ಪೂರ್ಣಮೇವಾವಶಿಷ್ಯತೇ ॥ ೧ ॥**

**ಓಂ ಖಂ ಬ್ರಹ್ಮ । ಖಂ ಪುರಾಣಂ ವಾಯುರಂ ಖಮಿತಿ ಹ ಸ್ಮಾಽಽಹ ಕೌರವ್ಯಾಯಣೀಪುತ್ರೋ ವೇದೋಽಯಂ ಬ್ರಾಹ್ಮಣಾ ವಿದುರ್ವೇದೈನೇನ ಯದ್ವೇದಿತವ್ಯಮ್ ॥ ೧ ॥**

೧. ಅದು ಪೂರ್ಣವು, ಇದು ಪೂರ್ಣವು; ಪೂರ್ಣದಿಂದ ಪೂರ್ಣವು ಎದ್ದುಕೊಳ್ಳುತ್ತದೆ. ಪೂರ್ಣದ ಪೂರ್ಣವನ್ನು ತೆಗೆದುಕೊಂಡರೆ ಪೂರ್ಣವೇ ಉಳಿಯುತ್ತದೆ.

'ಓಂ ಖಂ ಬ್ರಹ್ಮ' ಪುರಾಣವಾದ ಖವು; ವಾಯುರವಾದ ಖವು ಎಂದು ಕೌರವ್ಯಾಯಣೀಪುತ್ರನು ಹೇಳಿದ್ದನಂತೆ. ಇದು ವೇದವು (ಎಂದು) ಬ್ರಾಹ್ಮಣರು ತಿಳಿಯುತ್ತಾರೆ; ಇದರಿಂದ ವೇದಿತವ್ಯವಿದೆಯಲ್ಲ, ಅದನ್ನು ಅರಿತುಕೊಳ್ಳುತ್ತಾನೆ.

---

1. ನಿರುಪಾಧಿಕ, ಸೋಪಾಧಿಕ- ಎಂದು ಇಬ್ಬರು ಆತ್ಮರಿಲ್ಲ, ಒಬ್ಬನೇ ಆತ್ಮನ ನಿರುಪಾಧಿಕಸ್ವರೂಪವನ್ನು ತಿಳಿಸುವ ಜ್ಞಾನ, ಸೋಪಾಧಿಕನಾಗಿ ಮಾಡಬೇಕಾಗಿರುವ ಉಪಾಸನೆ- ಇವು ಮಾತ್ರ ಬೇರೆಬೇರೆ.

2. ಸೂ. ಭಾ. ೧-೧-೧೨, ಛಾ. ಭಾ. ೯೧.

3. ಓಂಕಾರೋಪಾಸನೆಯು ಸರ್ವೋಪಾಸನಾಶೇಷವೆಂಬುದನ್ನು ತೈ. ೧-೮ (ಛಾ. ಭಾ. ೫೦)ರಲ್ಲಿಯೂ ಹೇಳಿದೆ.

## 'ಪೂರ್ಣಮದಃ' ಮಂತ್ರದ ಅರ್ಥ

(ಭಾಷ್ಯ)

೩೪೭. ಪೂರ್ಣಮ್ ಅದಃ। ಪೂರ್ಣಂ ನ ಕುತಶ್ಚಿದ್ ವ್ಯಾವೃತ್ತಮ್। ವ್ಯಾಪಿ ಇತ್ಯೇತತ್ । ನಿಷ್ಠಾ ಚ ಕರ್ತರಿ ದ್ರಷ್ಟವ್ಯಾ । ಅದಃ ಇತಿ ಪರೋಕ್ಷಾಭಿಧಾಯಿ ಸರ್ವನಾಮ। ತತ್ ಪರಂ ಬ್ರಹ್ಮ ಇತ್ಯರ್ಥಃ। ತತ್ ಸಂಪೂರ್ಣಮ್, ಆಕಾಶವದ್ ವ್ಯಾಪಿ ನಿರನ್ತರಂ ನಿರುಪಾಧಿಕಂ ಚ। ತದೇವ ಇದಂ ಸೋಪಾಧಿಕಂ ನಾಮರೂಪಸ್ಥಂ ವ್ಯವಹಾರಾಪನ್ನಂ ಪೂರ್ಣಮ್, ಸ್ವೇನ ರೂಪೇಣ ಪರಮಾತ್ಮನಾ ವ್ಯಾಪ್ಯೇವ, ನೋಪಾಧಿಪರಿಚ್ಛಿನ್ನೇನ ವಿಶೇಷಾತ್ಮನಾ। ತದಿದಂ ವಿಶೇಷಾಪನ್ನಂ ಕಾರ್ಯಾತ್ಮಕಂ ಬ್ರಹ್ಮ ಪೂರ್ಣಾತ್ ಕಾರಣಾತ್ಮನಃ ಉದಚ್ಯತೇ, ಉದ್ರಿಚ್ಯತೇ, ಉದ್ಗಚ್ಛತಿ ಇತ್ಯೇತತ್। ಯದ್ಯಪಿ ಕಾರ್ಯಾತ್ಮನಾ ಉದ್ರಿಚ್ಯತೇ, ತಥಾಽಪಿ ಯತ್ ಸ್ವರೂಪಂ ಪೂರ್ಣತ್ವಂ ಪರಮಾತ್ಮಭಾವಂ ತನ್ನ ಜಹಾತಿ, ಪೂರ್ಣಮೇವ ಉದ್ರಿಚ್ಯತೇ। ಪೂರ್ಣಸ್ಯ ಕಾರ್ಯಾತ್ಮನಃ ಬ್ರಹ್ಮಣಃ ಪೂರ್ಣಂ ಪೂರ್ಣತ್ವಮ್ ಆದಾಯ ಗೃಹೀತ್ವಾ ಆತ್ಮಸ್ವರೂಪೈಕರಸತ್ವಮ್ ಆಪಾದ್ಯ[1] ವಿದ್ಯಯಾ ಅವಿದ್ಯಾಕೃತಂ ಭೂತಮಾತ್ರೋಪಾಧಿಸಂಸರ್ಗಜಮ್ ಅನ್ಯತ್ವಾವಭಾಸಂ ತಿರಸ್ಕೃತ್ಯ। ಪೂರ್ಣಮೇವ ಅನನ್ತರಮಬಾಹ್ಯಂ ಪ್ರಜ್ಞಾನಘನೈಕರಸಸ್ವಭಾವಂ ಕೇವಲಂ ಬ್ರಹ್ಮ ಅವಶಿಷ್ಯತೇ ॥

(ಭಾಷ್ಯಾರ್ಥ)

'ಅದು ಪೂರ್ಣವು': ಪೂರ್ಣವು ಎಂದರೆ (ಮತ್ತೆ) ಏತರಿಂದಲೂ ಭಿನ್ನವಲ್ಲ, ವ್ಯಾಪಕವಾದದ್ದು ಎಂದರ್ಥ. (ಇಲ್ಲಿ ಪೂರ್ಣಮ್ ಎಂಬಲ್ಲಿ) ನಿಷ್ಠಾ (ಪ್ರತ್ಯಯವು) ಕರ್ತ್ರರ್ಥದಲ್ಲಿ ಎಂದು ತಿಳಿಯಬೇಕು.[2] 'ಅದು' ಎಂಬುದು ಪರೋಕ್ಷ(ವಸ್ತುವನ್ನು) ಹೇಳುವ ಸರ್ವನಾಮವು; ಆ ಪರಬ್ರಹ್ಮವು ಎಂದರ್ಥ. ಅದು ಸಂಪೂರ್ಣವು, ಆಕಾಶದಂತೆ ವ್ಯಾಪಕವು, ನಡುವೆ (ವಿಚ್ಛೇದ)ವಿಲ್ಲದ್ದು, ನಿರುಪಾಧಿಕವೂ ಆಗಿದೆ.

ಅದೇ ಈ ಸೋಪಾಧಿಕವಾಗಿ ನಾಮರೂಪದಲ್ಲಿದ್ದುಕೊಂಡು ವ್ಯವಹಾರವನ್ನು ಹೊಂದಿರುವದು ; (ಇದು) ತನ್ನದಾದ ಪರಮಾತ್ಮರೂಪದಿಂದ ಪೂರ್ಣವು ವ್ಯಾಪಿಯೇ, ಉಪಾಧಿಪರಿಚ್ಛಿನ್ನವಾಗಿರುವ ವಿಶೇಷರೂಪದಿಂದ (ಪೂರ್ಣವಲ್ಲ). ಆ ಈ ವಿಶೇಷವಾಗಿರುವ ಕಾರ್ಯಾತ್ಮಕವಾಗಿರುವ ಬ್ರಹ್ಮವು ಪೂರ್ಣವಾದ ಕಾರಣರೂಪದಿಂದ (ಉದಚ್ಯತೇ= ಉದ್ರಿಚ್ಯತೇ) ಎದ್ದುಕೊಂಡಿರುತ್ತದೆ,

---

1. ಆಪಾದ್ಯ ಎಂಬುದೇ ಉತ್ತಮಪಾಠ.
2 ಪೂರ್ಣ ಎಂದರೆ 'ತುಂಬಲ್ಪಟ್ಟ' ಎಂದು ಕರ್ಮಾರ್ಥಕವಲ್ಲ ಎಂದರ್ಥ.

ಮೇಲಕ್ಕೆದ್ದುಬಂದಿದೆ ಎಂದರ್ಥ. (ಹೀಗೆ) ಕಾರ್ಯರೂಪದಿಂದ ಎದ್ದು ಕೊಂಡಿರುತ್ತದೆ ಎಂಬುದು ನಿಜ; ಆದರೂ ತನ್ನ ಸ್ವರೂಪವಾಗಿರುವ ಪರಮಾತ್ಮಭಾವವೆಂಬ ಪೂರ್ಣತ್ವವಿದೆಯಲ್ಲ ಅದನ್ನು ಬಿಟ್ಟಿರುವದಿಲ್ಲ, ಪೂರ್ಣ ವಾಗಿಯೇ ಎದ್ದುಕೊಂಡಿರುತ್ತದೆ.[1]

ಪೂರ್ಣದ, ಕಾರ್ಯರೂಪವಾದ ಬ್ರಹ್ಮದ, ಪೂರ್ಣವನ್ನು ಎಂದರೆ **ಪೂರ್ಣತ್ವವನ್ನು[2], ತೆಗೆದುಕೊಂಡರೆ, ಗ್ರಹಿಸಿದರೆ, ವಿದ್ಯೆಯಿಂದ ಆತ್ಮಸ್ವರೂಪವೆಂಬ ಏಕರಸವನ್ನಾಗಿಯೇ ಮಾಡಿಕೊಂಡರೆ, ಅವಿದ್ಯೆ ಯಿಂದಾಗಿರುವ ಭೂತಮಾತ್ರೆಗಳ ಉಪಾಧಿಯ ಸಂಬಂಧದಿಂದಾಗಿರುವ ಮತ್ತೊಂದಾಗಿ ತೋರುತ್ತಿರುವ (ಆಕಾರವನ್ನು) ಮರೆಮಾಡಿದರೆ,**[3] ಪೂರ್ಣವೇ, ಒಳಗಿಲ್ಲದ ಹೊರಗಿಲ್ಲದ ಪ್ರಜ್ಞಾನಘನವಾದ ಏಕರಸಸ್ವಭಾವದ ಬರಿಯ ಬ್ರಹ್ಮವೇ, (ಆಗ) ಉಳಿದುಕೊಳ್ಳುವದು.

## ಈ ಮಂತ್ರದ ಅರ್ಥವು ಹಿಂದೆ (೧-೪-೧೦ರಲ್ಲಿ) ಹೇಳಿದ್ದೇ

(ಭಾಷ್ಯ)

೩೪೮. ಯದುಕ್ತಂ "ಬ್ರಹ್ಮ ವಾ ಇದಮಗ್ರ ಆಸೀತ್ ತದಾತ್ಮಾನ ಮೇವಾವೇದಹಂ ಬ್ರಹ್ಮಾಸ್ಮೀತಿ[4] ತಸ್ಮಾತ್ ತತ್ಸರ್ವಮಭವತ್" (೧-೪-೧೦) ಇತಿ, ಏಷೋಽಸ್ಯ ಮನ್ತ್ರಸ್ಯಾರ್ಥಃ। ತತ್ರ 'ಬ್ರಹ್ಮ' ಇತ್ಯಸ್ಯ ಅರ್ಥಃ 'ಪೂರ್ಣ ಮದಃ' ಇತಿ। 'ಇದಂ ಪೂರ್ಣಮ್' ಇತಿ 'ಬ್ರಹ್ಮ ವಾ ಇದಮಗ್ರ ಆಸೀತ್' ಇತ್ಯಸ್ಯಾರ್ಥಃ। ತಥಾ ಚ ಶ್ರುತ್ಯನ್ತರಮ್ "ಯದೇವೇಹ ತದಮುತ್ರ ಯದ ಮುತ್ರ ತದನ್ವಿಹ" (ಕ. ೨-೧-೧೦) ಇತಿ। ಅತಃ ಅದಃಶಬ್ದವಾಚ್ಯಂ ಪೂರ್ಣಂ ಬ್ರಹ್ಮ। ತದೇವೇದಂ ಪೂರ್ಣಂ ಕಾರ್ಯಸ್ಥಂ ನಾಮರೂಪೋಪಾಧಿ ಸಂಯುಕ್ತಮ್ ಅವಿದ್ಯಯಾ ಉದ್ರಿಕ್ತಮ್। ತಸ್ಮಾದೇವ ಪರಮಾರ್ಥಸ್ವರೂ ಪಾತ್ ಅನ್ಯದಿವ ಪ್ರತ್ಯವಭಾಸಮಾನಮ್। ತದ್ ಯದ್ ಆತ್ಮಾನಮೇವ

---

1. ಈಗಲೂ ತನ್ನ ಪೂರ್ಣವಾದ ಕಾರಣಸ್ವರೂಪದಲ್ಲಿಯೇ ಇದೆ.

2. ಪೂರ್ಣಮ್ ಎಂಬುದು ಭಾವಪ್ರಧಾನನಿರ್ದೇಶವೆಂದು ಭಾವ.

3. ಕಾರ್ಯವಾಗಿ ಕಾಣುತ್ತಿರುವ ರೂಪದಿಂದ ಪೂರ್ಣತ್ವವನ್ನು ಮಾತ್ರ ತೆಗೆದು ಕೊಂಡರೆ- ಎಂಬುದರಿಂದ ಪರಿಚ್ಛೇದಕವಾದ ಉಪಾಧಿಗಳು ಉಳಿಯುವವೆಂದು ಭಾವಿಸ ಬಾರದು ; ಆ ಉಪಾಧಿಗಳು ಅವಿದ್ಯಾಕೃತವಾಗಿರುವದರಿಂದ ವಿದ್ಯೆಯಿಂದ ಅವು ಇಲ್ಲವಾಗಿ ಬಿಡುತ್ತವೆ; ಅವು ಎಂದಿಗೂ ಇರಲೇ ಇಲ್ಲ ಎಂಬ ಅರಿವು ಆಗಿಬಿಡುತ್ತದೆ ಎಂದು ಭಾವ.

4. 'ತದಾತ್ಮಾನಮೇವಾವೇತ್ ತಸ್ಮಾತ್ ತತ್ಸರ್ವಮಭವತ್' ಎಂಬ ಪಾಠಕ್ಕಿಂತ ಇದೇ ಮೇಲು.

ಪರಂ ಪೂರ್ಣಂ ಬ್ರಹ್ಮ ವಿದಿತ್ವಾ ಅಹಮದಃ ಪೂರ್ಣಂ ಬ್ರಹ್ಮಾಽಸ್ಮಿ ಇತ್ಯೇವಂ ಪೂರ್ಣಮಾದಾಯ ತಿರಸ್ಕೃತ್ಯ ಅಪೂರ್ಣಸ್ವರೂಪತಾಮ್ ಅವಿದ್ಯಾಕೃತಾಂ ನಾಮರೂಪೋಪಾಧಿಸಂಪರ್ಕಜಾಮ್ ಏತಯಾ ಬ್ರಹ್ಮವಿದ್ಯಯಾ ಪೂರ್ಣಮೇವ ಕೇವಲಮ್ ಅವಶಿಷ್ಯತೇ। ತಥಾ ಚೋಕ್ತಮ್ "ತಸ್ಮಾತ್ ತತ್ಸರ್ವಮಭವತ್" ಇತಿ। ಯಃ ಸರ್ವೋಪನಿಷದರ್ಥೋ ಬ್ರಹ್ಮ, ಸ ಏಷಃ ಅನೇನ ಮನ್ತ್ರೇಣ ಅನೂದ್ಯತೇ ಉತ್ತರಸಂಬನ್ಧಾರ್ಥಮ್ । ಬ್ರಹ್ಮವಿದ್ಯಾಸಾಧನತ್ವೇನ ಹಿ ವಕ್ಷ್ಯಮಾಣಾನಿ ಸಾಧನಾನಿ ಓಂಕಾರದಮದಾನದಯಾಖ್ಯಾನಿ ವಿಧಿತ್ಸಿತಾನಿ। ಖಿಲಪ್ರಕರಣಸಂಬನ್ಧಾತ್ ಸರ್ವೋಪಾಸನಾಙ್ಗಭೂತಾನಿ ಚ ॥

(ಭಾಷ್ಯಾರ್ಥ)

"ಇದು ಮೊದಲು ಬ್ರಹ್ಮವೇ ಆಗಿತ್ತು. ಅದು ತನ್ನನ್ನೇ ನಾನು ಬ್ರಹ್ಮವಾಗಿರುವೆನು ಎಂದು ಅರಿತುಕೊಂಡಿತು, ಆದರಿಂದ ಎಲ್ಲವೂ ಆಯಿತು" ಎಂದು (೧-೪-೧೦)ರಲ್ಲಿ ಹಿಂದೆ ಹೇಳಿತ್ತಲ್ಲ, ಅದೇ ಈ ಮಂತ್ರದ ಅರ್ಥವು.[1] ಅಲ್ಲಿ "ಬ್ರಹ್ಮವೇ (ಆಗಿತ್ತು)" ಎಂಬದರ ಅರ್ಥವೇ "ಅದು ಪೂರ್ಣವು" ಎಂಬುದು. "ಇದು ಪೂರ್ಣವು" ಎಂಬುದು "ಇದು ಮೊದಲು ಬ್ರಹ್ಮವೇ ಆಗಿತ್ತು" ಎಂಬಿದರ ಅರ್ಥವು. ಆದ್ದರಿಂದಲೇ ಮತ್ತೊಂದು ಶ್ರುತಿಯು "ಇಲ್ಲಿ ಯಾವದಿದೆಯೋ ಅದು ಅಲ್ಲಿದೆ, ಯಾವದು ಅಲ್ಲಿದೆಯೋ ಅದು ಇಲ್ಲಿಯೂ ಇದೆ" (ಕ. ೨-೧-೧೦) ಎಂದಿದೆ. ಆದ್ದರಿಂದ ಅದು ಎಂಬ ಶಬ್ದಕ್ಕೆ ವಾಚ್ಯವಾಗಿರುವದು ಪೂರ್ಣ ಬ್ರಹ್ಮವು, ಈ ಕಾರ್ಯದಲ್ಲಿರುವ ನಾಮರೂಪಗಳೆಂಬ ಉಪಾಧಿಗಳಿಂದೊಡಗೂಡಿರುವ ಇದು ಅದೇ ಪೂರ್ಣವೇ, ಅದೇ ಪರಮಾರ್ಥಸ್ವರೂಪದಿಂದ ಮತ್ತೊಂದರಂತೆ ಕಾಣುತ್ತಾ ಅವಿದ್ಯೆಯಿಂದ ಎದ್ದುಕೊಂಡಿದೆ. ಅದು ತನ್ನನ್ನೇ, ಪರಮಾತ್ಮನನ್ನೇ[2] ಪೂರ್ಣವಾದ ಬ್ರಹ್ಮವನ್ನೇ, 'ನಾನು ಆ ಪೂರ್ಣವಾದ ಬ್ರಹ್ಮವಾಗಿರುವೆನು' ಎಂದಿಂತು ಅರಿತುಕೊಂಡು ಪೂರ್ಣತ್ವವನ್ನು ತೆಗೆದುಕೊಂಡರೆ, ಅವಿದ್ಯೆಯಿಂದಾಗಿರುವ, ನಾಮರೂಪೋಪಾಧಿಗಳ ಸಂಪರ್ಕದಿಂದ ಹುಟ್ಟಿಕೊಂಡಿರುವ, ಅಪೂರ್ಣಸ್ವರೂಪವನ್ನು ಈ ಬ್ರಹ್ಮವಿದ್ಯೆಯಿಂದ ಮರೆ

---

1. ಈ ಮಂತ್ರಕ್ಕೂ ಆ ಕಂಡಿಕೆಯ ವಾಕ್ಯಕ್ಕೂ ಏಕವಾಕ್ಯತೆಯಿದೆ ಎಂದರ್ಥ. ಪರಿಶುದ್ಧವಾದ ಬ್ರಹ್ಮವೇ ಯಾವಾಗಲೂ ಇರುವದು ; ಅದು ಕಾರ್ಯರೂಪದಿಂದ ಪರಿಚ್ಛಿನ್ನವೆಂದು ತೋರಿದರೂ ನಿಜವಾಗಿ ಈಗಲೂ ಬ್ರಹ್ಮವೇ ಎಂದು ತಿಳಿವದೆ ಅದೇ ಪೂರ್ಣತ್ವಪ್ರಾಪ್ತಿ ಎಂಬುದು ವಾಕ್ಯಾರ್ಥ ಎಂದು ಭಾವ. ೧-೪-೧೦ರ ಭಾಷ್ಯ (ಭಾ ಭಾ. ೧೬೦) ವನ್ನೂ ಅದರ ಮೇಲಿನ ಚರ್ಚೆಯನ್ನೂ ಇಲ್ಲಿ ಮನದಂಬುಕೊಳ್ಳಬೇಕು.

2. ತನ್ನ ಸ್ವರೂಪವೇ ಆಗಿರುವ ಪರಮಾತ್ಮನನ್ನೇ ಎಂದರ್ಥ.

ಮಾಡಿಕೊಂಡರೆ, ಬರಿಯ[1] ಪೂರ್ಣವೇ ಆಗಿ ಉಳಿದುಕೊಳ್ಳುತ್ತದೆ. ಆದ್ದರಿಂದಲೇ "ಅದರಿಂದ ಎಲ್ಲವೂ ಆಯಿತು"[2] ಎಂದು ಹಿಂದೆ ಹೇಳಿದೆ.

ಇಡಿಯ ಉಪನಿಷತ್ತಿಗೆಲ್ಲ ಅರ್ಥವಾಗಿರುವ ಬ್ರಹ್ಮವಿದೆಯಲ್ಲ ಅದನ್ನು ಮುಂದಿನ (ಗ್ರಂಥಭಾಗಕ್ಕೆ) ಸಂಬಂಧವನ್ನು ತಿಳಿಸುವದಕ್ಕಾಗಿ ಈ ಮಂತ್ರದಲ್ಲಿ ಅನುವಾದಮಾಡಿಕೊಂಡಿರುತ್ತದೆ. ಓಂಕಾರ, ದಮ, ದಾನ, ದಯೆ- ಎಂಬಿವನ್ನು ಬ್ರಹ್ಮವಿದ್ಯೆಗೆ ಸಾಧನಗಳಾಗಿಯೂ[3] ಖಿಲಪ್ರಕರಣಕ್ಕೆ ಸಂಬಂಧಪಟ್ಟಿರುವದರಿಂದ ಸರ್ವೋಪಾಸನೆಗಳಿಗೂ ಶೇಷವಾಗಿಯೂ ವಿಧಿಸಬೇಕೆಂದಲ್ಲವೆ ಮುಂದೆ ಹೇಳಿರುವದು ?

# ಭರ್ತೃಪ್ರಪಂಚವ್ಯಾಖ್ಯಾನವಿಮರ್ಶೆ

## ಭರ್ತೃಪ್ರಪಂಚರ ವ್ಯಾಖ್ಯಾನಾನುವಾದ

(ಭಾಷ್ಯ)

೩೪೯. ಅತ್ರ ಏಕೇ ವರ್ಣಯನ್ತಿ। ಪೂರ್ಣಾತ್ ಕಾರಣಾತ್ ಪೂರ್ಣಂ ಕಾರ್ಯಮ್ ಉದ್ರಿಚ್ಯತೇ। ಉದ್ರಿಕ್ತಂ ಕಾರ್ಯಂ ವರ್ತಮಾನಕಾಲೇಽಪಿ ಪೂರ್ಣಮೇವ ಪರಮಾರ್ಥವಸ್ತುಭೂತಂ ದ್ವೈತರೂಪೇಣ। ಪುನಃ ಪ್ರಲಯಕಾಲೇ ಪೂರ್ಣಸ್ಯ ಕಾರ್ಯಸ್ಯ ಪೂರ್ಣತಾಮ್ ಆದಾಯ ಆತ್ಮನಿ ಧಿತ್ವಾ ಪೂರ್ಣಮೇವ ಅವಶಿಷ್ಯತೇ ಕಾರಣರೂಪಮ್ । ಏವಮ್ ಉತ್ಪತ್ತಿಸ್ಥಿತಿಪ್ರಲಯೇಷು ತ್ರಿಷ್ವಪಿ ಕಾಲೇಷು ಕಾರ್ಯಕಾರಣಯೋಃ ಪೂರ್ಣತ್ವೈವ। ಸಾ ಚ

---

1. ಅವಿದ್ಯಾಕಲ್ಪಿತೋಪಾಧಿಸಂಪರ್ಕವಿಲ್ಲದ ಎಂದರ್ಥ; ಉಪಾಧಿಯೂ ವಿದ್ಯಾದಶೆಯಲ್ಲಿ ಬ್ರಹ್ಮವೇ ಆಗಿರುವದು. ಕಾರಣವಾದ ಬ್ರಹ್ಮ, ಕಾರ್ಯವಾದ ಜೀವ- ಎಂಬಿದು ಅವಿದ್ಯಾಕಾರ್ಯ; ಇವೆರಡೂ ನಿಜವಾಗಿ ಒಂದೇ ವಸ್ತುವೆಂಬುದನ್ನು ಪೂರ್ಣದ ಪೂರ್ಣತ್ವವನ್ನು ತೆಗೆದುಕೊಂಡರೆ ಪೂರ್ಣವೇ ಉಳಿದುಕೊಳ್ಳುತ್ತದೆ ಎಂಬುದು ಆ ಪೂರ್ಣವೇ ಈ ಪೂರ್ಣ -ಎಂಬ ವಾಕ್ಯದಿಂದ ಪದಗಳ ಸಾಮಾನಾಧಿಕರಣ್ಯ, ಪದಾರ್ಥಗಳ ವಿಶೇಷಣವಿಶೇಷ್ಯಭಾವ, ಪ್ರತ್ಯಗ್ಬ್ರಹ್ಮವನ್ನು ಲಕ್ಷ್ಯಲಕ್ಷಣಭಾವದಿಂದ ತಿಳಿಸುವದು ಎಂಬ ಕ್ರಮದಿಂದ ತಿಳಿದುಬರುತ್ತದೆ ಎಂದು ವಾರ್ತಿಕ ೨೦.

2. ಅಲ್ಲಿ ಸರ್ವವೆಂದಿರುವದೂ ಇಲ್ಲಿ ಪೂರ್ಣವೆಂದಿರುವದೂ ಅದೇ ಬ್ರಹ್ಮವಸ್ತುವನ್ನು ಎಂದು ಅಭಿಪ್ರಾಯ

3. ಉಪನಿಷದರ್ಥವಾಗಿರುವ ಬ್ರಹ್ಮವೇ ಮುಂದೆ ಓಂಕಾರಾದಿರೂಪದಿಂದ ಉಪಾಸ್ಯವೆಂದು ತಿಳಿಸುವದಕ್ಕೆ 'ಪೂರ್ಣಮದಃ' ಎಂಬ ಮಂತ್ರವು ಬಂದಿದೆ ಎಂದು ಅಭಿಪ್ರಾಯ. ಮಾಯಾವಿಶಿಷ್ಟವಾದ ಈಶ್ವರ ಅಥವಾ ಅಪರಬ್ರಹ್ಮವೇ ಉಪಾಸ್ಯ, ಶುದ್ಧಬ್ರಹ್ಮವಲ್ಲ- ಎಂಬ ಈಚಿನ ವೇದಾಂತಿಗಳ ಮತವು ಈ ಭಾಷ್ಯಕ್ಕೆ ವಿರುದ್ಧ. ಈ ವಿಷಯಕ್ಕೆ ಸೂ. ಭಾ. ಪೀಠಿಕೆಯ ಪುಟ 14ನ್ನು ನೋಡಿ.

ಏಕೈವ ಪೂರ್ಣತಾ ಕಾರ್ಯಕಾರಣಯೋಃ ಭೇದೇನ ವ್ಯಪದಿಶ್ಯತೇ। ಏವಂ ಚ ದ್ವೈತಾದ್ವೈತಾತ್ಮಕಮ್ ಏಕಂ ಬ್ರಹ್ಮ। ಯಥಾ ಕಿಲ ಸಮುದ್ರೋ ಜಲತರಙ್ಗ ಫೇನಬುದ್ಬುದಾದ್ಯಾತ್ಮಕ ಏವ। ಯಥಾ ಚ ಜಲಂ ಸತ್ಯಮ್, ತದುದ್ಭವಾಶ್ಚ ತರಙ್ಗಫೇನಬುದ್ಬುದಾದಯಃ ಸಮುದ್ರಾತ್ಮಭೂತಾ ಏವ, ಆವಿರ್ಭಾವತಿರೋಭಾವಧರ್ಮಾಣಃ ಪರಮಾರ್ಥಸತ್ಯಾ ಏವ। ಏವಂ ಸರ್ವಮಿದಂ ದ್ವೈತಂ ಪರಮಾರ್ಥಸತ್ಯಮೇವ ಜಲತರಙ್ಗಾದಿಸ್ಥಾನೀಯಮ್। ಸಮುದ್ರಜಲಸ್ಥಾನೀಯಂ ತು ಪರಂ ಬ್ರಹ್ಮ। ಏವಂ ಚ ಕಿಲ ದ್ವೈತಸ್ಯ ಸತ್ಯತ್ವೇ ಕರ್ಮಕಾಣ್ಡಸ್ಯ ಪ್ರಾಮಾಣ್ಯಮ್। ಯದಾ ಪುನರ್ದ್ವೈತಂ ದ್ವೈತಮಿವ, ಅವಿದ್ಯಾಕೃತಂ ಮೃಗತೃಷ್ಣಿಕಾವದನೃತಮ್, ಅದ್ವೈತಮೇವ ಪರಮಾರ್ಥಃ[1] ತದಾ ಕಿಲ ಕರ್ಮಕಾಣ್ಡಂ ವಿಷಯಾಭಾವಾತ್ ಅಪ್ರಮಾಣಂ ಭವತಿ। ತಥಾ ಚ ವಿರೋಧ ಏವ ಸ್ಯಾತ್। ವೇದೈಕದೇಶಭೂತಾ ಉಪನಿಷತ್ ಪ್ರಮಾಣಮ್। ಪರಮಾರ್ಥಾದ್ವೈತವಸ್ತುಪ್ರತಿಪಾದಕತ್ವಾತ್। ಅಪ್ರಮಾಣಂ ಕರ್ಮಕಾಣ್ಡಮ್। ಅಸದ್ದ್ವೈತವಿಷಯತ್ವಾತ್। ತದ್ವಿರೋಧಪರಿಜಿಹೀರ್ಷಯಾ ಶ್ರುತ್ಯಾ ಏತದುಕ್ತಂ ಕಾರ್ಯಕಾರಣಯೋಃ ಸತ್ಯತ್ವಂ ಸಮುದ್ರವತ್, 'ಪೂರ್ಣಮದಃ' ಇತ್ಯಾದಿನಾ ಇತಿ ॥

(ಭಾಷ್ಯಾರ್ಥ)

ಇಲ್ಲಿ ಕೆಲವರು (ಇದರರ್ಥವನ್ನು ಹೀಗೆ) ವರ್ಣಿಸುತ್ತಾರೆ : ಪೂರ್ಣವಾದ ಕಾರಣದಿಂದ ಪೂರ್ಣವಾದ ಕಾರ್ಯವು ಎದ್ದುಕೊಂಡಿರುತ್ತದೆ. ಎದ್ದುಕೊಂಡ (ಈ) ಕಾರ್ಯವು ಈಗಿನ ಕಾಲದಲ್ಲಿಯೂ ಪೂರ್ಣವೇ, ದ್ವೈತರೂಪದಿಂದ ಪರಮಾರ್ಥವಾದ ವಸ್ತುವಾಗಿಯೇ ಇದೆ. ಮತ್ತೆ ಪ್ರಲಯಕಾಲದಲ್ಲಿ ಪೂರ್ಣವಾದ ಕಾರ್ಯದ ಪೂರ್ಣತ್ವವನ್ನು ತೆಗೆದುಕೊಂಡು ತನ್ನಲ್ಲಿಟ್ಟುಕೊಂಡು ಪೂರ್ಣವಾದ ಕಾರಣರೂಪವಾಗಿಯೇ ಉಳಿದುಕೊಳ್ಳುತ್ತದೆ.

ಹೀಗೆ ಉತ್ಪತ್ತಿಸ್ಥಿತಿಪ್ರಲಯಗಳೆಂಬ ಮೂರು ಕಾಲಗಳಲ್ಲಿಯೂ ಕಾರ್ಯಕಾರಣಗಳು ಪೂರ್ಣವಾಗಿಯೇ (ಇರುತ್ತವೆ); ಆ ಕಾರ್ಯಕಾರಣಗಳ ಪೂರ್ಣತ್ವವು ಒಂದೇ ಆಗಿದ್ದರೂ (ಇಲ್ಲಿ) ಭೇದದಿಂದ ಹೇಳಲ್ಪಟ್ಟಿರುತ್ತದೆ. ಹೀಗಿರುವದರಿಂದ ಒಂದೇ ಬ್ರಹ್ಮವು ದ್ವೈತಾದ್ವೈತಾತ್ಮಕವಾಗಿರುತ್ತದೆ. ಹೇಗೆ ಸಮುದ್ರವು ನೀರು, ಅಲೆ, ನೊರೆ, ಗುಳ್ಳೆ –ಮುಂತಾದವುಗಳ ಸ್ವರೂಪವೇ ಆಗಿರುವದೋ, ಮತ್ತು ಹೇಗೆ ನೀರೂ ಸತ್ಯವಾಗಿದ್ದು ಅದರಿಂದುಂಟಾದ ನೀರು, ಅಲೆ, ನೊರೆ, ಗುಳ್ಳೆ– ಮುಂತಾದವುಗಳೂ ಸಮುದ್ರಸ್ವರೂಪವೇ ಆಗಿದ್ದು ತೋರುವದು, ಮರೆಯಾಗುವದು –ಎಂಬ ಧರ್ಮವುಳ್ಳವಾಗಿರುವದರಿಂದ, ಪರಮಾರ್ಥಸತ್ಯವೇ

1. ಪರಮಾರ್ಥತಃ ಎಂಬ ಪಾಠಕ್ಕಿಂತ ಇದು ಮೇಲು.

ಆಗಿರುವವೋ, ಹಾಗೆಯೇ ಈ ದ್ವೈತವೆಲ್ಲವೂ ಪರಮಾರ್ಥಸತ್ಯವೇ ಆಗಿ (ದೃಷ್ಟಾಂತದ) ನೀರು, ಅಲೆ- ಮುಂತಾದವುಗಳಂತೆ (ಇದೆ); ಪರಬ್ರಹ್ಮವಾದರೋ ಸಮುದ್ರದ ನೀರಿನಂತೆ (ಇದೆ)ಯುಂತೆ. ಮತ್ತು ಹೀಗೆ ದ್ವೈತವು ಸತ್ಯವಾದರೆ ಕರ್ಮಕಾಂಡಕ್ಕೆ ಪ್ರಾಮಾಣ್ಯವು (ಸಲ್ಲುತ್ತದೆ)ಯುಂತೆ.

ಹೀಗಲ್ಲದೆ ಯಾವಾಗ ದ್ವೈತವು ದ್ವೈತವಿದ್ದಂತೆ (ಇರುವದೋ)[1], ಅವಿದ್ಯಾಕೃತವಾಗಿ ಬಿಸಿಲುಕುದುರೆಯ (ನೀರಿ)ನಂತೆ ಅನೃತವಾಗಿರುವದೋ, ಅದ್ವೈತವೊಂದೇ ಪರಮಾರ್ಥವಾಗಿರುವದೋ, ಆಗ ಕರ್ಮಕಾಂಡವು (ತನಗೆ) ವಿಷಯವಿಲ್ಲದ್ದರಿಂದ ಅಪ್ರಮಾಣವಾಗುವದಂತೆ, ಆಗ ವಿರೋಧವೇ ಆಗುತ್ತದೆ (ಯುಂತೆ. ಹೇಗೆಂದರೆ) ವೇದದ ಒಂದು ಭಾಗವಾದ ಉಪನಿಷತ್ತು ಪ್ರಮಾಣವು; ಏಕೆಂದರೆ (ಅದು) ಪರಮಾರ್ಥವಾದ ಅದ್ವೈತವನ್ನು ಪ್ರತಿಪಾದಿಸುತ್ತದೆ ; (ಆದರೆ) ಕರ್ಮಕಾಂಡವು ಅಪ್ರಮಾಣವು, ಏಕಂದರ (ಅದಕ್ಕ) ಅಸತ್ಯಾಗಿರುವ ದ್ವೈತವೇ ವಿಷಯವು. ಈ ವಿರೋಧವನ್ನು ಪರಿಹರಿಸುವದಕ್ಕಾಗಿ ಶ್ರುತಿಯು ಸಮುದ್ರದಂತೆ ಕಾರ್ಯಕಾರಣ(ಗಳೆರಡಕ್ಕೂ) ಸತ್ಯತ್ವವನ್ನು 'ಪೂರ್ಣಮದಃ' (ಅದು ಪೂರ್ಣವು) ಎಂದು ಮುಂತಾಗಿರುವ (ವಾಕ್ಯ)ದಿಂದ ಹೇಳಿರುತ್ತದೆ ಎಂದು (ಅವರ ಅರ್ಥ).[2]

## ಸಿದ್ಧಾಂತ : ವಸ್ತುವಿಷಯದಲ್ಲಿ ಉತ್ಸರ್ಗಾಪವಾದವಿಕಲ್ಪಗಳು ಸಲ್ಲವು

(ಭಾಷ್ಯ)

೩೫೦. ತದಸತ್ । ವಿಶಿಷ್ಟವಿಷಯಾಪವಾದವಿಕಲ್ಪಯೋಃ ಅಸಂ

1 'ಯತ್ರ ಹಿ ದ್ವೈತಮಿವ ಭವತಿ' ಎಂಬುದಕ್ಕೆ ದ್ವೈತವಿದ್ದಂತೆ, ಎಂದರೆ ದ್ವೈತವು ಪರಮಾರ್ಥವಲ್ಲ ಎಂಬರ್ಥವನ್ನು ಸಿದ್ಧಾಂತಿಯು ೨-೪-೧೪ (ಭಾ.ಭಾ. ೩೭೬)ರಲ್ಲಿ ಮಾಡಿ-ಎತ್ತಾನೆ.

2. ಮೈತ್ರೇಯಿಗೆ 'ಯತ್ರ ಹಿ ದ್ವೈತಮ್', 'ಯತ್ರ ತ್ವಸ್ಯ ಸರ್ವಮಾತ್ಮೈವಾ ಭೂತ್'- ಎಂದು ದ್ವೈತಾದ್ವೈತಾತ್ಮಕವಾದ ಬ್ರಹ್ಮವನ್ನು ಯಾಜ್ಞವಲ್ಕ್ಯರು ಕೊನೆಯಲ್ಲಿ ಉಪದೇಶಿಸಿರುತ್ತಾರೆ. ಇಲ್ಲಿ ಅದ್ವೈತವೇ ನಿಜವಾದರೆ ಸೃಷ್ಟ್ಯಾದಿಗಳನ್ನು ಹೇಳಿದ್ದು ವ್ಯರ್ಥವಾಗುವದು, ಶ್ರವಣಾದಿಗಳನ್ನು ವಿಧಿಸುವದೂ ತಪ್ಪಾಗುವದು ; ಅದರೆ ದ್ವೈತ ವೊಂದೇ ಸತ್ಯವಾದರೆ ಅದ್ವೈತದರ್ಶನವು ತಪ್ಪೆಂದಾಗುವದು. ಆದ್ದರಿಂದ ಈ ವಿರೋಧ ಪರಿಹಾರಕ್ಕಾಗಿ ಪ್ರಕೃತಮಂತ್ರವು ಬಂದಿದೆ- ಎಂದು ಭರ್ತೃಪ್ರಪಂಚರ ಸಂಬಂಧೋಕ್ತಿ ಎಂಬುದಾಗಿ ವಾರ್ತಿಕ ೩೦ರಿಂದ ೩೫. ಸಮುದ್ರದೃಷ್ಟಾಂತದಲ್ಲಿ ಮೇಲೆ ಚಾಂಚಲ್ಯವೂ, ನಡುವೆ ಸ್ವಲ್ಪ ಚಾಂಚಲ್ಯವೂ, ಬುಡದಲ್ಲಿ ನಿಷ್ಕಂಪತ್ವವೂ ಇರುವಂತೆ ಆತ್ಮನಲ್ಲಿಯೂ ದ್ವೈತಾದ್ವೈತಭಾವವನ್ನು ತಿಳಿಯಬೇಕು. ; ಆತ್ಮನು ಪರಮಾತ್ಮಭಾವದಿಂದ ಅದ್ವೈತನು ; ಪ್ರಾಣ, ವಿರಾಡ್, ನಾಮರೂಪಕ್ರಿಯಾ- ಈ ಮೂರು ರೂಪಗಳಿಂದ ಹೆಚ್ಚುಹೆಚ್ಚಾಗಿ ಭಿನ್ನನಾಗಿರುತ್ತಾನೆ ಎಂದು ವಾರ್ತಿಕ ೫೧ರಿಂದ ೫೪ರಲ್ಲಿ ವರ್ಣಿಸಿದೆ. ಸೂ.ಭಾ. ೨-೧-೧೪, ಭಾ.ಭಾ. ೪೩೫ರಲ್ಲಿ ಈ ಪಕ್ಷವನ್ನು ಖಂಡಿಸಿರುವ ಬಗೆಯನ್ನು ಇದಕ್ಕೆ ಹೋಲಿಸಿರಿ.

ಭವಾತ್ । ನ ಹಿ ಇಯಂ ಸುವಿವಕ್ಷಿತಾ ಕಲ್ಪನಾ। ಕಸ್ಮಾತ್ ? ಯಥಾ ಕ್ರಿಯಾ ವಿಷಯೇ ಉತ್ಸರ್ಗಪ್ರಾಪ್ತಸ್ಯ ಏಕದೇಶೇ ಅಪವಾದಃ ಕ್ರಿಯತೇ। ಯಥಾ "ಅಹಿಂಸನ್ ಸರ್ವ[1]ಭೂತಾನ್ಯನ್ಯತ್ರ ತೀರ್ಥೇಭ್ಯಃ" (ಛಾಂ. ೮-೧೫-೧) ಇತಿ ಹಿಂಸಾ ಸರ್ವಭೂತವಿಷಯಾ ಉತ್ಸರ್ಗೇಣ ನಿವಾರಿತಾ ತೀರ್ಥೇ ವಿಶಿಷ್ಟ ವಿಷಯೇ ಜ್ಯೋತಿಷ್ಟೋಮಾದೌ ಅನುಜ್ಞಾಯತೇ । ನ ಚ ತಥಾ ವಸ್ತು ವಿಷಯೇ ಇಹ ಅದ್ವೈತಂ ಬ್ರಹ್ಮ ಉತ್ಸರ್ಗೇಣ ಪ್ರತಿಪಾದ್ಯ ಪುನಃ ತದೇಕದೇಶೇ ಅಪವದಿತುಂ ಶಕ್ಯತೇ। ಬ್ರಹ್ಮಣಃ ಅದ್ವೈತತ್ವಾದೇವ ಏಕದೇಶಾನುಪಪತ್ತೇಃ। ತಥಾ ವಿಕಲ್ಪಾನುಪಪತ್ತೇಶ್ಚ। ಯಥಾ 'ಅತಿರಾತ್ರೇ ಷೋಡಶಿನಂ ಗೃಹ್ಣಾತಿ' ( ? ), 'ನಾತಿರಾತ್ರೇ ಷೋಡಶಿನಂ ಗೃಹ್ಣಾತಿ' ( ? ) ಇತಿ ಗ್ರಹಣಾಗ್ರಹಣಯೋಃ ಪುರುಷಾಧೀನತ್ವಾತ್ ವಿಕಲ್ಪೋ ಭವತಿ। ನ ತ್ವಿಹ ತಥಾ ವಸ್ತುವಿಷಯೇ ದ್ವೈತಂ ವಾ ಸ್ಯಾತ್ ಅದ್ವೈತಂ ವಾ ಇತಿ ವಿಕಲ್ಪಃ ಸಂಭವತಿ। ಅಪುರುಷತನ್ತ್ರತ್ವಾತ್ ಆತ್ಮವಸ್ತುನಃ। ವಿರೋಧಾಚ್ಚ ದ್ವೈತಾದ್ವೈತತ್ವಯೋರೇಕಸ್ಯ । ತಸ್ಮಾತ್ ನ ಸುವಿವಕ್ಷಿತಾ ಇಯಂ ಕಲ್ಪನಾ ॥

(ಭಾಷ್ಯಾರ್ಥ)

ಇದು ಸರಿಯಲ್ಲ. ಏಕೆಂದರೆ ಗೊತ್ತಾದ (ಒಂದು) ವಿಷಯಕ್ಕೆ ಅಪವಾದ, ವಿಕಲ್ಪ –ಇವುಗಳು (ಇಲ್ಲಿ) ಸಂಭವಿಸುವದಿಲ್ಲ.

(ಇದರ ವಿವರ): ಇದು ಸರಿಯಾಗಿ ವಿಚಾರಮಾಡಿ ಹೇಳಿದ ಕಲ್ಪನೆಯಲ್ಲ. ಹೇಗೆ ಕ್ರಿಯೆಯ ವಿಷಯದಲ್ಲಿ ಸಾಮಾನ್ಯವಾಗಿ ಪ್ರಾಪ್ತವಾಗಿರುವದನ್ನು ಒಂದಂಶದಲ್ಲಿ ಅಪವಾದವನ್ನು ಮಾಡಬಹುದೋ,—ಉದಾಹರಣೆಗೆ "ತೀರ್ಥಗಳನ್ನು[2] ಹೊರತು ಮಿಕ್ಕ ಯಾವ ಭೂತಗಳನ್ನೂ ಹಿಂಸಿಸದೆ" (ಛಾಂ.೮-೧೫-೧) ಎಂದು ಯಾವ ಭೂತಗಳನ್ನೂ ಹಿಂಸೆ(ಮಾಡಕೂಡದೆಂದು) ಸಾಮಾನ್ಯವಾಗಿ ಬೇಡವೆಂದದ್ದನ್ನು ತೀರ್ಥವೆಂಬ ಗೊತ್ತಾದ ವಿಷಯದಲ್ಲಿ ಜ್ಯೋತಿಷ್ಟೋಮವೇ ಮುಂತಾದವುಗಳಲ್ಲಿ ಆಗಬಹುದೆಂದಿದೆ—ಹಾಗೆ ವಸ್ತು ವಿಷಯವಾಗಿರುವ ಈ (ಸಂದರ್ಭ)ದಲ್ಲಿ ಬ್ರಹ್ಮವು ಅದ್ವೈತವೆಂದು ಸಾಮಾನ್ಯವಾಗಿ ಪ್ರತಿಪಾದನೆಮಾಡಿ ಮತ್ತೆ ಅದರಲ್ಲಿ ಒಂದು ಭಾಗದಲ್ಲಿ (ಆ ಅದ್ವೈತವನ್ನು) ಅಲ್ಲಗಳೆಯುವದು ಆಗಲಾರದು; ಏಕೆಂದರೆ ಬ್ರಹ್ಮವು ಅದ್ವೈತವೇ ಆಗಿರುವದರಿಂದ (ಅದಕ್ಕೆ) ಒಂದು ಭಾಗವೆಂಬುದೇ ಹೊಂದುವಂತಿಲ್ಲ.

ಇದರಂತೆ ವಿಕಲ್ಪವು ಹೊಂದುವದಿಲ್ಲವಾದ್ದರಿಂದಲೂ[3] (ಇದು ಸರಿಯಾಗಿ

1. 'ಸರ್ವಾ' ಎಂಬ ಪಾಠವೂ ಕ್ವಾಚಿತ್ಕವಾಗಿ ಉಂಟು.

2. ಯೋಗ್ಯವಾದ ಸಂದರ್ಭಗಳಲ್ಲಿ.

3. ಉತ್ಸರ್ಗಾಪವಾದ, ವಿಕಲ್ಪ – ಇವು ವಸ್ತುವಿನ ಜ್ಞಾನದಲ್ಲಿ ಆಗುವಂತಿಲ್ಲ ಎಂಬುದಕ್ಕೆ ಸೂ.ಭಾ. ೧-೧-೨ (ಭಾ.ಭಾ. ೨೮)ನ್ನು ನೋಡಿ.

ವಿಚಾರಮಾಡಿ ಹೇಳಿದ ಕಲ್ಪನೆಯಲ್ಲ. ಇದರ ವಿವರ): ಹೇಗೆ "ಅತಿರಾತ್ರದಲ್ಲಿ ಷೋಡಶಿಯನ್ನು ಗ್ರಹಣಮಾಡಬೇಕು" ( ? ), "ಅತಿರಾತ್ರದಲ್ಲಿ ಷೋಡಶಿಯನ್ನು ಗ್ರಹಣಮಾಡಬಾರದು" ( ? )[1]- ಎಂಬಲ್ಲಿ ಗ್ರಹಣ, ಅಗ್ರಹಣ- ಇವುಗಳು ಪುರುಷನಿಗೆ ಅಧೀನವಾಗಿರುವ (ಕ್ರಿಯೆಗಳಾ)ದ್ದರಿಂದ (ಇವುಗಳಿಗೆ) ವಿಕಲ್ಪವಾಗಬಹುದಾಗಿರುತ್ತದೆ. ಆದರೆ ವಸ್ತುವಿಷಯವಾಗಿರುವ (ಈ ಸಂದರ್ಭದಲ್ಲಿ) ಹಾಗೆ ದ್ವೈತವಾದರೂ ಆಗಿರಬಹುದು, ಅದ್ವೈತವಾದರೂ ಆಗಿರಬಹುದು ಎಂಬ ವಿಕಲ್ಪವು ಸಂಭವಿಸುವದಿಲ್ಲ. ಏಕೆಂದರೆ ಆತ್ಮವಸ್ತುವು ಪುರುಷತಂತ್ರವಲ್ಲ: ದ್ವೈತಾದ್ವೈತಗಳು ವಿರುದ್ಧವಾಗಿಯೂ ಇವೆ. ಆದ್ದರಿಂದ ಈ ಕಲ್ಪನೆಯು ಸರಿಯಾಗಿ (ಶ್ರುತಿ) ವಿವಕ್ಷಿತವಲ್ಲ.

## ದ್ವೈತಾದ್ವೈತವು ಶ್ರುತಿಯುಕ್ತಿವಿರುದ್ಧ

(ಭಾಷ್ಯ)

೩೫೧. ಶ್ರುತಿನ್ಯಾಯವಿರೋಧಾಚ್ಚ । ಸೈನ್ಧವಘನವತ್ ಪ್ರಜ್ಞಾನೈಕರಸಘನಮ್ ನಿರನ್ತರಮ್, ಪೂರ್ವಾಪರಬಾಹ್ಯಾಭ್ಯನ್ತರಭೇದವಿವರ್ಜಿತಮ್, ಸಬಾಹ್ಯಾಭ್ಯನ್ತರಮಜಮ್, ನೇತಿ ನೇತಿ, ಅಸ್ಥೂಲಮನಣು,[2] ಅಜಮಜರಮಭಯಮಮೃತಮ್, ಇತ್ಯೇವಮಾದ್ಯಾಃ ಶ್ರುತಯೋ ನಿಶ್ಚಿತಾರ್ಥಾಃ ಸಂಶಯವಿಪರ್ಯಾಸಾಶಙ್ಕಾರಹಿತಾಃ ಸರ್ವಾಃ ಸಮುದ್ರೇ ಪ್ರಕ್ಷಿಪ್ತಾಃ ಸ್ಯುಃ । ಅಕಿಂಚಿತ್ಕರತ್ವಾತ್ । ತಥಾ ನ್ಯಾಯವಿರೋಧೋಽಪಿ । ಸಾವಯವಸ್ಯ ಅನೇಕಾತ್ಮಕಸ್ಯ ಕ್ರಿಯಾವತೋ ನಿತ್ಯತ್ವಾನುಪಪತ್ತೇಃ । ನಿತ್ಯತ್ವಂ ಚ ಆತ್ಮನಃ ಸ್ಮೃತ್ಯಾದಿದರ್ಶನಾತ್ ಅನುಮೀಯತೇ । ತದ್ವಿರೋಧಶ್ಚ ಪ್ರಾಪ್ನೋತ್ಯನಿತ್ಯತ್ವೇ । ಭವತ್ಕಲ್ಪನಾನರ್ಥಕ್ಯಂ ಚ । ಸ್ಫುಟಮೇವ ಚಾಸ್ಮಿನ್ ಪಕ್ಷೇ ಕರ್ಮಕಾಣ್ಡಾನರ್ಥಕ್ಯಮ್ । ಅಕೃತಾಭ್ಯಾಗಮಕೃತವಿಪ್ರಣಾಶಪ್ರಸಙ್ಗಾತ್ । ನನು ಬ್ರಹ್ಮಣೋ ದ್ವೈತಾದ್ವೈತಾತ್ಮಕತ್ವೇ ಸಮುದ್ರಾದಿದೃಷ್ಟಾನ್ತಾ ವಿದ್ಯನ್ತೇ ಕಥಮುಚ್ಯತೇ ಭವತಾ ಏಕಸ್ಯ ದ್ವೈತಾದ್ವೈತತ್ವಂ ವಿರುದ್ಧಮಿತಿ ? ನ । ಅನ್ಯವಿಷಯತ್ವಾತ್ । ನಿತ್ಯನಿರವಯವವಸ್ತುವಿಷಯಂ ಹಿ ವಿರುದ್ಧತ್ವಮ್ ಅವೋಚಾಮ ದ್ವೈತಾದ್ವೈತತ್ವಸ್ಯ । ನ ಕಾರ್ಯವಿಷಯೇ ಸಾವಯವೇ । ತಸ್ಮಾತ್ ಶ್ರುತಿನ್ಯಾಯವಿರೋಧಾತ್[3] ಅನುಪಪನ್ನೇಯಂ ಕಲ್ಪನಾ । ಅಸ್ಯಾಃ ಕಲ್ಪನಾಯಾಃ ವರಮ್ ಉಪನಿಷತ್ಪರಿತ್ಯಾಗ ಏವ ॥

---

1. ಇವು ಎಲ್ಲಿಯ ವಾಕ್ಯಗಳೆಂಬುದು ಗೊತ್ತಾಗುವಂತಿಲ್ಲ; ಸೂತ್ರಭಾಷ್ಯದಲ್ಲಿಯೂ ಈ ವಾಕ್ಯಗಳ ಪದಗಳು ಇದೇ ಕ್ರಮದಲ್ಲಿಯೇ ಇವೆ. ಆದರೆ ಶಾಬರಭಾಷ್ಯದಲ್ಲಿ "ಗೃಹ್ಣಾತಿ ಷೋಡಶಿನಮ್" (ಜೈ. ಸೂ. ೧೦-೮-೬) ಎಂದೇ ಅನುಕ್ರಮವಿದೆ.

2. 'ಅಹ್ರಸ್ವಮ್' ಎಂದು ಆ॥ ಪಾಠದಲ್ಲಿರುವದು ಹೆಚ್ಚೆಂದು ಬಿಟ್ಟುಬಿಟ್ಟಿದೆ.

3. 'ಶ್ರುತಿಸ್ಮೃತಿನ್ಯಾಯ' ಎಂಬ ಆಚ್ಚಿನಪಾಠದಲ್ಲಿ 'ಸ್ಮೃತಿ' ಹೆಚ್ಚು.

(ಭಾಷ್ಯಾರ್ಥ)

ಶ್ರುತಿನ್ಯಾಯಗಳಿಗೆ ವಿರೋಧವಾಗುವದರಿಂದಲೂ (ಇದು ಸುವಿವಕ್ಷಿತ ಕಲ್ಪನೆಯಲ್ಲ) ಉಪ್ಪಿನಹರಳಿನಂತೆ ಪ್ರಜ್ಞಾನವೆಂಬ ಒಂದೇ ರಸದ ಗಟ್ಟಿಯು ನಿರಂತರವಾದದ್ದು[1] ; ಹಿಂದು ಮುಂದು, ಹೊರಗು ಒಳಗು- ಎಂಬ ಭೇದ ವಿಲ್ಲದ್ದು[2] ; ಒಳಗೂ ಹೊರಗೂ ಸಹಿತ ಅಜವು[3] ; ಹೀಗಲ್ಲ, ಹೀಗಲ್ಲ[4] ; ಸ್ಥೂಲವಲ್ಲ, ಅಣುವಲ್ಲ[5] ; ಅಜವು, ಅಜರವು, ಅಭಯವು, ಅಮೃತವು[6]- ಇವೇ ಮುಂತಾದ ನಿಶ್ಚಿತವಾದ ಅರ್ಥವುಳ್ಳ ಸಂಶಯವಿಪರೀತ(ಜ್ಞಾನ)ಗಳ ಶಂಕೆಯೇ ಇಲ್ಲವಾದ ಶ್ರುತಿಗಳೆಲ್ಲವನ್ನೂ (ಈ ಪಕ್ಷದಲ್ಲಿ ಕಡಲಿನಲ್ಲಿ) ಎಸೆದಂತೆ ಆಗುವದು ; ಏಕೆಂದರೆ (ಅವಕ್ಕೆ) ಯಾವ ಫಲವೂ ಇರುವದಿಲ್ಲ.[7]

ಇದರಂತೆ ನ್ಯಾಯವಿರೋಧವೂ (ಈ ಪಕ್ಷವಲ್ಲಿರುತ್ತದೆ). ಏಕೆಂದರೆ ಸಾವ ಯವವೂ, ಅನೇಕಾತ್ಮಕವೂ, ಕ್ರಿಯೆಯುಳ್ಳದ್ದೂ ಆಗಿರುವ (ವಸ್ತುವಿಗೆ) ನಿತ್ಯತ್ವ ವಿರುವದು ಹೊಂದುವದಿಲ್ಲ. ಆತ್ಮನು ನಿತ್ಯನು ಎಂಬುದು ಸ್ಮೃತಿಯೇ ಮುಂ ತಾದವುಗಳು[8] ಕಂಡುಬರುವದರಿಂದಲೂ ಅನುಮಾನಿಸತಕ್ಕದ್ದಾಗಿದೆ[9]. ಅನಿತ್ಯ ತ್ವವೇ (ನಿಜ)ವಾಗಿದ್ದರೆ ಆ (ಅನುಮಾನ)ಕ್ಕೂ ವಿರೋಧವು ಬಂದೊದಗು ತ್ತದೆ.[10] ನೀವು ಕಲ್ಪಿಸಿರುವ (ಪಕ್ಷವು) ವ್ಯರ್ಥವೂ (ಆಗುತ್ತದೆ).[11] ಈ ಪಕ್ಷ ದಲ್ಲಿ ಕರ್ಮಕಾಂಡವು ವ್ಯರ್ಥವೆಂಬುದೂ ಸ್ಫುಟವಾಗಿದೆ. ಏಕೆಂದರೆ ಮಾಡದೆ ಇದ್ದದ್ದಕ್ಕೆ (ಫಲವು) ಬರುವದೂ ಮಾಡಿದ್ದರ (ಫಲವು) ಇಲ್ಲವಾಗುವದೂ (ಈ ಪಕ್ಷದಲ್ಲಿ) ಪ್ರಸಕ್ತವಾಗುತ್ತದೆ.[12]

---

1. ೨-೪-೧೧, ೪-೫-೧೩ ; 2. ೨-೫-೧೯, ೩-೮-೮.
3. ಮುಂ ೨-೧-೨. 4 ೨-೩-೬, ೪-೨-೪, ೪-೪-೨೨, ೪-೫-೧೪.
5. ೩-೮-೮. 6. ೪-೪-೨೫

7. ಆತ್ಮನು ಅದ್ವಿತೀಯನೆಂದು ಈ ಶ್ರುತಿಗಳು ಹೇಳುತ್ತಿವೆ, ದ್ವೈತಾದ್ವೈತಪಕ್ಷಕ್ಕೆ ಇವು ವಿರುದ್ಧವಾಗಿರುತ್ತವೆ.

8. ಹಿಂದೆ ಮಾಡಿದ್ದನ್ನು ನೆನಪಿಗೆ ತಂದುಕೊಳ್ಳುವದು, ಅವನೇ ನಾನು ಎಂದು ಗುರುತುಹಿಡಿದು ನಿಶ್ಚಯಿಸುವದು, ಮುಂದೆ ಫಲವನ್ನು ಪಡೆಯುವದಕ್ಕೆಂದು ಈಗ ಕರ್ಮ ವನ್ನು ಮಾಡುವದು, ಹಿಂದಿನ ಕರ್ಮದ ಫಲವನ್ನು ಈಗ ಪಡೆಯುವದು -ಮುಂತಾದವು ಗಳು.

9 ಆತ್ಮನು ನಿತ್ಯನೆಂದು ಶ್ರುತಿಯಿದೆ, ಆತ್ಮನ ನಾಶವು ಕಲ್ಪನೀಯವಾಗಿಲ್ಲ ; ಇವು ಗಳ ಜೊತೆಗೆ ಈ ಸ್ಮೃತ್ಯಾದಿಗಳಿಂದಲೂ ಆತ್ಮನು ನಿತ್ಯನೆಂದು ಕಲ್ಪಿಸಬೇಕಾಗಿದೆ ಎಂದರ್ಥ.

10 ನಿಮ್ಮ ಪಕ್ಷವು ಯುಕ್ತಿವಿರುದ್ಧ ಎಂದರ್ಥ.

11. ಆತ್ಮನೇ ಅನಿತ್ಯನಾದರೆ ದ್ವೈತಾದ್ವೈತಪಕ್ಷವು ಹೇಗೆ ಉಳಿಯುವದು ?

12. ಮಾಡಿದ್ದಕ್ಕೆ ಫಲವಿಲ್ಲ, ಮಾಡದೆ ಇರುವದಕ್ಕೆ ಫಲವುಂಟು -ಎಂದರೆ ಕರ್ಮ ವಿಧಿಗೆ ಪ್ರಾಮಾಣ್ಯವಿಲ್ಲವಾಯಿತು. ಆದ್ದರಿಂದ ಕರ್ಮಕಾಂಡವು ಅಪ್ರಮಾಣವೇ ಆಯಿತು ಎಂದು ಅಭಿಪ್ರಾಯ.

(ಆಕ್ಷೇಪ) :- ಬ್ರಹ್ಮವು ದ್ವೈತಾದ್ವೈತಾತ್ಮಕವಾಗಿರುವದೆಂಬುದಕ್ಕೆ ಸಮುದ್ರಾದಿದೃಷ್ಟಾಂತಗಳು ಇರುತ್ತವೆಯಲ್ಲ! ಒಂದೇ (ವಸ್ತು) ದ್ವೈತಾದ್ವೈತವೆಂಬುದು ವಿರುದ್ಧವೆಂದು ನೀನು ಹೇಳುತ್ತಿರುವದು ಹೇಗೆ (ಸರಿ) ?

(ಪರಿಹಾರ) :- ಹಾಗಲ್ಲ. ಏಕೆಂದರೆ (ಆ ವಿರೋಧವು) ಮತ್ತೊಂದರ ವಿಷಯಕ್ಕೆ

(ಇದರ ವಿವರ) :- ನಿತ್ಯವೂ ನಿರವಯವವೂ ಆಗಿರುವ ವಸ್ತುವಿನ ವಿಷಯಕ್ಕಲ್ಲವೆ, ದ್ವೈತಾದ್ವೈತತ್ವವು ವಿರುದ್ಧವೆಂದು (ನಾವು) ಹೇಳಿದ್ದು ? ಸಾವಯವವಾದ ಕಾರ್ಯವಿಷಯಕ್ಕಲ್ಲ(ವಷ್ಟೆ).

ಆದ್ದರಿಂದ ಶ್ರುತಿನ್ಯಾಯಗಳಿಗೆ ವಿರೋಧ(ವಾಗು)ವದರಿಂದ ಈ ಕಲ್ಪನೆಯು ಹೊಂದುವದಲ್ಲ ; ಈ ಕಲ್ಪನೆಗಿಂತಲೂ ಉಪನಿಷತ್ತನ್ನು (ಕೈ)ಬಿಡುವದೇ ಮೇಲು.

## ದ್ವೈತಾದ್ವೈತವು ಶಾಸ್ತ್ರಾರ್ಥವಲ್ಲವೆಂಬುದಕ್ಕೆ ಯುಕ್ತಿ

(ಭಾಷ್ಯ)

೬೫೨. ಅಧ್ಯೇಯತ್ವಾಚ್ಚ ನ ಶಾಸ್ತ್ರಾರ್ಥ[1] ಇಯಂ ಕಲ್ಪನಾ । ನ ಹಿ ಜನನಮರಣಾದ್ಯನರ್ಥಶತಸಹಸ್ರಭೇದಸಮಾಕುಲಂ ಸಮುದ್ರವನಾದಿವತ್ ಸಾವಯವಮ್ ಅನೇಕರಸಂ ಬ್ರಹ್ಮ ಧ್ಯೇಯತ್ವೇನ ವಿಜ್ಞೇಯತ್ವೇನ ವಾ ಶ್ರುತ್ಯಾ ಉಪದಿಶ್ಯತೇ । ಪ್ರಜ್ಞಾನಘನತಾಂ ಚ ಉಪದಿಶತಿ । 'ಏಕಧೈವ ಅನುದ್ರಷ್ಟವ್ಯಮ್' (೪-೪-೨೦) ಇತಿ ಚ । ಅನೇಕಧಾ ದರ್ಶನಾಪವಾದಾಚ್ಚ "ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ" (೪-೪-೧೯) ಇತಿ । ಯಚ್ಚ ಶ್ರುತ್ಯಾ ನಿನ್ದಿತಂ ತನ್ನ ಕರ್ತವ್ಯಮ್ । ಯಚ್ಚ ನ ಕ್ರಿಯತೇ ನ ಸ ಶಾಸ್ತ್ರಾರ್ಥಃ । ಬ್ರಹ್ಮಣೋಽನೇಕರಸತ್ವಮ್ ಅನೇಕಧಾತ್ವಂ ಚ ದ್ವೈತರೂಪಂ ನಿನ್ದಿತತ್ವಾತ್ ನ ದ್ರಷ್ಟವ್ಯಮ್ । ಅತೋ ನ ಶಾಸ್ತ್ರಾರ್ಥಃ । ಯತ್ತು ಏಕರಸತ್ವಂ ಬ್ರಹ್ಮಣಃ ತದ್ದ್ರಷ್ಟವ್ಯತ್ವಾತ್ ಪ್ರಶಸ್ತಮ್ । ಪ್ರಶಸ್ತತ್ವಾಚ್ಚ ಶಾಸ್ತ್ರಾರ್ಥೋ ಭವಿತುಮರ್ಹತಿ ॥

(ಭಾಷ್ಯಾರ್ಥ)

(ದ್ವೈತಾದ್ವೈತವು) ಧ್ಯೇಯವಲ್ಲವಾದ್ದರಿಂದಲೂ ಈ ಕಲ್ಪನೆಯು ಶಾಸ್ತ್ರದ ಅರ್ಥವಲ್ಲ(ವೆನ್ನಬೇಕು. ಇದರ ವಿವರ): ಹುಟ್ಟು, ಹೊಂದು- ಮುಂತಾದ ನೂರುಸಾವಿರ ಭೇದಗಳಿಂದ ತುಂಬಿಕೊಂಡಿರುವದಾಗಿ[2] ಸಮುದ್ರ, ವನ

---

1. 'ಶಾಸ್ತ್ರಾರ್ಥಾ' ಎಂಬ ಅಚ್ಚಿನ ಪಾಠವನ್ನು ಹೀಗೆ ತಿದ್ದಿಕೊಂಡಿದೆ.

2. ಜನನಮರಣಾದಿಗಳನ್ನು ಶಾಸ್ತ್ರವು ಧ್ಯೇಯವೆಂದು ವಿಧಿಸಲಾರದು ; ಏಕೆಂದರೆ ಅದನ್ನು ಧ್ಯಾನಿಸಿದರೆ ದುಷ್ಟಫಲವೇ ಆಗುವದು. ಮಾಂ. ಕಾ. ೩-೧೫ (ಭಾ. ಭಾ. ೧೫೭) ನ್ನು ನೋಡಿ.

–ಮುಂತಾದವುಗಳಂತೆ ಸಾವಯವವೂ ಅನೇಕರಸವೂ ಆಗಿರುವ ಬ್ರಹ್ಮವನ್ನು ಧ್ಯಾನಮಾಡಬೇಕೆಂದಾಗಲಿ ಅರಿತುಕೊಳ್ಳಬೇಕೆಂದಾಗಲಿ ಶ್ರುತಿಯಲ್ಲಿ ಉಪದಿಷ್ಟವಾಗಿರುವದಿಲ್ಲವಷ್ಟೆ. ಆದರೆ (ಬ್ರಹ್ಮವು) ಪ್ರಜ್ಞಾನಘನವು (೪-೫-೧೩) ಎಂದೂ "ಒಂದೇ ಪ್ರಕಾರದ್ದೆಂದು ಅನುದರ್ಶನಮಾಡಿಕೊಳ್ಳಬೇಕು" (೪-೪-೨೦) ಎಂದೂ ಉಪದೇಶಿಸುತ್ತಿದೆ.[1] "ಯಾವನು ಇಲ್ಲಿ ನಾನಾ ಇರುವಂತೆ ಕಾಣುವನೋ ಅವನು ಸಾವಿನಮೇಲೆ ಸಾವನ್ನು ಪಡೆದುಕೊಳ್ಳುವನು" (೪-೪-೧೯) ಎಂದು ಅನೇಕಪ್ರಕಾರವಾಗಿ ಅರಿಯುವದನ್ನು ನಿಂದಿಸಿರುವದರಿಂದಲೂ (ಹೀಗೆಂದು ತಿಳಿಯಬೇಕು. ಇದರ ವಿವರ): ಯಾವದನ್ನು ಶ್ರುತಿಯಲ್ಲಿ ನಿಂದಿಸಿದೆಯೋ ಅದನ್ನು ಮಾಡತಕ್ಕದ್ದಲ್ಲ, ಯಾವದನ್ನು ಮಾಡಬಾರದೋ ಅದು ಶಾಸ್ತ್ರಾರ್ಥವಲ್ಲ. ಬ್ರಹ್ಮವು ಅನೇಕರಸವೆಂಬುದೂ ಅನೇಕರೂಪವಾಗಿರುವದೆಂಬುದೂ ದ್ವೈತರೂಪವಾಗಿದ್ದು ನಿಂದಿತವಾಗಿರುವದರಿಂದ ದರ್ಶನಮಾಡತಕ್ಕದ್ದಲ್ಲ[2] ; ಆದ್ದರಿಂದ (ಅದು) ಶಾಸ್ತ್ರಾರ್ಥವಲ್ಲ.

ಆದರೆ ಬ್ರಹ್ಮವು ಏಕರಸವೆಂಬುದಿದೆಯಲ್ಲ, ಅದು ದ್ರಷ್ಟವ್ಯವಾಗಿರುವದರಿಂದ[3] ಪ್ರಶಸ್ತವೆಂದಾಯಿತು ; ಪ್ರಶಸ್ತವಾಗಿರುವದರಿಂದ ( ಅದು ) ಶಾಸ್ತ್ರಾರ್ಥವೂ ಆಗಿರಬೇಕು.

## ಅದ್ವೈತಪಕ್ಷದಲ್ಲಿ ಶಾಸ್ತ್ರಪ್ರಾಮಾಣ್ಯ

(ಭಾಷ್ಯ)

೩೫೩. ಯತ್ತೂಕ್ತಮ್, ವೇದೈಕದೇಶಸ್ಯ ಅಪ್ರಾಮಾಣ್ಯಂ ಕರ್ಮವಿಷಯೇ ದ್ವೈತಾಭಾವಾತ್ ಅದ್ವೈತೇ ಚ ಪ್ರಾಮಾಣ್ಯಮ್ ಇತಿ । ತನ್ನ । ಯಥಾಪ್ರಾಪ್ತೋಪದೇಶಾರ್ಥತ್ವಾತ್ । ನ ಹಿ ದ್ವೈತಮ್ ಅದ್ವೈತಂ ವಾ ವಸ್ತು ಜಾತಮಾತ್ರಮೇವ ಪುರುಷಂ ಜ್ಞಾಪಯಿತ್ವಾ ಪಶ್ಚಾತ್ ಕರ್ಮ ವಾ ಬ್ರಹ್ಮವಿದ್ಯಾಂ ವಾ ಉಪದಿಶತಿ ಶಾಸ್ತ್ರಮ್ । ನ ಚ ಉಪದೇಶಾರ್ಹಂ ದ್ವೈತಮ್ । ಜಾತಮಾತ್ರಪ್ರಾಣಿಬುದ್ಧಿಗಮ್ಯತ್ವಾತ್ । ನ ಚ ದ್ವೈತಸ್ಯ ಅನೃತತ್ವಬುದ್ಧಿಃ ಪ್ರಥಮಮೇವ ಕಸ್ಯಚಿತ್ ಸ್ಯಾತ್ । ಯೇನ ದ್ವೈತಸ್ಯ ಸತ್ಯತ್ವಮ್ ಉಪದಿಶ್ಯ ಪಶ್ಚಾತ್ ಆತ್ಮನಃ ಪ್ರಾಮಾಣ್ಯಂ ಪ್ರತಿಪಾದಯೇತ್

---

1. ಇದು ದ್ವೈತಾದ್ವೈತವು ಶಾಸ್ತ್ರಾರ್ಥವೆಂಬ ಪಕ್ಷಕ್ಕೆ ವಿರುದ್ಧವಾಗಿರುತ್ತದೆ.

2. ಶ್ರುತಿಯಲ್ಲಿ ಮಾಡತಕ್ಕದ್ದನ್ನು ಹೊಗಳುತ್ತದೆ, ಮಾಡಬಾರದ್ದನ್ನು ನಿಂದಿಸುತ್ತದೆ; ದ್ವೈತಾದ್ವೈತವನ್ನು ನಿಂದಿಸಿರುವದರಿಂದ ಅದು ಶಾಸ್ತ್ರಾರ್ಥವಲ್ಲ.

3. ಧ್ಯೇಯವೂ ಜ್ಞೇಯವೂ ಆಗಿದೆ ಎಂದು ಶ್ರುತಿಯಲ್ಲಿ ಹೇಳಿದೆ. ಇಷ್ಟವಾದದ್ದನ್ನೇ ಶಾಸ್ತ್ರವು ವಿಧಿಸುತ್ತದೆಯಾದ್ದರಿಂದ ಅದ್ವೈತವನ್ನೇ ಅದು ಪ್ರಶಂಸಿಸುತ್ತದೆ ಎಂದಾಯಿತು.

ಶಾಸ್ತ್ರಮ್ । ನಾಪಿ ಪಾಷಣ್ಡಿಭಿರಪಿ ಪ್ರಸ್ಥಾಪಿತಾಃ ಶಾಸ್ತ್ರಸ್ಯ ಪ್ರಾಮಾಣ್ಯಂ ನ ಗೃಹ್ಣೀಯುಃ । ತಸ್ಮಾತ್ ಯಥಾಪ್ರಾಪ್ತಮೇವ ದ್ವೈತಮ್ ಅವಿದ್ಯಾಕೃತಂ ಸ್ವಾಭಾವಿಕಮ್ ಉಪಾದಾಯ ಸ್ವಾಭಾವಿಕ್ಯೈವ ಅವಿದ್ಯಯಾ ಯುಕ್ತಾಯ ರಾಗದ್ವೇಷಾದಿದೋಷವತೇ ಯಥಾಭಿಮತಪುರುಷಾರ್ಥಸಾಧನಂ ಕರ್ಮ ಉಪದಿಶತಿ ಅಗ್ರೇ । ಪಶ್ಚಾತ್ ಪ್ರಸಿದ್ಧಕ್ರಿಯಾಕಾರಕಫಲಸ್ವರೂಪದೋಷದರ್ಶನವತೇ ತದ್ವಿಪರೀತೌದಾಸೀನ್ಯಸ್ವರೂಪಾವಸ್ಥಾನಫಲಾರ್ಥಿನೇ ತದುಪಾಯಭೂತಾಮ್ ಆತ್ಮೈಕತ್ವದರ್ಶನಾತ್ಮಿಕಾಂ ಬ್ರಹ್ಮವಿದ್ಯಾಮ್ ಉಪದಿಶತಿ । ಅಥ ಏವಂ ಸತಿ ತದೌದಾಸೀನ್ಯಸ್ವರೂಪಾವಸ್ಥಾನೇ ಫಲೇ ಪ್ರಾಪ್ತೇ ಶಾಸ್ತ್ರಸ್ಯ ಪ್ರಾಮಾಣ್ಯಂ ಪ್ರತಿ ಅರ್ಥಿತ್ವಂ ನಿವರ್ತತೇ । ತದಭಾವಾತ್ ಶಾಸ್ತ್ರಸ್ಯಾಪಿ ಶಾಸ್ತ್ರತ್ವಂ ತಂ ಪ್ರತಿ ನಿವರ್ತತ ಏವ । ತಥಾ ಪ್ರತಿಪುರುಷಂ ಪರಿಸಮಾಪ್ತಂ ಶಾಸ್ತ್ರಮ್ ಇತಿ ನ ಶಾಸ್ತ್ರವಿರೋಧಗನ್ಧೋಽಪಿ ಅಸ್ತಿ । ಅದ್ವೈತಜ್ಞಾನಾವಸಾನತ್ವಾತ್ ಶಾಸ್ತ್ರಶಿಷ್ಯಶಾಸನಾದಿದ್ವೈತಭೇದಸ್ಯ । ಅನ್ಯತಮಾವಸ್ಥಾನೇ ಹಿ ವಿರೋಧಃ ಸ್ಯಾತ್ ಅವಸ್ಥಿತಸ್ಯ । ಇತರೇತರಾಪೇಕ್ಷತ್ವಾತ್ತು ಶಾಸ್ತ್ರಶಿಷ್ಯಶಾಸನಾನಾಂ ನಾನ್ಯತಮೋಽಪಿ ಅವತಿಷ್ಠತೇ । ಸರ್ವಸಮಾಪ್ತೌ ಕಸ್ಯ ವಿರೋಧ ಆಶಙ್ಕ್ಯೇತ ಅದ್ವೈತೇ ಕೇವಲೇ ಶಿವೇ ಸಿದ್ಧೇ? ನಾಪಿ ಅವಿರೋಧತಾ । ಅತ ಏವ ॥

(ಭಾಷ್ಯಾರ್ಥ)

ಇನ್ನು (ನಮ್ಮ ಪಕ್ಷದಲ್ಲಿ) ವೇದದ ಒಂದು ಭಾಗವಾದ (ಕರ್ಮಕಾಂಡಕ್ಕೆ) ಕರ್ಮವಿಷಯದಲ್ಲಿ ಅಪ್ರಾಮಾಣ್ಯ(ವುಂಟಾಗುವದು); ಏಕೆಂದರೆ ದ್ವೈತವು (ನಿಜವಾಗಿ) ಇರುವದಿಲ್ಲ; ಅದ್ವೈತವಲ್ಲಾದರೋ (ವೇದಕ್ಕೆ) ಪ್ರಾಮಾಣ್ಯವಿರುತ್ತದೆ ಎಂದಿರಷ್ಟೆ? ಅದು ಸರಿಯಲ್ಲ. ಏಕೆಂದರೆ ಯಥಾಪ್ರಾಪ್ತವಾದದ್ದನ್ನೇ (ಶಾಸ್ತ್ರವು) ಉಪದೇಶಿಸುತ್ತದೆ. (ಇದರ ವಿವರ) : ಶಾಸ್ತ್ರವು ವಸ್ತುವು ದ್ವೈತವೆಂದಾಗಲಿ ಅದ್ವೈತವೆಂದಾಗಲಿ ಹುಟ್ಟಿದ ಪುರುಷಮಾತ್ರನಿಗೆ ತಿಳಿಸಿಕೊಟ್ಟು ಆ ಬಳಿಕ ಕರ್ಮವನ್ನಾಗಲಿ ಬ್ರಹ್ಮವಿದ್ಯೆಯನ್ನಾಗಲಿ ಉಪದೇಶಿಸುವದಿಲ್ಲವಷ್ಟೆ?[1] ದ್ವೈತವನ್ನು ತಿಳಿಸಿಕೊಡತಕ್ಕದ್ದೂ ಅಲ್ಲ; ಏಕೆಂದರೆ ಹುಟ್ಟಿದ

---

1. ಶಾಸ್ತ್ರವು ದ್ವೈತವೇ ಸತ್ಯವು ಎಂದು ಹೇಳಿಕೊಟ್ಟ ಬಳಿಕವೇ ಕರ್ಮಾದಿಗಳನ್ನು ಬೋಧಿಸುವದಿಲ್ಲ, ಇಂಥ ಅಧಿಕಾರಿಯು ಮಾಡುವ ಇಂಥ ಕರ್ಮಕ್ಕೆ ಇಂಥ ಫಲವು ಎಂದಿಷ್ಟೇ ತಿಳಿಸಿಕೊಡುತ್ತದೆ. ಇದೆಲ್ಲವೂ ಅದ್ವೈತವೆಂಬುದೇ ಸತ್ಯ ಎಂದು ಹೇಳಿಕೊಟ್ಟು, ಆ ಬಳಿಕವೇ ಬ್ರಹ್ಮಸ್ವರೂಪವು ಇಂಥದ್ದು ಎಂದು ಹೇಳಿಕೊಡುವದಿಲ್ಲ. ದ್ವೈತದಲ್ಲಿ ವಿರಕ್ತನಾದ ಮುಮುಕ್ಷುವಿಗೇ ತತ್ತ್ವವನ್ನು ತಿಳಿಸುತ್ತದೆ.

ಪ್ರಾಣಿಮಾತ್ರದ ಬುದ್ಧಿಗೆ (ದ್ವೈತವು ತಾನೇ) ತಿಳಿಯಬರುತ್ತದೆ.[1] ದ್ವೈತವು ಸುಳ್ಳೆಂಬ ಬುದ್ಧಿಯು ಮೊದಲೇ ಯಾವನಿಗೂ ಉಂಟಾಗುವಹಾಗೂ ಇಲ್ಲ; ಹಾಗಿದ್ದರೆ ದ್ವೈತವು ಸತ್ಯವೆಂದು ತಿಳಿಸಿಕೊಟ್ಟು, ಆ ಬಳಿಕ ಶಾಸ್ತ್ರವು ತಾನು ಪ್ರಮಾಣವೆಂಬುದನ್ನು ತಿಳಿಸುತ್ತದೆ ಎಂದಾಗುತ್ತಿತ್ತು.[2] ಪಾಷಂಡಿಗಳೂ ತಪ್ಪು ದಾರಿಹಿಡಿಸಿದ (ಜನ)ರೂ ಶಾಸ್ತ್ರದ ಪ್ರಾಮಾಣ್ಯವನ್ನು ಗ್ರಹಿಸದೆ ಇರಬೇಕಾಗುತ್ತಿತ್ತು.[3] ಆದ್ದರಿಂದ ಯಥಾಪ್ರಾಪ್ತವಾಗಿಯೇ ಇರುವ, ಅವಿದ್ಯೆಯಿಂದುಂಟಾಗಿ ಸ್ವಾಭಾವಿಕವಾಗಿರುವ, ದ್ವೈತವನ್ನು ಇಟ್ಟುಕೊಂಡು, ಸ್ವಾಭಾವಿಕವಾಗಿಯೇ ಇರುವ ಅವಿದ್ಯೆಯಿಂದೊಡಗೂಡಿ ರಾಗದ್ವೇಷಾದಿ ದೋಷಗಳುಳ್ಳವನಿಗೆ (ಅವನಿಗೆ) ಒಪ್ಪಾಗಿರುವ ಪುರುಷಾರ್ಥಕ್ಕೆ ಸಾಧನವಾಗಿರುವ ಕರ್ಮವನ್ನು (ಶಾಸ್ತ್ರವು) ಮೊದಲು ತಿಳಿಸಿಕೊಡುತ್ತದೆ; ಆ ಬಳಿಕ ಗೊತ್ತಾಗಿರುವ ಕ್ರಿಯಾಕಾರಕಫಲಗಳ ಸ್ವರೂಪದಲ್ಲಿರುವ ದೋಷವನ್ನು ಕಂಡುಕೊಂಡು[4] ಅದಕ್ಕೆ ವಿಪರೀತವಾದ ಉದಾಸೀನವಾದ ಸ್ವರೂಪದಿಂದ ಇದ್ದುಕೊಂಡಿರುವ ಫಲವನ್ನು ಬಯಸುವವನಿಗೆ ಅದಕ್ಕೆ ಉಪಾಯವಾಗಿ ಆತ್ಮೈಕತ್ವದರ್ಶನರೂಪವಾದ ಬ್ರಹ್ಮವಿದ್ಯೆಯನ್ನು ತಿಳಿಸಿಕೊಡುತ್ತದೆ (ಎಂದರಿಯಬೇಕು).[5]

---

1. ತಿಳಿದೇ ಇರುವ ದ್ವೈತಸತ್ಯತ್ವವನ್ನು ಶಾಸ್ತ್ರವು ಹೇಳಿಕೊಡಬೇಕಾದದ್ದೇನೂ ಇಲ್ಲ ಎಂದಭಿಪ್ರಾಯ. 2. ದ್ವೈತವನ್ನು ಸತ್ಯವೆಂದು ತಿಳಿಯುವದೇ ಜನರಿಗೆ ಸ್ವಭಾವವಾದ್ದರಿಂದ ಅದನ್ನು ತಿಳಿಸುವದೇನೂ ಶಾಸ್ತ್ರಕೃತ್ಯವಲ್ಲ.

3. ದ್ವೈತವು ಸತ್ಯವಲ್ಲ, ಅದು ವಿಜ್ಞಾನಮಾತ್ರ ಅಥವಾ ಶೂನ್ಯವೇ– ಎಂದು ಪಾಷಂಡಿಗಳು ಹೇಳಿಕೊಟ್ಟಮೇಲೂ ಅವರ ಶಿಷ್ಯರಿಗೂ ಶಾಸ್ತ್ರವಾಕ್ಯವು ಹೀಗೆಂದು ಬೋಧಿಸಿರುತ್ತದೆ ಎಂಬ ಅರಿವು ಉಂಟಾಗುತ್ತದೆ, ಏಕೆಂದರೆ ದ್ವೈತವು ತೋರುವದು ಆಸ್ತಿಕರಿಗೂ ನಾಸ್ತಿಕರಿಗೂ ಸಮಾನವಾಗಿರುತ್ತದೆ. ಆದ್ದರಿಂದ ಪಾಷಂಡಿ ಶಿಷ್ಯರಿಗೂ ವಾಕ್ಯವು ಬೋಧಕವಾಗಿರುವಂತೆ, ಅದ್ವೈತವೇ ಪರಮಾರ್ಥ ಎಂದು ತಿಳಿಸಿದಮೇಲೂ ಕರ್ಮವಾಕ್ಯವು ಬೋಧಕವಾಗಿರುತ್ತದೆ. ಬೋಧಕತ್ವವೇ ಪ್ರಾಮಾಣ್ಯಕ್ಕೆ ಕಾರಣವು. ದ್ವೈತವು ಮಿಥ್ಯೆ ಎಂದು ಮೊದಲೇ ಜನರಿಗೆ ತೋರುವದಾಗಿದ್ದರೆ ಹೀಗೆ ಶಾಸ್ತ್ರವಚನವು ಬೋಧಕವಾಗಬಾರದಾಗಿತ್ತು, ಏಕೆಂದರೆ ಆಗ ಪ್ರಮಾಣಪ್ರಮೇಯವ್ಯವಹಾರವೇ ಹುಸಿಯಾಗಿಬಿಡುತ್ತಿತ್ತು ಎಂದು ಭಾವ.

4. ದ್ವೈತವು ಸ್ವಭಾವದಿಂದಲೇ ಕಾಣುತ್ತಿದೆ, ಅದರಲ್ಲಿ ರಾಗದ್ವೇಷಾದಿಗಳಿಂದೊಡಗೂಡಿರುವವರು ಕರ್ಮಕ್ಕೆ ಅಧಿಕಾರಿಗಳು, ದ್ವೈತವು ಸಾತಿಶಯ, ವಿನಾಶಿ, ದುಃಖಮಯ– ಎಂದು ಮುಂತಾಗಿ ತಿಳಿದಿರುವವರೇ ಆತ್ಮವಿದ್ಯೆಗೆ ಅಧಿಕಾರಿಗಳು.

5. ದ್ವೈತದಲ್ಲಿ ದೋಷವನ್ನು ಕಂಡುಕೊಂಡು ಅದರಿಂದ ಮುಕ್ತನಾಗಬೇಕೆನ್ನುವವನಿಗೆ ಅದ್ವೈತಾತ್ಮದರ್ಶನವನ್ನು ಬೋಧಿಸಿದರೆ ಪುರುಷಾರ್ಥವನ್ನೇ ಬೋಧಿಸಿದಂತೆ ಆಗುವದರಿಂದ ಶಾಸ್ತ್ರಕ್ಕೆ ಅಪ್ರಾಮಾಣ್ಯವು ಬರಲಾರದು. ಏಕೆಂದರೆ ಫಲವುಳ್ಳ ವಿಷಯವನ್ನು ತಿಳಿಸಿಕೊಡುವದರಿಂದಲೇ ಶಾಸ್ತ್ರವು ಪ್ರಮಾಣವೆನಿಸುತ್ತದೆ.

ಇನ್ನು ಹೀಗಿರುವಲ್ಲಿ[1] **ಆ ಔದಾಸೀನ್ಯಸ್ವರೂಪದಲ್ಲಿ[2] ನೆಲೆನಿಂತಿರುವದೆಂಬ ಫಲವು ಪ್ರಾಪ್ತವಾಗಲು ಶಾಸ್ತ್ರದ ಪ್ರಾಮಾಣ್ಯದ ವಿಷಯಕ್ಕೆ ಆಕಾಂಕ್ಷೆಯು ತೊಲಗಿಹೋಗುತ್ತದೆ[3] ; ಆ (ಆಕಾಂಕ್ಷೆ)ಯಿಲ್ಲದ್ದರಿಂದ ಶಾಸ್ತ್ರದ ಶಾಸ್ತ್ರತ್ವವೂ ಅವನ ವಿಷಯಕ್ಕೆ ನಿಂತುಹೋಗುತ್ತದೆ[4]. ಹೀಗೆ ಪ್ರತಿಯೊಬ್ಬ ಪುರುಷನ ವಿಷಯಕ್ಕೂ (ಹೀಗೆ) ಶಾಸ್ತ್ರವು (ಶಾಸ್ತ್ರವಾಗಿರುವದು) ನಿಂತುಹೋಗಿರುತ್ತದೆಯಾಗಿ ಶಾಸ್ತ್ರ(ಪ್ರಾಮಾಣ್ಯ) ವಿರೋಧದ ವಾಸನೆಯು ಕೂಡ ಇರುವದಿಲ್ಲ[5].** ಏಕೆಂದರೆ ಶಾಸ್ತ್ರ, ಶಿಷ್ಯ, ಶಾಸನ – ಮುಂತಾದ ದ್ವೈತಭೇದವು ಅದ್ವೈತಜ್ಞಾನದಲ್ಲಿ ಕೊನೆಗಾಣುತ್ತದೆ[6]. ಯಾವದಾದರೊಂದು (ಹಾಗೆಯೇ) ಉಳಿದುಕೊಂಡರಲ್ಲವೆ, (ಹಾಗೆ) ಉಳಿದುಕೊಂಡದ್ದಕ್ಕೆ ವಿರೋಧವಾದೀತು[7] ? ಆದರೆ ಶಾಸ್ತ್ರ, ಶಿಷ್ಯ, ಶಾಸನ – ಇವು ಒಂದನ್ನೊಂದು ಬಯಸುವವಾದ್ದರಿಂದಲೇ[8] (ಅವುಗಳಲ್ಲಿ ಯಾವ)ದೊಂದೂ

---

1. ಕರ್ಮಶಾಸ್ತ್ರ, ಜ್ಞಾನಶಾಸ್ತ್ರ– ಇವೆರಡೂ ಅಧಿಕಾರಿಭೇದದಿಂದ ಪ್ರವೃತ್ತವಾಗಿರುವದರಿಂದ.

2. ಪ್ರವೃತ್ತಿನಿವೃತ್ತಿಗಳೆರಡೂ ಇಲ್ಲದ ನೈಷ್ಕರ್ಮ್ಯಸ್ವರೂಪದಲ್ಲಿ.

3. ಆಗ ಶಾಸ್ತ್ರವು ಪ್ರಮಾಣವಾಗಿರಬೇಕೆಂಬ ಬಯಕೆ ಇರುವದಿಲ್ಲ; ಏಕೆಂದರೆ ಅದರ ಪ್ರಾಮಾಣ್ಯದಿಂದ ಸಿಕ್ಕಬೇಕಾದ ಫಲವು ಸಿಕ್ಕಿಹೋಗಿರುತ್ತದೆ.

4. ಏನನ್ನಾದರೂ ಮಾಡುವದನ್ನು, ಅಥವಾ ಯಾವದಾದರೂ ತಿಳಿಯಬೇಕಾದ ವಸ್ತುವನ್ನು, ಹೊಸದಾಗಿ ತಿಳಿಸಿಕೊಡುವದರಿಂದಲೇ ಶಾಸ್ತ್ರವು ಶಾಸ್ತ್ರವಾಗಿರುತ್ತದೆ; ಆದರೆ ಆತ್ಮಜ್ಞಾನಿಗೆ ಮಾಡಬೇಕಾದದ್ದು ಇರುವದಿಲ್ಲ, ತಿಳಿಯಬೇಕಾದದ್ದೂ ಇರುವದಿಲ್ಲ. ಗೀ.ಭಾ. ೧೫–೨೦ (ಭಾ. ಭಾ. ೩೮೪)ನ್ನು ನೋಡಿ.

5. ಶಾಸ್ತ್ರವಿದ್ದರಲ್ಲವೆ, ಅದರ ಪ್ರಾಮಾಣ್ಯಕ್ಕೆ ವಿರೋಧ ?

6. ಜ್ಞಾನವಾದರೆ ದ್ವೈತವೇ ಇರುವದಿಲ್ಲ, ಅದ್ದರಿಂದ ಅಲ್ಲಿ ಶಾಸ್ತ್ರಾದಿಭೇದವಾಗಲಿ, ಶ್ರವಣಾದಿಭೇದವಾಗಲಿ ಇರುವದೇ ಇಲ್ಲ. ಮಾಂ. ಕಾ. ಭಾ. ೧–೫೭ (ಭಾ. ಭಾ. ೫೭) ನ್ನು ನೋಡಿ.

7. ಇದಕ್ಕೆ ಇದು ವಿರುದ್ಧ ಎಂಬುದು ದ್ವೈತದಲ್ಲಿ; ಆದರೆ ಜ್ಞಾನವುಂಟಾದಾಗ ದ್ವೈತವಿರುವದೇ ಇಲ್ಲ. ಅದ್ದರಿಂದ ಆಗ ಪ್ರಾಮಾಣ್ಯವಿರೋಧವೆಂಬುದೂ ಇರುವದಿಲ್ಲ ಎಂದು ಅಭಿಪ್ರಾಯ.

8. ಹೇಳಿಕೊಡುವ ಗುರು, ಹೇಳಿಸಿಕೊಳ್ಳುವ ಶಿಷ್ಯ– ಇವರಿಲ್ಲದೆ ಬರಿಯ ಶಾಸ್ತ್ರವೊಂದೇ ಉಳಿದುಕೊಳ್ಳಲಾರದು ; ಹಾಗೆ ಉಳಿದುಕೊಂಡರಲ್ಲವೆ, ಶಾಸ್ತ್ರವಿರೋಧಶಂಕೆ? ಹೀಗೆಯೇ ತಿಳಿದುಕೊಳ್ಳುವವನಾದ ಪ್ರಮಾತೃವು ಇರುವಾಗಲೇ ಪ್ರಮಾಣಪ್ರಮೇಯಗಳಿರುವವು; ಆದರೆ ಪ್ರಮಾತೃವು ಬ್ರಹ್ಮವೇ ಆಗಿಬಿಟ್ಟಿರುವ ಜ್ಞಾನದಶೆಯಲ್ಲಿ ಪ್ರಮಾಣವು ತಾನೊಂದೇ ಉಳಿದುಕೊಳ್ಳಲಾರದು ; ಹಾಗೆ ಉಳಿದುಕೊಂಡರಲ್ಲವೆ, ಪ್ರಾಮಾಣ್ಯ ವಿಷಯದ ಶಂಕೆ ?

ಉಳಿದಿರುವದಿಲ್ಲ. (ಹೀಗೆ) ಎಲ್ಲವೂ ಮುಗಿದುಹೋಗಿ ಶಿವ(ರೂಪವಾದ) ಅದ್ವೈತವೊಂದೇ ಸಿದ್ಧವಾಗಿರುವಲ್ಲಿ ಯಾವದಕ್ಕೆ ವಿರೋಧವನ್ನು ಶಂಕಿಸಲಾದೀತು[1] ? ಆದ್ದರಿಂದಲೇ (ಅಲ್ಲಿ) ಅವಿರೋಧಿತ್ವ(ವೆಂಬುದೂ) ಇಲ್ಲ[2].

## ಪೂರ್ವಪಕ್ಷದಲ್ಲಿ ಶ್ರುತಿಯುಕ್ತಿವಿರೋಧ, ಸಿದ್ಧಾಂತಹಾನಿ

(ಭಾಷ್ಯ)

೩೫೮ ಅಥಾಽಪಿ ಅಭ್ಯುಪಗಮ್ಯ ಬ್ರೂಮಃ। ದ್ವೈತಾದ್ವೈತಾತ್ಮಕತ್ವೇಽಪಿ ಶಾಸ್ತ್ರವಿರೋಧಸ್ಯ ತುಲ್ಯತ್ವಾತ್[3] । ಯದಾಽಪಿ ಸಮುದ್ರಾದಿವತ್ ದ್ವೈತಾದ್ವೈತಾತ್ಮಕಮ್ ಏಕಂ ಬ್ರಹ್ಮಾಽಭ್ಯುಪಗಚ್ಛಾಮಃ, ನಾಽನ್ಯದ್ ವಸ್ತ್ವನ್ತರಂ ತದಾಽಪಿ ಭವದುಕ್ತಾತ್ ಶಾಸ್ತ್ರವಿರೋಧಾತ್ ನ ಮುಚ್ಯಾಮಹೇ। ಕಥಮ್ ? ಏಕಂ ಹಿ ಪರಂ ಬ್ರಹ್ಮ ದ್ವೈತಾದ್ವೈತಾತ್ಮಕಂ ತತ್ ಶೋಕಮೋಹಾದ್ಯತೀತತ್ವಾತ್ ಉಪದೇಶಂ ನ ಕಾಙ್ಕ್ಷತಿ। ನ ಚ ಉಪದೇಷ್ಟಾ ಅನ್ಯೋ ಬ್ರಹ್ಮಣಃ। ದ್ವೈತಾದ್ವೈತರೂಪಸ್ಯ ಬ್ರಹ್ಮಣ ಏಕಸ್ಯೈವ ಅಭ್ಯುಪಗಮಾತ್ । ಅಥ ದ್ವೈತವಿಷಯಸ್ಯ ಅನೇಕತ್ವಾತ್ ಅನ್ಯೋನ್ಯೋಪದೇಶಃ, ಸ ಬ್ರಹ್ಮವಿಷಯ ಉಪದೇಶಃ ಇತಿ ಚೇತ್। ತದಾ ದ್ವೈತಾದ್ವೈತಾತ್ಮಕಮೇಕಮೇವ ಬ್ರಹ್ಮ ನಾನ್ಯದಸ್ತಿ ಇತಿ ವಿರುಧ್ಯತೇ। ಯಸ್ಮಿನ್ ದ್ವೈತವಿಷಯೇ ಅನ್ಯೋನ್ಯೋಪದೇಶಃ ಸೋಽನ್ಯಃ । ದ್ವೈತಂ ಚ ಅನ್ಯದೇವ ಇತಿ ಸಮ್ಪ್ರದೃಷ್ಟಾನ್ತೋ ವಿರುದ್ಧಃ। ನ ಚ ಸಮುದ್ರೋದಕೈಕತ್ವವದ್ ವಿಜ್ಞಾನೈಕತ್ವೇ ಬ್ರಹ್ಮಣೋಽನ್ಯತ್ರ ಉಪದೇಶಗ್ರಹಣಾದಿಕಲ್ಪನಾ ಸಂಭವತಿ । ನ ಹಿ ಹಸ್ತಾದಿದ್ವೈತಾದ್ವೈತಾತ್ಮಕೇ ದೇವದತ್ತೇ ವಾಕ್ಕರ್ಣಯೋರ್ದೇವದತ್ತೈಕದೇಶಭೂತಯೋರ್ವಾಕ್ ಉಪದೇಷ್ಟ್ರೀ ಕರ್ಣಃ ಕೇವಲಃ ಉಪದೇಶಸ್ಯ ಗ್ರಹೀತಾ, ದೇವದತ್ತಸ್ತು ನೋಪದೇಷ್ಟಾ, ನಾಽಪಿ ಉಪದೇಶಸ್ಯ ಗ್ರಹೀತಾ ಇತಿ ಕಲ್ಪಯಿತುಂ ಶಕ್ಯತೇ । ಸಮುದ್ರೈಕೋದಕಾತ್ಮತ್ವವತ್ ಏಕವಿಜ್ಞಾನವತ್ತ್ವಾತ್ ದೇವದತ್ತಸ್ಯ। ತಸ್ಮಾತ್ ಶ್ರುತಿನ್ಯಾಯವಿರೋಧಶ್ಚ, ಅಭಿಪ್ರೇತಾರ್ಥಾಸಿದ್ಧಿಶ್ಚ ಏವಂ ಕಲ್ಪನಾಯಾಂ ಸ್ಯಾತ್। ತಸ್ಮಾತ್, ಯಥಾವ್ಯಾಖ್ಯಾತ ಏವಾಸ್ಮಾಭಿಃ 'ಪೂರ್ಣಮದಃ' ಇತ್ಯಸ್ಯ ಮನ್ತ್ರಸ್ಯಾರ್ಥಃ ॥

---

1. ಏಕೆಂದರೆ ವಿರೋಧವೆಂಬುದೆಲ್ಲ ದ್ವೈತದಲ್ಲಿಯೇ.

2. ಏಕೆಂದರೆ ವಿರೋಧವಿರುವಲ್ಲಿಯೇ ಅವಿರೋಧವೆಂಬುದೂ ಇರುತ್ತದೆ.

3. 'ತುಲ್ಯತ್ವಮ್' ಎಂದಿರಬೇಕಾಗಿತ್ತೆಂದು ತೋರುತ್ತದೆ; ಅನುವಾದದ ಟಿಪ್ಪಣಿಯನ್ನು ನೋಡಿ.

(ಭಾಷ್ಯಾರ್ಥ)

ಹೀಗಿದ್ದರೂ ಒಪ್ಪಿ (ಹೀಗೆಂದು) ಹೇಳುತ್ತೇವೆ: (ವಸ್ತುವು) ದ್ವೈತಾದ್ವೈತಾತ್ಮಕವಾಗಿದ್ದರೂ ಶಾಸ್ತ್ರವಿರೋಧವು ಸಮಾನವಾಗಿರುವದರಿಂದ[1] (ನಿಮ್ಮ ಅಂಗೀಕಾರವು ವ್ಯರ್ಥ[2]. ಇದರ ವಿವರ): ಸಮುದ್ರಾದಿಗಳಂತೆ ಬ್ರಹ್ಮವು ದ್ವೈತಾದ್ವೈತಾತ್ಮಕವಾಗಿ ಒಂದೇ, ಮತ್ತೊಂದು ವಸ್ತ್ವಂತರವಿಲ್ಲ (ಎಂದು) ಯಾವಾಗ ಒಪ್ಪುತ್ತೇವೋ ಆಗಲೂ ನೀನು ಹೇಳಿರುವ ಶಾಸ್ತ್ರವಿರೋಧದಿಂದ ನಾವು ಮುಕ್ತರಾಗುವದೇ ಇಲ್ಲ[3]. ಹೇಗೆಂದರೆ ದ್ವೈತಾದ್ವೈತಾತ್ಮಕವಾದ ಪರಬ್ರಹ್ಮವು ಒಂದೇ ಅಷ್ಟೆ? ಅದು ಶೋಕಮೋಹಾದಿಗಳನ್ನು ಮೀರಿರುವದರಿಂದ ಉಪದೇಶವನ್ನು ಬಯಸುವಹಾಗಿಲ್ಲ. ಉಪದೇಶಮಾಡುವವನೂ ಬ್ರಹ್ಮಕ್ಕಿಂತ ಬೇರೆಯಲ್ಲ; ಏಕೆಂದರೆ ದ್ವೈತಾದ್ವೈತರೂಪವಾದ ಬ್ರಹ್ಮವು ಒಂದೇ ಎಂದು ಅಂಗೀಕರಿಸಿರುತ್ತೀರಿ[4].

ಇನ್ನು ಹೀಗಲ್ಲದೆ ದ್ವೈತದ ವಿಷಯವು ಅನೇಕವಾಗಿರುವದರಿಂದ ಒಬ್ಬರಿಗೊಬ್ಬರ ಉಪದೇಶ(ವಾಗಬಹುದು), ಬ್ರಹ್ಮವಿಷಯಕ್ಕೆ ಉಪದೇಶವಿಲ್ಲ ಎನ್ನುವದಾದರೆ, ಆಗ ದ್ವೈತಾದ್ವೈತಾತ್ಮಕವಾದ ಬ್ರಹ್ಮವು ಒಂದೇ-(ಪರಮಾರ್ಥವು), ಮತ್ತೊಂದಿಲ್ಲ- ಎಂಬಿದಕ್ಕೆ ವಿರೋಧವಾಗುವದು. ಯಾವ ದ್ವೈತವಿಷಯದಲ್ಲಿ ಒಬ್ಬರಿಗೊಬ್ಬರ ಉಪದೇಶ(ವಾಗಬಹುದೋ) ಆ (ಉಪದೇಶವು) ಬೇರೆ, ದ್ವೈತವೂ ಬೇರೆಯೇ ಆಗಿರುವದರಿಂದ ಸಮುದ್ರದೃಷ್ಟಾಂತಕ್ಕೆ ವಿರೋಧವಾಗುವದು. ಸಮುದ್ರದ ನೀರು ಒಂದೇ ಆಗಿರುವಂತೆ, ವಿಜ್ಞಾನವು ಒಂದೇ ಆಗಿರುವಲ್ಲಿ[5] ಬ್ರಹ್ಮಕ್ಕಿಂತ ಬೇರೊಂದು ಕಡೆಯಲ್ಲಿ ಉಪದೇಶ, ಗ್ರಹಣ-

---

1. ಅದ್ವೈತದಲ್ಲಿ ಯಾವ ಶಾಸ್ತ್ರವಿರೋಧವೂ ಇಲ್ಲ ಎಂದು ನಾವು ತೋರಿಸಿದ್ದರೂ ಅದರಲ್ಲಿ ದೋಷವಿದೆ ಎಂದು ಒಪ್ಪಿಯೇ ನಿಮ್ಮ ಮತದಲ್ಲಿ ದೋಷವನ್ನು ತೋರಿಸುತ್ತೇವೆ ಎಂದರ್ಥ.

2. 'ತುಲ್ಯತ್ವಮ್' -ಎಂದಿಷ್ಟೇ ಪಾಠವಿದ್ದರೆ ಸಮಾನವಾಗಿರುತ್ತದೆ ಎಂದು ಸರಳವಾಗಿ ಅನ್ವಯವಾಗುತ್ತದೆ. ಆ॥ ಟೀ॥ ಯಲ್ಲಿರುವಂತೆ ಪಾಠವನ್ನೊಪ್ಪಿ ಮೇಲೆ ಕಂಡಂತೆ ಅಧ್ಯಾಹಾರಮಾಡಿಕೊಂಡು ಕನ್ನಡಿಸಿದ್ದಾಗಿದೆ.

3. ಆದ್ದರಿಂದ ಇಬ್ಬರಿಗೂ ಸಮಾನವಾಗಿರುವ ದೋಷವನ್ನು ನಮ್ಮೊಬ್ಬರ ಮತದಮೇಲೆ ಆರೋಪಿಸುವದು ಯುಕ್ತವಲ್ಲ; ನಿಜವಾಗಿ ನೋಡಿದರೆ ನಮ್ಮ ಮತದಲ್ಲಿ ದೋಷವೇ ಇಲ್ಲವೆಂದು ತೋರಿಸಿರುತ್ತೇವೆ.

4. ಬ್ರಹ್ಮಕ್ಕಿಂತ ಬೇರೊಬ್ಬನು ಉಪದೇಶ್ಯನಿದ್ದರಲ್ಲವೆ ಶಾಸ್ತ್ರಕ್ಕೆ ಪ್ರಾಮಾಣ್ಯ? -ಎಂಬ ಶಂಕೆಯನ್ನು ಅದ್ವೈತದಲ್ಲಿ ಮಾಡುವಂತೆ ದ್ವೈತಾದ್ವೈತದಲ್ಲಿಯೂ ಮಾಡಬಹುದು ಎಂದು ಅಭಿಪ್ರಾಯ.

5 ನೊರೆ, ಗುಳ್ಳೆ -ಮುಂತಾದ ದ್ವೈತವಿದ್ದರೂ ನೀರಿನ ರೂಪದಿಂದ ಒಂದೇ ಆಗಿರುವಂತೆ ಬ್ರಹ್ಮದಲ್ಲಿ ಜೀವಜಗದ್ರೂಪವಾದ ದ್ವೈತವಿದ್ದರೂ ಬ್ರಹ್ಮದ ಜ್ಞಾನವು ಒಂದೇ ಆಗಿರುವಲ್ಲಿ ಎಂದರ್ಥ.

ಮುಂತಾದವುಗಳನ್ನು ಕಲ್ಪಿಸುವದು ಆಗುವದಿಲ್ಲ[1]. ಕೈ ಮುಂತಾದ ದ್ವೈತಾ ದ್ವೈತರೂಪನಾಗಿರುವ ದೇವದತ್ತನಲ್ಲಿ,[2] ದೇವದತ್ತನ ಒಂದೊಂದು ಭಾಗವಾಗಿ ರುವ ವಾಕ್ಕು, ಕರ್ಣ- ಇವುಗಳಲ್ಲಿ ವಾಕ್ಕು ಉಪದೇಶಮಾಡುವದು, ಕಿವಿ ಯೊಂದೇ ಉಪದೇಶವನ್ನು ಗ್ರಹಣಮಾಡುವದು, ದೇವದತ್ತನಾದರೋ ಉಪ ದೇಶಕನೂ ಅಲ್ಲ, ಉಪದೇಶವನ್ನು ಗ್ರಹಿಸುವವನೂ ಅಲ್ಲ- ಎಂದು ಕಲ್ಪಿಸು ವದಕ್ಕೆ ಆಗಲೇ ಆರದು, ಏಕೆಂದರೆ ಸಮುದ್ರವು ಒಂದೇ ನೀರಿನ ಸ್ವರೂಪ ವಾಗಿರುವಂತೆ, ದೇವದತ್ತನೂ ಒಂದೇ ವಿಜ್ಞಾನವುಳ್ಳವನಾಗಿರುತ್ತಾನೆ[3]. ಆದ್ದ ರಿಂದ ಹೀಗೆಂದು ಕಲ್ಪಿಸುವಲ್ಲಿ ಶ್ರುತಿನ್ಯಾಯವಿರೋಧವೂ (ನಿಮಗೆ) ಇಷ್ಟವಾದ (ಶಾಸ್ತ್ರಪ್ರಾಮಾಣ್ಯವೆಂಬ) ಅರ್ಥವು ಸಿದ್ಧಿಸದಿರುವದೂ ಆದೀತು[4] ! ಆದ್ದರಿಂದ 'ಪೂರ್ಣಮದಃ' (ಅದು ಪೂರ್ಣವು) ಎಂಬ ಮಂತ್ರಕ್ಕೆ ನಾವು ವಿವರಿಸಿರು ವಂತೆಯೇ ಅರ್ಥವು.

## ಓಂಕಾರದ ಮೂಲಕ ಬ್ರಹ್ಮವನ್ನು ಉಪಾಸನೆಮಾಡಬೇಕು

(ಭಾಷ್ಯ)

೩೫೫. ಓಂ ಖಂ ಬ್ರಹ್ಮ ಇತಿ ಮನ್ತ್ರಃ। ಅಯಂ ಚ ಅನ್ಯತ್ರ ಅವಿನಿ ಯುಕ್ತಃ ಇಹ ಬ್ರಾಹ್ಮಣೇನ ಧ್ಯಾನಕರ್ಮಣಿ ವಿನಿಯುಜ್ಯತೇ। ಅತ್ರ ಚ ಬ್ರಹ್ಮ ಇತಿ ವಿಶೇಷ್ಯಾಭಿಧಾನಮ್, ಖಮ್ ಇತಿ ವಿಶೇಷಣಮ್। ವಿಶೇಷಣವಿಶೇಷ್ಯ ಯೋಶ್ಚ ಸಾಮಾನಾಧಿಕರಣ್ಯೇನ ನಿರ್ದೇಶಃ ನೀಲೋತ್ಪಲವತ್ ಖಂ ಬ್ರಹ್ಮ ಇತಿ। ಬ್ರಹ್ಮಶಬ್ದೋ ಬೃಹದ್ವಸ್ತುಮಾತ್ರಾಸ್ಪದೋಽವಿಶೇಷಿತಃ। ಅತಃ

---

1. ಏಕೆಂದರೆ ಉಪದೇಶ, ಗ್ರಹಣ - ಇವೆಲ್ಲ ಜ್ಞಾನಕ್ಕೆ ಸಂಬಂಧಪಟ್ಟವುಗಳು ; ಬರಿಯ ದ್ವೈತಕ್ಕಲ್ಲ.

2. ಕೈ, ಕಾಲು, ಹೊಟ್ಟೆ, ತಲೆ, ತೋಳು - ಮುಂತಾದವುಗಳ ರೂಪದಿಂದ ದ್ವೈತ; ಶರೀರರೂಪದಿಂದ ಅದ್ವೈತ - ಹೀಗಿರುವ ದೇವದತ್ತನಲ್ಲಿ.

3. ಹೀಗೆಯೇ ಬ್ರಹ್ಮದಲ್ಲಿಯೂ ದ್ವೈತವಿದ್ದರೂ ಬ್ರಹ್ಮದ ಜ್ಞಾನವು ಒಂದೇ ಆಗಿರುವದರಿಂದ ದ್ವೈತದಲ್ಲಿ ಉಪದೇಶಾದಿಗಳಿವೆ, ಬ್ರಹ್ಮದಲ್ಲಿಲ್ಲ ಎನ್ನುವದಕ್ಕೆ ಬರುವ ದಿಲ್ಲ ; ಏಕೆಂದರೆ ಬ್ರಹ್ಮವೇ ದ್ವೈತರೂಪವಾಗಿದೆ ದ್ವೈತವು ಬ್ರಹ್ಮಕ್ಕಿಂತ ಬೇರೆಯಲ್ಲ.

4. ವಸ್ತುವಿಗೆ ವಾಕ್ಯದಲ್ಲಿ ಉತ್ಸರ್ಗಾಪವಾದವಾಗಲಿ ವಿಕಲ್ಪವಾಗಲಿ ಸಂಭವಿಸದೆ ಇರುವದರಿಂದ ಶ್ರುತ್ಯರ್ಥವು ದ್ವೈತಾದ್ವೈತವಾಗಲಾರದು. ಶ್ರುತಿಯಲ್ಲಿ ದ್ವೈತಾದ್ವೈತವನ್ನು ಧ್ಯಾನಿಸಬೇಕೆಂದು ಹೇಳದೆ ಏಕರೂಪವಾಗಿಯೇ ಕಾಣಬೇಕೆಂದು ಹೇಳಿದೆಯಾದ್ದರಿಂದಲೂ ಅದು ಶ್ರುತ್ಯರ್ಥವಾಗಲಾರದು ; ಉಪದೇಶಕ, ಉಪದೇಶ್ಯ- ಎಂಬ ಭೇದವು ಸಿದ್ಧವಾಗು ವದಿಲ್ಲವಾದ್ದರಿಂದಲೂ ಇದು ಶ್ರುತ್ಯರ್ಥವಲ್ಲ. ಬ್ರಹ್ಮವು ಸಾವಯವವಾದರೆ ಆತ್ಮನು ಅನಿತ್ಯನಾಗುವದರಿಂದ ಇದು ನ್ಯಾಯವಿರುದ್ಧವೂ ಆಗುವದು. ದ್ವೈತವು ಅವಿದ್ಯಾಕಲ್ಪಿತ ವೆಂದರೆ ಈ ಯಾವ ದೋಷವೂ ಇಲ್ಲ.

ವಿಶೇಷ್ಯತೇ 'ಖಂ ಬ್ರಹ್ಮ' ಇತಿ। ಯತ್ ತತ್ ಖಂ ಬ್ರಹ್ಮ. ತತ್ ಓಂಶಬ್ದವಾಚ್ಯಮ್, ಓಂಶಬ್ದಸ್ವರೂಪಮೇವ ವಾ। ಉಭಯಥಾಽಪಿ ಸಾಮಾನಾಧಿಕರಣ್ಯಮ್ ಅವಿರುದ್ಧಮ್। ಇಹ ಚ ಬ್ರಹ್ಮೋಪಾಸನಸಾಧನತ್ವಾರ್ಥಮ್ ಓಂಶಬ್ದಃ ಪ್ರಯುಕ್ತಃ। ತಥಾ ಚ ಶ್ರುತ್ಯನ್ತರಾತ್, "ಏತದಾಲಮ್ಬನಂ ಶ್ರೇಷ್ಠಮೇತದಾಲಮ್ಬನಂ ಪರಮ್" (ಕ. ೧-೨-೧೭), "ಓಮಿತ್ಯಾತ್ಮಾನಂ ಯುಞ್ಜೀತ" (ತೈ. ನಾ ೨೪-೧), "ಓಮಿತ್ಯೇತೇನೈವಾಕ್ಷರೇಣ ಪರಂ ಪುರುಷಮಭಿಧ್ಯಾಯೀತ" (ಪ್ರ. ೫-೫), "ಓಮಿತ್ಯೇವಂ ಧ್ಯಾಯಥ ಆತ್ಮಾನಮ್" (ಮುಂ. ೨-೨-೬) ಇತ್ಯಾದೇಃ[1]। ಅನ್ಯಾರ್ಥಾಸಂಭವಾಚ್ಚ ಉಪದೇಶಸ್ಯ। ಯಥಾ ಅನ್ಯತ್ರ "ಓಮಿತಿ ಶಂಸತ್ಯೋಮಿತ್ಯುದ್ಗಾಯತಿ" (ಛಾಂ. ೧-೧-೯) ಇತ್ಯೇವಮಾದೌ ಸ್ವಾಧ್ಯಾಯಾರಮ್ಭಾಪವರ್ಗಯೋಶ್ಚ ಓಂಕಾರಪ್ರಯೋಗೋ ವಿನಿಯೋಗಾತ್ ಅವಗಮ್ಯತೇ, ನ ಚ ತಥಾ ಅರ್ಥಾನ್ತರಮ್ ಇಹ ಅವಗಮ್ಯತೇ। ತಸ್ಮಾತ್ ಧ್ಯಾನಸಾಧನತ್ವೇನೈವ ಇಹ ಓಂಕಾರಶಬ್ದಸ್ಯ ಉಪದೇಶಃ॥

(ಭಾಷ್ಯಾರ್ಥ)

'ಓಂ ಖಂ ಬ್ರಹ್ಮ'- ಎಂಬುದು ಮಂತ್ರವು. ಈ (ಮಂತ್ರ)ವು ಮತ್ತೊಂದರಲ್ಲಿ ವಿನಿಯುಕ್ತವಾಗಿಲ್ಲ[2], ಇಲ್ಲಿ ಬ್ರಾಹ್ಮಣದಿಂದ ಧ್ಯಾನಕರ್ಮದಲ್ಲಿ ವಿನಿಯುಕ್ತವಾಗಿರುತ್ತದೆ[3]. ಇಲ್ಲಿ ಬ್ರಹ್ಮವು ಎಂಬುದು ವಿಶೇಷ್ಯವನ್ನು ತಿಳಿಸುತ್ತದೆ; ಖಮ್ ಎಂಬುದು ವಿಶೇಷಣವು. ಖಂ ಬ್ರಹ್ಮ ಎಂದು 'ನೀಲವಾದ ಉತ್ಪಲವು' ಎಂಬಂತೆ ವಿಶೇಷಣವಿಶೇಷ್ಯಗಳನ್ನು ಸಾಮಾನಾಧಿಕರಣ್ಯದಿಂದ ತಿಳಿಸಿರುತ್ತದೆ[4]. (ಯಾವ) ವಿಶೇಷಣವನ್ನೂ ಕೊಡದೆ ಬರುವ ಬ್ರಹ್ಮಶಬ್ದವು ದೊಡ್ಡದಾದ ವಸ್ತುವಿಷ್ಟನ್ನೇ ಹೇಳುತ್ತದೆ; ಆದ್ದರಿಂದ ಖಂ ಬ್ರಹ್ಮ ಎಂದು ಹೇಳಿದೆ. ಈ ಖಂ ಬ್ರಹ್ಮವೆಂಬುದಿದೆಯಲ್ಲ ಅದು ಓಂಶಬ್ದವಾಚ್ಯವು, ಅಥವಾ ಓಂ

---

1. ಇತ್ಯಾದಿಃ ಎಂಬ ಪಾಠವೂ ಇದೆ; ಆಗ ಹಿಂದೆ ಶ್ರುತ್ಯನ್ತರಾತ್ ಎಂದಿರುವದು ಶ್ರುತ್ಯನ್ತರಮ್ ಎಂದಿರಬೇಕಾಗುವದು; ಆದರೆ ಪಂಚಮೀಪಾಠವೇ ಮೇಲು.

2. ಏಕೆಂದರೆ ಅದನ್ನು ಯಾವದಾದರೊಂದು ಕರ್ಮಕ್ಕೆ ಉಪಯೋಗಿಸಬೇಕೆಂದು ಬ್ರಾಹ್ಮಣದಲ್ಲಿ ವಿನಿಯೋಗಿಸಿರುವದು ಕಂಡುಬಂದಿಲ್ಲ; ಶಿಷ್ಟಾಚಾರದಲ್ಲಿಯೂ ಇಲ್ಲ.

3. ಈ ಉಪಾಸನೆಯಿಂದ ಕ್ರಮಮುಕ್ತಿಯೂ ಆಗಬಹುದು; ಜ್ಞಾನಕ್ಕೆ ಇದು ಅಂತರಂಗಸಾಧನವೂ ಆಗಬಹುದು.

4. ಇದರಿಂದ ವ್ಯಾಪಕವಾದ ಬ್ರಹ್ಮವು ಎಂಬರ್ಥವು ಹೊರಡುತ್ತದೆ; ಬರಿಯ ಆಕಾಶ ಅಥವಾ ಬರಿಯ ದೊಡ್ಡದು- ಎಂಬರ್ಥವು ಹೋಗುತ್ತದೆ. ಇದನ್ನೇ ಮುಂದಿನ ವಾಕ್ಯದಲ್ಲಿ ವಿವರಿಸಿದೆ.

ಶಬ್ದದ ಸ್ವರೂಪವೇ ಆಗಿರುತ್ತದೆ[1] (ಎಂದು ಮಂತ್ರದ ಅರ್ಥವು). (ಈ) ಎರಡು ಒಗೆಯಲ್ಲಿಯೂ (ಖಂ ಬ್ರಹ್ಮ) ಎಂದು ಸಾಮಾನಾಧಿಕರಣ್ಯ(ದಿಂದ ಹೇಳಿರುವದು) ಅವಿರುದ್ಧವಾಗಿರುತ್ತದೆ.

ಮತ್ತು ಇಲ್ಲಿ ಬ್ರಹ್ಮೋಪಾಸನೆಯ ಸಾಧನವಾಗಿರಲೆಂದು ಓಂಶಬ್ದವನ್ನು ಪ್ರಯೋಗಿಸಿರುತ್ತದೆ. ಏಕೆಂದರೆ "ಈ ಆಲಂಬನವೇ ಶ್ರೇಷ್ಠವಾದದ್ದು, ಈ ಆಲಂಬನವೇ ಹೆಚ್ಚಿನದು" (ಕ. ೧-೨-೧೭), "ಓಮ್! ಎಂದು ಆತ್ಮನನ್ನು ಧ್ಯಾನಿಸಬೇಕು" (ನಾ. ೭೯), "ಓಮ್ ಎಂಬ ಇದೇ ಅಕ್ಷರದಿಂದ (ಯಾವನು) ಪರಮಪುರುಷನನ್ನು ಅಭಿಧ್ಯಾನಮಾಡುವನೋ" (ಪ್ರ. ೫-೫), "ಆತ್ಮನನ್ನು ಓಮ್ ಎಂದು ಧ್ಯಾನಮಾಡಿರಿ!"[2] (ಮುಂ. ೨-೨-೬) ಮುಂತಾದ ಶ್ರುತ್ಯಂತರ ವಿದೆ. ಮತ್ತೂ ಏಕೆಂದರೆ (ಈ ಮಂತ್ರದ) ಉಪದೇಶಕ್ಕೆ ಮತ್ತೆ ಯಾವ ಪ್ರಯೋಜನವೂ ಸಂಭವಿಸುವದೂ ಇಲ್ಲ[3]. (ಇದರ ವಿವರ): "ಓಮ್ ಎಂದು ಶಂಸನಮಾಡುತ್ತಾನೆ, ಓಮ್! ಎಂದು ಉದ್ಗಾನಮಾಡುತ್ತಾನೆ" (ಛಾಂ. ೧-೧-೯) -ಮುಂತಾದ (ಕಡೆ)ಯಲ್ಲಿಯೂ ಅಧ್ಯಯನದ ಆರಂಭ, ಕೊನೆ-(ಇವು)ಗಳಲ್ಲಿಯೂ ಪ್ರಯೋಗಮಾಡಬೇಕೆಂಬುದು ಹೇಗೆ ವಿನಿಯೋಗದಿಂದ ಗೊತ್ತಾಗುತ್ತದೆಯೋ ಹಾಗೆ[4] ಇಲ್ಲಿ ಮತ್ತೊಂದು ಪ್ರಯೋಜನವು ನಿಶ್ಚಿತ ವಾಗಿರುವದಿಲ್ಲ. ಆದ್ದರಿಂದ ಧ್ಯಾನಸಾಧನವಾಗಿಯೇ ಇಲ್ಲಿ ಓಂಕಾರಶಬ್ದವನ್ನು ಉಪದೇಶಿಸಿದೆ (ಎಂದಾಯಿತು).

## ಓಂಶಬ್ದದಲ್ಲಿರುವ ವಿಶೇಷ

(ಭಾಷ್ಯ)

೩೫೬. ಯದ್ಯಪಿ ಬ್ರಹ್ಮಾತ್ಮಾದಿಶಬ್ದಾಃ ಬ್ರಹ್ಮಣೋ ವಾಚಕಾಃ ತಥಾಽಪಿ ಶ್ರುತಿಪ್ರಾಮಾಣ್ಯಾತ್ ಬ್ರಹ್ಮಣೋ ನೇದಿಷ್ಠಮ್ ಅಭಿಧಾನಮ್ ಓಂಕಾರಃ। ಅತ ಏವ ಬ್ರಹ್ಮಪ್ರತಿಪತ್ತೌ ಇದಂ ಪರಂ ಸಾಧನಮ್। ತಚ್ಚ

---

1. ಓಮ್ ಎಂಬುದು ಬ್ರಹ್ಮದ ಪ್ರತೀಕವಾಗಿರುತ್ತದೆ ಎಂದು ಉಪಾಸನೆಮಾಡ ಬೇಕು.

2. ಈ ವಾಕ್ಯದಲ್ಲಿ ಓಮ್ ಎಂಬುದನ್ನು ಭಾವನೆಯ ರೂಪವಾದ ಉಪಾಸನೆಗೆ ವಿಷಯವಾಗಿ ಹೇಳಿಲ್ಲವಾದರೂ ಜ್ಞಾನಕ್ಕಾಗಿ ಓಮ್ ಎಂಬುದನ್ನು ಸಾಧನವಾಗಿ ಹೇಳಿದೆ.

3. ಪ್ರಕೃತಸಂದರ್ಭವು ಉಪಾಸನೆಗೆಂದೇ ಹೊರಟಿರುವದರಿಂದಲೂ ಮತ್ತೊಂದ ರ್ಥವು ವಿನಿಯೋಗದಿಂದ ಗೊತ್ತಾಗದೆ ಇರುವದರಿಂದಲೂ ಈ ಮಂತ್ರವೂ ಹೀಗೆಯೇ ವಿನಿಯುಕ್ತವಾಗಿದೆ ಎಂದು ಗೊತ್ತಾಗುತ್ತದೆ.

4. ಶಂಸನ, ಉದ್ಗಾನ, ವೇದಾಧ್ಯಯನದ ಆದ್ಯಂತಗಳಲ್ಲಿ ಉಚ್ಚಾರ -ಇವಕ್ಕೆ ವಿನಿಯೋಗವನ್ನು ಶ್ರುತಿಯಲ್ಲಿ ಹೇಳಿರುವಂತೆ.

ದ್ವಿಪ್ರಕಾರೇಣ, ಪ್ರತೀಕತ್ವೇನ ಅಭಿಧಾನತ್ವೇನ ಚ। ಪ್ರತೀಕತ್ವೇನ, ಯಥಾ ವಿಷ್ಣ್ವಾದಿಪ್ರತಿಮಾ ಅಭೇದೇನ ಏವಮ್ ಓಂಕಾರೋ ಬ್ರಹ್ಮ ಇತಿ ಪ್ರತಿಪತ್ತವ್ಯಃ। ತಥಾ ಹಿ ಓಂಕಾರಾಲಮ್ಬನಸ್ಯ ಬ್ರಹ್ಮ ಪ್ರಸೀದತಿ। "ಏತದಾಲಮ್ಬನಂ ಶ್ರೇಷ್ಠಮೇತದಾಲಮ್ಬನಂ ಪರಮ್। ಏತದಾಲಮ್ಬನಂ ಜ್ಞಾತ್ವಾ ಬ್ರಹ್ಮಲೋಕೇ ಮಹೀಯತೇ" (ಕ. ೧-೨-೧೭) ಇತಿ ಶ್ರುತೇಃ ॥

(ಭಾಷ್ಯಾರ್ಥ)

ಬ್ರಹ್ಮ, ಆತ್ಮ- ಮುಂತಾದ ಶಬ್ದಗಳೂ ಬ್ರಹ್ಮಕ್ಕೆ ವಾಚಕಗಳೇ ಆಗಿವೆ; ಆದರೂ ಶ್ರುತಿಯ ಪ್ರಾಮಾಣ್ಯದಿಂದ ಬ್ರಹ್ಮಕ್ಕೆ ಓಂಕಾರವು ತೀರ ಹತ್ತಿರದ ಹೆಸರು.[1] ಆದ್ದರಿಂದಲೇ ಬ್ರಹ್ಮಪ್ರಾಪ್ತಿಗೆ ಇದು ಹೆಚ್ಚಿನ ಸಾಧನವು. ಈ (ಓಂಕಾರವು) ಪ್ರತೀಕವಾಗಿ, ಅಭಿಧಾನವಾಗಿ[2] (ಎಂದಿಂತು) ಎರಡು ಪ್ರಕಾರದಿಂದ (ಸಾಧನವಾಗಿರುತ್ತದೆ). ಪ್ರತೀಕವಾಗಿ (ಹೇಗೆ ಸಾಧನವೆಂದರೆ) ಹೇಗೆ ವಿಷ್ಣ್ವಾದಿಪ್ರತಿಮೆಯು ಅಭೇದದಿಂದ (ವಿಷ್ಣ್ವಾದಿಗಳ ಧ್ಯಾನಕ್ಕೆ ಸಾಧನವೋ) ಹಾಗೆ ಓಂಕಾರವು ಬ್ರಹ್ಮವು ಎಂದು (ಅಭಿನ್ನವಾಗಿ) ತಿಳಿಯಬೇಕು. ಹಾಗೆ (ತಿಳಿದರೆ) ಓಂಕಾರವನ್ನು ಆಲಂಬನವಾಗಿ ಮಾಡಿಕೊಂಡ (ಸಾಧಕನಿಗೆ) ಬ್ರಹ್ಮವು ಪ್ರಸನ್ನವಾಗುತ್ತದೆ[3]. "ಈ ಆಲಂಬನವೇ ಶ್ರೇಷ್ಠವು, ಈ ಆಲಂಬನವೇ ಹೆಚ್ಚಿನದು ; ಈ ಆಲಂಬನವನ್ನು ಅರಿತುಕೊಂಡರೆ ಬ್ರಹ್ಮಲೋಕವಲ್ಲಿ ಮಹಿಮಾವಂತನಾಗುವನು" (ಕ. ೧-೨-೧೭) ಎಂಬ ಶ್ರುತಿಯಿಂದ (ಇದು ಸಿದ್ಧವಾಗುತ್ತದೆ).

## ಓಂಕಾರದಲ್ಲಿ ಬ್ರಹ್ಮದೃಷ್ಟಿಯನ್ನು ಮಾಡಬೇಕು

(ಭಾಷ್ಯ)

೩೫೭. ತತ್ರ ಖಮ್ ಇತಿ ಭೌತಿಕೇ ಖೇ ಪ್ರತೀತಿರ್ಮಾಭೂತ್ ಇತ್ಯಾಹ—ಖಂ ಪುರಾಣಮ್। ಚಿರನ್ತನಮ್ ಖಮ್, ಪರಮಾತ್ಮಾಕಾಶಮ್ ಇತ್ಯರ್ಥಃ। ಯತ್ತತ್ ಪರಮಾತ್ಮಾಕಾಶಂ ಪುರಾಣಂ ಖಂ ತತ್ ಚಕ್ಷುರಾದ್ಯವಿಷಯತ್ವಾತ್ ನಿರಾಲಮ್ಬನಮ್ ಅಶಕ್ಯಂ ಗ್ರಹೀತುಮ್ ಇತಿ ಶ್ರದ್ಧಾಭಕ್ತಿ

---

1. ಛಾಂ. ಭಾ. ೧-೧-೧ (ಭಾ. ಭಾ. ೭).

2. ಛಾಂ. ಭಾ. ೧-೧-೧ (ಭಾ. ಭಾ. ೭), ಗೀ. ಭಾ. ೮-೧೩ (ಭಾ. ಭಾ. ೫೦೮); ಪ್ರ. ಭಾ. ೫-೨ (ಭಾ. ಭಾ. ೮೦) ; ಕ. ಭಾ. ೧-೨-೧೫, (ಭಾ. ಭಾ. ೬೭), ೧-೨-೧೬ (ಭಾ. ಭಾ. ೬೮) ; ತೈ. ಭಾ. ೧-೪ (ಭಾ. ಭಾ. ೨೪), ೧-೮ (ಭಾ. ಭಾ. ೫೨)- ಇವನ್ನು ನೋಡಿ.

3. ಶಬ್ದಮಾತ್ರವಾದ ಓಂಕಾರವು ಹೇಗೆ ಫಲವನ್ನು ಕೊಟ್ಟೀತು ?- ಎಂಬ ಶಂಕೆಗೆ ಸಮಾಧಾನವಿದು.

ಭ್ಯಾಂ ಭಾವವಿಶೇಷೇಣ ಚ ಓಂಕಾರೇ ಆವೇಶಯತಿ । ಯಥಾ ವಿಷ್ಣ್ವಙ್ಗಾಙ್ಕಿತಾಯಾಂ ಶಿಲಾದಿಪ್ರತಿಮಾಯಾಂ ವಿಷ್ಣುಂ ಲೋಕೇ ಏವಮ್ । ವಾಯುರಂ ಖಮ್ । ವಾಯುಃ ಅಸ್ಮಿನ್ ವಿದ್ಯತ ಇತಿ ವಾಯುರಂ ಖಮ್, ಖಮಾತ್ರಂ ಖಮ್ ಇತ್ಯುಚ್ಯತೇ ನ ಪುರಾಣಂ ಖಮ್ ಇತ್ಯೇವಮ್ ಆಹ ಸ್ಮ । ಕೋಽಸೌ ? ಕೌರವ್ಯಾಯಣೀಪುತ್ರಃ । ವಾಯುರೇ ಹಿ ಖೇ ಮುಖ್ಯಃ ಖಶಬ್ದವ್ಯವಹಾರಃ ತಸ್ಮಾತ್ ಮುಖ್ಯೇ ಸಂಪ್ರತ್ಯಯೋ ಯುಕ್ತಃ ಇತಿ ಮನ್ಯತೇ । ತತ್ರ ಯದಿ ಪುರಾಣಂ ಖಂ ಬ್ರಹ್ಮ ನಿರುಪಾಧಿಸ್ವರೂಪಮ್, ಯದಿ ವಾ ವಾಯುರಂ ಖಂ ಸೋಪಾಧಿಕಂ ಬ್ರಹ್ಮ, ಸರ್ವಥಾಽಪಿ ಓಂಕಾರಃ ಪ್ರತೀಕತ್ವೇನೈವ ಪ್ರತಿಮಾವತ್ ಸಾಧನತ್ವಂ ಪ್ರತಿಪದ್ಯತೇ । "ಏತದ್ವೈ ಸತ್ಯಕಾಮ ಪರಂ ಚಾಪರಂ ಚ ಬ್ರಹ್ಮ ಯದೋಂಕಾರಃ" (ಪ್ರ. ೫-೨) ಇತಿ ಶ್ರುತ್ಯಂತರಾತ್ । ಕೇವಲಂ ಖಶಬ್ದಾರ್ಥೇ ವಿಪ್ರತಿಪತ್ತಿಃ ॥

(ಭಾಷ್ಯಾರ್ಥ)

ಇಲ್ಲಿ ಖಂ ಎಂದು ಭೌತಿಕವಾದ ಖದಲ್ಲಿ ಅರಿವು ಆಗಬಾರದೂ ಎಂದು[1] (ಶ್ರುತಿ) ಹೇಳುತ್ತದೆ. ಪುರಾಣವಾದ ಖಮ್ ಚಿರಕಾಲದ ಖವು, ಪರಮಾತ್ಮಾಕಾಶವು[2] ಎಂದರ್ಥ. **ಪುರಾಣವಾದ ಖ ಎಂಬ ಪರಮಾತ್ಮಾಕಾಶವಿದೆಯಲ್ಲ, ಅದು ಚಕ್ಷುರಾದಿಗಳಿಗೆ ವಿಷಯವಲ್ಲವಾಗಿ ಯಾವ ಆಶ್ರಯವೂ ಇಲ್ಲದೆ ಗ್ರಹಿಸುವದಕ್ಕೆ ಅಶಕ್ಯವಾದ್ದರಿಂದ ಶ್ರದ್ಧಾಭಕ್ತಿಗಳಿಂದಲೂ ಒಂದಾನೊಂದು ಭಾವದಿಂದಲೂ[3] (ಅದನ್ನು) ಪ್ರವೇಶಮಾಡಿಸುತ್ತದೆ[4] ;** ಹೇಗೆ ವಿಷ್ಣುವಿನ ಚಿಹ್ನೆಯಿಂದ ಗುರುತುಮಾಡಿರುವ ಕಲ್ಲಿನ ಪ್ರತಿಮೆಯೇ ಮುಂತಾದದ್ದರಲ್ಲಿ ವಿಷ್ಣುವನ್ನು (ಭಾವವಿಶೇಷದಿಂದ) ಲೋಕದಲ್ಲಿ (ಪ್ರವೇಶಮಾಡಿಸುತ್ತಾರೋ) ಹಾಗೆ.

---

1. ಪಂಚಭೂತಗಳಲ್ಲಿ ಒಂದಾದ ಆಕಾಶವನ್ನೇ ಓಂಕಾರವೆಂದು ಉಪಾಸನೆ ಮಾಡಬೇಕೆಂಬ ಬುದ್ಧಿಯಾಗಬಾರದೆಂದು.

2. ಪರಮಾತ್ಮನಿಗೂ ಆಕಾಶವೆಂಬ ಹೆಸರುಂಟು. ಸೂ. ಭಾ. ೧-೧-೨೨ (ಭಾ. ಭಾ. ೧೨೦), ೧-೩-೪೧ (ಭಾ. ಭಾ. ೩೨೫)- ಇವನ್ನು ನೋಡಿ. ಪುರಾಣಮ್ ಎಂಬ ವಿಶೇಷಣದಿಂದ ಆಕಾಶಕ್ಕೂ ಕಾರಣವಾದ ಆತ್ಮಾಕಾಶವನ್ನೇ ಗ್ರಹಿಸಬೇಕೆಂದಾಗುತ್ತದೆ ಎಂದು ಭಾವ.

3. ಪ್ರ. ಭಾ. ೫-೧ರಲ್ಲಿ ಅಭಿಧ್ಯಾಯೀತ ಎಂಬುದರ ವ್ಯಾಖ್ಯಾನದಲ್ಲಿ (ಭಾ. ಭಾ. ೭೯) ಕೊಟ್ಟಿರುವ ಸತ್ಯಬ್ರಹ್ಮಚರ್ಯಾದಿಗಳನ್ನೂ ಇಲ್ಲಿ ಸೇರಿಸಿಕೊಳ್ಳಬೇಕು; ಭಾವವಿಶೇಷ, ಇವನೇ ಪರಮಾತ್ಮನು ಎಂಬ ಗಟ್ಟಿಯಾದ ಭಾವನೆ.

4. ಪರಬ್ರಹ್ಮವೇ ಅದರ ರೂಪದಲ್ಲಿದೆ ಎಂದು ಗಟ್ಟಿಯಾದ ಭಾವನೆಯನ್ನು ಮಾಡಬೇಕು ಎಂದು ಇಲ್ಲಿ ವಿಧಿಸಿದೆ ಎಂದು ಅಭಿಪ್ರಾಯ.

ವಾಯುರವಾದ ಖವು—ವಾಯುವು ಇದರಲ್ಲಿದೆಯಾದ್ದರಿಂದ ವಾಯುರ ಖವು; ಈ- ಬರಿಯ ಖವನ್ನೇ[1] (ಇಲ್ಲಿ) ಖ ಎಂದಿದೆಯೇ ಹೊರತು ಪುರಾಣವಾದ (ಆತ್ಮರೂಪ)ಖವನ್ನಲ್ಲ ಎಂದು ಹೇಳಿರುತ್ತಾನೆ. ಅವನು ಯಾರು ? ಕೌರವ್ಯಾಯಣಿಯ ಮಗನು. ವಾಯುರವಾದ ಖದಲ್ಲಲ್ಲವೆ, ಖಶಬ್ದದ ವ್ಯವಹಾರವು ಮುಖ್ಯವು ? ಆದ್ದರಿಂದ ಮುಖ್ಯ(ವಾದ ಅರ್ಥದಲ್ಲಿಯೇ ಶಬ್ದವನ್ನು) ತಿಳಿಯುವದು ನ್ಯಾಯವು[2] ಎಂದು (ಆತನು) ಅಭಿಪ್ರಾಯಪಟ್ಟಿರುತ್ತಾನೆ[3].

**ಇಲ್ಲಿ ನಿರುಪಾಧಿಕಸ್ವರೂಪವಾದ ಪುರಾಣಖವಾದ (ಪರ)ಬ್ರಹ್ಮವನ್ನೇ (ಖಶಬ್ದದಿಂದ ಹೇಳಿರಲಿ), ಅಥವಾ ವಾಯುರ ಖವೆಂಬ ಸೋಪಾಧಿಕಬ್ರಹ್ಮವನ್ನೇ ಹೇಳಿರಲಿ, ಹೇಗೂ ಓಂಕಾರವು (ಇಲ್ಲಿ) ಪ್ರತಿಮೆಯಂತೆ ಪ್ರತೀಕವಾಗಿಯೇ[4] ಸಾಧನತ್ವವನ್ನು ಪಡೆದಿರುತ್ತದೆ. ಸತ್ಯಕಾಮನೆ, (ಈ) ಓಂಕಾರವೆಂಬುದಿದೆಯಲ್ಲ, ಇದೇ ಪರ(ಬ್ರಹ್ಮವೂ) ಅಪರಬ್ರಹ್ಮವೂ (ಆಗಿರುತ್ತದೆ)"** (ಪ್ರ. ೫-೨) ಎಂಬ ಬೇರೊಂದು ಶ್ರುತಿಯಿಂದ (ಹೀಗೆಂದು ಸಿದ್ಧವಾಗುತ್ತದೆ). ಖಶಬ್ದದ ಅರ್ಥದಲ್ಲಿ ಮಾತ್ರ ಅಭಿಪ್ರಾಯಭೇದವು.

## ಓಂಕಾರವು ಬ್ರಹ್ಮಾಭಿಧಾನವು

(ಭಾಷ್ಯ)

೩೫೮. ವೇದೋಽಯಮ್ ಓಂಕಾರಃ । ವೇದ ವಿಜಾನಾತಿ ಯದ್ ವೇದಿತವ್ಯಮ್ । ತಸ್ಮಾತ್ ವೇದ ಓಂಕಾರಃ ವಾಚಕಃ, ಅಭಿಧಾನಮ್ । ತೇನ

---

1. ನಿರ್ವಿಶೇಷವಾದ ನಿರುಪಾಧಿಕಬ್ರಹ್ಮವನ್ನೇ ಎಂದರ್ಥ.

2. ವಾಯುರ ಖದಲ್ಲಿಯೇ ಖಶಬ್ದವು ಮುಖ್ಯಾರ್ಥದಲ್ಲಿ ವರ್ತಿಸುತ್ತದೆ; ಆದ್ದರಿಂದ ಮುಖ್ಯಗೌಣಗಳಲ್ಲಿ ಮುಖ್ಯವನ್ನೇ ಅರಿಯಬೇಕು ಎಂಬ (ಶಾ. ಭಾ. ೩-೨-೧) ಮೀಮಾಂಸಾನ್ಯಾಯವನ್ನನುಸರಿಸಿ ಇಲ್ಲಿ ಮುಖ್ಯಾರ್ಥವಾದ ವಾಯುರ ಖವನ್ನೇ ಗ್ರಹಿಸಬೇಕು.

3. ಇಲ್ಲಿ ವಾಯುರ ಖವೆಂದರೆ ವಾಯುವಿಗೆ ಆಧಾರವಾದ ಭೂತಾಕಾಶವೇ ಎಂದೂ ಓಂಕಾರದಲ್ಲಿ ಆಕಾಶಾವಚ್ಛಿನ್ನಬ್ರಹ್ಮದೃಷ್ಟಿಯನ್ನು ಮಾಡಬೇಕೆಂದೂ ಕೌರವ್ಯಾಯಣೀಪುತ್ರನ ಅಭಿಪ್ರಾಯವೆಂತ ಬೃ. ವಾ. ಟೀಕೆಯಲ್ಲಿದೆ. (ವಾ. ೧೨೦, ೧೨೧); ಆದರೆ ಸೂತ್ರಕ್ಕೆ ಆಧಾರವಾದ ಅವ್ಯಾಕೃತಾಕಾಶದೃಷ್ಟಿಯಿಂದ ಉಪಾಸನೆಮಾಡಬೇಕೆಂದೂ ಈ ಆಕಾಶವೇ ಭೂತಾಕಾಶರೂಪದಿಂದ ಪರಿಣತವಾಗಿದೆ ಎಂದೂ ಭಾಷ್ಯಟೀಕೆಯಲ್ಲಿದೆ. ಈ ಪಕ್ಷವೇ ಭಾಷ್ಯಸಮ್ಮತವೆಂದು ತೋರುತ್ತದೆ. ಭಾಷ್ಯವಾರ್ತಿಕಟೀಕಾಕಾರರು ಬೇರೆ ಬೇರೆಯೆ ?– ಎಂಬುದು ವಿಚಾರಣೀಯ. ಪೀಠಿಕೆಯನ್ನು ನೋಡಿ.

4. ಪ್ರತೀಕೋಪಾಸನೆಯಿಂದ ಕ್ರಮಮುಕ್ತಿಯೂ ಆಗುವದೆಂಬುದಕ್ಕೆ ಸೂ.ಭಾ. ೧-೩-೧೩ (ಭಾ. ಭಾ. ೨೫೨)ನ್ನು ನೋಡಿ.

ಅಭಿಧಾನೇನ ಯದ್ ವೇದಿತವ್ಯಂ ಬ್ರಹ್ಮ ಪ್ರಕಾಶ್ಯಮಾನಮ್ ಅಭಿಧೀಯಮಾನಂ ವೇದ, ಸಾಧಕೋ ವಿಜಾನಾತಿ ಉಪಲಭತೇ । ತಸ್ಮಾತ್ ವೇದೋಽಯಮ್ ಇತಿ ಬ್ರಾಹ್ಮಣಾ ವಿದುಃ । ತಸ್ಮಾದ್ ಬ್ರಾಹ್ಮಣಾನಾಮ್ ಅಭಿಧಾನತ್ವೇನ ಸಾಧನತ್ವಮ್ ಅಭಿಪ್ರೇತಮ್ ಓಂಕಾರಸ್ಯ ॥

(ಭಾಷ್ಯಾರ್ಥ)

ಈ ಓಂಕಾರವು ವೇದವು. ಯಾವದು ವೇದ್ಯವೋ ಅದನ್ನು ಇದರಿಂದ (ವೇದ = ವಿಜಾನಾತಿ) ಅರಿತುಕೊಳ್ಳುತ್ತಾರೆ ; ಆದ್ದರಿಂದ ಓಂಕಾರವು ವೇದವು, ಎಂದರೆ ವಾಚಕವು, ಅಭಿಧಾನವು.[1] ಈ ಅಭಿಧಾನದಿಂದ, ಯಾವದು ವೇದಿತವ್ಯವಾದ ಬ್ರಹ್ಮವೋ ಹೇಳಲ್ಪಡತಕ್ಕ, ಹೆಸರಿಸಲ್ಪಡತಕ್ಕ (ಬ್ರಹ್ಮವೋ ಅದನ್ನು) ಸಾಧಕನು (ವೇದ = ವಿಜಾನಾತಿ) ಅರಿತುಕೊಳ್ಳುತ್ತಾನೆ, ಕಂಡುಕೊಳ್ಳುತ್ತಾನೆ[2]. ಆದ್ದರಿಂದ ಇದು ವೇದವು ಎಂದು ಬ್ರಾಹ್ಮಣರು ತಿಳಿಯುತ್ತಾರೆ. ಆದ್ದರಿಂದ ಬ್ರಾಹ್ಮಣರಿಗೆ[3] ಓಂಕಾರವು ಅಭಿಧಾನವಾಗಿ ಸಾಧನವಾಗಿದೆ ಎಂದು ಅಭಿಪ್ರಾಯವು.

## ಓಂಕಾರವು ವೇದವೆಂಬುದು ಪ್ರತೀಕೋಪಾಸನೆಗೆ ಅರ್ಥವಾದ

(ಭಾಷ್ಯ)

೩೫೯. ಅಥವಾ ವೇದೋಽಯಮ್ ಇತ್ಯಾದಿ ಅರ್ಥವಾದಃ । ಕಥಮ್? ಓಂಕಾರೋ ಬ್ರಹ್ಮಣಃ ಪ್ರತೀಕತ್ವೇನ ವಿಹಿತಃ । ಓಂ ಖಂ ಬ್ರಹ್ಮ ಇತಿ ಸಾಮಾನಾಧಿಕರಣ್ಯಾತ್ । ತಸ್ಯ ಸ್ತುತಿರಿದಾನೀಂ ವೇದತ್ವೇನ । ಸರ್ವೋ ಹಿ ಅಯಂ ವೇದಃ ಓಂಕಾರ ಏವ । ಏತತ್ಪ್ರಭವಃ, ಏತದಾತ್ಮಕಃ ಸರ್ವಃ । ಋಗ್ಯಜುಃಸಾಮಾದಿಭೇದಭಿನ್ನ ಏಷ ಓಂಕಾರಃ । "ತದ್ಯಥಾ ಶಙ್ಕುನಾ ಸರ್ವಾಣಿ ಪರ್ಣಾನಿ" (ಛಾಂ. ೨-೨೩-೩) ಇತ್ಯಾದಿಶ್ರುತ್ಯನ್ತರಾತ್ । ಇತಶ್ಚಾಯಂ ವೇದ ಓಂಕಾರಃ । ಯದ್ ವೇದಿತವ್ಯಂ ತತ್ಸರ್ವಂ ವೇದಿತವ್ಯಮ್ ಓಂಕಾರೇ

---

1. ವಾಚಕವು ಹೆಸರು, ವಾಚ್ಯವಾದ ವಸ್ತುವನ್ನು ತಿಳಿಸಿಕೊಡುತ್ತದೆ.

2. ಇದರಿಂದ ವಾಚ್ಯವಾದ ಸೋಪಾಧಿಕಬ್ರಹ್ಮವನ್ನು ಅರಿತುಕೊಳ್ಳುತ್ತಾನೆ, ಉಪಾಸನೆಮಾಡಿ ಸಾಕ್ಷಾತ್ಕಾರಮಾಡಿಕೊಳ್ಳುತ್ತಾನೆ; ಅಥವಾ ನಿರುಪಾಧಿಕಬ್ರಹ್ಮವನ್ನು ಅಭಿಧಾನಾಭಿಧೇಯವೆಂಬ ವಿಭಾಗವನ್ನು ಲಯಮಾಡಿಕೊಳ್ಳುವ ಉಪಾಯದಿಂದ ಅರಿತುಕೊಳ್ಳುತ್ತಾನೆ ಎಂದರ್ಥ. ಉಪಾಸನೆಯ ಪ್ರಕಾರವನ್ನು ಪ್ರಶ್ನೋಪನಿಷತ್ತಿನಿಂದಲೂ ಜ್ಞಾನಪ್ರಕಾರವನ್ನು ಮಾಂಡೂಕ್ಯೋಪನಿಷತ್ತಿನಿಂದಲೂ ತಿಳಿದುಕೊಳ್ಳಬೇಕು.

3. ಬ್ರಹ್ಮಜ್ಞಾನಿಗಳಿಗೆ.

ಣ್ಯೈವ ವೇದ ಏನೇನ । ಅತೋಽಯಮ್ ಓಂಕಾರೋ ವೇದಃ । ಇತರಸ್ಯಾಪಿ ವೇದಸ್ಯ ವೇದತ್ವಮ್ ಅತ ಏವ । ತಸ್ಮಾತ್ ವಿಶಿಷ್ಟೋಽಯಮ್ ಓಂಕಾರಃ ಸಾಧನತ್ವೇನ ಪ್ರತಿಪತ್ತವ್ಯಃ ಇತಿ । ಅಥವಾ ವೇದಃ ಸಃ । ಕೋಽಸೌ ? ಯಂ ಬ್ರಾಹ್ಮಣಾ ವಿದುರೋಂಕಾರಮ್ । ಬ್ರಾಹ್ಮಣಾನಾಂ ಹಿ ಅಸೌ ಪ್ರಣವೋ ದ್ಗೀಥಾದಿವಿಕಲ್ಪೈರ್ವಿಜ್ಞೇಯಃ । ತಸ್ಮಿನ್ ಹಿ ಪ್ರಯುಜ್ಯಮಾನೇ ಸಾಧನತ್ವೇನ ಸರ್ವೋ ವೇದಃ ಪ್ರಯುಕ್ತೋ ಭವತೀತಿ ॥

(ಭಾಷ್ಯಾರ್ಥ)

ಅಥವಾ[1] (ಹೀಗೂ ವ್ಯಾಖ್ಯಾನಮಾಡಬಹುದು) : 'ವೇದೋಽಯಮ್' ಎಂದುಮುಂತಾಗಿರುವ (ವಾಕ್ಯವು) ಅರ್ಥವಾದವು. ಹೇಗೆಂದರೆ ಓಂ ಖಂ ಬ್ರಹ್ಮ ಎಂದು ಸಾಮಾನಾಧಿಕರಣ್ಯ(ದಿಂದ ಉಪದೇಶಿಸಿರು)ವದರಿಂದ ಓಂಕಾರ ವನ್ನು ಬ್ರಹ್ಮಕ್ಕೆ ಪ್ರತೀಕವೆಂದು ವಿಧಿಸಲಾಗಿದೆಯಷ್ಟೆ ? ಆ (ಓಂಕಾರವನ್ನು) ಈಗ ವೇದವೆಂದು ಸ್ತುತಿ(ಮಾಡಲಾಗುತ್ತಿದೆ). ಈ ವೇದವೆಲ್ಲವೂ ಓಂಕಾರವೇ ; ಎಲ್ಲ (ವೇದವೂ) ಇದರಿಂದ ಉಂಟಾದದ್ದು, ಇದರ ಸ್ವರೂಪ ವಾದದ್ದು. ಈ ಓಂಕಾರವೇ ಋಗ್ಯಜುಃಸಾಮಗಳೇ ಮುಂತಾದ ವಿಶೇಷ (ರೂಪ)ಗಳಿಂದ ಬೇರೆಬೇರೆಯಾಗಿರುತ್ತದೆ)[2]. "ಹೇಗೆ ಎಲೆಯ ನಾಳದಿಂದ ಎಲ್ಲಾ ಎಲೆಗಳೂ (ವ್ಯಾಪ್ತವಾಗಿರುವವೋ)" (ಛಾಂ ೨-೨೩-೩) ಎಂದು ಮುಂತಾಗಿರುವ ಶ್ರುತ್ಯಂತರದಿಂದ ಇದು ಸಿದ್ಧವಾಗುತ್ತದೆ[3]. ಈ ಕಾರಣದಿಂದ ಲೂ ಈ ಓಂಕಾರವು ವೇದವು, (ಏಕೆಂದರೆ) ಯಾವದು ತಿಳಿಯತಕ್ಕದ್ದೋ ಆ ತಿಳಿಯತಕ್ಕದ್ದೆಲ್ಲವನ್ನೂ ಈ ಓಂಕಾರದಿಂದಲೇ ಅರಿತುಕೊಳ್ಳಬಹುದು[4]. ಆದ್ದರಿಂದ ಈ ಓಂಕಾರವು ವೇದವು; (ಆ) ಇನ್ನೊಂದು ವೇದವೂ ವೇದ

1. ಹಿಂದೆ ಅಭಿಧಾನರೂಪದಿಂದ ಸಾಧನವೆಂದು ಹೇಳುತ್ತದೆ ಎಂದು ವಾಕ್ಯಕ್ಕೆ ವ್ಯಾಖ್ಯಾನಮಾಡಲಾಯಿತು. ಈಗ ಇದನ್ನು ಅರ್ಥವಾದವೆಂದು ಹೇಳುತ್ತಲೆ ಎಂದು ವ್ಯಾಖ್ಯಾನಮಾಡುತ್ತಾರೆ. ಇದು ಪ್ರತೀಕಪಕ್ಷಕ್ಕೆ ಹೊಂದುತ್ತದೆ ಎಂದು ಟೀಕೆ. ಆದರೆ ಪ್ರತೀಕ, ಅಭಿಧಾನ- ಎರಡಕ್ಕೂ ಹೊಂದಿಸಬಹುದೆಂದು ನಮ್ಮ ಅಭಿಪ್ರಾಯ.

2. ವೇದಗಳೆಲ್ಲವೂ ಓಂಕಾರದ ರೂಪಾಂತರಗಳೇ ಎಂದರ್ಥ.

3. ಓಂಕಾರದಿಂದ ವಾಕ್ಕೆಲ್ಲವೂ ವ್ಯಾಪ್ತವಾಗಿರುತ್ತದೆ ಎಂದು ಅಲ್ಲಿ ಹೇಳಿದೆ.

4. ತಿಳಿಯತಕ್ಕದ್ದು ಬ್ರಹ್ಮವೊಂದೇ ; ಮಿಕ್ಕದ್ದೆಲ್ಲವೂ ಬ್ರಹ್ಮದ ವಿಕಾರವಾದ್ದರಿಂದ ಅದನ್ನು ತಿಳಿಯುವದರಿಂದಲೇ ಅರಿಯಲ್ಪಟ್ಟಂತಾಗುವದು. ಆದ್ದರಿಂದ ಬ್ರಹ್ಮವನ್ನು ತಿಳಿಸುವ ಓಂಕಾರವು ಎಲ್ಲವನ್ನೂ ತಿಳಿಸಿದಂತೆ ಎಂದರ್ಥ. ಮಾಂ ಭಾ. ೧ (ಛಾ. ಭಾ. ೪)ನ್ನು ನೋಡಿ.

(ವೆನಿಸಿರು)ವದು ಇದರಿಂದಲೇ[1]. ಆದ್ದರಿಂದ ಈ ಓಂಕಾರವು (ಹೀಗೆ) ಅಸಾಧಾರಣ(ಸ್ವರೂಪವುಳ್ಳ)ದ್ದಾದ್ದರಿಂದ (ಇದನ್ನು) ಸಾಧನವಾಗಿ ಮಾಡಿಕೊಳ್ಳಬೇಕು ಎಂದು (ಅರ್ಥವಾದವು)[2].

ಅಥವಾ ಅದು ವೇದವು. ಅದು (ಎಂದರೆ) ಯಾವದು? ಎಂದರೆ ಯಾವದನ್ನು ಬ್ರಾಹ್ಮಣರು[3] ಓಂಕಾರವೆಂದು ತಿಳಿದಿರುವರೋ (ಅದು). ಬ್ರಾಹ್ಮಣರಿಗೆ ಇದು ಪ್ರಣವ, ಉದ್ಗೀಥ- ಮುಂತಾದ ವಿಕಲ್ಪ(ರೂಪ)ಗಳಿಂದ ತಿಳಿಯಬಂದಿದೆಯಲ್ಲವೆ?[4] ಇದನ್ನು ಸಾಧನವಾಗಿ ಪ್ರಯೋಗಮಾಡಿದರೆ ವೇದವೆಲ್ಲವನ್ನೂ ಪ್ರಯೋಗಮಾಡಿದಂತೆ[5] ಆಗುವದಲ್ಲವೆ? ಆದ್ದರಿಂದ (ಇದು ವೇದವು) ಎಂದು (ಅಭಿಪ್ರಾಯ)

---

1. ವೇದಿತವ್ಯವಾದ ಪರಮಾರ್ಥವನ್ನು ತಿಳಿಯುವದಕ್ಕೆ ಸಾಧನವಾಗಿರುವದರಿಂದಲೇ.

2. ಪ್ರತೀಕವಾಗಿಯೋ ಅಭಿಧಾನವಾಗಿಯೋ ಸಾಧನವನ್ನು ಮಾಡಿಕೊಳ್ಳಬೇಕು ಎಂದಭಿಪ್ರಾಯ.

3. ವೇದಾಧ್ಯಯನವನ್ನು ಮಾಡಿರುವವರು.

4. ಪ್ರಣವ, ಉದ್ಗೀಥ- ಇವೂ ಓಂಕಾರಕ್ಕೇ ಹೆಸರುಗಳು (ಛಾಂ. ೧-೫-೧). ಆದ್ದರಿಂದ ಅದು ಋಗ್ಯಜುಃಸಾಮಾತ್ಮಕವಾಗಿರುತ್ತದೆ.

5. ಕರ್ಮದಲ್ಲಿ ಮಿಕ್ಕ ವೇದಮಂತ್ರಗಳನ್ನು ಉಪಯೋಗಿಸುವದು ಆಗದಿರುವಾಗ ಓಂಕಾರವೊಂದನ್ನೇ ಪ್ರಯೋಗಮಾಡಿದರೂ ವೇದತ್ರಯವನ್ನು ಪ್ರಯೋಗಿಸಿದ ಫಲವೇ ಸಿಕ್ಕುತ್ತದೆ ಎಂದಭಿಪ್ರಾಯ.

# ಒಂದನೆಯ ಬ್ರಾಹ್ಮಣದ ಸಾರ

## ಈ ಬ್ರಾಹ್ಮಣದಲ್ಲಿ ಓಂಕಾರದ ಉಪಾಸನೆಯನ್ನು ವಿಧಿಸಿದೆ.

೧. ನಿರುಪಾಧಿಕವಾದ ಪರಬ್ರಹ್ಮವು ಪೂರ್ಣವಾಗಿದೆ, ವ್ಯಾಪಿಯಾಗಿದೆ; ಸೋಪಾಧಿಕಬ್ರಹ್ಮವೂ ತನ್ನ ಪರಮಾರ್ಥಸ್ವರೂಪದಿಂದ ಪೂರ್ಣವೇ ಆಗಿದೆ. ಪೂರ್ಣದಿಂದ ಬಂದಿರುವ ವಿಶೇಷರೂಪದ್ದಾದರೂ ಈ ಬ್ರಹ್ಮವು ತನ್ನ ಪೂರ್ಣತ್ವವನ್ನು ಕಳೆದುಕೊಂಡಿಲ್ಲ; ಇದರ ಪೂರ್ಣತ್ವವನ್ನು ವಿದ್ಯೆಯಿಂದ ಗ್ರಹಿಸಿದರೆ ಪ್ರಜ್ಞಾನಘನೈಕರಸವಾದ ಪೂರ್ಣವೇ ಆಗಿ ಉಳಿಯುತ್ತದೆ. ಬ್ರಹ್ಮವಿದ್ಯೆಯಿಂದ ಪರಮಾರ್ಥಸ್ವರೂಪವನ್ನು ಅರಿತುಕೊಂಡರೆ ಸರ್ವಾತ್ಮಭಾವವೇ ಬರುತ್ತದೆ ಎಂಬುದು ಉಪನಿಷತ್ತಿನ ಸಾರ.

'ಓಂ ಖಂ ಬ್ರಹ್ಮ' ಎಂಬುದೊಂದು ಮಂತ್ರವು. ಓಂಕಾರದಲ್ಲಿ ಆಕಾಶದಂತೆ ವ್ಯಾಪಕವಾಗಿರುವ ನಿರುಪಾಧಿಕದೃಷ್ಟಿಯನ್ನು ಮಾಡಬೇಕು. ಅವ್ಯಾಕೃತಾಕಾಶಶಬ್ದವಾಚ್ಯವಾದ ಸೋಪಾಧಿಕಬ್ರಹ್ಮದೃಷ್ಟಿಯನ್ನು ಮಾಡಬೇಕು ಎಂಬುದೇ ಈ ಮಂತ್ರದ ವಿನಿಯೋಗವೆಂದು ಮತಾಂತರ.

ಓಂಕಾರವು ಬ್ರಹ್ಮಕ್ಕೆ ಪ್ರತೀಕವಾಗಿ ಅಥವಾ ಸಮೀಪದ ಅಭಿಧಾನವಾಗಿರುವದರಿಂದ ಅದರಲ್ಲಿ ಬ್ರಹ್ಮದೃಷ್ಟಿಯನ್ನು ಮಾಡುವದು ಫಲದಾಯಕವು. ಓಂಕಾರವು ಬ್ರಹ್ಮದ ಹೆಸರಾದ್ದರಿಂದ ಅದರಿಂದ ಬ್ರಹ್ಮವನ್ನು ಅರಿತುಕೊಳ್ಳಬಹುದು; ವಿವೇಕಿಗಳಾದವರು ಬ್ರಹ್ಮದ ಅಭಿಧಾನವಾಗಿಯೇ ಅದನ್ನು ಸಾಧನವಾಗಿ ಮಾಡಿಕೊಳ್ಳಬಹುದು. ವೇದವೆಲ್ಲವೂ ಓಂಕಾರಾತ್ಮಕವಾಗಿರುವದರಿಂದಲೂ ವೇದದಿಂದ ಸರ್ವಬ್ರಹ್ಮವನ್ನೂ ಅರಿಯುವಂತೆ ಓಂಕಾರದಿಂದಲೇ ಅರಿತುಕೊಳ್ಳಬಹುದಾದ್ದರಿಂದಲೂ ಈ ಓಂಕಾರವನ್ನು ಸರ್ವವೇದಗಳಲ್ಲಿಯೂ ಪ್ರಣವ, ಉದ್ಗೀಥ– ಮುಂತಾದ ರೂಪಗಳಿಂದ ಬ್ರಾಹ್ಮಣರು ಉಪಾಸನೆ ಮಾಡುತ್ತಿರುವದರಿಂದ ಇದರ ಪ್ರಯೋಗವು ಸರ್ವವೇದಗಳ ಪ್ರಯೋಗವೂ ಆಗುವದರಿಂದಲೂ ಓಂಕಾರವನ್ನು ಬ್ರಹ್ಮಪ್ರತಿಪತ್ತಿಗೆ ಪ್ರತೀಕವಾಗಿ ಅಥವಾ ಅಭಿಧಾನವಾಗಿ ಸಾಧನವನ್ನು ಮಾಡಿಕೊಳ್ಳಬೇಕು.

---

# ಐದನೆಯ ಅಧ್ಯಾಯ - ಎರಡನೆಯ ಬ್ರಾಹ್ಮಣ

(ಉಪಾಸನಾಶೇಷವಾಗಿ ದಮಾದಿಗಳ ವಿಧಿ)

## ಪ್ರಜಾಪತಿಯು ದೇವತೆಗಳಿಗೆ ಉಪದೇಶಿಸಿದ್ದು

(ಉಪನಿಷತ್ತು)

**ತ್ರಯಾಃ ಪ್ರಾಜಾಪತ್ಯಾಃ ಪ್ರಜಾಪತೌ ಪಿತರಿ ಬ್ರಹ್ಮಚರ್ಯ ಮೂಷುರ್ದೇವಾ ಮನುಷ್ಯಾ ಅಸುರಾ ಉಷಿತ್ವಾ ಬ್ರಹ್ಮಚರ್ಯಂ ದೇವಾ ಊಚುರ್ಬ್ರವೀತು ನೋ ಭವಾನಿತಿ ತೇಭ್ಯೋ ಹೈತ ದಕ್ಷರಮುವಾಚ ದ ಇತಿ ವ್ಯಜ್ಞಾಸಿಷ್ಟಾ೩ ಇತಿ ವ್ಯಜ್ಞಾಸಿಷ್ಮೇತಿ ಹೋಚುರ್ದಾಮ್ಯತೇತಿ ನ ಆತ್ಥೇತ್ಯೋಮಿತಿ ಹೋವಾಚ ವ್ಯಜ್ಞಾಸಿಷ್ಟೇತಿ ॥ ೧ ॥**

೧. ದೇವತೆಗಳು, ಮನುಷ್ಯರು, ಅಸುರರು- (ಹೀಗೆ) ಮೂವರು ಪ್ರಾಜಾಪತ್ಯರು ಪಿತೃವಾದ ಪ್ರಜಾಪತಿಯಲ್ಲಿ ಬ್ರಹ್ಮಚರ್ಯವನ್ನು ಮಾಡಿಕೊಂಡಿದ್ದರು. ಬ್ರಹ್ಮಚರ್ಯದಲ್ಲಿದ್ದು ದೇವತೆಗಳು "ನೀನು ನಮಗೆ ಹೇಳಬೇಕು!" ಎಂದು ನುಡಿದರು. ಅವರಿಗೆ 'ದ' ಎಂಬೀ ಅಕ್ಷರವನ್ನು ಹೇಳಿದನು. 'ತಿಳದುಕೊಂಡಿರ?' ಎಂದು (ಕೇಳಲು) 'ತಿಳಿದುಕೊಂಡೆವು, ದಮವುಳ್ಳವರಾಗಿರಿ, ಎಂದು ನಮಗೆ ಹೇಳುತ್ತಿದೀಯೆ' ಎಂದರು. 'ಹೌದು, ತಿಳಿದುಕೊಂಡಿರಿ' ಎಂದು (ಅವನು) ನುಡಿದನು.

## ದೇವತೆಗಳಿಗೆ ದಮೋಪದೇಶ

(ಭಾಷ್ಯ)

೩೬೦. ಅಧುನಾ ದಮಾದಿಸಾಧನತ್ರಯವಿಧಾನಾರ್ಥೋಽಯಮ್ ಆರಮ್ಭಃ। ತ್ರಯಾಃ ತ್ರಿಸಂಖ್ಯಾಕಾಃ ಪ್ರಾಜಾಪತ್ಯಾಃ ಪ್ರಜಾಪತೇರಪತ್ಯಾನಿ ಪ್ರಾಜಾಪತ್ಯಾಃ। ತೇ ಕಿಮ್? ಪ್ರಜಾಪತೌ ಪಿತರಿ ಬ್ರಹ್ಮಚರ್ಯಂ ಶಿಷ್ಯತ್ವ ವೃತ್ತೇರ್ಬ್ರಹ್ಮಚರ್ಯಸ್ಯ ಪ್ರಾಧಾನ್ಯಾತ್ ಶಿಷ್ಯಾಃ ಸನ್ತಃ ಬ್ರಹ್ಮಚರ್ಯಮ್ ಊಷುಃ ಉಷಿತವನ್ತಃ ಇತ್ಯರ್ಥಃ। ಕೇ ತೇ ವಿಶೇಷತಃ? ದೇವಾಃ, ಮನುಷ್ಯಾಃ, ಅಸುರಾಸ್ತೇ। ತೇ ಚ ಉಷಿತ್ವಾ ಬ್ರಹ್ಮಚರ್ಯಂ ಕಿಮ್ ಅಕುರ್ವನ್ ಇತಿ?

ಉಚ್ಯತೇ । ತೇಷಾಂ ದೇವಾ ಊಚುಃ ಪಿತರಂ ಪ್ರಜಾಪತಿಮ್ । ಕಿಮಿತಿ ? ಬ್ರವೀತು ಕಥಯತು ನಃ ಅಸ್ಮಭ್ಯಂ ಯತ್ ಅನುಶಾಸನಂ ಭವಾನ್ ಇತಿ । ತೇಭ್ಯಃ ಏವಮರ್ಥಿಭ್ಯಃ ಹ ಏತದ್ ಅಕ್ಷರಂ ವರ್ಣಮಾತ್ರಮ್ ಉವಾಚ ದ ಇತಿ । ಉಕ್ತ್ವಾ ಚ ತಾನ್ ಪಪ್ರಚ್ಛ ಪಿತಾ ಕಿಂ ವ್ಯಜ್ಞಾಸಿಷ್ಟಾ೩ ಇತಿ । ಮಯಾ ಉಪದೇಶಾರ್ಥಮ್ ಅಭಿಹಿತಸ್ಯ ಅಕ್ಷರಸ್ಯ ಅರ್ಥಂ ವಿಜ್ಞಾತವನ್ತಃ ಆಹೋಸ್ವಿತ್ ನ ಇತಿ । ದೇವಾ ಊಚುಃ ವ್ಯಜ್ಞಾಸಿಷ್ಮ ಇತಿ ವಿಜ್ಞಾತವನ್ತೋ ವಯಮ್ । ಯದ್ಯೇವಮ್ ಉಚ್ಯತಾಂ ಕಿಂ ಮಯೋಕ್ತಮ್ ಇತಿ ? ದೇವಾ ಊಚುಃ ದಾಮ್ಯತ ಅದಾನ್ತಾ ಯೂಯಂ ಸ್ವಭಾವತಃ ಅತಃ ದಾನ್ತಾ ಭವತ ಇತಿ ನಃ ಅಸ್ಮಾನ್ ಆತ್ಥ ಕಥಯಸಿ । ಇತರ ಆಹ ಓಮ್ ಇತಿ ಸಮ್ಯಗ್ ವ್ಯಜ್ಞಾಸಿಷ್ಟ ಇತಿ ॥

(ಭಾಷ್ಯಾರ್ಥ)

ಈಗ ದಮವೇ ಮುಂತಾದ ಸಾಧನತ್ರಯವನ್ನು ವಿಧಿಸುವದಕ್ಕಾಗಿ ಈ (ಬ್ರಾಹ್ಮಣವನ್ನು) ಆರಂಭಿಸಲಾಗಿದೆ. ಮೂವರು, ಮೂರು ಸಂಖ್ಯೆಯವರು, ಪ್ರಾಜಾಪತ್ಯರು; ಪ್ರಜಾಪತಿಯ ಮಕ್ಕಳು (ಆದ್ದರಿಂದ) ಪ್ರಾಜಾಪತ್ಯರು. ಅವರು ಏನು ? (ಎಂದರೆ) ತಂದೆಯಾದ ಪ್ರಜಾಪತಿಯ (ಬಳಿ)ಯಲ್ಲಿ ಬ್ರಹ್ಮಚರ್ಯವನ್ನು– ಶಿಷ್ಯರಾಗಿರುವದಕ್ಕೆ ಬ್ರಹ್ಮಚರ್ಯವೇ ಪ್ರಧಾನವಾದ್ದರಿಂದ[1] (ಬ್ರಹ್ಮಚರ್ಯವನ್ನು ಎಂದರೆ)– ಶಿಷ್ಯರಾಗಿ ಮಾಡಿಕೊಂಡಿದ್ದರು, ವಾಸಮಾಡಿಕೊಂಡಿದ್ದರು ಎಂದರ್ಥ. ಅವರು ವಿಶೇಷವಾಗಿ ಯಾರು[2] ? ದೇವತೆಗಳು, ಮನುಷ್ಯರು ಮತ್ತು ಅಸುರರು.

ಅವರು ಬ್ರಹ್ಮಚರ್ಯದಿಂದ ವಾಸವಾಗಿದ್ದು ಏನು ಮಾಡಿದರು ? ಎಂದರೆ (ಶ್ರುತಿ) ಹೇಳುತ್ತದೆ. ಅವರುಗಳೊಳಗೆ ದೇವತೆಗಳು ತಂದೆಯಾದ ಪ್ರಜಾಪತಿಯನ್ನು (ಕುರಿತು) ಇಂತೆಂದರು. ಏನೆಂದು ? (ನಃ = ಅಸ್ಮಭ್ಯಂ) ನಮಗೆ ಅನುಶಾಸನ(ಮಾಡತಕ್ಕದ್ದು) ಯಾವದೋ (ಅದನ್ನು) ನೀನು ಹೇಳಬೇಕು, ತಿಳಿಸಬೇಕು ಎಂದು (ಕೇಳಿದರು).

ಹೀಗೆ ಪ್ರಾರ್ಥಿಸಿದ ಅವರಿಗೆ ದ ಎಂಬೀ ಅಕ್ಷರವನ್ನು ಬರಿಯ ವರ್ಣವನ್ನು ಹೇಳಿದನು. ಹೇಳಿ ಅವರನ್ನು ತಂದೆಯು 'ತಿಳಿದುಕೊಂಡಿರಾ ?' ನಾನು ಉಪದೇಶಕ್ಕಾಗಿ ಹೇಳಿದ ಅಕ್ಷರದ ಅರ್ಥವನ್ನು ಅರಿತುಕೊಂಡಿರೋ,

1. ಬ್ರಹ್ಮಚರ್ಯದಿಂದಿದ್ದರು ಎಂದರೆ ಶಿಷ್ಯವೃತ್ತಿಯಿಂದ ಇದ್ದುಕೊಂಡಿದ್ದರು ಎಂದೇ ಅರ್ಥ ; ಬ್ರಹ್ಮಚರ್ಯವು ಶಿಷ್ಯರಿಗೆ ಮುಖ್ಯ ಎಂಬ ಕಾರಣದಿಂದ ಅದನ್ನು ಉಪಲಕ್ಷಣವಾಗಿ ಹೇಳಿವೆ ಎಂದರ್ಥ.

2. ಇಂಥಿಂಥವರು ಎಂದು ಹೇಳಿರಿ ಎಂದರ್ಥ.

ಅಥವಾ ಇಲ್ಲವೊ ?–ಎಂದು ಕೇಳಿದನು. (ಆಗ) ದೇವತೆಗಳು ತಿಳಿದುಕೊಂಡೆವು, ಎಂದರು. ಹಾಗಾದರೆ ನಾನು ಏನು ಹೇಳಿದೆನು, ಹೇಳಿರಿ ! –ಎಂದು (ಕೇಳಲು) ದೇವತೆಗಳು ದಮವುಳ್ಳವರಾಗಿರಿ– ಸ್ವಭಾವದಿಂದಲೇ ನೀವು ದಾಂತರಲ್ಲ; ಆದ್ದರಿಂದ ದಾಂತರಾಗಿರಿ ! –ಎಂದು (ನಃ = ಅಸ್ಮಾನ್) ನಮ್ಮಗಳಿಗೆ ಹೇಳುತ್ತಿದೀಯೆ, ತಿಳಿಸುತ್ತಿದೀಯೆ –ಎಂದರು (ಆ) ಇನ್ನೊಬ್ಬನಾದ (ಪ್ರಜಾಪತಿಯು) ಹೌದು, ಚೆನ್ನಾಗಿ ತಿಳಿದುಕೊಂಡಿರಿ –ಎಂದು ನುಡಿದನು.

## ಮನುಷ್ಯರಿಗೆ ಉಪದೇಶಿಸಿದ್ದು

(ಉಪನಿಷತ್ತು)

**ಅಥ ಹೈನಂ ಮನುಷ್ಯಾ ಊಚುರ್ಬ್ರವೀತು ನೋ ಭವಾನಿತಿ ತೇಭ್ಯೋ ಹೈತದೇವಾಕ್ಷರಮುವಾಚ ದ ಇತಿ ವ್ಯಜ್ಞಾಸಿಷ್ಟಾ೩ ಇತಿ ವ್ಯಜ್ಞಾಸಿಷ್ಮೇತಿ ಹೋಚುರ್ದತ್ತೇತಿ ನ ಆತ್ಥೇತ್ಯೋಮಿತಿ ಹೋವಾಚ ವ್ಯಜ್ಞಾಸಿಷ್ಟೇತಿ ॥ ೨ ॥**

೨. ಆಗ ಇವನನ್ನು ಮನುಷ್ಯರು 'ನೀನು ನಮಗೆ ಹೇಳಬೇಕು!' ಎಂದರು. ಅವರಿಗೆ 'ದ' ಎಂಬಿದೇ ಅಕ್ಷರವನ್ನು ಹೇಳಿದನು. 'ತಿಳಿದುಕೊಂಡಿರ?' ಎನ್ನಲು, 'ತಿಳಿದುಕೊಂಡೆವು, ದಾನಮಾಡಿರಿ ಎಂದು ನಮಗೆ ಹೇಳುತ್ತಿದೀಯೆ' ಎಂದರು. 'ಹೌದು, ತಿಳಿದುಕೊಂಡಿರಿ' ಎಂದು (ಅವನು ನುಡಿದನು).

## ಮನುಷ್ಯರಿಗೆ ದಾನೋಪದೇಶ

(ಭಾಷ್ಯ)

**೩೬೧. ಸಮಾನಮ್ ಅನ್ಯತ್ । ಸ್ವಭಾವತೋ ಲುಬ್ಧಾ ಯೂಯಮ್, ಅತಃ ಯಥಾಶಕ್ತಿ ಸಂವಿಭಜತ[1] ದತ್ತ ಇತಿ ನಃ ಅಸ್ಮಾನ್ ಆತ್ಥ । ಕಿಮನ್ಯದ್ ಬ್ರೂಯಾತ್ ನೋ ಹಿತಮ್ ಇತಿ ಮನುಷ್ಯಾಃ ॥**

(ಭಾಷ್ಯಾರ್ಥ)

**ಮಿಕ್ಕದ್ದೆಲ್ಲವೂ (ಹಿಂದಿನ ಕಂಡಿಕೆಗೆ) ಸಮಾನ(ವಾಗಿದೆ). ನೀವು ಸ್ವಭಾವದಿಂದ ಲುಬ್ಧರಾಗಿರುವಿರಿ; ಆದ್ದರಿಂದ ಶಕ್ತಿಯಿದ್ದಷ್ಟು ಹಂಚಿಕೊಡಿರಿ, ದಾನಮಾಡಿರಿ– ಎಂದು (ನಃ=ಅಸ್ಮಾನ್) ನಮ್ಮಗಳಿಗೆ ಹೇಳುತ್ತಿದೀಯೆ. ನಮಗೆ ಮತ್ತೆ ಯಾವ ಹಿತವನ್ನು ಹೇಳಲಾದೀತು ?– ಎಂದು ಮನುಷ್ಯ(ರೆಂದರು).**

---

1. ಈ ಮಾತು 'ದತ್ತ' ಆದಮೇಲೆ ಇದ್ದಿದ್ದರೆ ಚೆನ್ನಾಗಿತ್ತು, ಏಕೆಂದರೆ ಅದರರ್ಥವೇ ಇದು.

# ಅಸುರರಿಗೆ ಉಪದೇಶಿಸಿದ್ದು

(ಉಪನಿಷತ್ತು)

**ಅಥ ಹೈನಮಸುರಾ ಊಚುರ್ಬ್ರವೀತು ನೋ ಭವಾನಿತಿ ತೇಭ್ಯೋ ಹೈತದೇವಾಕ್ಷರಮುವಾಚ ದ ಇತಿ ವ್ಯಜ್ಞಾಸಿಷ್ಟಾ೩ ಇತಿ ವ್ಯಜ್ಞಾಸಿಷ್ಮೇತಿ ಹೋಚುರ್ದಯಧ್ವಮಿತಿ ನ ಆತ್ಥೇತ್ಯೋಮಿತಿ ಹೋವಾಚ ವ್ಯಜ್ಞಾಸಿಷ್ಟೇತಿ ತದೇತದೇವೈಷಾ ದೈವೀ ವಾಗನುವದತಿ ಸ್ತನಯಿತ್ನುರ್ದ ದ ದ ಇತಿ ದಾಮ್ಯತ ದತ್ತ ದಯಧ್ವಮಿತಿ ತದೇತತ್ ತ್ರಯಂ ಶಿಕ್ಷೇದ್ದಮಂ ದಾನಂ ದಯಾಮಿತಿ ॥೩॥**

೩. ಆಗ ಇವನನ್ನು ಅಸುರರು 'ನೀನು ನಮಗೆ ಹೇಳಬೇಕು!' ಎಂದರು. ಅವರಿಗೆ 'ದ' ಎಂಬಿದೇ ಅಕ್ಷರವನ್ನು ಹೇಳಿದನು. 'ತಿಳಿದುಕೊಂಡಿರ ?' ಎನ್ನಲು 'ತಿಳಿದುಕೊಂಡೆವು, ದಯೆಯನ್ನು (ತೋರಿ)ಸಿರಿ ಎಂದು ನಮಗೆ ಹೇಳುತ್ತಿದೀಯೆ' ಎಂದರು. 'ಹೌದು, ತಿಳಿದುಕೊಂಡಿರಿ' ಎಂದು (ಅವನು ನುಡಿದನು). ಆ ಇದನ್ನೇ ಈ ದೈವೀ ವಾಕ್ಕಾದ ಗುಡುಗು 'ದ ದ ದ!' ಎಂದು, 'ದಮವುಳ್ಳವರಾಗಿರಿ, ದಾನಮಾಡಿರಿ, ದಯೆಯನ್ನು ತೋರಿಸಿರಿ' ಎಂದು ಅನುವಾದಮಾಡುತ್ತಿದೆ. ಆದ್ದರಿಂದ ದಮ, ದಾನ, ದಯೆ– ಈ ಮೂರನ್ನೂ ಕಲಿತುಕೊಳ್ಳಬೇಕು.

# ಅಸುರರಿಗೆ ದಯೋಪದೇಶ

(ಭಾಷ್ಯ)

**೩೬೨. ತಥಾ ಅಸುರಾಃ । ದಯಧ್ವಮ್ ಇತಿ । ಕ್ರೂರಾ ಯೂಯಂ ಹಿಂಸಾದಿಪರಾಃ ; ಅತೋ ದಯಧ್ವಮ್, ಪ್ರಾಣಿಷು ದಯಾಂ ಕುರುತ ಇತಿ ॥**

(ಭಾಷ್ಯಾರ್ಥ)

**ಹೀಗೆಯೇ ಅಸುರರೆಂದರು. ದಯೆಯನ್ನು ತೋರಿಸಿರಿ (ಎಂದು ಹೇಳುತ್ತೀಯೆ). ನೀವು ಕ್ರೂರರು, ಹಿಂಸಾದಿಗಳಲ್ಲಿ ತತ್ಪರರಾಗಿರುವವರು ; ಆದ್ದರಿಂದ ದಯೆಯನ್ನು ತೋರಿಸಿರಿ, ಪ್ರಾಣಿಗಳಲ್ಲಿ ದಯೆಯನ್ನು ಮಾಡಿರಿ ಎಂದು (ಹೇಳುತ್ತಿದೀಯೆ ಎಂದರು).**

## ದಮಾದಿತ್ರಯವನ್ನು ಅಭ್ಯಾಸಮಾಡಬೇಕು

(ಭಾಷ್ಯ)

೩೬೩. ತದೇತತ್ ಪ್ರಜಾಪತೇರನುಶಾಸನಮ್ ಅದ್ಯಾಪಿ ಅನುವರ್ತತ ಏವ । ಯಃ ಪೂರ್ವಂ ಪ್ರಜಾಪತಿಃ ದೇವಾದೀನ್ ಅನುಶಶಾಸ ಸೋಽದ್ಯಾಪಿ ಅನುಶಾಸ್ತ್ಯೇವ ದೈವ್ಯಾ ಸ್ತನಯಿತ್ನುಲಕ್ಷಣಯಾ ವಾಚಾ । ಕಥಮ್ ? ಏಷಾ ಶ್ರೂಯತೇ ದೈವೀ ವಾಕ್ । ಕಾಽಸೌ ? ಸ್ತನಯಿತ್ನುಃ । ದ ದ ದ ಇತಿ ದಾಮ್ಯತ ದತ್ತ ದಯಧ್ವಮ್ ಇತ್ಯೇಷಾಂ ವಾಕ್ಯಾನಾಮ್ ಉಪಲಕ್ಷಣಾಯ ತ್ರಿರ್ದಕಾರ ಉಚ್ಚಾರ್ಯತೇ ಅನುಕೃತಿಃ । ನ ತು ಸ್ತನಯಿತ್ನುಶಬ್ದಃ ತ್ರಿರೇವ । ಸಂಖ್ಯಾನಿಯಮಸ್ಯ ಲೋಕೇ ಅಪ್ರಸಿದ್ಧತ್ವಾತ್ । ಯಸ್ಮಾತ್ ಅದ್ಯಾಪಿ ಪ್ರಜಾಪತಿಃ ದಾಮ್ಯತ, ದತ್ತ, ದಯಧ್ವಮ್ ಇತಿ ಅನುಶಾಸ್ತ್ಯೇವ ತಸ್ಮಾತ್ ಕಾರಣಾತ್ ಏತತ್ ತ್ರಯಮ್ । ಕಿಂ ತತ್ ತ್ರಯಮಿತಿ ? ಉಚ್ಯತೇ ದಮಂ ದಾನಂ ದಯಾಮಿತಿ ಶಿಕ್ಷೇತ್ ಉಪಾದದ್ಯಾತ್ । ಪ್ರಜಾಪತೇರನುಶಾಸನಮ್ ಅಸ್ಮಾಭಿಃ ಕರ್ತವ್ಯಮ್ ಇತ್ಯೇವಂ ಮತಿಂ ಕುರ್ಯಾತ್ । ತಥಾ ಚ ಸ್ಮೃತಿಃ– "ತ್ರಿವಿಧಂ ನರಕಸ್ಯೇದಂ ದ್ವಾರಂ ನಾಶನಮಾತ್ಮನಃ । ಕಾಮಃ ಕ್ರೋಧಸ್ತಥಾ ಲೋಭಸ್ತಸ್ಮಾದೇತತ್ ತ್ರಯಂ ತ್ಯಜೇತ್" (ಗೀ. ೧೬-೨೧) ಇತಿ ॥

(ಭಾಷ್ಯಾರ್ಥ)

ಆ ಈ ಪ್ರಜಾಪತಿಯ ಅನುಶಾಸನವು ಈಗಲೂ ನಡೆದುಕೊಂಡೇ ಬಂದಿರುತ್ತದೆ. ಯಾವ ಪ್ರಜಾಪತಿಯು ಹಿಂದೆ ದೇವಾದಿಗಳಿಗೆ ಅನುಶಾಸನವನ್ನು ಮಾಡುತ್ತಿದ್ದನೋ ಅವನು ಈಗಲೂ ಗುಡುಗಿನ ರೂಪದ ದೈವವಾಕ್ಕಿನಿಂದ ಅನುಶಾಸನಮಾಡುತ್ತಲೇ ಇರುತ್ತಾನೆ. ಹೇಗೆಂದರೆ, ಇಗೋ ದೈವವಾಕ್ಕು ಕೇಳಬರುತ್ತಿದೆ. ಅದು ಯಾವದು ? ಎಂದರೆ ಗುಡುಗು. ದ, ದ, ದ ! ಎಂದು. ದಮವುಳ್ಳವರಾಗಿರಿ, ದಾನಮಾಡಿರಿ, ದಯೆಯನ್ನು ತೋರಿಸಿರಿ– ಎಂಬೀ ವಾಕ್ಯಗಳಿಗೆ ಉಪಲಕ್ಷಣವಾಗಿ ಮೂರು ಸಲ ದಕಾರವನ್ನು ಅನುಕರಣಕ್ಕಾಗಿ ಉಚ್ಚರಿಸಿರುತ್ತದೆಯೇ ಹೊರತು ಗುಡುಗಿನ ಶಬ್ದವು ಮೂರೇ ಅಲ್ಲ; ಏಕೆಂದರೆ ಸಂಖ್ಯೆಯು (ಇಷ್ಟೇ ಎಂಬ) ನಿಯಮವು ಲೋಕದಲ್ಲಿ ಪ್ರಸಿದ್ಧವಾಗಿರುವದಿಲ್ಲ[1].

(ಹೀಗೆ) ಈಗಲೂ ಪ್ರಜಾಪತಿಯು ದಮವುಳ್ಳವರಾಗಿರಿ, ದಾನಮಾಡಿ, ದಯೆಯನ್ನು ತೋರಿಸಿರಿ !– ಎಂದು ಅನುಶಾಸನಮಾಡುತ್ತಲೇ ಇರುವನಷ್ಟೆ ? ಈ ಕಾರಣದಿಂದ ಈ ಮೂರನ್ನು– ಈ ಮೂರೆಂದರೆ ಯಾವದನ್ನು ಎಂದರೆ (ಶ್ರುತಿ)ಯು ದಮವನ್ನು, ದಾನವನ್ನು, ದಯೆಯನ್ನು ಎಂದು ಹೇಳುತ್ತಿದೆ.

---

1 ಅನುಕರಣವು ವಿವಕ್ಷಿತವೇ ಹೊರತು ತ್ರಿತ್ವವು ವಿವಕ್ಷಿತವಲ್ಲ.

(ಈ ಮೂರನ್ನು) ಕಲಿಯಬೇಕು, ಸ್ವೀಕರಿಸಬೇಕು ; ಪ್ರಜಾಪತಿಯ ಅನುಶಾಸನದಂತೆ ನಾವು ನಡೆಯಬೇಕು ಎಂದಿಂತು ಮನಸ್ಸನ್ನು ಮಾಡಬೇಕು. ಆದ್ದರಿಂದಲೇ ಸ್ಮೃತಿ(ಯಲ್ಲಿ ಹೀಗೆಂದು ಹೇಳಿದೆ) : "ನರಕದ ಬಾಗಿಲು ಕಾಮ, ಕ್ರೋಧ, ಮತ್ತು ಲೋಭ- ಈ ಮೂರು ಬಗೆಯಾಗಿರುವದು, ಇದು ತನ್ನನ್ನು ನಾಶಗೊಳಿಸುವದಾಗಿರುತ್ತದೆ; ಆದ್ದರಿಂದ ಈ ಮೂರನ್ನು ಬಿಡಬೇಕು" (ಗೀ. ೧೬-೨೧)[1].

## ದಮಾದಿವಿಧಿಯ ಅರ್ಥವಾದದ ಅಭಿಪ್ರಾಯ

(ಭಾಷ್ಯ)

೩೬೪. ಅಸ್ಯ ಹಿ ವಿಧೇಃ ಶೇಷಃ ಪೂರ್ವಃ । ತಥಾಽಪಿ ದೇವಾದೀನುದ್ದಿಶ್ಯ ಕಿಮರ್ಥಂ ದಕಾರತ್ರಯಮ್ ಉಚ್ಚಾರಿತವಾನ್ ಪ್ರಜಾಪತಿಃ ಪೃಥಕ್ ಅನುಶಾಸನಾರ್ಥಿಭ್ಯಃ ? ತೇ ವಾ ಕಥಂ ವಿವೇಕೇನ ಪ್ರತಿಪನ್ನಾಃ ಪ್ರಜಾಪತೇರ್ಮನೋಗತಂ ಸಮಾನೇನೈವ ದಕಾರವರ್ಣಮಾತ್ರೇಣ ? ಇತಿ ಪರಾಭಿಪ್ರಾಯಜ್ಞಾ ವಿಕಲ್ಪಯನ್ತಿ । ಅತ್ರೈಕೇ ಆಹುಃ ಅದಾನ್ತತ್ವಾದಾನತ್ವಾದಯಾಲುತ್ವೈಃ ಅಪರಾಧಿತ್ವಮ್ ಆತ್ಮನೋ ಮನ್ಯಮಾನಾಃ ಶಙ್ಕಿತಾ ಏವ ಪ್ರಜಾಪತೌ ಊಚುಃ ಕಿಂ ನೋ ವಕ್ಷ್ಯತಿ ಇತಿ । ತೇಷಾಂ ಚ ದಕಾರಶ್ರವಣಮಾತ್ರಾದೇವ ಆತ್ಮಾಽಽಶಙ್ಕಾವಶೇನ ತದರ್ಥಪ್ರತಿಪತ್ತಿರಭೂತ್ । ಲೋಕೇಽಪಿ ಹಿ ಪ್ರಸಿದ್ಧಂ ಪುತ್ರಾಃ ಶಿಷ್ಯಾಶ್ಚ ಅನುಶಾಸ್ಯಾಃ ಸನ್ತೋ ದೋಷಾತ್ ನಿವರ್ತಯಿತವ್ಯಾ ಇತಿ । ಅತೋ ಯುಕ್ತಂ ಪ್ರಜಾಪತೇರ್ದಕಾರಮಾತ್ರೋಚ್ಚಾರಣಮ್ । ದಮಾದಿತ್ರಯೇ ಚ ದಕಾರಾನ್ವಯಾತ್ ಆತ್ಮನೋ ದೋಷಾನುರೂಪ್ಯೇಣ ದೇವಾದೀನಾಂ ವಿವೇಕೇನ ಪ್ರತಿಪತ್ತುಂ ಚ ಇತಿ । ಫಲಂ ತು ಏತತ್ । ಆತ್ಮದೋಷಜ್ಞಾನೇ ಸತಿ ದೋಷಾತ್ ನಿವರ್ತಯಿತುಂ ಶಕ್ಯತೇ ಅಲ್ಪೇನಾಪ್ಯುಪದೇಶೇನ ದೇವಾದಯೋ ದಕಾರಮಾತ್ರೇಣ ಇತಿ ॥

(ಭಾಷ್ಯಾರ್ಥ)

ಈ ವಿಧಿಗೇ ಹಿಂದಿನ (ಗ್ರಂಥವು) ಶೇಷ(ವಾಗಿರುತ್ತದೆ).

(ಆಕ್ಷೇಪ) :- ಹೀಗಿದ್ದರೂ ಅನುಶಾಸನವನ್ನು ಬಯಸಿದ ದೇವತೆಗಳೇ ಮುಂತಾದವರನ್ನು ಕುರಿತು ಪ್ರಜಾಪತಿಯು ಮೂರು ದಕಾರಗಳನ್ನು ಬೇರೆ ಬೇರೆಯಾಗಿ ಏಕೆ ಹೇಳಿದನು ? ಅವರಾದರೂ ಅದೇ ದಕಾರಮಾತ್ರದಿಂದ ಹೇಗೆ (ಹೀಗೆ) ಪ್ರಜಾಪತಿಯ ಮನೋಗತವನ್ನು ವಿಂಗಡಿಸಿಕೊಂಡು ತಿಳಿದು

1. ದಮಾದಿಗಳನ್ನು ಅಭ್ಯಾಸಮಾಡಿ ಇವುಗಳನ್ನು ಬಿಡಬೇಕು ಎಂದರ್ಥ.

ಕೊಂಡರು ?[1] ಎಂದು ಮತ್ತೊಬ್ಬರ ಅಭಿಪ್ರಾಯವನ್ನು ಬಲ್ಲವರು[2] ವಿಕಲ್ಪಿಸಿ (ಕೇಳುತ್ತಾರೆ).

ಇದಕ್ಕೆ ಕೆಲವರು[3] ಹೇಳುವದೇನೆಂದರೆ ಅದಾಂತರಾಗಿರುವದರಿಂದ, ಅದಾತೃಗಳಾಗಿರುವದರಿಂದ, (ಮತ್ತು) ಅದಯಾಲುಗಳಾಗಿರುವದರಿಂದ ತಾವು ಅಪರಾಧಿಗಳೆಂದೆಣಿಸಿಕೊಂಡು (ದೇವಾದಿಗಳು) ಪ್ರಜಾಪತಿಯು (ಬಳಿ)ಯಲ್ಲಿ ನಮಗೆ ಏನು ಹೇಳುವನೋ ಎಂದು ಶಂಕಿತರಾಗಿಯೇ (ಬ್ರಹ್ಮಚರ್ಯ ದಿಂದೊಡಗೂಡಿ) ವಾಸವಾಗಿದ್ದರು. ಮತ್ತು ಅವರಿಗೆ ದಕಾರವನ್ನು ಕೇಳಿದ ಮಾತ್ರದಿಂದಲೇ ತಮ್ಮ (ತಮ್ಮ) ಆಶಂಕೆಯ ವಶದಿಂದ (ಹಾಗೆ) ಅದರ ಅರ್ಥದ ಜ್ಞಾನವಾಯಿತು. ಪುತ್ರರೂ ಶಿಷ್ಯರೂ ಅನುಶಾಸನಕ್ಕೆ ಅರ್ಹರಾಗಿರುವದರಿಂದ (ಅವರನ್ನು) ದೋಷದಿಂದ ಬಿಡಿಸತಕ್ಕದ್ದು (ಯುಕ್ತ) ಎಂಬುದು ಲೋಕದಲ್ಲಿಯೂ ಪ್ರಸಿದ್ಧವಷ್ಟೆ. ಆದ್ದರಿಂದ ಪ್ರಜಾಪತಿಯು ದಕಾರಮಾತ್ರವನ್ನು ಉಚ್ಚರಿಸಿದ್ದು ದಮಾದಿತ್ರಯದಲ್ಲಿ ದಕಾರವು ಇದ್ದುಕೊಂಡಿರುವದರಿಂದ ತಮ್ಮ (ತಮ್ಮ) ದೋಷಕ್ಕೆ ಅನುಗುಣವಾಗಿ ದೇವಾದಿಗಳು (ಹಾಗೆ) ವಿಂಗಡಿಸಿ ತಿಳಿದುಕೊಂಡದ್ದು ಸರಿಯೇ (ಆಗಿದೆ. ಇದರಿಂದ ಸಿದ್ಧವಾಗುವ) ಫಲವೇನೆಂದರೆ ತಮ್ಮ ದೋಷವು ತಿಳಿದಿದ್ದರೆ ದೇವಾದಿಗಳನ್ನು ಹೇಗೆ ದಕಾರಮಾತ್ರ(ದ ಉಪದೇಶದಿಂದ ಅವರ ದೋಷದಿಂದ ತಪ್ಪಿಸುವದಾಯಿತೋ ಹಾಗೆ), ಸ್ವಲ್ಪವೇ ಉಪದೇಶದಿಂದ (ಶಿಷ್ಯಾದಿಗಳನ್ನು) ದೋಷದಿಂದ ತಪ್ಪಿಸುವದಕ್ಕಾಗುತ್ತದೆ ಎಂಬಿದೇ[4].

---

1. ಒಂದೇ ದಕಾರವನ್ನೇ ಮೂರು ಸಲ ಏಕೆ ಹೇಳಿದನು ? ದಮಾದಿಗಳೆಲ್ಲವನ್ನೂ ಅನುಶಾಸನಮಾಡಬೇಕಾಗಿತ್ತಲ್ಲವೆ ? ದೇವತೆಗಳಾದರೂ ಒಂದೊಂದನ್ನೇ ಏಕೆ ಅರ್ಥವೆಂದು ಅರಿತುಕೊಂಡರು ?– ಎಂದು ಆಕ್ಷೇಪ.

2. ಸಿದ್ಧಾಂತಿಯ ಅಭಿಪ್ರಾಯವನ್ನು ಬಲ್ಲವರು ; ಪರನಾದ ಪ್ರಜಾಪತಿಯ ಮತ್ತು ಮನುಷ್ಯಾದಿಗಳ ಅಭಿಪ್ರಾಯವನ್ನು ಬಲ್ಲವರು !– ಎಂದು ಹಾಸ್ಯಕ್ಕಾಗಿ ಹೇಳಿದ್ದಿದು –ಎಂಬ ಎರಡಭಿಪ್ರಾಯವನ್ನು ಟೀಕೆಯಲ್ಲಿ ಕೊಟ್ಟಿದೆ ; ಇಲ್ಲಿ ಎರಡನೆಯ ಅರ್ಥವೇ ಉತ್ತಮವೆಂತ ತೋರುತ್ತದೆ.

3. ಇದು ಕೆಲವರ ಮತವೇ ಎಂದು ಟೀಕೆ; ಆದರೆ ಹಿಂದಿನ ಅರ್ಥವಾದಭಾಷ್ಯವನ್ನು ನೋಡಿದರೆ ಇದು ಸಿದ್ಧಾಂತಿಸಮ್ಮತವೆಂದೇ ಹೇಳಬೇಕಾಗುತ್ತದೆ.

4. ಆದ್ದರಿಂದ ಪ್ರತಿಯೊಬ್ಬರೂ ಆತ್ಮಪರೀಕ್ಷೆಯಿಂದ ತಮ್ಮ ತಮ್ಮ ದೋಷವನ್ನರಿತುಕೊಂಡು ತಪ್ಪಿಸಿಕೊಳ್ಳುವದಕ್ಕೆ ಯತ್ನಿಸಬೇಕು ಎಂದಭಿಪ್ರಾಯ.

# ದಮಾದಿತ್ರಯವನ್ನು ಮನುಷ್ಯರಿಗೇ ಉಪದೇಶಿಸಿದೆ

(ಭಾಷ್ಯ)

೩೬೫. ನನು ಏತತ್ತ್ರಯಾಣಾಂ ದೇವಾದೀನಾಮ್ ಅನುಶಾಸನಮ್ । ದೇವಾದಿಭಿರಪಿ ಏಕೈಕಮೇವ ಉಪಾದೇಯಮ್ ಅದ್ಯತ್ವೇಽಪಿ, ನ ತು ತ್ರಯಂ ಮನುಷ್ಯೈಃ ಶಿಕ್ಷಿತವ್ಯಮಿತಿ । ಅತ್ರೋಚ್ಯತೇ । ಪೂರ್ವೈಃ ದೇವಾದಿಭಿರ್ವಿಶಿಷ್ಟೈಃ ಅನುಷ್ಠಿತಮ್ ಏತತ್ ತ್ರಯಮ್, ತಸ್ಮಾತ್ ಮನುಷ್ಯೈರೇವ ಶಿಕ್ಷಿತವ್ಯಮಿತಿ । ತತ್ರ ದಯಾಲುತ್ವಸ್ಯ ಅನನುಷ್ಠೇಯತ್ವಂ ಸ್ಯಾತ್ । ಕಥಮ್ ? ಅಸುರೈರ ಪ್ರಶಸ್ತೈರನುಷ್ಠಿತತ್ವಾತ್ ಇತಿ ಚೇತ್ । ನ । ತುಲ್ಯತ್ವಾತ್ ತ್ರಯಾಣಾಮ್ । ಅತಃ ಅನ್ಯೋಽತ್ರಾಭಿಪ್ರಾಯಃ । ಪ್ರಜಾಪತೇಃ ಪುತ್ರಾಃ ದೇವಾದಯಸ್ತ್ರಯಃ । ಪುತ್ರೇಭ್ಯಶ್ಚ ಹಿತಮೇವ ಪಿತ್ರಾ ಉಪದೇಷ್ಟವ್ಯಮ್ । ಪ್ರಜಾಪತಿಶ್ಚ ಹಿತಜ್ಞೋ ನಾನ್ಯಥಾ ಉಪದಿಶತಿ । ತಸ್ಮಾತ್ ಪುತ್ರಾನುಶಾಸನಂ ಪ್ರಜಾಪತೇಃ ಪರಮಮ್ ಏತತ್ ಹಿತಮ್ । ಅತಃ ಮನುಷ್ಯೈರೇವ ಏತತ್ತ್ರಯಂ ಶಿಕ್ಷಿತವ್ಯಮಿತಿ । ಅಥವಾ ನ ದೇವಾ ಅಸುರಾ ವಾ ಅನ್ಯೇ ಕೇಚನ ವಿದ್ಯನ್ತೇ ಮನುಷ್ಯೇಭ್ಯಃ । ಮನುಷ್ಯಾಣಾಮೇವ ಅದಾನ್ತಾಃ ಯೇಽನ್ಯೈಃ ಉತ್ತಮೈರ್ಗುಣೈಃ ಸಂಪನ್ನಾಃ ತೇ ದೇವಾಃ । ಲೋಭಪ್ರಧಾನಾ ಮನುಷ್ಯಾಃ । ತಥಾ ಹಿಂಸಾಪರಾಃ ಕ್ರೂರಾ ಅಸುರಾಃ । ತ ಏವ ಮನುಷ್ಯಾಃ ಅದಾನ್ತತ್ವಾದಿದೋಷತ್ರಯಮ್ ಅಪೇಕ್ಷ್ಯ ದೇವಾದಿಶಬ್ದಭಾಜೋ ಭವನ್ತಿ ಇತರಾಂಶ್ಚ ಗುಣಾನ್ ಸತ್ತ್ವರಜಸ್ತಮಾಂಸ್ಯ ಪೇಕ್ಷ್ಯ । ಅತೋ ಮನುಷ್ಯೈರೇವ ಶಿಕ್ಷಿತವ್ಯಮ್ ಏತತ್ತ್ರಯಮಿತಿ । ತದಪೇಕ್ಷ ಯೈವ ಪ್ರಜಾಪತಿನಾ ಉಪದಿಷ್ಟತ್ವಾತ್ । ತಥಾ ಹಿ ಮನುಷ್ಯಾ ಅದಾನ್ತಾ ಲುಬ್ಧಾಃ ಕ್ರೂರಾಶ್ಚ ದೃಶ್ಯನ್ತೇ । ತಥಾ ಚ ಸ್ಮೃತಿಃ "ಕಾಮಃ ಕ್ರೋಧಸ್ತಥಾ ಲೋಭಸ್ತಸ್ಮಾದೇತತ್ ತ್ರಯಂ ತ್ಯಜೇತ್ ॥" (ಗೀ. ೧೬-೨೧) ಇತಿ ॥

(ಭಾಷ್ಯಾರ್ಥ)

(ಆಕ್ಷೇಪ) :- ಇದು ದೇವಾದಿಗಳು ಮೂವರಿಗೆ ಅನುಶಾಸನ(ಮಾಡಿದ್ದ) ಲ್ಲವೆ ?[1] ಈಗಲೂ ದೇವತೆಗಳೇ ಮುಂತಾದವರೂ ಒಂದೊಂದನ್ನೇ ಸ್ವೀಕರಿಸ ತಕ್ಕದ್ದು.[2] ಈ ಮೂರನ್ನೂ ಮನುಷ್ಯರು ಕಲಿತುಕೊಳ್ಳಬೇಕೆಂದಿಲ್ಲವಲ್ಲ ![3]

(ಪರಿಹಾರ) :- ಇದಕ್ಕೆ ಹೇಳುತ್ತೇವೆ; ಈ ಮೂರನ್ನೂ ಹಿಂದಿನ ದೇವತೆ ಗಳೇ ಮುಂತಾದ ವಿಶಿಷ್ಟರು ಅನುಷ್ಠಾನಮಾಡಿದರು ; ಆದ್ದರಿಂದ ಮನುಷ್ಯರೇ

1. ಮನುಷ್ಯರಿಗೇ -ಎಂದೇನೂ ಹೇಳಿಲ್ಲವಲ್ಲ !
2. ಆದ್ದರಿಂದ ಮನುಷ್ಯರಿಗೆ ದಾನವೊಂದೇ ವಿಹಿತವಾಗಿವೆ ಎನ್ನಬೇಕು.
3. ಹೀಗೆಂದು ವಿಧಿಸಿವೆ ಎನ್ನುವದಕ್ಕಾಗಲಾರದಲ್ಲ !

(ಇವನ್ನು) ಕಲಿತುಕೊಳ್ಳಬೇಕು (ಎಂದು ವಿಧಿಯು).[1]

(ಆಕ್ಷೇಪ):- ಇವುಗಳಲ್ಲಿ ದಯಾಳುತ್ವವನ್ನು ಅನುಷ್ಠಿಸತಕ್ಕದ್ದಲ್ಲ (ವೆನ್ನ)ಬೇಕು. (ಅದು) ಹೇಗೆ? ಎಂದರೆ ಅಪ್ರಶಸ್ತರಾದ ಅಸುರರು ಅನುಷ್ಠಾನ ಮಾಡಿದ್ದದು.[2]

(ಪರಿಹಾರ):- ಹಾಗಲ್ಲ, ಏಕೆಂದರೆ ಮೂರೂ ಸಮಾನವಾಗಿವೆ.[3] ಆದ್ದರಿಂದ ಇಲ್ಲಿ ಮತ್ತೊಂದು ಅಭಿಪ್ರಾಯವಿದೆ: ದೇವಾದಿಗಳು ಮೂವರೂ ಪ್ರಜಾಪತಿಯ ಮಕ್ಕಳು. ಪುತ್ರರಿಗೆ[4] ಹಿತವನ್ನೇ ತಂದೆಯು ಉಪದೇಶಿಸಬೇಕು; ಪ್ರಜಾಪತಿಯೂ ಹಿತವನ್ನು ಬಲ್ಲವನಾದ್ದರಿಂದ (ಹಿತವಲ್ಲದ) ಬೇರೊಂದನ್ನು ಉಪದೇಶಮಾಡಲಾರನು.[5] ಆದ್ದರಿಂದ ಪುತ್ರರಿಗೆ ಪ್ರಜಾಪತಿಯು ಅನುಶಾಸನ ಮಾಡಿದ್ದಾದ್ದರಿಂದ ಇದು ಪರಮಹಿತವಾದದ್ದು.[6] ಆದ್ದರಿಂದ ಮನುಷ್ಯರೇ ಈ ಮೂರನ್ನೂ ಕಲಿಯಬೇಕು ಎಂದು (ಅಭಿಪ್ರಾಯ).[7]

ಅಥವಾ ಮನುಷ್ಯರಿಗಿಂತ ಬೇರೆಯಾದ ಯಾವ ದೇವತೆಗಳಾಗಲಿ ಅಸುರರಾಗಲಿ ಇಲ್ಲ.[8] ಮನುಷ್ಯರಲ್ಲಿಯೇ ಅದಾಂತರಾಗಿ ಮಿಕ್ಕ ಉತ್ತಮಗುಣ

---

1. ಇದು ಮೂರನ್ನೂ ವಿಧಿಸುವದಕ್ಕೆ ಹೇಳಿದ ಅರ್ಥವಾದವಾದ್ದರಿಂದ ಮೂರನ್ನೂ ವಿಧಿಸಿದೆ ಎಂಬುವೇ ಸರಿ ಎಂದಭಿಪ್ರಾಯ.

2. ಶಿಷ್ಟಾಚಾರವು ಧರ್ಮಕ್ಕೆ ಪ್ರಮಾಣವೇ ಹೊರತು ಅಶಿಷ್ಟರ ಅನುಷ್ಠಾನವಲ್ಲ ಎಂದು ಭಾವ.

3. ಮೂರನ್ನು ಕಲಿತುಕೊಳ್ಳಬೇಕು ಎಂದು ಸಮಾನವಾಗಿಯೇ ವಿಧಿಸಿದೆ.

4. ಪುತ್ರರೆಂದು ಅರ್ಥವಾದದಲ್ಲಿ ಹೇಳಿರುವದು ಹಿತಾನುಶಾಸನವಿದೆಂದು ತಿಳಿಸುವದಕ್ಕೆ.

5. ಅಜ್ಞರು ಅಹಿತವನ್ನು ಉಪದೇಶಿಸಬಹುದು; ಅಪ್ರತಿಹತಜ್ಞಾನವುಳ್ಳ ಪ್ರಜಾಪತಿಯು ಉಪದೇಶಿಸಲಾರನು.

6. ಇದೇ ಅರ್ಥವಾದದ ಅಭಿಪ್ರಾಯ; ಆದ್ದರಿಂದ ಅನುಷ್ಠಾತೃಗಳು ಅಸುರರಾದ್ದರಿಂದ ದಯೆಯನ್ನು ಮಾಡತಕ್ಕದ್ದಲ್ಲ ಎಂಬರ್ಥವನ್ನು ಇಲ್ಲಿ ತೆಗೆಯಬಾರದು ಎಂದು ಭಾವ.

7. ಏಕೆಂದರೆ ಶಾಸ್ತ್ರವು ಮನುಷ್ಯರಿಗಾಗಿ ಹುಟ್ಟಿದ್ದು. ಸೂ. ಭಾ. ೧-೩-೨೫ (ಭಾ. ಭಾ. ೨೭೯)ನ್ನು ನೋಡಿ.

8. ಇದು ಮೀಮಾಂಸಕರ ಅಭಿಪ್ರಾಯ. ಜೈ. ಸೂ. ೮-೧-೩೪, ೯-೧-೬ರಿಂದ ೧೦ -ಇವುಗಳ ಭಾಷ್ಯವನ್ನು ನೋಡಿ. ವೇದಾಂತಿಗಳು ದೇವತೆಗಳನ್ನು ಒಪ್ಪಿರುತ್ತಾರೆ. ಸೂ. ಭಾ. ೧-೩-೨೬ರಿಂದ ೧-೩-೩೮ರವರೆಗೆ ದೇವತೆಗಳಿಗೆ ಬ್ರಹ್ಮವಿದ್ಯೆಯಲ್ಲಿಯೂ ಅಧಿಕಾರವಿದೆ ಎಂದು ಸ್ಥಾಪಿಸಿದೆ. ಛಾಂ. ಭಾ. ೫-೧-೧೫ರ ಕೊನೆಯಲ್ಲಿ ದೇವತೆಗಳ ಅಸ್ತಿತ್ವವನ್ನು ಸ್ಥಾಪಿಸಿದೆ. ಆದ್ದರಿಂದ ಇಲ್ಲಿ ಮನುಷ್ಯರಲ್ಲಿಯೇ ದೇವಮನುಷ್ಯಾಸುರರೆಂಬ ಭೇದವನ್ನು ಗೌಣವಾಗಿ ಒಪ್ಪಬಹುದೆಂಬಿಷ್ಟಕ್ಕೆ ಮಾತ್ರ ಈ ವಾಕ್ಯದರ್ಥವನ್ನು ಸಂಕೋಚಮಾಡಿಕೊಳ್ಳಬೇಕು. ಹಿಂದೆ ೧-೩-೧ರ ಭಾಷ್ಯ (ಭಾ. ಭಾ. ೪೫)ರಲ್ಲಿ ವಾಗಾದಿಗಳಿಗೆ ದೇವಾಸುರತ್ವವನ್ನು ಕಲ್ಪಿಸಿರುವದನ್ನೂ ಹೀಗೆಯೇ ತಿಳಿಯಬೇಕು.

ಗಳಿಂದ ಕೂಡಿರುವವರು ದೇವತೆಗಳು, ಲೋಭಪ್ರಧಾನರಾಗಿರುವವರು ಮನುಷ್ಯರು; ಹೀಗೆಯೇ ಹಿಂಸಾಪರರಾಗಿರುವ ಕ್ರೂರರು ಅಸುರರು. ಅದೇ ಮನುಷ್ಯರೇ ಅದಾಂತತ್ವವೇ ಮುಂತಾದ ದೋಷತ್ರಯದಿಂದಲೂ ಮತ್ತು ಸತ್ತ್ವ, ರಜ, ತಮ- ಇವುಗಳಿಂದಾದ ಇತರ ಗುಣಗಳಿಂದಲೂ ದೇವತೆಗಳು ಮುಂತಾದ ಶಬ್ದಕ್ಕೆ ಪಾತ್ರರಾಗಿರುತ್ತಾರೆ. ಆದ್ದರಿಂದ ಮನುಷ್ಯರೇ ಈ ಮೂರನ್ನೂ ಕಲಿತುಕೊಳ್ಳಬೇಕು, ಏಕೆಂದರೆ ಅವರಿಗಾಗಿಯೇ ಪ್ರಜಾಪತಿಯು (ಇವುಗಳನ್ನು) ಹೇಳಿರುತ್ತಾನೆ; ಆದ್ದರಿಂದಲೇ[1] ಅಲ್ಲವೆ, ಮನುಷ್ಯರು ಅದಾಂತರೂ ಲುಬ್ಧರೂ ಕ್ರೂರರೂ ಆಗಿರುವದು ಕಂಡುಬರುತ್ತದೆ? ಹೀಗೆಂದು[2] "ಕಾಮ, ಕ್ರೋಧ, ಮತ್ತು ಲೋಭ (-ಇವು ಮೂರೂ ನರಕದ ಬಾಗಿಲು); ಆದ್ದರಿಂದ ಈ ಮೂರನ್ನೂ ಬಿಡಬೇಕು" (ಗೀ. ೧೬-೨೧) ಸ್ಮೃತಿಯೂ (ಇದೆ).

---

1. ಮನುಷ್ಯರಲ್ಲಿಯೇ ದೇವತ್ವವೇ ಮುಂತಾದ ಮೂರು ಸ್ವಭಾವಗಳೂ ಇರುವದರಿಂದಲೇ.

2. ಈ ಮೂರನ್ನು ಬಿಡುವದಕ್ಕಾಗಿ ದಮಾದಿಗಳನ್ನು ಅಭ್ಯಾಸಮಾಡಬೇಕೆಂದು ಎಂದರ್ಥ. ಈ ಗೀತಾವಾಕ್ಯದಲ್ಲಿ ಕಾಮಾದಿಗಳು ಮೂರನ್ನೂ ಆಸುರಸ್ವಭಾವದ ಸಂಗ್ರಹವಾಗಿ ತಿಳಿಸಿರುತ್ತದೆಯಾದರೂ ಇವು ಮನುಷ್ಯರಲ್ಲಿಯೇ ಇರುವವಾದ್ದರಿಂದ ಇವುಗಳನ್ನು ಪ್ರತಿಪಕ್ಷದ ಅಭ್ಯಾಸದಿಂದ ತಪ್ಪಿಸಿಕೊಳ್ಳಬೇಕು ಎಂಬ ಅಭಿಪ್ರಾಯವೂ ಅಡಗಿದೆ.

# ಎರಡನೆಯ ಬ್ರಾಹ್ಮಣದ ಸಾರ

ಇಲ್ಲಿ ದಮಾದಿಗಳನ್ನು ಉಪಾಸನಾಂಗವಾಗಿ ವಿಧಿಸಿದೆ.

೧. ಪ್ರಜಾಪತಿಯ ಮಕ್ಕಳು ದೇವತೆಗಳು, ಮನುಷ್ಯರು, ಅಸುರರು – ಎಂದು ಮೂರು ಬಗೆ. ಇವರು ಆತನ ಬಳಿಯಲ್ಲಿ ಬ್ರಹ್ಮಚರ್ಯದಿಂದ ವಾಸವಾಗಿದ್ದರು.

ಅವರೊಳಗೆ ದೇವತೆಗಳು 'ನಮಗೆ ಹಿತಾನುಶಾಸನವನ್ನು ಮಾಡು' ಎಂದು ತಂದೆಯನ್ನು ಬೇಡಿಕೊಂಡರು. ಅವನು 'ದ' ಎಂಬಕ್ಷರವನ್ನುಚ್ಚರಿಸಿ 'ತಿಳಿಯಿತೆ?' ಎಂದನು. ಅವರು 'ತಿಳಿಯಿತು, ದಾಂತರಾಗಿರಿ ಎಂದಿದೀಯೆ!' ಎಂದರು. ಅವನು 'ಸರಿ, ನಿಮಗೆ ತಿಳಿದಿದೆ' ಎಂದನು.

೨. ಆಗ ಮನುಷ್ಯರು 'ನಮಗೆ ಹಿತಾನುಶಾಸನವನ್ನು ಮಾಡು!' ಎಂದರು. ಅವರಿಗೂ ಅದೇ 'ದ' ಎಂಬಕ್ಷರವನ್ನುಪದೇಶಿಸಿ 'ತಿಳಿಯಿತೆ?' ಎಂದು ಪ್ರಜಾಪತಿಯು ಕೇಳಿದನು. ಅವರು 'ತಿಳಿಯಿತು, ದಾನಮಾಡಿರಿ ಎಂದೆ' ಎಂದರು. ಅವನು 'ಸರಿ, ನಿಮಗೆ ತಿಳಿದಿದೆ' ಎಂದನು.

೩. ಆಬಳಿಕ ಅಸುರರೂ ಹಾಗೆಯೇ ಅನುಶಾಸನವನ್ನು ಕೇಳಿಕೊಂಡರು. ಅವರಿಗೂ 'ದ' ಎಂದು ಉಪದೇಶಿಸಿ 'ತಿಳಿಯಿತೆ?' ಎಂದು ಕೇಳಲು ಅವರು, 'ತಿಳಿಯಿತು, ದಯೆಯನ್ನು ತೋರಿಸಿರಿ ಎಂದೆ' ಎಂದರು. ಅವನು 'ನಿಮಗೆ ತಿಳಿದಿದೆ' ಎಂದನು.

೪. ಈಗಲೂ ದೈವವಾಕ್ಯಾದ ಗುಡುಗು ಮನುಷ್ಯರಲ್ಲಿ ಈ ಮೂರು ಸ್ವಭಾವವೂ ಇರುವದರಿಂದಲೇ ಇದನ್ನು ಅನುಕರಿಸಿ 'ದ ದ ದ!' ಎಂದೇ ನುಡಿಯುತ್ತದೆ. ಅದ್ದರಿಂದ ದಮ, ದಾನ, ದಯೆ – ಈ ಮೂರನ್ನೂ ಅಭ್ಯಾಸಮಾಡಬೇಕು.

---

# ಐದನೆಯ ಅಧ್ಯಾಯ-ಮೂರನೆಯ ಬ್ರಾಹ್ಮಣ

(ಹೃದಯಾಕ್ಷರಗಳ ಉಪಾಸನೆ)

## ಹೃದಯುವನ್ನು ಪ್ರಜಾಪತಿ ಎಂದು ಉಪಾಸನೆಮಾಡಬೇಕು

(ಉಪನಿಷತ್ತು)

**ಏಷ ಪ್ರಜಾಪತಿರ್ಯದ್ ಹೃದಯುಮೇತದ್ಬ್ರಹ್ಮೈತತ್ ಸರ್ವಂ ತದೇತತ್ ತ್ರ್ಯಕ್ಷರಗ್ಂ ಹೃದಯುಮಿತಿ ಹೃ ಇತ್ಯೇಕಮಕ್ಷರ ಮಭಿಹರನ್ತ್ಯಸ್ಮೈ ಸ್ವಾಶ್ಚಾನ್ಯೇ ಚ ಯ ಏವಂ ವೇದ ದ ಇತ್ಯೇಕಮಕ್ಷರಂ ದದತ್ಯಸ್ಮೈ ಸ್ವಾಶ್ಚಾನ್ಯೇ ಚ ಯ ಏವಂ ವೇದ ಯಮಿತ್ಯೇಕಮಕ್ಷರಮೇತಿ ಸ್ವರ್ಗಂ ಲೋಕಂ ಯ ಏವಂ ವೇದ॥**

೧. ಹೃದಯುವೆಂಬು(ದಿದೆ)ಯಲ್ಲ, ಇದೇ ಪ್ರಜಾಪತಿಯು. ಇದೇ ಬ್ರಹ್ಮವು, ಇದೇ ಎಲ್ಲವೂ. 'ಹೃದಯ' ಎಂಬಿದು ಮೂರಕ್ಷರ ವುಳ್ಳದ್ದು. ಹೃ ಎಂಬುದು ಒಂದು ಅಕ್ಷರವು ; ಯಾವನು ಹೀಗೆಂದು ಅರಿಯುವನೋ ಅವನಿಗೆ ತನ್ನವರೂ ಅನ್ಯರೂ ಅಭಿಹರಣಮಾಡು ವರು. ದ ಎಂಬುದು ಒಂದು ಅಕ್ಷರವು; ಯಾವನು ಹೀಗೆಂದು ಅರಿಯುವನೋ ಅವನಿಗೆ ತನ್ನವರೂ ಅನ್ಯರೂ ದಾನಮಾಡುವರು. ಯ ಎಂಬುದು ಒಂದು ಅಕ್ಷರವು ; ಯಾವನು ಹೀಗೆಂದು ಅರಿಯು ವನೋ (ಅವನು) ಸ್ವರ್ಗಲೋಕಕ್ಕೆ (ಪ್ರ)ಯಾಣಮಾಡುವನು.

## ಗ್ರಂಥಸಂಬಂಧ

(ಭಾಷ್ಯ)

೩೩೬. ದಮಾದಿಸಾಧನತ್ರಯಂ ಸರ್ವೋಪಾಸನಶೇಷಂ ವಿಹಿತಮ್ । ದಾನ್ತೋಽಲುಬ್ಧಃ ದಯಾಲುಃ ಸನ್ ಸರ್ವೋಪಾಸನೇಷು ಅಧಿಕ್ರಿಯತೇ । ತತ್ರ ನಿರುಪಾಧಿಕಸ್ಯ ಬ್ರಹ್ಮಣೋ ದರ್ಶನಮ್ ಅತಿಕ್ರಾನ್ತಮ್ । ಅಥಾಧುನಾ ಸೋಪಾಧಿಕಸ್ಯ ತಸ್ಯೈವ ಅಭ್ಯುದಯಫಲಾನಿ ವಕ್ತವ್ಯಾನಿ ಇತ್ಯೇವಮರ್ಥೋಽ ಯಮಾರಮ್ಭಃ ॥

(ಭಾಷ್ಯಾರ್ಥ)

ಎಲ್ಲಾ ಉಪಾಸನೆಗಳಿಗೂ ಶೇಷವಾಗಿ ದಮವೇ ಮುಂತಾದ ಸಾಧನತ್ರಯ ವನ್ನು ವಿಧಿಸಿದ್ದಾಗಿದೆ. ದಾನ್ತನೂ, ಅಲುಬ್ಧನೂ ದಯಾಲುವೂ ಆದವನು ಎಲ್ಲಾ

ಉಪಾಸನೆಗಳಿಗೂ ಅಧಿಕಾರಿಯಾಗಿರುತ್ತಾನೆ. ಇಲ್ಲಿ ನಿರುಪಾಧಿಕವಾದ ಬ್ರಹ್ಮದ ದರ್ಶನವನ್ನು (ಹೇಳಿ) ಮುಗಿಸಿದೆ.[1] ಇನ್ನು ಈಗ ಸೋಪಾಧಿಕವಾಗಿರುವ ಅದೇ (ಬ್ರಹ್ಮದ) ಅಭ್ಯುದಯಫಲವುಳ್ಳ[2] (ಉಪಾಸನೆಗಳನ್ನು) ಹೇಳಬೇಕಾಗಿದೆ ಯೆಂಬೀ ಪ್ರಯೋಜನಕ್ಕಾಗಿ ಈ (ಗ್ರಂಥದ) ಆರಂಭವಾಗಿರುತ್ತದೆ

## ಹೃದಯವು ಸರ್ವಾತ್ಮಕಬ್ರಹ್ಮವಾಗಿರುತ್ತದೆ

(ಭಾಷ್ಯ)

೩೬೭. ಏಷ ಪ್ರಜಾಪತಿರ್ಯದ್ ಹೃದಯಮ್ । ಪ್ರಜಾಪತಿರನುಶಾಸ್ತಿ ಇತಿ ಅನನ್ತರಮೇವ ಅಭಿಹಿತಮ್ । ಕಃ ಪುನರಸೌ ಅನುಶಾಸ್ತಾ ಪ್ರಜಾಪತಿರಿತಿ ? ಉಚ್ಯತೇ । ಏಷ ಪ್ರಜಾಪತಿಃ । ಕೋಽಸೌ ? ಯದ್ ಹೃದಯಮ್ । ಹೃದಯಮ್ ಇತಿ ಹೃದಯಸ್ಥಾ ಬುದ್ಧಿರುಚ್ಯತೇ । ಯಸ್ಮಿನ್ ಶಾಕಲ್ಯಬ್ರಾಹ್ಮಣಾನ್ತೇ ನಾಮರೂಪಕರ್ಮಣಾಮ್ ಉಪಸಂಹಾರಃ ಉಕ್ತೋ ದಿಗ್ವಿಭಾಗದ್ವಾರೇಣ, ತದೇತತ್ ಸರ್ವಭೂತಪ್ರತಿಷ್ಠಂ[3] ಸರ್ವಭೂತಾತ್ಮಭೂತಂ ಹೃದಯಂ ಪ್ರಜಾಪತಿಃ ಪ್ರಜಾನಾಂ ಸ್ರಷ್ಟಾ । ಏತದ್ ಬ್ರಹ್ಮ । ಬೃಹತ್ತ್ವಾತ್ ಸರ್ವಾತ್ಮತ್ವಾಚ್ಚ ಬ್ರಹ್ಮ । ಏತತ್ ಸರ್ವಮ್ । ಉಕ್ತಂ ಪಞ್ಚಮಾಧ್ಯಾಯೇ ಹೃದಯಸ್ಯ ಸರ್ವತ್ವಮ್ । ತತ್ ಸರ್ವಮ್ ಯಸ್ಮಾತ್ ತಸ್ಮಾತ್ ಉಪಾಸ್ಯಂ ಹೃದಯಂ ಬ್ರಹ್ಮ ॥

(ಭಾಷ್ಯಾರ್ಥ)

'ಏಷ ಪ್ರಜಾಪತಿರ್ಯದ್ ಹೃದಯಮ್' (ಎಂಬ ಕಂಡಿಕೆಯ ಅರ್ಥವಿದು) : ಪ್ರಜಾಪತಿಯು ಅನುಶಾಸನಮಾಡುತ್ತಾನೆ ಎಂದು (ಈ) ಹಿಂದೆಯೇ[4] ಹೇಳಿರುತ್ತದೆಯಷ್ಟೆ. ಈ ಅನುಶಾಸನಮಾಡುವ ಪ್ರಜಾಪತಿ ಯಾರು ? ಎಂದರೆ ಹೇಳಲಾಗುತ್ತದೆ. ಇದೇ ಪ್ರಜಾಪತಿಯು. ಅದು ಯಾರು ?

---

1. ಇಲ್ಲಿ ಎಂದರೆ ಹಿಂದಿನ ಕಾಂಡದ್ವಯದಲ್ಲಿ ಎಂದು ಟೀಕೆ ; ಓಂ ಖಂ ಬ್ರಹ್ಮ -ಎಂಬಲ್ಲಿ ಎಂಬರ್ಥವು ಸ್ವರಸವಾಗಿ ಕಾಣುತ್ತದೆ ; ಏಕೆಂದರೆ ಅದು ನಿರುಪಾಧಿಕಬ್ರಹ್ಮದ ಉಪಾಸನೆ ಎಂದು (ಭಾ. ಭಾ. ೩೫೭ ರಲ್ಲಿ) ಹೇಳಿರುತ್ತವೆ ಅಥವಾ ಓಂಕಾರೋಪಾಸನೆಯೂ ಸರ್ವೋಪಾಸನಾಶೇಷವೆಂದು ಭಾವಿಸಿದರೆ ಟೀಕೆಯ ಅರ್ಥವೂ ಆಗಬಹುದು. ಈ ಬ್ರಾಹ್ಮಣಕ್ಕೆ ಅವತರಣಿಕೆಯನ್ನು (ಭಾ. ಭಾ. ೩೪೬) ನೋಡಿ.

2. ಹಿಂದಿನ ಉಪಾಸನೆಯು ನಿಃಶ್ರೇಯಸಕ್ಕೆ ಸಾಧನ ; ಇದು ಅಭ್ಯುದಯಕ್ಕೆ ಮೋಕ್ಷಕ್ಕಿಂತ ಕಡಿಮೆಯ ತರದ ಏಳಿಗೆಗೆ ಸಾಧನ. ಈ ಫಲಗಳನ್ನು ಅಲ್ಲಲ್ಲಿಯೇ ಹೇಳಿರುತ್ತದೆ.

3. ಪ್ರವಿಷ್ಟಂ ಎಂಬುದಕ್ಕಿಂತ ಈ ಪಾಠವೇ ಮೇಲು.

4. ಭಾ. ಭಾ. ೩೬೩ ವನ್ನು ನೋಡಿ.

ಎಂದರೆ ಈ ಹೃದಯುದವೆಂಬುದು. (ಇಲ್ಲಿ) ಹೃದಯ ಎಂದು ಹೃದಯದಲ್ಲಿರುವ ಬುದ್ಧಿಯನ್ನು ಹೇಳಿದೆ. ಈ (ಹೃದಯ)ದಲ್ಲಿಯೇ ದಿಗ್ವಿಭಾಗ(ವನ್ನು ಮಾಡುವ) ಮೂಲಕವಾಗಿ ನಾಮರೂಪಕರ್ಮಗಳ ಉಪಸಂಹಾರವನ್ನು **ಶಾಕಲ್ಯಬ್ರಾಹ್ಮಣದ ಕೊನೆಯಲ್ಲಿ**[1] ಹೇಳಿತ್ತಲ್ಲ, ಆ ಈ ಸರ್ವಭೂತಗಳಿಗೂ ಪ್ರತಿಷ್ಠೆಯಾಗಿರುವ, ಸರ್ವಭೂತಗಳಿಗೂ ಆತ್ಮವಾಗಿರುವ, ಹೃದಯವು ಪ್ರಜಾಪತಿಯು,[2] ಪ್ರಜೆಗಳ ಸ್ರಷ್ಟೃವು. ಇದೇ ಬ್ರಹ್ಮವು ; ಏಕೆಂದರೆ ದೊಡ್ಡದಾದ್ದರಿಂದಲೂ ಸರ್ವಾತ್ಮಕವಾಗಿರುವದರಿಂದಲೂ ಬ್ರಹ್ಮವು.[3] ಇದೇ ಎಲ್ಲವೂ ; ಐದನೆಯ ಅಧ್ಯಾಯದ ಕೊನೆಯಲ್ಲಿ ಹೃದಯವು ಸರ್ವವೂ (ಆಗಿದೆ ಎಂಬುದನ್ನು) ಹೇಳಿದೆ. ಅದು ಸರ್ವವೂ ಆಗಿದೆಯಷ್ಟೆ, ಆದ್ದರಿಂದ ಹೃದಯಬ್ರಹ್ಮವನ್ನು ಉಪಾಸನೆಮಾಡತಕ್ಕದ್ದು.[4]

## ಹೃದಯನಾಮಾಕ್ಷರಗಳ ಉಪಾಸನೆ

(ಭಾಷ್ಯ)

೩೬೮. ತತ್ರ ಹೃದಯನಾಮಾಕ್ಷರವಿಷಯಮೇವ ತಾವತ್ ಉಪಾಸನಮುಚ್ಯತೇ । ತದೇತತ್ ಹೃದಯಮ್ ಇತಿ ನಾಮ ತ್ರ್ಯಕ್ಷರಮ್ । ತ್ರೀಣಿ ಅಕ್ಷರಾಣಿ ಅಸ್ಯ ಇತಿ ತ್ರ್ಯಕ್ಷರಮ್ । ಕಾನಿ ಪುನಸ್ತಾನಿ ತ್ರೀಣಿ ಅಕ್ಷರಾಣಿ ? ಉಚ್ಯನ್ತೇ । ಹೃ ಇತ್ಯೇಕಮ್ ಅಕ್ಷರಮ್ । ಅಭಿಹರನ್ತಿ । ಹೃತೇಃ ಆಹೃತಿಕರ್ಮಣಃ ಹೃ ಇತ್ಯೇತದ್ ರೂಪಮ್ ಇತಿ ಯೋ ವೇದ । ಯಸ್ಮಾದ್ ಹೃದಯಾಯ ಬ್ರಹ್ಮಣೇ ಸ್ವಾಶ್ಚ ಇನ್ದ್ರಿಯಾಣಿ ಅನ್ಯೇ ಚ ವಿಷಯಾಃ ಶಬ್ದಾದಯಃ ಸ್ವಂ ಸ್ವಂ ಕಾರ್ಯಮ್ ಅಭಿರಹನ್ತಿ । ಹೃದಯಂ ಚ ಭೋಕ್ತ್ರರ್ಥಮ್ ಅಭಿಹರತಿ । ಅತಃ ಹೃದಯನಾಮ್ನಃ ಹೃ ಇತ್ಯೇತತ್ ಅಕ್ಷರಮ್ ಇತಿ ಯೋ ವೇದ ಅಸ್ಮೈ ವಿದುಷೇ ಅಭಿಹರನ್ತಿ ಸ್ವಾಶ್ಚ ಜ್ಞಾತಯಃ । ಅನ್ಯೇ ಚ ಅಸಂಬದ್ಧಾಃ । ಬಲಿಮ್ ಇತಿ ವಾಕ್ಯಶೇಷಃ । ವಿಜ್ಞಾನಾನುರೂಪ್ಯೇಣ ಏತತ್ ಫಲಮ್ । ತಥಾ ದ ಇತ್ಯೇತದಪಿ ಏಕಾಕ್ಷರಮ್ । ಏತದಪಿ ದಾನಾರ್ಥಸ್ಯ ದದಾತೇರ್ದ ಇತ್ಯೇತದ್ರೂಪಂ ಹೃದಯನಾಮಾಕ್ಷರತ್ವೇನ ನಿಬದ್ಧಮ್ । ಅತ್ರಾಪಿ ಹೃದಯಾಯ ಬ್ರಹ್ಮಣೇ ಸ್ವಾಶ್ಚ ಕರಣಾನಿ ಅನ್ಯೇ ಚ ವಿಷಯಾಃ ಸ್ವಂ

---

1. ೩-೯-೨೪ (ಭಾ. ಭಾ. ೧೨೦)ದಲ್ಲಿ ಇದನ್ನು ಹೇಳಿದೆ.
2. ಈ ಬುದ್ಧಿಯು ಜ್ಞೇಯವನ್ನೆಲ್ಲ ವ್ಯಾಪಿಸಿಕೊಂಡಿರುವದರಿಂದ ಬ್ರಹ್ಮವು ಎಂದರ್ಥ.
3. ಪ್ರಜಾಪತಿಯು ಸರ್ವಾತ್ಮಕನಾಗಿರುವಂತೆ ಹೃದಯವೂ ಸರ್ವಾತ್ಮಕವಾಗಿರುವದರಿಂದ ಹೃದಯವನ್ನು ಪ್ರಜಾಪತಿ ಎಂದು ಕರೆದಿದೆ.
4. ಇವು ಹೃದಯಬ್ರಹ್ಮೋಪಾಸನಾವಿಧಿಗೆ ಅರ್ಥವಾದವು ಎಂದು ಭಾವ.

ಸ್ವಂ ವೀರ್ಯಂ ದದತಿ । ಹೃದಯಂ ಚ ಭೋಕ್ತ್ರೇ ದದಾತಿ ಸ್ವಂ ವೀರ್ಯಮ್, ಅತೋ ದಕಾರಃ ಇತ್ಯೇವಂ ಯೋ ವೇದ ಅಸ್ಮೈ ದದಾತಿ ಸ್ವಾಶ್ಚ ಅನ್ಯೇ ಚ । ತಥಾ ಯಮ್ ಇತ್ಯೇತದಪಿ ಏಕಮಕ್ಷರಮ್ । ಇಣೋ ಗತ್ಯರ್ಥಸ್ಯ ಯಮ್ ಇತ್ಯೇತದ್ ರೂಪಮ್ ಅಸ್ಮಿನ್ ನಾಮ್ನಿ ನಿಬದ್ಧಮ್ ಇತಿ ಯೋ ವೇದ ಸ ಸ್ವರ್ಗಂ ಲೋಕಮ್ ಏತಿ । ಏವಂ ನಾಮಾಕ್ಷರಾದಪಿ ಈದೃಶಂ ವಿಶಿಷ್ಟಂ ಫಲಂ ಪ್ರಾಪ್ನೋತಿ ಕಿಮು ವಕ್ತವ್ಯಂ ಹೃದಯಸ್ವರೂಪೋಪಾಸನಾತ್ ಇತಿ ಹೃದಯಸ್ತುತಯೇ ನಾಮಾಕ್ಷರೋಪನ್ಯಾಸಃ ॥

(ಭಾಷ್ಯಾರ್ಥ)

ಇಲ್ಲಿ ಹೃದಯವೆಂಬ ಹೆಸರಿನಲ್ಲಿರುವ ಅಕ್ಷರಗಳ ವಿಷಯವಾಗಿರುವ ಉಪಾಸನೆಯನ್ನೇ ಮೊದಲು ಹೇಳಲಾಗುತ್ತದೆ[1] ಈ ಹೃದಯವೆಂಬ ಹೆಸರು ಮೂರು ಅಕ್ಷರದ್ದು ; ಇದರಲ್ಲಿ ಮೂರು ಅಕ್ಷರಗಳು ಇರುವದರಿಂದ ಇದು ತ್ರ್ಯಕ್ಷರವು (ಎಂದಿದೆ). ಆ ಮೂರು ಅಕ್ಷರಗಳು ಯಾವವು ? ಎಂದರೆ ಶ್ರುತಿ ಹೇಳುತ್ತಿದೆ.

ಹೃ ಎಂಬುದು ಒಂದು ಅಕ್ಷರವು ಅಭಿಹರಣಮಾಡುವರು. ತರು (ಎಂಬರ್ಥದ) ಕ್ರಿಯೆಯನ್ನು ಹೇಳುವ ಹೃಧಾತುವಿನ ರೂಪವಿದು ಎಂದು ಯಾವನು ಅರಿತುಕೊಳ್ಳುವನೋ- ಹೃದಯಬ್ರಹ್ಮಕ್ಕೆ ತನ್ನವರಾದ ಇಂದ್ರಿಯಗಳೂ ಅನ್ಯರಾದ ಶಬ್ದಾದಿವಿಷಯಗಳೂ ತಮ್ಮ ತಮ್ಮ ಕಾರ್ಯವನ್ನು ತಂದೊಪ್ಪಿಸುತ್ತಾರೆ, ಹೃದಯವೂ ಭೋಕ್ತೃವಿಗೆ (ಆಯಾ) ಅರ್ಥವನ್ನು ತಂದೊಪ್ಪಿಸುತ್ತದೆ. ಅಲ್ಲವೆ ? ಆದ್ದರಿಂದ ಹೃದಯವೆಂಬ ಹೆಸರಿಗೆ ಈ ಹೃ ಎಂಬುದು (ಒಂದು) ಅಕ್ಷರವು ಯಾವನು ಅರಿತುಕೊಳ್ಳುವನೋ[2]—ಆ ಜ್ಞಾನಿಗೆ ತನ್ನವರಾದ ಜ್ಞಾತಿಗಳೂ ಅನ್ಯರಾದ ಸಂಬಂಧಿಗಳಲ್ಲದವರೂ ಅಭಿಹರಣ ಮಾಡುವರು, 'ಕಾಣಿಕೆಯನ್ನು' (ತಂದೊಪ್ಪಿಸುವರು) ಎಂದು (ಈ) ವಾಕ್ಯಕ್ಕೆ ಶೇಷವನ್ನು (ಸೇರಿಸಿಕೊಳ್ಳಬೇಕು). ಉಪಾಸನೆಗೆ ಅನುಗುಣವಾಗಿ ಈ ಫಲವಾಗುತ್ತದೆ[3]

1. ನಾಮದ ಉಪಾಸನೆಯೂ ನಾಮಿಯ ಉಪಾಸನೆಯೇ ; ಛಾಂ. ಭಾ. ೧-೩-೬ ರಲ್ಲಿ ಉದ್ಗೀಥಾಕ್ಷರದ ಉಪಾಸನೆಯ ವರ್ಣನೆಯನ್ನು ನೋಡಿ.

2. ಹೃದಯಶಬ್ದದಲ್ಲಿರುವ ಹೃ ಎಂಬೀ ಅಕ್ಷರವು ವಿಷಯಗಳೂ ಇಂದ್ರಿಯಗಳೂ ಹೃದಯಬ್ರಹ್ಮಕ್ಕೆ ತಮ್ಮ ತಮ್ಮ ಕಾರ್ಯವನ್ನೊಪ್ಪಿಸುವವು ಎಂಬರ್ಥವನ್ನು ಬೋಧಿಸುತ್ತದೆ ಎಂದು ಉಪಾಸನೆಮಾಡುವನೋ.

3. ಹೃದಯವು ಆತ್ಮನಿಗೆ ಆಯಾ ಅರ್ಥವನ್ನು ಮುಟ್ಟಿಸುವಂತೆ ಜ್ಞಾತ್ಯಾದಿಗಳು ಕಾಣಿಕೆಯನ್ನೊಪ್ಪಿಸುವರು ಎಂಬಿದು ಉಪಾಸನೆಗೆ ಅನುಗುಣವಾದ ಫಲವಾಗಿದೆ. ಹೇಗೆ ಉಪಾಸನೆಮಾಡುವರೋ ಅದರಂತೆ ಆಗುವದು –ಎಂಬ ಶತಪಥಬ್ರಾಹ್ಮಣವಾಕ್ಯದ ಸೂಚನೆಯಿದು.

ಹೀಗೆಯೇ ದ ಎಂಬುದೂ (ಈ ಹೆಸರಿನ) ಒಂದಕ್ಷರವು. ಇದೂ ಕೊಡು ಎಂಬರ್ಥದ ದಾ ಧಾತುವಿನಿಂದ ದ ಎಂಬೀ ರೂಪವು; (ಇದನ್ನೇ) ಹೃದಯ ನಾಮದ (ಒಂದು) ಅಕ್ಷರವಾಗಿ ಸೇರಿಸಿರುತ್ತದೆ. ಇಲ್ಲಿಯೂ ಹೃದಯಬ್ರಹ್ಮಕ್ಕೆ ತನ್ನವರಾದ ಕರಣಗಳೂ ಅನ್ಯರಾದ ವಿಷಯಗಳೂ ತಮ್ಮತಮ್ಮ ವೀರ್ಯವನ್ನು ಕೊಡುತ್ತವೆ, ಹೃದಯವು ಭೋಕ್ತೃವಿಗೆ ತನ್ನ (ಈ) ವೀರ್ಯವನ್ನು ಕೊಡುತ್ತದೆ. ಆದ್ದರಿಂದ ದಕಾರವು (ಹೃದಯದ ಒಂದಕ್ಷರವು) ಎಂದಿಂತು ಯಾವನು ಉಪಾಸನೆಮಾಡುವನೋ, ಅವನಿಗೆ ತನ್ನವರೂ ಅನ್ಯರೂ (ತಮ್ಮತಮ್ಮ ವೀರ್ಯವನ್ನು) ಕೊಡುತ್ತಾರೆ.

ಹೀಗೆಯೇ ಯಮ್ ಎಂಬುದೂ (ಇದರ) ಒಂದಕ್ಷರವು. ಗಮನ ಎಂಬರ್ಥದ ಇಣ್ ಧಾತುವಿನಿಂದ (ಬಂದಿರುವ) ಯಮ್ ಎಂಬೀ ರೂಪವೇ ಈ (ಹೃದಯ)ನಾಮದಲ್ಲಿ ಸೇರಿಸಲ್ಪಟ್ಟಿದೆ ಎಂದು ಯಾವನು ಉಪಾಸನೆಮಾಡುವನೋ ಅವನು ಸ್ವರ್ಗಲೋಕಕ್ಕೆ ಹೋಗುತ್ತಾನೆ.[1]

ಹೀಗೆ ನಾಮಾಕ್ಷರಗಳ (ಉಪಾಸನೆ)ಯಿಂದಲೂ ಇಂಥ ಅಸಾಧಾರಣ ಫಲವನ್ನು ಪಡೆಯುತ್ತಾನೆ, ಇನ್ನು ಹೃದಯಸ್ವರೂಪವನ್ನೇ ಉಪಾಸನೆಮಾಡುವದರಿಂದ (ಪಡೆಯುತ್ತಾನೆಂದು) ಹೇಳವದೇನಿದೆ? ಎಂದು ಹೃದಯದ ಸ್ತುತಿಗೋಸ್ಕರ ನಾಮಾಕ್ಷರಗಳನ್ನು ಹೇಳಿದೆ.[2]

---

1. ಈ ಎರಡಕ್ಷರಗಳ ಉಪಾಸನೆಗೂ ಅನುಗುಣವಾಗಿಯೇ ಅಯಾ ಫಲವಾಗುತ್ತವೆ.

2. ಹೃದಯೋಪಾಸನೆಯೇ ಪ್ರಕೃತವಾದರೂ ಹೃದಯಾಕ್ಷರೋಪಾಸನೆಯನ್ನು ಹೇಳಿರುವದು ಅದರ ಹೆಚ್ಚುಗಾರಿಕೆಯನ್ನು ತಿಳಿಸುವದಕ್ಕೆ. ಇಲ್ಲಿ ಹೃದಯವನ್ನೇ ಮೂರಕ್ಷರಗಳಿಂದ ಸೂಚಿತವಾದ ಗುಣಗಳಿಂದ ಕೂಡಿದ ಬ್ರಹ್ಮವೆಂದು ಉಪಾಸನೆಮಾಡಬೇಕು. ಎಂಬಿದು ವಿವಕ್ಷಿತವಾಗಿದೆ.

# ಐದನೆಯ ಅಧ್ಯಾಯ - ನಾಲ್ಕನೆಯ ಬ್ರಾಹ್ಮಣ

## (ಹೃದಯಬ್ರಹ್ಮದ ಉಪಾಸನೆ)

## ಹೃದಯವು ಸತ್ಯಬ್ರಹ್ಮವು

(ಉಪನಿಷತ್ತು)

**ತದ್ವೈ ತದೇತದೇವ ತದಾಸ ಸತ್ಯಮೇವ ಸ ಯೋ ಹೈತಂ ಮಹದ್ಯಕ್ಷಂ ಪ್ರಥಮಜಂ ವೇದ ಸತ್ಯಂ ಬ್ರಹ್ಮೇತಿ ಜಯತೀಮಾಲ್ಲೋಕಾಞ್ಜಿತ ಇನ್ನ್ವಸಾವಸದ್ ಯ ಏವಮೇತನ್ಮಹದ್ಯಕ್ಷಂ ಪ್ರಥಮಜಂ ವೇದ ಸತ್ಯಂ ಬ್ರಹ್ಮೇತಿ ಸತ್ಯಗ್ಂ ಹ್ಯೇವ ಬ್ರಹ್ಮ ॥**

೧. ಅದಿದೆಯಲ್ಲ, ಅದೇ (ಇದು). ಅದು ಇದೇ - ಸತ್ಯವೇ- ಆಗಿತ್ತು. ಯಾವನು ಈ ಮಹಾಯಕ್ಷನಾದ ಪ್ರಥಮಜನನ್ನು ಸತ್ಯಬ್ರಹ್ಮವೆಂದು ಅರಿತುಕೊಳ್ಳುವನೋ (ಅವನು) ಈ ಲೋಕಗಳೆಲ್ಲವನ್ನೂ ಗೆದ್ದುಕೊಳ್ಳುವನು. ಯಾವನು ಈ ಮಹಾಯಕ್ಷನಾದ ಪ್ರಥಮಜನನ್ನು ಸತ್ಯಬ್ರಹ್ಮವೆಂದು ಅರಿತುಕೊಳ್ಳುವನೋ (ಅವನ) ಆ (ಶತ್ರುವು) ಹೀಗೆ ಜಿತನಾಗಿ ಅಸತ್ತಾಗುವನು. ಬ್ರಹ್ಮವು ಸತ್ಯವೇ.

## ಹೃದಯಬ್ರಹ್ಮವನ್ನು ಸತ್ಯವೆಂದು ಉಪಾಸನೆಮಾಡಬೇಕು

(ಭಾಷ್ಯ)

**೩೭೯. ತಸ್ಯೈವ ಹೃದಯಾಖ್ಯಸ್ಯ ಬ್ರಹ್ಮಣಃ ಸತ್ಯಮ್ ಇತ್ಯುಪಾಸನಂ ವಿಧಿತ್ಸನ್ ಆಹ। ತತ್। ತದಿತಿ ಹೃದಯಂ ಬ್ರಹ್ಮ ಪರಾಮೃಷ್ಟಮ್। ವೈ ಇತಿ ಸ್ಮರಣಾರ್ಥಮ್। ತದ್ಯದ್ ಹೃದಯಂ ಬ್ರಹ್ಮ ಸ್ಮರ್ಯತೇ ಇತಿ ಏಕಃ ತಚ್ಛಬ್ದಃ। ತದೇತತ್ ಉಚ್ಯತೇ ಪ್ರಕಾರಾನ್ತರೇಣ ಇತಿ ದ್ವಿತೀಯಸ್ತಚ್ಛಬ್ದಃ। ಕಿಂ ಪುನಸ್ತತ್ ಪ್ರಕಾರಾನ್ತರಮ್ ? ಏತದೇವ ತತ್ ಇತಿ ಏತಚ್ಛಬ್ದೇನ ಸಂಬಧ್ಯತೇ ತೃತೀಯಸ್ತಚ್ಛಬ್ದಃ। ಏತತ್ ಇತಿ ವಕ್ಷ್ಯಮಾಣಂ ಬುದ್ಧೌ ಸಂನಿಧೀಕೃತ್ಯ ಆಹ। ಆಸ ಬಭೂವ। ಕಿಂ ಪುನಃ ಏತದೇವ ಆಸ। ಯದುಕ್ತಂ ಹೃದಯಂ ಬ್ರಹ್ಮ ಇತಿ, ತತ್ ಇತಿ ತೃತೀಯಸ್ತಚ್ಛಬ್ದೋ ವಿನಿಯುಕ್ತಃ। ಕಿಂ ತತ್ ? ಇತಿ ವಿಶೇಷತೋ ನಿರ್ದಿಶತಿ ಸತ್ಯಮೇವ। ಸಚ್ಚ ತ್ಯಚ್ಚ,' ಮೂರ್ತಂ ಚಾಮೂರ್ತಂ ಚ ಸತ್ಯಂ ಬ್ರಹ್ಮ। ಪಞ್ಚಭೂತಾತ್ಮಕಮ್ ಇತ್ಯೇತತ್। ಸ ಯಃ**

ಕಶ್ಚಿತ್ ಸತ್ಯಾತ್ಮಾನಮ್ ಏತಂ ಮಹತ್ ಮಹತ್ತ್ವಾತ್। ಯಕ್ಷಂ ಪೂಜ್ಯಮ್। ಪ್ರಥಮಜಂ ಪ್ರಥಮಜಾತಂ ಸರ್ವಸ್ಮಾತ್ ಸಂಸಾರಿಣಃ ಏತದೇವ ಅಗ್ರೇ ಜಾತಂ ಬ್ರಹ್ಮ। ಅತಃ ಪ್ರಥಮಜಮ್। ವೇದ ವಿಜಾನಾತಿ ಸತ್ಯಂ ಬ್ರಹ್ಮ ಇತಿ। ತಸ್ಯ ಇದಂ ಫಲಮ್ ಉಚ್ಯತೇ। ಯಥಾ ಸತ್ಯೇನ ಬ್ರಹ್ಮಣಾ ಇಮೇ ಲೋಕಾಃ ಆತ್ಮಸಾತ್ಕೃತಾ ಜಿತಾಃ, ಏವಂ ಸತ್ಯಾತ್ಮಾನಂ ಬ್ರಹ್ಮ ಮಹತ್ ಯಕ್ಷಂ ಪ್ರಥಮಜಂ ವೇದ ಸ ಜಯತಿ ಇಮಾನ್ ಲೋಕಾನ್, ಕಿಂ ಚ ಜಿತೋ ವಶೀಕೃತಃ ಇನ್ನು ಇತ್ಥಂ ಯಥಾ ಬ್ರಹ್ಮಣಾ, ಅಸೌ 'ಶತ್ರುಃ' ಇತಿ ವಾಕ್ಯಶೇಷಃ। ಅಸಚ್ಚ। ಅಸದ್ ಭವೇತ್ ಅಸೌ ಶತ್ರುರ್ಜಿತೋ ಭವೇತ್ ಇತ್ಯರ್ಥಃ। ಕಸ್ಯೈತತ್ ಫಲಮ್ ಇತಿ? ಪುನರ್ನಿಗಮಯತಿ। ಯ ಏತಮೇತತ್ ಮಹತ್ ಯಕ್ಷಂ ಪ್ರಥಮಜಂ ವೇದ ಸತ್ಯಂ ಬ್ರಹ್ಮ ಇತಿ। ಅತೋ ವಿದ್ಯಾನುರೂಪಂ ಫಲಂ ಯುಕ್ತಮ್। ಸತ್ಯಂ ಹಿ ಏವ ಯಸ್ಮಾತ್ ಬ್ರಹ್ಮ॥

(ಭಾಷ್ಯಾರ್ಥ)

ಅದೇ ಹೃದಯವೆಂಬ ಬ್ರಹ್ಮವನ್ನು ಸತ್ಯವು ಎಂದು ಉಪಾಸನೆ(ಮಾಡಬೇಕೆಂದು) ವಿಧಿಸಬೇಕೆಂದು (ಶ್ರುತಿ) ಹೇಳುತ್ತಿದೆ.

ಅದು. 'ಅದು' ಎಂದು ಹೃದಯಬ್ರಹ್ಮವನ್ನು ಪರಾಮರ್ಶಿಸಿದೆ. ವೈ ಎಂಬುದು ಸ್ಮರಣೆಯೆಂಬರ್ಥದ್ದು. ಹೃದಯಬ್ರಹ್ಮವು ಎಂದು ಸ್ತುತವಾಗಿದೆಯಲ್ಲ ಅದು –ಎಂದು ಒಂದು ತತ್ (ಅದು) ಶಬ್ದ(ದ ಅರ್ಥ)ವು. ಅದು ಬೇರೊಂದು ಪ್ರಕಾರದಿಂದ (ಇಲ್ಲಿ) ಉಕ್ತವಾಗುವದು, ಎಂದು ಎರಡನೆಯ ತತ್ (ಅದು) ಶಬ್ದ(ದ ಅರ್ಥ)ವು. ಆ ಪ್ರಕಾರಾಂತರವು ಯಾವದು ? ಅದು ಇದೇ ಎಂದು ಏತತ್ (ಇದೇ ಎಂಬ) ಶಬ್ದಕ್ಕೆ ಮೂರನೆಯ ತತ್ (ಅದು) ಶಬ್ದವು ಸಂಬದ್ಧವಾಗಿರುತ್ತದೆ. ಇದೇ ಎಂದು ಮುಂದೆ ಹೇಳಲಿರುವವದನ್ನು ಬುದ್ಧಿಯಲ್ಲಿ ಹತ್ತಿರವಿಟ್ಟುಕೊಂಡು ಹೇಳಿತ್ತು. (ಆಸ= ಬಭೂವ) ಆಗಿತ್ತು. ಇದೇ ಆಗಿತ್ತು (ಎಂಬುದು) ಯಾವದು? ಯಾವದು ಹೃದಯವೆಂಬ ಬ್ರಹ್ಮವೆಂದು ಹೇಳಿತ್ತೋ ಅದು ಎಂದು ಮೂರನೆಯ ತತ್ (ಅದು) ಶಬ್ದವು ವಿನಿಯುಕ್ತವಾಗಿರುತ್ತದೆ.

ಅದು (ಎಂದ ಸಾಮಾನ್ಯವನ್ನು) ಸತ್ಯವೇ (ಆಗಿತ್ತು) ಎಂದು ವಿಶೇಷವಾಗಿ ತಿಳಿಸಿರುತ್ತದೆ. (ಸತ್ಯ ಎಂದರೆ) ಸತ್ತೂ ತ್ಯತ್ತೂ ಮೂರ್ತವೂ ಅಮೂರ್ತವೂ ಆಗಿರುವ ಸತ್ಯಬ್ರಹ್ಮವು, ಪಂಚಭೂತಾತ್ಮಕವಾದದ್ದು ಎಂದರ್ಥ.[1]

---

1. ಮೂರ್ತಾಮೂರ್ತಬ್ರಾಹ್ಮಣದ (೨ ೩-೧)ರ ಅವತರಣಿಕೆಯನ್ನು (ಭಾ.ಭಾ. ೩೩೪) ನೋಡಿ.

ಯಾವನೇ ಆಗಲಿ ಈ ಸತ್ಯಾತ್ಮನನ್ನು ಮಹತ್ತು ದೊಡ್ಡದಾಗಿರುವದರಿಂದ (ಮಹತ್ತು), ಯಕ್ಷನು, ಪೂಜ್ಯವಾದದ್ದು; ಪ್ರಥಮಜವು, ಪ್ರತಿಯೊಬ್ಬ ಸಂಸಾರಿಗಿಂತಲೂ ಈ ಬ್ರಹ್ಮವೇ ಮೊದಲು ಉಂಟಾದದ್ದು, ಆದ್ದರಿಂದ ಪ್ರಥಮಜವು. (ಯಾವನು) ಇದನ್ನು ಸತ್ಯಬ್ರಹ್ಮವು ಎಂದು ಅರಿತುಕೊಳ್ಳುವನೋ ಅವನಿಗೆ ಈ ಫಲವನ್ನು ಹೇಳಲಾಗುತ್ತಿದೆ. ಹೇಗೆ ಸತ್ಯಬ್ರಹ್ಮದಿಂದ ಈ ಲೋಕಗಳು ವಶಗೊಳಿಸಲ್ಪಟ್ಟಿರುವವೋ, ಗೆದ್ದುಕೊಳ್ಳಲ್ಪಟ್ಟಿರುವವೋ ಹಾಗೆ ಮಹತ್ತೂ ಯಕ್ಷವೂ ಪ್ರಥಮಜವೂ ಆದ ಬ್ರಹ್ಮವನ್ನು ಸತ್ಯಾತ್ಮನೆಂದು (ಯಾವನು) ಅರಿತುಕೊಳ್ಳುವನೋ ಅವನು ಈ ಲೋಕಗಳನ್ನು ಗೆದ್ದುಕೊಳ್ಳುತ್ತಾನೆ. ಮತ್ತು (ಅವನ) ಆ 'ಶತ್ರುವು' ('ಇನ್ನು= ಇತ್ಥಮ್') ಹೀಗೆ—ಹೇಗೆ ಬ್ರಹ್ಮದಿಂದಲೋ (ಹಾಗೆ) ಎಂದು ವಾಕ್ಯಶೇಷ— ಜಿತನಾಗಿ ವಶೀಕೃತನಾಗುವನು. ಅಸತ್ತೂ, ಅಸತ್ತೂ ಆಗುವನು; ಆ ಶತ್ರುವು ಜಿತನಾಗಿ (ಅಸತ್ತೂ) ಆಗುವನು ಎಂದರ್ಥ.

ಇದು ಯಾವನಿಗಾಗುವ ಫಲವು? ಎಂದರೆ ಮತ್ತೆ ನಿಗಮನಮಾಡಿ (ಶ್ರುತಿ) ಹೇಳುತ್ತಿದೆ; ಯಾವನು ಈ ಮಹತ್ತೂ ಯಕ್ಷವೂ ಪ್ರಥಮಜವೂ ಆದ (ಹೃದಯವನ್ನು) ಸತ್ಯಬ್ರಹ್ಮವು ಎಂದು ಅರಿತುಕೊಳ್ಳುವನೋ (ಅವನಿಗೆ). ಆದ್ದರಿಂದ ವಿದ್ಯೆಗೆ ಅನುರೂಪವಾಗಿಯೇ ಫಲವಾಗುವದು ಯುಕ್ತವು; ಏಕೆಂದರೆ ಬ್ರಹ್ಮವು ಸತ್ಯವೇ.

# ಐದನೆಯ ಅಧ್ಯಾಯ - ಐದನೆಯ ಬ್ರಾಹ್ಮಣ

(ಸತ್ಯಾತ್ಮಹೃದಯಬ್ರಹ್ಮದ ಸ್ತುತಿ)

## ಸತ್ಯಬ್ರಹ್ಮದ ವಿಶೇಷಣಗಳು

(ಉಪನಿಷತ್ತು)

**ಆಪ ಏವೇದಮಗ್ರ ಆಸುಸ್ತಾ ಆಪಃ ಸತ್ಯಮಸೃಜನ್ತ ಸತ್ಯಂ ಬ್ರಹ್ಮ ಬ್ರಹ್ಮ ಪ್ರಜಾಪತಿಂ ಪ್ರಜಾಪತಿರ್ದೇವಾಗ್ಂಸ್ತೇ ದೇವಾಃ ಸತ್ಯಮೇವೋಪಾಸತೇ ತದೇತತ್ತ್ರ್ಯಕ್ಷರಗ್ಂ ಸತ್ಯಮಿತಿ ಸ ಇತ್ಯೇಕಮಕ್ಷರಂ ತೀತ್ಯೇಕಮಕ್ಷರಂ ಯಮಿತ್ಯೇಕಮಕ್ಷರಂ ಪ್ರಥಮೋತ್ತಮೇ ಅಕ್ಷರೇ ಸತ್ಯಂ ಮಧ್ಯತೋಽನೃತಂ ತದೇತದನೃತಮುಭಯತಃ ಸತ್ಯೇನ ಪರಿಗೃಹೀತಗ್ಂ ಸತ್ಯಭೂಯಮೇವ ಭವತಿ ನೈವಂ ವಿದ್ವಾಗ್ಂಸಮನೃತಗ್ಂ ಹಿನಸ್ತಿ ॥ ೧ ॥**

೧. ಇದು ಮೊದಲು ಅಪ್ಪೇ ಆಗಿತ್ತು. ಆ ಅಪ್ಪು ಸತ್ಯವನ್ನು ಸೃಷ್ಟಿಸಿತು. ಸತ್ಯವು ಬ್ರಹ್ಮವು, ಬ್ರಹ್ಮವು ಪ್ರಜಾಪತಿಯನ್ನು (ಸೃಷ್ಟಿಸಿತು); ಪ್ರಜಾಪತಿಯು ದೇವತೆಗಳನ್ನು (ಸೃಷ್ಟಿಸಿದನು). ಆ ದೇವತೆಗಳು ಸತ್ಯವನ್ನೇ ಉಪಾಸನೆಮಾಡುತ್ತಾರೆ. ಸತ್ಯಮ್ ಎಂಬ ಆ ಇದು ಮೂರಕ್ಷರದ್ದು. ಸ ಎಂಬುದು ಒಂದು ಅಕ್ಷರವು, ತಿ ಎಂಬುದು ಒಂದು ಅಕ್ಷರವು, ಯ ಎಂಬುದು ಒಂದು ಅಕ್ಷರವು. ಇಲ್ಲಿ ಮೊದಲನೆಯ ಕೊನೆಯ ಅಕ್ಷರಗಳು ಸತ್ಯವು, ನಡುವಿನದು ಅನೃತವು. ಆ ಈ ಅನೃತವು ಎರಡು ಕಡೆಯಲ್ಲಿಯೂ ಸತ್ಯದಿಂದ ಪರಿಗೃಹೀತ(ವಾಗಿರುತ್ತದೆಯಾಗಿ) ಸತ್ಯಭೂಯವೇ ಆಗಿರುತ್ತದೆ. ಹೀಗೆಂದು ಅರಿತುಕೊಂಡವನನ್ನು ಅನೃತವು ಹಿಂಸೆಗೈಯುವದಿಲ್ಲ.

## ಸತ್ಯಬ್ರಹ್ಮವು ಪ್ರಥಮಜವು

(ಭಾಷ್ಯ)

೩೭೦. **ಸತ್ಯಸ್ಯ ಬ್ರಹ್ಮಣಃ ಸ್ತುತ್ಯರ್ಥಮ್ ಇದಮಾಹ । ಮಹತ್ ಯಕ್ಷಂ ಪ್ರಥಮಜಮ್ ಇತ್ಯುಕ್ತಮ್ । ತತ್ ಕಥಂ ಪ್ರಥಮಜತ್ವಮಿತಿ ? ಉಚ್ಯತೇ । ಆಪ ಏವ ಇದಮಗ್ರ ಆಸುಃ । ಆಪಃ ಇತಿ ಕರ್ಮಸಮವಾಯಿನ್ಯಃ**

ಅಗ್ನಿಹೋತ್ರಾದ್ಯಾಹುತಯಃ । ಅಗ್ನಿಹೋತ್ರಾದ್ಯಾಹುತೇಃ ದ್ರವಾತ್ಮಕತ್ವಾತ್ ಅಪ್ತ್ವಮ್ । ತಾಶ್ಚ ಆಪಃ ಅಗ್ನಿಹೋತ್ರಾದಿಕರ್ಮಾಪವರ್ಗೋತ್ತರಕಾಲಂ ಕೇನಚಿತ್ ಅದೃಷ್ಟೇನ ಸೂಕ್ಷ್ಮೇಣಾತ್ಮನಾ ಕರ್ಮಸಮವಾಯಿತ್ವಮ್ ಅಪರಿತ್ಯಜನ್ತ್ಯಃ ಇತರಭೂತಸಹಿತಾ ಏವ ನ ಕೇವಲಾಃ । ಕರ್ಮಸಮವಾಯಿತ್ವಾತ್ತು ಪ್ರಾಧಾನ್ಯಮ್ ಅಪಾಮ್ ಇತಿ ಸರ್ವಾಣ್ಯೇವ ಭೂತಾನಿ ಪ್ರಾಗುತ್ಪತ್ತೇಃ ಅವ್ಯಾಕೃತಾವಸ್ಥಾನಿ ಕರ್ತೃಸಹಿತಾನಿ ನಿರ್ದಿಶ್ಯನ್ತೇ ಆಪಃ ಇತಿ । ತಾ ಆಪಃ ಬೀಜಭೂತಾಃ ಜಗತಃ ಅವ್ಯಾಕೃತಾತ್ಮನಾ ಅವಸ್ಥಿತಾಃ । ತಾ ಏವ ಇದಂ ಸರ್ವಂ ನಾಮರೂಪವಿಕೃತಂ ಜಗತ್ ಅಗ್ರೇ ಆಸುಃ । ನಾನ್ಯತ್ ಕಿಂಚಿತ್ ವಿಕಾರಜಾತಮ್ ಆಸೀತ್ । ತಾಃ ಪುನರಾಪಃ ಸತ್ಯಮ್ ಅಸೃಜನ್ತ । ತಸ್ಮಾತ್ ಸತ್ಯಂ ಬ್ರಹ್ಮ ಪ್ರಥಮಜಮ್ । ತದೇತತ್ ಹಿರಣ್ಯಗರ್ಭಸ್ಯ ಸೂತ್ರಾತ್ಮನೋ ಜನ್ಮ ಯತ್ ಅವ್ಯಾಕೃತಸ್ಯ ಜಗತೋ ವ್ಯಾಕರಣಮ್ ॥

(ಭಾಷ್ಯಾರ್ಥ)

ಸತ್ಯಬ್ರಹ್ಮವನ್ನು ಹೊಗಳುವದಕ್ಕಾಗಿ ಈ (ಬ್ರಾಹ್ಮಣವನ್ನು) ಹೇಳಿರುತ್ತದೆ. (ಬ್ರಹ್ಮವು) ಮಹತ್ತೂ ಯಕ್ಷವೂ ಪ್ರಥಮಜವೂ (ಆಗಿರುತ್ತದೆ) ಎಂದು ಹೇಳಿತ್ತಷ್ಟೆ. ಅದು ಪ್ರಥಮಜ(ವೆನ್ನುವದು) ಹೇಗೆ ? ಎಂದರೆ (ಶ್ರುತಿ) ಹೇಳುತ್ತದೆ.

ಇದು ಮೊದಲು ಅಪ್ಪೇ ಆಗಿತ್ತು. ಅಪ್ಪು ಎಂದರೆ ಕರ್ಮಸಂಬದ್ಧವಾದ ಅಗ್ನಿಹೋತ್ರವೇ ಮುಂತಾದ ಆಹುತಿಗಳು. ಅಗ್ನಿಹೋತ್ರವೇ ಮುಂತಾದ ಆಹುತಿಯು ದ್ರವಾತ್ಮಕವಾಗಿರುವದರಿಂದ (ಅದನ್ನು) ಅಪ್ಪು (ಎಂದಿದೆ).[1] ಆ ಅಪ್ಪು ಅಗ್ನಿಹೋತ್ರವೇ ಮುಂತಾದ ಕರ್ಮವು ಮುಗಿದ ಬಳಿಕ ಯಾವದೋ ಒಂದು ಅದೃಷ್ಟವಾದ ಸೂಕ್ಷ್ಮರೂಪದಿಂದ ಕರ್ಮಸಂಬಂಧವನ್ನು ಬಿಡದೆ ಉಳಿದ ಭೂತಗಳೊಡನೆ[2] ಸೇರಿಕೊಂಡೇ, ಬರಿಯ ಅಪ್ಪೇ ಅಲ್ಲ, ಕರ್ಮಸಂಬದ್ಧವಾಗಿರುವದರಿಂದ (ಮಾತ್ರವೇ) ಅಪ್ಪು ಪ್ರಧಾನವಾಗಿರುತ್ತದೆ; ಆದ್ದರಿಂದ ಉತ್ಪತ್ತಿಯಾಗುವ ಮುಂಚೆ ಅವ್ಯಾಕೃತಾವಸ್ಥೆಯಲ್ಲಿ ಕರ್ತೃಸಹಿತವಾಗಿರುವ ಎಲ್ಲಾ ಭೂತಗಳನ್ನೂ ಅಪ್ಪು ಎಂಬ ಶಬ್ದದಿಂದ (ಇಲ್ಲಿ) ತಿಳಿಸಿರುತ್ತದೆ. ಆ ಜಗತ್ತಿಗೆ ಬೀಜವಾಗಿರುವ ಅಪ್ಪು ಅವ್ಯಾಕೃತರೂಪವಾಗಿದ್ದುಕೊಂಡಿರುವದು. ಇದೆಲ್ಲವೂ (ಈ) ನಾಮರೂಪಗಳಾಗಿ ವಿಕಾರವಾಗಿರುವ ಜಗತ್ತು (ಎಲ್ಲವೂ) ಮೊದಲು

---

1. ಸೂ. ಭಾ. ೩-೧-೨ (ಭಾ.ಭಾ ೨೧೫), ೩-೧-೫ (ಭಾ.ಭಾ. ೨೧೮)ನೋಡಿ.
2. ಪಂಚಭೂತಗಳನ್ನೇ ಅಪ್ಶಬ್ದದಿಂದ ಕರೆದಿದೆ. ಸೂ.ಭಾ II- ಭಾ.ಭಾ. ೨೧೫, ೨೧೯ರಲ್ಲಿ ಹೀಗೆಂದು ನಿರ್ಣಯಿಸಿದೆ.

ಆ (ಅಪ್ಪೇ) ಆಗಿತ್ತು, ಮತ್ತೆ ಯಾವ ಕಾರ್ಯಜಾತವೂ ಇರಲಿಲ್ಲ. ಆ ಅಪ್ಪೇ ಸತ್ಯವನ್ನು ಸೃಷ್ಟಿಸಿತು, ಆದ್ದರಿಂದ ಸತ್ಯಬ್ರಹ್ಮವು ಪ್ರಥಮಜವು. **ಅವ್ಯಾಕೃತವಾದ ಜಗತ್ತು ವ್ಯಾಕೃತವಾಗುವದಿದೆಯಲ್ಲ, ಆ ಇದೇ ಸೂತ್ರಾತ್ಮನಾದ ಹಿರಣ್ಯಗರ್ಭನ ಜನ್ಮವು.**[1]

## ಸತ್ಯಬ್ರಹ್ಮವು ಮಹತ್ತು, ಮತ್ತು ಯಕ್ಷ

(ಭಾಷ್ಯ)

**೩೭೧. ತತ್ ಸತ್ಯಂ ಬ್ರಹ್ಮ। ಕುತಃ? ಮಹತ್ತ್ವಾತ್। ಕಥಂ ಮಹತ್ತ್ವಮಿತಿ? ಆಹ। ಯಸ್ಮಾತ್ ಸರ್ವಸ್ಯ ಸ್ರಷ್ಟೃ। ಕಥಮ್? ಯತ್ ಸತ್ಯಂ ಬ್ರಹ್ಮ ತತ್ ಪ್ರಜಾಪತಿಂ ಪ್ರಜಾನಾಂ ಪತಿಂ ವಿರಾಜಂ ಸೂರ್ಯಾಧಿಕರಣಮ್[2] 'ಅಸೃಜತ' ಇತಿ ಅನುಷಜ್ಗಃ। ಪ್ರಜಾಪತಿಃ ದೇವಾನ್ ಸ ವಿರಾಟ್ ಪ್ರಜಾಪತಿಃ ದೇವಾನ್ ಅಸೃಜತ। ಯಸ್ಮಾತ್ ಸರ್ವಮ್ ಏವಂ ಕ್ರಮೇಣ ಸತ್ಯಾದ್ ಬ್ರಹ್ಮಣೋ ಜಾತಂ ತಸ್ಮಾತ್ ಮಹತ್ ಸತ್ಯಂ ಬ್ರಹ್ಮ। ಕಥಂ ಪುನರ್ಯಕ್ಷಮಿತಿ? ಉಚ್ಯತೇ। ತೇ ಏವಂ ಸೃಷ್ಟಾ ದೇವಾಃ ಪಿತರಮಪಿ ವಿರಾಜಮ್ ಅತೀತ್ಯ ತದೇವ ಸತ್ಯಂ ಬ್ರಹ್ಮ ಉಪಾಸತೇ। ಅತ ಏತತ್ ಪ್ರಥಮಜಮ್, ಮಹತ್, ಯಕ್ಷಮ್। ತಸ್ಮಾತ್ ಸರ್ವಾತ್ಮನಾ ಉಪಾಸ್ಯಂ ತತ್ ॥**

(ಭಾಷ್ಯಾರ್ಥ)

ಆ ಸತ್ಯವು ಬ್ರಹ್ಮವು. ಹೇಗೆ? ಎಂದರೆ ಮಹತ್ತಾಗಿರುವದರಿಂದ. (ಅದು) ಮಹತ್ತೆಂಬುದು ಹೇಗೆ? ಎಂದರೆ (ಶ್ರುತಿ) ಹೇಳುತ್ತಿದೆ: ಏಕೆಂದರೆ (ಅದು) ಎಲ್ಲಕ್ಕೂ ಸ್ರಷ್ಟೃ(ವಾಗಿದೆ. ಅದು) ಹೇಗೆ? ಎಂದರೆ, ಸತ್ಯಬ್ರಹ್ಮವಿದೆಯಲ್ಲ, ಅದು ಪ್ರಜಾಪತಿಯನ್ನು, ಪ್ರಜೆಗಳ ಪತಿಯಾದ, ಸೂರ್ಯಾಧಾರನಾದ[3] ವಿರಾಜನನ್ನು 'ಸೃಷ್ಟಿಸಿದನು' ಎಂದು ಸೇರಿಸಿಕೊಳ್ಳಬೇಕು. ಪ್ರಜಾಪತಿಯು ದೇವತೆಗಳನ್ನು; ಆ ವಿರಾಟ್ಪುರುಷನಾದ ಪ್ರಜಾಪತಿಯು ದೇವತೆಗಳನ್ನು

---

1. ಈ ಅವ್ಯಾಕೃತವ್ಯಾಕರಣಪ್ರಕ್ರಿಯೆಯನ್ನೇ ೧-೪-೭ರಲ್ಲಿ ವರ್ಣಿಸಿರುವದು. ಹಿರಣ್ಯಗರ್ಭನು ಹುಟ್ಟಿದನು ಎಂದರೆ ವ್ಯಾಕೃತಾತ್ಮನಾಗಿ ಕಾಣಿಸಿಕೊಳ್ಳುವದೇ ಹೊರತು ಇತರರು ಹುಟ್ಟುವಂತಲ್ಲ ಎಂದು ವಾಕ್ಯಾರ್ಥ.

2. 'ಸೂರ್ಯಾದಿಕರಣಮ್' ಎಂಬ ಅಚ್ಚಿನ ಪಾಠವನ್ನು ಹೀಗೆಂದು ತಿದ್ದಿಕೊಂಡಿದೆ.

3. ಸೂರ್ಯಮಂಡಲದಲ್ಲಿರುವ ಎಂದರ್ಥ, ಸೂರ್ಯಾದಿಕರಣಮ್ ಎಂದರೆ ಸೂರ್ಯಾದಿಗಳಿಗೆ ಕರಣನಾಗಿರುವ ಎಂಬ ಅನಿಷ್ಟಾರ್ಥವು ಬರುತ್ತದೆಯಾದ್ದರಿಂದ ಆ ಪಾಠವನ್ನು ಕೈಬಿಟ್ಟಿದೆ.

ಸೃಷ್ಟಿಸಿದನು. ಸರ್ವವೂ ಈ ಕ್ರಮದಿಂದ ಸತ್ಯಬ್ರಹ್ಮದಿಂದ ಹುಟ್ಟಿದೆಯಷ್ಟೆ, ಆದ್ದರಿಂದ ಸತ್ಯವು ಮಹತ್ತಾಗಿದೆ, ಬ್ರಹ್ಮವಾಗಿದೆ.

ಇನ್ನು (ಅದು) ಯಕ್ಷವೆನ್ನುವದು[1] ಹೇಗೆ? ಆ ಹೀಗೆ ಸೃಷ್ಟರಾದ ದೇವತೆಗಳು ತಂದೆಯಾದ ವಿರಾಜನನ್ನು ಕೂಡ ಬಿಟ್ಟು ಅದೇ ಸತ್ಯಬ್ರಹ್ಮವನ್ನು ಉಪಾಸನೆಮಾಡುತ್ತಿರುತ್ತಾರೆ, ಆದ್ದರಿಂದ ಇದು ಪ್ರಥಮಜವು, ಮಹತ್ತು, ಯಕ್ಷವು. ಆದ್ದರಿಂದ ಅದು ಎಲ್ಲಾ ಬಗೆಯಿಂದಲೂ[2] ಉಪಾಸನೆಮಾಡತಕ್ಕದ್ದು (ಎಂದಾಯಿತು).

## ಸತ್ಯವೆಂಬ ನಾಮದ ಅಕ್ಷರಗಳ ಉಪಾಸನೆ

(ಭಾಷ್ಯ)

೩೭೨. ತಸ್ಯಾಪಿ ಸತ್ಯಸ್ಯ ಬ್ರಹ್ಮಣೋ ನಾಮ ಸತ್ಯಮ್ ಇತಿ। ತದೇತತ್ ತ್ರ್ಯಕ್ಷರಮ್। ಕಾನಿ ತಾನಿ ಅಕ್ಷರಾಣಿ ಇತ್ಯತ ಆಹ। ಸ ಇತ್ಯೇಕಮಕ್ಷರಮ್। ತಿ ಇತ್ಯೇಕಮಕ್ಷರಮ್। ತಿ ಇತಿ ಇಕಾರಾನುಬನ್ಧೋ ನಿರ್ದೇಶಾರ್ಥಃ। ಯಮ್ ಇತಿ ಏಕಮಕ್ಷರಮ್। ತತ್ರ ತೇಷಾಂ ಪ್ರಥಮೋತ್ತಮೇ ಅಕ್ಷರೇ ಸಕಾರಯಕಾರೌ ಸತ್ಯಮ್। ಮೃತ್ಯುರೂಪಾಭಾವಾತ್। ಮಧ್ಯತಃ ಮಧ್ಯೇ ಅನೃತಮ್। ಅನೃತಂ ಹಿ ಮೃತ್ಯುಃ। ಮೃತ್ಯ್ವನೃತಯೋಃ ತಕಾರಸಾಮಾನ್ಯಾತ್। ತದೇತತ್ ಅನೃತಂ ತಕಾರಾಕ್ಷರಂ ಮೃತ್ಯುರೂಪಮ್ ಉಭಯತಃ ಸತ್ಯೇನ ಸಕಾರಯಕಾರಲಕ್ಷಣೇನ ಪರಿಗೃಹೀತಂ ವ್ಯಾಪ್ತಮ್ ಅನ್ತರ್ಭಾವಿತಂ ಸತ್ಯರೂಪಾಭ್ಯಾಮ್। ಅತಃ ಅಕಿಂಚಿತ್ಕರಂ ತತ್ ಸತ್ಯಭೂಯಮೇವ ಸತ್ಯಬಾಹುಲ್ಯಮೇವ ಭವತಿ ॥

(ಭಾಷ್ಯಾರ್ಥ)

ಆ ಸತ್ಯಬ್ರಹ್ಮಕ್ಕೂ[3] ಸತ್ಯವೆಂಬ ನಾಮ(ವಿದೆಯಲ್ಲ), ಆ ಇದು ಮೂರಕ್ಷರದ್ದು. ಆ ಅಕ್ಷರಗಳು ಯಾವವು? ಎಂದರೆ (ಶ್ರುತಿ)ಹೇಳುತ್ತದೆ. ಸ ಎಂಬುದು ಒಂದು ಅಕ್ಷರವು, ತಿ ಎಂಬುದು ಒಂದು ಅಕ್ಷರವು- ತಿ ಎಂಬಲ್ಲಿ ಇಕಾರವನ್ನು

---

1. ಪೂಜ್ಯವೆನ್ನುವದು.

2. ಈ ಎಲ್ಲಾ ಕಾರಣಗಳಿಂದಲೂ ಎಂದರ್ಥ; ಇದು ಸತ್ಯಬ್ರಹ್ಮೋಪಾಸನೆಯ ಸ್ತುತಿರೂಪವಾದ ಅರ್ಥವಾದವೆಂದು ತಿಳಿಸುವದಕ್ಕೆ ಹೀಗೆಂದಿದೆ.

3. ಹೃದಯಬ್ರಹ್ಮಕ್ಕೆ ಕೊಟ್ಟಿರುವ ಹೃದಯವೆಂಬ ನಾಮದಂತೆಯೇ ಸತ್ಯರೂಪವಾದ ಹೃದಯಬ್ರಹ್ಮಕ್ಕೆ ಕೊಟ್ಟಿರುವ ನಾಮವೂ ಮೂರಕ್ಷರದ್ದೇ; ಆ ಅಕ್ಷರಗಳನ್ನು ಮುಂದೆ ಹೇಳಿರುವಂತೆ ಉಪಾಸನೆಮಾಡಿದರೂ ನಾಮಿಯಾದ ಸತ್ಯಬ್ರಹ್ಮವನ್ನೇ ಉಪಾಸನೆ ಮಾಡಿದಂತೆ ಎಂದು ಅಭಿಪ್ರಾಯ.

ನಿರ್ದೇಶಕ್ಕಾಗಿ ಸೇರಿಸಿಕೊಂಡಿದೆ[1]. –ಯಮ್ ಎಂಬುದು ಒಂದು ಅಕ್ಷರವು. ಇಲ್ಲಿ ಇವುಗಳೊಳಗೆ ಮೊದಲನೆಯ ಕೊನೆಯ ಅಕ್ಷರಗಳು, ನಕಾರಯಕಾರಗಳು ಸತ್ಯಗಳು; ಏಕೆಂದರೆ (ಅವಕ್ಕೆ) ಮೃತ್ಯುರೂಪವಿಲ್ಲ. ನಡುವಿನದು, ನಡುವೆ (ಇರುವ ತಿ ಎಂಬುದು), ಅನೃತವು. ಅನೃತವು ಮೃತ್ಯುರೂಪವಷ್ಟೆ? ಏಕೆಂದರೆ ಮೃತ್ಯು, ಅನೃತ– ಇವುಗಳಿಗೆ ತಕಾರವು ಸಮಾನವಾಗಿದೆ[2]. ಆ ಈ ಅನೃತವಾದ ಮೃತ್ಯುರೂಪವಾದ ತಕಾರವೆಂಬ ಅಕ್ಷರವು ಎರಡೂ ಕಡೆಗಳಲ್ಲಿ ಸಕಾರಯಕಾರಗಳೆಂಬ ಸತ್ಯದಿಂದ ಪರಿಗೃಹೀತವಾಗಿರುತ್ತದೆ, ವ್ಯಾಪ್ತವಾಗಿರುತ್ತದೆ, ಸತ್ಯರೂಪವಾದ (ಆ ಅಕ್ಷರಗಳಿಂದ) ಒಳಗೆ ಹಾಕಿಕೊಳ್ಳಲ್ಪಟ್ಟಿರುತ್ತದೆ. ಆದ್ದರಿಂದ ಅದು ಏನೂ ಮಾಡಲಾರದಾಗಿ[3] ಸತ್ಯಭೂಯವೇ, ಸತ್ಯಪ್ರಚುರವೇ ಆಗಿರುತ್ತದೆ.

## ಸತ್ಯಾಕ್ಷರನಾಮೋಪಾಸನೆಗೆ ಫಲ

(ಭಾಷ್ಯ)

೩೭೩. ಏವಂ ಸತ್ಯಬಾಹುಲ್ಯಂ ಸರ್ವಸ್ಯ, ಮೃತ್ಯೋರನೃತಸ್ಯ ಅಕಿಂಚಿತ್ಕರತ್ವಂ ಚ ಯೋ ವಿದ್ವಾನ್ ತಮ್ ಏವಂ ವಿದ್ವಾಂಸಮ್ ಅನೃತಂ ಕದಾಚಿತ್ ಪ್ರಮಾದೋಕ್ತಂ ನ ಹಿನಸ್ತಿ ॥

(ಭಾಷ್ಯಾರ್ಥ)

ಹೀಗೆ ಸರ್ವವೂ[4] ಸತ್ಯಬಹುಲವಾಗಿದೆ, ಮೃತ್ಯುವಾದ ಅನೃತವು ಏನೂ ಮಾಡಲಾರವು ಎಂದು ಅರಿತಿರುತ್ತಾನಲ್ಲ, ಆ ಹೀಗೆ ಅರಿತಿರುವ (ಉಪಾಸಕನನ್ನು) ಯಾವಾಗಲೋ ಒಮ್ಮೆ ಮರೆತು ನುಡಿದ ಅನೃತವು ಹಿಂಸಿಸುವದಿಲ್ಲ[5].

---

1. ತಕಾರಮಾತ್ರವೇ ಇಲ್ಲಿ ಗ್ರಾಹ್ಯ ಎಂದರ್ಥ.

2. ಅನೃತವು ಹಿಂಸಕವಾದ ಮೃತ್ಯುವೇ, ಆದ್ದರಿಂದ ತಕಾರವೂ ಮೃತ್ಯುರೂಪವೆಂದಾಯಿತು.

3. ಮೊದಲನೆಯ ಮತ್ತು ಕೊನೆಯ ಅಕ್ಷರಗಳು ಸ್ವರಾನ್ವಿತವಾಗಿರುವದರಿಂದ ಸತ್ಯ, ಅಮೃತ; ನಡುವೆಯಿರುವದು ಸ್ವರವಿಲ್ಲದ ವ್ಯಂಜನಮಾತ್ರವಾದ್ದರಿಂದ ಮೃತ್ಯು, ನಿರ್ಜೀವ. ಆದ್ದರಿಂದ ಅಮೃತಗ್ರಸ್ತವಾಗಿರುವ ಮೃತವು ಏನೂ ಮಾಡಲಾರದು– ಎಂದು ವಾರ್ತಿಕ ೧೩.

4. ಸತ್ಯಾತ್ಮವಾದ ಬ್ರಹ್ಮವೇ ಸರ್ವವಾಗಿರುವದರಿಂದ ಸರ್ವವೂ ಸತ್ಯಪ್ರಚುರವಾಗಿರುತ್ತದೆ.

5. ಸತ್ಯೋಪಾಸಕನು ಅನೃತವನ್ನು ನುಡಿಯುವ ಸಂಭವವೇ ಇಲ್ಲ; ಪ್ರಮಾದದಿಂದ ನುಡಿದರೂ ಅದರಿಂದ ಅವನಿಗೆ ಕೆಡುಕಾಗುವದಿಲ್ಲ.

## ಆದಿತ್ಯಮಂಡಲದಲ್ಲಿಯೂ ದಕ್ಷಿಣಾಕ್ಷಿಯಲ್ಲಿಯೂ ಸತ್ಯಬ್ರಹ್ಮದ ಉಪಾಸನೆ

(ಉಪನಿಷತ್ತು)

**ತದ್ಯತ್ತತ್ಸತ್ಯಮಸೌ ಸ ಆದಿತ್ಯೋ ಯ ಏಷ ಏತಸ್ಮಿನ್ ಮಣ್ಡಲೇ ಪುರುಷೋ ಯಶ್ಚಾಯಂ ದಕ್ಷಿಣೇಽಕ್ಷನ್ ಪುರುಷಸ್ತಾವೇತಾವನ್ಯೋಽನ್ಯಸ್ಮಿನ್ ಪ್ರತಿಷ್ಠಿತೌ ರಶ್ಮಿಭಿರೇಷೋಽಸ್ಮಿನ್ ಪ್ರತಿಷ್ಠಿತಃ ಪ್ರಾಣೈರಯಮಮುಷ್ಮಿನ್ ಸ ಯದೋತ್ಕ್ರಮಿಷ್ಯನ್ ಭವತಿ ಶುದ್ಧಮೇವೈತನ್ಮಣ್ಡಲಂ ಪಶ್ಯತಿ ನೈನಮೇತೇ ರಶ್ಮಯಃ ಪ್ರತ್ಯಾಯನ್ತಿ ॥ ೨ ॥**

೨. ಆ ಸತ್ಯವೆಂಬುದಿದೆಯಲ್ಲ, ಆ ಆದಿತ್ಯನೇ ಅದು ; ಈ ಮಂಡಲದಲ್ಲಿರುವ ಪುರುಷನಿದಾನಲ್ಲ (ಅವನೇ), ಮತ್ತು ಬಲಗಣ್ಣಿನಲ್ಲಿರುವ ಈ ಪುರುಷನಿದಾನಲ್ಲ (ಅವನೇ). ಆ ಈ (ಇಬ್ಬರೂ) ಒಬ್ಬರಲ್ಲೊಬ್ಬರು ನಿಂತಿರುತ್ತಿರುತ್ತಾರೆ. ಇವನು ರಶ್ಮಿಗಳ (ಮೂಲಕ) ಇವನಲ್ಲಿ ನಿಂತಿರುತ್ತಾನೆ ; ಇವನು ಪ್ರಾಣಗಳ ಮೂಲಕ ಅವನಲ್ಲಿ (ನಿಂತಿರುತ್ತಾನೆ). ಇವನು ಯಾವಾಗ ಉತ್ಕ್ರಾಂತನಾಗುವವನಿರುವನೋ (ಆಗ) ಈ ಮಂಡಲವನ್ನು ಶುದ್ಧವಾಗಿಯೇ ಕಾಣುತ್ತಾನೆ, ಇವನ (ಬಳಿಗೆ) ಈ ರಶ್ಮಿಗಳು ಬರುವದಿಲ್ಲ.

## ಸತ್ಯಬ್ರಹ್ಮಕ್ಕೆ ಆಧಿದೈವಿಕಾಧ್ಯಾತ್ಮಿಕಸ್ಥಾನಗಳು

(ಭಾಷ್ಯ)

೩೭೪. ಅಸ್ಯ ಅಧುನಾ ಸತ್ಯಸ್ಯ ಬ್ರಹ್ಮಣಃ ಸಂಸ್ಥಾನವಿಶೇಷೇ ಉಪಾಸನಮ್ ಉಚ್ಯತೇ। ತದ್ ಯತ್। ಕಿಮ್? ತತ್ ಸತ್ಯಂ ಬ್ರಹ್ಮ ಪ್ರಥಮಜಂ। ಕಿಮ್ ? ಅಸೌ ಸಃ। ಕೋಽಸೌ ? ಆದಿತ್ಯಃ। ಕಃ ಪುನರಸೌ ಆದಿತ್ಯಃ ? ಯ ಏಷಃ। ಕ ಏಷಃ ? ಯಃ ಏತಸ್ಮಿನ್ ಆದಿತ್ಯಮಣ್ಡಲೇ ಪುರುಷಃ ಅಭಿಮಾನೀ, ಸೋಽಸೌ ಸತ್ಯಂ ಬ್ರಹ್ಮ। ಯಶ್ಚ ಅಯಮ್ ಅಧ್ಯಾತ್ಮಂ ಯೋಽಯಂ ದಕ್ಷಿಣೇ ಅಕ್ಷನ್ ಅಕ್ಷಣಿ ಪುರುಷಃ। ಚಶಬ್ದಾತ್ ಸ ಚ ಸತ್ಯಂ ಬ್ರಹ್ಮ ಇತಿ ಸಂಬನ್ಧಃ। ತೌ ಏತೌ ಆದಿತ್ಯಾಕ್ಷಿಸ್ಥೌ ಪುರುಷೌ ಏಕಸ್ಯ ಸತ್ಯಸ್ಯ ಬ್ರಹ್ಮಣಃ ಸಂಸ್ಥಾನವಿಶೇಷೌ ಯಸ್ಮಾತ್ ತಸ್ಮಾತ್ ಅನ್ಯೋಽನ್ಯಸ್ಮಿನ್ ಇತರೇತರಸ್ಮಿನ್ ಆದಿತ್ಯಶ್ಚಾಕ್ಷುಷೇ, ಚಾಕ್ಷುಷಶ್ಚ ಆದಿತ್ಯೇ ಪ್ರತಿಷ್ಠಿತೌ।

ಅಧ್ಯಾತ್ಮಾಧಿದೈವತಯೋಃ ಅನ್ಯೋಽನ್ಯೋಪಕಾರ್ಯೋಪಕಾರಕತ್ವಾತ್ । ಕಥಂ ಪ್ರತಿಷ್ಠಿತೌ ಇತಿ ? ಉಚ್ಯತೇ। ರಶ್ಮಿಭಿಃ ಪ್ರಕಾಶೇನ ಅನುಗ್ರಹಂ ಕುರ್ವನ್ ಏಷ ಆದಿತ್ಯಃ ಅಸ್ಮಿನ್ ಚಾಕ್ಷುಷೇ ಅಧ್ಯಾತ್ಮೇ ಪ್ರತಿಷ್ಠಿತಃ। ಅಯಂ ಚ ಚಾಕ್ಷುಷಃ ಪ್ರಾಣೈಃ ಆದಿತ್ಯಮ್ ಅನುಗೃಹ್ಣನ್ ಅಮುಷ್ಮಿನ್ ಆದಿತ್ಯೇ ಅಧಿದೈವೇ ಪ್ರತಿಷ್ಠಿತಃ। ಸಃ ಅಸ್ಮಿನ್ ಶರೀರೇ ವಿಜ್ಞಾನಮಯಃ ಭೋಕ್ತಾ ಯದಾ ಯಸ್ಮಿನ್ ಕಾಲೇ ಉತ್ಕ್ರಮಿಷ್ಯನ್ ಭವತಿ ತದಾ ಅಸೌ ಚಾಕ್ಷುಷಃ ಆದಿತ್ಯ ಪುರುಷಃ ರಶ್ಮೀನ್ ಉಪಸಂಹೃತ್ಯ ಕೇವಲೇನ ಔದಾಸೀನ್ಯೇನ ರೂಪೇಣ ವ್ಯವತಿಷ್ಠತೇ। ತದಾ ಅಯಂ ವಿಜ್ಞಾನಮಯಃ ಪಶ್ಯತಿ ಶುದ್ಧಮೇವ ಕೇವಲಂ ವಿರಶ್ಮಿ ಏತತ್ ಮಣ್ಡಲಮ್ ಚನ್ದ್ರಮಣ್ಡಲಮಿವ। ತದೇತತ್ ಅರಿಷ್ಟ ದರ್ಶನಂ ಪ್ರಾಸಙ್ಗಿಕಂ ಪ್ರದರ್ಶ್ಯತೇ ಕಥಂ ನಾಮ ಪುರುಷಃ ಕರಣೀಯೇ ಯತ್ನವಾನ್ ಸ್ಯಾತ್ ಇತಿ। ನ ಏನಂ ಚಾಕ್ಷುಷಂ ಪುರುಷಮ್ ಉರರೀಕೃತ್ಯ ತಂ ಪ್ರತಿ ಅನುಗ್ರಹಾಯ ಏತೇ ರಶ್ಮಯಃ ಸ್ವಾಮಿಕರ್ತವ್ಯವಶಾತ್ ಪೂರ್ವಮ್ ಆಗಚ್ಛನ್ತೋಽಪಿ ಪುನಃ ತತ್ಕರ್ಮಕ್ಷಯಮ್ ಅನುರುಧ್ಯಮಾನಾ ಇವ ನೋಪ ಯನ್ತಿ ನ ಪ್ರತ್ಯಾಗಚ್ಛನ್ತಿ ಏನಮ್। ಅತೋಽವಗಮ್ಯತೇ ಪರಸ್ಪರೋಪ ಕಾರ್ಯೋಪಕಾರಕಭಾವಾತ್ ಸತ್ಯಸ್ಯೈವ ಏಕಸ್ಯ ಆತ್ಮನಃ ಅಂಶೌ ಏತೌ ಇತಿ॥

(ಭಾಷ್ಯಾರ್ಥ)

ಈಗ ಈ ಸತ್ಯಬ್ರಹ್ಮವನ್ನು ಗೊತ್ತಾಗಿರುವ ಆಕಾರವಿಶೇಷದಲ್ಲಿ[1] ಉಪಾಸನೆ (ಮಾಡಬೇಕೆಂಬು)ದನ್ನು ಹೇಳಲಾಗುತ್ತದೆ.

ಆ ಯಾವ—ಯಾವದು ?—ಪ್ರಥಮಜವಾದ ಸತ್ಯಬ್ರಹ್ಮವಿದೆಯಲ್ಲ, (ಅದು) ಏನು ? ಆ ಇವನೇ ಅದು. ಇವನು ಎಂದರೆ ಯಾವನು ? ಆದಿತ್ಯನು. ಈ ಆದಿತ್ಯನೆಂಬುವನು ಯಾರು ? ಇವನಿದಾನಲ್ಲ, ಯಾವ ಇವನು ? ಈ ಆದಿತ್ಯಮಂಡಲದಲ್ಲಿ ಅಭಿಮಾನಿಯಾಗಿರುವ ಪುರುಷನಿದಾನಲ್ಲ, ಆ ಇವನೇ (ಆ) ಸತ್ಯಬ್ರಹ್ಮವು[2]. ಮತ್ತು ಅಧ್ಯಾತ್ಮವಾಗಿ (ಅಕ್ಷನ್ = ಅಕ್ಷಿಣಿ) ಬಲಗಣ್ಣಿನಲ್ಲಿರುವ ಈ ಪುರುಷನಿದಾನಲ್ಲ, ಇವನೂ (ಆ) ಸತ್ಯಬ್ರಹ್ಮವು ಎಂದು ಚ (ಮತ್ತು ಎಂಬ) ಶಬ್ದದಿಂದ ಸಂಬಂಧ(ವನ್ನು ಮಾಡಿಕೊಳ್ಳಬೇಕು).

---

1. ಸ್ಥಾನವಿಶೇಷದಲ್ಲಿ ಎಂದು ಟೀಕಾನುಸಾರವಾದ ಅರ್ಥ. 'ಸಂಸ್ಥಾನವಿಶೇಷೌ' ಎಂದು ಮುಂದಿರುವ ಪದವನ್ನು ಲಕ್ಷ್ಯದಲ್ಲಿಟ್ಟು ಆಕಾರವಿಶೇಷದಲ್ಲಿ ಎಂದು ನಾವು ಕನ್ನಡಿಸಿದೇವೆ.

2. ಆ ಸತ್ಯಬ್ರಹ್ಮವೆಂದು ನಾವು ಹೇಳಿದ ತತ್ತ್ವವು ಆದಿತ್ಯಮಂಡಲದಲ್ಲಿರುವ ಪುರುಷನೇ, ಬಲಗಣ್ಣಿನಲ್ಲಿರುವ ಚಾಕ್ಷುಷಪುರುಷನೇ –ಎಂದು ಕಂಡಿಕೆಯ ವಾಕ್ಯದ ಅರ್ಥವನ್ನು ಆಕಾಂಕ್ಷಾಪೂರ್ವಕವಾಗಿ ಇಲ್ಲಿ ವಿವರಿಸಿರುತ್ತದೆ.

ಆ ಈ ಆದಿತ್ಯ, ಅಕ್ಷಿ- ಇವುಗಳಲ್ಲಿರುವ ಪುರುಷರು ಒಬ್ಬನೇ (ಆದ) ಸತ್ಯ ಬ್ರಹ್ಮದ ಸಂಸ್ಥಾನವಿಶೇಷವಷ್ಟೆ[1], ಆದ್ದರಿಂದ (ಅವರಿಬ್ಬರೂ) ಒಬ್ಬರಲ್ಲೊಬ್ಬರು ಒಬ್ಬರಲ್ಲಿ ಇನ್ನೊಬ್ಬರು ಎಂದರೆ ಆದಿತ್ಯನು ಚಾಕ್ಷುಷಪುರುಷನಲ್ಲಿ, ಚಾಕ್ಷುಷನೂ ಆದಿತ್ಯನಲ್ಲಿ (ಹೀಗೆ) ನಿಂತಿರುತ್ತಾರೆ; ಏಕೆಂದರೆ ಅಧ್ಯಾತ್ಮ, ಅಧಿದೈವತ— ಇವುಗಳಿಗೆ ಒಂದಕ್ಕೊಂದಕ್ಕೆ ಉಪಕಾರ್ಯೋಪಕಾರಕಭಾವವಿರುತ್ತದೆ. (ಒಬ್ಬರಲ್ಲೊಬ್ಬರು) ಹೇಗೆ ನಿಂತಿರುತ್ತಾರೆ? ಎಂದರೆ, ಶ್ರುತಿ ಹೇಳುತ್ತದೆ. ರಶ್ಮಿಗಳಿಂದ ಬೆಳಕಿನಿಂದ ಅನುಗ್ರಹವನ್ನು ಮಾಡುತ್ತಾ ಈ ಆದಿತ್ಯನು ಈ ಆಧ್ಯಾತ್ಮವಾದ ಚಾಕ್ಷುಷ(ಪುರುಷ)ನಲ್ಲಿ ನಿಂತಿರುತ್ತಾನೆ; ಮತ್ತು ಈ ಚಾಕ್ಷುಷಪುರುಷನೂ ಪ್ರಾಣಗಳಿಂದ ಆದಿತ್ಯನನ್ನು ಅನುಗ್ರಹಿಸುತ್ತಾ ಆ ಅಧಿದೈವನಾದ ಆದಿತ್ಯನಲ್ಲಿ ನಿಂತಿರುತ್ತಾನೆ.

ಇವನು ಎಂದರೆ ಈ ಶರೀರದಲ್ಲಿರುವ ವಿಜ್ಞಾನಮಯನಾದ ಭೋಕ್ತೃವು ಯಾವಾಗ ಯಾವ ಕಾಲದಲ್ಲಿ ಉತ್ಕ್ರಾಂತನಾಗುವವನಿರುವನೋ, ಆಗ ಈ ಚಾಕ್ಷುಷನಾದ ಆದಿತ್ಯಪುರುಷನು ರಶ್ಮಿಗಳನ್ನು ಎಳೆದುಕೊಂಡು ಬರಿಯ ಔದಾಸೀನ್ಯರೂಪದಿಂದ ಇದ್ದುಬಿಡುತ್ತಾನೆ. ಆಗ ಈ ವಿಜ್ಞಾನಮಯನು ಈ ಮಂಡಲವನ್ನು ರಶ್ಮಿರಹಿತವಾಗಿ ಚಂದ್ರಮಂಡಲದಂತೆ ಶುದ್ಧವಾಗಿಯೇ ಕಾಣು ತ್ತಾನೆ. ಹೇಗಾದರೂ ಮಾಡಿ ಮನುಷ್ಯನು ಕರ್ತವ್ಯದಲ್ಲಿ ಯತ್ನವಂತನಾಗಲಿ ಎಂದು ಈ ಅರಿಷ್ಟದರ್ಶನವನ್ನು ಇಲ್ಲಿ ಪ್ರಾಸಂಗಿಕವಾಗಿ ಹೇಳಿರುತ್ತದೆ[2]. ಈ ಚಾಕ್ಷುಷಪುರುಷನನ್ನು ಸ್ವೀಕರಿಸಿ ಅವನಿಗೆ ಅನುಗ್ರಹಮಾಡುವದಕ್ಕಾಗಿ ಈ ರಶ್ಮಿಗಳು— (ಚಕ್ಷುಃ)ಸ್ವಾಮಿ(ಯಾದ ಜೀವನಿಗೆ) ಕರ್ತವ್ಯವಿದ್ದದ್ದರಿಂದ ಮೊದಲು ಬರುತ್ತಿದ್ದವಾದರೂ ಮತ್ತೆ ಅವನ ಕರ್ಮದ ಕ್ಷಯವಾದದ್ದನ್ನು ಅನುಸರಿಸುತ್ತವೆಯೋ ಎಂಬಂತೆ— ಬಳಿಸಾರುವದಿಲ್ಲ, ಇವನ ಬಳಿಗೆ ಬರು ವದಿಲ್ಲ. ಆದ್ದರಿಂದ (ಹೀಗೆ) ಒಬ್ಬರಿಗೊಬ್ಬರಿಗೆ ಉಪಕಾರ್ಯೋಪಕಾರಕಭಾವವು ಇರುವದರಿಂದ ಸತ್ಯನೆಂಬ ಒಬ್ಬ ಆತ್ಮನ ಅಂಶ(ಭೂತರೇ) ಈ (ಪುರುಷರು) ಎಂದು ಗೊತ್ತಾಯಿತು.

---

1. ಈ ಪುರುಷರಿಬ್ಬರೂ ಆ ಸತ್ಯಬ್ರಹ್ಮದ ಆಕಾರವಿಶೇಷಗಳೇ ಎಂದರ್ಥ. ಈ ಸಂಸ್ಥಾನವಿಶೇಷಶಬ್ದದ ಆಧಾರದಿಂದಲೇ ನಾವು 'ಆಕಾರವಿಶೇಷದಲ್ಲಿ ಉಪಾಸನೆಮಾಡ ಬೇಕು' ಎಂಬರ್ಥವನ್ನು ಭಾಷ್ಯಕ್ಕೆ ಹೇಳಿರುವದು.

2. ಇಂಥ ಅಲ್ಪಾಯುಷ್ಯಸೂಚಕವಾದ ಅನೇಕ ಅರಿಷ್ಟಗಳನ್ನು ಐ. ಆ. ೩-೨-೪ ರಲ್ಲಿ ತಿಳಿಸಿದೆ.

# ಆದಿತ್ಯಪುರುಷನ ಉಪಾಸನೆ

(ಉಪನಿಷತ್ತು)

**ಯ ಏಷ ಏತಸ್ಮಿನ್ ಮಣ್ಡಲೇ ಪುರುಷಸ್ತಸ್ಯ ಭೂರಿತಿ ಶಿರ ಏಕಗ್ಂ ಶಿರ ಏಕಮೇತದಕ್ಷರಂ ಭುವ ಇತಿ ಬಾಹೂ ದ್ವೌ ಬಾಹೂ ದ್ವೇ ಏತೇ ಅಕ್ಷರೇ ಸ್ವರಿತಿ ಪ್ರತಿಷ್ಠಾ ದ್ವೇ ಪ್ರತಿಷ್ಠೇ ದ್ವೇ ಏತೇ ಅಕ್ಷರೇ ತಸ್ಯೋಪನಿಷದಹರಿತಿ ಹನ್ತಿ ಪಾಪ್ಮಾನಂ ಜಹಾತಿ ಚ ಯ ಏವಂ ವೇದ ॥ ೩ ॥**

೩. ಈ ಮಂಡಲದಲ್ಲಿರುವ ಪುರುಷನಿದಾನಲ್ಲ, ಇವನಿಗೆ 'ಭೂಃ' ಎಂಬುದು ತಲೆಯು: ತಲೆಯು ಒಂದು, ಈ ಅಕ್ಷರವೂ ಒಂದು. 'ಭುವಃ' ಎಂಬುದು ತೋಳುಗಳು; ತೋಳುಗಳು ಎರಡು, ಈ ಅಕ್ಷರಗಳೂ ಎರಡು. 'ಸ್ವಃ' ಎಂಬಿದು ಪ್ರತಿಷ್ಠೆ; ಪ್ರತಿಷ್ಠೆಗಳು ಎರಡು, ಈ ಅಕ್ಷರಗಳೂ ಎರಡು. ಅವನ ಉಪನಿಷತ್ತು 'ಅಹಸ್' ಎಂಬಿದು. ಯಾವನು ಹೀಗೆಂದು ಅರಿತಿರುವನೋ ಅವನು ಪಾಪವನ್ನು ನಾಶಗೊಳಿಸಿಕೊಳ್ಳುತ್ತಾನೆ, ಮತ್ತು ಬಿಟ್ಟುಬಿಡುತ್ತಾನೆ.

## ಆದಿತ್ಯಪುರುಷನ ಅವಯವಗಳೂ ಅಭಿಧಾನವೂ

(ಭಾಷ್ಯ)

**೩೭೫. ತತ್ರ ಯೋಽಸೌ। ಕಃ? ಯ ಏಷ ಏತಸ್ಮಿನ್ ಮಣ್ಡಲೇ ಪುರುಷಃ ಸತ್ಯನಾಮಾ ತಸ್ಯ ವ್ಯಾಹೃತಯಃ ಅವಯವಾಃ। ಕಥಮ್? ಭೂಃ ಇತಿ ಯೇಯಂ ವ್ಯಾಹೃತಿಃ ಸಾ ತಸ್ಯ ಶಿರಃ। ಪ್ರಾಥಮ್ಯಾತ್। ತತ್ರ ಸಾಮಾನ್ಯಂ ಸ್ವಯಮೇವ ಆಹ ಶ್ರುತಿಃ। ಏಕಮ್ ಏಕಸಂಖ್ಯಾಯುಕ್ತಂ ಶಿರಃ। ತಥಾ ಏತದಕ್ಷರಮ್ ಏಕಂ ಭೂಃ ಇತಿ। ಭುವಃ ಇತಿ ಬಾಹೂ। ದ್ವಿತ್ವಸಾಮಾನ್ಯಾತ್। ದ್ವೌ ಬಾಹೂ, ದ್ವೇ ಏತೇ ಅಕ್ಷರೇ। ತಥಾ ಸ್ವಃ ಇತಿ ಪ್ರತಿಷ್ಠಾ। ದ್ವೇ ಪ್ರತಿಷ್ಠೇ, ದ್ವೇ ಏತೇ ಅಕ್ಷರೇ। ಪ್ರತಿಷ್ಠೇ ಪಾದೌ। ಪ್ರತಿತಿಷ್ಠತಿ ಆಭ್ಯಾಮ್ ಇತಿ। ತಸ್ಯಾಸ್ಯ ವ್ಯಾಹೃತ್ಯವಯವಸ್ಯ ಸತ್ಯಸ್ಯ ಬ್ರಹ್ಮಣಃ ಉಪನಿಷತ್ ರಹಸ್ಯಮ್ ಅಭಿಧಾನಮ್। ಯೇನ ಅಭಿಧಾನೇನ ಅಭಿಧೀಯಮಾನಂ ತದ್ ಬ್ರಹ್ಮ ಅಭಿಮುಖೀ ಭವತಿ ಲೋಕವತ್। ಕಾಽಸೌ ಇತಿ? ಆಹ ಅಹಃ ಇತಿ। ಅಹಃ ಇತಿ ಚ ಏತದ್ರೂಪಂ ಹನ್ತೇಃ ಜಹಾತೇಶ್ಚ ಇತಿ ಯೋ ವೇದ ಸ ಹನ್ತಿ ಜಹಾತಿ ಚ ಪಾಪ್ಮಾನಂ ಯ ಏವಂ ವೇದ॥**

(ಭಾಷ್ಯಾರ್ಥ)

ಇವರೊಳಗೆ ಈತನಿದಾನಲ್ಲ—(ಈತನೆಂದರೆ) ಯಾರು ? ಈ ಮಂಡಲದಲ್ಲಿರುವ ಸತ್ಯನೆಂಬ ಪುರುಷನಿದಾನಲ್ಲ, (ಅವನು)—ಅವನಿಗೆ ವ್ಯಾಹೃತಿಗಳು ಅವಯವಗಳು. ಹೇಗೆಂದರೆ ಭೂಃ ಎಂಬ ಈ ವ್ಯಾಹೃತಿಯಿದೆಯಲ್ಲ, ಅದು ಅವನ ತಲೆ; ಏಕೆಂದರೆ (ಅದು) ಮೊದಲನೆಯದಾಗಿರುತ್ತದೆ. ಇವೆರಡಕ್ಕೂ ಹೋಲಿಕೆಯನ್ನು ಶ್ರುತಿಯು ತಾನೇ (ಹೀಗೆಂದು) ಹೇಳುತ್ತಿದೆ: ತಲೆಯು ಒಂದು, ಒಂದು ಎಂಬ ಸಂಖ್ಯೆಯಿಂದ ಕೂಡಿದ್ದು; ಹಾಗೆಯೇ ಈ ಭೂಃ ಎಂಬಕ್ಷರವೂ ಒಂದು. ಭುವಃ ಎಂಬಿದು ತೋಳುಗಳು; ಏಕೆಂದರೆ ಎರಡೆಂಬುದು (ಎರಡಕ್ಕೂ) ಸಮಾನ(ವಾಗಿದೆ). ತೋಳುಗಳು ಎರಡು; ಈ ಅಕ್ಷರಗಳೂ ಎರಡು. ಹೀಗೆಯೇ ಸ್ವಃ ಎಂಬುದು ಪ್ರತಿಷ್ಠೆ. ಪ್ರತಿಷ್ಠೆಗಳು ಎರಡು, ಈ ಅಕ್ಷರಗಳೂ ಎರಡು ಪ್ರತಿಷ್ಠೆಗಳು ಎಂದರೆ ಪಾದಗಳು, ಇವುಗಳಿಂದ ನಿಲ್ಲುತ್ತಾನೆ ಎಂಬ (ವ್ಯುತ್ಪತ್ತಿಯಿಂದ ಪಾದಗಳಿಗೆ ಈ ಹೆಸರು ಸಲ್ಲುತ್ತದೆ).

ಆ ಈ ವ್ಯಾಹೃತ್ಯವಯವಗಳಿರುವ ಸತ್ಯವೆಂಬ ಬ್ರಹ್ಮಕ್ಕೆ ಉಪನಿಷತ್ತು, ರಹಸ್ಯವಾದ ಹೆಸರು[1], ಆ ಅಭಿಧಾನದಿಂದ ಕರೆದರೆ ಆ ಬ್ರಹ್ಮವು ಲೋಕದ (ಜನ)ರಂತೆ ಅಭಿಮುಖವಾಗುತ್ತದೆ[2] ಆ (ಉಪನಿಷತ್ತು) ಯಾವದು ? ಎಂದರೆ (ಶ್ರುತಿ) ಹೇಳುತ್ತದೆ. 'ಅಹಃ' ಎಂಬುದೇ (ಆ ಉಪನಿಷತ್ತು). ಅಹಃ ಎಂಬೀ ರೂಪವು ಹನ್ (ನಾಶಮಾಡು), ಮತ್ತು ಹಾ (ಬಿಡು) ಎಂಬ (ಧಾತುಗಳಿಂದ ಸಿದ್ಧವಾದದ್ದು) ಎಂದು ಯಾವನು ಅರಿತುಕೊಳ್ಳುವನೋ, ಯಾವನು ಹೀಗೆಂದು (ಬ್ರಹ್ಮವನ್ನು) ಅರಿಯುವನೋ[3], ಅವನು ಪಾಪವನ್ನು ನಾಶಗೊಳಿಸಿಕೊಳ್ಳುತ್ತಾನೆ, ಮತ್ತು ಬಿಟ್ಟುಬಿಡುತ್ತಾನೆ.

## ಚಾಕ್ಷುಷಪುರುಷನ ಉಪಾಸನೆ

(ಉಪನಿಷತ್ತು)

**ಯೋಽಯಂ ದಕ್ಷಿಣೇಽಕ್ಷನ್ ಪುರುಷಸ್ತಸ್ಯ ಭೂರಿತಿ ಶಿರ ಏಕಗ್ಂ ಶಿರಃ ಏಕಮೇತದಕ್ಷರಂ ಭುವ ಇತಿ ಬಾಹೂ ದ್ವೌ ಬಾಹೂ ದ್ವೇ**

1. ೨–೧–೨೦ (ಭಾ. ಭಾ ೩೦೪)ರಲ್ಲಿ ಈ ಉಪನಿಷಚ್ಛಬ್ದವನ್ನು ಹೀಗೆಯೇ ವಿವರಿಸಿದೆ.

2. ಪರಮಾತ್ಮನು ಈ ನಾಮದಿಂದ ಪ್ರಸನ್ನನಾಗುತ್ತಾನೆ.

3. ಬ್ರಹ್ಮವನ್ನು 'ಅಹಃ' ಎಂಬ ರಹಸ್ಯನಾಮದಿಂದ ಕೂಡಿದ್ದೆಂದೂ ಆ ಶಬ್ದದ ನಿರ್ವಚನದಿಂದ ತೋರುವ ಪಾಪನಾಶಕತ್ವ, ಪಾಪತ್ಯಾಗ –ಎಂಬ ಗುಣಗಳಿಂದ ಕೂಡಿದ್ದೆಂದೂ ಉಪಾಸನೆಮಾಡುವನೋ ಎಂದರ್ಥ.

**ಏತೇ ಅಕ್ಷರೇ ಸ್ವರಿತಿ ಪ್ರತಿಷ್ಠಾ ದ್ವೇ ಪ್ರತಿಷ್ಠೇ ದ್ವೇ ಏತೇ ಅಕ್ಷರೇ ತಸ್ಯೋಪನಿಷದಹಮಿತಿ ಹನ್ತಿ ಪಾಪ್ಮಾನಂ ಜಹಾತಿ ಚ ಯ ಏವಂ ವೇದ ॥ ೪ ॥**

೪. ಈ ಬಲಗಣ್ಣಿನಲ್ಲಿರುವ ಪುರುಷನಿದಾನಲ್ಲ, ಇವನಿಗೆ 'ಭೂಃ' ಎಂಬಿದು ತಲೆಯು ; ತಲೆಯು ಒಂದು, ಈ ಅಕ್ಷರವೂ ಒಂದು. 'ಭುವಃ' ಎಂಬಿದು ತೋಳುಗಳು ; ತೋಳುಗಳು ಎರಡು, ಈ ಅಕ್ಷರಗಳೂ ಎರಡು. 'ಸ್ವಃ' ಎಂಬಿದು ಪ್ರತಿಷ್ಠೆ ; ಪ್ರತಿಷ್ಠೆಗಳು ಎರಡು, ಈ ಅಕ್ಷರಗಳೂ ಎರಡು. ಅವನ ಉಪನಿಷತ್ತು 'ಅಹಮ್' ಎಂಬಿದು. ಯಾವನು ಹೀಗೆಂದು ಅರಿತಿರುವನೋ ಪಾಪವನ್ನು ನಾಶಗೊಳಿಸಿಕೊಳ್ಳುತ್ತಾನೆ, ಮತ್ತು ಬಿಟ್ಟುಬಿಡುತ್ತಾನೆ.

## ಚಾಕ್ಷುಷಪುರುಷನ ಅವಯವಗಳೂ ಅಭಿಧಾನವೂ

(ಭಾಷ್ಯ)

೩೭೬. ಏವಂ ಯೋಽಯಂ ದಕ್ಷಿಣೇ ಅಕ್ಷನ್ ಪುರುಷಃ ತಸ್ಯ ಭೂಃ ಇತಿ ಶಿರಃ ಇತ್ಯಾದಿ ಸರ್ವಂ ಸಮಾನಮ್ । ತಸ್ಯ ಉಪನಿಷತ್ ಅಹಮ್ ಇತಿ । ಪ್ರತ್ಯಗಾತ್ಮಭೂತತ್ವಾತ್ । ಪೂರ್ವವತ್ ಹನ್ತೇರ್ಜಹಾತೇಶ್ಚ ಇತಿ ॥

(ಭಾಷ್ಯಾರ್ಥ)

ಹೀಗೆಯೇ ಈ ಬಲಗಣ್ಣಿನಲ್ಲಿರುವ ಪುರುಷನಿದಾನಲ್ಲ, 'ಇವನಿಗೆ ಭೂಃ ಎಂಬುದು ತಲೆಯು' ಮುಂತಾದದ್ದೆಲ್ಲವೂ (ಹಿಂದಿನ ಕಂಡಿಕೆಗೆ) ಸಮಾನವಾಗಿರುತ್ತದೆ.

ಅವನಿಗೆ ಅಹಮ್ ಎಂದು ಉಪನಿಷತ್ತು[1] ; ಏಕೆಂದರೆ (ಅವನು) ಪ್ರತ್ಯಗಾತ್ಮನಾಗಿರುತ್ತಾನೆ. ಹಿಂದಿನಂತೆಯೇ (ಈ ಅಹಮ್ ಎಂಬ ರೂಪವೂ) ಹನ್ ಮತ್ತು ಹಾ (ಧಾತು)ಗಳಿಂದ (ವ್ಯುತ್ಪನ್ನವಾಗಿರುತ್ತದೆ).

---

1. ಇಲ್ಲಿ ಉಪಾಸನೆಗೆ ಬೇರೆಬೇರೆಯ ಸ್ಥಾನವಿಶೇಷಗಳನ್ನು ಹೇಳಿರುವದರಿಂದ ಅಹರ್ ಎಂಬ ನಾಮವನ್ನು ಅಧಿದೈವತೋಪಾಸನೆಗೇ ಸೇರಿಸಿಕೊಳ್ಳಬೇಕು ; ಅಹಮ್ ಎಂಬುದನ್ನು ಅಧ್ಯಾತ್ಮೋಪಾಸನೆಗೇ ಸೇರಿಸಿಕೊಳ್ಳಬೇಕು- ಇವನ್ನು ಒಂದನ್ನೊಂದರಲ್ಲಿ ಉಪಸಂಹಾರಮಾಡಬಾರದು ಎಂದು ಸೂ. ಭಾ. ೩-೩-೨೧, ೨೨ (ಭಾ.ಭಾ. ೩೫೯-೩೬೦) -ಇವುಗಳಲ್ಲಿ ನಿರ್ಣಯಿಸಿದೆ.

# ಐದನೆಯ ಅಧ್ಯಾಯ - ಆರನೆಯ ಬ್ರಾಹ್ಮಣ

## (ಸೋಪಾಧಿಕಬ್ರಹ್ಮಕ್ಕೆ ಮತ್ತೊಂದು ಉಪಾಸನೆ)

## ಶಾಂಡಿಲ್ಯವಿದ್ಯೆ

(ಉಪನಿಷತ್ತು)

**ಮನೋಮಯೋಽಯಂ ಪುರುಷೋ ಭಾಃಸತ್ಯಸ್ತಸ್ಮಿನ್ನನ್ತ ರ್ಹೃದಯೇ ಯಥಾ ವ್ರೀಹಿರ್ವಾ ಯವೋ ವಾ ಸ ಏಷ ಸರ್ವಸ್ಯೇಶಾನಃ ಸರ್ವಸ್ಯಾಧಿಪತಿಃ ಸರ್ವಮಿದಂ ಪ್ರಶಾಸ್ತಿ ಯದಿದಂ ಕಿಂ ಚ ॥ ೧ ॥**

೧. ಈ ಪುರುಷನು ಮನೋಮಯನು, ಭಾಃಸತ್ಯನು, ಆ ಅಂತರ್ಹೃದಯದಲ್ಲಿ ಹೇಗೆ ಭತ್ತದ ಕಾಳಿರುವದೋ ಅಥವಾ ಜವೆಯ ಕಾಳಿರುವದೋ (ಹಾಗೆ ಇರುತ್ತಾನೆ). ಆ ಇವನು ಎಲ್ಲಕ್ಕೂ ಈಶಾನನು, ಎಲ್ಲಕ್ಕೂ ಅಧಿಪತಿಯು ; ಇದು ಏನೇನಿದೆಯೋ ಇದೆಲ್ಲವನ್ನೂ ಕಟ್ಟಿನಲ್ಲಿಟ್ಟಿರುತ್ತಾನೆ.

## ಮನೋಮಯತ್ವಾದಿಗುಣವಿಶಿಷ್ಟವೆಂದು ಬ್ರಹ್ಮದ ಉಪಾಸನೆ

(ಭಾಷ್ಯ)

೩೭೭. ಉಪಾಧೀನಾಮನೇಕತ್ವಾತ್ ಅನೇಕವಿಶೇಷಣತ್ವಾಚ್ಚ ತಸ್ಯೈವ ಪ್ರಕೃತಸ್ಯ ಬ್ರಹ್ಮಣಃ ಮನಉಪಾಧಿವಿಶಿಷ್ಟಸ್ಯ ಉಪಾಸನಂ ವಿಧಿತ್ಸನ್ ಆಹ । ಮನೋಮಯಃ ಮನಃಪ್ರಾಯಃ । ಮನಸಿ ಉಪಲಭ್ಯಮಾನತ್ವಾತ್ । ಮನಸಾ ಚ ಉಪಲಭತೇ ಇತಿ ಮನೋಮಯೋಽಯಂ ಪುರುಷಃ । ಭಾಃಸತ್ಯಃ । ಭಾ ಏವ ಸತ್ಯಂ ಸದ್ಭಾವಃ ಸ್ವರೂಪಂ ಯಸ್ಯ ಸೋಽಯಂ ಭಾಃಸತ್ಯಃ । ಭಾಸ್ವರಃ ಇತ್ಯೇತತ್ । ಮನಸಃ ಸರ್ವಾರ್ಥಾವಭಾಸಕತ್ವಾತ್ ಮನೋಮಯತ್ವಾಚ್ಚ ಅಸ್ಯ ಭಾಸ್ವರತ್ವಮ್ । ತಸ್ಮಿನ್ ಅನ್ತರ್ಹೃದಯೇ ಹೃದಯಸ್ಯ ಅನ್ತಃ ತಸ್ಮಿನ್ ಇತ್ಯೇತತ್ । ಯಥಾ ವ್ರೀಹಿರ್ವಾ ಯವೋ ವಾ ಪರಿಮಾಣತಃ ಏವಂಪರಿಮಾಣಃ । ತಸ್ಮಿನ್ ಅನ್ತರ್ಹೃದಯೇ ಯೋಗಿಭಿರ್ದೃಶ್ಯತೇ ಇತ್ಯರ್ಥಃ । ಸ ಏಷಃ ಸರ್ವಸ್ಯ ಈಶಾನಃ । ಸರ್ವಸ್ಯ ಭೇದಜಾತಸ್ಯ[1] ಈಶಾನಃ ಸ್ವಾಮೀ । ಸ್ವಾಮಿತ್ವೇಽಪಿ

1. ಸ್ವಭೇದಜಾತಸ್ಯ ಎಂಬ ಪಾಠದಲ್ಲಿ ಸ್ವ ಹೆಚ್ಚು.

ಸತಿ ಕಶ್ಚಿತ್ ಅಮಾತ್ಯಾದಿತನ್ತ್ರಃ। ಅಯಂ ತು ನ ತಥಾ, ಕಿಂ ತರ್ಹಿ ಅಧಿಪತಿಃ ಅಧಿಷ್ಠಾಯ ಪಾಲಯಿತಾ। ಸರ್ವಮಿದಂ ಪ್ರಶಾಸ್ತಿ ಯದಿದಂ ಕಿಂ ಚ ಯತ್ಕಿಂ ಚಿತ್ ಸರ್ವಂ ಜಗತ್ ತತ್ ಸರ್ವಂ ಪ್ರಶಾಸ್ತಿ। ಏವಂ ಮನೋಮಯಸ್ಯ ಉಪಾಸನಾತ್ ತಥಾರೂಪಾಪತ್ತಿರೇವ ಫಲಮ್। "ತಂ ಯಥಾ ಯಥೋಪಾಸತೇ ತದೇವ ಭವತಿ" (ಶತ. ಬ್ರಾ. ೧೦-೫-೨-೨೦) ಇತಿ ಬ್ರಾಹ್ಮಣಮ್॥

(ಭಾಷ್ಯಾರ್ಥ)

ಉಪಾಧಿಗಳು ಅನೇಕವಾಗಿರುವದರಿಂದಲೂ ಅನೇಕವಿಶೇಷಣವುಳ್ಳವಾಗಿರುವದರಿಂದಲೂ[1] ಅದೇ ಪ್ರಕೃತಬ್ರಹ್ಮಕ್ಕೆ[2] ಮನಸ್ಸೆಂಬ ಉಪಾಧಿಯಿಂದ ವಿಶಿಷ್ಟವಾಗಿ ಉಪಾಸನೆಯನ್ನು ವಿಧಿಸಬೇಕೆಂದು (ಶ್ರುತಿ) ಹೇಳುತ್ತಿದೆ.

ಮನೋಮಯನು ಎಂದರೆ ಮನಃಪ್ರಚುರನು ಎಂದರ್ಥ. ಏಕೆಂದರೆ ಇವನು ಮನಸ್ಸಿನಲ್ಲಿ ತಿಳಿಯಬರುತ್ತಾನೆ; ಮನಸ್ಸಿನಿಂದಲೇ ಅರಿಯುತ್ತಾನಾದ್ದರಿಂದಲೂ ಈ ಪುರುಷನು ಮನೋಮಯನು[3]. ಭಾಃಸತ್ಯನು— ಯಾವನಿಗೆ ಭಾಸವೇ ಸತ್ಯವಾಗಿರುವದೋ ಸದ್ಭಾವವಾಗಿರುವದೋ ಎಂದರೆ ಸ್ವರೂಪವಾಗಿರುವದೋ ಆ ಇವನು ಭಾಃಸತ್ಯನು—ಕಾಂತಿಯುಕ್ತನಾಗಿರುವನು ಎಂದರ್ಥ. ಮನಸ್ಸು ಎಲ್ಲ ಅರ್ಥವನ್ನು ಬೆಳಗುವದರಿಂದಲೂ ಇವನು ಮನೋಮಯನಾಗಿರುವದರಿಂದಲೂ ಇವನು ಕಾಂತಿಯುಕ್ತನು. ಆ ಅಂತರ್ಹೃದಯದಲ್ಲಿ, ಹೃದಯದ ಒಳಗಡೆ(ಯಿದೆಯಲ್ಲ), ಅದರಲ್ಲಿ ಎಂದರ್ಥ. ಹೇಗೆ ಭತ್ತದ ಕಾಳಾಗಲಿ ಜವೆಯಕಾಳಾಗಲಿ ಪರಿಮಾಣದಿಂದ (ಸಣ್ಣದಾಗಿರುವದೋ ಹಾಗೆ) ಅಷ್ಟು ಪರಿಮಾಣವುಳ್ಳವನಾಗಿ[4] ಯೋಗಿಗಳಿಗೆ ಅಂತರ್ಹೃದಯದಲ್ಲಿ ಕಾಣಿಸುತ್ತಾನೆ ಎಂದರ್ಥ.

ಆ ಇವನು ಎಲ್ಲಾ ಭೇದಜಾತಕ್ಕೂ ಈಶಾನನು, ಒಡೆಯನು. ಒಡೆಯನಾಗಿದ್ದರೂ ಒಬ್ಬೊಬ್ಬನು ಅಮಾತ್ಯಾದಿಗಳಿಗೆ ವಶನಾಗಿರುತ್ತಾನೆ; ಆದರೆ ಇವನು ಹಾಗಿರುವದಿಲ್ಲ, ಮತ್ತೇನೆಂದರೆ ಅಧಿಪತಿಯು ಮೇಲಿದ್ದುಕೊಂಡು

---

1. ಒಂದೊಂದು ಉಪಾಧಿಗೂ ಅನೇಕ ವಿಶೇಷಣಗಳಿರುವದರಿಂದಲೂ ಎಂದು ಟೀ॥ ಬೇರೆಬೇರೆ ವಿಶೇಷಣಗಳಿಂದ ಕೂಡಿ ಉಪಾಸನೆಮಾಡಬೇಕಾಗಿರುವದರಿಂದ ಬೇರೆ ಬೇರೆ ಉಪಾಸನೆಗಳನ್ನು ಹೇಳಬೇಕಾಗಿರುವದರಿಂದಲೂ ಎಂಬದರಲ್ಲಿ ಇದಕ್ಕೆ ತಾತ್ಪರ್ಯ.

2. ಸೋಪಾಧಿಕಬ್ರಹ್ಮಕ್ಕೆ.

3. ಮನೋಮಯ, ವಿಜ್ಞಾನಮಯ— ಎಂಬಿವುಗಳ ವಿವರಕ್ಕೆ ಹಿಂದೆ ಭಾ. ಭೂ. ೨೬೪ನ್ನು ನೋಡಿರಿ. ತೈ. ಭಾ. ೧-೬ (ಭಾ. ಭಾ. ೪೦)ನ್ನೂ ಛಾಂ. ಭಾ. ೩-೪-೨ನ್ನೂ ಇದಕ್ಕೆ ಹೋಲಿಸಿರಿ.

4. ಉಪಾಧಿವಶದಿಂದ ಬಹುಸೂಕ್ಷ್ಮನಾಗಿ ತೋರುತ್ತಾನೆ ಎಂದರ್ಥ.

ಕಾಪಾಡುವವನು. ಇದೆಲ್ಲವನ್ನೂ ಕಟ್ಟಿನಲ್ಲಿಟ್ಟಿರುತ್ತಾನೆ, ಇದು ಏನೇನಿದೆಯೋ, ಜಗತ್ತೆಂಬುದು ಯಾವಯಾವದಿದೆಯೋ, ಅದೆಲ್ಲವನ್ನೂ ಕಟ್ಟಿನಲ್ಲಿಟ್ಟಿರುತ್ತಾನೆ.

ಹೀಗೆ ಮನೋಮಯ(ಬ್ರಹ್ಮದ) ಉಪಾಸನೆಯಿಂದ ಆ ರೂಪವನ್ನು ಹೊಂದುವದೇ ಫಲವು. (ಏಕೆಂದರೆ) "ಆತನನ್ನು ಹೇಗೆಹೇಗೆ ಉಪಾಸನೆ ಮಾಡುವರೋ ಅದದೇ ಆಗುತ್ತದೆ" (ಶತ. ಬ್ರಾ. ೧೦-೫-೨-೨೦) ಎಂದು ಬ್ರಾಹ್ಮಣ(ವಚನ)ವಿದೆ[1].

---

1. ಶತ. ಬ್ರಾ. ೧೦-೬-೩-೨ರಲ್ಲಿ ಹೇಳಿರುವ ಶಾಂಡಿಲ್ಯವಿದ್ಯೆಯಲ್ಲಿ ಹೀಗಿದೆ: "ಸ ಆತ್ಮಾನಮುಪಾಸೀತ। ಮನೋಮಯಂ ಪ್ರಾಣಶರೀರಂ ಭಾರೂಪಮಾಕಾಶಾತ್ಮಾನಂ ಕಾಮರೂಪಿಣಂ ಮನೋಜವಸಗ್ಂ ಸತ್ಯಸಂಕಲ್ಪಗ್ಂ ಸತ್ಯಧೃತಿಗ್ಂ ಸರ್ವಗನ್ಧಗ್ಂ ಸರ್ವರಸಗ್ಂ ಸರ್ವಾ ಅನುದಿಶಃ ಪ್ರಭೂತಗ್ಂ ಸರ್ವಮಿದಮಭ್ಯಾಪ್ತಮವಾಕ್ಕಮನಾದರಂ ಯಥಾ ವ್ರೀಹಿರ್ವಾ ಯವೋ ವಾ ಶ್ಯಾಮಾಕೋ ವಾ ಶ್ಯಾಮಾಕತಣ್ಡುಲೋ ವೈವಮಯಮನ್ತರಾತ್ಮನ್ ಪುರುಷೋ ಹಿರಣ್ಮಯೋ ಯಥಾ ಜ್ಯೋತಿರಧೂಮಮೇವಂ ಜ್ಯಾಯಾನ್ ದಿವೋ ಜ್ಯಾಯಾನಾಕಾಶಾಜ್ಜ್ಯಾಯಾನಸ್ಯೈ ಪೃಥಿವ್ಯೈ ಜ್ಯಾಯಾನ್ತ್ಸರ್ವೇಭ್ಯೋ ಭೂತೇಭ್ಯಃ ಸ ಪ್ರಾಣಸ್ಯಾತ್ಮೈಷ ಮ ಆತ್ಮೈತಮಿತ ಆತ್ಮಾನಂ ಪ್ರೇತ್ಯಾಭಿಸಂಭವಿಷ್ಯಾಮೀತಿ ಯಸ್ಯ ಸ್ಯಾದದ್ಧಾ ನ ವಿಚಿಕಿತ್ಸಾಸ್ತೀತಿ ಹಸ್ಮಾಹ ಶಾಣ್ಡಿಲ್ಯ ಏವಮೇತದಿತಿ ॥" ಈ ಎರಡೂ ಉಪಾಸನೆಗಳು ಒಂದೇ ಎಂದು ಸೂ. ಭಾ. ೩-೩-೧೯ (ಭಾ. ಪು. ೩೫೬)ರಲ್ಲಿ ನಿರ್ಣಯಿಸಿದೆ.

# ಐದನೆಯ ಅಧ್ಯಾಯ - ಏಳನೆಯ ಬ್ರಾಹ್ಮಣ

## (ಬ್ರಹ್ಮದ ಉಪಾಸನಾಂತರ)

(ಉಪನಿಷತ್ತು)

**ವಿದ್ಯುದ್ ಬ್ರಹ್ಮೇತ್ಯಾಹುರ್ವಿದಾನಾದ್ ವಿದ್ಯುದ್ವಿದ್ಯತ್ಯೇನಂ ಪಾಪ್ಮನೋ ಯ ಏವಂ ವೇದ ವಿದ್ಯುದ್ ಬ್ರಹ್ಮೇತಿ ವಿದ್ಯುದ್ಧ್ಯೇವ ಬ್ರಹ್ಮ ॥ ೧ ॥**

೧. ಬ್ರಹ್ಮವು ವಿದ್ಯುತ್ತು (ಮಿಂಚು) ಎನ್ನುವರು. (ಅದು) ವಿದಾನ(ಮಾಡುವದ)ರಿಂದ ವಿದ್ಯುತ್ತು (ಎನಿಸಿದೆ). ಯಾವನು ಹೀಗೆಂದು ಮಿಂಚು ಬ್ರಹ್ಮವೆಂದು ಅರಿಯುವನೋ ಅವನು ಇವನಿಗೆ ಪ್ರತಿಯಾದ ಪಾಪವನ್ನು ತುಂಡಿಸುತ್ತಾನೆ. ಮಿಂಚೇ ಬ್ರಹ್ಮವಷ್ಟೆ.

## ಬ್ರಹ್ಮವನ್ನು ವಿದ್ಯುತ್ತು ಎಂದು ಉಪಾಸನೆಮಾಡಬೇಕು

(ಭಾಷ್ಯ)

೩೭೮. ತಥೈವ ಉಪಾಸನಾನ್ತರಂ ಸತ್ಯಸ್ಯ ಬ್ರಹ್ಮಣಃ ವಿಶಿಷ್ಟಫಲಮ್ ಆರಭ್ಯತೇ । ವಿದ್ಯುದ್ ಬ್ರಹ್ಮ ಇತ್ಯಾಹುಃ । ವಿದ್ಯುತೋ ಬ್ರಹ್ಮಣಃ ನಿರ್ವಚನಮ್ ಉಚ್ಯತೇ । ವಿದಾನಾತ್ ಅವಖಂಡನಾತ್ ತಮಸಃ । ಮೇಘಾನ್ಧಕಾರಂ ವಿದಾರ್ಯ ಹಿ ಅವಭಾಸತೇ । ಅತೋ ವಿದ್ಯುತ್ । ಏವಂಗುಣಂ ವಿದ್ಯುತ್ ಬ್ರಹ್ಮ ಇತಿ ಯೋ ವೇದ ಅಸೌ ವಿದ್ಯತಿ ಅವಖಣ್ಡಯತಿ ವಿನಾಶಯತಿ ಪಾಪ್ಮನಃ । ಏನಮ್ ಆತ್ಮಾನಂ ಪ್ರತಿ ಪ್ರತಿಕೂಲಭೂತಾಃ ಪಾಪ್ಮಾನೋ ಯೇ ತಾನ್ ಸರ್ವಾನ್ ಪಾಪ್ಮನಃ ಅವಖಣ್ಡಯತಿ ಇತ್ಯರ್ಥಃ । ಯ ಏವಂ ವೇದ ವಿದ್ಯುದ್ ಬ್ರಹ್ಮ ಇತಿ ತಸ್ಯ ಅನುರೂಪಂ ಫಲಮ್ ವಿದ್ಯುತ್ ಹಿ ಯಸ್ಮಾತ್ ಬ್ರಹ್ಮ ॥

(ಭಾಷ್ಯಾರ್ಥ)

ಹೀಗೆಯೇ ಸತ್ಯ[1] ಬ್ರಹ್ಮಕ್ಕೆ ಅಸಾಧಾರಣಫಲವುಳ್ಳ ಮತ್ತೊಂದು ಉಪಾಸನೆಯನ್ನು (ಇಲ್ಲಿ) ಹೇಳುವದಕ್ಕೆ ಆರಂಭಿಸಿರುತ್ತದೆ.

---

1. ಸತ್ಯಬ್ರಹ್ಮವೆಂದು ಉಪಾಸನೆಮಾಡಿದ ಹಾರ್ದಬ್ರಹ್ಮವನ್ನೇ ವಿಶೇಷಣಾಂತರದಿಂದ ಉಪಾಸನೆಮಾಡಬೇಕೆಂದು ವಿಧಿಸಿದೆ ; ಉಪಾಸನೆಯೇನೋ ಬೇರೆಯೇ, ಏಕೆಂದರೆ ಇಲ್ಲಿ ವಿದ್ಯುತ್ತೆಂಬ ಉಪಾಧಿಯೂ ಬ್ರಹ್ಮದ ಗುಣವೂ ಬೇರೆ.

ಬ್ರಹ್ಮವನ್ನು ವಿದ್ಯುತ್ತು ಎನ್ನುತ್ತಾರೆ. ವಿದ್ಯುತ್ತೆಂಬ ಬ್ರಹ್ಮದ ನಿರ್ವಚನವನ್ನು (ಇಲ್ಲಿ) ಹೇಳಲಾಗುತ್ತದೆ. ವಿದಾನ(ಮಾಡು)ವದರಿಂದ, ಕತ್ತಲೆಯನ್ನು ಖಂಡಿಸುವದರಿಂದ – ಮೋಡದ ಕತ್ತಲೆಯನ್ನು ಸೀಳಿಕೊಂಡಲ್ಲವೆ, (ಅದು) ತೋರಿಕೊಳ್ಳುತ್ತದೆ ? ಆದ್ದರಿಂದ— ವಿದ್ಯುತ್ತು (ಎನಿಸಿದೆ). ಬ್ರಹ್ಮವು ಈ ಗುಣವುಳ್ಳ ವಿದ್ಯುತ್ತು ಎಂದು ಯಾವನು ಅರಿಯುತ್ತಾನೋ, ಅವರು (ವಿದ್ಯತಿ=ಅವಖಂಡಯತಿ) ಪಾಪಗಳನ್ನು ಖಂಡಿಸುತ್ತಾನೆ. ವಿನಾಶಗೊಳಿಸಿಕೊಳ್ಳುತ್ತಾನೆ (ಎಂದರ್ಥ). ಇವನಿಗೆ, ತನಗೆ, ಪ್ರತಿಯಾದ ಪ್ರತಿಕೂಲವಾಗಿರುವ ಪಾಪಗಳಿರುವವಲ್ಲ, ಆ ಪಾಪಗಳನ್ನೆಲ್ಲ[1] ಖಂಡಿಸುತ್ತಾನೆ ಎಂದರ್ಥ. ಯಾವನು ವಿದ್ಯುತ್ತು ಬ್ರಹ್ಮವು ಎಂದು ಹೀಗೆ ಅರಿಯುತ್ತಾನೋ[2], ಅವನಿಗೆ ಅನುರೂಪವಾದ ಫಲವಾಗುತ್ತದೆ. ಏಕೆಂದರೆ ಬ್ರಹ್ಮವು ವಿದ್ಯುತ್ತಷ್ಟೆ[3] ?

---

1. ಪಾಪಗಳೆಲ್ಲ ಪ್ರತಿಕೂಲವಾಗಿಯೇ ಇರುತ್ತವೆಯಷ್ಟೆ, ಅವನ್ನು ಎಂದರ್ಥ.

2. ಬ್ರಹ್ಮವು ವಿದ್ಯುತ್ತು ಎಂದು ಉಪಾಸನೆಮಾಡುತ್ತಾನೋ.

3. ಬ್ರಹ್ಮವು ವಿದ್ಯುದ್ಗುಣದಿಂದ ಕೂಡಿರುವದರಿಂದ ಅದರ ಉಪಾಸನೆಗೆ ಅನುಗುಣವಾಗಿ ಫಲವಾಗುತ್ತದೆ ಎಂದರ್ಥ. ವಿದ್ಯುತ್ತೆಂಬ ಉಪಾಧಿಯಿಂದ ಮಾಡಿದ ಬ್ರಹ್ಮವನ್ನು ಈ ಗುಣದಿಂದ ವಿಶಿಷ್ಟವೆಂದು ಉಪಾಸನೆಮಾಡಬೇಕು ಎಂದು ಇಲ್ಲಿ ವಿಧಿಸಿದೆ ; ವಿದ್ಯುತ್ತನ್ನು ಬ್ರಹ್ಮವೆಂದು ಉಪಾಸನೆಮಾಡಬೇಕು ಎಂದು ಪ್ರತೀಕೋಪಾಸನೆಯನ್ನು ವಿಧಿಸಿಲ್ಲ.

# ಐದನೆಯ ಅಧ್ಯಾಯ-ಎಂಟನೆಯ ಬ್ರಾಹ್ಮಣ

(ಸೋಪಾಧಿಕಬ್ರಹ್ಮಕ್ಕೆ ಉಪಾಸನಾಂತರ)

## ವಾಗ್ಬ್ರಹ್ಮೋಪಾಸನೆ

(ಉಪನಿಷತ್ತು)

**ವಾಚಂ ಧೇನುಮುಪಾಸೀತ ತಸ್ಯಾಶ್ಚತ್ವಾರಃ ಸ್ತನಾಃ ಸ್ವಾಹಾ ಕಾರೋ ವಷಟ್ಕಾರೋ ಹನ್ತಕಾರಃ ಸ್ವಧಾಕಾರಸ್ತಸ್ಯೈ ದ್ವೌ ಸ್ತನೌ ದೇವಾ ಉಪಜೀವನ್ತಿ ಸ್ವಾಹಾಕಾರಂ ಚ ವಷ ಟ್ಕಾರಂ ಚ ಹನ್ತಕಾರಂ ಮನುಷ್ಯಾಃ ಸ್ವಧಾಕಾರಂ ಪಿತರ ಸ್ತಸ್ಯಾಃ ಪ್ರಾಣ ಋಷಭೋ ಮನೋ ವತ್ಸಃ ॥ ೧ ॥**

೧. ವಾಕ್ಕೆಂಬ ಧೇನು ಎಂದು ಉಪಾಸನೆಮಾಡಬೇಕು. ಅದಕ್ಕೆ ನಾಲ್ಕು ಸ್ತನಗಳು: ಸ್ವಾಹಾಕಾರ, ವಷಟ್ಕಾರ, ಹನ್ತಕಾರ, ಸ್ವಧಾಕಾರ. ಅದರ ಸ್ವಾಹಾಕಾರ, ವಷಟ್ಕಾರ- (ಈ) ಎರಡು ಸ್ತನಗಳನ್ನು ದೇವತೆಗಳು ಉಪಜೀವಿಸುತ್ತಾರೆ; ಹನ್ತಕಾರವನ್ನು ಮನುಷ್ಯರು, ಸ್ವಧಾಕಾರವನ್ನು ಪಿತೃಗಳು (ಉಪಜೀವಿಸುತ್ತಾರೆ). ಅದಕ್ಕೆ ಪ್ರಾಣವೇ ಎತ್ತು; ಮನಸ್ಸೇ ಕರು.

## ಬ್ರಹ್ಮವನ್ನು ವಾಗ್ಧೇನುವೆಂದು ಉಪಾಸಿಸುವದು

(ಭಾಷ್ಯ)

೩೭೯. ಪುನರುಪಾಸನಾನ್ತರಂ ತಸ್ಯೈವ ಬ್ರಹ್ಮಣಃ ವಾಗ್ವೈ ಬ್ರಹ್ಮ ಇತಿ। ವಾಕ್ ಇತಿ ಶಬ್ದಸ್ತ್ರಯೀ। ತಾಂ ವಾಚಂ ಧೇನುಂ ಧೇನುರಿವ ಧೇನುಃ। ಯಥಾ ಧೇನುಃ ಚತುರ್ಭಿಃ ಸ್ತನೈಃ ಸ್ತನ್ಯಂ ಪಯಃ ಕ್ಷರತಿ ವತ್ಸಾಯ ಏವಂ ವಾಗ್ಧೇನುಃ ವಕ್ಷ್ಯಮಾಣೈಃ ಸ್ತನೈಃ ಪಯ ಇವ ಅನ್ನಂ ಕ್ಷರತಿ ದೇವಾದಿಭ್ಯಃ। ಕೇ ಪುನಸ್ತೇ ಸ್ತನಾಃ ಕೇ ವಾ ತೇ ಯೇಭ್ಯಃ ಕ್ಷರತಿ? ತಸ್ಯಾ ಏತಸ್ಯಾ ವಾಚೋ ಧೇನ್ವಾಃ ದ್ವೌ ಸ್ತನೌ ದೇವಾ ಉಪಜೀವನ್ತಿ ವತ್ಸಸ್ಥಾನೀಯಾಃ। ಕೌ ತೌ? ಸ್ವಾಹಾ ಕಾರಂ ಚ ವಷಟ್ಕಾರಂ ಚ। ಆಭ್ಯಾಂ ಹಿ ಹವಿಃ ದೀಯತೇ ದೇವೇಭ್ಯಃ ಹನ್ತ ಕಾರಂ ಮನುಷ್ಯಾಃ। ಹನ್ತ ಇತಿ ಹಿ[1] ಮನುಷ್ಯೇಭ್ಯಃ ಅನ್ನಂ ಪ್ರಯಚ್ಛನ್ತಿ। ಸ್ವಧಾಕಾರಂ ಪಿತರಃ। ಸ್ವಧಾಕಾರೇಣ ಹಿ ಪಿತೃಭ್ಯಃ ಸ್ವಧಾಂ ಪ್ರಯಚ್ಛನ್ತಿ।

---

1. ಹಿ ಇರುವ ಪಾಠವೇ ಮೇಲು.

ತಸ್ಯಾ ಧೇನ್ವಾ ವಾಚಃ ಪ್ರಾಣ ಋಷಭಃ। ಪ್ರಾಣೇನ ಹಿ ವಾಕ್ ಪ್ರಸೂಯತೇ। ಮನಃ ವತ್ಸಃ। ಮನಸಾ ಹಿ ಪ್ರಸ್ರಾವ್ಯತೇ। ಮನಸಾ ಹಿ ಆಲೋಚಿತೇ ವಿಷಯೇ ವಾಕ್ ಪ್ರವರ್ತತೇ। ತಸ್ಮಾತ್ ಮನೋ ವತ್ಸಸ್ಥಾನೀಯಮ್। ಏವಂ ವಾಗ್ಧೇನೂಪಾಸಕಃ ತಾದ್ಭಾವ್ಯಮೇವ ಪ್ರತಿಪದ್ಯತೇ ॥

(ಭಾಷ್ಯಾರ್ಥ)

ಮತ್ತೆ ಅದೇ ಬ್ರಹ್ಮಕ್ಕೆ ವಾಕ್ಕೇ ಬ್ರಹ್ಮವು ಎಂದು ಮತ್ತೊಂದು ಉಪಾಸನೆಯನ್ನು (ಇಲ್ಲಿ) ಹೇಳಲಾಗಿದೆ[1].

(ಇಲ್ಲಿ) ವಾಕ್ ಎಂದರೆ ತ್ರಯಿ(ವೇದರೂಪವಾದ) ಶಬ್ದವು. ಆ ವಾಕ್ಕೆಂಬ ಧೇನು[2] (ಎಂದು ಉಪಾಸನೆಮಾಡಬೇಕು) ಧೇನುವಿನಂತಿರುವದರಿಂದ ಧೇನು. ಹೇಗೆ ಧೇನುವು ನಾಲ್ಕು ಮೊಲೆಗಳಿಂದ ಸ್ತನ್ಯವಾದ ಹಾಲನ್ನು ಕರುವಿಗಾಗಿ ಸುರಿಯಿಸುತ್ತದೆಯೋ ಹಾಗೆಯೇ (ಈ) ವಾಗ್ಧೇನುವು ಮುಂದೆ ಹೇಳಲಾಗುವ ಸ್ತನಗಳಿಂದ ಹಾಲಿನಂತೆ ಅನ್ನವನ್ನು ದೇವಾದಿಗಳಿಗೆ ಸುರಿಯಿಸುತ್ತದೆ.

(ಪ್ರಶ್ನೆ) :- ಆ ಮೊಲೆಗಳು ಯಾವವು? ಯಾರಿಗಾಗಿ (ಅನ್ನವನ್ನು) ಸುರಿಯಿಸುತ್ತದೆಯೋ ಅವರಾದರೂ ಯಾರು ?

(ಉತ್ತರ) :- ಆ ಈ ವಾಗ್ಧೇನುವಿನ ಎರಡು ಮೊಲೆಗಳನ್ನು ಕರುವಿನಂತಿರುವ ದೇವತೆಗಳು ಉಪಜೀವಿಸಿಕೊಂಡಿರುತ್ತಾರೆ. ಆ (ಎರಡು) ಯಾವವು? ಸ್ವಾಹಾಕಾರ, ವಷಟ್ಕಾರ- (ಇವು). ಇವುಗಳಿಂದಲೇ ಅಲ್ಲವೆ, ದೇವತೆಗಳಿಗೆ ಹವಿಸ್ಸನ್ನು ಕೊಡುತ್ತಾರೆ? ಹಂತಕಾರವನ್ನು ಮನುಷ್ಯರು ಉಪಜೀವಿಸಿಕೊಂಡಿರುತ್ತಾರೆ. ಹನ್ತ ಎಂದಲ್ಲವೆ, ಮನುಷ್ಯರಿಗೆ ಅನ್ನವನ್ನು ಕೊಡುತ್ತಾರೆ[3] ? ಸ್ವಧಾಕಾರವನ್ನು ಪಿತೃಗಳು (ಉಪಜೀವಿಸಿಕೊಂಡಿರುತ್ತಾರೆ). ಸ್ವಧಾಕಾರದಿಂದಲ್ಲವೆ, ಸ್ವಧೆಯನ್ನು ಪಿತೃಗಳಿಗೆ ಕೊಡುತ್ತಾರೆ ?

ಆ ವಾಕ್ಕೆಂಬ ಧೇನುವಿಗೆ ಪ್ರಾಣವು ಎತ್ತು, ಪ್ರಾಣದಿಂದಲೇ ಅಲ್ಲವೆ, ವಾಕ್ಕು ಹುಟ್ಟುತ್ತದೆ[4] ? ಮನಸ್ಸು ಕರು. ಮನಸ್ಸಿನಿಂದಲಲ್ಲವೆ, (ವಾಕ್ಕನ್ನು)

---

1. ವಾಗ್ಧೇನುವೆಂಬ ಉಪಾಧಿಯಿಂದ ಕೂಡಿದ ಬ್ರಹ್ಮದ ಉಪಾಸನೆಯಿದು.
2. ಬ್ರಹ್ಮವು ಈ ಗುಣದಿಂದ ಕೂಡಿದ್ದು ಎಂದು.
3. ತೈ. ನಾ. ೬೦ ನೋಡಿ.
4. ಪ್ರಾಣವಿದ್ದರೇ ಶಬ್ದವುಂಟಾಗುವದು.

ಇಳಿಯಿಸಲಾಗುತ್ತದೆ? ಮನಸ್ಸಿನಿಂದ ವಿಷಯವನ್ನು ಆಲೋಚಿಸಿದಮೇಲೆಯೇ ವಾಕ್ಕು ಹೊರಕ್ಕೆ ಬರುತ್ತದೆ. ಆದ್ದರಿಂದ ಮನಸ್ಸು (ವಾಕ್ಕಿಗೆ) ಕರುವಿನಂತೆ ಇದೆ[1].

ಹೀಗೆಂದು ವಾಗ್ಧೇನುವನ್ನು ಉಪಾಸನೆಮಾಡಿದವನು ತದ್ಭಾವವನ್ನೇ ಹೊಂದುತ್ತಾನೆ[2].

---

1. ಕರುವನ್ನು ಕಂಡೊಡನೆ ಹಸು ಸ್ವರು ಇಳಿಸುತ್ತದೆ; ಹೀಗೆಯೇ ಮನಸ್ಸಿನ ನಿಮಿತ್ತದಿಂದ ಈ ಧೇನು ವಾಕ್ಕನ್ನು ಹೊರಗೆಡಹುತ್ತದೆ.

2. ಈ ಗುಣದಿಂದ ಕೂಡಿದ್ದೆಂದು ಬ್ರಹ್ಮವನ್ನು ಉಪಾಸನೆಮಾಡಿದವನು ಈ ಗುಣದಿಂದ ಕೂಡಿದ ಬ್ರಹ್ಮದ ಸಾಯುಜ್ಯವನ್ನೇ ಪಡೆಯುತ್ತಾನೆ– ಎಂದು ಯಥೋಪಾಸನ ನ್ಯಾಯದಿಂದ ಸಿದ್ಧವಾಗುತ್ತದೆ.

# ಐದನೆಯ ಅಧ್ಯಾಯ-ಒಂಬತ್ತನೆಯ ಬ್ರಾಹ್ಮಣ

## (ಸೋಪಾಧಿಕಬ್ರಹ್ಮದ ಉಪಾಸನಾಂತರ)

## ಅಗ್ನಿವೈಶ್ವಾನರಬ್ರಹ್ಮರ ಉಪಾಸನೆ

(ಉಪನಿಷತ್ತು)

**ಅಯಮಗ್ನಿರ್ವೈಶ್ವಾನರೋ ಯೋಽಯಮನ್ತಃ ಪುರುಷೇ ಯೇನೇದಮನ್ನಂ ಪಚ್ಯತೇ ಯದಿದಮದ್ಯತೇ ತಸ್ಯೈಷ ಘೋಷೋ ಭವತಿ ಯಮೇತತ್ ಕರ್ಣಾವಪಿಧಾಯ ಶೃಣೋತಿ ಸ ಯದೋತ್ಕ್ರಮಿಷ್ಯನ್ ಭವತಿ ನೈನಂ ಘೋಷಗ್ಂ ಶೃಣೋತಿ ॥ ೧ ॥**

೧. ಪುರುಷನ ಒಳಗಡೆ ಇದ್ದಾನಲ್ಲ, ಯಾವನಿಂದ ಈ ತಿನ್ನಲ್ಪಡುವ ಅನ್ನವು ಪಕ್ವವಾಗುವದೋ (ಅ) ಇವನು ಅಗ್ನಿವೈಶ್ವಾನರನು. ಅವನಿಗೆ ಈ ಘೋಷವಾಗುತ್ತಿರುವದು, ಕಿವಿಗಳನ್ನು ಮುಚ್ಚಿ ಹೀಗೆ ಕೇಳುತ್ತಾನಲ್ಲ, (ಅದೇ). ಅವನು ಯಾವಾಗ ಉತ್ಕ್ರಾಂತನಾಗಲಿರುವನೋ (ಆಗ) ಈ ಘೋಷವನ್ನು ಕೇಳುವದಿಲ್ಲ.

## ಅಗ್ನಿವೈಶ್ವಾನರಗುಣದಿಂದ ಕೂಡಿದ ಬ್ರಹ್ಮದ ಉಪಾಸನೆ

(ಭಾಷ್ಯ)

೩೮೦. 'ಅಯಮಗ್ನಿರ್ವೈಶ್ವಾನರಃ' । ಪೂರ್ವವತ್ ಉಪಾಸನಾನ್ತರಮ್ । ಅಯಮಗ್ನಿರ್ವೈಶ್ವಾನರಃ । ಕೋಽಯಮಗ್ನಿರಿತಿ? ಆಹ । ಯೋಽಯಮ್ ಅನ್ತಃ ಪುರುಷೇ । ಕಿಂ ಶರೀರಾರಮ್ಭಕಃ? ನೇತ್ಯುಚ್ಯತೇ । ಯೇನ ಅಗ್ನಿನಾ ವೈಶ್ವಾನರಾಖ್ಯೇನ ಇದಮನ್ನಂ ಪಚ್ಯತೇ । ಕಿಂ ತದನ್ನಮ್? ಯದಿದಮ್ ಅದ್ಯತೇ ಭುಜ್ಯತೇ ಅನ್ನಂ ಪ್ರಜಾಭಿಃ । ಜಾಠರೋಽಗ್ನಿಃ ಇತ್ಯರ್ಥಃ । ತಸ್ಯ ಸಾಕ್ಷಾತ್ ಉಪಲಕ್ಷಣಾರ್ಥಮ್ ಇದಮಾಹ । ತಸ್ಯಾಗ್ನೇಃ ಅನ್ನಂ ಪಚತಃ ಜಾಠರಸ್ಯ ಏಷ ಘೋಷೋ ಭವತಿ । ಕೋಽಸೌ? ಯಂ ಘೋಷಮ್ ಏತತ್ ಇತಿ ಕ್ರಿಯಾವಿಶೇಷಣಮ್ । ಕರ್ಣೌ ಅಪಿಧಾಯ ಅಙ್ಗುಲೀಭ್ಯಾಮ್ ಅಪಿಧಾನಂ ಕೃತ್ವಾ ಶೃಣೋತಿ । ತಂ ಪ್ರಜಾಪತಿಮ್ ಉಪಾಸೀತ ವೈಶ್ವಾನರಮ್ ಅಗ್ನಿಮ್ । ಅತ್ರಾಪಿ ತಾದ್ಭಾವ್ಯಂ ಫಲಮ್ । ತತ್ರ ಪ್ರಾಸಙ್ಗಿಕಮ್ ಇದಮ್ ಅರಿಷ್ಟಲಕ್ಷಣಮ್ ಉಚ್ಯತೇ । ಸಃ ಅತ್ರ ಶರೀರೇ ಭೋಕ್ತಾ ಯದಾ ಉತ್ಕ್ರಮಿಷ್ಯನ್ ಭವತಿ ನೈನಂ ಘೋಷಂ ಶೃಣೋತಿ ॥

(ಭಾಷ್ಯಾರ್ಥ)

"ಅಯಮಗ್ನಿರ್ವೈಶ್ವಾನರಃ" (ಎಂಬ ಕಂಡಿಕೆಯಲ್ಲಿ ಹೇಳಿರುವದು) ಹಿಂದಿನ (ಕಂಡಿಕೆಯಲ್ಲಿ ಹೇಳಿರು)ವಂತೆಯೇ ಮತ್ತೊಂದು ಉಪಾಸನೆಯು[1].

(೧) ಇವನು ಅಗ್ನಿವೈಶ್ವಾನರನು. ಈ ಅಗ್ನಿ ಎಂದರೆ ಯಾರು ? ಎಂದರೆ (ಶ್ರುತಿ) ಹೇಳುತ್ತದೆ. ಯಾವದು ಪುರುಷನ[2] ಒಳಗೆ ಇದೆಯೋ (ಅದು). ಶರೀರಕ್ಕೆ ಕಾರಣವಾದದ್ದೇ (ಅಗ್ನಿ)ಯೇನು ? ಎಂದರೆ ಇಲ್ಲ ಎಂದು ಹೇಳಿದೆ ; ಯಾವ ವೈಶ್ವಾನರನೆಂಬ ಅಗ್ನಿಯಿಂದ ಈ ಅನ್ನವು ಪಕ್ವವಾಗುತ್ತದೆಯೋ (ಅದು ಅಗ್ನಿಯು). ಆ ಅನ್ನವು ಎಂದರೆ ಯಾವದು ? ಯಾವ ಅನ್ನವು ಪ್ರಜೆಗಳಿಂದ (ಅದ್ಯತೇ= ಭುಜ್ಯತೇ) ತಿನ್ನಲ್ಪಡುತ್ತಿದೆಯೋ (ಅದು) ; ಜಾಠರಾಗ್ನಿಯು ಎಂದರ್ಥ[3].

ಅದನ್ನು ನೇರಾಗಿ ಅರಿಯುವದಕ್ಕಾಗಿ[4] ಇದನ್ನು (ಶ್ರುತಿ) ಹೇಳುತ್ತಿದೆ. ಅನ್ನವನ್ನು ಪಚನಮಾಡುವ ಆ ಜಾಠರಾಗ್ನಿಗೆ ಈ ಘೋಷವಾಗುತ್ತದೆ. ಯಾವದದು? ಯಾವ ಘೋಷವನ್ನು—ಹೀಗೆ (ಏತದ್) ಎಂದು (ಮೂಲದಲ್ಲಿರುವದು) ಕ್ರಿಯಾವಿಶೇಷಣವು— ಕಿವಿಗಳನ್ನು ಬೆರಳುಗಳಿಂದ ಮುಚ್ಚಿಕೊಂಡರೆ ಕೇಳುತ್ತಾರೋ (ಅದೇ ಆ ಘೋಷವು). ಆ ವೈಶ್ವಾನರಾಗ್ನಿಯೆಂದು ಪ್ರಜಾಪತಿಯನ್ನು[5]

---

1. ಇದೂ ಸೋಪಾಧಿಕಬ್ರಹ್ಮದ ಉಪಾಸನೆಯೇ.

2. ಶರೀರದ.

3. ಅನ್ನವನ್ನು ತಿಂದು ಪಚನಮಾಡುವ ಜಾಠರಾಗ್ನಿಯನ್ನೇ ಇಲ್ಲಿ ಅಗ್ನಿವೈಶ್ವಾನರ ಎನ್ನುವದು ; ಪುರುಷನಲ್ಲಿರುವ ಎಂದರೆ ಶರೀರದಲ್ಲಿ ಕಾರಣರೂಪದಿಂದ ಇರುವ ಅಗ್ನಿಯನ್ನಲ್ಲ ಎಂದರ್ಥ.

4. ಯಾವದು ತಿನ್ನುವದೋ ಅದು ಎಂದರೆ ಯಾವದೆಂದು ಅರಿಯಬೇಕು ? ಎಂದರೆ ಅದನ್ನು ಇನ್ನಷ್ಟು ನೇರಾಗಿ ಅನುಮಾನದಿಂದ ಅರಿಯುವದಕ್ಕೆ ಇಲ್ಲಿ ಒಂದು ಲಿಂಗವನ್ನು ಹೇಳಲಾಗುತ್ತದೆ ಎಂದರ್ಥ.

5. ಇದು ಬರಿಯ ಅಗ್ನಿಯ ಉಪಾಸನೆಯಲ್ಲ ; ವೈಶ್ವಾನರನೆಂಬ ಜಾಠರಾಗ್ನಿಯ ಉಪಾಧಿಯಮೂಲಕ ಬ್ರಹ್ಮವನ್ನು ಉಪಾಸನೆಮಾಡಬೇಕೆಂದೇ ಇಲ್ಲಿ ಹೇಳಿದೆ ಎಂದರ್ಥ. ಹಿಂದೆ ಶತ. ಬ್ರಾ. ೧೦-೬-೧೦-೧೧ರಲ್ಲಿ 'ಸ ಏಷೋಽಗ್ನಿರ್ವೈಶ್ವಾನರೋ ಯತ್ಪುರುಷಃ' ಎಂದು ಹೇಳಿರುವದೂ ಈ ವೈಶ್ವಾನರನನ್ನೇ. ಸೂ. ಭಾ. ೧-೨-೨೬ (ಭಾ. ಭಾ. ೨೧೦ನ್ನು ನೋಡಿ). ಗೀ. ಭಾ. ೧೫-೧೪ (ಭಾ. ಭಾ. ೩೭೩) ರಲ್ಲಿ ಹೇಳಿರುವಂತೆ ಪರಮಾತ್ಮನೇ ಜಾಠರಾಗ್ನಿಯ ರೂಪದಿಂದ ಅನ್ನವನ್ನು ಪಚನಮಾಡುತ್ತಾನೆ ಎಂದು ಸರ್ವವನ್ನೂ ಅಗ್ನೀಷೋಮಾತ್ಮಕವಾಗಿ ಉಪಾಸನೆಮಾಡುವ ಕ್ರಮವನ್ನು ಇಲ್ಲಿ ಹೇಳಿದೆ.

ಉಪಾಸನೆಮಾಡಬೇಕು, ಇಲ್ಲಿಯೂ ಆ ಭಾವವನ್ನು ಪಡೆಯುವದೇ (ಉಪಾಸನೆಯ) ಫಲವು[1].

ಇಲ್ಲಿ ಪ್ರಾಸಂಗಿಕವಾಗಿ ಅರಿಷ್ಟರೂಪವಾದ ಇದನ್ನು ಹೇಳಲಾಗುತ್ತದೆ.[2] ಅವನು, ಎಂದರೆ ಈ ಶರೀರದಲ್ಲಿ ಭೋಕ್ತೃವಾದವನು ಯಾವಾಗ ಉತ್ಕ್ರಾಂತನಾಗಲಿರುವನೋ (ಆಗ ಅವನಿಗೆ) ಈ ಘೋಷವು ಕೇಳಿಸುವದಿಲ್ಲ[3].

---

1. ವೈಶ್ವಾನರಾಗ್ನಿರೂಪನಾದ ಪ್ರಜಾಪತಿಯ ಸಾಯುಜ್ಯವೇ ಈ ಉಪಾಸನೆಗೆ ಫಲ.
2. ಇದನ್ನರಿತು ಉಪಾಸಕನು ಸಾಯುವಕಾಲದಲ್ಲಿಯೂ ಉಪಾಸನೆಯನ್ನು ಸಾಗಿಸುತ್ತಿರಬೇಕು ಎಂದಭಿಪ್ರಾಯ.
3. ಈ ಅರಿಷ್ಟವನ್ನು ಐ. ಆ. ೩–೨–೪ ರಲ್ಲಿಯೂ ಹೇಳಿದೆ.

# ಐದನೆಯ ಅಧ್ಯಾಯ – ಹತ್ತನೆಯ ಬ್ರಾಹ್ಮಣ

## (ಬ್ರಹ್ಮೋಪಾಸನೆಗಳ ಫಲಪ್ರಾಪ್ತಿಗೆ ಮಾರ್ಗ)

## ಬ್ರಹ್ಮೋಪಾಸಕರಿಗೆ ಗತಿ

(ಉಪನಿಷತ್ತು)

**ಯದಾ ವೈ ಪುರುಷೋಽಸ್ಮಾಲ್ಲೋಕಾತ್ ಪ್ರೈತಿ ಸ ವಾಯುಮಾ ಗಚ್ಛತಿ ತಸ್ಮೈ ಸ ತತ್ರ ವಿಜಿಹೀತೇ ಯಥಾ ರಥಚಕ್ರಸ್ಯ ಖಂ ತೇನ ಸ ಊರ್ಧ್ವ ಆಕ್ರಮತೇ ಸ ಆದಿತ್ಯಮಾಗಚ್ಛತಿ ತಸ್ಮೈ ಸ ತತ್ರ ವಿಜಿಹೀತೇ ಯಥಾ ಲಮ್ಬರಸ್ಯ ಖಂ ತೇನ ಸ ಊರ್ಧ್ವ ಆಕ್ರಮತೇ ಸ ಚನ್ದ್ರಮಸಮಾಗಚ್ಛತಿ ತಸ್ಮೈ ಸ ತತ್ರ ವಿಜಿ ಹೀತೇ ಯಥಾ ದುನ್ದುಭೇಃ ಖಂ ತೇನ ಸ ಊರ್ಧ್ವ ಆಕ್ರ ಮತೇ ಸ ಲೋಕಮಾಗಚ್ಛತ್ಯಶೋಕಮಹಿಮಂ ತಸ್ಮಿನ್ ವಸತಿ ಶಾಶ್ವತೀಃ ಸಮಾಃ ॥ ೧ ॥**

೧. ಯಾವಾಗ ಪುರುಷನು ಈ ಲೋಕದಿಂದ ಹೊರಟು ಹೋಗುತ್ತಾನೋ (ಆಗ) ಅವನು ವಾಯುವನ್ನು ಬಂದು (ತಲಪು)ತ್ತಾನೆ. ಅವನಿಗೆ ಆ (ವಾಯು) ಅಲ್ಲಿ ಬಿಟ್ಟುಕೊಳ್ಳುತ್ತಾನೆ, ರಥಚಕ್ರದ ಆಕಾಶದಷ್ಟು (ಬಿಟ್ಟುಕೊಳ್ಳುತ್ತಾನೆ). ಅದರಿಂದ ಅವನು ಮೇಲಕ್ಕೇರುತ್ತಾನೆ. ಅವನು ಆದಿತ್ಯನನ್ನು ಬಂದು (ತಲುಪು)ತ್ತಾನೆ. ಅವನಿಗೆ ಆ (ಆದಿತ್ಯನು) ಅಲ್ಲಿ ಬಿಟ್ಟುಕೊಳ್ಳುತ್ತಾನೆ, ಲಂಬರದ ಆಕಾಶದಂತೆ ಆಕಾಶದಷ್ಟು (ಬಿಟ್ಟುಕೊಳ್ಳುತ್ತಾನೆ). ಅದರಿಂದ ಅವನು ಮೇಲಕ್ಕೇರುತ್ತಾನೆ. ಅವನು ಚಂದ್ರನನ್ನು ಬಂದು (ತಲುಪು)ತ್ತಾನೆ. ಅವನಿಗೆ ಆ (ಚಂದ್ರನು) ಅಲ್ಲಿ ಬಿಟ್ಟುಕೊಳ್ಳುತ್ತಾನೆ, ದುಂದುಭಿಯ ಆಕಾಶದಷ್ಟು (ಬಿಟ್ಟುಕೊಳ್ಳುತ್ತಾನೆ). ಅದರಿಂದ ಅವನು ಮೇಲಕ್ಕೇರುತ್ತಾನೆ, ಅವನು ಅಶೋಕವಾದ ಅಹಿಮವಾದ ಲೋಕವನ್ನು ಬಂದು (ತಲುಪು)ತ್ತಾನೆ ; ಅದರಲ್ಲಿ ಶಾಶ್ವತಸಂವತ್ಸರಗಳವರೆಗೆ ವಾಸಿಸುತ್ತಾನೆ.

## ದೇವಯಾನಮಾರ್ಗವೂ ಉಪಾಸನಾಫಲವೂ

(ಭಾಷ್ಯ)

**೩೮೧. ಸರ್ವೇಷಾಮ್ ಅಸ್ಮಿನ್ ಪ್ರಕರಣೇ ಉಪಾಸನಾನಾಂ ಗತಿರಿಯಂ ಫಲಂ ಚ ಉಚ್ಯತೇ। ಯದಾ ವೈ ಪುರುಷಃ ವಿದ್ವಾನ್ ಅಸ್ಮಾತ್ ಲೋಕಾತ್**

ಪ್ರೈತಿ ಶರೀರಂ ಪರಿತ್ಯಜತಿ ಸ ತದಾ ವಾಯುಮ್ ಆಗಚ್ಛತಿ। ಅನ್ತರಿಕ್ಷೇ ತಿರ್ಯಗ್ಭೂತೋ ವಾಯುಃ ಸ್ತಿಮಿತೋ ಅಭೇದ್ಯಸ್ತಿಷ್ಠತಿ। ಸ ವಾಯುಃ ತತ್ರ ಸ್ವಾತ್ಮನಿ ತಸ್ಮೈ ಸಂಪ್ರಾಪ್ತಾಯ ವಿಜಿಹೀತೇ। ಸ್ವಾತ್ಮಾವಯವಾನ್ ವಿಗಮಯತಿ ಛಿದ್ರೀಕರೋತ್ಯಾತ್ಮಾನಮ್ ಇತ್ಯರ್ಥಃ । ಕಿಂಪರಿಮಾಣಂ ಛಿದ್ರಮಿತಿ ? ಉಚ್ಯತೇ । ಯಥಾ ರಥಚಕ್ರಸ್ಯ ಖಂ ಛಿದ್ರಂ ಪ್ರಸಿದ್ಧಪರಿಮಾಣಮ್। ತೇನ ಛಿದ್ರೇಣ ಸ ವಿದ್ವಾನ್ ಊರ್ಧ್ವ ಆಕ್ರಮತೇ ಊರ್ಧ್ವಃ ಸನ್ ಗಚ್ಛತಿ । ಸ ಆದಿತ್ಯಮ್ ಆಗಚ್ಛತಿ । ಆದಿತ್ಯೋ ಬ್ರಹ್ಮಲೋಕಂ ಜಿಗಮಿಷೋಃ ಮಾರ್ಗನಿರೋಧಂ ಕೃತ್ವಾ ಸ್ಥಿತಃ। ಸೋಽಪಿ ಏವಂವಿದೇ ಉಪಾಸಕಾಯ ದ್ವಾರಂ ಪ್ರಯಚ್ಛತಿ । ತಸ್ಮೈ ಸ ತತ್ರ ವಿಜಿಹೀತೇ ಯಥಾ ಲಮ್ಬರಸ್ಯ ಖಂ ವಾದಿತ್ರವಿಶೇಷಸ್ಯ ಛಿದ್ರಪರಿಮಾಣಮ್ । ತೇನ ಸ ಊರ್ಧ್ವ ಆಕ್ರಮತೇ ಸ ಚನ್ದ್ರಮಸಮ್ ಆಗಚ್ಛತಿ । ಸೋಽಪಿ ತಸ್ಮೈ ತತ್ರ ವಿಜಿಹೀತೇ । ಯಥಾ ದುನ್ದುಭೇಃ ಖಂ ಪ್ರಸಿದ್ಧಮ್ । ತೇನ ಸ ಊರ್ಧ್ವ ಆಕ್ರಮತೇ ಸ ಲೋಕಂ ಪ್ರಜಾಪತಿಲೋಕಮ್ ಆಗಚ್ಛತಿ । ಕಿಂವಿಶಿಷ್ಟಮ್ ? ಅಶೋಕಂ ಮಾನಸೇನ ದುಃಖೇನ ವಿವರ್ಜಿತಮ್ ಇತ್ಯೇತತ್ । ಅಹಿಮಂ ಹಿಮವರ್ಜಿತಮ್ । ಶಾರೀರದುಃಖವರ್ಜಿತಮ್ ಇತ್ಯರ್ಥಃ। ತಂ ಪ್ರಾಪ್ಯ ತಸ್ಮಿನ್ ವಸತಿ ಶಾಶ್ವತೀಃ ಸಮಾಃ ಸಂವತ್ಸರಾನ್ ಇತ್ಯರ್ಥಃ ಬ್ರಹ್ಮಣಃ। ಬಹೂನ್ ಕಲ್ಪಾನ್ ವಸತಿ ಇತ್ಯೇತತ್॥

(ಭಾಷ್ಯಾರ್ಥ)

ಈ ಪ್ರಕರಣದಲ್ಲಿ (ಹೇಳಿದ) ಉಪಾಸನೆಗಳಿಗೆಲ್ಲ ಈ ಗತಿಯನ್ನೂ ಫಲವನ್ನೂ[1] ಹೇಳಿರುತ್ತದೆ.

ಯಾವಾಗ ಪುರುಷನು, ಉಪಾಸಕನು ಈ ಲೋಕವನ್ನು (ಬಿಟ್ಟು) ಹೊರಟುಹೋಗುತ್ತಾನೋ, ಶರೀರವನ್ನು ಬಿಡುತ್ತಾನೋ ಆಗ ಅವನು ವಾಯುವನ್ನು ಬಂದು (ತಲುಪು)ತ್ತಾನೆ, ಅಂತರಿಕ್ಷದಲ್ಲಿ ಸ್ವಲ್ಪವೂ ಸಂಚರಿಸದೆ ಇರುವ ವಾಯು[2] ಅಭೇದ್ಯನಾಗಿ ಇದ್ದುಕೊಂಡಿರುತ್ತಾನೆ ; ಆಗ ವಾಯುವು ಅಲ್ಲಿ ಎಂದರೆ ತನ್ನ ಶರೀರದಲ್ಲಿ ಆ ಬಂದು(ತಲುಪಿ)ದ (ಉಪಾಸಕ)ನಿಗೆ ಬಿಟ್ಟುಕೊಳ್ಳುತ್ತಾನೆ, ತನ್ನ ಅವಯವಗಳನ್ನು ಬಿಡಿಸಿಕೊಡುತ್ತಾನೆ, ತನ್ನಲ್ಲಿ ರಂಧ್ರ(ತೂತ)ವನ್ನು ಮಾಡಿಕೊಡುತ್ತಾನೆ ಎಂದರ್ಥ. ಎಷ್ಟು ಪರಿಮಾಣದ ಛಿದ್ರವನ್ನು ?

1. ಬ್ರಹ್ಮಲೋಕಪ್ರಾಪ್ತಿಯೇ ಫಲ.

2. ಇಲ್ಲಿ ಹೇಳಿರುವ ಮಾರ್ಗವು ಅರ್ಚಿರಾದಿಪರ್ವಗಳುಳ್ಳ ದೇವಯಾನ ಮಾರ್ಗವೇ ಎಂದು ಸೂ. ಭಾ. ೪-೩-೧ (ಭಾ. ಭಾ. ೫೬೫)ರಲ್ಲಿ ನಿರ್ಣಯಿಸಿದೆ. ಅರ್ಚಿರಾದಿ ಮಾರ್ಗದಲ್ಲಿ ವಾಯುವನ್ನು ಸಂವತ್ಸರಾದಿತ್ಯರ ನಡುವೆ ಸೇರಿಸಿಕೊಳ್ಳಬೇಕೆಂದು ಅಲ್ಲಿಯೇ (ಭಾ. ಭಾ. ೫೬೭)ರಲ್ಲಿ ನಿರ್ಣಯಿಸಿದೆ. ಇಲ್ಲಿ ಹೇಳಿರುವ ವಾಯ್ವಾದಿಗಳು ಅತಿವಾಹಿಕರೇ ಎಂದು ಸೂ.ಭಾ. ೪-೩-೪ (ಭಾ ಭಾ. ೫೭೦)ರಲ್ಲಿ ನಿರ್ಣಯಿಸಿದೆ. ಮುಂದೆ (೬-೨-೧೫) ರಲ್ಲಿ ಹೇಳಿರುವದೂ ಇದೇ ಮಾರ್ಗ.

ಎಂದರೆ (ಶ್ರುತಿ) ಹೇಳುತ್ತದೆ. ರಥಚಕ್ರದ ಆಕಾಶವು, ರಂಧ್ರವು (ಇಂತಿಷ್ಟು) ಪರಿಮಾಣವೆಂದು ಪ್ರಸಿದ್ಧವಷ್ಟೆ ; ಅಷ್ಟು (ರಂಧ್ರವನ್ನು ಮಾಡಿಕೊಡುತ್ತಾನೆ).

ಆ ರಂಧ್ರದಿಂದ ಆ ಉಪಾಸಕನು ಮೇಲಕ್ಕೇರುತ್ತಾನೆ, ಮೇಲುಗಡೆಗೆ (ಏರಿ)ದವನಾಗಿ ಹೋಗುತ್ತಾನೆ. ಅವನು ಆದಿತ್ಯನನ್ನು ಬಂದು (ತಲುಪು)ತ್ತಾನೆ. ಆದಿತ್ಯನು ಬ್ರಹ್ಮಲೋಕಕ್ಕೆ ಹೋಗಲಿರುವವನ ದಾರಿಗೆ ಅಡ್ಡಲಾಗಿ ಇರುತ್ತಾನೆ ಅವನೂ ಹೀಗೆಂದು ಅರಿತ ಉಪಾಸಕನಿಗೆ ದ್ವಾರವನ್ನು ಕೊಡುತ್ತಾನೆ. ಅಲ್ಲಿ ಅವನು ಬಿಟ್ಟುಕೊಳ್ಳುತ್ತಾನೆ, ಲಂಬರವೆಂಬ ವಾದ್ಯ ವಿಶೇಷದ[1] ರಂಧ್ರದ ಪರಿಮಾಣವೆಷ್ಟೋ ಅಷ್ಟು (ಬಿಟ್ಟುಕೊಳ್ಳುತ್ತಾನೆ).

ಅದರಿಂದ ಅವನು ಮೇಲಕ್ಕೇರುತ್ತಾನೆ ಅವನು ಚಂದ್ರನನ್ನು ಬಂದು (ತಲುಪು)ತ್ತಾನೆ. ಅವನೂ ಅವನಿಗೆ ಅಲ್ಲಿ ಬಿಟ್ಟುಕೊಡುತ್ತಾನೆ, ನಗಾರಿಯ ಆಕಾಶವು (ಇಂತಿಷ್ಟೆಂದು) ಪ್ರಸಿದ್ಧವಾಗಿದೆಯಷ್ಟೆ, ಅಷ್ಟು (ಬಿಟ್ಟುಕೊಡುತ್ತಾನೆ).

ಅದರಿಂದ ಅವನು ಮೇಲಕ್ಕೇರುತ್ತಾನೆ. ಅವನು ಲೋಕವನ್ನು ಪ್ರಜಾಪತಿಲೋಕವನ್ನು[2] ಬಂದು (ತಲುಪು)ತ್ತಾನೆ. ಎಂಥ (ಪ್ರಜಾಪತಿಲೋಕವನ್ನು)? ಅಶೋಕವಾದದ್ದು, ಎಂದರೆ ಮಾನಸದುಃಖದಿಂದ ರಹಿತವಾದದ್ದು ಎಂದರ್ಥ ; ಅಹಿಮವಾದದ್ದು ಎಂದರೆ ಶಾರೀರದುಃಖದಿಂದ ವರ್ಜಿತವಾದದ್ದು ಎಂದರ್ಥ. ಆ (ಲೋಕವನ್ನು) ಸೇರಿ ಅದರಲ್ಲಿ ಅವನು ಶಾಶ್ವತವಾದ ನಿತ್ಯವಾದ (ಸಮಾಃ= ಸಂವತ್ಸರಾನ್) ಬ್ರಹ್ಮನ ಸಂವತ್ಸರಗಳವರೆಗೂ ವಾಸವಾಗಿರುತ್ತಾನೆ ಎಂದರ್ಥ. ಬಹಳ ಕಲ್ಪಗಳವರೆಗೂ[3] ವಾಸಮಾಡಿಕೊಂಡಿರುತ್ತಾನೆ ಎಂದರ್ಥ.

---

1. ತಮಟೆಯಂಥ ವಾದ್ಯದ.

2. ಉಪಾಸಕನು ಕೊನೆಗೆ ಹೋಗುವದು ಕಾರ್ಯಬ್ರಹ್ಮವೇ ಎಂಬಿದನ್ನು ೪-೩-೭ರಿಂದ ೧೧ (ಭಾ. ಭಾ. ೫೭೩ರಿಂದ ೫೭೭ರವರೆಗೂ) ಸೂ. ಭಾ. ೪-೩-೧೪ರಲ್ಲಿ (ಭಾ. ಭಾ. ೫೮೦, ೫೮೨ರಿಂದ ೫೮೬ರವರೆಗಿನ ಗ್ರಂಥದಲ್ಲಿ)ಯೂ ಚರ್ಚಿಸಿ ನಿರ್ಣಯಿಸಿದೆ. ಆದ್ದರಿಂದ ಇಲ್ಲಿ ಲೋಕವನ್ನು ಎಂದರೆ ಪ್ರಜಾಪತಿಲೋಕವನ್ನು ಎಂದೂ ಶಾಶ್ವತಸಮಗಳು ಎಂದರೆ ಅನೇಕಕಲ್ಪಗಳು ಎಂದೂ ಅರ್ಥವನ್ನು ಕಲ್ಪಿಸಿರುತ್ತದೆ. ಬ್ರಹ್ಮಲೋಕದಲ್ಲಿ ಜ್ಞಾನವುಂಟಾದವರಿಗೆ ಕ್ರಮಮುಕ್ತಿಯೂ ಆಗಬಹುದು. ಸೂ. ಭಾ. ೪-೩-೧೦ (ಭಾ. ಭಾ. ೫೭೬, ಮತ್ತು ಭಾ.ಭಾ. ೬೧೨) ಇವನ್ನು ನೋಡಿ.

3. ಬ್ರಹ್ಮನ ಸಂವತ್ಸರಗಳು, ಎಂದರೆ ಮನುಷ್ಯರ ಅನೇಕ ಕಲ್ಪಗಳು ಎಂದರ್ಥ. ಈ ಬ್ರಹ್ಮನ ಒಂದು ಕಲ್ಪದವರೆಗೇ ಇರುತ್ತಾನೆ; ಅಲ್ಲಿಂದ ಮುಂದಕ್ಕೆ ಜ್ಞಾನವಾದರೆ ಮುಕ್ತಿ, ಇಲ್ಲದಿದ್ದರೆ ಪುನರಾವೃತ್ತಿ.

# ಮೂರನೆಯ ಬ್ರಾಹ್ಮಣದಿಂದ ಹತ್ತನೆಯ ಬ್ರಾಹ್ಮಣದವರೆಗಿನ ಗ್ರಂಥದ ಸಾರ

ವಿಶೇಷ: ಇಲ್ಲಿ ಮೊದಲು ಕೊಟ್ಟಿರುವದು ಬ್ರಾಹ್ಮಣಸಂಖ್ಯೆ, ಆಮೇಲೆ ಕೊಟ್ಟಿರುವದು ಕಂಡಿಕಾಸಂಖ್ಯೆ.

೩–೧. ಹೃದಯವನ್ನು, ಎಂದರೆ ಹೃದಯದಲ್ಲಿರುವ ಬುದ್ಧಿಯನ್ನು ಪ್ರಜಾಪತಿ ಎಂದು ಉಪಾಸನೆಮಾಡಬೇಕು. ಹೃದಯಬ್ರಹ್ಮದ ನಾಮಾಕ್ಷರಗಳ ಉಪಾಸನೆಯುಕೂಡ ವಿಶಿಷ್ಟಫಲವುಳ್ಳದ್ದು. ಹೇಗೆಂದರೆ ಹೃ ಎಂಬೀ ಅಕ್ಷರದರ್ಥವನ್ನರಿತು ಉಪಾಸನೆಮಾಡಿದವನಿಗೆ –ಇಂದ್ರಿಯಗಳೂ ವಿಷಯಗಳೂ ತಮ್ಮತಮ್ಮ ಕಾರ್ಯವನ್ನು ಹೃದಯಕ್ಕೆ ತಂದೊಪ್ಪಿಸುವಂತೆಯೇ– ಅವನ ಸಂಬಂಧಿಗಳೂ ಅಸಂಬಂಧಿಗಳೂ ಕಾಣಿಕೆಯನ್ನು ತಂದೊಪ್ಪಿಸುವರು. ಇದರಂತೆ ದಕಾರಾರ್ಥವನ್ನು ಅರಿತು ಉಪಾಸನೆಮಾಡುವವನಿಗೆ ಸಂಬಂಧಿಗಳೂ ಮಿಕ್ಕವರೂ –ಕರಣವಿಷಯಗಳು ಹೃದಯಕ್ಕೆ ತಂದುಕೊಡುವಂತೆಯೇ –ತಮ್ಮ ತಮ್ಮ ವೀರ್ಯವನ್ನು ತಂದೊಪ್ಪಿಸುವರು. ಹೀಗೆಯೇ ಯ ಎಂಬೀ ಅಕ್ಷರದರ್ಥವನ್ನರಿತು ಉಪಾಸನೆಮಾಡುವವನಿಗೆ ಸ್ವರ್ಗಕ್ಕೆ ಪ್ರಯಾಣವು ಲಭಿಸುವದು.

೪–೧. ಈ ಹೃದಯಬ್ರಹ್ಮವೇ ಸತ್ಯವು, ಎಂದರೆ ಮೂರ್ತಾಮೂರ್ತರೂಪವಾದ ಪಂಚಭೂತಾತ್ಮಕವು ಎಂದು ಉಪಾಸನೆಮಾಡಬೇಕು. ಮಹತ್ತೂ, ಯಕ್ಷವೂ, ಪ್ರಥಮಜವೂ ಆದ ಇದನ್ನು ಸತ್ಯಬ್ರಹ್ಮವೆಂದು ಯಾವನು ಉಪಾಸನೆಮಾಡುವನೋ ಅವನು ಈ ಲೋಕಗಳೆಲ್ಲವನ್ನೂ ಸತ್ಯಬ್ರಹ್ಮದಂತೆ ಗೆದ್ದುಕೊಳ್ಳುತ್ತಾನೆ; ಅವನ ಶತ್ರುವೂ ಜಿತವಾಗಿ ಅಸತ್ಸಮನಾಗುತ್ತಾನೆ.

೫–೧. ಅವ್ಯಾಕೃತವಾಗಿರುವ ಪಂಚಭೂತಗಳಿಂದ ಮೊದಲು ಸತ್ಯಬ್ರಹ್ಮವೆಂಬ ವ್ಯಾಕೃತಜಗತ್ತು ಉತ್ಪನ್ನವಾಯಿತು. ಇದು ಮಿಕ್ಕದ್ದೆಲ್ಲವನ್ನೂ ಸೃಷ್ಟಿಸಿದ್ದರಿಂದ ಮಹತ್ತೆನಿಸಿರುವದು ; ಏಕೆಂದರೆ ಅದು ಪ್ರಜಾಪತಿಯನ್ನು ಸೃಷ್ಟಿಸಿರುತ್ತದೆ, ಆ ಪ್ರಜಾಪತಿಯು ದೇವತೆಗಳನ್ನು ಸೃಷ್ಟಿಸಿರುತ್ತಾನೆ. ಆದ್ದರಿಂದ ಸತ್ಯಬ್ರಹ್ಮವು ಸತ್ಯವೂ ಮಹತ್ತೂ ಆಗಿರುತ್ತದೆ. ದೇವತೆಗಳು ತಮ್ಮ ಸ್ರಷ್ಟೃವಾದ ಪ್ರಜಾಪತಿಯನ್ನುಕೂಡ ಬಿಟ್ಟು ಈ ಸತ್ಯಬ್ರಹ್ಮವನ್ನೇ ಉಪಾಸಿಸುತ್ತಾರಾದ್ದರಿಂದ ಇದು ಯಕ್ಷವು, ಪೂಜ್ಯವು.

ಈ ಸತ್ಯಬ್ರಹ್ಮದ ನಾಮದಲ್ಲಿರುವ ಮೂರು ಅಕ್ಷರಗಳೊಳಗೆ ಮೊದಲನೆಯ ಕೊನೆಯ ಸಕಾರಯಕಾರಗಳು ಸತ್ಯವು, ನಡುವಿನ ತಕಾರವು ಅನೃತರೂಪವಾದ ಮೃತ್ಯುವು. ಆದರೆ ಈ ಅನೃತವು ತನ್ನ ಎರಡೂ ಪಾರ್ಶ್ವಗಳಲ್ಲಿರುವ ಸತ್ಯಾಕ್ಷರಗಳೊಳಗೆ ಅಡಕವಾಗಿರುವದರಿಂದ ಅದರಿಂದ ಯಾವ ಬಾಧಕವೂ ಇಲ್ಲ. ಹೀಗೆ ಎಲ್ಲವೂ

ಸತ್ಯಪ್ರಚುರವಾಗಿಯೇ ಇದೆ, ಅನೃತವೆಂಬ ಮೃತ್ಯುವು ಏನೂ ಮಾಡಲಾರದು–ಎಂಬಿದನ್ನು ಉಪಾಸನೆಮಾಡಿದವನಿಗೆ ಪ್ರಮಾದದಿಂದ ನುಡಿದ ಅನೃತವು ಯಾವ ತೊಂದರೆಯನ್ನೂ ಉಂಟುಮಾಡುವದಿಲ್ಲ.

೫–೨ರಿಂದ ೪. ಈ ಸತ್ಯಬ್ರಹ್ಮವು ಆದಿತ್ಯಮಂಡಲಾಭಿಮಾನಿಯಾದ ಪುರುಷನು, ಮತ್ತು ಬಲಗಣ್ಣಿನಲ್ಲಿರುವ ಪುರುಷನು – ಎಂದು ಉಪಾಸನೆಮಾಡಬೇಕು. ಇವರಿಬ್ಬರೂ ಈ ಸತ್ಯಬ್ರಹ್ಮದ ಆಕಾರವಿಶೇಷಗಳೇ; ಆದ್ದರಿಂದ ಇವರಿಗೆ ಪರಸ್ಪರವಾಗಿ ಉಪಕಾರ್ಯೋಪಕಾರಕಭಾವವಿರುತ್ತದೆ ; ಆದಿತ್ಯನು ಚಾಕ್ಷುಷನಿಗೆ ರಶ್ಮಿಗಳಿಂದಲೂ ಚಾಕ್ಷುಷನು ಆದಿತ್ಯಪುರುಷನಿಗೆ ಪ್ರಾಣಗಳಿಂದಲೂ ಅನುಗ್ರಹಮಾಡುತ್ತಿರುತ್ತಾರೆ. ಆದ್ದರಿಂದಲೇ ಉತ್ಕ್ರಾಂತಿಕಾಲದಲ್ಲಿ ಆದಿತ್ಯನ ಅನುಗ್ರಹವು ನಿಂತಾಗ ಆ ಮಂಡಲವು ಚಂದ್ರನಂತೆ ಕಾಣಿಸುತ್ತದೆ.

ಮಂಡಲಪುರುಷನಿಗೆ ಭೂಃ ಎಂಬ ವ್ಯಾಹೃತಿಯು ತಲೆ, ಭುವಃ ಎಂಬುದು ತೋಳುಗಳು, ಸ್ವಃ ಎಂಬುದು ಪಾದಗಳು ; ಈ ಉಪಾಸನೆಗೆ ಹೋಲಿಕೆಯೇನೆಂದರೆ ಅಕ್ಷರಸಂಖ್ಯೆಯೂ ಆಯಾ ಅವಯವದ ಸಂಖ್ಯೆಯೂ ಸಮಾನವಾಗಿರುತ್ತದೆ. ಈ ಪುರುಷನಿಗೆ 'ಅಹಃ' ಎಂದು ರಹಸ್ಯನಾಮವು. ಇದರಂತೆ ಅಕ್ಷಿಪುರುಷನಿಗೂ ಭೂಃ, ಭುವಃ, ಸ್ವಃ–ಎಂಬಿವೇ ಅವಯವಗಳು. ಅವನಿಗೆ ಅಹಮ್ ಎಂಬ ಪ್ರತ್ಯಗಾತ್ಮವಾಚಕವೇ ರಹಸ್ಯನಾಮ. ಈ ರಹಸ್ಯನಾಮಗಳನ್ನು ಅರಿತು ಉಪಾಸನೆಮಾಡಿದವನಿಗೆ ಪಾಪನಾಶವೂ ಪಾಪತ್ಯಾಗವೂ ಫಲವು.

೬–೧. ಇದೇ ಸೋಪಾಧಿಕಬ್ರಹ್ಮವನ್ನು ಮನೋಮಯನು, ಭಾಸ್ವರರೂಪನು, ಹೃದಯದಲ್ಲಿ ಬಹುಸೂಕ್ಷ್ಮರೂಪದಿಂದ ಯೋಗಿಗಳಿಗೆ ಕಾಣುವವನು, ಎಲ್ಲವನ್ನೂ ಆಳುವ, ಎಲ್ಲಕ್ಕೂ ಅಧಿಪತಿಯಾದ, ಎಲ್ಲವನ್ನೂ ಕಟ್ಟಿನಲ್ಲಿಟ್ಟಿರುವ ಪುರುಷನು– ಎಂದು ಉಪಾಸನೆಮಾಡಬೇಕು.

೭–೧. ಇದೇ ಸತ್ಯಬ್ರಹ್ಮವನ್ನು ವಿದ್ಯುದ್‌ಬ್ರಹ್ಮ ಎಂದು ಉಪಾಸನೆಮಾಡಬೇಕು. ಉಪಾಸಕನು ಪಾಪಗಳನ್ನು ಖಂಡಿಸುತ್ತಾನೆ, ಏಕೆಂದರೆ ಉಪಾಸ್ಯವಾದ ಬ್ರಹ್ಮವೂ ವಿದ್ಯುದ್ (ಎಂದರೆ ಮೋಡದ ಅಂಧಕಾರವನ್ನು ಸೀಳಿಕೊಂಡು ತೋರುವ ಮಿಂಚಿನ ಉಪಾಧಿಯ) ಗುಣವುಳ್ಳದ್ದಾಗಿರುತ್ತದೆ.

೮–೧. ಇದೇ ಬ್ರಹ್ಮವನ್ನು ವಾಗ್ಧೇನುವೆಂದು ಉಪಾಸನೆಮಾಡಬೇಕು. ಈ ವೇದರೂಪವಾದ ಧೇನುವಿಗೆ ಸ್ವಾಹಾ, ವಷಟ್, ಹನ್ತ, ಸ್ವಧಾ –ಎಂಬಿವು ನಾಲ್ಕು ಸ್ತನಗಳು. ಇವುಗಳೊಳಗೆ ಸ್ವಾಹಾಕಾರ, ವಷಟ್ಕಾರ –ಇವೆರಡನ್ನು ದೇವತೆಗಳೂ ಹಂತಕಾರವನ್ನು ಮನುಷ್ಯರೂ ಸ್ವಧಾಕಾರವನ್ನು ಪಿತೃಗಳೂ ಉಪಜೀವಿಸಿಕೊಂಡಿರುತ್ತಾರೆ. ಈ ಧೇನುವಿಗೆ ಪ್ರಾಣವೇ ಎತ್ತು, ಮನಸ್ಸೇ ಕರು –ಎಂದು ಉಪಾಸನೆಮಾಡಬೇಕು.

೯–೧. ಇದೇ ಬ್ರಹ್ಮವನ್ನು ಶರೀರದೊಳಗೆ ಅನ್ನವನ್ನು ಪಚನಮಾಡುವ ಅಗ್ನಿ ಎಂಬ ಉಪಾಧಿಯುಳ್ಳದ್ದೆಂದು ಉಪಾಸನೆಮಾಡಬೇಕು. ಇದೇ ಅಗ್ನಿವೈಶ್ವಾನರನು. ಕಿವಿಯನ್ನು

ಮುಚ್ಚಿಕೊಂಡಾಗ ಇದರ ಸದ್ದು ಕೇಳಬರುತ್ತದೆ. ಆದ್ದರಿಂದಲೇ ಸಾಯುವಾಗ ಈ ಸದ್ದು ಕೇಳಿಸುವದಿಲ್ಲ -ಎಂದು ವೈಶ್ವಾನರಾಗ್ನಿಯು ಉಪಾಧಿಯುಳ್ಳದ್ದಾಗಿ ಉಪಾಸನೆಮಾಡಬೇಕು.

೧೦-೧. ಇಲ್ಲಿಯವರೆಗೆ ಬೇರೆಬೇರೆಯ ಉಪಾಸನೆಗಳನ್ನು ಹೇಳಿದೆಯಷ್ಟೆ. ಅವಿಯಾವ ಉಪಾಸನೆಗೆ ವಿಶೇಷಫಲವನ್ನು ಹೇಳಿಲ್ಲವೋ ಅದಕ್ಕೆಲ್ಲ ಆಯಾ ರೂಪದ ಬ್ರಹ್ಮದ ಪ್ರಾಪ್ತಿಯೇ ಫಲವು. ಆ ಫಲವನ್ನು ಪಡೆಯುವದಕ್ಕೆ ಉಪಾಸಕನು ಉತ್ಕ್ರಾಂತನಾದ ಮೇಲೆ ವಾಯುವನ್ನು ಪಡೆಯುವನು, ಆ ವಾಯುವು ತನ್ನೊಳಗೆ ಗಾಡಿಯ ಚಕ್ರದ ಛಿದ್ರದಷ್ಟು ಸ್ಥಲವನ್ನು ಮಾಡಿಕೊಡುವನು. ಅದರಿಂದ ಮೇಲಕ್ಕೇರಿ ಉಪಾಸಕನು ಆದಿತ್ಯನನ್ನು ಪಡೆಯುತ್ತಾನೆ. ಆ ಆದಿತ್ಯನು ತನ್ನೊಳಗೆ ತಮಟೆಯ ಪೊಳ್ಳಿನಷ್ಟು ಸ್ಥಲವನ್ನು ಮಾಡಿಕೊಡುವನು ; ಉಪಾಸಕನು ಅದರ ಮೂಲಕವಾಗಿ ಮೇಲಕ್ಕೇರಿ ಚಂದ್ರನನ್ನು ಸೇರುತ್ತಾನೆ. ಆ ಚಂದ್ರನು ಅವನಿಗೆ ತನ್ನೊಳಗೆ ಭೇರಿಯ ಪೊಳ್ಳಿನಷ್ಟು ಸ್ಥಲವನ್ನು ಮಾಡಿಕೊಡುವನು , ಅದರ ಮೂಲಕ ಉಪಾಸಕನು ಬ್ರಹ್ಮಲೋಕವನ್ನು ಸೇರಿ ಅನೇಕ ಕಲ್ಪಗಳವರೆಗೂ ಆಧಿವ್ಯಾಧಿಗಳಿಲ್ಲದೆ ಸುಖವಾಗಿ ವಾಸಮಾಡಿಕೊಂಡಿರುವನು.

---

# ಐದನೆಯ ಅಧ್ಯಾಯ- ಹನ್ನೊಂದನೆಯ ಬ್ರಾಹ್ಮಣ

(ವ್ಯಾಧಿಗ್ರಸ್ತನಾದವನಿಗೆ ಉಪಾಸನೆ)

## ವ್ಯಾಧಿಗಳು ತಪಸ್ಸೆಂದು ಉಪಾಸನೆ

(ಉಪನಿಷತ್ತು)

**ಏತದ್ವೈ ಪರಮಂ ತಪೋ ಯದ್ವ್ಯಾಹಿತಸ್ತಪ್ಯತೇ ಪರಮಗ್ಂ ಹೈವ ಲೋಕಂ ಜಯತಿ ಯ ಏವಂ ವೇದೈತದ್ವೈ ಪರಮಂ ತಪೋ ಯಂ ಪ್ರೇತಮರಣ್ಯಗ್ಂ ಹರನ್ತಿ ಪರಮಗ್ಂ ಹೈವ ಲೋಕಂ ಜಯತಿ ಯ ಏವಂ ವೇದೈತದ್ವೈ ಪರಮಂ ತಪೋ ಯಂ ಪ್ರೇತಮಗ್ನಾವಭ್ಯಾದಧತಿ ಪರಮಗ್ಂ ಹೈವ ಲೋಕಂ ಜಯತಿ ಯ ಏವಂ ವೇದ ॥ ೧ ॥**

೧. ವ್ಯಾಧಿ(ಗ್ರಸ್ತ)ನಾದವನು ತಪಿಸುತ್ತಾನಲ್ಲ, ಇದೇ ಪರಮ ತಪಸ್ಸು. ಯಾವನು ಹೀಗೆಂದು ಅರಿಯುವನೋ (ಅವನು) ಪರಮ ಲೋಕವನ್ನೇ ಗೆದ್ದುಕೊಳ್ಳುತ್ತಾನೆ. ಪ್ರೇತನಾದವನನ್ನು ಅರಣ್ಯಕ್ಕೆ ಒಯ್ಯುವರಲ್ಲ, ಇದೇ ಪರಮತಪಸ್ಸು. ಯಾವನು ಹೀಗೆಂದು ಅರಿಯುವನೋ ಅವನು ಪರಮಲೋಕವನ್ನೇ ಗೆದ್ದುಕೊಳ್ಳುವನು. ಪ್ರೇತನಾದವನನ್ನು ಅಗ್ನಿಯಲ್ಲಿ ಹಾಕುವರಲ್ಲ, ಇದೇ ಪರಮತಪಸ್ಸು. ಯಾವನು ಹೀಗೆಂದು ಅರಿಯುವನೋ ಅವನು ಪರಮಲೋಕವನ್ನೇ ಗೆದ್ದುಕೊಳ್ಳುತ್ತಾನೆ.

## ರೋಗ, ಅರಣ್ಯನಯನ, ಅಗ್ನಿಯಲ್ಲಿ ಬೀಳುವದು– ಇವುಗಳೂ ಪರಮತಪಸ್ಸು

(ಭಾಷ್ಯ)

**೩೮೨. ಏತದ್ ವೈ ಪರಮಂ ತಪಃ । ಕಿಂ ತತ್ ? ಯದ್ ವ್ಯಾಹಿತಃ ವ್ಯಾಧಿತಃ ಜ್ವರಾದಿಪರಿಗೃಹೀತಃ ಸನ್ ಯತ್ ತಪ್ಯತೇ ತದೇತತ್ ಪರಮಂ ತಪಃ ಇತ್ಯೇವಂ ಚಿನ್ತಯೇತ್ । ದುಃಖಸಾಮಾನ್ಯಾತ್ । ತಸ್ಯ ಏವಂ ಚಿನ್ತಯತೋ ವಿದುಷಃ ಕರ್ಮಕ್ಷಯಹೇತುಃ ತದೇವ ತಪೋ ಭವತಿ ಅನಿನ್ದತೋಽ ವಿಷೀದತಃ । ಸ ಏವ ಚ ತೇನ ವಿಜ್ಞಾನತಪಸಾ ದಗ್ಧಕಿಲ್ಬಿಷಃ ಪರಮಂ ಹೈವ**

ಲೋಕಂ ಜಯತಿ ಯ ಏವಂ ವೇದ। ತಥಾ ಮುಮೂರ್ಷುಃ ಆದಾವೇವ ಕಲ್ಪಯತಿ ಕಿಮ್ ? ಏತದ್ ವೈ ಪರಮಂ ತಪಃ (ಯಂ)[1] ಪ್ರೇತಂ ಮಾಂ ಗ್ರಾಮಾತ್ ಅರಣ್ಯಂ ಹರನ್ತಿ । ಋತ್ವಿಜಃ ಅನ್ತ್ಯಕರ್ಮಣೇ ತದ್ ಗ್ರಾಮಾತ್ ಅರಣ್ಯಗಮನಸಾಮಾನ್ಯಾತ್ ಪರಮಂ ಮಮ ತತ್ ತಪೋ ಭವಿಷ್ಯತಿ। ಗ್ರಾಮಾತ್ ಅರಣ್ಯಗಮನಂ ಪರಮಂ ತಪಃ ಇತಿ ಹಿ ಪ್ರಸಿದ್ಧಮ್। ಪರಮಂ ಹ್ಯೇವ ಲೋಕಂ ಜಯತಿ ಯ ಏವಂ ವೇದ। ತಥಾ ಏತದ್ ವೈ ಪರಮಂ ತಪೋ ಯಂ ಪ್ರೇತಮ್ ಅಗ್ನೌ ಅಭ್ಯಾದಧತಿ । ಅಗ್ನಿಪ್ರವೇಶ ಸಾಮಾನ್ಯಾತ್ । ಪರಮಂ ಹ್ಯೇವ ಲೋಕಂ ಜಯತಿ ಯ ಏವಂ ವೇದ ॥

(ಭಾಷ್ಯಾರ್ಥ)

ಇದೇ ಪರಮತಪಸ್ಸು, ಅದು ಯಾವದು ? (ವ್ಯಾಹಿತಃ= ವ್ಯಾಧಿತಃ) ವ್ಯಾಧಿಯುಳ್ಳವನಾಗಿ, ಜ್ವರಾದಿಗಳಿಂದ ಪೀಡಿತನಾಗಿ, ತಪಿಸುವನಲ್ಲ, ಆ ಇದು ಪರಮತಪಸ್ಸು ಎಂದು ಚಿಂತಿಸಬೇಕು. ಏಕೆಂದರೆ ದುಃಖವಾಗುವದು (ತಪ್ಪಸಿಗೂ ಇದಕ್ಕೂ) ಸಮಾನವಾಗಿರುತ್ತದೆ. (ಅದನ್ನು) ನಿಂದಿಸದೆ, ವಿಷಾದ ಪಡದೆ, ಹೀಗೆಂದು ಚಿಂತಿಸುವ ಆ ಉಪಾಸಕನಿಗೆ ಅದೇ ಕರ್ಮಕ್ಷಯಕ್ಕೆ ಕಾರಣವಾದ ತಪಸ್ಸಾಗುತ್ತದೆ. ಯಾವನು ಹೀಗೆಂದು ಅರಿತು (ಉಪಾಸನೆ ಮಾಡು)ವನೋ ಅವನೇ ಆ ಉಪಾಸನಾತಪಸ್ಸಿನಿಂದ ಪಾಪವನ್ನು ಸುಟ್ಟು ಕೊಂಡು ಪರಮಲೋಕವನ್ನೇ ಗೆದ್ದುಕೊಳ್ಳುತ್ತಾನೆ.

ಹೀಗೆಯೇ ಸಾಯುತ್ತಿರುವವನು ಮೊದಲೇ (ಹೀಗೆಂದು) ಕಲ್ಪಿಸಿಕೊಳ್ಳ ಬೇಕು. ಏನೆಂದು ? ಇದೇ ಪರಮತಪಸ್ಸು, ಸತ್ತ ನನ್ನನ್ನು ಋತ್ವಿಜರು ಅಂತ್ಯಕರ್ಮಕ್ಕಾಗಿ ಊರಿನಿಂದ ಕಾಡಿಗೆ ಒಯ್ಯುವರಲ್ಲ ಅದು ಗ್ರಾಮದಿಂದ ಅರಣ್ಯಕ್ಕೆ ಹೋಗುವದೆಂಬ ಸಮಾನಧರ್ಮವಿರುವದರಿಂದ ಪರಮತಪಸ್ಸಾಗಿರು ವದು. ಊರಿನಿಂದ ಅರಣ್ಯಕ್ಕೆ ಹೋಗುವದು ಪರಮತಪಸ್ಸೆಂಬುದು ಪ್ರಸಿದ್ಧ ವಷ್ಟೆ[2] ? ಯಾವನು ಹೀಗೆಂದು ಉಪಾಸನೆಮಾಡುವನೋ ಅವನು ಪರಮ ಲೋಕವನ್ನೇ (ಅದರಿಂದ) ಗೆದ್ದುಕೊಳ್ಳುತ್ತಾನೆ.

ಇದರಂತೆ ಸತ್ತ ನನ್ನನ್ನು ಬೆಂಕಿಯಲ್ಲಿ ಹಾಕುವರಲ್ಲ, ಅದೇ ಅಗ್ನಿಪ್ರವೇಶ ವೆಂಬ ಹೋಲಿಕೆಯಿರುವದರಿಂದ[3], ಪರಮತಪಸ್ಸು. ಯಾವನು ಹೀಗೆಂದು ಉಪಾಸನೆಮಾಡುವನೋ ಅವನು ಅದರಿಂದ ಪರಮಲೋಕವನ್ನೇ ಗೆದ್ದುಕೊಳ್ಳುತ್ತಾನೆ.

---

1. ಈ ಮಾತು ಇಲ್ಲಿ ಬಿಟ್ಟುಹೋಗಿದೆ.
2. ವಾನಪ್ರಸ್ಥನಾಗುವದು ತಪಸ್ಸಿಗಾಗಿ ಎಂಬುದು ಪ್ರಸಿದ್ಧ.
3. ವಾನಪ್ರಸ್ಥರು ಅಗ್ನಿಪ್ರವೇಶವೆಂಬ ತಪಸ್ಸನ್ನು ಮಾಡುವರು.

# ಹನ್ನೊಂದನೆಯ ಬ್ರಾಹ್ಮಣದ ಸಾರ

ಈ ಬ್ರಾಹ್ಮಣದಲ್ಲಿ ರೋಗಿಯಾದವನೂ ಮುಮೂರ್ಷುವಾಗಿರುವವನೂ ಮಾಡಬಹುದಾದ ಉಪಾಸನೆಗಳನ್ನು ಹೇಳಿದೆ.

೧. ರೋಗಿಯಾದವನು ತನಗೆ ಜ್ವರಾದಿತಾಪವುಂಟಾಗಿರುವಾಗ, ಇದೊಂದು ಪರಮತಪಸ್ಸು ಎಂದು ಉಪಾಸನೆಮಾಡಬೇಕು. ತಪಸ್ಸಿನಲ್ಲಾಗುವಂತೆ ಅದರಲ್ಲಿಯೂ ಶರೀರಕ್ಕೆ ತಾಪವುಂಟಾಗುವದೆಂಬುದನ್ನು ಮನದಂದು ಈ ಉಪಾಸನೆಯನ್ನು ಮಾಡಿದರೆ ಅದೇ ಕರ್ಮಕ್ಷಯಹೇತುವಾದ ತಪಸ್ಸಾಗುವದು ; ಆದರಿಂದ ಪಾಪವನ್ನು ಕಳೆದುಕೊಂಡು ಪರಮಲೋಕವನ್ನೇ ಪಡೆಯುತ್ತಾನೆ.

ಮುಮೂರ್ಷುವಾದವನು "ಇನ್ನು ನಾನು ಸತ್ತ ಬಳಿಕ ಅಂತ್ಯಕರ್ಮಕ್ಕಾಗಿ ಋತ್ವಿಜರು ನನ್ನ ಶರೀರವನ್ನು ಅರಣ್ಯಕ್ಕೊಯ್ಯುವರಷ್ಟೆ, ಇದು ವಾನಪ್ರಸ್ಥಕ್ಕೆ ಸಮಾನವಾದ ತಪಸ್ಸು" ಎಂದೂ "ನನ್ನನ್ನು ಅಗ್ನಿಯಲ್ಲಿ ಹಾಕುವರಲ್ಲ, ಇದೂ ವಾನಪ್ರಸ್ಥನು ಕೊನೆಯಲ್ಲಿ ಮಾಡುವ ಅಗ್ನಿಪ್ರವೇಶದಂತೆ ಒಂದು ತಪಸ್ಸೇ" ಎಂದೂ ಉಪಾಸನೆ ಮಾಡಬೇಕು. ಇವುಗಳಿಂದ ಪರಮಲೋಕಪ್ರಾಪ್ತಿಯೇ ಫಲವಾಗುವದು.



# ಐದನೆಯ ಅಧ್ಯಾಯ- ಹನ್ನೆರಡನೆಯ ಬ್ರಾಹ್ಮಣ

(ಅನ್ನಪ್ರಾಣಗಳ ಉಪಾಸನೆ)

## ಸಗುಣಾನ್ನಪ್ರಾಣಗಳ ಉಪಾಸನೆ

(ಉಪನಿಷತ್ತು)

**ಅನ್ನಂ ಬ್ರಹ್ಮೇತ್ಯೇಕ ಆಹುಸ್ತನ್ನ ತಥಾ ಪೂಯತಿ ವಾ ಅನ್ನ ಮೃತೇ ಪ್ರಾಣಾತ್ ಪ್ರಾಣೋ ಬ್ರಹ್ಮೇತ್ಯೇಕ ಆಹುಸ್ತನ್ನ ತಥಾ ಶುಷ್ಯತಿ ವೈ ಪ್ರಾಣ ಋತೇಽನ್ನಾದೇತೇ ಹ ತ್ವೇವ ದೇವತೇ ಏಕಧಾಭೂಯಂ ಭೂತ್ವಾ ಪರಮತಾಂ ಗಚ್ಛತಸ್ತದ್ಧ ಸ್ಮಾಹ ಪ್ರಾತೃದಃ ಪಿತರಂ ಕಿಗ್ಂಸ್ವಿದೇವೈವಂ ವಿದುಷೇ ಸಾಧು ಕುರ್ಯಾಂ ಕಿಮೇವಾಸ್ಮಾ ಅಸಾಧು ಕುರ್ಯಾಮಿತಿ ಸ ಹ ಸ್ಮಾಹ ಪಾಣಿನಾ ಮಾ ಪ್ರಾತೃದ ಕಸ್ತ್ವೇನಯೋರೇಕಧಾ ಭೂಯಂ ಭೂತ್ವಾ ಪರಮತಾಂ ಗಚ್ಛತೀತಿ ತಸ್ಮಾ ಉ ಹೈತದುವಾಚ ವೀತ್ಯನ್ನಂ ವೈ ವ್ಯನ್ನೇ ಹೀಮಾನಿ ಸರ್ವಾಣಿ ಭೂತಾನಿ ವಿಷ್ಟಾನಿ ರಮಿತಿ ಪ್ರಾಣೋ ವೈ ರಂ ಪ್ರಾಣೇ ಹೀಮಾನಿ ಸರ್ವಾಣಿ ಭೂತಾನಿ ರಮನ್ತೇ ಸರ್ವಾಣಿ ಹ ವಾ ಅಸ್ಮಿನ್ ಭೂತಾನಿ ವಿಶನ್ತಿ ಸರ್ವಾಣಿ ಭೂತಾನಿ ರಮನ್ತೇ ಯ ಏವಂ ವೇದ ॥ ೧ ॥**

೧. ಅನ್ನವು ಬ್ರಹ್ಮ ಎಂದು ಕೆಲವರೆನ್ನುತ್ತಾರೆ; ಅದು ಹಾಗಲ್ಲ, ಏಕೆಂದರೆ ಪ್ರಾಣವಿಲ್ಲದಿದ್ದರೆ ಅನ್ನವು ಕೊಳೆಯುವದು. ಪ್ರಾಣವು ಬ್ರಹ್ಮ ಎಂದು ಕೆಲವರೆನ್ನುತ್ತಾರೆ; ಅದು ಹಾಗಲ್ಲ, ಏಕೆಂದರೆ ಅನ್ನ ವಿಲ್ಲದಿದ್ದರೆ ಪ್ರಾಣವು ಒಣಗುವದು. ಆದರೆ ಇವೇ ಎರಡು ದೇವತೆ ಗಳು ಏಕಭಾವವನ್ನು ಪಡೆದರೆ ಪರಮತ್ವವನ್ನು ಹೊಂದುತ್ತವೆ. ಆದ್ದರಿಂದ ಪ್ರಾತೃದನು ತಂದೆಯನ್ನು (ಕುರಿತು) "ಹೀಗೆಂದು ತಿಳಿದ ಜ್ಞಾನಿಗೆ ನಾನು ಯಾವ ಒಳ್ಳೆಯದನ್ನು ಮಾಡಿಯೇನು, ಅವನಿಗೆ ಯಾವ ಕೆಟ್ಟದ್ದನ್ನು ಮಾಡಿಯೇನು?" ಎಂದನು. ಅವನು ಕೈಯಿಂದ (ಸನ್ನೆಮಾಡಿ) "ಪ್ರಾತೃದನೆ, ಹಾಗೆನ್ನಬೇಡ, ಯಾವನುತಾನೆ ಈ ಎರಡರ ಏಕಭಾವವನ್ನು ಪಡೆದು ಪರಮತ್ವವನ್ನು ಹೊಂದಿಯಾನು?" ಎಂದನು. ಅವನಿಗೆ ಮತ್ತೆ ಇಂತೆಂದನು : 'ವಿ'. ಅನ್ನವೇ ವಿ ;

ಅನ್ನದಲ್ಲಲ್ಲವೆ, ಈ ಸರ್ವಭೂತಗಳೂ ಪ್ರವಿಷ್ಟವಾಗಿವೆ ? 'ರಮ್'. ಪ್ರಾಣವೇ ರಮ್, ಪ್ರಾಣದಲ್ಲಿಯೇ ಅಲ್ಲವೆ, ಈ ಸರ್ವಭೂತಗಳೂ ರಮಿಸುತ್ತವೆ ? ಯಾವನು ಹೀಗೆಂದು ಅರಿತಿರುವನೋ ಅವನಲ್ಲಿ ಎಲ್ಲಾ ಭೂತಗಳೂ ಪ್ರವೇಶಮಾಡುತ್ತವೆ, ಎಲ್ಲಾ ಭೂತಗಳೂ ರಮಿಸುತ್ತವೆ. ''

## ಅನ್ನಪ್ರಾಣಗಳೆರಡೂ ಸೇರಿ ಬ್ರಹ್ಮ ಎಂಬ ಅಭಿಪ್ರಾಯ

(ಭಾಷ್ಯ)

೭೮೩. ಅನ್ನಂ ಬ್ರಹ್ಮೇತಿ । ತಥಾ ಏತತ್ ಉಪಾಸನಾನ್ತರಂ ವಿಧಿತ್ಸನ್ ಆಹ । ಅನ್ನಂ ಬ್ರಹ್ಮ । ಅನ್ನಮ್ ಅದ್ಯತೇ ಯತ್ ತದ್ ಬ್ರಹ್ಮ ಇತಿ ಏಕೇ ಆಚಾರ್ಯಾ ಆಹುಃ । ತನ್ನ ತಥಾ ಗ್ರಹೀತವ್ಯಮ್ ಅನ್ನಂ ಬ್ರಹ್ಮ ಇತಿ । ಅನ್ಯೇ ಚಾಹುಃ ಪ್ರಾಣೋ ಬ್ರಹ್ಮೇತಿ । ತಚ್ಚ ತಥಾ ನ ಗ್ರಹೀತವ್ಯಮ್। ಕಿಮರ್ಥಂ ಪುನರನ್ನಂ ಬ್ರಹ್ಮೇತಿ ನ ಗ್ರಾಹ್ಯಮ್ ? ಯಸ್ಮಾತ್ ಪೂಯತಿ ಕ್ಲಿದ್ಯತೇ ಪೂತಿಭಾವಮ್ ಆಪದ್ಯತೇ ಋತೇ ಪ್ರಾಣಾತ್, ತತ್ ಕಥಂ ಬ್ರಹ್ಮ ಭವಿತುಮರ್ಹತಿ ? ಬ್ರಹ್ಮ ಹಿ ನಾಮ ತದ್ ಯದ್ ಅವಿನಾಶಿ । ಅಸ್ತು ತರ್ಹಿ ಪ್ರಾಣೋ ಬ್ರಹ್ಮ । ನೈವಮ್ । ಯಸ್ಮಾತ್ ಶುಷ್ಯತಿ ವೈ ಪ್ರಾಣಃ ಶೋಷಮ್ ಉಪೈತಿ ಋತೇ ಅನ್ನಾತ್ । ಅತ್ತಾ ಹಿ ಪ್ರಾಣಃ । ಅತೋಽನ್ನೇನ ಆದ್ಯೇನ ವಿನಾ ನ ಶಕ್ನೋತಿ ಆತ್ಮಾನಂ ಧಾರಯಿತುಮ್ । ತಸ್ಮಾತ್ ಶುಷ್ಯತಿ ವೈ ಪ್ರಾಣ ಋತೇ ಅನ್ನಾತ್ । ಅತಃ ಏಕೈಕಸ್ಯ ಬ್ರಹ್ಮತಾ ನೋಪಪದ್ಯತೇ ಯಸ್ಮಾತ್ ತಸ್ಮಾತ್ ಏತೇ ಹ ತ್ವೇವಾನ್ನಪ್ರಾಣದೇವತೇ ಏಕಧಾಭೂಯಮ್ ಏಕಧಾಭಾವಂ ಭೂತ್ವಾ ಗತ್ವಾ ಪರಮತಾಂ ಪರಮತ್ವಂ ಗಚ್ಛತಃ, ಬ್ರಹ್ಮತ್ವಂ ಪ್ರಾಪ್ನುತಃ । ತದೇತತ್ ಏವಮ್ ಅಧ್ಯವಸ್ಯ ಹ ಸ್ಮ ಆಹ ಪ್ರಾತೃದೋ ನಾಮ ಪಿತರಮ್ ಆತ್ಮನಃ । ಕಿಂಸ್ವಿತ್ ? ಸ್ವಿತ್ ಇತಿ ವಿತರ್ಕೇ। ಯಥಾ ಮಯಾ ಬ್ರಹ್ಮ ಪರಿಕಲ್ಪಿತಮ್ ಏವಂ ವಿದುಷೇ ಕಿಂಸ್ವಿತ್ ಸಾಧು ಕುರ್ಯಾಮ್, ಸಾಧು ಶೋಭನಮ್ ಪೂಜಾಮ್ । ಕಾಂ ತು[1] ಅಸ್ಮೈ ಪೂಜಾಂ ಕುರ್ಯಾಮ್ ಇತ್ಯಭಿಪ್ರಾಯಃ । ಕಿಮೇವ ವಾ[2] ಅಸ್ಮೈ ವಿದುಷೇ ಅಸಾಧು ಕುರ್ಯಾಮ್ ? ಕೃತಕೃತ್ಯೋಽಸೌ ಇತ್ಯಭಿಪ್ರಾಯಃ । ಅನ್ನಪ್ರಾಣೌ ಸಹ ಭೂತೌ ಬ್ರಹ್ಮೇತಿ ವಿದ್ವಾನ್ ನಾಸಾಧುಕರಣೇನ ಖಣ್ಡಿತೋ ಭವತಿ ನಾಪಿ ಸಾಧುಕರಣೇನ ಮಹೀಕೃತಃ ॥

1. ಇಲ್ಲಿ ತು ಎಂಬುದಕ್ಕೆ ನು ಎಂದಿದ್ದರೆ ವಿತರ್ಕಾರ್ಥವು ಸ್ಪಷ್ಟಪಡುತ್ತಿತ್ತು; ಮೂಲದಲ್ಲಿ ಹಾಗೆಯೇ ಇತ್ತೆ ? ಎಂಬುದು ವಿಚಾರಣೀಯ.

2. ವಾಯುಕ್ತವಾದ ಪಾಠವೇ ಮೇಲೆಂದು ಎಣಿಸಿದೆ.

(ಭಾಷ್ಯಾರ್ಥ)

ಅನ್ನಂ ಬ್ರಹ್ಮೇತಿ (ಎಂಬ ಕಂಡಿಕೆಯ ಅಭಿಪ್ರಾಯವೇನೆಂದರೆ): ಹೀಗೆಯೇ[1] ಇಲ್ಲಿ ಮತ್ತೊಂದು ಉಪಾಸನವನ್ನು ವಿಧಿಸುವದಕ್ಕಾಗಿ (ಶ್ರುತಿ) ಹೇಳುತ್ತಿದೆ. ಅನ್ನವು ಬ್ರಹ್ಮ. ಅನ್ನವು, ಉಣ್ಣುತ್ತೇವಲ್ಲ ಅದು, ಬ್ರಹ್ಮ—ಎಂದು ಕೆಲವರು ಆಚಾರ್ಯರು ಎನ್ನುತ್ತಾರೆ. ಅದು ಹಾಗೆಂದು, ಅನ್ನವು ಬ್ರಹ್ಮವೆಂದು, ಗ್ರಹಿಸಬಾರದು. ಆದರೆ ಮತ್ತೆ ಕೆಲವರು ಪ್ರಾಣವು ಬ್ರಹ್ಮ ಎನ್ನುತ್ತಾರೆ. ಅದನ್ನು ಹಾಗೆಂದು ಗ್ರಹಿಸಬಾರದು. ಅನ್ನವು ಬ್ರಹ್ಮವೆಂದು ಏಕೆ ಗ್ರಹಿಸಕೂಡದು ? ಏಕೆಂದರೆ ಪ್ರಾಣವಿಲ್ಲದಿದ್ದರೆ (ಅದು) ಕೊಳೆಯುತ್ತದೆ, ಹಳಸುತ್ತದೆ, ದುರ್ವಾಸನೆಯ ರೂಪವನ್ನು ತಳೆಯುತ್ತದೆ, ಅದು ಹೇಗೆ ಬ್ರಹ್ಮವಾದೀತು ? ಬ್ರಹ್ಮವೆಂದರೆ ಯಾವದು ವಿನಾಶವಾಗದ್ದೋ ಅದಲ್ಲವೆ ? ಹಾಗಾದರೆ ಪ್ರಾಣವೇ ಬ್ರಹ್ಮವೆಂದಾಗಲಿ ! ಎಂದರೆ ಹಾಗಲ್ಲ. ಏಕೆಂದರೆ ಅನ್ನವಿಲ್ಲದಿದ್ದರೆ ಪ್ರಾಣವು ಒಣಗುತ್ತದೆ ಎಂಬುದು ಒಣಕಲಾಗುತ್ತದೆ ಎಂಬುದು ಪ್ರಸಿದ್ಧವು. ಪ್ರಾಣವು ಅತ್ತೃವಲ್ಲವೆ ? ಆದ್ದರಿಂದ ತಿನ್ನುವ ಅನ್ನವಿಲ್ಲದಿದ್ದರೆ ತಾನೇ ಇದ್ದುಕೊಂಡಿರಲಾರದು. ಆದ್ದರಿಂದ, (ಹೀಗೆ) ಒಂದೊಂದೇ ಬ್ರಹ್ಮವೆಂಬುದು ಹೊಂದುವದಿಲ್ಲವಷ್ಟೆ, ಆದ್ದರಿಂದ ಇವೇ ಎರಡು, ಅನ್ನಪ್ರಾಣ –ಎಂಬ ದೇವತೆಗಳು ಏಕಧಾಭೂಯವನ್ನು ಎಂದರೆ ಒಂದೇ (ವಸ್ತುವಿನ) ಭಾವವನ್ನು (ಭೂತತ್ವ= ಗತ್ವ) ಹೊಂದಿದರೆ (ಪರಮತಾಂ= ಪರಮತ್ವಂ) ಹೆಚ್ಚುಗಾರಿಕೆಯನ್ನು ಹೊಂದುತ್ತವೆ, ಬ್ರಹ್ಮತ್ವವನ್ನು ಹೊಂದುತ್ತವೆ.

ಆ ಇದನ್ನು ಹೀಗೆಂದು ನಿಶ್ಚಯಿಸಿ ಪ್ರಾತೃದನೆಂಬುವನು ತನ್ನ ತಂದೆಯನ್ನು (ಕುರಿತು) ಇಂತೆಂದನು. "ಏನುತಾನೆ, (ಇಲ್ಲಿ) ಸ್ವಿತ್ ಎಂಬುದು ವಿತರ್ಕವೆಂಬರ್ಥದಲ್ಲಿ (ಪ್ರಯುಕ್ತವಾಗಿದೆ). ನಾನು ಬ್ರಹ್ಮವನ್ನು ಪರಿಕಲ್ಪನೆ ಮಾಡಿರುವೆನಲ್ಲ, ಹೀಗೆ ಅರಿತ ಉಪಾಸಕನಿಗೆ ಯಾವ ಒಳ್ಳೆಯದನ್ನು ಮಾಡಿಯೇನೊ? ಒಳ್ಳೆಯದನ್ನು, ಮಂಗಲವಾದದ್ದನ್ನು ಗೌರವವನ್ನು (ಮಾಡಿಯೇನು)? ಯಾವ ಗೌರವವನ್ನುತಾನೆ ಮಾಡಿಯೇನು ? ಎಂದು ಅಭಿಪ್ರಾಯ. ಅಥವಾ ಈ ಉಪಾಸಕನಿಗೆ ಯಾವ ಕೆಟ್ಟದ್ದನ್ನುತಾನೆ ಮಾಡಿಯೇನೊ ! ಅವನು ಕೃತಕೃತ್ಯನು ಎಂದು ಅಭಿಪ್ರಾಯ. ಅನ್ನಪ್ರಾಣಗಳೆರಡೂ ಸೇರಿದರೆ ಬ್ರಹ್ಮ ಎಂದು ಅರಿತವನಿದಾನಲ್ಲ, ಅವನು ಕೆಟ್ಟದುಮಾಡಿದ್ದರಿಂದ ಖಂಡಿತನಾಗುವದಿಲ್ಲ, ಒಳ್ಳೆಯದನ್ನು ಮಾಡಿದ್ದರಿಂದ ದೊಡ್ಡವನೂ ಆಗುವದಿಲ್ಲ.

---

1. ಹಿಂದೆ ಹೇಳಿರುವಂತೆಯೇ.

# ಸಿದ್ಧಾಂತ : ಗುಣವಿಶಿಷ್ಟವಾದ ಅನ್ನಪ್ರಾಣಗಳೇ ಬ್ರಹ್ಮ

(ಭಾಷ್ಯ)

೩೮೪. ತಮ್ ಏವಂವಾದಿನಂ ಸ ಪಿತಾ ಹ ಸ್ಮ ಆಹ ಪಾಣಿನಾ ಹಸ್ತೇನ ನಿವಾರಯನ್। ಮಾ ಪ್ರಾತೃದ ಮೈವಂ ವೋಚಃ। ಕಸ್ತು ಏನಯೋಃ ಅನ್ನಪ್ರಾಣಯೋಃ ಏಕಧಾಭೂಯಂ ಭೂತ್ವಾ ಪರಮತಾಂ ಕಸ್ತು ಗಚ್ಛತಿ? ನ ಕಶ್ಚಿದಪಿ ವಿದ್ವಾನ್ ಅನೇನ ಬ್ರಹ್ಮದರ್ಶನೇನ ಪರಮತಾಂ ಗಚ್ಛತಿ। ತಸ್ಮಾತ್ ನೈವಂ ವಕ್ತುಮರ್ಹಸಿ ಕೃತಕೃತ್ಯೋಽಸೌ ಇತಿ। ಯದ್ಯೇವಮ್, ಬ್ರವೀತು ಭವಾನ್ ಕಥಂ ಪರಮತಾಂ ಗಚ್ಛತೀತಿ। ತಸ್ಮೈ ಉ ಹ ಏತದ್ ವಕ್ಷ್ಯಮಾಣಂ ವಚಃ ಉವಾಚ। ಕಿಂ ತತ್ ? ವಿ ಇತಿ। ಕಿಂ ತದ್ ವೀತಿ ? ಉಚ್ಯತೇ। ಅನ್ನಂ ವೈ ವಿ ಇತಿ। ಅನ್ನೇ ಹಿ ಯಸ್ಮಾತ್ ಇಮಾನಿ ಸರ್ವಾಣಿ ಭೂತಾನಿ ವಿಷ್ಟಾನಿ ಆಶ್ರಿತಾನಿ। ಅತಃ ಅನ್ನಂ ವಿ ಇತ್ಯುಚ್ಯತೇ। ಕಿಂ ಚ ರಮ್ ಇತಿ। ರಮಿತಿ ಚ ಉಕ್ತವಾನ್ ಪಿತಾ। ಕಿಂ ಪುನಸ್ತದ್ ರಮ್ ? ಪ್ರಾಣೋ ವೈ ರಮ್। ಕುತ ಇತಿ ? ಆಹ। ಪ್ರಾಣೇ ಹಿ ಯಸ್ಮಾತ್ ಬಲಾಶ್ರಯೇ ಸತಿ ಸರ್ವಾಣಿ ಭೂತಾನಿ ರಮನ್ತೇ ಅತಃ ರಂ ಪ್ರಾಣಃ। ಸರ್ವಭೂತಾಶ್ರಯಗುಣಮನ್ನಮ್, ಸರ್ವಭೂತರತಿಗುಣಶ್ಚ ಪ್ರಾಣಃ। ನ ಹಿ ಕಶ್ಚಿತ್ ಅನಾಯತನೋ ನಿರಾಶ್ರಯೋ ರಮತೇ। ನಾಪಿ ಸತ್ಯಪಿ ಆಯತನೇ ಅಪ್ರಾಣೋ ದುರ್ಬಲೋ ರಮತೇ। ಯದಾ ತು ಆಯತನವಾನ್ ಪ್ರಾಣೀ ಬಲವಾಂಶ್ಚ ತದಾ ಕೃತಾರ್ಥಮಾತ್ಮಾನಂ ಮನ್ಯಮಾನಃ ರಮತೇ ಲೋಕಃ। "ಯುವಾ ಸ್ಯಾತ್ ಸಾಧು ಯುವಾಽಧ್ಯಾಯಕಃ" (ತೈ. ೨-೮-೩) ಇತ್ಯಾದಿಶ್ರುತೇಃ। ಇದಾನೀಮೇವಂ ವಿದಃ ಫಲಮಾಹ। ಸರ್ವಾಣಿ ಹ ವಾ ಅಸ್ಮಿನ್ ಭೂತಾನಿ ವಿಶನ್ತಿ ಅನ್ನಗುಣಜ್ಞಾನಾತ್। ಸರ್ವಾಣಿ ಭೂತಾನಿ ರಮನ್ತೇ ಪ್ರಾಣಗುಣಜ್ಞಾನಾತ್ ಯ ಏವಂ ವೇದ ॥

(ಭಾಷ್ಯಾರ್ಥ)

ಹೀಗೆಂದು ಹೇಳುತ್ತಿದ್ದ ಅವನನ್ನು (ಕುರಿತು) ಆ ತಂದೆಯು (ಪಾಣಿನಾ= ಹಸ್ತೇನ) ಕೈಯಿಂದ (ಸನ್ನೆಮಾಡಿ) ಇಂತೆಂದನು. ಪ್ರಾತೃದನೆ, ಬೇಡ, ಹೀಗೆನ್ನದಿರು. ಯಾವನು ಈ ಅನ್ನಪ್ರಾಣಗಳ ಏಕಭಾವವನ್ನು ಪಡೆದು ಪರಮತ್ವವನ್ನು ಯಾವನುತಾನೆ ಹೊಂದುತ್ತಾನೆ ? ಯಾವನೊಬ್ಬ ಉಪಾಸಕನೂ ಈ ಬ್ರಹ್ಮೋಪಾಸನೆಯಿಂದ ಪರಮತ್ವವನ್ನು ಹೊಂದಲಾರನು. ಆದ್ದರಿಂದ ಇವನು ಕೃತಕೃತ್ಯನು ಎಂದು (ನೀನು) ಹೇಳಬಾರದು.

ಹೀಗಾದರೆ, ಹೇಗಾದರೆ ಪರಮತ್ವವನ್ನು ಹೊಂದುತ್ತಾನೆ ಎಂಬುದನ್ನು ನೀನು ಹೇಳಬೇಕು ಎನ್ನಲು ಅವನಿಗೆ ಈ ಮುಂದೆ ಹೇಳಲಿರುವ ಮಾತನ್ನು

(ತಂದೆಯು) ಹೇಳಿದನು. ಅದು ಯಾವದು ? ಎಂದರೆ ವಿ ಎಂದನು. ಆ ವಿ ಎಂಬುದು ಯಾವದು ? ಎಂದರೆ ಹೇಳುತ್ತಾನೆ. ಅನ್ನವೇ ವಿ ; (ಹಿ= ಯಸ್ಮಾತ್) ಏಕೆಂದರೆ ಅನ್ನದಲ್ಲಿಯೇ ಈ ಸರ್ವಭೂತಗಳೂ ಪ್ರವಿಷ್ಟವಾಗಿರುತ್ತವೆ, (ಅದನ್ನು) ಆಶ್ರಯಿಸಿಕೊಂಡಿರುತ್ತವೆ. ಆದ್ದರಿಂದ ಅನ್ನವು ವಿ ಎನಿಸುತ್ತದೆ, ಮತ್ತು 'ರಮ್ ಎಂದು', ರಮ್ ಎಂದೂ ತಂದೆಯು ಹೇಳಿದನು (ಎಂದರ್ಥ). ಆ ರಮ್ ಎಂಬುದು ಯಾವದು ? ಪ್ರಾಣವೇ ರಮ್. ಏಕೆ ? ಎಂದರೆ ಹೇಳುತ್ತಾನೆ : (ಹಿ= ಯಸ್ಮಾತ್) ಏಕೆಂದರೆ ಬಲಕ್ಕೆ ಆಶ್ರಯವಾಗಿರುವ ಪ್ರಾಣವು ಇದ್ದರೆ ಸರ್ವಭೂತಗಳೂ ರಮಿಸುತ್ತವೆ. ಆದ್ದರಿಂದ ಪ್ರಾಣವು ರಮ್.

ಸರ್ವಭೂತಗಳಿಗೂ ಆಶ್ರಯವಾಗಿರುವದೆಂಬ ಗುಣವುಳ್ಳದ್ದು ಅನ್ನವು, ಸರ್ವಭೂತಗಳಿಗೂ ರಮಣಕ್ಕೆ ಕಾರಣವಾದದ್ದು ಪ್ರಾಣವು. ಆಯತನವಿಲ್ಲದ, ಆಶ್ರಯವಿಲ್ಲದ ಯಾವನೂ ರತಿಯುಳ್ಳವನಾಗಲಾರನಷ್ಟೆ ? ಆಯತನವಿದ್ದರೂ ಅಪ್ರಾಣನಾಗಿ ದುರ್ಬಲನಾದವನೂ ರತಿಯುಳ್ಳವನಾಗಲಾರ(ನಷ್ಟೆ). ಆದರೆ ಯಾವಾಗ ಆಯತನವುಳ್ಳವನೂ, ಪ್ರಾಣಯುತನೂ ಬಲವಂತನೂ ಆಗಿರುವನೋ, ಆಗ ತಾನು ಕೃತಾರ್ಥನೆಂದುಕೊಂಡು ಜನವು ಆನಂದದಿಂದಿರುತ್ತದೆ. "ಯೌವನವಂತನಾಗಿರಬೇಕು, ಒಳ್ಳೆಯ ಯೌವನವಂತನಾಗಿರಬೇಕು, ಅಧ್ಯಯನವನ್ನು ಮಾಡಿದವನಾಗಿರಬೇಕು" (ತೈ. ೨-೮-೩) ಎಂದು ಮುಂತಾಗಿರುವ[1] ಶ್ರುತಿಯಿಂದ (ಇದು ಸಿದ್ಧವಾಗುತ್ತದೆ).

ಈಗ ಹೀಗೆಂದು ಉಪಾಸನೆಮಾಡಿದವನಿಗೆ ಫಲವನ್ನು (ಶ್ರುತಿ) ಹೇಳುತ್ತಿದೆ. ಯಾವನು ಹೀಗೆಂದು ಅರಿತಿರುವನೋ ಅವನೊಳಗೆ ಅನ್ನಗುಣಜ್ಞಾನದ (ಫಲ)ವಾಗಿ ಎಲ್ಲಾ ಭೂತಗಳೂ ಪ್ರವಿಷ್ಟರಾಗಿರುತ್ತಾರೆ; ಪ್ರಾಣಗುಣಜ್ಞಾನದ (ಫಲ)ವಾಗಿ (ಅವನಲ್ಲಿ) ಎಲ್ಲರೂ ರತಿಯುಳ್ಳವರಾಗಿರುತ್ತಾರೆ.

———೦———

1. ಆಶಿಷ್ಠನಾಗಿ ದ್ರಢಿಷ್ಠನಾಗಿ ಬಲಿಷ್ಠನಾಗಿರಬೇಕು– ಎಂಬ ವಾಕ್ಯವನ್ನು ಮುಂತಾದ ಎಂಬುದರಿಂದ ಗ್ರಹಿಸಬೇಕು. ಅನ್ನದ ವಿಕಾರವಾದ ಶರೀರವೆಂಬ ಆಯತನವೂ ಪ್ರಾಣದ ಕಾರ್ಯವಾದ ಬಲವೂ ಇದ್ದರೇ ಮನುಷ್ಯನ ಆನಂದವು ಪೂರ್ಣವಾಗಿರುತ್ತದೆ ಎಂಬ ಭಾವ.

# ಹನ್ನೆರಡನೆಯ ಬ್ರಾಹ್ಮಣದ ಸಾರ

**ವಿಶೇಷ: ಇಲ್ಲಿ ಅನ್ನಪ್ರಾಣಗಳನ್ನು ಗುಣಸಹಿತವಾಗಿ ಬ್ರಹ್ಮವೆಂದು ಉಪಾಸನೆಮಾಡಬೇಕೆಂದು ವಿಧಿಸಿದೆ.**

ಬರಿಯ ಅನ್ನವೇ ಬ್ರಹ್ಮವಾಗಲಾರದು ; ಏಕೆಂದರೆ ಅದು ಕೊಳೆಯುವದು ; ಬರಿಯ ಪ್ರಾಣವೂ ಬ್ರಹ್ಮವಾಗಲಾರದು , ಏಕೆಂದರೆ ಅದು ಒಣಕಲಾಗುವದು. ಆದ್ದರಿಂದ ಅನ್ನಪ್ರಾಣಗಳೆರಡೂ ಸೇರಿ ಒಂದುಗೂಡಿದ್ದು ಬ್ರಹ್ಮವು ಎಂದು ಉಪಾಸನೆಮಾಡಬೇಕು. ಹಾಗೆಂದು ಉಪಾಸನೆಮಾಡಿದವನು ಕೃತಕೃತ್ಯನು ; ಏಕೆಂದರೆ ಅವನು ಮತ್ತೊಬ್ಬರು ಮಾಡಿದ ಒಳ್ಳೆಯದರಿಂದ ಹೆಚ್ಚುವದಿಲ್ಲ, ಕೆಟ್ಟದ್ದರಿಂದ ಕುಗ್ಗುವದಿಲ್ಲ –ಎಂಬುದು ಒಂದು ಪಕ್ಷವು.

ಆದರೆ ಎರಡು ದೋಷಗಳಿಂದ ಕೂಡಿದ ವಸ್ತುಗಳನ್ನು ಸೇರಿಸಿದಮಾತ್ರದಿಂದ ಯಾವ ಹೆಚ್ಚಿನ ಗುಣವೂ ಬರಲಾರದು. ಅನ್ನದ ಗುಣವನ್ನೂ ಪ್ರಾಣದ ಗುಣವನ್ನೂ ಅರಿತು ಅನ್ನ ಪ್ರಾಣಗಳು ಒಂದುಗೂಡಿದ ಬ್ರಹ್ಮವೇ ತಾನೆಂದು ಉಪಾಸನೆಮಾಡಿದರೆ ಅದರಿಂದ ಆ ಗುಣ ಗಳಿಂದ ಕೂಡಿದ ಬ್ರಹ್ಮಸಾಯುಜ್ಯವಾಗುವದು. ಹೇಗೆಂದರೆ ಅನ್ನವೆಂಬುದು ಎಲ್ಲರಿಗೂ ಆಶ್ರಯವನ್ನು ಮಾಡುವ ಶರೀರವಾಗುವದರಿಂದ 'ವಿ' (ವಿಶ್ ಧಾತುವಿನ ಆದ್ಯಕ್ಷರ) ಎನಿಸುತ್ತದೆ. ಹೀಗೆಯೇ ಎಲ್ಲರಿಗೂ ಪ್ರಾಣವನ್ನೂ ಬಲವನ್ನೂ ಕೊಟ್ಟು ರಮಿಸುವದಕ್ಕೆ ಕಾರಣವಾಗಿರುವದರಿಂದ ಪ್ರಾಣವು ರಮ್ (ರಮ್ ಧಾತುವಿನ ಮೊದಲಕ್ಷರ) ಎನಿಸುತ್ತದೆ. ಈ ಗುಣಗಳಿಂದೊಡಗೂಡಿದ ಬ್ರಹ್ಮವೆಂದು ಅನ್ನಪ್ರಾಣಗಳನ್ನು ಉಪಾಸನೆಮಾಡಿದರೆ ಆ ಗುಣಗಳಿಂದ ಕೂಡಿದವನೇ ಆಗುತ್ತಾನೆ ; ಅವನು ಎಲ್ಲಾ ಭೂತಗಳಿಗೂ ಆಶ್ರಯನೂ ಎಲ್ಲರಿಗೂ ರಮಣಹೇತುವೂ ಆಗುತ್ತಾನೆ.

---

# ಐದನೆಯ ಅಧ್ಯಾಯ - ಹದಿಮೂರನೆಯ ಬ್ರಾಹ್ಮಣ

( ಪ್ರಾಣವನ್ನು ಉಕ್ಥಾದಿಗಳೆಂದು ಮಾಡುವ ಉಪಾಸನೆ )

## ಪ್ರಾಣವು ಉಕ್ಥವೆಂಬ ಉಪಾಸನೆ

(ಉಪನಿಷತ್ತು)

**ಉಕ್ಥಂ ಪ್ರಾಣೋ ವಾ ಉಕ್ಥಂ ಪ್ರಾಣೋ ಹೀದಗ್ಂ ಸರ್ವ ಮುತ್ಥಾಪಯತ್ಯುದ್ಧಾಸ್ಮಾದುಕ್ಥವಿದ್ ವೀರಸ್ತಿಷ್ಠತ್ಯುಕ್ಥಸ್ಯ ಸಾಯುಜ್ಯಗ್ಂ ಸಲೋಕತಾಂ ಜಯತಿ ಯ ಏವಂ ವೇದ ॥೧॥**

೧. ಉಕ್ಥವು. ಪ್ರಾಣವೇ ಉಕ್ಥವು. ಪ್ರಾಣವೇ ಅಲ್ಲವೆ, ಇದೆಲ್ಲವನ್ನೂ ಎಬ್ಬಿಸುತ್ತದೆ? ಯಾವನು ಹೀಗೆಂದು ಅರಿತಿರುವನೋ ಅವನಿಂದ ಉಕ್ಥವಿದನಾದ ವೀರನು ಎದ್ದುಕೊಳ್ಳುವನು; (ಅವನು) ಉಕ್ಥದ ಸಾಯುಜ್ಯವನ್ನೂ ಸಲೋಕತೆಯನ್ನೂ ಹೊಂದುವನು.

## ಪ್ರಾಣವೆಂಬ ಉಕ್ಥದ ಉಪಾಸನವೂ ಅದರ ಫಲವೂ

(ಭಾಷ್ಯ)

೩೮೫. ಉಕ್ಥಮ್ । ತಥಾ ಉಪಾಸನಾನ್ತರಮ್ । ಉಕ್ಥಂ ಶಸ್ತ್ರಮ್ । ತದ್ ಹಿ ಪ್ರಧಾನಂ ಮಹಾವ್ರತೇ ಕ್ರತೌ । ಕಿಂ ಪುನಸ್ತದುಕ್ಥಮ್ ? ಪ್ರಾಣೋ ವೈ ಉಕ್ಥಮ್ । ಪ್ರಾಣಶ್ಚ ಪ್ರಧಾನ ಇನ್ದ್ರಿಯಾಣಾಮ್, ಉಕ್ಥಂ ಚ ಶಸ್ತ್ರಾಣಾಮ್ । ಅತಃ ಉಕ್ಥಮ್ ಇತ್ಯುಪಾಸೀತ । ಕಥಂ ಪ್ರಾಣ ಉಕ್ಥಮಿತಿ? ಆಹ । ಪ್ರಾಣಃ ಹಿ ಯಸ್ಮಾತ್ ಇದಂ ಸರ್ವಮ್ ಉತ್ಥಾಪಯತಿ । ಉತ್ಥಾಪನಾತ್ ಉಕ್ಥಂ ಪ್ರಾಣಃ ನ ಹಿ ಅಪ್ರಾಣಃ ಕಶ್ಚಿತ್ ಉತ್ತಿಷ್ಠತಿ । ತದುಪಾಸನಾ ಫಲಮ್ ಆಹ । ಉತ್ ಹ ಅಸ್ಮಾತ್ ಏವಂವಿದಃ ಉಕ್ಥವಿತ್ ಪ್ರಾಣವಿದ್ ವೀರಃ ಪುತ್ರಃ ಉತ್ತಿಷ್ಠತಿ ಜ ದೃಷ್ಟಮೇತತ್ ಫಲಮ್ । ಅದೃಷ್ಟಂ ತು ಉಕ್ಥಸ್ಯ ಸಾಯುಜ್ಯಂ ಸಲೋಕತಾಂ ಜಯತಿ ಯ ಏವಂ ವೇದ ॥

(ಭಾಷ್ಯಾರ್ಥ)

ಉಕ್ಥಮ್ (ಎಂದು ಪ್ರಾರಂಭಿಸಿರುವ ಕಂಡಿಕೆಯ ಅಭಿಪ್ರಾಯವಿದು). ಹಿಂದಿನಂತೆಯೇ ಇದು ಮತ್ತೊಂದು ಉಪಾಸನೆಯು.

ಉಕ್ಥವೆಂಬುದು (ಒಂದು) ಶಸ್ತ್ರವು,[1] ಮಹಾವ್ರತವೆಂಬ ಕ್ರತುವಿನಲ್ಲಿ[2] ಆ ಶಸ್ತ್ರವಲ್ಲವೆ, ಮುಖ್ಯವಾದದ್ದು? ಆ ಉಕ್ಥವೆಂಬುದು ಯಾವದು? ಪ್ರಾಣವೇ ಉಕ್ಥವು. ಪ್ರಾಣವು ಇಂದ್ರಿಯಗಳಿಗೆ ಪ್ರಧಾನವಾದದ್ದು, ಉಕ್ಥವು ಶಸ್ತ್ರಗಳಿಗೆ (ಪ್ರಧಾನವಾದದ್ದು). ಆದ್ದರಿಂದ ಪ್ರಾಣವನ್ನು ಉಕ್ಥವು ಎಂದು ಉಪಾಸನೆಮಾಡಬೇಕು.

ಪ್ರಾಣವು ಉಕ್ಥವೆಂಬುದು ಹೇಗೆ[3]? (ಹಿ=ಯಸ್ಮಾತ್) ಏಕೆಂದರೆ ಪ್ರಾಣವೇ ಇದೆಲ್ಲವನ್ನೂ ಏಳಿಸುತ್ತದೆ; ಹೀಗೆ ಉತ್ಥಾಪನೆ(ಮಾಡುವದ)ರಿಂದ ಪ್ರಾಣವು ಉಕ್ಥವು. ಪ್ರಾಣವಿಲ್ಲದವನು ಯಾವನೂ ಏಳಲಾರನಷ್ಟೆ[4]?

ಆ (ಉಕ್ಥದ) ಉಪಾಸನೆಗೆ ಫಲವನ್ನು (ಶ್ರುತಿ) ಹೇಳುತ್ತಿದೆ: ಯಾವನು ಹೀಗೆಂದು ಅರಿತಿರುವನೋ, ಅವನಿಂದ ಹೀಗೆಂದು ಅರಿತ (ಉಪಾಸಕ)ನಿಂದ ಉಕ್ಥವನ್ನು ಬಲ್ಲ, ಪ್ರಾಣವನ್ನು (ಉಪಾಸನೆಮಾಡಿ)ಬಲ್ಲ, ವೀರನಾದ ಪುತ್ರನು (ಉತ್ತಿಷ್ಠತಿ ಹ)[5] ಉಂಟಾಗುತ್ತಾನೆ. ಇದು ದೃಷ್ಟಫಲವು. ಆದರೆ ಅದೃಷ್ಟಫಲವು (ಯಾವದೆಂದರೆ ಉಕ್ಥ(ಪ್ರಾಣನ) ಸಾಯುಜ್ಯವನ್ನು (ಅಥವಾ) ಸಾಲೋಕ್ಯವನ್ನು[6] ಗೆದ್ದುಕೊಳ್ಳುತ್ತಾನೆ.

## ಪ್ರಾಣವು ಯಜುಸ್ಸೆಂಬ ಉಪಾಸನೆ

( ಉಪನಿಷತ್ತು )

**ಯಜುಃ ಪ್ರಾಣೋ ವೈ ಯಜುಃ ಪ್ರಾಣೇ ಹೀಮಾನಿ ಸರ್ವಾಣಿ ಭೂತಾನಿ ಯುಜ್ಯನ್ತೇ ಯುಜ್ಯನ್ತೇ ಹಾಸ್ಮೈ ಸರ್ವಾಣಿ ಭೂತಾನಿ ಶ್ರೈಷ್ಠ್ಯಾಯ ಯಜುಷಃ ಸಾಯುಜ್ಯಗ್ಂ ಸಲೋಕತಾಂ ಜಯತಿ ಯ ಏವಂ ವೇದ ॥ ೨ ॥**

---

1. ದೇವತೆಗಳನ್ನು ಹೊಗಳುವ ಮಂತ್ರವಿಶೇಷವು ಶಸ್ತ್ರವು.

2. ಮಹಾವ್ರತವೆಂಬ ಕ್ರತುವನ್ನು ಐತರೇಯಾರಣ್ಯಕದ ೧-೧ರಲ್ಲಿ ವರ್ಣಿಸಿದೆ. ಅದರಲ್ಲಿ ಆಜ್ಯ, ಪ್ರಉಗ- ಮುಂತಾದ ಅನೇಕ ಶಸ್ತ್ರಗಳನ್ನು ಹೇಳಿದೆ.

3 ಉಕ್ಥ ಶಸ್ತ್ರದಂತೆ ಇಂದ್ರಿಯಗಳಿಗೆಲ್ಲ ಪ್ರಧಾನನು ಎಂಬಿದು ಹೇಗೆ?

4. ಐ. ಆ. ೨-೧-೪ರಲ್ಲಿ ಪ್ರಾಣವೇ ಶರೀರೋತ್ಥಾಪಕನಾದ್ದರಿಂದ ಉಕ್ಥವು ಎಂದು ಪ್ರಾಣಸಂವಾದಾಂತದಲ್ಲಿ ನಿರ್ಣಯಿಸಿದೆ.

5. ಉದ್ಧಸ್ಮಾತ್ ಎಂಬಲ್ಲಿರುವ ಉತ್ ಎಂಬಿದನ್ನು ತಿಷ್ಠತಿ ಎಂಬ ಕ್ರಿಯಾಪದಕ್ಕೆ ಸೇರಿಸಿಕೊಳ್ಳಬೇಕೆಂದು ಭಾವ; ಉಕ್ಥೋಪಾಸಕನಿಗೆ ಉಕ್ಥೋಪಾಸಕನಾಗುವ ವೀರ ಪುತ್ರನೇ ಹುಟ್ಟುತ್ತಾನೆ ಎಂಬುದು ದೃಷ್ಟಫಲ.

6. ಸಾಯುಜ್ಯವು ಉಪಾಸನೆಯು ತೀವ್ರವಾಗಿದ್ದರೆ ಸಿಕ್ಕುವದು, ಸಾಲೋಕ್ಯವು ಅದಕ್ಕಿಂತ ಕಡಿಮೆಯತರದ ಉಪಾಸನೆಯ ಫಲ. ಮುಂದಿನ ಕಂಡಿಕೆಗಳಿಗೂ ಹೀಗೆಯೇ ಫಲತಾರತಮ್ಯವನ್ನು ತಿಳಿಯಬೇಕು.

೨. ಯಜುಸ್ಸು. ಪ್ರಾಣವೇ ಯಜುಸ್ಸು; ಪ್ರಾಣದಲ್ಲಲ್ಲವೆ, ಈ ಭೂತಗಳೆಲ್ಲ ಯುಕ್ತವಾಗಿರುತ್ತವೆ? ಯಾವನು ಹೀಗೆಂದು ಅರಿತಿರುವನೋ ಅವನಿಗೆ ಸರ್ವಭೂತಗಳೂ ಶ್ರೇಷ್ಠತ್ವಕ್ಕಾಗಿ ಯುಕ್ತವಾಗುತ್ತವೆ. ಅವನು ಯಜುಸ್ಸಿನ ಸಾಯುಜ್ಯವನ್ನೋ ಸಲೋಕತೆಯನ್ನೋ ಗೆದ್ದುಕೊಳ್ಳುತ್ತಾನೆ.

## ಪ್ರಾಣವೆಂಬ ಯಜುಸ್ಸಿನ ಉಪಾಸನವೂ ಅದರ ಫಲವೂ

(ಭಾಷ್ಯ)

೩೮೬. ಯಜುರಿತಿ ಚ ಉಪಾಸೀತ ಪ್ರಾಣಮ್ । ಪ್ರಾಣೋ ವೈ ಯಜುಃ । ಕಥಂ ಯಜುಃ ಪ್ರಾಣಃ? ಪ್ರಾಣೇ ಹಿ ಯಸ್ಮಾತ್ ಸರ್ವಾಣಿ ಭೂತಾನಿ ಯುಜ್ಯನ್ತೇ । ನ ಹಿ ಅಸತಿ ಪ್ರಾಣೇ ಕೇನಚಿತ್ ಕಸ್ಯಚಿತ್ ಯೋಗಸಾಮರ್ಥ್ಯಮ್ । ಅತಃ ಯುನಕ್ತಿ ಇತಿ ಪ್ರಾಣೋ ಯಜುಃ । ಏವಂವಿದಃ ಫಲಮ್ ಆಹ । ಯುಜ್ಯನ್ತೇ ಉದ್ಯಚ್ಛನ್ತೇ ಇತ್ಯರ್ಥಃ । ಹ ಅಸ್ಮೈ ಏವಂವಿದೇ ಸರ್ವಾಣಿ ಭೂತಾನಿ ಶ್ರೈಷ್ಠ್ಯಂ ಶ್ರೇಷ್ಠಭಾವಃ । ತಸ್ಮೈ ಶ್ರೈಷ್ಠ್ಯಾಯ ಶ್ರೇಷ್ಠಭಾವಾಯ ಅಯಂ ನಃ ಶ್ರೇಷ್ಠೋ ಭವೇತ್ ಇತಿ । ಯಜುಷಃ ಪ್ರಾಣಸ್ಯ ಸಾಯುಜ್ಯಮ್ ಇತ್ಯಾದಿ ಸರ್ವಂ ಸಮಾನಮ್ ॥

(ಭಾಷ್ಯಾರ್ಥ)

ಯಜುಸ್ಸು ಎಂದೂ ಪ್ರಾಣವನ್ನು ಉಪಾಸನೆಮಾಡಬೇಕು. ಪ್ರಾಣವೇ ಯಜುಸ್ಸು. ಪ್ರಾಣವು ಯಜುಸ್ಸೆಂಬುದು ಹೇಗೆ? (ಹಿ=ಯಸ್ಮಾತ್) ಹೇಗೆಂದರೆ ಪ್ರಾಣದಲ್ಲಿ ಸರ್ವಭೂತಗಳೂ ಯುಕ್ತವಾಗುತ್ತವೆ.[1] ಪ್ರಾಣವಿಲ್ಲದೆ ಇದ್ದರೆ ಯಾವದರೊಡನೆಯೂ ಯಾವದಕ್ಕೂ ಯೋಗ(= ಕೂಡಿಕೊಳ್ಳುವ) ಸಾಮರ್ಥ್ಯ (ವಿರ)ಲಾರದಷ್ಟೆ? ಆದ್ದರಿಂದ ಪ್ರಾಣವು (ಯುನಕ್ತಿ= )ಕೂಡಿಸುತ್ತದೆ ಎಂಬ (ಕಾರಣದಿಂದ) ಯಜುಸ್ಸು. ಹೀಗೆಂದು ಉಪಾಸನೆಮಾಡಿದವನಿಗೆ (ಶ್ರುತಿಯು) ಫಲವನ್ನು ಹೇಳುತ್ತಿದೆ. ಇವನಿಗೆ ಹೀಗೆಂದು ಅರಿತಿರುವವನಿಗೆ ಸರ್ವಭೂತಗಳೂ ಶ್ರೈಷ್ಠ್ಯವು ಎಂದರೆ ಶ್ರೇಷ್ಠಭಾವವು, ಅದಕ್ಕಾಗಿ ಎಂದರೆ ಶ್ರೈಷ್ಠ್ಯಕ್ಕಾಗಿ; ಇವನು ನಮ್ಮಲ್ಲಿ ಶ್ರೇಷ್ಠನಾಗಲಿ ಎಂದು ಯುಕ್ತರಾಗುವರು, ಎತ್ತಿಹಿಡಿಯುವರು ಎಂದರ್ಥ. ಯಜುಸ್ಸೆಂಬ ಪ್ರಾಣನ ಸಾಯುಜ್ಯವನ್ನು (ಗೆದ್ದುಕೊಳ್ಳುತ್ತಾನೆ) ಎಂಬುದೇ ಮುಂತಾದದ್ದು (ಹಿಂದಿನ ಕಂಡಿಕೆಗೂ ಇದಕ್ಕೂ) ಸಮಾನವಾಗಿದೆ.

---

1. ಒಂದಕ್ಕೊಂದು ಕೂಡಿಕೊಳ್ಳುತ್ತವೆ.

# ಪ್ರಾಣವು ಸಾಮವೆಂಬ ಉಪಾಸನೆ

(ಉಪನಿಷತ್ತು)

**ಸಾಮ ಪ್ರಾಣೋ ವೈ ಸಾಮ ಪ್ರಾಣೇ ಹೀಮಾನಿ ಸರ್ವಾಣಿ ಭೂತಾನಿ ಸಮ್ಯಞ್ಚಿ ಸಮ್ಯಞ್ಚಿ ಹಾಸ್ಮೈ ಸರ್ವಾಣಿ ಭೂತಾನಿ ಶ್ರೈಷ್ಠ್ಯಾಯ ಕಲ್ಪನ್ತೇ ಸಾಮ್ನಃ ಸಾಯುಜ್ಯಗ್ಂ ಸಲೋಕ ತಾಂ ಜಯತಿ ಯ ಏವಂ ವೇದ ॥ ೩ ॥**

೩. ಸಾಮವು. ಪ್ರಾಣವೇ ಸಾಮವು. ಪ್ರಾಣದಲ್ಲಲ್ಲವೆ, ಈ ಸರ್ವಭೂತಗಳೂ ಸರಿಯಾಗಿ ಸೇರುತ್ತವೆ? ಯಾವನು ಹೀಗೆಂದು ಅರಿತಿರುವನೋ ಅವನಲ್ಲಿಗೆ ಸರ್ವಭೂತಗಳೂ ಸರಿಯಾಗಿ (ಬಂದು) ಸೇರುತ್ತವೆ, ಶ್ರೈಷ್ಠ್ಯಕ್ಕೆ ಸಮರ್ಥವಾಗುತ್ತವೆ; (ಅವನು) ಸಾಯುಜ್ಯವನ್ನೋ ಸಲೋಕತೆಯನ್ನೋ ಗೆದ್ದುಕೊಳ್ಳುತ್ತಾನೆ.

## ಪ್ರಾಣವೆಂಬ ಸಾಮದ ಉಪಾಸನವೂ ಅದರ ಫಲವೂ

(ಭಾಷ್ಯ)

೩೮೭. ಸಾಮೇತಿ ಚ ಉಪಾಸೀತ ಪ್ರಾಣಮ್। ಪ್ರಾಣೋ ವೈ ಸಾಮ। ಕಥಂ ಪ್ರಾಣಃ ಸಾಮ? ಪ್ರಾಣೇ ಹಿ ಯಸ್ಮಾತ್ ಸರ್ವಾಣಿ ಭೂತಾನಿ ಸಮ್ಯಞ್ಚಿ ಸಂಗಚ್ಛನ್ತೇ। ಸಂಗಮನಾತ್ ಸಾಮ್ಯಾಪತ್ತಿಹೇತುತ್ವಾತ್ ಸಾಮ ಪ್ರಾಣಃ। ಸಮ್ಯಞ್ಚಿ ಸಂಗಚ್ಛನ್ತೇ। ಹ ಅಸ್ಮೈ ಸರ್ವಾಣಿ ಭೂತಾನಿ। ನ ಕೇವಲಂ ಸಂಗಚ್ಛನ್ತ ಏವ, (ಶ್ರೈಷ್ಠ್ಯಾಯ)[1] ಶ್ರೇಷ್ಠಭಾವಾಯ ಚ ಅಸ್ಮೈ ಕಲ್ಪನ್ತೇ ಸಮರ್ಥ್ಯನ್ತೇ ಸಾಮ್ನಃ ಸಾಯುಜ್ಯಮ್ ಇತ್ಯಾದಿ ಪೂರ್ವವತ್ ॥

(ಭಾಷ್ಯಾರ್ಥ)

ಸಾಮವೆಂದೂ ಪ್ರಾಣವನ್ನು ಉಪಾಸನೆಮಾಡಬೇಕು. ಪ್ರಾಣವೇ ಸಾಮವು. ಪ್ರಾಣವು ಸಾಮವೆಂಬುದು ಹೇಗೆ? (ಹಿ= ಯಸ್ಮಾತ್) ಏಕೆಂದರೆ ಸರ್ವಭೂತಗಳೂ ಪ್ರಾಣದಲ್ಲಿ (ಸಮ್ಯಞ್ಚಿ) ಸಂಗತವಾಗುತ್ತವೆ; ಸಂಗಮನ ಮಾಡುವದರಿಂದ ಎಂದರೆ ಸಾಮ್ಯವನ್ನು ಹೊಂದುವದಕ್ಕೆ ಕಾರಣವಾಗಿರುವದರಿಂದ ಪ್ರಾಣವು ಸಾಮವು.

ಯಾವನು ಹೀಗೆಂದರಿತಿರುವನೋ ಅವನಿಗೆ ಸರ್ವಭೂತಗಳೂ ಸಂಗತವಾಗುತ್ತವೆ. ಸುಮ್ಮನೆ ಸಂಗತವಾಗುತ್ತವೆ ಎಂಬುದಿಷ್ಟೇ ಅಲ್ಲ, ಇವನಿಗೆ ಶ್ರೇಷ್ಠಭಾವಕ್ಕೂ ಸಮರ್ಥವಾಗುತ್ತವೆ; 'ಸಾಮದ ಸಾಯುಜ್ಯವನ್ನು' ಎಂದುಮುಂತಾಗಿರುವ (ಗ್ರಂಥವು) ಹಿಂದಿನಂತೆ (ವ್ಯಾಖ್ಯಾನಮಾಡತಕ್ಕದ್ದು).

1. 'ಶ್ರೈಷ್ಠ್ಯಾಯ' ಎಂಬ ಮಾತು ಬಿಟ್ಟುಹೋಗಿದೆಯೋ ಹಿಂದಿನ ಕಂಡಿಕೆಯಲ್ಲಿರುವಂತೆಯೇ ಎಂಬ ಭಾವದಿಂದ ಭಾಷ್ಯಕಾರರೇ ಬಿಟ್ಟಿದಾರೆಹೋ ತಿಳಿಯದು.

## ಪ್ರಾಣವು ಕ್ಷತ್ರವೆಂಬ ಉಪಾಸನೆ

(ಉಪನಿಷತ್ತು)

**ಕ್ಷತ್ರಂ ಪ್ರಾಣೋ ವೈ ಕ್ಷತ್ರಂ ಪ್ರಾಣೋ ಹಿ ವೈ ಕ್ಷತ್ರಂ ತ್ರಾಯತೇ ಹೈನಂ ಪ್ರಾಣಃ ಕ್ಷಣಿತೋಃ ಪ್ರ ಕ್ಷತ್ರಮತ್ರಮಾಪ್ನೋತಿ ಕ್ಷತ್ರಸ್ಯ ಸಾಯುಜ್ಯಗ್ಂ ಸಲೋಕತಾಂ ಜಯತಿ ಯ ಏವಂ ವೇದ ॥೪॥**

೪. ಕ್ಷತ್ರವು. ಪ್ರಾಣವೇ ಕ್ಷತ್ರವು. ಇದನ್ನು ಪ್ರಾಣವು ಗಾಯದಿಂದ ಕಾಪಾಡುತ್ತದೆ. ಯಾವನು ಹೀಗೆಂದು ಅರಿತಿರುವನೋ ಅವನು ಅತ್ರವಾಗಿರುವ ಕ್ಷತ್ರವನ್ನು ಪಡೆದುಕೊಳ್ಳುತ್ತಾನೆ; ಕ್ಷತ್ರದ ಸಾಯುಜ್ಯವನ್ನೋ ಸಲೋಕತೆಯನ್ನೋ ಗೆದ್ದುಕೊಳ್ಳುತ್ತಾನೆ.

## ಪ್ರಾಣವೆಂಬ ಕ್ಷತ್ರದ ಉಪಾಸನೆಯೂ ಅದರ ಫಲವೂ

(ಭಾಷ್ಯ)

೩೮೮. ತಂ ಪ್ರಾಣಂ ಕ್ಷತ್ರಮಿತಿ ಉಪಾಸೀತ । ಪ್ರಾಣೋ ವೈ ಕ್ಷತ್ರಮ್ । ಪ್ರಸಿದ್ಧಮೇತತ್, ಪ್ರಾಣೋ ಹಿ ವೈ ಕ್ಷತ್ರಮ್ । ಕಥಂ ಪ್ರಸಿದ್ಧತಾ ಇತಿ? ಆಹ । ತ್ರಾಯತೇ ಪಾಲಯತಿ ಏನಂ ಪಿಣ್ಡಂ ದೇಹಂ ಪ್ರಾಣಃ, ಕ್ಷಣಿತೋಃ ಶಸ್ತ್ರಾದಿಹಿಂಸಿತಾತ್ ಪುನಃ ಮಾಂಸೇನ ಆಪೂರಯತಿ ಯಸ್ಮಾತ್, ತಸ್ಮಾತ್ ಕ್ಷತತ್ರಾಣಾತ್ ಪ್ರಸಿದ್ಧಂ ಕ್ಷತ್ರತ್ವಂ ಪ್ರಾಣಸ್ಯ । ವಿದ್ವತ್ಫಲಮ್ ಆಹ । ಪ್ರ ಕ್ಷತ್ರಮ್ ಅತ್ರಮ್ । ನ ತ್ರಾಯತೇಽನ್ಯೇನ ಕೇನಚಿತ್ ಇತಿ ಅತ್ರಂ ಕ್ಷತ್ರಂ ಪ್ರಾಣಃ । ತಮ್ ಅತ್ರಂ ಕ್ಷತ್ರಂ ಪ್ರಾಣಂ ಪ್ರಾಪ್ನೋತಿ ಇತ್ಯರ್ಥಃ । ಶಾಖಾನ್ತರೇ ವಾ ಪಾಠಾತ್ ಕ್ಷತ್ರಮಾತ್ರಂ ಪ್ರಾಪ್ನೋತಿ । ಪ್ರಾಣೋ ಭವತಿ ಇತ್ಯರ್ಥಃ । ಕ್ಷತ್ರಸ್ಯ ಸಾಯುಜ್ಯಂ ಸಲೋಕತಾಂ ಜಯತಿ ಯ ಏವಂ ವೇದ ॥

(ಭಾಷ್ಯಾರ್ಥ)

ಆ ಪ್ರಾಣವನ್ನು ಕ್ಷತ್ರನೆಂದು ಉಪಾಸನೆಮಾಡಬೇಕು. ಪ್ರಾಣವೇ ಕ್ಷತ್ರವು. ಪ್ರಾಣವೇ ಕ್ಷತ್ರವಷ್ಟೆ; ಇದು ಪ್ರಸಿದ್ಧವು. ಪ್ರಸಿದ್ಧವೆಂಬುದು ಹೇಗೆ? ಎಂದರೆ (ಶ್ರುತಿ) ಹೇಳುತ್ತಿದೆ. ಈ ಪಿಂಡವನ್ನು ದೇಹವನ್ನು ಪ್ರಾಣವು ಗಾಯದಿಂದ, ಎಂದರೆ ಶಸ್ತ್ರವೇ ಮುಂತಾದದ್ದರಿಂದಾದ ಹಿಂಸೆಯಿಂದ ಕಾಪಾಡುತ್ತದೆ, ರಕ್ಷಿಸುತ್ತದೆ; ಮತ್ತೆ ಮಾಂಸದಿಂದ ತುಂಬುತ್ತದೆಯಷ್ಟೆ, ಆದ್ದರಿಂದ ಕ್ಷತತ್ರಾಣ(ವೆಂಬ ವ್ಯಾಪಾರ)ದಿಂದ ಪ್ರಾಣವು ಕ್ಷತ್ರವೆಂಬುದು ಪ್ರಸಿದ್ಧವಾಗಿರುತ್ತದೆ.

ಉಪಾಸಕನಿಗೆ ಫಲವನ್ನು ಹೇಳುತ್ತದೆ: ಅತ್ರವೆಂಬ ಕ್ಷತ್ರವನ್ನು—ಮತ್ತೊಬ್ಬರಿಂದ ಕಾಪಾಡಲ್ಪಡತಕ್ಕದ್ದಲ್ಲವೆಂಬ ಕಾರಣದಿಂದ ಪ್ರಾಣವು ಅತ್ರ ಕ್ಷತ್ರವು. ಆ ಅತ್ರವೆಂಬ ಕ್ಷತ್ರವನ್ನು—ಪ್ರಾಣವನ್ನು (ಪ್ರ ಆಪ್ನೋತಿ[1]) ಪಡೆದುಕೊಳ್ಳುತ್ತಾನೆ ಎಂದರ್ಥ. ಇನ್ನೊಂದು ಶಾಖೆಯಲ್ಲಿರುವ ಪಾಠವನ್ನು (ಅನುಸರಿಸುವದಾದರೆ) ಕ್ಷತ್ರಮಾತ್ರವನ್ನು[2] ಪಡೆಯುತ್ತಾನೆ, ಎಂದಾದರೂ (ಅರ್ಥಮಾಡಬಹುದು) ಪ್ರಾಣನಾಗುತ್ತಾನೆ ಎಂದರ್ಥ. ಯಾವನು ಹೀಗೆಂದು ತಿಳಿದಿರುವನೋ ಅವನು ಕ್ಷತ್ರದ ಸಾಯುಜ್ಯವನ್ನೋ ಸಾಲೋಕ್ಯವನ್ನೋ ಗೆದ್ದುಕೊಳ್ಳುತ್ತಾನೆ.

---

1. ಹಿಂದಿರುವ ಪ್ರ ಎಂಬ ಉಪಸರ್ಗವನ್ನು ಆಪ್ನೋತಿ ಎಂಬುದಕ್ಕೆ ಅನ್ವಯಿಸಿಕೊಳ್ಳಬೇಕೆಂದು ಭಾಷ್ಯದಲ್ಲಿ ಸೂಚಿಸಿರುತ್ತಾರೆ; ಪ್ರಾಣಸಾಯುಜ್ಯವನ್ನು ಪಡೆದುಕೊಳ್ಳುತ್ತಾನೆ ಎಂದರ್ಥ.

2. ಕ್ಷತ್ರಮಾತ್ರಮ್ ಎಂದೇ ಮಾಧ್ಯಂದಿನಪಾಠ; ಸಂಪೂರ್ಣವಾಗಿ ಪ್ರಾಣವನ್ನು ಪಡೆದುಕೊಳ್ಳುತ್ತಾನೆ ಎಂದು ಸ್ಪಷ್ಟವಾಗಿ ಅರ್ಥವಾಗುವದರಿಂದ ಅಲ್ಲಿ ಉಪಸರ್ಗವು ದ್ಯೋತಕಮಾತ್ರವಾಗುವದು.

# ಹದಿಮೂರನೆಯ ಬ್ರಾಹ್ಮಣದ ಸಾರ

೧. ಪ್ರಾಣವನ್ನು ಉಕ್ಥವೆಂದು ಉಪಾಸನೆಮಾಡಬೇಕು. ಪ್ರಾಣವೇ ಉಕ್ಥವು. ಏಕೆಂದರೆ ಉಕ್ಥವೆಂಬ ಶಸ್ತ್ರವಿಶೇಷದಂತೆ ಪ್ರಾಣವು ಇಂದ್ರಿಯಗಳಲ್ಲೆಲ್ಲ ಶ್ರೇಷ್ಠವಾಗಿರುತ್ತದೆ. ಪ್ರಾಣದಿಂದಲೇ ಪ್ರತಿಯೊಬ್ಬನೂ ಎದ್ದುನಿಲ್ಲುತ್ತಾನೆ (ಉತ್ತಿಷ್ಠತಿ) ; ಆದ್ದರಿಂದ ಇದು ಉಕ್ಥವು. ಹೀಗೆಂದು ಉಪಾಸನೆಮಾಡಿದರೆ ಇಹದಲ್ಲಿ ಉಕ್ಥವನ್ನು ಬಲ್ಲ ವೀರಪುತ್ರನು ಜನಿಸುವನು, ಪರದಲ್ಲಿ ಉಪಾಸನೆಯ ತಾರತಮ್ಯದಿಂದ ಉಕ್ಥದ ಸಾಯುಜ್ಯವೋ ಸಾಲೋಕ್ಯವೋ ದೊರೆಯುವದು.

೨. ಹೀಗೆಯೇ ಪ್ರಾಣವನ್ನು ಯಜುಸ್ಸು ಎಂದು ಉಪಾಸನೆಮಾಡಬೇಕು. ಪ್ರಾಣವೇ ಯಜುಸ್ಸು. ಏಕೆಂದರೆ ಸರ್ವಭೂತಗಳೂ ಒಂದಕ್ಕೊಂದು ಯುಕ್ತವಾಗುವದಕ್ಕೆ ಪ್ರಾಣವು ಬೇಕು. ಹೀಗೆಂದು ಉಪಾಸನೆಮಾಡಿದರೆ ಇಹದಲ್ಲಿ ಸರ್ವಭೂತಗಳೂ ಇವನಿಗೆ ಶ್ರೇಷ್ಠತ್ವವನ್ನು ಕೊಡುವದಕ್ಕೆ ಯುಕ್ತವಾಗುವವು, ಪರದಲ್ಲಿ ಯಜೂರೂಪನಾದ ಪ್ರಾಣನ ಸಾಯುಜ್ಯವೋ ಸಾಲೋಕ್ಯವೋ ದೊರೆಯುವದು.

೩. ಹೀಗೆಯೇ ಪ್ರಾಣವನ್ನು ಸಾಮವೆಂದು ಉಪಾಸನೆಮಾಡಬೇಕು. ಪ್ರಾಣವೇ ಸಾಮವು ; ಏಕೆಂದರೆ ಅದರಲ್ಲಿ ಎಲ್ಲಾ ಭೂತಗಳೂ ಸಂಗತವಾಗುತ್ತವೆ ಯಾವನು ಹೀಗೆಂದು ಉಪಾಸನೆಮಾಡುವನೋ ಅವನಿಗೆ ಇಹದಲ್ಲಿ ಎಲ್ಲಾ ಭೂತಗಳೂ ಸಂಗತವಾಗಿ ಶ್ರೈಷ್ಠ್ಯವನ್ನು ಕೊಡುವವು ; ಪರದಲ್ಲಿ ಸಾಮರೂಪಪ್ರಾಣನ ಸಾಯುಜ್ಯವೋ ಸಾಲೋಕ್ಯವೋ ದೊರೆಯುವದು.

೪. ಪ್ರಾಣವು ಕ್ಷತ್ರವೆಂದು ಉಪಾಸನೆಮಾಡಬೇಕು. ಶರೀರವನ್ನು ಕ್ಷತದಿಂದ ತ್ರಾಣ (ಕಾಪಾಡುವದ)ರಿಂದ ಪ್ರಾಣವು ಕ್ಷತ್ರವು. ಹೀಗೆಂದು ಉಪಾಸನೆಮಾಡಿದರೆ ಇಲ್ಲಿ ಪ್ರಾಣವನ್ನೇ ಪಡೆದುಕೊಳ್ಳುವನು, ಪರದಲ್ಲಿ ಕ್ಷತ್ರರೂಪನಾದ ಪ್ರಾಣನ ಸಾಯುಜ್ಯವೋ ಸಾಲೋಕ್ಯವೋ ದೊರೆಯುವದು.

# ಐದನೆಯ ಅಧ್ಯಾಯ- ಹದಿನಾಲ್ಕನೆಯ ಬ್ರಾಹ್ಮಣ

## ( ಗಾಯತ್ರ್ಯುಪಹಿತ ಬ್ರಹ್ಮೋಪಾಸನೆ )

## ಗಾಯತ್ರಿಯ ಪ್ರಥಮ ಪಾದದ ಉಪಾಸನೆ

(ಉಪನಿಷತ್ತು)

**ಭೂಮಿರನ್ತರಿಕ್ಷಂ ದ್ಯೌರಿತ್ಯಷ್ಟಾವಕ್ಷರಾಣ್ಯಷ್ಟಾಕ್ಷರಗ್ಂ ಹ ವಾ ಏಕಂ ಗಾಯತ್ರ್ಯೈ ಪದಮೇತದು ಹೈವಾಸ್ಯಾ ಏತತ್ ಸ ಯಾವ ದೇಷು ತ್ರಿಷು ಲೋಕೇಷು ತಾವದ್ಧ ಜಯತಿ ಯೋಽಸ್ಯಾ ಏತ ದೇವಂ ಪದಂ ವೇದ ॥ ೧ ॥**

೧. ಭೂಮಿ, ಅಂತರಿಕ್ಷ, ದ್ಯೌಃ- ಎಂಬಿವು ಎಂಟು ಅಕ್ಷರಗಳು. ಗಾಯತ್ರಿಯ ಒಂದು ಪಾದವೂ ಎಂಟಕ್ಷರದ್ದು. (ಗಾಯತ್ರಿಯ) ಇದೇ (ಪಾದವು) ಇದು. ಯಾವನು ಇದರ ಪಾದವನ್ನು ಹೀಗೆಂದು ಅರಿತಿರುವನೋ ಅವನು ಈ ಮೂರು ಲೋಕಗಳಲ್ಲಿ ಎಷ್ಟಿರುವದೋ ಅಷ್ಟನ್ನೂ ಗೆದ್ದುಕೊಳ್ಳುವನು.

## ಗಾಯತ್ರಿಯ ಹೆಚ್ಚುಗಾರಿಕೆ

(ಭಾಷ್ಯ)

೩೪೯. ಬ್ರಹ್ಮಣಃ ಹೃದಯಾದ್ಯನೇಕೋಪಾಧಿವಿಶಿಷ್ಟಸ್ಯ ಉಪಾಸನಮ್ ಉಕ್ತಮ್ । ಅಥ ಇದಾನೀಂ ಗಾಯತ್ರ್ಯುಪಾಧಿವಿಶಿಷ್ಟಸ್ಯ ಉಪಾಸನಂ ವಕ್ತವ್ಯಮ್ ಇತಿ ಆರಭ್ಯತೇ । ಸರ್ವಚ್ಛನ್ದಸಾಂ ಹಿ ಗಾಯತ್ರೀಚ್ಛನ್ದಃ ಪ್ರಧಾನಭೂತಮ್ । ತತ್ಪ್ರಯೋಕ್ತೃಗಯತ್ರಾಣಾತ್ ಗಾಯತ್ರೀ ಇತಿ ವಕ್ಷ್ಯತಿ । ನ ಚ ಅನ್ಯೇಷಾಂ ಛನ್ದಸಾಂ ಪ್ರಯೋಕ್ತೃಪ್ರಾಣತ್ರಾಣಸಾಮರ್ಥ್ಯಮ್ । ಪ್ರಾಣಾತ್ಮಭೂತಾ ಚ ಸಾ । ಸರ್ವಚ್ಛನ್ದಸಾಂ ಚ ಆತ್ಮಾ ಪ್ರಾಣಃ । ಪ್ರಾಣಶ್ಚ ಕ್ಷತತ್ರಾಣಾತ್ ಕ್ಷತ್ರಮ್ ಇತ್ಯುಕ್ತಮ್ । ಪ್ರಾಣಶ್ಚ ಗಾಯತ್ರೀ । ತಸ್ಮಾತ್ ತದುಪಾಸನಮೇವ ವಿಧಿತ್ಸ್ಯತೇ । ದ್ವಿಜೋತ್ತಮಜನ್ಮಹೇತುತ್ವಾಚ್ಚ । "ಗಾಯತ್ರ್ಯಾ ಬ್ರಾಹ್ಮಣಮಸೃಜತ ತ್ರಿಷ್ಟುಭಾ ರಾಜನ್ಯಂ ಜಗತ್ಯಾ ವೈಶ್ಯಮ್"

( ? ) ಇತಿ ದ್ವಿಜೋತ್ತಮಸ್ಯ ದ್ವಿತೀಯಂ ಜನ್ಮ ಗಾಯತ್ರೀನಿಮಿತ್ತಮ್ । ತಸ್ಮಾತ್ ಪ್ರಧಾನಾ ಗಾಯತ್ರೀ । "ಬ್ರಾಹ್ಮಣಾ ವ್ಯುತ್ಥಾಯ" (೩-೫-೧) "ಬ್ರಾಹ್ಮಣಾ ಅಭಿವದನ್ತಿ" (೩-೮-೮), "ಸ ಬ್ರಾಹ್ಮಣಃ" (೩-೮-೧೦), "ವಿಪಾಪೋ ವಿರಜೋಽವಿಚಿಕಿತ್ಸೋ ಬ್ರಾಹ್ಮಣೋ ಭವತಿ" (೪-೪-೨೩) ಇತ್ಯುತ್ತಮಪುರುಷಾರ್ಥಸಂಬನ್ಧಂ ಬ್ರಾಹ್ಮಣಸ್ಯ ದರ್ಶಯತಿ । ತಚ್ಚ ಬ್ರಾಹ್ಮಣತ್ವಂ ಗಾಯತ್ರೀಜನ್ಮಮೂಲಮ್ । ಅತೋ ವಕ್ತವ್ಯಂ ಗಾಯತ್ರ್ಯಾಃ ಸತತ್ತ್ವಮ್ । ಗಾಯತ್ರ್ಯಾ ಹಿ ಯಃ ಸೃಷ್ಟೋ ದ್ವಿಜೋತ್ತಮಃ ನಿರಙ್ಕುಶ ಏವ ಉತ್ತಮಪುರುಷಾರ್ಥಸಾಧನೇ ಅಧಿಕ್ರಿಯತೇ । ಅತಃ ತನ್ಮೂಲಃ ಪರಮಪುರುಷಾರ್ಥಸಂಬನ್ಧಃ ತಸ್ಮಾತ್ ತದುಪಾಸನವಿಧಾನಾಯ ಆಹ ॥

(ಭಾಷ್ಯಾರ್ಥ)

ಹೃದಯವೇ ಮುಂತಾದ ಅನೇಕ ಉಪಾಧಿಗಳಿಂದೊಡಗೂಡಿದ ಬ್ರಹ್ಮದ ಉಪಾಸನೆಯನ್ನು (ಹಿಂದೆ) ಹೇಳಿದೆ. ಇನ್ನು ಈಗ ಗಾಯತ್ರಿ ಎಂಬ ಉಪಾಧಿಯಿಂದೊಡಗೂಡಿದ ಉಪಾಸನೆಯನ್ನು ಹೇಳಬೇಕೆಂದು (ಇದನ್ನು) ಆರಂಭಿಸಿದೆ.

ಛಂದಸ್ಸುಗಳಲ್ಲೆಲ್ಲ ಗಾಯತ್ರೀಚ್ಛಂದಸ್ಸು ಮುಖ್ಯವಾದದ್ದು. ಅದನ್ನು ಪ್ರಯೋಗಿಸುವವರ ಗಯವನ್ನು ತ್ರಾಣನಮಾಡುವದರಿಂದ[1] ಗಾಯತ್ರಿ ಎನ್ನಿಸಿದೆ ಎಂದು ಮುಂದೆ (೫-೧೪-೪) ಹೇಳಲಾಗುತ್ತದೆ. ಮಿಕ್ಕ ಛಂದಸ್ಸುಗಳಿಗೆ ಪ್ರಯೋಕ್ತೃಗಳ ಪ್ರಾಣವನ್ನು ಕಾಪಾಡುವ ಸಾಮರ್ಥ್ಯವಿರುವದಿಲ್ಲ; ಏಕೆಂದರೆ ಅದು ಪ್ರಾಣಸ್ವರೂಪವಾಗಿರುತ್ತದೆ. ಎಲ್ಲಾ ಛಂದಸ್ಸುಗಳಿಗೂ ಪ್ರಾಣವು ಆತ್ಮನು. ಪ್ರಾಣವು ಕ್ಷತವನ್ನು ತ್ರಾಣನಮಾಡುವದರಿಂದ ಕ್ಷತ್ರವು ಎಂದು ಹಿಂದೆ ಹೇಳಿರುತ್ತದೆಯಷ್ಟೆ; ಪ್ರಾಣವೇ ಗಾಯತ್ರಿ. ಆದ್ದರಿಂದ ಅದರ ಉಪಾಸನೆಯನ್ನೇ ಮುಂದೆ ವಿಧಿಸಲಾಗುತ್ತದೆ.

ದ್ವಿಜೋತ್ತಮನ ಜನ್ಮಕ್ಕೆ ಕಾರಣವಾಗಿರುವದರಿಂದಲೂ (ಇದನ್ನು ಹೇಳಬೇಕು. ಇದರ ವಿವರ): "ಗಾಯತ್ರಿಯಿಂದ ಬ್ರಾಹ್ಮಣನನ್ನು ಸೃಷ್ಟಿಸಿದನು, ತ್ರಿಷ್ಟುಪ್ಪಿನಿಂದ ಕ್ಷತ್ರಿಯನನ್ನು, ಜಗತಿಯಿಂದ ವೈಶ್ಯನನ್ನು (ಸೃಷ್ಟಿಸಿದನು)" ( ? ) ಎಂದು ದ್ವಿಜೋತ್ತಮನ ಎರಡನೆಯ ಜನ್ಮವು ಗಾಯತ್ರೀನಿಮಿತ್ತದಿಂದಾದದ್ದು. ಆದ್ದರಿಂದ ಗಾಯತ್ರಿಯು ಪ್ರಧಾನವಾದದ್ದು.

"ಬ್ರಾಹ್ಮಣರು (ಪುತ್ರೈಷಣೆಯಿಂದಲೂ ವಿತ್ತೈಷಣೆಯಿಂದಲೂ ಲೋಕೈಷಣೆಯಿಂದಲೂ) ಬಿಟ್ಟೆದ್ದು" (೩-೫-೧), "ಬ್ರಾಹ್ಮಣರು (ಅದನ್ನು ಅಕ್ಷರವು)

---

1. ಕಾಪಾಡುವದರಿಂದ.

ಎಂದು ಹೇಳುತ್ತಾರೆ" (೩-೮-೮), "ಯಾವನು ಈ ಅಕ್ಷರವನ್ನು ಅರಿತು ಈ ಲೋಕದಿಂದ ತೆರಳುವನೋ ಅವನೇ ಬ್ರಾಹ್ಮಣನು" (೩-೮-೧೦), "(ಇವನು) ವಿಪಾಪನೂ ವಿರಜನೂ ಅವಿಚಿಕಿತ್ಸನೂ ಆದ ಬ್ರಾಹ್ಮಣನಾಗಿರುತ್ತಾನೆ" (೪-೪-೨೩) ಎಂದು ಉತ್ತಮಪುರುಷಾರ್ಥದ ಸಂಬಂಧವನ್ನು ಬ್ರಾಹ್ಮಣನಿಗೆ[1] (ಶ್ರುತಿಯು) ತಿಳಿಸುತ್ತದೆ. ಆ ಬ್ರಾಹ್ಮಣತ್ವವು ಗಾಯತ್ರೀಜನ್ಮನಿಮಿತ್ತವಾದದ್ದು. ಆದ್ದರಿಂದ ಗಾಯತ್ರಿಯ ತತ್ತ್ವವನ್ನು ಹೇಳಬೇಕು. ಗಾಯತ್ರಿಯಿಂದ ಸೃಷ್ಟನಾದ ದ್ವಿಜೋತ್ತಮನಿದ್ದಾನಲ್ಲ, (ಅವನು) ಯಾವ ಅಡ್ಡಿಯೂ ಇಲ್ಲದೆ ಉತ್ತಮಪುರುಷಾರ್ಥಸಾಧನಕ್ಕೆ ಅಧಿಕಾರಿಯಾಗಿರುತ್ತಾನೆ. ಆದ್ದರಿಂದ (ಅವನಿಗೆ) ಪರಮಪುರುಷಾರ್ಥದ ಸಂಬಂಧವು ಅದರ ಮೂಲಕವಾದದ್ದು. ಆದ್ದರಿಂದ ಅದರ ಉಪಾಸನೆಯನ್ನು ವಿಧಿಸುವದಕ್ಕಾಗಿ (ಶ್ರುತಿ ಹೀಗೆಂದು) ಹೇಳುತ್ತಿದೆ :

## ಗಾಯತ್ರಿಯ ಪ್ರಥಮಪಾದವು ತ್ರಿಲೋಕಾತ್ಮಕ

(ಭಾಷ್ಯ)

೩೯೦. ಭೂಮಿಃ, ಅನ್ತರಿಕ್ಷಮ್, ದ್ಯೌಃ – ಇತ್ಯೇತಾನಿ ಅಷ್ಟೌ ಅಕ್ಷರಾಣಿ । ಅಷ್ಟಾಕ್ಷರಮ್ । ಅಷ್ಟೌ ಅಕ್ಷರಾಣಿ ಯಸ್ಯ ತದಿದಮ್ ಅಷ್ಟಾಕ್ಷರಮ್ । ಹ ವೈ ಪ್ರಸಿದ್ಧಾವದ್ಯೋತಕೌ । ಏಕಂ ಪ್ರಥಮಂ ಗಾಯತ್ರ್ಯೈ–ಗಾಯತ್ರ್ಯಾಃ ಪದಮ್ । ಯಕಾರೇಣೈವ ಅಷ್ಟತ್ವಪೂರಣಮ್ । ಏತತ್ ಉ ಹ ಏವ ಏತದೇವ ಅಸ್ಯಾ ಗಾಯತ್ರ್ಯಾಃ ಪದಂ ಪಾದಃ ಪ್ರಥಮಃ ಭೂಮ್ಯಾದಿಲಕ್ಷಣಃ ತ್ರೈಲೋಕ್ಯಾತ್ಮಾ । ಅಷ್ಟಾಕ್ಷರತ್ವಸಾಮಾನ್ಯಾತ್ । ಏವಮ್ ಏತತ್ ತ್ರೈಲೋಕ್ಯಾತ್ಮಕಮ್ ಗಾಯತ್ರ್ಯಾಃ ಪ್ರಥಮಂ ಪದಂ ಯೋ ವೇದ ತಸ್ಯ ಏತತ್ ಫಲಮ್ । ಸ ವಿದ್ವಾನ್ ಯಾವತ್ ಕಿಂಚಿತ್ ಏಷು ತ್ರಿಷು ಲೋಕೇಷು ಜೇತವ್ಯಮ್ ತಾವತ್ ಸರ್ವಂ ಹ ಜಯತಿ ಯಃ ಅಸ್ಯಾಃ ಏತತ್ ಏವಂ ಪದಂ ವೇದ ॥

(ಭಾಷ್ಯಾರ್ಥ)

ಭೂಮಿ, ಅಂತರಿಕ್ಷ, ದ್ಯೌ—ಎಂಬಿವು ಎಂಟು ಅಕ್ಷರಗಳು. ಎಂಟಕ್ಷರದ್ದು. ಎಂಟು ಅಕ್ಷರಗಳು ಯಾವದಕ್ಕಿದೆಯೋ ಆ ಈ (ಪಾದವು) ಎಂಟಕ್ಷರದ್ದು. ಹ ವೈ (ಎಂಬಿವು) ಪ್ರಸಿದ್ಧಾರ್ಥವನ್ನು ತಿಳಿಸುವವು. ಒಂದು ಮೊದಲನೆಯ (ಗಾಯತ್ರ್ಯೈ=ಗಾಯತ್ರ್ಯಾಃ) ಪಾದವು. (ಇಲ್ಲಿ) ಯಕಾರದಿಂದಲೇ ಎಂಟನ್ನು ಪೂರ್ಣಮಾಡಿಕೊಳ್ಳಬೇಕು.[2] (ಏತದ್ ಉ ಹ ಏವ= ಏತದೇವ)

---

1. ಬ್ರಹ್ಮಜ್ಞಾನಿಗೆ.
2. 'ವರೇಣಿಯಮ್' ಎಂದು ಉಚ್ಚರಿಸಿ ಎಂಟನೆಯ ಅಕ್ಷರವನ್ನು ಎಣಿಸಬೇಕು.

ಇದೇ ಈ ಗಾಯತ್ರಿಯ ಪದವು ಮೊದಲನೆಯ ಪಾದವು ಭೂವ್ಯಾದಿಲಕ್ಷಣ ವಾಗಿರುವದು, ತ್ರೈಲೋಕ್ಯಸ್ವರೂಪವಾಗಿರುತ್ತದೆ ; ಏಕೆಂದರೆ ಎಂಟು ಅಕ್ಷರ ಗಳಿರುವದು (ಲೋಕಗಳಿಗೂ ಇದಕ್ಕೂ) ಸಮಾನವಾಗಿರುತ್ತದೆ.

ಹೀಗೆ ಈ ತ್ರೈಲೋಕ್ಯಾತ್ಮಕವಾದ ಗಾಯತ್ರಿಯ ಪ್ರಥಮಪಾದವನ್ನು ಯಾವನು ಉಪಾಸನೆಮಾಡುವನೋ ಅವನಿಗೆ ಇದು ಫಲವು ; ಯಾವನು ಇದರ ಈ ಪದವನ್ನು ಹೀಗೆಂದು ಅರಿತಿರುವನೋ ಆ ಜ್ಞಾನಿಯು ಈ ಮೂರು ಲೋಕಗಳಲ್ಲಿ ಏನೇನು ಗೆದ್ದುಕೊಳ್ಳಬಹುದಾದದ್ದಿರುವದೋ ಅಷ್ಟನ್ನು ಎಲ್ಲ ವನ್ನೂ ಗೆದ್ದುಕೊಳ್ಳುತ್ತಾನೆ.

## ಗಾಯತ್ರಿಯ ದ್ವಿತೀಯಪಾದದ ಉಪಾಸನೆ

(ಉಪನಿಷತ್ತು)

**ಋಚೋ ಯಜೂಗ್ಂಷಿ ಸಾಮಾನೀತ್ಯಷ್ಟಾವಕ್ಷರಾಣ್ಯಷ್ಟಾ ಕ್ಷರಗ್ಂ ಹ ವಾ ಏಕಂ ಗಾಯತ್ರ್ಯೈ ಪದಮೇತದು ಹೈವಾಸ್ಯಾ ಏತತ್ ಸ ಯಾವತೀಯಂ ತ್ರಯೀ ವಿದ್ಯಾ ತಾವದ್ಧ ಜಯತಿ ಯೋಽಸ್ಯಾ ಏತದೇವಂ ಪದಂ ವೇದ ॥ ೨ ॥**

೨. ಋಕ್ಕುಗಳು, ಯಜುಸ್ಸುಗಳು, ಸಾಮಗಳು- ಎಂಬಿವು ಎಂಟು ಅಕ್ಷರಗಳು. ಗಾಯತ್ರಿಯ ಒಂದು ಪಾದವೂ ಎಂಟಕ್ಷರದ್ದು. ಈ (ಗಾಯತ್ರಿಯ) ಇದೇ ಪಾದವು ಇದು. ಯಾವನು ಇದರ ಪಾದ ವನ್ನು ಹೀಗೆಂದು ಅರಿತಿರುವನೋ ಅವನು ಈ ತ್ರಯೀವಿದ್ಯೆಯು ಎಷ್ಟೋ ಅಷ್ಟನ್ನು ಗೆದ್ದುಕೊಳ್ಳುವನು.

## ಗಾಯತ್ರಿಯ ದ್ವಿತೀಯಪಾದವು ತ್ರಯೀವಿದ್ಯಾತ್ಮಕ

(ಭಾಷ್ಯ)

೩೯೧. ತಥಾ ಋಚಃ ಯಜೂಂಷಿ ಸಾಮಾನಿ ಇತಿ ತ್ರಯೀವಿದ್ಯಾ ನಾಮಾಕ್ಷರಾಣಿ ಏತಾನ್ಯಪಿ ಅಷ್ಟಾವೇವ । ತಥೈವ ಅಷ್ಟಾಕ್ಷರಂ ಹ ವೈ ಏಕಂ ಗಾಯತ್ರ್ಯೈ ಪದಂ ದ್ವಿತೀಯಮ್ । ಏತತ್ ಉ ಹ ಏವ ಅಸ್ಯಾ ಏತತ್ ಋಗ್ಯಜುಃಸಾಮಲಕ್ಷಣಮ್ ಅಷ್ಟಾಕ್ಷರತ್ವಸಾಮಾನ್ಯಾದೇವ । ಸಃ ಯಾವತೀ ಇಯಂ ತ್ರಯೀ ವಿದ್ಯಾ ತ್ರಯ್ಯಾ ವಿದ್ಯಯಾ ಯಾವತ್ ಫಲಜಾತಮ್ ಆಪ್ಯತೇ ತಾವತ್ ಹ ಜಯತಿ ಯಃ ಅಸ್ಯಾ ಏತತ್ ಗಾಯತ್ರ್ಯಾಃ ತ್ರೈವಿದ್ಯಲಕ್ಷಣಂ ಪದಂ (ಏವಂ)[1] ವೇದ ॥

1. ಈ ಮಾತು ಭಾಷ್ಯದಲ್ಲಿದ್ದು ಲೇಖಕರ ಪ್ರಮಾದದಿಂದ ಬಿಟ್ಟುಹೋಗಿರಬೇಕು.

(ಭಾಷ್ಯಾರ್ಥ)

ಹೀಗೆಯೇ ಋಕ್ಕು(ಗಳು), ಯಜುಸ್ಸುಗಳು, ಸಾಮಗಳು ( ಸಾಮಾನಿ) ಎಂಬೀ ತ್ರಯೀವಿದ್ಯೆಯ ನಾಮಾಕ್ಷರಗಳು ; ಇವೂ ಎಂಟೇ. ಹೀಗೆಯೇ ಗಾಯತ್ರಿಯ ಒಂದು ಪದವೂ ಅವರ ಎರಡನೆಯ (ಪಾದವೂ) ಎಂಟಕ್ಷರದ್ದು. ಇದೇ ಈ (ಗಾಯತ್ರೀಪದವು) ಋಗ್ಯಜುಃಸಾಮರೂಪವಾದದ್ದು; ಎಂಟಕ್ಷರವುಳ್ಳದ್ದೆಂಬ ಹೋಲಿಕೆಯಿಂದಲೇ (ಹೀಗೆಂದು ಉಪಾಸನೆಮಾಡಬೇಕು).

ಯಾವನು ಈ ಗಾಯತ್ರಿಯ ಈ ತ್ರೈವಿದ್ಯಸ್ವರೂಪವಾದ ಪಾದವನ್ನು ಹೀಗೆಂದು ಅರಿತಿರುವನೋ ಅವನು ಈ ತ್ರಯೀವಿದ್ಯೆಯು ಎಷ್ಟೋ ತ್ರಯೀವಿದ್ಯೆಯಿಂದ ಎಷ್ಟು ಫಲವನ್ನು ಗೆದ್ದುಕೊಳ್ಳಬಹುದೋ ಅಷ್ಟನ್ನು ಗೆದ್ದುಕೊಳ್ಳುತ್ತಾನೆ.

## ಗಾಯತ್ರಿಯ
## ಮೂರನೆಯ ನಾಲ್ಕನೆಯ ಪಾದಗಳ ಉಪಾಸನೆ

(ಉಪನಿಷತ್ತು)

**ಪ್ರಾಣೋಽಪಾನೋ ವ್ಯಾನ ಇತ್ಯಷ್ಟಾವಕ್ಷರಾಣ್ಯಷ್ಟಾಕ್ಷರಗ್ಂ ಹ ವಾ ಏಕಂ ಗಾಯತ್ರ್ಯೈ ಪದಮೇತದು ಹೈವಾಸ್ಯಾ ಏತತ್ ಸ ಯಾವದಿದಂ ಪ್ರಾಣಿ ತಾವದ್ಧ ಜಯತಿ ಯೋಽಸ್ಯಾ ಏತದೇವಂ ಪದಂ ವೇದಾಥಾಸ್ಯಾ ಏತದೇವ ತುರೀಯಂ ದರ್ಶತಂ ಪದಂ ಪರೋರಜಾ ಯ ಏಷ ತಪತಿ ಯದ್ವೈ ಚತುರ್ಥಂ ತತ್ತುರೀಯಂ ದರ್ಶತಂ ಪದಮಿತಿ ದದೃಶ ಇವ ಹ್ಯೇಷ ಪರೋರಜಾ ಇತಿ ಸರ್ವಮು ಹ್ಯೇವೈಷ ರಜ ಉಪರ್ಯುಪರಿ ತಪತ್ಯೇವಗ್ಂ ಹೈವ ಶ್ರಿಯಾ ಯಶಸಾ ತಪತಿ ಯೋಽಸ್ಯಾ ಏತದೇವಂ ಪದಂ ವೇದ || ೩ ||**

೩. ಪ್ರಾಣ, ಅಪಾನ, ವ್ಯಾನ– ಎಂಬಿವು ಎಂಟಕ್ಷರಗಳು. ಗಾಯತ್ರಿಯು ಒಂದು ಪಾದವೂ ಎಂಟಕ್ಷರದ್ದು. ಈ (ಗಾಯತ್ರಿಯ) ಇದೇ ಪಾದವು ಇದು. ಯಾವನು ಇದರ ಪಾದವನ್ನು ಹೀಗೆಂದು ಅರಿತಿರುವನೋ ಈ ಪ್ರಾಣಿ(ಜಾತ)ವು ಎಷ್ಟೋ ಅಷ್ಟನ್ನು ಗೆದ್ದುಕೊಳ್ಳುವನು. ಇನ್ನು ಇಗೋ, ಈ ತಪಿಸುತ್ತಿದಾನಲ್ಲ, ಇದೇ ಈ (ಗಾಯತ್ರಿಗೆ) ತುರೀಯದರ್ಶತ ಪಾದವು, ಪರೋರಜಸ್ಸು. ಚತುರ್ಥವೆನ್ನುವರಲ್ಲ, ಅದೇ ತುರೀಯವು ; ದರ್ಶತಪದವು ಎಂದರೆ ಇವನು

ಕಾಣುವವನಂತೆ ಇರುವನಷ್ಟೆ (ಅದು). ಪರೋರಜಸ್ಸು ಎಂದರೆ ಇವನು ಸರ್ವರಜಸ್ಸನ್ನೂ ಮೇಲೆಮೇಲೆ (ಇದ್ದುಕೊಂಡು) ತಪಿಸುತ್ತಾನೆ. ಯಾವನು ಇದರ ಈ ಪಾದವನ್ನು ಹೀಗೆಂದು ಅರಿತಿರುವನೋ ಅವನು ಹೀಗೆಯೇ ಶ್ರೀಯಿಂದಲೂ ಯಶಸ್ಸಿನಿಂದಲೂ ತಪಿಸುತ್ತಾನೆ.

## ಗಾಯತ್ರಿಯ ಮೂರನೆಯ ಪದವು ಪ್ರಾಣಾದ್ಯಾತ್ಮಕ

(ಭಾಷ್ಯ)

೩೯೩. ತಥಾ ಪ್ರಾಣಃ ಅಪಾನಃ ವ್ಯಾನಃ ಏತಾನ್ಯಪಿ ಪ್ರಾಣಾದ್ಯಭಿಧಾನಾಕ್ಷರಾಣಿ ಅಷ್ಟೌ । ತಚ್ಚ ಗಾಯತ್ರ್ಯಾಃ ತೃತೀಯಂ ಪದಮ್ । ಯಾವದಿದಂ ಪ್ರಾಣಿಜಾತಮ್ ತಾವತ್ ಹ ಜಯತಿ ಯೋಽಸ್ಯಾಃ ಏತದೇವಂ ಗಾಯತ್ರ್ಯಾಃ ತೃತೀಯಂ ಪದಂ ವೇದ ॥

(ಭಾಷ್ಯಾರ್ಥ)

ಹೀಗೆಯೇ ಪ್ರಾಣ, ಅಪಾನ, ವ್ಯಾನ– ಈ ಪ್ರಾಣಾದಿಗಳ ಹೆಸರಿನ ಅಕ್ಷರಗಳೂ ಎಂಟು. ಅದೇ ಗಾಯತ್ರಿಯ ಮೂರನೆಯ ಪದವು. ಯಾವನು ಈ ಗಾಯತ್ರಿಯ ಮೂರನೆಯ ಪಾದವನ್ನು ಹೀಗೆಂದು ಅರಿತಿರುವನೋ ಈ ಪ್ರಾಣಿಜಾತವು ಎಷ್ಟೋ, ಅಷ್ಟನ್ನೂ ಗೆದ್ದುಕೊಳ್ಳುತ್ತಾನೆ.[1]

## ಗಾಯತ್ರಿಯ ನಾಲ್ಕನೆಯ ಪಾದವು ಆದಿತ್ಯಪುರುಷ

(ಭಾಷ್ಯ)

೩೯೪. ಅಥ ಅನನ್ತರಂ ಗಾಯತ್ರ್ಯಾಃ ತ್ರಿಪದಾಯಾಃ ಶಬ್ದಾತ್ಮಿಕಾಯಾಃ ತುರೀಯಂ ಪದಮ್ ಉಚ್ಯತೇ ಅಭಿಧೇಯಭೂತಮ್ । ಅಸ್ಯಾಃ ಪ್ರಕೃತಾಯಾಃ ಗಾಯತ್ರ್ಯಾಃ ಏತದೇವ ವಕ್ಷ್ಯಮಾಣಂ ತುರೀಯಂ ದರ್ಶತಂ ಪದಂ ಪರೋರಜಾ ಯ ಏಷ ತಪತಿ । ತುರೀಯಮ್ ಇತ್ಯಾದಿವಾಕ್ಯಪದಾರ್ಥಂ ಸ್ವಯಮೇವ ವ್ಯಾಚಷ್ಟೇ ಶ್ರುತಿಃ । ಯಚ್ಚ ಚತುರ್ಥಂ ಪ್ರಸಿದ್ಧಂ ಲೋಕೇ ತದಿಹ ತುರೀಯಶಬ್ದೇನ ಅಭಿಧೀಯತೇ, ದರ್ಶತಂ ಪದಮ್ ಇತ್ಯಸ್ಯ ಕೋಽರ್ಥಃ ಇತಿ ? ಉಚ್ಯತೇ । ದದೃಶೇ ಇವ ದೃಶ್ಯತೇ ಇವ ಹಿ ಏಷಃ ಮಣ್ಡಲಾನ್ತರ್ಗತಃ

---

1. ಭೂವ್ಯಾದಿಗಳು ರೂಪವನ್ನೂ ಋಗಾದಿಗಳು ನಾಮವನ್ನೂ ಪ್ರಾಣಾದಿಗಳು ಕರ್ಮವನ್ನೂ ಹೇಳುತ್ತವೆ ಎಂದು ವಾರ್ತಿಕ ೧೭, ೧೮.

ಪುರುಷಃ । ಅತಃ ದರ್ಶತಂ ಪದಮ್ ಉಚ್ಯತೇ । ಪರೋರಜಾಃ ಇತ್ಯಸ್ಯ ಪದಸ್ಯ ಕೋಽರ್ಥಃ ಇತಿ? ಉಚ್ಯತೇ । ಸರ್ವಂ ಸಮಸ್ತಮ್ ಉ ಹಿ ಏವ ಏಷಃ ಮಣ್ಡಲಸ್ಥಃ ಪುರುಷಃ ರಜಃ ರಜೋಜಾತಂ ಸಮಸ್ತಂ ಲೋಕಮ್ ಇತ್ಯರ್ಥಃ । ಉಪರಿ ಉಪರಿ ಆಧಿಪತ್ಯಭಾವೇನ ಸರ್ವಂ ಲೋಕಂ ರಜೋಜಾತಂ ತಪತಿ । ಉಪರ್ಯುಪರಿ ಇತಿ ವೀಪ್ಸಾ ಸರ್ವಲೋಕಾಧಿಪತ್ಯಖ್ಯಾಪನಾರ್ಥಾ । ನನು ಸರ್ವಶಬ್ದೇನೈವ ಸಿದ್ಧತ್ವಾತ್ ವೀಪ್ಸಾ ಅನರ್ಥಿಕಾ । ನೈಷ ದೋಷಃ । ಯೇಷಾಮ್ ಉಪರಿಷ್ಟಾತ್ ಸವಿತಾ ದೃಶ್ಯತೇ ತದ್ವಿಷಯ ಏವ ಸರ್ವಶಬ್ದಃ ಸ್ಯಾತ್ ಇತ್ಯಾಶಙ್ಕಾನಿವೃತ್ತ್ಯರ್ಥಾ ವೀಪ್ಸಾ । "ಯೇ ಚಾಮುಷ್ಮಾತ್ ಪರಾಞ್ಚೋ ಲೋಕಾಸ್ತೇಷಾಂ ಚೇಷ್ಟೇ ದೇವಕಾಮಾನಾಂ ಚ" (ಛಾಂ. ೧-೬-೮) ಇತಿ ಶ್ರುತ್ಯನ್ತರಾತ್ । ತಸ್ಮಾತ್ ಸರ್ವಾವರೋಧಾರ್ಥಾ ವೀಪ್ಸಾ । ಯಥಾ ಅಸೌ ಸವಿತಾ ಸರ್ವಾಧಿಪತ್ಯಲಕ್ಷಣಯಾ ಶ್ರಿಯಾ ಯಶಸಾ ಚ ಖ್ಯಾತ್ಯಾ ತಪತಿ, ಏವಂ ಹ್ಯೇವ ಶ್ರಿಯಾ ಯಶಸಾ ಚ ತಪತಿ ಯೋಽಸ್ಯಾ ಏತದೇವಂ ತುರೀಯಂ ದರ್ಶತಂ ಪದಂ ವೇದ ॥

(ಭಾಷ್ಯಾರ್ಥ)

ಇನ್ನು ಮೂರು ಪಾದಗಳ ಶಬ್ದಾತ್ಮಕವಾದ ಗಾಯತ್ರಿಯ ಮೂರು ಪಾದಗಳನ್ನು (ಹೇಳಿದ) ಬಳಿಕ ಅಭಿಧೇಯವಾಗಿರುವ ನಾಲ್ಕನೆಯ ಪಾದವನ್ನು ಹೇಳಲಾಗುವದು.

ಈ ಪ್ರಕೃತವಾದ ಗಾಯತ್ರಿಗೆ ಇದೇ (ಈ) ಮುಂದೆ ಹೇಳುವದೇ ತುರೀಯ ದರ್ಶತಪದವು, ಪರೋರಜಸ್ಸು, (ಯಾವದೆಂದರೆ) ಇಗೊ ತಪಿಸುತ್ತಿದಾನಲ್ಲ, ಇವನೇ. 'ತುರೀಯಮ್' ಮುಂತಾದ ವಾಕ್ಯದ ಪದಗಳ ಅರ್ಥವನ್ನು ಶ್ರುತಿಯು ತಾನೇ ಹೇಳುತ್ತಿದೆ. ಲೋಕದಲ್ಲಿ ನಾಲ್ಕನೆಯದು ಎಂದು ಪ್ರಸಿದ್ಧವಾಗಿರುವದಷ್ಟೆ, ಅದನ್ನು ಇಲ್ಲಿ ತುರೀಯಶಬ್ದದಿಂದ ಹೇಳಿದೆ. 'ದರ್ಶತ ಪದ'ವೆಂಬುದಕ್ಕೆ ಅರ್ಥವೇನು? ಎಂದರೆ (ಶ್ರುತಿ) ಹೇಳುತ್ತದೆ. ಈ ಮಂಡಲಾಂತರ್ಗತನಾದ ಪುರುಷನು (ದದೃಶೇ ಇವ= ದೃಶ್ಯತ ಇವ) ಕಾಣುವಂತೆ ಇರುತ್ತಾನಷ್ಟೆ, ಆದ್ದರಿಂದ (ಇವನು) ದರ್ಶತಪದವೆನಿಸಿರುತ್ತಾನೆ. ಪರೋರಜಸ್ಸು ಎಂಬುದಕ್ಕೆ ಅರ್ಥವೇನು ? ಎಂದರೆ (ಶ್ರುತಿ) ಹೇಳುತ್ತದೆ. ಸರ್ವವನ್ನೂ ಎಲ್ಲವನ್ನೂ ಈ ಮಂಡಲದೊಳಗಿರುವ **ಪುರುಷನು (ಎಲ್ಲಾ) ರಜಸ್ಸನ್ನೂ ರಜಃಸಮೂಹವನ್ನು ಸರ್ವಲೋಕವನ್ನು**[1] **ಎಂದರ್ಥ. ಮೇಲೆಮೇಲೆ**

---

1. ರಜಸ್ಸೆಂದರೆ ರಾಗವನ್ನು ; ಕಾಮವನ್ನತಿಕ್ರಮಿಸಿ ತಪಿಸುತ್ತಾನೆ, ಎಂಬರ್ಥವನ್ನು ವಾ. ೨೧ರಲ್ಲಿ ಕೊಟ್ಟಿದೆ.

ಆಧಿಪತ್ಯಭಾವದಿಂದ ರಜಃಸಮೂಹವನ್ನು ಸರ್ವಲೋಕವನ್ನು ತಪಿಸುತ್ತಿರುತ್ತಾನೆ. ಮೇಲೆಮೇಲೆ ಎಂಬ ವೀಪ್ಸೆಯನ್ನು[1] (ಪ್ರಯೋಗಿಸುವದು) ಎಲ್ಲಾ ಲೋಕಗಳ ಮೇಲೂ ಆಧಿಪತ್ಯ(ವಿದೆ ಎಂದು) ತಿಳಿಸುವದಕ್ಕೆ.

(ಆಕ್ಷೇಪ):- ಸರ್ವಶಬ್ದದಿಂದಲೇ (ಇದು) ಸಿದ್ಧವಾಗಿರುವದರಿಂದ ವೀಪ್ಸಾ(ಪ್ರಯೋಗವು) ವ್ಯರ್ಥವಲ್ಲವೆ ?

(ಪರಿಹಾರ) :- ಇದೇನೂ ದೋಷವಲ್ಲ. ಯಾವ (ಲೋಕ)ಗಳ ಮೇಲೆ ಸೂರ್ಯನು ಕಾಣಿಸುತ್ತಾನೋ ಆ (ಲೋಕ)ಗಳ ವಿಷಯವೇ ಸರ್ವಶಬ್ದವಾಗಿರಬಹುದು ಎಂಬ ಆಶಂಕೆಯನ್ನು ತೊಲಗಿಸುವದಕ್ಕಾಗಿ ವೀಪ್ಸೆಯನ್ನು (ಪ್ರಯೋಗಿಸಿದೆ). "ಆ (ಸೂರ್ಯನ) ಆಚೆಗೆ ಇರುವ ಲೋಕಗಳಿರುವವಲ್ಲ, ಅವುಗಳನ್ನೂ ದೇವಕಾಮಗಳನ್ನೂ ಆಳುತ್ತಿರುತ್ತಾನೆ" (ಛಾಂ. ೧-೬-೮) ಎಂಬ ಬೇರೊಂದು ಶ್ರುತಿಯಿಂದ (ಇದು ಸಿದ್ಧವಾಗುತ್ತದೆ). ಆದ್ದರಿಂದ ಎಲ್ಲವನ್ನೂ[2] ಅಡಕಮಾಡುವದಕ್ಕಾಗಿ ವೀಪ್ಸೆಯು (ಬಂದಿದೆ ಎಂದು ನಿಶ್ಚಯಿಸಬೇಕು).

ಹೇಗೆ ಈ ಸೂರ್ಯನು ಸರ್ವಾಧಿಪತ್ಯರೂಪವಾದ ಶ್ರೀಯಿಂದಲೂ ಯಶಸ್ಸಿನಿಂದಲೂ ಎಂದರೆ ಖ್ಯಾತಿಯಿಂದಲೂ ಕೂಡಿ ತಪಿಸುತ್ತಿರುವನೋ ಹಾಗೆಯೇ ಯಾವನು ಈ (ಗಾಯತ್ರಿಯ) ತುರೀಯದರ್ಶತಪದವನ್ನು ಹೀಗೆಂದು ಅರಿತಿರುವನೋ, ಅವನು ಶ್ರೀಯಿಂದಲೂ ಯಶಸ್ಸಿನಿಂದಲೂ ತಪಿಸುವನು.

## ಗಾಯತ್ರಿಯು ಪ್ರಾಣಾತ್ಮಕ

(ಉಪನಿಷತ್ತು)

**ಸೈಷಾ ಗಾಯತ್ರ್ಯೇತಸ್ಮಿಗ್ಂಸ್ತುರೀಯೇ ದರ್ಶತೇ ಪದೇ ಪರೋರಜಸಿ ಪ್ರತಿಷ್ಠಿತಾ ತದ್ವೈ ತತ್ಸತ್ಯೇ ಪ್ರತಿಷ್ಠಿತಂ ಚಕ್ಷುರ್ವೈ ಸತ್ಯಂ ಚಕ್ಷುರ್ಹಿ ವೈ ಸತ್ಯಂ ತಸ್ಮಾದ್ಯದಿದಾನೀಂ ದ್ವೌ ವಿವದಮಾನಾವೇಯಾತಾಮಹಮದರ್ಶಮಹಮಶ್ರೌಷಮಿತಿ ಯ ಏವಂ ಬ್ರೂಯಾದಹಮದರ್ಶಮಿತಿ ತಸ್ಮಾ ಏವ ಶ್ರದ್ಧಧ್ಯಾಮ ತದ್ವೈ ತತ್ಸತ್ಯಂ ಬಲೇ ಪ್ರತಿಷ್ಠಿತಂ ಪ್ರಾಣೋ ವೈ ಬಲಂ ತತ್ ಪ್ರಾಣೇ ಪ್ರತಿಷ್ಠಿತಂ ತಸ್ಮಾದಾಹುರ್ಬಲಗ್ಂ ಸತ್ಯಾದೋಗೀಯ ಇತ್ಯೇವವ್ವೇಷಾ ಗಾಯತ್ರ್ಯಧ್ಯಾತ್ಮಂ ಪ್ರತಿಷ್ಠಿತಾ**

1. ಸರ್ವವ್ಯಾಪ್ತಿಯನ್ನು ಹೇಳುವ ದ್ವಿರುಕ್ತಿಯನ್ನು.
2. ಸೂರ್ಯನಿಂದ ಈಚೆಗೂ ಆಚೆಗೂ ಇರುವ ಎಲ್ಲಾ ಲೋಕಗಳನ್ನೂ.

**ಸಾ ಹೈಷಾ ಗಯಾಗ್ಂ ಸ್ತತ್ರೇ ಪ್ರಾಣಾ ವೈ ಗಯಾಸ್ತತ್ಪ್ರಾಣಾಗ್ಂ ಸ್ತತ್ರೇ ತದ್ಯದ್ಗಯಾಗ್ಂ ಸ್ತತ್ರೇ ತಸ್ಮಾದ್ ಗಾಯತ್ರೀ ನಾಮ ಸಾ ಯಾಮೇವಾಮೂಗ್ಂ ಸಾವಿತ್ರೀಮನ್ವಾಹೈಷೈವ ಸಾ ಸ ಯಸ್ಮಾ ಅನ್ವಾಹ ತಸ್ಯ ಪ್ರಾಣಾಗ್ಂ ಸ್ತ್ರಾಯತೇ ॥೪॥**

೪. ಆ ಈ ಗಾಯತ್ರಿಯು ಈ ತುರೀಯದರ್ಶತವಾದ ಪರೋರಜಸ್ಸಾದ ಪದದಲ್ಲಿ ಪ್ರತಿಷ್ಠಿತವಾಗಿರುತ್ತದೆ. ಅದೋ, ಸತ್ಯದಲ್ಲಿ ಪ್ರತಿಷ್ಠಿತವಾಗಿರುತ್ತದೆ. ಚಕ್ಷುಸ್ಸೇ ಸತ್ಯವು. ಚಕ್ಷುಸ್ಸೇ ಸತ್ಯವಲ್ಲವೆ? ಆದ್ದರಿಂದಲೇ ಈಗ ಇಬ್ಬರು 'ನಾನು ಕಂಡಿದೇನೆ, ನಾನು ಕೇಳಿದೇನೆ' ಎಂದು ವಿವಾದಮಾಡುತ್ತಾಬಂದರೆ ಯಾವನು 'ನಾನು ಕಂಡಿದೇನೆ' ಎಂದಿಂತು ಹೇಳುವನೋ ಅವನಲ್ಲಿಯೇ ಶ್ರದ್ಧೆಯನ್ನು ಮಾಡುತ್ತೇವೆ. ಆ ಸತ್ಯವೆಂಬುದು ಬಲದಲ್ಲಿ ಪ್ರತಿಷ್ಠಿತವಾಗಿರುತ್ತದೆ. ಪ್ರಾಣವೇ ಬಲವು; (ಆದ್ದರಿಂದ) ಅದು ಪ್ರಾಣದಲ್ಲಿ ಪ್ರತಿಷ್ಠಿತವಾಗಿರುತ್ತದೆ. ಆದ್ದರಿಂದ ಬಲವು ಸತ್ಯಕ್ಕಿಂತ ಜೋರು ಎನ್ನುತ್ತಾರೆ. ಹೀಗೆ ಈ ಗಾಯತ್ರಿಯು ಅಧ್ಯಾತ್ಮವಾಗಿ ಪ್ರತಿಷ್ಠಿತವಾಗಿರುತ್ತದೆ. ಇದು ಗಯಗಳನ್ನು ಕಾಪಾಡಿತು; ಪ್ರಾಣಗಳೇ ಗಯಗಳು, ಆದ್ದರಿಂದ ಪ್ರಾಣಗಳನ್ನು ಕಾಪಾಡಿತು. ಹೀಗೆ ಗಯಗಳನ್ನು ಕಾಪಾಡಿತಷ್ಟೆ, ಆದ್ದರಿಂದ (ಇದು) ಗಾಯತ್ರಿ. ಆದ್ದರಿಂದ ಗಾಯತ್ರಿ ಎಂದರೆ ಯಾವ ಈ ಸಾವಿತ್ರಿಯನ್ನು ಅನುವಚನಮಾಡುತ್ತಾರಲ್ಲ, ಇದೇ ಅದು. ಯಾವನಿಗೆ ಅನುವಚನಮಾಡುತ್ತಾನೋ ಅವನ ಪ್ರಾಣಗಳನ್ನು ಕಾಪಾಡುತ್ತದೆ.

## ಗಾಯತ್ರಿಯು ಅಧ್ಯಾತ್ಮವಾಗಿ ಪ್ರಾಣನಲ್ಲಿ ಪ್ರತಿಷ್ಠಿತ

(ಭಾಷ್ಯ)

೩೯೪. **ಸೈಷಾ ತ್ರಿಪದಾ ಉಕ್ತಾ ಯಾ ತ್ರೈಲೋಕ್ಯತ್ರೈವಿದ್ಯಪ್ರಾಣಲಕ್ಷಣಾ ಗಾಯತ್ರೀ ಏತಸ್ಮಿನ್ ಚತುರ್ಥೇ ತುರೀಯೇ ದರ್ಶತೇ ಪದೇ ಪರೋರಜಸಿ ಪ್ರತಿಷ್ಠಿತಾ। ಮೂರ್ತಾಮೂರ್ತರಸತ್ವಾತ್ ಆದಿತ್ಯಸ್ಯ। ರಸಾಪಾಯೇ ಹಿ ವಸ್ತು ನೀರಸಮ್ ಅಪ್ರತಿಷ್ಠಿತಂ ಭವತಿ ಯಥಾ ಕಾಷ್ಠಾದಿ ದಗ್ಧಸಾರಮ್, ತದ್ವತ್।ತಥಾ ಮೂರ್ತಾಮೂರ್ತಾತ್ಮಕಂ ಜಗತ್ ತ್ರಿಪದಾ ಗಾಯತ್ರೀ ಆದಿತ್ಯೇ ಪ್ರತಿಷ್ಠಿತಾ ತದ್ರಸತ್ವಾತ್ ಸಹ ತ್ರಿಭಿಃ ಪಾದೈಃ। ತದ್ವೈ ತುರೀಯಂ ಪದಂ**

ಸತ್ಯೇ ಪ್ರತಿಷ್ಠಿತಮ್ । ಕಿಂ ಪುನಸ್ತತ್ಸತ್ಯಮಿತಿ? ಉಚ್ಯತೇ । ಚಕ್ಷುರ್ವೈ ಸತ್ಯಮ್ । ಕಥಂ ಚಕ್ಷುಃ ಸತ್ಯಮಿತಿ? ಆಹ। ಪ್ರಸಿದ್ಧಮೇತತ್। ಚಕ್ಷುರ್ಹಿ ವೈ ಸತ್ಯಮ್ । ಕಥಂ ಪ್ರಸಿದ್ಧತೇತಿ? ಆಹ। ತಸ್ಮಾತ್ ಯತ್ ಯದಿ ಇದಾನೀಮೇವ ದ್ವೌ ವಿವದಮಾನೌ ವಿರುದ್ಧಂ ವದಮಾನೌ ಏಯಾತಾಮ್ ಆಗಚ್ಛೇಯಾತಾಮ್ ಅಹಮ್ ಅದರ್ಶಂ ದೃಷ್ಟವಾನಸ್ಮಿ ಇತಿ ಅನ್ಯ ಆಹ। ಅಹಮಶ್ರೌಷಮ್। ತ್ವಯಾ ದೃಷ್ಟಂ ನ ತಥಾ ತದ್ವಸ್ತು ಇತಿ। ತಯೋಃ ಯ ಏವಂ ಬ್ರೂಯಾತ್ ಅಹಮ್ ಅದ್ರಾಕ್ಷಮ್ ಇತಿ ತಸ್ಮೈ ಏವ ಶ್ರದ್ಧಧ್ಯಾಮ, ನ ಪುನಃ ಯೋ ಬ್ರೂಯಾತ್ ಅಹಮಶ್ರೌಷಮ್ ಇತಿ। ಶ್ರೋತುಃ ಮೃಷಾಶ್ರವಣಮಪಿ ಸಂಭವತಿ। ನ ತು ಚಕ್ಷುಷೋ ಮೃಷಾದರ್ಶನಮ್। ತಸ್ಮಾತ್ ನ ಅಶ್ರೌಷಮ್ ಇತ್ಯುಕ್ತವತೇ ಶ್ರದ್ಧಧ್ಯಾಮ । ತಸ್ಮಾತ್ ಸತ್ಯಪ್ರತಿಪತ್ತಿಹೇತುತ್ವಾತ್ ಸತ್ಯಂ ಚಕ್ಷುಃ। ತಸ್ಮಿನ್ ಸತ್ಯೇ ಚಕ್ಷುಷಿ ಸಹ ತ್ರಿಭಿಃ ಇತರೈಃ ಪಾದೈಃ ತುರೀಯಂ ಪದಂ ಪ್ರತಿಷ್ಠಿತಮ್ ಇತ್ಯರ್ಥಃ। ಉಕ್ತಂ ಚ "ಸ ಆದಿತ್ಯಃ ಕಸ್ಮಿನ್ ಪ್ರತಿಷ್ಠಿತ ಇತಿ ಚಕ್ಷುಷಿ" (೩–೯–೨೦) । ಇತಿ[1] । ತದ್ವೈ ತುರೀಯ ಪದಾಶ್ರಯಂ ಸತ್ಯಂ ಬಲೇ ಪ್ರತಿಷ್ಠಿತಮ್। ಕಿಂ ಪುನಸ್ತದ್ ಬಲಮಿತಿ? ಆಹ। ಪ್ರಾಣೋ ವೈ ಬಲಮ್। ತಸ್ಮಿನ್ ಪ್ರಾಣೇ ಬಲೇ ಪ್ರತಿಷ್ಠಿತಂ ಸತ್ಯಮ್ । ತಥಾ ಚೋಕ್ತಮ್ "ಸೂತ್ರೇ ತದೋತಂ ಪ್ರೋತಂ ಚ" (೩–೭–೨) ಇತಿ। ಯಸ್ಮಾತ್ ಬಲೇ ಸತ್ಯಂ ಪ್ರತಿಷ್ಠಿತಮ್ ತಸ್ಮಾತ್ ಆಹುಃ 'ಬಲಂ ಸತ್ಯಾತ್ ಓಗೀಯಃ' (ಇತಿ) ಓಜೀಯಃ ಓಜಸ್ತರಮ್ ಇತ್ಯರ್ಥಃ। ಲೋಕೇಽಪಿ ಯಸ್ಮಿನ್ ಹಿ ಯದಾಶ್ರಿತಂ ಭವತಿ ತಸ್ಮಾತ್ ಆಶ್ರಿತಾತ್ ಆಶ್ರಯಸ್ಯ ಬಲವತ್ತರತ್ವಂ ಪ್ರಸಿದ್ಧಮ್ । ನ ಹಿ ದುರ್ಬಲಂ ಬಲವತಃ ಕ್ವಚಿತ್ ಆಶ್ರಯಭೂತಂ ದೃಷ್ಟಮ್। ಏವಂ ಉಕ್ತನ್ಯಾಯೇನ ಉ ಏಷಾ ಗಾಯತ್ರೀ ಅಧ್ಯಾತ್ಮಮ್ ಅಧ್ಯಾತ್ಮೇ ಪ್ರಾಣೇ ಪ್ರತಿಷ್ಠಿತಾ ॥

(ಭಾಷ್ಯಾರ್ಥ)

ಈ ಮೂರು ಪಾದಗಳಿದ್ದೆಂದು ತ್ರೈಲೋಕ್ಯ, ತ್ರೈವಿದ್ಯ, ಪ್ರಾಣ– ಇವುಗಳ ಸ್ವರೂಪವಾದ ಗಾಯತ್ರಿಯನ್ನು ಹೇಳಿದೆಯಷ್ಟೆ, (ಅದು) ನಾಲ್ಕನೆಯದಾದ 'ತುರೀಯದರ್ಶತಪದನಾದ ಪರೋರಜಸ್ಸಿನಲ್ಲಿ'[2] ಪ್ರತಿಷ್ಠಿತವಾಗಿರುತ್ತದೆ. ಏಕೆಂದರೆ ಆದಿತ್ಯನು ಮೂರ್ತಾಮೂರ್ತಗಳ ರಸವಾಗಿರುತ್ತಾನೆ.[3] ರಸವು

1. ಶ್ರುತಿಯಲ್ಲಿರುವ ಇತಿಯೇ ಕೊನೆಗೆ ಇದ್ದರೆ ಸಾಕೆಂದು ಬಿಟ್ಟಿದೆ ; ಅಥವಾ ಈ ಇನ್ನೊಂದು ಇತಿಯನ್ನು ಅಧ್ಯಾಹಾರಮಾಡಿಕೊಳ್ಳಬೇಕು.

2. ನಾಲ್ಕನೆಯದಾದ, ಸರ್ವಲೋಕಗಳಮೇಲೂ ಇರುವ, ದೃಶ್ಯನಾದಂತಿರುವ ಆದಿತ್ಯಪುರುಷನಲ್ಲಿ.

3. ಮೂರ್ತಾಮೂರ್ತಬ್ರಾಹ್ಮಣದ (೨–೩) ಪರಾಮರ್ಶವಿದು.

ಹೋದರೆ ವಸ್ತು ನೀರಸವಾಗಿ, ಸಾರವು ಸುಟ್ಟುಹೋದ ಕಟ್ಟಿಗೆಯೋ ಮುಂತಾದದ್ದು ಹೇಗೋ ಹಾಗೆ ಪ್ರತಿಷ್ಠೆಯು ಇಲ್ಲದ್ದಾಗುವದು. ಇದರಂತೆ ಮೂರ್ತಾಮೂರ್ತಾತ್ಮಕವಾದ ಜಗದ್ರೂಪವಾದ ತ್ರಿಪದಗಾಯತ್ರಿಯು ಮೂರು ಪಾದಗಳೊಡನೆ ಆದಿತ್ಯನಲ್ಲಿ ಪ್ರತಿಷ್ಠಿತವಾಗಿರುತ್ತದೆ; ಏಕೆಂದರೆ (ಅವನು) ಆದರ ರಸವಾಗಿರುತ್ತಾನೆ.

ಆ ತುರೀಯಪಾದವು ಸತ್ಯದಲ್ಲಿ ಪ್ರತಿಷ್ಠಿತವಾಗಿರುತ್ತದೆ. ಆ ಸತ್ಯವೆಂಬುದು ಯಾವದು ? ಎಂದರೆ (ಶ್ರುತಿ) ಹೇಳುತ್ತದೆ: ಚಕ್ಷುಸ್ಸೇ ಸತ್ಯವು, ಚಕ್ಷುಸ್ಸು ಸತ್ಯವೆಂಬುದು ಹೇಗೆ ಎಂದರೆ ಶ್ರುತಿ ಹೇಳುತ್ತದೆ. ಇದು ಪ್ರಸಿದ್ಧವೇ ಆಗಿದೆ. ಚಕ್ಷುಸ್ಸೇ ಸತ್ಯವಷ್ಟೆ ? (ಇದು) ಹೇಗೆ ಪ್ರಸಿದ್ಧವು ? ಎಂದರೆ ಆದ್ದರಿಂದಲೇ (ಯತ್ = ಯದಿ) ಈಗಲೂ ಇಬ್ಬರು ವಿವಾದಮಾಡುತ್ತಾ (ಒಬ್ಬರಿಗೊಬ್ಬರು) ವಿರುದ್ಧವಾಗಿ ಹೇಳುತ್ತಾ ಬರುತ್ತಾರಾದರೆ ಬಂದರೆ, ಒಬ್ಬನು 'ನಾನು ಕಂಡಿದೇನೆ, ಕಂಡವನಾಗಿರುತ್ತೇನೆ' ಎಂದೂ ಮತ್ತೊಬ್ಬನು 'ನಾನು ಕೇಳಿರುತ್ತೇನೆ, ನೀನು ಕಂಡ ವಸ್ತು ಹಾಗಿರುವದಿಲ್ಲ' ಎಂದರೆ, ಅವರಿಬ್ಬರೊಳಗೆ ಯಾವನು 'ನಾನು ಕಂಡಿದೇನೆ' ಎಂದಿಂತು ಹೇಳುವನೋ ಅವನಲ್ಲಿಯೇ ಶ್ರದ್ಧೆಯನ್ನಿಡುವೆವೇ ಹೊರತು 'ನಾನು ಕೇಳಿರುತ್ತೇನೆ' ಎನ್ನುವನಲ್ಲಲ್ಲ. ಕೇಳಿದವನಿಗೆ ತಪ್ಪು ಕೇಳಿಕೆಯೂ ಆಗಿರಬಹುದು, ಆದರೆ ಕಣ್ಣಿಗೆ ತಪ್ಪುದರ್ಶನವಿಲ್ಲ.[1] ಆದ್ದರಿಂದ 'ಕೇಳಿರುತ್ತೇನೆ' ಎಂದವನಲ್ಲಿ (ನಾವು) ಶ್ರದ್ಧೆಯಿಡುವದಿಲ್ಲ. ಆದ್ದರಿಂದ ಸತ್ಯವಾದ ಜ್ಞಾನಕ್ಕೆ ಕಾರಣವಾದ್ದರಿಂದ ಚಕ್ಷುಸ್ಸು ಸತ್ಯವು. ಆ ಸತ್ಯವಾದ ಚಕ್ಷುಸ್ಸಿನಲ್ಲಿ ಮಿಕ್ಕ ಮೂರು ಪಾದಗಳೊಡನೆ ನಾಲ್ಕನೆಯ ಪಾದವು ಪ್ರತಿಷ್ಠಿತವಾಗಿರುತ್ತದೆ ಎಂದರ್ಥ. " 'ಆ ಆದಿತ್ಯನು ಏತರಲ್ಲಿ ಪ್ರತಿಷ್ಠಿತನಾಗಿರುತ್ತಾನೆ? ' ಚಕ್ಷುಸ್ಸಿನಲ್ಲಿ" (೩-೯-೨೦).

ಆ ತುರೀಯಪಾದಕ್ಕೆ ಆಶ್ರಯವಾಗಿರುವ ಸತ್ಯವು ಬಲದಲ್ಲಿ ಪ್ರತಿಷ್ಠಿತವಾಗಿರುತ್ತದೆ. ಆ ಬಲವಾದರೂ ಯಾವದು ? ಎಂದರೆ (ಶ್ರುತಿ) ಹೇಳುತ್ತದೆ. ಪ್ರಾಣವೇ ಬಲವು , ಆ ಪ್ರಾಣವೆಂಬ ಬಲದಲ್ಲಿ ಸತ್ಯವು ಪ್ರತಿಷ್ಠಿತವಾಗಿರುತ್ತದೆ. ಆದ್ದರಿಂದ "ಸೂತ್ರದಲ್ಲಿ ಅದು ಓತವೂ ಪ್ರೋತವೂ (ಆಗಿದೆ)" (೩-೭-೨ರ ಅರ್ಥ) ಎಂದು ಹಿಂದೆ ಹೇಳಿರುತ್ತದೆ. (ಹೀಗೆ) ಬಲದಲ್ಲಿ ಸತ್ಯವು ಪ್ರತಿಷ್ಠಿತವಾಗಿರುವದಷ್ಟೆ, ಆದ್ದರಿಂದಲೇ ಹೀಗೆನ್ನುವರು : "ಬಲವು ಸತ್ಯಕ್ಕಿಂತ (ಓಗೀಯಃ = ಓಜೀಯಃ) ಜೋರಾಗಿರುತ್ತದೆ" (ಎಂದರ್ಥ). ಲೋಕದಲ್ಲಿಯೂ ಯಾವದರಲ್ಲಿ ಯಾವದು ಆಶ್ರಯಿಸಿಕೊಂಡಿರುವದೋ ಆ ಆಶ್ರಿತಕ್ಕಿಂತ

1. ಕೇಳಿದ್ದು ಕಂಡದ್ದರಿಂದ ಬಾಧಿತವಾಗುತ್ತದೆ, ಆದರೆ ಕಂಡದ್ದು ಕೇಳಿದ್ದರಿಂದ ಬಾಧಿತವಾಗುವದಿಲ್ಲ ಎಂದರ್ಥ.

ಆಶ್ರಯವು ಹೆಚ್ಚು ಬಲವುಳ್ಳದ್ದೆಂಬುದು ಪ್ರಸಿದ್ಧವಾಗಿರುತ್ತದೆ; ದುರ್ಬಲವಾದದ್ದು ಯಾವದೂ ಬಲವುಳ್ಳದ್ದಕ್ಕೆ ಆಶ್ರಯವಾಗಿರುವದು ಕಂಡುಬಂದಿಲ್ಲವಷ್ಟೆ? ಹೀಗೆ ಮೇಲೆ ಹೇಳಿದ ನ್ಯಾಯದಿಂದ ಈ ಗಾಯತ್ರಿಯು ಅಧ್ಯಾತ್ಮವಾಗಿ ಎಂದರೆ ಆಧ್ಯಾತ್ಮವಾದ ಪ್ರಾಣನಲ್ಲಿ ಪ್ರತಿಷ್ಠಿತವಾಗಿರುತ್ತದೆ.

## ಗಾಯತ್ರಿಯು ಜಗತ್ತಿಗೆ ಆತ್ಮ

(ಭಾಷ್ಯ)

೩೯೫. ಸ್ಯೈಷಾ ಗಾಯತ್ರೀ ಪ್ರಾಣಃ । ಅತಃ ಗಾಯತ್ರ್ಯಾಂ ಜಗತ್ ಪ್ರತಿಷ್ಠಿತಮ್ । ಯಸ್ಮಿನ್ ಪ್ರಾಣೇ ಸರ್ವೇ ದೇವಾ ಏಕಂ ಭವನ್ತಿ । ಸರ್ವೇ ವೇದಾಃ, ಕರ್ಮಾಣಿ ಫಲಂ ಚ । ಸ್ಯೈವಂ ಗಾಯತ್ರೀ ಪ್ರಾಣರೂಪಾ ಸತೀ ಜಗತಃ ಆತ್ಮಾ । ಸಾ ಹ ಏಷಾ ಗಯಾನ್ ತತ್ರೇ ತ್ರಾತವತೀ । ಕೇ ಪುನರ್ಗಯಾಃ? ಪ್ರಾಣಾಃ ವಾಗಾದಯಃ ವೈ ಗಯಾಃ । ಶಬ್ದಕರಣಾತ್ । ತಾನ್ ತತ್ರೇ ಸ್ಯೈಷಾ ಗಾಯತ್ರೀ । ತತ್ ತತ್ರ ಯತ್ ಯಸ್ಮಾತ್ ಗಯಾನ್ ತತ್ರೇ । ತಸ್ಮಾತ್ ಗಾಯತ್ರೀ ನಾಮ ಗಯತ್ರಾಣಾತ್ ಗಾಯತ್ರೀತಿ ಪ್ರಥಿತಾ ॥

(ಭಾಷ್ಯಾರ್ಥ)

ಆ ಈ ಗಾಯತ್ರಿಯು ಪ್ರಾಣವು. ಆದ್ದರಿಂದ ಗಾಯತ್ರಿಯಲ್ಲಿ ಜಗತ್ತು ಪ್ರತಿಷ್ಠಿತವಾಗಿರುತ್ತದೆ. ಹೀಗೆ ಯಾವ ಪ್ರಾಣನಲ್ಲಿ ಎಲ್ಲಾ ದೇವತೆಗಳೂ ಒಂದಾಗಿರುವರೋ, ಎಲ್ಲಾ ವೇದಗಳೂ (ಒಂದಾಗಿರುವವೋ), ಕರ್ಮಗಳೂ ಫಲಗಳೂ ಒಂದಾಗಿರುವವೋ, ಆ ಪ್ರಾಣನೇ ಆಗಿರುವದಾಗಿ ಜಗತ್ತಿಗೆ ಆತ್ಮನಾಗಿದೆ. ಆ ಇದು ಗಯಗಳನ್ನು ಕಾಪಾಡಿತು, ರಕ್ಷಿಸಿತು; ಗಯಗಳೆಂದರೆ ಯಾವವು? ಎಂದರೆ ವಾಗಾದಿಪ್ರಾಣಗಳೇ ಗಯಗಳು; ಏಕೆಂದರೆ (ಅವು) ಶಬ್ದವನ್ನು ಮಾಡುತ್ತವೆ.[1] ಅವನ್ನು ಕಾಪಾಡಿತು, ಆ ಈ ಗಾಯತ್ರಿಯು (ತತ್ = ತತ್ರ) ಇಲ್ಲಿ (ಯತ್ = ಯಸ್ಮಾತ್) ಗಯಗಳನ್ನು ತ್ರಾಣನಮಾಡಿತಲ್ಲ, ಆದ್ದರಿಂದ ಗಾಯತ್ರಿ ಎನಿಸಿತು; ಗಯತ್ರಾಣನದಿಂದ ಗಾಯತ್ರೀ ಎಂದು ಪ್ರಸಿದ್ಧವಾಗಿದೆ.

## ವಟುವಿಗೆ ಉಪದೇಶಿಸುವ ಸಾವಿತ್ರಿಯೇ ಗಾಯತ್ರಿಯು

(ಭಾಷ್ಯ)

೩೯೬. ಸಃ ಆಚಾರ್ಯಃ ಉಪನೀಯ ಮಾಣವಕಮ್ ಅಷ್ಟವರ್ಷಂ ಯಾಮೇವ ಅಮೂಂ ಗಾಯತ್ರೀಂ ಸಾವಿತ್ರೀಂ ಸವಿತೃದೇವತಾಕಾಮ್

---

1. ಕರಣಗಳು ಸರಿಯಾಗಿದ್ದರೆ ಶಬ್ದವು ಉಂಟಾಗುತ್ತದೆ.

ಅನ್ವಾಹ ಪೃಷ್ಟಃ ಅರ್ಧರ್ಚಶಃ ಸಮಸ್ತಾಂ ಚ ಏಷೈವ ಸ ಸಾಕ್ಷಾತ್ ಪ್ರಾಣಃ ಜಗತಃ ಆತ್ಮಾ ಮಾಣವಕಾಯ ಸಮರ್ಪಿತಾ ಇಹ ಇದಾನೀಂ ವ್ಯಾಖ್ಯಾತಾ ನಾನ್ಯಾ । ಸ ಆಚಾರ್ಯಃ ಯಸ್ಮೈ ಮಾಣವಕಾಯ ಅನ್ವಾಹ ಅನುವಕ್ತಿ ತಸ್ಯ ಮಾಣವಕಸ್ಯ ಗಯಾನ್ ಪ್ರಾಣಾನ್ ತ್ರಾಯತೇ ನರಕಾದಿಪತನಾತ್ ॥

(ಭಾಷ್ಯಾರ್ಥ)

ಆ ಆಚಾರ್ಯನು ಎಂಟು ವರ್ಷದ ಮಾಣವಕನನ್ನು[1] ಉಪನಯನ ಮಾಡಿ[2] ಯಾವ ಈ ಗಾಯತ್ರಿಯನ್ನು, ಸಾವಿತ್ರಿಯನ್ನು, ಸವಿತೃದೇವತಾಕ ವಾದ (ಗಾಯತ್ರಿಯನ್ನು) ಪಾದಪಾದವಾಗಿಯೂ ಅರ್ಧಋಕ್ಕಾಗಿಯೂ ಸಮಸ್ತವಾಗಿಯೂ[3] ಅನುವಚನಮಾಡುವನೋ ಮಾಣವಕನಿಗೆ ಸಮರ್ಪಿಸುವ ಇದೇ ಜಗತ್ತಿನ ಆತ್ಮನಾದ ಸಾಕ್ಷಾತ್ ಪ್ರಾಣನಾದ ಇದನ್ನೇ ಇಲ್ಲಿ ಈಗ ವಿವರಿಸಿರುವದು, ಬೇರೆಯಲ್ಲ.[4] ಆ ಆಚಾರ್ಯನು ಯಾವ ಮಾಣವಕನಿಗೆ (ಇದನ್ನು ಅನ್ವಾಹ=ಅನುವಕ್ತಿ) ಹೇಳಿಕೊಡುವನೋ ಆ ಮಾಣವಕನ ಎಂದರೆ ಗಯಗಳನ್ನು ಪ್ರಾಣಗಳನ್ನು ನರಕಾದಿಗಳೊಳಗೆ ಬಿದ್ದುಹೋಗದಂತೆ ಕಾಪಾಡುತ್ತಾನೆ.[5]

## ಉಪನಯನದಲ್ಲಿ ಗಾಯತ್ರಿಯನ್ನೇ ಉಪದೇಶಿಸಬೇಕು

(ಉಪನಿಷತ್ತು)

**ತಾಗ್ಂ ಹೈತಾಮೇಕೇ ಸಾವಿತ್ರೀಮನುಷ್ಟುಭಮನ್ವಾಹು ರ್ವಾಗನುಷ್ಟುಬೇತದ್ವಾಚಮನುಬ್ರೂಮ ಇತಿ ನ ತಥಾ ಕುರ್ಯಾದ್ಗಾಯತ್ರೀಮೇವ ಸಾವಿತ್ರೀಮನುಬ್ರೂಯಾದ್ಯದಿ ಹ ವಾ ಅಪ್ಯೇವಂ ವಿದ್ಬಹ್ವಿವ ಪ್ರತಿಗೃಹ್ಣಾತಿ ನ ಹೈವ ತದ್ಗಾಯತ್ರ್ಯಾ ಏಕಂಚನ ಪದಂ ಪ್ರತಿ ॥ ೫ ॥**

---

1. ಹುಡುಗನನ್ನು ಎಂದರ್ಥ. ಬ್ರಾಹ್ಮಣನಿಗೆ ಎಂಟನೆಯ ವರ್ಷವು ಉಪನಯನಕ್ಕೆ ಶ್ರೇಷ್ಠವು.

2. ವೇದಾಭ್ಯಾಸಕ್ಕೋಸ್ಕರ ಹತ್ತಿರಕ್ಕೆ ಕರೆದು. ಉಪನಯನಪ್ರಕಾರವನ್ನು ಶತ. ಬ್ರಾ. ೧೧-೫-೪ರಲ್ಲಿ ವಿವರಿಸಿದೆ.

3. ಹೀಗೆ ಅನುವಚನಮಾಡಬೇಕೆಂದು ಶತ. ಬ್ರಾ. ೧೧-೫-೪-೧೪ರಲ್ಲಿ ಹೇಳಿದೆ.

4. ಇದನ್ನು ಶತ. ಬ್ರಾ ದಲ್ಲಿ ತಿಳಿಸಿದೆ; ಇಲ್ಲಿ ಗಾಯತ್ರಿಯು ಸರ್ವಜಗದಾತ್ಮಕ ವಾಗಿದೆ ಎಂಬ ಉಪಾಸನೆಯನ್ನು ತಿಳಿಸುವದಕ್ಕಾಗಿ ಅದನ್ನು ವಿವರಿಸಿದೆ.

5. ಗಾಯತ್ರೀಸಂಸ್ಕಾರವಿಲ್ಲದವನ ವಾಗಾದಿಗಳು ನರಕದಲ್ಲಿ ಪತಿತವಾಗುತ್ತವೆ; ಹಾಗಾಗದಂತೆ ಗಾಯತ್ರ್ಯುಪದೇಶವನ್ನು ಮಾಡುತ್ತಾರೆ ಎಂದರ್ಥ.

೫. ಆ ಈ ಸಾವಿತ್ರಿಯನ್ನು ಕೆಲವರು ಅನುಷ್ಟುಪ್ಪನ್ನಾಗಿ ಅನುವಚನಮಾಡುತ್ತಾರೆ. ವಾಕ್ಕು ಅನುಷ್ಟುಪ್ಪು ; ಈ ವಾಕ್ಕನ್ನು ಅನುವಚನಮಾಡುತ್ತೇವೆ— ಎಂದು (ಹಾಗೆ ಮಾಡುತ್ತಾರೆ). ಹಾಗೆ ಮಾಡಬಾರದು. ಗಾಯತ್ರೀಸಾವಿತ್ರಿಯನ್ನೇ ಅನುವಚನಮಾಡಬೇಕು. ಹೀಗೆಂದರಿತಿರುವವನು ಬಹಳವಾಗಿರುವಂತೆ ಪ್ರತಿಗ್ರಹ ಮಾಡಿದರೂ ಅದು ಗಾಯತ್ರಿಯ ಒಂದು ಪಾದಕ್ಕೂ ಸಾಲದು.

## ಗಾಯತ್ರೀಛಂದಸ್ಕಸಾವಿತ್ರಿಯನ್ನೇ ಉಪನೀತನಿಗೆ ಹೇಳಬೇಕು.

(ಭಾಷ್ಯ)

೩೯೭. ತಾಮೇತಾಂ ಸಾವಿತ್ರೀಂ ಹ ಏಕೇ ಶಾಖಿನಃ ಅನುಷ್ಟುಭಮ್ ಅನುಷ್ಟುಪ್ಪ್ರಭವಾಮ್ ಅನುಷ್ಟುಪ್ಛಂದಸ್ಕಾಮ್ ಅನ್ವಾಹುಃ ಉಪನೀತಾಯ । ತದಭಿಪ್ರಾಯಮ್ ಆಹ । ವಾಕ್ ಅನುಷ್ಟುಪ್ । ವಾಕ್ಚ ಶರೀರೇ ಸರಸ್ವತೀ । ತಾಮೇವ ಹಿ ವಾಚಂ ಸರಸ್ವತೀಂ ಮಾಣವಕಾಯ ಅನುಬ್ರೂಮಃ ಇತಿ ಏತದ್ ವದನ್ತಃ । ನ ತಥಾ ಕುರ್ಯಾತ್, ನ ತಥಾ ವಿದ್ಯಾತ್ । ಯತ್ ತೇ ಆಹುಃ ಮೃಷೈವ ತತ್ । ಕಿಂ ತರ್ಹಿ, ಗಾಯತ್ರೀಮೇವ ಸಾವಿತ್ರೀಮ್ ಅನುಬ್ರೂಯಾತ್ । ಕಸ್ಮಾತ್ । ಯಸ್ಮಾತ್ ಪ್ರಾಣೋ ಗಾಯತ್ರೀ ಇತ್ಯುಕ್ತಮ್ । ಪ್ರಾಣೇ ಉಕ್ತೇ ವಾಕ್ಚ ಸರಸ್ವತೀ ಚ[1] ಅನ್ಯೇ ಚ ಪ್ರಾಣಾಃ ಸರ್ವಂ ಮಾಣವಕಾಯ ಸಮರ್ಪಿತಂ ಭವತಿ । ಕಿಂ ಚೇದಂ ಪ್ರಾಸಙ್ಗಿಕಮ್ ಉಕ್ತ್ವಾ ಗಾಯತ್ರೀವಿದಂ ಸ್ತೌತಿ । ಯದಿ ಹ ವೈ ಅಪಿ ಏವಂವಿತ್ ಬಹ್ವಿವ । ನ ಹಿ ತಸ್ಯ ಸರ್ವಾತ್ಮನಃ ಬಹು ನಾಮ ಅಸ್ತಿ ಕಿಂಚಿತ್, ಸರ್ವಾತ್ಮಕತ್ವಾದ್ ವಿದುಷಃ ಪ್ರತಿಗೃಹ್ಣಾತಿ ನ ಹೈವ ತತ್ ಪ್ರತಿಗ್ರಹಜಾತಂ ಗಾಯತ್ರ್ಯಾ ಏಕಂಚನ ಏಕಮಪಿ ಪದಂ ಪ್ರತಿ ಪರ್ಯಾಪ್ತಮ್ ॥

(ಭಾಷ್ಯಾರ್ಥ)

ಆ ಈ ಸಾವಿತ್ರಿಯನ್ನು ಕೆಲವರು ಶಾಖೆಯವರು[2] ಅನುಷ್ಟುಪ್ಪನ್ನು, ಅನುಷ್ಟುಪ್ಪಿನಿಂದುಂಟಾದ, ಅನುಷ್ಟುಪ್ಛಂದಸಿನದಾದ (ಸಾವಿತ್ರಿಯನ್ನೇ)[3] ಉಪನೀತನಿಗೆ ಅನುವಚನಮಾಡುತ್ತಾರೆ. ಅವರ ಅಭಿಪ್ರಾಯವನ್ನು (ಶ್ರುತಿ)

---

1. ಈ ಚಶಬ್ದವು ಬೇಕಿಲ್ಲವೆಂದು ತೋರುತ್ತದೆ.

2. ಯಾವ ಶಾಖೆಯವರೆಂಬುದು ತಿಳಿಯಲಿಲ್ಲ.

3. "ತತ್ಸವಿತುರ್ವೃಣೀಮಹೇ ವಯಂ ದೇವಸ್ಯ ಭೋಜನಮ್ । ಶ್ರೇಷ್ಠಂ ಸರ್ವಧಾತಮಂ ತುರಂ ಭಗಸ್ಯ ಧೀಮಹಿ ॥"— ಇದು ಅನುಷ್ಟುಪ್ಸಾವಿತ್ರಿ.

ಹೇಳುತ್ತದೆ. ಅನುಷ್ಟುಪ್ಪು ವಾಕ್ಕು[1]; ಶರೀರದಲ್ಲಿರುವ ಸರಸ್ವತಿಯೂ[2] ವಾಕ್ಕೇ. ಆ ವಾಗ್ರೂಪವಾದ ಸರಸ್ವತಿಯನ್ನೇ ಅಲ್ಲವೆ, ಮಾಣವಕನಿಗೆ ನಾವು ಹೇಳಿಕೊಡುವೆವು ? -ಎಂಬಿದನ್ನು ಹೇಳುತ್ತಾ (ಅನುಷ್ಟುಪ್ಸಾವಿತ್ರಿಯನ್ನು ಅವರು ಹೇಳಿಕೊಡುತ್ತಾರೆ). ಹಾಗೆ ಮಾಡಬಾರದು, ಹಾಗೆಂದು ತಿಳಿಯಬಾರದು. ಅವರು ಹೇಳುತ್ತಾರಲ್ಲ, ಅದು ತಪ್ಪೇ. ಮತ್ತೇನು (ಮಾಡಬೇಕು? ಎಂದರೆ), ಗಾಯತ್ರೀಸಾವಿತ್ರಿಯನ್ನೇ ಅನುವಚನಮಾಡಬೇಕು. ಏಕೆ? ಎಂದರೆ ಗಾಯತ್ರಿಯು ಪ್ರಾಣವೇ ಎಂದು ಹಿಂದೆ ಹೇಳಿದೆ(ಯಷ್ಟೆ). ಪ್ರಾಣನನ್ನು ಹೇಳಿದರೆ ವಾಗ್ರೂಪವಾದ ಸರಸ್ವತಿಯನ್ನೂ[3] ಮಿಕ್ಕ ಪ್ರಾಣಗಳನ್ನೂ ಎಲ್ಲವನ್ನೂ ಮಾಣವಕನಿಗೆ ಸಮರ್ಪಿಸಿದಂತೆಯೇ ಆಯಿತು.[4]

ಮತ್ತು ಈ ಪ್ರಾಸಂಗಿಕವಿಚಾರವನ್ನು[5] ಹೇಳಿ ಗಾಯತ್ರ್ಯುಪಾಸಕನನ್ನು (ಶ್ರುತಿ) ಹೊಗಳುತ್ತದೆ. ಹೀಗೆಂದರಿತಿರುವವನು ಬಹುವಾಗಿರುವಂತೆ (ಕಾಣುವಷ್ಟನ್ನು) — ಸರ್ವಾತ್ಮನಿಗೆ ಬಹು ಎಂಬುದೇ ಯಾವದೂ ಇಲ್ಲವಷ್ಟೆ[6] ? ಜ್ಞಾನಿಯೂ ಸರ್ವಾತ್ಮಕನಾದ್ದರಿಂದ (ಅವನು ಬಹುವಾಗಿರುವಂತೆ ಕಾಣುವದನ್ನು— ಪ್ರತಿಗ್ರಹಮಾಡಿದರೂ ಆ ಪ್ರತಿಗ್ರಹಸಮೂಹವು ಗಾಯತ್ರಿಯ ಒಂದು ಪಾದಕ್ಕೆ ಸಾಕಾಗಲಾರದು.[7]

---

1. ತೈ. ಸಂ. ೧-೩-೫ನ್ನು ನೋಡಿ.

2. ಮಾತೂ. ವಾಗ್ರೂಪವಾದ ಸರಸ್ವತಿಯು ವಾಗ್ರೂಪವಾದ ಅನುಷ್ಟುಪ್ಛಂದಸ್ಸಿನ ಸಾವಿತ್ರಿಯೇ ಆಗುತ್ತದೆ ಎಂದು ಅಭಿಪ್ರಾಯ.

3. ವಾಕ್ಚ ಎಂಬ ಪಾಠದಲ್ಲಿ 'ವಾಕ್ಕನ್ನೂ ಸರಸ್ವತಿಯನ್ನೂ' ಎಂದು ಕನ್ನಡಿಸಬೇಕಾಗುವದು; ಆದರೆ ಮುಂದೆ 'ಮಿಕ್ಕ ಪ್ರಾಣಗಳನ್ನು' ಎಂದಿರುವದರಿಂದ ಇಲ್ಲಿ ಕರಣರೂಪವಾದ ವಾಕ್ಕೇ ವಿವಕ್ಷಿತವೆಂಬುದು ಸ್ಪಷ್ಟ. ಆದ್ದರಿಂದ ಚಕಾರವನ್ನು ಬಿಟ್ಟು ಕನ್ನಡಿಸಲಾಗಿದೆ.

4. ಏಕೆಂದರೆ ಗಾಯತ್ರಿಯು ಪ್ರಾಣವು, ಮುಖ್ಯಪ್ರಾಣದಲ್ಲಿ ಮಿಕ್ಕ ಕರಣಗಳೆಲ್ಲವೂ ಅಂತರ್ಗತವಾಗಿಯೇ ಇರುತ್ತವೆ. ಇದಕ್ಕಾಗಿಯೇ ಹಿಂದೆ ಗಾಯತ್ರಿಯನ್ನು ಸಮರ್ಪಿಸಿದರೆ ಸರ್ವಾತ್ಮಕನಾದ ಪ್ರಾಣನನ್ನೇ ಸಮರ್ಪಿಸಿದಂತೆ ಎಂದು ಹೇಳಿದ್ದು.

5. ಯಾವ ಸಾವಿತ್ರಿಯನ್ನು ಹೇಳಿಕೊಡಬೇಕೆಂಬುದು ಪ್ರಕೃತವಲ್ಲ; ಗಾಯತ್ರ್ಯುಪಾಸನಾವಿಧಿಯೇ ಪ್ರಕೃತ.

6. ಬಹಳ, ಸ್ವಲ್ಪ- ಎಂಬುದು ಪರಿಚ್ಛಿನ್ನದ ವಿಷಯ.

7. ಆದ್ದರಿಂದ ಗಾಯತ್ರ್ಯುಪಾಸಕನು ಮಾಣವಕನಿಗೆ ಉಪದೇಶಮಾಡಿದರೆ ವಿದ್ಯಾನಿಷ್ಕ್ರಯಕ್ಕೆ ಎಷ್ಟುಕೊಟ್ಟರೂ ಸಾಲದು ಎಂದು ಉಪಾಸನೆಯ ಸ್ತುತಿಯನ್ನು ಮಾಡಿದೆ.

## ಗಾಯತ್ರ್ಯುಪಾಸನೆಯ ಮಹಿಮೆ

(ಉಪನಿಷತ್ತು)

**ಸ ಯ ಇಮಾಗ್ಂ ಸ್ತ್ರೀಂಲ್ಲೋಕಾನ್ ಪೂರ್ಣಾನ್ ಪ್ರತಿಗೃಹ್ಣೀಯಾತ್ ಸೋಽಸ್ಯಾ ಏತತ್ ಪ್ರಥಮಂ ಪದಮಾಪ್ನುಯಾದಥ ಯಾವತೀಯಂ ತ್ರಯೀವಿದ್ಯಾ ಯಸ್ತಾವತ್ ಪ್ರತಿಗೃಹ್ಣೀಯಾತ್ ಸೋಽಸ್ಯಾ ಏತದ್ ದ್ವಿತೀಯಂ ಪದಮಾಪ್ನುಯಾದಥ ಯಾವದಿದಂ ಪ್ರಾಣಿ ಯಸ್ತಾವತ್ ಪ್ರತಿಗೃಹ್ಣೀಯಾತ್ ಸೋಽಸ್ಯಾ ಏತತ್ತೃತೀಯಂ ಪದಮಾಪ್ನುಯಾದಥಾಸ್ಯಾ ಏತದೇವ ತುರೀಯಂ ದರ್ಶತಂ ಪದಂ ಪರೋರಜಾ ಯ ಏಷ ತಪತಿ ನೈವ ಕೇನಚನಾಪ್ಯಂ ಕುತ ಉ ಏತಾವತ್ಪ್ರತಿಗೃಹ್ಣೀಯಾತ್ ॥**

೬. ಯಾವನು ಪೂರ್ಣವಾದ ಈ ಮೂರು ಲೋಕಗಳನ್ನು ಪ್ರತಿಗ್ರಹಮಾಡುವನೋ ಅವನು ಇದರ ಈ ಪ್ರಥಮಪಾದವನ್ನು ಪಡೆದುಕೊಂಡವನಾಗುವನು ; ಇನ್ನು ಯಾವನು ಈ ತ್ರಯೀವಿದ್ಯೆ ಎಷ್ಟಿದೆಯೋ ಅಷ್ಟನ್ನು ಪ್ರತಿಗ್ರಹಮಾಡುತ್ತಾನೋ, ಅವನು ಈ ದ್ವಿತೀಯಪಾದವನ್ನು ಪಡೆದುಕೊಂಡವನಾಗುವನು ; ಇನ್ನು ಯಾವನು ಈ ಪ್ರಾಣಿಯಿರುವಷ್ಟನ್ನೂ ಪ್ರತಿಗ್ರಹಮಾಡುವನೋ ಅವನು ಇದರ ಈ ತೃತೀಯಪಾದವನ್ನು ಪಡೆದುಕೊಂಡವನಾಗುವನು. ಇನ್ನು ಈ ತುರೀಯದರ್ಶತಪದವೆಂಬ ಪರೋರಜಸ್ಸು, ಇಗೊ, ತಪಿಸುತ್ತಿದಾನಲ್ಲ, (ಇವನನ್ನು) ಏತರಿಂದಲೂ ಪಡೆದುಕೊಳ್ಳತಕ್ಕದ್ದಲ್ಲ, ಇಷ್ಟನ್ನೂ ಪ್ರತಿಗ್ರಹಮಾಡುವನೆಂಬುದು ಎಲ್ಲಿಯದು ?

## ಗಾಯತ್ರ್ಯುಪಾಸಕನಿಗೆ ಪ್ರತಿಗ್ರಹದೋಷವಿಲ್ಲ

(ಭಾಷ್ಯ)

೩೯೮. ಸ ಯ ಇಮಾನ್ ತ್ರೀನ್ । ಸ ಯಃ ಗಾಯತ್ರೀವಿತ್ ಇಮಾನ್ ಭೂರಾದೀನ್ ತ್ರೀನ್ ಗೋಽಶ್ವಾದಿಧನಪೂರ್ಣಾನ್ ಲೋಕಾನ್ ಪ್ರತಿಗೃಹ್ಣೀಯಾತ್ ಸ ಪ್ರತಿಗ್ರಹಃ ಅಸ್ಯಾ ಗಾಯತ್ರ್ಯಾ ಏತತ್ ಪ್ರಥಮಂ ಪದಂ ಯದ್ವ್ಯಾಖ್ಯಾತಮ್ ಆಪ್ನುಯಾತ್ ಪ್ರಥಮಪದವಿಜ್ಞಾನಫಲಂ ತೇನ ಭುಕ್ತಂ ಸ್ಯಾತ್ । ನ ತು ಅಧಿಕದೋಷೋತ್ಪಾದಕಃ ಸ ಪ್ರತಿಗ್ರಹಃ । ಅಥ ಪುನಃ ಯಾವತೀ ಇಯಂ ತ್ರಯೀವಿದ್ಯಾ ಯಃ ತಾವತ್ ಪ್ರತಿಗೃಹ್ಣೀಯಾತ್ । ಸಃ

ಅಸ್ಯಾ ಏತತ್ ದ್ವಿತೀಯಂ ಪದಮ್ ಆಪ್ನುಯಾತ್ ದ್ವಿತೀಯಪದವಿಜ್ಞಾನ ಫಲಂ ತೇನ ಭುಕ್ತಂ ಸ್ಯಾತ್। ತಥಾ ಯಾವದಿದಂ ಪ್ರಾಣಿ ಯಸ್ತಾವತ್ ಪ್ರತಿ ಗೃಹ್ಣೀಯಾತ್ ಸಃ ಅಸ್ಯಾ ಏತದ್ ತೃತೀಯಂ ಪದಮ್ ಆಪ್ನುಯಾತ್। ತೇನ ತೃತೀಯಪದವಿಜ್ಞಾನಫಲಂ ಭುಕ್ತಂ ಸ್ಯಾತ್। ಕಲ್ಪಯಿತ್ವಾ ಇದಮುಚ್ಯತೇ ಪಾದತ್ರಯಸಮಮಪಿ ಯದಿ ಕಶ್ಚಿತ್ ಪ್ರತಿಗೃಹ್ಣೀಯಾತ್ ತತ್ ಪದತ್ರಯ ವಿಜ್ಞಾನಫಲಸ್ಯೈವ ಕ್ಷಯಕಾರಣಮ್ ನ ತು ಅನ್ಯಸ್ಯ ದೋಷಸ್ಯ ಕರ್ತೃತ್ವೇ ಕ್ಷಮಮ್। ನ ಚೈವಂ ದಾತಾ ಪ್ರತಿಗೃಹೀತಾ ವಾ। ಗಾಯತ್ರೀವಿಜ್ಞಾನ ಸ್ತುತಯೇ ಕಲ್ಪ್ಯತೇ ದಾತಾ ಪ್ರತಿಗೃಹೀತಾ ಚ ಯದ್ಯಪ್ಯೇವಂ ಸಂಭಾವ್ಯತೇ ನಾಸೌ ಪ್ರತಿಗ್ರಹಃ ಅಪರಾಧಕ್ಷಮಃ। ಕಸ್ಮಾತ್? ಯತಃ ಅಭ್ಯಧಿಕಮಪಿ ಪುರುಷಾರ್ಥವಿಜ್ಞಾನಮ್ ಅವಶಿಷ್ಟಮೇವ ಚತುರ್ಥಪಾದವಿಷಯಂ ಗಾಯತ್ರ್ಯಾಃ। ತದ್ ದರ್ಶಯತಿ ಅಥ ಅಸ್ಯಾಃ ಏತದೇವ ತುರೀಯಂ ದರ್ಶತಂ ಪದಂ ಪರೋರಜಾ ಯ ಏಷ ತಪತಿ। ಯಚ್ಚೈತತ್ ನೈವ ಕೇನಚನ ಕೇನಚಿದಪಿ ಪ್ರತಿಗ್ರಹೇಣ ಲಭ್ಯಂ ನೈವ ಪ್ರಾಪ್ಯಮ್ ಇತ್ಯರ್ಥಃ। ಯಥಾ ಪೂರ್ವೋಕ್ತಾನಿ ತ್ರೀಣಿ ಪದಾನಿ। ಏತಾನ್ಯಪಿ ನೈವಾಪ್ಯಾನಿ ಕೇನಚಿತ್। ಕಲ್ಪಯಿತ್ವಾ ಏವಮುಕ್ತಮ್, ಪರಮಾರ್ಥತಃ ಕುತ ಉ ಏತಾವತ್ ಪ್ರತಿ ಗೃಹ್ಣೀಯಾತ್ ತ್ರೈಲೋಕ್ಯಾದಿಸಮಮ್? ತಸ್ಮಾದ್ ಗಾಯತ್ರೀ ಏವಂ ಪ್ರಕಾರಾ ಉಪಾಸ್ಯಾ ಇತ್ಯರ್ಥಃ॥

(ಭಾಷ್ಯಾರ್ಥ)

'ಸ ಯ ಇಮಾಂ ಸ್ತ್ರೀನ್' (ಎಂಬ ಕಂಡಿಕೆಯ ಅರ್ಥವಿದು): ಯಾವ ಗಾಯತ್ರ್ಯುಪಾಸಕನು ಈ ಭೂರಾದಿಯಾದ, ಗೋವುಗಳು ಅಶ್ವಗಳು ಮುಂತಾಗಿ ತುಂಬಿರುವ, ಮೂರು ಲೋಕಗಳನ್ನೂ ಪ್ರತಿಗ್ರಹಮಾಡುವನೋ ಆ (ಅವನ) ಪ್ರತಿಗ್ರಹವು ಈ ಗಾಯತ್ರಿಯ ಮೊದಲನೆಯ ಪಾದವೆಂದು ವ್ಯಾಖ್ಯಾನಮಾಡಲಾಯಿತಲ್ಲ ಇದನ್ನು ಪಡೆದುಕೊಂಡೀತು, ಪ್ರಥಮಪಾದದ ವಿಜ್ಞಾನಫಲವನ್ನು ಅದರಿಂದ ಭೋಗಿಸಿದಂತೆ ಆಗುವದೇ ಹೊರತು, ಆ ಪ್ರತಿ ಗ್ರಹವು (ಆದಕ್ಕೂ) ಹೆಚ್ಚಿನ ದೋಷವನ್ನುಂಟುಮಾಡಲಾರದು. ಇನ್ನು ಈ ತ್ರಯೀವಿದ್ಯಾ(ಫಲವು) ಎಷ್ಟೋ ಅಷ್ಟನ್ನೂ ಯಾವನು ಪ್ರತಿಗ್ರಹಮಾಡುವನೋ, ಅವನು ಇದರ ಈ ಎರಡನೆಯ ಪಾದವನ್ನು ಪಡೆದುಕೊಂಡಾನು.[1] ಅವನು ಎರಡನೆಯ ಪಾದದ ವಿಜ್ಞಾನಫಲವನ್ನು (ಮಾತ್ರ) ಭೋಗಿಸಿದವನಾದಾನು.

---

1. ಅಥವಾ ಆ ಪ್ರತಿಗ್ರಹವು ಇದರ ಎರಡನೆಯ ಪಾದವನ್ನು ಪಡೆದುಕೊಂಡೀತು ಎಂದು ಹಿಂದಿನಂತೆ ಅನುವಾದಮಾಡಿಕೊಳ್ಳಬೇಕು; ಮೂರನೆಯ ಪಾದಕ್ಕೂ ಹೀಗೆಯೇ.

ಇದರಂತೆ ಈ ಪ್ರಾಣಿಜಾತವು ಎಷ್ಟೋ ಅಷ್ಟನ್ನು ಯಾವನು ಪ್ರತಿಗ್ರಹಮಾಡು ವನೋ ಅವನು ಈ ಮೂರನೆಯ ಪಾದವನ್ನು ಪಡೆದುಕೊಂಡಾನು, ಅವನು ಮೂರನೆಯ ಪಾದದ ವಿಜ್ಞಾನದ ಫಲವನ್ನು ಭೋಗಿಸಿದವನಾದಾನು. (ಹೀಗೆಂದು) ಕಲ್ಪಿಸಿ, ಇದನ್ನು ಹೇಳಿದೆ. ಪಾದತ್ರಯಕ್ಕೆ ಸಮಾನವಾಗಿ ಯಾವನಾದರೂ ಪ್ರತಿಗ್ರಹಮಾಡುವನಾದರೂ ಅದು ಪಾದತ್ರಯವಿಜ್ಞಾನ ಫಲದ ಕ್ಷಯಕ್ಕೇ ಕಾರಣವೇ ಹೊರತು ಅವನಿಗೆ ಮತ್ತೊಂದು ದೋಷವನ್ನುಂಟು ಮಾಡಲಾರದು. ಆದರೆ ಹೀಗೆ ದಾನಮಾಡುವವನಾಗಲಿ ಪ್ರತಿಗ್ರಹಮಾಡು ವವನಾಗಲಿ ಇರುವದಿಲ್ಲ.

ಗಾಯತ್ರೀವಿಜ್ಞಾನದ ಸ್ತುತಿಗಾಗಿ ಇದನ್ನು ಕಲ್ಪಿಸಿರುತ್ತದೆ. ಇಂಥ ದಾತೃವೂ ಪ್ರತಿಗ್ರಹೀತೃವೂ ಇದಾನೆಂದು ಇಟ್ಟುಕೊಂಡರೂ ಈ ಪ್ರತಿಗ್ರಹವು ಅಪರಾಧವನ್ನುಂಟುಮಾಡಲಾರದು. ಏಕೆ? ಎಂದರೆ ಗಾಯತ್ರಿಯ ಚತುರ್ಥಪಾದ ವಿಷಯದ ಹೆಚ್ಚಿಗೆಯ ಪುರುಷಾರ್ಥವಿಜ್ಞಾನವು ಉಳಿದುಕೊಂಡೇ ಇರುತ್ತದೆ. ಇದನ್ನೇ (ಶ್ರುತಿ) ತಿಳಿಸುತ್ತಿದೆ ; ಇನ್ನು ಇದೇ ತುರೀಯದರ್ಶತಪದವು, ಈ ಪರೋರಜಸ್ಸಿನಲ್ಲಿ ತಪಿಸುತ್ತಿರುವನಲ್ಲ (ಇವನೇ ಆ ಪಾದವು), ಆ ಇದು ಯಾವದ ರಿಂದಲೂ ಯಾವ ಪ್ರತಿಗ್ರಹದಿಂದಲೂ ಆಪ್ಯವಲ್ಲ, ಹಿಂದೆ ಹೇಳಿದ ಮೂರು ಪಾದಗಳಂತೆ ಪಡೆದುಕೊಳ್ಳತಕ್ಕದ್ದಲ್ಲವೇ ಅಲ್ಲ ಎಂದರ್ಥ.[1] ಈ (ಮೂರೂ) ಏತರಿಂದಲೂ ಆಪ್ಯಗಳಲ್ಲ ; (ಅವುಗಳನ್ನು ಭೋಗಿಸಿದಂತೆ ಆಗಬಹುದೆಂದು ಸುಮ್ಮನೆ) ಕಲ್ಪಿಸಿ ಹೀಗೆ ಹೇಳಿದೆವು. ನಿಜವಾಗಿ (ನೋಡಿದರೆ) ಇಷ್ಟನ್ನೂ, ಎಂದರೆ (ಈ) ತ್ರೈಲೋಕ್ಯವೇ ಮುಂತಾದದ್ದಕ್ಕೆ ಸಮವಾಗುವಷ್ಟನ್ನೂ ಎಲ್ಲಿ ಪ್ರತಿಗ್ರಹಮಾಡಿಯಾನು[2] ?

ಆದ್ದರಿಂದ ಈ ಪ್ರಕಾರವಾದ ಗಾಯತ್ರಿಯನ್ನು ಉಪಾಸನೆಮಾಡಬೇಕು ಎಂದರ್ಥ.

## ಗಾಯತ್ರ್ಯುಪಸ್ಥಾನ

(ಉಪನಿಷತ್ತು)

**ತಸ್ಯಾ ಉಪಸ್ಥಾನಂ ಗಾಯತ್ರ್ಯಸ್ಯೇಕಪದೀ ದ್ವಿಪದೀ ತ್ರಿಪದೀ ಚತುಷ್ಪದ್ಯಪದಸಿ ನ ಹಿ ಪದ್ಯಸೇ ನಮಸ್ತೇ ತುರೀಯಾಯ ದರ್ಶತಾಯ ಪದಾಯ ಪರೋರಜಸೇಽಸಾವದೋ ಮಾ**

1. ಎಷ್ಟುಪ್ರತಿಗ್ರಹಮಾಡಿದರೂ ಅದರ ವಿಜ್ಞಾನಫಲವು ಮುಗಿಯಲಾರದು ಎಂದರ್ಥ.

2. ಮೂರು ಪಾದಗಳ ವಿಜ್ಞಾನಫಲವುಕೂಡ ನಿಜವಾಗಿ ಮುಗಿಯಲಾರದು ; ಇನ್ನು ಗಾಯತ್ರಿಯ ಉಪಾಸನೆಯ ಫಲವೆಲ್ಲ ಮುಗಿಯುವದೆಲ್ಲಿಬಂತು ?

**ಪ್ರಾಪದಿತಿ ಯಂ ದ್ವಿಷ್ಯಾದಸಾವಸ್ಮೈ ಕಾಮೋ ಮಾ ಸಮೃದ್ಧೀತಿ ವಾ ನ ಹೈವಾಸ್ಮೈ ಸ ಕಾಮಃ ಸಮೃಧ್ಯತೇ ಯಸ್ಮಾ ಏವಮುಪತಿಷ್ಠತೇಽಹಮದಃ ಪ್ರಾಪಮಿತಿ ವಾ ॥ ೭ ॥**

೭. ಅದರ ಉಪಸ್ಥಾನವು, "ಗಾಯತ್ರಿಯೆ, ಏಕಪದಿಯಾಗಿ ರುವೆ, ದ್ವಿಪದಿ, ತ್ರಿಪದಿ, ಚತುಷ್ಪದಿ; ಅಪದಿಯೂ ಆಗಿರುವೆ, ಏಕೆಂದರೆ ಪ್ರಾಪ್ಯಳಲ್ಲ, ತುರೀಯದರ್ಶತಪದವೆ, ಪರೋರಜಸ್ಸೇ, ನಿನಗೆ ನಮಸ್ಕಾರ! ಯಾವನನ್ನು ದ್ವೇಷಿಸುವನೋ 'ಇಂಥವನು ಇಂಥದ್ದನ್ನು ಪಡೆಯದಿರಲಿ' ಎಂದೋ ಈ ಕಾಮವು ಅವನಿಗೆ ಸಮೃದ್ಧ ವಾಗದಿರಲಿ ಎಂದೋ, 'ನನಗೆ ಅದು ಸಿಕ್ಕಲಿ!' ಎಂದೋ (ಹೇಳ ಬೇಕು). ಯಾವನಿಗಾಗಿ ಹೀಗೆಂದು ಉಪಸ್ಥಾನಮಾಡುವನೋ ಅವನಿಗೆ ಆ ಕಾಮವು ಸಮೃದ್ಧವಾಗುವದೇ ಇಲ್ಲ!

## ಗಾಯತ್ರಿಯ ಉಪಸ್ಥಾನವೂ ಅದರ ಫಲವೂ

**(ಭಾಷ್ಯ)**

೩೯೯. **ತಸ್ಯಾ ಉಪಸ್ಥಾನಮ್। ತಸ್ಯಾಃ ಗಾಯತ್ರ್ಯಾಃ ಉಪಸ್ಥಾನಮ್ ಉಪೇತ್ಯ ಸ್ಥಾನಮ್, ನಮಸ್ಕರಣಮ್ ಅನೇನ ಮನ್ತ್ರೇಣ। ಕೋಽಸೌ ಮನ್ತ್ರಃ ಇತಿ? ಆಹ। ಹೇ ಗಾಯತ್ರಿ ಅಸಿ ಭವಸಿ ತ್ರೈಲೋಕ್ಯಪಾದೇನ ಏಕಪದೀ, ತ್ರಯೀವಿದ್ಯಾರೂಪೇಣ ದ್ವಿತೀಯೇನ ದ್ವಿಪದೀ, ಪ್ರಾಣಾದಿನಾ ತೃತೀಯೇನ ತ್ರಿಪದೀ ಅಸಿ। ಚತುರ್ಥೇನ ತುರೀಯೇಣ ಚತುಷ್ಪದೀ ಅಸಿ। ಏವಂ ಚತುರ್ಭಿಃ ಪಾದೈಃ ಉಪಾಸಕೈಃ ಪದ್ಯಸೇ ಜ್ಞಾಯಸೇ। ಅತಃ ಪರಂ ಪರೇಣ ನಿರುಪಾಧಿಕೇನ ಸ್ವೇನ ಆತ್ಮನಾ ಅಪದಸಿ ಅವಿದ್ಯಮಾನಂ ಪದಂ ಯಸ್ಯಾಃ ತವ ಯೇನ ಪದ್ಯಸೇ ಸಾ ತ್ವಮ್ ಅಪತ್ ಅಸಿ। ಯಸ್ಮಾತ್ ನ ಹಿ ಪದ್ಯಸೇ। ನೇತಿನೇತ್ಯಾತ್ಮತ್ವಾತ್। ಅತಃ ವ್ಯವಹಾರವಿಷಯಾಯ ನಮಸ್ತೇ ತುರೀಯಾಯ ದರ್ಶತಾಯ ಪದಾಯ ಪರೋರಜಸೇ। ಅಸೌ ಶತ್ರುಃ ಪಾಪ್ಮಾ ತ್ವತ್ಪ್ರಾಪ್ತಿವಿಘ್ನಕರಃ ಅದಃ ತತ್ ಆತ್ಮನಃ ಕಾರ್ಯಂ ಯತ್ ತ್ವತ್ಪ್ರಾಪ್ತಿವಿಘ್ನಕರ್ತೃತ್ವಮ್, ಮಾ ಪ್ರಾಪತ್ ಮೈವ ಪ್ರಾಪ್ನೋತು ಇತಿ ಶಬ್ದಃ ಮನ್ತ್ರಪರಿಸಮಾಪ್ತ್ಯರ್ಥಃ। ಯಂ ದ್ವಿಷ್ಯಾತ್ ಯಂ ಪ್ರತಿ ದ್ವೇಷಂ ಕುರ್ಯಾತ್ ಸ್ವಯಂ ವಿದ್ವಾನ್ ತಂ ಪ್ರತಿ ಅನೇನ ಉಪಸ್ಥಾನಮ್। ಅಸೌ ಶತ್ರುಃ ಅಮುಕನಾಮಾ ಇತಿ ನಾಮ ಗೃಹ್ಣೀಯಾತ್। ಅಸೌ[1] ಅಸ್ಮೈ ಯಜ್ಞದತ್ತಾಯ ಅಭಿಪ್ರೇತಃ**

---

1. ಇಲ್ಲಿ ಅಸೌ ಎಂಬ ಶಬ್ದವು ಮೂಲದಲ್ಲಿರಬೇಕೆಂದು ಸೇರಿಸಿಕೊಂಡಿದೆ.

ಕಾಮಃ ಮಾ ಸಮೃದ್ಧಿ ಸಮೃದ್ಧಿಂ ಮಾ ಪ್ರಾಪ್ನೋತು ಇತಿ ವಾ ಉಪತಿಷ್ಠತೇ। ನ ಹೈವ ಅಸ್ಮೈ ದೇವದತ್ತಾಯ ಸ ಕಾಮಃ ಸಮೃಧ್ಯತೇ। ಕಸ್ಮೈ ? ಯಸ್ಮೈ ಏವಮ್ ಉಪತಿಷ್ಠತೇ। ಅಹಂ ಅದಃ ದೇವದತ್ತಾಭಿಪ್ರೇತಂ ಪ್ರಾಪಮ್ ಇತಿ ವಾ ಉಪತಿಷ್ಠತೇ। ಅಸೌ ಅದಃ ಮಾ ಪ್ರಾಪತ್ ಇತ್ಯಾದಿತ್ರಯಾಣಾಂ ಮಂತ್ರ ಪದಾನಾಂ ಯಥಾಕಾಮಂ ವಿಕಲ್ಪಃ॥

(ಭಾಷ್ಯಾರ್ಥ)

'ತಸ್ಯಾ ಉಪಸ್ಥಾನಮ್' (ಎಂಬ ಕಂಡಿಕೆಯ ಅಭಿಪ್ರಾಯವಿದು). ಆ ಗಾಯತ್ರಿಯ ಉಪಸ್ಥಾನವು ಎಂದರೆ ಬಳಿಗೆ ಬಂದು (ಉಪ), ನಿಲ್ಲುವಿಕೆ ಎಂದರೆ ನಮಸ್ಕರಿಸುವೆ. ಈ ಮಂತ್ರದಿಂದ (ಉಪಸ್ಥಾನವನ್ನು ಮಾಡಬೇಕು).

ಈ ಮಂತ್ರವು ಯಾವದು ? ಎಂದರೆ (ಶ್ರುತಿ) ಹೇಳುತ್ತದೆ. (ಗಾಯತ್ರ್ಯಸಿ ಏಕಪದೀ...... ..ಎಂಬುದು ಮಂತ್ರವು. ಇದರ ಅರ್ಥವಿದು) : ಎಲೌ ಗಾಯತ್ರಿ, ತ್ರೈಲೋಕ್ಯಪಾದದಿಂದ ಏಕಪದಿಯಾಗಿರುತ್ತೀಯೆ ; ತ್ರಯೀ ವಿದ್ಯಾರೂಪವಾದ ದ್ವಿತೀಯಪಾದದಿಂದ ದ್ವಿಪದಿ(ಯಾಗಿರುತ್ತೀಯೆ) ; ಪ್ರಾಣವೇ ಮುಂತಾದ (ರೂಪದ) ಮೂರನೆಯ (ಪಾದ)ದಿಂದ ತ್ರಿಪದಿಯಾಗಿರುತ್ತೀಯೆ ; ನಾಲ್ಕನೆಯದಾದ ತುರೀಯ(ಪಾದ)ದಿಂದ ಚತುಷ್ಪದಿಯಾಗಿರುತ್ತೀಯೆ. ಹೀಗೆ ನಾಲ್ಕುಪಾದಗಳಿಂದ ಉಪಾಸಕರಿಂದ (ಪದ್ಯಸೇ= ಜ್ಞಾಯಸೇ) ಪ್ರಾಪ್ತಳಾಗುವೆ, ಜ್ಞಾತಳಾಗುವೆ.[1] ಇನ್ನು ಮುಂದೆ (ಇದಕ್ಕೂ) ಹೆಚ್ಚಿನ ನಿರುಪಾಧಿಕವಾದ ನಿನ್ನ ಸ್ವರೂಪದಿಂದ ಅಪದ್ ಆಗಿರುತ್ತೀಯೆ ; ಯಾವದರಿಂದ ನಿನ್ನನ್ನು ಪಡೆಯಬಹುದೋ ಅಂಥ ಪಾದವಿಲ್ಲದವಳಾದ್ದರಿಂದ ಆ ನೀನು ಅಪದಳಾಗಿರುವೆ, ಏಕೆಂದರೆ ನೇತಿ ನೇತಿ ಎಂಬ ಆತ್ಮರೂಪಳಾದ್ದರಿಂದ ಏತರಿಂದಲೂ ನೀನು ಜ್ಞಾತಳಾಗುವಂತಿಲ್ಲ.[2] ಆದ್ದರಿಂದ ವ್ಯವಹಾರಕ್ಕೆ ವಿಷಯವಾಗಿರುವ ತುರೀಯದರ್ಶತ ಪದವಾದ ಪರೋರಜಸ್ಸಾದ ನಿನಗೆ ನಮಸ್ಕಾರ !

ಈ ಪಾಪಿಷ್ಠನಾದ (ನನ್ನ) ಶತ್ರುವು ನಿನ್ನನ್ನು (ನಾನು) ಪಡೆದುಕೊಳ್ಳುವದಕ್ಕೆ ಅಡ್ಡಿಯನ್ನು ಮಾಡುತ್ತಿದಾನಲ್ಲ, (ಅವನು) ಅದನ್ನು, ನಿನ್ನನ್ನು ಪಡೆದುಕೊಳ್ಳುವದಕ್ಕೆ ಅಡ್ಡಿಮಾಡುವದೆಂಬ ಆ ತನ್ನ ಕಾರ್ಯವನ್ನು, ಪಡೆಯದಿರಲಿ,

---

1. ಏಕಪದೀ ಮುಂತಾದ ಶಬ್ದಗಳನ್ನು ಉಚ್ಚರಿಸುವಾಗ ತ್ರೈಲೋಕ್ಯಾತ್ಮಕವಾಗಿರುವ ಮೊದಲನೆಯ ಪಾದವೇ ಮುಂತಾದವುಗಳನ್ನು ಮನದಂದುಕೊಳ್ಳಬೇಕು. ಎಂದು ಭಾವ.

2 ನಾಲ್ಕು ಪಾದಗಳು ಗಾಯತ್ರಿಯ ಸೋಪಾಧಿಕರೂಪ ; ಅವುಗಳಲ್ಲಿ ನಾಲ್ಕನೆಯ ಪಾದವಾದ ಆದಿತ್ಯಪುರುಷನೇ ಅಪರಬ್ರಹ್ಮಸ್ವರೂಪ.

ಪಡೆಯಲೇಬೇಡ! (ಇಲ್ಲಿ ಮೂಲದಲ್ಲಿರುವ) ಇತಿಶಬ್ದವು (ಮೊದಲನೆಯ) ಮಂತ್ರವು ಮುಗಿಯಿತೆಂಬುದನ್ನು (ತಿಳಿಸು)ವದಕ್ಕಾಗಿ (ಬಂದಿದೆ). ಯಾವನನ್ನು ದ್ವೇಷಿಸುವನೋ, ಯಾವನ ವಿಷಯಕ್ಕೆ ಉಪಾಸಕನು ತಾನು ದ್ವೇಷವನ್ನು ಮಾಡುತ್ತಾನೋ, ಅವನ ವಿಷಯಕ್ಕೆ ಈ ಮಂತ್ರದಿಂದ ಉಪಸ್ಥಾನ (ಮಾಡಬೇಕು). 'ಇವನು' ಎಂದರೆ ಈ ಶತ್ರುವು; ಇಂಥ ಹೆಸರಿನವನು (ಎಂದು ಇಲ್ಲಿ) ಹೆಸರನ್ನು ಹೇಳಬೇಕು.

ಈ ಯಜ್ಞದತ್ತನಿಗೆ ಅಭಿಪ್ರೇತವಾದ ಈ[1] ಕಾಮವು ಸಮೃದ್ಧವಾಗದಿರಲಿ, ಸಮೃದ್ಧಿಯನ್ನು ಪಡೆದುಕೊಳ್ಳದಿರಲಿ! –ಎಂದಾದರೂ ಉಪಸ್ಥಾನಮಾಡಬೇಕು. (ಹಾಗೆ ಮಾಡಿದರೆ) ಅವನಿಗೆ (ಆ) ದೇವದತ್ತನಿಗೆ[2] ಆ ಕಾಮವು ಸಮೃದ್ಧವಾಗುವದೇ ಇಲ್ಲ; (ಅವನಿಗೆ ಎಂದರೆ) ಯಾವನಿಗೆ (ಸಮೃದ್ಧವಾಗುವದಿಲ್ಲ)? ಎಂದರೆ ಯಾವನಿಗಾಗಿ ಹೀಗೆ ಉಪಸ್ಥಾನಮಾಡುತ್ತಾನೋ (ಅವನಿಗೆ).[3]

ಅಥವಾ ನಾನು ಅದನ್ನು (ಈ) ದೇವದತ್ತನಿಗೆ ಅಭಿಪ್ರೇತವಾದ (ಕಾಮ)ವನ್ನು ಪಡೆಯುವಂತಾಗಲಿ! –ಎಂದಾದರೂ ಉಪಸ್ಥಾನಮಾಡಬೇಕು.[4]

'ಇವನು ಅದನ್ನು ಪಡೆಯದಿರಲಿ!' ಎಂದು ಮುಂತಾಗಿರುವ ಮಂತ್ರಪದಗಳನ್ನು (ಉಪಾಸಕನ) ಕಾಮವಿದ್ದಂತೆ ವಿಕಲ್ಪ(ದಿಂದ ಉಚ್ಚರಿಸಬೇಕು).[5]

## ಗಾಯತ್ರಿಯ ಮುಖ

(ಉಪನಿಷತ್ತು)

**ಏತದ್ಧ ವೈ ತಜ್ಜನಕೋ ವೈದೇಹೋ ಬುಡಿಲಮಾಶ್ವತರಾಶ್ವಿಮುವಾಚ ಯನ್ನು ಹೋ ತದ್ಗಾಯತ್ರೀವಿದಬ್ರೂಥಾ ಅಥ**

---

1. ಅಸೌ ಎಂಬ ಮಾತು ಬಿಟ್ಟುಹೋಗಿದೆ ಎಂದು ಇಟ್ಟುಕೊಂಡದ್ದರ ಅನುವಾದವಿದು.

2. ಹಿಂದೆ ಯಜ್ಞದತ್ತನಿಗೆ ಎಂದಿರುವದರಿಂದ ಇಲ್ಲಿಯೂ ಅದೇ ಮಾತಿರಬೇಕಿತ್ತು; ಆದರೆ ಹೊಸ ಹೆಸರನ್ನು ಏಕೆ ಪ್ರಯೋಗಿಸಿದೆಯೋ ತಿಳಿಯಲಿಲ್ಲ.

3. ಮೊದಲನೆಯ ಮಂತ್ರದಲ್ಲಿ ಶತ್ರುವು ತನಗೆ ವಿಘ್ನಮಾಡದಿರಲಿ! –ಎಂದು ಪ್ರಾರ್ಥಿಸಿದೆ; ಇಲ್ಲಿ ಶತ್ರುವಿಗೆ ಇಷ್ಟವಾದದ್ದು ದೊರೆಯದಿರಲಿ ಎಂದು ಅನಿಷ್ಟವನ್ನೇ ಕೋರಿದೆ. ಇದು ಅಭಿಚಾರಿಕಕರ್ಮ. ಶ್ರುತಿಗೆ ಇದನ್ನು ಮಾಡಬೇಕೆಂಬುದೇನೂ ಇಷ್ಟವಲ್ಲ ವಾದರೂ ದ್ವೇಷವಿದ್ದವನಿಗೆ ಈ ಫಲಸಂಬಂಧವನ್ನು ಹೇಳಿದೆ, ಅಭಿಚಾರಿಕಕರ್ಮವನ್ನು ಮಾಡಿದ ದೋಷವೇನೋ ಉಂಟೇ ಉಂಟು.

4. ಅವನ ಕಾಮವು ನನಗೇ ಆಗಲಿ ಎಂಬುದು ಮಂತ್ರದ ಅರ್ಥ.

5. ಈ ಮೂರು ಮಂತ್ರಗಳನ್ನೂ ಒಬ್ಬನೇ ಒಮ್ಮೆಗೇ ಉಚ್ಚರಿಸತಕ್ಕದ್ದಲ್ಲ; ಮಂತ್ರಗಳಲ್ಲಿ ಸೂಚಿತವಾದ ಯಾವ ಕಾಮವು ಪ್ರಾಪ್ತವಾಗಬೇಕೋ ಅದಕ್ಕೆ ತಕ್ಕ ಮಂತ್ರವನ್ನು ಉಚ್ಚರಿಸಬೇಕು ಎಂದರ್ಥ.

**ಕಥಗ್ಂ ಹಸ್ತೀಭೂತೋ ವಹಸೀತಿ ಮುಖಗ್ಂ ಹ್ಯಸ್ಯಾಃ ಸಮ್ರಾಣ್ನ ವಿದಾಂಚಕಾರೇತಿ ಹೋವಾಚ ತಸ್ಯಾ ಅಗ್ನಿರೇವ ಮುಖಂ ಯದಿ ಹ ವಾ ಅಪಿ ಬಹ್ವಿವಾಗ್ನಾವಭ್ಯಾದಧತಿ ಸರ್ವ ಮೇವ ತತ್ಸಂದಹತ್ಯೇವಗ್ಂ ಹೈವೈವಂವಿದ್ ಯದ್ಯಪಿ ಬಹ್ವಿವ ಪಾಪಂ ಕುರುತೇ ಸರ್ವಮೇವ ತತ್ ಸಂಪ್ಸಾಯ ಶುದ್ಧಃ ಪೂತೋಽಜರೋಽಮೃತಃ ಸಂಭವತಿ ॥೮॥**

೮. ಇಲ್ಲಿ ಇದನ್ನು (ಹೇಳುತ್ತಾರೆ) : ಜನಕವೈದೇಹನು ಬುಡಿಲನೆಂಬ ಆಶ್ವತರಾಶ್ವಿಯನ್ನು ಕುರಿತು ಇಂತೆಂದನು. 'ಹೋ ! ಗಾಯತ್ರೀವಿದನೆಂದು ಹೇಳಿಕೊಂಡೆಯಲ್ಲ, ಹಾಗಾದರೆ ಆನೆಯಾಗಿ ಹೊರುತ್ತಿರುವೆಯಲ್ಲ, (ಇದು) ಹೇಗೆ ?' 'ಸಮ್ರಾಜನೆ, ಈ (ಗಾಯತ್ರಿಯ) ಮುಖವನ್ನು (ನಾನು) ತಿಳಿಯಲಿಲ್ಲವಾದ್ದರಿಂದ' ಎಂದು (ಅವನು) ಹೇಳಿದನು. ಆ (ಗಾಯತ್ರಿಗೆ) ಅಗ್ನಿಯೇ ಮುಖವು. ಅಗ್ನಿಯಲ್ಲಿ ಬಹುವಾಗಿಯೇ ಅಭ್ಯಾಧಾನಮಾಡಿದರೂ ಅದನ್ನೆಲ್ಲವನ್ನೂ (ಅಗ್ನಿಯು) ಸುಟ್ಟುಹಾಕುತ್ತದೆಯಷ್ಟೆ. ಹಾಗೆಯೇ ಹೀಗೆಂದು ಅರಿತಿರುವವನು ಬಹುವಾಗಿಯೇ ಪಾಪವನ್ನು ಮಾಡಿದರೂ ಅದನ್ನೆಲ್ಲವನ್ನೂ ಅರಗಿಸಿಕೊಂಡು ಶುದ್ಧನೂ ಪೂತನೂ ಅಜರನೂ ಅಮೃತನೂ ಆಗಿರುವನು.

## ಗಾಯತ್ರೀಮುಖವಿಧಿಗೆ ಅರ್ಥವಾದ

(ಭಾಷ್ಯ)

೪೦೦. ಗಾಯತ್ರ್ಯಾ ಮುಖವಿಧಾನಾಯ ಅರ್ಥವಾದ ಉಚ್ಯತೇ । ಏತತ್ ಹ ಕಿಲ ವೈ ಸ್ಮರ್ಯತೇ ತತ್ ತತ್ರ ಗಾಯತ್ರೀವಿಜ್ಞಾನವಿಷಯೇ । ಜನಕೋ ವೈದೇಹಃ ಬುಡಿಲಂ[1] ನಾಮತಃ । (ಅಶ್ವತರಾಶ್ವಿಮ್)[2] ಅಶ್ವತರಾಶ್ವಸ್ಯ ಅಪತ್ಯಮ್ ಆಶ್ವತರಾಶ್ವಿಃ ತಂ ಕಿಲ ಉಕ್ತವಾನ್ । ಯತ್ ನು ಇತಿ ವಿತರ್ಕೇ । ಹೋ ಅಹೋ ಇತ್ಯೇತತ್ । ತತ್ ಯತ್ ತ್ವಂ ಗಾಯತ್ರೀವಿದ ಬ್ರೂಥಾಃ ಗಾಯತ್ರೀವಿದಸ್ಮಿ ಇತಿ ಯತ್ ಅಬ್ರೂಥಾಃ ಕಿಮಿದಂ ತಸ್ಯ ವಚಸಃ ಅನನುರೂಪಮ್ । ಅಥ ಕಥಮ್ ಯದಿ ಗಾಯತ್ರೀವಿತ್ ಪ್ರತಿಗ್ರಹದೋಷೇಣ ಹಸ್ತೀಭೂತೋ ವಹಸಿ ಇತಿ ? ಸ ಪ್ರತ್ಯಾಹ ರಾಜ್ಞಾ ಸ್ಮಾರಿತಃ ಮುಖಂ

---

1. ಈ ಪಾಠವೇ ಮೇಲು.
2. ಈ ಮಾತು ಇಲ್ಲಿ ಬಿಟ್ಟಿದೆ.

ಗಾಯತ್ರ್ಯಾಃ ಹಿ ಯಸ್ಮಾತ್ ಅಸ್ಯಾಃ ಹೇ ಸಮ್ರಾಟ್ ನ ವಿದಾಂಚಕಾರ ನ ವಿಜ್ಞಾತವಾನಸ್ಮಿ ಇತಿ ಹ ಉವಾಚ । ಏಕಾಙ್ಗವಿಕಲತ್ವಾತ್ ಗಾಯತ್ರೀ ವಿಜ್ಞಾನಂ ಮಮ ಅಫಲಂ ಜಾತಮ್ ॥

(ಭಾಷ್ಯಾರ್ಥ)

ಗಾಯತ್ರಿಯ ಮುಖವನ್ನು ತಿಳಿಸುವದಕ್ಕಾಗಿ (ಈ) ಅರ್ಥವಾದವನ್ನು ಹೇಳಿರುತ್ತದೆ. (ತತ್= ತತ್ರ) ಇಲ್ಲಿ, ಎಂದರೆ ಗಾಯತ್ರಿಯ ಉಪಾಸನೆಯ ವಿಷಯದಲ್ಲಿ (ಹ= ಕಿಲ) ಹೀಗಂತೆ, (ಹೀಗೆಂದು) ಹೇಳುತ್ತಾರೆ. ಜನಕ ವೈದೇಹನು ಬುಡಿಲನೆಂಬ ಹೆಸರುಳ್ಳ (ಆಶ್ವತರಾಶ್ವಿಯನ್ನು) ಅಶ್ವತರನ ಮಗನು ಆಶ್ವತರಾಶ್ವಿಯು, ಅವನನ್ನು ಹೀಗೆಂದು ಕೇಳಿದನಂತೆ. ಹೋ! ಆಹಾ ಎಂದರ್ಥ. ಗಾಯತ್ರೀವಿದನೆಂದು ಹೇಳುತ್ತಿರುವೆಯಲ್ಲ, ಗಾಯತ್ರಿಯನ್ನು ಬಲ್ಲವನಿರುವೆನೆಂದು ಹೇಳಿಕೊಂಡೆಯಲ್ಲ ಇದು (ಆಶ್ಚರ್ಯವು). ಆ (ಹೇಳಿಕೊಂಡ) ಮಾತಿಗೆ ಅನನುಗುಣವೆಂಬುದು ಯಾವದು? ಎಂದರೆ, ಹಾಗಾದರೆ (ನೀನು) ಗಾಯತ್ರಿಯನ್ನು ಬಲ್ಲವನಾದರೆ ಪ್ರತಿಗ್ರಹದೋಷದಿಂದ (ಹೀಗೆ) ಆನೆಯಾಗಿ (ಭಾರವನ್ನು) ಹೊರುತ್ತಿರುವೆಯಲ್ಲ, (ಇದು) ಹೇಗೆ?

ರಾಜನು (ಹೀಗೆ) ನೆನಪುಕೊಟ್ಟು (ಕೇಳಲು) ಅವನು (ಹೀಗೆಂದು) ಉತ್ತರವನ್ನು ಕೊಟ್ಟನು. (ಹಿ= ಯಸ್ಮಾತ್) 'ಏಕೆಂದರೆ ಈ ಗಾಯತ್ರಿಯ ಮುಖವನ್ನು, ಎಲೈ ಸಮ್ರಾಜನೆ, (ನ ವಿದಾಂಚಕಾರ= ನ ವಿಜ್ಞಾತವಾನಸ್ಮಿ) 'ನಾನು ತಿಳಿದುಕೊಂಡಿರುವದಿಲ್ಲ' (ಹೀಗೆ ಉಪಾಸನೆಯು) ಒಂದಂಗದಲ್ಲಿ ನ್ಯೂನತೆಯುಳ್ಳದ್ದಾದ್ದರಿಂದ ನನ್ನ ಗಾಯತ್ರೀವಿಜ್ಞಾನವು ನಿಷ್ಫಲವಾಯಿತು.

## ಅಗ್ನಿಯೇ ಗಾಯತ್ರಿಯ ಮುಖವು

(ಭಾಷ್ಯ)

೪೦೧. ಶೃಣು ತರ್ಹಿ । ತಸ್ಯಾ ಗಾಯತ್ರ್ಯಾ ಅಗ್ನಿರೇವ ಮುಖಮ್ । ಯದಿ ಹ ವೈ ಅಪಿ ಬಹ್ವಿವ ಇನ್ಧನಮ್ ಅಗ್ನೌ ಅಭ್ಯಾದಧತಿ ಲೌಕಿಕಾಃ ಸರ್ವಮೇವ ತತ್ ಸಂದಹತ್ಯೇವ ಇನ್ಧನಮ್ ಅಗ್ನಿಃ । ಏವಂ ಹೈವ ಏವಂವಿತ್ ಗಾಯತ್ರ್ಯಾ ಅಗ್ನಿಮುಖರ್ಮಮ್ ಇತ್ಯೇವಂ ವೇತ್ತಿ ಇತಿ ಏವಂವಿದ್ ಸ್ಯಾತ್ ಸ್ವಯಂ ಗಾಯತ್ರ್ಯಾತ್ಮಾ ಅಗ್ನಿಮುಖಃ ಸನ್ । ಯದ್ಯಪಿ ಬಹ್ವಿವ ಪಾಪಂ ಕುರುತೇ ಪ್ರತಿಗ್ರಹಾದಿದೋಷಮ್ ತತ್ ಸರ್ವಂ ಪಾಪಜಾತಂ ಸಂಪ್ಸಾಯ ಭಕ್ಷಯಿತ್ವಾ ಶುದ್ಧಃ ಅಗ್ನಿವತ್ ಪೂತಶ್ಚ ತಸ್ಮಾತ್ ಪ್ರತಿಗ್ರಹದೋಷಾತ್ ಗಾಯತ್ರ್ಯಾತ್ಮಾ ಅಜರಃ, ಅಮೃತಶ್ಚ ಸಂಭವತಿ ॥

(ಭಾಷ್ಯಾರ್ಥ)

ಹಾಗಾದರೆ ಕೇಳು[1]! ಆ ಗಾಯತ್ರಿಗೆ ಅಗ್ನಿಯೇ ಮುಖವು. ಬಹಳ ಕಟ್ಟಿಗೆಯನ್ನು ಬೆಂಕಿಯಲ್ಲಿ ಲೌಕಿಕರು ಹಾಕಿದರೂ ಆ ಕಟ್ಟಿಗೆಯೆಲ್ಲವನ್ನೂ ಬೆಂಕಿಯು ಸುಟ್ಟೇ ಹಾಕುತ್ತದೆ. (ಅಲ್ಲವೆ ? ) ಅದರಂತೆಯೇ ಹೀಗೆಂದರಿತವನು- ಗಾಯತ್ರಿಗೆ ಅಗ್ನಿಯೇ ಮುಖವು ಎಂದಿಂತು ತಿಳಿದವನೇ ಹೀಗೆಂದರಿತವನು- ತಾನೂ ಗಾಯತ್ರ್ಯಾತ್ಮನಾದ್ದರಿಂದ[2] ಅಗ್ನಿಮುಖನಾಗಿ, ಬಹಳ ಪಾಪವನ್ನು ಪ್ರತಿಗ್ರಹವೇ ಮುಂತಾದ ದೋಷವುಳ್ಳ (ಪಾಪವನ್ನು) ಮಾಡಿದರೂ, ಅದೆಲ್ಲವನ್ನೂ (ಸಂಪ್ಸಾಯ= ಭಕ್ಷಯಿತ್ವಾ) ತಿಂದರಗಿಸಿಕೊಂಡು ಅಗ್ನಿಯಂತೆ ಶುದ್ಧನೂ ಆ ಪ್ರತಿಗ್ರಹದೋಷವನ್ನು ಬಿಡಿಸಿಕೊಂಡು ಪೂತನೂ ಆಗಿ ಗಾಯತ್ರ್ಯಾತ್ಮನೂ ಅಜರನೂ ಅಮರನೂ ಆಗುವನು.[3]

---

1. ಇದು ಜನಕನ ಉಪದೇಶ.
2. ಗಾಯತ್ರೀಸಾಕ್ಷಾತ್ಕಾರವನ್ನು ಪಡೆದವನಾದ್ದರಿಂದ.
3 ಗಾಯತ್ರೀರೂಪವಾದ ಬ್ರಹ್ಮದ ಸಾಯುಜ್ಯವನ್ನೇ ಪಡೆಯುವನು.

# ಹದಿನಾಲ್ಕನೆಯ ಬ್ರಾಹ್ಮಣದ ಸಾರ

## ಈ ಬ್ರಾಹ್ಮಣದಲ್ಲಿ ಗಾಯತ್ರಿಯ ಉಪಾಸನೆಯನ್ನು ಹೇಳಿದೆ.

೧ ಭೂಮಿ, ಅಂತರಿಕ್ಷ, ದ್ಯೌಃ ಎಂಬಿವೂ ಗಾಯತ್ರಿಯ ಒಂದನೆಯ ಪಾದವೂ ಎಂಟಕ್ಷರದವಾದ್ದರಿಂದ ಈ ಮೊದಲನೆಯ ಪಾದವನ್ನು ತ್ರಿಲೋಕಾತ್ಮಕವೆಂದು ಉಪಾಸನೆಮಾಡಬೇಕು ; ಋಚಃ, ಯಜೂಂಷಿ, ಸಾಮಾನಿ ಇವೂ ಎರಡನೆಯ ಪಾದವೂ ಎಂಟಕ್ಷರದವಾದ್ದರಿಂದ ಎರಡನೆಯ ಪಾದವನ್ನು ತ್ರಯೀವಿದ್ಯೆಯೆಂದು ಉಪಾಸನೆಮಾಡಬೇಕು. ಪ್ರಾಣ, ಅಪಾನ, ವ್ಯಾನ - ಇವೂ ಮೂರನೆಯ ಪಾದವೂ ಎಂಟಕ್ಷರದವೇ ಆದ್ದರಿಂದ ಮೂರನೆಯ ಪಾದವನ್ನು ಪ್ರಾಣಾದಿರೂಪವೆಂದು ಉಪಾಸನೆಮಾಡಬೇಕು. ಹೀಗೆ ಉಪಾಸನೆಮಾಡಿದರೆ ಕ್ರಮವಾಗಿ ತ್ರಿಲೋಕದಲ್ಲಿರುವದನ್ನೆಲ್ಲ ಗೆದ್ದುಕೊಳ್ಳುವನು, ತ್ರಯೀವಿದ್ಯೆಯಿಂದ ಬರುವಷ್ಟು ಫಲವನ್ನು ಗೆದ್ದುಕೊಳ್ಳುವನು, ಸರ್ವಪ್ರಾಣಿಜಾತಗಳನ್ನೂ ಗೆದ್ದುಕೊಳ್ಳುವನು.

ಇನ್ನು ನಾಲ್ಕನೆಯ ಪಾದವು 'ತುರೀಯದರ್ಶತಪದವು ಪರೋರಜಸ್ಸು' ಎಂದರೆ ನಾಲ್ಕನೆಯದಾದ, ಕಾಣುವದೋ ಎಂಬಂತಿರುವ, ಲೋಕಗಳಿಗೆಲ್ಲ ಮೇಲಿರುವ ಆದಿತ್ಯಪುರುಷನು. ಈ ಪಾದವನ್ನು ಹೀಗೆಂದು ಉಪಾಸನೆಮಾಡಿದವನು ಲೋಕೋತ್ತರವಾಗಿ ತಪಿಸುವನು, ಶ್ರೀಯಿಂದಲೂ ಕೀರ್ತಿಯಿಂದಲೂ ಬೆಳಗುವನು.

೪-೬. ಗಾಯತ್ರಿಯು ಈ ಆದಿತ್ಯಪುರುಷನೆಂಬ ನಾಲ್ಕನೆಯ ಪಾದದಲ್ಲಿಯೂ ಆ ಪುರುಷನು ಸತ್ಯವೆಂಬ ಚಕ್ಷುಸ್ಸಿನಲ್ಲಿಯೂ ಆ ಸತ್ಯವು ಬಲವೆಂಬ ಪ್ರಾಣದಲ್ಲಿಯೂ ಪ್ರತಿಷ್ಠಿತವಾಗಿವೆ. ಹೀಗೆ ಪ್ರಾಣರೂಪದಿಂದ ಜಗತ್ತಿಗೆ ಆತ್ಮವಾಗಿದ್ದು ವಾಗಾದಿಗಯಗಳನ್ನು ತ್ರಾಣನಮಾಡುವದರಿಂದ 'ಗಾಯತ್ರೀ' ಎಂಬ ಹೆಸರು ಬಂದಿದೆ. ಉಪನಯನಕಾಲದಲ್ಲಿ ಮಾಣವಕನಿಗೆ ಆಚಾರ್ಯನು ಹೇಳಿಕೊಡುವ ಸಾವಿತ್ರಿಯೂ ಇದೇ ಗಾಯತ್ರಿಯು, ಅನುಷ್ಟುಬ್ಗಾಯತ್ರಿಯಲ್ಲ. ಇದನ್ನು ಅರಿತು ಉಪಾಸನೆಮಾಡಿದವನನ್ನು ಎಷ್ಟು ಪ್ರತಿಗ್ರಹಮಾಡಿದರೂ ಆದರ ಒಂದು ಪಾದದ ಜ್ಞಾನಕ್ಕೆ ಸಮನಾಗಲಾರದು. ಹೀಗೆಂದು ಗಾಯತ್ರಿಯನ್ನು ಉಪಾಸನೆಮಾಡಿದವನು ಈ ಲೋಕತ್ರಯದಲ್ಲಿರುವದನ್ನೆಲ್ಲ ಪ್ರತಿಗ್ರಹಮಾಡಿದರೂ ತ್ರಯೀವಿದ್ಯೆಯ ಫಲವನ್ನೆಲ್ಲ ಪ್ರತಿಗ್ರಹಮಾಡಿದರೂ ಪ್ರಾಣಿಗಳಿರುವಷ್ಟನ್ನೆಲ್ಲ ಪ್ರತಿಗ್ರಹಮಾಡಿದರೂ ಆ ಮೂರು ಪಾದಗಳ ಉಪಾಸನೆಯ ಫಲವು ಕ್ಷಯವಾದೀತು, ಉಳಿದ ನಾಲ್ಕನೆಯಪಾದದ ಉಪಾಸನೆಯ ಫಲವಂತೂ ಉಳಿದೇ ಇರುವದು. ಆದರೆ ಅಷ್ಟು ಪ್ರತಿಗ್ರಹದ ಸಂಭವವೇ ಇಲ್ಲ.

೭. ಈ ಗಾಯತ್ರಿಯ ಉಪಸ್ಥಾನವನ್ನು 'ಗಾಯತ್ರ್ಯಸ್ಯೇಕಪದೀ...... ಪರೋರಜಸೇ' ಎಂಬ ಮಂತ್ರದಿಂದ ಮಾಡಿ 'ಇವನು ಅದನ್ನು ಪಡೆಯದಿರಲಿ !', 'ಆ ಕಾಮವು ಅವನಿಗೆ ಕೈಗೂಡದಿರಲಿ !', 'ನಾನೇ ಅದನ್ನು ಪಡೆಯುವಂತಾಗಲಿ !' ಎಂಬರ್ಥವುಳ್ಳ ಮಂತ್ರ

ಗಳೊಳಗೆ ಒಂದನ್ನು, ಯಾವದು ತನಗೆ ಇಷ್ಟವೋ ಅದನ್ನು-ತನಗೆ ಬೇಡವಾದ ಶತ್ರುವಿನ ವಿಷಯಕ್ಕೆ ಪ್ರಯೋಗಿಸಿ ಉಪಸ್ಥಾನಮಾಡಬೇಕು. ಅದರಂತೆಯೇ ಫಲವಾಗುವದು.

೮. ಈ ಗಾಯತ್ರಿಯ ಫಲವು ಪ್ರಾಪ್ತವಾಗುವದಕ್ಕೆ ಗಾಯತ್ರಿಯ ಮುಖವನ್ನು ಅರಿತು ಉಪಾಸನೆಮಾಡಬೇಕು. ಅಗ್ನಿಯೇ ಗಾಯತ್ರಿಯ ಮುಖವು. ಅದನ್ನು ಅರಿತು ಉಪಾಸನೆಮಾಡುವವನು ಎಷ್ಟು ಪಾಪಮಾಡಿದರೂ ಅದನ್ನೆಲ್ಲ ಅಗ್ನಿಯಂತೆ ಭಕ್ಷಿಸಿ ಶುದ್ಧನಾಗಿ ಪಾಪರಹಿತನಾಗಿ ಅಜರಾಮರನಾಗಿ ಗಾಯತ್ರೀಬ್ರಹ್ಮದ ಸಾಯುಜ್ಯವನ್ನು ಪಡೆದುಕೊಳ್ಳುವನು.

—o—

# ಐದನೆಯ ಅಧ್ಯಾಯ - ಹದಿನೈದನೆಯ ಬ್ರಾಹ್ಮಣ

## ( ಉಪಾಸಕನ ಪ್ರಾರ್ಥನೆ )

## ಸಮುಚ್ಚಯಾನುಷ್ಠಾತೃವು ಚರಮಕಾಲದಲ್ಲಿ ಮಾಡುವ ಆದಿತ್ಯನ ಪ್ರಾರ್ಥನೆ

( ಉಪನಿಷತ್ತು )

**ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಮ್ । ತತ್ತ್ವಂ ಪೂಷನ್ನಪಾವೃಣು ಸತ್ಯಧರ್ಮಾಯ ದೃಷ್ಟಯೇ । ಪೂಷನ್ನೇಕರ್ಷೇ ಯಮ ಸೂರ್ಯ ಪ್ರಾಜಾಪತ್ಯ ವ್ಯೂಹ ರಶ್ಮೀನ್ । ಸಮೂಹ ತೇಜೋ ಯತ್ತೇ ರೂಪಂ ಕಲ್ಯಾಣತಮಂ ತತ್ತೇ ಪಶ್ಯಾಮಿ । ಯೋಽಸಾವಸೌ ಪುರುಷಃ ಸೋಽಹಮಸ್ಮಿ । ವಾಯುರನಿಲಮಮೃತಮಥೇದಂ ಭಸ್ಮಾನ್ತಗ್ಂ ಶರೀರಮ್ । ಓಂ ಕ್ರತೋ ಸ್ಮರ ಕೃತಗ್ಂ ಸ್ಮರ ಕ್ರತೋ ಸ್ಮರ ಕೃತಗ್ಂ ಸ್ಮರ । ಅಗ್ನೇ ನಯ ಸುಪಥಾ ರಾಯೇ ಅಸ್ಮಾನ್ ವಿಶ್ವಾನಿ ದೇವ ವಯುನಾನಿ ವಿದ್ವಾನ್ । ಯುಯೋಧ್ಯಸ್ಮಜ್ಜುಹುರಾಣಮೇನೋ ಭೂಯಿಷ್ಠಾಂ ತೇ ನಮ ಉಕ್ತಿಂ ವಿಧೇಮ ॥ ೧ ॥**

೧. ಹಿರಣ್ಮಯವಾದ ಪಾತ್ರದಿಂದ ಸತ್ಯದ ಮುಖವು ಮುಚ್ಚಿರುತ್ತದೆ. ಅದನ್ನು ಎಲೈ ಪೂಷನೆ, ಸತ್ಯಧರ್ಮನಾದ (ನನಗೆ ಸತ್ಯವು) ಕಾಣುವದಕ್ಕಾಗಿ ತೆರೆಯುವನಾಗು ! ಪೂಷನೆ ! ಏಕರ್ಷಿಯೆ, ಯಮನೆ, ಸೂರ್ಯನೆ, ಪ್ರಾಜಾಪತ್ಯನೆ, ರಶ್ಮಿಗಳನ್ನು ಹೋಗಲಾಡಿಸು, ತೇಜಸ್ಸನ್ನು ಒಕ್ಕೂಡಿಸು ! ನಿನ್ನ ಕಲ್ಯಾಣತಮವಾದ ರೂಪವನ್ನು ನೋಡುವೆನು ! ಆ ಪುರುಷನು ಯಾವನೋ ಅಮೃತನಾದ ಅವನೇ ನಾನಾಗಿರುವೆನು. ವಾಯುವು ಅನಿಲವನ್ನು (ಸೇರಲಿ) ! ಇನ್ನು ಈ ಶರೀರವು ಭಸ್ಮಾಂತವಾಗಲಿ ! ಓಂ(ಕಾರವೆ), ಕ್ರತುವೆ,

---

1. ಈ ಕಂಡಿಕೆಯಲ್ಲಿರುವ ವಾಕ್ಯಗಳು ಈಶಾವಾಸ್ಯೋಪನಿಷತ್ತಿನ ೧೫ರಿಂದ ೧೮ರವರೆಗಿನ ಮಂತ್ರಗಳೇ ಆಗಿವೆ.

ಸ್ಮರಿಸು ! ಮಾಡಿದ್ದನ್ನು ಸ್ಮರಿಸು ! ಕ್ರತುವೆ, ಸ್ಮರಿಸು ! ಮಾಡಿದ್ದನ್ನು ಸ್ಮರಿಸು ! ಅಗ್ನಿಯೆ, ರೈಗಾಗಿ ಒಳ್ಳೆಯ ಮಾರ್ಗದಿಂದ ನಮ್ಮನ್ನು ಕರೆದುಕೊಂಡು ಹೋಗು ! ಎಲ್ಲಾ ವಯುನಗಳನ್ನೂ ಬಲ್ಲವನು (ನೀನು) ! ನಮ್ಮಿಂದ ವಕ್ರವಾದ ಏನಸ್ಸನ್ನು ಬಿಡಿಸು ; ನಿನಗೆ ಬಹಳ ನಮಉಕ್ತಿಯನ್ನು ಮಾಡುತ್ತಿದೇವೆ !

## ಕಂಡಿಕೆಯ ಸಂಬಂಧ

(ಭಾಷ್ಯ)

೪೦೨. ಯೋ ಜ್ಞಾನಕರ್ಮಸಮುಚ್ಚಯಕಾರೀ ಸಃ ಅನ್ತಕಾಲೇ ಆದಿತ್ಯಂ ಪ್ರಾರ್ಥಯತಿ । ಅಸ್ತಿ ಚ ಪ್ರಸಙ್ಗಃ । ಗಾಯತ್ರ್ಯಾಃ ತುರೀಯಃ ಪಾದೋ ಹಿ ಸಃ । ತದುಪಸ್ಥಾನಂ ಪ್ರಕೃತಮ್ । ಅತಃ ಸ ಏವ ಪ್ರಾರ್ಥ್ಯತೇ ॥

(ಭಾಷ್ಯಾರ್ಥ)

ಜ್ಞಾನಕರ್ಮಗಳ ಸಮುಚ್ಚಯವನ್ನು ಅನುಷ್ಠಾನಮಾಡಿದವನಿದ್ದಾನಷ್ಟೆ, ಅವನು ಮರಣಕಾಲದಲ್ಲಿ ಆದಿತ್ಯನನ್ನು (ಹೀಗೆಂದು) ಪ್ರಾರ್ಥಿಸುತ್ತಾನೆ. (ಇದಕ್ಕೆ ಇಲ್ಲಿ) ಪ್ರಸಂಗವೂ ಇದೆ. ಆ (ಆದಿತ್ಯನು) ಗಾಯತ್ರಿಯ ನಾಲ್ಕನೆಯ ಪಾದವಷ್ಟೆ. ಅದರ ಉಪಸ್ಥಾನವು ಪ್ರಕೃತವಾಗಿರುತ್ತದೆ; ಆದ್ದರಿಂದ ಆ (ಆದಿತ್ಯನನ್ನೇ) ಪ್ರಾರ್ಥಿಸಲಾಗಿದೆ.

## ಆದಿತ್ಯನ ಪ್ರಾರ್ಥನೆ

(ಭಾಷ್ಯ)

೪೦೩. ಹಿರಣ್ಮಯೇನ ಜ್ಯೋತಿರ್ಮಯೇನ ಪಾತ್ರೇಣ । ಯಥಾ ಪಾತ್ರೇಣ ಇಷ್ಟಂ ವಸ್ತು ಅಪಿಧೀಯತೇ ಏವಮ್ ಇದಂ ಸತ್ಯಾಖ್ಯಂ ಬ್ರಹ್ಮ ಜ್ಯೋತಿರ್ಮಯೇನ ಮಣ್ಡಲೇನ ಅಪಿಹಿತಮಿವ । ಅಸಮಾಹಿತಚೇತಸಾಮ್ ಅದೃಶ್ಯತ್ವಾತ್ । ತದುಚ್ಯತೇ ಸತ್ಯಸ್ಯ ಅಪಿಹಿತಂ ಮುಖಂ ಮುಖ್ಯಂ ಸ್ವರೂಪಮ್ । ತತ್ ಅಪಿಧಾನಂ ಪಾತ್ರಮ್ ಅಪಿಧಾನಮಿವ ದರ್ಶನಪ್ರತಿಬನ್ಧಕಾರಣಮ್ ತತ್ ತ್ವಮ್ ಹೇ ಪೂಷನ್ ಜಗತಃ ಪೋಷಣಾತ್ ಪೂಷಾ ಸವಿತಾ । ಅಪಾವೃಣು ಅಪಾವೃತಂ ಕುರು । ದರ್ಶನಪ್ರತಿಬನ್ಧಕಾರಣಮ್ ಅಪನಯ ಇತ್ಯರ್ಥಃ । ಸತ್ಯಧರ್ಮಾಯ । ಸತ್ಯಂ ಧರ್ಮಃ ಅಸ್ಯ ಮಮ ಸೋಽಹಂ ಸತ್ಯಧರ್ಮಾ ತಸ್ಮೈ । ತ್ವದಾತ್ಮಭೂತಾಯ ಇತ್ಯರ್ಥಃ। ದೃಷ್ಟಯೇ ದರ್ಶನಾಯ ॥

(ಭಾಷ್ಯಾರ್ಥ)

ಹಿರಣ್ಮಯವಾದ ಪ್ರಕಾಶಮಯವಾದ ಪಾತ್ರೆಯಿಂದ. ಹೇಗೆ ಪಾತ್ರೆಯಿಂದ ಇಷ್ಟವಾದ ವಸ್ತು ಮುಚ್ಚಲ್ಪಟ್ಟಿರುತ್ತದೆಯೋ, ಹಾಗೆಯೇ ಈ ಸತ್ಯವು, ಸತ್ಯವೆಂಬ ಬ್ರಹ್ಮವು, ಜ್ಯೋತಿರ್ಮಯವಾದ ಮಂಡಲದಿಂದ ಮುಚ್ಚಲ್ಪಟ್ಟಿರುವಂತೆ (ಇರುತ್ತದೆ); ಏಕೆಂದರೆ ಚಿತ್ತವನ್ನು ಸಮಾಧಾನಮಾಡಿಕೊಳ್ಳದವರಿಗೆ ಕಾಣಿಸುವದಿಲ್ಲ.[1] ಇದನ್ನೇ (ಹೀಗೆಂದು) ಹೇಳಿದೆ. ಸತ್ಯದ ಮುಖವು ಮುಖ್ಯಸ್ವರೂಪವು[2] ಮುಚ್ಚಿಕೊಂಡಿರುತ್ತದೆ. ಆ ಮುಚ್ಚಳವನ್ನು, ಮರೆಯಾಗಿರುವ ಪಾತ್ರೆಯಂತೆ ದರ್ಶನಕ್ಕೆ ಅಡ್ಡಿಯಾಗಿರುವ ಕಾರಣವನ್ನು, ನೀನು ಎಲೈ ಪೂಷನೆ,— ಜಗತ್ತನ್ನು ಪೋಷಿಸುತ್ತಿರುವದರಿಂದ ಸೂರ್ಯನು ಪೂಷನು. (ಎಲೈ ಪೂಷನೆ)— ತೆರೆಯುವವನಾಗು, ತೆರೆದದ್ದನ್ನಾಗಿ ಮಾಡು! ದರ್ಶನಕ್ಕೆ ಅಡ್ಡಿಯಾಗಿರುವ (ಈ) ಕಾರಣವನ್ನು ಹೋಗಲಾಡಿಸು ಎಂದರ್ಥ. ಸತ್ಯಧರ್ಮನಾದ (ನನಗೆ) — ಈ ನನಗೆ ಸತ್ಯವು ಧರ್ಮವು; ಆದ್ದರಿಂದ ನಾನು ಸತ್ಯಧರ್ಮನು. ಅಂಥವನಿಗೆ — ನಿನ್ನ ಸ್ವರೂಪನಾದ (ನನಗೆ) ಎಂದರ್ಥ[3]. ಕಾಣುವದಕ್ಕಾಗಿ (ಅದು) ಕಾಣಿಸುವದಕ್ಕಾಗಿ (ಮರೆಯನ್ನು ಹೋಗಲಾಡಿಸು).

(ಭಾಷ್ಯ)

೪೦೪. ಪೂಷನ್ ಇತ್ಯಾದೀನಿ ನಾಮಾನಿ ಆಮನ್ತ್ರಣಾರ್ಥಾನಿ ಸವಿತುಃ। ಏಕರ್ಷೇ ಏಕಶ್ಚ ಅಸೌ ಋಷಿಶ್ಚ ಏಕರ್ಷಿಃ। ದರ್ಶನಾತ್ ಋಷಿಃ। ಸ ಹಿ ಸರ್ವಸ್ಯ ಜಗತ ಆತ್ಮಾ ಚಕ್ಷುಶ್ಚ ಸನ್ ಸರ್ವಂ ಪಶ್ಯತಿ। ಏಕೋ ವಾ ಗಚ್ಛತೀತಿ ಏಕರ್ಷಿಃ। "ಸೂರ್ಯ ಏಕಾಕೀ ಚರತಿ" (ತೈ. ಸಂ. ೮-೪-೧೮) ಇತಿ ಮನ್ತ್ರವರ್ಣಾತ್। ಯಮ। ಸರ್ವಂ ಹಿ ಜಗತಃ ಸಂಯಮನಂ ತ್ವತ್ಕೃತಮ್। ಸೂರ್ಯ। ಸುಷ್ಠು ಈರಯತೇ ರಸಾನ್ ರಶ್ಮೀನ್ ಪ್ರಾಣಾನ್ ಧಿಯೋ ವಾ ಜಗತಃ ಇತಿ। ಪ್ರಾಜಾಪತ್ಯ। ಪ್ರಜಾಪತೇಃ ಈಶ್ವರಸ್ಯ ಅಪತ್ಯಮ್। ಹಿರಣ್ಯಗರ್ಭಸ್ಯ ವಾ। ಹೇ ಪ್ರಾಜಾಪತ್ಯ। ವ್ಯೂಹ ವಿಗಮಯ ರಶ್ಮೀನ್। ಸಮೂಹ ಸಂಕ್ಷಿಪ ಆತ್ಮನಃ ತೇಜಃ। ಯೇನಾಹಂ ಶಕ್ನುಯಾಂ ದ್ರಷ್ಟುಮ್। ತೇಜಸಾ

---

1. ಶಾಸ್ತ್ರದೃಷ್ಟಿಯನ್ನು ಅವಲಂಬಿಸಿ ಸೂರ್ಯನಲ್ಲಿ ಚಿತ್ತವನ್ನಿಟ್ಟವರಿಗೇ ಕಾಣಿಸುತ್ತದೆ.

2 ಈಶಾವಾಸ್ಯದಲ್ಲಿ ದ್ವಾರವು ಎಂದಿದೆ; ಅಲ್ಲಿ ಸೂರ್ಯಮಂಡಲವೇ ಪುರುಷನನ್ನು ನೋಡುವದಕ್ಕೆ ಅಡ್ಡಲಾಗಿ ಮುಚ್ಚಿರುವ ದ್ವಾರವು ಎಂದು ಅಭಿಪ್ರಾಯ.

3. ಸತ್ಯವೆಂಬ ನಿನ್ನನ್ನು ಉಪಾಸನೆಮಾಡಿ ಸಾಕ್ಷಾತ್ಕಾರಗೊಳಿಸಿಕೊಂಡಿರುವ ನನಗೆ ಎಂದರ್ಥ. ಸತ್ಯವಾದ ಧರ್ಮವನ್ನು ಅನುಷ್ಠಾನಮಾಡಿರುವ ನನಗೆ ಎಂಬ ಮತ್ತೊಂದು ಅರ್ಥವನ್ನೂ ಈಶಾವಾಸ್ಯದಲ್ಲಿ ಕೊಟ್ಟಿದೆ.

ಹಿ ಅಪಹತದೃಷ್ಟಿಃ ನ ಶಕ್ನುಯಾಂ ತ್ವತ್ಸ್ವರೂಪಮ್ ಅಞ್ಜಸಾ ದ್ರಷ್ಟುಂ ವಿದ್ಯೋತನ ಇವ ರೂಪಾಣಾಮ್ । ಅತ ಉಪಸಂಹರ ತೇಜಃ । ಯತ್ ತೇ ತವ ರೂಪಂ ಸರ್ವಕಲ್ಯಾಣಾನಾಮ್ ಅತಿಶಯೇನ ಕಲ್ಯಾಣಂ ಕಲ್ಯಾಣ ತಮಮ್ । ತತ್ ತೇ ತವ ಪಶ್ಯಾಮಿ ಪಶ್ಯಾಮೋ ವಯಮ್ । ವಚನವ್ಯತ್ಯಯೇನ । ಯೋಽಸೌ ಭೂರ್ಭುವಃಸ್ವರ್ವ್ಯಾಹೃತ್ಯವಯವಃ ಪುರುಷಃ ಪುರುಷಾಕೃತಿತ್ವಾತ್ ಪುರುಷಃ ಸೋಽಹಮಸ್ಮಿ ಭವಾಮಿ । 'ಅಹಃ', 'ಅಹಮ್' (೫-೫-೩, ೪) ಇತಿ ಚ ಉಪನಿಷದಃ ಉಕ್ತತ್ವಾತ್ ಆದಿತ್ಯಚಾಕ್ಷುಷಯೋಃ ತದೇವೇದಂ ಪರಾಮೃಶ್ಯತೇ । ಸೋಽಹಮಸ್ಮಿ । ಅಮೃತಮ್ ಇತಿ ಸಂಬನ್ಧಃ ॥

(ಭಾಷ್ಯಾರ್ಥ)

ಪೂಷನೆ, ಮುಂತಾದ ಹೆಸರುಗಳು ಸೂರ್ಯನನ್ನು ಕರೆಯುವದಕ್ಕಾಗಿ (ಬಂದಿವೆ). ಏಕರ್ಷಿಯೆ, ಒಬ್ಬನೇ ಆದ ಋಷಿಯಾದ್ದರಿಂದ ಏಕರ್ಷಿಯು. ನೋಡುತ್ತಿರುವದರಿಂದ ಋಷಿಯು. ಅವನು ಜಗತ್ತಿಗೆಲ್ಲಕ್ಕೂ ಆತ್ಮನೂ ಚಕ್ಷುಸ್ಸೂ ಆಗಿ ಎಲ್ಲವನ್ನೂ ನೋಡುತ್ತಿರುವನಲ್ಲವೆ ?[1] ಅಥವಾ ಒಬ್ಬನೇ ನಡೆಯುತ್ತಿದಾನೆ, ಆದ್ದರಿಂದ ಏಕರ್ಷಿಯು ; ಏಕೆಂದರೆ "ಸೂರ್ಯನು ತಾನೊಬ್ಬನೇ ಸಂಚರಿಸುತ್ತಿರುತ್ತಾನೆ" (ತೈ. ಸಂ. ೮-೪-೧೮-೧) ಎಂಬ ಮಂತ್ರವರ್ಣದಿಂದ (ಇದು ಸಿದ್ಧವಾಗುತ್ತದೆ).[2] ಯಮನೆ, ಜಗತ್ತನ್ನು ಕಟ್ಟಳೆಯಲ್ಲಿಟ್ಟುಕೊಂಡಿರುವದೂ ನಿನ್ನಿಂದಾಗಿರುತ್ತದೆಯಲ್ಲವೆ ? (ಆದ್ದರಿಂದ ಯಮನು). ಸೂರ್ಯನೆ ; ಜಗತ್ತಿನ ರಸಗಳನ್ನು, ರಶ್ಮಿಗಳನ್ನು, ಪ್ರಾಣಗಳನ್ನು, ಅಥವಾ ಧೀವೃತ್ತಿಗಳನ್ನು[3] ಚೆನ್ನಾಗಿ ಪ್ರೇರಿಸುತ್ತಾನೆ, ಆದ್ದರಿಂದ (ಸೂರ್ಯನು). ಪ್ರಾಜಾಪತ್ಯನೆ ; ಪ್ರಜಾಪತಿಯಾದ ಈಶ್ವರನ ಮಗನು, ಅಥವಾ ಹಿರಣ್ಯಗರ್ಭನ ಮಗನು; ಆದ್ದರಿಂದ ಎಲೈ ಪ್ರಾಜಾಪತ್ಯನೆ, (ಎಂದಿವೆ). ರಶ್ಮಿಗಳನ್ನು ಹೋಗಲಾಡಿಸು, ಅತ್ತಸರಿಯಿಸು ! ನಿನ್ನ ತೇಜಸ್ಸನ್ನು ಒಕ್ಕೂಡಿಸು, ನಾನು ನೋಡುವದಕ್ಕೆ ಆಗುವಂತೆ ಸಂಕೋಚಪಡಿಸಿಕೊ. ತೇಜಸ್ಸಿನಿಂದ ದೃಷ್ಟಿಗೆ ಅಡ್ಡಿಯಾಗಿರುವದರಿಂದಲ್ಲವೆ, ಮಿಂಚು ಹೊಳೆದಾಗ ರೂಪಗಳನ್ನು ಕಾಣಲಾರದಿರುವಂತೆ ನಿನ್ನ ಸ್ವರೂಪವನ್ನು ಸರಿಯಾಗಿ ಕಾಣಲು ಶಕ್ತನಲ್ಲದೆ ಇರುವೆನು, ಆದ್ದರಿಂದ ತೇಜಸ್ಸನ್ನು ಉಪಸಂಹಾರಮಾಡಿಕೊ ! ಕಲ್ಯಾಣತಮವಾದ ಎಂದರೆ ಕಲ್ಯಾಣವಾದ ರೂಪಗಳೆಲ್ಲಕ್ಕಿಂತಲೂ ಕಲ್ಯಾಣ

---

1. ಸೂರ್ಯನು ಸ್ಥಾವರಜಂಗಮಗಳಿಗೆಲ್ಲ ಆತ್ಮನೆಂದೂ ಜಗತ್ತಿಗೆಲ್ಲ ಚಕ್ಷುಸ್ಸೆಂದೂ ಬ್ರಾಹ್ಮಣದಲ್ಲಿದೆ.

2. ಈ ಅರ್ಥವೊಂದೇ ಈಶಾವಾಸ್ಯಭಾಷ್ಯದಲ್ಲಿದೆ.

3. ಈ ಅರ್ಥವು ಈಶಾವಾಸ್ಯಭಾಷ್ಯದಲ್ಲಿಲ್ಲ.

ವಾಗಿರುವ ನಿನ್ನ ಆ (ಸುಂದರ)ರೂಪವನ್ನು ನೋಡುವೆನು ! ನಾವು ನೋಡು
ವಂತಾಗಲಿ !– ಎಂದು ವಚನವಿಪರಿಣಾಮದಿಂದ (ಅರ್ಥ).[1] ಯಾವ ಈ ಭೂಃ
ಭುವಃ ಸ್ವಃ ಎಂಬ ವ್ಯಾಹೃತ್ಯವಯವವುಳ್ಳ – ಪುರುಷಾಕೃತಿಯುಳ್ಳವನಾದ್ದ
ರಿಂದ–[2] ಪುರುಷ(ನೆನಿಸಿ)ಕೊಂಡವನಿದ್ದಾನಲ್ಲ, ಅವನೇ ನಾನಾಗಿರುವೆನು. ಇರು
ತ್ತೇನೆ. 'ಅಹಃ', 'ಅಹಮ್' ಎಂದು ಆದಿತ್ಯಚಾಕ್ಷುಷ(ಪುರುಷರ) ಉಪನಿಷ
ತ್ತನ್ನು ಹಿಂದೆ (೫-೫-೩, ೪) ಹೇಳಿರುವದರಿಂದ ಅದೇ ಈ (ಉಪನಿಷತ್ತನ್ನು
ಇಲ್ಲಿ ಹೀಗೆ) ಪರಾಮರ್ಶಿಸಿರುತ್ತದೆ.[3] ಅಮೃತಸ್ವರೂಪವಾದ ಅವನೇ ನಾನು
ಎಂದು ಸಂಬಂಧವು.[4]

(ಭಾಷ್ಯ)

೪೦೫. ಮಮ ಅಮೃತಸ್ಯ ಸತ್ಯಸ್ಯ ಶರೀರಪಾತೇ ಶರೀರಸ್ಥೋ ಯಃ
ಪ್ರಾಣಃ ವಾಯುಃ ಸ ಅನಿಲಂ ಬಾಹ್ಯಂ ವಾಯುಮೇವ ಪ್ರತಿಗಚ್ಛತು ।
ತಥಾ ಅನ್ಯಾ ದೇವತಾಃ ಸ್ವಾಂ ಸ್ವಾಂ ಪ್ರಕೃತಿಂ ಗಚ್ಛನ್ತು । ಅಥ ಇದಮಪಿ
ಭಸ್ಮಾನ್ತಂ ಸತ್ ಪೃಥಿವೀಂ ಯಾತು ಶರೀರಮ್ । ಅಥ ಇದಾನೀಮ್ ಆತ್ಮನಃ
ಸಂಕಲ್ಪಭೂತಾಂ ಮನಸಿ ವ್ಯವಸ್ಥಿತಾಮ್ ಅಗ್ನಿದೇವತಾಂ ಪ್ರಾರ್ಥಯತೇ ।
ಓಂ ಕ್ರತೋ । ಓಮಿತಿ ಕ್ರತೋ ಇತಿ ಚ ಸಂಬೋಧನಾರ್ಥಾವೇವ । ಓಂಕಾರ
ಪ್ರತೀಕತ್ವಾತ್ ಓಮ್ । ಮನೋಮಯತ್ವಾಚ್ಚ ಕ್ರತುಃ । ಹೇ ಓಮ್, ಹೇ
ಕ್ರತೋ, ಸ್ಮರ ಸ್ಮರ್ತವ್ಯಮ್ । ಅನ್ತಕಾಲೇ ಹಿ ತ್ವತ್ಸ್ಮರಣವಶಾತ್ ಇಷ್ಟಾ
ಗತಿಃ ಪ್ರಾಪ್ಯತೇ । ಅತಃ ಪ್ರಾರ್ಥ್ಯತೇ ಯನ್ಮಯಾ ಕೃತಮ್ ತತ್ ಸ್ಮರ ।
ಪುನರುಕ್ತಿಃ ಆದರಾರ್ಥಾ ॥

---

1. ಕೊನೆಯಲ್ಲಿ ಬಹುವಚನವಿರುವದರಿಂದ ಇಲ್ಲಿಯೂ ವಿಪರಿಣಾಮಮಾಡಿಕೊಳ್ಳ
ಬೇಕು ಎಂದಭಿಪ್ರಾಯವಿರಬಹುದು. ಆದರೂ ಸಮುಚ್ಚಯಕಾರೀ ಎಂಬ ಏಕವಚನಕ್ಕೆ
ಏಕವಚನವೇ ಸಾಕಲ್ಲವೆ ? ಈಶಾವಾಸ್ಯಭಾಷ್ಯದಲ್ಲಿ ಈ ವಿಪರಿಣಾಮವಿಲ್ಲ. ತೇಜಸ್ಸನ್ನು
ಸೂರ್ಯನು ಉಪಸಂಹಾರಮಾಡಿಕೊಂಡರೆ ನಾವುಗಳು ಆತನ ರೂಪವನ್ನು ಕಾಣಬಹುದು
ಎಂಬ ಸಾಮಾನ್ಯಾಭಿಪ್ರಾಯವಿರಬಹುದೆ ?

2. ಪ್ರಾಣಬುದ್ಧ್ಯಾದಿರೂಪದಿಂದ ಜಗತ್ತೆಲ್ಲವನ್ನೂ ತುಂಬಿಕೊಂಡಿರುವದರಿಂದ,
ಪುರದಲ್ಲಿ ಶಯನಮಾಡಿರುವದರಿಂದ – ಎಂಬ ಎರಡು ಬೇರೆ ವ್ಯುತ್ಪತ್ತಿಗಳನ್ನೂ ಈ.
ಭಾ. ದಲ್ಲಿ ಕೊಟ್ಟಿದೆ.

3. ನನ್ನೊಳಗಿರುವವನೂ ಸೂರ್ಯಮಂಡಲದೊಳಗಿರುವವನೂ ಅದೇ ಸತ್ಯ
ಪುರುಷನು ಎಂದರ್ಥ. ಈ ಭಾವವು ಸಾಯುವಕಾಲದಲ್ಲಿಯೂ ಉಪಾಸಕನ ಮನಸ್ಸಿನಲ್ಲಿ
ಗಟ್ಟಿಯಾಗಿರುವದು ಅವಶ್ಯ.

4. ಅಮೃತಂ ಎಂಬ ವಿಶೇಷಣವನ್ನು 'ಅನಿಲಮ್' ಎಂಬುದಕ್ಕೇ ಈ. ಭಾ. ದಲ್ಲಿ
ಹೊಂದಿಸಿದೆ.

(ಭಾಷ್ಯಾರ್ಥ)

ಅಮೃತಸತ್ಯ(ಪುರುಷನಾದ) ನನ್ನ ಶರೀರಪಾತವಾಗಲು[1] ಶರೀರದಲ್ಲಿರುವ ಪ್ರಾಣವಾಯುವಿದೆಯಲ್ಲ, ಅದು ಅನಿಲವನ್ನು ಹೊರಗಿನ ವಾಯುವನ್ನೇ ಹೋಗಿ ಸೇರಲಿ ! ಇದರಂತೆ ಅನ್ಯದೇವತೆಗಳೂ ತಮ್ಮತಮ್ಮ ಪ್ರಕೃತಿಯನ್ನು[2] ಹೋಗಿ ಸೇರಲಿ (ಎಂದು ಭಾವ). ಇನ್ನು ಈ ಶರೀರವೂ ಭಸ್ಮಾಂತವಾಗಿ[3] ಪೃಥಿವಿಯನ್ನು ಸೇರಿಕೊಳ್ಳಲಿ ![4]

ಇನ್ನು ಈಗ ತನ್ನ ಸಂಕಲ್ಪವಾಗಿರುವ, ಮನಸ್ಸಿನಲ್ಲಿದ್ದುಕೊಂಡಿರುವ ಅಗ್ನಿದೇವತೆಯನ್ನು[5] ಪ್ರಾರ್ಥಿಸುತ್ತಾನೆ. 'ಓಂ ಕ್ರತುವೆ' ; ಇಲ್ಲಿ ಓಮ್ ! ಎಂಬಿದೂ ಕ್ರತೋ ಎಂಬಿದೂ (ಅಗ್ನಿಯ ಸಂಬೋಧನಕ್ಕಾಗಿಯೇ). ಓಂ ಪ್ರತೀಕವಾಗಿರುವದರಿಂದ (ದೇವತೆಯನ್ನು) ಓಮ್ (ಎಂದಿರುತ್ತದೆ); ಮನೋಮಯವಾಗಿರುವದರಿಂದ 'ಕ್ರತು' (ಎಂದಿರುತ್ತದೆ). ಎಲೈ ಓಂಕಾರರೂಪನೆ, ಎಲೈ ಕ್ರತುವೆ, ಸ್ಮರ್ತವ್ಯವಾದದ್ದನ್ನು ಸ್ಮರಿಸಿಕೊ ! ಅಂತಕಾಲದಲ್ಲಿ ನಿನ್ನ ಸ್ಮರಣದವಶದಿಂದಲಲ್ಲವೆ,[6] ಇಷ್ಟವಾದ ಗತಿಯು ಪ್ರಾಪ್ತವಾಗುವದು ? ಆದ್ದರಿಂದ (ಹೀಗೆಂದು) ಪ್ರಾರ್ಥಿಸಲಾಗಿದೆ ; ನಾನು ಏನು ಮಾಡಿದ್ದೆನೋ ಅದನ್ನು ಸ್ಮರಿಸಿಕೊ ! ಮತ್ತೆ (ಹೀಗೆಂದು) ಹೇಳಿರುವದು ಆದರಾರ್ಥವಾಗಿ.

(ಭಾಷ್ಯ)

೪೧೬. ಕಿಂಚ ಹೇ ಅಗ್ನೇ ನಯ ಪ್ರಾಪಯ ಸುಪಥಾ ಶೋಭನೇನ ಮಾರ್ಗೇಣ ರಾಯೇ ಧನಾಯ । ಕರ್ಮಫಲಪ್ರಾಪ್ತಯೇ ಇತ್ಯರ್ಥಃ । ನ ದಕ್ಷಿಣೇನ ಕೃಷ್ಣೇನ ಪುನರಾವೃತ್ತಿಯುಕ್ತೇನ ಕಿಂ ತರ್ಹಿ ಶುಕ್ಲೇನೈವ ಸುಪಥಾ

---

1. ಶರೀರವು ಬಿದ್ದರೂ ಸತ್ಯರೂಪನಾದ ಆತ್ಮನು ಅಮೃತನೇ ಆಗಿರುವದರಿಂದ ಅವನಿಗೆ ಆಧಿದೈವಿಕಸತ್ಯಪುರುಷನ ಸಾಯುಜ್ಯವಾಗುವದು.

2. ಕಾರಣವನ್ನು ಎಂದರ್ಥ.

3. ಭಸ್ಮಾಂತವಾಗಿ ಎಂದದ್ದರಿಂದ ಇದು ಸಂನ್ಯಾಸಿಗಳ ವಿಷಯವಲ್ಲವೆಂದಾಯಿತು. ಈ ಸಮುಚ್ಚಯವು ಗೃಹಸ್ಥನ ವಿಷಯವೇ.

4. ಇಲ್ಲಿ ಹೇಳಿರುವಂತೆ ಆಯಾ ಪ್ರಕೃತಿಯಲ್ಲಿ ಪ್ರಾಣಾದಿಗಳು ಸೇರುವವೆಂಬುದು ವ್ಯವಹಾರದೃಷ್ಟಿಯಿಂದ.

5. ಸಂಕಲ್ಪರೂಪವಾಗಿರುವ ಅಗ್ನಿದೇವತೆ ಎಂದು ಏತಕ್ಕೆ ಹೇಳಿದೆಯೆಂಬುದು ನಿಶ್ಚಿತವಾಗಿಲ್ಲ. ಜಾತರಾಗ್ನಿಪ್ರತೀಕನಾಗಿರುವ ಈಶ್ವರನು ಎಂದು ಟೀಕೆಯಲ್ಲಿದೆ. ಮನಸ್ಸು ಅಗ್ನಿ, ಪ್ರಾಣವು ಮಹಾವ್ರತ, ವಾಕ್ಕು ಮಹದುಕ್ಥ- ಎಂದು ಶತ. ಬ್ರಾ. ೧೦-೧-೨-೪ರಲ್ಲಿ ಸಂಪಾದನಮಾಡಬೇಕೆಂದು ಹೇಳಿರುವದನ್ನು ಇಲ್ಲಿ ಮನದಂದುಕೊಳ್ಳಬಹುದು.

6. ಸೂ. ಭಾ. ೪-೧-೧೨ (ಭಾ ಭಾ. ೫೨೬)ನ್ನು ನೋಡಿ.

ಅಸ್ಮಾನ್ ವಿಶ್ವಾನಿ ಸರ್ವಾಣಿ ಹೇ ದೇವ, ವಯುನಾನಿ ಪ್ರಜ್ಞಾನಾನಿ ಸರ್ವ ಪ್ರಾಣಿನಾಂ ವಿದ್ವಾನ್ । ಕಿಂಚ ಯುಯೋಧಿ ಅಪನಯ ವಿಯೋಜಯ ಅಸ್ಮತ್ ಅಸ್ಮತ್ತಃ ಜುಹುರಾಣಂ ಕುಟಿಲಮ್ ಏನಃ ಪಾಪಂ ಪಾಪಜಾತಂ ಸರ್ವಮ್ । ತೇನ ಪಾಪೇನ ವಿಯುಕ್ತಾ ವಯಮ್ ಏಷ್ಯಾಮ ಉತ್ತರೇಣ ಪಥಾ ತ್ವತ್ಪ್ರಸಾದಾತ್ । ಕಿಂ ತು ವಯಂ ತುಭ್ಯಂ ಪರಿಚರ್ಯಾಂ ಕರ್ತುಂ ನ ಶಕ್ನುಮಃ । ಭೂಯಿಷ್ಠಾಂ ಬಹುತಮಾಂ ತೇ ತುಭ್ಯಂ ನಮ ಉಕ್ತಿಂ ನಮಸ್ಕಾರವಚನಂ ವಿಧೇಮ । ನಮಸ್ಕಾರೋಕ್ತ್ಯಾ ಪರಿಚರೇಮ ಇತ್ಯರ್ಥಃ । ಅನ್ಯತ್ ಕರ್ತುಮ್ ಅಶಕ್ತಾಃ ಸನ್ತಃ ಇತಿ ॥

(ಭಾಷ್ಯಾರ್ಥ)

ಮತ್ತು ಎಲೈ ಅಗ್ನಿಯೆ, (ನಮ್ಮನ್ನು) ಸುಮಾರ್ಗದಿಂದ ಎಂದರೆ ಒಳ್ಳೆಯ ಮಾರ್ಗದಿಂದ ರೈಗೆ ಧನಕ್ಕಾಗಿ, ಕರ್ಮಫಲಪ್ರಾಪ್ತಿಗಾಗಿ ಎಂದರ್ಥ. ದಕ್ಷಿಣ (ಮಾರ್ಗ)ವೆಂಬ ಪುನರಾವೃತ್ತಿಯಿಂದೊಡಗೂಡಿದ ಕೃಷ್ಣ(ಮಾರ್ಗ)ದಿಂದಲ್ಲ, ಮತ್ತೇನೆಂದರೆ ಶುಕ್ಲವಾದ ಒಳ್ಳೆಯ ಮಾರ್ಗದಿಂದಲೇ ನಮ್ಮನ್ನು ಕರೆದು ಕೊಂಡುಹೋಗು, (ಕರ್ಮಫಲವನ್ನು) ಸೇರಿಸು. ಎಲೈ ದೇವನೆ, ಸರ್ವಪ್ರಾಣಿಗಳ ವಯುನಗಳನ್ನು ಎಂದರೆ ಪ್ರಜ್ಞಾನಗಳನ್ನು[1] ಬಲ್ಲವನು (ನೀನು).[2] ಮತ್ತು (ಅಸ್ಮತ್= ಅಸ್ಮತ್ತಃ) ನಮ್ಮಿಂದ ವಕ್ರವಾದ ಎಂದರೆ ಮೋಸಗಾರಿಕೆಯ ಏನಸ್ಸನ್ನು ಪಾಪವನ್ನು ಪಾಪಸಮೂಹವನ್ನೆಲ್ಲವನ್ನೂ ಬಿಡಿಸು, ಹೋಗಲಾಡಿಸು ತಪ್ಪಿಸು ! ಆ ಪಾಪದಿಂದ ಬಿಡಲ್ಪಟ್ಟವರಾಗಿ ನಾವು, ನಿನ್ನ ಪ್ರಸಾದದಿಂದ ಉತ್ತಮಮಾರ್ಗದಿಂದ ಹೋಗುವೆವು (ಎಂದರ್ಥ). ಆದರೆ ನಾವು ಈಗ ನಿನಗೆ ಪರಿಚರ್ಯೆಯನ್ನು ಮಾಡಲು ಶಕ್ತರಾಗಿಲ್ಲ ; (ತೇ= ತುಭ್ಯಂ) ನಿನಗೆ ಬಹಳ ಹೆಚ್ಚಿನ ನಮಉಕ್ತಿಯನ್ನು ನಮಸ್ಕಾರವಚನವನ್ನು ಮಾಡುತ್ತಿದೇವೆ, ಮತ್ತೇನೂ ಮಾಡಲಶಕ್ತರಾಗಿರುವದರಿಂದ ನಮಸ್ಕಾರೋಕ್ತಿಯಿಂದಲೇ ಪರಿಚರ್ಯೆಯನ್ನು ಮಾಡುತ್ತಿದೇವೆ.

---

1. ಕರ್ಮಗಳನ್ನು ಎಂದೂ ಈ. ಭಾ. ಈಶಾವಾಸ್ಯಭಾಷ್ಯಕ್ಕೂ ಈ ಭಾಷ್ಯಕ್ಕೂ ಮಂತ್ರಗಳ ವ್ಯಾಖ್ಯಾನದಲ್ಲಿಯೂ ಅನ್ವಯಕ್ರಮದಲ್ಲಿಯೂ ಕಾಣಬರುವ ಸ್ವಲ್ಪಮಟ್ಟಿನ ತಾರತಮ್ಯಕ್ಕೆ ಕಾರಣವನ್ನು ವಿದ್ವಾಂಸರು ವಿಮರ್ಶಿಸಬೇಕಾಗಿದೆ.

2. ಅಗ್ನಿಯು ರೂಪದಿಂದ ಎಲ್ಲಕ್ಕೂ ಸಾಕ್ಷಿಯಾಗಿರುತ್ತೇಯೆ ಎಂದರ್ಥ.

# ಹದಿನೈದನೆಯ ಬ್ರಾಹ್ಮಣದ ಸಾರ

ಈ ಬ್ರಾಹ್ಮಣದಲ್ಲಿ ಜ್ಞಾನಕರ್ಮಸಮುಚ್ಚಯವನ್ನು ಅನುಷ್ಠಾನಮಾಡಿದವನು ಮರಣಕಾಲದಲ್ಲಿ ಮಾಡುವ ಮಾರ್ಗಯಾಚನೆಯಿದೆ. ಈಶಾವಾಸ್ಯದ ಕೊನೆಯಲ್ಲಿ ಇದೇ ಮಂತ್ರಗಳಿವೆ. ದೇವಯಾನದಲ್ಲಿ ಹೋಗುವ ಸ್ಮರಣೆಯನ್ನು ಮಾಡುವಂತೆ ಮನಸ್ಸನ್ನು ಪ್ರಾರ್ಥಿಸಿದೆ.

೧. ಆದಿತ್ಯನೆ, ನಿನ್ನ ಸ್ವರೂಪವನ್ನು ಕಾಣದಂತೆ ಅಡ್ಡಿಯಾಗಿರುವ ಮರೆಯನ್ನು ತೆಗೆದುಹಾಕು, ನಿನ್ನ ಉಪಾಸಕನಾದ ನಾನು ನಿನ್ನನ್ನು ಕಾಣಬೇಕು.

೨. ಎಲೈ ದೇವನೆ, ನಿನ್ನ ರಶ್ಮಿಗಳನ್ನು ಅತ್ತ ಸರಿಯಿಸು, ನಿನ್ನ ತೇಜಸ್ಸನ್ನು ಒಕ್ಕೂಡಿಸಿಕೊ. ನಿನ್ನ ಅಹೋರೂಪವಾದ ಸ್ವರೂಪವೂ ನನ್ನಲ್ಲಿರುವ ಅಹಂರೂಪವಾದ ಸ್ವರೂಪವೂ ಎರಡೂ ಒಂದೇ.

೩. ಈಗ ನನ್ನ ಪ್ರಾಣಾದಿಗಳು ತಮ್ಮ ತಮ್ಮ ಪ್ರಕೃತಿಯಲ್ಲಿ ಲಯವಾಗಲಿ! ಶರೀರವು ಭಸ್ಮವಾಗಿ ಪೃಥ್ವಿಯಲ್ಲಿ ಒಂದಾಗಲಿ! ಎಲೈ ಮನೋರೂಪನಾದ ಅಗ್ನಿಯೆ, ನಾನು ಮಾಡಿರುವ ಕರ್ಮೋಪಾಸನೆಗಳನ್ನು ನೆನಪಿಗೆ ತಂದುಕೊ, ತಂದುಕೊ! ಎಲೈ ಅಗ್ನಿಯೆ, ನೀನು ನಮ್ಮೆಲ್ಲರ ಮನೋಭಿಪ್ರಾಯವನ್ನು ಬಲ್ಲವನು. ಅದ್ದರಿಂದ ನಮ್ಮ ಪಾಪವನ್ನು ತೊಲಗಿಸಿ ಒಳ್ಳೆಯದಾದ ದೇವಯಾನಮಾರ್ಗದಿಂದ ಕರೆದುಕೊಂಡುಹೋಗಿ ಉಪಾಸನಾಫಲವನ್ನನುಸರಿಸುವಂತೆ ಮಾಡು! ನಿನಗೆ ನಮಸ್ಕಾರ!

# ಆರನೆಯ ಅಧ್ಯಾಯ - ಒಂದನೆಯ ಬ್ರಾಹ್ಮಣ

( ಪ್ರಾಣೋಪಾಸನೆ )

## ಪ್ರಾಣನು ಜ್ಯೇಷ್ಠನೂ ಶ್ರೇಷ್ಠನೂ ಎಂದು ಉಪಾಸನೆ

(ಉಪನಿಷತ್ತು)

**ಯೋ[1] ಹ ವೈ ಜ್ಯೇಷ್ಠಂ ಚ ಶ್ರೇಷ್ಠಂ ಚ ವೇದ ಜ್ಯೇಷ್ಠಶ್ಚ ಶ್ರೇಷ್ಠಶ್ಚ ಸ್ವಾನಾಂ ಭವತಿ ಪ್ರಾಣೋ ವೈ ಜ್ಯೇಷ್ಠಶ್ಚ ಶ್ರೇಷ್ಠಶ್ಚ ಜ್ಯೇಷ್ಠಶ್ಚ ಶ್ರೇಷ್ಠಶ್ಚ ಸ್ವಾನಾಂ ಭವತ್ಯಪಿ ಚ ಯೇಷಾಂ ಬುಭೂಷತಿ ಯ ಏವಂ ವೇದ ॥ ೧ ॥**

೧. ಯಾವನು ಜ್ಯೇಷ್ಠನೂ ಶ್ರೇಷ್ಠನೂ (ಆಗಿರುವದನ್ನು) ಅರಿತಿರುವನೋ (ಅವನು) ತನ್ನವರಲ್ಲಿ ಜ್ಯೇಷ್ಠನೂ ಶ್ರೇಷ್ಠನೂ ಆಗಿಯೇ ಆಗುತ್ತಾನೆ. ಪ್ರಾಣವೇ ಜ್ಯೇಷ್ಠವೂ ಶ್ರೇಷ್ಠವೂ ಆಗಿರುತ್ತದೆ. ಯಾವನು ಹೀಗೆಂದು ಅರಿತುಕೊಳ್ಳುವನೋ ಅವನು ತನ್ನವರಲ್ಲಿಯೂ, ಮತ್ತು ಯಾರಲ್ಲಿ (ತಾನು) ಹೀಗಿರಬೇಕೆಂದು ಇಚ್ಛಿಸುತ್ತಾನೋ (ಅವರಲ್ಲಿ)ಯೂ, ಜ್ಯೇಷ್ಠನೂ ಶ್ರೇಷ್ಠನೂ ಆಗುತ್ತಾನೆ.

## ಗ್ರಂಥಸಂಬಂಧ

(ಭಾಷ್ಯ)

**೪೦೭. ಪ್ರಾಣೋ ಗಾಯತ್ರೀ ಇತ್ಯುಕ್ತಮ್ । ಕಸ್ಮಾತ್ ಪುನಃ ಕಾರಣಾತ್ ಪ್ರಾಣಭಾವೋ ಗಾಯತ್ರ್ಯಾಃ ನ ಪುನರ್ವಾಗಾದಿಭಾವ ಇತಿ ? ಯಸ್ಮಾತ್ ಜ್ಯೇಷ್ಠಶ್ಚ ಶ್ರೇಷ್ಠಶ್ಚ ಪ್ರಾಣಃ, ನ ವಾಗಾದಯೋ ಜ್ಯೈಷ್ಠ್ಯಶ್ರೈಷ್ಠ್ಯಭಾಜಃ । ಕಥಂ ಜ್ಯೇಷ್ಠತ್ವಂ ಶ್ರೇಷ್ಠತ್ವಂ ಚ ಪ್ರಾಣಸ್ಯೇತಿ ? ತನ್ನಿರ್ದಿಧಾರಯಿಷಯಾ ಇದಮ್ ಆರಭ್ಯತೇ । ಅಥವಾ ಉಕ್ಥಯಜುಃಸಾಮಕ್ಷತ್ರಾದಿಭಾವೈಃ ಪ್ರಾಣಸ್ಯೈವ ಉಪಾಸನಮ್ ಅಭಿಹಿತಮ್, ಸತ್ಸ್ವಪಿ ಅನ್ಯೇಷು ಚಕ್ಷುರಾದಿಷು । ತತ್ರ ಹೇತುಮಾತ್ರಮ್ ಇಹ ಆನನ್ತರ್ಯೇಣ ಸಂಬಧ್ಯತೇ, ನ**

---

1. ಇಲ್ಲಿ ಉಪನಿಷತ್ತಿನ ಪ್ರಾರಂಭದಲ್ಲಿಯೂ ಭಾಷ್ಯದ ಪ್ರಾರಂಭದಲ್ಲಿಯೂ ಓಮ್ ಎಂದು ಅಚ್ಚಿನ ಪುಸ್ತಕಗಳಲ್ಲಿದೆ. ಆದರೆ ಮೂಲಕ್ಕೆ ಸೇರಿದ್ದೆಂದು ಕಾಣುವದಿಲ್ಲವಾಗಿ ಇದನ್ನು ಬಿಟ್ಟುಬಿಟ್ಟಿದೆ.

ಪುನಃ ಪೂರ್ವಶೇಷತಾ । ವಿವಕ್ಷಿತಂ ತು ಖಿಲತ್ವಾತ್ ಅಸ್ಯ ಕಾಣ್ಡಸ್ಯ ಪೂರ್ವತ್ರ ಯದನುಕ್ತಂ ವಿಶಿಷ್ಟಫಲಂ ಪ್ರಾಣವಿಷಯಮ್ ಉಪಾಸನಂ ತದ್ ವಕ್ತವ್ಯಮಿತಿ ॥

(ಭಾಷ್ಯಾರ್ಥ)

ಗಾಯತ್ರಿಯು ಪ್ರಾಣವು ಎಂದು ಹಿಂದೆ ಹೇಳಿದೆಯಷ್ಟೆ ? ಗಾಯತ್ರಿಯು ಪ್ರಾಣರೂಪವೇ, ವಾಗಾದಿರೂಪವಾದದ್ದಲ್ಲ ಎನ್ನುವದೇಕೆ ? ಏಕೆಂದರೆ ಪ್ರಾಣವು ಜ್ಯೇಷ್ಠವೂ ಶ್ರೇಷ್ಠವೂ ಆಗಿರುತ್ತದೆ, (ಆದರೆ) ವಾಗಾದಿಗಳಿಗೆ ಜ್ಯೇಷ್ಠತ್ವ ಶ್ರೇಷ್ಠತ್ವವು ಇರುವದಿಲ್ಲ. ಪ್ರಾಣಕ್ಕೆ ಜ್ಯೇಷ್ಠತ್ವವೂ ಶ್ರೇಷ್ಠತ್ವವೂ ಹೇಗೆ ? ಎಂಬ (ಶಂಕೆ ಬರಬಹುದಾಗಿ) ಅದನ್ನು ನಿರ್ಧರಿಸುವದಕ್ಕಾಗಿ ಈ (ಗ್ರಂಥವನ್ನು) ಆರಂಭಿಸಿರುತ್ತದೆ.

ಅಥವಾ ಚಕ್ಷುಸ್ಸೇ ಮುಂತಾದ ಬೇರೆಯ (ಕರಣ)ಗಳಿದ್ದರೂ ಉಕ್ಥ, ಯಜುಸ್ಸು, ಸಾಮ, ಕ್ಷತ್ರ – ಮುಂತಾದ ಸ್ವರೂಪವೆಂದು ಪ್ರಾಣವನ್ನೇ ಉಪಾಸನೆಮಾಡಬೇಕೆಂದು ಹೇಳಿರುತ್ತದೆ. ಅದಕ್ಕೆ ಕಾರಣವೇನು ಎಂಬುದಿಷ್ಟೇ ಇಲ್ಲಿಗೆ ಸಂಬಂಧ ; ಇಷ್ಟೇ ಹೊರತು ಹಿಂದಿನ ಗ್ರಂಥಕ್ಕೆ ಇದು ಶೇಷವಲ್ಲ[1]. ಆದರೆ (ಇಲ್ಲಿ) ವಿವಕ್ಷಿತವಾಗಿರುವದೇನೆಂದರೆ ಈ ಕಾಂಡವು ಖಿಲವಾದ್ದರಿಂದ ಹಿಂದೆ ಹೇಳದೆ ಇರುವ ಅಸಾಧಾರಣಫಲವುಳ್ಳ ಪ್ರಾಣವಿಷಯವಾದ ಉಪಾಸನೆ ಯುಂಟಲ್ಲ, ಅದನ್ನು ಹೇಳಬೇಕೆಂಬುದೇ.

## ಪ್ರಾಣವೇ ಕರಣಗಳಲ್ಲಿ ಜ್ಯೇಷ್ಠವೂ ಶ್ರೇಷ್ಠವೂ

(ಭಾಷ್ಯ)

೪೧೮. ಯಃ ಕಶ್ಚಿತ್ । ಹ ವೈ ಇತಿ ಅವಧಾರಣಾರ್ಥೌ । ಯಃ ಜ್ಯೇಷ್ಠಶ್ರೇಷ್ಠಗುಣಂ ವಕ್ಷ್ಯಮಾಣಂ ಯೋ ವೇದ ಅಸೌ ಭವತ್ಯೇವ ಜ್ಯೇಷ್ಠಶ್ಚ ಶ್ರೇಷ್ಠಶ್ಚ । ಏವಂ ಫಲೇನ ಪ್ರಲೋಭಿತಃ ಸನ್ ಪ್ರಶ್ನಾಯ ಅಭಿಮುಖೀ ಭೂತಃ । ತಸ್ಮೈ ಚ ಆಹ । ಪ್ರಾಣೋ ವೈ ಜ್ಯೇಷ್ಠಶ್ಚ ಶ್ರೇಷ್ಠಶ್ಚ । ಕಥಂ ಪುನರವಗಮ್ಯತೇ ಪ್ರಾಣೋ ಜ್ಯೇಷ್ಠಶ್ಚ ಶ್ರೇಷ್ಠಶ್ಚ ಇತಿ ? ಯಸ್ಮಾತ್ ನಿಷೇಕ ಕಾಲ ಏವ ಶುಕ್ರಶೋಣಿತಸಂಬನ್ಧಃ ಪ್ರಾಣಾದಿಕಲಾಪಸ್ಯ ಅವಿಶಿಷ್ಟಃ । ತಥಾಪಿ ನ ಅಪ್ರಾಣಂ ಶುಕ್ರಂ ವಿರೋಹತಿ ಇತಿ ಪ್ರಥಮೋ ವೃತ್ತಿಲಾಭಃ ಪ್ರಾಣಸ್ಯ ಚಕ್ಷುರಾದಿಭ್ಯಃ । ಅತೋ ಜ್ಯೇಷ್ಠೋ ವಯಸಾ ಪ್ರಾಣಃ । ನಿಷೇಕ ಕಾಲಾದಾರಭ್ಯ ಗರ್ಭಂ ಪುಷ್ಯತಿ ಪ್ರಾಣಃ । ಪ್ರಾಣೇ ಹಿ ಲಬ್ಧವೃತ್ತೌ ಪಶ್ಚಾತ್

1. ಇದು ಅರ್ಥವಾದವಲ್ಲ, ವಿಧಿಯೇ.

ಚಕ್ಷುರಾದೀನಾಂ ವೃತ್ತಿಲಾಭಃ । ಅತಃ ಯುಕ್ತಂ ಪ್ರಾಣಸ್ಯ ಜ್ಯೇಷ್ಠತ್ವಂ ಚಕ್ಷುರಾದಿಷು । ಭವತಿ ತು ಕಶ್ಚಿತ್ ಕುಲೇ ಜ್ಯೇಷ್ಠಃ । ಗುಣಹೀನತ್ವಾತ್ ತು ನ ಶ್ರೇಷ್ಠಃ । ಮಧ್ಯಮಃ ಕನಿಷ್ಠೋ ವಾ ಗುಣಾಢ್ಯತ್ವಾತ್ ಭವೇತ್ ಶ್ರೇಷ್ಠಃ, ನ ಜ್ಯೇಷ್ಠಃ । ನ ತು ತಥಾ ಇಹ ಇತ್ಯಾಹ । ಪ್ರಾಣ ಏವ ತು ಜ್ಯೇಷ್ಠಶ್ಚ ಶ್ರೇಷ್ಠಶ್ಚ । ಕಥಂ ಪುನಃ ಶ್ರೈಷ್ಠ್ಯಮ್ ಅವಗಮ್ಯತೇ ಪ್ರಾಣಸ್ಯ ? ತದಿಹ ಸಂವಾದೇನ ದರ್ಶಯಿಷ್ಯಾಮಃ ॥

(ಭಾಷ್ಯಾರ್ಥ)

ಯಾವನಾದರೆ— ಹ ವೈ ಎಂಬಿವು ಅವಧಾರಣೆಗಾಗಿ ಬಂದಿವೆ— ಯಾವನು ಜ್ಯೇಷ್ಠಶ್ರೇಷ್ಠತ್ವಗುಣವುಳ್ಳದ್ದೆಂದು ಮುಂದೆ ಹೇಳುವದನ್ನು ಯಾವನು —ಅರಿತುಕೊಂಡಿರುವನೋ ಅವನು ಜ್ಯೇಷ್ಠನೂ ಶ್ರೇಷ್ಠನೂ ಆಗಿಯೇ ಆಗುವನು.

ಹೀಗೆ ಫಲದಿಂದ ಪ್ರಲೋಭಿತನಾಗಿ ಪ್ರಶ್ನೆ(ಯನ್ನು ಕೇಳು)ವದಕ್ಕೆ ಅಭಿಮುಖ(ವಾಗುವನು). ಅವನಿಗೆ (ಶ್ರುತಿ) ಹೇಳುತ್ತದೆ. ಪ್ರಾಣವೇ ಜ್ಯೇಷ್ಠವೂ ಶ್ರೇಷ್ಠವೂ ; (ಪ್ರಶ್ನೆ) : ಪ್ರಾಣವು ಜ್ಯೇಷ್ಠವೂ ಶ್ರೇಷ್ಠವೂ (ಆದದ್ದೆಂದು) ಹೇಗೆ ಗೊತ್ತಾಗುತ್ತದೆ ? ಏಕೆಂದರೆ ನಿಷೇಕಕಾಲದಲ್ಲಿಯೇ ಶುಕ್ರಶೋಣಿತಗಳ ಸಂಬಂಧವು ಪ್ರಾಣಾದಿಗಳ ಸಮೂಹಕ್ಕೆ ಆಗುತ್ತದೆ ; ಆದರೂ ಪ್ರಾಣವಿಲ್ಲದೆ ಶುಕ್ರವು ಬೆಳೆಯಲಾರದಾದ್ದರಿಂದ ಪ್ರಾಣಕ್ಕೆ ಚಕ್ಷುರಾದಿಗಳಿಗಿಂತ ಮೊದಲೇ ವೃತ್ತಿಲಾಭ(ವಾಗುತ್ತದೆ). ಆದ್ದರಿಂದ ವಯಸ್ಸಿನಲ್ಲಿ ಪ್ರಾಣವೇ ಹಿರಿಯದು. ನಿಷೇಕಕಾಲದಿಂದಲೂ ಗರ್ಭವನ್ನು ಪ್ರಾಣವು ಪೋಷಿಸುತ್ತಿರುತ್ತದೆ. ಪ್ರಾಣಕ್ಕೆ ವೃತ್ತಿಯುಂಟಾದಮೇಲಲ್ಲವೆ, ಹಿಂದಿನಿಂದ ಚಕ್ಷುರಾದಿಗಳಿಗೆ ವೃತ್ತಿಯುಂಟಾಗುತ್ತದೆ ? ಆದ್ದರಿಂದ ಚಕ್ಷುರಾದಿಗಳ ಒಳಗೆ ಪ್ರಾಣನಿಗೇ ಜ್ಯೇಷ್ಠತ್ವ(ವಿದೆ ಎಂಬುದು) ಯುಕ್ತವಾಗಿರುತ್ತದೆ.[1]

ಯಾವನಾದರೆ (ತನ್ನ) ಕುಲದಲ್ಲಿ ಜ್ಯೇಷ್ಠನೇನೊ ಆಗಿರುತ್ತಾನೆ ; ಆದರೆ ಗುಣಹೀನನಾಗಿರುವದರಿಂದ ಶ್ರೇಷ್ಠ(ನಾಗಿರು)ವದಿಲ್ಲ. ನಡುವಣವನೋ ಕಿರಿಕಿರಿಯುವನೋ ಗುಣಾಢ್ಯನಾಗಿರುವದರಿಂದ ಶ್ರೇಷ್ಠನಾಗಿರಬಹುದು, ಜ್ಯೇಷ್ಠನೇ (ಶ್ರೇಷ್ಠನಾಗಿರಬೇಕಾ)ದದ್ದಿಲ್ಲ. ಆದರೆ ಇಲ್ಲಿ ಹಾಗಿಲ್ಲ –ಎಂದು (ಶ್ರುತಿ) ಹೇಳುತ್ತಿದೆ. ಪ್ರಾಣವೇ ಜ್ಯೇಷ್ಠವೂ ಶ್ರೇಷ್ಠವೂ (ಆಗಿದೆ). (ಪ್ರಶ್ನೆ) : ಇನ್ನು ಪ್ರಾಣನು ಶ್ರೇಷ್ಠನೆಂದು ಹೇಗೆ ಗೊತ್ತಾಗುತ್ತದೆ ? (ಉತ್ತರ) : ಇದನ್ನು ಇಲ್ಲಿ (ಪ್ರಾಣ)ಸಂವಾದದಿಂದ ತಿಳಿಸಿಕೊಡುವೆವು.

---

1. ಸೂ. ಭಾ. ೨-೪-೮ (ಭಾ. ಭಾ. ೧೮೮). ಈ ಪ್ರಕರಣವನ್ನು ಛಾಂದೋಗ್ಯದ ೫ನೆಯ ಅಧ್ಯಾಯಕ್ಕೆ ಹೋಲಿಸಿನೋಡಬೇಕು.

## ಜ್ಯೇಷ್ಠಶ್ರೇಷ್ಠನೆಂದು ಉಪಾಸನೆಮಾಡಿದರೆ ಫಲ

(ಭಾಷ್ಯ)

೪೮೯. ಸರ್ವಥಾಪಿ ತು ಪ್ರಾಣಂ ಜ್ಯೇಷ್ಠಶ್ರೇಷ್ಠಗುಣಂ ಯೋ ವೇದ ಉಪಾಸ್ತೇ ಸ ಸ್ವಾನಾಂ ಜ್ಞಾತೀನಾಂ ಜ್ಯೇಷ್ಠಶ್ಚ ಶ್ರೇಷ್ಠಶ್ಚ ಭವತಿ। ಜ್ಯೇಷ್ಠ ಶ್ರೇಷ್ಠಗುಣೋಪಾಸನಸಾಮರ್ಥ್ಯಾತ್ । ಸ್ವವ್ಯತಿರೇಕೇಣಾಪಿ ಚ ಯೇಷಾಂ ಮಧ್ಯೇ ಜ್ಯೇಷ್ಠಶ್ಚ ಶ್ರೇಷ್ಠಶ್ಚ ಭವಿಷ್ಯಾಮಿ ಇತಿ ಬುಭೂಷತಿ ಭವಿತುಮಿಚ್ಛತಿ ತೇಷಾಮಪಿ ಜ್ಯೇಷ್ಠಶ್ರೇಷ್ಠಪ್ರಾಣದರ್ಶೀ ಜ್ಯೇಷ್ಠಶ್ಚ ಶ್ರೇಷ್ಠಶ್ಚ ಭವತಿ। ನನು ವಯೋನಿಮಿತ್ತಂ ಜ್ಯೇಷ್ಠತ್ವಮ್, ತತ್ ಇಚ್ಛಾತಃ ಕಥಂ ಭವತೀತ್ಯುಚ್ಯತೇ ? ನೈಷ ದೋಷಃ। ಪ್ರಾಣವತ್ ವೃತ್ತಿಲಾಭಸ್ಯೈವ ಜ್ಯೇಷ್ಠತ್ವಸ್ಯ ವಿವಕ್ಷಿತತ್ವಾತ್॥

(ಭಾಷ್ಯಾರ್ಥ)

ಹೇಗೇ ಆಗಲಿ, ಪ್ರಾಣನು ಜ್ಯೇಷ್ಠಶ್ರೇಷ್ಠಗುಣಗಳುಳ್ಳವನು ಎಂದು ಯಾವನು ಅರಿತಿರುವನೋ ಉಪಾಸನೆಮಾಡುವನೋ ಅವನು ತಮ್ಮ ಜ್ಞಾತಿಗಳೊಳಗೆ ಜ್ಯೇಷ್ಠನೂ ಶ್ರೇಷ್ಠನೂ ಆಗುವನು ; ಜ್ಯೇಷ್ಠಶ್ರೇಷ್ಠಗುಣಗಳುಳ್ಳ(ದ್ದೆಂದು) ಉಪಾಸನೆಮಾಡಿದ್ದರ ಬಲದಿಂದ (ಈ ಫಲವಾಗುತ್ತದೆ). ತಮ್ಮವರಲ್ಲದೆ ಯಾರೊಳಗೆ ಜ್ಯೇಷ್ಠನೂ ಶ್ರೇಷ್ಠನೂ ಆಗಿರಬೇಕೆಂದು (ಬುಭೂಷತಿ= ಭವಿತುಮಿಚ್ಛತಿ) ಆಗಲಿಚ್ಛಿಸುವನೋ ಅವರುಗಳೊಳಗೂ (ಈ) ಜ್ಯೇಷ್ಠಶ್ರೇಷ್ಠ ಪ್ರಾಣೋಪಾಸಕನು ಜ್ಯೇಷ್ಠನೂ ಶ್ರೇಷ್ಠನೂ ಆಗುವನು.

(ಆಕ್ಷೇಪ) :- ಜ್ಯೇಷ್ಠನಾಗಿರುವದೆಂಬುದು ವಯಸ್ಸಿನ ನಿಮಿತ್ತದಿಂದ. ಅದು (ಬರಿಯ) ಇಚ್ಛೆಯಿಂದ ಆಗುವದೆಂದು ಹೇಳುವದು ಹೇಗೆ (ಸರಿ) ?

(ಪರಿಹಾರ) :- ಇದೇನೂ ತಪ್ಪಲ್ಲ. ಏಕೆಂದರೆ ಪ್ರಾಣದಂತೆ ವೃತ್ತಿಲಾಭವೆಂಬ ಜ್ಯೇಷ್ಠತ್ವವೇ (ಇಲ್ಲಿ) ವಿವಕ್ಷಿತವಾಗಿರುತ್ತದೆ.

## ವಾಕ್ಕೇ ವಸಿಷ್ಠಗುಣವುಳ್ಳದ್ದು

(ಉಪನಿಷತ್ತು)

**ಯೋ ಹ ವೈ ವಸಿಷ್ಠಾಂ ವೇದ ವಸಿಷ್ಠಃ ಸ್ವಾನಾಂ ಭವತಿ ವಾಗ್ವೈ ವಸಿಷ್ಠಾ ವಸಿಷ್ಠಃ ಸ್ವಾನಾಂ ಭವತ್ಯಪಿ ಚ ಯೇಷಾಂ ಬುಭೂಷತಿ ಯ ಏವಂ ವೇದ ॥ ೨ ॥**

೨. ಯಾವನು ವಸಿಷ್ಠವನ್ನು ಅರಿತುಕೊಂಡಿರುವನೋ ಅವನು ತಮ್ಮವರಲ್ಲಿ ವಸಿಷ್ಠನು ಆಗಿಯೇ ಆಗುವನು. ವಾಕ್ಕೇ ವಸಿಷ್ಠವು

ಯಾವನು ಹೀಗೆಂದು ಅರಿತಿರುವನೋ ಅವನು ತಮ್ಮವರಲ್ಲಿಯೂ ಮತ್ತು ಯಾರೊಳಗೆ (ಹೀಗಾಗ)ಬೇಕೆಂದು ಇಚ್ಛಿಸುವನೋ ಅವರೊಳಗೂ ವಸಿಷ್ಠನಾಗುವನು.

## ವಾಕ್ಕು ವಸಿಷ್ಠದೇವತೆ ಎಂಬ ಉಪಾಸನೆ ಮತ್ತು ಅದರ ಫಲ

(ಭಾಷ್ಯ)

೪೧೦. ಯೋ ಹ ವೈ ವಸಿಷ್ಠಾಂ ವೇದ ವಸಿಷ್ಠಃ ಸ್ವಾನಾಂ ಭವತಿ। ತದ್ದರ್ಶನಾನುರೂಪ್ಯೇಣ ಫಲಮ್। ಯೇಷಾಂ ಚ ಜ್ಞಾತಿವ್ಯತಿರೇಕೇಣ ವಸಿಷ್ಠೋ ಭವಿತುಮಿಚ್ಛತಿ ತೇಷಾಂ ಚ ವಸಿಷ್ಠೋ ಭವತಿ। ಉಚ್ಯತಾಂ ತರ್ಹಿ ಕಾಸೌ ವಸಿಷ್ಠಾ ಇತಿ? ವಾಗ್ವೈ ವಸಿಷ್ಠಾ ವಾಸಯತಿ ಅತಿಶಯೇನ ವಸ್ತೇ ವಾ ಇತಿ ವಸಿಷ್ಠಾ। ವಾಗ್ಮಿನೋ ಹಿ ಧನವನ್ತೋ ವಸನ್ತಿ ಅತಿಶಯೇನ। ಆಚ್ಛಾದನಾರ್ಥಸ್ಯ ವಾ ವಸೇರ್ವಸಿಷ್ಠಾ। ಅಭಿಭವನ್ತಿ ಹಿ ವಾಚಾ ವಾಗ್ಮಿನಃ ಅನ್ಯಾನ್। ತೇನ ವಸಿಷ್ಠಗುಣವತ್ಪರಿಜ್ಞಾನಾತ್ ವಸಿಷ್ಠಗುಣೋ ಭವತೀತಿ ದರ್ಶನಾನುರೂಪಂ ಫಲಮ್ ॥

(ಭಾಷ್ಯಾರ್ಥ)

ಯಾವನು ವಸಿಷ್ಠವನ್ನು ಅರಿತಿರುವನೋ ಅವನು ತಮ್ಮವರಲ್ಲಿ ವಸಿಷ್ಠನಾಗುವನು. ಆ ದರ್ಶನಕ್ಕೆ ಅನುರೂಪವಾಗಿ ಫಲ(ವಾಗುವದು) : ಜ್ಞಾತಿಗಳೇ ಅಲ್ಲದೆ ಯಾರೊಳಗೆ ತಾನು ವಸಿಷ್ಠನಾಗಿರಬೇಕೆಂದು ಇಚ್ಛಿಸುತ್ತಾನೋ ಅವರೊಳಗೂ ವಸಿಷ್ಠನಾಗುವನು.

(ಪ್ರಶ್ನೆ) :- ಹಾಗಾದರೆ ಈ ವಸಿಷ್ಠವಾದದ್ದು ಯಾವದು, ಹೇಳಬೇಕು.

(ಉತ್ತರ) :- ವಾಕ್ಕೇ ವಸಿಷ್ಠ. ಅತಿಶಯವಾಗಿ ವಾಸಮಾಡಿಸುತ್ತದೆ, ಅಥವಾ ಮುಚ್ಚುತ್ತದೆಯಾದ್ದರಿಂದ (ಇದು) ವಸಿಷ್ಠವು. ವಾಗ್ಮಿಗಳು ಧನವಂತರಾಗಿ ಅತಿಶಯದಿಂದ ವಾಸಮಾಡುತ್ತಾರಲ್ಲವೆ ? ಅಥವಾ ಮುಚ್ಚು ಎಂಬರ್ಥದ ವಸ್ ಧಾತುವಿನಿಂದ (ಈ ಶಬ್ದವು ವ್ಯುತ್ಪನ್ನವಾಗಿರುವದರಿಂದ) ವಸಿಷ್ಠ ಎಂದಾದರೂ (ವ್ಯಾಖ್ಯಾನಮಾಡಬಹುದು). ವಾಗ್ಮಿಗಳು (ತಮ್ಮ) ಮಾತಿನಿಂದ ಮಿಕ್ಕವರನ್ನು ಗೆದ್ದು (ಮುಚ್ಚಿ)ಹಾಕುತ್ತಾರಲ್ಲವೆ? ಆದ್ದರಿಂದ ವಸಿಷ್ಠಗುಣವುಳ್ಳ (ವಾಕ್ಕನ್ನು) ಉಪಾಸನೆಮಾಡಿದ್ದರಿಂದ ವಸಿಷ್ಠಗುಣವುಳ್ಳವನೇ ಎಂದು ದರ್ಶನಕ್ಕೆ ಅನುರೂಪವಾದ ಫಲ(ವನ್ನು ಹೇಳಿದೆ).

## ಚಕ್ಷುಸ್ಸೇ ಪ್ರತಿಷ್ಠೆ

(ಉಪನಿಷತ್ತು)

**ಯೋ ಹ ವೈ ಪ್ರತಿಷ್ಠಾಂ ವೇದ ಪ್ರತಿತಿಷ್ಠತಿ ಸಮೇ ಪ್ರತಿತಿಷ್ಠತಿ ದುರ್ಗೇ ಚಕ್ಷುರ್ವೈ ಪ್ರತಿಷ್ಠಾ ಚಕ್ಷುಷಾ ಹಿ ಸಮೇ ಚ ದುರ್ಗೇ ಚ ಪ್ರತಿತಿಷ್ಠತಿ ಪ್ರತಿತಿಷ್ಠತಿ ಸಮೇ ಚ ಪ್ರತಿತಿಷ್ಠತಿ ದುರ್ಗೇ ಯ ಏವಂ ವೇದ ॥ ೩ ॥**

೩. ಯಾವನು ಪ್ರತಿಷ್ಠೆಯನ್ನು ಅರಿತಿರುವನೋ ಅವನು ಸಮವಾದದ್ದರಲ್ಲಿಯೂ ದುರ್ಗದಲ್ಲಿಯೂ ಅವಶ್ಯವಾಗಿ ಪ್ರತಿಷ್ಠಿತನಾಗಿರುತ್ತಾನೆ. ಚಕ್ಷುಸ್ಸೇ ಪ್ರತಿಷ್ಠೆ; ಚಕ್ಷುಸ್ಸಿನಿಂದಲ್ಲವೆ, ಸಮವಾದದ್ದರಲ್ಲಿಯೂ ದುರ್ಗದಲ್ಲಿಯೂ ಪ್ರತಿಷ್ಠಿತನಾಗಿರುತ್ತಾನೆ? ಯಾವನು ಹೀಗೆಂದು ಅರಿತುಕೊಳ್ಳುವನೋ ಅವನು ಸಮದಲ್ಲಿಯೂ ಪ್ರತಿಷ್ಠಿತನಾಗಿರುತ್ತಾನೆ, ದುರ್ಗದಲ್ಲಿಯೂ ಪ್ರತಿಷ್ಠಿತನಾಗಿರುತ್ತಾನೆ.

## ಚಕ್ಷುಸ್ಸು ಪ್ರತಿಷ್ಠೆ ಎಂಬ ಉಪಾಸನೆ, ಅದರ ಫಲ

(ಭಾಷ್ಯ)

**೪೧೧. ಯೋ ಹವೈ ಪ್ರತಿಷ್ಠಾಂ ವೇದ। ಪ್ರತಿತಿಷ್ಠತಿ ಅನಯಾ ಇತಿ ಪ್ರತಿಷ್ಠಾ । ತಾಂ ಪ್ರತಿಷ್ಠಾಂ ಪ್ರತಿಷ್ಠಾಗುಣವತೀಂ ಯೋ ವೇದ। ತಸ್ಯ ಏತತ್ ಫಲಮ್, ಪ್ರತಿತಿಷ್ಠತಿ ಸಮೇ ದೇಶೇ ಕಾಲೇ ಚ। ತಥಾ ದುರ್ಗೇ ವಿಷಮೇ ಚ ದುರ್ಗಮನೇ ಚ ದೇಶೇ, ದುರ್ಭಿಕ್ಷಾದೌ ವಾ ಕಾಲೇ ವಿಷಮೇ। ಯದ್ಯೇವಮ್ ಉಚ್ಯತಾಮ್, ಕಾಸೌ ಪ್ರತಿಷ್ಠಾ? ಚಕ್ಷುರ್ವೈ ಪ್ರತಿಷ್ಠಾ। ಕಥಂ ಚಕ್ಷುಷಃ ಪ್ರತಿಷ್ಠಾತ್ವಮ್ ಇತಿ? ಆಹ। ಚಕ್ಷುಷಾ ಹಿ ಸಮೇ ಚ ದುರ್ಗೇ ಚ ದೃಷ್ಟ್ವಾ ಪ್ರತಿತಿಷ್ಠತಿ। ಅತಃ ಅನುರೂಪಂ ಫಲಮ್। ಪ್ರತಿತಿಷ್ಠತಿ ಸಮೇ ಪ್ರತಿತಿಷ್ಠತಿ ದುರ್ಗೇ ಯ ಏವಂ ವೇದ ಇತಿ॥**

(ಭಾಷ್ಯಾರ್ಥ)

**ಯಾವನು, ಪ್ರತಿಷ್ಠೆಯನ್ನು ಅರಿತಿರುತ್ತಾನೋ— ಇದರಿಂದ ಪ್ರತಿಷ್ಠಿತನಾಗುತ್ತಾನಾದ್ದರಿಂದ[1] (ಇದಕ್ಕೆ) ಪ್ರತಿಷ್ಠಾ ಎಂದು ಹೆಸರು. ಆ ಪ್ರತಿಷ್ಠೆಯನ್ನು ಪ್ರತಿಷ್ಠಾಗುಣಗಳುಳ್ಳದ್ದನ್ನು ಯಾವನು ಅರಿತಿರುತ್ತಾನೋ—ಅವನಿಗೆ**

---

1 ಅಲುಗಾಡದೆ ಇರುತ್ತಾನೆ.

ಇದು ಫಲವು ; ಸಮವಾದ ದೇಶದಲ್ಲಿಯೂ ಕಾಲದಲ್ಲಿಯೂ ಮತ್ತು ದುರ್ಗವಾದ ವಿಷಮವಾದ, ದುರ್ಗಮವಾದ ಸ್ಥಲದಲ್ಲಿಯೂ ದುರ್ಭಿಕ್ಷಾದಿವಿಷಮಕಾಲದಲ್ಲಿಯೂ, (ಪ್ರತಿಷ್ಠಿತನಾಗಿರುತ್ತಾನೆ).

(ಪ್ರಶ್ನೆ) :– ಹಾಗಾದರೆ ಈ ಪ್ರತಿಷ್ಠೆ ಯಾವದು ಹೇಳಬೇಕು !

(ಉತ್ತರ) :– ಚಕ್ಷುಸ್ಸೇ ಪ್ರತಿಷ್ಠೆ. ಚಕ್ಷುಸ್ಸು ಪ್ರತಿಷ್ಠೆ ಎಂಬುದು ಹೇಗೆ ? ಎಂದರೆ (ಶ್ರುತಿ) ಹೇಳುತ್ತದೆ. ಚಕ್ಷುಸ್ಸಿನಿಂದಲೇ ಅಲ್ಲವೆ, ಸಮ(ದೇಶಕಾಲ)ಗಳಲ್ಲಿಯೂ ದುರ್ಗವಾದ (ದೇಶಕಾಲ)ಗಳಲ್ಲಿಯೂ ನೋಡಿ ಪ್ರತಿಷ್ಠಿತನಾಗುತ್ತಾನೆ ?

ಆದ್ದರಿಂದ (ಇದಕ್ಕೆ) ಅನುರೂಪವಾದ ಫಲವೇ ಆಗಿರುತ್ತದೆ. ಯಾವನು ಹೀಗೆಂದು ಉಪಾಸನೆಮಾಡುವನೋ ಅವನು ಸಮದಲ್ಲಿಯೂ ಪ್ರತಿಷ್ಠಿತನಾಗಿರುತ್ತಾನೆ, ದುರ್ಗದಲ್ಲಿಯೂ ಪ್ರತಿಷ್ಠಿತನಾಗಿರುತ್ತಾನೆ.

## ಶ್ರೋತ್ರವೇ ಸಂಪತ್ತು

(ಉಪನಿಷತ್ತು)

**ಯೋ ಹ ವೈ ಸಂಪದಂ ವೇದ ಸಗ್ಂ ಹಾಸ್ಮೈ ಪದ್ಯತೇ ಯಂ ಕಾಮಂ ಕಾಮಯತೇ ಶ್ರೋತ್ರಂ ವೈ ಸಂಪಚ್ಛ್ರೋತ್ರೇ ಹೀಮೇ ಸರ್ವೇ ವೇದಾ ಅಭಿಸಂಪನ್ನಾಃ ಸಗ್ಂ ಹಾಸ್ಮೈ ಪದ್ಯತೇ ಯಂ ಕಾಮಂ ಕಾಮಯತೇ ಯ ಏವಂ ವೇದ ॥ ೪ ॥**

೪. ಯಾವನು ಸಂಪತ್ತನ್ನು ಅರಿತಿರುವನೋ, ಅವನಿಗೆ ಯಾವ ಕಾಮವನ್ನು ಕಾಮಿಸುತ್ತಾನೋ (ಅದು) ಅವಶ್ಯವಾಗಿ ಉಂಟಾಗುತ್ತದೆ. ಶ್ರೋತ್ರವೇ ಸಂಪತ್ತು. ಶ್ರೋತ್ರದಲ್ಲಲ್ಲವೆ, ಈ ವೇದಗಳೆಲ್ಲ ಅಭಿಸಂಪನ್ನವಾಗುತ್ತವೆ? ಯಾವನು ಹೀಗೆಂದು ಅರಿಯುವನೋ ಅವನಿಗೆ ಯಾವ ಕಾಮವನ್ನು ಕಾಮಿಸುತ್ತಾನೋ (ಅದು) ಉಂಟಾಗುತ್ತದೆ.

## ಶ್ರೋತ್ರವು ಸಂಪತ್ತೆಂಬ ಉಪಾಸನೆ, ಅದರ ಫಲ

(ಭಾಷ್ಯ)

**೪೧೨. ಯೋ ಹ ವೈ ಸಂಪದಂ ವೇದ ಸಂಪದ್ಗುಣಯುಕ್ತಂ ಯೋ ವೇದ ತಸ್ಯ ಏತತ್ ಫಲಮ್ । ಅಸ್ಮೈ ವಿದುಷೇ ಸಂಪದ್ಯತೇ ಹ । ಕಿಮ್ ? ಯಂ ಕಾಮಂ ಕಾಮಯತೇ ಸ ಕಾಮಃ । ಕಿಂ ಪುನಃ ಸಂಪದ್ಗುಣಕಮ್ ? ಶ್ರೋತ್ರಂ ವೈ ಸಂಪತ್ । ಕಥಂ ಪುನಃ ಶ್ರೋತ್ರಸ್ಯ ಸಂಪದ್ಗುಣಕತ್ವಮಿತಿ ?**

ಉಚ್ಯತೇ । ಶ್ರೋತ್ರೇ ಸತಿ ಹಿ ಯಸ್ಮಾತ್ ಸರ್ವೇ ವೇದಾಃ ಅಭಿಸಂಪನ್ನಾಃ । ಶ್ರೋತ್ರೇನ್ದ್ರಿಯವತಃ ಅಧ್ಯೇಯತ್ವಾತ್ । ವೇದವಿಹಿತಕರ್ಮಾಯತ್ತಾಶ್ಚ ಕಾಮಾಃ । ತಸ್ಮಾತ್ ಶ್ರೋತ್ರಂ ಸಂಪತ್ । ಅತಃ ವಿಜ್ಞಾನಾನುರೂಪಂ ಫಲಮ್ । ಸಂ ಹಾಸ್ಮೈ ಪದ್ಯತೇ ಯಂ ಕಾಮಂ ಕಾಮಯತೇ ಯ ಏವಂ ವೇದ ॥

(ಭಾಷ್ಯಾರ್ಥ)

ಯಾವನು ಸಂಪತ್ತನ್ನು ಅರಿತಿರುವನೋ, ಸಂಪದ್ಗುಣಯುಕ್ತವಾದದ್ದನ್ನು ಯಾವನು ಅರಿತಿರುವನೋ, ಅವನಿಗೆ ಇದು ಫಲವು. ಈ ಜ್ಞಾನಿಗೆ ಉಂಟಾಗಿ ತೀರುತ್ತದೆ. ಏನು ? ಯಾವ ಕಾಮವನ್ನು ಕಾಮಿಸುತ್ತಾನೋ ಆ ಕಾಮವು (ಉಂಟಾಗುತ್ತದೆ).

ಸಂಪದ್ಗುಣಕವಾದದ್ದು ಯಾವದು ? ಶ್ರೋತ್ರವೇ ಸಂಪತ್ತು. ಶ್ರೋತ್ರವು ಸಂಪದ್ಗುಣಕವೆಂಬುದು ಹೇಗೆ ? ಎಂದರೆ (ಶ್ರುತಿ) ಹೇಳುತ್ತದೆ ಶ್ರೋತ್ರವು ಇದ್ದರಲ್ಲವೆ, (ಹಿ=ಯಸ್ಮಾತ್) ಎಲ್ಲಾ ವೇದಗಳ ಸಂಪಾದನೆಯೂ ಆಗುವದು ? ಏಕೆಂದರೆ ಶ್ರೋತ್ರೇಂದ್ರಿಯವುಳ್ಳವನೇ ಅಧ್ಯಯನಮಾಡತಕ್ಕವು, (ಅವು). ವೇದ ವಿಹಿತವಾಗಿರುವ ಕರ್ಮಗಳಿಗೆ ಅಧೀನವಾಗಿಯೇ ಕಾಮಗಳು (ಉಂಟಾಗುತ್ತವೆ). ಆದ್ದರಿಂದ ಶ್ರೋತ್ರವು ಸಂಪತ್ತು.

ಆದ್ದರಿಂದ (ಈ) ಉಪಾಸನೆಗೆ ಅನುರೂಪವಾಗಿ ಫಲ(ವಾಗುವದು) : ಯಾವನು ಹೀಗೆಂದು ಉಪಾಸನೆಮಾಡುವನೋ ಅವನಿಗೆ ಯಾವ ಕಾಮವನ್ನು ಕಾಮಿಸುವನೋ (ಅದು) ಅವಶ್ಯವಾಗಿ ಉಂಟಾಗುತ್ತದೆ.

## ಮನಸ್ಸೇ ಆಯತನ

(ಉಪನಿಷತ್ತು)

**ಯೋ ಹ ವಾ ಆಯತನಂ ವೇದಾಯತನಗ್ಂ ಸ್ವಾನಾಂ ಭವತ್ಯಾಯತನಂ ಜನಾನಾಂ ಮನೋ ವಾ ಆಯತನಮಾಯತನಗ್ಂ ಸ್ವಾನಾಂ ಭವತ್ಯಾಯತನಂ ಜನಾನಾಂ ಯ ಏವಂ ವೇದ ॥ ೫ ॥**

೫. ಯಾವನು ಆಯತನವನ್ನು ಅರಿತಿರುವನೋ ಅವನು ಅವಶ್ಯವಾಗಿ ತಮ್ಮವರಿಗೆ ಆಯತನವಾಗುವನು, ಜನರಿಗೂ ಆಯತನವಾಗುವನು. ಮನಸ್ಸೇ ಆಯತನವು. ಯಾವನು ಹೀಗೆಂದು ಉಪಾಸನೆಮಾಡುವನೋ ಅವನು ತಮ್ಮವರಿಗೂ ಆಯತನವಾಗುವನು, ಜನರಿಗೂ ಆಯತನ(ವಾಗುವನು).

## ಮನಸ್ಸು ಆಯತನವೆಂಬ ಉಪಾಸನೆ, ಅದರ ಫಲ

(ಭಾಷ್ಯ)

೪೧೩. ಯೋ ಹ ವಾ ಆಯತನಂ ವೇದ । ಆಯತನಮ್ ಆಶ್ರಯಃ । ತತ್ ಯೋ ವೇದ । ಆಯತನಂ ಸ್ವಾನಾಂ ಭವತಿ, ಆಯತನಂ ಜನಾನಾಮ್ ಅನ್ಯೇಷಾಮಪಿ । ಕಿಂ ಪುನಸ್ತತ್ ಆಯತನಮಿತಿ ? ಉಚ್ಯತೇ । ಮನೋ ವೈ ಆಯತನಮ್ ಆಶ್ರಯಃ ಇನ್ದ್ರಿಯಾಣಾಂ ವಿಷಯಾಣಾಂ ಚ । ಮನಆಶ್ರಿತಾ ಹಿ ವಿಷಯಾ ಆತ್ಮನೋ ಭೋಗ್ಯತ್ವಂ ಪ್ರತಿಪದ್ಯನ್ತೇ । ಮನಃಸಂಕಲ್ಪವಶಾನಿ ಚ ಇನ್ದ್ರಿಯಾಣಿ ಪ್ರವರ್ತನ್ತೇ ನಿವರ್ತನ್ತೇ ಚ । ಅತೋ ಮನ ಆಯತನಮ್ ಇನ್ದ್ರಿಯಾಣಾಮ್, ಅತೋ ದರ್ಶನಾನುರೂಪ್ಯೇಣ ಫಲಮ್ । ಆಯತನಂ ಸ್ವಾನಾಂ ಭವತಿ, ಆಯತನಂ ಜನಾನಾಂ ಯ ಏವಂ ವೇದ ॥

(ಭಾಷ್ಯಾರ್ಥ)

ಯಾವನು ಆಯತನವನ್ನು ಅರಿತಿರುವನೋ — ಆಯತನವೆಂದರೆ ಆಶ್ರಯವು. ಅದನ್ನು ಯಾವನು ಅರಿತಿರುವನೋ (ಅವನು) ತಮ್ಮವರಿಗೆ ಆಯತನವಾಗಿರುತ್ತಾನೆ, ಮಿಕ್ಕ ಜನರಿಗೂ ಆಯತನ(ವಾಗಿರುತ್ತಾನೆ).

ಆ ಆಯತನವೆಂಬುದು ಯಾವದು ? ಎಂದರೆ (ಶ್ರುತಿ) ಹೇಳುತ್ತದೆ. ಮನಸ್ಸೇ ಆಯತನವು. ಇಂದ್ರಿಯಗಳಿಗೂ ವಿಷಯಗಳಿಗೂ ಆಶ್ರಯವು. ಮನಸ್ಸನ್ನಾಶ್ರಯಿಸಿಯಲ್ಲವೆ, ವಿಷಯಗಳು ಆತ್ಮನಿಗೆ ಭೋಗ್ಯವಾಗುತ್ತವೆ ? ಮನಸ್ಸಿನ ಸಂಕಲ್ಪಕ್ಕೆ ವಶವಾಗಿಯೇ ಇಂದ್ರಿಯಗಳು ಪ್ರವರ್ತಿಸುತ್ತಲೂ ನಿವೃತ್ತವಾಗುತ್ತಲೂ ಇರುತ್ತವೆ. ಆದ್ದರಿಂದ ಇಂದ್ರಿಯಗಳಿಗೆ ಮನಸ್ಸೇ ಆಯತನವು.

ಆದ್ದರಿಂದ (ಈ) ದರ್ಶನಕ್ಕೆ ಅನುರೂಪವಾಗಿಯೇ ಫಲ(ವಾಗುವದು) : ಯಾವನು ಹೀಗೆಂದು ಉಪಾಸನೆಮಾಡುವನೋ ಅವನು ತಮ್ಮವರಿಗೂ ಆಯತನವಾಗುತ್ತಾನೆ, (ಮಿಕ್ಕ) ಜನರಿಗೂ ಆಯತನವಾಗುತ್ತಾನೆ.

## ರೇತಸ್ಸೇ ಪ್ರಜಾತಿ

(ಉಪನಿಷತ್ತು)

**ಯೋ ಹ ವೈ ಪ್ರಜಾತಿಂ ವೇದ ಪ್ರಜಾಯತೇ ಹ ಪ್ರಜಯಾ ಪಶುಭೀ ರೇತೋ ವೈ ಪ್ರಜಾತಿಃ ಪ್ರಜಾಯತೇ ಹ ಪ್ರಜಯಾ ಪಶುಭಿರ್ಯ ಏವಂ ವೇದ ॥ ೬ ॥**

೬. ಯಾವನು ಪ್ರಜಾತಿಯನ್ನು ಅರಿತಿರುವನೋ ಅವನು ಅವಶ್ಯವಾಗಿ ಪ್ರಜೆಯಿಂದಲೂ ಪಶುಗಳಿಂದಲೂ ಕೂಡಿದವನಾಗುವನು. ರೇತಸ್ಸೇ ಪ್ರಜಾತಿಯು. ಯಾವನು ಹೀಗೆಂದು ಅರಿಯುವನೋ ಅವನು ಪ್ರಜೆಯಿಂದಲೂ ಪಶುಗಳಿಂದಲೂ ಕೂಡಿದವನಾಗುವನು.

## ರೇತಸ್ಸು ಪ್ರಜಾತಿಯೆಂಬ ಉಪಾಸನೆ, ಅದರ ಫಲ

(ಭಾಷ್ಯ)

೪೧೪. ಯೋ ಹ ವೈ ಪ್ರಜಾತಿಂ ವೇದ ಪ್ರಜಾಯತೇ ಹ ಪ್ರಜಯಾ ಪಶುಭಿಶ್ಚ ಸಂಪನ್ನೋ ಭವತಿ । ರೇತೋ ವೈ ಪ್ರಜಾತಿಃ । ರೇತಸಾ ಪ್ರಜನನೇನ್ದ್ರಿಯಮ್ ಉಪಲಕ್ಷ್ಯತೇ । ತದ್ವಿಜ್ಞಾನಾನುರೂಪಂ ಫಲಮ್ । ಪ್ರಜಾಯತೇ ಹ ಪ್ರಜಯಾ ಪಶುಭಿಃ ಯ ಏವಂ ವೇದ ॥

(ಭಾಷ್ಯಾರ್ಥ)

ಯಾವನು ಪ್ರಜಾತಿಯನ್ನು ಅರಿತಿರುವನೋ ಅವನು ಪ್ರಜೆಯಿಂದಲೂ ಪಶುಗಳಿಂದಲೂ ಕೂಡಿದವನಾಗುತ್ತಾನೆ, ಸಂಪನ್ನನಾಗುತ್ತಾನೆ. ರೇತಸ್ಸೇ ಪ್ರಜಾತಿಯು. (ಇಲ್ಲಿ) ರೇತಸ್ಸು ಎಂಬುದನ್ನು ಪ್ರಜನನೇಂದ್ರಿಯಕ್ಕೆ ಉಪಲಕ್ಷಣವಾಗಿ ಉಪಯೋಗಿಸಿರುತ್ತದೆ.

ಅದರ ವಿಜ್ಞಾನಕ್ಕೆ ಅನುರೂಪವಾಗಿ (ಈ) ಫಲ(ವಾಗುತ್ತದೆ) : ಯಾವನು ಹೀಗೆಂದು ಉಪಾಸನೆಮಾಡುವನೋ ಅವನು ಪ್ರಜೆಯಿಂದಲೂ ಪಶುಗಳಿಂದಲೂ ಕೂಡಿದವನಾಗುತ್ತಾನೆ,

## ಪ್ರಾಣಸಂವಾದ

(ಉಪನಿಷತ್ತು)

**ತೇ ಹೇ ಮೇ ಪ್ರಾಣಾ ಅಹಗ್ಂಶ್ರೇಯಸೇ ವಿವದಮಾನಾ ಬ್ರಹ್ಮ ಜಗ್ಮುಸ್ತದ್ಧೋಚುಃ ಕೋ ನೋ ವಸಿಷ್ಠ ಇತಿ ತದ್ಧೋವಾಚ ಯಸ್ಮಿನ್ ವ ಉತ್ಕ್ರಾನ್ತ ಇದಗ್ಂ ಶರೀರಂ ಪಾಪೀಯೋ ಮನ್ಯತೇ ಸ ವೋ ವಸಿಷ್ಠ ಇತಿ ॥ ೭ ॥**

೭. ಆ ಈ ಪ್ರಾಣಗಳು ನಾನೇ ಶ್ರೇಷ್ಠನು ಎಂಬುದಕ್ಕಾಗಿ ವಿವಾದಮಾಡುತ್ತಾ ಬ್ರಹ್ಮದ ಬಳಿಗೆ ಹೋದರು. ಅದನ್ನು ಕುರಿತು

'ನಮ್ಮಲ್ಲಿ ವಸಿಷ್ಠನು ಯಾರು ?' ಎಂದರು. ಆ ಬ್ರಹ್ಮವು ಇಂತೆಂದಿತು : "ನಿಮ್ಮಲ್ಲಿ ಯಾರು ಉತ್ಕ್ರಾಂತನಾದರೆ ಈ ಶರೀರವು ಹೆಚ್ಚು ಕೆಟ್ಟದ್ದಾಗಿರುವದೆಂದು ಎಣಿಸುತ್ತಾರೋ ಅವನೇ ನಿಮ್ಮಲ್ಲಿ ವಸಿಷ್ಠನು."

## ಪ್ರಾಣಗಳಿಗೆ ತಮ್ಮಲ್ಲಿ ಶ್ರೇಷ್ಠರು ಯಾರೆಂಬ ಬಗ್ಗೆ ವಿವಾದ

(ಭಾಷ್ಯ)

೪೧೫. ತೇ ಹ ಇಮೇ ಪ್ರಾಣಾಃ ವಾಗಾದಯಃ ಅಹಂಶ್ರೇಯಸೇ ಅಹಂ ಶ್ರೇಯಾನ್ ಇತ್ಯೇತಸ್ಮೈ ಪ್ರಯೋಜನಾಯ ವಿವದಮಾನಾಃ ವಿರುದ್ಧಂ ವದಮಾನಾಃ ಬ್ರಹ್ಮ ಜಗ್ಮುಃ ಬ್ರಹ್ಮ ಗತವನ್ತಃ ಬ್ರಹ್ಮಶಬ್ದವಾಚ್ಯಂ ಪ್ರಜಾಪತಿಮ್ । ಗತ್ವಾ ಚ ತದ್ ಬ್ರಹ್ಮ ಹ ಊಚುಃ ಉಕ್ತವನ್ತಃ । ಕಃ ನಃ ಅಸ್ಮಾಕಂ ಮಧ್ಯೇ ವಸಿಷ್ಠಃ ಕೋಽಸ್ಮಾಕಂ ಮಧ್ಯೇ ವಸತಿ ಚ ವಾಸಯತಿ ಚ ? ತದ್ ಬ್ರಹ್ಮ ತೈಃ ಪೃಷ್ಟಂ ಸತ್ ಹ ಉವಾಚ ಉಕ್ತವತ್ । ಯಸ್ಮಿನ್ ವಃ ಯುಷ್ಮಾಕಂ ಮಧ್ಯೇ ಉತ್ಕ್ರಾನ್ತೇ ನಿರ್ಗತೇ ಶರೀರಾತ್ ಇದಂ ಶರೀರಂ ಪೂರ್ವಸ್ಮಾತ್ ಅತಿಶಯೇನ ಪಾಪೀಯಃ ಪಾಪತರಂ ಮನ್ಯತೇ ಲೋಕಃ । ಶರೀರಂ ಹಿ ನಾಮ ಅನೇಕಾಶುಚಿಸಂಘಾತತ್ವಾತ್ ಜೀವತೋಽಪಿ ಪಾಪಮೇವ । ತತೋಽಪಿ ಕಷ್ಟತರಂ ಯಸ್ಮಿನ್ ಉತ್ಕ್ರಾನ್ತೇ ಭವತಿ । ವೈರಾಗ್ಯಾರ್ಥಮ್ ಇದಮುಚ್ಯತೇ ಪಾಪೀಯಃ ಇತಿ । ಸ ವಃ ಯುಷ್ಮಾಕಂ ಮಧ್ಯೇ ವಸಿಷ್ಠೋ ಭವಿಷ್ಯತಿ । ಜಾನನ್ನಪಿ ವಸಿಷ್ಠಂ ಪ್ರಜಾಪತಿಃ ನೋವಾಚ ಅಯಂ ವಸಿಷ್ಠಃ ಇತಿ ಇತರೇಷಾಮ್ ಅಪ್ರಿಯಪರಿಹಾರಾಯ ॥

(ಭಾಷ್ಯಾರ್ಥ)

ಆ ಈ ಪ್ರಾಣಗಳು ನಾನೇ ಶ್ರೇಷ್ಠನು ಎಂಬುದಕ್ಕಾಗಿ ನಾನು (ಮಿಕ್ಕವರಿಗಿಂತ) ಹೆಚ್ಚಿನವನು ಎಂದಾಗಲೆಂಬೀ ಪ್ರಯೋಜನಕ್ಕಾಗಿ ವಿವಾದಮಾಡುತ್ತಾ[1] ವಿರುದ್ಧವಾಗಿ ವಾದಮಾಡುತ್ತಾ ಬ್ರಹ್ಮದಬಳಿಗೆ ಹೋದರು, ಬ್ರಹ್ಮದ ಹತ್ತಿರಕ್ಕೆ

1. ಪ್ರಾಣಸಂವಾದವು ಐತರೇಯ, ಛಾಂದೋಗ್ಯ, ಬೃಹದಾರಣ್ಯಕ, ಕೌಷೀತಕಿ- ಇವುಗಳಲ್ಲಿಯೂ ಕಂಡುಬರುತ್ತದೆ. ಈ ಸಂವಾದವು ದೇವತೆಗಳಿಗೆ ಆಗಬಹುದೆಂದು ಛಾಂ. ೫-೧-೧ರ ಕೊನೆಯಲ್ಲಿ ಭಾಷ್ಯಕಾರರು ಹೇಳಿರುತ್ತಾರೆ. ಪ್ರಾಣವೈಶಿಷ್ಟ್ಯವನ್ನು ತಿಳಿಸುವದಕ್ಕೆ ಅರ್ಥವಾದವಿದು ಎಂದು ಛಾಂದೋಗ್ಯದಲ್ಲಿಯೂ ಸೂ. ಶಾ. ಭಾ. ೩-೧೫ (ಛಾ. ಭಾ. ೧೫೬, ೧೫೭)ರಲ್ಲಿಯೂ ಹೇಳಿದೆ. ಮುಂದೆ ಛಾ. ಭಾ. ೪೧೯ರಲ್ಲಿ ಈ ವಿಷಯವನ್ನು ಇಲ್ಲಿಯೂ ಪ್ರಸ್ತಾಪಿಸಿದೆ.

ಎಂದರೆ ಬ್ರಹ್ಮಶಬ್ದವಾಚ್ಯನಾದ ಪ್ರಜಾಪತಿಯ ಬಳಿಗೆ ಹೋದರು. ಹೋಗಿ ಆ ಬ್ರಹ್ಮವನ್ನು ಕುರಿತು ಇಂತೆಂದರು, ಹೀಗೆಂದು ನುಡಿದರು. (ನಃ=ಅಸ್ಮಾಕಂ) ನಮ್ಮೊಳಗೆ ಯಾವನು ವಸಿಷ್ಠನು, ನಮ್ಮಲ್ಲಿ ಯಾವನು ವಾಸವಾಗಿರುತ್ತಾನೆ, ಮತ್ತು ವಾಸಮಾಡಿಸುತ್ತಾನೆ? ಅವರು (ಹೀಗೆಂದು) ಕೇಳಲು ಆ ಬ್ರಹ್ಮವು ಹೇಳಿತು, ಇಂತೆಂದಿತು. (ವಃ=ಯುಷ್ಮಾಕಂ) ನಿಮ್ಮಗಳಲ್ಲಿ ಯಾವನು ಉತ್ಕ್ರಾಂತನಾದರೆ ಶರೀರದಿಂದ ಹೊರಟುಹೋದರೆ ಈ ಶರೀರವು ಹಿಂದೆ ಇದ್ದದ್ದಕ್ಕಿಂತಲೂ ಹೆಚ್ಚು ಕೆಟ್ಟದ್ದಾಗಿ ಹೆಚ್ಚು ಅಮಂಗಲವಾಗಿರುವದೆಂದು ಜನರು ತಿಳಿಯುತ್ತಾರೋ—ಶರೀರ ಎಂಬಿದು ಅನೇಕ ಅಶುಚಿಗಳ ಸಂಘಾತವಾಗಿರುವದರಿಂದ ಬದುಕಿರುವವನಲ್ಲಿಯೂ ಅಮಂಗಲವಾಗಿಯೇ ಇರುತ್ತದೆ. ಅದಕ್ಕಿಂತಲೂ –ಇನ್ನೂ ಕೆಟ್ಟದ್ದಾಗಿ ಯಾವನು ಉತ್ಕ್ರಾಂತನಾದರೆ ಆಗುವದೋ--ವೈರಾಗ್ಯಕ್ಕಾಗಿ ಇನ್ನೂ ಅಮಂಗಲವಾಗಿ ಎಂಬಿದನ್ನು ಹೇಳಿದೆ. (ಯಾವನು ಹೋದರೆ ಅಮಂಗಲವೆನ್ನುತ್ತಾರೋ) ಅವನು ನಿಮ್ಮೊಳಗೆ ವಸಿಷ್ಠನಾಗಿರುತ್ತಾನೆ. ವಸಿಷ್ಠನನ್ನು ಅರಿತಿದ್ದರೂ ಮಿಕ್ಕವರಿಗೆ ಅಪ್ರಿಯವಾಗದಿರಲೆಂದು ಪ್ರಜಾಪತಿಯು ಇಂಥವನು ವಸಿಷ್ಠನು ಎಂದು ಹೇಳಲಿಲ್ಲ.

## ವಾಕ್ಕು ಇಲ್ಲದಿದ್ದರೂ ಶರೀರವು ಜೀವಿಸಿರುತ್ತದೆ

(ಉಪನಿಷತ್ತು)

**ವಾಗ್ಘೋಚ್ಚಕ್ರಾಮ ಸಾ ಸಂವತ್ಸರಂ ಪ್ರೋಷ್ಯಾಗತ್ಯೋವಾಚ ಕಥಮಶಕತ ಮದೃತೇ ಜೀವಿತುಮಿತಿ ತೇ ಹೋಚುರ್ಯಥಾಽಕಲಾ ಅವದನ್ತೋ ವಾಚಾ ಪ್ರಾಣನ್ತಃ ಪ್ರಾಣೇನ ಪಶ್ಯನ್ತಶ್ಚಕ್ಷುಷಾ ಶೃಣ್ವನ್ತಃ ಶ್ರೋತ್ರೇಣ ವಿದ್ವಾಗ್ಂಸೋ ಮನಸಾ ಪ್ರಜಾಯಮಾನಾ ರೇತಸೈವಮಜೀವಿಷ್ಮೇತಿ ಪ್ರವಿವೇಶ ಹ ವಾಕ್ ॥ ೮ ॥**

೮. ವಾಕ್ಕು ಉತ್ಕ್ರಾಂತವಾಯಿತು. ಅದು ಸಂವತ್ಸರದವರೆಗೆ ಹೊರಗಿದ್ದು ಬಂದು ಇಂತೆಂದಿತು: "ನಾನಿಲ್ಲದೆ ಬದುಕಿರುವದಕ್ಕೆ ಹೇಗೆ ಶಕ್ತರಾದಿರಿ?" ಅವುಗಳೆಂದವು: "ಹೇಗೆ ಅಕಲರಾದವರು ವಾಕ್ಕಿನಿಂದ ಮಾತನಾಡದೆ ಪ್ರಾಣದಿಂದ ಬಾಳುತ್ತಾ ಚಕ್ಷುಸ್ಸಿನಿಂದ ನೋಡುತ್ತಾ ಶ್ರೋತ್ರದಿಂದ ಕೇಳುತ್ತಾ ಮನಸ್ಸಿನಿಂದ ಅರಿಯುತ್ತಾ ರೇತಸ್ಸಿನಿಂದ ಪ್ರಜೆಯನ್ನುಂಟುಮಾಡಿಕೊಳ್ಳುತ್ತಾ ಇರುವರೋ ಹಾಗೆ ಬದುಕಿದ್ದೆವು." ವಾಕ್ಕು ಪ್ರವೇಶಿಸಿತು.

# ವಾಕ್ಕಿಲ್ಲದೆ ಮಿಕ್ಕ ಪ್ರಾಣಗಳು ಬದುಕಿದ್ದದ್ದು

(ಭಾಷ್ಯ)

೪೧೭. ತೇ ಏವಮುಕ್ತಾಃ ಬ್ರಹ್ಮಣಾ ಪ್ರಾಣಾಃ ಆತ್ಮನೋ ವೀರ್ಯ ಪರೀಕ್ಷಣಾಯ ಕ್ರಮೇಣ ಉಚ್ಚಕ್ರಮುಃ । ತತ್ರ ವಾಗೇವ ಪ್ರಥಮಂ ಹ ಅಸ್ಮಾತ್ ಶರೀರಾತ್ ಉಚ್ಚಕ್ರಾಮ ಉತ್ಕ್ರಾನ್ತವತೀ । ಸಾ ಚ ಉತ್ಕ್ರಮ್ಯ ಸಂವತ್ಸರಂ ಪ್ರೋಷ್ಯ ಪ್ರೋಷಿತಾ ಭೂತ್ವಾ ಪುನರಾಗತ್ಯ ಉವಾಚ । ಕಥಮ್ ಅಶಕತ ಶಕ್ತವನ್ತಃ ಯೂಯಮ್ ಮದೃತೇ ಮಾಂ ವಿನಾ ಜೀವಿತುಮ್ ಇತಿ ? ತೇ ಏವಮುಕ್ತಾಃ ಊಚುಃ । ಯಥಾ ಅಕಲಾಃ ಮೂಕಾಃ ಅವದನ್ತಃ ವಾಚಾ, ಪ್ರಾಣನ್ತಃ ಪ್ರಾಣನವ್ಯಾಪಾರಂ ಕುರ್ವನ್ತಃ ಪ್ರಾಣೇನ ಪಶ್ಯನ್ತಃ ದರ್ಶನ ವ್ಯಾಪಾರಂ ಚಕ್ಷುಷಾ ಕುರ್ವನ್ತಃ ತಥಾ ಶೃಣ್ವನ್ತಃ ಶ್ರೋತ್ರೇಣ ವಿದ್ವಾಂಸಃ ಮನಸಾ ಕಾರ್ಯಾಕಾರ್ಯಾದಿವಿಷಯಮ್, ಪ್ರಜಾಯಮಾನಾಃ ರೇತಸಾ ಪುತ್ರಾನ್ ಉತ್ಪಾದಯನ್ತಃ ಏವಮ್ ಅಜೀವಿಷ್ಮ ವಯಮ್ ಇತಿ । ಏವಂ ಪ್ರಾಣೈಃ ದತ್ತೋತ್ತರಾ ವಾಕ್ ಆತ್ಮನಃ ಅಸ್ಮಿನ್ ಅವಸಿಷ್ಠತ್ವಂ ಬುದ್ಧ್ವಾ ಪ್ರವಿವೇಶ ಹ ವಾಕ್ ॥

(ಭಾಷ್ಯಾರ್ಥ)

ಹೀಗೆಂದು ಬ್ರಹ್ಮವು ಹೇಳಲು ಪ್ರಾಣಗಳು ತಮ್ಮ ವೀರ್ಯವನ್ನು ಪರೀಕ್ಷಿಸುವದಕ್ಕಾಗಿ ಒಂದೊಂದಾಗಿ ಉತ್ಕ್ರಾಂತವಾದವು. ಅವುಗಳಲ್ಲಿ ವಾಕ್ಕೇ ಮೊದಲು ಈ ಶರೀರವನ್ನು ಬಿಟ್ಟು ಉತ್ಕ್ರಾಂತವಾಯಿತು, ಹೋದದ್ದಾಯಿತು. ಅದು ಹೊರಟುಹೋಗಿ, ಸಂವತ್ಸರಕಾಲ ಹೊರಗಿದ್ದು ಪ್ರವಾಸದಲ್ಲಿದ್ದದ್ದಾಗಿ ಹಿಂತಿರುಗಿ ಬಂದು ಹೀಗೆಂದಿತು: ನೀವು ನಾನಿಲ್ಲದೆ ನನ್ನನ್ನು ಬಿಟ್ಟು ಬದುಕಿರುವದಕ್ಕೆ ಹೇಗೆ ಶಕ್ತರಾದಿರಿ, ಸಮರ್ಥರಾದಿರಿ ?

ಹೀಗೆನ್ನಲು ಅವುಗಳೆಂದವು : ಹೇಗೆ ಲೋಕದಲ್ಲಿ ಅಕಲರು ಮೂಕರು ವಾಕ್ಕಿನಿಂದ ಮಾತಾಡದೆ, ಪ್ರಾಣದಿಂದ ಬಾಳುತ್ತಾ ಪ್ರಾಣನವ್ಯಾಪಾರವನ್ನು ಮಾಡುತ್ತಾ, ಕಣ್ಣಿನಿಂದ ನೋಡುತ್ತಾ ದರ್ಶನವ್ಯಾಪಾರವನ್ನು ಮಾಡುತ್ತಾ, ಹೀಗೆಯೇ ಶ್ರೋತ್ರದಿಂದ ಕೇಳುತ್ತ, ಮನಸ್ಸಿನಿಂದ ಕಾರ್ಯಾಕಾರ್ಯಾದಿ ವಿಷಯವನ್ನು ಅರಿಯುತ್ತಾ, ರೇತಸ್ಸಿನಿಂದ ಪ್ರಜೆಯನ್ನುಂಟುಮಾಡಿಕೊಳ್ಳುತ್ತಾ ಮಕ್ಕಳನ್ನು ಹಡೆಯುತ್ತಾ ಹೀಗೆ ನಾವು ಬದುಕಿದ್ದೆವು.

ಪ್ರಾಣಗಳು ಹೀಗೆಂದು ಉತ್ತರವನ್ನು ಕೊಡಲು ವಾಕ್ಕು ತಾನು ಈ (ಶರೀರ)ದಲ್ಲಿ ವಸಿಷ್ಠವಲ್ಲವೆಂಬುದನ್ನರಿತು, ವಾಕ್ಕು ಪ್ರವೇಶಿಸಿತು.

## ಚಕ್ಷುರಾದಿಗಳಿಲ್ಲದಿದ್ದರೂ ಶರೀರವು ಜೀವಿಸಿರುತ್ತದೆ

(ಉಪನಿಷತ್ತು)

**ಚಕ್ಷುರ್ಹೋಚ್ಚಕ್ರಾಮ ತತ್ ಸಂವತ್ಸರಂ ಪ್ರೋಷ್ಯಾಽಽಗತ್ಯೋವಾಚ ಕಥಮಶಕತ ಮದೃತೇ ಜೀವಿತುಮಿತಿ ತೇ ಹೋಚುರ್ಯಥಾನ್ಧಾ ಅಪಶ್ಯನ್ತಶ್ಚಕ್ಷುಷಾ ಪ್ರಾಣನ್ತಃ ಪ್ರಾಣೇನ ವದನ್ತೋ ವಾಚಾ ಶೃಣ್ವನ್ತಃ ಶ್ರೋತ್ರೇಣ ವಿದ್ವಾಗ್ಂಸೋ ಮನಸಾ ಪ್ರಜಾಯಮಾನಾ ರೇತಸೈವಮಜೀವಿಷ್ಮೇತಿ ಪ್ರವಿವೇಶ ಹ ಚಕ್ಷುಃ ॥ ೯ ॥**

**ಶ್ರೋತ್ರಗ್ಂ ಹೋಚ್ಚಕ್ರಾಮ ತತ್ ಸಂವತ್ಸರಂ ಪ್ರೋಷ್ಯಾಽಽಗತ್ಯೋವಾಚ ಕಥಮಶಕತ ಮದೃತೇ ಜೀವಿತುಮಿತಿ ತೇ ಹೋಚುರ್ಯಥಾ ಬಧಿರಾ ಅಶೃಣ್ವನ್ತಃ ಶ್ರೋತ್ರೇಣ ಪ್ರಾಣನ್ತಃ ಪ್ರಾಣೇನ ವದನ್ತೋ ವಾಚಾ ಪಶ್ಯನ್ತಶ್ಚಕ್ಷುಷಾ ವಿದ್ವಾಗ್ಂಸೋ ಮನಸಾ ಪ್ರಜಾಯಮಾನಾ ರೇತಸೈವಮಜೀವಿಷ್ಮೇತಿ ಪ್ರವಿವೇಶ ಹ ಶ್ರೋತ್ರಮ್ ॥ ೧೦ ॥**

**ಮನೋ ಹೋಚ್ಚಕ್ರಾಮ ತತ್ ಸಂವತ್ಸರಂ ಪ್ರೋಷ್ಯಾಽಽಗತ್ಯೋವಾಚ ಕಥಮಶಕತ ಮದೃತೇ ಜೀವಿತುಮಿತಿ ತೇ ಹೋಚುರ್ಯಥಾ ಮುಗ್ಧಾ ಅವಿದ್ವಾಗ್ಂಸೋ ಮನಸಾ ಪ್ರಾಣನ್ತಃ ಪ್ರಾಣೇನ ವದನ್ತೋ ವಾಚಾ ಪಶ್ಯನ್ತಶ್ಚಕ್ಷುಷಾ ಶೃಣ್ವನ್ತಃ ಶ್ರೋತ್ರೇಣ ಪ್ರಜಾಯಮಾನಾ ರೇತಸೈವಮಜೀವಿಷ್ಮೇತಿ ಪ್ರವಿವೇಶ ಹ ಮನಃ ॥ ೧೧ ॥**

**ರೇತೋ ಹೋಚ್ಚಕ್ರಾಮ ತತ್ ಸಂವತ್ಸರಂ ಪ್ರೋಷ್ಯಾಽಽಗತ್ಯೋವಾಚ ಕಥಮಶಕತ ಮದೃತೇ ಜೀವಿತುಮಿತಿ ತೇ ಹೋಚುರ್ಯಥಾ ಕ್ಲೀಬಾ ಅಪ್ರಜಾಯಮಾನಾ ರೇತಸಾ ಪ್ರಾಣನ್ತಃ ಪ್ರಾಣೇನ ವದನ್ತೋ ವಾಚಾ ಪಶ್ಯನ್ತಶ್ಚಕ್ಷುಷಾ ಶೃಣ್ವನ್ತಃ ಶ್ರೋತ್ರೇಣ ವಿದ್ವಾಗ್ಂಸೋ ಮನಸೈವಮಜೀವಿಷ್ಮೇತಿ ಪ್ರವಿವೇಶ ಹ ರೇತಃ ॥ ೧೨ ॥**

೯. ಚಕ್ಷುಸ್ಸು ಉತ್ಕ್ರಾಂತವಾಯಿತು. ಅದು ಸಂವತ್ಸರದ ವರೆಗೆ ಹೊರಗಿದ್ದು ಬಂದು ಇಂತೆಂದಿತು: "ನಾನಿಲ್ಲದೆ ಬದುಕಿರು

ವದಕ್ಕೆ ಹೇಗೆ ಶಕ್ತರಾದಿರಿ?'' ಅವುಗಳೆಂದವು: "ಹೇಗೆ ಕುರುಡರು ಕಣ್ಣಿಂದ ಕಾಣದೆ ಪ್ರಾಣದಿಂದ ಬಾಳುತ್ತಾ ವಾಕ್ಕಿನಿಂದ ಮಾತಾಡುತ್ತಾ ಶ್ರೋತ್ರದಿಂದ ಶ್ರವಣಮಾಡುತ್ತಾ ಮನಸ್ಸಿನಿಂದ ಅರಿಯುತ್ತಾ ರೇತಸ್ಸಿನಿಂದ ಪ್ರಜೆಯನ್ನುಂಟುಮಾಡಿಕೊಳ್ಳುತ್ತಾ (ಇರುವರೋ) ಹಾಗೆ ಬದುಕಿದ್ದೆವು.'' ಚಕ್ಷುಸ್ಸು ಪ್ರವೇಶಿಸಿತು.

೧೦. ಶ್ರೋತ್ರವು ಉತ್ಕ್ರಾಂತವಾಯಿತು, ಅದು ಸಂವತ್ಸರದ ವರೆಗೆ ಹೊರಗಿದ್ದು ಬಂದು ಇಂತೆಂದಿತು. "ನಾನಿಲ್ಲದೆ ಬದುಕಿರುವದಕ್ಕೆ ಹೇಗೆ ಶಕ್ತರಾದಿರಿ?'' ಅವುಗಳೆಂದವು: "ಹೇಗೆ ಕಿವುಡರು ಶ್ರೋತ್ರದಿಂದ ಕೇಳದೆ ಪ್ರಾಣದಿಂದ ಬಾಳುತ್ತಾ ವಾಕ್ಕಿನಿಂದ ಮಾತಾಡುತ್ತಾ ಚಕ್ಷುಸ್ಸಿನಿಂದ ಕಾಣುತ್ತಾ ಮನಸ್ಸಿನಿಂದ ಅರಿಯುತ್ತಾ ರೇತಸ್ಸಿನಿಂದ ಪ್ರಜೆಯನ್ನುಂಟುಮಾಡಿಕೊಳ್ಳುತ್ತಾ (ಇರುವರೋ) ಹಾಗೆ ಬದುಕಿದ್ದೆವು.'' ಶ್ರೋತ್ರವು ಪ್ರವೇಶಿಸಿತು.

೧೧. ಮನಸ್ಸು ಉತ್ಕ್ರಾಂತವಾಯಿತು. ಅದು ಸಂವತ್ಸರದ ವರೆಗೆ ಹೊರಗಿದ್ದು ಬಂದು ಇಂತೆಂದಿತು: "ನಾನಿಲ್ಲದೆ ಬದುಕಿರುವದಕ್ಕೆ ಹೇಗೆ ಶಕ್ತರಾದಿರಿ?'' ಅವುಗಳೆಂದವು: "ಹೇಗೆ ಮುಗ್ಧರು ಮನಸ್ಸಿನಿಂದ ಅರಿಯಲಾರದೆ ಪ್ರಾಣದಿಂದ ಬಾಳುತ್ತಾ ವಾಕ್ಕಿನಿಂದ ಮಾತಾಡುತ್ತಾ ಚಕ್ಷುಸ್ಸಿನಿಂದ ಕಾಣುತ್ತಾ ಶ್ರೋತ್ರದಿಂದ ಕೇಳುತ್ತಾ ರೇತಸ್ಸಿನಿಂದ ಪ್ರಜೆಯನ್ನುಂಟುಮಾಡಿಕೊಳ್ಳುತ್ತಾ (ಇರುವರೋ) ಹಾಗೆ ಬದುಕಿದ್ದೆವು.'' ಮನಸ್ಸು ಪ್ರವೇಶಿಸಿತು.

೧೨. ರೇತಸ್ಸು ಉತ್ಕ್ರಾಂತವಾಯಿತು. ಅದು ಸಂವತ್ಸರದ ವರೆಗೆ ಹೊರಗೆ ಇದ್ದುಬಂದು ಇಂತೆಂದಿತು. "ನಾನಿಲ್ಲದೆ ಬದುಕಿರುವದಕ್ಕೆ ಹೇಗೆ ಶಕ್ತರಾದಿರಿ?'' ಅವುಗಳೆಂದವು: ಹೇಗೆ ಕ್ಲೀಬರು ರೇತಸ್ಸಿನಿಂದ ಪ್ರಜೆಯನ್ನುಂಟುಮಾಡಿಕೊಳ್ಳದೆ "ಪ್ರಾಣದಿಂದ ಬಾಳುತ್ತಾ ವಾಕ್ಕಿನಿಂದ ಮಾತಾಡುತ್ತಾ ಚಕ್ಷುಸ್ಸಿನಿಂದ ಕಾಣುತ್ತಾ ಶ್ರೋತ್ರದಿಂದ ಕೇಳುತ್ತಾ ಮನಸ್ಸಿನಿಂದ ಅರಿಯುತ್ತಾ (ಇರುವರೋ) ಹಾಗೆ ಬದುಕಿದ್ದೆವು.'' ರೇತಸ್ಸು ಪ್ರವೇಶಿಸಿತು.

## ಚಕ್ಷುರಾದಿಗಳಿಲ್ಲದೆ ಮಿಕ್ಕ ಪ್ರಾಣಗಳು ಬದುಕಿದ್ದದ್ದು

(ಭಾಷ್ಯ)

೪೧೭. ತಥಾ ಚಕ್ಷುರ್ಹೋಚ್ಚಕ್ರಾಮ ಇತ್ಯಾದಿ ಪೂರ್ವವತ್ । ಶ್ರೋತ್ರಂ ಮನಃ ಪ್ರಜಾತಿಃ ಇತಿ ॥

(ಭಾಷ್ಯಾರ್ಥ)

ಇದರಂತೆ ಚಕ್ಷುಸ್ಸು ಉತ್ಕ್ರಾಂತವಾಯಿತು; ಶ್ರೋತ್ರವು, ಮನಸ್ಸು, ಪ್ರಜನನೇಂದ್ರಿಯವು (ಉತ್ಕ್ರಾಂತವಾಯಿತು) ಮುಂತಾದದ್ದು ಹಿಂದಿನಂತೆ (ವ್ಯಾಖ್ಯಾನಮಾಡಿಕೊಳ್ಳತಕ್ಕದ್ದು).

## ಮುಖ್ಯಪ್ರಾಣವು ಉತ್ಕ್ರಾಂತವಾಗಲಿರಲು ಮಿಕ್ಕ ಪ್ರಾಣಗಳು ಅದನ್ನು ನಿಲ್ಲಿಸಿಕೊಂಡದ್ದು

(ಉಪನಿಷತ್ತು)

**ಅಥ ಹ ಪ್ರಾಣ ಉತ್ಕ್ರಮಿಷ್ಯನ್ ಯಥಾ ಮಹಾಸುಹಯಃ ಸೈನ್ಧವಃ ಪಡ್ವೀಶಶಙ್ಕೂನ್ ಸಂವೃಹೇದೇವಗ್ಂ ಹೈವೇ ಮಾನ್ ಪ್ರಾಣಾನ್ ಸಂವವರ್ಹ ತೇ ಹೋಚುರ್ಮಾ ಭಗವ ಉತ್ಕ್ರಮೀರ್ನ ವೈ ಶಕ್ಷ್ಯಾಮಸ್ತ್ವದೃತೇ ಜೀವಿತುಮಿತಿ ತಸ್ಯೋ ಮೇ ಬಲಿಂ ಕುರುತೇತಿ ತಥೇತಿ ॥ ೧೩ ॥**

೧೩. ಇನ್ನು ಪ್ರಾಣವು ಉತ್ಕ್ರಾಂತವಾಗಲಿರಲು ಹೇಗೆ ಸೈಂಧವವಾದ ಮಹಾಸುಹಯವು ಪಡ್ವೀಶಶಂಕುಗಳನ್ನು ಕಿತ್ತುಕೊಳ್ಳುವದೋ ಹಾಗೆಯೇ ಈ ಪ್ರಾಣಗಳನ್ನು ಕಿತ್ತುಕೊಂಡಿತು. ಅವು ಇಂತೆಂದವು: "ಭಗವಂತನೆ, ಉತ್ಕ್ರಾಂತನಾಗದಿರು, ನೀನಿಲ್ಲದೆ ಬದುಕಿರಲು (ನಾವು) ಶಕ್ತರಾಗಿಲ್ಲ." "ಆ ನನಗೆ ಬಲಿಯನ್ನು ಮಾಡಿರಿ!" ಎನ್ನಲು "ಹಾಗೇ ಆಗಲಿ!" ಎಂದವು.

## ಪ್ರಾಣನು ಉತ್ಕ್ರಾಂತನಾಗದಂತೆ ವಾಗಾದಿಗಳು ಬೇಡಿಕೊಂಡದ್ದು

(ಭಾಷ್ಯ)

೪೧೮. ಅಥ ಹ ಪ್ರಾಣ ಉತ್ಕ್ರಮಿಷ್ಯನ್ ಉತ್ಕ್ರಮಣಂ ಕರಿಷ್ಯನ್ । ತದಾನೀಮೇವ ಸ್ವಸ್ಥಾನಾತ್ ಪ್ರಚಲಿತಾ ವಾಗಾದಯಃ । ಕಿಮಿವೇತಿ ?

ಆಹ । ಯಥಾ ಲೋಕೇ ಮಹಾಂಶ್ಚಾಸೌ ಸುಹಯಶ್ಚ ಮಹಾಸುಹಯಃ । ಶೋಭನೋ ಹಯಃ ಲಕ್ಷಣೋಪೇತಃ ಮಹಾನ್ ಪರಿಮಾಣತಃ ಸಿನ್ಧುದೇಶೇ ಭವಃ ಸೈನ್ಧವಃ ಅಭಿಜನತಃ ಪಡ್ವೀಶಶಙ್ಕೂನ್ ಪಾದಬನ್ಧನಶಙ್ಕೂನ್ ಪಡ್ವೀಶಾಶ್ಚ ತೇ ಶಙ್ಕವಶ್ಚ ತಾನ್ ಸಂವೃಹೇತ್ ಉದ್ಯಚ್ಛೇತ್ ಯುಗಪತ್ ಉತ್ಖನೇತ್ ಅಶ್ವಾರೋಹೇ ಆರೂಢೇ ಪರೀಕ್ಷಣಾಯ ಏವಂ ಹ ಏವ ಇಮಾನ್ ವಾಗಾದೀನ್ ಪ್ರಾಣಾನ್ ಸಂವವರ್ಹ ಉದ್ಯತವಾನ್ ಸ್ವಸ್ಥಾನಾತ್ ಭ್ರಂಶಿತವಾನ್ । ತೇ ವಾಗಾದಯಃ ಹ ಊಚುಃ । ಹೇ ಭಗವಃ ಭಗವಾನ್ ಮಾ ಉತ್ಕ್ರಮೀಃ ಯಸ್ಮಾತ್ ನ ವೈ ಶಕ್ಷ್ಯಾಮಃ ತ್ವದೃತೇ ತ್ವಾಂ ವಿನಾ ಜೀವಿತುಮ್ ಇತಿ । ಯದ್ಯೇವಂ ಮಮ ಶ್ರೇಷ್ಠತಾ ವಿಜ್ಞಾತಾ ಭವದ್ಭಿಃ ಅಹಮತ್ರ ಶ್ರೇಷ್ಠಃ । ತಸ್ಯ ಉ ಮೇ ಮಮ ಬಲಿಂ ಕರಂ ಕುರುತ ಕರಂ ಪ್ರಯಚ್ಛತ ಇತಿ ॥

(ಭಾಷ್ಯಾರ್ಥ)

ಆಗ ಪ್ರಾಣನು ಉತ್ಕ್ರಾಂತನಾಗುವದರಲ್ಲಿ(ದ್ದನು), (ಶರೀರವನ್ನು ಬಿಟ್ಟು) ಮೇಲಕ್ಕೇರುವದರಲ್ಲಿ, ಆಗಲೆ ವಾಗಾದಿಗಳು ತಮ್ಮ ಸ್ಥಾನವನ್ನು ಬಿಟ್ಟು ಅಲುಗಾಡಿದವು. ಹೇಗೆ ಎಂದರೆ (ಶ್ರುತಿ) ಹೇಳುತ್ತದೆ. ಹೇಗೆ ಲೋಕದಲ್ಲಿ ಮಹಾಸುಹಯವು ದೊಡ್ಡ ಸುಹಯವು; ಒಳ್ಳೆಯ ಕುದುರೆಯು ಲಕ್ಷಣಗಳಿಂದೊಡಗೂಡಿದ ( ಕುದುರೆಯು ಎಂದರ್ಥ ). ಪರಿಮಾಣದಲ್ಲಿ ದೊಡ್ಡದು. ಸೈಂಧವ ಎಂದರೆ ಸಿಂಧುದೇಶದಲ್ಲಿ ಇರುವದು, (ಅಲ್ಲಿ) ಹುಟ್ಟಿದ (ಜಾತಿಯ ಕುದುರೆಯು) ಪಡ್ವೀಶಶಂಕುಗಳನ್ನು — ಪಡ್ವೀಶವಾದ ಶಂಕುಗಳನ್ನು— ಕಾಲಿಗೆ 'ಕಟ್ಟಿದ ಗೂಟಗಳನ್ನು ಪರೀಕ್ಷೆಗಾಗಿ ಸವಾರನು ಹತ್ತಿಕೊಳ್ಳಲು ಕಿತ್ತುಕೊಳ್ಳುವದೋ, ಮೇಲಕ್ಕೆತ್ತಿಕೊಳ್ಳುವದೋ ಒಮ್ಮೆಗೇ ಕಿತ್ತುಹಾಕುವದೋ, ಹಾಗಯೇ ಈ ವಾಗಾದಿಪ್ರಾಣಗಳನ್ನು ಕಿತ್ತುಕೊಂಡಿತು, ಮೇಲಕ್ಕೆತ್ತಿತು, ಅವುಗಳ ಸ್ಥಾನದಿಂದ ತಪ್ಪಿಸಿತು.

ಆ ವಾಗಾದಿಗಳು ಇಂತೆಂದವು. "ಎಲೈ (ಭಗವಃ=ಭಗವನ್) ಭಗವಂತನೆ, ಉತ್ಕ್ರಾಂತನಾಗದಿರು ; ಏಕೆಂದರೆ ನೀನಿಲ್ಲದೆ ನಿನ್ನನ್ನು ಬಿಟ್ಟು ನಾವು ಬದುಕಿರುವದಕ್ಕೆ ಶಕ್ತರಲ್ಲ." ಹೀಗೆ ನನ್ನ ಹೆಚ್ಚುಗಾರಿಕೆಯು ನಿಮಗೆ ತಿಳಿಯಿತಾದರೆ, ನಾನೇ ಇಲ್ಲಿ ಶ್ರೇಷ್ಠ(ನೆಂದಾಯಿತು). (ಮೇ=ಮಮ) ಆ ನನಗೆ ಬಲಿಯನ್ನೂ ಕಾಣಿಕೆಯನ್ನು ಕೊಡಿರಿ, ಕಾಣಿಕೆಯನ್ನು ಒಪ್ಪಿಸಿರಿ.

## ಈ ಪ್ರಾಣಸಂವಾದದ ತಾತ್ಪರ್ಯ

(ಭಾಷ್ಯ)

೪೧೯. ಅಯಂ ಚ ಪ್ರಾಣಸಂವಾದಃ ಕಲ್ಪಿತಃ ವಿದುಷಃ ಶ್ರೇಷ್ಠಪರೀಕ್ಷಣಪ್ರಕಾರೋಪದೇಶಃ । ಅನೇನ ಹಿ ಪ್ರಕಾರೇಣ ವಿದ್ವಾನ್ ಕೋ ನು

ಖಲು ಅತ್ರ ಶ್ರೇಷ್ಠಃ ಇತಿ ಪರೀಕ್ಷಣಂ ಕರೋತಿ । ಸ ಏವ ಪರೀಕ್ಷಣಪ್ರಕಾರಃ ಸಂವಾದಭೂತಃ ಕಥ್ಯತೇ । ನ ಹಿ ಅನ್ಯಥಾ ಸಂಹತ್ಯಕಾರಿಣಾಂ ಸತಾಮ್ ಏಷಾಮ್ ಆಜ್ಞಸ್ಯೈವ ಸಂವತ್ಸರಮಾತ್ರಮೇವ ಏಕೈಕಸ್ಯ ನಿರ್ಗಮನಾದಿ ಉಪಪದ್ಯತೇ । ತಸ್ಮಾತ್ ವಿದ್ವಾನೇವ ಅನೇನ ಪ್ರಕಾರೇಣ ವಿಚಾರಯತಿ ವಾಗಾದೀನಾಂ ಪ್ರಧಾನಬುಭುತ್ಸುಃ ಉಪಾಸನಾಯ । ಬಲಿಂ ಪ್ರಾರ್ಥಿತಾಃ ಸನ್ತಃ ಪ್ರಾಣಾಃ ತಥಾ ಇತಿ ಪ್ರತಿಜ್ಞಾತವನ್ತಃ ॥

(ಭಾಷ್ಯಾರ್ಥ)

ಈ ಪ್ರಾಣಸಂವಾದವನ್ನು ಕಲ್ಪಿಸಿ ಉಪಾಸಕನಿಗೆ ಶ್ರೇಷ್ಠವಾದದ್ದನ್ನು ಪರೀಕ್ಷಿಸುವ ಪ್ರಕಾರವನ್ನು ಉಪದೇಶಿಸಿರುತ್ತದೆ (ಎಂದು ತಿಳಿಯಬೇಕು). ಏಕೆಂದರೆ ಈ ಪ್ರಕಾರದಿಂದಲೇ ಉಪಾಸಕನು ಇಲ್ಲಿ ಯಾವದು ಶ್ರೇಷ್ಠವು ಎಂದು ಪರೀಕ್ಷೆಯನ್ನು ಮಾಡಿಕೊಳ್ಳುತ್ತಾನೆ. ಆ ಈ ಪರೀಕ್ಷಣಪ್ರಕಾರವನ್ನೇ ಸಂವಾದವಾಗಿ (ಇಲ್ಲಿ) ಹೇಳಿರುತ್ತದೆ. ಹೀಗಲ್ಲದಿದ್ದರೆ ಸಂಹತ್ಯಕಾರಿಗಳಾದ[1] ಇವಕ್ಕೆ ಸಂವತ್ಸರದವರೆಗೇ ಒಂದೊಂದಾಗಿ (ಶರೀರವನ್ನು) ಬಿಟ್ಟುಹೋಗುವದೇ ಮುಂತಾದದ್ದು ಮುಖ್ಯವೃತ್ತಿಯಿಂದಲೇ ಹೊಂದಲಾರದಷ್ಟೆ.[2] ಆದ್ದರಿಂದ ಉಪಾಸಕನೇ ವಾಗಾದಿಗಳಲ್ಲಿ ಪ್ರಧಾನವು (ಯಾವದೆಂಬುದನ್ನು) ತಿಳಿಯಬೇಕೆಂಬ ಇಚ್ಛೆಯಿಂದ ಈ ಪ್ರಕಾರದಿಂದ ವಿಚಾರಮಾಡುತ್ತಾನೆ (ಎಂಬುದೇ ಸರಿ).

ಬಲಿಯನ್ನು (ಕೊಡಿರಿ ಎಂದು ಪ್ರಾಣನು) ಕೇಳಲು (ವಾಗಾದಿ)ಪ್ರಾಣಗಳು ಹಾಗೇ (ಆಗಲಿ)! ಎಂದು ಒಪ್ಪಿಕೊಂಡವು.

## ವಾಗಾದಿಗಳು ಕಾಣಿಕೆಯನ್ನೊಪ್ಪಿಸಿದ್ದು, ಪ್ರಾಣನ ಅನ್ನವಸ್ತ್ರಗಳು

(ಉಪನಿಷತ್ತು)

**ಸಾ ಹ ವಾಗುವಾಚ ಯದ್ ವಾ ಅಹಂ ವಸಿಷ್ಠಾಸ್ಮಿ ತ್ವಂ ತದ್ವಸಿಷ್ಠೋಽಸೀತಿ ಯದ್ವಾ ಅಹಂ ಪ್ರತಿಷ್ಠಾಸ್ಮಿ ತ್ವಂ ತತ್ಪ್ರತಿಷ್ಠೋಽಸೀತಿ ಚಕ್ಷುರ್ಯದ್ವಾ ಅಹಗ್ಂ ಸಂಪದಸ್ಮಿ ತ್ವಂ ತತ್ಸಂಪದಸೀತಿ ಶ್ರೋತ್ರಂ ಯದ್ವಾ ಅಹಮಾಯತನಮಸ್ಮಿ ತ್ವಂ**

---

1. ಎಲ್ಲವೂ ಒಟ್ಟುಗೂಡಿ ಚೇತನರೂಪನಾದ ಆತ್ಮನಿಗೋಸ್ಕರ ಕೆಲಸ ಮಾಡುತ್ತಿರುವ.

2. ಅಚೇತನವಾಗಿರುವ ಕರಣಗಳು ಒಂದರೊಡನೊಂದು ಮಾತಾಡಿಕೊಂಡಂತೆ ವರ್ಷಕಾಲ ಪ್ರವಾಸಮಾಡುವದೇ ಮುಂತಾದದ್ದು ಹೊಂದಲಾರದು ಎಂದರ್ಥ.

**ತದಾಯತನಮಸೀತಿ ಮನೋ ಯದ್ವಾ ಅಹಂ ಪ್ರಜಾತಿರಸ್ಮಿ ತ್ವಂ ತತ್ಪ್ರಜಾತಿರಸೀತಿ ರೇತಸ್ತಸ್ಯೋ ಮೇ ಕಿಮನ್ನಂ ಕಿಂ ವಾಸ ಇತಿ ಯದಿದಂ ಕಿಂಚಾ ಶ್ವಭ್ಯ ಆ ಕೃಮಿಭ್ಯ ಆ ಕೀಟಪತಙ್ಗೇಭ್ಯ ಸ್ತತ್ತೇಽನ್ನಮಾಪೋ ವಾಸ ಇತಿ ನ ಹ ವಾ ಅಸ್ಯಾನನ್ನಂ ಜಗ್ಧಂ ಭವತಿ ನಾನನ್ನಂ ಪ್ರತಿಗೃಹೀತಂ ·ಯ ಏವಮೇತದನ ಸ್ಯಾನ್ನಂ ವೇದ ತದ್ವಿದ್ವಾಗ್ಂಸಃ ಶ್ರೋತ್ರಿಯಾ ಅಶಿಷ್ಯನ್ತ ಆಚಾ ಮನ್ತ್ಯಶಿತ್ವಾಽಽಚಾಮನ್ತ್ಯೇತಮೇವ ತದನಮನಗ್ನಂ ಕುರ್ವ ನ್ತೋ ಮನ್ಯನ್ತೇ ॥ ೧೪ ॥**

೧೪. ಆ ವಾಕ್ಕು ಹೇಳಿದ್ದೇನೆಂದರೆ "ನಾನು ವಸಿಷ್ಠನಾಗಿರುವೆನಷ್ಟೆ, ನೀನೇ ·ಆ ವಸಿಷ್ಠನಾಗಿರುವೆ." ಚಕ್ಷುಸ್ಸು (ಹೇಳಿದ್ದು) "ನಾನು ಪ್ರತಿಷ್ಠೆಯಾಗಿರುವೆನಷ್ಟೆ, ನೀನೇ ಆ ಪ್ರತಿಷ್ಠನಾಗಿರುವೆ." ಶ್ರೋತ್ರವು (ಹೇಳಿದ್ದು) "ನಾನು ಸಂಪತ್ತಾಗಿರುವೆನಷ್ಟೆ, ನೀನೇ ಆ ಸಂಪತ್ತಾಗಿರುವೆ." ಮನಸ್ಸು (ಹೇಳಿದ್ದು) "ನಾನು ಆಯತನವಾಗಿರುವೆನಷ್ಟೆ, ನೀನೇ ಆ ಆಯತನವಾಗಿರುವೆ." ರೇತಸ್ಸು ಹೇಳಿದ್ದು "ನಾನು ಪ್ರಜಾತಿಯಾಗಿರುವೆನಷ್ಟೆ, ನೀನೇ ಆ ಪ್ರಜಾತಿ." "ಆ ನನಗೆ ಅನ್ನವು ಯಾವದು, ಹೊದಿಕೆ ಯಾವದು?" (ಎಂದು ಪ್ರಾಣವು ಕೇಳಿತು.) "ನಾಯಿಗಳವರೆಗೂ ಕೃಮಿಗಳವರೆಗೂ ಕೀಟಪತಂಗಗಳವರೆಗೂ ಯಾವಯಾವ (ಅನ್ನವಿದೆಯೋ) ಅದೆಲ್ಲವೂ ನಿನ್ನ ಅನ್ನವು, ನೀರೇ ಹೊದಿಕೆಯು. ಯಾವನು ಅನನ ಈ ಅನ್ನವನ್ನು ಅರಿತಿರುವನೋ ಅವನು ಅನನ್ನವನ್ನು ತಿಂದವನಾಗುವದಿಲ್ಲ, ಅನನ್ನವನ್ನು ಪರಿಗ್ರಹಿಸಿದವನಾಗುವದಿಲ್ಲ. ಆದ್ದರಿಂದ ಶ್ರೋತ್ರಿಯರಾದ ವಿದ್ವಾಂಸರು ಊಟಮಾಡಲಿರುವವರಾಗಿ ಆಚಮನಮಾಡುತ್ತಾರೆ, ಊಟಮಾಡಿದ ಬಳಿಕವೂ ಆಚಮನಮಾಡುತ್ತಾರೆ. ಅದರಿಂದ ಈ ಅನನನ್ನೇ ಅನಗ್ನನನ್ನಾಗಿ ಮಾಡುವೆವೆಂದು ಎಣಿಸುತ್ತಾರೆ.

## ವಾಗಾದಿಗಳು ತಮ್ಮ ಕಾಣಿಕೆಯನ್ನು ಒಪ್ಪಿಸಿದ್ದು

**(ಭಾಷ್ಯ)**

**೪೩೦. ಸಾ ಹ ವಾಕ್ ಪ್ರಥಮಂ ಬಲಿದಾನಾಯ ಪ್ರವೃತ್ತಾ ಹ ಕಿಲ ಉವಾಚ ಉಕ್ತವತೀ । ಯದ್ ವೈ ಅಹಂ ವಸಿಷ್ಠಾ ಅಸ್ಮಿ। ಯನ್ಮಮ**

ವಸಿಷ್ಠತ್ವಮ್, ತತ್ ತವೈವ । ತೇನ ವಸಿಷ್ಠಗುಣೇನ ತ್ವಂ ತದ್ವಸಿಷ್ಠೋಽಸೀತಿ। ಯದ್ ವೈ ಅಹಂ ಪ್ರತಿಷ್ಠಾ ಅಸ್ಮಿ ತ್ವಂ ತತ್ಪ್ರತಿಷ್ಠೋಽಸಿ ಯಾ ಮಮ ಪ್ರತಿಷ್ಠಾ ಸಾ ತ್ವಮಸಿ ಇತಿ ಚಕ್ಷುಃ । ಸಮಾನಮ್ ಅನ್ಯತ್ । ಸಂಪದಾಯತನ ಜಾತಿತ್ವಗುಣಾನ್ ಕ್ರಮೇಣ ಸಮರ್ಪಿತವನ್ತಃ ॥

(ಭಾಷ್ಯಾರ್ಥ)

ಆ ವಾಕ್ಕು ಮೊದಲು ಬಲಿದಾನಕ್ಕಾಗಿ ಮುಂದೆ ಬಂದು ಹೇಳಿತು, ಹೀಗೆಂದು ನುಡಿಯಿತು. "ನಾನು ವಸಿಷ್ಠನಾಗಿರುವೆನಷ್ಟೆ, ನನ್ನ ವಸಿಷ್ಠತ್ವವೆಂಬುದಿದೆಯಲ್ಲ, ಅದು ನಿನ್ನದೇ. ಆ ವಸಿಷ್ಠಗುಣದಿಂದ ನೀನೇ ಆ ವಸಿಷ್ಠನಾಗಿರುವೆ." "ನಾನು ಪ್ರತಿಷ್ಠೆಯಾಗಿರುವೆನಲ್ಲ, ನೀನೇ ಆ ಪ್ರತಿಷ್ಠನಾಗಿರುವೆ; ನನ್ನ ಪ್ರತಿಷ್ಠೆ ಎಂಬುದಿದೆಯಲ್ಲ, ಅದು ನೀನೇ" ಎಂದು ಚಕ್ಷುಸ್ಸು (ನುಡಿಯಿತು). ಮಿಕ್ಕದ್ದು ಸಮಾನವು. ಸಂಪತ್ತು, ಆಯತನ, ಪ್ರಜಾತಿ– ಎಂಬ ಗುಣಗಳನ್ನು (ಶ್ರೋತ್ರಾದಿಗಳು) ಕ್ರಮವಾಗಿ ಸಮರ್ಪಿಸಿದವು.[1]

## ಪ್ರಾಣನ ಅನ್ನವು

(ಭಾಷ್ಯ)

೪೨೧. ಯದ್ಯೇವಮ್, ಸಾಧು ಬಲಿಂ ದತ್ತವನ್ತೋ ಭವನ್ತಃ । ಬ್ರೂತ ತಸ್ಯ ಉ ಮೇ ಏವಂಗುಣವಿಶಿಷ್ಟಸ್ಯ ಕಿಮನ್ನಮ್, ಕಿಂ ವಾಸಃ ಇತಿ । ಆಹುರಿತರೇ । ಯದಿದಂ ಲೋಕೇ ಕಿಂಚ ಕಿಂಚಿತ್ ಅನ್ನಂ ನಾಮ[2] ಆ ಶ್ವಭ್ಯಃ ಆ ಕೃಮಿಭ್ಯಃ ಆ ಕೀಟಪತಙ್ಗೇಭ್ಯಃ ಯಚ್ಚ ಶ್ವಾನ್ನಂ ಕೃಮ್ಯನ್ನಂ ಕೀಟಪತಙ್ಗಾನ್ನಂ ಚ ತೇನ ಸಹ ಸರ್ವಮೇವ ಯತ್ಕಿಂಚಿತ್ ಪ್ರಾಣಿಭಿರದ್ಯಮಾನಮ್ ಅನ್ನಮ್ ತತ್ಸರ್ವಂ ತವಾನ್ನಮ್ । ಸರ್ವಂ ಪ್ರಾಣಸ್ಯ ಅನ್ನಮ್ ಇತಿ ದೃಷ್ಟಿಃ ಅತ್ರ ವಿಧೀಯತೇ ॥

(ಭಾಷ್ಯಾರ್ಥ)

"ಹಾಗಾದರೆ ನೀವು ಸರಿಯಾಗಿ ಬಲಿಯನ್ನು ಕೊಟ್ಟಿರುತ್ತೀರಿ.[3] ಆ ನನಗೆ ಈ ಗುಣಗಳಿಂದ ಕೂಡಿರುವ (ನನಗೆ) ಅನ್ನವು ಯಾವದು, ಹೊದಿಕೆಯು ಯಾವದು, ಹೇಳಿರಿ" (ಎಂದು ಪ್ರಾಣವು ಕೇಳಿತು).

---

1. ಪ್ರಾಣದಲ್ಲಿ ಈ ವಸಿಷ್ಠತ್ವಾದಿಗಳನ್ನು ಗುಣೋಪಸಂಹಾರನ್ಯಾಯದಿಂದ ಸೇರಿಸಿಕೊಂಡೇ ಕೌಷೀತಕ್ಯಾದಿಗಳಲ್ಲಿ ಹೇಳಿರುವ ಪ್ರಾಣೋಪಾಸನೆಯನ್ನು ಮಾಡಬೇಕು. ಏಕೆಂದರೆ ಉಪಾಸ್ಯವಾದ ಪ್ರಾಣವೆಂಬುದಕ್ಕೇ ಆ ಧರ್ಮಗಳನ್ನು ಹೇಳಿದೆ ಎಂದು ಸೂ. ಭಾ. ೩-೩-೧೦ (ಭಾ. ಭಾ. ೩೩೫)ರಲ್ಲಿ ತೀರ್ಮಾನಿಸಿದೆ.

2. ಇದರ ಮುಂದೆ 'ಅಪಿ' ಎಂದು ಹೆಚ್ಚಾಗಿರುವ ಪಾಠವು ಬೇಕಿಲ್ಲ.

3. ಏಕೆಂದರೆ ನಿಮ್ಮಲ್ಲಿರುವ ಶ್ರೇಷ್ಠವಾದ ಗುಣಗಳೆಲ್ಲವೂ ನನ್ನವೇ, ನನ್ನ ಸ್ವರೂಪವೇ.

ವಿುಕ್ಕ (ಪ್ರಾಣಗಳು) ಇಂತೆಂದವು. "ಲೋಕದಲ್ಲಿ ಯಾವಯಾವದು (ಕಿಂಚ = ಕಿಂಚಿತ್) ಒಂದಿಷ್ಟು ಅನ್ನವೆನಿಸಿಕೊಂಡಿರುವದೋ, ನಾಯಿಗಳ ವರೆಗೂ ಕೃಮಿಗಳವರೆಗೂ, ಕೀಟಪತಂಗಗಳವರೆಗೂ, ನಾಯಿಯ ಅನ್ನವೂ ಕೃಮ್ಯನ್ನವೂ ಕೀಟಪತಂಗಗಳ ಅನ್ನವೂ ಇದೆಯಲ್ಲ, ಅವನ್ನೂ ಸೇರಿಸಿಕೊಂಡು ಎಲ್ಲವೂ ಪ್ರಾಣಿಗಳು ತಿನ್ನುವ ಅನ್ನವೆಂಬುದು ಏನೇನಿದೆಯೋ ಅದೆಲ್ಲವೂ ನಿನಗೆ ಅನ್ನವು. ಸರ್ವವೂ ಪ್ರಾಣಕ್ಕೆ ಅನ್ನವು ಎಂಬ ದೃಷ್ಟಿಯನ್ನು ಇಲ್ಲಿ ವಿಧಿಸಿದೆ.[1]

## ಚರ್ಚೆ : ಪ್ರಾಣಾನ್ನಜ್ಞಾನಿಗೆ ಸರ್ವವೂ ಅನ್ನವೆಂಬ ವಾದದ ಖಂಡನೆ

(ಭಾಷ್ಯ)

೪೨೨. ಕೇಚಿತ್ತು ಸರ್ವಭಕ್ಷಣೇ ದೋಷಾಭಾವಂ ವದನ್ತಿ ಪ್ರಾಣಾನ್ನವಿದಃ । ತತ್ ಅಸತ್ । ಶಾಸ್ತ್ರಾನ್ತರೇಣ ಪ್ರತಿಷಿದ್ಧತ್ವಾತ್ । ತೇನಾಸ್ಯ ವಿಕಲ್ಪಃ ಇತಿ ಚೇತ್ । ನ । ಅವಿಧಾಯಕತ್ವಾತ್ । ನ ಹ ವಾ ಅಸ್ಯ ಅನನ್ನಂ ಜಗ್ಧಂ ಭವತಿ ಇತಿ ಸರ್ವಂ ಪ್ರಾಣಸ್ಯ ಅನ್ನಮ್ ಇತ್ಯೇತಸ್ಯ ವಿಜ್ಞಾನಸ್ಯ ವಿಹಿತಸ್ಯ ಸ್ತುತ್ಯರ್ಥಮೇತತ್ । ತೇನ ಏಕವಾಕ್ಯತಾಪತ್ತೇಃ । ನ ತು ಶಾಸ್ತ್ರಾನ್ತರವಿಹಿತಸ್ಯ ಬಾಧನೇ ಸಾಮರ್ಥ್ಯಮ್ । ಅನ್ಯಪರತ್ವಾತ್ ಅಸ್ಯ । ಪ್ರಾಣಮಾತ್ರಸ್ಯ ಸರ್ವಮ್ ಅನ್ನಮ್ ಇತ್ಯೇತದ್ ದರ್ಶನಮ್ ಇಹ ವಿಧಿತ್ಸಿತಮ್ । ನ ತು ಸರ್ವಂ ಭಕ್ಷಯೇತ್ ಇತಿ । ಯತ್ತು ಸರ್ವಭಕ್ಷಣೇ ದೋಷಾಭಾವಜ್ಞಾನಮ್ ತನ್ಮಿಥ್ಯೈವ । ಪ್ರಮಾಣಾಭಾವಾತ್ । ವಿದುಷಃ ಪ್ರಾಣತ್ವಾತ್ ಸರ್ವಾನ್ನೋಪಪತ್ತೇಃ ಸಾಮರ್ಥ್ಯಾತ್ ಅದೋಷ ಏವ ಇತಿ ಚೇತ್ । ನ । ಅಶೇಷಾನ್ನತ್ವಾನುಪಪತ್ತೇಃ । ಸತ್ಯಮ್ । ಯದ್ಯಪಿ ವಿದ್ವಾನ್ ಪ್ರಾಣಃ, ಯೇನ ಕಾರ್ಯಕರಣಸಂಘಾತೇನ ವಿಶಿಷ್ಟಸ್ಯ ವಿದ್ವತ್ತಾ ತೇನ ಕಾರ್ಯಕರಣಸಂಘಾತೇನ ಕೃಮಿಕೀಟದೇವಾದ್ಯಶೇಷಾನ್ನಭಕ್ಷಣಂ ನೋಪಪದ್ಯತೇ । ತೇನ ತತ್ರ

---

1. ಹೀಗೆಂದು ಉಪಾಸನೆಮಾಡಬೇಕೆಂದು ಹೇಳಿವೆ ; ಸರ್ವಾನ್ನವನ್ನೂ ಪ್ರಾಣೋಪಾಸಕನು ತಿನ್ನಬಹುದು ಎಂದು ಹೇಳಿಲ್ಲ ಎಂದರ್ಥ. ಇಲ್ಲಿ ಎಲ್ಲವೂ ಇವನಿಗೆ ಅನ್ನವೇ ಎಂದಿರುವದರಿಂದ ಜೀವನನ್ನೇ ಪ್ರಾಣನೆಂದಿದೆ ಎಂದು ವಾರ್ತಿಕ ೬-೧-೩೨ ; ಕರಣಗಳಿಗೆ ಸ್ವತಃ ಭೋಕ್ತೃತ್ವವೇ ಇಲ್ಲವಾದ್ದರಿಂದ ಎಲ್ಲಾ ಕಡೆಯಲ್ಲಿಯೂ ಜೀವನೇ ಭೋಕ್ತೃವಾದರೂ ಉಪಾಧಿಗಳಾದ ಕರಣಗಳೊಳಗೆ ಮುಖ್ಯಪ್ರಾಣವೇ ಶ್ರೇಷ್ಠನು ಎಂದು ಉಪಾಸನೆಮಾಡಬೇಕೆಂಬುದೇ ವಿವಕ್ಷಿತವಾದ್ದರಿಂದ ಭಾಷ್ಯದಲ್ಲಿ ಈ ವಿಚಾರವನ್ನು ಚರ್ಚಿಸಿಲ್ಲವೆಂತ ಕಾಣುತ್ತದೆ.

ಅಶೇಷಾನ್ನಭಕ್ಷಣೇ ದೋಷಾಭಾವಜ್ಞಾಪನಮ್ ಅನರ್ಥಕಮ್ । ಅಪ್ರಾಪ್ತತ್ವಾತ್ ಅಶೇಷಾನ್ನಭಕ್ಷಣದೋಷಸ್ಯ । ನನು ಪ್ರಾಣಃ ಸನ್ ಭಕ್ಷಯತ್ಯೇವ ಕೃಮಿಕೀಟಾದ್ಯನ್ನಮಪಿ। ಬಾಢಮ್। ಕಿಂ ತು ನ ತದ್ವಿಷಯಃ ಪ್ರತಿಷೇಧೋಽಸ್ತಿ। ತಸ್ಮಾತ್ ದೈವರಕ್ತಂ ಕಿಂಶುಕಮ್ ತತ್ರ ದೋಷಾಭಾವಃ । ಅತಃ ತದ್ರೂಪೇಣ ದೋಷಾಭಾವಜ್ಞಾಪನಮ್ ಅನರ್ಥಕಮ್ । ಅಪ್ರಾಪ್ತತ್ವಾತ್ ಅಶೇಷಾನ್ನಭಕ್ಷಣದೋಷಸ್ಯ । ಯೇನ ತು ಕಾರ್ಯಕರಣಸಂಘಾತಸಂಬನ್ಧೇನ ಪ್ರತಿಷೇಧಃ ಕ್ರಿಯತೇ, ತತ್ಸಂಬನ್ಧೇನ ತು ಇಹ ನೈವ ಪ್ರತಿಪ್ರಸವೋಽಸ್ತಿ । ತಸ್ಮಾತ್ ತತ್ಪ್ರತಿಷೇಧಾತಿಕ್ರಮೇ ದೋಷ ಏವ ಸ್ಯಾತ್ । ಅನ್ಯವಿಷಯತ್ವಾತ್ 'ನ ಹ ವೈ' ಇತ್ಯಾದೇಃ । ನ ಚ ಬ್ರಾಹ್ಮಣಾದಿಶರೀರಸ್ಯ ಸರ್ವಾನ್ನತ್ವದರ್ಶನಮ್ ಇಹ ವಿಧೀಯತೇ । ಕಿಂ ತು ಪ್ರಾಣಮಾತ್ರಸ್ಯೈವ । ಯಥಾ ಚ ಸಾಮಾನ್ಯೇನ ಸರ್ವಾನ್ನಸ್ಯ ಪ್ರಾಣಸ್ಯ ಕಿಂಚಿತ್ ಅನ್ನಜಾತಂ ಕಸ್ಯಚಿತ್ ಜೀವನಹೇತುಃ ಯಥಾ ವಿಷಂ ವಿಷಜಸ್ಯ ಕೃಮೇಃ ತದೇವ ಅನ್ಯಸ್ಯ ಪ್ರಾಣಾನ್ನಮಪಿ ಸತ್ ದೃಷ್ಟಮೇವ ದೋಷಮ್ ಉತ್ಪಾದಯತಿ ಮರಣಾದಿಲಕ್ಷಣಮ್ । ತಥಾ ಸರ್ವಾನ್ನಸ್ಯಾಪಿ ಪ್ರಾಣಸ್ಯ ಪ್ರತಿಷಿದ್ಧಾನ್ನಭಕ್ಷಣೇ ಬ್ರಾಹ್ಮಣತ್ವಾದಿದೇಹಸಂಬನ್ಧಾತ್ ದೋಷ ಏವ ಸ್ಯಾತ್ । ತಸ್ಮಾತ್ ಮಿಥ್ಯಾಜ್ಞಾನಮೇವ ಅಭಕ್ಷ್ಯಭಕ್ಷಣೇ ದೋಷಾಭಾವಜ್ಞಾನಮ್ ॥

(ಭಾಷ್ಯಾರ್ಥ)

ಆದರೆ ಕೆಲವರು[1] ಯಾವದನ್ನು ತಿಂದರೂ ಪ್ರಾಣೋಪಾಸಕನಿಗೆ ದೋಷವಿರುವದಿಲ್ಲ ಎಂದು ಹೇಳುತ್ತಾರೆ. ಇದು ಸರಿಯಲ್ಲ. ಏಕೆಂದರೆ ಶಾಸ್ತ್ರಾಂತರದಲ್ಲಿ (ಅಭಕ್ಷ್ಯಭಕ್ಷಣವನ್ನು) ಪ್ರತಿಷೇಧಮಾಡಿರುತ್ತದೆ.[2]

(ಆಕ್ಷೇಪ) :- ಅದಕ್ಕೂ ಇದಕ್ಕೂ ವಿಕಲ್ಪವು[3] ಎಂದರೊ ?

(ಪರಿಹಾರ) :- ಹಾಗಲ್ಲ. ಏಕೆಂದರೆ (ಇದು) ವಿಧಾಯಕವಲ್ಲ. 'ಇವನು ಅನನ್ನವನ್ನು ತಿಂದಂತೆ ಆಗುವದಿಲ್ಲ' ಎಂಬಿದು ಎಲ್ಲವೂ ಪ್ರಾಣನಿಗೆ ಅನ್ನವು ಎಂಬ ವಿಹಿತವಾದ ಉಪಾಸನೆಯನ್ನು ಸ್ತುತಿಮಾಡುವದಕ್ಕಾಗಿ ಬಂದದ್ದು ;

1. ಇವರು ಯಾರೆಂಬುದು ಭಾಷ್ಯದಲಾಗಲಿ, ಟೀಕೆಯಲ್ಲಾಗಲಿ, ವಾರ್ತಿಕದಲ್ಲಾಗಲಿ ಸ್ಪಷ್ಟವಾಗಿಲ್ಲ.

2. ಶಾಸ್ತ್ರದಲ್ಲಿ ನಿಷೇಧಮಾಡಿದೆ ಎಂಬುದಕ್ಕೆ ಸೂ. ಭಾ. ೩-೪-೩೦, ೩೧ ನೋಡಿ; ಭಕ್ಷ್ಯಾಭಕ್ಷ್ಯವಿಭಾಗವೂ ಇರುತ್ತದೆ. ಸೂ. ಭಾ. ೩-೪-೨೮ (ಭಾ. ಭಾ. ೮೭೩ನ್ನು) ನೋಡಿ.

3. ಮಿಕ್ಕವರಿಗೆ ಅಭಕ್ಷ್ಯಭಕ್ಷಣದೋಷ ; ಪ್ರಾಣಾನ್ನೋಪಾಸಕನಿಗೆ ದೋಷವಿಲ್ಲ -ಎನ್ನಬಹುದಲ್ಲ ? ಎಂದು ಅಭಿಪ್ರಾಯ.

ಏಕೆಂದರೆ ಅದಕ್ಕೂ (ಇದಕ್ಕೂ) ಏಕವಾಕ್ಯತೆಯು ಹೊಂದುತ್ತದೆ.[1] ಇಷ್ಟೇ ಹೊರತು ಮತ್ತೊಂದು ಶಾಸ್ತ್ರದಲ್ಲಿ ವಿಧಿಸಿದ್ದನ್ನು ಬಾಧಿಸುವದಕ್ಕೆ (ಇದಕ್ಕೆ) ಸಾಮರ್ಥ್ಯವಿರುವದಿಲ್ಲ. ಏಕೆಂದರೆ ಇದು ಅನ್ಯಪರವಾಗಿದೆ.[2] ಪ್ರಾಣ ಸಾಮಾನ್ಯಕ್ಕೆ ಎಲ್ಲವೂ ಅನ್ನವು ಎಂಬೀ ದರ್ಶನವನ್ನು ಇಲ್ಲಿ ವಿಧಿಸುವದಕ್ಕೆ ಬಂದಿದೆಯೇ ಹೊರತು ಎಲ್ಲವನ್ನೂ ಭಕ್ಷಿಸಬೇಕು ಎಂದು (ವಿಧಿಸುವದಕ್ಕೆ) ಬಂದಿಲ್ಲ.

(ಇನ್ನು) ಯಾವದನ್ನು ತಿಂದರೂ (ಪ್ರಾಣೋಪಾಸಕನಿಗೆ) ದೋಷಭಾವ ವಿಲ್ಲ ಎಂಬ ತಿಳಿವಳಿಕೆಯಿದೆಯಲ್ಲ, ಅದಾದರೋ ತಪ್ಪೇ ; ಏಕೆಂದರೆ (ಅದಕ್ಕೆ) ಪ್ರಮಾಣವಿರುವದಿಲ್ಲ.

(ಆಕ್ಷೇಪ) :- ಉಪಾಸಕನು ಪ್ರಾಣವೇ ಆಗಿರುವದರಿಂದ (ಅವನಿಗೆ) ಸರ್ವವೂ ಅನ್ನವಾಗಬಹುದಾಗಿ ಸಾಮರ್ಥ್ಯದಿಂದ ದೋಷವಿಲ್ಲವೆನ್ನುವದೇ (ಸರಿಯಲ್ಲವೆ) ?

(ಪರಿಹಾರ) :- ಹಾಗಲ್ಲ. ಏಕೆಂದರೆ (ಅವನಿಗೆ) ಎಲ್ಲವೂ ಅನ್ನವಾಗಿರು ವದೆಂಬುದು ಹೊಂದುವದಿಲ್ಲ, (ಇದರ ವಿವರ): ನಿಜ, ಉಪಾಸಕನು ಪ್ರಾಣ ನೆಂಬುದೇನೊ ಸರಿ, (ಆದರೂ) ಯಾವ ಕಾರ್ಯಕರಣಸಂಘಾತದಿಂದೊಡ ಗೂಡಿಯೇ (ಇವನಿಗೆ) ಉಪಾಸಕತ್ವವುಂಟಾಗಿದೆಯೋ ಆ ಕಾರ್ಯಕರಣ ಸಂಘಾತದಿಂದ ಕೃಮಿಕೀಟದೇವಾದಿಗಳ ಅನ್ನವನ್ನು ಭಕ್ಷಿಸುವದು ಆಗುವದಿಲ್ಲ[3], ಆದ್ದರಿಂದ ಅದರ ವಿಷಯಕ್ಕೆ ಯಾವ ಅನ್ನವನ್ನು ಭಕ್ಷಿಸಿದರೂ ದೋಷವಿಲ್ಲ ಎಂದು ತಿಳಿಸುವದು ವ್ಯರ್ಥ. ಏಕೆಂದರೆ ಎಲ್ಲಾ ಅನ್ನವನ್ನೂ ತಿಂದರೆ ಆಗುವ ದೋಷವೆಂಬುದು ಪ್ರಾಪ್ತವೇ ಆಗಿಲ್ಲ.

(ಆಕ್ಷೇಪ) :- (ಅವನು) ಪ್ರಾಣನಾಗಿ ಕ್ರಿಮಿಕೀಟಾದಿಗಳ ಅನ್ನವನ್ನು ಭಕ್ಷಿಸಿಯೇ ಭಕ್ಷಿಸುತ್ತಾನಲ್ಲ !

(ಪರಿಹಾರ) :- ನಿಜ, ಆದರೆ ಆ (ಪ್ರಾಣನ) ವಿಷಯದಲ್ಲಿ ಪ್ರತಿಷೇಧವೇ ಇಲ್ಲ. ಆದ್ದರಿಂದ ಮುಳ್ಳುಮುತ್ತುಗವು ಸ್ವಭಾವದಿಂದ ಕೆಂಪಾಗಿರುವಂತೆ (ಇರು ವದರಿಂದ) ಅಲ್ಲಿ ಯಾವ ದೋಷವೂ ಇಲ್ಲ. ಆದ್ದರಿಂದ ಆ (ಪ್ರಾಣ)ರೂಪದಿಂದ ದೋಷವಿಲ್ಲವೆಂದು ತಿಳಿಸುವದು ವ್ಯರ್ಥವು. ಏಕೆಂದರೆ ಎಲ್ಲಾ ಅನ್ನವನ್ನೂ

---

1. ಹೀಗಿರುವದರಿಂದ ಇದನ್ನು ಸ್ವತಂತ್ರವಾಕ್ಯವೆನ್ನಲಾಗದು.

2. ಉಪಾಸನಾಪರವಾಗಿದೆ. ಸ್ವತಂತ್ರವಿಧಿಯಲ್ಲ.

3. ಏಕೆಂದರೆ ಒಂದೊಂದು ಜಾತಿಯ ಶರೀರಕ್ಕೆ ಒಂದೊಂದು ಬೇರೆಯ ಅನ್ನ ವೆಂಬ ನಿಯಮವಿದೆ.

ಭಕ್ಷಿಸುವದರಿಂದಾಗುವ ದೋಷವು (ಪ್ರಾಣನ ವಿಷಯವಲ್ಲಿ) ಪ್ರಾಪ್ತವಾಗಿಯೇ ಇಲ್ಲ[1]. ಆದರೆ ಯಾವ ಕಾರ್ಯಕರಣಸಂಘಾತಸಂಬಂಧದಿಂದ (ಶಾಸ್ತ್ರದಲ್ಲಿ) ಪ್ರತಿಷೇಧವನ್ನು ಮಾಡಿದೆಯೋ ಅದರ ಸಂಬಂಧದಿಂದ ಇಲ್ಲಿ ಪ್ರತಿಪ್ರಸವವನ್ನು[2] (ಹೇಳಿರುವದೇ) ಇಲ್ಲ. ಆದ್ದರಿಂದ ಆ ಪ್ರತಿಷೇಧವನ್ನು ಮೀರಿದರೆ ದೋಷವೇ ಆದೀತು ; ಏಕೆಂದರೆ 'ನ ಹ ವೈ' (ದೋಷವಿಲ್ಲವೇ ಇಲ್ಲ) ಎಂದುಮುಂತಾಗಿರುವ (ವಾಕ್ಯವು) ಮತ್ತೊಂದರ ವಿಷಯವಾಗಿರುತ್ತದೆ[3]. ಬ್ರಾಹ್ಮಣನೇ ಮುಂತಾದವರ ಶರೀರಕ್ಕೆ ಸರ್ವವೂ ಅನ್ನವೆಂದು ಉಪಾಸನೆಮಾಡಬೇಕೆಂದೇನೂ ಇಲ್ಲಿ ವಿಹಿತವಾಗಿರುವದಿಲ್ಲ, ಮತ್ತೇನೆಂದರೆ ಪ್ರಾಣಮಾತ್ರಕ್ಕೆ (ಸರ್ವವೂ ಅನ್ನವೆಂದು) ವಿಹಿತವಾಗಿರುತ್ತದೆ. ಹೇಗೆ ಸಾಮಾನ್ಯವಾಗಿ ಪ್ರಾಣವು ಸರ್ವಾನ್ನವುಳ್ಳದ್ದಾದರೂ ಒಂದೊಂದು ಅನ್ನವಿಶೇಷವು ಒಬ್ಬೊಬ್ಬನಿಗೆ ಜೀವನ ಹೇತುವಾಗಿರುತ್ತದೆ. ಉದಾಹರಣೆಗೆ ವಿಷವು ವಿಷದಲ್ಲಿ ಹುಟ್ಟಿದ ಕ್ರಿಮಿಗೆ (ಜೀವನಕ್ಕೆ ಹೇತುವಾಗಿರುತ್ತದೆ) ; ಅದೇ ಮತ್ತೊಬ್ಬನಿಗೆ (ಅದು) ಪ್ರಾಣಾನ್ನವೇ ಆದರೂ ಕಂಡಹಾಗೆಯೇ ಮರಣಾದಿರೂಪದ ದೋಷವನ್ನು ಉಂಟುಮಾಡುತ್ತದೆ. ಹಾಗೆಯೇ ಪ್ರಾಣವು ಸರ್ವಾನ್ನವುಳ್ಳದ್ದಾದರೂ ಪ್ರತಿಷಿದ್ಧವಾದ ಅನ್ನವನ್ನು ಭಕ್ಷಿಸಿದರೆ ಬ್ರಾಹ್ಮಣತ್ವಾದಿಗಳುಳ್ಳ ದೇಹಸಂಬಂಧದಿಂದ ದೋಷವೇ ಆಗುವದು. ಆದ್ದರಿಂದ ಅಭಕ್ಷ್ಯವನ್ನು ತಿಂದರೂ ದೋಷವಿಲ್ಲವೆಂಬ ಜ್ಞಾನವು ಭ್ರಾಂತಿಜ್ಞಾನವೇ.

## ಪ್ರಾಣನಿಗೆ ನೀರೇ ಹೊದಿಕೆ

(ಭಾಷ್ಯ)

೪೨೩. ಆಪೋ ವಾಸ ಇತಿ । ಆಪಃ ಭಕ್ಷ್ಯಮಾಣಾಃ ವಾಸಃಸ್ಥಾನೀಯಾಸ್ತವ । ಅತ್ರ ಚ ಪ್ರಾಣಸ್ಯ ಆಪೋ ವಾಸಃ ಇತ್ಯೇತದ್ ದರ್ಶನಂ ವಿಧೀಯತೇ । ನ ತು ವಾಸಃಕಾರ್ಯೇ ಆಪೋ ವಿನಿಯೋಕ್ತುಂ ಶಕ್ಯಾಃ । ತಸ್ಮಾತ್ ಯಥಾಪ್ರಾಪ್ತೇ ಅಬ್ಭಕ್ಷಣೇ ದರ್ಶನಮಾತ್ರಂ ಕರ್ತವ್ಯಮ್ ॥

(ಭಾಷ್ಯಾರ್ಥ)

'ಅಪ್ಪೇ ಹೊದಿಕೆ' ಎಂದರೆ ಕುಡಿಯುವ ಅಪ್ಪೇ ನಿನಗೆ ಹೊದಿಕೆಯಂತಿರುತ್ತದೆ (ಎಂದರ್ಥ). ಇಲ್ಲಿ ಪ್ರಾಣನಿಗೆ ಅಪ್ಪೇ ಹೊದಿಕೆ ಎಂಬೀ ದರ್ಶನವನ್ನು

---

1. 'ನ ಹ ವಾ ಅಸ್ಯ', 'ನ ಹ ವಾ ಏವಂವಿದಿ' (ಛಾಂ. ೫-೨-೧) ಇಂಥ ಸರ್ವಾನ್ನಾನುಮತಿಯು ಅರ್ಥವಾದವೇ ಎಂಬುದಕ್ಕೆ ಸೂ. ಭಾ. ೩-೪-೨೮ (ಭಾ. ಭಾ. ೪೭೩)ನ್ನು ನೋಡಿ. 2. ಪ್ರಾಣೋಪಾಸಕನಿಗೆ ಆಗಬಹುದು ಎಂದು ಎಲ್ಲಿಯೂ ಹೇಳಿಲ್ಲ.
3. ಅದು ಕೇವಲ ಸ್ತುತಿಮಾತ್ರವಾಗಿದೆ ; ಅಲ್ಲಿ ಪ್ರಸಕ್ತವಾಗಿರುವ ಪ್ರತಿಷೇಧವೇ ಇಲ್ಲ.

ವಿಧಿಸಿರುತ್ತದೆ ; ಆದರೆ ಹೊದಿಕೆಯ ಕೆಲಸಕ್ಕೆ ಅಪ್ಪನ್ನು ವಿನಿಯೋಗಿಸುವದು ಆಗಲಾರದು. ಆದ್ದರಿಂದ ನೀರನ್ನು ಕುಡಿಯುವದೆಂಬ ಕ್ರಿಯೆಯು ಪ್ರಾಪ್ತವೇ ಆಗಿರುವಲ್ಲಿ (ಈ) ದರ್ಶನವನ್ನು ಮಾತ್ರ ಮಾಡಬೇಕು.[1]

## ಪ್ರಾಣವಿದ್ಯಾಸ್ತುತಿ

(ಭಾಷ್ಯ)

೪೨೪. ನ ಹ ವೈ ಅಸ್ಯ ಸರ್ವಂ ಪ್ರಾಣಸ್ಯ ಅನ್ನಮ್ ಇತ್ಯೇವಂವಿದಃ ಅನನ್ನಮ್ ಅನದನೀಯಂ ಜಗ್ಧಂ ಭುಕ್ತಂ ನ ಭವತಿ ಹ। ಯದ್ಯಪಿ ಅನೇನ ಅನದನೀಯಂ ಭುಕ್ತಮ್। ಅದನೀಯಮೇವ ಭುಕ್ತಂ ಸ್ಯಾತ್ ನ ತು ತತ್ಕೃತ ದೋಷೇಣ ಲಿಪ್ಯತೇ ಇತ್ಯೇತತ್ ವಿದ್ಯಾಸ್ತುತಿಃ ಇತ್ಯವೋಚಾಮ। ತಥಾ ನ ಅನನ್ನಂ ಪ್ರತಿಗೃಹೀತಮ್ । ಯದ್ಯಪಿ ಅಪ್ರತಿಗ್ರಾಹ್ಯಂ ಹಸ್ತ್ಯಾದಿಪ್ರತಿ ಗೃಹೀತಂ ಸ್ಯಾತ್ ತದಪಿ ಅನ್ನಮೇವ ಪ್ರತಿಗ್ರಾಹ್ಯಂ ಪ್ರತಿಗೃಹೀತಂ ಸ್ಯಾತ್। ತತ್ರಾಪಿ ಅಪ್ರತಿಗ್ರಾಹ್ಯ ಪ್ರತಿಗ್ರಹದೋಷೇಣ ನ ಲಿಪ್ಯತೇ ಇತಿ ಸ್ತುತ್ಯರ್ಥಮೇವ। ಯ ಏವಮ್ ಏತತ್ ಅನಸ್ಯ ಪ್ರಾಣಸ್ಯ ಅನ್ನಂ ವೇದ। ಫಲಂ ತು ಪ್ರಾಣಾತ್ಮಭಾವ ಏವ। ನ ತ್ವೇತತ್ ಫಲಾಭಿಪ್ರಾಯೇಣ, ಕಿಂ ತರ್ಹಿ ಸ್ತುತ್ಯಭಿಪ್ರಾಯೇಣ ಇತಿ। ನನು ಏತದೇವ ಫಲಂ ಕಸ್ಮಾತ್ ನ ಭವತಿ ? ನ। ಪ್ರಾಣಾತ್ಮದರ್ಶಿನಃ ಪ್ರಾಣಾತ್ಮಭಾವ ಏವ ಫಲಮ್। ತತ್ರ ಚ ಪ್ರಾಣಾತ್ಮಭೂತಸ್ಯ ಸರ್ವಾತ್ಮನಃ ಅನದನೀಯಮಪಿ ಆದ್ಯಮೇವ। ತಥಾ ಅಪ್ರತಿಗ್ರಾಹ್ಯಮಪಿ ಪ್ರತಿಗ್ರಾಹ್ಯಮೇವ ಇತಿ ಯಥಾಪ್ರಾಪ್ತಮೇವ ಉಪಾದಾಯ ವಿದ್ಯಾ ಸ್ತೂಯತೇ। ಅತಃ ನೈವ ಫಲವಿಧಿಸರೂಪತಾ ವಾಕ್ಯಸ್ಯ ॥

(ಭಾಷ್ಯಾರ್ಥ)

ಇವನಿಗೆ (ಈ) ಎಲ್ಲವೂ ಪ್ರಾಣನಿಗೆ ಅನ್ನವೇ ಎಂದಿಂತು ಅರಿತಿರುವವನು ಅನನ್ನವಾದದ್ದನ್ನು ತಿನ್ನಬಾರದ್ದನ್ನು ತಿಂದಂತೆ ಆಗುವದಿಲ್ಲ, ಭುಂಜಿಸಿದಂತೆ ಆಗುವದಿಲ್ಲ. ಇವನು ತಿನ್ನಬಾರದ್ದನ್ನೇ ತಿಂದನಾದರೂ ತಿನ್ನಬಹುದಾದದ್ದನ್ನೇ ತಿಂದಂತೆ ಆಗುವದು. (ಇಷ್ಟೇ) ಹೊರತು ಅದರಿಂದಾದ ದೋಷದಿಂದ (ಇವನಿಗೆ) ಲೇಪವಾಗುವದಿಲ್ಲ- ಎಂಬಿದು ವಿದ್ಯೆಯ ಸ್ತುತಿಯೇ ಎಂದು (ಆಗಲೆ) ಹೇಳಿರುತ್ತೇವೆ. ಹೀಗೆಯೇ ಇವನು ಅನನ್ನವನ್ನು ಪ್ರತಿಗ್ರಹಿಸಿದಂತಲ್ಲ, ಪ್ರತಿಗ್ರಹಿಸಬಾರದ ಆನೆಯೇ ಮುಂತಾದದ್ದನ್ನು ಪ್ರತಿಗ್ರಹಮಾಡಿದ್ದರೂ ಆಗಲೂ ಅನ್ನವನ್ನೇ, ಎಂದರೆ ಪ್ರತಿಗ್ರಹಿಸಬಹುದಾದದ್ದನ್ನೇ,ಪ್ರತಿಗ್ರಹಿಸಿದಂತೆ ಆಗುವದು. ಅಲ್ಲಿಯೂ ಪ್ರತಿಗ್ರಹಿಸಬಾರದ್ದನ್ನು ಪ್ರತಿಗ್ರಹಿಸಿದ ದೋಷದಿಂದ ಲಿಪ್ತನಾಗುವ

1. ಆಚಮನವೇನೂ ವಿಹಿತವಲ್ಲ.

ದಿಲ್ಲ ಎಂಬುದು ಸ್ತುತಿಗಾಗಿಯೇ ಹೇಳಿದ್ದು. ಯಾವನು ಹೀಗೆ ಅನನಿಗೆ ಪ್ರಾಣನಿಗೆ (ಎಲ್ಲವೂ) ಅನ್ನವು ಎಂಬಿದನ್ನು ಅರಿತಿರುವನೋ (ಅವನಿಗೆ ಅನನ್ನದ ದೋಷ ವಿಲ್ಲ ಎಂದರ್ಥ). ಫಲವಾದರೋ ಪ್ರಾಣಸ್ವರೂಪ(ಪ್ರಾಪ್ತಿ)ಯೇ. ಇದಾದರೊ, (ಪ್ರಾಣವಿದ್ಯೆಯ) ಫಲವನ್ನು (ಹೇಳಬೇಕೆಂಬ) ಅಭಿಪ್ರಾಯದಿಂದ (ಹೇಳಿರು ವದಲ್ಲ), ಏಕೆಂದರೆ (ಆ ವಿದ್ಯೆಯ) ಸ್ತುತಿ(ಯನ್ನು ಹೇಳಬೇಕೆಂಬ) ಅಭಿಪ್ರಾಯದಿಂದಲೇ ಹೇಳಿದ್ದು.

(ಆಕ್ಷೇಪ) :- (ಪ್ರಾಣವಿದ್ಯೆಗೆ) ಇದೇ ಫಲವೆಂದು ಏತಕ್ಕೆ ಆಗುವದಿಲ್ಲ?

(ಪರಿಹಾರ) :- ಹಾಗಲ್ಲ. (ಏಕೆಂದರೆ) ಪ್ರಾಣಾತ್ಮದರ್ಶನವುಳ್ಳವನಿಗೆ ಪ್ರಾಣಾತ್ಮಭಾವವೇ ಫಲವು (ಆಗುತ್ತದೆ). ಆದರ ಅಲ್ಲಿ ಪ್ರಾಣಾತ್ಮಭಾವವನ್ನು ಹೊಂದಿದ ಸರ್ವಾತ್ಮನಾದ (ಇವನಿಗೆ) ತಿನ್ನಬಾರದ್ದೂ ತಿನ್ನಬಹು ದಾದದ್ದೇ ಆಗಿರುತ್ತದೆ, ಮತ್ತು ಪ್ರತಿಗ್ರಹಮಾಡಬಾರದ್ದೂ ಪ್ರತಿ ಗ್ರಾಹ್ಯವೇ ಆಗಿರುತ್ತದೆ -ಎಂದು ಪ್ರಾಪ್ತವಾದದ್ದನ್ನೇ ತೆಗೆದುಕೊಂಡು (ಇಲ್ಲಿ) ವಿದ್ಯೆಯನ್ನು ಹೊಗಳಿರುತ್ತದೆ. ಆದ್ದರಿಂದ ಫಲವನ್ನು ಹೇಳುವ (ವಾಕ್ಯಕ್ಕೆ) ಸಮಾನವಾದ ರೂಪವು (ಈ) ವಾಕ್ಯಕ್ಕಿಲ್ಲ.[1]

## ಪ್ರಾಯತ್ಯಾರ್ಥವಾದ

## ಆಚಮನವನ್ನೇ ಹೊದಿಕೆಯೆಂಬ ಉಪಾಸನೆ

(ಭಾಷ್ಯ)

೪೨೫. ಯಸ್ಮಾತ್ ಆಪೋ ವಾಸಃ ಪ್ರಾಣಸ್ಯ ತಸ್ಮಾತ್ ವಿದ್ವಾಂಸಃ ಬ್ರಾಹ್ಮಣಾಃ, ಶ್ರೋತ್ರಿಯಾ ಅಧೀತವೇದಾಃ ಅಶಿಷ್ಯನ್ತಃ ಭೋಕ್ಷ್ಯಮಾಣಾಃ ಆಚಾಮನ್ತಿ ಅಪಃ। ಅಶಿತ್ವಾ ಆಚಾಮನ್ತಿ ಭುಕ್ತ್ವಾ ಚ ಉತ್ತರಕಾಲಮ್ ಅಪಃ ಭಕ್ಷಯನ್ತಿ। ತತ್ರ ತೇಷಾಮ್ ಆಚಾಮತಾಂ ಕೋಽಭಿಪ್ರಾಯಃ ಇತಿ ? ಆಹ। ಏತಮೇವ ಅನಂ ಪ್ರಾಣಮ್ ಅನಗ್ನಂ ಕುರ್ವನ್ತೋ ಮನ್ಯನ್ತೇ। ಅಸ್ತಿ ಚೈತತ್। ಯೋ ಯಸ್ಮೈ ವಾಸೋ ದದಾತಿ ಸ ತಮ್ ಅನಗ್ನಂ ಕರೋ ಮೀತಿ ಹಿ ಮನ್ಯತೇ। ಪ್ರಾಣಸ್ಯ ಚ ಆಪಃ ವಾಸ ಇತಿ ಹಿ ಉಕ್ತಮ್। ಯದಪಃ ಪಿಬಾಮಿ ತತ್ ಪ್ರಾಣಸ್ಯ ವಾಸೋ ದದಾಮಿ ಇತಿ ವಿಜ್ಞಾನಂ

---

1. ಉಪಾಸಕನೆಂಬ ದೃಷ್ಟಿಯಿಂದ ಅನ್ನ, ಅನನ್ನ- ಎಂಬ ವಿಭಾಗವು ಇದ್ದೇ ಇದೆ ಯಾದರೂ ಉಪಾಸನೆಯ ಫಲವಾದ ಪ್ರಾಣಾತ್ಮಭಾವದಲ್ಲಿ ಈ ವಿಭಾಗವಿರುವದಿಲ್ಲ; ಏಕೆಂದರೆ ಪ್ರಾಣನಿಗೆ ಎಲ್ಲವೂ ಅನ್ನವೇ ಆಗಿರುತ್ತದೆ. ಈ ಫಲದ ದೃಷ್ಟಿಯಿಂದ ಪ್ರಾಣಾತ್ಮ ದರ್ಶಿಯಾದ ಉಪಾಸಕನಿಗೆ ಯಾವದೂ ಅನನ್ನವಲ್ಲ ಎಂದು ಈ ವಿದ್ಯೆಯನ್ನು ಹೊಗಳಿದೆ ಯಾದ್ದರಿಂದ ಇದು ಅರ್ಥವಾದಮಾತ್ರವೇ ಎಂದಭಿಪ್ರಾಯ. ಇದೇ ಚರ್ಚೆಯಲ್ಲಿ ಹೇಳಿದ್ದು.

ಕರ್ತವ್ಯಮ್ ಇತ್ಯೇವಮರ್ಥಮೇತತ್। ನನು ಭೋಕ್ಷ್ಯಮಾಣಃ ಭುಕ್ತ ವಾಂಶ್ಚ ಪ್ರಯತೋ ಭವಿಷ್ಯಾಮಿ ಇತಿ ಆಚಾಮತಿ। ತತ್ರ ಚ ಪ್ರಾಣಸ್ಯ ಅನಗ್ನತಾಕರಣಾರ್ಥತ್ವೇ ಚ ದ್ವಿಕಾರ್ಯತಾ ಆಚಮನಸ್ಯ ಸ್ಯಾತ್। ನ ಚ ಕಾರ್ಯದ್ವಯಮ್ ಆಚಮನಸ್ಯ ಏಕಸ್ಯ ಯುಕ್ತಮ್। ಯದಿ ಪ್ರಾಯ ತ್ಯಾರ್ಥಮ್, ನ ಅನಗ್ನತಾರ್ಥಮ್। ಅಥ ಅನಗ್ನತಾರ್ಥಮ್, ನ ಪ್ರಾಯ ತ್ಯಾರ್ಥಮ್। ತಸ್ಮಾತ್ ದ್ವಿತೀಯಮ್ ಆಚಮನಾನ್ತರಂ ಪ್ರಾಣಸ್ಯ ಅನಗ್ನತಾ ಕರಣಾಯ ಭವತು। ನ। ಕ್ರಿಯಾದ್ವಿತ್ವಾನುಪಪತ್ತೇಃ। ದ್ವೇ ಹ್ಯೇತೇ ಕ್ರಿಯೇ। ಭೋಕ್ಷ್ಯಮಾಣಸ್ಯ ಭುಕ್ತವತಶ್ಚ ಯತ್ ಆಚಮನಂ ಸ್ಮೃತಿವಿಹಿತಮ್, ತತ್ ಪ್ರಾಯತ್ಯಾರ್ಥಂ ಭವತಿ ಕ್ರಿಯಾಮಾತ್ರಮೇವ। ನ ತು ತತ್ರ ಪ್ರಾಯತ್ಯಂ ದರ್ಶನಾದಿ ಅಪೇಕ್ಷತೇ। ತತ್ರ ಚ ಆಚಮನಾಙ್ಗಭೂತಾಸು ಅಪ್ಸು ವಾಸೋ ವಿಜ್ಞಾನಂ ಪ್ರಾಣಸ್ಯ ಇತಿ ಕರ್ತವ್ಯತಯಾ ಚೋದ್ಯತೇ। ನ ತು ತಸ್ಮಿನ್ ಕ್ರಿಯಮಾಣೇ ಆಚಮನಸ್ಯ ಪ್ರಾಯತ್ಯಾರ್ಥತಾ ಬಾಧ್ಯತೇ। ಕ್ರಿಯಾ ನ್ತರತ್ವಾತ್ ಆಚಮನಸ್ಯ। ತಸ್ಮಾತ್ ಭೋಕ್ಷ್ಯಮಾಣಸ್ಯ ಭುಕ್ತವತಶ್ಚ ಯತ್ ಆಚಮನಮ್, ತತ್ರ ಆಪೋ ವಾಸಃ ಪ್ರಾಣಸ್ಯ ಇತಿ ದರ್ಶನಮಾತ್ರಂ ವಿಧೀ ಯತೇ ಅಪ್ರಾಪ್ತತ್ವಾತ್ ಅನ್ಯತಃ ॥

(ಭಾಷ್ಯಾರ್ಥ)

ಪ್ರಾಣನಿಗೆ ಅಪ್ಪು ಹೊದಿಕೆಯಾಗಿದೆಯಷ್ಟೆ, ಆದ್ದರಿಂದ ಬಲ್ಲವರು ಎಂದರೆ ಬ್ರಾಹ್ಮಣರು, ಶ್ರೋತ್ರಿಯರು ವೇದಗಳನ್ನು ಅಧ್ಯಯನಮಾಡಿದವರು, ಊಟಮಾಡುವವರಾಗಿರುವಾಗ ಭೋಜನಮಾಡಲಿರುವಾಗ ಆಚಮನಮಾಡು ತ್ತಾರೆ, ನೀರನ್ನು (ಆಚಮನಮಾಡುತ್ತಾರೆ), ಊಟಮಾಡಿಯೂ ಭೋಜನ ಮಾಡಿದ ಮೇಲಿನಕಾಲದಲ್ಲಿಯೂ ಆಚಮನಮಾಡುತ್ತಾರೆ ನೀರನ್ನು ಕುಡಿಯು ತ್ತಾರೆ. ಇಲ್ಲಿ (ಹೀಗೆ) ಆಚಮನಮಾಡುವದರಲ್ಲಿ ಅಭಿಪ್ರಾಯವೇನು ? ಎಂದರೆ (ಶ್ರುತಿ) ಹೇಳುತ್ತದೆ : (ಅವರು) ಈ ಪ್ರಾಣನನ್ನೇ ಅನಗ್ನನನ್ನಾಗಿ ಮಾಡುವೆ ವೆಂದು ಭಾವಿಸುತ್ತಾರೆ. ಇದು (ಯುಕ್ತವೂ) ಆಗದೆ. ಯಾವನು ಯಾವನಿಗೆ ಹೊದಿಕೆಯನ್ನು ಕೊಡುತ್ತಾನೋ ಅವನು ಅವನನ್ನು ಅನಗ್ನನನ್ನಾಗಿ ಮಾಡುವೆ ನೆಂದಲ್ಲವೆ, ತಿಳಿಯುತ್ತಾನೆ ? ಪ್ರಾಣನಿಗೆ ಅಪ್ಪೇ ಹೊದಿಕೆ ಎಂದಲ್ಲವೆ, ಹಿಂದೆ ಹೇಳಿರುವದು ? (ಈ) ನೀರನ್ನು ಕುಡಿಯುವೆನಷ್ಟೆ, ಇದರಿಂದ ಪ್ರಾಣನಿಗೆ ಹೊದಿಕೆಯನ್ನೇ ಕೊಟ್ಟವನಾಗುವೆನು ಎಂದು ಉಪಾಸನೆಮಾಡಬೇಕು ಎಂಬುದು (ಈ ವಾಕ್ಯದ ಅರ್ಥ).

(ಆಕ್ಷೇಪ):- ಊಟಕ್ಕೆ ಮುಂಚೆಯೂ ಊಟಮಾಡಿದಮೇಲೂ ಪ್ರಯತ ನಾಗುವೆನು ಎಂದಲ್ಲವೆ, ಆಚಮನಮಾಡುತ್ತಾನೆ ? ಇಲ್ಲಿ (ಆಚಮನವು)

ಪ್ರಾಣನನ್ನು ಅನಗ್ನನನ್ನಾಗಿ ಮಾಡುವದಕ್ಕೆಂದಾದರೆ, ಆಚಮನಕ್ಕೆ ಎರಡು (ಬೇರೆಬೇರೆಯ) ಫಲಗಳು ಎಂದಾಗುವದಲ್ಲ. ಒಂದೇ ಆಚಮನಕ್ಕೆ ಎರಡು ಕಾರ್ಯಗಳು ಎಂಬುದು ಯುಕ್ತವಲ್ಲ. (ಅದು) ಪ್ರಾಯತ್ಯಕ್ಕಾಗಿ (ಮಾಡತಕ್ಕ)ದ್ದಾದರೆ ಅನಗ್ನತೆಗಾಗಿ (ಮಾಡತಕ್ಕ)ದ್ದಾಗಲಾರದು ; ಹಾಗಿಲ್ಲದೆ (ಅದು) ಅನಗ್ನತೆಗಾಗಿ ಮಾಡತಕ್ಕದ್ದಾದರೆ (ಆಗ) ಪ್ರಾಯತ್ಯಕ್ಕಾಗಿ ಮಾಡತಕ್ಕದ್ದಾಗಲಾರದು. ಹೀಗಿರುವದಷ್ಟೆ, ಆದ್ದರಿಂದ ಎರಡನೆಯ(ದೊಂದು) ಆಚಮನವು ಪ್ರಾಣನಿಗೆ ಅನಗ್ನತೆಯನ್ನುಂಟುಮಾಡುವದಕ್ಕಾಗಿ (ವಿಹಿತವಾಗಿದೆ) ಎಂದಾಗಲಿ !

(ಪರಿಹಾರ) :– ಹಾಗಲ್ಲ. ಏಕೆಂದರೆ ಎರಡು ಕ್ರಿಯೆಗಳಿಂದಾಗಬಹುದಾಗಿದೆ. (ಇದರ ವಿವರ) : ಇವು ಎರಡು (ಬೇರೆಬೇರೆ) ಕ್ರಿಯೆಗಳು ; ಊಟಮಾಡುವ ಮುಂಚೆಯೂ ಊಟಮಾಡಿದಮೇಲೂ (ಮಾಡುವ) ಆಚಮನವಿದೆಯಲ್ಲ ಅದು ಸ್ಮೃತಿವಿಹಿತವಾದದ್ದು.[1] ಆ ಕ್ರಿಯೆಯೊಂದೇ ಪ್ರಾಯತ್ಯಕ್ಕಾಗಿ ಆಗುತ್ತದೆ ; ಆದರೆ ಅಲ್ಲಿ ಪ್ರಾಯತ್ಯಕ್ಕೆ ದರ್ಶನವೇ ಮುಂತಾದದ್ದೇನೂ ಬೇಕಿರುವದಿಲ್ಲ. ಇಲ್ಲಿ ಆಚಮನಕ್ಕೆ ಅಂಗವಾಗಿರುವ ನೀರಿನಲ್ಲಿ ಪ್ರಾಣನ ಹೊದಿಕೆಯೆಂಬ ಉಪಾಸನೆಯನ್ನು ಇತಿಕರ್ತವ್ಯತೆಗಾಗಿ ವಿಧಿಸಿರುತ್ತದೆ. ಅದನ್ನು ಮಾಡಿದರೆ ಆಚಮನವು ಪ್ರಾಯತ್ಯಕ್ಕಾಗಿ (ಮಾಡಿದ್ದೆಂಬುದೇನೂ) ಬಾಧಿತವಾಗುವದಿಲ್ಲ. ಏಕೆಂದರೆ (ಆ) ಆಚಮನವು ಬೇರೆ ಒಂದು ಕ್ರಿಯೆಯಾಗಿರುತ್ತದೆ.[2] ಆದ್ದರಿಂದ ಊಟಮಾಡುವ ಮುಂಚೆಯೂ ಊಟಮಾಡಿದಮೇಲೂ ಮಾಡುವ ಆಚಮನವಿದೆಯಲ್ಲ, ಅದರಲ್ಲಿ ನೀರು ಪ್ರಾಣನಿಗೆ ಹೊದಿಕೆ ಎಂದು ಉಪಾಸನೆಮಾಡುವದೊಂದನ್ನೇ (ಇಲ್ಲಿ) ವಿಧಿಸಿರುತ್ತದೆ ; ಏಕೆಂದರೆ (ಅದು) ಮತ್ತೊಂದರಿಂದ ಪ್ರಾಪ್ತವಾಗಿರುವದಿಲ್ಲ.[3]

---

1. ಇದನ್ನು ಇಲ್ಲಿ ಅನುವಾದಮಾಡಿಕೊಂಡಿದೆ, ಈ ವಾಕ್ಯದಲ್ಲಿ ವಿಧಿಸಿಲ್ಲ.

2. ಸ್ಮೃತಿವಿಹಿತವಾದ ಆಚಮನವದು. ವಾಸೋವಿಜ್ಞಾನವೆಂಬ ಉಪಾಸನೆಯನ್ನೇ ಇಲ್ಲಿ ವಿಧಿಸಿದೆ ಎಂದು ಸೂ.ಭಾ. ೩-೩-೧೮ (ಭಾ. ಭಾ. ೩೫೨-೩೫೩)ರಲ್ಲಿ ನಿರ್ಣಯಿಸಿದೆ.

3. ಈ ಪ್ರಕರಣದಲ್ಲಲ್ಲದೆ ಮತ್ತೆಲ್ಲಿಯೂ ಹೇಳಿಲ್ಲವಾದ್ದರಿಂದ ಇಲ್ಲಿಯೇ ವಿಧಿಸಿದೆ ಎಂದು ತಿಳಿಯತಕ್ಕದ್ದಾಗಿದೆ.

# ಒಂದನೆಯ ಬ್ರಾಹ್ಮಣದ ಸಾರ

ಇಲ್ಲಿ ಮುಖ್ಯಪ್ರಾಣೋಪಾಸನೆಯನ್ನು ಹೇಳಿದೆ.

೧–೬. ಪ್ರಾಣವೇ ಜ್ಯೇಷ್ಠವು, ಶ್ರೇಷ್ಠವು ಎಂದು ಉಪಾಸನೆಮಾಡಿದರೆ ತನ್ನವರಲ್ಲೂ ಉಳಿದವರಲ್ಲೂ ಜ್ಯೇಷ್ಠನೂ ಶ್ರೇಷ್ಠನೂ ಆಗುತ್ತಾನೆ. ವಾಕ್ಕೇ ವಸಿಷ್ಠವೆಂದು ಉಪಾಸನೆಮಾಡಿದರೆ ತಾನೂ ವಸಿಷ್ಠನು– ಧನವಂತನಾಗಿ ವಾಸಮಾಡುವದು, ವಾಗ್ಮಿಯಾಗಿ ಎಲ್ಲರನ್ನೂ ಮಾತಿನಲ್ಲಿ ಗೆಲ್ಲುವದು, ಈ ಗುಣಗಳುಳ್ಳವನು– ಆಗುತ್ತಾನೆ. ಚಕ್ಷುಸ್ಸೇ ಪ್ರತಿಷ್ಠೆ ಎಂದು ಉಪಾಸನೆಮಾಡಿದವನು ಸಮದುರ್ಗಗಳಾದ ದೇಶಕಾಲಗಳಲ್ಲಿ ಯಾವ ಕಷ್ಟವೂ ಇಲ್ಲದೆ ಪ್ರತಿಷ್ಠಿತನಾಗುತ್ತಾನೆ. ಶ್ರೋತ್ರವೇ ಸಂಪತ್ತು ಎಂದು ಉಪಾಸನೆಮಾಡಿದವನಿಗೆ ಇಷ್ಟಕಾಮಗಳ ಸಂಪತ್ತಿಯಾಗುವದು. ಮನಸ್ಸೇ ಆಯತನವು ಎಂದು ಉಪಾಸನೆ ಮಾಡಿದರೆ ತನ್ನವರಿಗೂ ಉಳಿದವರಿಗೂ ಆಶ್ರಯವಾಗಿರುತ್ತಾನೆ. ಪ್ರಜನನೇಂದ್ರಿಯವು ಪ್ರಜಾತಿಯು ಎಂದು ಉಪಾಸನೆಮಾಡಿದರೆ ಪ್ರಜಾಪಶುಗಳುಳ್ಳವನಾಗುತ್ತಾನೆ.

೭–೧೩. ಒಮ್ಮೆ ಈ ವಾಗಾದಿಕರಣಗಳು ನಾನು ಹೆಚ್ಚು, ತಾನು ಹೆಚ್ಚು– ಎಂದು ವಿವಾದಮಾಡುತ್ತಾ ಬ್ರಹ್ಮನ ಬಳಿಗೆ ಬಂದವು. ನಮ್ಮಲ್ಲಿ ಯಾರು ವಸಿಷ್ಠರು ?– ಎಂದು ಕೇಳಿದವು. ಯಾವದು ಉತ್ಕ್ರಾಂತವಾದರೆ ಶರೀರವು ಅಮಂಗಲವಾಗಿ ಕಾಣುವದೋ ಅದೇ ವಸಿಷ್ಠವು ಎಂದು ಬ್ರಹ್ಮನು ನುಡಿದನು. ವಾಗಾದಿಗಳು ಒಂದೊಂದಾಗಿ ಶರೀರವನ್ನು ಬಿಟ್ಟು ಕೆಲಕಾಲ ಹೊರಗೆ ಇದ್ದು ಮತ್ತೆ ಶರೀರದ ಬಳಿಗೆ ಬಂದಾಗ ಶರೀರವು ಅಮಂಗಲವಾಗಿ ಕಾಣದೆ ಜೀವಿಸಿಕೊಂಡಿತ್ತು. ಆದರೆ ಮುಖ್ಯಪ್ರಾಣವು ಶರೀರವನ್ನು ಬಿಟ್ಟು ಹೋಗುವದಕ್ಕೆ ಪ್ರಯತ್ನಿಸಲು ಜಾತ್ಯಶ್ವವು ಕಾಲಿಗೆ ಕಟ್ಟಿದ್ದ ಗೂಟಗಳನ್ನು ಕಿತ್ತುಕೊಳ್ಳುವಂತೆ ಇತರ ಕರಣಗಳನ್ನೂ ಸ್ವಸ್ಥಾನದಿಂದ ಕಿತ್ತು ಅಲುಗಾಡಿಸಿತು. ಆಗ ಅವೆಲ್ಲವೂ "ನೀನೇ ನಮ್ಮಲ್ಲಿ ಶ್ರೇಷ್ಠನು ; ಶರೀರವನ್ನು ಬಿಟ್ಟುಹೋಗದಿರು, ನೀನಿಲ್ಲದೆ ನಾವು ಜೀವಿಸಿರಲಾರೆವು" –ಎಂದು ಬೇಡಿಕೊಂಡವು. "ಹಾಗಾದರೆ ನನಗೆ ಉಚಿತವಾದ ಕಾಣಿಕೆಯನ್ನು ತಂದೊಪ್ಪಿಸಿರಿ" ಎಂದು ಪ್ರಾಣವು ಕೇಳಿತು.

೧೪. ವಾಗಾದಿಗಳು ತಮ್ಮ ವಸಿಷ್ಠತ್ವಾದಿಗಳು ಮುಖ್ಯಪ್ರಾಣದ್ದೇ ಎಂದು ಒಪ್ಪಿಕೊಂಡು ಆಯಾ ಗುಣವನ್ನು ಮುಖ್ಯಪ್ರಾಣಕ್ಕೆ ಕಾಣಿಕೆಯಾಗಿ ಒಪ್ಪಿಸಿದವು. ಪ್ರಾಣನಿಗೆ ಯಾವದೂ ಅಭಕ್ಷ್ಯವಿಲ್ಲ. ಹೀಗೆಂದು ಚಿಂತಿಸುವ ಪ್ರಾಣೋಪಾಸಕನು ಪ್ರಾಣನನ್ನೇ ಪಡೆದುಕೊಳ್ಳುವನು. ಊಟಮಾಡುವ ಮುಂಚೆಯೂ ಆಮೇಲೂ ಮಾಡುವ ಶುದ್ಧಾಚಮನವನ್ನು ಪ್ರಾಣಕ್ಕೆ ಹೊದಿಕೆ ಎಂದು ಉಪಾಸನೆಮಾಡಬೇಕು ; ಇದರಿಂದ ಪ್ರಾಣವನ್ನು ಬೆತ್ತಲೆ ಇರಿಸಿದಂತೆ ಆಗುವದಿಲ್ಲ, ಈ ಪ್ರಾಣೋಪಾಸನೆಗೆ ಪ್ರಾಣಸಾಯುಜ್ಯವೇ ಫಲ.

# ಆರನೆಯ ಅಧ್ಯಾಯ– ಎರಡನೆಯ ಬ್ರಾಹ್ಮಣ

(ಸಂಸಾರಗತಿಗಳು)

## ಶ್ವೇತಕೇತುವು ಪಂಚಾಲರಾಜನ ಬಳಿಗೆ ಬಂದದ್ದು

(ಉಪನಿಷತ್ತು)

**ಶ್ವೇತಕೇತುರ್ಹ ವಾ ಆರುಣೇಯಃ ಪಞ್ಚಾಲಾನಾಂ ಪರಿಷದಮಾಜಗಾಮ ಸ ಆಜಗಾಮ ಜೈವಲಿಂ ಪ್ರವಾಹಣಂ ಪರಿಚಾರಯಮಾಣಂ ತಮುದೀಕ್ಷ್ಯಾಭ್ಯುವಾದ ಕುಮಾರಾ೩ ಇತಿ ಸ ಭೋ೩ ಇತಿ ಪ್ರತಿಶುಶ್ರಾವಾನುಶಿಷ್ಟೋಽನ್ವಸಿ ಪಿತ್ರೇತ್ಯೋಮಿತಿ ಹೋವಾಚ ॥ ೧ ॥**

೧. ಆರುಣೇಯ ಶ್ವೇತಕೇತುವು ಪಂಚಾಲರ ಪರಿಷತ್ತಿಗೆ ಬಂದನು: ಅವನು ಪರಿಚರ್ಯೆಯನ್ನು ಮಾಡಿಸಿಕೊಳ್ಳುತ್ತಿದ್ದ ಜೈವಲಿ ಪ್ರವಾಹಣನ ಬಳಿಗೆ ಬಂದನು. (ರಾಜನು) ಅವನನ್ನು ಕಂಡು 'ಕುಮಾರಾ' ಎಂದನು. ಅವನು 'ಭೋಃ (ಸ್ವಾಮಿ)!' ಎಂದನು. 'ನಿಮ್ಮ ತಂದೆಯಿಂದ ಅನುಶಿಷ್ಟನಾಗಿರುವೆಯೊ?' 'ಹೌದು' ಎಂದನು.

## ಕಥೆಯ ಸಂಬಂಧ

(ಭಾಷ್ಯ)

**೪೨೬. 'ಶ್ವೇತಕೇತುರ್ಹ ವಾ ಆರುಣೇಯಃ' ಇತ್ಯಸ್ಯ ಸಂಬನ್ಧಃ। ಖಿಲಾಧಿಕಾರೋಽಯಮ್। ತತ್ರ ಯದನುಕ್ತಂ ತತ್ ಉಚ್ಯತೇ। ಸಪ್ತಮಾಧ್ಯಾಯಾನ್ತೇ ಜ್ಞಾನಕರ್ಮಸಮುಚ್ಚಯಕಾರಿಣಾ ಅಗ್ನೇರ್ಮಾರ್ಗಯಾಚನಂ ಕೃತಮ್। 'ಅಗ್ನೇ ನಯ ಸುಪಥಾ' ಇತಿ (೫-೧೫-೧) ತತ್ರ ಅನೇಕೇಷಾಂ ಪಥಾಂ ಸದ್ಭಾವಃ ಮನ್ತ್ರೇಣ ಸಾಮರ್ಥ್ಯಾತ್ ಪ್ರದರ್ಶಿತಃ 'ಸುಪಥಾ' ಇತಿ ವಿಶೇಷಣಾತ್। ಪನ್ಥಾನಶ್ಚ ಕೃತವಿಪಾಕಪ್ರತಿಪತ್ತಿಮಾರ್ಗಾಃ। ವಕ್ಷ್ಯತಿ ಚ 'ಯತ್ ಕೃತ್ವಾ' (೬-೨-೨) ಇತ್ಯಾದಿ। ತತ್ರ ಚ ಕತಿ ಕರ್ಮವಿಪಾಕಪ್ರತಿಪತ್ತಿಮಾರ್ಗಾಃ ಇತಿ ಸರ್ವಸಂಸಾರಗತ್ಯುಪಸಂಹಾರಾರ್ಥೋಽಯಮ್ ಆರಮ್ಭಃ। ಏತಾವತೀ ಹಿ ಸಂಸಾರಗತಿಃ, ಏತಾವಾನ್ ಕರ್ಮಣೋ ವಿಪಾಕಃ ಸ್ವಾಭಾವಿಕಸ್ಯ ಶಾಸ್ತ್ರೀಯಸ್ಯ ಚ ಸವಿಜ್ಞಾನಸ್ಯ ಇತಿ। ಯದ್ಯಪಿ "ದ್ವಯಾ ಹ ಪ್ರಾಜಾಪತ್ಯಾಃ" (೧-೩-೧) ಇತ್ಯತ್ರ ಸ್ವಾಭಾವಿಕಃ ಪಾಪ್ಮಾ ಸೂಚಿತಃ। ನ ಚ**

ತಸ್ಯೇದಂ ಕಾರ್ಯಮ್ ಇತಿ ವಿಪಾಕಃ ಪ್ರದರ್ಶಿತಃ। ಶಾಸ್ತ್ರೀಯಸ್ಯೈವ ತು ವಿಪಾಕಃ ಪ್ರದರ್ಶಿತಃ ತ್ರ್ಯನ್ನಾತ್ಮಪ್ರತಿಪತ್ತ್ಯನ್ತೇನ । ಬ್ರಹ್ಮವಿದ್ಯಾರಮ್ಭೇ ತದ್ವೈರಾಗ್ಯಸ್ಯ ವಿವಕ್ಷಿತತ್ವಾತ್। ತತ್ರಾಪಿ ಕೇವಲೇನ ಕರ್ಮಣಾ ಪಿತೃಲೋಕಃ, ವಿದ್ಯಯಾ ವಿದ್ಯಾಸಂಯುಕ್ತೇನ ಚ ಕರ್ಮಣಾ ದೇವಲೋಕಃ (೧-೫-೧೬) ಇತ್ಯುಕ್ತಮ್। ತತ್ರ ಕೇನ ಮಾರ್ಗೇಣ ಪಿತೃಲೋಕಂ ಪ್ರತಿಪದ್ಯತೇ ಕೇನ ವಾ ದೇವಲೋಕಮ್ ಇತಿ ನೋಕ್ತಮ್। ತಚ್ಚ ಇಹ ಖಿಲಪ್ರಕರಣೇ ಅಶೇಷತೋ ವಕ್ತವ್ಯಮ್ ಇತ್ಯತ ಆರಭ್ಯತೇ। ಅನ್ತೇ ಚ ಸರ್ವೋಪಸಂಹಾರಃ ಶಾಸ್ತ್ರಸ್ಯ ಇಷ್ಟಃ। ಅಪಿ ಚ ಏತಾವದಮೃತತ್ವಮ್ (೪-೫-೧೫) ಇತ್ಯುಕ್ತಮ್। ನ ಕರ್ಮಣಾ[1] ಅಮೃತತ್ವಾಶಾ ಅಸ್ತಿ (೪-೫-೩) ಇತಿ ಚ। ತತ್ರ ಹೇತುರ್ನೋಕ್ತಃ। ತದರ್ಥಶ್ಚ ಅಯಮಾರಮ್ಭಃ। ಯಸ್ಮಾತ್ ಇಯಂ ಕರ್ಮಣೋ ಗತಿಃ ನ ನಿತ್ಯೇ ಅಮೃತತ್ವೇ ವ್ಯಾಪಾರೋಽಸ್ತಿ ತಸ್ಮಾತ್ ಏತಾವದೇವ ಅಮೃತತ್ವಸಾಧನಮ್ ಇತಿ ಸಾಮರ್ಥ್ಯಾತ್ ಹೇತುತ್ವಂ ಸಂಪದ್ಯತೇ। ಅಪಿ ಚ ಉಕ್ತಮ್ ಅಗ್ನಿಹೋತ್ರೇ—"ನ ತ್ವೇವೈತಯೋಸ್ತ್ವಮುತ್ಕ್ರಾನ್ತಿಂ ನ ಗತಿಂ ನ ಪ್ರತಿಷ್ಠಾಂ ನ ತೃಪ್ತಿಂ ನ ಪುನರಾವೃತ್ತಿಂ ನ ಲೋಕಂ ಪ್ರತ್ಯುತ್ಥಾಯಿನಂ ವೇತ್ಥ"[2] (ಶತ. ಬ್ರಾ. ೧೧-೬-೨-೪) ಇತಿ। ತತ್ರ ಪ್ರತಿವಚನೇ "ತೇ ವಾ ಏತೇ ಆಹುತೀ ಹುತೇ ಉತ್ಕ್ರಾಮತಃ" (ಶತ.ಬ್ರಾ. ೧೧-೬-೨-೬,೭) ಇತ್ಯಾದಿನಾ ಆಹುತೇಃ ಕಾರ್ಯಮುಕ್ತಮ್। ತಚ್ಚೈತತ್ ಕರ್ತುಃ ಆಹುತಿಲಕ್ಷಣಸ್ಯ ಕರ್ಮಣಃ ಫಲಮ್। ನ ಹಿ ಕರ್ತಾರಮ್ ಅನಾಶ್ರಿತ್ಯ ಆಹುತಿಲಕ್ಷಣಸ್ಯ ಕರ್ಮಣಃ ಸ್ವಾತನ್ತ್ರ್ಯೇಣ ಉತ್ಕ್ರಾನ್ತ್ಯಾದಿಕಾರ್ಯಾರಮ್ಭಃ ಉಪಪದ್ಯತೇ। ಕರ್ತ್ರರ್ಥತ್ವಾತ್ ಕರ್ಮಣಃ ಕಾರ್ಯಾರಮ್ಭಸ್ಯ। ಸಾಧನಾಶ್ರಯತ್ವಾಚ್ಚ ಕರ್ಮಣಃ। ತತ್ರ ಅಗ್ನಿಹೋತ್ರಸ್ಯ ಸ್ತುತ್ಯರ್ಥತ್ವಾತ್ ಅಗ್ನಿಹೋತ್ರಸ್ಯೈವ ಕಾರ್ಯಮ್ ಇತ್ಯುಕ್ತಂ ಷಟ್ಪ್ರಕಾರಮಪಿ। ಇಹ ತು ತದೇವ ಕರ್ತುಃ ಫಲಮ್ ಇತ್ಯುಪದಿಶ್ಯತೇ ಷಟ್ಪ್ರಕಾರಮಪಿ। ಕರ್ಮಫಲವಿಜ್ಞಾನಸ್ಯ ವಿವಕ್ಷಿತತ್ವಾತ್। ತದ್ದ್ವಾರೇಣ ಚ ಪಞ್ಚಾಗ್ನಿದರ್ಶನಮ್ ಇಹ ಉತ್ತರಮಾರ್ಗಪ್ರತಿಪತ್ತಿಸಾಧನಂ ವಿಧಿತ್ಸಿತಮ್ । ಏವಮ್ ಅಶೇಷಸಂಸಾರಗತ್ಯುಪಸಂಹಾರಃ ಕರ್ಮಕಾಣ್ಡಸ್ಯ ಏಷಾ ನಿಷ್ಠಾ ಇತ್ಯೇತದ್ದ್ವಯಂ ದಿದರ್ಶಯಿಷುಃ ಆಖ್ಯಾಯಿಕಾಂ ಪ್ರಣಯತಿ ॥

---

1. ಕರ್ಮಣಃ ಎಂಬಿದನ್ನು ಹೀಗೆಂದು ತಿದ್ದಿಕೊಂಡಿದೆ.

2. ಇಲ್ಲಿ ಮಾಧ್ಯಂದಿನಪಾಠದಲ್ಲಿ 'ನ ತ್ವೇವೈನಯೋಃ' ಎಂದಿದೆ; 'ವೇತ್ಥ' ಎಂಬ ಮಾತಿಲ್ಲ. 'ಅಮೀಮಾಗ್ಂಸಿಷ್ಠಾಃ' ಎಂಬ ಹಿಂದಿರುವ ಮಾತನ್ನು ಇಲ್ಲಿ ಅನುವರ್ತನೆಮಾಡಿಕೊಳ್ಳಬೇಕಾಗಿದೆ. ಭಾಷ್ಯದಲ್ಲಿರುವದು ಕಾಣ್ವಪಾಠವಿರಬಹುದೇನೊ.

(ಭಾಷ್ಯಾರ್ಥ)

'ಶ್ವೇತಕೇತುರ್ಹ ವಾ ಆರುಣೇಯಃ' ಎಂಬೀ (ಬ್ರಾಹ್ಮಣದ) ಸಂಬಂಧ (ವೇನೆಂದರೆ): ಇದು ಖಿಲಪ್ರಕರಣವು. ಇಲ್ಲಿ ಹಿಂದೆ ಹೇಳದೆ ಇರುವದನ್ನು ಹೇಳಿರುತ್ತದೆ.

ಏಳನೆಯ ಅಧ್ಯಾಯದ ಕೊನೆಯಲ್ಲಿ ಜ್ಞಾನಕರ್ಮಸಮುಚ್ಚಯವನ್ನು (ಅನುಷ್ಠಾನ)ಮಾಡಿದವನು ಅಗ್ನಿಯನ್ನು "ಅಗ್ನಿಯೆ, ಒಳ್ಳೆಯ ಮಾರ್ಗದಿಂದ ಕರೆದುಕೊಂಡು ಹೋಗು!" (೫-೧೫-೧) ಎಂದು ಪ್ರಾರ್ಥಿಸಿರುತ್ತಾನೆ. ಅಲ್ಲಿ 'ಒಳ್ಳೆಯ ಮಾರ್ಗದಿಂದ' ಎಂದು ವಿಶೇಷಣವಿರುವದರಿಂದ ಅನೇಕ ಮಾರ್ಗಗಳಿವೆ ಎಂದು ಮಂತ್ರವು ಸಾಮರ್ಥ್ಯದಿಂದ ತಿಳಿಸಿಕೊಟ್ಟಂತಾಗಿದೆ. ಮಾರ್ಗಗಳೆಂದರೆ ಮಾಡಿದ್ದರ ವಿಪಾಕವನ್ನು ಪಡೆಯುವ ಹಾದಿಗಳು. ಯಾವದನ್ನು ಮಾಡಿ (ದೇವಯಾನವನ್ನಾಗಲಿ ಪಿತೃಯಾಣವನ್ನಾಗಲಿ ಪಡೆಯುತ್ತಾರೋ)" (೬-೨-೨) ಎಂದು ಮುಂತಾಗಿ ಮುಂದೆಯೂ ಹೇಳಿದೆ. ಇಲ್ಲಿ ಕರ್ಮವಿಪಾಕವನ್ನು ಪಡೆಯುವದಕ್ಕೆ ಮಾರ್ಗಗಳು ಎಷ್ಟು? –ಎಂಬುದನ್ನು ತಿಳಿಸಿ ಇಷ್ಟೇ ಸಂಸಾರಗತಿಯು, ಇಷ್ಟೇ ಸ್ವಾಭಾವಿಕವಾದ, ಮತ್ತು ವಿಜ್ಞಾನಸಹಿತವಾಗಿರುವ ಶಾಸ್ತ್ರೀಯವಾದ, ಕರ್ಮದ ವಿಪಾಕವು ಎಂದು ಸರ್ವಸಂಸಾರಗತಿಗಳನ್ನು ಉಪಸಂಹಾರಮಾಡಿ (ಹೇಳು)ವದಕ್ಕಾಗಿ ಈ (ಗ್ರಂಥವನ್ನು) ಪ್ರಾರಂಭಿಸಿರುತ್ತದೆ.

'ದ್ವಯಾ ಹ ಪ್ರಾಜಾಪತ್ಯಾಃ' (೧-೩-೧) ಎಂಬಲ್ಲಿ ಸ್ವಾಭಾವಿಕವಾದ ಪಾಪವನ್ನು ಸೂಚಿಸಿದೆಯಾದರೂ ಇದು ಅದರ ಕಾರ್ಯವು ಎಂದು (ಪಾಪಕರ್ಮದ) ವಿಪಾಕವನ್ನು ತಿಳಿಸಿಕೊಟ್ಟಿಲ್ಲ; ಬರಿಯ ಶಾಸ್ತ್ರೀಯ(ಕರ್ಮದ) ವಿಪಾಕವನ್ನು ಮಾತ್ರ ತ್ರ್ಯನ್ನಾತ್ಮಪ್ರಾಪ್ತಿಯವರೆಗಿನ[1] (ಗ್ರಂಥದಿಂದ) ತಿಳಿಸಲಾಗಿದೆ, ಏಕೆಂದರೆ ಬ್ರಹ್ಮವಿದ್ಯೆಯನ್ನು ಆರಂಭಿಸುವ (ಸಂದರ್ಭದಲ್ಲಿ) ಆ (ಕರ್ಮಫಲದಲ್ಲಿ) ವೈರಾಗ್ಯ(ವಿರಬೇಕೆಂಬುದು) ವಿವಕ್ಷಿತವಾಗಿತ್ತು. ಅದರಲ್ಲಿಯೂ ಕೇವಲಕರ್ಮದಿಂದ ಪಿತೃಲೋಕವೂ ವಿದ್ಯೆಯಿಂದಲೂ ವಿದ್ಯಾಸಮುಚ್ಚಿತವಾದ ಕರ್ಮದಿಂದಲೂ ದೇವಲೋಕವೂ (ಉಂಟಾಗುತ್ತವೆ) ಎಂದು (೧-೫-೧೬) ಹೇಳಿತ್ತು. ಅಲ್ಲಿ ಯಾವ ಮಾರ್ಗದಿಂದ ಪಿತೃಲೋಕವನ್ನು ಪಡೆಯುತ್ತಾನೆ,ಮತ್ತು ಯಾವ ಮಾರ್ಗದಿಂದ ದೇವಲೋಕವನ್ನು (ಪಡೆಯುತ್ತಾನೆ) ಎಂಬಿದನ್ನು ಹೇಳಿರುವದಿಲ್ಲ. ಅದೆಲ್ಲವನ್ನೂ ಈ ಖಿಲಪ್ರಕರಣದಲ್ಲಿ ಹೇಳಬೇಕೆಂದು (ಈ ಗ್ರಂಥವನ್ನು) ಆರಂಭಿಸಿರುತ್ತದೆ. (ಏಕೆಂದರೆ) ಕೊನೆಯಲ್ಲಿ ಎಲ್ಲವನ್ನೂ ಉಪಸಂಹಾರಮಾಡುವದು (ಈ) ಶಾಸ್ತ್ರಕ್ಕೆ ಇಷ್ಟವಾಗಿರುತ್ತದೆ.

---

1. ಪ್ರಜಾಪತಿತ್ವಪ್ರಾಪ್ತಿಯವರೆಗಿನ ಎಂದರ್ಥ.

ಇದೂ ಅಲ್ಲದೆ 'ಇಷ್ಟೇ ಅಮೃತತ್ವ(ಕಾರಣವು)' (೪-೫-೧೫) ಎಂದು ಹಿಂದೆ ಹೇಳಿರುತ್ತದೆ; ಕರ್ಮದಿಂದ ಅಮೃತತ್ವದ ಆಶೆಯಿಲ್ಲವೆಂದೂ ಹೇಳಿದೆ. (೪-೫-೩) ಅದಕ್ಕೆ ಕಾರಣವನ್ನು ಅಲ್ಲಿ ಹೇಳಿರುವದಿಲ್ಲ. ಅದಕ್ಕಾಗಿಯೂ ಈ (ಗ್ರಂಥವನ್ನು) ಆರಂಭಿಸಿರುತ್ತದೆ. ಇದೇ ಕರ್ಮದ ಗತಿಯು, ನಿತ್ಯವಾದ ಅಮೃತತ್ವದಲ್ಲಿ (ಇದರ) ವ್ಯಾಪಾರವಿರುವದಿಲ್ಲವಷ್ಟೆ; ಆದ್ದರಿಂದ ಇಷ್ಟೇ ಅಮೃತತ್ವಕ್ಕೆ ಸಾಧನವು ಎಂದು ಸಾಮರ್ಥ್ಯದಿಂದ (ಅದಕ್ಕೆ ಇದು) ಹೇತುತ್ವವನ್ನು ಪಡೆದುಕೊಂಡಿರುತ್ತದೆ.

ಇದೂ ಅಲ್ಲದೆ ಅಗ್ನಿಹೋತ್ರದಲ್ಲಿ ಹೀಗೆಂದು ಹೇಳಲಾಗಿದೆ: "ಆದರೆ ನೀನು ಇವೆರಡರ ಉತ್ಕ್ರಾಂತಿಯನ್ನು ಅರಿತೇ ಇಲ್ಲ; ಗತಿಯನ್ನೂ ಅರಿಯೆ! ಪ್ರತಿಷ್ಠೆಯನ್ನೂ ಅರಿಯೆ! ತೃಪ್ತಿಯನ್ನೂ ಅರಿಯೆ, ಮತ್ತೆ ಹಿಂತೆರಳುವದನ್ನೂ ಅರಿಯೆ, ಲೋಕವನ್ನು ಕುರಿತು ಏಳುವವನನ್ನೂ[1] ಅರಿಯೆ[2]!" (ಶತ. ಬ್ರಾ. ೧೧-೬-೨-೪). ಇದಕ್ಕೆ ಪ್ರತಿವಚನವನ್ನು ಹೇಳುವಾಗ[3] "ಆ ಈ ಆಹುತಿಗಳು ಹುತವಾಗಿ ಉತ್ಕ್ರಾಂತವಾಗುತ್ತವೆ." (ಶತ. ಬ್ರಾ. ೧೧-೬-೨-೬ರಿಂದ ೧೦) ಎಂದುಮುಂತಾಗಿರುವ (ವಾಕ್ಯ)ದಿಂದ ಆಹುತಿಯ ಕಾರ್ಯವನ್ನು ಹೇಳಿರುತ್ತದೆ. ಇದು ಕರ್ತೃವಿನ ಆಹುತಿರೂಪಕರ್ಮದ ಫಲವು, ಕರ್ತೃವನ್ನು ಆಶ್ರಯಿಸಿಕೊಳ್ಳದೆ ಆಹುತಿರೂಪವಾದ ಕರ್ಮವು ಸ್ವತಂತ್ರವಾಗಿಯೇ

---

1. ಮಾಧ್ಯಂದಿನಪಾಠದಲ್ಲಿ 'ಲೋಕಃ ಪ್ರತ್ಯುತ್ಥಾಯೀ' ಎಂದು ಪುತ್ರನಿಗೇ ಲೋಕತ್ವವನ್ನು ಹೇಳಿರುವದರಿಂದ 'ಪ್ರತ್ಯುತ್ಥಾಯಿಯಾದ (ಏಳುವ) ಲೋಕವನ್ನು' ಎಂದು ಆ ಪಾಠಕ್ಕೆ ಕನ್ನಡಿಸಬೇಕಾಗುತ್ತದೆ. ಭಾಷ್ಯದಲ್ಲಿ ಕಾಣ್ವಪಾಠವನ್ನೇ ಅನುಸರಿಸಿರುವಂತೆ ಕಾಣುತ್ತದೆ. ಛಾಂ. ಭಾ. ೫-೪-೧ರ ಅವತರಣಿಕೆಯನ್ನು ನೋಡಿ.

2. ಇದು ಜನಕನು ಯಾಜ್ಞವಲ್ಕ್ಯನಿಗೆ ಹೇಳಿದ್ದು. ಶ್ವೇತಕೇತು, ಸೋಮಶುಷ್ಮ, ಯಾಜ್ಞವಲ್ಕ್ಯ -ಇವರನ್ನು ರಾಜನು ನೀವು ಅಗ್ನಿಹೋತ್ರಹೋಮವನ್ನು ಹೇಗೆಹೇಗೆ ಮಾಡುತ್ತೀರಿ? -ಎಂದು ಕೇಳಲು ಅವನು ತಮ್ಮತಮ್ಮ ಅಭಿಪ್ರಾಯವನ್ನು ವರ್ಣಿಸಿದರು; ಅವರಲ್ಲಿ ಯಾಜ್ಞವಲ್ಕ್ಯನು ಹೇಳಿದ ಉತ್ತರವು ತತ್ತ್ವಕ್ಕೆ ಬಹಳ ಹತ್ತಿರವಿದೆ ಎಂದು ಪ್ರಶಂಸಿಸಿ ಅವನಿಗೆ ನೂರು ಧೇನುಗಳನ್ನು ಪಾರಿತೋಷಕವಾಗಿ ಕೊಟ್ಟು ಆದರೂ ನೀನು ಅಗ್ನಿಹೋತ್ರಾಹುತಿಗಳ ಉತ್ಕ್ರಾಂತ್ಯಾದಿಗಳನ್ನು ಸರಿಯಾಗಿ ಅರಿತುಕೊಂಡಿಲ್ಲ ಎಂದು ಹೇಳಿ ಹೊರಟುಹೋದನು. ಆ ಬಳಿಕ ಯಾಜ್ಞವಲ್ಕ್ಯನು ಅವನ ಬಳಿಗೆ ಬಂದು ಜನಕನಿಂದ ನಿಜವಾದ ಅಗ್ನಿಹೋತ್ರೋಪಾಸನೆಯನ್ನು ಕಲಿತುಕೊಂಡನು ಎಂದು ಆಖ್ಯಾಯಿಕೆ.

3. ಇದು ಜನಕನ ಅಭಿಪ್ರಾಯದಲ್ಲಿ ನಿಜವಾದ ಅಗ್ನಿಹೋತ್ರಸ್ವರೂಪವು. ಇದರ ವಿವರವನ್ನು ಛಾಂ. ಭಾ.ದಲ್ಲಿ ವಿವರವಾಗಿ ಹೇಳಿದೆ. ಶತ. ಬ್ರಾ. ಮೂಲವನ್ನೇ ನೋಡಿದರೆ ಇದು ಸ್ಪಷ್ಟತರವಾಗಿರುತ್ತದೆ. ಅಂತರಿಕ್ಷಾದಿಲೋಕಗಳಿಗೆ ಹೋಗಿ ಆಹುತಿಗಳು ಅಲ್ಲಲ್ಲಿ ತೃಪ್ತಿಯನ್ನುಂಟುಮಾಡಿ ಕೊನೆಗೆ ಇಲ್ಲಿಗೆ ಬಂದು ಸ್ತ್ರೀಯಲ್ಲಿ ಪುತ್ರನಾಗುವ ಬಗೆಯನ್ನು ಅಲ್ಲಿ ತಿಳಿಸಿದೆ.

ಉತ್ಕ್ರಾಂತಿಯೇ ಮುಂತಾದ ಕಾರ್ಯವನ್ನುಂಟುಮಾಡುವದು ಹೊಂದಲೇ ಆರದು; ಏಕೆಂದರೆ ಕರ್ಮವು ಕಾರ್ಯವನ್ನುಂಟುಮಾಡುವದು ಕರ್ತೃವಿಗಾಗಿ, ಮತ್ತು ಕರ್ಮವು ಸಾಧನಗಳನ್ನಾಶ್ರಯಿಸಿಕೊಂಡೇ ಇರುತ್ತದೆ. ಅಲ್ಲಿ ಅಗ್ನಿಹೋತ್ರವನ್ನು ಹೊಗಳಬೇಕಾಗಿದ್ದದ್ದರಿಂದ[1] ಈ ಆರು ಪ್ರಕಾರವೂ ಅಗ್ನಿಹೋತ್ರಕ್ಕೇ ಕಾರ್ಯವೆಂದು ಹೇಳಲಾಗಿತ್ತು. ಆದರೆ ಇಲ್ಲಿಯಾದರೆ ಆ ಆರು ಪ್ರಕಾರವೂ ಕರ್ತೃವಿಗೇ ಫಲವು ಎಂದು ಹೇಳಿರುತ್ತದೆ; ಏಕೆಂದರೆ (ಇಲ್ಲಿ) ಕರ್ಮಫಲದ ಉಪಾಸನೆಯನ್ನು ಹೇಳಬೇಕೆಂದು ಹೊರಟಿರುತ್ತದೆ. ಆದರ ಮೂಲಕವಾಗಿ ಇಲ್ಲಿ (ಶ್ರುತಿಯು) ಉತ್ತರಮಾರ್ಗದ ಪ್ರಾಪ್ತಿಗೆ ಸಾಧನವಾದ ಪಂಚಾಗ್ನಿದರ್ಶನವನ್ನು ವಿಧಿಸಬೇಕೆಂದಿರುತ್ತದೆ. ಹೀಗೆ ಸಂಸಾರಗತಿಗಳನ್ನೆಲ್ಲ ಉಪಸಂಹಾರಮಾಡುವದು, ಕರ್ಮಕಾಂಡಕ್ಕೆ ಇದೇ ಕೊನೆ ಎಂಬುದು – ಈ ಎರಡನ್ನೂ ತಿಳಿಸುವದಕ್ಕಾಗಿ (ಶ್ರುತಿಯು) ಕಥೆಯನ್ನು ಕಲ್ಪಿಸಿರುತ್ತದೆ.

## ಶ್ವೇತಕೇತುವಿಗೂ ಜೈವಲಿಗೂ ಸಂಭಾಷಣೆ

(ಭಾಷ್ಯ)

೪೨೭. ಶ್ವೇತಕೇತುರ್ನಾಮತಃ ಅರುಣಸ್ಯ ಅಪತ್ಯಮ್ ಆರುಣಿಃ, ತಸ್ಯಾಪತ್ಯಮ್ ಆರುಣೇಯಃ। ಹಶಬ್ದಃ ಐತಿಹ್ಯಾರ್ಥಃ। ವೈ ನಿಶ್ಚಯಾರ್ಥಃ। ಪಿತ್ರಾ ಅನುಶಿಷ್ಟಃ ಸನ್ ಆತ್ಮನೋ ಯಶಃಪ್ರಥನಾಯ ಪಞ್ಚಾಲಾನಾಂ ಪರಿಷದಮ್ ಆಜಗಾಮ। ಪಞ್ಚಾಲಾಃ ಪ್ರಸಿದ್ಧಾಃ। ತೇಷಾಂ ಪರಿಷದಮ್ ಆಗತ್ಯ ಜಿತ್ವಾ ರಾಜ್ಞೋಽಪಿ ಪರಿಷದಂ ಜೇಷ್ಯಾಮಿ ಇತಿ ಗರ್ವೇಣ ಸ ಆಜಗಾಮ। ಜೀವಲಸ್ಯಾಪತ್ಯಂ ಜೈವಲಿಂ ಪಞ್ಚಾಲರಾಜಂ ಪ್ರವಾಹಣನಾಮಾನಂ ಸ್ವಭೃತ್ಯೈಃ ಪರಿಚಾರಯಮಾಣಮ್ ಆತ್ಮನಃ ಪರಿಚರಣಂ ಕಾರಯನ್ತಮ್ ಇತ್ಯೇತತ್। ಸ ರಾಜಾ ಪೂರ್ವಮೇವ ತಸ್ಯ ವಿದ್ಯಾಭಿಮಾನಗರ್ವಂ ಶ್ರುತ್ವಾ ವಿನೇತವ್ಯೋಽಯಮ್ ಇತಿ ಮತ್ವಾ ತಮ್ ಉದೀಕ್ಷ್ಯ ಉತ್ಪ್ರೇಕ್ಷ್ಯ ಆಗತಮಾತ್ರಮೇವ ಅಭ್ಯುವಾದ ಅಭ್ಯುಕ್ತವಾನ್ ಕುಮಾರಾ೩ ಇತಿ ಸಂಬೋಧ್ಯ। ಭರ್ತ್ಸನಾರ್ಥಾ ಪ್ಲುತಿಃ। ಏವಮುಕ್ತಃ ಸಃ ಪ್ರತಿಶುಶ್ರಾವ ಭೋ೩ ಇತಿ। ಭೋ೩ ಇತಿ ಅಪ್ರತಿರೂಪಮಪಿ ಕ್ಷತ್ರಿಯಂ ಪ್ರತಿ ಉಕ್ತವಾನ್ ಕ್ರುದ್ಧಃ ಸನ್। ಅನುಶಿಷ್ಟಃ ಅನುಶಾಸಿತಃ ಅಸಿ ಭವಸಿ ಕಿಂ ಪಿತ್ರಾ? ಇತಿ ಉವಾಚ ರಾಜಾ। ಪ್ರತ್ಯಾಹ ಇತರಃ। ಓಮ್! ಇತಿ। ಬಾಢಮ್ ಅನುಶಿಷ್ಟೋಽಸ್ಮಿ, ಪೃಚ್ಛ ಯದಿ ಸಂಶಯಸ್ತೇ ॥

1. ಅಲ್ಲಿ ಅಗ್ನಿಹೋತ್ರದ ಆಹುತಿಗಳ ಗತ್ಯಾದಿಗಳನ್ನು ಹೇಳಿರುವದು ಅಗ್ನಿಹೋತ್ರವನ್ನು ಹೊಗಳುವದಕ್ಕೆ; ಏಕೆಂದರೆ ಜನಕನಿಗೂ ಬ್ರಾಹ್ಮಣರಿಗೂ ಅಗ್ನಿಹೋತ್ರ ಸಂಬಂಧವಾದ ಸಂವಾದವೇ ಅಲ್ಲಿ ನಡೆದಿರುತ್ತದೆ. ಇಲ್ಲಿಯಂತೆ ಕೇವಲಕರ್ಮಕ್ಕೆ ದಕ್ಷಿಣಮಾರ್ಗವೇ ಗತಿಯೆಂದು ತಿಳಿಸಿ ಉತ್ತರಮಾರ್ಗವನ್ನು ಹೇಳುವದೇನೂ ಅಲ್ಲಿ ಪ್ರಕೃತವಲ್ಲ.

(ಭಾಷ್ಯಾರ್ಥ)

ಶ್ವೇತಕೇತು ಎಂಬ ಹೆಸರಿನ ಆರುಣೇಯನು, ಅರುಣನ ಮಗನು ಆರುಣಿ, ಅವನ ಮಗನು– ಹ ಎಂಬ ಶಬ್ದವು ಹಿಂದೆ ನಡೆಯಿತು ಎಂಬುದನ್ನು (ತಿಳಿಸು)ವದಕ್ಕೆ ; ವೈ ಎಂಬುದು ನಿಶ್ಚಯ ಎಂಬುದನ್ನು ತಿಳಿಸುವದಕ್ಕೆ– ತಂದೆಯಿಂದ ಅನುಶಾಸನವನ್ನು ಹೊಂದಿ ತನ್ನ ಕೀರ್ತಿಯನ್ನು ಹರಡುವದಕ್ಕಾಗಿ ಪಂಚಾಲರ ಪರಿಷತ್ತಿಗೆ ಬಂದನು; ಪಂಚಾಲರುಗಳು ಪ್ರಸಿದ್ಧರಷ್ಟೆ ; ಅವರ ಪರಿಷತ್ತಿಗೆ ಬಂದು (ಅವರನ್ನು ಜಯಿಸಿ ರಾಜನ ಪರಿಷತ್ತನ್ನೂ[1] ಜಯಿಸುವೆನೆಂಬ ಗರ್ವದಿಂದ ಅವನು ಪರಿಚರ್ಯೆಯನ್ನು ಮಾಡಿಕೊಳ್ಳುತ್ತಿದ್ದ – ಭೃತ್ಯರಿಂದ ಸೇವೆಯನ್ನು ಮಾಡಿಸಿಕೊಳ್ಳುತ್ತಿದ್ದ ಎಂದರ್ಥ– ಜೀವಲನ ಮಗನಾದ ಜೈವಲಿ, ಪ್ರವಾಹಣನೆಂಬ ಹೆಸರಿನ, ಪಂಚಾಲರಾಜನ ಬಳಿಗೆ ಬಂದನು.

ಆ ರಾಜನು ಮೊದಲೇ ಅವನ ವಿದ್ಯಾಭಿಮಾನದ ಗರ್ವವನ್ನು ಕೇಳಿದ್ದು, ಇವನನ್ನು (ದಾರಿಗೆ) ತರಬೇಕು ಎಂದುಕೊಂಡು ಅವನನ್ನು ಕಂಡು ನೋಡಿ (ಇನ್ನೂ) ಬಂದನೆನ್ನುವಾಗಲೆ 'ಕುಮಾರ ! (ಏನೋ ಹುಡುಗ !) ಎಂದು ಸಂಬೋಧಿಸಿ ನುಡಿದನು. (ಮೂಲದಲ್ಲಿ) ಪ್ಲುತವನ್ನು (ಪ್ರಯೋಗಿಸಿರುವದು) ಗದರಿಸುವದೆಂಬರ್ಥದಲ್ಲಿ. ಹೀಗೆನ್ನಲು ಅವನು 'ಭೋಃ' (ಸ್ವಾಮಿ) ಎಂದು ಉತ್ತರವಿತ್ತನು. ಭೋಃ ಎಂದು ಕ್ಷತ್ರಿಯನ ವಿಷಯದಲ್ಲಿ ಹೊಂದುವದಿಲ್ಲವಾದರೂ[2] ಕೋಪದಿಂದ ಕೂಡಿದವನಾಗಿದ್ದದ್ದರಿಂದ (ಹಾಗೆಂದು) ಹೇಳಿದನು.

ತಂದೆಯಿಂದ ಅನುಶಿಷ್ಟನಾಗಿರುವೆಯೊ, ಅನುಶಾಸನಮಾಡಿಕೊಂಡಿರುವೆಯೊ ? –ಎಂದು ರಾಜನು ಕೇಳಿದನು. ಇನ್ನೊಬ್ಬ(ನಾದ ಶ್ವೇತಕೇತುವು) ಓಮ್ ! ಹೌದು, ಅನುಶಿಷ್ಟನಾಗಿರುತ್ತೇನೆ, ನಿನಗೆ ಸಂಶಯವಿದ್ದರೆ ಕೇಳು ಎಂದನು[3].

---

1. ಈ ಮಾತನ್ನು ಹೇಗೆ ಅನ್ವಯಿಸಬೇಕೆಂಬುದು ಸಂಶಯಿತವಾಗಿದೆ. ಪಂಚಾಲರ ಪರಿಷತ್ತನ್ನು ಜಯಿಸಿ ರಾಜನ ಪರಿಷತ್ತನ್ನೂ ಜಯಿಸುವೆನು ಎಂಬ ಗರ್ವದಿಂದ–ಎಂಬುದು ಯಥಾಶ್ರುತವಾಗಿ ಆಗುವ ಅರ್ಥ. ಆಗ ಪಂಚಾಲರ ಪರಿಷತ್ತು, ರಾಜನ ಪರಿಷತ್ತು –ಎಂದು ಎರಡು ಪರಿಷತ್ತುಗಳೆಂದಾಗುತ್ತವೆ, ರಾಜನ ಪರಿಷತ್ತಾದ ಪಂಚಾಲರ ಪರಿಷತ್ತನ್ನು ಎಂದು ಅನ್ವಯಿಸಿದರೆ ಜೇಷ್ಯಾಮಿ – ಜಯಿಸುವೆನು – ಎಂಬ ಪದಕ್ಕೆ ಕರ್ಮವಿಲ್ಲದೆ ಹೋಗುವದು ; 'ರಾಜನನ್ನು ಗೆಲ್ಲುವೆನು' ಎಂಬರ್ಥವನ್ನು ವಾರ್ತಿಕದಲ್ಲಿ ಬರೆದಿದೆ. ಆಗ 'ರಾಜಾನಮಪಿ' ಎಂಬ ಮಾತು ಭಾಷ್ಯದಲ್ಲಿದ್ದು ಕೈಬಿಟ್ಟುಹೋಗಿದೆ ಎಂದು ಕಲ್ಪಿಸಬೇಕಾಗುವದು.

2. ಬ್ರಾಹ್ಮಣನನ್ನೇ ಅಥವಾ ಆಚಾರ್ಯನನ್ನೇ ಭೋಃ ಎಂದು ಸಂಬೋಧಿಸಬೇಕೆಂಬುದು ಧರ್ಮಶಾಸ್ತ್ರಸಮ್ಮತ.

3. ತಿಳಿಸಬೇಕಾಗಿರುವದನ್ನೆಲ್ಲ ತಿಳಿಸಿರುತ್ತೇನೆ ; ನೀನು ವಿದ್ವಾಂಸರಲ್ಲಿ ಇದನ್ನು ಚರ್ಚೆಮಾಡಿ ಯಶಸ್ಸನ್ನು ಪಡೆದುಕೊ ಎಂದು ತಂದೆ ಹೇಳಿದ್ದನು. ಮಗನು ಎಲ್ಲವನ್ನೂ ತಿಳಿದಿದ್ದೇನೆಂಬ ಗರ್ವದಿಂದ ಪಂಚಾಲರ ಪರಿಷತ್ತಿಗೆ ಬಂದು ಅವರನ್ನು ಜಯಿಸಿ ರಾಜನನ್ನೂ ಗೆಲ್ಲುವೆನೆಂದು ಅವನಲ್ಲಿಗೆ ಬಂದಿದ್ದನು.

## ಜೈವಲಿಪ್ರವಾಹಣನ ಪ್ರಶ್ನೆಗಳು

(ಉಪನಿಷತ್ತು)

**ವೇತ್ಥ ಯಥೇಮಾಃ ಪ್ರಜಾಃ ಪ್ರಯತ್ಯೋ ವಿಪ್ರತಿಪದ್ಯನ್ತಾ೩ ಇತಿ ನೇತಿ ಹೋವಾಚ ವೇತ್ಥೋ ಯಥೇಮಂ ಲೋಕಂ ಪುನರಾಪದ್ಯನ್ತಾ೩ ಇತಿ ನೇತಿ ಹೈವೋವಾಚ ವೇತ್ಥೋ ಯಥಾಸೌ ಲೋಕ ಏವಂ ಬಹುಭಿಃ ಪುನಃ ಪುನಃ ಪ್ರಯದ್ಭಿರ್ನ ಸಂಪೂರ್ಯತಾ೩ ಇತಿ ನೇತಿ ಹೈವೋವಾಚ ವೇತ್ಥೋ ಯತಿಥ್ಯಾಮಾಹುತ್ಯಾಗ್ಂ ಹುತಾಯಾಮಾಪಃ ಪುರುಷವಾಚೋ ಭೂತ್ವಾ ಸಮುತ್ಥಾಯ ವದನ್ತೀ೩ ಇತಿ ನೇತಿ ಹೈವೋವಾಚ ವೇತ್ಥೋ ದೇವಯಾನಸ್ಯ ವಾ ಪಥಃ ಪ್ರತಿಪದಂ ಪಿತೃಯಾಣಸ್ಯ ವಾ ಯತ್ಕೃತ್ವಾ ದೇವಯಾನಂ ವಾ ಪನ್ಥಾನಂ ಪ್ರತಿಪದ್ಯನ್ತೇ ಪಿತೃಯಾಣಂ ವಾಪಿ ಹಿ ನ ಋಷೇರ್ವಚಃ ಶ್ರುತಂ ದ್ವೇ ಸೃತೀ ಅಶೃಣವಂ ಪಿತೃಣಾಮಹಂ ದೇವಾನಾಮುತ ಮರ್ತ್ಯಾನಾಂ ತಾಭ್ಯಾಮಿದಂ ವಿಶ್ವಮೇಜತ್ ಸಮೇತಿ ಯದನ್ತರಾ ಪಿತರಂ ಮಾತರಂ ಚೇತಿ ನಾಹಮತ ಏಕಂಚನ ವೇದೇತಿ ಹೋವಾಚ ||**

೨. 'ಈ ಪ್ರಜೆಗಳು ಹೊರಟುಹೋಗಿ ಹೇಗೆ ವಿಭಿನ್ನ (ಮಾರ್ಗಗಳನ್ನು) ಹೊಂದುತ್ತಾರೋ ಬಲ್ಲೆಯ ? 'ಇಲ್ಲ' ಎಂದನು. 'ಮತ್ತು ಹೇಗೆ ಈ ಲೋಕಕ್ಕೆ ಹಿಂತೆರಳುತ್ತಾರೋ ಬಲ್ಲೆಯ?' 'ಇಲ್ಲ' ಎಂದೇ ನುಡಿದನು. ಮತ್ತು ಹೀಗೆ ಬಹು(ಮಂದಿ) ಮತ್ತೆ ಮತ್ತೆ ಸಾಯುತ್ತಿದ್ದರೂ ಆ ಲೋಕವು ಸಂಪೂರ್ಣವಾಗುವದಿಲ್ಲ ಹೇಗೆ, ಬಲ್ಲೆಯ ?' 'ಇಲ್ಲ' ಎಂದೇ ನುಡಿದನು. ಮತ್ತು ಎಷ್ಟನೆಯ ಆಹುತಿಯನ್ನು ಹೋಮಮಾಡಲು ಅಪ್ಪು ಪುರುಷವಾಕ್ಕಾಗಿ ಎದ್ದುನಿಂತು ಮಾತನಾಡುತ್ತದೆ, ಬಲ್ಲೆಯ ?' 'ಇಲ್ಲ' ಎಂದೇ ನುಡಿದನು. 'ಮತ್ತು ದೇವಯಾನಪಂಥದ ಪ್ರತಿಪತ್ತನ್ನಾಗಲಿ, ಪಿತೃಯಾಣ(ಪಂಥದ ಪ್ರತಿಪತ್ತನ್ನಾಗಲಿ, ಯಾವದನ್ನು ಮಾಡಿದರೆ ದೇವಯಾನಪಂಥವನ್ನಾಗಲಿ ಪಿತೃಯಾಣ(ಪಂಥವನ್ನಾಗಲಿ) ಪಡೆಯುತ್ತಾರೊ, ಬಲ್ಲೆಯ ? "ಪಿತೃಗಳದ್ದು ಮತ್ತು ದೇವತೆಗಳದ್ದು ಎಂದು ಮರ್ತ್ಯರಿಗೆ ಎರಡು ಸೃತಿಗಳನ್ನು ನಾನು ಕೇಳಿರುವೆನು. ವಿಶ್ವವು ಅವುಗಳಿಂದ ಹೋಗುವರೆ ಎಲ್ಲವನ್ನೂ ಹೊಂದುವನು ; ಅವು ಪಿತೃವಿಗೂ ಮಾತೃ

ವಿಗೂ ನಡುವೆಯಿರುವವು” (ಋ. ೧೦-೮೮-೧೫) -ಎಂಬ ಋಷಿಯ ವಚನವನ್ನೂ ನಾವು ಕೇಳಿದ್ದೇವೆ’, ‘ಇದರಲ್ಲಿ ಒಂದನ್ನೂ ನಾನು ಅರಿಯೆನು’ ಎಂದನು.

## ಜೈವಲಿಪ್ರವಾಹಣನು ಕೇಳಿದ ಐದು ಪ್ರಶ್ನೆಗಳು

(ಭಾಷ್ಯ)

೪೨೮. ಯದ್ಯೇವಮ್ ವೇತ್ಥ ವಿಜಾನಾಸಿ ಕಿಮ್ ? ಯಥಾ ಯೇನ ಪ್ರಕಾರೇಣ ಇಮಾಃ ಪ್ರಜಾಃ ಪ್ರಸಿದ್ಧಾಃ ಪ್ರಯತ್ಯಃ ಮ್ರಿಯಮಾಣಾಃ ವಿಪ್ರತಿಪದ್ಯನ್ತಾ೩ ಇತಿ ವಿಪ್ರತಿಪದ್ಯನ್ತೇ। ವಿಚಾರಣಾರ್ಥಾ ಪ್ಲುತಿಃ। ಸಮಾನೇನ ಮಾರ್ಗೇಣ ಗಚ್ಛನ್ತೀನಾಂ ಮಾರ್ಗದ್ವೈವಿಧ್ಯಂ ಯತ್ರ ಭವತಿ। ತತ್ರ ಕಾಶ್ಚಿತ್ ಪ್ರಜಾ ಅನ್ಯೇನ ಮಾರ್ಗೇಣ ಗಚ್ಛನ್ತಿ ಕಾಶ್ಚಿತ್ ಅನ್ಯೇನ ಇತಿ ವಿಪ್ರತಿಪತ್ತಿಃ। ಯಥಾ ತಾಃ ಪ್ರಜಾ ವಿಪ್ರತಿಪದ್ಯನ್ತೇ ತತ್ ಕಿಂ ವೇತ್ಥ? ಇತ್ಯರ್ಥಃ। ನೇತಿ ಹೋವಾಚ ಇತರಃ। ತರ್ಹಿ ವೇತ್ಥ ಉ ಯಥಾ ಇಮಂ ಲೋಕಂ ಪುನಃ ಆಪದ್ಯನ್ತಾ೩ ಇತಿ। ಪುನರಾಪದ್ಯನ್ತೇ ಯಥಾ ಪುನರಾಗಚ್ಛನ್ತಿ ಇಮಂ ಲೋಕಮ್। ನೇತಿ ಹೈವ ಉವಾಚ ಶ್ವೇತಕೇತುಃ। ವೇತ್ಥ ಉ ಯಥಾ ಅಸೌ ಲೋಕಃ ಏವಂ ಪ್ರಸಿದ್ಧೇನ ನ್ಯಾಯೇನ ಪುನಃಪುನಃ ಅಸಕೃತ್ ಪ್ರಯದ್ಭಿಃ ಮ್ರಿಯಮಾಣೈಃ ಯಥಾ ಯೇನ ಪ್ರಕಾರೇಣ ನ ಸಂಪೂರ್ಯತಾ೩ ಇತಿ ನ ಸಂಪೂರ್ಯತೇ ಅಸೌ ಲೋಕಃ। ತತ್ ಕಿಂ ವೇತ್ಥ? ನೇತಿ ಹೈವೋವಾಚ। ವೇತ್ಥ ಉ ಯತಿಥ್ಯಾಂ ಯತ್ಸಂಖ್ಯಾಕಾಯಾಮ್ ಆಹುತ್ಯಾಮ್ ಆಹುತೌ ಹುತಾಯಾಮ್ ಆಪಃ ಪುರುಷವಾಚಃ, ಪುರುಷಸ್ಯ ಯಾ ವಾಕ್ ಸೈವ ಯಾಸಾಂ ವಾಕ್, ತಾಃ ಪುರುಷವಾಚೋ ಭೂತ್ವಾ। ಪುರುಷಶಬ್ದವಾಚ್ಯಾ ವಾ ಭೂತ್ವಾ। ಯದಾ ಪುರುಷಾಕಾರಪರಿಣತಾಃ ತದಾ ಪುರುಷವಾಚೋ ಭವನ್ತಿ। ಸಮುತ್ಥಾಯ ಸಮ್ಯಗುತ್ಥಾಯ ಉದ್ಭೂತಾಃ ಸತ್ಯಃ ವದನ್ತೀ೩ ಇತಿ। ನೇತಿ ಹೈವೋವಾಚ। ಯದ್ಯೇವಂ ವೇತ್ಥ ಉ ದೇವಯಾನಸ್ಯ ಪಥಃ ಮಾರ್ಗಸ್ಯ ಪ್ರತಿಪದಮ್—ಪ್ರತಿಪದ್ಯತೇ ಯೇನ ಸಾ ಪ್ರತಿಪತ್। ತಾಂ ಪ್ರತಿಪದಮ್—ಪಿತೃಯಾಣಸ್ಯ ವಾ ಪ್ರತಿಪದಮ್ । ಪ್ರತಿಪಚ್ಛಬ್ದವಾಚ್ಯಮ್ ಅರ್ಥಮ್ ಆಹ । ಯತ್ಕರ್ಮ ಕೃತ್ವಾ ಯಥಾವಿಶಿಷ್ಟಂ ಕರ್ಮ ಕೃತ್ವಾ ಇತ್ಯರ್ಥಃ। ದೇವಯಾನಂ ವಾ ಪನ್ಥಾನಂ ಮಾರ್ಗಂ ಪ್ರತಿಪದ್ಯನ್ತೇ ಪಿತೃಯಾಣಂ ವಾ ಯತ್ಕರ್ಮ ಕೃತ್ವಾ ಪ್ರತಿಪದ್ಯನ್ತೇ ತತ್ಕರ್ಮ ಪ್ರತಿಪದ್ ಉಚ್ಯತೇ । ತಾಂ ಪ್ರತಿಪದಂ ಕಿಂ ವೇತ್ಥ? ದೇವಲೋಕಪಿತೃಲೋಕಪ್ರತಿಪತ್ತಿಸಾಧನಂ ಕಿಂ ವೇತ್ಥ? ಇತ್ಯರ್ಥಃ ॥

(ಭಾಷ್ಯಾರ್ಥ)

ಹಾಗಾದರೆ ಬಲ್ಲೆಯು, ತಿಳಿದಿರುವೆಯು? ಏನನ್ನು? ಎಂದರೆ ಹೇಗೆ ಯಾವ ಪ್ರಕಾರದಿಂದ ಈ ಪ್ರಸಿದ್ಧರಾದ ಪ್ರಜೆಗಳು ಹೊರಟುಹೋಗಿ ಸಾಯುವವರಾಗಿ (ವಿಪ್ರತಿಪದ್ಯನ್ತಾ೩ ಇತಿ= ವಿಪ್ರತಿಪದ್ಯನ್ತೇ) ಮೂಲದಲ್ಲಿ ವಿಚಾರಣಾರ್ಥದಲ್ಲಿ ಪ್ಲುತ(ವನ್ನು ಪ್ರಯೋಗಿಸಿದೆ). ವಿಭಿನ್ನಮಾರ್ಗವನ್ನು ಹೊಂದುತ್ತಾರೆ, (ಬಲ್ಲೆಯು)? ಅದೇ ಮಾರ್ಗದಲ್ಲಿ ಹೋಗುತ್ತಿರುವ (ಪ್ರಜೆಗಳಿಗೆ) ಎಲ್ಲಿ ಎರಡು ಬಗೆಯ ಮಾರ್ಗವು ಆಗುತ್ತದೆಯೋ, ಅಲ್ಲಿ ಕೆಲವರು ಪ್ರಜೆಗಳು ಒಂದು ಮಾರ್ಗದಿಂದ ಹೋಗುತ್ತಾರೆ, ಕೆಲವರು ಮತ್ತೊಂದು ಮಾರ್ಗದಿಂದ (ಹೋಗುತ್ತಾರೆ); ಇದೇ ವಿಪ್ರತಿಪತ್ತಿ (ವಿಭಿನ್ನಮಾರ್ಗವನ್ನು ಹೊಂದುವದು). ಆ ಪ್ರಜೆಗಳು ಹೇಗೆ ವಿಪ್ರತಿಪತ್ತಿಯನ್ನು ಪಡೆಯುವರೋ ಆದನ್ನು ಬಲ್ಲೆಯೇನು? ಎಂದರ್ಥ. ಇನ್ನೊಬ್ಬ(ನಾದ ಶ್ವೇತಕೇತುವು) ಇಲ್ಲ, ಎಂದನು.

ಹಾಗಾದರೆ ಈ ಲೋಕವನ್ನು ಮತ್ತೆ ಹೇಗೆ ಪಡೆಯುತ್ತಾರೋ, ಮತ್ತೆ ಹೇಗೆ ಹಿಂತೆರಳುತ್ತಾರೋ ಬಲ್ಲೆಯು? ಎನ್ನಲು ಶ್ವೇತಕೇತುವು ಇಲ್ಲ ಎಂದೇ ನುಡಿದನು.

ಮತ್ತು ಹೇಗೆ ಹೀಗೆ ಈ ಪ್ರಸಿದ್ಧವಾದ ನ್ಯಾಯದಿಂದ ಮತ್ತೆಮತ್ತೆ ಹಲವು ಬಾರಿ ಹೊರಟುಹೋಗುತ್ತಿರುವ ಸಾಯುತ್ತಿರುವ (ಪ್ರಜೆಗಳಿಂದ) ಆ ಲೋಕವು ಯಾವ ಪ್ರಕಾರದಿಂದ ಸಂಪೂರ್ಣವಾಗದೆ ಇದೆ, ಆ ಲೋಕವು ತುಂಬಿಕೊಳ್ಳದೆ ಇರುತ್ತದೆ, ಅದನ್ನು ಬಲ್ಲೆಯೇನು? ಇಲ್ಲ ಎಂದೇ (ಅವನು) ನುಡಿದನು.

ಮತ್ತು ಎಷ್ಟನೆಯ, ಯಾವ ಸಂಖ್ಯೆಯ ಆಹುತಿಯನ್ನು ಹೋಮ ಮಾಡಿದರೆ ಅಪ್ಪು, ಪುರುಷವಾಕ್ಕಾಗಿ—ಪುರುಷನ ವಾಕ್ಕು ಯಾವದಕ್ಕೆ ವಾಕ್ಕೋ ಅದು ಪುರುಷವಾಕ್ಕು—ಹಾಗೆ ಪುರುಷವಾಕ್ಕಾಗಿ, ಅಥವಾ ಪುರುಷ ಎಂಬ ಶಬ್ದಕ್ಕೆ ವಾಚ್ಯವಾಗಿ—ಯಾವಾಗ ಪುರುಷಾಕಾರವಾಗಿ ಪರಿಣಮಿಸುವದೋ ಆಗ (ಅದು) ಪುರುಷವಾಕ್ಕಾಗುವದು. (ಹೀಗೆ) ಪುರುಷವಾಕ್ಕಾಗಿ ಎದ್ದುನಿಂತು, ಚೆನ್ನಾಗಿ ನಿಂತು, ಹುಟ್ಟಿದ್ದಾಗಿ ಮಾತಾಡುತ್ತದೆ, ಬಲ್ಲೆಯು? 'ಇಲ್ಲ' ಎಂದೇ ನುಡಿದನು.

ಹಾಗಾದರೆ ದೇವಯಾನದ ಪಂಥದ ಮಾರ್ಗದ ಪ್ರತಿಪತ್ತನ್ನಾಗಲಿ ಪಿತೃಯಾಣದ ಪ್ರತಿಪತ್ತನ್ನಾಗಲಿ—ಪ್ರತಿಪತ್ತೆಂಬ ಶಬ್ದಕ್ಕೆ ವಾಚ್ಯವಾದ ಅರ್ಥವನ್ನು ತಿಳಿಸುತ್ತಾನೆ. ಯಾವ ಕರ್ಮವನ್ನು ಮಾಡಿ, ಇಂಥ ಕರ್ಮವನ್ನು ಮಾಡಿದರೆ ಎಂದರ್ಥ. ದೇವಯಾನವೆಂಬ ಪಂಥವನ್ನು ಮಾರ್ಗವನ್ನು ಪಡೆಯ .ತ್ತಾರೋ, ಪಿತೃಯಾಣವೆಂಬ (ಪಂಥವನ್ನಾಗಲಿ) ಯಾವ ಕರ್ಮ

ವನ್ನು ಮಾಡಿದರೆ ಪಡೆಯುತ್ತಾರೋ ಆ ಕರ್ಮಕ್ಕೆ ಪ್ರತಿಪತ್ತಿ ಎಂದು ಹೆಸರು. ಆ ಪ್ರತಿಪತ್ತನ್ನು—ಬಲ್ಲೆಯೇನು? ದೇವಲೋಕಪಿತೃಲೋಕಗಳ ಪ್ರಾಪ್ತಿಯ ಸಾಧನವನ್ನು ಬಲ್ಲೆಯೇನು? ಎಂದರ್ಥ.

## ಮಾರ್ಗದ್ವಯಪ್ರಕಾಶಕವಾದ ಮಂತ್ರ

(ಭಾಷ್ಯ)

೪೨೯. ಅಪಿ ಅತ್ರ ಅಸ್ಯಾರ್ಥಸ್ಯ ಪ್ರಕಾಶಕಮ್ ಋಷೇಃ ಮನ್ತ್ರಸ್ಯ ವಚಃ ವಾಕ್ಯಮ್ ನಃ ಶ್ರುತಮಸ್ತಿ। ಮನ್ತ್ರೋಽಪಿ ಅಸ್ಯಾರ್ಥಸ್ಯ ಪ್ರಕಾಶಕೋ ವಿದ್ಯತ ಇತ್ಯರ್ಥಃ। ಕೋಽಸೌ ಮನ್ತ್ರಃ ಇತಿ? ಉಚ್ಯತೇ। ದ್ವೇ ಸೃತೀ ದ್ವೌ ಮಾರ್ಗೌ ಅಶೃಣವಂ ಶ್ರುತವಾನ್ ಅಸ್ಮಿ। ತಯೋಃ ಏಕಾ ಪಿತೄಣಾಂ ಪ್ರಾಪಿಕಾ ಪಿತೃಲೋಕಸಂಬದ್ಧಾ। ತಯಾ ಸೃತ್ಯಾ ಪಿತೃಲೋಕಂ ಪ್ರಾಪ್ನೋತಿ ಇತ್ಯರ್ಥಃ। ಅಹಮ್ ಅಶೃಣವಮ್ ಇತಿ ವ್ಯವಹಿತೇನ ಸಂಬನ್ಧಃ। ದೇವಾನಾಮ್ ಉತ ಅಪಿ ದೇವಾನಾಂ ಸಂಬನ್ಧಿನೀ ಅನ್ಯಾ। ದೇವಾನ್ ಪ್ರಾಪಯತಿ ಸಾ। ಕೇ ಪುನಃ ಉಭಾಭ್ಯಾಂ ಸೃತಿಭ್ಯಾಂ ಪಿತೄನ್ ದೇವಾಂಶ್ಚ ಗಚ್ಛನ್ತೀತಿ? ಉಚ್ಯತೇ। ಉತ ಅಪಿ ಮರ್ತ್ಯಾನಾಂ ಮನುಷ್ಯಾಣಾಂ ಸಂಬನ್ಧಿನ್ಯೌ। ಮನುಷ್ಯಾ ಏವ ಹಿ ಸೃತಿಭ್ಯಾಂ ಗಚ್ಛನ್ತಿ ಇತ್ಯರ್ಥಃ। ತಾಭ್ಯಾಂ ಸೃತಿಭ್ಯಾಮ್ ಇದಂ ವಿಶ್ವಂ ಸಮಸ್ತಮ್ ಏಜತ್ ಸಮೇತಿ ಸಂಗಚ್ಛತೇ। ತೇ ಚ ದ್ವೇ ಸೃತೀ ಯದನ್ತರಾ ಯಯೋರನ್ತರಾ ಯದನ್ತರಾ ಪಿತರಂ ಮಾತರಂ ಚ। ಮಾತಾಪಿತ್ರೋಃ ಅನ್ತರಾ ಮಧ್ಯೇ ಇತ್ಯರ್ಥಃ। ಕೌ ತೌ ಮಾತಾಪಿತರೌ? ದ್ಯಾವಾಪೃಥಿವ್ಯೌ ಅಣ್ಡಕಪಾಲೇ। "ಇಯಂ ವೈ ಮಾತಾ ಅಸೌ ಪಿತಾ" (ಶತ. ಬ್ರಾ. ೧೩-೩-೯-೭) ಇತಿ ಹಿ ವ್ಯಾಖ್ಯಾತಂ ಬ್ರಾಹ್ಮಣೇನ। ಅಣ್ಡಕಪಾಲಯೋರ್ಮಧ್ಯೇ ಸಂಸಾರವಿಷಯೇ ಏವ ಏತೇ ಸೃತೀ ನ ಆತ್ಯನ್ತಿಕಾಮೃತತ್ವಗಮನಾಯ। ಇತರ ಆಹ। ನ ಅಹಮ್ ಅತಃ ಅಸ್ಮಾತ್ ಪ್ರಶ್ನಸಮುದಾಯಾತ್ ಏಕಂಚನ ಏಕಮಪಿ ಪ್ರಶ್ನಮ್ ನ ವೇದ। ನಾಹಂ ವೇದ ಇತಿ ಹೋವಾಚ ಶ್ವೇತಕೇತುಃ॥

(ಭಾಷ್ಯಾರ್ಥ)

ಮತ್ತು ಈ ಅರ್ಥವನ್ನು ತಿಳಿಸುವ ಋಷಿಯ ಎಂದರೆ ಮಂತ್ರದ ವಚನವು ವಾಕ್ಯವು ನಮಗೆ ಶ್ರುತವಾಗಿದೆ. ಈ ಅರ್ಥವನ್ನು ತಿಳಿಸುವ ಮಂತ್ರವೂ ಇದೆ ಎಂದರ್ಥ.

ಈ ಮಂತ್ರವು ಯಾವದು? ಎಂದರೆ ಹೇಳುತ್ತೇನೆ. ಎರಡು ಸೃತಿಗಳನ್ನು ಎರಡು ಮಾರ್ಗಗಳನ್ನು ಕೇಳಿರುತ್ತೇನೆ, ಕೇಳಿದವನಾಗಿರುತ್ತೇನೆ.

ಅವುಗಳಲ್ಲಿ ಒಂದು ಪಿತೃಗಳದ್ದು, (ಪಿತೃಗಳನ್ನು) ಪಡೆಯಿಸತಕ್ಕದ್ದು, ಪಿತೃಲೋಕಕ್ಕೆ ಸಂಬಂಧಪಟ್ಟದ್ದು ; ಆ ಸೃತಿಯಿಂದ ಪಿತೃಲೋಕವನ್ನು ಪಡೆಯುತ್ತಾನೆ ಎಂದರ್ಥ. 'ಅಹಮ್ ಅಶೃಣವಮ್' ಎಂದು ವ್ಯವಹಿತವಾಗಿರುವದರೊಡನೆ (ಅಹಂಶಬ್ದವನ್ನು) ಅನ್ವಯಿಸಿಕೊಳ್ಳಬೇಕು. (ಉತ=ಅಪಿ) ಮತ್ತು ದೇವಲೋಕಗಳ ಸಂಬಂಧಿಯಾದ (ಸೃತಿ) ಇನ್ನೊಂದು, ಆ (ಸೃತಿಯು) ದೇವತೆಗಳನ್ನು ಪಡೆಯಿಸುತ್ತದೆ.

ಎರಡು ಸೃತಿಗಳಿಂದ ಪಿತೃಗಳನ್ನೂ ದೇವತೆಗಳನ್ನೂ ಹೋಗಿ ಸೇರುವವರು ಯಾರು ? ಎಂದರೆ (ಮಂತ್ರವು) ಹೇಳುತ್ತದೆ. (ಉತ=ಅಪಿ) ಮತ್ತು ಮರ್ತ್ಯರ ಎಂದರೆ ಮನುಷ್ಯರ ಸಂಬಂಧಿಗಳು. ಮನುಷ್ಯರೇ (ಈ ಎರಡು) ಸೃತಿಗಳಿಂದ ಹೋಗುತ್ತಾರೆ ಎಂದರ್ಥ. ಆ ಸೃತಿಗಳಿಂದ (ಏಜತ್=ಗಚ್ಛತಿ) ಹೋಗುವದಾಗಿ ಈ (ವಿಶ್ವಮ್=ಸಮಸ್ತಮ್) ಎಲ್ಲವೂ (ಸಮೇತಿ=ಸಂಗಚ್ಛತೇ) ಸೇರುತ್ತದೆ.[1] ಮತ್ತು ಈ ಸೃತಿಗಳೆರಡೂ (ಯದನ್ತರಾ=ಯಯೋರನ್ತರಾ), ಪಿತೃ ಮತ್ತು ಮಾತೃ ಎಂಬ ಯಾವುಗಳೆರಡರ ನಡುವೆಯಿವೆ, ಮಾತಾಪಿತೃಗಳ ನಡುವ, ಮಧ್ಯದಲ್ಲಿ ಇವೆ ಎಂದರ್ಥ.[2] ಆ ಮಾತಾಪಿತೃಗಳು ಯಾವವು? ದ್ಯಾವಾಪೃಥಿವಿಗಳೆಂಬ ಅಂಡಕಪಾಲಗಳು. "ಈ (ಭೂಮಿಯೇ) ಮಾತೃ, ಆ (ದ್ಯುಲೋಕವೇ) ಪಿತೃ" (ಶತ. ಬ್ರಾ. ೧೩-೨-೯-೭) ಎಂದಲ್ಲವೆ, ಬ್ರಾಹ್ಮಣದಲ್ಲಿ (ಮಾತಾಪಿತೃಶಬ್ದಗಳನ್ನು) ವ್ಯಾಖ್ಯಾನಮಾಡಿದೆ? ಈ ಸೃತಿಗಳು ಅಂಡಕಪಾಲಗಳ ನಡುವೆ ಸಂಸಾರವಿಷಯವಾಗಿಯೇ ಇರುತ್ತವೆ, ಆತ್ಯಂತಿಕವಾದ ಅಮೃತತ್ವವನ್ನು ಹೊಂದುವದಕ್ಕೆ (ಇವು ಮಾರ್ಗ)ಗಳಲ್ಲ.

---

1. ಈ ಭಾಷ್ಯವಾಕ್ಯಕ್ಕೆ ಅನ್ವಯವೂ ಅರ್ಥವೂ ಸಂದಿಗ್ಧವಾಗಿದೆ. ಏಜತ್ ಗಚ್ಛತ್ ವಿಶ್ವಂ ಸಮಸ್ತಂ ಸಮೇತಿ ಸಂಗಚ್ಛತೇ– ಹೋಗುವವೆಲ್ಲವೂ ಆ ಎರಡು ಮಾರ್ಗಗಳಿಂದಲೇ (ಭೋಗಕ್ಕೆ ಹೋಗುವದು, ಅಥವಾ ಭೋಗವನ್ನು ಹೊಂದುವದು) ಎಂದು ಒಂದು ಬಗೆಯ ಅರ್ಥವಾಗುತ್ತದೆ ; ವಾರ್ತಿಕವು ಇದಕ್ಕೆ ಹೊಂದುಗೆಯಾಗಿರುತ್ತದೆ. "ವಿಶ್ವಂ ಸಾಧ್ಯಸಾಧನಾತ್ಮಕಂ ಸಂಗಚ್ಛತೇ ಗನ್ತವ್ಯತ್ವೇನ ಗನ್ತೃತ್ವೇನ ಚ ಇತಿ ಶೇಷಃ" ಎಂದು ಟೀಕೆ. ಸಾಧ್ಯಸಾಧನಾತ್ಮಕವಾದದ್ದೆಲ್ಲವೂ ಗಂತವ್ಯ, ಗಂತೃ– ಎಂಬ ರೀತಿಯಿಂದ ಆ ಎರಡು ಮಾರ್ಗಗಳೊಡನೆ ಸಂಬದ್ಧವಾಗಿದೆ ಎಂದು ಅದಕ್ಕೆ ಅರ್ಥ. ದ್ಯಾವಾಪೃಥಿವಿಗಳ ನಡುವೆ ಯಾವಯಾವದು ಇದೆಯೋ ಅದನ್ನು ಈ ಮಾರ್ಗಗಳಿಂದ ಹೋಗುವದೆಲ್ಲ ಸೇರುತ್ತದೆ ಎಂದು ಸಾಯಣಸಮ್ಮತವಾದ ಅರ್ಥ.

2. 'ಯದನ್ತರಾ' ಎಂಬುದಕ್ಕೆ ಯಯೋರನ್ತರಾ ಎಂದು ಭಾಷ್ಯದಲ್ಲಿ ತೋರಿಸಿರುವ ವಿಗ್ರಹವಾಕ್ಯದಲ್ಲಿ ಯತ್ ಎಂಬುದಕ್ಕೆ ಮಾತರಂ ಪಿತರಂ – ಎಂಬಿವುಗಳ ಪರಾಮರ್ಶಕತ್ವವು ಕ್ಲೇಶದಿಂದ ಲಭ್ಯವಾಗುತ್ತದೆ. ದ್ಯಾವಾಪೃಥಿವಿಗಳ ನಡುವೆಯಿರುವದೆಲ್ಲವನ್ನೂ ಪಡೆಯುತ್ತಾನೆ ಎಂಬ ಸಾಯಣವ್ಯಾಖ್ಯಾನವು ಸರಳವಾಗಿದೆ. ಹೀಗಿದ್ದರೂ ಭಾಷ್ಯದಲ್ಲಿ ಕ್ಲಿಷ್ಟಾನ್ವಯವನ್ನು ಸ್ವೀಕರಿಸಿರುವದೇಕೆಂಬುದು ವಿಚಾರಣೀಯವಾಗಿದೆ.

(ಇದನ್ನು ಕೇಳಿ) ಇನ್ನೊಬ್ಬನಾದ ಶ್ವೇತಕೇತುವಿಂತೆಂದನು. ಈ ಪ್ರಶ್ನೆ ಸಮುದಾಯದಲ್ಲಿ ಒಂದನ್ನಾದರೂ ಒಂದು ಪ್ರಶ್ನೆಯನ್ನಾದರೂ ಅರಿಯೆನು, ನಾನು ತಿಳಿಯೆನು ಎಂದು ಹೇಳಿದನು.

## ಶ್ವೇತಕೇತುವು ತಂದೆಗೆ ತನ್ನ ಸೋಲನ್ನು ತಿಳಿಸಿದ್ದು

(ಉಪನಿಷತ್ತು)

**ಅಥೈನಂ ವಸತ್ಯೋಪಮನ್ತ್ರಯಾಂಚಕ್ರೇಽನಾದೃತ್ಯ ವಸತಿಂ ಕುಮಾರಃ ಪ್ರದುದ್ರಾವ ಸ ಆಜಗಾಮ ಪಿತರಂ ತಗ್ಂ ಹೋವಾಚೇತಿ ವಾವ ಕಿಲ ನೋ ಭವಾನ್ ಪುರಾನುಶಿಷ್ಟಾನವೋಚ ಇತಿ ಕಥಗ್ಂ ಸುಮೇಧ ಇತಿ ಪಞ್ಚ ಮಾ ಪ್ರಶ್ನಾನ್ ರಾಜನ್ಯಬನ್ಧುರಪ್ರಾಕ್ಷೀತ್ ತತೋ ನೈಕಂಚನ ವೇದೇತಿ ಕತಮೇ ತ ಇತೀಮ ಇತಿ ಹ ಪ್ರತೀಕಾನ್ಯುದಾಜಹಾರ ॥ ೩ ॥**

೩. ಆಗ ಇವನನ್ನು ಇರುವದಕ್ಕೆ ಕರೆದನು. ಕುಮಾರನು ವಸತಿಯನ್ನು ಅನಾದರಮಾಡಿ ಹಿಂತೆರಳಿದನು. ಅವನು ತಂದೆಯ ಬಳಿಗೆ ಓಡಿಬಂದನು. "ಹೀಗಲ್ಲವೆ, ನಮ್ಮನ್ನು ನೀನು ಹಿಂದೆ ಅನುಶಿಷ್ಟರೆಂದು ಹೇಳಿದ್ದು?" ಎಂದು ಅವನನ್ನು ಕುರಿತು ಹೇಳಿದನು. 'ಸುಮೇಧನೆ, ಹೇಗೆ?' (ಎನ್ನಲು) 'ರಾಜನ್ಯಬಂಧುವು ಐದು ಪ್ರಶ್ನೆಗಳನ್ನು ಕೇಳಿದನು! ಅವುಗಳಲ್ಲಿ ಒಂದನ್ನೂ ನಾನರಿಯೆನು' ಎಂದನು. 'ಅವು ಯಾವವು?' 'ಇವು' ಎಂದು ಅವನು ಪ್ರತೀಕಗಳನ್ನು ತಿಳಿಸಿದನು.

## ರಾಜನ ಸತ್ಕಾರವನ್ನೊಲ್ಲದೆ ಶ್ವೇತಕೇತು ಹಿಂತಿರುಗಿದ್ದು

(ಭಾಷ್ಯ)

**೪೩೦. ಅಥ ಅನನ್ತರಮ್ ಅಪನೀಯ ವಿದ್ಯಾಭಿಮಾನಗರ್ವಮ್ ಏನಂ ಪ್ರಕೃತಂ ಶ್ವೇತಕೇತುಮ್, ವಸತ್ಯಾ ವಸತಿಪ್ರಯೋಜನೇನ ಉಪಮನ್ತ್ರಯಾಂಚಕ್ರೇ । ಇಹ ವಸನ್ತು ಭವನ್ತಃ । ಪಾದ್ಯಮ್ ಅರ್ಘ್ಯಂ ಚ ಆನೀಯತಾಮ್— ಇತಿ ಉಪಮನ್ತ್ರಣಂ ಕೃತವಾನ್ ರಾಜಾ । ಅನಾದೃತ್ಯ ತಾಂ ವಸತಿಂ ಕುಮಾರಃ ಶ್ವೇತಕೇತುಃ ಪ್ರದುದ್ರಾವ ಪ್ರತಿಗತವಾನ್ ಪಿತರಂ ಪ್ರತಿ ॥**

(ಭಾಷ್ಯ)

ಆಗ, ವಿದ್ಯಾಭಿಮಾನದ ಗರ್ವವನ್ನು ತೊಲಗಿಸಿ ಆ ಬಳಿಕ ಈ ಪ್ರಕೃತನಾದ ಶ್ವೇತಕೇತುವನ್ನು ಇರುವದಕ್ಕೆ ವಾಸವೆಂಬ ಪ್ರಯೋಜನಕ್ಕಾಗಿ ಕರೆದನು. "ತಾವು ಇಲ್ಲಿ ವಾಸಮಾಡಿಕೊಂಡಿರಬೇಕು, ಪಾದ್ಯವನ್ನೂ ಅರ್ಘ್ಯವನ್ನೂ (ಯಾರಾದರೂ) ತರಲಿ!" ಎಂದು ರಾಜನು ಪ್ರಾರ್ಥನೆಯನ್ನು ಮಾಡಿ ಕರೆದನು. ಆ ವಾಸ(ಪ್ರಾರ್ಥನೆ)ಯನ್ನು ಅಸಡ್ಡೆಮಾಡಿ ಕುಮಾರನಾದ ಶ್ವೇತಕೇತುವು ತಂದೆಯ ಬಳಿಗೆ ಓಡಿಬಂದನು, ಹಿಂತಿರುಗಿದನು.

## ತಂದೆಗೆ ರಾಜನ ಪ್ರಶ್ನೆಗಳನ್ನು ತಿಳಿಸಿದ್ದು

(ಭಾಷ್ಯ)

೪೩೧. ಸ ಚ ಆಜಗಾಮ ಪಿತರಮ್ । ಆಗತ್ಯ ಚ ಉವಾಚ ತಮ್ । ಕಥಮ್ ? ಇತಿ ವಾವ ಕಿಲ ಏವಂ ಕಿಲ ನಃ ಅಸ್ಮಾನ್ ಭವಾನ್ ಪುರಾ ಸಮಾವರ್ತನಕಾಲೇ ಅನುಶಿಷ್ಟಾನ್ ಸರ್ವಾಭಿರ್ವಿದ್ಯಾಭಿಃ ಅವೋಚಃ ಅವೋಚತ್ ಇತಿ । ಸೋಪಾಲಮ್ಭಂ ಪುತ್ರಸ್ಯ ವಚಃ ಶ್ರುತ್ವಾ ಆಹ ಪಿತಾ । ಕಥಂ ಕೇನ ಪ್ರಕಾರೇಣ ತವ ದುಃಖಮ್ ಉಪಜಾತಮ್ ? ಹೇ ಸುಮೇಧಃ । ಶೋಭನಾ ಮೇಧಾ ಯಸ್ಯ ಇತಿ ಸುಮೇಧಾಃ। ಶೃಣು ಮಮ ಯಥಾ ವೃತ್ತಮ್। ಪಞ್ಚ ಪಞ್ಚಸಂಖ್ಯಾಕಾನ್ ಪ್ರಶ್ನಾನ್ ಮಾ ಮಾಂ ರಾಜನ್ಯಬನ್ಧುಃ ರಾಜನ್ಯಾ ಬನ್ಧವೋ ಯಸ್ಯ ಇತಿ । ಪರಿಭವವಚನಮೇತತ್ ರಾಜನ್ಯಬನ್ಧುಃ ಇತಿ । ಅಪ್ರಾಕ್ಷೀತ್ ಪೃಷ್ಟವಾನ್ । ತತಃ ತಸ್ಮಾತ್ ನ ಏಕಂಚನ ಏಕಮಪಿ ನ ವೇದ ನ ವಿಜ್ಞಾತವಾನಸ್ಮಿ । ಕತಮೇ ತೇ ರಾಜ್ಞಾ ಪೃಷ್ಟಾಃ ಪ್ರಶ್ನಾಃ ?–ಇತಿ ಪಿತ್ರಾ ಉಕ್ತಃ ಪುತ್ರಃ 'ಇಮೇ ತೇ' ಇತಿ ಹ ಪ್ರತೀಕಾನಿ ಮುಖಾನಿ ಪ್ರಶ್ನಾನಾಮ್ ಉದಾಜಹಾರ ಉದಾಹೃತವಾನ್ ॥

(ಭಾಷ್ಯಾರ್ಥ)

ಮತ್ತು ಅವನು ತಂದೆಯ ಬಳಿಗೆ ಬಂದನು; ಬಂದು ಅವನನ್ನು ಕುರಿತು ಇಂತೆಂದನು. ಹೇಗೆಂದರೆ, "ಹೀಗಲ್ಲವೆ, ಈ ರೀತಿಯಲ್ಲಲ್ಲವೆ (ನಃ= ಅಸ್ಮಾನ್) ನಮ್ಮುಗಳನ್ನು ಹಿಂದೆ ಎಂದರೆ ಸಮಾವರ್ತನಮಾಡಿದ ಕಾಲದಲ್ಲಿ ಸರ್ವವಿದ್ಯೆಗಳಲ್ಲಿಯೂ ಅನುಶಾಸನಮಾಡಿರುವೆನೆಂದು (ಅವೋಚಃ= ಅವೋಚತ್)[1] ಹೇಳಿದೆ[2] ?" ಮಗನ ಮೂದಲಿಸುವ ಮಾತನ್ನು ಕೇಳಿ ತಂದೆ ಇಂತೆಂದನು :

---

1. ಭವಾನ್ ಎಂಬುದಕ್ಕೆ ಪ್ರಥಮಪುರುಷದ ಕ್ರಿಯೆ ಬೇಕೆಂಬುದನ್ನು ಇಲ್ಲಿ ಸೂಚಿಸಿದೆ. 'ಅವೋಚಃ' ಎಂಬುದು ಛಾಂದಸಪ್ರಯೋಗ.

2. ಹೀಗೆಯೋ ನೀನು ನಮಗೆ ಅನುಶಾಸನಮಾಡಿದೆನೆಂದದ್ದು ? ಸುಳ್ಳುಹೇಳಿದ ಹಾಗಾಯಿತಲ್ಲ ! –ಎಂದರ್ಥ.

ಹೇಗೆ, ಯಾವ ಪ್ರಕಾರದಿಂದ ನಿನಗೆ ದುಃಖವುಂಟಾಯಿತು ? ಎಲೈ ಸುಮೇಧನೆ, ಒಳ್ಳೆಯ ಬುದ್ಧಿಯಿರುವವನಾದ್ದರಿಂದ ಇವನನ್ನು ಸುಮೇಧನು (ಜಾಣನು ಎಂದಿರುತ್ತಾನೆ).[1]

ನನಗೆ ಏನಾಯಿತೋ (ಹೇಳುವೆನು), ಕೇಳು ; (ಮಾ= ಮಾಮ್) ನನ್ನನ್ನು ರಾಜನ್ಯಬಂಧುವು— ರಾಜನ್ಯರು (ಕ್ಷತ್ರಿಯರು)ಬಂಧುಗಳಾದ್ದರಿಂದ (ಅವನು ರಾಜನ್ಯಬಂಧುವು). ಇದು ತಿರಸ್ಕಾರಕ್ಕಾಗಿ (ಉಪಯೋಗಿಸಿ) ಹೇಳಿದ್ದು[2]—ಐದು ಸಂಖ್ಯೆಯ ಪ್ರಶ್ನೆಗಳನ್ನು ಕೇಳಿದನು, ಕೇಳಿದವನಾದನು. ಆದರಲ್ಲಿ ಆ (ಪ್ರಶ್ನಸಮುದಾಯ)ದಲ್ಲಿ ಒಂದನ್ನೂ ಒಂದು (ಪ್ರಶ್ನೆಯನ್ನೂ) ಕೂಡ ತಿಳಿಯಲಿಲ್ಲ, ನಾನು ತಿಳಿದಿರಲಿಲ್ಲ! 'ಅಪ್ಪ, ರಾಜನು ಕೇಳಿದ (ಆ) ಪ್ರಶ್ನೆಗಳು ಯಾವವು?' ಎಂದು ತಂದೆ ಕೇಳಲು ಮಗನು 'ಇವೇ ಅವು' ಎಂದು ಪ್ರತೀಕಗಳನ್ನು ಪ್ರಶ್ನೆಯ ಮುಖ್ಯ(ಭಾಗಗಳನ್ನು)[3] ತಿಳಿಸಿದನು, ತಿಳಿಯಪಡಿಸಿದನು.

## ಗೌತಮನು ಪ್ರವಾಹಣನಿಂದ ವರವನ್ನು ಕೇಳಿಕೊಂಡದ್ದು

(ಉಪನಿಷತ್ತು)

**ಸ ಹೋವಾಚ ತಥಾ ನಸ್ತ್ವಂ ತಾತ ಜಾನೀಥಾ ಯಥಾ ಯದಹಂ ಕಿಂ ಚ ವೇದ ಸರ್ವಮಹಂ ತತ್ ತುಭ್ಯಮವೋಚಂ ಪ್ರೇಹಿ ತು ತತ್ರ ಪ್ರತೀತ್ಯ ಬ್ರಹ್ಮಚರ್ಯಂ ವತ್ಸ್ಯಾವ ಇತಿ ಭವಾನೇವ ಗಚ್ಛತ್ವಿತಿ ಸ ಆಜಗಾಮ ಗೌತಮೋ ಯತ್ರ ಪ್ರವಾಹಣಸ್ಯ ಜೈವಲೇರಾಸ ತಸ್ಮಾ ಆಸನಮಾಹೃತ್ಯ ಉದಕಮಾಹಾರಯಾಂಚಕಾರಾಥ ಹಾಸ್ಮಾ ಅರ್ಘ್ಯಂ ಚಕಾರ ತಗ್ಂ ಹೋವಾಚ ವರಂ ಭಗವತೇ ಗೌತಮಾಯ ದದ್ಮ ಇತಿ ॥ ೪ ॥**

೪. ಅವನಿಂತೆಂದನು "ಅಪ್ಪ, ನಮ್ಮನ್ನು ನೀನು ಹೀಗೆಂದೇ ತಿಳಿ ; ನನಗೆ ಏನೇನು ತಿಳಿದಿದೆಯೋ ಅದೆಲ್ಲವನ್ನೂ ನಿನಗೆ ಹೇಳಿರುತ್ತೇನೆ. ಆದರೆ, ಬಾ, ಅಲ್ಲಿಗೆ ಹೋಗಿ ಬ್ರಹ್ಮಚರ್ಯದಿಂದ ವಾಸ

1. ನಿನ್ನಂಥ ಜಾಣನು ದುಃಖನಿಮಿತ್ತವಿಲ್ಲದೆ ಹೀಗೆನ್ನಲಾರನು ಎಂದು ಅಭಿಪ್ರಾಯ.

2. ಕ್ಷತ್ರಿಯರ ನಂಟನು ಮಾತ್ರ, ನಿಜವಾಗಿ ಕ್ಷತ್ರಿಯನಲ್ಲ –ಎಂಬುದು ರಾಜನ ವಿಷಯಕ್ಕೆ ತನಗಿದ್ದ ಅನಾದರವನ್ನು ತಿಳಿಸುವದಕ್ಕೆ ಪ್ರಯೋಗಿಸಿದ ಮಾತು.

3. ಪ್ರಶ್ನವಾಕ್ಯಗಳನ್ನು ಹಾಗೆಯೇ ಹೇಳದೆ ಅವುಗಳ ಸಾರವನ್ನು ಮಾತ್ರ ತಿಳಿಸಿದನು ಎಂದರ್ಥ.

ಮಾಡೋಣ!'' "ನೀನೇ ಹೋಗು!'' ಆ ಗೌತಮನು ಎಲ್ಲಿ ಪ್ರವಾಹಣಜೈವಲಿಯ ಆಸವಿತ್ತೋ ಅಲ್ಲಿಗೆ ಬಂದನು. ಅವನಿಗೆ ಆಸನವನ್ನು ತಂದುಕೊಟ್ಟು ಉದಕವನ್ನು ತರಿಸಿದನು, ಆಮೇಲೆ ಇವನಿಗೆ ಅರ್ಘ್ಯವನ್ನು ಮಾಡಿದನು, ಅವನನ್ನು ಕುರಿತು "ಭಗವಂತ ಗೌತಮನಿಗೆ ವರವನ್ನು ಕೊಟ್ಟಿರುತ್ತೇವೆ!'' ಎಂದನು.

## ತಂದೆಯು ರಾಜನಲ್ಲಿ ಬ್ರಹ್ಮಚರ್ಯಕ್ಕೆ ಹೋಗೋಣವೆಂದು ಕರೆದದ್ದು

(ಭಾಷ್ಯ)

೪೩೨. ಸ ಹೋವಾಚ ಪಿತಾ ಪುತ್ರಂ ಕ್ರುದ್ಧಮ್ ಉಪಶಮಯನ್। ತಥಾ ತೇನ ಪ್ರಕಾರೇಣ ನಃ ಅಸ್ಮಾನ್ ತ್ವಮ್ ಹೇ ತಾತ ವತ್ಸ ಜಾನೀಥಾ ಗೃಹ್ಣೀಥಾಃ ಯಥಾ ಯದಹಂ ಕಿಂಚ ವಿಜ್ಞಾನಜಾತಂ ವೇದ ಸರ್ವಂ ತತ್ ತುಭ್ಯಮ್ ಅವೋಚಮ್ ಇತ್ಯೇವ ಜಾನೀಥಾಃ। ಕೋಽನ್ಯೋ ಮಮ ಪ್ರಿಯತರೋಽಸ್ತಿ ತ್ವತ್ತಃ, ಯದರ್ಥಂ ರಕ್ಷಿಷ್ಯೇ? ಅಹಮಪಿ ಏತತ್ ನ ಜಾನಾಮಿ ಯತ್ ರಾಜ್ಞಾ ಪೃಷ್ಟಮ್। ತಸ್ಮಾತ್ ಪ್ರೇಹಿ ಆಗಚ್ಛ। ತತ್ರ ಪ್ರತೀತ್ಯ ಗತ್ವಾ ರಾಜ್ಞಿ ಬ್ರಹ್ಮಚರ್ಯಂ ವತ್ಸ್ಯಾವಃ ವಿದ್ಯಾರ್ಥಮ್ ಇತಿ। ಸ ಆಹ ಭವಾನೇವ ಗಚ್ಛತ್ವಿತಿ; ನಾಹಂ ತಸ್ಯ ಮುಖಂ ನಿರೀಕ್ಷಿತುಮ್ ಉತ್ಸಹೇ॥

(ಭಾಷ್ಯಾರ್ಥ)

ಆ ತಂದೆಯು ಕ್ರುದ್ಧನಾದ ಮಗನನ್ನು ಸಮಾಧಾನಗೊಳಿಸುತ್ತಾ ಇಂತೆಂದನು: ಅಪ್ಪ, ಎಲಾ ಮಗು, (ನಃ= ಅಸ್ಮಾನ್) ನಮ್ಮನ್ನು ನೀನು ಹೀಗೆಂದೇ ತಿಳಿ; ಹೇಗೆಂದರೆ ನನಗೆ ಏನೇನು ವಿಜ್ಞಾನಸಮೂಹವು ತಿಳಿದಿದೆಯೋ ಅದೆಲ್ಲವನ್ನೂ ನಿನಗೆ ಹೇಳಿಕೊಟ್ಟಿರುತ್ತೇನೆ ಎಂದೇ ತಿಳಿ. ನಿನಗಿಂತಲೂ ನನಗೆ ಪ್ರಿಯತರನಾದವನು ಮತ್ತೆ ಯಾವನು ಇರುತ್ತಾನೆ? (ಹಾಗಿದ್ದರಲ್ಲವೆ), ಅವನಿಗಾಗಿ (ಈ ಜ್ಞಾನವನ್ನು) ಇಟ್ಟುಕೊಂಡೇನು? ರಾಜನು ಕೇಳಿದನಲ್ಲ, ನನಗೂ ಇದು ತಿಳಿಯದು; ಆದ್ದರಿಂದ (ಪ್ರೇಹಿ= ಆಗಚ್ಛ) ಬಾ, ಅಲ್ಲಿಗೆ (ಪ್ರತೀತ್ಯ= ಗತ್ವಾ) ಹೋಗಿ ರಾಜನಲ್ಲಿ (ಈ) ವಿದ್ಯೆಗಾಗಿ ಬ್ರಹ್ಮಚರ್ಯದಿಂದ ವಾಸಮಾಡೋಣ!

ಅವನಿಂತೆಂದನು ನೀನೇ (ಅಲ್ಲಿಗೆ) ಹೋಗು, ನಾನು ಅವನ ಮುಖವನ್ನು ನೋಡಲಾರೆ!

## ರಾಜನು ಗೌತಮನಿಗೆ ವರವನ್ನು ಕೊಟ್ಟದ್ದು

(ಭಾಷ್ಯ)

೪೩೩. ಸ ಆಜಗಾಮ ಗೌತಮಃ ಗೋತ್ರತೋ ಗೌತಮಃ ಆರುಣಿಃ । ಯತ್ರ ಪ್ರವಾಹಣಸ್ಯ ಜೈವಲೇಃ ಆಸ ಆಸನಮ್, ಆಸ್ಥಾಯಿಕಾ । ಷಷ್ಠೀದ್ವಯಂ ಪ್ರಥಮಾಸ್ಥಾನೇ । ತಸ್ಮೈ ಗೌತಮಾಯ ಆಗತಾಯ ಆಸನಮ್ ಅನುರೂಪಮ್ ಆಹೃತ್ಯ ಉದಕಂ ಭೃತ್ಯೈಃ ಆಹಾರಯಾಂಚಕಾರ । ಅಥ ಹ ಅಸ್ಮೈ ಅರ್ಘ್ಯಂ ಪುರೋಧಸಾ ಕೃತವಾನ್ ಮನ್ತ್ರವತ್ ಮಧುಪರ್ಕಂ ಚ । ಕೃತ್ವಾ ಚೈವಂ ಪೂಜಾಂ ತಂ ಹೋವಾಚ ವರಂ ಭಗವತೇ ಗೌತಮಾಯ ತುಭ್ಯಂ ದದ್ಮ ಇತಿ ಗೋಽಶ್ವಾದಿಲಕ್ಷಣಮ್ ॥

(ಭಾಷ್ಯಾರ್ಥ)

ಆ ಗೌತಮನು ಗೋತ್ರದಿಂದ ಗೌತಮನಾದ ಆರುಣಿಯು ಎಲ್ಲಿ ಪ್ರವಾಹಣಜೈವಲಿಯ ಆಸ ಆಸನವು, ಆಸ್ಥಾಯಿಕೆಯು[1] (ಸಭೆಯು ಇದ್ದಿತೋ ಅಲ್ಲಿಗೆ) ಹೋದನು. (ಪ್ರವಾಹಣಸ್ಯ ಜೈವಲೇಃ ಎಂಬ) ಎರಡು ಷಷ್ಠೀವಿಭಕ್ತಿಗಳೂ ಪ್ರಥಮಾವಿಭಕ್ತಿಯ ಸ್ಥಾನದಲ್ಲಿ[2] (ಬಂದಿವೆ).

ಹಾಗೆ ಬಂದ ಗೌತಮನಿಗೆ ಅನುರೂಪವಾದ ಆಸನವನ್ನು ತಂದುಕೊಟ್ಟು ಉದಕವನ್ನು ಭೃತ್ಯರಿಂದ ತರಿಸಿದನು. ಆ ಬಳಿಕ ಇವನಿಗೆ ಪುರೋಹಿತನಿಂದ ಮಂತ್ರವತ್ತಾಗಿ ಅರ್ಘ್ಯವನ್ನೂ ಮಧುಪರ್ಕವನ್ನೂ[3] ಕೊಟ್ಟನು. ಹೀಗೆ ಪೂಜೆಯನ್ನು ಮಾಡಿ ಅವನನ್ನು ಕುರಿತು ಇಂತೆಂದನು: ಭಗವಂತನಾದ ಗೌತಮನಿಗೆ ಗೋವು, ಅಶ್ವ -ಮುಂತಾದ ರೂಪದ ವರವನ್ನು ಕೊಟ್ಟಿರುತ್ತೇವೆ.[4]

## ಗೌತಮನು ಪಂಚಪ್ರಶ್ನನಿರ್ಣಯದ ವರವನ್ನು ಕೇಳಿದ್ದು

(ಉಪನಿಷತ್ತು)

**ಸ ಹೋವಾಚ ಪ್ರತಿಜ್ಞಾತೋ ಮ ಏಷ ವರೋ ಯಾಂ ತು ಕುಮಾರಸ್ಯಾನ್ತೇ ವಾಚಮಭಾಷಥಾಸ್ತಾಂ ಮೇ ಬ್ರೂಹೀತಿ ॥**

---

1. ಬಂದವರಿಗೆ ದರ್ಶನಕೊಡುವದಕ್ಕೆ ಕುಳಿತಿರುವದು.

2. ಕರ್ತ್ರರ್ಥದಲ್ಲಿ ಪ್ರಯೋಗವಾಗಿವೆ.

3. ಜೇನುತುಪ್ಪವನ್ನು ಬೆರೆಯಿಸಿದ ಮೊಸರು ಮುಂತಾದದ್ದು; ಇದನ್ನು ಅತಿಥಿಗಳಿಗೆ ಕೊಡುವರು.

4. ರಾಜನು ಅತಿಥಿಸತ್ಕಾರಕ್ಕಾಗಿ ಹೀಗೆಂದು ಹೇಳಿದಾನೆ. ಇದೇ ಅವನ ಭಾವವಾದರೂ ಗೌತಮನು ಈ ಪ್ರತಿಜ್ಞೆಯನ್ನೇ ನೆಪವಾಗಿಟ್ಟುಕೊಂಡು ಮುಂದೆ ಪಂಚಾಗ್ನಿವಿದ್ಯೆಯನ್ನು ಕೇಳಿದಾನೆ.

೫. ಅವನಿಂತೆಂದನು "ನನಗೆ ಈ ವರವನ್ನು ಪ್ರತಿಜ್ಞೆ ಮಾಡಿರುತ್ತೀಯೆ. ಕುಮಾರನ ಬಳಿಯಲ್ಲಿ ಯಾವ ವಾಕ್ಯವನ್ನು ಹೇಳಿದೆಯೋ ಅದನ್ನು ನನಗೆ ಹೇಳು!"

## ಹುಡುಗನಲ್ಲಿ ಹೇಳಿದ ವಿಷಯವೇ ವರವೆಂದದ್ದು

(ಭಾಷ್ಯ)

೪೩೪. ಸ ಹೋವಾಚ ಗೌತಮಃ। ಪ್ರತಿಜ್ಞಾತಃ ಮೇ ಮಮ ಏಷ ವರಃ ತ್ವಯಾ। ಅಸ್ಯಾಂ ಪ್ರತಿಜ್ಞಾಯಾಂ ದೃಢೀಕುರು ಆತ್ಮಾನಮ್। ಯಾಂ ತು ವಾಚಂ ಕುಮಾರಸ್ಯ ಮಮ ಪುತ್ರಸ್ಯ ಅನ್ತೇ ಸಮೀಪೇ ವಾಚಮ್ ಅಭಾಷಥಾಃ ಪ್ರಶ್ನರೂಪಾಮ್ ತಾಮೇವ ಮೇ ಬ್ರೂಹಿ। ಸ ಏಷ ನೋ ವರ ಇತಿ ॥

(ಭಾಷ್ಯಾರ್ಥ)

ಆ ಗೌತಮನಿಂತೆಂದನು. (ಮೇ = ಮಮ) ನನಗೆ ಈ ವರವನ್ನು ನೀನು (ಕೊಡುವೆನೆಂದು) ಪ್ರತಿಜ್ಞೆಮಾಡಿರುತ್ತೀಯೆ. ಈ ಪ್ರತಿಜ್ಞೆಯಲ್ಲಿಯೇ ನಿನ್ನನ್ನು (ನೀನು) ಗಟ್ಟಿಯಾಗಿ ನಿಲ್ಲಿಸಿಕೊ. ಕುಮಾರನ, ನನ್ನ ಮಗನ, ಬಳಿಯಲ್ಲಿ ಹತ್ತಿರ, ಯಾವ ಪ್ರಶ್ನರೂಪವಾದ ವಾಕ್ಯವನ್ನು ಆಡಿದೆಯೋ ಅದನ್ನೇ ನನಗೆ ಹೇಳು, ಅದೇ ನಮಗೆ ವರವು!

## ರಾಜನು ಮಾನುಷವರವನ್ನು ಬೇಡು ಎಂದದ್ದು

(ಉಪನಿಷತ್ತು)

**ಸ ಹೋವಾಚ ದೈವೇಷು ವೈ ಗೌತಮ ತದ್ ವರೇಷು ಮಾನುಷಾಣಾಂ ಬ್ರೂಹೀತಿ ॥ ೬ ॥**

೬. ಅವನಿಂತೆಂದನು: ಗೌತಮನೆ, ಅದು ದೈವವರಗಳೊಳಗೆ (ಸೇರಿದ್ದ)ಷ್ಟೆ. ಮಾನುಷ(ವರಗಳೊಳಗೆ ಒಂದನ್ನು) ಹೇಳು!

## ಮಾನುಷವರಗಳಲ್ಲಿ ಒಂದನ್ನು ಕೊಡುತ್ತೇನೆಂದದ್ದು

(ಭಾಷ್ಯ)

೪೩೫. ಸ ಹೋವಾಚ ರಾಜಾ। ದೈವೇಷು ವರೇಷು ತದ್ ವೈ ಗೌತಮ ಯತ್ ತ್ವಂ ಪ್ರಾರ್ಥಯಸೇ। ಮಾನುಷಾಣಾಮ್ ಅನ್ಯತಮಂ ಪ್ರಾರ್ಥಯ ವರಮ್ ॥

(ಭಾಷ್ಯಾರ್ಥ)

ಆ ರಾಜನಿಂತೆಂದನು. ಗೌತಮನೆ, ನೀನು ಕೇಳುತ್ತಿರುವ ಅದು ದೈವ ವರಗಳಲ್ಲಿ (ಸೇರಿ)ದ್ದಷ್ಟೆ. ಮಾನುಷ(ವರ)ಗಳಲ್ಲಿ ಯಾವದಾದರೊಂದು ವರ ವನ್ನು ಕೇಳಿಕೊ !

## ಗೌತಮನು ರಾಜನ ಶಿಷ್ಯನಾದದ್ದು

(ಉಪನಿಷತ್ತು)

**ಸ ಹೋವಾಚ ವಿಜ್ಞಾಯತೇ ಹಾಸ್ತಿ ಹಿರಣ್ಯಸ್ಯಾಪಾತ್ತಂ ಗೋ ಅಶ್ವಾನಾಂ ದಾಸೀನಾಂ ಪ್ರವಾರಾಣಾಂ ಪರಿಧಾನಸ್ಯ ಮಾ ನೋ ಭವಾನ್ ಬಹೋರನನ್ತಸ್ಯಾಪರ್ಯನ್ತಸ್ಯಾಭ್ಯವದಾನ್ಯೋ ಭೂದಿತಿ ಸ ವೈ ಗೌತಮ ತೀರ್ಥೇನೇಚ್ಛಾಸಾ ಇತ್ಯುಪೈಮ್ಯಹಂ ಭವನ್ತಮಿತಿ ವಾಚಾ ಹ ಸ್ಮೈವ ಪೂರ್ವ ಉಪಯನ್ತಿ ಸ ಹೋ ಪಾಯನಕೀರ್ತ್ಯೋವಾಸ ॥ ೭ ॥**

೭. ಅವನಿಂತೆಂದನು. "ಹಿರಣ್ಯ, ಗೋ, ಅಶ್ವಗಳು, ದಾಸಿ ಗಳು, ಪರಿವಾರವು, ವಸ್ತ್ರ- (ಇವೆಲ್ಲ) ಅಪಾತ್ತವಾಗಿ ಇದೆ ಎಂದು ತಿಳಿದೇ ಇದೆ. ಈ ಬಹುವಾದ ಅನಂತವಾದ ಅಪರ್ಯಂತವಾದ ದ್ದರ ವಿಷಯಕ್ಕೆ ನಮ್ಮ (ವಿಷಯ)ದಲ್ಲಿ ಅವದಾನ್ಯನಾಗದಿರು !" "ಆ ಗೌತಮನೆ, (ಆ ನೀನು) ತೀರ್ಥದಿಂದ ಇಚ್ಛಿಸು !" ಎನ್ನಲು "ನಿನ್ನಲ್ಲಿಗೆ (ಶಿಷ್ಯನಾಗಿ) ಬಂದಿರುವೆನು !" ಎಂದನು. ಪೂರ್ವದ (ಜನರು) ವಾಕ್ಕಿನಿಂದಲೇ ಉಪಾಯನಮಾಡುತ್ತಿದ್ದರು. ಅವನು ಉಪಾಯನಕೀರ್ತನದಿಂದ (ಬ್ರಹ್ಮಚಾರಿಯಾಗಿ) ವಾಸಮಾಡಿಕೊಂಡಿ ದ್ದನು.

## ಗೌತಮನು ಮಾನುಷವರವನ್ನು ತಿರಸ್ಕರಿಸಿದ್ದು

(ಭಾಷ್ಯ)

**೪೩೬. ಸ ಹೋವಾಚ ಗೌತಮಃ । ಭವತಾಪಿ ವಿಜ್ಞಾಯತೇ ಹ ಮಮ ಅಸ್ತಿ ಸಃ । ನ ತೇನ ಪ್ರಾರ್ಥಿತೇನ ಕೃತ್ಯಂ ಮಮ ಯಂ ತ್ವಂ ದಿತ್ಸಸಿ ಮಾನುಷಂ ವರಮ್ । ಯಸ್ಮಾತ್ ಮಮಾಪಿ ಅಸ್ತಿ ಹಿರಣ್ಯಸ್ಯ ಪ್ರಭೂತಸ್ಯ ಅಪಾತ್ತಂ ಪ್ರಾಪ್ತಮ್ । ಗೋ ಅಶ್ವಾನಾಮ್ 'ಅಪಾತ್ತಮ್ ಅಸ್ತಿ' ಇತಿ**

ಸರ್ವತ್ರ ಅನುಷಙ್ಗಃ। ದಾಸೀನಾಮ್ ಪ್ರವಾರಾಣಾಂ ಪರಿವಾರಾಣಾಮ್ । ಪರಿಧಾನಸ್ಯ ಚ। ನ ಚ ಯತ್ ಮಮ ವಿದ್ಯಮಾನಮ್ ತತ್ ತ್ವತ್ತಃ ಪ್ರಾರ್ಥನೀಯಮ್, ತ್ವಯಾ ವಾ ದೇಯಮ್ । ಪ್ರತಿಜ್ಞಾತಶ್ಚ ವರಸ್ತ್ವಯಾ। ತ್ವಮೇವ ಜಾನೀಷೇ ಯದತ್ರ ಯುಕ್ತಮ್, ಪ್ರತಿಜ್ಞಾ ರಕ್ಷಣೀಯಾ ತವ ಇತಿ। ಮಮ ಪುನರಯಮ್ ಅಭಿಪ್ರಾಯಃ। ಮಾ ಭೂತ್ ನಃ ಅಸ್ಮಾನ್ ಅಭಿ ಅಸ್ಮಾನೇವ ಕೇವಲಾನ್ ಪ್ರತಿ, ಭವಾನ್ ಸರ್ವತ್ರ ವದಾನ್ಯೋ ಭೂತ್ವಾ ಅವದಾನ್ಯೋ ಮಾಭೂತ್ ಕದರ್ಯೋ ಮಾಭೂತ್ ಇತ್ಯರ್ಥಃ। ಬಹೋಃ ಪ್ರಭೂತಸ್ಯ, ಅನನ್ತಸ್ಯ ಅನನ್ತಫಲಸ್ಯ ಇತ್ಯೇತತ್। ಅಪರ್ಯನ್ತಸ್ಯ ಅಪರಿಸಮಾಪ್ತಿಕಸ್ಯ ಪುತ್ರಪೌತ್ರಾದಿಗಾಮಿಕಸ್ಯ ಇತ್ಯೇತತ್। ಈದೃಶಸ್ಯ ವಿತ್ತಸ್ಯ ಮಾಂ ಪ್ರತ್ಯೇವ ಕೇವಲಮ್ ಅದಾತಾ ಮಾಭೂತ್ ಭವಾನ್। ನ ಚ ಅನ್ಯತ್ರ ಅದೇಯಮ್ ಅಸ್ತಿ ಭವತಃ॥

(ಭಾಷ್ಯಾರ್ಥ)

ಆ ಗೌತಮನಿಂತೆಂದನು: ನಿನಗೂ (ಇದು) ತಿಳಿದೇ ಇದೆ, ಅದು ನನಗೆ ಇದೆ ಎಂಬುದು ನಿನಗೂ ತಿಳಿದೇ ಇದೆ. ನೀನು ಕೊಡಬೇಕೆಂದಿರುವೆಯಲ್ಲ, ಆ ಮಾನುಷವರವನ್ನು ಪ್ರಾರ್ಥಿಸಿದ್ದರಿಂದ ನನಗೆ ಆಗಬೇಕಾದದ್ದೇನೂ ಇರುವದಿಲ್ಲ. ಏಕೆಂದರೆ ನನಗೂ ಹೆಚ್ಚು ಹಿರಣ್ಯವು ಅಪಾತ್ತವಾಗಿದೆ, ಪ್ರಾಪ್ತವಾಗಿದೆ. ಗೋವು, ಅಶ್ವ– ಇವುಗಳ— ಅಪಾತ್ತವಿದೆ ಎಂದು ಎಲ್ಲಾ ಕಡೆಯಲ್ಲಿಯೂ ಸೇರಿಸಿಕೊಳ್ಳಬೇಕು—ದಾಸಿಯರ, ಪ್ರವಾರಗಳ ಎಂದರೆ ಪರಿವಾರಗಳ, ಮತ್ತು ವಸ್ತ್ರದ (ಪ್ರಾಪ್ತಿಯು ಇದೆ). ನಮಗೆ ಯಾವದು ಇದ್ದೇ ಇದೆಯೋ ಅದನ್ನು ನಿನ್ನಿಂದ ಪ್ರಾರ್ಥಿಸತಕ್ಕದ್ದೂ ಅಲ್ಲ, ನೀನು ಕೊಡತಕ್ಕದ್ದೂ ಅಲ್ಲ. ನೀನಂತೂ ವರವನ್ನು (ಕೊಡುವೆನೆಂದು) ಪ್ರತಿಜ್ಞೆಮಾಡಿಬಿಟ್ಟಿರುವೆ. ಈ (ಸಂದರ್ಭ)ದಲ್ಲಿ ಯಾವದು ಯುಕ್ತವೋ (ಅದನ್ನು) ನಿನ್ನ ಪ್ರತಿಜ್ಞೆಯನ್ನು ಕಾಪಾಡಿಕೊಳ್ಳಬೇಕು ಎಂಬುದನ್ನು ನೀನೇ ಬಲ್ಲೆ. ನನಗಂತೂ ಈ ಅಭಿಪ್ರಾಯ(ವಿದೆ). ನಮ್ಮ ವಿಷಯದಲ್ಲಿ, ಕೇವಲ ನಮ್ಮಗಳ ವಿಷಯದಲ್ಲಿ ಮಾತ್ರ, ಎಲ್ಲೆಲ್ಲಿಯೂ ದಾನಶೀಲನಾಗಿದ್ದುಕೊಂಡು ನೀನು ಅವದಾನ್ಯನಾಗಬೇಡ, ಜಿಪುಣನಾಗಬೇಡ ಎಂದರ್ಥ. ಈ ಬಹುವಾದ ಬಹಳವಾದ, ಅನಂತವಾದ ಅನಂತಫಲವುಳ್ಳ ಅಪರ್ಯಂತವಾದದ್ದರ, ಕೊನೆಗಾಣದ, ಪುತ್ರಪೌತ್ರಾದಿಗಳಿಗೂ ಹೋಗುವದರ ಎಂದರ್ಥ. ಇಂಥ ವಿತ್ತವನ್ನು ನನಗೆ ಮಾತ್ರವೇ ಕೊಡದೆ ಇರುವವನಾಗಬೇಡ; ಮತ್ತೊಬ್ಬರ ವಿಷಯದಲ್ಲಂತೂ ನಿನಗೆ ಕೊಡಲಾಗದ್ದು ಇಲ್ಲ.[1]

1. ಮಿಕ್ಕವರಿಗೆಲ್ಲ ಧಾರಾಳವಾಗಿ ಕೊಡುವ ಉದಾರಸ್ವಭಾವನಾದ ನೀನು ನನ್ನ ವಿಷಯದಲ್ಲಿ ಮಾತ್ರವೇ ಕೈಹಿಡಿಯಬೇಡ.

# ಗೌತಮನು ರಾಜನ ಶಿಷ್ಯನಾದದ್ದು

(ಭಾಷ್ಯ)

೪೩೭. ಏವಮುಕ್ತ ಆಹ । ಸ ತ್ವಂ ವೈ ಹೇ ಗೌತಮ ತೀರ್ಥೇನ ನ್ಯಾಯೇನ ಶಾಸ್ತ್ರವಿಹಿತೇನ ವಿದ್ಯಾಂ ಮತ್ತಃ ಇಚ್ಛಾಸೈ ಇಚ್ಛ ಅನ್ವಾಪ್ನುವಿ । ಇತ್ಯುಕ್ತೋ ಗೌತಮ ಆಹ। ಉಪೈಮಿ ಉಪಗಚ್ಛಾಮಿ ಶಿಷ್ಯತ್ವೇನ ಅಹಂ ಭವನ್ತಮ್ ಇತಿ। ವಾಚಾ ಹ ಸ್ಮೈವ ಕಿಲ ಪೂರ್ವೇ ಬ್ರಾಹ್ಮಣಾಃ ಕ್ಷತ್ರಿಯಾನ್ ವಿದ್ಯಾರ್ಥಿನಃ ಸನ್ತಃ ವೈಶ್ಯಾನ್ ವಾ, ಕ್ಷತ್ರಿಯಾ ವಾ ವೈಶ್ಯಾನ್, ಆಪದಿ ಉಪಯನ್ತಿ ಶಿಷ್ಯವೃತ್ತ್ಯಾ ಹಿ ಉಪಗಚ್ಛನ್ತಿ, ನ ಉಪಾಯನಶುಶ್ರೂಷಾದಿಭಿಃ। ಅತಃ ಸ ಗೌತಮಃ ಹ ಉಪಾಯನಕೀರ್ತ್ಯಾ ಉಪಗಮನಕೀರ್ತನಮಾತ್ರೇಣೈವ ಉವಾಸ ಉಷಿತವಾನ್, ನ ಉಪಾಯನಂ ಚಕಾರ ॥

(ಭಾಷ್ಯಾರ್ಥ)

ಹೀಗೆನ್ನಲು ರಾಜನೆಂದನು. ಎಲೈ ಗೌತಮನೆ, ಆ ನೀನು ತೀರ್ಥದಿಂದ ಶಾಸ್ತ್ರವಿಹಿತವಾದ ನ್ಯಾಯದಿಂದ[1] ವಿದ್ಯೆಯನ್ನು ನನ್ನಿಂದ ಪಡೆಯುವದಕ್ಕೆ (ಇಚ್ಛಾಸೈ= ಇಚ್ಛ) ಇಚ್ಛಿಸು.

ಹೀಗೆನ್ನಲು ಗೌತಮನೆಂದನು. ನಾನು ನಿನ್ನನ್ನು ಶಿಷ್ಯನಾಗಿ ಬಂದಿರುತ್ತೇನೆ. ಪೂರ್ವದ ಬ್ರಾಹ್ಮಣರು ವಿದ್ಯಾರ್ಥಿಗಳಾಗಿ ಆಪತ್ಕಾಲದಲ್ಲಿ ಕ್ಷತ್ರಿಯರನ್ನಾಗಲಿ ವೈಶ್ಯರನ್ನಾಗಲಿ ಬರಿಯ ವಾಕ್ಯದಿಂದಲೇ ಉಪಾಯನಮಾಡುತ್ತಿದ್ದರು. ಶಿಷ್ಯವೃತ್ತಿಯಿಂದ ಬಳಿಸಾರುತ್ತಿದ್ದರು ; (ಹೀಗೆಯೇ) ಕ್ಷತ್ರಿಯರಾದರೂ ವೈಶ್ಯರನ್ನು (ಆಪತ್ಕಾಲದಲ್ಲಿ ಶಿಷ್ಯವೃತ್ತಿಯಿಂದ ಬಳಿಸಾರುತ್ತಿದ್ದರು, ಉಪಾಯನಶುಶ್ರೂಷಾದಿಗಳಿಂದಲ್ಲ.[2] ಆದ್ದರಿಂದ ಆ ಗೌತಮನು ಉಪಾಯನಕೀರ್ತನದಿಂದ, ಬಳಿಸಾರಿದ್ದೇನೆಂಬ ಹೇಳಿಕೆಯಿಂದಲೇ (ಶಿಷ್ಯನಾಗಿ) ವಾಸಮಾಡಿಕೊಂಡಿದ್ದನು, ವಾಸಮಾಡಿದನೇ ಹೊರತು ಉಪಾಯನ(ಕರ್ಮ)ವನ್ನು ಮಾಡಲಿಲ್ಲ (ಎಂದರ್ಥ).

---

1. ಶಾಸ್ತ್ರದಲ್ಲಿ, ಶಿಷ್ಯನು, ಪುತ್ರನು, ಹೆಚ್ಚಾಗಿ ಹಣವನ್ನು ಕೊಟ್ಟವನು- ಇತ್ಯಾದಿಯಾಗಿ ಇಂಥಿಂಥವರೇ ವಿದ್ಯಾದಾನಕ್ಕೆ ಪಾತ್ರರು ಎಂಬ ನಿಯಮವುಂಟು ; ಇದೇ ತೀರ್ಥವೆಂಬುದು. ಈ ಪದ್ಧತಿಯಿಂದಲೇ ವಿದ್ಯೆಯನ್ನು ಪಡೆದುಕೊಳ್ಳಬೇಕಾದದ್ದು ಯುಕ್ತ ಎಂದು ಅಭಿಪ್ರಾಯ.

2. ಆಪತ್ಕಾಲದಲ್ಲಿ ಮಾತ್ರ ಕಡಿಮೆಯ ಜಾತಿಯವನಲ್ಲಿ ಶಿಷ್ಯನಾಗತಕ್ಕದ್ದು, ಆಗ ವಾಙ್ಮಾತ್ರದಿಂದಲೇ ಶಿಷ್ಯನಾದರಾಯಿತು, ಅನುವ್ರಜ್ಯಾರೂಪವಾದ ಶುಶ್ರೂಷೆಯೇ ಸಾಕು ಎಂದು (ಮನು. ೨-೨೪೧) ಧರ್ಮಶಾಸ್ತ್ರದಲ್ಲಿ ಹೇಳಿದೆ.

## ರಾಜನು ಗೌತಮನಿಗೆ ಸಮಾಧಾನಹೇಳಿದ್ದು

(ಉಪನಿಷತ್ತು)

**ಸ ಹೋವಾಚ ತಥಾ ನಸ್ತ್ವಂ ಗೌತಮ ಮಾಪರಾಧಾಸ್ತವ ಚ ಪಿತಾಮಹಾ ಯಥೇಯಂ ವಿದ್ಯೇತಃ ಪೂರ್ವಂ ನ ಕಸ್ಮಿಂಶ್ಚನ ಬ್ರಾಹ್ಮಣ ಉವಾಸ ತಾಂ ತ್ವಹಂ ತುಭ್ಯಂ ವಕ್ಷ್ಯಾಮಿ ಕೋ ಹಿ ತ್ವೈವಂ ಬ್ರುವನ್ತಮರ್ಹತಿ ಪ್ರತ್ಯಾಖ್ಯಾತುಮಿತಿ ॥ ೮ ॥**

೮. ಆ (ರಾಜನು) ಇಂತೆಂದನು. ಗೌತಮನೆ, ನೀನು ನಮ್ಮನ್ನು ಹೀಗೆ ಅಪರಾಧಿಗಳಾಗಿ ಮಾಡದಿರು ; ನಿನ್ನ ಪಿತಾಮಹರೂ (ಮಾಡಲಿಲ್ಲ). ಏಕೆಂದರೆ ಈ ವಿದ್ಯೆಯು ಇದಕ್ಕೆ ಪೂರ್ವದಲ್ಲಿ ಯಾವ ಬ್ರಾಹ್ಮಣನಲ್ಲಿ ವಾಸಮಾಡಿಲ್ಲ. ಆದರೆ ಅದನ್ನು ನಿನಗೆ ನಾನು ಹೇಳುವೆನು. ಹೀಗೆಂದು ಹೇಳುವವನನ್ನು ಯಾವನು ತಾನೆ ತಿರಸ್ಕರಿಸಿಯಾನು ?

## ಕ್ಷಮಾಪಣಪೂರ್ವಕವಾಗಿ ರಾಜನು ವಿದ್ಯೆಯನ್ನು ಹೇಳಿಕೊಡುವೆನೆಂದದ್ದು

(ಭಾಷ್ಯ)

**೪೩೮. ಏವಂ ಗೌತಮೇನ ಆಪದನ್ತರೇ ಉಕ್ತೇ ಸ ಹ ಉವಾಚ ರಾಜಾ ಪೀಡಿತಂ ಮತ್ವಾ ಕ್ಷಾಮಯನ್ । ತಥಾ ನಃ ಅಸ್ಮಾನ್ ಪ್ರತಿ ಮಾ ಅಪರಾಧಾಃ ಅಪರಾಧಂ ಮಾ ಕಾರ್ಷೀಃ । ಅಸ್ಮದೀಯೋಽಪರಾಧಃ ನ ಗ್ರಹೀತವ್ಯಃ ಇತ್ಯರ್ಥಃ । ತವ ಚ ಪಿತಾಮಹಾಃ ಅಸ್ಮತ್ಪಿತಾಮಹೇಷು ಯಥಾ ಅಪರಾಧಂ ನ ಜಗೃಹುಃ । ತಥಾ ಪಿತಾಮಹಾನಾಂ ವೃತ್ತಮ್ ಅಸ್ಮಾಸ್ವಪಿ ಭವತಾ ರಕ್ಷಣೀಯಮ್ ಇತ್ಯರ್ಥಃ । ಯಥಾ ಇಯಂ ವಿದ್ಯಾ ತ್ವಯಾ ಪ್ರಾರ್ಥಿತಾ ಇತಃ ತ್ವತ್ಸಂಪ್ರದಾನಾತ್ ಪೂರ್ವಮ್ ಪ್ರಾಕ್ ನ ಕಸ್ಮಿನ್ನಪಿ ಬ್ರಾಹ್ಮಣೇ ಉವಾಸ ಉಷಿತವತೀ । ತಥಾ ತ್ವಮಪಿ ಜಾನೀಷೇ । ಸರ್ವದಾ ಕ್ಷತ್ರಿಯಪರಂಪರಯಾ ಇಯಂ ವಿದ್ಯಾ ಆಗತಾ । ಸಾ ಸ್ಥಿತಿಃ ಮಯಾಪಿ ರಕ್ಷಣೀಯಾ ಯದಿ ಶಕ್ಯತೇ ಇತಿ ಉಕ್ತಮ್ 'ದೈವೇಷು ಗೌತಮ ತದ್ವರೇಷು ಮಾನುಷಾಣಾಂ ಬ್ರೂಹಿ' ಇತಿ । ನ ಪುನಃ ತವ ಅದೇಯೋ ವರಃ ಇತಿ । ಇತಃ ಪರಂ ನ ಶಕ್ಯತೇ ರಕ್ಷಿತುಮ್ । ತಾಮಪಿ ವಿದ್ಯಾಮ್ ಅಹಂ ತುಭ್ಯಂ**

ವಕ್ಷ್ಯಾಮಿ । ಕೋ ಹಿ ಅನ್ಯೋಽಪಿ ಹಿ ಯಸ್ಮಾತ್ ಏವಂ ಬ್ರುವನ್ತಂ ತ್ವಾಮ್ ಅರ್ಹತಿ ಪ್ರತ್ಯಾಖ್ಯಾತುಮ್ ನ ವಕ್ಷ್ಯಾಮಿ ಇತಿ। ಅಹಂ ಪುನಃ ಕಥಂ ನ ವಕ್ಷ್ಯೇ ತುಭ್ಯಮ್ ಇತಿ ॥

(ಭಾಷ್ಯಾರ್ಥ)

ಹೀಗೆ ಆಪತ್ತಿನ ನಡುವೆ (ಸಿಕ್ಕಿದ) ಗೌತಮನು ಕೇಳಲು[1] ಆ ರಾಜನು (ಇವನಿಗೆ) ವ್ಯಥೆಯಾಯಿತೆಂದು ತಿಳಿದು ಕ್ಷಮಾಪಣೆಮಾಡುವದಕ್ಕಾಗಿ ಇಂತೆಂದನು. (ನಃ= ಅಸ್ಮಾತ್) ನಮ್ಮನ್ನು ಕುರಿತು ಅಪರಾಧಿಗಳಾಗಿ ಮಾಡಬೇಡ ; ನಮ್ಮ ತಪ್ಪನ್ನು ಹಿಡಿಯದಿರು ಎಂದರ್ಥ. ನಿನ್ನ ಪಿತಾಮಹರೂ ಹೇಗೆ ನಮ್ಮ ಪಿತಾಮಹರುಗಳಲ್ಲಿ ತಪ್ಪನ್ನು ಹಿಡಿಯುತ್ತಿರಲಿಲ್ಲವೋ (ಹಾಗೆಯೇ ನೀನೂ ಹಿಡಿಯದಿರು). ಹಾಗೆಯೇ ಪಿತಾಮಹರ ನಡತೆಯನ್ನು ನಮ್ಮಲ್ಲಿಯೂ ನೀನು ಇಟ್ಟುಕೊಂಡಿರಬೇಕು ಎಂದರ್ಥ.

ಏಕೆಂದರೆ ಈ ನೀನು ಕೇಳಿಕೊಂಡ ವಿದ್ಯೆಯು, ಇದಕ್ಕಿಂತ ಪೂರ್ವದಲ್ಲಿ, ನಿನಗೆ ಕೊಡುವದಕ್ಕಿಂತ ಮೊದಲು ಯಾವನೊಬ್ಬ ಬ್ರಾಹ್ಮಣನಲ್ಲಿಯೂ ವಾಸಮಾಡಿಲ್ಲ, ಇದ್ದುಕೊಂಡಿಲ್ಲ ; ಇದನ್ನು ನೀನೂ ಬಲ್ಲೆ. ಯಾವಾಗಲೂ ಕ್ಷತ್ರಿಯಪರಂಪರೆಯಿಂದಲೇ ಈ ವಿದ್ಯೆಯು ಬಂದಿರುತ್ತದೆ. ಆ ಸ್ಥಿತಿಯನ್ನು ನಾನು ಸಾಧ್ಯವಾದರೆ ಕಾಪಾಡತಕ್ಕದ್ದು ಎಂಬ ಕಾರಣದಿಂದ "ಗೌತಮನೆ, ಅದು ದೈವವರದಲ್ಲಿ (ಆಯಿತು), ಮಾನುಷ(ವರಗಳಲ್ಲಿ ಒಂದನ್ನು) ಹೇಳು" ಎಂದು ಹೇಳಿದೆನು. ಇಷ್ಟೇ ಹೊರತು ನಿನಗೆ ವರವನ್ನು ಕೊಡಬಾರದು ಎಂದಲ್ಲ.

ಇನ್ನುಮೇಲೆ (ಈ ಸ್ಥಿತಿಯನ್ನು) ಕಾಪಾಡಿಕೊಂಡುಹೋಗುವದು ಶಕ್ಯವಿಲ್ಲ. ಆ ವಿದ್ಯೆಯನ್ನುಕೂಡ ನಾನು ನಿನಗೆ ಹೇಳಿಕೊಡುವೆನು. (ಹಿ= ಯಸ್ಮಾತ್) ಏಕೆಂದರೆ ಹೀಗೆ ಹೇಳುತ್ತಿರುವ[2] ನಿನ್ನನ್ನು ಯಾವನುತಾನೆ, 'ಹೇಳಿಕೊಡುವದಿಲ್ಲ' ಎಂದು ತಿರಸ್ಕರಿಸಿಯಾನು ? (ಹೀಗಿರುವಲ್ಲಿ) ನಾನು ಹೇಗೆ ತಿಳಿಸದೆ ಇರಲಿ ?

## ದ್ಯುಲೋಕಾಗ್ನಿ

(ಉಪನಿಷತ್ತು)

**ಅಸೌ ವೈ ಲೋಕೋಽಗ್ನಿರ್ಗೌತಮ ತಸ್ಯಾದಿತ್ಯ ಏವ ಸಮಿದ್ರಶ್ಮಯೋ ಧೂಮೋಽಹರರ್ಚಿರ್ದಿಶೋಽಙ್ಗಾರಾ ಅವಾನ್ತರ**

1. ಮತ್ತೊಂದು ಕಡೆಯಲ್ಲಿ ವಿದ್ಯೆಯು ಸಿಕ್ಕುವಹಾಗಿದ್ದರೆ ಹೀಗೆಂದು ಶಿಷ್ಯತ್ವವನ್ನು ಸೂಚಿಸುವ ವಾಕ್ಯವನ್ನು ಗೌತಮನು ಆಡುತ್ತಿರಲಿಲ್ಲ ಎಂದು ಭಾವ.

2. ಶಿಷ್ಯನಾಗಿ ಬಂದಿರುವ.

**ದಿಶೋ ವಿಸ್ಫುಲಿಙ್ಗಾಸ್ತಸ್ಮಿನ್ನೇತಸ್ಮಿನ್ನಗ್ನೌ ದೇವಾಃ ಶ್ರದ್ಧಾಂ ಜುಹ್ವತಿ ತಸ್ಯಾ ಆಹುತ್ಯೈ ಸೋಮೋ ರಾಜಾ ಸಂಭವತಿ ॥ ೯ ॥**

೯. ಗೌತಮನೆ, ಆ ಲೋಕವೇ ಅಗ್ನಿಯು. ಅದಕ್ಕೆ ಆದಿತ್ಯನೇ ಸಮಿತ್ತು, ರಶ್ಮಿಗಳೇ ಹೊಗೆಯು, ಹಗಲು ಉರಿಯು, ದಿಕ್ಕುಗಳೇ ಕೆಂಡ, ಅವಾಂತರದಿಕ್ಕುಗಳೇ ಕಿಡಿಗಳು. ಆ ಈ ಅಗ್ನಿಯಲ್ಲಿ ದೇವತೆಗಳು ಶ್ರದ್ಧೆಯನ್ನು ಹೋಮಮಾಡುತ್ತಾರೆ. ಆ ಆಹುತಿಯಿಂದ ಸೋಮರಾಜನು ಹುಟ್ಟುವನು.

## ದ್ಯುಲೋಕದಲ್ಲಿ ಅಗ್ನಿದೃಷ್ಟಿವಿಧಿ

(ಭಾಷ್ಯ)

೪೩೯. ಅಸೌ ವೈ ಲೋಕೋಽಗ್ನಿರ್ಗೌತಮ ಇತ್ಯಾದಿ । ಚತುರ್ಥಃ ಪ್ರಶ್ನಃ ಪ್ರಾಥಮ್ಯೇನ ನಿರ್ಣೀಯತೇ । ಕ್ರಮಭಙ್ಗಸ್ತು ಏತನ್ನಿರ್ಣಯಾಯತ್ತತ್ವಾತ್ ಇತರ ಪ್ರಶ್ನನಿರ್ಣಯಸ್ಯ । ಅಸೌ ದ್ಯೌರ್ಲೋಕಃ ಅಗ್ನಿಃ ಹೇ ಗೌತಮ । ದ್ಯುಲೋಕೇ ಅಗ್ನಿದೃಷ್ಟಿಃ ಅನಗ್ನೌ ವಿಧೀಯತೇ ಯಥಾ[1] ಯೋಷಿತ್ಪುರುಷಯೋಃ । ತಸ್ಯ ದ್ಯುಲೋಕಾಗ್ನೇಃ ಆದಿತ್ಯ ಏವ ಸಮಿತ್ । ಸಮಿನ್ಧನಾತ್ । ಆದಿತ್ಯೇನ ಹಿ ಸಮಿಧ್ಯತೇ ಅಸೌ ಲೋಕಃ । ರಶ್ಮಯೋ ಧೂಮಃ । ಸಮಿಧ ಉತ್ಥಾನಸಾಮಾನ್ಯಾತ್ । ಆದಿತ್ಯಾದ್ ಹಿ ರಶ್ಮಯೋ ನಿರ್ಗತಾಃ । ಸಮಿಧಶ್ಚ ಧೂಮೋ ಲೋಕೇ ಉತ್ತಿಷ್ಠತಿ । ಅಹಃ ಅರ್ಚಿಃ । ಪ್ರಕಾಶಸಾಮಾನ್ಯಾತ್ । ದಿಶಃ ಅಙ್ಗಾರಾಃ । ಉಪಶಮಸಾಮಾನ್ಯಾತ್ । ಅವಾನ್ತರದಿಶಃ ವಿಸ್ಫುಲಿಙ್ಗಾಃ । ವಿಸ್ಫುಲಿಙ್ಗವದ್ ವಿಕ್ಷೇಪಾತ್ । ತಸ್ಮಿನ್ ಏತಸ್ಮಿನ್ ಏವಂ ಗುಣವಿಶಿಷ್ಟೇ ದ್ಯುಲೋಕಾಗ್ನೌ ದೇವಾಃ ಇನ್ದ್ರಾದಯಃ ಶ್ರದ್ಧಾಂ ಜುಹ್ವತಿ ಆಹುತಿದ್ರವ್ಯಸ್ಥಾನೀಯಾಂ ಪ್ರಕ್ಷಿಪನ್ತಿ । ತಸ್ಯಾ ಆಹುತ್ಯಾಃ ಆಹುತೇಃ ಸೋಮೋ ರಾಜಾ ಪಿತೄಣಾಂ ಬ್ರಾಹ್ಮಣಾನಾಂ ಚ ಸಂಭವತಿ ॥

(ಭಾಷ್ಯಾರ್ಥ)

'ಅಸೌ ವೈ ಲೋಕೋಽಗ್ನಿರ್ಗೌತಮ' ಮುಂತಾದ (ಕಂಡಿಕೆಯ ಅಭಿಪ್ರಾಯವಿದು) : ನಾಲ್ಕನೆಯ ಪ್ರಶ್ನೆಯನ್ನು (ಇಲ್ಲಿ) ಮೊದಲನೆಯದಾಗಿ ನಿರ್ಣಯಿಸಿ (ಹೇಳಿ)ದೆ. (ಪಾಠ)ಕ್ರಮವನ್ನು ಬಿಟ್ಟಿರುವದೋ ಎಂದರೆ ಮಿಕ್ಕ

1. ಇಲ್ಲಿ 'ತಥಾ' ಎಂಬ ಪಾಠವೂ ಉಂಟು.

ಪ್ರಶ್ನೆಗಳ ನಿರ್ಣಯವು ಇದರ ನಿರ್ಣಯಕ್ಕೆ ಅಧೀನವಾಗಿರುವದರಿಂದ.[1] ಎಲೈ ಗೌತಮನೆ, ಆ ದ್ಯುಲೋಕವೇ ಅಗ್ನಿಯು. **ಅಗ್ನಿಯಲ್ಲದ ದ್ಯುಲೋಕದಲ್ಲಿ ಅಗ್ನಿದೃಷ್ಟಿಯನ್ನು — ಸ್ತ್ರೀಪುರುಷರಲ್ಲಿ (ವಿಧಿಸಿರುವಂತೆಯೇ)[2] — ವಿಧಿಸಿರುತ್ತದೆ.** ಆ ದ್ಯುಲೋಕವೆಂಬ ಅಗ್ನಿಗೆ ಆದಿತ್ಯನೇ ಸಮಿತ್ತು, ಏಕೆಂದರೆ (ಅದು ಅಗ್ನಿಯನ್ನು) ಉರಿಯುವಂತೆ ಮಾಡುತ್ತದೆ; (ಇದರ ವಿವರ): ಆದಿತ್ಯನಿಂದಲೇ ಅಲ್ಲವೆ, ಆ ಲೋಕವು ಸಮಿದ್ಧವಾಗುತ್ತದೆ[3] ? ರಶ್ಮಿಗಳೇ ಧೂಮವು, ಏಕೆಂದರೆ ಸಮಿತ್ತಿನಿಂದ ಏಳುವದೆಂಬುದೇ ಇಲ್ಲಿ ಹೋಲಿಕೆಯಾಗಿರುತ್ತದೆ; (ಇದರ ವಿವರ): ಆದಿತ್ಯನಿಂದಲ್ಲವೆ, ರಶ್ಮಿಗಳು ಹೊರಟುಬಂದಿವೆ? ಲೋಕದಲ್ಲಿ ಸಮಿತ್ತಿನಿಂದಲೇ ಧೂಮವು ಏಳುತ್ತದೆ. ಅಹಸ್ಸೇ ಉರಿಯು; ಏಕೆಂದರೆ ಬೆಳಗುವದೆಂಬುದು (ಈ ಎರಡಕ್ಕೂ) ಹೋಲಿಕೆ. ದಿಕ್ಕುಗಳು ಕೆಂಡಗಳು; ಏಕೆಂದರೆ ಆರುವದೆಂಬ ಹೋಲಿಕೆಯಿದೆ.[4] ಒಳದಿಕ್ಕುಗಳೇ ಕಿಡಿಗಳು; ಏಕೆಂದರೆ (ಅವು) ಕಿಡಿಗಳಂತೆ ಸಿಡಿದುಬಂದಿರುತ್ತವೆ.[5]

ಆ ಈ ಇಂಥ ಗುಣಗಳಿಂದೊಡಗೂಡಿದ ದ್ಯುಲೋಕವೆಂಬ ಅಗ್ನಿಯಲ್ಲಿ ಇಂದ್ರಾದಿದೇವತೆಗಳು ಶ್ರದ್ಧೆಯನ್ನು ಹೋಮಮಾಡುತ್ತಾರೆ; (ಅದನ್ನು) ಆಹುತಿದ್ರವ್ಯದಂತೆ (ಆ ಅಗ್ನಿಯಲ್ಲಿ) ಹಾಕುತ್ತಾರೆ. ಆ (ಆಹುತ್ಯಾಃ=ಆಹುತೇಃ)

---

1. ಇಲ್ಲಿಂದ ಹೊರಟವರು ಎಲ್ಲಿಗೆ ಹೋಗುತ್ತಾರೆ ? ಅವರು ಮತ್ತೆ ಇಲ್ಲಿಗೆ ಹೇಗೆ ಮರಳಿ ಬರುತ್ತಾರೆ ? ಆ ಲೋಕವು ಏತಕ್ಕೆ ಪೂರ್ಣವಾಗುವದಿಲ್ಲ ? ಎಷ್ಟನೆಯ ಆಹುತಿಯಲ್ಲಿ ಅಪ್ಪು ಪುರುಷವಾಕ್ಕಾಗುತ್ತದೆ ? ಯಾವ ಕರ್ಮವನ್ನು ಮಾಡಿದವರು ಯಾವ ಪ್ರಕಾರ ಪಿತೃಯಾಣದೇವಯಾನಗಳಿಗೆ ಹೋಗುತ್ತಾರೆ ?– ಎಂಬೀ ಕ್ರಮದಲ್ಲಿ ಪ್ರಶ್ನೆಗಳನ್ನು ಕೇಳಿತ್ತು. ಇವುಗಳಲ್ಲಿ ನಾಲ್ಕನೆಯದನ್ನು ಮೊದಲು ತೆಗೆದುಕೊಂಡದ್ದು ಏಕೆಂದರೆ ಅರ್ಥಕ್ರಮವು ಪಾಠಕ್ರಮಕ್ಕಿಂತ ಪ್ರಬಲ; ಅರ್ಥಕ್ರಮದಲ್ಲಿ ಈ ಪ್ರಶ್ನೆಗೆ ಹೆಚ್ಚಿನ ಪ್ರಾಮುಖ್ಯವಿದೆ.

2. ತಥಾ ಎಂಬ ಪಾಠಕ್ಕೆ ಸ್ತ್ರೀಪುರುಷರಲ್ಲಿಯೂ ಹಾಗೆಯೇ ಅಗ್ನಿದೃಷ್ಟಿಯನ್ನು ವಿಧಿಸಿದೆ ಎಂಬು ಅನುವಾದ.

3. ಪ್ರಕಾಶಿತವಾಗಿ ತೋರುತ್ತದೆ ?

4. ಉರಿಯು ಆರಿದ ಬಳಿಕ ಕೆಂಡವು ತೋರುವಂತೆ ಹಗಲು ಮುಗಿದ ಬಳಿಕ ದಿಕ್ಕುಗಳು ಕೆಂಪಾಗಿ ಕಾಣುತ್ತವೆ.

5. ದಿಕ್ಕುಗಳನ್ನು ಬಿಟ್ಟು ನಡುವೆ ಸಿಡಿದುಬಂದಂತೆ ಇವೆ ಎಂದರ್ಥ.

ಆಹುತಿಯಿಂದ ಸೋಮನೆಂಬ ಪಿತೃಗಳ ಮತ್ತು ಬ್ರಾಹ್ಮಣರ ರಾಜನು ಹುಟ್ಟುತ್ತಾನೆ.[1]

## ಅಗ್ನಿಹೋತ್ರಾಹುತಿಗಳ ಉತ್ಕ್ರಾಂತ್ಯಾದಿಗಳ ಅನುವಾದ

(ಭಾಷ್ಯ)

೪೪೦. ತತ್ರ ಕೇ ದೇವಾಃ, ಕಥಂ ಜುಹ್ವತಿ, ಕಿಂ ವಾ ಶ್ರದ್ಧಾಖ್ಯಂ ಹವಿರಿತಿ? ಇತ್ಯತಃ ಉಕ್ತಮಸ್ಮಾಭಿಃ ಸಂಬನ್ಧೇ। "ನ ತ್ವೇವೈನಯೋಃ[2] ತ್ವಮುತ್ಕ್ರಾನ್ತಿಮ್" (ಶತ. ಬ್ರಾ. ೧೧-೬-೨-೪) ಇತ್ಯಾದಿ ಪದಾರ್ಥಷಟ್ಕನಿರ್ಣಯಾರ್ಥಮ್ ಅಗ್ನಿಹೋತ್ರೇ ಉಕ್ತಮ್ "ತೇ ವಾ ಏತೇ ಅಗ್ನಿಹೋತ್ರಾಹುತೀ[3] ಹುತೇ ಸತ್ಯಾವುತ್ಕ್ರಾಮತಃ[4]। ತೇ ಅನ್ತರಿಕ್ಷಮಾವಿಶತಃ। ತೇ ಅನ್ತರಿಕ್ಷಮಾಹವನೀಯಂ[5] ಕುರ್ವಾತೇ ವಾಯುಂ ಸಮಿಧಂ ಮರೀಚೀರೇವ ಶುಕ್ರಾಮಾಹುತಿಂ ತೇ ಅನ್ತರಿಕ್ಷಂ ತರ್ಪಯತಃ। ತೇ ತತ ಉತ್ಕ್ರಾಮತಃ॥" (ಶತ. ಬ್ರಾ. ೧೧-೬-೨-೬), "ತೇ ದಿವಮಾವಿಶತಃ। ತೇ ದಿವಮಾಹವನೀಯಂ[6] ಕುರ್ವಾತೇ ಆದಿತ್ಯಂ ಸಮಿಧಮ್" (ಶತ. ಬ್ರಾ. ೧೧-೬-೨-೭) ಇತ್ಯೇವಮಾದಿ ಉಕ್ತಮ್। ತತ್ರ ಅಗ್ನಿಹೋತ್ರಾಹುತೀ ಸಸಾಧನೇ ಏವ ಉತ್ಕ್ರಾಮತಃ। ಯಥಾ ಇಹ ಯೈಃ ಸಾಧನೈರ್ವಿಶಿಷ್ಟೇ ಯೇ ಜ್ಞಾಯೇತೇ ಆಹವನೀಯಾಗ್ನಿಸಮಿದ್ಧೂಮಾಙ್ಗಾರವಿಸ್ಫುಲಿಙ್ಗಾಹುತಿದ್ರವ್ಯೈಃ, ತೇ ತಥೈವ ಉತ್ಕ್ರಾಮತಃ

---

1. ಪ್ರತಿಯೊಂದು ಅಗ್ನಿಗೂ ಸಮಿತ್ತು, ಹೊಗೆ, ಉರಿ, ಕೆಂಡ, ಕಿಡಿ—ಎಂಬ ಐದು ಅಂಶಗಳನ್ನು ತೋರಿಸಿರುತ್ತದೆ. ಸಾಮಾನ್ಯಾಗ್ನಿಯಲ್ಲಿ ಹೋಮಮಾಡಿದ ದ್ರವ್ಯವು ಅಪೂರ್ವರೂಪವಾಗಿ ಬರುವಂತೆಯೇ ಪ್ರತಿಯೊಂದು ಅಗ್ನಿಯಿಂದಲೂ ಒಂದು ಹೊಸ ರೂಪವು ಹುಟ್ಟುತ್ತದೆ. ಇದನ್ನು ಮುಂದೆ ಸ್ಪಷ್ಟಪಡಿಸಲಾಗುವದು, ದೇವತೆಗಳು ಅಧ್ಯಾತ್ಮ, ಅಧಿಭೂತ, ಅಧಿದೈವ- ಮುಂತಾದ ರೂಪಗಳಿಂದ ಬೇರೆಬೇರೆಯಾಗಿದ್ದುಕೊಂಡು ಹೋಮಮಾಡುತ್ತಾರೆ, ಚಂದ್ರನು ವೃದ್ಧಿಯನ್ನು ಹೊಂದುವದನ್ನೇ ಇಲ್ಲಿ ಹುಟ್ಟುತ್ತಾನೆ ಎಂದಿದೆ; ಚಂದ್ರನ ಅಬಂಶವನ್ನು ಸೂರ್ಯನು ಎಳೆದುಕೊಂಡಿದ್ದು ಶುಕ್ಲಪಕ್ಷದಲ್ಲಿ ಬಿಡುವದರಿಂದ ಚಂದ್ರವೃದ್ಧಿ—ಎಂದು ವಾರ್ತಿಕ ೮೪,೮೭,೯೧. ಚಂದ್ರಸೋಮರಿಗೆ ಭೇದವನ್ನೂ ಅಲ್ಲಿ (೯೪) ಹೇಳಿದೆ.

2. ಇಲ್ಲಿ 'ಏನಯೋಃ' ಎಂದೇ ಇರುವದರಿಂದ ಹಿಂದೆ (ಭಾ. ಭಾ. ೪೨೬) ಉದಾಹರಿಸಿರುವ ವಾಕ್ಯದಲ್ಲಿಯೂ ಇದೇ ಇದ್ದಿರಬೇಕೆಂಬ ಪಕ್ಷಕ್ಕೆ ಬಲವಿದೆ.

3. ವಾ॥ ಪಾಠದಲ್ಲಿರುವ 'ಅಗ್ನಿಹೋತ್ರಾಹುತೀ' ಎಂಬುದರ ಬದಲು 'ಆಹುತೀ' ಎಂದಿಷ್ಟೇ ಇದೆ. ಆಚಾರ್ಯರು ಅರ್ಥವನ್ನು ಬರೆದಿದ್ದಾರೋ ಕಾಣ್ವಪಾಠವನ್ನು ಉದಾಹರಿಸಿರುತ್ತಾರೋ ತಿಳಿಯದು. ಹೀಗೆಯೇ ಮುಂದಿನ ಪಾಠಗಳಿಗೂ ತಿಳಿಯಬೇಕು.

4. 'ಸತ್ಯೌ' ಇಲ್ಲ.

5. ಅನ್ತರಿಕ್ಷಮೇವಾಹವನೀಯಮ್.

6. ದಿವಮೇವಾಹವನೀಯಮ್.

ಅಸ್ಮಾತ್ ಲೋಕಾತ್ ಅಮುಂ ಲೋಕಮ್ । ತತ್ರ ಅಗ್ನಿಃ ಅಗ್ನಿತ್ವೇನ, ಸಮಿತ್ ಸಮಿತ್ತ್ವೇನ, ಧೂಮೋ ಧೂಮತ್ವೇನ, ಅಙ್ಗಾರಾಃ ಅಙ್ಗಾರತ್ವೇನ, ವಿಸ್ಫುಲಿಙ್ಗಾ ವಿಸ್ಫುಲಿಙ್ಗತ್ವೇನ, ಆಹುತಿದ್ರವ್ಯಮಪಿ ಪಯಆದ್ಯಾಹುತಿದ್ರವ್ಯತ್ವೇನೈವ ಸರ್ಗಾದೌ ಅವ್ಯಾಕೃತಾವಸ್ಥಾಯಾಮಪಿ ಪರೇಣ ಸೂಕ್ಷ್ಮೇಣಾತ್ಮನಾ ವ್ಯವತಿಷ್ಠತೇ। ತತ್ ವಿದ್ಯಮಾನಮೇವ ಸಸಾಧನಮ್ ಅಗ್ನಿಹೋತ್ರಲಕ್ಷಣಂ ಕರ್ಮ ಅಪೂರ್ವೇಣಾತ್ಮನಾ ವ್ಯವಸ್ಥಿತಂ ಸತ್ ತತ್ಪುನಃ ವ್ಯಾಕರಣಕಾಲೇ ತಥೈವ ಅನ್ತರಿಕ್ಷಾದೀನಾಮ್ ಆಹವನೀಯಾದ್ಯಗ್ನ್ಯಾದಿಭಾವಂ ಕುರ್ವತ್ ವಿಪರಿಣಮತೇ । ತಥೈವ ಇದಾನೀಮಪಿ ಅಗ್ನಿಹೋತ್ರಾಖ್ಯಂ ಕರ್ಮ । ಏವಮ್ ಅಗ್ನಿಹೋತ್ರಾಹುತ್ಯಪೂರ್ವವಿಪರಿಣಾಮಾತ್ಮಕಂ ಜಗತ್ ಸರ್ವಮ್ ಇತಿ ಆಹುತ್ಯೋರೇವ ಸ್ತುತ್ಯರ್ಥತ್ವೇನ ಉತ್ಕ್ರಾನ್ತ್ಯಾದ್ಯಾಃ ಲೋಕಂ ಪ್ರತ್ಯುತ್ಥಾಯಿತಾನ್ತಾಃ ಷಟ್ಪದಾರ್ಥಾಃ ಕರ್ಮಪ್ರಕರಣೇ ಅಧಸ್ತಾನ್ನಿರ್ಣೀತಾಃ ॥

(ಭಾಷ್ಯಾರ್ಥ)

ಇಲ್ಲಿ ದೇವತೆಗಳು ಎಂದರೆ ಯಾರು? (ಅವರು) ಹೇಗೆ ಹೋಮಮಾಡುತ್ತಾರೆ? ಶ್ರದ್ಧೆ ಎಂಬ ಹವಿಯಾದರೂ ಯಾವದು? –ಎಂಬೀ (ಪ್ರಶ್ನೆ)ಗೆ (ಉತ್ತರವೇನೆಂದರೆ), ಸಂಬಂಧಗ್ರಂಥದಲ್ಲಿ ನಾವು (ಹೀಗೆಂದು) ಹೇಳಿರುತ್ತೇವೆ: "ನೀನು ಈ ಎರಡರ ಉತ್ಕ್ರಾಂತಿಯನ್ನಾಗಲಿ....ಅರಿತೇ ಇಲ್ಲ" (ಶತ. ಬ್ರಾ. ೧೧-೬-೨-೪) ಎಂದುಮುಂತಾಗಿ (ಹೇಳಿರುವ) ಆರು ಪದಾರ್ಥಗಳನ್ನು ಗೊತ್ತುಪಡಿಸಿ (ಹೇಳು)ವದಕ್ಕಾಗಿ ಅಗ್ನಿಹೋತ್ರದಲ್ಲಿ "ಆ ಈ ಅಗ್ನಿಹೋತ್ರಾಹುತಿಗಳೆರಡೂ ಹುತವಾದ ಬಳಿಕ ಉತ್ಕ್ರಾಂತವಾಗುತ್ತವೆ. ಅವು ಅಂತರಿಕ್ಷವನ್ನು ಪ್ರವೇಶಿಸುತ್ತವೆ, ಅವು ಅಂತರಿಕ್ಷವನ್ನು ಆಹವನೀಯವಾಗಿಯೂ ವಾಯುವನ್ನು ಸಮಿತ್ತನ್ನಾಗಿಯೂ ರಶ್ಮಿಗಳನ್ನು ಶುದ್ಧವಾದ ಆಹುತಿಯನ್ನಾಗಿಯೂ ಮಾಡಿಕೊಳ್ಳುತ್ತವೆ. ಅವು ಅಂತರಿಕ್ಷವನ್ನು ತೃಪ್ತಿಗೊಳಿಸುತ್ತವೆ. ಅವು ಅಲ್ಲಿಂದ ಉತ್ಕ್ರಾಂತವಾಗುತ್ತವೆ" (ಶತ. ಬ್ರಾ. ೧೧-೬-೨-೬), "ಅವು ದ್ಯುಲೋಕವನ್ನು ಪ್ರವೇಶಿಸುತ್ತವೆ. ಅವು ದ್ಯುಲೋಕವನ್ನು ಆಹವನೀಯಾಗ್ನಿಯಾಗಿಯೂ ಆದಿತ್ಯನನ್ನು ಸಮಿತ್ತನ್ನಾಗಿಯೂ (ಚಂದ್ರನನ್ನು ಶುದ್ಧವಾದ ಆಹುತಿಯನ್ನಾಗಿಯೂ ಮಾಡಿಕೊಳ್ಳುತ್ತವೆ. ಅವು ದ್ಯುಲೋಕವನ್ನು ತೃಪ್ತಿಗೊಳಿಸುತ್ತವೆ. ಅವು ಅಲ್ಲಿಂದ ಹಿಂದಕ್ಕೆ ಬರುತ್ತವೆ)" (ಶತ.ಬ್ರಾ. ೧೧-೬-೨-೬) ಎಂದು ಮುಂತಾಗಿ (ಶತ. ಬ್ರಾ. ೧೧-೬-೨-೮ರಿಂದ ೧೦) ಹೇಳಿರುತ್ತದೆ.

ಇಲ್ಲಿ ಅಗ್ನಿಹೋತ್ರಾಹುತಿಗಳೆರಡೂ ಸಾಧನಗಳಿಂದೊಡಗೂಡಿಯೇ ಉತ್ಕ್ರಾಂತವಾಗುತ್ತವೆ. (ಎಂದರೆ) ಹೇಗೆ ಇಲ್ಲಿ ಯಾವ (ಆಹುತಿಗಳೆರಡೂ) ಆಹವನೀಯಾಗ್ನಿ, ಸಮಿತ್ತು, ಹೊಗೆ, ಕೆಂಡ, ಕಿಡಿಗಳು, ಆಹುತಿದ್ರವ್ಯ- ಎಂಬ

ಯಾವ ಸಾಧನಗಳಿಂದೊಡಗೂಡಿ ತಿಳಿಯುಬರುತ್ತಿವೆಯೋ ಆ (ಆಹುತಿಗಳು) ಹಾಗೆಯೇ ಈ ಲೋಕದಿಂದ ಆ ಲೋಕಕ್ಕೆ ಉತ್ಕ್ರಾಂತವಾಗುತ್ತವೆ. ಅವುಗಳಲ್ಲಿ ಅಗ್ನಿಯು ಅಗ್ನಿಯಾಗಿಯೂ, ಸಮಿತ್ತು ಸಮಿತ್ತಾಗಿಯೂ, ಹೊಗೆಯು ಹೊಗೆಯಾಗಿಯೂ ಕೆಂಡವು ಕೆಂಡವಾಗಿಯೂ, ಕಿಡಿಗಳು ಕಿಡಿಗಳಾಗಿಯೂ ಆಹುತಿದ್ರವ್ಯವೂ ಹಾಲೇ ಮುಂತಾದ ಆಹುತಿದ್ರವ್ಯವಾಗಿಯೇ ಸೃಷ್ಟಿಗೆ ಮೊದಲು ಅವ್ಯಾಕೃತಾವಸ್ಥೆಯಲ್ಲಿಯೂ ಅತ್ಯಂತಸೂಕ್ಷ್ಮವಾದ ರೂಪದಿಂದ ಇದ್ದುಕೊಂಡಿರುತ್ತವೆ. ಆದ್ದರಿಂದ ಅಗ್ನಿಹೋತ್ರವೆಂಬ ಕರ್ಮವು ಅಪೂರ್ವದ[1] ರೂಪದಿಂದ ಸಾಧನಸಹಿತವಾಗಿ (ಅವ್ಯಾಕೃತಾವಸ್ಥೆಯಲ್ಲಿ) ಇದ್ದುಕೊಂಡೇ ಇರುವದಾಗಿ ಮತ್ತೆ ವ್ಯಾಕೃತವಾಗುವ ಕಾಲದಲ್ಲಿ ಹಾಗೆಯೇ ಅಂತರಿಕ್ಷಾದಿಗಳಿಗೆ ಆಹವನೀಯಾಗ್ನಿಯೇ ಮುಂತಾದ ಭಾವವನ್ನುಂಟುಮಾಡುತ್ತಾ ವಿಪರಿಣಾಮವಾಗುತ್ತದೆ. ಹೀಗೆಯೇ ಈಗಲೂ ಅಗ್ನಿಹೋತ್ರವೆಂಬ ಕರ್ಮವು (ವಿಪರಿಣಾಮವಾಗುವದಾಗಿದೆ). ಹೀಗೆ ಜಗತ್ತೆಲ್ಲವೂ ಅಗ್ನಿಹೋತ್ರದ ಆಹುತಿಗಳ 'ಅಪೂರ್ವ'ದ ಪರಿಣಾಮಾತ್ಮಕವಾಗಿರುತ್ತದೆ[2] -ಎಂದು (ಅಗ್ನಿಹೋತ್ರದ) ಆಹುತಿಗಳನ್ನೇ ಸ್ತುತಿಮಾಡುವದಕ್ಕಾಗಿ ಉತ್ಕ್ರಾಂತಿಯಿಂದ ಹಿಡಿದು 'ಲೋಕಂ ಪ್ರತ್ಯುತ್ಥಾಯಿತ್ವ'ವೆನ್ನುವವರೆಗಿನ ಆರು ಪದಾರ್ಥಗಳನ್ನು ಹಿಂದೆ ಕರ್ಮಪ್ರಕರಣದಲ್ಲಿ ನಿರ್ಣಯಿಸಲಾಗಿರುತ್ತದೆ.

## ಇಲ್ಲಿ ಹೇಳಿರುವ ದೇವಾದಿಗಳ ವಿವರ

(ಭಾಷ್ಯ)

೪೪೦. ಇಹ ತು ಕರ್ತುಃ ಕರ್ಮವಿಪಾಕವಿವಕ್ಷಾಯಾಂ ದ್ಯುಲೋಕಾಗ್ನ್ಯಾದ್ಯಾರಭ್ಯ ಪಞ್ಚಾಗ್ನಿದರ್ಶನಮ್ ಉತ್ತರಮಾರ್ಗಪ್ರತಿಪತ್ತಿಸಾಧನಂ ವಿಶಿಷ್ಟಕರ್ಮಫಲೋಪಭೋಗಾಯ ವಿಧಿತ್ಸಿತಮ್ ಇತಿ ದ್ಯುಲೋಕಾಗ್ನ್ಯಾದಿದರ್ಶನಂ ಪ್ರಸ್ತೂಯತೇ। ತತ್ರ ಯೇ ಆಧ್ಯಾತ್ಮಿಕಾಃ ಪ್ರಾಣಾಃ ಇಹ ಅಗ್ನಿಹೋತ್ರಸ್ಯ ಹೋತಾರಃ ತೇ ಏವ ಆಧಿದೈವಿಕತ್ವೇನ ಪರಿಣತಾಃ ಸನ್ತಃ ಇನ್ದ್ರಾದಯೋ ಭವನ್ತಿ। ತ ಏವ ತತ್ರ ಹೋತಾರೋ ದ್ಯುಲೋಕಾಗ್ನೌ। ತೇ ಚ ಇಹ ಅಗ್ನಿ

1. ಅದೃಷ್ಟವಾದ ಸೂಕ್ಷ್ಮರೂಪಕ್ಕೆ ಈ ಹೆಸರನ್ನು ಮೀಮಾಂಸಕರು ಕೊಟ್ಟಿರುತ್ತಾರೆ.

2. ಜಗತ್ತೆಲ್ಲವೂ ಅಗ್ನಿಹೋತ್ರದ ಪರಿಣಾಮವೆಂಬುದು ಉಪಲಕ್ಷಣ; ಕರ್ಮದ ಪರಿಣಾಮವೇ ಜಗತ್ತು. ಆದರೂ ಪ್ರಕೃತದಲ್ಲಿ ಅಗ್ನಿಹೋತ್ರವನ್ನು ಹೊಗಳಬೇಕಾಗಿರುವದರಿಂದ ಅಗ್ನಿಹೋತ್ರದ ಪರಿಣಾಮವೆಂದಿದೆ.

ಹೋತ್ರಸ್ಯ ಫಲಭೋಗಾಯ ಅಗ್ನಿಹೋತ್ರಂ ಹುತವನ್ತಃ। ತೇ ಏವ ಫಲಪರಿಣಾಮಕಾಲೇಽಪಿ ತತ್ಫಲಭೋಕ್ತೃತ್ವಾತ್ ತತ್ರ ತತ್ರ ಹೋತೃತ್ವಂ ಪ್ರತಿಪದ್ಯನ್ತೇ ತಥಾತಥಾ ವಿಪರಿಣಮಮಾನಾ ದೇವಶಬ್ದವಾಚ್ಯಾಃ ಸನ್ತಃ। ಅತ್ರ ಚ ಯತ್ ಪಯೋದ್ರವ್ಯಮ್ ಅಗ್ನಿಹೋತ್ರಕರ್ಮಾಶ್ರಯಭೂತಮ್ ಇಹ ಆಹವನೀಯೇ ಪ್ರಕ್ಷಿಪ್ತಮ್ ಅಗ್ನಿನಾ ಭಕ್ಷಿತಮ್ ಅದೃಷ್ಟೇನ ಸೂಕ್ಷ್ಮೇಣ ರೂಪೇಣ ವಿಪರಿಣತಮ್ ಸಹ ಕರ್ತ್ರಾ ಯಜಮಾನೇನ ಅಮುಂ ಲೋಕಂ ಧೂಮಾದಿಕ್ರಮೇಣ ಅನ್ತರಿಕ್ಷಮ್, ಅನ್ತರಿಕ್ಷಾದ್ ದ್ಯುಲೋಕಮ್ ಆವಿಶತಿ। ತಾಃ ಸೂಕ್ಷ್ಮಾ ಆಪಃ ಆಹುತಿಕಾರ್ಯಭೂತಾಃ ಅಗ್ನಿಹೋತ್ರಸಮವಾಯಿನ್ಯಃ ಕರ್ತೃಸಹಿತಾಃ ಶ್ರದ್ಧಾಶಬ್ದವಾಚ್ಯಾಃ ಸೋಮಲೋಕೇ ಕರ್ತುಃ ಶರೀರಾನ್ತರಾರಮ್ಭಾಯ ದ್ಯುಲೋಕಂ ಪ್ರವಿಶನ್ತ್ಯಃ ಹೂಯನ್ತೇ ಇತ್ಯುಚ್ಯನ್ತೇ। ತಾಃ ತತ್ರ ದ್ಯುಲೋಕಂ ಪ್ರವಿಶ್ಯ ಸೋಮಮಣ್ಡಲೇ ಕರ್ತುಃ ಶರೀರಮ್ ಆರಭನ್ತೇ। ತದೇತತ್ ಉಚ್ಯತೇ 'ದೇವಾಃ ಶ್ರದ್ಧಾಂ ಜುಹ್ವತಿ, ತಸ್ಯಾ ಆಹುತ್ಯೈ ಸೋಮೋ ರಾಜಾ ಸಂಭವತಿ' ಇತಿ। "ಶ್ರದ್ಧಾ ವಾ ಆಪಃ" (ತೈ. ಸಂ. ೧-೬-೮) ಇತಿ ಶ್ರುತೇಃ। "ವೇತ್ಥ ಯತಿಥ್ಯಾಮಾಹುತ್ಯಾಂ ಹುತಾಯಾಮಾಪಃ ಪುರುಷವಾಚೋ ಭೂತ್ವಾ ಸಮುತ್ಥಾಯ ವದನ್ತಿ" (೬-೨-೨) ಇತಿ ಪ್ರಶ್ನಃ। ತಸ್ಯ ಚ ನಿರ್ಣಯವಿಷಯೇ "ಅಸೌ ವೈ ಲೋಕೋಽಗ್ನಿಃ" ಇತಿ ಪ್ರಸ್ತುತಮ್ ತಸ್ಮಾತ್ ಆಪಃ ಕರ್ಮಸಮವಾಯಿನ್ಯಃ ಕರ್ತುಃ ಶರೀರಾರಮ್ಭಿಕಾಃ ಶ್ರದ್ಧಾಶಬ್ದವಾಚ್ಯಾ ಇತಿ ನಿಶ್ಚೀಯತೇ। ಭೂಯಸ್ತ್ವಾತ್ "ಆಪಃ ಪುರುಷವಾಚಃ" ಇತಿ ವ್ಯಪದೇಶಃ, ನ ತು ಇತರಾಣಿ ಭೂತಾನಿ ನ ಸನ್ತೀತಿ। ಕರ್ಮಪ್ರಯುಕ್ತಶ್ಚ ಶರೀರಾರಮ್ಭಃ। ಕರ್ಮ ಚ ಅಪ್ಸಮವಾಯಿ। ತತಶ್ಚ ಅಪಾಂ ಪ್ರಾಧಾನ್ಯಂ ಶರೀರಕರ್ತೃತ್ವೇ। ತೇನ ಚ "ಆಪಃ ಪುರುಷವಾಚಃ" ಇತಿ ವ್ಯಪದೇಶಃ। ಕರ್ಮಕೃತೋ ಹಿ ಜನ್ಮಾರಮ್ಭಃ ಸರ್ವತ್ರ। ತತ್ರ ಯದ್ಯಪಿ ಅಗ್ನಿಹೋತ್ರಾಹುತಿಸ್ತುತಿದ್ವಾರೇಣ ಉತ್ಕ್ರಾನ್ತ್ಯಾದಯಃ ಪ್ರಸ್ತುತಾಃ ಷಟ್ಪದಾರ್ಥಾಃ ಅಗ್ನಿಹೋತ್ರೇ, ತಥಾಪಿ ವೈದಿಕಾನಿ ಸರ್ವಾಣ್ಯೇವ ಕರ್ಮಾಣಿ ಅಗ್ನಿಹೋತ್ರಪ್ರಭೃತೀನಿ ಲಕ್ಷ್ಯನ್ತೇ। ದಾರಾಗ್ನಿಸಂಬದ್ಧಂ ಹಿ ಪಾಙ್ಕ್ತಂ ಕರ್ಮ ಪ್ರಸ್ತುತ್ಯ ಉಕ್ತಮ್ "ಕರ್ಮಣಾ ಪಿತೃಲೋಕಃ" (೧-೫-೧೬) ಇತಿ। ವಕ್ಷ್ಯತಿ ಚ "ಅಥ ಯೇ ಯಜ್ಞೇನ ದಾನೇನ ತಪಸಾ ಲೋಕಾಞ್ಜಯನ್ತಿ" (೬-೨-೧೬) ಇತಿ॥

(ಭಾಷ್ಯಾರ್ಥ)

ಇಲ್ಲಿಯಾದರೋ ಕರ್ತೃವಿನ ಕರ್ಮವಿಪಾಕವನ್ನು ಹೇಳಬೇಕಾಗಿರುವುದರಿಂದ ದ್ಯುಲೋಕಾಗ್ನಿಯೇ ಮುಂತಾದವುಗಳನ್ನು[1] ಪ್ರಾರಂಭಿಸಿ (ಒಂದಾ

1. ಮೂಲದಲ್ಲಿ ಆದಿಶಬ್ದವು ಇರಬೇಕೆ ? -ಎಂಬುದು ವಿಚಾರಣೀಯವಾಗಿದೆ.

ನೊಂದು) ಗೊತ್ತಾದ ಕರ್ಮಫಲವನ್ನು ಅನುಭವಿಸುವದಕ್ಕೆ (ಕಾರಣವಾಗಿರುವ) ಉತ್ತರಮಾರ್ಗಪ್ರಾಪ್ತಿಸಾಧನವಾದ ಪಂಚಾಗ್ನಿದರ್ಶನವನ್ನು ವಿಧಿಸಬೇಕಾಗಿರುತ್ತದೆ.[1] ಆದ್ದರಿಂದ ದ್ಯುಲೋಕಾಗ್ನಿಯೇ ಮುಂತಾದವುಗಳ ದರ್ಶನವನ್ನು ಪ್ರಸ್ತಾಪಿಸಿರುತ್ತದೆ.

ಹೀಗಿರುವಲ್ಲಿ ಇಲ್ಲಿ ಅಗ್ನಿಹೋತ್ರವನ್ನು ಹೋಮಮಾಡುವ ಆಧ್ಯಾತ್ಮಿಕವಾದ ಪ್ರಾಣಗಳಿವೆಯಲ್ಲ, ಇವೇ ಆಧಿದೈವಿಕವಾಗಿ ಪರಿಣಾಮವಾಗಿ ಇಂದ್ರಾದಿಗಳಾಗುತ್ತವೆ; ಅವೇ ಆ ದ್ಯುಲೋಕಾಗ್ನಿಯಲ್ಲಿ ಹೋಮಮಾಡುವ[2] ದೇವತೆಗಳು. ಅವರು ಇಲ್ಲಿ ಅಗ್ನಿಹೋತ್ರದ ಫಲವನ್ನು ಭೋಗಿಸುವದಕ್ಕಾಗಿ ಅಗ್ನಿಹೋತ್ರವನ್ನು ಹೋಮಮಾಡಿದ್ದರು; ಅವರೇ (ಕರ್ಮದ) ಫಲವು ಪರಿಣಾಮವಾಗುವ ಕಾಲದಲ್ಲಿ ಆ ಫಲವನ್ನು ಅನುಭವಿಸುತ್ತಾರಾದ್ದರಿಂದ ಆಯಾ ರೀತಿಯಿಂದ ಪರಿಣಾಮವಾಗಿ ದೇವತೆಗಳೆಂಬ ಹೆಸರಿನಿಂದ ಕರೆಯಿಸಿಕೊಂಡು ಆಯಾ (ಅಗ್ನಿ)ಯಲ್ಲಿ ಹೋಮಮಾಡುವವರಾಗುವರು.[3] ಇಲ್ಲಿ ಅಗ್ನಿಹೋತ್ರವೆಂಬ ಕರ್ಮಕ್ಕೆ ಆಶ್ರಯವಾಗಿರುವ ಹಾಲೆಂಬ ವಸ್ತುವಿದೆಯಲ್ಲ, (ಅದು) ಆಹವನೀಯಾಗ್ನಿಯಲ್ಲಿ ಹಾಕಿದ್ದು ಅಗ್ನಿಯು (ಅದನ್ನು) ಭಕ್ಷಿಸಿದ ಮೇಲೆ ಅದೃಷ್ಟವಾದ ಸೂಕ್ಷ್ಮರೂಪದಿಂದ ಪರಿಣಾಮವಾಗಿ ಕರ್ಮವನ್ನು ಮಾಡಿದ ಯಜಮಾನನೊಡನೆ ಆ ಲೋಕಕ್ಕೆ ಧೂಮಾದಿಕ್ರಮದಿಂದ ಅಂತರಿಕ್ಷವನ್ನೂ ಅಂತರಿಕ್ಷದಿಂದ ದ್ಯುಲೋಕವನ್ನೂ ಪ್ರವೇಶಿಸುತ್ತದೆ; ಕರ್ತೃಸಹಿತವಾಗಿರುವ ಆ ಸೂಕ್ಷ್ಮವಾದ ಅಪ್ಪು, ಆಹುತಿಯ ಕಾರ್ಯವಾಗಿರುವ ಅಗ್ನಿಹೋತ್ರಸಂಬದ್ಧವಾದ, ಶ್ರದ್ಧಾಶಬ್ದವಾಚ್ಯವಾದ ಸೋಮಲೋಕದಲ್ಲಿ ಕರ್ತೃವಿಗೆ ಮತ್ತೊಂದು ಶರೀರವುಂಟಾಗುವದಕ್ಕಾಗಿ ದ್ಯುಲೋಕವನ್ನು ಹೊಗುವದರಿಂದ 'ಹುತವಾಗುತ್ತವೆ' ಎಂದಿದೆ. ಅವು ಅಲ್ಲ ದ್ಯುಲೋಕವನ್ನು ಹೊಕ್ಕು ಸೋಮಮಂಡಲದಲ್ಲಿ ಕರ್ತೃವಿನ ಶರೀರವನ್ನುಂಟುಮಾಡುತ್ತವೆ. ಇದನ್ನೇ "ದೇವತೆಗಳು ಶ್ರದ್ಧೆಯನ್ನು ಹೋಮಮಾಡುತ್ತಾರೆ, ಆ ಆಹುತಿಯಿಂದ ಸೋಮರಾಜನು ಸಂಭವಿಸುತ್ತಾನೆ" ಎಂದು (ಇಲ್ಲಿ) ಹೇಳಿರುತ್ತದೆ. "ಶ್ರದ್ಧೆಯೇ ಅಪ್ಪು" (ತೈ. ಸಂ. ೧-೬-೮) ಎಂಬ ಶ್ರುತಿಯಿಂದ

---

1. ಬರಿಯ ಕರ್ಮಕ್ಕೆ ಫಲವು ಬೇರೆ, ಪಂಚಾಗ್ನಿವಿದ್ಯಾಸಹಿತವಾದ ಕರ್ಮಕ್ಕೆ ಬೇರೆ; ಈ ವಿದ್ಯೆಯಿಂದ ಉತ್ತರಮಾರ್ಗಪ್ರಾಪ್ತಿಯೇ ಆಗುತ್ತದೆ ಎಂಬುದನ್ನು ತಿಳಿಸಿ ಕರ್ಮವಿಪಾಕದ ಪ್ರಕಾರಗಳನ್ನು ವಿವೇಚಿಸಬೇಕಾಗಿದೆ.

2. ದೇವತೆಗಳೆಂದರೆ ಯಾರು ? ಎಂಬ ಪ್ರಶ್ನೆಗೆ ಇದು ಉತ್ತರವು.

3. ಹೇಗೆ ಹೋಮಮಾಡುತ್ತಾರೆ ? ಎಂಬ ಪ್ರಶ್ನೆಗೆ ಉತ್ತರವಿದು. ಮುಂದಿನ ವಾಕ್ಯಗಳಲ್ಲಿ ಇದರ ವಿವರಣೆಯಿದೆ.

(ಇವೆರಡೂ ಒಂದೇ ಎಂದು ಸಿದ್ಧವಾಗುತ್ತದೆ).[1] "ಎಷ್ಟನೆಯ ಆಹುತಿಯನ್ನು ಹೋಮಮಾಡಿದಾಗ ಅಪ್ಪು ಪುರುಷವಾಕ್ಕಾಗಿ ಮೇಲಕ್ಕೆದ್ದು ಮಾತಾಡುತ್ತದೆ ?" (೬-೨-೨) ಎಂಬುದು ಪ್ರಶ್ನೆ. ಅದಕ್ಕೆ ಉತ್ತರವನ್ನು ಹೇಳುವದಕ್ಕಾಗಿ "ಆ ಲೋಕವೇ ಅಗ್ನಿಯು" ಎಂದು ಪ್ರಾರಂಭವಾಗಿರುತ್ತದೆ. ಆದ್ದರಿಂದ ಕರ್ತೃವಿನ (ಹೊಸ) ಶರೀರವನ್ನುಂಟುಮಾಡುವ ಕರ್ಮಸಂಬದ್ಧವಾದ ಅಪ್ಪೇ (ಇಲ್ಲಿ) ಶ್ರದ್ಧಾಶಬ್ದವಾಚ್ಯವಾದದ್ದು[2] ಎಂದು ನಿಶ್ಚಿತವಾಗುತ್ತದೆ. 'ಅಪ್ಪು ಪುರುಷ ವಾಕ್ಕಾಗಿ' ಎಂದು ಹೇಳಿರುವದು (ಅಪ್ಪು) ಬಹಳವಾಗಿರುವದರಿಂದಲೇ ಹೊರತು ಮಿಕ್ಕ ಭೂತಗಳು ಇಲ್ಲವೆಂಬ ಕಾರಣದಿಂದಲ್ಲ.[3] ಕರ್ಮಪ್ರಯುಕ್ತವಾಗಿಯೇ (ಹೊಸ) ಶರೀರವು ಉಂಟಾಗತಕ್ಕದ್ದು; (ಆ) ಕರ್ಮವು ಅಪ್ಸಂಬದ್ಧವಾಗಿರುತ್ತದೆ.[4] ಆದ್ದರಿಂದಲೂ ಅಪ್ಪು ಶರೀರವನ್ನುಂಟುಮಾಡುವದರಲ್ಲಿ ಪ್ರಧಾನವಾಗಿರುತ್ತದೆ. ಆದ್ದರಿಂದಲೇ 'ಅಪ್ಪು ಪುರುಷವಾಕ್ಕಾಗುತ್ತದೆ' ಎಂದು ಹೇಳಲಾಗಿದೆ. ಕರ್ಮವನ್ನು ಮಾಡಿರುವವನಿಗಲ್ಲವೆ, ಎಲ್ಲಿಯಾದರೂ ಜನ್ಮವುಂಟಾಗುವದು[5] ?

ಇಲ್ಲಿ ಅಗ್ನಿಹೋತ್ರದ ಆಹುತಿಗಳನ್ನು ಹೊಗಳುವದರ ಮೂಲಕ ಉತ್ಕ್ರಾಂತಿಯೇ ಮುಂತಾದ ಆರು ಪದಾರ್ಥಗಳನ್ನು ಅಗ್ನಿಹೋತ್ರ(ಪ್ರಕರಣದಲ್ಲಿ) ಪ್ರಸ್ತುತವಾಗಿದ್ದವೆಂಬುದು ನಿಜ. ಆದರೂ ಅಗ್ನಿಹೋತ್ರವೇ ಮುಂತಾದ ಸರ್ವವೈದಿಕಕರ್ಮಗಳೂ (ಇಲ್ಲಿ) ಉಪಲಕ್ಷಿತವಾಗಿರುತ್ತವೆ.[6] ಏಕೆಂದರೆ

---

1. ಇಲ್ಲಿ ಶ್ರದ್ಧೆಯೆಂಬ ಹೆಸರಿನಿಂದ ಕರೆದಿರುವ ಹವಿಸ್ಸು ಯಾವದು ? -ಎಂಬ ಪ್ರಶ್ನೆಗೆ ಇದು ಉತ್ತರವು.

2 ಉಪಕ್ರಮದ ಪ್ರಶ್ನೆಯಲ್ಲಿ ಅಪ್ಪು ಬದ್ಧವಿರುವದರಿಂದ ಅದಕ್ಕೆ ಉತ್ತರವಾಗಿ ಬಂದಿರುವ ಈ ವಾಕ್ಯದಲ್ಲಿರುವ ಶ್ರದ್ಧೆಯೆಂಬ ಹವಿಸ್ಸು ಅಪ್ಪೇ ಎಂದಾಗುತ್ತದೆ. ಸೂ. ಭಾ. ೩-೧-೫ (ಭಾ. ಭಾ. ೨೧೯)ನ್ನು ನೋಡಿ

3. ಹೋಮದ್ರವ್ಯದಲ್ಲಿ ಅಪ್ಪು ಹೆಚ್ಚಾಗಿರುತ್ತದೆ.

4. ಅಪ್ಪು ಪ್ರಧಾನವಾಗಿರುತ್ತದೆ ಎಂದರ್ಥ.

5. ಪುಣ್ಯವಾಗಲಿ, ಪಾಪವಾಗಲಿ, ಕರ್ಮವೇ ಆಯಾ ಜನ್ಮಕ್ಕೆ ಹೇತು; ಆದ್ದರಿಂದ ಅಪ್ಪು ಪ್ರಧಾನವಾಗಿರುವ ಕರ್ಮವನ್ನು ಅಪ್ಪು ಎಂದು ಕರೆಯುವದು ಯುಕ್ತವಾಗಿದೆ ಎಂದರ್ಥ. ಇಲ್ಲಿ ಭೂತಮಾತ್ರೆಗಳನ್ನೆಲ್ಲ ಅಪ್ಪೆಂದು ಕರೆದಿದೆ ಎಂಬುದಕ್ಕೆ ಸೂ. ಭಾ. ಭಾ. ೩-೧-೨ (ಭಾ. ಭಾ. ೨೧೫)ನ್ನು ನೋಡಿ. ಇದು ಬರಿಯ ಅಪ್ಪಿನ ಉತ್ಕ್ರಾಂತಿಯಲ್ಲ, ಕರ್ಮಫಲವನ್ನನುಭವಿಸುವದಕ್ಕಾಗಿ ಅಪ್ಪರಿವೃತರಾದ ಜೀವರ ಉತ್ಕ್ರಾಂತಿಯೇ ಎಂಬುದಕ್ಕೆ ಸೂ. ಭಾ. ೩-೧-೬ (ಭಾ. ಭಾ. ೨೨೦)ನ್ನು ನೋಡಿ.

6. ಪಂಚಾಗ್ನಿವಿದ್ಯೆಯಲ್ಲಿ ಅಗ್ನಿಹೋತ್ರಪ್ರಕರಣದ ಪರಾಮರ್ಶವಿದ್ದರೂ ಅದು ಉಪಲಕ್ಷಣಮಾತ್ರ; ವೈದಿಕಕರ್ಮಮಾತ್ರಕ್ಕೆ ಪಿತೃಲೋಕವು ಫಲವು, ಪಂಚಾಗ್ನಿವಿದ್ಯಾಸಹಿತವಾದ ಕರ್ಮಕ್ಕೆ ಉತ್ತರಮಾರ್ಗಪ್ರಾಪ್ತಿಯು ಫಲವು ಎಂಬುದೇ ಪ್ರಕೃತದಲ್ಲಿ ವಿವಕ್ಷಿತ.

ದಾರಾಗ್ನಿಸಂಬದ್ಧವಾಗಿರುವ ಪಾಙ್ಕ್ತಕರ್ಮವನ್ನು ಪ್ರಾರಂಭಿಸಿರುವ (ಪ್ರಕರಣದಲ್ಲಿ) "ಕರ್ಮದಿಂದ ಪಿತೃಲೋಕವು" (೧-೫-೧೬) ಎಂದು ಹಿಂದೆ ಹೇಳಿರುತ್ತದೆ. "ಇನ್ನು ಯಾರು ಯಜ್ಞದಿಂದಲೂ ದಾನದಿಂದಲೂ ತಪಸ್ಸಿನಿಂದಲೂ ಲೋಕಗಳನ್ನು ಗೆದ್ದುಕೊಳ್ಳುವರೋ....." (೬-೨-೧೮) ಎಂದು ಮುಂದೆಯೂ ಹೇಳಿದೆ.[1]

## ಪರ್ಜನ್ಯಾಗ್ನಿ

(ಉಪನಿಷತ್ತು)

**ಪರ್ಜನ್ಯೋ ವಾ ಅಗ್ನಿರ್ಗೌತಮ ತಸ್ಯ ಸಂವತ್ಸರ ಏವ ಸಮಿದಭ್ರಾಣಿ ಧೂಮೋ ವಿದ್ಯುದರ್ಚಿರಶನಿರಙ್ಗಾರಾ ಹ್ರಾದುನಯೋ ವಿಸ್ಫುಲಿಙ್ಗಾಸ್ತಸ್ಮಿನ್ನೇತಸ್ಮಿನ್ನಗ್ನೌ ದೇವಾಃ ಸೋಮಗ್ಂ ರಾಜಾನಂ ಜುಹ್ವತಿ ತಸ್ಯಾ ಆಹುತ್ಯೈ ವೃಷ್ಟಿಃ ಸಂಭವತಿ ॥ ೧೦ ॥**

೧೦. ಗೌತಮನೆ, ಪರ್ಜನ್ಯನೇ ಅಗ್ನಿಯು. ಅದಕ್ಕೆ ಸಂವತ್ಸರವೇ ಸಮಿತ್ತು, ಮೋಡಗಳೇ ಹೊಗೆ, ಮಿಂಚೇ ಉರಿ, ಸಿಡಿಲೇ ಕೆಂಡವು, ಹ್ರಾದುನಿಗಳೇ ಕಿಡಿಗಳು. ಆ ಈ ಅಗ್ನಿಯಲ್ಲಿ ದೇವತೆಗಳು ಸೋಮರಾಜನನ್ನು ಹೋಮಮಾಡುತ್ತಾರೆ. ಆ ಆಹುತಿಯಿಂದ ವೃಷ್ಟಿಯು ಹುಟ್ಟುತ್ತದೆ.

## ಪರ್ಜನ್ಯನಲ್ಲಿ ಅಗ್ನಿದೃಷ್ಟಿ

(ಭಾಷ್ಯ)

೮೪೧. ಪರ್ಜನ್ಯೋ ವಾ ಅಗ್ನಿರ್ಗೌತಮ । ದ್ವಿತೀಯಃ ಆಹುತ್ಯಾಧಾರಃ ಆಹುತ್ಯೋಃ ಆವೃತ್ತಿಕ್ರಮೇಣ । ಪರ್ಜನ್ಯೋ ನಾಮ ವೃಷ್ಟ್ಯುಪಕರಣಾಭಿಮಾನೀ ದೇವತಾತ್ಮಾ । ತಸ್ಯ ಸಂವತ್ಸರ ಏವ ಸಮಿತ್ । ಸಂವತ್ಸರೇಣ ಹಿ ಶರದಾದಿಭಿರ್ಗ್ರೀಷ್ಮಾನ್ತೈಃ ಸ್ವಾವಯವೈರ್ವಿಪರಿವರ್ತಮಾನೇನ ಪರ್ಜನ್ಯೋಽಗ್ನಿ ರ್ದೀಪ್ಯತೇ । ಅಭ್ರಾಣಿ ಧೂಮಃ । ಧೂಮಪ್ರಭವತ್ವಾತ್, ಧೂಮವತ್ ಉಪಲಕ್ಷ್ಯತ್ವಾದ್ ವಾ । ವಿದ್ಯುತ್ ಅರ್ಚಿಃ । ಪ್ರಕಾಶಸಾಮಾನ್ಯಾತ್ । ಅಶನಿಃ

---

1. ಹಿಂದುಮುಂದಿನ ಗ್ರಂಥಗಳಲ್ಲಿ ವೈದಿಕಕರ್ಮಸಾಮಾನ್ಯವನ್ನೇ ಪರಾಮರ್ಶಿಸಿರುವದರಿಂದ ಇಲ್ಲಿ ಅಗ್ನಿಹೋತ್ರವನ್ನು ಉಪಲಕ್ಷಣವಾಗಿಟ್ಟುಕೊಳ್ಳಬೇಕೆಂದು ನಿಶ್ಚಯವಾಗುತ್ತದೆ ಎಂದರ್ಥ.

ಅಜ್ಗಾರಾಃ । ಉಪಶಾನ್ತಕಾಠಿನ್ಯಸಾಮಾನ್ಯಾಭ್ಯಾಮ್ । ಹ್ರಾದುನಯೋ ಹ್ಲಾದುನಯಃ ಸ್ತನಯಿತ್ನುಶಬ್ದಾಃ ವಿಸ್ಫುಲಿಙ್ಗಾಃ। ವಿಕ್ಷೇಪಾನೇಕತ್ವಸಾಮಾನ್ಯಾತ್। ತಸ್ಮಿನ್ನೇತಸ್ಮಿನ್ ಇತಿ ಆಹುತ್ಯಧಿಕರಣನಿರ್ದೇಶಃ। ದೇವಾ ಇತಿ ತೇ ಏವ ಹೋತಾರಃ। ಸೋಮಂ ರಾಜಾನಂ ಜುಹ್ವತಿ। ಯೋಽಸೌ ದ್ಯುಲೋಕಾಗ್ನೌ ಶ್ರದ್ಧಾಯಾಂ ಹುತಾಯಾಮ್ ಅಭಿನಿರ್ವೃತ್ತಃ ಸೋಮಃ ಸ ದ್ವಿತೀಯೇ ಪರ್ಜನ್ಯಾಗ್ನೌ ಹೂಯತೇ। ತಸ್ಯಾಶ್ಚ ಸೋಮಾಹುತೇಃ ವೃಷ್ಟಿಃ ಸಂಭವತಿ ॥

(ಭಾಷ್ಯಾರ್ಥ)

'ಪರ್ಜನ್ಯೋ ವಾ ಅಗ್ನಿರ್ಗೌತಮ' (ಎಂಬ ಕಂಡಿಕೆಯ ಅಭಿಪ್ರಾಯವೇನೆಂದರೆ: (ಈ ಪರ್ಜನ್ಯನು) ಆಹುತಿಗಳ ಆವೃತ್ತಿಕ್ರಮದಿಂದ (ನೋಡಿದಾಗ) ಆಹುತ್ಯಾಧಾರ(ವಾದ ಅಗ್ನಿಯು). ಪರ್ಜನ್ಯನು ಎಂದರೆ ಮಳೆಗೆ ಉಪಕರಣವಾದ (ಮೋಡಕ್ಕೆ) ಅಭಿಮಾನಿಯಾದ ದೇವತಾತ್ಮನು.

ಆ (ಪರ್ಜನ್ಯನಿಗೆ) ಸಂವತ್ಸರವೇ[1] ಸಮಿತ್ತು. ಶರತ್ಕಾಲದಿಂದ[2] ಗ್ರೀಷ್ಮದವರೆಗೆ ಇರುವ ತನ್ನ ಅವಯವಗಳಿಂದ ಸುತ್ತುತ್ತಿರುವ ಸಂವತ್ಸರದಿಂದಲೇ ಅಲ್ಲವೆ, ಪರ್ಜನ್ಯನೆಂಬ ಅಗ್ನಿಯು ದೀಪ್ತವಾಗುತ್ತದೆ? ಮೋಡಗಳೇ (ಅದಕ್ಕೆ) ಹೊಗೆ; ಏಕೆಂದರೆ (ಅವು) ಹೊಗೆಯಿಂದಾಗುತ್ತವೆ,[3] ಅಥವಾ ಹೊಗೆಯಂತೆ ಕಾಣಿಸುತ್ತಿರುತ್ತವೆ. ಮಿಂಚೇ ಉರಿ; ಏಕೆಂದರೆ ಪ್ರಕಾಶವು (ಇವೆರಡಕ್ಕೂ) ಸಮಾನವಾಗಿದೆ. ಸಿಡಿಲೇ ಕೆಂಡವು; ಏಕೆಂದರೆ ಆರಿದಮೇಲೆ ಉಂಟಾಗುವದು, ಗಟ್ಟಿಯಾಗಿರುವದು ಎಂಬ ಎರಡು ಹೋಲಿಕೆಗಳಿವೆ[4] (ಹ್ರಾದುನಯಃ =ಹ್ಲಾದುನಯಃ[5]) ಹ್ರಾದುನಿಗಳೇ, ಗುಡುಗಿನ ಶಬ್ದಗಳೇ ಕಿಡಿಗಳು; ಏಕೆಂದರೆ ಸಿಡಿದುಬರುವದರೂ ಅನೇಕವಾಗಿರುವದೂ (ಎರಡಕ್ಕೂ) ಸಮಾನವಾಗಿರುತ್ತದೆ.

'ಆ ಇದರಲ್ಲಿ' ಎಂದು ಆಹುತಿಗೆ ಅಧಿಕರಣವಾದ (ಅಗ್ನಿಯನ್ನು) ತಿಳಿಸಿರುತ್ತದೆ. ದೇವತೆಗಳು ಎಂದರೆ ಹೋತೃಗಳಿಂದ ಅದೇ (ಇಂದ್ರಾದಿಗಳು) ಸೋಮ

---

1. ಸಂವತ್ಸರಶಬ್ದವು ಇಲ್ಲಿ ಕಾಲಕ್ಕೆ ಉಪಲಕ್ಷಣವಾಗಿ ಪ್ರಯುಕ್ತವಾಗಿದೆ.

2. ಶರತ್ಕಾಲಕ್ಕೆ ಮೋಡಗಳೆಲ್ಲ ಹೋಗಿರುತ್ತವೆ, ಮುಂದೆ ಕ್ರಮಕ್ರಮವಾಗಿ ರೂಪುಗೊಂಡು ವರ್ಷರ್ತುವಿಗೆ ಮಳೆಯನ್ನು ಕೊಡುತ್ತವೆ.

3. ಮೋಡವು ಹೊಗೆಯಿಂದಾಗುತ್ತದೆ ಎಂಬಿದೊಂದು ಪ್ರಾಚೀನರ ನಂಬಿಕೆ; ಮೇಘಸಂದೇಶದಲ್ಲಿ ಕಾಳಿದಾಸನೂ ಇದನ್ನು ಪರಾಮರ್ಶಿಸಿರುತ್ತಾನೆ.

4. ಇಲ್ಲಿ ಅಶನಿಶಬ್ದದಿಂದ ಯಾವ ಪದಾರ್ಥವನ್ನು ಹೇಳಿದೆ ಎಂಬುದು ವಿಚಾರಣೀಯ.

5. ಛಾಂದೋಗ್ಯದಲ್ಲಿ 'ಹ್ಲಾದನಯಃ' ಎಂಬ ರೂಪವಿದೆ.

ರಾಜನನ್ನು ಹೋಮಮಾಡುತ್ತವೆ. ದ್ಯುಲೋಕಾಗ್ನಿಯಲ್ಲಿ ಶ್ರದ್ಧೆಯನ್ನು ಹೋಮ ಮಾಡಿದಾಗ ಸೋಮವುಂಟಾಗಿತ್ತಷ್ಟೆ; ಅದನ್ನು (ಈ) ಎರಡನೆಯದಾದ ಪರ್ಜನ್ಯಾಗ್ನಿಯಲ್ಲಿ ಹೋಮಮಾಡಲಾಗುತ್ತದೆ. ಆ ಸೋಮಾಹುತಿಯಿಂದ ವೃಷ್ಟಿಯುಂಟಾಗುತ್ತದೆ.

## ಈ ಲೋಕವೆಂಬ ಅಗ್ನಿ

(ಉಪನಿಷತ್ತು)

**ಅಯಂ ವೈ ಲೋಕೋಽಗ್ನಿರ್ಗೌತಮ ತಸ್ಯ ಪೃಥಿವ್ಯೇವ ಸಮಿದಗ್ನಿರ್ಧೂಮೋ ರಾತ್ರಿರರ್ಚಿಶ್ಚನ್ದ್ರಮಾ ಅಙ್ಗಾರಾ ನಕ್ಷತ್ರಾಣಿ ವಿಸ್ಫುಲಿಙ್ಗಾಸ್ತಸ್ಮಿನ್ನೇತಸ್ಮಿನ್ನಗ್ನೌ ದೇವಾ ವೃಷ್ಟಿಂ ಜುಹ್ವತಿ ತಸ್ಯಾ ಆಹುತ್ಯಾ ಅನ್ನಗ್ಂ ಸಂಭವತಿ ॥ ೧೧ ॥**

೧೧. ಗೌತಮನೆ, ಈ ಲೋಕವೇ ಅಗ್ನಿಯು. ಅದಕ್ಕೆ ಪೃಥಿವಿಯೇ ಸಮಿತ್ತು, ಬೆಂಕಿಯೇ ಹೊಗೆಯು, ರಾತ್ರಿಯೇ ಉರಿ, ಚಂದ್ರನೇ ಕೆಂಡ, ನಕ್ಷತ್ರಗಳೇ ಕಿಡಿಗಳು. ಆ ಈ ಅಗ್ನಿಯಲ್ಲಿ ದೇವತೆಗಳು ವೃಷ್ಟಿಯನ್ನು ಹೋಮಮಾಡುತ್ತಾರೆ. ಆ ಆಹುತಿಯಿಂದ ಅನ್ನವುಂಟಾಗುತ್ತದೆ.

## ಈ ಲೋಕದಲ್ಲಿ ಅಗ್ನಿದೃಷ್ಟಿ

(ಭಾಷ್ಯ)

೪೪೨. ಅಯಂ ವೈ ಲೋಕೋಽಗ್ನಿರ್ಗೌತಮ। ಅಯಂ ಲೋಕಃ ಇತಿ ಪ್ರಾಣಿಜನ್ಮೋಪಭೋಗಾಶ್ರಯಃ ಕ್ರಿಯಾಕಾರಕಫಲವಿಶಿಷ್ಟಃ। ಸ ತೃತೀಯೋಽಗ್ನಿಃ। ತಸ್ಯ ಅಗ್ನೇಃ ಪೃಥಿವ್ಯೇವ ಸಮಿತ್। ಪೃಥಿವ್ಯಾ ಹಿ ಅಯಂ ಲೋಕಃ ಅನೇಕಪ್ರಾಣ್ಯುಪಭೋಗಸಂಪನ್ನಯಾ ಸಮಿಧ್ಯತೇ । ಅಗ್ನಿಃ ಧೂಮಃ । ಪೃಥಿವ್ಯಾಶ್ರಯೋತ್ಥಾನಸಾಮಾನ್ಯಾತ್ । ಪಾರ್ಥಿವಂ ಹಿ ಇನ್ಧನದ್ರವ್ಯಮ್ ಆಶ್ರಿತ್ಯ ಅಗ್ನಿಃ ಉತ್ತಿಷ್ಠತಿ ಯಥಾ ಸಮಿದಾಶ್ರಯೇಣ ಧೂಮಃ । ರಾತ್ರಿಃ ಅರ್ಚಿಃ ಸಮಿತ್ಸಂಬನ್ಧಪ್ರಭವಸಾಮಾನ್ಯಾತ್। ಅಗ್ನೇಃ ಸಮಿತ್ಸಂಬನ್ಧೇನ ಹಿ ಅರ್ಚಿಃ ಸಂಭವತಿ। ತಥಾ ಪೃಥಿವೀ ಸಮಿತ್ಸಂಬನ್ಧೇನ ಶರ್ವರೀ। ಪೃಥಿವೀಚ್ಛಾಯಾಂ ಹಿ ಶಾರ್ವರಂ ತಮ ಆಚಕ್ಷತೇ। ಚನ್ದ್ರಮಾ ಅಙ್ಗಾರಾಃ। ತತ್ಪ್ರಭವತ್ವಸಾಮಾನ್ಯಾತ್। ಅರ್ಚಿಷೋ ಹಿ ಅಙ್ಗಾರಾಃ ಪ್ರಭವನ್ತಿ। ತಥಾ ರಾತ್ರೌ ಚನ್ದ್ರಮಾಃ। ಉಪಶಾನ್ತತ್ವಸಾಮಾನ್ಯಾದ್ವಾ। ನಕ್ಷತ್ರಾಣಿ ವಿಸ್ಫುಲಿಙ್ಗಾಃ।

ವಿಸ್ಫುಲಿಙ್ಗವದ್ವಿಕ್ಷೇಪಸಾಮಾನ್ಯಾತ್ । ತಸ್ಮಿನ್ನೇತಸ್ಮಿನ್ ಇತ್ಯಾದಿ ಪೂರ್ವವತ್ । ವೃಷ್ಟಿಂ ಜುಹ್ವತಿ । ತಸ್ಯಾ ಆಹುತೇಃ ಅನ್ನಂ ಸಂಭವತಿ । ವೃಷ್ಟಿಪ್ರಭವತ್ವಸ್ಯ ಪ್ರಸಿದ್ಧತ್ವಾತ್ ವ್ರೀಹಿಯವಾದೇರನ್ನಸ್ಯ ॥

(ಭಾಷ್ಯಾರ್ಥ)

'ಅಯಂ ವೈ ಲೋಕೋಽಗ್ನಿರ್ಗೌತಮ' (ಎಂಬ ಕಂಡಿಕೆಯ ಅಭಿಪ್ರಾಯವಿದು. ಇಲ್ಲಿ) ಈ ಲೋಕ ಎಂದರೆ ಜೀವರುಗಳು ಹುಟ್ಟುವದಕ್ಕೂ (ಕರ್ಮಫಲವನ್ನು) ಉಪಭೋಗಿಸುವದಕ್ಕೂ ಆಶ್ರಯವಾಗಿರುವ ಕ್ರಿಯಾಕಾರಕಫಲಗಳಿಂದೊಡಗೂಡಿರುವ (ಲೋಕವು). ಅದು ಮೂರನೆಯ ಅಗ್ನಿಯು.

ಈ ಅಗ್ನಿಗೆ ಪೃಥಿವಿಯೇ ಸಮಿತ್ತು. ಅನೇಕ ಪ್ರಾಣಿಗಳ ಉಪಭೋಗಗಳಿಂದ ಕೂಡಿರುವ ಪೃಥಿವಿಯಿಂದಲಲ್ಲವೆ, ಈ ಲೋಕವು ದೀಪ್ತವಾಗುತ್ತಿದೆ? ಬೆಂಕಿಯೇ ಧೂಮವು; ಏಕೆಂದರೆ ಪೃಥಿವಿಯನ್ನು ಆಶ್ರಯಿಸಿಕೊಂಡು (ಅದರಿಂದ) ಏಳುತ್ತದೆ ಎಂಬುದು (ಧೂಮಕ್ಕೆ) ಹೋಲಿಕೆ; ಪಾರ್ಥಿವವಾದ ಇಂಧನವಸ್ತುವನ್ನು ಆಶ್ರಯಿಸಿಯಲ್ಲವೆ, ಸಮಿತ್ತನ್ನಾಶ್ರಯಿಸಿ ಹೊಗೆ(ಯು ಎದ್ದುಕೊಳ್ಳುವಂತೆ) ಬೆಂಕಿಯು ಎದ್ದುಕೊಳ್ಳುತ್ತದೆ? ರಾತ್ರಿಯೇ ಉರಿ; ಏಕೆಂದರೆ ಸಮಿತ್ತಿಗೆ ಸೇರಿಕೊಂಡು (ಅದರಿಂದ) ಏಳುವದೆಂಬ ಹೋಲಿಕೆಯು (ಇದಕ್ಕಿದೆ. ಹೇಗೆಂದರೆ) ಅಗ್ನಿಯು ಉರಿಯುವ ಸಮಿತ್ತಿನ ಸಂಬಂಧದಿಂದಲಷ್ಟೆ, ಉಂಟಾಗುತ್ತದೆ? ಹಾಗೆಯೇ ಪೃಥಿವಿ ಎಂಬ ಸಮಿತ್ತಿನ ಸಂಬಂಧದಿಂದ ರಾತ್ರಿಯು (ಉಂಟಾಗುತ್ತದೆ). ಪೃಥಿವಿಯ ನೆರಳನ್ನಲ್ಲವೆ, ರಾತ್ರಿಯ ಕತ್ತಲೆ ಎನ್ನುವರು? ಚಂದ್ರನೇ ಕೆಂಡ; ಏಕೆಂದರೆ ಅದರಿಂದುಂಟಾಗುವದೆಂಬುದು (ಎರಡಕ್ಕೂ) ಸಮಾನವಾಗಿದೆ. ಹೇಗೆಂದರೆ ಉರಿಯಿಂದಲೇ ಕೆಂಡವುಂಟಾಗುತ್ತದೆಯಷ್ಟೆ, ಅದರಂತೆ ರಾತ್ರಿಯಲ್ಲಿ ಚಂದ್ರನು ಹುಟ್ಟುತ್ತಾನೆ. ಅಥವಾ (ಉರಿ) ಆರಿದ್ದೆಂಬ ಹೋಲಿಕೆಯು ಇದೆಯಾದ್ದರಿಂದಲಾದರೂ (ಚಂದ್ರನು ಕೆಂಡವೆನ್ನಬಹುದು). ನಕ್ಷತ್ರಗಳು ಕಿಡಿಗಳು; ಏಕೆಂದರೆ ಕಿಡಿಗಳಂತೆ (ಅತ್ತಿತ್ತ) ಚದರಿಕೊಂಡಿರುವದೆಂಬ ಹೋಲಿಕೆ (ಅವಕ್ಕಿದೆ).

'ಆ ಈ (ಅಗ್ನಿಯಲ್ಲಿ)' ಎಂದುಮುಂತಾಗಿರುವ (ಗ್ರಂಥವು) ಹಿಂದಿನಂತೆ (ವ್ಯಾಖ್ಯಾನಮಾಡಿಕೊಳ್ಳತಕ್ಕದ್ದು). ವೃಷ್ಟಿಯನ್ನು (ಆದರಲ್ಲಿ ದೇವತೆಗಳು) ಹೋಮಮಾಡುತ್ತಾರೆ, ಆ ಆಹುತಿಯಿಂದ ಅನ್ನವು ಉಂಟಾಗುತ್ತದೆ; ಏಕೆಂದರೆ ಭತ್ತ, ಜವೆ- ಮುಂತಾದ ಅನ್ನವು ಮಳೆಯಿಂದ ಉಂಟಾಗುವದು ಪ್ರಸಿದ್ಧವಾಗಿರುತ್ತದೆ.

## ಪುರುಷಶರೀರವೆಂಬ ಅಗ್ನಿ

(ಉಪನಿಷತ್ತು)

**ಪುರುಷೋ ವಾ ಅಗ್ನಿರ್ಗೌತಮ ತಸ್ಯ ವ್ಯಾತ್ತಮೇವ ಸಮಿತ್ ಪ್ರಾಣೋ ಧೂಮೋ ವಾಗರ್ಚಿಶ್ಚಕ್ಷುರಙ್ಗಾರಾಃ ಶ್ರೋತ್ರಂ ವಿಸ್ಫುಲಿಙ್ಗಾಸ್ತಸ್ಮಿನ್ನೇತಸ್ಮಿನ್ನಗ್ನೌ ದೇವಾ ಅನ್ನಂ ಜುಹ್ವತಿ ತಸ್ಯಾ ಆಹುತ್ಯೈ ರೇತಃ ಸಂಭವತಿ ॥ ೧೨ ॥**

೧೨. ಗೌತಮನೆ, ಪುರುಷನೇ ಅಗ್ನಿಯು. ಅದಕ್ಕೆ ತೆರೆದ (ಬಾಯಿಯೇ) ಸಮಿತ್ತು, ಪ್ರಾಣವೇ ಹೊಗೆ, ವಾಕ್ಕೇ ಉರಿ, ಕಣ್ಣೇ ಕೆಂಡ, ಕಿವಿಯೇ ಕಿಡಿಗಳು. ಆ ಈ ಅಗ್ನಿಯಲ್ಲಿ ದೇವತೆಗಳು ಅನ್ನವನ್ನು ಹೋಮಮಾಡುತ್ತಾರೆ. ಆ ಆಹುತಿಯಿಂದ ರೇತಸ್ಸು ಉಂಟಾಗುತ್ತದೆ.

## ಶರೀರದಲ್ಲಿ ಅಗ್ನಿದೃಷ್ಟಿ

(ಭಾಷ್ಯ)

೪೪೩. ಪುರುಷೋ ವಾ ಅಗ್ನಿರ್ಗೌತಮ । ಪ್ರಸಿದ್ಧಃ ಶಿರಃಪಾಣ್ಯಾದಿಮಾನ್ ಪುರುಷಃ ಚತುರ್ಥೋಽಗ್ನಿಃ । ತಸ್ಯ ವ್ಯಾತ್ತಂ ವಿವೃತಂ ಮುಖಂ ಸಮಿತ್ । ವಿವೃತೇನ ಹಿ ಮುಖೇನ ದೀಪ್ಯತೇ ಪುರುಷಃ ವಚನಸ್ವಾಧ್ಯಾಯಾದೌ, ಯಥಾ ಸಮಿಧಾ ಅಗ್ನಿಃ । ಪ್ರಾಣೋ ಧೂಮಃ । ತದುತ್ಥಾನಸಾಮಾನ್ಯಾತ್ । ಮುಖಾದ್ಧಿ ಪ್ರಾಣ ಉತ್ತಿಷ್ಠತಿ । ವಾಕ್ ಶಬ್ದಃ ಅರ್ಚಿಃ । ವ್ಯಞ್ಜಕತ್ವಸಾಮಾನ್ಯಾತ್ । ಅರ್ಚಿಶ್ಚ ವ್ಯಞ್ಜಕಮ್ । ತಥಾ ವಾಕ್‌ಶಬ್ದಃ ಅಭಿಧೇಯವ್ಯಞ್ಜಕಃ । ಚಕ್ಷುಃ ಅಙ್ಗಾರಾಃ । ಉಪಶಮಸಾಮಾನ್ಯಾತ್, ಪ್ರಕಾಶಾಶ್ರಯತ್ವಾದ್ವಾ । ಶ್ರೋತ್ರಂ ವಿಸ್ಫುಲಿಙ್ಗಾಃ । ವಿಕ್ಷೇಪಸಾಮಾನ್ಯಾತ್ । ತಸ್ಮಿನ್ ಅನ್ನಂ ಜುಹ್ವತಿ । ನನು ನೈವ ದೇವಾ ಅನ್ನಮ್ ಇಹ ಜುಹ್ವತೋ ದೃಶ್ಯನ್ತೇ । ನೈಷ ದೋಷಃ । ಪ್ರಾಣಾನಾಂ ದೇವತ್ವೋಪಪತ್ತೇಃ । ಅಧಿದೈವಮ್ ಇನ್ದ್ರಾದಯೋ ದೇವಾಃ । ತೇ ಏವ ಅಧ್ಯಾತ್ಮಂ ಪ್ರಾಣಾಃ । ತೇ ಚ ಅನ್ನಸ್ಯ ಪುರುಷೇ ಪ್ರಕ್ಷೇಪ್ತಾರಃ । ತಸ್ಯಾ ಆಹುತೇಃ ರೇತಃ ಸಂಭವತಿ । ಅನ್ನಪರಿಣಾಮೋ ಹಿ ರೇತಃ ॥

(ಭಾಷ್ಯಾರ್ಥ)

'ಪುರುಷೋ ವಾ ಅಗ್ನಿರ್ಗೌತಮ' (ಎಂಬ ಕಂಡಿಕೆಯ ಅರ್ಥವಿದು) : ಪ್ರಸಿದ್ಧವಾಗಿ ತಲೆ, ಕೈ– ಮುಂತಾದ (ಅವಯವ)ಗಳುಳ್ಳ ಪುರುಷ(ಶರೀರವೇ) ನಾಲ್ಕನೆಯ ಅಗ್ನಿಯು.

ಆದಕ್ಕೆ ತೆರೆದ, ಆಗಲಿಸಿದ ಮುಖವೇ ಸಮಿತ್ತು ; ತೆರೆದ ಮುಖದಿಂದ ಲಲ್ಲವೆ, ಸಮಿತ್ತಿನಿಂದ ಅಗ್ನಿಯು (ದೀಪ್ತ)ವಾಗುವಂತೆ ಮಾತಾಡುವದು, ಅಧ್ಯಯನಮಾಡುವದು ಮುಂತಾದದ್ದರಲ್ಲಿ ಪುರುಷನು ದೀಪ್ತನಾಗುತ್ತಾನೆ? ಪ್ರಾಣವೇ ಹೊಗೆ; ಏಕೆಂದರೆ ಆ (ಸಮಿತ್ತಿನಿಂದ) ಏಳುತ್ತದೆ ಎಂಬುದು ಸಮಾನವಾಗಿರುತ್ತದೆ; ಮುಖದಿಂದಲಲ್ಲವೆ, ಪ್ರಾಣವು ಎದ್ದುಕೊಳ್ಳುತ್ತದೆ? ವಾಕ್ಕೇ ಎಂದರೆ ಶಬ್ದವೇ ಉರಿಯು. ಏಕೆಂದರೆ ತೋರಿಸುವದೆಂಬುದು (ಎರಡಕ್ಕೂ) ಸಮಾನವಾಗಿರುತ್ತದೆ. ಉರಿಯು (ಪದಾರ್ಥ)ವ್ಯಂಜಕವಾಗಿರುತ್ತದೆ ; ಹಾಗೆಯೇ ವಾಕ್ಕು, ಶಬ್ದವು, ಅಭಿಧೇಯಕ್ಕೆ ವ್ಯಂಜಕವಾಗಿದೆ. ಕಣ್ಣೇ ಕೆಂಡವು ; ಏಕೆಂದರೆ ಉಪಶಾಂತವಾಗಿರುವದೆಂಬುದು (ಎರಡಕ್ಕೂ) ಸಮಾನವಾಗಿದೆ, ಅಥವಾ ಪ್ರಕಾಶಕ್ಕೆ ಆಶ್ರಯವಾಗಿರುವದರಿಂದ (ಅದು ಕೆಂಡದಂತೆ ಇದೆ ಎಂದಾದರೂ ತಿಳಿಯಬಹುದು). ಕಿವಿಯು ಕಿಡಿಗಳು ; ಏಕೆಂದರೆ ಸಿಡಿದು (ಬಂದಂತಿರುವದು) ಸಮಾನವಾಗಿರುತ್ತದೆ.

ಆ (ಅಗ್ನಿಯಲ್ಲಿ ದೇವತೆಗಳು) ಅನ್ನವನ್ನು ಹೋಮಮಾಡುತ್ತಾರೆ.

(ಆಕ್ಷೇಪ) : ಇಲ್ಲಿ ದೇವತೆಗಳು ಅನ್ನವನ್ನು ಹೋಮಮಾಡುವದು ಕಾಣುವದಿಲ್ಲವಲ್ಲ![1]

(ಪರಿಹಾರ) : ಇದೇನೂ ದೋಷವಲ್ಲ. ಏಕೆಂದರೆ ಪ್ರಾಣಗಳು ದೇವತೆಗಳಾಗಿರಬಹುದಾಗಿದೆ. ಅಧಿದೈವವಾಗಿ ಇಂದ್ರಾದಿಗಳೇ ದೇವತೆಗಳು ; ಅವರೇ ಅಧ್ಯಾತ್ಮವಾಗಿ ಪ್ರಾಣಗಳು. ಅವೇ (ಈ) ಪುರುಷನಲ್ಲಿ ಅನ್ನವನ್ನು ಹಾಕುವವು. ಆ ಆಹುತಿಯಿಂದ ರೇತಸ್ಸು ಉಂಟಾಗುತ್ತದೆ. ಏಕೆಂದರೆ ರೇತಸ್ಸು ಅನ್ನದ ಪರಿಣಾಮವಾಗಿದೆ.

## ಯೋಷಾಗ್ನಿ

(ಉಪನಿಷತ್ತು)

**ಯೋಷಾ ವಾ ಅಗ್ನಿರ್ಗೌತಮ ತಸ್ಯಾ ಉಪಸ್ಥ ಏವ ಸಮಿಲ್ಲೋಮಾನಿ ಧೂಮೋ ಯೋನಿರರ್ಚಿರ್ಯದನ್ತಃ ಕರೋತಿ ತೇಽಙ್ಗಾರಾ ಅಭಿನನ್ದಾಃ ವಿಸ್ಫುಲಿಙ್ಗಾಸ್ತಸ್ಮಿನ್ನೇತಸ್ಮಿನ್ನಗ್ನೌ ದೇವಾ ರೇತೋ ಜುಹ್ವತಿ ತಸ್ಯಾ ಆಹುತ್ಯೈ ಪುರುಷಃ ಸಂಭವತಿ ಸ ಜೀವತಿ ಯಾವಜ್ಜೀವತ್ಯಥ ಯದಾ ಮ್ರಿಯತೇ ॥ ೧೩ ॥**

---

1. ಅಧಿದೈವವಾಗಿ ಇಂದ್ರಾದಿಗಳು ಹೋಮಮಾಡುತ್ತಾರೆಂದು ಶಾಸ್ತ್ರಪ್ರಮಾಣದಿಂದ ನಂಬಬಹುದಾಗುತ್ತದೆ; ಈ ಶರೀರದಲ್ಲಿ ಅವರು ಹೋಮಮಾಡುತ್ತಾರೆ ಎಂದರೆ ಅವರೂ ಇಲ್ಲಿ ಪ್ರತ್ಯಕ್ಷವಾಗಿ ತಿಳಿಯಬರಬೇಕಲ್ಲವೆ ?– ಎಂದು ಆಕ್ಷೇಪ.

೧೩. ಗೌತಮನೆ, ಹೆಂಡತಿಯೇ ಅಗ್ನಿಯು. ಆಕೆಗೆ ಉಪಸ್ಥವೇ ಸಮಿತ್ತು ; ಲೋಮಗಳೇ ಹೊಗೆ ; ಯೋನಿಯೇ ಉರಿ ; ಒಳಗೆ ಮಾಡುತ್ತಾನಲ್ಲ, ಅದೇ ಕೆಂಡ ; ಅಭಿನಂದಗಳು ಕಿಡಿಗಳು. ಆ ಈ ಅಗ್ನಿಯಲ್ಲಿ ದೇವತೆಗಳು ರೇತಸ್ಸನ್ನು ಹೋಮಮಾಡುತ್ತಾರೆ. ಆ ಆಹುತಿಯಿಂದ ಪುರುಷನು ಉಂಟಾಗುತ್ತಾನೆ. ಅವನು ಎಲ್ಲಿಯವರೆಗೆ ಬದುಕಿರುತ್ತಾನೋ ಅಲ್ಲಿಯವರೆಗೆ ಬದುಕಿರುತ್ತಾನೆ. ಇನ್ನು ಯಾವಾಗ ಸಾಯುತ್ತಾನೋ—[1]

## ಹೆಂಡತಿಯಲ್ಲಿ ಅಗ್ನಿದೃಷ್ಟಿ

### (ಭಾಷ್ಯ)

೪೪೪. ಯೋಷಾ ವಾ ಅಗ್ನಿರ್ಗೌತಮ । ಯೋಷಾ ಇತಿ ಸ್ತ್ರೀ ಪಞ್ಚಮೋ ಹೋಮಾಧಿಕರಣಮ್[2] ಅಗ್ನಿಃ। ತಸ್ಯಾಃ ಉಪಸ್ಥ ಏವ ಸಮಿತ್ । ತೇನ ಹಿ ಸಾ ಸಮಿಧ್ಯತೇ। ಲೋಮಾನಿ ಧೂಮಃ। ತದುತ್ಥಾನಸಾಮಾನ್ಯಾತ್ । ಯೋನಿಃ ಅರ್ಚಿಃ। ವರ್ಣಸಾಮಾನ್ಯಾತ್। ಯತ್ ಅನ್ತಃ ಕರೋತಿ ತೇ ಅಙ್ಗಾರಾಃ। ಅನ್ತಃಕರಣಂ ಮೈಥುನವ್ಯಾಪಾರಃ। ತೇ ಅಙ್ಗಾರಾಃ। ವೀರ್ಯೋಪಶಮಹೇತುತ್ವಸಾಮಾನ್ಯಾತ್ । ವೀರ್ಯಾದ್ಯುಪಶಮಕಾರಣಂ ಮೈಥುನಮ್ ತಥಾ ಅಙ್ಗಾರಭಾವಃ ಅಗ್ನೇಃ ಉಪಶಮಕಾರಣಮ್। ಅಭಿನನ್ದಾಃ ಸುಖಲವಾಃ ಕ್ಷುದ್ರತ್ವಸಾಮಾನ್ಯಾತ್ ವಿಸ್ಫುಲಿಙ್ಗಾಃ। ತಸ್ಮಿನ್ ರೇತೋ ಜುಹ್ವತಿ ತಸ್ಯಾ ಆಹುತೇಃ ಪುರುಷಃ ಸಂಭವತಿ। ಏವಂ ದ್ಯುಪರ್ಜನ್ಯಾಯಂಲೋಕಪುರುಷಯೋಷಾಗ್ನಿಷು ಕ್ರಮೇಣ ಹೂಯಮಾನಾಃ ಶ್ರದ್ಧಾಸೋಮವೃಷ್ಟ್ಯನ್ನರೇತೋಭಾವೇನ ಸ್ಥೂಲತಾರತಮ್ಯಕ್ರಮಮ್ ಆಪದ್ಯಮಾನಾಃ ಶ್ರದ್ಧಾಶಬ್ದವಾಚ್ಯಾ ಆಪಃ ಪುರುಷಶಬ್ದಮ್ ಆರಭನ್ತೇ। ಯಃ ಪ್ರಶ್ನಃ ಚತುರ್ಥಃ "ವೇತ್ಥ ಯತಿಥ್ಯಾಮಾಹುತ್ಯಾಂ ಹುತಾಯಾಮ್ ಆಪಃ ಪುರುಷವಾಚೋ ಭೂತ್ವಾ ಸಮುತ್ಥಾಯ ವದನ್ತೀ೩" (೬-೨-೨) ಇತಿ। ಸ ಏಷ ನಿರ್ಣೀತಃ, 'ಪಞ್ಚಮ್ಯಾಮ್ ಆಹುತೌ ಯೋಷಾಗ್ನೌ ಹುತಾಯಾಂ ರೇತೋಭೂತಾಃ ಆಪಃ ಪುರುಷವಾಚೋ ಭವನ್ತಿ' ಇತಿ। ಸ ಪುರುಷಃ ಏವಂಕ್ರಮೇಣ ಜಾತೋ ಜೀವತಿ। ಕಿಯನ್ತಂ ಕಾಲಮಿತಿ? ಉಚ್ಯತೇ। ಯಾವಜ್ಜೀವತಿ ಯಾವತ್ ಅಸ್ಮಿನ್ ಶರೀರೇ ಸ್ಥಿತಿನಿಮಿತ್ತಂ ಕರ್ಮ ವಿದ್ಯತೇ ತಾವತ್ ಇತ್ಯರ್ಥಃ। ಅಥ ತತ್ಕ್ಷಯೇ ಯದಾ ಯಸ್ಮಿನ್ ಕಾಲೇ ಮ್ರಿಯತೇ —

1. ಮುಂದಿನ ಕಂಡಿಕೆಯ ವಾಕ್ಯಕ್ಕೆ ಇದನ್ನು ಅನ್ವಯಿಸಿಕೊಳ್ಳಬೇಕು.
2. 'ಹೋಮಾಧಿಕರಣಃ' ಎಂಬುದಕ್ಕಿಂತ ಈ ಪಾಠವೇ ಮೇಲು.

(ಭಾಷ್ಯಾರ್ಥ)

"ಯೋಷಾ ವಾ ಅಗ್ನಿರ್ಗೌತಮ" (ಎಂಬ ಕಂಡಿಕೆಯ ಅರ್ಥವಿದು): ಇಲ್ಲಿ ಯೋಷಾ ಎಂದರೆ ಹೆಂಡತಿಯು. (ಅವಳು) ಐದನೆಯ ಹೋಮಾಧಾರವಾದ ಅಗ್ನಿಯು. ಆಕೆಗೆ ಉಪಸ್ಥವೇ ಸಮಿತ್ತು; ಅದರಿಂದಲ್ಲವೆ, ಆಕೆಯು ದೀಪ್ತ ಳಾಗುತ್ತಾಳೆ? ಲೋಮಗಳು ಹೊಗೆ; ಆ (ಅಗ್ನಿಯಿಂದ) ಅವು ಏಳುತ್ತವೆಂಬುದು (ಹೊಗೆಗೂ ಅವಕ್ಕೂ) ಸಮಾನವಾಗಿರುತ್ತದೆ. ಯೋನಿಯೇ ಉರಿ; ಏಕೆಂದರೆ (ಎರಡಕ್ಕೂ) ಬಣ್ಣದ ಹೋಲಿಕೆಯಿದೆ. ಒಳಗೆ ಮಾಡುತ್ತಾನಲ್ಲ, ಅದು ಕೆಂಡವು. ಒಳಗೆ ಮಾಡುವದೆಂದರೆ ಮೈಥುನವ್ಯಾಪಾರವು. ಅದು ಕೆಂಡವು; ಏಕೆಂದರೆ ವೀರ್ಯವು ಉಪಶಮವಾಗುವದಕ್ಕೆ (ಅದು) ಹೇತುವೆಂಬುದು (ಕೆಂಡಕ್ಕೂ ಅದಕ್ಕೂ) ಸಮಾನವಾಗಿದೆ. ಮೈಥುನವು ವೀರ್ಯವೇ ಮುಂತಾದದ್ದು ಆರಿ ಹೋಗುವದಕ್ಕೆ ಕಾರಣ; ಹಾಗೆಯೇ ಕೆಂಡವಾಗುವದು ಅಗ್ನಿಯು ಆರುವದಕ್ಕೆ ಕಾರಣವು. ಅಭಿನಂದಗಳು ಎಂದರೆ ಸುಖದ ಲೇಶಗಳು ಅಲ್ಪವಾಗಿರುವದೆಂಬ ಹೋಲಿಕೆಯಿಂದ ಕಿಡಿಗಳು.

ಆ ಅಗ್ನಿಯಲ್ಲಿ ರೇತಸ್ಸನ್ನು (ದೇವತೆಗಳು) ಹೋಮಮಾಡುತ್ತಾರೆ. ಆ ಆಹುತಿಯಿಂದ ಪುರುಷನು ಉಂಟಾಗುತ್ತಾನೆ. ಹೀಗೆ ದ್ಯುಲೋಕ, ಪರ್ಜನ್ಯ, ಈ ಲೋಕ, ಪುರುಷ, ಯೋಷಾ– ಎಂಬೀ ಅಗ್ನಿಗಳಲ್ಲಿ ಕ್ರಮದಿಂದ ಹುತವಾಗುವ ಶ್ರದ್ಧೆ, ಸೋಮ, ವೃಷ್ಟಿ, ಅನ್ನ, ರೇತಸ್ಸು– ಎಂಬ ರೂಪದಿಂದ ಸ್ಥೂಲತಾರತಮ್ಯಕ್ರಮವನ್ನು ಹೊಂದುವ[1] ಶ್ರದ್ಧಾಶಬ್ದವಾಚ್ಯವಾದ ಅಪ್ಪು ಪುರುಷಶಬ್ದವನ್ನುಂಟುಮಾಡುತ್ತದೆ.

"ಎಷ್ಟನೆಯ ಆಹುತಿಯು ಹುತವಾಗುವಾಗ ಅಪ್ಪು ಪುರುಷವಾಕ್ಕಾಗಿ ಎದ್ದು ಮಾತಾಡುತ್ತದೆ, ಬಲ್ಲೆಯ?" (೬-೨-೨) ಎಂಬ ನಾಲ್ಕನೆಯ ಪ್ರಶ್ನೆಯಿತ್ತಲ್ಲ, ಆ ಈ ಪ್ರಶ್ನೆಗೆ 'ಐ ದ ನೆ ಯ ಆಹುತಿಯನ್ನು ಯೋಷಾಗ್ನಿಯಲ್ಲಿ ಹೋಮಮಾಡಲಾಗಿ ರೇತಸ್ಸಾದ ಅಪ್ಪು ಪುರುಷವಾಕ್ಕಾಗುವದು' ಎಂದು ಉತ್ತರವನ್ನು ಕೊಟ್ಟಂತೆ ಆಯಿತು.

ಆ ಪುರುಷನು ಈ ಕ್ರಮದಿಂದ ಹುಟ್ಟಿ ಬದುಕಿರುತ್ತಾನೆ. ಎಷ್ಟು ಕಾಲದವರೆಗೆ? ಎಂದರೆ (ಶ್ರುತಿ) ಹೇಳುತ್ತದೆ. ಎಲ್ಲಿಯವರೆಗೆ ಜೀವಿಸುತ್ತಿರುತ್ತಾನೋ ಈ ಶರೀರದಲ್ಲಿ (ಅದರ) ಸ್ಥಿತಿನಿಮಿತ್ತವಾದ ಕರ್ಮವು ಇರುವದೋ

1. ಅಪ್ಪು ಸ್ವಭಾವದಿಂದ ಸೂಕ್ಷ್ಮವಾಗಿದ್ದರೂ ಕ್ರಮಕ್ರಮವಾಗಿ ಹೆಚ್ಚುಹೆಚ್ಚು ಸ್ಥೂಲವಾಗಿ ಪಂಚಾಗ್ನಿಗಳಿಂದ ಪಾಕವಾಗಿ ಸ್ಥೂಲವಾದ ಪುರುಷನಾಗಿ ಪರಿಣಮಿಸುತ್ತಿರುವವು. ವಾರ್ತಿಕ ೧೮೯.

ಅಲ್ಲಿಯವರೆಗೆ ಎಂದರ್ಥ. ಇನ್ನು ಆ (ಕರ್ಮವು) ಸವೆಯಲು ಯಾವಾಗ ಯಾವ ಕಾಲದಲ್ಲಿ ಸಾಯುತ್ತಾನೋ—

## ಅಂತ್ಯಾಹುತಿ

(ಉಪನಿಷತ್ತು)

**ಅಥೈನಮಗ್ನಯೇ ಹರನ್ತಿ ತಸ್ಯಾಗ್ನಿರೇವಾಗ್ನಿರ್ಭವತಿ ಸಮಿತ್ಸ ಮಿದ್ಧೂಮೋ ಧೂಮೋಽರ್ಚಿರರ್ಚಿರಙ್ಗಾರಾ ಅಙ್ಗಾರಾ ವಿಸ್ಫು ಲಿಙ್ಗಾ ವಿಸ್ಫುಲಿಙ್ಗಾಸ್ತಸ್ಮಿನ್ನೇತಸ್ಮಿನ್ನಗ್ನೌ ದೇವಾಃ ಪುರುಷಂ ಜುಹ್ವತಿ ತಸ್ಯಾ ಆಹುತ್ಯೈ ಪುರುಷೋ ಭಾಸ್ವರವರ್ಣಃ ಸಂಭವತಿ ॥ ೧೪ ॥**

೧೪. ಆಗ ಇವನನ್ನು ಅಗ್ನಿಗೆ ಒಯ್ಯುತ್ತಾರೆ. ಆ (ಆಹುತಿಗೆ) ಅಗ್ನಿಯೇ ಅಗ್ನಿಯಾಗಿರುತ್ತದೆ. ಸಮಿತ್ತೇ ಸಮಿತ್ತು, ಹೊಗೆಯೇ ಹೊಗೆ, ಉರಿಯೇ ಉರಿ, ಕೆಂಡವೇ ಕೆಂಡ, ಕಿಡಿಗಳೇ ಕಿಡಿಗಳು. ಆ ಈ ಅಗ್ನಿಯಲ್ಲಿ ದೇವತೆಗಳು ಪುರುಷನನ್ನು ಹೋಮಮಾಡುತ್ತಾರೆ. ಆ ಆಹುತಿಯಿಂದ ಪುರುಷನು ಭಾಸ್ವರವರ್ಣನಾಗಿ ಉಂಟಾಗುತ್ತಾನೆ.

## ಅಂತ್ಯಸಂಸ್ಕಾರವೂ ಅದರ ಫಲವೂ

(ಭಾಷ್ಯ)

**೪೪೫. ಅಥ ತದಾ ಏನಂ ಮೃತಮ್ ಅಗ್ನಯೇ ಅಗ್ನ್ಯರ್ಥಮೇವ ಅನ್ತ್ಯಾಹುತ್ಯೈ ಹರನ್ತಿ ಋತ್ವಿಜಃ। ತಸ್ಯ ಆಹುತಿಭೂತಸ್ಯ ಪ್ರಸಿದ್ಧಃ ಅಗ್ನಿರೇವ ಹೋಮಾಧಿಕರಣಮ್। ನ ಪರಿಕಲ್ಪ್ಯೋಽಗ್ನಿಃ। ಪ್ರಸಿದ್ಧೈವ ಸಮಿತ್ ಸಮಿತ್, ಧೂಮೋ ಧೂಮಃ, ಅರ್ಚಿಃ ಅರ್ಚಿಃ, ಅಙ್ಗಾರಾ ಅಙ್ಗಾರಾಃ, ವಿಸ್ಫು ಲಿಙ್ಗಾಃ ವಿಸ್ಫುಲಿಙ್ಗಾಃ। ಯಥಾಪ್ರಸಿದ್ಧಮೇವ ಸರ್ವಮ್ ಇತ್ಯರ್ಥಃ। ತಸ್ಮಿನ್ ಪುರುಷಮ್ ಅನ್ತ್ಯಾಹುತಿಂ ಜುಹ್ವತಿ। ತಸ್ಯೈ ಆಹುತ್ಯೈ ಆಹುತೇಃ ಪುರುಷಃ ಭಾಸ್ವರವರ್ಣಃ ಅತಿಶಯದೀಪ್ತಿಮಾನ್ ನಿಷೇಕಾದಿಭಿಃ ಅನ್ತ್ಯಾಹುತ್ಯನ್ತೈಃ ಕರ್ಮಭಿಃ ಸಂಸ್ಕೃತತ್ವಾತ್ ಸಂಭವತಿ ನಿಷ್ಪದ್ಯತೇ ॥**

(ಭಾಷ್ಯಾರ್ಥ)

(ಇನ್ನು ಯಾವಾಗ ಸಾಯುತ್ತಾನೋ) ಆಗ ಆ ಕಾಲದಲ್ಲಿ ಈ ಮೃತನನ್ನು ಅಗ್ನಿಗೆ ಅಗ್ನಿಯ ಬಳಿಗೇ ಕೊನೆಯ ಆಹುತಿಗಾಗಿ ಋತ್ವಿಜರು ಒಯ್ಯುತ್ತಾರೆ.

ಆ ಆಹುತಿಯಾದ (ಪುರುಷನಿಗೆ) ಪ್ರಸಿದ್ಧವಾದ ಅಗ್ನಿಯೇ ಹೋಮಾಧಿ ಕರಣವು, ಅಗ್ನಿಯನ್ನು (ಇಲ್ಲಿ) ಕಲ್ಪಿಸಬೇಕಾದದ್ದಿರುವದಿಲ್ಲ. ಪ್ರಸಿದ್ಧವೇ

ಆಗಿರುವ ಸಮಿತ್ತೇ ಸಮಿತ್ತು, ಹೊಗೆಯೇ ಹೊಗೆ, ಉರಿಯೇ ಉರಿ, ಕೆಂಡವೇ ಕೆಂಡ, ಕಿಡಿಗಳೇ ಕಿಡಿಗಳು. ಇದೆಲ್ಲವೂ ಪ್ರಸಿದ್ಧವಾಗಿರುವದೇ (ಆಗಿರುತ್ತದೆ) ಎಂದರ್ಥ.

ಆ (ಅಗ್ನಿ)ಯಲ್ಲಿ ಅಂತ್ಯಾಹುತಿಯಾದ ಪುರುಷನನ್ನು (ಋತ್ವಿಜರು) ಹೋಮಮಾಡುತ್ತಾರೆ. ಆ (ಆಹುತ್ಯೈ= ಆಹುತೇಃ) ಆಹುತಿಯಿಂದ ಪುರುಷನು ಭಾಸ್ವರವರ್ಣನಾಗಿ ನಿಷೇಕಾದಿಯಾಗಿ ಅಂತ್ಯಾಹುತಿಯವರೆಗಿನ[1] ಕರ್ಮಗಳಿಂದ ಸಂಸ್ಕೃತನಾಗಿರುವದರಿಂದ ಹೆಚ್ಚಿನ ಕಾಂತಿಯುಳ್ಳವನಾಗಿ[2] (ಸಂಭವತಿ= ನಿಷ್ಪದ್ಯತೇ) ಉಂಟಾಗುತ್ತಾನೆ.

## ಪಂಚಾಗ್ನಿವಿದ್ಯೆಯ ಫಲ

(ಉಪನಿಷತ್ತು)

**ತೇ ಯ ಏವಮೇತದ್ವಿದುರ್ಯೇ ಚಾಮೀ ಅರಣ್ಯೇ ಶ್ರದ್ಧಾಗ್ಂ ಸತ್ಯಮುಪಾಸತೇ ತೇಽರ್ಚಿರಭಿಸಂಭವನ್ತ್ಯರ್ಚಿಷೋಽಹರಹ್ನ ಆಪೂರ್ಯಮಾಣಪಕ್ಷಮಾಪೂರ್ಯಮಾಣಪಕ್ಷಾದ್ ಯಾನ್ ಷಣ್ಮಾಸಾನುದಙ್ಙಾದಿತ್ಯ ಏತಿ ಮಾಸೇಭ್ಯೋ ದೇವಲೋಕಂ ದೇವಲೋಕಾದಾದಿತ್ಯಮಾದಿತ್ಯಾದ್ ವೈದ್ಯುತಂ ತಾನ್ ವೈದ್ಯುತಾನ್ ಪುರುಷೋ ಮಾನಸ ಏತ್ಯ ಬ್ರಹ್ಮಲೋಕಾನ್ ಗಮಯತಿ ತೇ ತೇಷು ಬ್ರಹ್ಮಲೋಕೇಷು ಪರಾಃ ಪರಾವತೋ ವಸನ್ತಿ ತೇಷಾಂ ನ ಪುನರಾವೃತ್ತಿಃ ॥ ೧೫ ॥**

೧೫. ಯಾರು ಇದನ್ನು ಹೀಗೆಂದು ಅರಿತಿರುವರೋ ಅವರೂ ಅರಣ್ಯದಲ್ಲಿ ಶ್ರದ್ಧೆಯನ್ನು (ಕೂಡಿಕೊಂಡು) ಸತ್ಯವನ್ನು ಯಾವ ಇವರು ಉಪಾಸನೆಮಾಡುತ್ತಿರುವರೋ ಅವರೂ, ಅರ್ಚಿಸ್ಸನ್ನು ಸೇರುತ್ತಾರೆ. ಅರ್ಚಿಸ್ಸಿನಿಂದ ಅಹಸ್ಸನ್ನು, ಅಹಸ್ಸಿನಿಂದ ಆಪೂರ್ಯಮಾಣಪಕ್ಷವನ್ನು, ಆಪೂರ್ಯಮಾಣಪಕ್ಷದಿಂದ ಆದಿತ್ಯನು ಉತ್ತರದಿಕ್ಕಿಗೇ ಹೋಗುವನಲ್ಲ ಆ ಷಣ್ಮಾಸಗಳನ್ನು, ಮಾಸಗಳಿಂದ ದೇವಲೋಕವನ್ನು, ದೇವಲೋಕದಿಂದ ಆದಿತ್ಯನನ್ನು, ಆದಿತ್ಯನಿಂದ ವೈದ್ಯುತವನ್ನು (ಸೇರುತ್ತಾರೆ). ಆ ವೈದ್ಯುತರನ್ನು ಮಾನಸಪುರುಷನು ಬಂದು

1. ಪಿತೃಮೇಧದಲ್ಲಿ ಹೇಳಿರುವ ಅಂತ್ಯೇಷ್ಟಿಯವರೆಗಿನ ಎಂದರ್ಥ.

2. ರಾಜಸತಾಮಸರೂಪಗಳನ್ನು ಬಿಟ್ಟು. ವಾರ್ತಿಕ ೧೧೬. ಇವನು ಅಗ್ನಿಗಳಿಂದ ಬಂದವನು ತನ್ನ ಕಾರಣವಾದ ಅಗ್ನಿಯನ್ನೇ ಸೇರಿಕೊಳ್ಳುತ್ತಾನೆ. ವಾರ್ತಿಕ ೧೧೭.

ಬ್ರಹ್ಮಲೋಕಗಳನ್ನು ಮುಟ್ಟಿಸುತ್ತಾನೆ. ಅವರು ಆ ಬ್ರಹ್ಮಲೋಕಗಳಲ್ಲಿ ಪರರಾಗಿ ಪರಾವಂತ(ಸಂವತ್ಸರಗಳವರೆಗೂ) ವಾಸಮಾಡಿಕೊಂಡಿರುವರು. ಅವರಿಗೆ ಪುನರಾವೃತ್ತಿಯಿರುವದಿಲ್ಲ.

## ಪಂಚಾಗ್ನಿವಿದ್ಯೆಯನ್ನು ಬಲ್ಲವರೇ ಪ್ರಕೃತ

(ಭಾಷ್ಯ)

೪೪೬. ಇದಾನೀಂ ಪ್ರಥಮಪ್ರಶ್ನನಿರಾಕರಣಾರ್ಥಮಾಹ। ತೇ। ಕೇ? ಯೇ ಏವಂ ಯಥೋಕ್ತಂ ಪಞ್ಚಾಗ್ನಿದರ್ಶನಮ್ ಏತತ್ ವಿದುಃ। ಏವಂಶಬ್ದಾತ್ ಅಗ್ನಿಸಮಿದ್ಧೂಮಾರ್ಚಿರಙ್ಗಾರವಿಸ್ಫುಲಿಙ್ಗಶ್ರದ್ಧಾದಿವಿಶಿಷ್ಟಾಃ ಪಞ್ಚ ಅಗ್ನಯೋ ನಿರ್ದಿಷ್ಟಾಃ। ತಾನ್ ಏವಮ್ ಏತಾನ್ ಪಞ್ಚಾಗ್ನೀನ್ ವಿದುಃ ಇತ್ಯರ್ಥಃ। ನನು ಅಗ್ನಿಹೋತ್ರಾಹುತಿದರ್ಶನವಿಷಯಮೇವ ಏತದ್ ದರ್ಶನಮ್। ತತ್ರ ಹಿ ಉಕ್ತಮ್ ಉತ್ಕ್ರಾನ್ತ್ಯಾದಿಪದಾರ್ಥಷಟ್ಕನಿರ್ಣಯೇ "ದಿವಮೇವಾಹವನೀಯಂ ಕುರ್ವಾತೇ" (ಶತ. ಬ್ರಾ. ೧೧-೬-೨-೭) ಇತ್ಯಾದಿ। ಇಹಾಪಿ ಅಮುಷ್ಯಲೋಕಸ್ಯ ಅಗ್ನಿತ್ವಮ್, ಆದಿತ್ಯಸ್ಯ ಚ ಸಮಿತ್ತ್ವಮ್ ಇತ್ಯಾದಿ ಬಹುಸಾಮ್ಯಮ್। ತಸ್ಮಾತ್ ತಚ್ಛೇಷಮೇವ ಏತದ್ದರ್ಶನಮಿತಿ। ನ ಯತಿಥ್ಯಾಮಿತಿ ಪ್ರಶ್ನಪ್ರತಿವಚನಪರಿಗ್ರಹಾತ್। ಯತಿಥ್ಯಾಮ್ ಇತ್ಯಸ್ಯ ಪ್ರಶ್ನಸ್ಯ ಪ್ರತಿವಚನಸ್ಯ ಯಾವದೇವ ಪರಿಗ್ರಹಃ, ತಾವದೇವ[1] ಏವಂಶಬ್ದೇನ ಪರಾಮ್ರಷ್ಟುಂ ಯುಕ್ತಮ್। ಅನ್ಯಥಾ ಪ್ರಶ್ನಾನರ್ಥಕ್ಯಾತ್। ನಿರ್ಜ್ಞಾತತ್ವಾಚ್ಚ ಸಂಖ್ಯಾಯಾಃ ಅಗ್ನಯ ಏವ ವಕ್ತವ್ಯಾಃ। ಅಥ ನಿರ್ಜ್ಞಾತಮಪಿ ಅನೂದ್ಯತೇ ಯಥಾಪ್ರಾಪ್ತಸ್ಯೈವ ಅನುವದನಂ ಯುಕ್ತಮ್, ನ ತು 'ಅಸೌ ಲೋಕೋಽಗ್ನಿಃ' ಇತಿ। ಅಥ ಉಪಲಕ್ಷಣಾರ್ಥಃ, ತಥಾಪಿ ಆದ್ಯೇನ ಅನ್ತ್ಯೇನ ಚ ಉಪಲಕ್ಷಣಂ ಯುಕ್ತಮ್। ಶ್ರುತ್ಯನ್ತರಾಚ್ಚ। ಸಮಾನೇ ಹಿ ಪ್ರಕರಣೇ ಛಾನ್ದೋಗ್ಯಶ್ರುತೌ "ಪಞ್ಚಾಗ್ನೀನ್ ವೇದ" (ಛಾಂ. ೫-೧೦-೧೦) ಪಞ್ಚಸಙ್ಖ್ಯಯಾ ಏವ ಉಪಾದಾನಾತ್ ಅನಗ್ನಿಹೋತ್ರಶೇಷಮ್ ಏತತ್ ಪಞ್ಚಾಗ್ನಿದರ್ಶನಮ್। ಯತ್ತು ಅಗ್ನಿಸಮಿದಾದಿಸಾಮಾನ್ಯಮ್ ತತ್ ಅಗ್ನಿಹೋತ್ರಸ್ತುತ್ಯರ್ಥಮ್ ಇತ್ಯವೋಚಾಮ। ತಸ್ಮಾತ್ ನ ಉತ್ಕ್ರಾನ್ತ್ಯಾದಿಪದಾರ್ಥಷಟ್ಕಪರಿಜ್ಞಾನಾತ್ ಅರ್ಚಿರಾದಿಪ್ರತಿಪತ್ತಿಃ। 'ಏವಮ್' ಇತಿ ಪ್ರಕೃತೋಪಾದಾನೇನ ಅರ್ಚಿರಾದಿಪ್ರತಿಪತ್ತಿವಿಧಾನಾತ್ ॥

(ಭಾಷ್ಯಾರ್ಥ)

ಈಗ ಮೊದಲನೆಯ ಪ್ರಶ್ನೆಯನ್ನು (ಉತ್ತರದಿಂದ) ನಿರಾಕರಿಸುವದಕ್ಕಾಗಿ (ರಾಜನು) ಹೇಳುತ್ತಿದಾನೆ.

---

1. 'ಏತಾವದೇವ' ಎಂದೂ ಪಾಠವಿದೆ.

ಅವರು. (ಅವರೆಂದರೆ) ಯಾರು ? ಯಾರು ಹೀಗೆ ಮೇಲೆ ಹೇಳಿರುವ ಈ ಪಂಚಾಗ್ನಿದರ್ಶನವನ್ನು ಅರಿತಿರುವರೋ (ಅವರು). 'ಹೀಗೆ' ಎಂಬ ಶಬ್ದದಿಂದ ಅಗ್ನಿ, ಸಮಿತ್ತು, ಹೊಗೆ, ಉರಿ, ಕೆಂಡ, ಕಿಡಿ, ಶ್ರದ್ಧೆ –ಮುಂತಾದವುಗಳಿಂದೊಡಗೂಡಿದ ಪಂಚಾಗ್ನಿಗಳನ್ನು (ಇಲ್ಲಿ) ತಿಳಿಸಿರುತ್ತದೆ. ಅವುಗಳನ್ನು ಹೀಗೆ ಈ ಪಂಚಾಗ್ನಿಗಳನ್ನು (ಯಾರು) ಅರಿತಿರುವರೋ (ಅವರು) ಎಂದರ್ಥ[1].

(ಆಕ್ಷೇಪ) :- ಅಗ್ನಿಹೋತ್ರದ ಆಹುತಿಗಳ ದರ್ಶನದ ವಿಷಯವಾಗಿಯೇ ಈ ದರ್ಶನವನ್ನು ಹೇಳಿದೆ. ಏಕೆಂದರೆ ಅಲ್ಲಿ ಉತ್ಕ್ರಾಂತಿಯೇ ಮುಂತಾದ ಆರು ಪದಾರ್ಥಗಳ ನಿರ್ಣಯವನ್ನು ಮಾಡುವದಕ್ಕಾಗಿ "ದ್ಯುಲೋಕವನ್ನೇ ಆಹವನೀಯಾಗ್ನಿಯಾಗಿ ಮಾಡಿಕೊಳ್ಳುತ್ತವೆ" (ಶತ. ಬ್ರಾ. ೧೧-೬-೨-೭) ಎಂದು ಮುಂತಾಗಿ ಹೇಳಿರುತ್ತದೆ; ಇಲ್ಲಿಯೂ ಆ ಲೋಕವೇ ಅಗ್ನಿ ಎಂದಿದೆ, ಆದಿತ್ಯನನ್ನು ಸಮಿತ್ತು ಎಂದಿದೆ. ಇದೇ ಮುಂತಾದ ಬಹಳ ಸಾಮ್ಯವು (ಈ ಎರಡಕ್ಕೂ ಇದೆ). ಆದ್ದರಿಂದ ಈ ದರ್ಶನವು ಅದಕ್ಕೇ ಸೇರಿದ್ದಾಗಿರುತ್ತದೆಯಲ್ಲವೇ[2] ?

(ಪರಿಹಾರ) :- ಹಾಗಲ್ಲ. ಏಕೆಂದರೆ 'ಎಷ್ಟನೆಯ (ಆಹುತಿಯನ್ನು ಹೋಮಮಾಡಿದರೆ)' ಎಂಬ ಪ್ರಶ್ನೆಯನ್ನೂ (ಅದರ) ಉತ್ತರವನ್ನೂ (ಇಲ್ಲಿ) ಸ್ವೀಕರಿಸಿದೆ. (ಇದರ ವಿವರ) : 'ಎಷ್ಟನೆಯ ಎಂಬ ಪ್ರಶ್ನೆಗೆ ಉತ್ತರವನ್ನು ಎಷ್ಟರಮಟ್ಟಿಗೆ ಪರಿಗ್ರಹಿಸಿದೆಯೋ ಅಷ್ಟನ್ನೇ (ಇಲ್ಲಿ) 'ಹೀಗೆ' ಎಂಬ ಶಬ್ದದಿಂದ ಪರಾಮರ್ಶಿಸಿದೆ (ಎನ್ನುವದು) ಯುಕ್ತವು. ಹೀಗಲ್ಲದಿದ್ದರೆ (ಈ) ಪ್ರಶ್ನೆಯು ವ್ಯರ್ಥವಾಗುತ್ತದೆ[3]. ಮತ್ತು ಸಂಖ್ಯೆಯು ಮೊದಲೇ ಗೊತ್ತಿರುವದರಿಂದ

---

1. ಪಂಚಾಗ್ನಿವಿದ್ಯೆಯನ್ನೂ ಅಗ್ನಿಹೋತ್ರಾದಿಕರ್ಮವನ್ನೂ ಸಮುಚ್ಚಯದಿಂದ ಅನುಷ್ಠಾನಮಾಡಿದವರು ಎಂದರ್ಥ.

2. ಅಗ್ನಿಹೋತ್ರದಲ್ಲಿ ಹೇಳಿರುವ ಅಗ್ನಿಗಳ ವರ್ಣನೆಗೂ ಇಲ್ಲಿರುವ ಅಗ್ನಿವರ್ಣನೆಗೂ ಬಹಳ ಸಾಮ್ಯವಿರುವದರಿಂದ ಇದು ಅಗ್ನಿಹೋತ್ರದರ್ಶನದ ಫಲವೇ ಎಂದು ಭಾವ. ಪಂಚಾಗ್ನಿದರ್ಶನವು ಅಗ್ನಿಹೋತ್ರದ ಸ್ತುತಿಯೇ ಆಗಿರುವದರಿಂದ ಇಲ್ಲಿರುವ ಗತಿಯೂ ವಿವಕ್ಷಿತವಲ್ಲ ಎಂಬ ಪೂರ್ವಪಕ್ಷವನ್ನು ವಾರ್ತಿಕಟೀಕೆಯಲ್ಲಿ ಪರಾಮರ್ಶಿಸಿದೆ. ಈ ಪಕ್ಷವು ವಾರ್ತಿಕದಲ್ಲಿ ಸೂಚಿತವಾಗಿರುವಂತೆ ಕಾಣುವದಿಲ್ಲ.

3. 'ಎಷ್ಟನೆಯ ಆಹುತಿ' ಎಂಬ ಪ್ರಶ್ನೆಯನ್ನು ಕೇಳಿ ಉತ್ತರವನ್ನು ಹೇಳಿರುವದರಿಂದ ಇಲ್ಲಿ ಅಗ್ನಿಗಳ ಕ್ರಮಸಂಖ್ಯೆ, ಆಯಾ ವಸ್ತುವನ್ನು ಅಗ್ನಿದೃಷ್ಟಿಯಿಂದ ಉಪಾಸನೆ ಮಾಡುವದು– ಇವೆಲ್ಲ ವಿವಕ್ಷಿತ ಎಂದಾಗುತ್ತದೆ. ಹೀಗಲ್ಲದಿದ್ದರೆ ಎಷ್ಟನೆಯ ಎಂದು ಕೇಳಬೇಕಾದದ್ದೇ ಇಲ್ಲ.

ಅಗ್ನಿಗಳನ್ನೇ ಹೇಳಬೇಕಾಗಿತ್ತು[1], ಗೊತ್ತಿದ್ದರೂ (ಅದನ್ನ ಇಲ್ಲಿ) ಅನುವಾದ ಮಾಡಿಕೊಂಡಿದೆ ಎನ್ನುವದಾದರೆ (ಅಲ್ಲಿ) ಹೇಗೆ ಪ್ರಾಪ್ತವಾಗಿದೆಯೋ ಹಾಗೆಯೇ ಅನುವಾದಮಾಡಿಕೊಳ್ಳುವದು ಯುಕ್ತವೇ ಹೊರತು 'ಆ ಲೋಕವೇ ಅಗ್ನಿಯು' ಎಂದು (ಅನುವಾದಮಾಡಿಕೊಳ್ಳ)ತಕ್ಕದ್ದಲ್ಲ[2]. ಇನ್ನು (ಇದನ್ನು) ಉಪಲಕ್ಷಣಾರ್ಥವಾಗಿ (ಹೇಳಿದೆ) ಎನ್ನುವದಾದರೆ, ಆಗಲೂ ಮೊದಲನೆಯ ಮತ್ತು ಕೊನೆಯ (ಅಗ್ನಿ)ಯಿಂದ ಉಪಲಕ್ಷಣಮಾಡುವದು ಯುಕ್ತವಾಗುತ್ತದೆ[3]. ಮತ್ತೊಂದು ಶ್ರುತಿಯಿಂದಲೂ (ನಮ್ಮ ಪಕ್ಷವೇ ಸರಿ ಎಂದು ಗೊತ್ತಾಗುತ್ತದೆ. ಇದರ ವಿವರ): ಛಾಂದೋಗ್ಯಶ್ರುತಿಯಲ್ಲಿ ಇದೇ ಪ್ರಕರಣದಲ್ಲಿ[4] 'ಪಂಚಾಗ್ನಿಗಳನ್ನು (ಯಾವನು) ಅರಿತಿರುವನೋ' (೫-೧೦-೧೧) ಎಂದು ಐದು ಎಂಬ ಸಂಖ್ಯೆಯನ್ನೇ ತೆಗೆದುಕೊಂಡಿರುವದರಿಂದ ಈ ಪಂಚಾಗ್ನಿದರ್ಶನವು ಅಗ್ನಿಹೋತ್ರಕ್ಕೆ ಶೇಷವಲ್ಲ (ಎಂದು ಸಿದ್ಧವಾಗುತ್ತದೆ)[5]. ಆದರೆ ಅಗ್ನಿ, ಸಮಿತ್ತು -ಮುಂತಾದವುಗಳ ಸಾಮ್ಯವಿದೆಯಲ್ಲ, ಅದು ಅಗ್ನಿಹೋತ್ರದ ಸ್ತುತಿಗಾಗಿಯೇ ಹೇಳಿದ್ದು ಎಂದು ಹಿಂದೆ[6] ಹೇಳಿರುತ್ತೇವೆ. ಆದ್ದರಿಂದ (ಅಗ್ನಿಹೋತ್ರದಲ್ಲಿ ಹೇಳಿರುವ) ಉತ್ಕ್ರಾಂತ್ಯಾದಿಯಾದ ಆರು ಪದಾರ್ಥಗಳನ್ನು ತಿಳಿದದ್ದರಿಂದ ಅರ್ಚಿರಾದಿ(ಗತಿಯು) ಪ್ರಾಪ್ತಿಯಿಲ್ಲ; ಏಕೆಂದರೆ 'ಹೀಗೆ' ಎಂದು ಪ್ರಕೃತವಾದ (ಪಂಚಾಗ್ನಿದರ್ಶನವನ್ನು) ತೆಗೆದುಕೊಂಡೇ (ಇಲ್ಲಿ) ಅರ್ಚಿರಾದಿಪ್ರಾಪ್ತಿಯನ್ನು ಹೇಳಿರುತ್ತದೆ.

---

1. ಅಗ್ನಿಹೋತ್ರಪ್ರಕರಣದಲ್ಲಿ ಅಂತರಿಕ್ಷಾದಿಗಳನ್ನು ಆಹವನೀಯಾಗ್ನಿಗಳೆಂದಿರುವದರಿಂದಲೇ ಸಂಖ್ಯೆಯು ಗೊತ್ತಾಗುತ್ತದೆ; ಸಂಖ್ಯೆಯನ್ನು ಹೇಳಬೇಕಾದದ್ದಿರಲಿಲ್ಲ. ಆದರೆ ಇಲ್ಲಿ ದ್ಯುಲೋಕದಿಂದ ಹಿಡಿದು ಐದು ಸಂಖ್ಯೆಯ ಅಗ್ನಿಗಳನ್ನು ಹೇಳುವದಕ್ಕೆ ಹೊರಟಿದೆ.

2. ಅಂತರಿಕ್ಷ, ದ್ಯುಲೋಕ, ಈ ಲೋಕ, ಪುರುಷ, ಸ್ತ್ರೀ- ಈ ಕ್ರಮದಲ್ಲಿಯೋ ಹೇಳಬೇಕಾಗಿತ್ತು ; ಏಕೆಂದರೆ ಅಗ್ನಿಹೋತ್ರದಲ್ಲಿ ಈ ಕ್ರಮದಲ್ಲಿ ಹೇಳಿವೆ. ಆದರೆ ಇಲ್ಲಿ ದ್ಯುಲೋಕ, ಪರ್ಜನ್ಯ, ಈ ಲೋಕ, ಪುರುಷ, ಸ್ತ್ರೀ- ಈ ಕ್ರಮದಲ್ಲಿ ಹೇಳಿದೆ.

3. ಅಗ್ನಿಹೋತ್ರದಲ್ಲಿ ಹೇಳಿರುವವಕ್ಕೆ ಉಪಲಕ್ಷಣವಾಗಿ ದ್ಯುಲೋಕದಿಂದ ಪ್ರಾರಂಭಿಸಿದೆ ಎನ್ನುವದೂ ಸರಿಯಲ್ಲ ; ಏಕೆಂದರೆ ಉಪಲಕ್ಷಣಪಕ್ಷದಲ್ಲಿ ಮೊದಲನೆಯದಾದ ಅಂತರಿಕ್ಷ, ಕೊನೆಯದಾದ ಸ್ತ್ರೀ- ಇವನ್ನು ಹೇಳಿದ್ದರೆ ಮಿಕ್ಕವು ಉಪಲಕ್ಷಿತವಾಗಿವೆ ಎಂಬುದು ಯುಕ್ತವಾಗುತ್ತಿತ್ತು.

4. ಇಲ್ಲಿ ಅಗ್ನಿಹೋತ್ರದ ಆಹುತಿಯ ಕ್ರಮಕ್ಕಿಂತಲೂ ಐದನೆಯ ಆಹುತಿಯಲ್ಲಿ ಹುಟ್ಟಿದ ಅಪ್ಪು ಪುರುಷವಾಕ್ಕಾಗುವದೆಂಬುದೇ ಮುಖ್ಯವಾಗಿ ವಿವಕ್ಷಿತವೆಂಬುದಕ್ಕೆ ಛಾಂದೋಗ್ಯದ ಸಮಾಖ್ಯೆಯೂ ಇದೆ ಎಂದು ಅಭಿಪ್ರಾಯ.

5. ಐದು ಎಂಬ ಸಂಖ್ಯೆಯನ್ನು ಕಠ. ೧-೩-೧ ಮುಂತಾದ ಶ್ರುತಿಗಳಲ್ಲಿಯೂ ಪರಾಮರ್ಶಿಸಿದೆ ಎಂಬುದನ್ನು ಇಲ್ಲಿ ಮನದಂದುಕೊಳ್ಳಬಹುದು.

6. ೬-೨-೯ (ಭಾ. ಭಾ. ೪೪೦).

# ಉತ್ತರಮಾರ್ಗಕ್ಕೆ ಅಧಿಕಾರಿಗಳು ಯಾರು ?

(ಭಾಷ್ಯ)

೪೪೭. ಕೇ ಪುನಸ್ತೇ ಯೇ ಏವಂ ವಿದುಃ? ಗೃಹಸ್ಥಾ ಏವ। ನನು ತೇಷಾಂ ಯಜ್ಞಾದಿಸಾಧನೇನ ಧೂಮಾದಿಪ್ರತಿಪತ್ತಿಃ ವಿಧಿತ್ಸಿತಾ। ನ। ಅನೇವಂವಿದಾಮಪಿ ಗೃಹಸ್ಥಾನಾಂ ಯಜ್ಞಾದಿಸಾಧನೋಪಪತ್ತೇಃ। ಭಿಕ್ಷುವಾನಪ್ರಸ್ಥಯೋಶ್ಚ ಅರಣ್ಯಸಂಬನ್ಧೇನ ಗ್ರಹಣಾತ್। ಗೃಹಸ್ಥಕರ್ಮಸಂಬದ್ಧತ್ವಾಚ್ಚ ಪಞ್ಚಾಗ್ನಿದರ್ಶನಸ್ಯ। ಅತಃ ನಾಪಿ ಬ್ರಹ್ಮಚಾರಿಣಃ 'ಏವಂ ವಿದುಃ' ಇತಿ ಗೃಹ್ಯನ್ತೇ। ತೇಷಾಂ ತು ಉತ್ತರೇ ಪಥಿ ಪ್ರವೇಶಃ ಸ್ಮೃತಿಪ್ರಾಮಾಣ್ಯಾತ್ "ಅಷ್ಟಾಶೀತಿಸಹಸ್ರಾಣಾಮೃಷೀಣಾಮೂರ್ಧ್ವರೇತಸಾಮ್। ಉತ್ತರೇಣಾರ್ಯಮ್ಣಃ ಪನ್ಥಾಸ್ತೇಽಮೃತತ್ವಂ ಹಿ ಭೇಜಿರೇ॥"[1] (?) ಇತಿ। ತಸ್ಮಾತ್ ಯೇ ಗೃಹಸ್ಥಾಃ ಏವಮ್ ಅಗ್ನಿಜೋಽಹಮ್, ಅಗ್ನ್ಯಪತ್ಯಮ್ ಇತಿ ಏವಂಕ್ರಮೇಣ ಅಗ್ನಿಭ್ಯೋ ಜಾತಃ ಅಗ್ನಿರೂಪಃ ಇತ್ಯೇವಮ್ ಯೇ ವಿದುಃ ತೇ ಚ, ಯೇ ಚ ಅಮೀ ಅರಣ್ಯೇ ವಾನಪ್ರಸ್ಥಾಃ ಪರಿವ್ರಾಜಕಾಶ್ಚಾರಣ್ಯನಿತ್ಯಾಃ ಶ್ರದ್ಧಾಂ ಶ್ರದ್ಧಾಯುಕ್ತಾಃ ಸನ್ತಃ ಸತ್ಯಂ ಬ್ರಹ್ಮ ಹಿರಣ್ಯಗರ್ಭಾತ್ಮಾನಮ್ ಉಪಾಸತೇ। ನ ಪುನಃ ಶ್ರದ್ಧಾಂ ಚ ಉಪಾಸತೇ। ತೇ ಸರ್ವೇ ಅರ್ಚಿರಭಿಸಂಭವನ್ತಿ॥

(ಭಾಷ್ಯಾರ್ಥ)

(ಪ್ರಶ್ನೆ) :– 'ಯಾರು ಹೀಗೆಂದು ಅರಿಯುವರೋ' (ಎಂದು ಇಲ್ಲಿ ಹೇಳಿರುವವರು) ಯಾರು ?

(ಉತ್ತರ) :– ಗೃಹಸ್ಥರೇ.

(ಆಕ್ಷೇಪ) :– ಅವರಿಗೆ ಯಜ್ಞಾದಿಸಾಧನದಿಂದ ಧೂಮಾದಿ(ಮಾರ್ಗ) ಪ್ರಾಪ್ತಿಯನ್ನು ಮುಂದೆ (೬-೨-೧೬) ಹೇಳಲಿದೆಯಲ್ಲ !

---

1. ಈ ವಾಕ್ಯವು ಯಾವದೆಂಬುದು ತಿಳಿಯದು. ವಿಷ್ಣುಪುರಾಣದಲ್ಲಿ :–
ಅಷ್ಟಾಶೀತಿಸಹಸ್ರಾಣಿ ಮುನೀನಾಮೂರ್ಧ್ವರೇತಸಾಮ್।
ಉದಕ್ಪನ್ಥಾನಮರ್ಯಮ್ಣಃ ಸ್ಥಿತಾನ್ಯಾಭೂತಸಂಪ್ಲವಮ್
......ಇತ್ಯೇಭಿಃ ಕಾರಣೈಃ ಶುದ್ಧಾಸ್ತೇಽಮೃತತ್ವಂ ಹಿ ಭೇಜಿರೇ॥
(೨-೮-೯೪ರಿಂದ ೯೬) ಎಂದಿದೆ.
ಆ.ಧ.ಸೂ.ದಲ್ಲಿ:– ಅಷ್ಟಾಶೀತಿಸಹಸ್ರಾಣಿ ಯೇ ಪ್ರಜಾಂ ನೇಷಿರ ಋಷಯಃ।
ಉತ್ತರೇಣಾರ್ಯಮ್ಣಃ ಪನ್ಥಾನಂ ತೇಽಮೃತತ್ವಂ ಹಿ ಕಲ್ಪತೇ॥
(೨-೯-೨೩-೫) ಎಂದಿದೆ.

(ಪರಿಹಾರ):- ಹಾಗಲ್ಲ. ಏಕೆಂದರೆ ಹೀಗೆಂದು ಅರಿಯದಿರುವ ಗೃಹಸ್ಥರಿಗೂ (ಅ) ಯಜ್ಞಾದಿಸಾಧನಗಳಿರಬಹುದಾಗಿದೆ[1]. ಭಿಕ್ಷು[2], ವಾನಪ್ರಸ್ಥ- ಇವರುಗಳನ್ನು ಆರಣ್ಯಸಂಬಂಧದಿಂದ ಗ್ರಹಣೆಮಾಡಿರುವದರಿಂದಲೂ ಪಂಚಾಗ್ನಿದರ್ಶನವು ಗೃಹಸ್ಥರ ಕರ್ಮಕ್ಕೆ ಸಂಬದ್ಧವಾಗಿರುವದರಿಂದಲೂ[3] (ಹೀಗೆಂದು ನಿಶ್ಚಯಿಸಬೇಕಾಗಿದೆ). ಆದ್ದರಿಂದ[4] ಬ್ರಹ್ಮಚಾರಿಗಳನ್ನು 'ಹೀಗೆಂದು ಅರಿತಿರುತ್ತಾರೋ' ಎಂಬ ಮಾತಿನಿಂದ ಗ್ರಹಿಸಿರುವದಿಲ್ಲ ಎನ್ನಬೇಕು. ಅವರಿಗಾದರೆ ಉತ್ತರಮಾರ್ಗದಲ್ಲಿ ಪ್ರವೇಶವು "ಎಂಬತ್ತೆಂಟು ಸಾವಿರ ಊರ್ಧ್ವರೇತಸ್ಕರಾದ ಋಷಿಗಳು ಸೂರ್ಯನ ಉತ್ತರಮಾರ್ಗದವರು, ಅವರು ಅಮೃತತ್ವವನ್ನೇ ಪಡೆದರು" (?) ಎಂಬ ಸ್ಮೃತಿಯ ಪ್ರಾಮಾಣ್ಯದಿಂದ ಉತ್ತರಮಾರ್ಗದಲ್ಲಿ ಪ್ರವೇಶ(ವಿದೆಯೆಂದು ಗೊತ್ತಾಗುತ್ತದೆ).

ಆದ್ದರಿಂದ ಯಾವ ಗೃಹಸ್ಥರು ಹೀಗೆಂದು—ನಾನು ಅಗ್ನಿಯಿಂದ ಹುಟ್ಟಿದವನು, ಅಗ್ನಿಯ ಪುತ್ರನು,[5] ಈ ಕ್ರಮದಿಂದ ಅಗ್ನಿಗಳಿಂದ ಹುಟ್ಟಿದವನು, ಅಗ್ನಿರೂಪನು' ಎಂದಿಂತು- ಅರಿತುಕೊಂಡಿರುವರೋ, ಅವರೂ, ಮತ್ತು ಅರಣ್ಯದಲ್ಲಿ ಇವರೂ ಅಂದರೆ ಅರಣ್ಯನಿತ್ಯರಾದ ವಾನಪ್ರಸ್ಥರೂ ಮತ್ತು ಪರಿವ್ರಾಜಕರೂ ಶ್ರದ್ಧೆಯನ್ನು (ಮಾಡಿಕೊಂಡು) ಶ್ರದ್ಧಾಯುಕ್ತರಾಗಿ ಸತ್ಯವನ್ನು ಹಿರಣ್ಯಗರ್ಭರೂಪವಾದ ಬ್ರಹ್ಮವನ್ನು ಉಪಾಸನೆಮಾಡುತ್ತಿರುವರೋ[6]—(ಎಂದರ್ಥ.

---

1. ಪಂಚಾಗ್ನಿವಿದ್ಯೆಯನ್ನು ಬಲ್ಲ ಗೃಹಸ್ಥರಿಗೆ ಪ್ರಕೃತವಾದ ಅರ್ಚಿರಾದಿಗತಿ ; ಅದನ್ನರಿಯದ ಕೇವಲಕರ್ಮಿಗಳಾದ ಗೃಹಸ್ಥರಿಗೆ ಧೂಮಾದಿಗತಿ. ಪಂಚಾಗ್ನಿವಿದ್ಯೆಯನ್ನು ಬಲ್ಲವರನ್ನು 'ಆತ್ಮಜ್ಞಾನಿಗಳು' ಎಂದು ಗೌಣವಾಗಿ ಕರೆದಿರುವದೂ ಉಂಟು. ಸೂ. ಭಾ ೩-೧-೭ (ಭಾ. ಭಾ. ೨೨೩)ನ್ನು ನೋಡಿ.

2. ಇದು ಪರಮಹಂಸನಲ್ಲದ ಸಂನ್ಯಾಸಿಯನ್ನು ತಿಳಿಸುವ ಶಬ್ದ.

3. ಗೃಹಸ್ಥನಾದ ರಾಜನು ಗೃಹಸ್ಥನಾದ ಅರುಣಿಗೆ ಹೇಳಿದ ವಿದ್ಯೆಯಿದು.

4. ಗೃಹಸ್ಥರಿಗೆ ಇದು ಅನ್ವಯಿಸುವದರಿಂದ ಎಂದರ್ಥ ; 'ಅತಃ' ಎಂಬ ಮಾತು ಮೂಲದಲ್ಲಿ ಇಲ್ಲದಿದ್ದರೂ ಮುಂದಿನ ಸ್ಮೃತಿವಾಕ್ಯದಿಂದಲೇ ಅವರಿಗೆ ಅರ್ಚಿರಾದಿ ಮಾರ್ಗವು ಸಿದ್ಧನಾಗಿದೆಯಾಗಿ 'ಅವರನ್ನು ಇಲ್ಲಿ 'ಏವಂವಿದುಃ' ಎಂಬ ಶಬ್ದದಿಂದ ಗ್ರಹಿಸಬೇಕಾದದ್ದಿಲ್ಲವೆಂದೇ ಆಗುತ್ತಿತ್ತು. ಆದರೆ ಬ್ರಹ್ಮಚಾರಿಭಿಕ್ಷುವಾನಪ್ರಸ್ಥರಿಗೆ ಈ ದರ್ಶನವಿಲ್ಲದಿದ್ದರೂ ಅರ್ಚಿರಾದಿಗತಿಯಾಗುವದೆಂಬುದನ್ನು ತಿಳಿಸುವದಕ್ಕೆ ಈ ಶಬ್ದವಿದ್ದರೇ ಒಳ್ಳೆಯದೆಂದು ತೋರುತ್ತದೆ.

5. ದ್ಯುಲೋಕದಿಂದ ಹಿಡಿದು ಯೋಷಾಗ್ನಿಯವರೆಗಿನ ಅಗ್ನಿಪರಂಪರೆಯಿಂದ ಹುಟ್ಟಿದವನು ಅಗ್ನಿಯನ್ನೇ ಸೇರತಕ್ಕವನು ಎಂದು.

6. ಹಿರಣ್ಯಗರ್ಭೋಪಾಸನೆಯನ್ನು ಮಾಡುವವರು ಎಂದದ್ದರಿಂದ ಇಲ್ಲಿ ಪರಮಹಂಸರನ್ನು ಪರಾಮರ್ಶಿಸಿಲ್ಲವೆಂದೂ ಆಶ್ರಮಸಂನ್ಯಾಸಿಗಳನ್ನೇ ಹೇಳಿದೆಯೆಂದೂ ನಿಶ್ಚಿತವಾಗುತ್ತದೆ. ಕಹೋಲಬ್ರಾಹ್ಮಣ (೩-೫-೧ ಭಾ. ಭಾ. ೫೮, ೬೦, ೬೧)ರಲ್ಲಿ ಹೇಳಿರುವ ಸ್ಮಾರ್ತಪಾರಿವ್ರಾಜ್ಯವೇ ಇದು.

ಇಷ್ಟೇ ಹೊರತು) ಶ್ರದ್ಧೆಯನ್ನು ಉಪಾಸನೆಮಾಡುವರೋ (ಎಂದರ್ಥ)ವಲ್ಲ[1]— ಅವರೆಲ್ಲರೂ ಅರ್ಚಿಸ್ಸನ್ನು ಸೇರುತ್ತಾರೆ.

## ಪಞ್ಚಾಗ್ನ್ಯುಪಾಸಕರಲ್ಲದ ಗೃಹಸ್ಥರಿಗೆ ಪಿತೃಲೋಕ

(ಭಾಷ್ಯ)

೪೪೮. ಯಾವದ್ ಗೃಹಸ್ಥಾಃ ಪಞ್ಚಾಗ್ನಿವಿದ್ಯಾಂ ಸತ್ಯಂ ವಾ ಬ್ರಹ್ಮ ನ ವಿದುಃ । ತಾವತ್ ಶ್ರದ್ಧಾದ್ಯಾಹುತಿಕ್ರಮೇಣ ಪಞ್ಚಮ್ಯಾಮ್ ಆಹುತೌ ಹುತಾಯಾಂ ತತೋ ಯೋಷಾಗ್ನೇರ್ಜಾತಾಃ ಪುನಃ ಲೋಕಂ ಪ್ರತ್ಯುತ್ಥಾಯಿನಃ ಅಗ್ನಿಹೋತ್ರಾದಿಕರ್ಮಾನುಷ್ಠಾತಾರೋ ಭವನ್ತಿ। ತೇನ ಕರ್ಮಣಾ ಧೂಮಾದಿಕ್ರಮೇಣ ಪುನಃ ಪಿತೃಲೋಕಮ್, ಪುನಃ ಪರ್ಜನ್ಯಾದಿಕ್ರಮೇಣ ಇಮಮ್ ಆವರ್ತನ್ತೇ। ತತಃ ಪುನರ್ಯೋಷಾಗ್ನೇರ್ಜಾತಾಃ ಪುನಃ ಕರ್ಮ ಕೃತ್ವಾ—ಇತ್ಯೇವಮೇವ ಘಟೀಯನ್ತ್ರವತ್ ಗತ್ಯಾಗತಿಭ್ಯಾಂ ಪುನಃಪುನಃ ಆವರ್ತನ್ತೇ। ಯದಾ ತು ಏವಂ ವಿದುಃ ತತೋ ಘಟೀಯನ್ತ್ರಭ್ರಮಣಾದ್ ವಿನಿರ್ಮುಕ್ತಾಃ ಸನ್ತಃ ಅರ್ಚಿರಭಿಸಂಭವನ್ತಿ ॥

(ಭಾಷ್ಯಾರ್ಥ)

**ಗೃಹಸ್ಥರು ಎಲ್ಲಿಯವರೆಗೆ ಪಂಚಾಗ್ನಿವಿದ್ಯೆಯನ್ನು (ಅರಿತುಕೊಂಡಿರುವದಿಲ್ಲವೋ), ಅಥವಾ[2] ಸತ್ಯಬ್ರಹ್ಮವನ್ನಾದರೂ ಅರಿತುಕೊಂಡಿರುವದಿಲ್ಲವೋ, ಅಲ್ಲಿಯವರೆಗೆ ಶ್ರದ್ಧೆಯೇ ಮುಂತಾದ ಆಹುತಿಯ ಕ್ರಮದಿಂದ ಐದನೆಯ ಆಹುತಿಯು ಹುತವಾಗುವಾಗ ಯೋಷಾಗ್ನಿಯಿಂದ ಹುಟ್ಟಿ ಮತ್ತೆ ಲೋಕವನ್ನು ಕುರಿತು ಏಳುವವರಾಗಿ ಅಗ್ನಿಹೋತ್ರಾದಿಕರ್ಮಗಳನ್ನು ಮಾಡುವವರಾಗುತ್ತಾರೆ. ಆ ಕರ್ಮದಿಂದ ಧೂಮಾದಿಕ್ರಮದಿಂದ ಮತ್ತೆ ಪಿತೃಲೋಕವನ್ನು (ಪಡೆಯುತ್ತಾರೆ), ಮತ್ತೆ ಪರ್ಜನ್ಯಾದಿಕ್ರಮದಿಂದ ಈ ಲೋಕಕ್ಕೆ**

---

1. ಛಾಂ. ಭಾ. ೫-೯-೨ರಲ್ಲಿಯೂ ಹೀಗೆಯೇ ಇದೆ; ಆದರೆ ಮುಂ. ಭಾ. ೧-೨-೧೧ (ಭಾ. ಭಾ ೪೨)ರಲ್ಲಿ ಶ್ರದ್ಧೆ ಎಂದರೆ ಹಿರಣ್ಯಗರ್ಭಾದಿವಿಷಯವಾದ ವಿದ್ಯೆ ಎಂದಿದೆ. ಅಲ್ಲಿಯೂ ವಿದ್ಯಾಸಾಧನ ಎಂಬರ್ಥವನ್ನು ಮಾಡಿಕೊಂಡರೆ ಇವೆಲ್ಲಕ್ಕೂ ಏಕವಾಕ್ಯತೆ ಬರುತ್ತದೆ.

2. ವಾನಪ್ರಸ್ಥರೋ ಸಂನ್ಯಾಸಿಗಳೋ ಆಗಿ ಎಂದು ಸೇರಿಸಿಕೊಳ್ಳಬೇಕು ; ಏಕೆಂದರೆ ಪ್ರಕೃತಶ್ರುತಿಯಲ್ಲಿ ಹೀಗೆಂದು ವಿಭಾಗವನ್ನು ಮಾಡಿ ಹೇಳಿರುತ್ತದೆ. ಆದರೆ ಛಾಂ.ಭಾ. ೫-೧೦-೨ರಲ್ಲಿ ಶ್ರದ್ಧಾತಪೋಯುಕ್ತರಾಗಿರುವ ಭಿಕ್ಷುವಾನಪ್ರಸ್ಥರನ್ನು ಹಿರಣ್ಯಗರ್ಭೋಪಾಸಕರಿಂದ ಬೇರ್ಪಡಿಸಿದಂತೆ ಇದೆ.

**ಹಿಂತೆರಳುತ್ತಾರೆ. ಆಮೇಲೆ ಮತ್ತೂ ಯೋಷಾಗ್ನಿಯಿಂದ ಹುಟ್ಟಿ, ಮತ್ತೆ ಕರ್ಮವನ್ನು ಮಾಡಿ (ಲೋಕಾಂತರವನ್ನು ಪಡೆದುಕೊಳ್ಳುತ್ತಾರೆ)- ಎಂದೀ ಪರಿಯಲ್ಲಿಯೇ (ನೀರಿನ) ರಾಟೆಯಂತೆ ಹೋಗುವದು, ಬರುವದು, ಹೀಗೆ ಮತ್ತೆಮತ್ತೆ ಹಿಂತೆರಳಿ ಬರುತ್ತಿರುತ್ತಾರೆ.** ಆದರೆ ಯಾವಾಗ ಹೀಗೆಂದು (ಪಂಚಾಗ್ನಿಯನ್ನು) ಅರಿತುಕೊಳ್ಳುವರೋ ಆಗ ರಾಟೆಯ ತಿರುಗುವಿಕೆಯಿಂದ ಬಿಡುಗಡೆಯನ್ನು ಹೊಂದಿದವರಾಗಿ ಅರ್ಚಿಸ್ಸನ್ನು ಸೇರುತ್ತಾರೆ.

## ಅರ್ಚಿರಾದಿಗತಿಯ ಕ್ರಮ

(ಭಾಷ್ಯ)

೪೪೯. ಅರ್ಚಿಃ ಇತಿ[1] ನ ಅಗ್ನಿಜ್ವಾಲಾಮಾತ್ರಮ್, ಕಿಂ ತರ್ಹಿ ಅರ್ಚಿರಭಿಮಾನಿನೀ ಅರ್ಚಿಃಶಬ್ದವಾಚ್ಯಾ ದೇವತಾ ಉತ್ತರಮಾರ್ಗಲಕ್ಷಣಾ ವ್ಯವಸ್ಥಿತೈವ । ತಾಮ್ ಅಭಿಸಂಭವನ್ತಿ । ನ ಹಿ ಪರಿವ್ರಾಜಕಾನಾಮ್ ಅಗ್ನ್ಯರ್ಚಿಷೈವ ಸಾಕ್ಷಾತ್ ಸಂಬನ್ಧೋಽಸ್ತಿ । ತೇನ ದೇವತೈವ ಪರಿಗೃಹ್ಯತೇ ಅರ್ಚಿಃಶಬ್ದವಾಚ್ಯಾ । ಅತಃ ಅಹರ್ದೇವತಾಮ್ । ಮರಣಕಾಲನಿಯಮಾನುಪಪತ್ತೇಃ ಅಹಃಶಬ್ದೋಽಪಿ ದೇವತೈವ । ಆಯುಷಃ ಕ್ಷಯೇ ಹಿ ಮರಣಮ್ । ನ ಹಿ ಏವಂವಿದಾ ಅಹನ್ಯೇವ ಮರ್ತವ್ಯಮಿತಿ ಅಹಃ ಮರಣಕಾಲೋ ನಿಯನ್ತುಂ ಶಕ್ಯತೇ । ನ ಚ ರಾತ್ರೌ ಪ್ರೇತಾಃ ಸನ್ತಃ ಅಹಃ ಪ್ರತೀಕ್ಷನ್ತೇ । "ಸ ಯಾವತ್ ಕ್ಷಿಪ್ಯೇನ್ಮನಸ್ತಾವದಾದಿತ್ಯಂ ಗಚ್ಛತಿ" (ಛಾಂ. ೮-೬-೫) ಇತಿ ಶ್ರುತ್ಯನ್ತರಾತ್ । ಅಹ್ನಃ ಆಪೂರ್ಯಮಾಣಪಕ್ಷಮ್ ಅಹರ್ದೇವತಯಾ ಅತಿವಾಹಿತಾಃ ಆಪೂರ್ಯಮಾಣಪಕ್ಷದೇವತಾಂ ಪ್ರತಿಪದ್ಯನ್ತೇ । ಶುಕ್ಲಪಕ್ಷದೇವತಾಮ್ ಇತ್ಯೇತತ್ । ಆಪೂರ್ಯಮಾಣಪಕ್ಷಾತ್ ಯಾನ್ ಷಣ್ಮಾಸಾನ್ ಉದಙ್ ಉತ್ತರಾಂ ದಿಶಮ್ ಆದಿತ್ಯಃ ಸವಿತಾ ಏತಿ ತಾನ್ ಮಾಸಾನ್ ಪ್ರತಿಪದ್ಯನ್ತೇ ಶುಕ್ಲಪಕ್ಷದೇವತಯಾ ಅತಿವಾಹಿತಾಃ ಸನ್ತಃ । 'ಮಾಸಾನ್' ಇತಿ ಬಹುವಚನಾತ್ ಸಂಘಚಾರಿಣ್ಯಃ ಷಟ್ ಉತ್ತರಾಯಣದೇವತಾಃ । ತೇಭ್ಯೋ ಮಾಸೇಭ್ಯಃ ಷಣ್ಮಾಸದೇವತಾಭಿಃ ಅತಿವಾಹಿತಾಃ ದೇವಲೋಕಾಭಿಮಾನಿನೀಂ ದೇವತಾಂ ಪ್ರತಿಪದ್ಯನ್ತೇ । ದೇವಲೋಕಾತ್ ಆದಿತ್ಯಮ್ । ಆದಿತ್ಯಾತ್ ವೈದ್ಯುತಮ್ । ವಿದ್ಯುದಭಿಮಾನಿನೀಂ ದೇವತಾಂ ಪ್ರತಿಪದ್ಯನ್ತೇ । ವಿದ್ಯುದ್ದೇವತಾಂ[2] ಪ್ರಾಪ್ತಾನ್ ಬ್ರಹ್ಮಲೋಕವಾಸೀ ಪುರುಷಃ ಬ್ರಹ್ಮಣಾ ಮನಸಾ ಸೃಷ್ಟೋ ಮಾನಸಃ ಕಶ್ಚಿತ್ ಏತ್ಯ ಆಗತ್ಯ ಬ್ರಹ್ಮಲೋಕಾನ್ ಗಮಯತಿ ।

---

1. ಅಪಿ ಎಂಬ ಪಾಠವು ಬೇಕಿಲ್ಲ.

2. 'ತಾನ್ ವೈದ್ಯುತಾನ್' ಎಂಬ ಮಾತುಗಳು ಇದರ ಹಿಂದೆ ಇರಬೇಕಾಗಿದ್ದು ಬಿಟ್ಟುಹೋಗಿವೆ.

ಬ್ರಹ್ಮಲೋಕಾನ್ ಇತಿ ಅಧರೋತ್ತರಭೂಮಿಭೇದೇನ ಭಿನ್ನಾಃ ಇತಿ ಗಮ್ಯನ್ತೇ । ಬಹುವಚನಪ್ರಯೋಗಾತ್ । ಉಪಾಸನತಾರತಮ್ಯೋಪಪತ್ತೇಶ್ಚ ॥

(ಭಾಷ್ಯಾರ್ಥ)

ಅರ್ಚಿಸ್ಸು ಎಂದರೆ (ಇಲ್ಲಿ) ಬೆಂಕಿಯ ಉರಿ ಎಂದಿಷ್ಟೇ (ಅರ್ಥ)ವಲ್ಲ, ಮತ್ತೇನೆಂದರೆ ಉರಿಗೆ ಅಭಿಮಾನಿಯಾದ ಅರ್ಚಿಸ್ಸೆಂಬ ಹೆಸರಿನ ಉತ್ತರ ಮಾರ್ಗಕ್ಕೆ ಗುರುತಾಗಿ ಇದ್ದುಕೊಂಡಿರುವ ದೇವತೆಯೇ, ಆ (ದೇವತೆಯನ್ನು) ಸೇರುತ್ತಾರೆ. ಪರಿವ್ರಾಜಕರಿಗೆ ನೇರಾಗಿ ಬೆಂಕಿಯ ಉರಿಯ ಸಂಬಂಧವೇ ಇರುವದಿಲ್ಲವಷ್ಟೆ[1] ? ಆದ್ದರಿಂದ (ಇಲ್ಲಿ) ಅರ್ಚಿಃಶಬ್ದಕ್ಕೆ ವಾಚ್ಯವಾದ ದೇವತೆಯನ್ನೇ ತೆಗೆದುಕೊಳ್ಳಬೇಕು[2].

ಅಲ್ಲಿಂದ ಅಹಸ್ಸೆಂಬ ದೇವತೆಯನ್ನು (ಸೇರುತ್ತಾರೆ). ಸಾಯುವ ಕಾಲವನ್ನು ನಿಯಮಿಸುವದಕ್ಕೆ ಆಗುವದಿಲ್ಲವಾದ್ದರಿಂದ (ಇಲ್ಲಿ) ಅಹಃಶಬ್ದ(ದಿಂದ ಹೇಳಿರುವದೂ) ದೇವತೆಯೇ. (ಇದರ ವಿವರ) : ಆಯುಸ್ಸು ಮುಗಿದಾಗ ಲಲ್ಲವೆ, ಸಾವು ? ಹೀಗೆಂದು ಉಪಾಸನೆಮಾಡಿದವನು ಹಗಲೇ ಸಾಯಬೇಕೆಂದು ಸಾವಿನ ಕಾಲವನ್ನು ಹಗಲೇ ಎಂದು ಗೊತ್ತಾಗಿ ಹೇಳುವದಕ್ಕೂ ಆಗುವದಿಲ್ಲ[3] ; ರಾತ್ರಿಯಲ್ಲಿ ಸತ್ತವರು ಹಗಲಾಗುವವರೆಗೆ ನಿರೀಕ್ಷಿಸಿಕೊಂಡಿರುತ್ತಾರೆಂದೂ (ಹೇಳಲಾಗುವದಿಲ್ಲ). ಏಕೆಂದರೆ "ಅವನು ಮನಸ್ಸನ್ನು ಹಾಕುವದರೊಳಗೇ ಆದಿತ್ಯನಲ್ಲಿಗೆ ಹೋಗುತ್ತಾನೆ" (ಛಾಂ. ೮-೬-೫) ಎಂದು ಬೇರೊಂದು ಶ್ರುತಿಯಲ್ಲಿದೆ[4].

ಅಹಸ್ಸಿನಿಂದ ಆಪೂರ್ಯಮಾಣಪಕ್ಷವನ್ನು (ಸೇರುತ್ತಾನೆ). ಅಹರ್ದೇವತೆಯು ಕರೆದುಕೊಂಡು ಹೋಗುವ (ಈ ಉಪಾಸಕರು) ಆಪೂರ್ಯಮಾಣಪಕ್ಷದೇವತೆಯನ್ನು ಸೇರುತ್ತಾರೆ, ಶುಕ್ಲಪಕ್ಷದೇವತೆಯನ್ನು (ಸೇರುತ್ತಾರೆ) ಎಂದಿದಕ್ಕೆ (ಅರ್ಥ).

---

1. ಗೌಣಸಂನ್ಯಾಸಿಗಳಿಗೂ ಅಗ್ನಿಸಂಬಂಧವಿಲ್ಲ.

2. ಸೂ. ಭಾ. ೪-೩-೪ (ಭಾ. ಭಾ. ೫೭೦), ೪-೩-೫ (ಭಾ. ಭಾ. ೫೭೧)ರಲ್ಲಿ ಅರ್ಚಿರಾದಿಗಳು ಬರಿಯ ಮಾರ್ಗಚಿಹ್ನಗಳಲ್ಲ, ಲೋಕಗಳೂ ಅಲ್ಲ, ಆತಿವಾಹಿಕದೇವತೆಗಳೇ ಎಂದು ನಿರ್ಣೀತವಾಗಿದೆ.

3. ಸೂ. ಭಾ. ೪-೨-೧೯ (ಭಾ. ಭಾ. ೫೬೧)ನ್ನು ನೋಡಿ.

4. ಆದ್ದರಿಂದ ಹಗಲಾಗುವವರೆಗೆ ನಿರೀಕ್ಷಿಸಿಕೊಂಡಿರುವ ಸಂಭವವಿಲ್ಲ ಎಂದು ಭಾವ. ಛಾಂದೋಗ್ಯದಲ್ಲಿ ರಶ್ಮಿಗಳನ್ನನುಸರಿಸಿ ಹೊರಡುತ್ತಾನೆ (ಛಾಂ. ೮-೬-೫) ಎಂದಿದ್ದರೂ ರಶ್ಮಿಸಂಬಂಧವು ರಾತ್ರಿಯಲ್ಲಿಯೂ ಇರಬಹುದೆಂದು ಸೂ. ಭಾ. ೪-೨-೧೯ (ಭಾ. ಭಾ. ೫೬೧)ರಲ್ಲಿ ನಿರ್ಣಯಿಸಿದೆ.

ಆಪೂರ್ಯಮಾಣಪಕ್ಷದಿಂದ ಆದಿತ್ಯನು, ಸೂರ್ಯನು, ಯಾವ ಆರು ತಿಂಗಳು ಉತ್ತರಕ್ಕೆ ಹೋಗುತ್ತಾನೋ ಆ (ಆರು)ತಿಂಗಳುಗಳ(ದೇವತೆಗಳನ್ನು) ಶುಕ್ಲಪಕ್ಷದೇವತೆಯು ಕರೆದುಕೊಂಡುಹೋಗುವ (ಈ ಉಪಾಸಕರು ಸೇರುತ್ತಾರೆ. ಇಲ್ಲಿ) 'ಮಾಸಗಳನ್ನು' ಎಂದು ಬಹುವಚನ(ವನ್ನು ಪ್ರಯೋಗಿಸಿರುವದರಿಂದ) ಉತ್ತರಾಯಣದೇವತೆಗಳು ಆರು ಮಂದಿಯೂ ಗುಂಪಾಗಿ ಸಂಚರಿಸುವವರು (ಎಂದು ನಿಶ್ಚಯಿಸಬೇಕಾಗಿದೆ)[1].

ಆ ಮಾಸ(ದೇವತೆ)ಗಳಿಂದ, (ಆ) ಆರು ಮಾಸದೇವತೆಗಳು ಕರೆದುಕೊಂಡುಹೋಗುವ (ಈ ಉಪಾಸಕರು) ದೇವಲೋಕಕ್ಕೆ ಅಭಿಮಾನಿಯಾದ ದೇವತೆಯನ್ನು ಸೇರುತ್ತಾರೆ. ದೇವಲೋಕದಿಂದ ಆದಿತ್ಯನನ್ನು (ಸೇರುತ್ತಾರೆ). ಆದಿತ್ಯನಿಂದ ವೈದ್ಯುತನನ್ನು ಎಂದರೆ ಮಿಂಚಿಗೆ ಅಭಿಮಾನಿಯಾದ ದೇವತೆಯನ್ನು ಸೇರುತ್ತಾರೆ[2].

ವಿದ್ಯುದ್ದೇವತೆಯನ್ನು ಪಡೆದ ಬ್ರಹ್ಮಲೋಕವಾಸಿಯಾದ, ಮಾನಸನು ಎಂದರೆ ಬ್ರಹ್ಮನಿಂದ ಮನಸ್ಸಿನಿಂದಲೇ ಸೃಷ್ಟನಾಗಿರುವ, ಒಬ್ಬಾನೊಬ್ಬ ಪುರುಷನು (ಅಲ್ಲಿಗೆ) ಬಂದು ಬ್ರಹ್ಮಲೋಕಗಳನ್ನು ಮುಟ್ಟಿಸುತ್ತಾನೆ. 'ಬ್ರಹ್ಮಲೋಕಗಳನ್ನು' ಎಂದು (ಇಲ್ಲಿ) ಬಹುವಚನವನ್ನು ಪ್ರಯೋಗಿಸಿರುವದರಿಂದಲೂ ಉಪಾಸನೆಯಲ್ಲಿ ತಾರತಮ್ಯವೂ ಇರಬಹುದಾದ್ದರಿಂದಲೂ (ಈ ಲೋಕಗಳು) ಕೆಳಗಿನ ಮತ್ತು ಮೇಲಿನ ಭೂಮಿಗಳಾಗಿ ಬೇರೆಬೇರೆಯಾಗಿವೆ (ಎಂದು ತಿಳಿಯಬೇಕಾಗಿದೆ).

## ಬ್ರಹ್ಮಲೋಕವನ್ನು ಸೇರಿದವರಿಗೆ ಕಲ್ಪಾಂತದವರೆಗೂ ಪುನರಾವೃತ್ತಿಯಿಲ್ಲ

(ಭಾಷ್ಯ)

೪೫೦. ತೇ ತೇನ ಪುರುಷೇಣ ಗಮಿತಾಃ ಸನ್ತಃ ತೇಷು ಬ್ರಹ್ಮಲೋಕೇಷು ಪರಾಃ ಪ್ರಕೃಷ್ಟಾಃ ಸನ್ತಃ ಸ್ವಯಂ ಪರಾವತಃ ಪ್ರಕೃಷ್ಟಾಃ

---

1. ಇಲ್ಲಿಯುವರೆಗೆ ಹೇಳಿದ ಅಹರಾದಿಗಳು ದೇವತೆಗಳೇ, ಬರಿಯ ಕಾಲವಲ್ಲ ಎಂದು ಸೂ. ಭಾ. ೪-೨-೨೧ (ಭಾ. ಭಾ. ೫೬೩)ರಲ್ಲಿಯೂ ಗೀ. ಭಾ. ೮-೩ (ಭಾ.ಭಾ. ೫೩೦) ರಲ್ಲಿಯೂ ನಿರ್ಣಯಿಸಿದೆ. ಆದ್ದರಿಂದಲೇ ದಕ್ಷಿಣಾಯನದಲ್ಲಿ ಮೃತರಾದ ಉಪಾಸಕರಿಗೂ ಅರ್ಚಿರಾದಿಗತಿಯುಂಟೆಂದು ಸೂ. ಭಾ. ೪-೨-೨೦ (ಭಾ. ಭಾ. ೫೬೨)ರಲ್ಲಿ ಹೇಳಿದೆ.

2. ವಿದ್ಯುದ್ದೇವತೆಯಾದ ಬಳಿಕ ವರುಣನನ್ನು ಸೇರಿಸಿಕೊಳ್ಳಬೇಕು, ಆಮೇಲೆ ಇಂದ್ರಪ್ರಜಾಪತಿಗಳನ್ನು ಸೇರಿಸಿಕೊಳ್ಳಬೇಕೆಂಬುದಕ್ಕೆ ಸೂ. ಭಾ ೪-೩-೩ (ಭಾ. ಭಾ. ೫೬೮)ನ್ನು ನೋಡಿ.

ಸಮಾಃ ಸಂವತ್ಸರಾನ್ ಅನೇಕಾನ್ ವಸನ್ತಿ ಬ್ರಹ್ಮಣಃ । ಅನೇಕಾನ್ ಕಲ್ಪಾನ್ ವಸನ್ತಿ ಇತ್ಯರ್ಥಃ। ತೇಷಾಂ ಬ್ರಹ್ಮಲೋಕಂ ಗತಾನಾಂ ನಾಸ್ತಿ ಪುನರಾವೃತ್ತಿಃ ಅಸ್ಮಿನ್ ಸಂಸಾರೇ ಪುನರಾಗಮನಮ್। 'ಇಹ' ಇತಿ ಶಾಖಾನ್ತರಪಾಠಾತ್। ಇಹ ಇತಿ ಆಕೃತಿಮಾತ್ರಗ್ರಹಣಮ್ ಇತಿ ಚೇತ್, "ಶ್ವೋಭೂತೇ ಪೌರ್ಣಮಾಸೀಮ್" ( ? ) ಇತಿ ಯದ್ವತ್। ನ ಇಹೇತಿ ವಿಶೇಷಣಾನರ್ಥಕ್ಯಾತ್ । ಯದಿ ಹಿ ನಾವರ್ತನ್ತ ಏವ, ಇಹಗ್ರಹಣಮ್ ಅನರ್ಥಕಮೇವ ಸ್ಯಾತ್। 'ಶ್ವೋಭೂತೇ ಪೌರ್ಣಮಾಸೀಮ್' ಇತ್ಯತ್ರ ಪೌರ್ಣಮಾಸ್ಯಾಃ ಶ್ವೋಭೂತತ್ವಮ್ ಅನುಕ್ತಂ ನ ಜ್ಞಾಯತೇ ಇತಿ ಯುಕ್ತಂ ವಿಶೇಷಯಿತುಮ್। ನ ಹಿ ತತ್ರ ಶ್ವ ಆಕೃತಿಃ ಶಬ್ದಾರ್ಥೋ ವಿದ್ಯತ ಇತಿ ಶ್ವಃಶಬ್ದೋ ನಿರರ್ಥಕ ಏವ ಪ್ರಯುಜ್ಯತೇ। ಯತ್ರ ತು ವಿಶೇಷಣಶಬ್ದೇ ಪ್ರಯುಕ್ತೇ ಅನ್ವಿಷ್ಯಮಾಣೇ ವಿಶೇಷಣಫಲಂ ಚೇನ್ನ ಗಮ್ಯತೇ ತತ್ರ ಯುಕ್ತೋ ನಿರರ್ಥಕತ್ವೇನ ಉತ್ಸ್ರಷ್ಟುಂ ವಿಶೇಷಣಶಬ್ದಃ। ನ ತು ಸತ್ಯಾಂ ವಿಶೇಷಣಫಲಾವಗತೌ। ತಸ್ಮಾತ್ ಅಸ್ಮಾತ್ ಕಲ್ಪಾತ್ ಊರ್ಧ್ವಮ್ ಆವೃತ್ತಿರ್ಗಮ್ಯತೇ॥

(ಭಾಷ್ಯಾರ್ಥ)

ಆ ಪುರುಷನಿಂದ ಕರೆದುಕೊಂಡು ಹೋಗುವವರಾಗಿ ಅವರು ಆ ಬ್ರಹ್ಮಲೋಕಗಳಲ್ಲಿ ತಾವೂ ಪರರಾಗಿ ಉತ್ಕೃಷ್ಟರಾಗಿ ಪರಾವಂತವಾದ ಉತ್ಕೃಷ್ಟವಾದ (ಸಮಾಃ= ಸಂವತ್ಸರಾನ್) ವರ್ಷಗಳವರೆಗೆ ಬ್ರಹ್ಮನ[1] ಅನೇಕಸಂವತ್ಸರಗಳವರೆಗೆ, ಅನೇಕಕಲ್ಪಗಳವರೆಗೆ[2] ವಾಸಮಾಡಿಕೊಂಡು ಇರುತ್ತಾರೆ ಎಂದರ್ಥ. ಬ್ರಹ್ಮಲೋಕವನ್ನು ಸೇರಿದ ಅವರಿಗೆ ಪುನರಾವೃತ್ತಿಯಿಲ್ಲ, ಈ ಸಂಸಾರಕ್ಕೆ ಮತ್ತೆ ಬರುವಿಕೆಯಿಲ್ಲ ಎಂದರ್ಥ. ಏಕೆಂದರೆ ಇನ್ನೊಂದು ಶಾಖೆಯಲ್ಲಿ 'ಇಹ' (ಇಲ್ಲಿಗೆ) ಎಂದು ಪಾಠವಿದೆ[3].

(ಆಕ್ಷೇಪ) :- (ಅಲ್ಲಿ) 'ಇಹ' ಎಂಬ (ಶಬ್ದದಿಂದ) 'ಮಾರನೆಯ ದಿನ ಪೌರ್ಣಮಾಸೀ(ಯಾಗವನ್ನು ಮಾಡಬೇಕು)' ( ? ) ಎಂಬ (ವಾಕ್ಯದಲ್ಲಿ) ಹೇಗೋ (ಹಾಗೆ) ಆಕೃತಿಮಾತ್ರವನ್ನು ಗ್ರಹಿಸಿದೆ[4] ಎಂದರೊ ?

---

1. ಬ್ರಹ್ಮಣಃ ಎಂಬ ಪದವನ್ನು ಸಂವತ್ಸರಾನ್ ಎಂಬುದಕ್ಕೆ ಅನ್ವಯಿಸಿಕೊಳ್ಳಬೇಕು; ಬ್ರಹ್ಮಣೋಽನೇಕಾನ್ ಕಲ್ಪಾನ್ ಎಂದು ಅನ್ವಯಿಸಿದರೆ ಉಪಸಂಹಾರ ವಾಕ್ಯಕ್ಕೆ ವಿರೋಧವಾಗುತ್ತದೆ.

2. ಮಾನುಷಕಲ್ಪಗಳವರೆಗೆ ಎಂದರ್ಥ.

3. ಮಾಧ್ಯಂದಿನಪಾಠದಲ್ಲಿ 'ತೇಷಾಮಿಹ ನ ಪುನರಾವೃತ್ತಿರಸ್ತಿ' ಎಂದಿದೆ.

4. ಇಹ ಎಂದರೆ 'ಇಲ್ಲಿಗೆ' ಎಂದರ್ಥವಾದರೂ ಯಾವಯಾವಾಗ ಬ್ರಹ್ಮಲೋಕಕ್ಕೆ ಹೋದರೂ ಸಂಸಾರಕ್ಕೆ ಬರುವದಿಲ್ಲ ಎಂಬರ್ಥದಲ್ಲಿಯೇ 'ಇಹ' ಎಂದು ಉಪಯೋಗಿಸಿದೆ. ಉದಾಹರಣೆಯಲ್ಲಿ 'ಮಾರನೆಯ ದಿನ' ಎಂಬುದು ಪ್ರತಿಯೊಂದು ಮಾರನೆಯ ದಿನಕ್ಕೂ ಅನ್ವಯಿಸುವಂತೆಯೇ ಇದು.

(ಪರಿಹಾರ):- ಹಾಗಲ್ಲ. ಏಕೆಂದರೆ (ಆಗ) ಇಹ ಎಂಬ ವಿಶೇಷಣವು ವ್ಯರ್ಥವಾಗುವದು. (ಇದರ ವಿವರ): ಮತ್ತೆ (ಎಂದಿಗೂ) ಹಿಂದಕ್ಕೆ ಬರುವದೇ ಇಲ್ಲ ಎಂದಾದರೆ ಇಹ ಎಂದು (ವಿಶೇಷಣವನ್ನು) ತೆಗೆದುಕೊಂಡಿರುವದು ವ್ಯರ್ಥವೇ ಆದೀತು. 'ಮಾರನೆಯ ದಿನ ಪೌರ್ಣಮಾಸಿಯನ್ನು (ಮಾಡಬೇಕು)' ಎಂಬಲ್ಲಿ ಪೌರ್ಣಮಾಸಿಯನ್ನು ಮಾರನೆಯ ದಿನ ಮಾಡಬೇಕೆಂಬುದು ಹೇಳದೆ ಇದ್ದರೆ ತಿಳಿಯುವದೇ ಇಲ್ಲವಾದ್ದರಿಂದ (ಅಲ್ಲಿ ಮಾರನೆಯ ದಿನ) ಎಂದು ವಿಶೇಷಣವನ್ನು (ಕೊಡುವದು) ಯುಕ್ತವಾಗಿರುತ್ತದೆ. ಅಲ್ಲಿ ಮಾರನೆಯ ದಿನವೆಂಬ ಆಕೃತಿಯು ಶಬ್ದಾರ್ಥವಾಗಿರುವದರಿಂದ ಶ್ವಃ (ಮಾರನೆಯ ದಿನ) ಎಂಬ ಶಬ್ದವನ್ನು ವ್ಯರ್ಥವಾಗಿಯೇನೂ ಪ್ರಯೋಗಿಸಿಲ್ಲ[1]. ಆದರೆ ಎಲ್ಲಿ ವಿಶೇಷಣಶಬ್ದವನ್ನು ಪ್ರಯೋಗಿಸಿರುವಲ್ಲಿ ಹುಡುಕಿದರೂ ವಿಶೇಷಣದ ಫಲವು ದೊರಕುವದಿಲ್ಲವೋ ಅಲ್ಲಿ ವಿಶೇಷಣಶಬ್ದವು ನಿರರ್ಥಕವೆಂದು (ಅದನ್ನು) ಬಿಟ್ಟು ಬಿಡುವದು ಯುಕ್ತವು; ಆದರೆ ವಿಶೇಷಣಕ್ಕೆ ಫಲವಿದೆ ಎಂದು ಗೊತ್ತಾಗುವಲ್ಲಿ (ಹಾಗೆ ಬಿಡ)ತಕ್ಕದ್ದಲ್ಲ[2]. ಆದ್ದರಿಂದ ಈ ಕಲ್ಪವಾದ ಬಳಿಕ ಆವೃತ್ತಿಯಾಗು ವದು ಎಂದು ನಿಶ್ಚಯಿಸಬೇಕಾಗಿದೆ.[3]

## ಉತ್ತರಮಾರ್ಗೇತರಗತಿಗಳು

(ಉಪನಿಷತ್ತು)

**ಅಥ ಯೇ ಯಜ್ಞೇನ ದಾನೇನ ತಪಸಾ ಲೋಕಾಞ್ಜಯನ್ತಿ ತೇ ಧೂಮಮಭಿಸಂಭವನ್ತಿ ಧೂಮಾದ್ ರಾತ್ರಿಗ್ಂ ರಾತ್ರೇ**

---

1 ಪ್ರತಿಯೊಂದು ಮಾರನೆಯ ಶಬ್ದಕ್ಕೂ ಅನ್ವಯಿಸಲಿ ಎಂಬ ಇಚ್ಛೆಯಿಂದ ಲೇನೂ ಉದಾಹರಣೆಯಲ್ಲಿ 'ಮಾರನೆಯ ದಿನ' ಎಂಬ ಶಬ್ದವನ್ನು ಪ್ರಯೋಗಿಸಿಲ್ಲ. ಪೌರ್ಣ ಮಾಸಿಯ ದಿನ ಚಾತುರ್ಮಾಸ್ಯವನ್ನು ಮಾಡುವದಾದರೆ ಪೌರ್ಣಮಾಸೀಷ್ಟಿಯನ್ನು ಯಾವಾಗ ಮಾಡಬೇಕು? –ಎಂಬ ಪ್ರಶ್ನೆಗೆ ಮಾರನೆಯ ದಿನವೇ ಎಂಬ ಉತ್ತರವನ್ನು ಹೇಳುವದಕ್ಕೇ ಬಂದಿದೆ; ಏಕೆಂದರೆ ಹಾಗೆ ಹೇಳದಿದ್ದರೆ ಇಷ್ಟಿಯ ಕಾಲವು ಗೊತ್ತಾಗುತ್ತಿರಲಿಲ್ಲ ಎಂದರ್ಥ. ಪೌರ್ಣಮಾಸೀಷ್ಟಿಯನ್ನು ಪಾಡ್ಯದ ದಿನವೇ ಮಾಡಬೇಕೆಂಬ ನಿಯಮವಿರುವದರಿಂದ ಅದೂ ಆಕೃತಿವಚನವೇ ಎಂಬ ಪೂರ್ವಪಕ್ಷವನ್ನೂ ಟೀಕೆಯಲ್ಲಿ ತೆಗೆದಿದೆ.

2. ಮಾರನೆಯ ದಿನ ಎಂಬುದು ಗೊತ್ತಾದ ಕಾಲವನ್ನೇ ಹೇಳುವದರಿಂದ ಅದು 'ವೃದ್ಧನಾದ ತಂದೆಯು' ಎಂಬಂತೆ ಅವ್ಯಾವರ್ತಕವೆಂದು ಹೇಳುವದಕ್ಕೆ ಬರುವದಿಲ್ಲ. ಹಾಗೆಯೇ ಇಲ್ಲಿಯೂ 'ಇಹ'ಶಬ್ದವು ಅವ್ಯಾವರ್ತಕವಲ್ಲ. ಹಾಗಿದ್ದಿದ್ದರೆ ನಿರರ್ಥಕವಾಗು ತ್ತಿತ್ತು; ಈ ಕಲ್ಪದಲ್ಲಿ ಹಿಂದಕ್ಕೆ ಬರುವದಿಲ್ಲ ಎಂಬರ್ಥವನ್ನು ತಿಳಿಸುವದಕ್ಕಾಗಿಯೇ ಬಂದಿದೆ ಎಂದು ಇಟ್ಟುಕೊಂಡರೆ ವಿಶೇಷಣವು ಸಾರ್ಥಕವಾಗುತ್ತದೆ. ಗತಿಯಿರುವಲ್ಲಿಯೂ ವ್ಯರ್ಥವೆಂದು ವಿಶೇಷಣವನ್ನು ಬಿಡುವದು ಸರಿಯಲ್ಲ ಎಂದು ಭಾವ.

3. ಪುನರಾವೃತ್ತಿಯು ಪ್ರಾಪ್ತವಾಗಿದ್ದರೇ ಇಲ್ಲಿ ನಿಷೇಧವು ಹೊಂದುತ್ತದೆ ಎಂದು ಛಾಂ. ಛಾ. ೮-೧೫-೧ರಲ್ಲಿ ಹೇಳಿದೆ.

**ರಪಕ್ಷೀಯಮಾಣಪಕ್ಷಮಪಕ್ಷೀಯಮಾಣಪಕ್ಷಾದ್ಯಾನ್ ಷಣ್ಮಾಸಾನ್ ದಕ್ಷಿಣಾದಿತ್ಯ ಏತಿ ಮಾಸೇಭ್ಯಃ ಪಿತೃಲೋಕಂ ಪಿತೃಲೋಕಾಚ್ಚನ್ದ್ರಂ ತೇ ಚನ್ದ್ರಂ ಪ್ರಾಪ್ಯಾನ್ನಂ ಭವನ್ತಿ ತಾಗ್ಂಸ್ತತ್ರ ದೇವಾ ಯಥಾ ಸೋಮಗ್ಂ ರಾಜಾನಮಾಪ್ಯಾಯಸ್ವಾಪಕ್ಷೀಯಸ್ವೇತ್ಯೇವಮೇನಾಗ್ಂಸ್ತತ್ರ ಭಕ್ಷಯನ್ತಿ ತೇಷಾಂ ಯದಾ ತತ್ ಪರ್ಯವೈತ್ಯಥೇಮಮೇವಾಕಾಶಮಭಿನಿಷ್ಪದ್ಯನ್ತ ಆಕಾಶಾದ್ ವಾಯುಂ ವಾಯೋರ್ವೃಷ್ಟಿಂ ವೃಷ್ಟೇಃ ಪೃಥಿವೀಂ ತೇ ಪೃಥಿವೀಂ ಪ್ರಾಪ್ಯಾನ್ನಂ ಭವನ್ತಿ ತೇ ಪುನಃ ಪುರುಷಾಗ್ನೌ ಹೂಯನ್ತೇ ತತೋ ಯೋಷಾಗ್ನೌ ಜಾಯನ್ತೇ ಲೋಕಾನ್ ಪ್ರತ್ಯುತ್ಥಾಯಿನಸ್ತ ಏವಮೇವಾನುಪರಿವರ್ತನ್ತೇಽಥ ಯ ಏತೌ ಪನ್ಥಾನೌ ನ ವಿದುಸ್ತೇ ಕೀಟಾಃ ಪತಙ್ಗಾ ಯದಿದಂ ದನ್ದಶೂಕಮ್ ॥ ೧೬ ॥**

೧೬. ಇನ್ನು ಯಾರು ಯಜ್ಞದಿಂದಲೂ ದಾನದಿಂದಲೂ ತಪಸ್ಸಿನಿಂದಲೂ ಲೋಕಗಳನ್ನು ಗೆದ್ದುಕೊಳ್ಳುವರೋ ಅವರು ಧೂಮವನ್ನು ಸೇರುವರು, ಧೂಮದಿಂದ ರಾತ್ರಿಯನ್ನು, ರಾತ್ರಿಯಿಂದ ಅಪಕ್ಷೀಯಮಾಣಪಕ್ಷವನ್ನು, ಅಪಕ್ಷೀಯಮಾಣಪಕ್ಷದಿಂದ ಸೂರ್ಯನು ಯಾವ ಆರು ಮಾಸಗಳವರೆಗೆ ದಕ್ಷಿಣಕ್ಕೆ (ಹೋಗುವನೋ ಆ ಮಾಸಗಳನ್ನು), ಮಾಸಗಳಿಂದ ಪಿತೃಲೋಕವನ್ನು, ಪಿತೃಲೋಕದಿಂದ ಚಂದ್ರನನ್ನು (ಸೇರುತ್ತಾರೆ). ಅವರು ಚಂದ್ರನನ್ನು ಪಡೆದು ಅನ್ನವಾಗುತ್ತಾರೆ. ಅವರನ್ನು ಅಲ್ಲಿ ದೇವತೆಗಳು ಸೋಮರಾಜನನ್ನು ಹೆಚ್ಚಿಕೊ, ಸವೆ-ಎಂದು ಹೇಗೆ (ಕುಡಿಯುವರೋ) ಹಾಗೆ ಇವರನ್ನು ಅಲ್ಲಿ ತಿನ್ನುತ್ತಾರೆ. ಆಗ ಅವರ ಆ (ಕರ್ಮವು) ಯಾವಾಗ ಹೋಗಿಬಿಡುವದೋ ಆಗ ಇದೇ ಆಕಾಶದ (ರೂಪದವ)ರಾಗುವರು. ಆಕಾಶದಿಂದ ವಾಯುವನ್ನು, ವಾಯುವಿನಿಂದ ವೃಷ್ಟಿಯನ್ನು, ವೃಷ್ಟಿಯಿಂದ ಪೃಥಿವಿಯನ್ನು (ಸೇರುವರು). ಅವರು ಪೃಥಿವಿಯನ್ನು ಸೇರಿ ಅನ್ನವಾಗುವರು. ಅವರು ಮತ್ತೂ ಪುರುಷಾಗ್ನಿಯಲ್ಲಿ ಹುತರಾಗುವರು, ಅಲ್ಲಿಂದ ಯೋಷಾಗ್ನಿಯಲ್ಲಿ (ಹುತರಾಗಿ) ಹುಟ್ಟುವರು. ಲೋಕಗಳನ್ನು ಕುರಿತು ಏಳುವರಾಗುವರು. ಅವರು ಹೀಗೆಯೇ ಸುತ್ತುತ್ತಿರುವರು. ಇನ್ನು ಯಾರು ಈ (ಎರಡು) ಪಂಥಗಳನ್ನು ಅರಿಯ

ದಿರುವರೋ ಅವರು ಹುಳುಗಳೂ ಜಿಟ್ಟೆಗಳೂ ದಂದಶೂಕವೂ (ಆಗುವರು).

## ಧೂಮಮಾರ್ಗದ ಕ್ರಮ, ಮತ್ತು ಕರ್ಮಫಲಭೋಗ

(ಭಾಷ್ಯ)

೪೫೧. ಅಥ ಪುನಃ ಯೇ ನೈವಂ ವಿದುಃ ಉತ್ಕ್ರಾನ್ತ್ಯಾದ್ಯಗ್ನಿಹೋತ್ರಸಂಬದ್ಧಪದಾರ್ಥಷಟ್ಕಸ್ಯೈವ ವೇದಿತಾರಃ ಕೇವಲಕರ್ಮಿಣಃ, ಯಜ್ಞೇನ ಅಗ್ನಿಹೋತ್ರಾದಿನಾ, ದಾನೇನ ಬಹಿರ್ವೇದಿ ಭಿಕ್ಷಮಾಣೇಷು ದ್ರವ್ಯಸಂವಿಭಾಗಲಕ್ಷಣೇನ, ತಪಸಾ ಬಹಿರ್ವೇದ್ಯೇವ ದೀಕ್ಷಾದಿವ್ಯತಿರಿಕ್ತೇನ ಕೃಚ್ಛ್ರಚಾನ್ದ್ರಾಯಣಾದಿನಾ ಲೋಕಾನ್ ಜಯನ್ತಿ। ಲೋಕಾನ್ ಇತಿ ಬಹುವಚನಾತ್ ತತ್ರಾಪಿ ಫಲತಾರತಮ್ಯಮ್ ಅಭಿಪ್ರೇತಮ್। ತೇ ಧೂಮಮ್ ಅಭಿಸಂಭವನ್ತಿ। ಉತ್ತರಮಾರ್ಗ ಇವ ಇಹಾಪಿ ದೇವತಾ ಏವ ಧೂಮಾದಿಶಬ್ದವಾಚ್ಯಾಃ। ಧೂಮದೇವತಾಂ ಪ್ರತಿಪದ್ಯನ್ತೇ ಇತ್ಯರ್ಥಃ। ಆತಿವಾಹಿಕತ್ವಂ ಚ ದೇವತಾನಾಂ ತದ್ವದೇವ। ಧೂಮಾತ್ ರಾತ್ರಿಂ ರಾತ್ರಿದೇವತಾಮ್। ತತಃ ಅಪಕ್ಷೀಯಮಾಣಪಕ್ಷಮ್, ಅಪಕ್ಷೀಯಮಾಣಪಕ್ಷದೇವತಾಮ್। ತತೋ ಯಾನ್ ಷಣ್ಮಾಸಾನ್ ದಕ್ಷಿಣಾಂ ದಿಶಮ್ ಆದಿತ್ಯಃ ಏತಿ ತಾನ್ ಮಾಸದೇವತಾವಿಶೇಷಾನ್ ಪ್ರತಿಪದ್ಯನ್ತೇ। ಮಾಸೇಭ್ಯಃ ಪಿತೃಲೋಕಮ್। ಪಿತೃಲೋಕಾತ್ ಚನ್ದ್ರಮ್। ತೇ ಚನ್ದ್ರಂ ಪ್ರಾಪ್ಯ ಅನ್ನಂ ಭವನ್ತಿ। ತಾನ್ ತತ್ರ ಅನ್ನಭೂತಾನ್ ಯಥಾ ಸೋಮಂ ರಾಜಾನಮ್ ಇಹ ಯಜ್ಞೇ ಋತ್ವಿಜಃ ಆಪ್ಯಾಯಸ್ವ ಅಪಕ್ಷೀಯಸ್ವ ಇತಿ ಭಕ್ಷಯನ್ತಿ, ಏವಮ್ ಏನಾನ್ ಚನ್ದ್ರಂ ಪ್ರಾಪ್ತಾನ್ ಕರ್ಮಿಣಃ ಭೃತ್ಯಾನಿವ ಸ್ವಾಮಿನಃ ಭಕ್ಷಯನ್ತಿ ಉಪಭುಞ್ಜತೇ ದೇವಾಃ। 'ಆಪ್ಯಾಯಸ್ವಾಪಕ್ಷೀಯಸ್ವ' ಇತಿ ನ ಮನ್ತ್ರಃ। ಕಿಂ ತರ್ಹಿ ಆಪ್ಯಾಯ್ಯ ಆಪ್ಯಾಯ್ಯ ಚಮಸಸ್ಥಮ್ ಭಕ್ಷಣೇನ ಅಪಕ್ಷಯಂ ಚ ಕೃತ್ವಾ ಪುನಃಪುನಃ ಭಕ್ಷಯನ್ತಿ ಇತ್ಯರ್ಥಃ। ಏವಂ ದೇವಾ ಅಪಿ ಸೋಮಲೋಕೇ ಲಬ್ಧಶರೀರಾನ್ ಕರ್ಮಿಣಃ ಉಪಕರಣಭೂತಾನ್ ಪುನಃಪುನಃ ವಿಶ್ರಾಮಯನ್ತಃ ಕರ್ಮಾನುರೂಪಂ ಫಲಂ ಪ್ರಯಚ್ಛನ್ತಃ—ತದ್ಧಿ ತೇಷಾಮ್ ಆಪ್ಯಾಯನಂ ಸೋಮಸ್ಯಾಪ್ಯಾಯನಮಿವ—ಉಪಭುಞ್ಜತೇ ಉಪಕರಣಭೂತಾನ್ ದೇವಾಃ॥

(ಭಾಷ್ಯಾರ್ಥ)

ಇನ್ನು ಯಾರು ಹೀಗೆಂದು ಅರಿತಿರುವದಿಲ್ಲವೋ[1], ಉತ್ಕ್ರಾಂತಿಯೇ ಮುಂತಾದ ಅಗ್ನಿಹೋತ್ರಕ್ಕೆ ಸಂಬದ್ಧವಾದ ಆರು ಪದಾರ್ಥಗಳನ್ನು ಮಾತ್ರ

1. ಪಂಚಾಗ್ನಿಗಳ ಉಪಾಸನೆಯನ್ನು ಮಾಡಿದವರಲ್ಲವೋ.

ಬಲ್ಲ ಕೇವಲ ಕರ್ಮಿಗಳಾಗಿ[1] ಅಗ್ನಿಹೋತ್ರವೇ ಮುಂತಾದ ಯಜ್ಞದಿಂದಲೂ ವೇದಿಯ ಹೊರಗೆ ಬೇಡಿದವರಿಗೆ ದ್ರವ್ಯವನ್ನು ಹಂಚುವದೆಂಬ[2] ದಾನದಿಂದಲೂ ವೇದಿಯ ಹೊರಗೇ ದೀಕ್ಷಾದಿಗಳಿಗಿಂತ ವ್ಯತಿರಿಕ್ತವಾಗಿರುವ[3] ತಪಸ್ಸಿನಿಂದಲೂ ಲೋಕಗಳನ್ನು ಗೆದ್ದುಕೊಂಡಿರುವರೋ- (ಇಲ್ಲಿ) ಲೋಕಗಳನ್ನು ಎಂದು ಬಹುವಚನವನ್ನು (ಪ್ರಯೋಗಿಸಿರು)ವದರಿಂದ (ಆ) ಲೋಕಗಳಲ್ಲಿಯೂ[4] ಫಲತಾರತಮ್ಯ(ವುಂಟೆಂದು) ಅಭಿಪ್ರಾಯ- ಅವರು ಧೂಮವನ್ನು ಸೇರುತ್ತಾರೆ. ಉತ್ತರಮಾರ್ಗದಲ್ಲಿ ಹೇಗೋ ಹಾಗೆಯೇ ಇಲ್ಲಿಯೂ ಧೂಮಾದಿಶಬ್ದವಾಚ್ಯವಾಗಿರುವವು ದೇವತೆಗಳೇ[5] ಧೂಮದೇವತೆಯನ್ನು ಸೇರುತ್ತಾರೆ ಎಂದರ್ಥ. ದೇವತೆಗಳು ಆತಿವಾಹರೆಂಬುದೂ ಆ (ಉತ್ತರಮಾರ್ಗ)ದಂತೆಯೇ (ಇಲ್ಲಿಯೂ ಎಂದು ತಿಳಿಯಬೇಕು).

ಧೂಮದಿಂದ ರಾತ್ರಿಯನ್ನು ರಾತ್ರಿದೇವತೆಯನ್ನು, ಅದರಿಂದ ಯಾವ ಆರು ತಿಂಗಳವರೆಗೆ ಸೂರ್ಯನು ದಕ್ಷಿಣಕ್ಕೆ ಹೋಗುತ್ತಾನೋ ಆ ಮಾಸದೇವತಾವಿಶೇಷಗಳನ್ನು ಸೇರುತ್ತಾರೆ. ಮಾಸಗಳಿಂದ ಪಿತೃಲೋಕವನ್ನೂ ಪಿತೃಲೋಕದಿಂದ ಚಂದ್ರನನ್ನೂ (ಸೇರುತ್ತಾರೆ). ಅವರು ಚಂದ್ರನನ್ನು ಸೇರಿದವರಾಗಿ ಅನ್ನವಾಗುತ್ತಾರೆ.

ಅಲ್ಲಿ ಅನ್ನವಾಗಿರುವ ಆ ಕರ್ಮಿಗಳನ್ನು ಒಡೆಯರು ಆಳುಗಳನ್ನು ಹೇಗೋ ಹಾಗೆ[6] ದೇವತೆಗಳು ಭಕ್ಷಿಸುತ್ತಾರೆ, ಉಪಭೋಗಿಸುತ್ತಾರೆ. 'ಆಪ್ಯಾಯಾಸ್ವಾಪಕ್ಷೀಯಸ್ವ' (ಹೆಚ್ಚಿಕೊ, ಸವೆ) ಎಂಬುದು ಮಂತ್ರವಲ್ಲ.[7]

---

1. 'ಏವಂವಿದಃ' ಎಂದು ಪಂಚಾಗ್ನಿವಿದ್ಯೆಯನ್ನು ಬಲ್ಲ ಗೃಹಸ್ಥರಿಗೆ ಹಿಂದೆ ವಿಶೇಷಣವನ್ನು ಕೊಟ್ಟಿರುವದು ಈ ಗೃಹಸ್ಥರಲ್ಲವೆಂದು ತಿಳಿಸುವದಕ್ಕೆ.

2. ಯಜ್ಞದಲ್ಲಿ ಕೊಡುವ ದಕ್ಷಿಣೆಯೇ ಮುಂತಾದವುಗಳನ್ನು ಇಲ್ಲಿ ದಾನಶಬ್ದದಿಂದ ಹೇಳಿಲ್ಲವೆಂದು ಭಾವ. ಅವು ಯಜ್ಞಶಬ್ದದಿಂದಲೇ ಉಕ್ತವಾಗಿವೆ.

3. ಯಜ್ಞದಲ್ಲಿಯೂ ಇರುವ ದೀಕ್ಷೆ, ಯಜ್ಞಾಂಗವಾದ ಪಯೋವ್ರತಾದಿಗಳು- ಇವನ್ನು ಇಲ್ಲಿ ತಪಃಶಬ್ದದಿಂದ ಹೇಳಿಲ್ಲವೆಂದು ಭಾವ. ಇವು ಯಜ್ಞಶಬ್ದದಿಂದಲೇ ಉಕ್ತವಾಗಿವೆ.

4. ಬ್ರಹ್ಮಲೋಕದಲ್ಲಿರುವಂತೆ ಎಂದರ್ಥ.

5. ಇದಕ್ಕೂ ಹಿಂದೆ ಹೇಳಿರುವಂತೆಯೇ ಯುಕ್ತಿಯನ್ನು ಹೊಂದಿಸಿಕೊಳ್ಳಬೇಕು ಎಂದು ಭಾವ.

6. ಇಲ್ಲಿ ಅನ್ನವಾಗಿ ದೇವತೆಗಳಿಂದ ಭಕ್ಷಿತರಾಗುವದೆಂದರೆ ಭೃತ್ಯರಂತೆ ಉಪಭುಕ್ತರಾಗುವದೇ ಎಂಬುದಕ್ಕೆ ಸೂ. ಭಾ. ೩-೧-೭ (ಭಾ. ಭಾ. ೨೨೦)ನ್ನು ನೋಡಿ.

7. ಈ ಮಂತ್ರವನ್ನು ಹೇಳಿಕೊಂಡು ಋತ್ವಿಜರು ಸೋಮವನ್ನು ಕುಡಿಯುತ್ತಾರೆ ಎಂದೇನೂ ಅರ್ಥವಲ್ಲ.

ಮತ್ತೇನೆಂದರೆ (ಚಮಸದಲ್ಲಿ) ತುಂಬಿತುಂಬಿಕೊಂಡು ಚಮಸದಲ್ಲಿರುವ (ಸೋಮವನ್ನು) ಕುಡಿ(ಕುಡಿ)ದು ಸವೆಯಿಸುತ್ತಾ ಮತ್ತೆಮತ್ತೆ ಹೇಗೆ ಕುಡಿಯುತ್ತಿರುವರೋ ಎಂದರ್ಥ.[1] ಹಾಗೆಯೇ ದೇವತೆಗಳೂ ಸೋಮಲೋಕದಲ್ಲಿ ಶರೀರವನ್ನು ಪಡೆದು (ತಮಗೆ) ಉಪಕರಣವಾಗಿರುವ ಕರ್ಮಿಗಳನ್ನು ಮತ್ತೆ ಮತ್ತೆ ವಿಶ್ರಾಂತಿಗೆ ಬಿಡುತ್ತಲೂ (ಅವರ) ಕರ್ಮಕ್ಕೆ ಅನುರೂಪವಾದ ಫಲವನ್ನು ಕೊಡುತ್ತಲೂ—ಸೋಮವನ್ನು ತುಂಬಿಕೊಳ್ಳುವಂತೆ ಆ (ಕರ್ಮಿಗಳಿಗೆ) ಅದೇ ತುಂಬಿಕೊಳ್ಳುವದೆಂಬುದು—ಉಪಕರಣಭೂತರಾದ (ಅವರನ್ನು) ದೇವತೆಗಳು ಉಪಭೋಗಿಸುತ್ತಿರುವರು.

## ಇಷ್ಟಾದಿಕಾರಿಗಳಿಗೆ ಪುನರಾವೃತ್ತಿ

(ಭಾಷ್ಯ)

೪೫೨. ತೇಷಾಂ ಕರ್ಮಿಣಾಂ ಯದಾ ಯಸ್ಮಿನ್ ಕಾಲೇ ತತ್ ಯಜ್ಞದಾನಾದಿಲಕ್ಷಣಂ ಸೋಮಲೋಕಪ್ರಾಪಕಂ ಕರ್ಮ ಪರ್ಯವೈತಿ ಪರಿಗಚ್ಛತಿ ಪರಿಕ್ಷೀಯತೇ ಇತ್ಯರ್ಥಃ। ಅಥ ತದಾ ಇಮಮೇವ ಪ್ರಸಿದ್ಧಮ್ ಆಕಾಶಮ್ ಅಭಿನಿಷ್ಪದ್ಯನ್ತೇ। ಯಾಸ್ತಾ ಶ್ರದ್ಧಾಶಬ್ದವಾಚ್ಯಾಃ ದ್ಯುಲೋಕಾಗ್ನೌ ಹುತಾ ಆಪಃ ಸೋಮಾಕಾರಪರಿಣತಾಃ, ಯಾಭಿಃ ಸೋಮಲೋಕೇ ಕರ್ಮಿಣಾಮ್ ಉಪಭೋಗಾಯ ಶರೀರಮ್ ಆರಬ್ಧಮ್ ಅಮ್ಮಯಮ್, ತಾಃ ಕರ್ಮಕ್ಷಯಾತ್ ಹಿಮಪಿಣ್ಡ ಇವ ಆತಪಸಂಪರ್ಕಾತ್ ಪ್ರವಿಲೀಯನ್ತೇ। ಪ್ರವಿಲೀನಾಃ ಸೂಕ್ಷ್ಮಾ ಆಕಾಶಭೂತಾಃ ಇವ ಭವನ್ತಿ। ತದಿದಮುಚ್ಯತೇ 'ಇಮಮೇವಾಕಾಶಮಭಿನಿಷ್ಪದ್ಯನ್ತೇ' ಇತಿ। ತೇ ಪುನರಪಿ ಕರ್ಮಿಣಃ ತಚ್ಛರೀರಾಃ ಸನ್ತಃ ಪುರೋವಾತಾದಿನಾ ಇತಶ್ಚಾಮುತಶ್ಚ ನೀಯನ್ತೇ ಅನ್ತರಿಕ್ಷಗಾಃ। ತದಾಹ 'ಆಕಾಶಾದ್ವಾಯುಮ್' ಇತಿ। ವಾಯೋಃ ವೃಷ್ಟಿಂ ಪ್ರತಿಪದ್ಯನ್ತೇ। ತದುಕ್ತಮ್ 'ಪರ್ಜನ್ಯಾಗ್ನೌ ಸೋಮಂ ರಾಜಾನಂ ಜುಹ್ವತಿ' (೬-೨-೧೦) ಇತಿ। ತತೋ ವೃಷ್ಟಿಭೂತಾಃ ಇಮಾಂ ಪೃಥಿವೀಂ ಪತನ್ತಿ। ತೇ ಪೃಥಿವೀಂ ಪ್ರಾಪ್ಯ ವ್ರೀಹಿಯವಾದ್ಯನ್ನಂ ಭವನ್ತಿ। ತದುಕ್ತಮ್ 'ಅಸ್ಮಿನ್ ಲೋಕೇಽಗ್ನೌ ವೃಷ್ಟಿಂ ಜುಹ್ವತಿ ತಸ್ಯಾ ಆಹುತ್ಯಾ ಅನ್ನಂ ಸಂಭವತಿ' (೬-೨-೧೧) ಇತಿ। ತೇ ಪುನಃ ಪುರುಷಾಗ್ನೌ ಹೂಯನ್ತೇ ಅನ್ನಭೂತಾ ರೇತಃಸಿಚಿ। ತತೋ

---

1. ಸಂಸ್ಕೃತಭಾಷೆಯ ಪದ್ಧತಿಯಲ್ಲಿ ಹೀಗೆ ಪೌನಃಪುನ್ಯವನ್ನು ಹೇಳುತ್ತಾರೆ. ತುಂಬೋಣ, ಕುಡಿಯೋಣ, ತುಂಬೋಣ, ಕುಡಿಯೋಣ –ಹೀಗೆ ಮತ್ತೆಮತ್ತೆ ಕುಡಿಯುತ್ತಾರೆ ಎಂದರ್ಥ. 'ಆಪ್ಯಾಯಸ್ವ ಅಪಕ್ಷೀಯಸ್ವ' ಎಂಬಲ್ಲಿ ಪೌನಃಪುನ್ಯವೆಂಬರ್ಥದ ಲೋಟ್‌ಪ್ರತ್ಯಯವಿದ್ದರೂ ಇದು ಮಧ್ಯಮಪುರುಷೈಕವಚನವಲ್ಲ. ಪಾ. ಸೂ. ೪-೪-೨ಕ್ಕೆ ಸಿದ್ಧಾಂತಕೌಮುದಿಯಲ್ಲಿರುವ ವೃತ್ತಿಯನ್ನು ನೋಡಿ.

ರೇತೋಭೂತಾಃ ಯೋಷಾಗ್ನೌ ಹೂಯನ್ತೇ। ತತೋ ಜಾಯನ್ತೇ। ಲೋಕಂ ಪ್ರತ್ಯುತ್ಥಾಯಿನಃ ತೇ ಲೋಕಂ ಪ್ರತಿ ಉತ್ತಿಷ್ಠನ್ತಃ ಅಗ್ನಿಹೋತ್ರಾದಿಕರ್ಮ ಅನುತಿಷ್ಠನ್ತಿ। ತತೋ ಧೂಮಾದಿನಾ ಪುನಃಪುನಃ ಸೋಮಲೋಕಮ್, ಪುನರಿಮಂ ಲೋಕಮ್ ಇತಿ ತೇ ಏವಂ[1] ಕರ್ಮಿಣಃ ಅನುಪರಿವರ್ತನ್ತೇ ಘಟೀಯನ್ತ್ರವತ್ ಚಕ್ರೀಭೂತಾಃ ಬಂಭ್ರಮತಿ ಇತ್ಯರ್ಥಃ, ಉತ್ತರಮಾರ್ಗಾಯ ಸದ್ಯೋಮುಕ್ತಯೇ ವಾ ಯಾವದ್ ಬ್ರಹ್ಮ ನ ವಿದುಃ। "ಇತಿ ನು ಕಾಮಯಮಾನಃ" ಸಂಸರತಿ (೪-೪-೬) ಇತ್ಯುಕ್ತಮ್ ॥

(ಭಾಷ್ಯಾರ್ಥ)

ಆ ಕರ್ಮಿಗಳಿಗೆ ಯಾವಾಗ ಯಾವ ಕಾಲದಲ್ಲಿ ಆ ಯಜ್ಞದಾನಾದಿರೂಪವಾದ ಸೋಮಲೋಕಪ್ರಾಪಕವಾದ ಕರ್ಮವು (ಪರ್ಯವೈತಿ= ಪರಿಗಚ್ಛತಿ) ಹೋಗಿಬಿಡುವದೋ ಸವೆದುಬಿಡುವದೋ ಎಂದರ್ಥ; (ಅಥ= ತದಾ) ಆಗ ಇದೇ ಪ್ರಸಿದ್ಧವಾದ ಆಕಾಶ(ದ ರೂಪ)ದವರಾಗುವರು; ಶ್ರದ್ಧಾಶಬ್ದವಾಚ್ಯವಾದ ಅಪ್ಪು ದ್ಯುಲೋಕಾಗ್ನಿಯಲ್ಲಿ ಹುತವಾಗಿ ಸೋಮಾಕಾರವಾಗಿ ಪರಿಣಾಮವನ್ನು ಹೊಂದಿತ್ತಷ್ಟೆ, ಅವುಗಳಿಂದ ಸೋಮಲೋಕದಲ್ಲಿ (ಈ) ಕರ್ಮಿಗಳ ಉಪಭೋಗಕ್ಕಾಗಿ ಅಮ್ಮಯವಾದ ಶರೀರವು ಉಂಟಾಗಿತ್ತಷ್ಟೆ, ಆ (ಅಪ್ಪು) ಕರ್ಮವು ಕ್ಷಯವಾಗಲು ಬಿಸಿಲಿನ ಸಂಪರ್ಕದಿಂದ ಮಂಜುಗಡ್ಡೆಯು (ಕರಗುವಂತೆ) ಕರಗುತ್ತದೆ; ಕರಗಿ ಸೂಕ್ಷ್ಮವಾಗಿ ಆಕಾಶವಾದವೋ ಎಂಬಂತೆ ಆಗುವದು. ಇದನ್ನೇ ಇದೇ ಆಕಾಶ(ದ ರೂಪ)ದವರಾಗುವರು[2] ಎಂದಿದೆ.

ಆ ಕರ್ಮಿಗಳು ಆ ಶರೀರವುಳ್ಳವರಾಗಿ ಮತ್ತು ಪುರೋವಾತವೇ ಮುಂತಾದವುಗಳಿಂದ ಅತ್ತಿತ್ತ ಅಂತರಿಕ್ಷದಲ್ಲಿ ಒಯ್ಯಲ್ಪಡುತ್ತಾರೆ; ಇದನ್ನೇ 'ಆಕಾಶದಿಂದ ವಾಯುವನ್ನು (ಸೇರುತ್ತಾರೆ)' ಎಂದಿದೆ. ವಾಯುವಿನಿಂದ ವೃಷ್ಟಿಯನ್ನು ಸೇರುತ್ತಾರೆ; ಇದನ್ನು 'ಪರ್ಜನ್ಯಾಗ್ನಿಯಲ್ಲಿ (ದೇವತೆಗಳು) ಸೋಮರಾಜನನ್ನು ಹೋಮಮಾಡುತ್ತಾರೆ', (೬-೨-೧೦) ಎಂದು ಹಿಂದೆ ಹೇಳಲಾಗಿದೆ.

---

1. ಇಲ್ಲಿ ಏವಮೇವ ಎಂದು ಮೂಲದಂತೆಯೇ ಭಾಷ್ಯದಲ್ಲಿದ್ದು ಕೈಬಿಟ್ಟು ಹೋಗಿದೆಯೋ ಇತ್ಯೇವಂ ಎಂಬ ಮಾತಿನಿಂದಲೇ ಅದು ಸೂಚಿತವಾಗಿದೆಯೋ ವಿಚಾರಣೀಯವಾಗಿದೆ. 'ತೇ ಏವಂ' ಎಂಬುದರ ಬದಲು ಏವಂ ತೇ ಎಂದಿದ್ದರೆ ಚೆನ್ನಾಗಿರುತ್ತಿತ್ತು.

2. ಆಕಾಶಾದಿಸ್ವರೂಪದವರೇ ಆಗುವದಿಲ್ಲ; ಮುಂದೆ ವಾಯ್ವಾದಿಗಳನ್ನು ಸೇರುವದೂ ಹೀಗೆಯೇ. ಸೂ. ಭಾ. ೩-೧-೨೨ (ಭಾ. ಭಾ. ೨೪೬)ನ್ನು ನೋಡಿ. ಚಂದ್ರಲೋಕದಲ್ಲಿ ಫಲವನ್ನು ಅನುಭವಿಸಿ ಇನ್ನೂ ಫಲವನ್ನು ಕೊಡದೆ ಇರುವ ಕರ್ಮಶೇಷವಶದಿಂದಲೇ ಮತ್ತೆ ಈ ಲೋಕಕ್ಕೆ ಬರುತ್ತಾರೆಂದು ಸೂ. ಭಾ. ೩-೧-೮ (ಭಾ. ಭಾ. ೨೨೬, ೨೨೮)ರಲ್ಲಿ ನಿರ್ಣಯಿಸಿದೆ.

ಆ ಬಳಿಕ ಮಳೆಯಾಗಿ ಈ ಪೃಥಿವಿಗೆ ಬೀಳುತ್ತಾರೆ. ಅವರು ಪೃಥಿವಿಯನ್ನು ಪಡೆದು ಬತ್ತ, ಜವೆ–ಮುಂತಾದ ಅನ್ನವಾಗುತ್ತಾರೆ[1] ; ಇದನ್ನು 'ಈ ಲೋಕ ವೆಂಬ ಅಗ್ನಿಯಲ್ಲಿ ಮಳೆಯನ್ನು ಹೋಮಮಾಡುತ್ತಾರೆ, ಆ ಆಹುತಿಯಿಂದ ಅನ್ನವು ಉಂಟಾಗುತ್ತದೆ' (೬–೨–೧೧) ಎಂದು ಹಿಂದೆ ಹೇಳಲಾಗಿದೆ. ಅನ್ನ ಭೂತರಾದ ಅವರು ಮತ್ತೂ ರೇತಃಸೇಕವನ್ನು ಮಾಡುತ್ತ ಪುರುಷಾಗ್ನಿಯಲ್ಲಿ ಹುತರಾಗುತ್ತಾರೆ, ಆ ಬಳಿಕ ರೇತಸ್ಸಾಗಿ ಯೋಷಾಗ್ನಿಯಲ್ಲಿ ಹುತರಾಗುತ್ತಾರೆ. ಆ ಬಳಿಕ ಹುಟ್ಟುತ್ತಾರೆ. ಲೋಕವನ್ನು ಕುರಿತು ಏಳುವವರಾಗುತ್ತಾರೆ. ಅವರು ಲೋಕವನ್ನು ಕುರಿತು ಏಳುವದಕ್ಕಾಗಿ ಅಗ್ನಿಹೋತ್ರಾದಿಕರ್ಮವನ್ನು ಮಾಡುತ್ತಾರೆ.

ಆ ಬಳಿಕ ಧೂಮಾದಿ (ಕ್ರಮ)ದಿಂದ ಮತ್ತೆ ಮತ್ತೆ ಸೋಮಲೋಕವನ್ನು, ಮತ್ತೆ ಈ ಲೋಕವನ್ನು ಎಂದಿಂತು ಕರ್ಮಿಗಳು– ಉತ್ತರಮಾರ್ಗಕ್ಕಾಗಲಿ, ಸದ್ಯೋಮುಕ್ತಿಗಾಗಲಿ (ಆಗುವ) ಬ್ರಹ್ಮವನ್ನು ಎಲ್ಲಿಯವರೆಗೆ ಅರಿತುಕೊಳ್ಳದೆ ಇರುವರೋ ಅಲ್ಲಿಯವರೆಗೂ ನೀರಿನರಾಟೆಯಂತೆ ಚಕ್ರವಾಗಿ ಸುತ್ತುತ್ತಿರುವರು ಎಂದರ್ಥ.[2] (ಆದ್ದರಿಂದಲೇ) "ಹೀಗಲ್ಲವೆ, ಕಾಮಿಸುವವನು (ಸಂಸಾರದಲ್ಲಿ ತೊಳಲುತ್ತಾನೆ) ?" (೪–೪–೬) ಎಂದು ಹಿಂದೆ ಹೇಳಿದೆ.

## ಉಭಯಮಾರ್ಗವೂ ಇಲ್ಲದವರಿಗೆ ಆಗುವ ದುರ್ಗತಿ

(ಭಾಷ್ಯ)

೪೫೩. ಅಥ ಪುನಃ ಯೇ ಉತ್ತರಂ ದಕ್ಷಿಣಂ ಚ ಏತೌ ಪನ್ಥಾನೌ ನ ವಿದುಃ ಉತ್ತರಸ್ಯ ವಾ ಪಥಃ ಪ್ರತಿಪತ್ತಯೇ ಜ್ಞಾನಂ ಕರ್ಮ ವಾ ನಾನುತಿಷ್ಠನ್ತಿ ಇತ್ಯರ್ಥಃ । ತೇ ಕಿಂ ಭವನ್ತೀತಿ ? ಉಚ್ಯತೇ । ತೇ ಕೀಟಾಃ ಪತಙ್ಗಾಃ ಯದಿದಂ ಯಚ್ಚೇದಂ ದನ್ದಶೂಕಃ ದಂಶಮಶಕಮ್ ಇತ್ಯೇತತ್ ಭವನ್ತಿ । ಏವಂ ಹಿ ಇಯಂ ಸಂಸಾರಗತಿಃ ಕಷ್ಟಾ ಅಸ್ಯಾಂ ನಿಮಗ್ನಸ್ಯ ಪುನರುದ್ಧಾರ ಏವ ದುರ್ಲಭಃ । ತಥಾ ಚ ಶ್ರುತ್ಯನ್ತರಮ್ "ತಾನೀಮಾನಿ ಕ್ಷುದ್ರಾಣ್ಯಸಕೃದಾವರ್ತೀನಿ ಭೂತಾನಿ ಭವನ್ತಿ ಜಾಯಸ್ವ ಮ್ರಿಯಸ್ವ" (ಛಾಂ. ೫–೧೦–೮), ಇತಿ ।

---

1. ಇಲ್ಲಿ ಭತ್ತವೇ ಮುಂತಾದವುಗಳ ಜನ್ಮವನ್ನೇ ಪಡೆಯುತ್ತಾರೆ ಎಂದರ್ಥವಲ್ಲ ; ಅವುಗಳಲ್ಲಿ ಸಂಬದ್ಧರಾಗಿರುತ್ತಾರೆ ಎಂದೇ ಅರ್ಥ. ಏಕೆಂದರೆ ಪಾಪಿಗಳಿಗೇ ಸ್ಥಾವರಜನ್ಮವಾಗುತ್ತದೆ ಎಂದು ಸೂ. ಭಾ. ೩–೧–೨೪, ೨೫–೨೬ (ಭಾ. ಭಾ. ೨೪೯ರಿಂದ ೨೫೨) ರಲ್ಲಿ ನಿರ್ಣಯಿಸಿದೆ.

2. ಇದನ್ನು ವೈರಾಗ್ಯಕ್ಕಾಗಿ ಹೇಳಿರುತ್ತದೆ, ಆದ್ದರಿಂದ ಉತ್ತರಮಾರ್ಗಸಾಧನವನ್ನು ಅನುಷ್ಠಾನಮಾಡಬೇಕು ಎಂದು ಭಾವ.

ತಸ್ಮಾತ್ ಸರ್ವೋತ್ಸಾಹೇನ ಯಥಾಶಕ್ತಿ ಸ್ವಾಭಾವಿಕಕರ್ಮಜ್ಞಾನಹಾನೇನ ದಕ್ಷಿಣೋತ್ತರಮಾರ್ಗಪ್ರತಿಪತ್ತಿಸಾಧನಂ ಶಾಸ್ತ್ರೀಯಂ ಕರ್ಮ ಜ್ಞಾನಂ ವಾ ಅನುತಿಷ್ಠೇತ್ ಇತಿ ವಾಕ್ಯಾರ್ಥಃ। ತಥಾ ಚೋಕ್ತಮ್[1] "ಅತೋ ವೈ ಖಲು ದುರ್ನಿಷ್ಪ್ರಪತರಮ್" (ಛಾಂ. ೫-೧೦-೬) "ತಸ್ಮಾಜ್ಜುಗುಪ್ಸೇತ" (ಛಾಂ. ೫-೧೦-೮) ಇತಿ ಶ್ರುತ್ಯನ್ತರಾತ್ । ಮೋಕ್ಷಾಯ ಪ್ರಯತೇತ ಇತ್ಯರ್ಥಃ । ಅತ್ರಾಪಿ ಉತ್ತರಮಾರ್ಗಪ್ರತಿಪತ್ತಿಸಾಧನ ಏವ ಮಹಾನ್ ಯತ್ನಃ ಕರ್ತವ್ಯಃ ಇತಿ ಗಮ್ಯತೇ । "ಏವಮೇವಾನುಪರಿವರ್ತನ್ತೇ" ಇತ್ಯುಕ್ತತ್ವಾತ್ ॥

(ಭಾಷ್ಯಾರ್ಥ)

ಇನ್ನು ಯಾರು ಉತ್ತರ, ದಕ್ಷಿಣ- ಎಂಬೀ ಮಾರ್ಗಗಳನ್ನು ಅರಿತಿರುವದಿಲ್ಲವೋ, ಉತ್ತರ ಅಥವಾ ದಕ್ಷಿಣಮಾರ್ಗವನ್ನು ಪಡೆಯುವದಕ್ಕೆ (ಬೇಕಾದ) ಜ್ಞಾನವನ್ನಾಗಲಿ ಕರ್ಮವನ್ನಾಗಲಿ (ಯಾರು) ಅನುಷ್ಠಾನಮಾಡಿರುವದಿಲ್ಲವೋ ಎಂದರ್ಥ. ಅವರು ಏನಾಗುತ್ತಾರೆ ? ಎಂದರೆ ಹೇಳುತ್ತಾನೆ : ಅವರು ಹುಳುಗಳೂ ಜಿಟ್ಟೆಗಳೂ ಮತ್ತು ಈ ದಂದಶೂಕವು ಎಂದರೆ ಕಾಡುನೊಣವೂ ಎಂದರ್ಥ; ಇವು ಆಗುವರು.[2] ಈ ಸಂಸಾರಗತಿಯು ಹೀಗೆ ಕಷ್ಟವಾಗಿರುತ್ತದೆ. ಇದರಲ್ಲಿ ಮುಳುಗಿದವನನ್ನು ಮತ್ತೆ ಮೇಲಕ್ಕೆತ್ತುವದು ದುರ್ಲಭವಾಗಿರುತ್ತದೆ. ಆದ್ದರಿಂದಲೇ "ಆ ಈ ಅಲ್ಪತರವಾದ ಹುಟ್ಟುವದು, ಸಾಯುವದು- (ಹೀಗೆ) ಮತ್ತೆಮತ್ತೆ ಸುತ್ತುವ ಭೂತಗಳಾಗುವರು" (ಛಾಂ. ೫-೧೦-೮) ಎಂದು ಶ್ರುತ್ಯಂತರದಲ್ಲಿಯೂ ಇದೆ. ಅಲ್ಲವೆ ? **ಆದ್ದರಿಂದ ಸರ್ವೋತ್ಸಾಹದಿಂದಲೂ ಶಕ್ತಿಯಿದ್ದಷ್ಟುಮಟ್ಟಿಗೂ ಸ್ವಾಭಾವಿಕವಾದ[3] ಕರ್ಮವನ್ನೂ ಜ್ಞಾನವನ್ನೂ ಬಿಟ್ಟು ದಕ್ಷಿಣೋತ್ತರಮಾರ್ಗಗಳನ್ನು ಪಡೆದುಕೊಳ್ಳುವದಕ್ಕೆ ಸಾಧನವಾದ ಶಾಸ್ತ್ರೀಯಕರ್ಮವನ್ನಾಗಲಿ ಜ್ಞಾನವನ್ನಾಗಲಿ ಅನುಷ್ಠಾನಮಾಡಬೇಕು ಎಂದು ವಾಕ್ಯಾರ್ಥ.** ಹೀಗೆಂದೇ ಶ್ರುತ್ಯಂತರದಲ್ಲಿ "ಆದ್ದರಿಂದಲೇ (ಇದು) ತಪ್ಪಿಸಿಕೊಂಡುಹೋಗುವದಕ್ಕೆ ಬಲುಕಷ್ಟ (ಸಾಧ್ಯ)" (ಛಾಂ. ೫-೧೦-೬), "ಆದ್ದರಿಂದ ವಿರಕ್ತನಾಗಬೇಕು" (ಛಾಂ. ೫-೧೦-೮) ಎಂದಿದೆ. (ವಿರಕ್ತನಾಗಬೇಕು ಎಂದರೆ) ಮೋಕ್ಷಕ್ಕಾಗಿ ಪ್ರಯತ್ನಿಸಬೇಕು ಎಂದರ್ಥ. ಇವು(ಗಳೊ)ಳಗೆ[4] ಉತ್ತರಮಾರ್ಗಪ್ರಾಪ್ತಿಯ ಸಾಧನದಲ್ಲಿಯೇ ಹೆಚ್ಚಿನ ಯತ್ನವನ್ನು ಮಾಡಬೇಕು ಎಂದು ಗೊತ್ತಾಗುತ್ತದೆ;

1. ಇದಕ್ಕನುಗುಣವಾಗಿ ಮುಂದೆ ಶ್ರುತ್ಯನ್ತರೇ ಎಂದಿರಬೇಕು, ಅಥವಾ ಇಲ್ಲಿ 'ತಥಾ ಚ' ಎಂದಿಷ್ಟೇ ಇದ್ದರೆ ಸಾಕಾಗುತ್ತದೆ.

2. ಸ್ಥಾವರಾಂತವಾದ ಗತಿಯಾಗುವದು ಎಂದು ಇದನ್ನು ಉಪಲಕ್ಷಣವಾಗಿ ತೆಗೆದುಕೊಳ್ಳಬೇಕು. 3. ಶಾಸ್ತ್ರಸಂಸ್ಕಾರವಿಲ್ಲದೆ ಅಜ್ಞಾನದಶೆಯಲ್ಲಿರುವ ಎಂದರ್ಥ.

4. ದಕ್ಷಿಣೋತ್ತರಮಾರ್ಗಗಳೊಳಗೂ.

ಏಕೆಂದರೆ "ಹೀಗೆಯೇ ಸುತ್ತುತ್ತಲಿರುತ್ತಾರೆ" ಎಂದು ಹೇಳಿದೆ.[1]

## ಐದು ಪ್ರಶ್ನೆಗಳಿಗೆ ಈವರೆಗೆ ಹೇಳಿದ ಉತ್ತರಗಳು

(ಭಾಷ್ಯ)

೪೫೫. ಏವಂ ಪ್ರಶ್ನಾಃ ಸರ್ವೇ ನಿರ್ಣೀತಾಃ । "ಅಸೌ ವೈ ಲೋಕಃ" (೬-೨-೯) ಇತ್ಯಾರಭ್ಯ "ಪುರುಷಃ ಸಂಭವತಿ" (೬-೨-೧೩) ಇತಿ ಚತುರ್ಥಃ ಪ್ರಶ್ನಃ "ಯತಿಥ್ಯಾಮಾಹುತ್ಯಾಮ್" (೬-೨-೨) ಇತ್ಯಾದಿಃ ಪ್ರಾಧಮ್ಯೇನ । ಪಞ್ಚಮಸ್ತು ದ್ವಿತೀಯತ್ವೇನ "ದೇವಯಾನಸ್ಯ ವಾ ಪಥಃ ಪ್ರತಿಪದಂ ಪಿತೃಯಾಣಸ್ಯ ವಾ" (೬-೨-೨) ಇತಿ ದಕ್ಷಿಣೋತ್ತರಮಾರ್ಗಪ್ರತಿಪತ್ತಿಸಾಧನಕಥನೇನ । ತೇನೈವ ಚ ಪ್ರಥಮೋಽಪಿ ಅಗ್ನೇರಾರಭ್ಯ ಕೇಚಿದರ್ಚಿಃ ಪ್ರತಿಪದ್ಯನ್ತೇ ಕೇಚಿದ್ ಧೂಮಮ್ ಇತಿ ವಿಪ್ರತಿಪತ್ತಿಃ । ಪುನರಾವೃತ್ತಿಶ್ಚ ದ್ವಿತೀಯಃ ಪ್ರಶ್ನಃ, ಆಕಾಶಾದಿಕ್ರಮೇಣ ಇಮಂ ಲೋಕಮ್ ಆಗಚ್ಛನ್ತಿ ಇತಿ । ತೇನೈವ ಅಸೌ ಲೋಕೋ ನ ಸಂಪೂರ್ಯತೇ ಕೀಟಪತಙ್ಗಾದಿಪ್ರತಿಪತ್ತೇಶ್ಚ ಕೇಷಾಂಚಿತ್ ಇತಿ ತೃತೀಯೋಽಪಿ ಪ್ರಶ್ನೋ ನಿರ್ಣೀತಃ ॥

(ಭಾಷ್ಯಾರ್ಥ)

ಹೀಗೆ ಎಲ್ಲಾ ಪ್ರಶ್ನೆಗಳಿಗೂ ಉತ್ತರವನ್ನು ಹೇಳಿದಂತೆ ಆಯಿತು. "ಎಷ್ಟನೆಯ ಆಹುತಿಯು...." (೬-೨-೨) ಎಂಬ ನಾಲ್ಕನೆಯ ಪ್ರಶ್ನೆಗೆ "ಆ ಲೋಕವೇ .. " (೬-೨-೯) ಎಂಬುದರಿಂದ ಹಿಡಿದು "ಪುರುಷನು ಉಂಟಾಗುತ್ತಾನೆ" (೬-೨-೧೩) ಎಂದು ಮೊದಲನೆಯದಾಗಿ (ಉತ್ತರವನ್ನು ಕೊಟ್ಟಿದೆ). "ದೇವಯಾನದ ಅಥವಾ ಪಿತೃಯಾಣದ ಪ್ರತಿಪತ್ತನ್ನು....." ಎಂಬ ಐದನೆಯ (ಪ್ರಶ್ನೆಗೋ) ದಕ್ಷಿಣೋತ್ತರಮಾರ್ಗಗಳ ಪ್ರಾಪ್ತಿಗೆ ಸಾಧನವನ್ನು ಹೇಳಿ ಎರಡನೆಯದಾಗಿ (ಉತ್ತರವನ್ನು ಕೊಟ್ಟಿದೆ). ಅದರಿಂದಲೇ ಮೊದಲನೆಯ (ಪ್ರಶ್ನೆಗೂ) ಅಗ್ನಿಯಿಂದ ಮೊದಲುಮಾಡಿಕೊಂಡು ಕೆಲವರು ಅರ್ಚಿಯನ್ನು ಸೇರುತ್ತಾರೆ, ಕೆಲವರು ಧೂಮವನ್ನು (ಸೇರುತ್ತಾರೆ)– ಹೀಗೆ ವಿಪ್ರತಿಪತ್ತಿ (ಯಿದೆ ಎಂದು ಉತ್ತರವನ್ನು ಹೇಳಿದೆ). ಎರಡನೆಯ ಪ್ರಶ್ನೆಯಾದ ಪುನರಾವೃತ್ತಿ(ವಿಚಾರಕ್ಕೆ) ಆಕಾಶಾದಿಕ್ರಮದಿಂದ ಈ ಲೋಕಕ್ಕೆ ಬರುತ್ತಾರೆ ಎಂದು (ಉತ್ತರವನ್ನು ಹೇಳಿದೆ). ಆದ್ದರಿಂದಲೇ[2] ಆ ಲೋಕವು ಪೂರ್ಣವಾಗುತ್ತಿಲ್ಲ, ಕೆಲವರು ಕೀಟಪತಂಗಾದಿ(ಜನ್ಮ)ವನ್ನು ಹೊಂದುವದರಿಂದಲೂ (ಪೂರ್ಣವಾಗುತ್ತಿಲ್ಲ) ಎಂದು ಮೂರನೆಯ ಪ್ರಶ್ನೆಗೂ ಉತ್ತರವನ್ನು ಹೇಳಿರುತ್ತದೆ.

---

1. ದಕ್ಷಿಣಮಾರ್ಗದಲ್ಲಿಯೂ ಅನಾವೃತ್ತಿಯಿಲ್ಲ ಎಂದು ಹೇಳಿರುವದರಿಂದ ಉತ್ತರಮಾರ್ಗಸಾಧನವನ್ನೇ ಮುಖ್ಯವಾಗಿ ಹಿಡಿಯಬೇಕು ಎಂದಂತೆ ಆಯಿತು.

2. ಹೀಗೆ ಅಲ್ಲಿಗೆ ಹೋದವರು ಮರಳಿಬರುತ್ತಿರುವದರಿಂದಲೇ.

# ಎರಡನೆಯ ಬ್ರಾಹ್ಮಣದ ಸಾರ

ಇಲ್ಲಿ ಪಂಚಾಗ್ನಿವಿದ್ಯೆಯನ್ನೂ ಸಂಸಾರಗತಿಪ್ರಕಾರಗಳನ್ನೂ ವರ್ಣಿಸಿವೆ.

೧–೨. ಆರುಣೇಯ ಶ್ವೇತಕೇತುವು ಪಂಚಾಲರಾಜನಾದ ಜೈವಲಿಯ ಬಳಿಗೆ ಬಂದನು. ರಾಜನು ಅವನನ್ನು ಕುರಿತು 'ನಿಮ್ಮ ತಂದೆಯು ಎಲ್ಲವನ್ನೂ ಕಲಿಸಿಕೊಟ್ಟಿದ್ದಾನೊ ?' ಎಂದು ಕೇಳಲು 'ಕಲಿಸಿಕೊಟ್ಟಿದ್ದಾನೆ' ಎಂದನು. ಆಗ ರಾಜನು ಅವನನ್ನು ಐದು ಪ್ರಶ್ನೆಗಳನ್ನು ಕೇಳಿದನು. (೧) ಇಲ್ಲಿಂದ ಪರಲೋಕಕ್ಕೆ ಹೊರಟವರು ಮಾರ್ಗದಲ್ಲಿ ಬೇರೆಬೇರೆಯಾಗುವದು ಹೇಗೆ ? (೨) ಮತ್ತೆ ಅವರು ಈ ಲೋಕಕ್ಕೆ ಹಿಂತಿರುಗುವದು ಹೇಗೆ ? (೩) ಈ ಲೋಕದಿಂದ ಹೋದವರಿಂದ ಪರಲೋಕವು ಪೂರ್ಣವಾಗುವದಿಲ್ಲ ವೇಕೆ ? (೪) ಎಷ್ಟನೆಯ ಆಹುತಿಯಲ್ಲಿ ಹುತವಾದ ಅಪ್ಪು ಪುರುಷವಾಕ್ಕಾಗಿ ಎದ್ದು ಮಾತಾಡುತ್ತದೆ ? (೫) ದೇವಯಾನಪಿತೃಯಾಣಗಳನ್ನು ಪಡೆಯುವ ಬಗೆಯನ್ನು ಬಲ್ಲೆಯ ?

ನಾನು ಇವೊಂದಕ್ಕೂ ಉತ್ತರವನ್ನರಿಯೆನು ಎಂದು ಶ್ವೇತಕೇತು ಹೇಳಿದನು.

೩–೮. ರಾಜನು ಅರಮನೆಯಲ್ಲಿ ವಾಸಕ್ಕೆ ನಿಲ್ಲಬೇಕೆಂದರೂ ಕೇಳದೆ ಶ್ವೇತಕೇತು ತಂದೆಯ ಬಳಿಗೆ ಬಂದು "ಹೀಗೇಯೊ, ನೀನು ನಮಗೆ ಅನುಶಾಸನಮಾಡಿವೇನೆಂದದ್ದು ?" ಎಂದು ಅಸಮಾಧಾನದಿಂದ ಕೇಳಿದನು. ತಂದೆಯು "ಅಪ್ಪ, ನನಗೆ ತಿಳಿದದ್ದನ್ನೆಲ್ಲ ಹೇಳಿದೇನೆ. ನನಗೂ ಈ ಪ್ರಶ್ನೆಗಳಿಗೆ ಉತ್ತರವು ತಿಳಿಯದು ; ಬಾ, ಹೋಗಿ ರಾಜನಲ್ಲಿ ಶಿಷ್ಯರಾಗಿ ತಿಳಿದುಕೊಳ್ಳೋಣ" ಎಂದನು. ಆದರೆ ಶ್ವೇತಕೇತುವು ಬರುವದಕ್ಕೆ ಒಪ್ಪಲಿಲ್ಲ. ಆರುಣಿಗೌತಮನೇ ರಾಜನ ಬಳಿಗೆ ಬಂದು ಅವನಿಂದ ಸತ್ಕಾರವನ್ನು ಹೊಂದಿ ಅವನು ಕೊಟ್ಟ ವರಕ್ಕೆ ಈ ಪ್ರಶ್ನೆಗಳ ಉತ್ತರವನ್ನೇ ಬೇಡಿದನು. ಅವರೆಗೆ ಕ್ಷತ್ರಿಯರಲ್ಲಿ ಮಾತ್ರವೇ ಇದ್ದ ವಿದ್ಯೆಯನ್ನು ಕೂಡಲೆ ಹೇಳುವದಕ್ಕೆ ಇಷ್ಟವಿಲ್ಲದೆ ಬೇರೆ ಒಂದು ವರವನ್ನು ಕೇಳೆಂದರೂ ಗೌತಮನು ಒಪ್ಪಲಿಲ್ಲವಾದ್ದರಿಂದ ರಾಜನು ತನ್ನ ವಾಗ್ದಾನವನ್ನೂ ಗೌತಮನ ವಿನಯವನ್ನೂ ಮನದಂದುಕೊಂಡು ಈ ವಿದ್ಯೆಯನ್ನು ಅವನಿಗೆ ಹೇಳುವದಕ್ಕೆ ಉಪಕ್ರಮಿಸಿದನು.

೯–೧೩. ನಾಲ್ಕನೆಯ ಪ್ರಶ್ನೆಗೆ ಉತ್ತರವಿದು : ದ್ಯುಲೋಕವೆಂಬ ಅಗ್ನಿಗೆ ಆದಿತ್ಯನು ಸಮಿತ್ತು, ರಶ್ಮಿಗಳು ಹೊಗೆ, ಹಗಲೇ ಉರಿ, ದಿಕ್ಕುಗಳು ಕೆಂಡ, ಅವಾಂತರದಿಕ್ಕುಗಳು ಕಿಡಿಗಳು. ಈ ಅಗ್ನಿಯಲ್ಲಿ ಶ್ರದ್ಧಾಶಬ್ದವಾಚ್ಯವಾದ ಅಪ್ಪನ್ನು ದೇವತೆಗಳು ಹೋಮ ಮಾಡಲು ಅದರಲ್ಲಿ ಸೋಮರಾಜನು ಹುಟ್ಟುತ್ತಾನೆ. ಈ ಸೋಮರಾಜನನ್ನು ಪರ್ಜನ್ಯಾಗ್ನಿಯಲ್ಲಿ ದೇವತೆಗಳು ಹೋಮಮಾಡುತ್ತಾರೆ. ಆ ಅಗ್ನಿಗೆ ಸಂವತ್ಸರವು ಸಮಿತ್ತು, ಮೋಡಗಳು ಹೊಗೆ, ಮಿಂಚು ಉರಿ, ಸಿಡಿಲು ಕೆಂಡ, ಗುಡುಗುಗಳು ಕಿಡಿಗಳು. ಈ ಅಗ್ನಿಯಲ್ಲಿ ಹಾಕಿದ ಆಹುತಿಯಿಂದ ಮಳೆಯುಂಟಾಗುತ್ತದೆ. ಈ ಮಳೆಯನ್ನು ದೇವತೆಗಳು ಈ ಲೋಕವೆಂಬ ಅಗ್ನಿಯಲ್ಲಿ ಹೋಮಮಾಡುತ್ತಾರೆ. ಈ ಅಗ್ನಿಗೆ ಪೃಥಿವಿಯೇ ಸಮಿತ್ತು, ಬೆಂಕಿಯೇ ಧೂಮವು, ರಾತ್ರಿಯೇ ಉರಿ, ಚಾಂದ್ರನೇ ಕೆಂಡ, ನಕ್ಷತ್ರಗಳೇ ಕಿಡಿಗಳು. ಈ ಅಗ್ನಿಯಲ್ಲಿ ಹಾಕಿದ ಆಹುತಿಯಿಂದ ಅನ್ನವುಂಟಾಗುತ್ತದೆ. ಈ ಅನ್ನವನ್ನು ಪುರುಷಾಗ್ನಿಯಲ್ಲಿ ದೇವತೆಗಳು ಹೋಮಮಾಡುತ್ತಾರೆ. ಈ ಅಗ್ನಿಗೆ

ತೆರೆದ ಬಾಯಿಯೇ ಸಮಿತ್ತು, ಪ್ರಾಣವೇ ಹೊಗೆ, ವಾಕ್ಕೇ ಉರಿ, ಚಕ್ಷುಸ್ಸೇ ಕೆಂಡ, ಶ್ರೋತ್ರವೇ ಕಿಡಿಗಳು. ಇದರಲ್ಲಿ ಹುತವಾದ ಆಹುತಿಯಿಂದ ರೇತಸ್ಸು ಉಂಟಾಗುತ್ತದೆ ಈ ರೇತಸ್ಸನ್ನು ದೇವತೆಗಳು ಯೋಷಾಗ್ನಿಯಲ್ಲಿ ಹೋಮಮಾಡುತ್ತಾರೆ ಈ ಅಗ್ನಿಗೆ ಉಪಸ್ಥವೇ ಸಮಿತ್ತು, ಲೋಮಗಳೇ ಹೊಗೆ, ಯೋನಿಯೇ ಉರಿ, ಒಳಗೆ ಮಾಡುವ ಕಾರ್ಯವೇ ಕೆಂಡ, ಕ್ಷುದ್ರಸುಖಗಳೇ ಕಿಡಿಗಳು. ಈ ಅಗ್ನಿಯಲ್ಲಿ ಹಾಕಿದ ಆಹುತಿಯಿಂದ ಪುರುಷಶರೀರವು ಹುಟ್ಟುತ್ತದೆ. ಹೀಗೆ ಐದನೆಯ ಆಹುತಿಯು ಹುತವಾಗಲು ಅಪ್ಪು ಪುರುಷವಾಕ್ಕಾಗುತ್ತದೆ.

೧೪-೧೬. ಈ ಪುರುಷನು ಸಾಯಲು ಅಗ್ನಿಯಬಳಿಗೆ ಅಂತ್ಯಕರ್ಮಕ್ಕಾಗಿ ಋತ್ವಿಜರು ಒಯ್ಯುತ್ತಾರೆ ಅಲ್ಲಿ ಅಗ್ನಿ, ಸಮಿತ್ತು, ಹೊಗೆ, ಕೆಂಡ, ಕಿಡಿ- ಇವುಗಳನ್ನು ಉಪಾಸನೆಗಾಗಿ ಕಲ್ಪಿಸಬೇಕಾದದ್ದೇನೂ ಇಲ್ಲ, ಸ್ವಾಭಾವಿಕವಾದ ಅಗ್ನ್ಯಾದಿಗಳೇ ಅಗ್ನ್ಯಾದಿಗಳಾಗಿರುತ್ತವೆ. ಅದರಲ್ಲಿ ಹಾಕಿದ ಪುರುಷಾಹುತಿಯಿಂದ ಭಾಸ್ವರಪುರುಷನುಂಟಾಗುತ್ತಾನೆ.

೧೫. ಈ ರೀತಿಯಲ್ಲಿ ಪಂಚಾಗ್ನಿಗಳನ್ನು ಸವಿಶೇಷಣವಾಗಿ ಅರಿತುಕೊಂಡು ಉಪಾಸನೆ ಮಾಡಿದವನೂ, ಅರಣ್ಯನಿತ್ಯರಾದ ವಾನಪ್ರಸ್ಥರೂ ಸಾಧಾರಣಸಂನ್ಯಾಸಿಗಳೂ, ಅರ್ಚಿಸ್ಸು, ಅಹಸ್ಸು, ಆಪೂರ್ಯಮಾಣಪಕ್ಷ, ಉತ್ತರಾಯಣ- ಎಂಬ ದೇವತೆಗಳಿಂದ ಕ್ರಮಕ್ರಮವಾಗಿ ಅತಿವಾಹಿತರಾಗಿ ದೇವಲೋಕ, ಆದಿತ್ಯ, ವಿದ್ಯುತ್ತು- ಇವುಗಳನ್ನು ದಾಟಿ ಬ್ರಹ್ಮನ ಮಾನಸಪುತ್ರನಾದ ಪುರುಷನಿಂದ ಬ್ರಹ್ಮಲೋಕಗಳನ್ನು ಮುಟ್ಟಿ ಅನೇಕ ಕಲ್ಪಗಳವರೆಗೆ ಅಲ್ಲಿ ವಾಸವಾಗಿರುತ್ತಾರೆ. ಬ್ರಹ್ಮನ ಈ ಕಲ್ಪವು ಮುಗಿಯುವವರೆಗೂ ಅವರಿಗೆ ಸಂಸಾರಕ್ಕೆ ಪುನರಾವೃತ್ತಿಯಾಗುವದಿಲ್ಲ.

ಆದರೆ ಬರಿಯ ಯಜ್ಞದಾನತಪಸ್ಸುಗಳಿಂದ ಮಾತ್ರವೇ ಊರ್ಧ್ವಲೋಕಗಳನ್ನು ಗೆದ್ದುಕೊಳ್ಳುವವರು, ಧೂಮ, ರಾತ್ರಿ, ಅಪಕ್ಷೀಯಮಾಣಪಕ್ಷ, ದಕ್ಷಿಣಾಯನ, ಪಿತೃಲೋಕ- ಈ ಕ್ರಮದಿಂದ ಚಂದ್ರಲೋಕವನ್ನು ಮುಟ್ಟುತ್ತಾರೆ. ಅಲ್ಲಿ ಅವರಿಗೆ ಕರ್ಮದ ಫಲವಾಗುವದು, ಅವರು ದೇವತೆಗಳಿಗೆ ಉಪಭೋಗ್ಯರೂ ಆಗಿರುವದು. ಅಲ್ಲಿ ಅವರ ಕರ್ಮವು ಸವೆಯಲು ಆಕಾಶ, ವಾಯು, ವೃಷ್ಟಿ, ಪೃಥಿವಿ, ಅನ್ನ – ಈ ಕ್ರಮದಿಂದ ಪುರುಷಾಗ್ನಿಯನ್ನು ಸೇರಿ ಮುಂದೆ ಯೋಷಾಗ್ನಿಯಲ್ಲಿ ಪುರುಷಾಕೃತಿಯಿಂದ ಹುಟ್ಟಿ ಮತ್ತೆ ಕರ್ಮವನ್ನು ಮಾಡುತ್ತಾ ಸಂಸಾರವನ್ನು ಪಡೆಯುತ್ತಿರುವರು.

ಇದು ಐದನೆಯ ಪ್ರಶ್ನೆಗೂ ಮೊದಲನೆಯ ಪ್ರಶ್ನೆಗೂ ಉತ್ತರವು ; ಎರಡನೆಯ ಪ್ರಶ್ನೆಯಲ್ಲಿ ಕೇಳಿದ ಪುನರಾವೃತ್ತಿವಿಷಯದಲ್ಲಿಯೂ ಇದೇ ಉತ್ತರವು

೧೬. ಹೀಗೆ ಕೇವಲ ಕರ್ಮಿಗಳು ಮತ್ತೆಮತ್ತೆ ಹಿಂತಿರುಗುತ್ತಿರುವದರಿಂದಲೂ ಶಾಸ್ತ್ರೀಯಕರ್ಮಜ್ಞಾನಗಳನ್ನು ಮಾಡದವರು ಕೀಟಪತಂಗಾದಿಜನ್ಮವನ್ನು ಪಡೆಯುತ್ತಿರುವದರಿಂದಲೂ ಪರಲೋಕವು ತುಂಬುವದಿಲ್ಲ-ಎಂಬುದು ಮೂರನೆಯ ಪ್ರಶ್ನೆಗೆ ಉತ್ತರವು.

# ಆರನೆಯ ಅಧ್ಯಾಯ- ಮೂರನೆಯ ಬ್ರಾಹ್ಮಣ

## (ಶ್ರೀಮಂಥಕರ್ಮ)

(ಉಪನಿಷತ್ತು)

**ಸ ಯಃ ಕಾಮಯೇತ ಮಹತ್ ಪ್ರಾಪ್ನುಯಾಮಿತ್ಯುದಗಯನ ಆಪೂರ್ಯಮಾಣಪಕ್ಷಸ್ಯ ಪುಣ್ಯಾಹೇ ದ್ವಾದಶಾಹಮುಪ ಸದ್ವ್ರತೀ ಭೂತ್ವೌದುಮ್ಬರೇ ಕಗ್ಂಸೇ ಚಮಸೇ ವಾ ಸರ್ವೌ ಷಧಂ ಫಲಾನೀತಿ ಸಂಭೃತ್ಯ ಪರಿಸಮುಹ್ಯ ಪರಿಲಿಪ್ಯಾಗ್ನಿ ಮುಪಸಮಾಧಾಯ ಪರಿಸ್ತೀರ್ಯಾವೃತಾಜ್ಯಗ್ಂ ಸಂಸ್ಕೃತ್ಯ ಪುಗ್ಂಸಾ ನಕ್ಷತ್ರೇಣ ಮನ್ಥಗ್ಂ ಸಂನೀಯ ಜುಹೋತಿ। ಯಾವನ್ತೋ ದೇವಾಸ್ತ್ವಯಿ ಜಾತವೇದಸ್ತಿರ್ಯಞ್ಚೋ ಘ್ನನ್ತಿ ಪುರುಷಸ್ಯ ಕಾಮಾನ್। ತೇಭ್ಯೋಽಹಂ ಭಾಗಧೇಯಂ ಜುಹೋಮಿ ತೇ ಮಾ ತೃಪ್ತಾಃ ಸರ್ವೈಃ ಕಾಮೈಸ್ತರ್ಪಯನ್ತು ಸ್ವಾಹಾ। ಯಾ ತಿರಶ್ಚೀ ನಿಪದ್ಯತೇಽಹಂ ವಿಧರಣೀ ಇತಿ ತಾಂ ತ್ವಾ ಘೃತಸ್ಯ ಧಾರಯಾ ಯಜೇ ಸಗ್ಂರಾಧನೀಮಹಗ್ಂ ಸ್ವಾಹಾ ॥ ೧ ॥**

೧. ಯಾವನು ಮಹತ್ತನ್ನು ಪಡೆಯಬೇಕೆಂದು ಕಾಮಿಸುವನೋ ಅವನು ಉತ್ತರಾಯಣದಲ್ಲಿ ಆಪೂರ್ಯಮಾಣಪಕ್ಷದ ಶುಭ ದಿನದಲ್ಲಿ ಹನ್ನೆರಡು ದಿನಗಳವರೆಗೆ ಉಪಸದ್ವ್ರತಿಯಾಗಿ ಔದುಂಬರದ ಬಟ್ಟಲಲ್ಲಿ, ಅಥವಾ ಚಮಸದಲ್ಲಿ, ಸರ್ವೌಷಧಗಳನ್ನೂ ಫಲಗಳನ್ನೂ -ಹೀಗೆ ಕೂಡಿಸಿಟ್ಟು ಗುಡಿಸಿ ಸಾರಿಸಿ ಅಗ್ನಿಯನ್ನು ತಂದುಕೊಂಡು, (ಕುಶಗಳನ್ನು) ಪರಿಸ್ತರಣಮಾಡಿ ಆವೃತ್ತಿನಿಂದ ಆಜ್ಯವನ್ನು ಸಂಸ್ಕಾರ ಮಾಡಿಕೊಂಡು ಪುನ್ನಕ್ಷತ್ರದಿಂದ ಮಂಥವನ್ನು (ಕಡೆದು) ಇಟ್ಟುಕೊಂಡು ಹೋಮಮಾಡಬೇಕು. "ಜಾತವೇದನೆ, ವಕ್ರ(ಮತಿ)ಗಳಾದ ಎಷ್ಟು ದೇವತೆಗಳು ನಿನ್ನ (ವಶ)ದಲ್ಲಿರುವರಾಗಿ ಪುರುಷನ ಕಾಮಗಳನ್ನು ತಡೆಗಟ್ಟುತ್ತಿರುವರೋ, ಅವರಿಗೆ ನಾನು (ಆಜ್ಯ)ಭಾಗವನ್ನು ಹೋಮಮಾಡುತ್ತಿದೇನೆ; ಅವರು ತೃಪ್ತರಾಗಿ ನನ್ನನ್ನು ಸರ್ವಕಾಮಗಳಿಂದಲೂ ತೃಪ್ತಿಗೊಳಿಸಲಿ! ಸ್ವಾಹಾ!'', "ಯಾವ ವಕ್ರ(ಮತಿ)

ಯಾದ (ದೇವತೆಯು) ನಾನು (ಎಲ್ಲವನ್ನೂ) ಧರಿಸಿಕೊಂಡಿರುವೆನು ಎಂದು ಇದ್ದುಕೊಂಡಿರುವದೋ, ಆ ಸರ್ವಸಾಧಕವಾದ ದೇವತೆಗೆ ನಾನು ಘೃತಧಾರೆಯಿಂದ ಯಾಗಮಾಡುತ್ತಿದೇನೆ! ಸ್ವಾಹಾ!"

## ಈ ಬ್ರಾಹ್ಮಣದ ಸಂಬಂಧ

(ಭಾಷ್ಯ)

೪೫೩. ಸ ಯಃ ಕಾಮಯೇತ। ಜ್ಞಾನಕರ್ಮಣೋರ್ಗತಿರುಕ್ತಾ! ತತ್ರ ಜ್ಞಾನಂ ಸ್ವತನ್ತ್ರಮ್, ಕರ್ಮ ತು ದೈವಮಾನುಷವಿತ್ತದ್ವಯಾಯತ್ತಮ್। ತೇನ ಕರ್ಮಾರ್ಥಂ ವಿತ್ತಮ್ ಉಪಾರ್ಜನೀಯಮ್! ತಚ್ಚ ಅಪ್ರತ್ಯವಾಯಕಾರಿಣಾ ಉಪಾಯೇನ ಇತಿ ತದರ್ಥಂ ಮನ್ಥಾಖ್ಯಂ ಕರ್ಮ ಆರಭ್ಯತೇ ಮಹತ್ತ್ವಪ್ರಾಪ್ತಯೇ। ಮಹತ್ತ್ವೇ ಚ ಸತಿ ಅರ್ಥಸಿದ್ಧಂ ಹಿ ವಿತ್ತಮ್ ॥

(ಭಾಷ್ಯಾರ್ಥ)

'ಸ ಯಃ ಕಾಮಯೇತ' (ಎಂಬ ಕಂಡಿಕೆಯ ಸಂಬಂಧವೇನೆಂದರೆ) ಜ್ಞಾನಕರ್ಮಗಳಿಗೆ ಗತಿಯನ್ನು[1] ಹೇಳಿದ್ದಾಯಿತು. ಅವುಗಳಲ್ಲಿ ಜ್ಞಾನವು ಸ್ವತಂತ್ರವಾಗಿರುತ್ತದೆ[2]; ಕರ್ಮವೋ ದೈವಮಾನುಷವಿತ್ತಗಳೆಂಬ ಎರಡಕ್ಕೆ ಅಧೀನವಾಗಿರುತ್ತದೆ. ಆದ್ದರಿಂದ ಕರ್ಮಕ್ಕಾಗಿ ವಿತ್ತವನ್ನು ಸಂಪಾದಿಸಿಕೊಳ್ಳಬೇಕು. ಆ (ಸಂಪಾದನೆಯು) ಪ್ರತ್ಯವಾಯವನ್ನುಂಟುಮಾಡದಿರುವ ಉಪಾಯದಿಂದ (ಆಗಬೇಕು). ಆದ್ದರಿಂದ ಅದಕ್ಕಾಗಿ ಮಹತ್ತ್ವಪ್ರಾಪ್ತಿಗಾಗಿ ಮಂಥ ಎಂಬ ಕರ್ಮವನ್ನು (ತಿಳಿಸುವದಕ್ಕೆ) ಪ್ರಾರಂಭಿಸಿದೆ. ಮಹತ್ತ್ವವುಂಟಾದರೆ ವಿತ್ತವು ತಾನೇ ಸಿದ್ಧವಾಗುವದಷ್ಟೆ.

## ಮಂಥಕರ್ಮಕ್ಕೆ ಕಾಲವೂ ಅಧಿಕಾರಿಯೂ

(ಭಾಷ್ಯ)

೪೫೪. ತದುಚ್ಯತೇ। ಸ ಯಃ ಕಾಮಯೇತ। ಸ ಯೋ ವಿತ್ತಾರ್ಥೀ ಕರ್ಮಣಿ ಅಧಿಕೃತಃ ಯಃ ಕಾಮಯೇತ। ಕಿಮ್? ಮಹತ್ ಮಹತ್ತ್ವಂ ಪ್ರಾಪ್ನುಯಾಮ್। ಮಹಾನ್ ಸ್ಯಾಮ್ ಇತೀತ್ಯರ್ಥಃ। ತತ್ರ ಮನ್ಥಕರ್ಮಣೋ ವಿಧಿತ್ಸಿತಸ್ಯ ಕಾಲಃ ಅಭಿಧೀಯತೇ। ಉದಗಯನೇ ಆದಿತ್ಯಸ್ಯ। ತತ್ರ ಸರ್ವತ್ರ

---

1. ಜ್ಞಾನಕ್ಕೆ ಎಂದರೆ ಉಪಾಸನೆಗೆ ಉತ್ತರಾಯಣಗತಿ, ಕರ್ಮಕ್ಕೆ ಪಿತೃಯಾಣಗತಿ.
2. ಅದಕ್ಕಾಗಿ ಮತ್ತೊಂದು ಸಾಮಗ್ರಿಯನ್ನು ಸಂಪಾದಿಸಿಕೊಳ್ಳಬೇಕಾದದ್ದಿರುವದಿಲ್ಲ.

ಪ್ರಾಪ್ತೌ ಆಪೂರ್ಯಮಾಣಪಕ್ಷಸ್ಯ ಶುಕ್ಲಪಕ್ಷಸ್ಯ। ತತ್ರಾಪಿ ಸರ್ವತ್ರ ಪ್ರಾಪ್ತೌ ಪುಣ್ಯಾಹೇ ಅನುಕೂಲೇ ಆತ್ಮನಃ ಕರ್ಮಸಿದ್ಧಿಕರೇ ಇತ್ಯರ್ಥಃ ॥

(ಭಾಷ್ಯಾರ್ಥ)

ಅದನ್ನೇ (ಶ್ರುತಿ) ಹೇಳುತ್ತಿದೆ: ಯಾವನು ಬಯಸುತ್ತಾನೋ ಅವನು, ಯಾವನು ವಿತ್ತಾರ್ಥಿಯೂ ಕರ್ಮದಲ್ಲಿ ಅಧಿಕೃತನಾದವನೂ ಆಗಿ ಕಾಮಿಸುವನೋ ಅವನು. ಏನನ್ನು (ಕಾಮಿಸುವವನು)? ಎಂದರೆ ಮಹತ್ತನ್ನು ಮಹತ್ತ್ವವನ್ನು ಪಡೆದುಕೊಳ್ಳಬೇಕು, (ನಾನು) ದೊಡ್ಡವನಾಗಬೇಕು ಎಂದು (ಯಾವನು ಕಾಮಿಸುವನೋ ಅವನು) ಎಂದರ್ಥ.

ಈ ವಿಧಿಸಬೇಕೆಂದಿರುವ ಮಂಥಕರ್ಮಕ್ಕೆ ಕಾಲವನ್ನು ಹೇಳಲಾಗುತ್ತದೆ. ಸೂರ್ಯನ ಉತ್ತರಾಯಣದಲ್ಲಿ. ಆ (ಉತ್ತರಾಯಣದಲ್ಲಿ) ಯಾವಾಗಲಾದರೂ (ಆಗಬಹುದೆಂದು) ಬಂದೊದಗುವದರಿಂದ ಆಪೂರ್ಯಮಾಣಪಕ್ಷದ, ಶುಕ್ಲಪಕ್ಷದ (ಎಂದಿದೆ). ಆ (ಪಕ್ಷ)ದಲ್ಲಿಯೂ ಯಾವಾಗಲಾದರೂ (ಆಗಬಹುದೆಂದು) ಬಂದೊದಗುವದರಿಂದ ಶುಭದಿನದಲ್ಲಿ ಎಂದಿದೆ. ಅನುಕೂಲವಾದ ತನ್ನ ಕರ್ಮಕ್ಕೆ ಸಿದ್ಧಿಯನ್ನುಂಟುಮಾಡುವ (ದಿನದಲ್ಲಿ ಎಂದರ್ಥ).

## ಮಂಥಕರ್ಮವನ್ನು ಮಾಡುವ ಪ್ರಕಾರ

(ಭಾಷ್ಯ)

೪೫೮. ದ್ವಾದಶಾಹಂ ಯಸ್ಮಿನ್ ಪುಣ್ಯೇ ಅನುಕೂಲೇ। (ಅಹನಿ) ಕರ್ಮ ಚಿಕೀರ್ಷತಿ ತತಃ ಪ್ರಾಕ್ ಪುಣ್ಯಾಹಮೇವ ಆರಭ್ಯ ದ್ವಾದಶಾಹಮ್ ಉಪಸದ್ವ್ರತೀ। ಉಪಸತ್ಸು ವ್ರತಮ್। ಉಪಸದಃ ಪ್ರಸಿದ್ಧಾಃ ಜ್ಯೋತಿಷ್ಟೋಮೇ। ತತ್ರ ಚ ಸ್ತನೋಪಚಯಾಪಚಯದ್ವಾರೇಣ ಪಯೋಭಕ್ಷಣಂ ತದ್ವ್ರತಮ್। ಅತ್ರ ಚ ತತ್ಕರ್ಮಾನುಪಸಂಹಾರಾತ್ ಕೇವಲಮ್ ಇತಿಕರ್ತವ್ಯತಾಶೂನ್ಯಂ ಪಯೋಭಕ್ಷಣಮಾತ್ರಮ್ ಉಪಾದೀಯತೇ। ನನು ಉಪಸದೋ ವ್ರತಮ್ ಇತಿ ಯದಾ ವಿಗ್ರಹಃ ತದಾ ಸರ್ವಮ್ ಇತಿಕರ್ತವ್ಯತಾರೂಪಂ ಗ್ರಾಹ್ಯಂ ಭವತಿ। ತತ್ ಕಸ್ಮಾತ್ ನ ಪರಿಗೃಹ್ಯತ ಇತಿ? ಉಚ್ಯತೇ। ಸ್ಮಾರ್ತತ್ವಾತ್ ಕರ್ಮಣಃ। ಸ್ಮಾರ್ತಂ ಹಿ ಇದಂ ಮನ್ಥಕರ್ಮ। ನನು ಶ್ರುತಿವಿಹಿತಂ ಸತ್ ಕಥಂ ಸ್ಮಾರ್ತಂ ಭವಿತುಮರ್ಹತಿ? ಸ್ಮೃತ್ಯನುವಾದಿನೀ ಹಿ ಶ್ರುತಿರಿಯಮ್। ಶ್ರೌತತ್ವೇ ಹಿ ಪ್ರಕೃತಿವಿಕಾರಭಾವಃ, ತತಶ್ಚ ಪ್ರಾಕೃತಧರ್ಮಗ್ರಾಹಿತ್ವಂ ವಿಕಾರಕರ್ಮಣಃ। ನ ತ್ವಿಹ ಶ್ರೌತತ್ವಮ್। ಅತ ಏವ ಚ ಆವಸಥ್ಯಾಗ್ನೌ ಏತತ್ ಕರ್ಮ ವಿಧೀಯತೇ। ಸರ್ವಾ ಚ ಆವೃತ್ ಸ್ಮಾರ್ತ್ಯೇವ

ಇತಿ । ಉಪಸದ್ವ್ರತೀ ಭೂತ್ವಾ ಪ್ರಯೋವ್ರತೀ ಸನ್ ಇತ್ಯರ್ಥಃ। ಔದುಮ್ಬರೇ ಉದುಮ್ಬರವೃಕ್ಷಮಯೇ ಕಂಸೇ ಚಮಸೇ ವಾ। ತಸ್ಯೈವ ವಿಶೇಷಣಮ್ ಕಂಸಾಕಾರೇ ಚಮಸಾಕಾರೇ ವಾ ಔದುಮ್ಬರೇ ಏವ। ಆಕಾರೇ ತು ವಿಕಲ್ಪಃ, ನೌದುಮ್ಬರತ್ವೇ। ಅತ್ರ[1] ಸರ್ವೌಷಧಂ ಸರ್ವಾಸಾಮ್ ಓಷಧೀನಾಂ ಸಮೂಹಂ ಯಥಾಸಂಭವಂ ಯಥಾಶಕ್ತಿ ಚ ಸರ್ವಾ ಓಷಧೀಃ ಸಮಾಹೃತ್ಯ। ತತ್ರ ಗ್ರಾಮ್ಯಾಣಾಂ ತು ದಶ ನಿಯಮೇನ ಗ್ರಾಹ್ಯಾಃ ವ್ರೀಹಿಯವಾದ್ಯಾ ವಕ್ಷ್ಯಮಾಣಾಃ। ಅಧಿಕಗ್ರಹಣೇ ತು ನ ದೋಷಃ। ಗ್ರಾಮ್ಯಾಣಾಂ ಫಲಾನಿ ಚ ಯಥಾಸಂಭವಂ ಯಥಾಶಕ್ತಿ ಚ। ಇತಿಶಬ್ದಃ ಸಮಸ್ತಸಂಭಾರೋಪಚಯಪ್ರದರ್ಶನಾರ್ಥಃ। ಅನ್ಯದಪಿ ಯತ್ ಸಂಭರಣೀಯಂ ತತ್ ಸರ್ವಂ ಸಂಭೃತ್ಯ ಇತ್ಯರ್ಥಃ। ಕ್ರಮಸ್ತತ್ರ ಗೃಹ್ಯೋಕ್ತೋ ದ್ರಷ್ಟವ್ಯಃ। ಪರಿಸಮೂಹನಪರಿಲೇಪನೇ ಭೂಮಿಸಂಸ್ಕಾರಃ। ಅಗ್ನಿಮ್ ಉಪಸಮಾಧಾಯ ಇತಿ ವಚನಾತ್ ಆವಸಥ್ಯೇಽಗ್ನೌ ಇತಿ ಗಮ್ಯತೇ। ಏಕವಚನಾತ್, ಉಪಸಮಾಧಾನಶ್ರವಣಾಚ್ಚ। ವಿದ್ಯಮಾನಸ್ಯೈವ ಉಪಸಮಾಧಾನಮ್ । ಪರಿಸ್ತೀರ್ಯ ದರ್ಭಾನ್ । ಆವೃತಾ। ಸ್ಮಾರ್ತತ್ವಾತ್ ಕರ್ಮಣಃ ಸ್ಥಾಲೀಪಾಕಾವೃತ್ ಪರಿಗೃಹ್ಯತೇ। ತಯಾ ಆಜ್ಯಂ ಸಂಸ್ಕೃತ್ಯ ಪುಂಸಾ ನಕ್ಷತ್ರೇಣ ಪುಂನಾಮ್ನಾ ನಕ್ಷತ್ರೇಣ ಪುಣ್ಯಾಹಸಂಯುಕ್ತೇನ ಮನ್ಥಂ ಸರ್ವೌಷಧಫಲಪಿಷ್ಟಂ ತತ್ರ ಔದುಮ್ಬರೇ ಚಮಸೇ ದಧನಿ ಮಧುನಿ ಘೃತೇ ಚ ಉಪಸಿಚ್ಯ ಏಕಯಾ ಉಪಮನ್ಥನ್ಯಾ ಉಪಸಂಮಥ್ಯ ಸಂನೀಯ ಮಧ್ಯೇ ಸಂಸ್ಥಾಪ್ಯ ಔದುಮ್ಬರೇಣ ಸ್ರುವೇಣ ಆವಾಪಸ್ಥಾನೇ ಆಜ್ಯಸ್ಯ ಜುಹೋತಿ ಏತೈರ್ಮನ್ತ್ರೈಃ "ಯಾವನ್ತೋ ದೇವಾಃ" ಇತ್ಯಾದ್ಯೈಃ ॥

(ಭಾಷ್ಯಾರ್ಥ)

ಹನ್ನೆರಡು ದಿನಗಳವರೆಗೆ, ಯಾವ ಅನುಕೂಲವಾದ ಶುಭ(ದಿನ)ದಲ್ಲಿ ಕರ್ಮವನ್ನು ಮಾಡಬೇಕೆಂದಿರುವನೋ ಅದರಿಂದ ಹಿಂದಕ್ಕೆ (ಆ) ಪುಣ್ಯದಿನದಿಂದ ಮೊದಲುಮಾಡಿಕೊಂಡು ಹನ್ನೆರಡು ದಿನಗಳವರೆಗೆ ಉಪಸದ್ವ್ರತಿಯಾಗಿ—(ಉಪಸದ್ವ್ರತ)ವೆಂದರೆ ಉಪಸತ್ತುಗಳಲ್ಲಿ ಮಾಡುವ ವ್ರತವು. ಉಪಸತ್ತುಗಳು ಜ್ಯೋತಿಷ್ಟೋಮದಲ್ಲಿ[2] ಪ್ರಸಿದ್ಧವಾಗಿರುತ್ತವೆ; ಅಲ್ಲಿ (ಗೋ)ಸ್ತನಗಳನ್ನು ಹೆಚ್ಚಿಸುವದು, ಕಡಿಮೆಮಾಡುವದು– (ಈ) ದ್ವಾರದಿಂದ ಹಾಲನ್ನು ಕುಡಿಯುವದೇ ಆ ವ್ರತವು. ಆದರೆ ಇಲ್ಲಿ ಆ ಕರ್ಮವನ್ನು ಉಪಸಂಹಾರಮಾಡಬೇಕಾ

---

1. ಈ ಮಾತು ಇಲ್ಲದ ಪಾಠವೂ ಉಂಟು.

2. ಜ್ಯೋತಿಷ್ಟೋಮದಲ್ಲಿ ಪ್ರವರ್ಗ್ಯಹಸ್ಸುಗಳಲ್ಲಿ ಪ್ರಸಿದ್ಧವಾಗಿರುತ್ತವೆ ಎಂದು ಟೀಕೆ.

ದದ್ದಿಲ್ಲವಾದ್ದರಿಂದ (ಅ) ಇತಿಕರ್ತವ್ಯತಾರಹಿತವಾದ ಬರಿಯ ಪಯೋಭಕ್ಷಣ ವನ್ನು ಮಾತ್ರ[1] ತೆಗೆದುಕೊಳ್ಳಬೇಕು.

(ಆಕ್ಷೇಪ) :– ಉಪಸತ್ತಿನ ವ್ರತವು ಎಂದು ವಿಗ್ರಹಮಾಡುವದಾದರೆ ಆಗ ಎಲ್ಲಾ ಇತಿಕರ್ತವ್ಯತೆಯನ್ನೂ ಗ್ರಹಿಸಬಹುದಲ್ಲ! ಅದನ್ನು ಇಲ್ಲೇಕೆ ಗ್ರಹಿಸಬಾರದು ?

(ಪರಿಹಾರ) :– ಅದಕ್ಕೆ ಹೇಳುತ್ತೇವೆ. ಏಕೆಂದರೆ (ಈ) ಕರ್ಮವು ಸ್ಮಾರ್ತವು. ಈ ಮಂಥಕರ್ಮವು ಸ್ಮಾರ್ತವಷ್ಟೆ; (ಆದ್ದರಿಂದ ಅದನ್ನು ತೆಗೆದುಕೊಳ್ಳಬಾರದು).

(ಆಕ್ಷೇಪ) :– ಶ್ರುತಿವಿಹಿತವಾದ (ಕರ್ಮವು) ಸ್ಮಾರ್ತವಾಗುವದು ಹೇಗೆ ?

(ಪರಿಹಾರ) :– ಈ ಶ್ರುತಿಯು ಸ್ಮೃತಿಯನ್ನು ಅನುವಾದಮಾಡಿ ಕೊಂಡಿದೆ. ಶ್ರೌತಕರ್ಮವಾದರಲ್ಲವೆ, ಪ್ರಕೃತಿವಿಕೃತಿಭಾವ(ವುಂಟಾಗುವದು)[2]? ಹಾಗಾದರೆ ವಿಕಾರಕರ್ಮವೂ ಪ್ರಕೃತಿಯ ಧರ್ಮವನ್ನು ಗ್ರಹಿಸೀತು. ಆದರೆ ಇಲ್ಲಿ (ಕರ್ಮವು) ಶ್ರೌತವಲ್ಲ. ಆದ್ದರಿಂದಲೇ ಈ ಕರ್ಮವನ್ನು ಗೃಹ್ಯಾಗ್ನಿ ಯಲ್ಲಿ ವಿಧಿಸಿದೆ; ಮತ್ತು ಎಲ್ಲಾ ಆವೃತ್ತೂ[3] ಸ್ಮಾರ್ತವೇ. ಆದ್ದರಿಂದ ಉಪಸದ್ವ್ರತಿಯಾಗಿ ಎಂದರೆ ಪಯೋವ್ರತಿಯಾಗಿದ್ದುಕೊಂಡು ಎಂದರ್ಥ.

ಔದುಂಬರವಾದ– ಅತ್ತಿಯ ಮರದಿಂದಾದ ಬಟ್ಟಲಿನಲ್ಲಿ ಅಥವಾ ಚಮಸ ದಲ್ಲಿ. ಆ (ಕಂಸ, ಚಮಸ– ಇವಕ್ಕೇ ಔದುಂಬರ) ವಿಶೇಷಣವನ್ನು ಕೊಟ್ಟಿದೆ. ಕಂಸಾಕಾರವಾಗಿರಲಿ, ಚಮಸಾಕಾರವಾಗಿರಲಿ, ಔದುಂಬರವಾಗಿಯೇ ಇರ ಬೇಕು.[4] ಆಕಾರದಲ್ಲಿ (ಯಾವದಾದರೂ ಆಗಬಹುದೆಂಬ) ವಿಕಲ್ಪವಿದೆಯೇ ಹೊರತು ಔದುಂಬರವಾಗಿರಬೇಕೆಂಬುದರಲ್ಲಿ (ವಿಕಲ್ಪ)ವಿಲ್ಲ. ಈ (ಕಂಸ ಅಥವಾ ಚಮಸ)ದಲ್ಲಿ[5] ಸರ್ವೌಷಧವನ್ನು ಎಂದರೆ ಎಲ್ಲಾ ಗಿಡಮೂಲಿಕೆಗಳ ಸಮೂಹವನ್ನು ಯಥಾಸಂಭವವಾಗಿಯೂ ಯಥಾಶಕ್ತಿಯಾಗಿಯೂ ಎಲ್ಲಾ

1. ಭೂಮಿಶಯ್ಯಾ, ಪಯಃಪಾನ, ಬ್ರಹ್ಮಚರ್ಯ, ವಾಙ್ನಿಯಮ – ಎಂಬೀ ನಾಲ್ಕೂ ಉಪಸದ್ವ್ರತವು ಎಂದು ವಾರ್ತಿಕ ೧೨.

2. ಸಕಲಾಂಗಗಳಿಂದಲೂ ಕೂಡಿರುವದು ಪ್ರಕೃತಿ, ವಿಕಲಾಂಗವಾದದ್ದು ವಿಕೃತಿ.

3. ಮಂಥವಿಷಯಕ್ಕೆ ಹೇಳಿದ ಇತಿಕರ್ತವ್ಯತೆಯೆಲ್ಲ.

4. ಔದುಂಬರವೆಂಬುದನ್ನು ಮುಂದೆ ಒತ್ತಿ ಹೇಳಿರುವದರಿಂದ ಇಲ್ಲಿ ತಾಮ್ರವಲ್ಲ ಎಂದು ವಾರ್ತಿಕ ೧೩.

5. ಅತ್ರ ಎಂಬ ಮಾತಿಲ್ಲದಿದ್ದರೂ ಇದೇ ಅರ್ಥ.

ಓಷಧಿಗಳನ್ನು ಕೂಡಿಸಿ- ಇಲ್ಲಿ ಗ್ರಾಮ್ಯವಾದ ಮುಂದೆ ಹೇಳುವ ಬತ್ತ, ಜವೆ- ಮುಂತಾದ ಹತ್ತು ಓಷಧಿಗಳನ್ನು[1] ಗೊತ್ತಾಗಿ ತರಬೇಕು ; ಹೆಚ್ಚಾಗಿ ತಂದರೆ ದೋಷವಿಲ್ಲ. ಗ್ರಾಮ್ಯ(ಸಸ್ಯಗಳ) ಧಾನ್ಯಗಳನ್ನು ಯಥಾಸಂಭವವಾಗಿಯೂ ಯಥಾಶಕ್ತಿಯಾಗಿಯೂ (ತರಬೇಕು). ಇತಿ (ಹೀಗೆ) ಎಂಬ ಶಬ್ದವನ್ನು ಸಮಸ್ತ ಸಂಭಾರವನ್ನೂ ಸೇರಿಸಬೇಕೆಂಬುದಕ್ಕೆ ಉಪಲಕ್ಷಣವಾಗಿ ಹೇಳಿದ್ದು ; ಇನ್ನು ಏನೇನು ಸೇರಿಸಬೇಕೋ ಅದೆಲ್ಲವನ್ನೂ ಸೇರಿಸಿಕೊಂಡು ಎಂದರ್ಥ.

ಇಲ್ಲಿ ಕ್ರಮವು ಗೃಹ್ಯದಲ್ಲಿ ಹೇಳಿರುವಂತೆ ಎಂದು ತಿಳಿಯಬೇಕು. ಗುಡಿಸುವದು, ಬಳಿಯುವದು- ಇವು ನೆಲಕ್ಕೆ (ಮಾಡಬೇಕಾದ) ಸಂಸ್ಕಾರವು.[2] 'ಅಗ್ನಿಯನ್ನು ತಂದುಕೊಂಡು' ಎಂಬುದರಿಂದ ಗೃಹ್ಯಾಗ್ನಿ ಎಂದು ಗೊತ್ತಾಗುತ್ತದೆ ; ಏಕೆಂದರೆ (ಅಗ್ನಿಯನ್ನು) ಎಂದು ಏಕವಚನವಿದೆ, ತಂದುಕೊಳ್ಳಬೇಕು ಎಂದೂ ಹೇಳಿದೆ , ಇದ್ದ (ಅಗ್ನಿಯನ್ನಲ್ಲವೆ), ತಂದುಕೊಳ್ಳುವದು[3] ? ದರ್ಭೆಗಳನ್ನು ಹರಡಿ ಆವೃತ್ತಿನಿಂದ ಎಂಬಲ್ಲಿ (ಈ) ಕರ್ಮವು ಸ್ಮಾರ್ತವಾಗಿರುವದರಿಂದ ಸ್ಥಾಲೀಪಾಕದ ಆವೃತ್ತನ್ನು ಗ್ರಹಿಸಬೇಕು ; ಆ (ಆವೃತ್ತಿನಿಂದ) ಆಜ್ಯವನ್ನು ಸಂಸ್ಕಾರಮಾಡಿಕೊಂಡು[4], ಗಂಡುನಕ್ಷತ್ರದಿಂದ, ಪುಣ್ಯಾದಿನ ಯುಕ್ತವಾದ ಗಂಡುಹೆಸರಿನ ನಕ್ಷತ್ರದಿಂದ[5] ಮಂಥವನ್ನು, ಎಲ್ಲಾ ಓಷಧಿಗಳು, ಅವುಗಳ ಧಾನ್ಯ- ಇವುಗಳನ್ನು ಅರೆದ ಹಿಟ್ಟನ್ನು, ಆ ಔದುಂಬರದ ಚಮಸದಲ್ಲಿ ಮೊಸರಿನಲ್ಲಿಯೂ ಜೇನುತುಪ್ಪದಲ್ಲಿಯೂ ತುಪ್ಪದಲ್ಲಿಯೂ ನೆನೆಯಿಸಿ[6] ಒಂದು ಉಪಮಂಥನಿಯಿಂದ ತೊಳಸಿ ಇಟ್ಟುಕೊಂಡು (ತನಗೂ ಅಗ್ನಿಗೂ) ನಡುವೆ ಇರಿಸಿಕೊಂಡು ಔದುಂಬರಸ್ರುವದಿಂದ ಆವಾಪಸ್ಥಾನದಲ್ಲಿ[7] ಆಜ್ಯವನ್ನು "ಯಾವನ್ತೋ ದೇವಾಃ" (ಎಷ್ಟು ದೇವತೆಗಳು) ಎಂಬುದೇ ಮುಂತಾದ ಈ ಮಂತ್ರಗಳಿಂದ ಹೋಮಮಾಡಬೇಕು.

---

1. ಮುಂದೆ ೧೩ನೆಯ ಕಂಡಿಕೆಯನ್ನು ನೋಡಿ.

2. ನೆಲವು ಶುದ್ಧವಾಗಿದ್ದರೂ ಅಗ್ನಿಸ್ಥಾಪನೆಗಾಗಿ ಈ ಸಂಸ್ಕಾರವನ್ನು ಮಾಡಿಕೊಳ್ಳಬೇಕು ಎಂದು ಕಾತ್ಯಾಯನವಚನ' ವಾರ್ತಿಕ.

3. ಆಹವನೀಯಾದಿಗಳನ್ನು ಆಗಾಗಲೇ ಆಧಾನಮಾಡಿಕೊಳ್ಳಬೇಕಾಗಿರುವದರಿಂದ ಅವಕ್ಕೆ 'ತಂದುಕೊಂಡು' ಎಂಬ ಮಾತು ಹೊಂದುವದಿಲ್ಲ ಎಂದು ಅಭಿಪ್ರಾಯ.

4. "ಬ್ರಹ್ಮಾಸನಾಸ್ತರಣಪ್ರಣೀತಾಸಾದನಪರಿಸ್ತರಣಾದಿ ಯಥೋಪದೇಶಂ ಕೃತ್ವಾ ನಿರೂಪ್ಯಾಽಽಜ್ಯಮಧಿಶ್ರಿತ್ಯ ಪರ್ಯಗ್ನಿ ಕುರ್ಯಾತ್ ಇತ್ಯುಕ್ತಸ್ಥಾಲೀಪಾಕಪ್ರಕ್ರಿಯಯಾ ಆಜ್ಯಂ ಸಂಸ್ಕೃತ್ಯ" ವಾ. ಟೀ.

5. ಹಸ್ತವೇ ಮುಂತಾದ ನಕ್ಷತ್ರದಲ್ಲಿ.

6. ೧೩ನೆಯ ಕಂಡಿಕೆಯನ್ನು ನೋಡಿ.

7. ಆಹುತಿಯನ್ನು ಹಾಕಬೇಕಾದ ಪ್ರದೇಶ.

# ಹೋಮಾಂತರಗಳು

(ಉಪನಿಷತ್ತು)

ಜ್ಯೇಷ್ಠಾಯ ಸ್ವಾಹಾ ಶ್ರೇಷ್ಠಾಯ ಸ್ವಾಹೇತ್ಯಗ್ನೌ ಹುತ್ವಾ ಮನ್ಥೇ ಸಗ್ಂಸ್ರವಮವನಯತಿ ಪ್ರಾಣಾಯ ಸ್ವಾಹಾ ವಸಿಷ್ಠಾಯೈ ಸ್ವಾಹೇತ್ಯಗ್ನೌ ಹುತ್ವಾ ಮನ್ಥೇ ಸಗ್ಂಸ್ರವಮವನಯತಿ ವಾಚೇ ಸ್ವಾಹಾ ಪ್ರತಿಷ್ಠಾಯೈ ಸ್ವಾಹೇತ್ಯಗ್ನೌ ಹುತ್ವಾ ಮನ್ಥೇ ಸಗ್ಂಸ್ರವಮವನಯತಿ ಚಕ್ಷುಷೇ ಸ್ವಾಹಾ ಸಂಪದೇ ಸ್ವಾಹೇತ್ಯಗ್ನೌ ಹುತ್ವಾ ಮನ್ಥೇ ಸಗ್ಂಸ್ರವಮವನಯತಿ ಶ್ರೋತ್ರಾಯ ಸ್ವಾಹಾಯತನಾಯ ಸ್ವಾಹೇತ್ಯಗ್ನೌ ಹುತ್ವಾ ಮನ್ಥೇ ಸಗ್ಂಸ್ರವಮವನಯತಿ ಮನಸೇ ಸ್ವಾಹಾ ಪ್ರಜಾತ್ಯೈ ಸ್ವಾಹೇತ್ಯಗ್ನೌ ಹುತ್ವಾ ಮನ್ಥೇ ಸಗ್ಂಸ್ರವಮವನಯತಿ ರೇತಸೇ ಸ್ವಾಹೇತ್ಯಗ್ನೌ ಹುತ್ವಾ ಮನ್ಥೇ ಸಗ್ಂಸ್ರವಮವನಯತಿ ॥೨॥

ಅಗ್ನಯೇ ಸ್ವಾಹೇತ್ಯಗ್ನೌ ಹುತ್ವಾ ಮನ್ಥೇ ಸಗ್ಂಸ್ರವಮವನಯತಿ ಸೋಮಾಯ ಸ್ವಾಹೇತ್ಯಗ್ನೌ ಹುತ್ವಾ ಮನ್ಥೇ ಸಗ್ಂಸ್ರವಮವನಯತಿ ಭೂಃ ಸ್ವಾಹೇತ್ಯಗ್ನೌ ಹುತ್ವಾ ಮನ್ಥೇ ಸಗ್ಂಸ್ರವಮವನಯತಿ ಭುವಃ ಸ್ವಾಹೇತ್ಯಗ್ನೌ ಹುತ್ವಾ ಮನ್ಥೇ ಸಗ್ಂಸ್ರವಮವನಯತಿ ಸ್ವಃ ಸ್ವಾಹೇತ್ಯಗ್ನೌ ಹುತ್ವಾ ಮನ್ಥೇ ಸಗ್ಂಸ್ರವಮವನಯತಿ ಭೂರ್ಭುವಃಸ್ವಃ ಸ್ವಾಹೇತ್ಯಗ್ನೌ ಹುತ್ವಾ ಮನ್ಥೇ ಸಗ್ಂಸ್ರವಮವನಯತಿ ಬ್ರಹ್ಮಣೇ ಸ್ವಾಹೇತ್ಯಗ್ನೌ ಹುತ್ವಾ ಮನ್ಥೇ ಸಗ್ಂಸ್ರವಮವನಯತಿ ಕ್ಷತ್ರಾಯ ಸ್ವಾಹೇತ್ಯಗ್ನೌ ಮನ್ಥೇ ಹುತ್ವಾ ಸಗ್ಂಸ್ರವಮವನಯತಿ ಭೂತಾಯ ಸ್ವಾಹೇತ್ಯಗ್ನೌ ಹುತ್ವಾ ಮನ್ಥೇ ಸಗ್ಂಸ್ರವಮವನಯತಿ ಭವಿಷ್ಯತೇ ಸ್ವಾಹೇತ್ಯಗ್ನೌ ಹುತ್ವಾ ಮನ್ಥೇ ಸಗ್ಂಸ್ರವಮವನಯತಿ ವಿಶ್ವಾಯ ಸ್ವಾಹೇತ್ಯಗ್ನೌ ಹುತ್ವಾ ಮನ್ಥೇ ಸಗ್ಂಸ್ರವಮವನಯತಿ ಸರ್ವಾಯ ಸ್ವಾಹೇತ್ಯಗ್ನೌ ಹುತ್ವಾ ಮನ್ಥೇ ಸಗ್ಂಸ್ರವಮವನಯತಿ ಪ್ರಜಾಪತಯೇ ಸ್ವಾಹೇತ್ಯಗ್ನೌ ಹುತ್ವಾ ಮನ್ಥೇ ಸಗ್ಂಸ್ರವಮವನಯತಿ ॥ ೩ ॥

೨. 'ಜ್ಯೇಷ್ಠಾಯ ಸ್ವಾಹಾ, ಶ್ರೇಷ್ಠಾಯ ಸ್ವಾಹಾ!' ಎಂದು ಅಗ್ನಿಯಲ್ಲಿ ಹೋಮಮಾಡಿ ಮಂಥದಲ್ಲಿ ಸಂಸ್ರವವನ್ನು ಹಾಕಬೇಕು.

'ಪ್ರಾಣಾಯ ಸ್ವಾಹಾ, ವಸಿಷ್ಠಾಯೈ ಸ್ವಾಹಾ!' ಎಂದು ಅಗ್ನಿಯಲ್ಲಿ ಹೋಮಮಾಡಿ ಮಂಥದಲ್ಲಿ ಸಂಸ್ರವವನ್ನು ಹಾಕಬೇಕು. 'ವಾಚೇ ಸ್ವಾಹಾ, ಪ್ರತಿಷ್ಠಾಯೈ ಸ್ವಾಹಾ!' ಎಂದು.....[1]; 'ಚಕ್ಷುಷೇ ಸ್ವಾಹಾ ಸಂಪದೇ ಸ್ವಾಹಾ!' ಎಂದು..... ; 'ಶ್ರೋತ್ರಾಯ ಸ್ವಾಹಾ, ಆಯತನಾಯ ಸ್ವಾಹಾ!' ಎಂದು..... ; 'ಮನಸೇ ಸ್ವಾಹಾ, ಪ್ರಜಾತ್ಯೈ ಸ್ವಾಹಾ!' ಎಂದು..... ; 'ರೇತಸೇ ಸ್ವಾಹಾ!' ಎಂದು..... ॥

೩. 'ಅಗ್ನಯೇ ಸ್ವಾಹಾ!' ಎಂದು..... ; 'ಸೋಮಾಯ ಸ್ವಾಹಾ!' ಎಂದು..... ; 'ಭೂಃ ಸ್ವಾಹಾ!' ಎಂದು..... ; 'ಭುವಃ ಸ್ವಾಹಾ!' ಎಂದು.....; 'ಸ್ವಃ ಸ್ವಾಹಾ!' ಎಂದು.....; 'ಭೂರ್ಭುವಃ ಸ್ವಃ ಸ್ವಾಹಾ!' ಎಂದು..... ; 'ಬ್ರಹ್ಮಣೇ ಸ್ವಾಹಾ!' ಎಂದು..... ; 'ಕ್ಷತ್ರಾಯ ಸ್ವಾಹಾ!' ಎಂದು..... ; 'ಭೂತಾಯ ಸ್ವಾಹಾ!' ಎಂದು ..... ; 'ಭವಿಷ್ಯತೇ ಸ್ವಾಹಾ!' ಎಂದು..... ; 'ವಿಶ್ವಾಯ ಸ್ವಾಹಾ!' ಎಂದು..... ; 'ಸರ್ವಾಯ ಸ್ವಾಹಾ!' ಎಂದು..... ; 'ಪ್ರಜಾಪತಯೇ ಸ್ವಾಹಾ!' ಎಂದು ಅಗ್ನಿಯಲ್ಲಿ ಹೋಮವನ್ನು ಮಾಡಿ ಮನ್ಥದಲ್ಲಿ ಸಂಸ್ರವವನ್ನು ಹಾಕಬೇಕು.

## ಹೋಮಾಂತರಗಳೂ ಮಂಥವಿದ್ಯೆಗೆ ಅಧಿಕಾರಿಯೂ

(ಭಾಷ್ಯ)

೪೫೫. ಜ್ಯೇಷ್ಠಾಯ ಸ್ವಾಹಾ ಶ್ರೇಷ್ಠಾಯ ಸ್ವಾಹಾ ಇತ್ಯಾರಭ್ಯ ದ್ವೇ ದ್ವೇ ಆಹುತೀ ಹುತ್ವಾ ಮನ್ಥೇ ಸಂಸ್ರವಮ್ ಅವನಯತಿ । ಸ್ರುವಾವಲೇಪನಮ್ ಆಜ್ಯಂ ಮನ್ಥೇ ಸಂಸ್ರಾವಯತಿ । ಏತಸ್ಮಾದೇವ ಜ್ಯೇಷ್ಠಾಯ ಶ್ರೇಷ್ಠಾಯ ಇತ್ಯಾದಿ ಪ್ರಾಣಲಿಙ್ಗಾತ್ ಜ್ಯೇಷ್ಠಶ್ರೇಷ್ಠಾದಿಪ್ರಾಣವಿದ ಏವ ಅಸ್ಮಿನ್ ಕರ್ಮಣಿ ಅಧಿಕಾರಃ । 'ರೇತಸೇ' ಇತ್ಯಾರಭ್ಯ ಏಕೈಕಾಮ್ ಆಹುತಿಂ ಹುತ್ವಾ ಮನ್ಥೇ ಸಂಸ್ರವಮ್ ಅವನಯತಿ । ಅಪರಯಾ ಉಪಮನ್ಥನ್ಯಾ ಪುನರ್ಮಥ್ನಾತಿ ॥

---

1. ಇಲ್ಲಿಂದ ಮುಂದಕ್ಕೆ ಪ್ರತಿಯೊಂದು ಸ್ವಾಹಾಕಾರದ ಮುಂದೆ ತೋರಿಸಿರುವ ಐದು ಚುಕ್ಕೆಗಳು "ಅಗ್ನಿಯಲ್ಲಿ ಹೋಮವನ್ನುಮಾಡಿ ಮನ್ಥದಲ್ಲಿ ಸಂಸ್ರವವನ್ನು ಹಾಕಬೇಕು" ಎಂಬ ವಾಕ್ಯಕ್ಕೆ ಸಂಕೇತ.

(ಭಾಷ್ಯಾರ್ಥ)

'ಜ್ಯೇಷ್ಠಾಯ ಸ್ವಾಹಾ, ಶ್ರೇಷ್ಠಾಯ ಸ್ವಾಹಾ!' ಎಂಬುದರಿಂದ ಹಿಡಿದು ಎರಡೆರಡು ಆಹುತಿಗಳನ್ನು ಹೋಮಮಾಡಿ ಮಂಥದಲ್ಲಿ ಸಂಸ್ರವವನ್ನು ಹಾಕಬೇಕು, ಸ್ರುವಕ್ಕೆ ಬಳಿದುಕೊಂಡಿರುವ ಆಜ್ಯವನ್ನು ಮಂಥಕ್ಕೆ ತೊಟ್ಟಿಕ್ಕಿಸಬೇಕು. ಜ್ಯೇಷ್ಠಾಯ, ಶ್ರೇಷ್ಠಾಯ- ಮುಂತಾದ ಈ ಪ್ರಾಣಲಿಂಗವಿರುವದರಿಂದಲೇ[1] ಜ್ಯೇಷ್ಠಶ್ರೇಷ್ಠ(ತ್ವಾದಿಗುಣವುಳ್ಳ) ಪ್ರಾಣೋಪಾಸಕನಿಗೇ ಈ (ಮಂಥ)ಕರ್ಮದಲ್ಲಿ ಅಧಿಕಾರ(ವೆಂದು ನಿಶ್ಚಯಿಸಬೇಕು).

'ರೇತಸೇ-' ಎಂಬುದರಿಂದ ಹಿಡಿದು ಒಂದೊಂದು ಆಹುತಿಯನ್ನು ಹೋಮಮಾಡಿ ಮಂಥದಲ್ಲಿ ಸಂಸ್ರವವನ್ನು ಹಾಕಬೇಕು. ಮತ್ತೊಂದು ಉಪಮಂಥನಿಯಿಂದ ಮತ್ತೆ (ಮಂಥವನ್ನು) ತೊಳಸಬೇಕು.

## ಅಭಿಮರ್ಶನಮಂತ್ರಗಳು

(ಉಪನಿಷತ್ತು)

**ಅಥೈನಮಭಿಮೃಶತಿ ಭ್ರಮದಸಿ ಜ್ವಲದಸಿ ಪೂರ್ಣಮಸಿ ಪ್ರಸ್ತಬ್ಧಮಸ್ಯೇಕಸಭಮಸಿ ಹಿಂಕೃತಮಸಿ ಹಿಂಕ್ರಿಯಮಾಣಮಸ್ಯುದ್ಗೀಥಮಸ್ಯುದ್ಗೀಯಮಾನಮಸಿ ಶ್ರಾವಿತಮಸಿ ಪ್ರತ್ಯಾಶ್ರಾವಿತಮಸ್ಯಾರ್ದ್ರೇ ಸಂದೀಪ್ತಮಸಿ ವಿಭೂರಸಿ ಪ್ರಭೂರಸ್ಯನ್ನಮಸಿ ಜ್ಯೋತಿರಸಿ ನಿಧನಮಸಿ ಸಂವರ್ಗೋಽಸೀತಿ ॥ ೪ ॥**

೪. ಆಮೇಲೆ ಇದನ್ನು (ಈ ಮಂತ್ರದಿಂದ[2] ಮುಟ್ಟಬೇಕು): (ಪ್ರಾಣನಾಗಿ) ಭ್ರಮಣಮಾಡುತ್ತಿರುವೆ, (ಅಗ್ನಿಯಾಗಿ) ಉರಿಯುತ್ತಿರುವೆ, (ಬ್ರಹ್ಮವಾಗಿ) ಪೂರ್ಣವಾಗಿರುವೆ, (ಆಕಾಶವಾಗಿ) ನಿಷ್ಕಂಪವಾಗಿರುವೆ, ಎಲ್ಲವನ್ನೂ ಅಡಕಮಾಡಿಕೊಂಡಿರುವೆ[3],

---

1. ಹಿಂದೆ ಹೇಳಿದ ಪ್ರಾಣಾದಿಗಳನ್ನೇ ಇಲ್ಲಿ ಸಂಪ್ರದಾನಕಾರಕವಾಗಿ ಹಿಡಿದಿದೆ ಎಂದು ಗೊತ್ತಾಗುವದರಿಂದಲೇ.

2. ಮಂತ್ರವನ್ನು ಮೂಲದಲ್ಲಿ ಕೊಟ್ಟಿದೆ. ಇಲ್ಲಿ ಅದರ ಅರ್ಥವನ್ನು ಟೀಕಾನುಸಾರವಾಗಿ ಬರೆದಿದೆ.

3. ವಾರ್ತಿಕದಲ್ಲಿ 'ಏಕಸಭಮಸಿ' ಎಂಬುದರ ಬದಲು 'ಏಕಶಫಮಸಿ' ಎಂಬ ಪಾಠವನ್ನಂಗೀಕರಿಸಿದೆ. ಇಡಿಯ ಜಗತ್ತೂ ನಿನ್ನ ಪಾದವುಕೂಡ ಅಲ್ಲ, ಪಾದಭಾಗವಾದ ಗೊರಸಾಗಿದೆ ಎಂದು ಅಲ್ಲಿ ಟೀಕೆಯಲ್ಲಿದೆ. ಇದರಿಂದ ಟೀಕಾಕಾರರುಗಳಿಬ್ಬರೂ ಬೇರೆಬೇರೆ ಎಂದು ನಿಶ್ಚಯವಾಗುತ್ತದೆಯೆ? ಅಥವಾ ಏಕಶಫ ಎಂಬ ಪಾಠವೇ ಇಲ್ಲಿಯೂ ಮೂಲದಲ್ಲಿಯೂ ಟೀಕೆಯಲ್ಲಿಯೂ ಇದ್ದು ಲೇಖಕರು ಹಿಂದೆ ಬರೆದುಕೊಂಡಿದ್ದಾರೆಯೆ?— ವಿಚಾರಣೀಯವಾಗಿದೆ. ಅಚ್ಚಿನ ಮಾಧ್ಯಂದಿನಪಾಠದಲ್ಲಿಯೂ 'ಏಕಸಭಮಸಿ' ಎಂದೇ ಇದೆ.

(ಯಜ್ಞಾರಂಭದಲ್ಲಿ ಪ್ರಸ್ತೋತೃವಿನಿಂದ) ಹಿಂಕೃತನಾಗಿರುವೆ, (ಯಜ್ಞಮಧ್ಯದಲ್ಲಿ) ಹಿಂಕ್ರಿಯಮಾಣನೂ ಆಗಿರುವೆ, (ಉದ್ಗಾತೃವಿನಿಂದ ಯಜ್ಞಾರಂಭದಲ್ಲಿ) ಉದ್ಗೀಥನಿರುವೆ, (ಯಜ್ಞಮಧ್ಯದಲ್ಲಿ) ಉದ್ಗೀಯಮಾನನೂ ಆಗಿರುವೆ, (ಅಧ್ವರ್ಯುವಿನಿಂದ) ಶ್ರಾವಿತನಿರುವೆ, (ಆಗ್ನೀಧ್ರನಿಂದ) ಪ್ರತ್ಯಾಶ್ರಾವಿತನಿರುವೆ, (ಆರ್ದ್ರಮೇಘದಲ್ಲಿ) ಸಂದೀಪ್ತನಿರುವೆ, ವಿಭುವಾಗಿರುವೆ, ಪ್ರಭುವಾಗಿರುವೆ, (ಸೋಮವಾಗಿ) ಅನ್ನವಾಗಿರುವೆ, (ಅಗ್ನಿಯಾಗಿ) ಜ್ಯೋತಿಯಾಗಿರುವೆ, ಲಯವಾಗಿರುವೆ, (ಅಗ್ನ್ಯಾದಿಗಳನ್ನು ಸಂಹರಣಮಾಡುವದರಿಂದ) ಸಂವರ್ಗವಾಗಿರುವೆ!"

(ಭಾಷ್ಯ)

೪೬೦. ಅಥ ಏನಮ್ ಅಭಿಮೃಶತಿ 'ಭ್ರಮದಸಿ' ಇತ್ಯನೇನ ಮನ್ತ್ರೇಣ॥

(ಭಾಷ್ಯಾರ್ಥ)

ಇನ್ನು ಈ (ಮಂಥವನ್ನು) 'ಭ್ರಮದಸಿ' ಎಂಬೀ ಮಂತ್ರವನ್ನು (ಉಚ್ಚರಿಸುತ್ತಾ) ಮುಟ್ಟುತ್ತಾನೆ.

## ಮಂಥೋದ್ಯಮನಮಂತ್ರ

(ಉಪನಿಷತ್ತು)

**ಅಥೈನಮುದ್ಯಚ್ಛತ್ಯಾಮಗ್ಂಸ್ಯಾಮಗ್ಂ ಹಿ ತೇ ಮಹಿ ಸ ಹಿ ರಾಜೇಶಾನೋಽಧಿಪತಿಃ ಸ ಮಾಗ್ಂ ರಾಜೇಶಾನೋಽಧಿಪತಿಂ ಕರೋತ್ವಿತಿ ॥ ೫ ॥**

೫. ಇನ್ನು ಇದನ್ನು (ಈ ಮಂತ್ರದಿಂದ)[1] ಮೇಲಕ್ಕೆತ್ತಬೇಕು. (ನೀನು) ಎಲ್ಲವನ್ನೂ ಬಲ್ಲೆ, (ನಾವೂ) ನಿನ್ನ ಮಹತ್ತ್ವವನ್ನು ಬಲ್ಲೆವು. ಆ (ಪ್ರಾಣನೇ) "ರಾಜನು, ಈಶಾನನು, ಅಧಿಪತಿಯು. ಅವನು ನನ್ನನ್ನು ರಾಜನಾಗಿ ಈಶಾನನಾಗಿ ಅಧಿಪತಿಯಾಗಿ ಮಾಡಲಿ!"

---

1. ಇಲ್ಲಿಯೂ ಮಂತ್ರದ ಅರ್ಥವನ್ನು ಟೀಕಾನುಸಾರವಾಗಿ ಬರೆದಿದೆ.

(ಭಾಷ್ಯ)

೪೬೧. ಅಥ ಏನಮ್ ಉದ್ಯಚ್ಛತಿ ಸಹ ಪಾತ್ರೇಣ ಹಸ್ತೇ ಗೃಹ್ಣಾತಿ 'ಆಮಂ ಸ್ಯಾಮಂ ಹಿ ತೇ ಮಹಿ' ಇತ್ಯನೇನ ॥

(ಭಾಷ್ಯಾರ್ಥ)

ಇನ್ನು ಈ (ಮಂಥವನ್ನು) ಎತ್ತಬೇಕು, ಪಾತ್ರೆಯೊಡನೆ 'ಆಮಂ ಸ್ಯಾಮಂ ಹಿ ತೇ ಮಹಿ.....' ಎಂಬ ಮಂತ್ರದಿಂದ ಕೈಯಲ್ಲಿ ತೆಗೆದುಕೊಳ್ಳಬೇಕು.

## ಮಂಥಭಕ್ಷಣಮಂತ್ರ

(ಉಪನಿಷತ್ತು)

**ಅಥೈನಮಾಚಾಮತಿ ತತ್ಸವಿತುರ್ವರೇಣ್ಯಮ್ । ಮಧು ವಾತಾ ಋತಾಯತೇ ಮಧು ಕ್ಷರನ್ತಿ ಸಿನ್ಧವಃ । ಮಾಧ್ವೀರ್ನಃ ಸನ್ತ್ವೋಷಧೀಃ । ಭೂಃ ಸ್ವಾಹಾ । ಭರ್ಗೋ ದೇವಸ್ಯ ಧೀಮಹಿ । ಮಧು ನಕ್ತಮುತೋಷಸೋ ಮಧುಮತ್ ಪಾರ್ಥಿವಗ್ಂ ರಜಃ । ಮಧು ದ್ಯೌರಸ್ತು ನಃ ಪಿತಾ । ಭುವಃ ಸ್ವಾಹಾ । ಧಿಯೋ ಯೋ ನಃ ಪ್ರಚೋದಯಾತ್ । ಮಧುಮಾನ್ನೋ ವನಸ್ಪತಿರ್ಮಧುಮಾಗ್ಂ ಅಸ್ತು ಸೂರ್ಯಃ । ಮಾಧ್ವೀರ್ಗಾವೋ ಭವನ್ತು ನಃ । ಸ್ವಃ ಸ್ವಾಹೇತಿ । ಸರ್ವಾಂ ಚ ಸಾವಿತ್ರೀಮನ್ವಾಹ ಸರ್ವಾಶ್ಚ ಮಧುಮತೀರಹಮೇವೇದಗ್ಂ ಸರ್ವಂ ಭೂಯಾಸಂ ಭೂರ್ಭುವಃ ಸ್ವಃ ಸ್ವಾಹೇತ್ಯನ್ತತ ಆಚಮ್ಯ ಪಾಣೀ ಪ್ರಕ್ಷಾಲ್ಯ ಜಘನೇನಾಗ್ನಿಂ ಪ್ರಾಕ್ಶಿರಾಃ ಸಂವಿಶತಿ ಪ್ರಾತರಾದಿತ್ಯಮುಪತಿಷ್ಠತೇ ದಿಶಾಮೇಕಪುಣ್ಡರೀಕಮಸ್ಯಹಂ ಮನುಷ್ಯಾಣಾಮೇಕಪುಣ್ಡರೀಕಂ ಭೂಯಾಸಮಿತಿ ಯಥೇತಮೇತ್ಯ ಜಘನೇನಾಗ್ನಿಮಾಸೀನೋ ವಗ್ಂಶಂ ಜಪತಿ ॥ ೬ ॥**

೬. ಆಮೇಲೆ ಇದನ್ನು (ಈ ಮಂತ್ರಗಳಿಂದ[1] ಆಚಮನಮಾಡಬೇಕು) : ಆ ಸವಿತೃವಿನ ಶ್ರೇಷ್ಠವಾದ–[2] ; ಗಾಳಿಗಳು ಮಧುವಾಗಿ ಬೀಸುತ್ತಿವೆ, ನದಿಗಳು ಮಧುವನ್ನು (ತಂದು) ಹರಿಯುತ್ತಿವೆ ; ಓಷಧಿ

---

1. ಇಲ್ಲಿ ಮಂತ್ರಗಳಿಗೆ ಪ್ರಾಯಿಕವಾಗಿ ವಾರ್ತಿಕಾನುಸಾರವಾಗಿ ಅರ್ಥವನ್ನು ಬರೆದಿದೆ.

2. ಗಾಯತ್ರಿಯನ್ನು ಪಾದಪಾದವಾಗಿ ವಿನಿಯೋಗಿಸಿದೆ; ಭಾಷ್ಯವನ್ನು ನೋಡಿ.

ಗಳು ನಮಗೆ ಮಧುವಾಗಿರಲಿ![1] ಭೂಃ ಸ್ವಾಹಾ![2] ದೇವನ ತೇಜಸ್ಸನ್ನು[3] ಧ್ಯಾನಮಾಡುತ್ತಿದೇವೆ; ರಾತ್ರಿಯು ಮಧುವಾಗಿರಲಿ, ಮತ್ತು ದಿವಸದ ಮಾಧುರ್ಯವೂ (ಇರಲಿ)! ಪಾರ್ಥಿವಲೋಕವು ಮಧುವಂತವಾಗಿರಲಿ, ಪಿತೃವಾದ ದ್ಯುಲೋಕವೂ ಮಧುವಾಗಿರಲಿ! ಭುವಃ ಸ್ವಾಹಾ! ಯಾವ (ಆ) ದೇವನು ನಮ್ಮ ಧೀವೃತ್ತಿಗಳನ್ನು ಪ್ರಚೋದಿಸಲಿ! ವನಸ್ಪತಿಯೂ (ಚಂದ್ರನೂ) ನಮಗೆ ಮಧುವಂತ ನಾಗಿರಲಿ, ಸೂರ್ಯನೂ ಮಧುವಂತನಾಗಿರಲಿ! ಗೋಗಳೂ (ಅಥವಾ ದಿಕ್ಕುಗಳೂ) ಮಧುವಾಗಿರಲಿ! ಸ್ವಃ ಸ್ವಾಹಾ! ಸರ್ವ ಸಾವಿತ್ರಿಯನ್ನೂ ಹೇಳಬೇಕು. ಮಧುಮತೀ(ಮಂತ್ರಗ)ಳೆಲ್ಲವನ್ನೂ (ಹೇಳಬೇಕು). ನಾನೇ ಇದೆಲ್ಲವೂ ಆಗಲಿ! ಭೂರ್ಭುವಃ ಸ್ವಾಹಾ! –ಎಂದು ಕೊನೆಗೆ ಆಚಮನಮಾಡಿ ಕೈಗಳನ್ನು ತೊಳೆದುಕೊಂಡು ಅಗ್ನಿಯ ಹಿಂದೆ ಪೂರ್ವಕ್ಕೆ ತಲೆಯಾಗಿ ಮಲಗಬೇಕು. ಬೆಳಗ್ಗೆ ಆದಿತ್ಯನನ್ನು "ನೀನು ದಿಕ್ಕುಗಳಿಗೆ ಮುಖ್ಯವಾದ ಪುಂಡರೀಕ ನಾಗಿರುವೆ, ನಾನು ಮನುಷ್ಯರಿಗೆ ಮುಖ್ಯಪುಂಡರೀಕನಾಗಿರು ವಂತಾಗಲಿ!" ಎಂದು ಉಪಸ್ಥಾನಮಾಡಬೇಕು. ಹೋದಂತೆ ಬಂದು ಅಗ್ನಿಯ ಹಿಂದೆ ಕುಳಿತು ವಂಶವನ್ನು ಜಪಿಸಬೇಕು.

## ಮಂಥಾಚಮನದ ಕ್ರಮ

### (ಭಾಷ್ಯ)

೮೬೨. ಅಥ ಏನಮ್ ಆಚಾಮತಿ ಭಕ್ಷಯತಿ। ಗಾಯತ್ರ್ಯಾಃ ಪ್ರಥಮಪಾದೇನ ಮಧುಮತ್ಯಾ ಏಕಯಾ ವ್ಯಾಹೃತ್ಯಾ ಚ ಪ್ರಥಮಯಾ ಪ್ರಥಮಗ್ರಾಸಮ್ ಆಚಾಮತಿ। ತಥಾ ಗಾಯತ್ರೀದ್ವಿತೀಯಪಾದೇನ ಮಧುಮತ್ಯಾ ದ್ವಿತೀಯಯಾ ದ್ವಿತೀಯಯಾ ಚ ವ್ಯಾಹೃತ್ಯಾ ದ್ವಿತೀಯಂ ಗ್ರಾಸಮ್। ತಥಾ ತೃತೀಯೇನ ಗಾಯತ್ರೀಪಾದೇನ ತೃತೀಯಯಾ ಮಧುಮತ್ಯಾ ತೃತೀಯಯಾ ಚ ವ್ಯಾಹೃತ್ಯಾ ತೃತೀಯಂ ಗ್ರಾಸಮ್। ಸರ್ವಾಂ ಸಾವಿತ್ರೀಂ ಸರ್ವಾಶ್ಚ ಮಧುಮತೀಃ ಉಕ್ತ್ವಾ "ಅಹಮೇವೇದಂ ಸರ್ವಂ ಭೂಯಾಸಮ್"

---

1. ಸುಖಕರವಾಗಲಿ!
2. ಇಲ್ಲಿಗೆ ಒಂದು ಭಾಗದ ಆಚಮನ. ಹೀಗೆ ಒಂದೊಂದು ಸ್ವಾಹಾಕಾರಕ್ಕೂ ತಿಳಿಯಬೇಕು.
3. ಅನ್ನವನ್ನು ಎಂದು ವಾರ್ತಿಕ.

ಇತಿ ಚ ಅನ್ತೇ 'ಭೂರ್ಭುವಃಸ್ವಃ ಸ್ವಾಹಾ!' ಇತಿ ಸಮಸ್ತಂ ಭಕ್ಷಯತಿ। ಯಥಾ ಚತುರ್ಭಿರ್ಗ್ರಾಸೈಃ ತದ್ದ್ರವ್ಯಂ ಸರ್ವಂ ಪರಿಸಮಾಪ್ಯತೇ ತಥಾ ಪೂರ್ವಮೇವ ನಿರೂಪಯೇತ್ । ಯತ್ ಪಾತ್ರಾವಲಿಪ್ತಂ ತತ್ ಪಾತ್ರಂ ಸರ್ವಂ ನಿರ್ಣಿಜ್ಯ ತೂಷ್ಣೀಂ ಪಿಬೇತ್ । ಪಾಣೀ ಪ್ರಕ್ಷಾಲ್ಯ ಅಪ ಆಚಮ್ಯ ಜಘನೇನ ಅಗ್ನಿಂ ಪಶ್ಚಾತ್ ಅಗ್ನೇಃ ಪ್ರಾಕ್ಶಿರಾಃ ಸಂವಿಶತಿ। ಪ್ರಾತಃ ಸಂಧ್ಯಾಮ್ ಉಪಾಸ್ಯ ಆದಿತ್ಯಮ್ ಉಪತಿಷ್ಠತೇ 'ದಿಶಾಮೇಕಪುಣ್ಡರೀಕಮ್' ಇತ್ಯನೇನ ಮನ್ತ್ರೇಣ । ಯಥೇತಂ ಯಥಾಗತಮ್ । ಏತ್ಯ ಆಗತ್ಯ ಜಘನೇನಾಗ್ನಿಮ್ ಆಸೀನಃ ವಂಶಂ ಜಪತಿ ॥

(ಭಾಷ್ಯಾರ್ಥ)

ಇನ್ನು ಈ (ಮಂಥವನ್ನು) ಆಚಮನಮಾಡಬೇಕು, ಭಕ್ಷಿಸಬೇಕು. ಗಾಯತ್ರಿಯ ಪ್ರಥಮಪಾದದಿಂದಲೂ ಒಂದು ಮಧುಮತಿಯಿಂದಲೂ ಒಂದನೆಯ ವ್ಯಾಹೃತಿಯಿಂದಲೂ ಮೊದಲನೆಯ ಗುಟುಕನ್ನು ಆಚಮನಮಾಡಬೇಕು. ಹೀಗೆಯೇ ಗಾಯತ್ರಿಯ ಎರಡನೆಯ ಪಾದದಿಂದಲೂ ಎರಡನೆಯ ಮಧುಮತಿಯಿಂದಲೂ ಎರಡನೆಯ ವ್ಯಾಹೃತಿಯಿಂದಲೂ ಎರಡನೆಯ ಗುಟುಕನ್ನು, ಮತ್ತು ಮೂರನೆಯ ಗಾಯತ್ರೀಪಾದದಿಂದಲೂ ಮೂರನೆಯ ಮಧುಮತಿಯಿಂದಲೂ ಮೂರನೆಯ ವ್ಯಾಹೃತಿಯಿಂದಲೂ ಮೂರನೆಯ ಗುಟುಕನ್ನು (ಆಚಮನಮಾಡಬೇಕು). ಒಟ್ಟು ಸಾವಿತ್ರಿಯನ್ನೂ ಎಲ್ಲಾ ಮಧುಮತಿಗಳನ್ನೂ ಹೇಳಿ 'ಅಹಮೇವೇದಂ ಸರ್ವಂ ಭೂಯಾಸಮ್' (ನಾನೇ ಇದೆಲ್ಲವೂ ಆಗುವಂತಾಗಲಿ !) ಎಂದೂ ಕೊನೆಯಲ್ಲಿ 'ಭೂರ್ಭುವಃ ಸ್ವಃ ಸ್ವಾಹಾ !' (ಎಂದು ಎಲ್ಲಾ ವ್ಯಾಹೃತಿಗಳನ್ನೂ ಹೇಳಿ) ಎಲ್ಲವನ್ನೂ ಭಕ್ಷಿಸಬೇಕು. ನಾಲ್ಕೇ ಗುಟುಕುಗಳಿಗೆ ಆ ವಸ್ತುವೆಲ್ಲ ಮುಗಿಯುವಂತೆ ಮೊದಲೇ ನೋಡಿಕೊಂಡಿರಬೇಕು. ಪಾತ್ರೆಗೆ ಅಂಟಿಕೊಂಡಿರುತ್ತದೆಯಲ್ಲ, ಅದನ್ನು ಪಾತ್ರೆಯೆಲ್ಲವನ್ನೂ ಬಳಿದುಕೊಂಡು ಸುಮ್ಮನೆ ಕುಡಿಯಬೇಕು. ಕೈಗಳನ್ನು ತೊಳೆದುಕೊಂಡು ನೀರನ್ನು ಆಚಮನಮಾಡಿ[1] ಅಗ್ನಿಯ ಹಿಂದುಗಡೆಯಲ್ಲಿ ಪೂರ್ವದಿಕ್ಕಿಗೆ ತಲೆಯಾಗಿ ಮಲಗಬೇಕು.

ಬೆಳಗ್ಗೆ ಸಂಧ್ಯೋಪಾಸನೆಯನ್ನು ಮಾಡಿ 'ದಿಶಾಮೇಕಪುಣ್ಡರೀಕಮ್' (ದಿಕ್ಕುಗಳಿಗೆ ಮುಖ್ಯಪುಣ್ಡರೀಕವು) ಎಂಬೀ ಮಂತ್ರದಿಂದ ಆದಿತ್ಯನನ್ನು ಉಪಸ್ಥಾನಮಾಡಬೇಕು. (ಯಥೇತಮ್ = ಯಥಾಗತಮ್) ಹೇಗೆ ಹೋಗಿದ್ದನೋ (ಹಾಗೆ ಏತ್ಯ = ಆಗತ್ಯ) ಹಿಂದಕ್ಕೆ ಬಂದು ಅಗ್ನಿಯ ಹಿಂದುಗಡೆಯಲ್ಲಿ ಕುಳಿತು ವಂಶವನ್ನು[2] ಜಪಿಸಬೇಕು.

---

1. ಇದು ಶುದ್ಧಿಗಾಗಿ ಮಾಡುವ ಆಚಮನ.
2. ಮುಂದಿನ ೭ರಿಂದ ೧೨ರವರೆಗಿನ ಭಾಗಕ್ಕೆ ವಂಶವೆಂದು ಹೆಸರು.

## ಆಚಾರ್ಯವಂಶಕಥನ

(ಉಪನಿಷತ್ತು)

**ತಗ್ಂ ಹೈತಮುದ್ದಾಲಕ ಆರುಣಿರ್ವಾಜಸನೇಯಾಯ ಯಾಜ್ಞವಲ್ಕ್ಯಾಯಾನ್ತೇವಾಸಿನ ಉಕ್ತ್ವೋವಾಚಾಪಿ ಯ ಏನಗ್ಂ ಶುಷ್ಕೇ ಸ್ಥಾಣೌ ನಿಷಿಞ್ಚೇಜ್ಜಾಯೇರಞ್ಛಾಖಾಃ ಪ್ರರೋಹೇಯುಃ ಪಲಾಶಾನೀತಿ ॥ ೭ ॥**

**ಏತಮು ಹೈವ ವಾಜಸನೇಯೋ ಯಾಜ್ಞವಲ್ಕ್ಯೋ ಮಧುಕಾಯ ಪೈಙ್ಗ್ಯಾಯಾನ್ತೇವಾಸಿನ ಉಕ್ತ್ವೋವಾಚಾಪಿ ಯ ಏನಗ್ಂ ಶುಷ್ಕೇ ಸ್ಥಾಣೌ ನಿಷಿಞ್ಚೇಜ್ಜಾಯೇರಞ್ಛಾಖಾಃ ಪ್ರರೋಹೇಯುಃ ಪಲಾಶಾನೀತಿ ॥ ೮ ॥**

**ಏತಮು ಹೈವ ಮಧುಕಃ ಪೈಙ್ಗ್ಯಶ್ಚೂಲಾಯ ಭಾಗವಿತ್ತಯೇಽನ್ತೇವಾಸಿನ ಉಕ್ತ್ವೋವಾಚಾಪಿ ಯ ಏನಗ್ಂ ಶುಷ್ಕೇ ಸ್ಥಾಣೌ ನಿಷಿಞ್ಚೇಜ್ಜಾಯೇರಞ್ಛಾಖಾಃ ಪ್ರರೋಹೇಯುಃ ಪಲಾಶಾನೀತಿ ॥ ೯ ॥**

**ಏತಮು ಹೈವ ಚೂಲೋ ಭಾಗವಿತ್ತಿರ್ಜಾನಕಾಯ ಆಯಸ್ಥೂಣಾಯಾನ್ತೇವಾಸಿನ ಉಕ್ತ್ವೋವಾಚಾಪಿ ಯ ಏನಗ್ಂ ಶುಷ್ಕೇ ಸ್ಥಾಣೌ ನಿಷಿಞ್ಚೇಜ್ಜಾಯೇರಞ್ಛಾಖಾಃ ಪ್ರರೋಹೇಯುಃ ಪಲಾಶಾನೀತಿ ॥ ೧೦ ॥**

**ಏತಮು ಹೈವ ಜಾನಕಿರಾಯಸ್ಥೂಣಃ ಸತ್ಯಕಾಮಾಯ ಜಾಬಾಲಾಯಾನ್ತೇವಾಸಿನ ಉಕ್ತ್ವೋವಾಚಾಪಿ ಯ ಏನಗ್ಂ ಶುಷ್ಕೇ ಸ್ಥಾಣೌ ನಿಷಿಞ್ಚೇಜ್ಜಾಯೇರಞ್ಛಾಖಾಃ ಪ್ರರೋಹೇಯುಃ ಪಲಾಶಾನೀತಿ ॥ ೧೧ ॥**

**ಏತಮು ಹೈವ ಸತ್ಯಕಾಮೋ ಜಾಬಾಲೋಽನ್ತೇವಾಸಿಭ್ಯ ಉಕ್ತ್ವೋವಾಚಾಪಿ ಯ ಏನಗ್ಂ ಶುಷ್ಕೇ ಸ್ಥಾಣೌ ನಿಷಿಞ್ಚೇಜ್ಜಾಯೇರಞ್ಛಾಖಾಃ ಪ್ರರೋಹೇಯುಃ ಪಲಾಶಾನೀತಿ ತಮೇತಂ ನಾಪುತ್ರಾಯ ವಾನನ್ತೇವಾಸಿನೇ ವಾ ಬ್ರೂಯಾತ್ ॥ ೧೨ ॥**

೭. ಉದ್ದಾಲಕಆರುಣಿಯು ಇದನ್ನು ಶಿಷ್ಯನಾದ ವಾಜಸನೇಯ ಯಾಜ್ಞವಲ್ಕ್ಯನಿಗೆ ಹೇಳಿಕೊಟ್ಟು ಇಂತೆಂದನು : "ಯಾವನಾದರೂ

ಇದನ್ನು ಒಣಮೋಟುಮರದಮೇಲೆ ಚಿಮುಕಿಸಿದರೂ, ಕೊಂಬೆಗಳುಂಟಾದಾವು, ಎಲೆಗಳು ಬೆಳೆದುಕೊಂಡಾವು.

೮. ಇದನ್ನೇ ವಾಜಸನೇಯ ಯಾಜ್ಞವಲ್ಕ್ಯನು ಶಿಷ್ಯನಾದ ಮಧುಕ ಪೈಂಗ್ಯನಿಗೆ ಹೇಳಿಕೊಟ್ಟು ಇಂತೆಂದನು: "ಯಾವನಾದರೂ ....ಬೆಳೆದುಕೊಂಡಾವು."[1]

೯. ಇದನ್ನೇ ಮಧುಕ ಪೈಂಗ್ಯನು ಶಿಷ್ಯನಾದ ಚೂಲಭಾಗವಿತ್ತಿಗೆ ಹೇಳಿಕೊಟ್ಟು ಇಂತೆಂದನು: "ಯಾವನಾದರೂ.... ಬೆಳೆದುಕೊಂಡಾವು."

೧೦. ಇದನ್ನೇ ಚೂಲಭಾಗವಿತ್ತಿಯು ಶಿಷ್ಯನಾದ ಜಾನಕಿ ಆಯಸ್ಥೂಣನಿಗೆ ಹೇಳಿಕೊಟ್ಟು ಇಂತೆಂದನು: "ಯಾವನಾದರೂ ....ಬೆಳೆದುಕೊಂಡಾವು."

೧೧. ಇದನ್ನೇ ಜಾನಕಿ ಆಯಸ್ಥೂಣನು ಶಿಷ್ಯನಾದ ಸತ್ಯಕಾಮಜಾಬಾಲನಿಗೆ ಹೇಳಿಕೊಟ್ಟು ಇಂತೆಂದನು: "ಯಾವನಾದರೂ ....ಬೆಳೆದುಕೊಂಡಾವು."

೧೨. ಇದನ್ನೇ ಸತ್ಯಕಾಮ ಜಾಬಾಲನು ಶಿಷ್ಯರಿಗೆ ಹೇಳಿಕೊಟ್ಟು ಇಂತೆಂದನು: "ಯಾವನಾದರೂ ಇದನ್ನು ಒಣಮೋಟು ಮರದಮೇಲೆ ಚಿಮುಕಿಸಿದರೂ, ಕೊಂಬೆಗಳು ಬೆಳೆದುಕೊಂಡಾವು, ಎಲೆಗಳು ಬೆಳೆದುಕೊಂಡಾವು." ಇದನ್ನು ಪುತ್ರನಲ್ಲದವನಿಗಾಗಲಿ ಶಿಷ್ಯನಲ್ಲದವನಿಗಾಗಲಿ ಹೇಳಿಕೊಡಬಾರದು.

## ಮಂಥದ ಮಾಹಾತ್ಮ್ಯವೂ, ಅಧಿಕಾರಿಗಳೂ

(ಭಾಷ್ಯ)

೪೬೩. "ತಂ ಹೈತಮುದ್ದಾಲಕಃ" ಇತ್ಯಾದಿ "ಸತ್ಯಕಾಮೋ ಜಾಬಾಲೋಽನ್ತೇವಾಸಿಭ್ಯ ಉಕ್ತ್ವಾ ಉವಾಚ। ಅಪಿ ಯಃ ಏನಂ ಶುಷ್ಕೇ ಸ್ಥಾಣೌ ನಿಷಿಞ್ಚೇತ್ ಜಾಯೇರನ್ನೇವ ಅಸ್ಮಿನ್ ಶಾಖಾಃ ಪ್ರರೋಹೇಯುಃ ಪಲಾಶಾನಿ" ಇತ್ಯೇವಮನ್ತಮ್। ಏನಂ ಮನ್ಥಂ ಉದ್ದಾಲಕಾತ್ ಪ್ರಭೃತಿ ಏಕೈಕಾಚಾರ್ಯಕ್ರಮಾಗತಂ ಸತ್ಯಕಾಮ ಆಚಾರ್ಯೋಽ ಬಹುಭ್ಯೋಽನ್ತೇವಾಸಿಭ್ಯಃ ಉಕ್ತ್ವಾ ಉವಾಚ। ಕಿಮನ್ಯತ್ ಉವಾಚೇತಿ ? ಉಚ್ಯತೇ। ಅಪಿ ಯಃ ಏನಂ ಶುಷ್ಕೇ ಸ್ಥಾಣೌ ಗತಪ್ರಾಣೇಽಪಿ ಏನಂ ಮನ್ಥಂ ಭಕ್ಷಣಾಯ ಸಂಸ್ಕೃತಂ ನಿಷಿಞ್ಚೇತ್

1. ಚುಕ್ಕೆಗಳನ್ನು ಹಾಕಿರುವ ಭಾಗದಲ್ಲಿ "ಇದನ್ನು ಒಣ ಮೋಟುಮರದಮೇಲೆ ಚಿಮುಕಿಸಿದರೂ, ಕೊಂಬೆಗಳುಂಟಾದಾವು, ಎಲೆಗಳು" ಎಂಬ ಮಾತುಗಳನ್ನು ಸೇರಿಸಿಕೊಂಡು ಓದಿಕೊಳ್ಳಬೇಕು

ಪ್ರಕ್ಷಿಪೇತ್ ಜಾಯೇರನ್ ಉತ್ಪದ್ಯೇರನ್ನೇವ ಅಸ್ಮಿನ್ ಸ್ಥಾಣೌ ಶಾಖಾ ಅವಯವಾ ವೃಕ್ಷಸ್ಯ, ಪ್ರರೋಹೇಯುಶ್ಚ ಪಲಾಶಾನಿ ಪರ್ಣಾನಿ ಯಥಾ ಜೀವತಃ ಸ್ಥಾಣೋಃ । ಕಿಮುತ ಅನೇನ ಕರ್ಮಣಾ ಕಾಮಃ ಸಿಧ್ಯೇತ್ ಇತಿ ಧ್ರುವಫಲಮಿದಂ ಕರ್ಮ ಇತಿ ಕರ್ಮಸ್ತುತ್ಯರ್ಥಮೇತತ್ । ವಿದ್ಯಾಧಿಗಮೇ ಷಟ್ ತೀರ್ಥಾನಿ । ತೇಷಾಮ್ ಇಹ ಸಪ್ರಾಣದರ್ಶನಸ್ಯ ಮನ್ಥವಿಜ್ಞಾನಸ್ಯ ಅಧಿಗಮೇ ದ್ವೇ ಏವ ತೀರ್ಥೇ ಅನುಜ್ಞಾಯೇತೇ ಪುತ್ರಶ್ಚ, ಅನ್ತೇವಾಸೀ ಚ ॥

(ಭಾಷ್ಯಾರ್ಥ)

'ತಂ ಹೈತಮುದ್ದಾಲಕಃ' ಎಂಬುದರಿಂದ ಹಿಡಿದು 'ಸತ್ಯಕಾಮೋ ಜಾಬಾಲೋಽನ್ತೇವಾಸಿಭ್ಯ ಉಕ್ತ್ವೋವಾಚ । ಅಪಿ ಯ ಏನಂ ಶುಷ್ಕೇ ಸ್ಥಾಣೌ ನಿಷಿಞ್ಚೇತ್ ಜಾಯೇರನ್ನೇವ ಅಸ್ಮಿನ್ ಶಾಖಾಃ ಪ್ರರೋಹೇಯುಃ ಪಲಾಶಾನೀತಿ' ಎನ್ನುವವರೆಗಿನ (ವಂಶವನ್ನು ಜಪಿಸಬೇಕು).

ಉದ್ದಾಲಕನಿಂದ ಹಿಡಿದು ಒಬ್ಬೊಬ್ಬ ಆಚಾರ್ಯನ ಕ್ರಮದಿಂದ ಬಂದಿದ್ದ ಈ ಮಂಥವನ್ನು ಸತ್ಯಕಾಮನೆಂಬ ಆಚಾರ್ಯನು ಬಹುಜನ ಶಿಷ್ಯರಿಗೆ ಹೇಳಿ ಕೊಟ್ಟು ಇಂತೆಂದನು. ಮತ್ತೇನು ಹೇಳಿದನು? ಎಂದರೆ (ಶ್ರುತಿ) ಹೇಳುತ್ತದೆ. "ಯಾವನಾದರೂ ಇದನ್ನು, ಒಣಗಿದ ಪ್ರಾಣವು ಹೋಗಿರುವ ಮೋಟುಮರದ ಮೇಲೆ ಭಕ್ಷಣಕ್ಕಾಗಿ (ಹೀಗೆ) ಸಂಸ್ಕೃತವಾಗಿರುವ ಈ ಮಂಥವನ್ನು ಚಿಮುಕಿಸಿದರೆ (ಮೇಲೆ) ಚೆಲ್ಲಿದರೆ ಆ ಮೋಟುಮರದಲ್ಲಿ ಬದುಕಿರುವ ಮೋಟುಮರದಲ್ಲಿ ಹೇಗೋ ಹಾಗೆ ಕೊಂಬೆಗಳು, ಮರದ ಅವಯವಗಳು ಉಂಟಾಗಿಯೇತೀರುವವು, ಹುಟ್ಟಿಯೇಬಿಟ್ಟಾವು; ಮತ್ತು ಪಲಾಶಗಳು ಎಂದರೆ ಎಲೆಗಳೂ ಬೆಳೆದುಕೊಂಡಾವು. ಈ ಕರ್ಮದಿಂದ ಕಾಮವು ಸಿದ್ಧಿಯಾಗುವದೆಂಬುದನ್ನು ಹೇಳುವದೇನಿದೆ? ಇದು ಅವಶ್ಯವಾಗಿ ಫಲ(ವನ್ನು ಕೊಡತಕ್ಕದ್ದು) ಎಂದು ಕರ್ಮವನ್ನು ಹೊಗಳುವದಕ್ಕೆ ಹೇಳಿದ್ದಿದು.[1]

ವಿದ್ಯೆಯನ್ನು ಕಲಿಯುವದಕ್ಕೆ ಪಾತ್ರರು ಆರು (ಮಂದಿ).[2] ಅವರುಗಳಲ್ಲಿ ಇಲ್ಲಿ ಪ್ರಾಣವಿದ್ಯೆಯೊಡಗೂಡಿದ ಮಂಥವಿಜ್ಞಾನವನ್ನು ಕಲಿಯುವದಕ್ಕೆ ಮಗನು, ಶಿಷ್ಯನು– (ಈ) ಇಬ್ಬರೇ ಪಾತ್ರರೆಂದು ಇಲ್ಲಿ ಅನುಮತಿಯನ್ನು ಕೊಟ್ಟಿದೆ.

---

1. ಇಲ್ಲಿ ಪ್ರತಿಯೊಂದು ಕಂಡಿಕೆಯಲ್ಲಿಯೂ "ಮೋಟುಮರದಲ್ಲಿ ಕೊಂಬೆಗಳು ಒಡೆದುಕೊಂಡು ಎಲೆಗಳು ಚಿಗುರುವವು" ಎಂದು ಹೇಳಿರುವದರಿಂದ ಮಂತ್ರಪೂತವಾದ ಈ ಮಂಥದ ಮಹಿಮೆಯಿಂದ ನಿಜವಾಗಿಯೂ ಒಣಮರವು ಚಿಗುರುವದು ಎಂದು ಅರ್ಥ ಮಾಡುವದಕ್ಕೆ ಅವಕಾಶವಿದೆ. ಆಚಾರ್ಯರೇನೋ ಇದು ಕರ್ಮಸ್ತುತಿಯೆಂದೇ ಹೇಳಿರುತ್ತಾರೆ.

2. ಶಿಷ್ಯ, ಶ್ರೋತ್ರಿಯ, ಮೇಧಾವಿ, ಧನವನ್ನು ಕೊಟ್ಟವನು, ಮಗನು, ಇನ್ನೊಂದು ವಿದ್ಯೆಯನ್ನು ಹೇಳಿಕೊಟ್ಟವನು.

## ಪ್ರಾಣವು ಸಾಮವೆಂಬ ಉಪಾಸನೆ

(ಉಪನಿಷತ್ತು)

**ಸಾಮ ಪ್ರಾಣೋ ವೈ ಸಾಮ ಪ್ರಾಣೇ ಹೀಮಾನಿ ಸರ್ವಾಣಿ ಭೂತಾನಿ ಸಮ್ಯಞ್ಚಿ ಸಮ್ಯಞ್ಚಿ ಹಾಸ್ಮೈ ಸರ್ವಾಣಿ ಭೂತಾನಿ ಶ್ರೈಷ್ಠ್ಯಾಯ ಕಲ್ಪನ್ತೇ ಸಾಮ್ನಃ ಸಾಯುಜ್ಯಗ್ಂ ಸಲೋಕತಾಂ ಜಯತಿ ಯ ಏವಂ ವೇದ ॥ ೩ ॥**

೩. ಸಾಮವು. ಪ್ರಾಣವೇ ಸಾಮವು. ಪ್ರಾಣದಲ್ಲಲ್ಲವೆ, ಈ ಸರ್ವಭೂತಗಳೂ ಸರಿಯಾಗಿ ಸೇರುತ್ತವೆ? ಯಾವನು ಹೀಗೆಂದು ಅರಿತಿರುವನೋ ಅವನಲ್ಲಿಗೆ ಸರ್ವಭೂತಗಳೂ ಸರಿಯಾಗಿ (ಬಂದು) ಸೇರುತ್ತವೆ, ಶ್ರೈಷ್ಠ್ಯಕ್ಕೆ ಸಮರ್ಥವಾಗುತ್ತವೆ; (ಅವನು) ಸಾಯುಜ್ಯವನ್ನೋ ಸಲೋಕತೆಯನ್ನೋ ಗೆದ್ದುಕೊಳ್ಳುತ್ತಾನೆ.

## ಪ್ರಾಣವೆಂಬ ಸಾಮದ ಉಪಾಸನವೂ ಅದರ ಫಲವೂ

(ಭಾಷ್ಯ)

೩೮೭. ಸಾಮೇತಿ ಚ ಉಪಾಸೀತ ಪ್ರಾಣಮ್ । ಪ್ರಾಣೋ ವೈ ಸಾಮ । ಕಥಂ ಪ್ರಾಣಃ ಸಾಮ? ಪ್ರಾಣೇ ಹಿ ಯಸ್ಮಾತ್ ಸರ್ವಾಣಿ ಭೂತಾನಿ ಸಮ್ಯಞ್ಚಿ ಸಂಗಚ್ಛನ್ತೇ। ಸಂಗಮನಾತ್ ಸಾಮ್ಯಾಪತ್ತಿಹೇತುತ್ವಾತ್ ಸಾಮ ಪ್ರಾಣಃ। ಸಮ್ಯಞ್ಚಿ ಸಂಗಚ್ಛನ್ತೇ। ಹ ಅಸ್ಮೈ ಸರ್ವಾಣಿ ಭೂತಾನಿ। ನ ಕೇವಲಂ ಸಂಗಚ್ಛನ್ತ ಏವ, (ಶ್ರೈಷ್ಠ್ಯಾಯ)[1] ಶ್ರೇಷ್ಠಭಾವಾಯ ಚ ಅಸ್ಮೈ ಕಲ್ಪನ್ತೇ ಸಮರ್ಥ್ಯನ್ತೇ ಸಾಮ್ನಃ ಸಾಯುಜ್ಯಮ್ ಇತ್ಯಾದಿ ಪೂರ್ವವತ್ ॥

(ಭಾಷ್ಯಾರ್ಥ)

ಸಾಮವೆಂದೂ ಪ್ರಾಣವನ್ನು ಉಪಾಸನೆಮಾಡಬೇಕು. ಪ್ರಾಣವೇ ಸಾಮವು. ಪ್ರಾಣವು ಸಾಮವೆಂಬುದು ಹೇಗೆ? (ಹಿ= ಯಸ್ಮಾತ್) ಏಕೆಂದರೆ ಸರ್ವಭೂತಗಳೂ ಪ್ರಾಣದಲ್ಲಿ (ಸಮ್ಯಞ್ಚಿ) ಸಂಗತವಾಗುತ್ತವೆ; ಸಂಗಮನ ಮಾಡುವದರಿಂದ ಎಂದರೆ ಸಾಮ್ಯವನ್ನು ಹೊಂದುವದಕ್ಕೆ ಕಾರಣವಾಗಿರುವದರಿಂದ ಪ್ರಾಣವು ಸಾಮವು.

ಯಾವನು ಹೀಗೆಂದರಿತಿರುವನೋ ಅವನಿಗೆ ಸರ್ವಭೂತಗಳೂ ಸಂಗತವಾಗುತ್ತವೆ. ಸುಮ್ಮನೆ ಸಂಗತವಾಗುತ್ತವೆ ಎಂಬುದಿಷ್ಟೇ ಅಲ್ಲ, ಇವನಿಗೆ ಶ್ರೇಷ್ಠಭಾವಕ್ಕೂ ಸಮರ್ಥವಾಗುತ್ತವೆ; 'ಸಾಮದ ಸಾಯುಜ್ಯವನ್ನು' ಎಂದುಮುಂತಾಗಿರುವ (ಗ್ರಂಥವು) ಹಿಂದಿನಂತೆ (ವ್ಯಾಖ್ಯಾನಮಾಡತಕ್ಕದ್ದು).

1. 'ಶ್ರೈಷ್ಠ್ಯಾಯ' ಎಂಬ ಮಾತು ಬಿಟ್ಟುಹೋಗಿದೆಯೋ ಹಿಂದಿನ ಕಂಡಿಕೆಯಲ್ಲಿರುವಂತೆಯೇ ಎಂಬ ಭಾವದಿಂದ ಭಾಷ್ಯಕಾರರೇ ಬಿಟ್ಟಿದಾರೆಯೋ ತಿಳಿಯದು.

## ಪ್ರಾಣವು ಕ್ಷತ್ರವೆಂಬ ಉಪಾಸನೆ

(ಉಪನಿಷತ್ತು)

**ಕ್ಷತ್ರಂ ಪ್ರಾಣೋ ವೈ ಕ್ಷತ್ರಂ ಪ್ರಾಣೋ ಹಿ ವೈ ಕ್ಷತ್ರಂ ತ್ರಾಯತೇ ಹೈನಂ ಪ್ರಾಣಃ ಕ್ಷಣಿತೋಃ ಪ್ರ ಕ್ಷತ್ರಮತ್ರಮಾಪ್ನೋತಿ ಕ್ಷತ್ರಸ್ಯ ಸಾಯುಜ್ಯಗ್ಂ ಸಲೋಕತಾಂ ಜಯತಿ ಯ ಏವಂ ವೇದ ॥೪॥**

೪. ಕ್ಷತ್ರವು. ಪ್ರಾಣವೇ ಕ್ಷತ್ರವು. ಇವನ್ನು ಪ್ರಾಣವು ಗಾಯದಿಂದ ಕಾಪಾಡುತ್ತದೆ. ಯಾವನು ಹೀಗೆಂದು ಅರಿತಿರುವನೋ ಅವನು ಅತ್ರವಾಗಿರುವ ಕ್ಷತ್ರವನ್ನು ಪಡೆದುಕೊಳ್ಳುತ್ತಾನೆ; ಕ್ಷತ್ರದ ಸಾಯುಜ್ಯವನ್ನೋ ಸಲೋಕತೆಯನ್ನೋ ಗೆದ್ದುಕೊಳ್ಳುತ್ತಾನೆ.

## ಪ್ರಾಣವೆಂಬ ಕ್ಷತ್ರದ ಉಪಾಸನೆಯೂ ಅದರ ಫಲವೂ

(ಭಾಷ್ಯ)

೩೮೮. ತಂ ಪ್ರಾಣಂ ಕ್ಷತ್ರಮಿತಿ ಉಪಾಸೀತ । ಪ್ರಾಣೋ ವೈ ಕ್ಷತ್ರಮ್ । ಪ್ರಸಿದ್ಧಮೇತತ್, ಪ್ರಾಣೋ ಹಿ ವೈ ಕ್ಷತ್ರಮ್ । ಕಥಂ ಪ್ರಸಿದ್ಧತಾ ಇತಿ? ಆಹ। ತ್ರಾಯತೇ ಪಾಲಯತಿ ಏನಂ ಪಿಣ್ಡಂ ದೇಹಂ ಪ್ರಾಣಃ, ಕ್ಷಣಿತೋಃ ಶಸ್ತ್ರಾದಿಹಿಂಸಿತಾತ್ ಪುನಃ ಮಾಂಸೇನ ಆಪೂರಯತಿ ಯಸ್ಮಾತ್, ತಸ್ಮಾತ್ ಕ್ಷತತ್ರಾಣಾತ್ ಪ್ರಸಿದ್ಧಂ ಕ್ಷತ್ರತ್ವಂ ಪ್ರಾಣಸ್ಯ। ವಿದ್ವತ್ಫಲಮ್ ಆಹ। ಪ್ರ ಕ್ಷತ್ರಮ್ ಅತ್ರಮ್ । ನ ತ್ರಾಯತೇಽನ್ಯೇನ ಕೇನಚಿತ್ ಇತಿ ಅತ್ರಂ ಕ್ಷತ್ರಂ ಪ್ರಾಣಃ। ತಮ್ ಅತ್ರಂ ಕ್ಷತ್ರಂ ಪ್ರಾಣಂ ಪ್ರಾಪ್ನೋತಿ ಇತ್ಯರ್ಥಃ। ಶಾಖಾನ್ತರೇ ವಾ ಪಾಠಾತ್ ಕ್ಷತ್ರಮಾತ್ರಂ ಪ್ರಾಪ್ನೋತಿ। ಪ್ರಾಣೋ ಭವತಿ ಇತ್ಯರ್ಥಃ। ಕ್ಷತ್ರಸ್ಯ ಸಾಯುಜ್ಯಂ ಸಲೋಕತಾಂ ಜಯತಿ ಯ ಏವಂ ವೇದ ॥

(ಭಾಷ್ಯಾರ್ಥ)

ಆ ಪ್ರಾಣವನ್ನು ಕ್ಷತ್ರನೆಂದು ಉಪಾಸನೆಮಾಡಬೇಕು. ಪ್ರಾಣವೇ ಕ್ಷತ್ರವು. ಪ್ರಾಣವೇ ಕ್ಷತ್ರವಷ್ಟೆ; ಇದು ಪ್ರಸಿದ್ಧವು. ಪ್ರಸಿದ್ಧವೆಂಬುದು ಹೇಗೆ? ಎಂದರೆ (ಶ್ರುತಿ) ಹೇಳುತ್ತಿದೆ. ಈ ಪಿಂಡವನ್ನು ದೇಹವನ್ನು ಪ್ರಾಣವು ಗಾಯದಿಂದ, ಎಂದರೆ ಶಸ್ತ್ರವೇ ಮುಂತಾದದ್ದರಿಂದಾದ ಹಿಂಸೆಯಿಂದ ಕಾಪಾಡುತ್ತದೆ, ರಕ್ಷಿಸುತ್ತದೆ; ಮತ್ತೆ ಮಾಂಸದಿಂದ ತುಂಬುತ್ತದೆಯಷ್ಟೆ, ಆದ್ದರಿಂದ ಕ್ಷತತ್ರಾಣ (ಪೆಟ್ಟಿನ ವ್ಯಾಪಾರ)ದಿಂದ ಪ್ರಾಣವು ಕ್ಷತ್ರವೆಂಬುದು ಪ್ರಸಿದ್ಧವಾಗಿರುತ್ತದೆ.

ಉಪಾಸಕನಿಗೆ ಫಲವನ್ನು ಹೇಳುತ್ತದೆ: ಅತ್ರವೆಂಬ ಕ್ಷತ್ರವನ್ನು— ಮತ್ತೊಬ್ಬರಿಂದ ಕಾಪಾಡಲ್ಪಡತಕ್ಕದ್ದಲ್ಲವೆಂಬ ಕಾರಣದಿಂದ ಪ್ರಾಣವು ಅತ್ರ ಕ್ಷತ್ರವು. ಆ ಅತ್ರವೆಂಬ ಕ್ಷತ್ರವನ್ನು—ಪ್ರಾಣವನ್ನು (ಪ್ರ ಆಪ್ನೋತಿ[1]) ಪಡೆದುಕೊಳ್ಳುತ್ತಾನೆ ಎಂದರ್ಥ. ಇನ್ನೊಂದು ಶಾಖೆಯಲ್ಲಿರುವ ಪಾಠವನ್ನು (ಅನುಸರಿಸುವದಾದರೆ) ಕ್ಷತ್ರಮಾತ್ರವನ್ನು[2] ಪಡೆಯುತ್ತಾನೆ, ಎಂದಾದರೂ (ಅರ್ಥಮಾಡಬಹುದು) ಪ್ರಾಣನಾಗುತ್ತಾನೆ ಎಂದರ್ಥ. ಯಾವನು ಹೀಗೆಂದು ತಿಳಿದಿರುವನೋ ಅವನು ಕ್ಷತ್ರದ ಸಾಯುಜ್ಯವನ್ನೋ ಸಾಲೋಕ್ಯವನ್ನೋ ಗೆದ್ದುಕೊಳ್ಳುತ್ತಾನೆ.

---

1. ಹಿಂದಿರುವ ಪ್ರ ಎಂಬ ಉಪಸರ್ಗವನ್ನು ಆಪ್ನೋತಿ ಎಂಬುದಕ್ಕೆ ಅನ್ವಯಿಸಿಕೊಳ್ಳಬೇಕೆಂದು ಭಾಷ್ಯದಲ್ಲಿ ಸೂಚಿಸಿರುತ್ತಾರೆ; ಪ್ರಾಣಸಾಯುಜ್ಯವನ್ನು ಪಡೆದುಕೊಳ್ಳುತ್ತಾನೆ ಎಂದರ್ಥ.

2. ಕ್ಷತ್ರಮಾತ್ರವಮ್ ಎಂದೇ ಮಾಧ್ಯಂದಿನಪಾಠ; ಸಂಪೂರ್ಣವಾಗಿ ಪ್ರಾಣವನ್ನು ಪಡೆದುಕೊಳ್ಳುತ್ತಾನೆ ಎಂದು ಸ್ಪಷ್ಟವಾಗಿ ಅರ್ಥವಾಗುವದರಿಂದ ಅಲ್ಲಿ ಉಪಸರ್ಗವು ದ್ಯೋತಕಮಾತ್ರವಾಗುವದು.

# ಹದಿಮೂರನೆಯ ಬ್ರಾಹ್ಮಣದ ಸಾರ

೧. ಪ್ರಾಣವನ್ನು ಉಕ್ಥವೆಂದು ಉಪಾಸನೆಮಾಡಬೇಕು. ಪ್ರಾಣವೇ ಉಕ್ಥವು. ಏಕೆಂದರೆ ಉಕ್ಥವೆಂಬ ಶಸ್ತ್ರವಿಶೇಷದಂತೆ ಪ್ರಾಣವು ಇಂದ್ರಿಯಗಳೆಲ್ಲಕ್ಕಿಂತ ಶ್ರೇಷ್ಠವಾಗಿರುತ್ತದೆ. ಪ್ರಾಣದಿಂದಲೇ ಪ್ರತಿಯೊಬ್ಬನೂ ಎದ್ದು ನಿಲ್ಲುತ್ತಾನೆ (ಉತ್ತಿಷ್ಠತಿ); ಆದ್ದರಿಂದ ಇದು ಉಕ್ಥವು. ಹೀಗೆಂದು ಉಪಾಸನೆಮಾಡಿದರೆ ಇಹದಲ್ಲಿ ಉಕ್ಥವನ್ನು ಬಲ್ಲ ವೀರಪುತ್ರನು ಜನಿಸುವನು, ಪರದಲ್ಲಿ ಉಪಾಸನೆಯ ತಾರತಮ್ಯದಿಂದ ಉಕ್ಥದ ಸಾಯುಜ್ಯವೋ ಸಾಲೋಕ್ಯವೋ ದೊರೆಯುವದು.

೨. ಹೀಗೆಯೇ ಪ್ರಾಣವನ್ನು ಯಜುಸ್ಸು ಎಂದು ಉಪಾಸನೆಮಾಡಬೇಕು. ಪ್ರಾಣವೇ ಯಜುಸ್ಸು. ಏಕೆಂದರೆ ಸರ್ವಭೂತಗಳೂ ಒಂದಕ್ಕೊಂದು ಯುಕ್ತವಾಗುವದಕ್ಕೆ ಪ್ರಾಣವು ಬೇಕು. ಹೀಗೆಂದು ಉಪಾಸನೆಮಾಡಿದರೆ ಇಹದಲ್ಲಿ ಸರ್ವಭೂತಗಳೂ ಇವನಿಗೆ ಶ್ರೇಷ್ಠತ್ವವನ್ನು ಕೊಡುವದಕ್ಕೆ ಯುಕ್ತವಾಗುವವು, ಪರದಲ್ಲಿ ಯಜೂರೂಪನಾದ ಪ್ರಾಣನ ಸಾಯುಜ್ಯವೋ ಸಾಲೋಕ್ಯವೋ ದೊರೆಯುವದು.

೩. ಹೀಗೆಯೇ ಪ್ರಾಣವನ್ನು ಸಾಮವೆಂದು ಉಪಾಸನೆಮಾಡಬೇಕು. ಪ್ರಾಣವೇ ಸಾಮವು; ಏಕೆಂದರೆ ಅದರಲ್ಲಿ ಎಲ್ಲಾ ಭೂತಗಳೂ ಸಂಗತವಾಗುತ್ತವೆ. ಯಾವನು ಹೀಗೆಂದು ಉಪಾಸನೆಮಾಡುವನೋ ಅವನಿಗೆ ಇಹದಲ್ಲಿ ಎಲ್ಲಾ ಭೂತಗಳೂ ಸಂಗತವಾಗಿ ಶ್ರೈಷ್ಠ್ಯವನ್ನು ಕೊಡುವವು; ಪರದಲ್ಲಿ ಸಾಮರೂಪಪ್ರಾಣನ ಸಾಯುಜ್ಯವೋ ಸಾಲೋಕ್ಯವೋ ದೊರೆಯುವದು.

೪. ಪ್ರಾಣವು ಕ್ಷತ್ರವೆಂದು ಉಪಾಸನೆಮಾಡಬೇಕು. ಶರೀರವನ್ನು ಕ್ಷತದಿಂದ ತ್ರಾಣ (ಕಾಪಾಡುವದ)ರಿಂದ ಪ್ರಾಣವು ಕ್ಷತ್ರವು. ಹೀಗೆಂದು ಉಪಾಸನೆಮಾಡಿದರೆ ಇಲ್ಲಿ ಪ್ರಾಣವನ್ನೇ ಪಡೆದುಕೊಳ್ಳುವನು, ಪರದಲ್ಲಿ ಕ್ಷತ್ರರೂಪನಾದ ಪ್ರಾಣನ ಸಾಯುಜ್ಯವೋ ಸಾಲೋಕ್ಯವೋ ದೊರೆಯುವದು.

———

